# ಶತನಮನ

ಪ್ರೊ॥ ಜಿ. ವೆಂಕಟಸುಬ್ಬಯ್ಯ ಸಂಭಾವನ ಸಂಪುಟ



**ಪ್ರಧಾನ ಸಂಪಾದಕ**

ಡಾ। ಪಿ.ವಿ. ನಾರಾಯಣ

**ಸಂಪಾದಕರು**

ಡಾ। ಎ.ವಿ. ಪ್ರಸನ್ನ

ಡಾ। ಎಸ್.ಎಲ್. ಶ್ರೀನಿವಾಸಮೂರ್ತಿ

ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಜನ್ಮಶತಾಬ್ದಿ ಸ್ವಾಗತ ಸಮಿತಿ

**ಶ್ರೀ ಜಯರಾಮ ಸೇವಾ ಮಂಡಲಿ**

# 492/ಎ, ಶ್ರೀ ಜಯರಾಮ ಸೇವಾ ಮಂಡಲಿ ರಸ್ತೆ, 1ನೇ ಮುಖ್ಯರಸ್ತೆ

8ನೇ ಬ್ಲಾಕ್, ಜಯನಗರ, ಬೆಂಗಳೂರು – 560 070

080 22445232

SHATANAMANA - Collection of Kannada Articles by various authors, to commemorate the birth centenary of Prof. G. Venkatasubbaiah and Published by Nadoja Prof. G. Venkatasubbaiah Janma Shatabdhi Swagatha Samithi, Sri Jayarama Seva Mandali, # 492/A, 1st Main Road, 8th Block, Jayanagara, Bangalore - 560 070



Publisher :
S. K. Gopalakrishna
Secretary
Sri Jayarama Seva Mandali &
Prof. G. Venkatasubbiah Janma
Shatabdhi Swagatha Samithi
Jayanagar, Bangalore



**First Print :** 2012
**Number of Copies :** 1000
**Paper used :** 80 GSM Maplitho
**No. of Pages :** 24 + 480



**Price :** **Rs.350-00**

**Cover Page Design:** Chandranath Acharya

**DTP & Pagination :** Chaarumathi Prakashana

Printed at :
**Aditya Printers**
#1, Sri Ramanjaneya Road, Hanumanthanagar
Bangalore-19, Ph:080-26606776 / 2660 6566
e-mail : prakash@adityaprinters.com
website : www.adityaprinters.com

# ಪ್ರಕಾಶಕರ ನುಡಿ

ನಾಡೋಜ ಪ್ರೊ.ಜಿ. ವೆಂಕಟಸುಬ್ಬಯ್ಯ ಕನ್ನಡ ಸಾರಸ್ವಲೋಕದ ಅನನ್ಯ ಪ್ರತಿಭೆ. ವಿದ್ವತ್ತು ಎಂಬುದು ಅವರಿಗೆ ಮನೆತನದ ಹಿರಿಯರಿಂದ ಅನೂಚಾನವಾಗಿ ಬಂದ ಬಳುವಳಿ. ನಿರಂತರ ಅಧ್ಯಯನ, ಗ್ರಹಣ, ಧಾರಣ, ಸ್ಮರಣ, ಸಂಶೋಧನ, ಅಧ್ಯಾಪನಗಳಿಂದ ರೂಪುಗೊಂಡ ಅವರ ವ್ಯಕ್ತಿತ್ವ ಸರ್ವತ್ರ ಪೂಜಿತ. ಅವರೊಬ್ಬ ಅಭಿಜಾತ ಕರ್ಮಯೋಗಿ. ವಿದ್ಯೆ ವಿನಯಗಳಿಗೆ ದೃಷ್ಟಾಂತರಾದ ಹಿರಿಯ ತಲೆಮಾರಿನ ಪ್ರತೀಕ. ನಮ್ಮ ನಾಡಿನ ಪರಂಪರೆ ಮತ್ತು ಇಂದಿನ ತಲೆಮಾರಿನ ಸಂಕೇತ. ಶಿಕ್ಷಣ ಕ್ಷೇತ್ರದಲ್ಲಿ ನಾಲ್ಕು ದಶಕಗಳಿಗೂ ಮೀರಿದ ಅವಿರತ ಪರಿಶ್ರಮದಿಂದ ಸಾವಿರಾರು ವಿದ್ಯಾರ್ಥಿಗಳಿಗೆ ದಾರಿದೀಪವಾದವರು. ಅವರು ಅಸ್ಖಲಿತ ವಾಣಿಯ ವಾಚಸ್ಪತಿ. ಶಿಷ್ಯಕೋಟಿಗೆ ಅಚ್ಚುಮೆಚ್ಚಿನ ಗುರುಗಳು. ಗ್ರಂಥ ಸಂಪಾದನೆ, ವಿಮರ್ಶೆ, ಅನುವಾದ ಕ್ಷೇತ್ರಗಳಲ್ಲಿ ಐವತ್ತಕ್ಕೂ ಹೆಚ್ಚಿನ ಕೃತಿಗಳ ರಚನೆಯಿಂದ ಕನ್ನಡ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದವರು. ಕನ್ನಡ ಭಾಷೆಯ ಆಳ-ಹರಹುಗಳನ್ನು ಅರಿತವರು. ಕನ್ನಡ ನಿಘಂಟು ಬ್ರಹ್ಮರು. ಪದಗಳ ಜನ್ಮವನ್ನು ಜಾಲಾಡಿ ಅರ್ಥವನ್ನು ಬಗೆದವರು. ಕನ್ನಡ ಭಾಷೆಗೆ ಭಾಷ್ಯವಾದ 'ಇಗೋ ಕನ್ನಡ'ವನ್ನು ರಚಿಸಿ ಕನ್ನಡ ಶಬ್ದ ಸಂಪತ್ತಿನ ಬೆರಗುಗಳನ್ನು ಜನಸಾಮಾನ್ಯರಿಗೆ ಪರಿಚಯಿಸಿದವರು. ನಾಡಿಗೇ ಗುರುತುಲ್ಯರು. ಇಂತಹ ಧೀಮಂತ ಚೇತನ ಇದೀಗ ಬಾಳಿನ ತೊಂಭತ್ತೊಂಭತ್ತು ವರ್ಷಗಳನ್ನು ಅತ್ಯಂತ ಕ್ರಿಯಾಶೀಲರಾಗಿ ಕಳೆದು, ನೂರನೆಯ ವರ್ಷಕ್ಕೆ ಅಡಿಯಿಟ್ಟಿದ್ದಾರೆ. ಈ ಅಪೂರ್ವ ಸಂದರ್ಭಕ್ಕೆ ಸಾಕ್ಷಿಗಳಾಗುವ ಅವಕಾಶ ನಮಗೆ ದೊರೆತಿರುವುದು ನಮ್ಮ ಸೌಭಾಗ್ಯ.

ಜಿ.ವಿ. ಎಂದೇ ಜನಪ್ರಿಯರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೂ ಶ್ರೀ ಜಯರಾಮ ಸೇವಾ ಮಂಡಳಿಗೂ ಅವಿನಾಭಾವ ಸಂಬಂಧ. ಮಂಡಳಿಯ ಎಲ್ಲಾ ಕಾರ್ಯಚಟುವಟಿಕೆಗಳಲ್ಲೂ ಜಿ.ವಿ. ಅವರ ಸಲಹೆ, ಸೂಚನೆ, ಮಾರ್ಗದರ್ಶನಗಳು ಇದ್ದೇ ಇವೆ. ಅವರು ನಮ್ಮೆಲ್ಲರ ಅಂತಃಶಕ್ತಿ, ಸ್ಫೂರ್ತಿದಾಯಕರು. ಅವರ ಜನ್ಮಶತಾಬ್ದಿಯನ್ನು ಸಡಗರ ಸಂಭ್ರಮಗಳಿಂದ ಮನೆಯ ಹಬ್ಬದಂತೆ ಆಚರಿಸಬೇಕೆಂಬ ಆಶಯದಿಂದ ನಗರದ ಗಣ್ಯರನ್ನೊಳಗೊಂಡ ಸ್ವಾಗತ ಸಮಿತಿಯನ್ನು ರಚಿಸಿ, ಮಂಡಳಿಯ ಸಹಯೋಗದೊಂದಿಗೆ ಅನೇಕ ಕಾರ್ಯಕ್ರಮಗಳನ್ನು ನಡೆಸಲಾಗಿದೆ. ಅಮೂಲ್ಯವಾದ ಕೆಲವು ಗ್ರಂಥಗಳನ್ನು ಪ್ರಕಟಿಸಲಾಗಿದೆ. ಇದೇ ಸಂದರ್ಭದಲ್ಲಿ ಜಿ.ವಿ. ಅವರ ಜನ್ಮಶತಾಬ್ದಿಯ ಸವಿನೆನಪಿಗಾಗಿ ವಿದ್ವತ್ಪೂರ್ಣ ಲೇಖನಗಳನ್ನೊಳಗೊಂಡ ಒಂದು ಸಂಭಾವನ ಗ್ರಂಥವನ್ನು ಅವರಿಗೆ ಸಮರ್ಪಿಸುವ ಕಾರ್ಯವನ್ನು ಕೈಗೊಳ್ಳಲಾಗಿದೆ. ಇದರ ಫಲವೇ ಇದೀಗ ನಿಮ್ಮ ಕೈಯಲ್ಲಿರುವ 'ಶತ ನಮನ' ಸಂಭಾವನ ಸಂಪುಟ. ಇನ್ನು ಇದನ್ನು ರೂಪುಗೊಳಿಸುವ ಹೊಣೆಯನ್ನು ಹೊತ್ತು ಸಮರ್ಥವಾಗಿ ನಿರ್ವಹಿಸಿದ ಕೀರ್ತಿ ಹಿರಿಯ ಸಾಹಿತಿಗಳಾದ ಡಾ॥ ಪಿ.ವಿ. ನಾರಾಯಣ ಹಾಗೂ ಅವರೊಂದಿಗೆ ಕೈ ಜೋಡಿಸಿದ ವಿದ್ವಾಂಸರಾದ ಡಾ॥ ಎ.ವಿ. ಪ್ರಸನ್ನ ಮತ್ತು ಡಾ॥ ಎಸ್.ಎಲ್.ಶ್ರೀನಿವಾಸ ಮೂರ್ತಿ ಅವರಿಗೆ ಸಲ್ಲುತ್ತದೆ. ಈ ಗ್ರಂಥದಲ್ಲಿನ ಲೇಖನಗಳು ವಿದ್ವಾಂಸರ ಜ್ಞಾನ ಮಥನದ ಫಲಶ್ರುತಿಗಳಾಗಿದ್ದು, ಸಂಶೋಧನಾಸಕ್ತರಿಗೆ, ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಅಧ್ಯಯನಕ್ಕೆ ಆಕರ ಗ್ರಂಥವಾಗಿ ಸಂಗ್ರಹಯೋಗ್ಯವಾಗುವುದರಲ್ಲಿ ಸಂಶಯವಿಲ್ಲ.

ಇದಕ್ಕೆ ಕಾರಣರಾದ ಸಕಲರಿಗೂ ಕೃತಜ್ಞತಾಪೂರ್ವಕ ಸಾಷ್ಟಾಂಗ ನಮನಗಳು.

ಲೋಕಾಃಸಮಸ್ತ ಸುಖಿನೋಭವಂತು.



(ಎಸ್.ಕೆ. ಗೋಪಾಲಕೃಷ್ಣ)
**ಗೌರವ ಕಾರ್ಯದರ್ಶಿ**
**ಜಯರಾಮ ಸೇವಾಮಂಡಳಿ**
**ಹಾಗೂ**
**ಪ್ರೊ॥ ಜಿ.ವಿ. ಶತಮಾನೋತ್ಸವ ಸಮಿತಿ**

## ಸಂಪಾದಕೀಯ

ನೂರು ವರ್ಷ ಬದುಕುವುದು ಒಂದು ಆದರ್ಶ, ಕನಸು. ಅದನ್ನು ಕಾಣುವವರು ಬಹು ವಿರಳ. ಅನೇಕ ಕಾರಣಗಳಿಂದ ದೀರ್ಘಾಯುಸ್ಸಿನವರು ಹೆಚ್ಚಿರುವ ಈ ಕಾಲದಲ್ಲಿ ಅಂತಹ ಹಲವರನ್ನು ಕಾಣುವುದು ಅಪರೂಪವೇನಲ್ಲ; ಆದರೆ ಎಲ್ಲ ಇಂದ್ರಿಯಗಳ ಪಟುತ್ವವನ್ನೂ ಉಳಿಸಿಕೊಂಡು ಬದುಕನ್ನು ಸವಿಯುವ ದೀರ್ಘಾಯುಷಿಗಳನ್ನು ಕಾಣುವುದು ದುರ್ಲಭ; ಜೊತೆಗೆ ತಮಗೆ ಇಷ್ಟವಾದ ಚಟುವಟಿಕೆಯ ಮೂಲಕವೇ ನಾಡುನುಡಿಗಳ ಬದುಕನ್ನು ಸಮೃದ್ಧಗೊಳಿಸುವವರ ಸಂಖ್ಯೆ ತೀರ ಅಪರೂಪ. ಅಂಥ ಅಪರೂಪದ ವ್ಯಕ್ತಿ ಪ್ರೊ. ಜಿ. ವೆಂಕಟಸುಬ್ಬಯ್ಯ. ಚಟುಲತೆ, ಅಕುಟಿಲತೆ, ಲವಲವಿಕೆ, ಉತ್ಸಾಹಗಳಿಂದ ಕೂಡಿ ತಮ್ಮ ಅರ್ಥಪೂರ್ಣವಾದ ಬದುಕನ್ನು ಸುಮಾರು ಒಂದು ಶತಮಾನವಿಡೀ ನಡೆಸಿಕೊಂಡು ಬಂದು ಅಂತೆಯೇ ಮುಂದುವರಿಯುತ್ತಿರುವ ಅವರನ್ನು ನಾವು ಮೊದಲು ಅಭಿನಂದಿಸಬೇಕು.

ದೀರ್ಘಾಯುಸ್ಸಿನ ಜೊತೆಗೇ ಹಿರಿಯರಿಂದ ಬಂದ ವಂಶವಾಹಿಗಳ ಮೂಲಕ ಅವರು ಹೊತ್ತು ತಂದಿರುವುದು ಪಾಂಡಿತ್ಯ, ಕಾವ್ಯರಸಿಕತೆಗಳನ್ನು. ಅವರ ಬಾಲ್ಯ ತೀರ ಬಡತನದ್ದಾದರೂ, ಸಾಂಸ್ಕೃತಿಕ ಸಂಪನ್ನತೆ ಸಮೃದ್ಧವಾದುದು. ಕನ್ನಡ–ಸಂಸ್ಕೃತಗಳ ಪರಿಣತಿ ಅವರ ಕುಟುಂಬದ ಪಿತ್ರಾರ್ಜಿತ ಆಸ್ತಿ. ಅದರ ಜೊತೆಗೆ ಅವರ ಹಿರಿಯರು ಹಾಗೂ ಅವರು ಈ ಆಸ್ತಿಯನ್ನು ಸ್ವಯಾರ್ಜಿತದಿಂದ ಮತ್ತಷ್ಟು ಶ್ರೀಮಂತವಾಗಿಸಿಕೊಂಡರು. ಅವರ ತಾತ–ತಂದೆಯರು ಮಹಾನ್ ಸಂಸ್ಕೃತ ವಿದ್ವಾಂಸರು, ಜಿ.ವಿ. ಅವರಂತೂ ಅದರ ಜೊತೆಗೆ ಇಂಗ್ಲಿಷ್ ಅನ್ನೂ ಬಹುತೇಕ ಸ್ವಾಧ್ಯಾಯದಿಂದ ತಮ್ಮದಾಗಿಸಿಕೊಂಡರು, ವಿದ್ವತ್ ಸಂಗಮದ ಎರಡು ಧಾರೆಗಳಿಗೆ ಮೂರನೆಯ ವಾಹಿನಿಯನ್ನೂ ಜೋಡಿಸಿಕೊಂಡರು. ಅವರದು ಮುಪ್ಪುರಿಗೊಂಡ ಕ್ರಿಯಾಶೀಲತೆ: ಹಿಂದಿನವರು ಕೊಟ್ಟ ಹಾಗೂ ತಾವೇ ಸಂಪಾದಿಸಿದ ಪಕ್ವ ಪಾಂಡಿತ್ಯ ಒಂದೆಡೆಯಾದರೆ, ಅವರು ಹುಟ್ಟು ಅಧ್ಯಾಪಕರಾಗಿರುವುದು ಇನ್ನೊಂದೆಡೆ, ತಮ್ಮ ಬರವಣಿಗೆಯ ಮೂಲಕ ತಾವು ಉಂಡ ವಿದ್ವತ್ತಿನ ಉಣಿಸನ್ನು ನಾಡಿಗೆ ಬಿತ್ತರಿಸುವ ಮಣಿಹ ಹೊತ್ತಿರುವುದು ಮತ್ತೊಂದೆಡೆ. ತಮ್ಮ ಅಧ್ಯಾಪನದ ಜೊತೆಗೆ ಕನ್ನಡ ಬೋಧನೆಯಲ್ಲಿ ಅಧ್ಯಾಪಕರಿಗೆ ತರಬೇತಿಯನ್ನೂ ಕೊಟ್ಟು ನೂರಾರು ಕನ್ನಡ ಶಿಕ್ಷಕರ ಅಧ್ಯಾಪನಸಾಮರ್ಥ್ಯವನ್ನು ಮೊನಚುಗೊಳಿಸಿದುದು ಹಾಗೂ ತಮ್ಮ ಶಬ್ದವಿಶ್ಲೇಷಣೆಯ ಮೂಲಕ ನಾಡಿನ ಶಬ್ದಕುತೂಹಲಿಗಳ ಮನಸ್ಸನ್ನು ತಣಿಸಿರುವುದು ಅವರ ಕಿರೀಟದ ಎರಡು ಗರಿಗಳು.

ವಯಸ್ಸು ತನ್ನ ಒತ್ತಡವನ್ನು ಪೂರ್ತಿ ಹಾಕಲು ಬಿಡದೆ, ಶ್ರೀಕೃಷ್ಣ ತನ್ನ ಚಕ್ರದಿಂದ ಸೂರ್ಯನ ನಡೆಯನ್ನು ತಡೆದ ಹಾಗೆ, ಜಿ.ವಿ. ಅವರು ಈಗಲೂ ಕ್ರಿಯಾಶೀಲರಾಗಿದ್ದಾರೆ. ಲೇಖನಗಳನ್ನು ಬರೆಯುವುದರಲ್ಲಿ, ಗ್ರಂಥಗಳ ಪರಿಶೀಲನೆಯಲ್ಲಿ, ಸಭೆಸಮಾರಂಭಗಳಲ್ಲಿ ಪಾಲ್ಗೊಳ್ಳುವುದರಲ್ಲಿ ಅವರು ಸದಾ ಬಿಸಿಯಾಗಿರುತ್ತಾರೆ; ಪ್ರತಿದಿನ ಅನೇಕ ಗಂಟೆಗಳ ಕಾಲ ಪುಸ್ತಕರಾಶಿಯಲ್ಲಿ ಮರೆಯಾಗುತ್ತಾರೆ. ತಮ್ಮ ಅಧ್ಯಾಪನ ಕಾಲದಲ್ಲಿ ಮಾಡಿದ ಕಾರ್ಯಕ್ಕಿಂತಲೂ ಬಹು ಪಟ್ಟು ಹೆಚ್ಚಿನದನ್ನು ತಮ್ಮ ನಿವೃತ್ತಿಯ ನಂತರ ಅವರು ಮಾಡಿಕೊಂಡು ಬರುತ್ತಿದ್ದಾರೆ.

ಜಿವಿ ಅಂಥವರು ನೂರನ್ನು ತಲುಪಿದಾಗ ಇಡೀ ನಾಡು ಸಹಜವಾಗಿಯೇ ಸಂಭ್ರಮಿಸುತ್ತದೆ, ನಾಡುನುಡಿಗಳಿಗೆ ಅವರು ನೀಡಿರುವ ಕೊಡುಗೆಯನ್ನು ಕಕ್ಕುಲತೆಯಿಂದ ಸ್ಮರಿಸುತ್ತದೆ, ಕಿರಿಯರು ಅವರ ಜಾಡನ್ನು ಕಂಡು ಪುಲಕಿತಗೊಳ್ಳುತ್ತಾರೆ. ಅವರಿಗೆ ತೊಂಬತ್ತೊಂಬತ್ತು ವರ್ಷಗಳು ತುಂಬಿ ನೂರಕ್ಕೆ ಕಾಲಿಟ್ಟ ಇದೇ ಆಗಸ್ಟ್ ೨೩ ರಂದು ನಾಡಿನ ಪತ್ರಿಕೆಗಳು ವಿದ್ಯುನ್ಮಾನ ವಾಹಿನಿಗಳು ಅವರ ಬಗ್ಗೆ ಪ್ರಕಟಿಸಿದ ಲೇಖನ ಸಂದರ್ಶನಗಳು ಜನರ ಉತ್ಸಾಹದ ಪ್ರತೀಕ. ಸರ್ಕಾರವೂ ಅವರ ನೂರರ ಹಬ್ಬವನ್ನು ಆಚರಿಸಲು ಅಣಿಗೊಳ್ಳುತ್ತಿದೆ, ಹತ್ತಾರು ಸಂಘಸಂಸ್ಥೆಗಳು ಆಚರಿಸಲು ಸಿದ್ಧವಾಗಿವೆ, ಆಗುತ್ತಿವೆ. ಅಂತಹ ಸಂಸ್ಥೆಗಳಲ್ಲಿ ಬೆಂಗಳೂರಿನ ಜಯನಗರದಲ್ಲಿರುವ ಶ್ರೀ ಜಯರಾಮ ಸೇವಾಮಂಡಳಿಯೂ ಒಂದು. ಅದರೊಡನೆ ಜಿವಿ ಅವರದು ನಿಡುಗಾಲದ ಸಂಬಂಧ; ಅದರ ಚಟುವಟಿಕೆಗಳಿಗೆ ವಿದ್ವತ್‌ಸ್ಪರ್ಶ ನೀಡಿದ್ದು ಅವರೇ, ಅದನ್ನು ಪ್ರಕಟಣಕಾರ್ಯಕ್ಕೆ ತೊಡಗಿಸಿದ್ದೂ ಅವರೇ. ಹಾಗಾಗಿ ಜಿವಿ ನೂರರ ಹಬ್ಬವನ್ನು ಆಚರಿಸುವುದರಲ್ಲಿ ಮಂಡಳಿಗೆ ವಿಶೇಷ ಆಸಕ್ತಿ, ಸಂಭ್ರಮ. ಆ ಕಾರ್ಯ ಅರ್ಥಪೂರ್ಣವಾಗಿ ನಡೆಯುವಂತೆ ಈ ಸಂಸ್ಥೆ ಹಲವಾರು ಯೋಜನೆಗಳನ್ನು ಹಬ್ಬಿಕೊಂಡು ಕಾರ್ಯಗತಗೊಳಿಸುತ್ತಿದೆ. ಇದೇ ಸೆಪ್ಟೆಂಬರ್ ಇಪ್ಪತ್ತೊಂಬತ್ತರಂದು ನಡೆಯುವ ಸಮಾರಂಭದ ಹೊತ್ತಿಗೆ ಜಿವಿ ಅವರ ಗೌರವಾರ್ಥ ನಾಲ್ಕು ಗ್ರಂಥಗಳನ್ನು ಹೊರತರುವ ಯೋಜನೆ ಅದರದ್ದು. ಅದರಲ್ಲಿ ಒಂದು ನಿಮ್ಮ ಮುಂದಿರುವ 'ಶತನಮನ'. ಇದನ್ನು ಸಂಪಾದಿಸಿಕೊಡಲು ಮಂಡಳಿಯು ಇತರರೊಂದಿಗೆ ನನ್ನನ್ನು ಕೇಳಿರುವುದು ನನಗೆ ಹೆಮ್ಮೆಯ ವಿಷಯ, ಅವರಿಂದ ಪಡೆದ ಮಾರ್ಗದರ್ಶನಕ್ಕೆ ನಾನು ಕೃತಜ್ಞತೆ ಸಲ್ಲಿಸುವ ಒಂದು ಅವಕಾಶ.

ಏಕೆಂದರೆ, ಜಿವಿ ಅವರನ್ನು ನಾನು ಕಳೆದ ಐವತ್ತು ವರ್ಷಗಳಿಗಿಂತಲೂ ಹೆಚ್ಚಿನ ಕಾಲದಿಂದ ಬಲ್ಲೆ. ತಮ್ಮ ವಾಕ್‌ಶ್ರೀಯಿಂದ ಎಳೆಯರನ್ನು ಸೆಳೆಯುತ್ತಿದ್ದ ಸನ್ನಿವೇಶದಲ್ಲಿ ಅದಕ್ಕೆ ಒಳಗಾದವರಲ್ಲಿ ಇನ್ನೂ ಪ್ರೌಢಶಾಲೆಯಲ್ಲಿ ಓದುತ್ತಿದ್ದ ನಾನೂ ಒಬ್ಬ. ತರಗತಿಯಲ್ಲಿ ಕುಳಿತು ಅವರ ಪಾಠವನ್ನು ನೇರವಾಗಿ ಕೇಳಿರದಿದ್ದರೂ, ಅವರ ಮಾತಿನ ಮೋಡಿಗೆ ಒಳಗಾಗಿದ್ದೆ. ವಿಜಯ ಕಾಲೇಜಿನಲ್ಲಿ ಅವರು ಅಧ್ಯಾಪಕರಾಗಿದ್ದ ಕೊನೆಯ ಐದು ವರ್ಷಗಳ ಕಾಲ ನಾನು ಆ ಕಾಲೇಜಿನ ನನ್ನ ಅಧ್ಯಾಪನ ವೃತ್ತಿಯ ಮೊದಲ ಐದು ವರ್ಷಗಳನ್ನು ಕಳೆಯುವ ಸುಯೋಗ ಮುಂದೆ ನನಗೆ ಒದಗಿ ಬಂತು. ನಾನು ಆ ಕಾಲೇಜು ಸೇರಲೂ ಅವರೇ ಕಾರಣ. ಅವರ ಆಸಕ್ತಿ, ಪ್ರಭಾವ ಮತ್ತು ಪರಿಶ್ರಮಗಳಿಂದಾಗಿ ವಿಜಯ ಕಾಲೇಜಿನಲ್ಲಿ ಹೊಸದಾಗಿ ಕನ್ನಡ ಆನರ್ಸ್ ತರಗತಿಗಳು ಆರಂಭಗೊಂಡಾಗ ಅಲ್ಲಿ ಸೇರಿಕೊಳ್ಳುವ ಅವಕಾಶ ನನಗೆ ಒದಗಿತು. ಆ ಮುಂದೆ ಅವರ ಕಣ್ಗಾಪಿನಲ್ಲಿ ನನ್ನ ವೃತ್ತಿ ಅಭ್ಯಾಸ ಬರವಣಿಗೆಗಳೆಲ್ಲ ಗರಿಗೆದರಿಕೊಳ್ಳಲು ತೊಡಗಿದವು.

ಕಳೆದ ಒಂದು ಶತಮಾನ ಕಾಲದಲ್ಲಿ ಕನ್ನಡ ವಿದ್ವತ್ ಪ್ರಪಂಚದಲ್ಲಿ ಸಂಭಾವನಾ ಗ್ರಂಥಗಳು ಒಂದು ಮಹತ್ತರ ಸಂಪ್ರದಾಯವನ್ನೇ ಹುಟ್ಟಿಹಾಕಿದೆ. ಬಿಎಂಶ್ರೀ ಅವರಿಗೆ ಅವರ ಶಿಷ್ಯರು, ಅಭಿಮಾನಿಗಳು ಸೇರಿ ಅರ್ಪಿಸಿದ 'ಸಂಭಾವನೆ'ಯ ಮೂಲಕವೇ ಈ ಹೆದ್ದಾರಿ ನಿರ್ಮಾಣವಾಯಿತು. ಹಿರಿಯ ಸಾಧಕರಿಗೆ ಓರಗೆಯವರು, ಕಿರಿಯರು ಸೇರಿ ತಮ್ಮ ವಿದ್ವತ್‌ಲೇಖನಗಳ ಮೂಲಕವೇ ಗೌರವ ಸಮರ್ಪಿಸುವುದು ಒಂದು ವಿಶೇಷ, ನಿಜವಾಗಿ ಸಾರ್ಥಕ ಕಾರ್ಯ, ಅದರ ಮೊದಲ ಮೈಲಿಗಲ್ಲು 'ಸಂಭಾವನೆ'. ಅಂದಿನಿಂದ ಇಂದಿನವರೆಗೆ ಕನ್ನಡ ನಾಡಿನಾದ್ಯಂತ ನೂರಾರು (ಸಾವಿರಾರು?) ಅಭಿನಂದನ ಗ್ರಂಥಗಳು ಬಂದಿವೆ, ಬೃಹತ್ತಾದವು, ದೊಡ್ಡವು, ಸಣ್ಣವು – ಹೀಗೆ. ಜಿವಿ ಅವರಿಗೆ ಈಗಾಗಲೇ ಇಂತಹ ಎರಡು ಗ್ರಂಥಗಳ ಅರ್ಪಣೆಗಳು ನಡೆದಿವೆ: ಒಂದು, ಅವರಿಗೆ ಅರುವತ್ತು ತುಂಬಿದಾಗ ಹೊರತಂದ 'ಸಾಹಿತ್ಯಜೀವಿ', ಮತ್ತೊಂದು ಅವರು ತೊಂಬತ್ತು ಮುಗಿಸಿದಾಗ ಬಂದ 'ಶಬ್ದಸಾಗರ'; ನೂರಕ್ಕೆ ಕಾಲಿಟ್ಟ ಈಗ 'ಶತನಮನ'. ಹಿಂದಿನ ಎರಡರಲ್ಲೂ ನನ್ನದು ಒಂದೊಂದು ಲೇಖನವಿತ್ತು. ಈಗ ಅದರ ಸಿದ್ಧತೆಯ ಹೊಣೆಗಾರಿಕೆಯೇ ಬಂದಿದೆ.

ನಾಡಿನ ಸುಮಾರು ಎಪ್ಪತ್ತು ಮಂದಿ ವಿದ್ವಾಂಸರು ಹೊಚ್ಚ ಹೊಸತಾಗಿ ಈ ಗ್ರಂಥಕ್ಕೆಂದೇ ಸಿದ್ಧಪಡಿಸಿದ ಲೇಖನಗಳನ್ನು ಪವಣಿಸಿರುವ ಹೂಮಾಲೆ ಇದು. ನಾಡಿನ ಉದ್ದಗಲದಲ್ಲಿರುವ ಈ ವಿದ್ವಾಂಸರು ವಿದ್ವತ್ ವಲಯದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದವರು, ತಮ್ಮ ಕಾರ್ಯಕ್ಕಾಗಿ ನಾಡಿನ ಮನ್ನಣೆಯನ್ನು ಸಂಪಾದಿಸಿದ ಖ್ಯಾತನಾಮರು. ಹೀಗಾಗಿ ಜಿವಿ ಅವರಿಗೆ ನಾಡಿನ ವಿದ್ವತ್‌ಸಮುದಾಯವು ಒಟ್ಟಾಗಿ ಸಮರ್ಪಿಸುತ್ತಿರುವ ಲೇಖನ ಬಾಗಿನ ಈ ಗ್ರಂಥ. ಇವರನ್ನೆಲ್ಲ ಲೇಖನ ಕೋರಿ ಸಂಪಾದಕ ಮಂಡಳಿಯು ಮಾಡಿದ ಮನವಿಯನ್ನು ಜಿವಿ ಅವರ ಮೇಲಿನ ಗೌರವ ಹಾಗೂ ವಿದ್ವತ್ತಿನ ಬಗೆಗಿನ ಕಾಳಜಿಯಿಂದ ಪುರಸ್ಕರಿಸಿ ಈ ಕಾರ್ಯವು ಯಶಸ್ವಿಯಾಗಲು ಕಾರಣಕರ್ತರಾಗಿದ್ದಾರೆ. ಇದರಲ್ಲಿನ ವಸ್ತುವೈವಿಧ್ಯ, ವಿಶ್ಲೇಷಣೆಯ ಸೂಕ್ಷ್ಮತೆ ವಿಚಾರಪ್ರಿಯರಿಗೆ ರಸದೂಟ, ವಿದ್ವಾಂಸರಿಗೊಂದು ಆಕರಗ್ರಂಥ, ಪುಸ್ತಕಭಂಡಾರಗಳಲ್ಲಿ ಕಂಗೊಳಿಸಬಹುದಾದ ಒಂದು ಅಮೂಲ್ಯ ರತ್ನ.

ಇಂಥದೊಂದು ಮಹತ್ವಪೂರ್ಣ ಗ್ರಂಥದ ಸಿದ್ಧತೆಗೆ ನಮ್ಮನ್ನು ತೊಡಗಿಸಿದ ಶ್ರೀ ಜಯರಾಮಸೇವಾ ಮಂಡಳಿಯ 'ಜಿವಿ ಶತಮಾನೋತ್ಸವ ಸಮಿತಿ'ಯ ಪದಾಧಿಕಾರಿಗಳಿಗೆ ಸಂಪಾದಕ ಮಂಡಳಿ ಕೃತಜ್ಞವಾಗಿದೆ. ನಮ್ಮ ಕೋರಿಕೆಗೆ ಓಗೊಟ್ಟ ವಿದ್ವಾಂಸರಿಗೆ ನಮ್ಮ ಪ್ರಣಾಮಗಳು. ನನ್ನ ಜೊತೆ ಸಂಪಾದಕರಾಗಿ ಸಹಕರಿಸಿದ ಡಾ. ಎ.ವಿ. ಪ್ರಸನ್ನ ಹಾಗೂ ಡಾ. ಎಸ್.ಎಲ್. ಶ್ರೀನಿವಾಸ ಮೂರ್ತಿ ಅವರಿಗೆ ನಾನು ವಂದನೆಗಳನ್ನರ್ಪಿಸುತ್ತೇನೆ. ಅದರಲ್ಲಿಯೂ ವಿಶೇಷವಾಗಿ, ಸಂಪಾದನೆ, ಓಡಾಟ ಮತ್ತು ಕರಡು ತಿದ್ದುವ ಶ್ರಮಸಾಧ್ಯವಾದ ಕೆಲಸದಲ್ಲಿ ತಾಳ್ಮೆಯಿಂದ ನೆರವಾದ ಡಾ. ಶ್ರೀನಿವಾಸಮೂರ್ತಿ ಅವರ ದುಡಿಮೆ ಸ್ಮರಣಾರ್ಹ. ನಮ್ಮ ಒತ್ತಡಗಳನ್ನು ಸಹಿಸಿ ಅಕ್ಷರ ಜೋಡಣೆ ಹಾಗೂ ಪುಟವಿನ್ಯಾಸ ಮಾಡಿದ ಶ್ರೀ ಬಿ.ಎಸ್. ವಿದ್ಯಾರಣ್ಯ ಅವರಿಗೆ, ಆಕರ್ಷಕವೂ ಅರ್ಥವತ್ತೂ ಆದ ಮುಖಪುಟವನ್ನು ವಿನ್ಯಾಸಗೊಳಿಸಿದ ಖ್ಯಾತ ಕಲಾವಿದ ಶ್ರೀ ಚಂದ್ರನಾಥ ಆಚಾರ್ಯ ಅವರಿಗೆ, ಗ್ರಂಥವನ್ನು ಸುಂದರವಾಗಿ ಮುದ್ರಿಸಿರುವ ಆದಿತ್ಯ ಪ್ರಿಂಟರ್ಸ್ ಅವರಿಗೆ ಸಂಪಾದಕ ಮಂಡಳಿಯ ಹೃತ್ಪೂರ್ವಕ ನಮನಗಳು.

ಸಂಪಾದಕ ಮಂಡಳಿಯ ಪರವಾಗಿ
ಪಿ. ವಿ. ನಾರಾಯಣ
(ಪ್ರಧಾನ ಸಂಪಾದಕ)

ಬೆಂಗಳೂರು
೨೦-೦೯-೨೦೧೨

# ಪರಿವಿಡಿ

# ಮೇರುವ್ಯಕ್ತಿತ್ವಕ್ಕೆ ಶಿರಸಾಷ್ಟಾಂಗ ಪ್ರಣಾಮ

– ನಂ. ನಾಗಲಕ್ಷ್ಮಿ

ಗಾಂಭೀರ್ಯದ ಜೊತೆಯಲ್ಲಿಯೇ ಸೌಜನ್ಯ, ವಿದ್ವತ್ತಿನ ಫಲವಾಗಿ ಮುಖದಲ್ಲಿ ಮಾತಿನಲ್ಲಿ ಎದ್ದುಕಾಣುವ ಆತ್ಮವಿಶ್ವಾಸ, ಹಸನ್ಮುಖದಲ್ಲಿ ಆಡು ನುಡಿಗೆ ಸೇವೆ ಸಲ್ಲಿಸುತ್ತಿರುವ ತೃಪ್ತಿ, ಧನ್ಯತೆ, ಎಲ್ಲಕ್ಕಿಂತ ಹೆಚ್ಚಾಗಿ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಸುಸಂಸ್ಕೃತ ವ್ಯಕ್ತಿತ್ವವೆಂದರೇನೆಂಬ ಪ್ರಶ್ನೆಗೆ ಉತ್ತರ ಪ್ರೊ. ಜಿ.ವಿ. ಅಕ್ಷರ ಜೀವಿ, ಸಾಹಿತ್ಯ ಜೀವಿ, ನಡೆದಾಡುವ ನಿಘಂಟು, ಪದಗುರು, ಶಬ್ದಸಾಗರ, ಭಾಷಾಶಾಸ್ತ್ರಜ್ಞ ಇತ್ಯಾದಿ ಇತ್ಯಾದಿ ಎಲ್ಲ ಹೆಸರುಗಳೊಂದಿಗೆ ಕನ್ನಡ ನಾಡಿನಾದ್ಯಂತ ಚಿರಪರಿಚಿತರಾಗಿರುವ ಗಂಜಾಂ ವೆಂಕಟಸುಬ್ಬಯ್ಯನವರು, ಇದೇ ಆಗಸ್ಟ್ ಇಪ್ಪತ್ತೂರಕ್ಕೆ ನೂರರ ಹೊಸ್ತಿಲಿನಲ್ಲಿ ಕಾಲಿಟ್ಟಿರುವ ಕನ್ನಡ ಸಾರಸ್ವತಲೋಕದ ಅತ್ಯಂತ ಹಿರಿಯ ಸಾಹಿತ್ಯ ಜೀವಿ. ವಿದ್ವಾಂಸರ ವಲಯದಲ್ಲಿ ಇವರು ಪ್ರೊ. ಜಿ.ವಿ. ಅಸಂಖ್ಯಾತ ಶಿಷ್ಯವೃಂದಕ್ಕೆ ಪ್ರೀತಿಯ 'ಮೇಷ್ಟ್ರು' ಜನಸಾಮಾನ್ಯ ಓದುಗರಿಗೆ 'ಇಗೋ ಕನ್ನಡದ ಜಿ.ವಿ.' ವಿದ್ಯೆ ಮತ್ತು ವಿನಯದ ಸಾಕಾರಮೂರ್ತಿ.

ತಮ್ಮ ಸುದೀರ್ಘ ಬದುಕಿನಲ್ಲಿ ಇವರು ನಿರ್ವಹಿಸಿಕೊಂಡು ಬಂದಿರುವ ಕಾರ್ಯಕ್ಷೇತ್ರಗಳು ಒಂದೆರಡಲ್ಲ. ಶಿಕ್ಷಣ, ಸಂಶೋಧನೆ, ಅನುವಾದ, ವಿಮರ್ಶೆ, ಗ್ರಂಥ ಸಂಪಾದನೆ, ನಿಘಂಟುಗಳ ನಿರ್ಮಾಣ ಸಾಹಿತ್ಯ ಸಂಸ್ಥೆಗಳ ನಿರ್ವಹಣೆ ಹೀಗೆ ವೈವಿಧ್ಯಮಯ. ಇವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಎಂಟು ಸಂಪುಟಗಳ ಬೃಹತ್ ನಿಘಂಟು ರಚನೆಯಾದದ್ದು ಇವರ ಮೇರು ಸಾಧನೆ. ಪರಿಷತ್ತಿನ ಅಧ್ಯಕ್ಷರಾದಾಗ ಇವರು ಆವರೆಗಿನ ಅತಿಕಿರಿಯವಯಸ್ಸಿನ ಅಧ್ಯಕ್ಷರಾಗಿದ್ದರು. ೨೦೧೦ರಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದಾಗ ಅದುವರೆಗಿನ ಅತ್ಯಂತ ಹಿರಿಯ ವಯಸ್ಸಿನ ಸಮ್ಮೇಳನಾಧ್ಯಕ್ಷರೆನಿಸಿದರು.

ದೇಹ ಹಾಗೂ ಮನಸ್ಸು ಎರಡನ್ನೂ ತುಂಬ ಆರೋಗ್ಯಕರವಾಗಿ

# ೨೬೨, 'ನಂಜುಂಡ ಕೃಪ', ೬ನೇ ಮುಖ್ಯರಸ್ತೆ, ಮೈಕೋ ಲೇಔಟ್, ಬೆಂಗಳೂರು – ೫೬೦ ೦೭೬

ಇಟ್ಟುಕೊಂಡಿರುವ ಆದರ್ಶ ಜೀವಿ. ಹಿರಿಯ, ಕಿರಿಯರೆಂಬ ಭೇದವಿಲ್ಲದೆ ಎಲ್ಲರನ್ನು ಅತ್ಯಂತ ವಿಶ್ವಾಸದಿಂದ, ಆತ್ಮೀಯತೆಯಿಂದ ಮಾತನಾಡಿಸುವ ಸೌಜನ್ಯಮೂರ್ತಿ. ಶತಾಯುಷಿಯಾಗುತ್ತಿರುವ ಶುಭ ಸಂದರ್ಭದಲ್ಲಿ ಈ ಹಿರಿಯರ ಒಂದು ಸಂದರ್ಶನ ಲೇಖನವನ್ನು ಸಂಕ್ಷಿಪ್ತ ಪರಿಚಯದೊಂದಿಗೆ ಸಿದ್ಧಪಡಿಸುವ ಹೊಣೆಯನ್ನು ಸಂಪಾದಕ ಮಂಡಳಿಯವರು ನನಗೆ ನೀಡಿದಾಗ ಸಿಕ್ಕಿದ ಸದವಕಾಶಕ್ಕಾಗಿ ತುಂಬ ಸಂತೋಷವಾಗಿತ್ತು. ಅದುವರೆಗಾಗಲೇ ಅವರ ಪರಿಚಯವಾಗಿದ್ದು, ಹಲವು ಬಾರಿ ನನ್ನ ಬರವಣಿಗೆಗೆ ಸಂಬಂಧಿಸಿದಂತೆ ಅವರ ಮಾರ್ಗದರ್ಶನ ಪಡೆಯಲು ಮನೆಗೂ ಹೋಗಿದ್ದುದರಿಂದ ಧೈರ್ಯವಾಗಿ ಈ ಕಾರ್ಯದಲ್ಲಿ ಮುಂದುವರಿಯಲು ಸಾಧ್ಯವಾಗಿತ್ತು. ವಿದ್ಯೆ ಮತ್ತು ವಿನಯಗಳೆರಡರ ಅಪರೂಪದ ಸಮ್ಮಿಲನದ ಈ ಸುಸಂಸ್ಕೃತತನವನ್ನು ಕಾಣುವುದು, ಕಂಡು ಮಾತನಾಡಿಸುವುದು, ಸ್ವಲ್ಪ ಹೊತ್ತು ಇವರ ಮಾತುಗಳನ್ನು ಕೇಳುವುದು, ಇಂತಹವರ ಪರಿಚಯವನ್ನು ಮಾಡಿಕೊಡುವುದು ಎಲ್ಲವೂ ಸುಯೋಗವೆಂದು ಭಾವಿಸಿ ಇವರ ಮನೆಗೆ ಹೋದೆ. ಆದರದಿಂದ ಮಾತನಾಡಿಸಿ, ಕಾರ್ಯಾರಂಭಕ್ಕೆ ತೊಡಗಿದರು.

ಸುದೀರ್ಘ ಬದುಕಿನಲ್ಲಿ ನಡೆದು ಬಂದ ದಾರಿಯತ್ತ ಕಣ್ಣು ಹಾಯಿಸುತ್ತಿದ್ದಂತೆ ನೆನಪು ದಶಕ ದಶಕಗಳ ಹಿಂದಕ್ಕೋಡಿತ್ತು. ಪೂರ್ವಿಕರ, ಹುಟ್ಟೂರಿನ ಸ್ಮರಣೆಯೊಂದಿಗೆ ಬಾಲ್ಯದ ದಿನಗಳು ಕಣ್ಮುಂದೆ ನಿಂತಿದ್ದವು. ಇಂದು ನಾಡಿನಾದ್ಯಂತ ಪ್ರಶಸ್ತಿಗಳ ಸರಮಾಲೆಯನ್ನು ಕಟ್ಟಿಕೊಂಡಿರುವುದರೊಂದಿಗೆ, ನಾಡಿನ, ದೇಶದ ವಿದ್ವಾಂಸರ ವಲಯದಲ್ಲಿ ಪ್ರಮುಖ ಸ್ಥಾನದ ಗೌರವವನ್ನು ಹೊಂದಿರುವುದರೊಂದಿಗೆ, ಅಪಾರ ಸಂಖ್ಯೆಯ ಶಿಷ್ಯವೃಂದದ, ಅಸಂಖ್ಯಾತ ಕನ್ನಡಿಗರ ಅಭಿಮಾನದ ಮಹಾಪೂರದಲ್ಲೇ ಮಿಂದ ಸಂತೃಪ್ತಿಯ ಹಿಂದಿನ ಪರಿಶ್ರಮದ ಬದುಕಿನ ಚಿತ್ರ ಕಣ್ಣಿಗೆ ಕಟ್ಟಿತ್ತು.

ಬಾಲ್ಯದ ದಿನಗಳ ನೋವು, ನಲಿವಿನ ನೆನಪಾಗುತ್ತಿದ್ದಂತೆ, ತಮ್ಮ ಆದರ್ಶ ಬದುಕಿಗೆ ದಾರಿ ತೋರಿದ ಹಿರಿಯರ ಸ್ಮರಣೆಯಾಗುತ್ತಿದ್ದಂತೆ ಭಾವಾವೇಶಕ್ಕೆ ಒಳಗಾಗಿದ್ದರು, ಧ್ವನಿ ಭಾರವಾಗಿತ್ತು. ಕಂಠ ಗದ್ಗದಿಸಿತ್ತು. ಮರುಕ್ಷಣದಲ್ಲಿ ಸಾವರಿಸಿಕೊಂಡ ಜಿ.ವಿ. ಎಂದಿನ ಸಮಾಧಾನದ, ಸ್ಥಿರಚಿತ್ತದೊಂದಿಗೆ ನೆನಪುಗಳನ್ನು ಬಿಚ್ಚಿಡತೊಡಗಿದ್ದರು. ಅವರ ಪ್ರೀತಿಯ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರರ ಕೃತಿಗಳ ಅಧ್ಯಯನದಿಂದ ಪ್ರೇರಿತರಾಗಿ ತಮ್ಮ ಬದುಕಿನುದ್ದಕ್ಕೂ ಪಾಲಿಸಿಕೊಂಡು ಬಂದಿದ್ದ ತಾರಕಮಂತ್ರ ನೆನಪಾಗಿದ್ದಿರಬೇಕು.

'ಬಾಳಿನಲ್ಲಿ ಎಂಥ ವಿಷಮ ಸನ್ನಿವೇಶವೇ ಮೂಡಿಬಂದರೂ ಉತ್ಸಾಹವನ್ನು ಎಂದೂ ಕಳೆದುಕೊಳ್ಳಬಾರದು. ಪ್ರಯತ್ನಪೂರ್ವಕವಾಗಿ ಉತ್ಸಾಹವನ್ನು ವೃದ್ಧಿಪಡಿಸಿಕೊಳ್ಳಬೇಕು. ಸಮಾಧಾನದಿಂದ ಬಾಳಿ ಸಾಧ್ಯವಾದಷ್ಟೂ ಇತರರಿಗೆ ಸಂತೋಷವನ್ನು ಹಂಚಬೇಕು. ಹೆದರಿ ಕುಸಿಯಬಾರದು. ಸೋಲಲು ಒಪ್ಪದ ಮನಸ್ಸು ಗೆಲ್ಲಲು ದುಡಿಯುವ ತಪಸ್ಸು ಇವುಗಳನ್ನು ಸಾಧಿಸು.'

ಪ್ರತಿಭಾವಂತ ಹಾಗೂ ವಿದ್ವತ್ತಿನೊಂದಿಗೆ ಸಜ್ಜನಿಕೆಯನ್ನು ರಕ್ತಗತವಾಗಿಸಿಕೊಂಡಿದ್ದು ಹೃದಯಶ್ರೀಮಂತಿಕೆ ಹೊಂದಿದ್ದ ಕೌಟುಂಬಿಕ ಮನೆತನದ ಪರಿಚಯವನ್ನು ಹೆಮ್ಮೆಯಿಂದಲೇ ಪ್ರಾರಂಭಿಸಿದ್ದರು ಪ್ರೊ. ಜಿ.ವಿ.

ಮಂಡ್ಯ ಜಿಲ್ಲೆಯ ಮುದುಗುಂದೂರು ಜಿ.ವಿ.ಯವರ ಪೂರ್ವಿಕರ ಸ್ಥಳ, ಊರು ಸಣ್ಣದೇ. ಅಲ್ಲಿದ್ದವರಲ್ಲಿ ಬಹುತೇಕ ಹೊಯ್ಸಳ ಕರ್ನಾಟಕರು. ವಿದ್ಯಾವಂತ, ಕರ್ಮಿಷ್ಠ ಬ್ರಾಹ್ಮಣರ ನೆಲೆವೀಡು, ಆ ಬ್ರಾಹ್ಮಣರಿಗೆ ಹಿಡುವಳಿಯಲ್ಲಿದ್ದ ಅಲ್ಪಸಲ್ಪ ಜಮೀನೇ ಜೀವನಾಧಾರವಾಗಿತ್ತು. ಅದೂ ಹೇಗೆ? ಮಳೆ ಇದ್ದಾಗ ಬೆಳೆ, ಇಲ್ಲವಾದರೆ ಕಳೆ, ಆ ಜಮೀನಾದರೂ ಎಷ್ಟು? ಅರ್ಧ ಎಕರೆ, ಮುಕ್ಕಾಲು ಎಕರೆ, ಎರಡುಗುಂಟೆ, ನಾಲ್ಕು ಗುಂಟೆ ಹೀಗೆ. ಎಕರೆಗಟ್ಟಲೆ ಆಸ್ತಿ ಯಾರಿಗೂ ಇಲ್ಲ. ಆ ಜಮೀನಿನಲ್ಲಿಯೇ ವರ್ಷಕ್ಕಾಗುವಷ್ಟು ದವಸ, ತರಕಾರಿ ಸ್ವಲ್ಪ ಬೆಳೆಯುತ್ತಿದ್ದರು. ಆದರೆ, ಎಲ್ಲರೂ ವೇದ, ಉಪನಿಷತ್ತುಗಳ ಅಧ್ಯಯನ ಮಾಡಿದ್ದ ವಿದ್ವಾಂಸರಾಗಿದ್ದರು. ಊರಿನಲ್ಲಿ ಸುಮಾರು ಮೂವತ್ತೈದರಿಂದ ನಲವತ್ತು ಬ್ರಾಹ್ಮಣ ಕುಟುಂಬಗಳು. ಉಳಿದಂತೆ ರೈತರು. ಒಂದೆರಡು ಮಹಮ್ಮದೀಯರ ಮನೆಗಳಿದ್ದವು. ಊರಿನಲ್ಲೊಂದು ದೇವಸ್ಥಾನ, ನವಗ್ರಹವೂ ಸೇರಿದಂತೆ, ಅಲ್ಲಿದ್ದ ಬ್ರಾಹ್ಮಣರು ಪೂಜೆ, ಪುನಸ್ಕಾರ ಮಾಡಿಕೊಂಡು ಇರುತ್ತಿದ್ದರು.

ಸುಮಾರು ೧೮೭೬-೭೭ರ ಅವಧಿಯಲ್ಲಿ ಎರಡು ವರ್ಷಗಳು ಮಳೆಯೇ ಇಲ್ಲದೆ ಭೀಕರ ಬರಗಾಲ ಬಂದಿತ್ತು. (ಧಾತು-ಈಶ್ವರ ಸಂವತ್ಸರ) ಊರಿನಲ್ಲಿದ್ದ ಬ್ರಾಹ್ಮಣರೆಲ್ಲ ದಿಕ್ಕು ತೋಚದೆ ತಮ್ಮ ಚೂರುಪಾರು ಜಮೀನನ್ನು ಸಿಕ್ಕಷ್ಟಕ್ಕೆ ಮಾರಿಕೊಂಡು ನೀರಿರುವ ಕಡೆಗಳಿಗೆ ವಲಸೆ ಹೊರಟರು. ಹೆಚ್ಚಿನವರು ಮೈಸೂರು, ನಂಜನಗೂಡು, ಚಾಮರಾಜನಗರದ ಕಡೆಗಳಿಗೆ ಹೋಗಿ ನೆಲೆಸಿದರು. ಜಿ.ವಿ.ಯವರ ಹಿರಿಯರು ಶ್ರೀರಂಗಪಟ್ಟಣಕ್ಕೆ ಬಂದು ಗಂಜಾಂನಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡರು.

ನರಸಿಂಹ ಜೋಯಿಸರು ಜಿ.ವಿ.ಯವರ ತಾತ, ಅಜ್ಜಿ ಲಕ್ಷ್ಮೀದೇವಮ್ಮ, ಜೋಯಿಸರು ಗಂಜಾಂನಲ್ಲಿದ್ದ ಈಶ್ವರ ದೇವಾಲಯದ ಅರ್ಚಕರಾಗಿ ನೇಮಕಗೊಂಡಿದ್ದರು. ಮನೆಯಲ್ಲಿ ಋಗ್ವೇದ ಅಧ್ಯಯನ. ಸಂಧ್ಯಾವಂದನೆ ತಪ್ಪದೆ ಮಾಡುತ್ತಿದ್ದರು. ಅವರಿಗೆ ಇಬ್ಬರು ಗಂಡು ಮಕ್ಕಳು, ತಿಮ್ಮಣ್ಣಯ್ಯ, ಅಶ್ವತ್ಥನಾರಾಯಣ, ತಿಮ್ಮಣ್ಣಯ್ಯನವರಿಗೆ ಕೈಗೋನಹಳ್ಳಿಯ ಸುಬ್ಬಮ್ಮನವರೊಂದಿಗೆ ವಿವಾಹವಾಯ್ತು. ಹಿರಿಯ ಮಗನೇ ಜಿ.ವಿ.ಯವರು. ಹುಟ್ಟಿದ್ದು (ಪ್ರಮಾದೀಚ ಸಂವತ್ಸರ) ೨೩-೮-೧೯೧೩ ದೇವಸ್ಥಾನದ ಪಕ್ಕದಲ್ಲಿಯೇ ಹೂವು, ಹಣ್ಣಿನ ತೋಟವಿತ್ತು. ಅದರ ಮೇಲ್ವಿಚಾರಣೆಗೆ ಒಬ್ಬ ಸೇವಕನೂ ಇರುತ್ತಿದ್ದ. ತಿಮ್ಮಣ್ಣಯ್ಯನವರು ಪಂಡಿತ ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ ಶಾಲಾಮಾಸ್ತರಾಗಿ ಉದ್ಯೋಗ ಪಡೆದು ಹೊರ ಊರಿಗೆ ಹೊರಟಾಗ ಬಾಲಕ ವೆಂಕಟಸುಬ್ಬಯ್ಯನವರನ್ನು ತಂದೆಯ ಬಳಿಯಲ್ಲಿಯೇ ಬಿಟ್ಟಿದ್ದರು.

ತಾತನೊಂದಿಗೆ ಕಳೆದ ಬಾಲ್ಯ ಜಿ.ವಿ.ಯವರಿಗೆ ತುಂಬ ಅಮೂಲ್ಯ. ಅದು ಅವರು ಬದುಕಿನ ಮೊದಲ ಪಾಠ ಕಲಿತ ಕಾಲವಾಗಿತ್ತು. ಅದು ಕಷ್ಟವಿದ್ದರೂ ಸಮಾಧಾನದ ಬದುಕೆಂದರೇನೆಂದು ಕಲಿತ ಕಾಲವಾಗಿತ್ತು. ಅದರಿಂದಲೇ ಅವರಿಗೆ ಆ ದಿನಗಳು ಸದಾ ಸ್ಮರಣೀಯ.

"ತಾತ ಪ್ರತಿದಿನ ಬೆಳಿಗ್ಗೆ ಕಾವೇರಿ ನದಿಗೆ ಸ್ನಾನಕ್ಕೆ ಹೊರಟಾಗ ನಾನೂ ಜೊತೆಗೂಡುತ್ತಿದ್ದೆ. ಅವರು ಹೇಳಿಕೊಳ್ಳುತ್ತಿದ್ದ ಅಮರದಪಾಠವನ್ನು ನಾನೂ ಹೇಳುತ್ತಾ ಹೋಗುತ್ತಿದ್ದೆ. ಮೂರ್ನಾಲ್ಕು ತಿಂಗಳಲ್ಲಿ ಒಂದು ಕಾಂಡ ಪೂರ್ತಿ ಬಾಯಿಗೆ ಬಂದಿತ್ತು. ಅರ್ಥವೇನೂ ತಿಳಿದಿರಲಿಲ್ಲ. ಆದರೆ ಪೂರ್ತಿ ಸರಾಗವಾಗಿ ಹೇಳುತ್ತಿದ್ದೆ. ತಾತ ಅರ್ಚಕರಾಗಿದ್ದ ದೇವಸ್ಥಾನದಲ್ಲಿ ನಾಲ್ಕು ದೇವರ ವಿಗ್ರಹಗಳಿದ್ದುವು. ಸದಾಶಿವ, ಪಾರ್ವತಿ, ಗಣೇಶ, ಸುಬ್ರಹ್ಮಣ್ಯ. ಎಲ್ಲಕ್ಕೂ ನಾನು ಗಂಧ ತೇಯ್ದುಕೊಡಬೇಕಿತ್ತು. ತೋಟದಲ್ಲಿ ಹೂ ಕಿತ್ತು ಜೊತೆಯಲ್ಲಿಯೇ ಗಿಳಿ ಕಚ್ಚಿದ್ದ ಹಣ್ಣುಗಳನ್ನು (ಅವು ಸ್ವಾದಿಷ್ಟವೆಂದು ತಾತ ಹೇಳುತ್ತಿದ್ದರು.) ಕಿತ್ತು ಒಂದು ತೆಂಗಿನ ಗರಿಯಿಂದ ಮಾಡಿದ್ದ ಬುಟ್ಟಿಯಲ್ಲಿ ತುಂಬಿಕೊಂಡು ಬರುತ್ತಿದ್ದೆ. ಹಾಗಾಗಿ ಪ್ರತಿದಿನ ರುಚಿರುಚಿಯಾದ ಹಣ್ಣುಗಳು ಸಿಕ್ಕುತ್ತಿದ್ದವು.

ಆ ಕಾಲದಲ್ಲಿ ಸಾಮಾನ್ಯವಾಗಿ ಮಧ್ಯಮವರ್ಗದ ಬ್ರಾಹ್ಮಣ ಕುಟುಂಬಗಳಲ್ಲೆಲ್ಲ ಕಿತ್ತು ತಿನ್ನುವ ಬಡತನವೇ. ಅದರಲ್ಲಿಯೂ ನಾವಂತೂ ಮತ್ತೊಂದು ಊರಿನಿಂದ ಬಂದು ನೆಲೆಸಿದ್ದವರು. ಹಾಗಾಗಿ ಯಾವ ಆಸ್ತಿಯಿರಲಿಲ್ಲ. ಮನೆಯಲ್ಲಿ ದಟ್ಟ ದಾರಿದ್ರ್ಯವೇ. ಅಡಿಗೆಗೆ ಮಣ್ಣಿನ ಮಡಿಕೆಗಳು, ಬಳಪದ ಕಲ್ಲಿನಿಂದ ಮಾಡಿದ 'ಮರಿಗೆ' ಎಂಬ ಪಾತ್ರೆಗಳು. ಪೌರೋಹಿತ್ಯ ಹೆಚ್ಚುತ್ತಿದ್ದಂತೆ ಮನೆಯಲ್ಲಿ ತಾಮ್ರದ ಪಾತ್ರೆಗಳು ಸೇರಿದ್ದುವು. ನಮ್ಮಜ್ಜಿ ಬೆಳಿಗ್ಗೆ ಎದ್ದಾಗ 'ಈ ದಿನ ಅಡಿಗೆ ಇಲ್ಲ' ಎಂದು ಹೇಳಬೇಕು; ಆಗ ತಾತ 'ನಾನು ಉಪಾದಾನಕ್ಕೆ ಹೋಗಿ ಬರ್ತೇನೆ' ಎಂದು ಕೈಯಲ್ಲಿ ಪಂಚಾಂಗ ಹಿಡಿದು ಹೊರಡುತ್ತಿದ್ದರು. ಜೊತೆಯಲ್ಲಿ ನಾನು. ಆಗ ಗಂಜಾಂನಲ್ಲಿ ರತ್ನಪಡಿ ವ್ಯಾಪಾರ ಮಾಡುತ್ತಿದ್ದ 'ಲಾಡರು' ಎಂಬ ಸಮುದಾಯದವರು ಇರುತ್ತಿದ್ದರು. ಅವರದೊಂದು ಬೀದಿಯೇ ಇತ್ತು. ಅವರ ಮನೆಗೆ ಹೋಗಿ, ಬಾಗಿಲು ತಟ್ಟಿ ತಾತ "ಈ ದಿನ ಇಂತಹ ತಿಥಿ ಇದೆ. ಇಂತಹ ಪೂಜೆ ಮಾಡಿದರೆ ಒಳ್ಳೆಯದು. ಈ ನಕ್ಷತ್ರವಿದೆ. ಇಂದು ಏಕಾದಶಿ" ಹೀಗೆ ಹೇಳುತ್ತಿದ್ದರು. ಅವರು ತಾತನ ಕಾಲಿಗೆ ನಮಸ್ಕರಿಸಿ, ಒಳಕ್ಕೆ ಕರೆದು ಕುಳ್ಳಿರಿಸಿ ಒಂದು ಮೊರದಲ್ಲಿ ಒಂದಷ್ಟು ಅಕ್ಕಿ, ಅಕ್ಕಿಹಿಟ್ಟು ಅಥವಾ ರಾಗಿಹಿಟ್ಟು, ಕಡಲೇಬೇಳೆ, ಜೀರಿಗೆ, ಸಾಸಿವೆ, ಮೆಣಸಿನಕಾಯಿ ಒಂದೆರಡು ಹೀರೆಕಾಯಿ ಎಲ್ಲವನ್ನೂ ಬೇರೆ ಬೇರೆ ಪೊಟ್ಟಣ ಕಟ್ಟಿಟ್ಟು, ಜೊತೆಗೆ ಮೂರುಕಾಸು ದಕ್ಷಿಣೆ ಇಟ್ಟು ಕೊಡುತ್ತಿದ್ದರು.

ನಾನು ಹುಡುಗ, ನನಗೆ ಒಂದು ಕಾಸು ದಕ್ಷಿಣೆ, ನಂತರ ಮುಂದಿನ ಮನೆ. ಹೀಗೆ ಮೂರ್ನಾಲ್ಕು ಮನೆಗಳಿಗೆ ಭೇಟಿ. ಸುಮಾರು ಐದಾರು ದಿನಗಳಿಗಾಗುವಷ್ಟು ಸೇರಿದ ಕೂಡಲೇ ತಾತ 'ಇನ್ನು ಸಾಕು' ಎಂದು ಮನೆಯ ಕಡೆಗೆ ಹೊರಡುತ್ತಿದ್ದರು. ತಂದದ್ದು ಖಾಲಿಯಾಗುವವರೆಗೆ ಮತ್ತೆ ಉಪಾದಾನವಿಲ್ಲ. ದಕ್ಷಿಣೆ ಹಣದಲ್ಲಿ ಅಂಗಡಿಯಿಂದ ಎಣ್ಣೆ ತರುತ್ತಿದ್ದರು. ಹೀಗೆ 'ಸಂತೃಪ್ತಿಯಲ್ಲಿ ಸಂತೋಷವಿದೆ' ಎಂಬ ಪಾಠ ಕಲಿಸಿದ ಜೀವನ ಅದು. ತಾತನ ವ್ಯಕ್ತಿತ್ವ, ಅವರು ಬದುಕಿದ ರೀತಿಯನ್ನು ಸ್ಮರಿಸುತ್ತಿದ್ದಂತೆ ಜಿ.ವಿ.ಯವರ ಹೃದಯ ತುಂಬಿ ಬಂದಿತ್ತು.

"ದಾರಿಯಲ್ಲಿ ಸತ್ಯಗಣಪತಿ ದೇವಾಲಯ. ಅದರ ಪೂಜೆ ಕೂಡ ತಾತನೇ ಮಾಡುತ್ತಿದ್ದರು. ಊರಿನವರು ತುಂಬ ದೈವಭಕ್ತಿಯುಳ್ಳ ಜನ. ಗಣಪತಿಗೆ ಸದಾ ವಡೆಸರದ ಸೇವೆ ಮಾಡಿಸುತ್ತಲೇ ಇದ್ದರು. ಹಾಗಾಗಿ ನಮ್ಮ ಬುಟ್ಟಿಯಲ್ಲಿ ಸದಾ ಕುರುಕು ತಿಂಡಿ. ಅಂತೂ ಬಡತನವಿದ್ದರೂ ಊಟ, ತಿಂಡಿಯಿಲ್ಲದೆ ಹಸಿದುಕೊಂಡಿದ್ದ ದಿನವಿರಲೇ ಇಲ್ಲ. ಗಂಜಾಂನಲ್ಲಿ ನಾನಿದ್ದಾಗ ನಾನು ಶಾಲೆಗೆ ಹೋದ ನೆನಪೇ ಇಲ್ಲ."

ತಿಮ್ಮಣ್ಣಯ್ಯನವರು ಬನ್ನೂರಿನ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ನೇಮಕಗೊಂಡಾಗ ಮಗನನ್ನು ಜೊತೆಗೆ ಕರೆದೊಯ್ದರು. ಅಲ್ಲಿ ಶಾಲೆಗೆ ಸೇರಿಸಿದ್ದರು. ತಿಮ್ಮಣ್ಣಯ್ಯನವರು ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿ ಆಳವಾದ ಪಾಂಡಿತ್ಯ ಪಡೆದಿದ್ದರು. ಅರಮನೆಯ ವಿದ್ವಾಂಸರೂ ಆಗಿದ್ದು ಅಲ್ಲಿನ ವಿದ್ವದ್ಗೋಷ್ಠಿಗಳಿಗೆ ಸದಾ ಆಹ್ವಾನವಿರುತ್ತಿತ್ತು. ವೇದೋಪನಿಷತ್ತುಗಳನ್ನು ಸಾಂಗವಾಗಿ ಅಧ್ಯಯನ ಮಾಡಿದ್ದರು. ಪುರಾಣಗಳಲ್ಲಿ ಅವರಿಗೆ ಅಪಾರ ಆಸಕ್ತಿಯಿತ್ತು. ಸ್ವಂತ ಖರ್ಚಿನಲ್ಲಿ 'ಪುರಾಣ ಕಥಾವಳಿ' ಎಂಬ ಮಾಸಪತ್ರಿಕೆಯನ್ನು ಹೊರಡಿಸುತ್ತಿದ್ದರು. 'ಮಾಲತಿ ಮಾಧವ' ನಾಟಕವನ್ನು ಸಂಸ್ಕೃತದಿಂದ ಅನುವಾದ ಮಾಡಿದ್ದರು. 'ರಘುವೀರ ಚರಿತೆ' ಎಂಬ ನಾಟಕವನ್ನು ತಾವೇ ಬರೆದಿದ್ದರು. ಹೀಗೆ ಜ್ಞಾನದಾಹಿಯಾಗಿದ್ದ ಅವರ ಸ್ವಭಾವ ಮಗನಲ್ಲೂ ಮೂಡಿಬಂದಿತ್ತು. ತಾತನಿಂದ ಅಮರಪಾಠ, ನಂತರ ತಂದೆಯಿಂದ ಮನೆಯಲ್ಲಿ ವೇದೋಪನಿಷತ್ತುಗಳ ಪಾಠ ಬಾಲಕನಿಗೆ ಬಾಲ್ಯದಿಂದಲೂ ಉತ್ತಮ ಸಂಸ್ಕಾರ ನೀಡಿತ್ತು. ಸುಮಾರು ಹನ್ನೊಂದರ ವಯಸ್ಸಿಗೆ ರುದ್ರಾಧ್ಯಾಯ ಪಾಠವಾಗಿ ದೇವಸ್ಥಾನದ ಹಿರಿಯ ಅರ್ಚಕರೊಂದಿಗೆ ಪೂಜಾಕಾರ್ಯದಲ್ಲಿ ಜೊತೆಗೂಡುತ್ತಿದ್ದರು.

ಬನ್ನೂರಿನಲ್ಲಿದ್ದಾಗ ಎರಡು ವಿಶೇಷ ಘಟನೆಗಳನ್ನು ಪ್ರೊ. ಜಿ.ವಿ. ಸ್ಮರಿಸುತ್ತಾರೆ. "ನಾವು ಬನ್ನೂರಿಗೆ ಹೋದ ಮೊದಲ ದಿನವೇ ಒಂದು ವಿಶೇಷ ಅನುಭವವಾಗಿತ್ತು. ಮನೆಯ ಹಿಂದೆ ನಾವು ಕೆಲವು ಪಾತ್ರೆಗಳು, ಬಟ್ಟೆಗಳು ಇಟ್ಟಿದ್ದುದು ಆ ರಾತ್ರಿಯೇ ಕಳ್ಳತನವಾಗಿತ್ತು. ತಂದೆಯವರು ಊರಿನ ಪಟೇಲರಾಗಿದ್ದ ಚಾಮೇಗೌಡರಿಗೆ ಸುದ್ದಿ ಕೊಡಲು ಹೋದಾಗ, "ನಿಮಗೆ ಜೈಮಿನಿ ಭಾರತ ಓದಲು ಬರುತ್ತೋ?" ಎಂದು ಕೇಳಿದ್ದರು. "ಬರುತ್ತೆ" ಎಂದಾಗ, "ಸರಿ, ನಿಮ್ಮ ಪದಾರ್ಥಗಳೆಲ್ಲ ಸಿಕ್ಕುತ್ತೆ, ಹೋಗಿ" ಎಂದಿದ್ದರು. ಮರುದಿನ ಎಲ್ಲ ಪದಾರ್ಥಗಳೂ ಮನೆ ಮುಂದೆ ಬಂದಿದ್ದುವು. ನಂತರ ಪ್ರತಿದಿನ ಅಲ್ಲಿನ ಶ್ಯಾನುಭೋಗರ ಮನೆಯಲ್ಲಿ ತಂದೆಯವರಿಂದ ಜೈಮಿನಿ ಭಾರತದ ಪಾರಾಯಣ ನಡೆದಿತ್ತು.

"ಶಾಲೆಯಲ್ಲಿ ಕೆಲವು ಹುಡುಗರು ಬೀಡಿ ಸೇದುತ್ತಿದ್ದಾರೆಂದು ತಂದೆಯವರಿಗೆ ತಿಳಿಯಿತು. ಅವರನ್ನು ಕರೆಸಿ ಎರಡೇಟು ಕೊಟ್ಟು ಬುದ್ಧಿ ಹೇಳಿದ್ದರು. ಆಗ ನಾನು ಜೊತೆಯಲ್ಲಿದ್ದ ಒಬ್ಬ ಹುಡುಗನ ಮೇಲೆ ಆರೋಪಿಸಿದ್ದೆ. 'ಇವನೂ ಬೀಡಿ ಸೇದ್ತಾನೆ' ಎಂದು. ತಂದೆ ಅವನಿಗೂ ಎರಡೇಟು ಕೊಟ್ಟು, ನನಗೆ ಮೂರೇಟು ಕೊಟ್ಟಿದ್ದರು. ದೋಷಾರೋಪಣೆ ಮಾಡಿದ್ದಕ್ಕೆ ನನಗೆ ಜಾಸ್ತಿ ಏಟು."

ಬನ್ನೂರಿನಲ್ಲಿ ತುಂಬ ಜೋರಾಗಿ ನಡೆಯುತ್ತಿದ್ದದ್ದು ಪಟದ ಹಬ್ಬ. ಹುಡುಗರ ಗುಂಪೆಲ್ಲ ಸಂಭ್ರಮದಿಂದ ಅದರಲ್ಲಿ ಭಾಗಿಯಾಗುತ್ತಿದ್ದುದು, ನಾಯಿಮರಿಯೊಂದಕ್ಕೆ ಪಟ ಕಟ್ಟಿ ಹಾರಿಸಿದ್ದು ಎಲ್ಲ ಜಿ.ವಿ.ಯವರ ಸವಿನೆನಪುಗಳ ಬುತ್ತಿಯಲ್ಲಿ ಸೇರಿದ್ದೇ. ಆದರೆ ಶಾಲೆಯಲ್ಲಿ ಮಾಸ್ತರರಿಂದ ತುಂಟತನದ ವಿಪರೀತಕ್ಕಾಗಿ ಬಯ್ಗುಳ ಪಡೆದದ್ದಾಗಲೀ, ಏಟು ತಿಂದದ್ದಾಗಲೀ ಅವರಿಗೆ ನೆನಪಿಲ್ಲ. ಅಂದರೆ ಅಂತಹ ಕೆಲಸಕ್ಕೇ ಹೋಗುತ್ತಿರಲಿಲ್ಲ.

ತಿಮ್ಮಣ್ಣಯ್ಯನವರಿಗೆ ಏಳು ಮಂದಿ ಮಕ್ಕಳು. ಮೊದಲ ಮಗನೇ ಜಿ.ವಿ.ಯವರು. ಬನ್ನೂರಿನ ಮಾಧ್ಯಮಿಕ ಶಾಲೆಗೆ ಸೇರಿದ್ದ ಅವರು ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರು. ಅಲ್ಲಿಂದ ತಿಮ್ಮಣ್ಣಯ್ಯನವರಿಗೆ ವರ್ಗವಾಗಿದ್ದು ಮಧುಗಿರಿಗೆ. ಅಲ್ಲಿನ ಜೀವನವಂತೂ ಜಿ.ವಿ.ಯವರಿಗೆ ತುಂಬ ಪ್ರಿಯವಾದುದು. ೧೯೨೭ರಿಂದ ೧೯೩೦ರವರೆಗೆ ಅಲ್ಲಿ ಕಳೆದ ನಾಲ್ಕು ವರ್ಷಗಳು ಅವರ ವಿದ್ಯಾರ್ಥಿದೆಸೆಯ ಬಹುಸುಂದರವೂ, ಸುಖಕರವೂ ಆಗಿದ್ದ ಕಾಲ.

ಮಧುಗಿರಿಯ ದೊಡ್ಡ ಬೆಟ್ಟ, ಆನಂದರಾಯನ ಗುಡ್ಡ ಹತ್ತಿ ಇಳಿಯುತ್ತಿದ್ದ ಆಟ, ಅಲ್ಲಿನ ಚಂದ್ರದೋಣೆಯಲ್ಲಿನ ಈಜಾಟ, ಊರಿನಲ್ಲಿ ನೀರಿನ ತೊಂದರೆ ಇದ್ದುದರಿಂದ ಮೂರುಚಕ್ರದ ಗಾಡಿಯಲ್ಲಿ ತಾಮ್ರದ ಹಂಡೆಯನ್ನಿಟ್ಟುಕೊಂಡು ಬೆಟ್ಟದ ತಪ್ಪಲಿನ ದಿಣ್ಣೆಯನ್ನು ಏರಿ, ನೀರು ತುಂಬಿ ಇಳಿಜಾರಿನಲ್ಲಿ ನಡೆದು ಬರುತ್ತಿದ್ದುದು (ಅದೊಂದು ಆಟವೂ ಆಗಿರುತ್ತಿತ್ತು, ವ್ಯಾಯಾಮವೂ ಆಗಿರುತ್ತಿತ್ತು.) ರಾತ್ರಿಯ ಹೊತ್ತು ಬೆಟ್ಟದ ಸುತ್ತಲ ಕಾಡಿನಲ್ಲಿ ಚಿರತೆಯ ಕಾಟದ ಬಗ್ಗೆ ಕೇಳುತ್ತಿದ್ದ ಕಥೆಗಳು, ಶಾಲೆಯಲ್ಲಿ ಸ್ಕೌಟ್ ವಿದ್ಯಾರ್ಥಿಯಾಗಿದ್ದುದು. ಆಟಪಾಠಗಳಲ್ಲಿ ಸ್ಕೌಟ್ ಮಾಸ್ಟರ್ ಹುರಿದುಂಬಿಸಿ ಬೆಟ್ಟ ಹತ್ತುವುದೇ ಮೊದಲಾಗಿ ಅನೇಕ ಸಾಹಸ ಕಾರ್ಯಗಳಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿದ್ದುದು, ಎರಡು ಬಂಡೆಗಳ ನಡುವಿನ ಕಂದಕವನ್ನು ಹಗ್ಗ ಹಿಡಿದು ನೇತಾಡುತ್ತಾ ದಾಟುವುದು, ಹಗ್ಗದ ಸಹಾಯದಿಂದ ಬೆಟ್ಟ ಹತ್ತುವುದು ಇತ್ಯಾದಿ ಕಾರ್ಯಗಳು ತುಂಬ ರೋಮಾಂಚಕ ಅನುಭವವನ್ನು ನೀಡುವುದರೊಂದಿಗೆ ಸಾಹಸಪ್ರವೃತ್ತಿಯನ್ನೂ ಮೈಗೂಡಿಸಿಕೊಳ್ಳಲು ನೆರವಾಗುತ್ತಿದ್ದುದು, ಒಂದೇ? ಎರಡೇ? ಬೇಸಿಗೆ ರಜೆಯಲ್ಲಿ ಸಮವಯಸ್ಕರೆಲ್ಲ ಸಿದ್ಧರ ಬೆಟ್ಟದ ಬಳಿಯಲ್ಲಿ ಸೇರಿ ಪಿಕ್‌ನಿಕ್, ಕ್ಯಾಂಪ್‌ಫೈರ್‌ಗಳಲ್ಲಿ ತೊಡಗುತ್ತಿದ್ದುದಂತೂ

ತುಂಬ ಸಂತಸದ ಘಳಿಗೆಗಳಾಗಿರುತ್ತಿದ್ದುವು.

ಬನ್ನೂರಿನಲ್ಲಿ ಕನ್ನಡ ಲೋಯರ್ ಸೆಕೆಂಡರಿ ಮುಗಿಸಿದ್ದ ಜಿ.ವಿ.ಯವರು ಮಧುಗಿರಿಯ ಪ್ರೌಢಶಾಲೆಗೆ ಬಂದಾಗ ಆಂಗ್ಲಭಾಷೆಯ ಪರಿಚಯವೇ ಅವರಿಗಿರಲಿಲ್ಲ. ಅಲ್ಲಿ ನಾಗೇಶ್‌ರಾವ್ ಎಂಬ ಆಂಗ್ಲಭಾಷಾ ಅಧ್ಯಾಪಕರು ಒಂದು ವರ್ಷದಲ್ಲಿ ಎ.ಬಿ.ಸಿ.ಡಿ.ಯಿಂದ ಪ್ರಾರಂಭಿಸಿ ರೆನ್ ಅಂಡ್ ಮಾರ್ಟಿನ್ ಪೂರ್ತಿ ಅಭ್ಯಾಸ ಮಾಡಿಸಿದ್ದರು. ಅತ್ಯುತ್ತಮವೂ, ಭದ್ರವೂ ಆದ ತಳಪಾಯವನ್ನು ಹಾಕಿಕೊಟ್ಟಿದ್ದರು. ಅಲ್ಲಿಂದ ಮುಂದೆ ಜಿ.ವಿ.ಯವರು ಹೊರಟಿದ್ದೇ ಮೈಸೂರಿನತ್ತ.

ಮನೆಯಲ್ಲಿ ಸಂಸ್ಕೃತ ಮತ್ತು ಇತರ ಹಲವು ವಿಷಯಗಳ ಬೋಧನೆ, (ಹಳೆಗನ್ನಡವೂ ಸೇರಿದಂತೆ) ತಂದೆಯಿಂದ ಆಗುತ್ತಿತ್ತು. ಆದರೆ, 'ಪತ್ರಿಕೆ' ಎಂದು ಅವರು ಓದಿದ್ದು ಮೈಸೂರಿಗೆ ಬಂದ ಮೇಲೆಯೇ.

ಯುವರಾಜ ಕಾಲೇಜಿನಲ್ಲಿ ಇಂಟರ್ ಮೀಡಿಯೆಟ್‌ಗೆ ಸೇರಿದಾಗ ಅಲ್ಲಿ ಇತರ ವಿದ್ಯಾರ್ಥಿಗಳ ಮಾತು, ಚರ್ಚೆ, ಹತ್ತಾರು ವಿಷಯಗಳಲ್ಲಿ ಅವರಿಗಿದ್ದ ಜ್ಞಾನ ಕಂಡು, ಕೇಳಿ ಬೆರಗಾಗುವಂತಾಗಿತ್ತು. 'ಇವರಿಗೆಲ್ಲ ಎಷ್ಟೊಂದು ವಿಷಯ ಗೊತ್ತಿದೆಯಲ್ಲ, ನನಗೆ ಇವೆಲ್ಲ ಏನೂ ತಿಳಿದಿಲ್ಲವಲ್ಲ' ಎಂದು ಆತಂಕವಾಗಿತ್ತು, ಅಳುಕಾಗಿತ್ತು. ಹಳ್ಳಿಯವರಿಗೂ, ನಗರದವರಿಗೂ ಈ ವ್ಯತ್ಯಾಸವೇಕೆಂದುಕೊಂಡಾಗ ಅವರೆಲ್ಲ ದಿನಪತ್ರಿಕೆಗಳನ್ನು ತಪ್ಪದೆ ಓದುತ್ತಿದ್ದುದು ಗಮನಕ್ಕೆ ಬಂದಿತ್ತು. ಊರಿನಲ್ಲಿದ್ದಾಗ ಪ್ರತಿದಿನ ಪತ್ರಿಕೆ ಓದಬೇಕೆಂಬ ಅಂಶವೇ ತಿಳಿದಿರಲಿಲ್ಲ. ಕ್ರಮೇಣ ಹಳ್ಳಿಯ ಹುಡುಗ ನಗರದ ಜೀವನಕ್ಕೆ ಹೊಂದಿಕೊಳ್ಳುತ್ತ ಒಂದು ವರ್ಷದಲ್ಲಿ ಇತರ ವಿದ್ಯಾರ್ಥಿಗಳ ಸರಿಸಮಕ್ಕೆ ನಿಲ್ಲುವ ಹಂತವನ್ನು ತಲುಪಿದ್ದಾಗಿತ್ತು. ಹಿಂದೂ ಮತ್ತು ಮದ್ರಾಸ್ ಮೈಲ್ ಪತ್ರಿಕೆಗಳನ್ನು ತಪ್ಪದೆ ಓದುವ ಅಭ್ಯಾಸವಾಗಿತ್ತು.

೧೯೩೨ರಲ್ಲಿ ಮೈಸೂರಿಗೆ ಕಾಲಿಟ್ಟು ಯುವರಾಜ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ಓದುವಾಗ ಆಯ್ಕೆ ಮಾಡಿಕೊಂಡ ವಿಷಯ ಸಾಮಾನ್ಯವಾಗಿ ಯಾರೂ ತೆಗೆದುಕೊಳ್ಳದಿದ್ದ ವಿಷಯಗಳಾಗಿದ್ದುವು. ಪ್ರಾಚೀನ ಇತಿಹಾಸ, ಸಂಸ್ಕೃತ ಮತ್ತು ಲಾಜಿಕ್, ಎನ್. ಕಸ್ತೂರಿಯವರು ಇತಿಹಾಸ ಬೋಧನೆ ಮಾಡುತ್ತಿದ್ದರೆ, ಎಂ.ಎ. ವೆಂಕಟರಾವ್ ಲಾಜಿಕ್ ಬೋಧಿಸುತ್ತಿದ್ದರು. ಇಬ್ಬರೂ ಘಟಾನುಘಟಿಗಳೇ. ಒಬ್ಬೊಬ್ಬರ ಪಾಠವೂ ಅದ್ಭುತವಾಗಿರುತ್ತಿತ್ತು. ಅವರು ಮಾರ್ಗದರ್ಶನ ಮಾಡುತ್ತಿದ್ದ ರೀತಿಯೇ ವಿಶಿಷ್ಟವಾಗಿರುತ್ತಿತ್ತು. ಕೇವಲ ಇಂಟರ್‌ಮೀಡಿಯೆಟ್ ಹಂತದಲ್ಲಿರುವಾಗಲೇ ಪ್ರಾಚೀನ ಇತಿಹಾಸಕ್ಕೆ ಸಂಬಂಧಿಸಿದಂತೆ ಉತ್ಕೃಷ್ಟ ಗ್ರಂಥವಾದ 'ಹಿಸ್ಟರಿ ಆಫ್ ಪೆಲಪನೇಶಿಯನ್ ವಾರ್' ಎಂಬ ಪುಸ್ತಕವನ್ನು ನಾನು ಓದಿದ್ದೆ. ಅದು ಗ್ರೀಕ್ ಇತಿಹಾಸದಲ್ಲಿ ತುಂಬ ಪ್ರಮುಖವಾದ ಯುದ್ಧವನ್ನು ಕುರಿತದ್ದು. ಅದರಿಂದ ನಮ್ಮ ದೇಶದ ಇತಿಹಾಸವನ್ನು ತಿಳಿಯಲು ತುಂಬ ಸಹಾಯವಾಗಿತ್ತು.

ಇಂಟರ್‌ಮೀಡಿಯೆಟ್‌ಗೇ ಅಷ್ಟು ಉತ್ತಮ ಪುಸ್ತಕಗಳನ್ನು ಓದಲು ಪ್ರೇರೇಪಿಸುತ್ತಿದ್ದರೆಂದರೆ ಆ ಗುರುಗಳ ಮಾರ್ಗದರ್ಶನ ಎಂತಹುದೆಂದು ತಿಳಿಯಬಹುದು. ಇನ್ನು ಕನ್ನಡ ಪಾಠವನ್ನು ಮಾಡಿದ್ದು ಕುವೆಂಪು. ಜೊತೆಗೆ, ಮನೆಯಲ್ಲಿ ತಂದೆ ಹಳೆಗನ್ನಡದ ಕಾವ್ಯಗಳನ್ನು ಪೂರ್ತಿ ಕಲಿಸಿದ್ದರು. ಕುವೆಂಪು ಕಾವ್ಯದ ಅಂತರಂಗವನ್ನು ಅರ್ಥಮಾಡಿಸಿದವರು. ಕನ್ನಡ ಕಾವ್ಯವನ್ನು ಓದುವ ವಿಧಾನವನ್ನು ಕಲಿಸಿದವರು. ಕನ್ನಡದಲ್ಲಿ ಪ್ರೀತಿಯನ್ನು ಉಂಟುಮಾಡಿದ್ದು ಅವರು. ಒಮ್ಮೆ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ಕೊಡುವಾಗ ನನ್ನದೊಂದು ಪತ್ರಿಕೆಯನ್ನು ಮಾತ್ರ ಪಕ್ಕಕ್ಕಿಟ್ಟುಕೊಂಡು ಉಳಿದವರ ಪತ್ರಿಕೆಗಳನ್ನೆಲ್ಲಾ ಕೊಟ್ಟಿದ್ದರು.

ನಾನು ಅಂಕ ಬಹಳ ಕಡಿಮೆಯಿರಬೇಕು, ಬೈಯುತ್ತಾರೆಂದುಕೊಂಡಿದ್ದೆ. ಕೊನೆಗೆ ನನ್ನ ಪತ್ರಿಕೆ ಕೈಯಲ್ಲಿ ಹಿಡಿದು 'ಏನ್ರೀ (ಅವರು ಯಾರನ್ನೂ ಏಕವಚನದಲ್ಲಿ ಸಂಬೋಧಿಸುತ್ತಿರಲಿಲ್ಲ) ಪ್ರತಿ ಉತ್ತರಕ್ಕೂ ಐದಾರು ಪದ್ಯಗಳನ್ನು ಸೇರಿಸಿ ಬರೆದಿದ್ದೀರಿ, ಕಾಪಿ ಮಾಡಿದಿರಾ!' ಎಂದು ಕೇಳಿದ್ದರು. ನನಗೆ ಅಲ್ಲಿ ಬರೆದದ್ದಲ್ಲದೆ ಇನ್ನೂ ಹತ್ತು ಹದಿನೈದು ಪದ್ಯಗಳು ಕಂಠಸ್ಥವಾಗಿದ್ದನ್ನು ತಿಳಿದು ಬಹಳ ಸಂತಸಪಟ್ಟರು. ನನಗೆ ಅತಿಹೆಚ್ಚಿನ ಅಂಕವಾಗಿ ಅರವತ್ತೊಂದು ಅಂಕಗಳನ್ನು ನೀಡಿದ್ದರು. ಮುಂದೆ ಬಿ.ಎ. ಆನರ್ಸ್ ಪದವಿಗೆ ಸೇರಿದಾಗ ತೆಗೆದುಕೊಂಡ ವಿಷಯ ಕನ್ನಡವೇ. ಏಕೆಂದರೆ, ಮನೆಯಲ್ಲಿ ಕನ್ನಡ ಪಾಠ ಚೆನ್ನಾಗಿಯೇ ಆಗುತ್ತಿತ್ತು. ಅಲ್ಲಿಯೂ ನನಗೆ ಸಿಕ್ಕಿದ ಗುರುವರ್ಯರು ಮಹಾಮಹಾ ವಿದ್ವಾಂಸರೇ ಆಗಿದ್ದರು. ಕಾವ್ಯಮೀಮಾಂಸೆಗೆ ತೀ.ನಂ. ಶ್ರೀಕಂಠಯ್ಯ, ಪಂಪಭಾರತಕ್ಕೆ ಟಿ.ಎಸ್. ವೆಂಕಣ್ಣಯ್ಯ, ಗ್ರಂಥಸಂಪಾದನೆಗೆ ಡಿ.ಎಲ್. ನರಸಿಂಹಾಚಾರ್."

ಮೈಸೂರು, ಅಲ್ಲಿನ ಮಹಾರಾಜ ಕಾಲೇಜು ಎಂದೊಡನೆ ಜಿ.ವಿ.ಯವರ ಕಣ್ಮುಂದೆ ಒಂದು ಮಾಯಾಲೋಕವೇ ತೆರೆದುಕೊಳ್ಳುತ್ತದೆ. ಮೈ ರೋಮಾಂಚನಗೊಳ್ಳುತ್ತದೆ. ೧೯೩೩ರಲ್ಲಿ ಕನ್ನಡ ಆನರ್ಸ್ ತರಗತಿಗೆ ಜಿ.ವಿ.ಯವರು ಸೇರಿದಾಗ ಸಹಪಾಠಿಯಾಗಿ ಬಂದವರು ಎಚ್.ಎಂ.

ಶಂಕರನಾರಾಯಣರಾಯರು. ಅದರ ಮುಂದಿನ ವರ್ಷ ಜೊತೆಗೂಡಿದವರು ಎಸ್.ವಿ. ಪರಮೇಶ್ವರಭಟ್ಟರು, 'ಇಡೀ ಆನರ್ಸ್ ತರಗತಿಗಳಲ್ಲಿ ನಾವು ಮೂವರು ವಿದ್ಯಾರ್ಥಿಗಳು, ಅಧ್ಯಾಪಕರು ಎಂಟು ಜನ. ಡಿ.ಎಲ್.ಎನ್. ಅವರ ವಿದ್ಯಾರ್ಥಿಪ್ರೇಮ, ಮಾರ್ಗದರ್ಶನ ನಾನೆಂದೂ ಮರೆಯಲಾರೆ. ತೀನಂಶ್ರೀಯವರು ವಿದ್ಯಾರ್ಥಿಗಳೊಡನೆ ಸ್ವಲ್ಪ ಅಂತರವನ್ನು ಕಾಯ್ದುಬಿಟ್ಟುಕೊಳ್ಳುತ್ತಿದ್ದರು. ಆದರೆ, ಡಿ.ಎಲ್. ಎನ್. ಹಾಗಲ್ಲ. ಹೆಗಲ ಮೇಲೆ ಕೈ ಹಾಕಿಕೊಂಡು ತಮ್ಮೊಂದಿಗೆ ಕುಕ್ಕರಹಳ್ಳಿಯ ಕೆರೆಯ ಏರಿಯ ಮೇಲೆ ವಾಯುವಿಹಾರಕ್ಕೆ ಹೋಗುವಾಗ ಕರೆದೊಯ್ಯುತ್ತಿದ್ದರು. ಆಗ ಅವರೊಂದಿಗೆ ಆಡುತ್ತಿದ್ದ ಮಾತುಕತೆಯಿಂದ ಕಲಿತದ್ದು ಕೂಡ ಬಹುದೊಡ್ಡ ಆಸ್ತಿ" ಎಂದು ಜಿ.ವಿ. ನೆನಪು ಮಾಡಿಕೊಳ್ಳುತ್ತಾರೆ.

ಬಿ.ಎ. ಆನರ್ಸ್‌ಗೆ ಸೇರಿದ್ದ ಜಿ.ವಿ.ಯವರಿಗೆ ಮೊದಲ ವರ್ಷ ಪೂರ್ತಿ ಸ್ಕಾಲರ್‌ಶಿಪ್‌ನೊಂದಿಗೆ ಫ್ರೀಶಿಪ್ ಸಿಕ್ಕಿತ್ತು. ಎರಡನೇ ವರ್ಷದಲ್ಲಿ ಅವರಿಗೆ ಆಟದತ್ತ ಗಮನ ಹೆಚ್ಚಿತ್ತು. ಒಳಾಂಗಣ ಆಟಗಳಲ್ಲಿ ಅವರಿಗೆ ಅಪಾರ ಆಸಕ್ತಿಯಿತ್ತು. ಚೆಸ್, ಕೇರಂ, ಪಿಂಗ್‌ಪಾಂಗ್ ಆಟಗಳಿಗೆ ಸೇರಿದಂತೆ ನಾಲ್ಕು ವರ್ಷಗಳು ಅವರೇ ಚಾಂಪಿಯನ್. ಜೊತೆಗೆ ಬ್ಯಾಗ್‌ಟೇಲ್ ಎಂಬ ವಿಶಿಷ್ಟ ಆಟವನ್ನು ಅವರೇ ಸ್ವತಃ ಗಮನಿಸಿ ಕಲಿತು ಆಡುತ್ತ ಇತರರಿಗೂ ಕಲಿಸಿದ್ದರು. ಮಹಾರಾಜ ಕಾಲೇಜಿನಲ್ಲಿ ಮೇಷ್ಟ್ರುಗಳು ಆಡುತ್ತಿದ್ದ ಆಟವದು. ಬಿಲಿಯರ್ಡ್ಸ್ ರೀತಿಯ ಆಟ ಕ್ರೀಡಾಕೊಠಡಿಯಲ್ಲಿದ್ದ ಆ ಬೋರ್ಡ್ ನೋಡಿ ಕುತೂಹಲದಿಂದ ಕಲಿತಿದ್ದರು.

ಹೊಸದೇನನ್ನಾದರೂ ಕಂಡೊಡನೆ ಕುತೂಹಲಗೊಳ್ಳುವುದು, ಅದರ ಬಗ್ಗೆ ತಿಳಿಯಲು ಪ್ರಯತ್ನಿಸುವುದು ಅವರ ಸ್ವಭಾವ ಜನ್ಯವಾಗಿತ್ತು. (ಇಂದಿಗೂ ಯಾವುದೇ ಹೊಸವಿಚಾರ ಕಿವಿಗೆ ಬಿದ್ದರೆ ಆ ಸ್ವಭಾವ ಜಾಗೃತವಾಗುತ್ತದೆ.) ಎಂ.ಎ. ಓದುವಾಗಲಂತೂ ಶಿಕ್ಷಕರೊಂದಿಗೆ ಟೆನಿಸ್ ಆಡುತ್ತಿದ್ದರು. (ತೀನಂಶ್ರೀ, ಹೆಚ್. ಕೆ. ರಾಜಾರಾವ್, ಡಿ.ಎಲ್.ಎನ್) ತರಗತಿಗಳಲ್ಲಿ ಮಾಡುತ್ತಿದ್ದ ಕನ್ನಡ ಕಾವ್ಯಗಳ ಪಾಠ ಅವರಿಗೆ ಮೊದಲೇ ಮನೆಯಲ್ಲಿ ತಂದೆಯವರಿಂದ ಆಗಿರುತ್ತಿತ್ತು. ಹಾಗಾಗಿ ತರಗತಿ ಹಾಜರಿ ಕಡಿಮೆಯಾಗಿ ಆಟದ ಕ್ಷೇತ್ರದಲ್ಲಿ ಅವರ ಚಟುವಟಿಕೆ ಜೋರಾಗಿತ್ತು. ಆ ದಿನಗಳನ್ನು ನೆನಪು ಮಾಡಿಕೊಳ್ಳುತ್ತಿದ್ದಂತೆ ಮತ್ತೆ ಜಿ.ವಿ.ಯವರ ಕಣ್ಮುಂದೆ ಮಹಾರಾಜ ಕಾಲೇಜಿನ ಅಂದಿನ ವಾತಾವರಣ ಎದುರಾಗಿತ್ತು.

"ಆಗ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಎಲ್ಲ ಸೇರಿ ಸುಮಾರು ಮುನ್ನೂರು ವಿದ್ಯಾರ್ಥಿಗಳಿದ್ದರು. ಎಲ್ಲ ವಿಷಯಗಳ ಬೋಧಕವರ್ಗದಲ್ಲಿ ಸುಮಾರು ಐವತ್ತು ಜನ ವಿದ್ವಾಂಸರಿದ್ದರು. ಅವರಲ್ಲಿ ಎಲ್ಲರಿಗೂ ಎಲ್ಲರೂ ಗೊತ್ತು. ಒಳ್ಳೆಯ ವಿದ್ಯಾರ್ಥಿ ಎಂದು ಹೆಸರು ಪಡೆದರೆ ಅವರನ್ನು ಎಲ್ಲ ಪ್ರಾಧ್ಯಾಪಕರೂ ಮಾತನಾಡಿಸುತ್ತಿದ್ದರು. ಪ್ರೋತ್ಸಾಹವನ್ನು ನೀಡುತ್ತಿದ್ದರು. ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಪ್ರತಿವಾರವೂ ಏನಾದರೂ ಒಂದು ಕಾರ್ಯಕ್ರಮ ನಡೆಯುತ್ತಿತ್ತು. ಪ್ರೌಢ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ನಡುವೆ ಚರ್ಚಾಕೂಟಗಳು, ಹಿರಿಯ ನಾಗರಿಕರ ಮತ್ತು ಪ್ರಾಧ್ಯಾಪಕರ ನಡುವೆ ಚರ್ಚಾಕೂಟಗಳು ನೆರವೇರುತ್ತಿದ್ದವು. ಇಂಥ ಸಭೆಗಳಲ್ಲಿ ಸಮಯಸ್ಫೂರ್ತಿಯಿಂದ ಹೊರಬರುತ್ತಿದ್ದ ಪ್ರಶ್ನೆ, ಉತ್ತರಗಳಲ್ಲಿ ಭವ್ಯವಾದ ಹಾಸ್ಯ ಮಿಂಚುತ್ತಿತ್ತು.

ವಿದ್ಯಾರ್ಥಿಗಳ ಪಠನ, ವಾಚನ, ನಟನೆ, ಗಾಯನ, ಸ್ಪರ್ಧೆಗಳು, ಒಳಾಂಗಣ ಕ್ರೀಡಾಸ್ಪರ್ಧೆಗಳು, ರಾಷ್ಟ್ರ ನಾಯಕರ ಉಪನ್ಯಾಸಗಳು ಇವುಗಳ ಸಂಭ್ರಮ ಹೇಳತೀರದು. ಇಂಥ ಸಮಯದಲ್ಲಿಯೇ ನಾವು ವಿ.ಎಸ್. ಶ್ರೀನಿವಾಸ ಶಾಸ್ತ್ರೀ, ಸರೋಜಿನಿ ನಾಯ್ಡು, ಸತ್ಯಮೂರ್ತಿ, ರಾಧಾಕೃಷ್ಣನ್, ಹುಮಾಯೂನ್ ಕಬೀರ್, ಶ್ಯಾಮಪ್ರಸಾದ್ ಮುಖರ್ಜಿ ಮುಂತಾದವರ ಭಾಷಣಗಳನ್ನು ಕೇಳಿದ್ದು, ನಾಟಕ ಪ್ರದರ್ಶನ, ಉತ್ತರ ದೇಶದ ಸಿನಿಮಾ ನಟ, ನಟಿಯರ ಸಂದರ್ಶನ, ಪಾಶ್ಚಾತ್ಯರ ಭೇಟಿ, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಿಂದ ಬಂದಿದ್ದ ಚರ್ಚಾಕೂಟದ ವಿದ್ಯಾರ್ಥಿಗಳ ಜೊತೆ ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳ ಒಂದು ಡಿಬೇಟ್, ಇವೆಲ್ಲದರ ಜೊತೆಗೆ ರಾಮಯ್ಯರ್ ಅವರ ಹೆಲ್ತ್ ಕಿಚನ್ನಿನ ಜಾಮೂನ್ ಮತ್ತು ಮಸಾಲೆದೋಸೆ.

ವಿಶ್ವವಿದ್ಯಾನಿಲಯದ ಪುಸ್ತಕಭಂಡಾರ ರಾತ್ರಿ ಹತ್ತರವರೆಗೂ ತೆರೆದಿರುತ್ತಿತ್ತು. ಇಂಟರ್ ಮೀಡಿಯೆಟ್ ತರಗತಿಗಳಲ್ಲಿ ಕೂಡ ಕನ್ನಡದ ಪಾಠವಾಗುವಾಗ ಕನ್ನಡ ಸಾಹಿತ್ಯಕ್ಕೆ ದುಡಿದ ಹಿರಿಯರ ನೆನಪನ್ನು ಅಧ್ಯಾಪಕರು ತರುತ್ತಿದ್ದರು. ಇ.ಪಿ. ರೈಸ್, ಬಿ.ಎಲ್. ರೈಸ್, ಕಿಟ್ಟೆಲ್, ಇವರೆಲ್ಲರ ಕೊಡುಗೆ, ಇನ್ನು ನಮ್ಮ ಕಣ್ಣೆದುರಿಗೇ ಇದ್ದ ಬಿ.ಎಂ. ಶ್ರೀ, ಎನ್.ಎಸ್. ಸುಬ್ಬರಾವ್, ರಾ. ನರಸಿಂಹಾಚಾರ್ಯ, ಡಾ. ಎ. ವೆಂಕಟಸುಬ್ಬಯ್ಯ, ಪ್ರೊ. ಹಿರಿಯಣ್ಣ, ಕಾನಕಾನಹಳ್ಳಿ ವರದಾಚಾರ್ ಮುಂತಾದವರ ಬಗ್ಗೆ ವಿವರಗಳು ಇದ್ದೇ ಇರುತ್ತಿದ್ದವು. ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ವಿಶ್ವವಿದ್ಯಾನಿಲಯ ಸ್ಥಾಪನೆಯಾದಾಗ (೧೯೧೬-೧೭ರಲ್ಲಿ) ಮಹಾರಾಜ ಮತ್ತು ಯುವರಾಜ ಎರಡೂ ಕಾಲೇಜುಗಳಲ್ಲಿ ಅತ್ಯಂತ ಸಮರ್ಥರಾದ ಅಧ್ಯಾಪಕರನ್ನು ಗೊತ್ತು ಮಾಡಬೇಕೆಂಬ ವಿಶೇಷ

ಸೂಚನೆಯನ್ನೇ ನೀಡಿದ್ದರು. ವಿಶ್ವವಿದ್ಯಾನಿಲಯದ ದಕ್ಷತೆಗೆ ಅಖಿಲಭಾರತದ ಗೌರವ, ಮರ್ಯಾದೆಗಳು ಬರುವಂತೆ ಮಾಡಬೇಕೆಂಬ ಅಭಿಲಾಷೆಯೇ ಇದಕ್ಕೆ ಕಾರಣವಾಗಿತ್ತು.

ಇಂತಹ ಕಾಲೇಜಿನ ವಿದ್ಯಾರ್ಥಿಯಾಗಿ ಜಿ.ವಿ.ಯವರು ಆನರ್ಸ್‌ನ ಎರಡನೇ ವರ್ಷದಲ್ಲಿದ್ದಾಗಲೇ ವ್ಯಾಸಂಗದೊಂದಿಗೆ ಇತರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದುದರಿಂದ ಸಹಜವಾಗಿಯೇ ತರಗತಿಯ ಹಾಜರಿ ಕಡಿಮೆಯಾಗಿತ್ತು. ಪಾಠದ ಬಗ್ಗೆ ಅವರಿಗೆ ಚಿಂತೆಯಿರಲಿಲ್ಲ. ಸಾಮಾನ್ಯವಾಗಿ ಎಲ್ಲ ಪರೀಕ್ಷೆಗಳಲ್ಲಿ ಇವರದೇ ಮೊದಲ ಸ್ಥಾನ. ಶಂಕರನಾರಾಯಣರಾಯರಿಗೆ ಎರಡನೇ ಸ್ಥಾನವಿರುತ್ತಿತ್ತು. ದ್ವಿತೀಯ ಬಿ.ಎ. ಆನರ್ಸ್‌ನಲ್ಲಿ ಕೊನೆಯ ಹಂತದಲ್ಲಿನ ಪರೀಕ್ಷೆಯಲ್ಲಿ ಹಾಜರಿ ಕಡಿಮೆಯಾಗಿದ್ದಕ್ಕೇನೋ ಜಿ.ವಿ.ಯವರಿಗೆ ಬಂದಿದ್ದ ಅಂಕದಲ್ಲಿ ಅರ್ಧ ಅಂಕ ಕಡಿಮೆ ಮಾಡಿ ಶಂಕರನಾರಾಯಣರಾಯರಿಗೆ ಸ್ಕಾಲರ್‌ಶಿಪ್ ನೀಡಿದ್ದರು. ಜಿ.ವಿ.ಯವರ ಆರ್ಥಿಕ ಅನಾನುಕೂಲದಲ್ಲಿ ಸ್ಕಾಲರ್‌ಶಿಪ್ ಬಾರದಿದ್ದಲ್ಲಿ ತುಂಬ ತೊಂದರೆಯಾಗುತ್ತಿತ್ತು. ತಿಂಗಳಿಗೆ ಏಳು ರೂಪಾಯಿ ಎಂಟು ಆಣೆ. ಅವರು ಸುಮ್ಮನಿರಲಿಲ್ಲ. ನಂತರ ಸಿಟ್ಟಿನಿಂದ ೨-೩ ದಿನ ಕಾಲೇಜಿಗೆ ಹೋಗಲಿಲ್ಲ. ಮುಖ್ಯಸ್ಥರಾಗಿದ್ದ ಪ್ರೊ. ರಾಲೋ ಅವರನ್ನೇ ನೇರವಾಗಿ ಕಂಡು ಅರ್ಧ ಅಂಕ ಕಡಿತದ ವಿಚಾರ ತಿಳಿಸಿದ್ದರು. ಅವರು ಪೂರ್ಣ ಫ್ರೀಶಿಪ್ ನೀಡಿದ್ದರು. 'ಅರ್ಧ ಅಂಕ ಕಡಿಮೆಯೇ? ಬೆನಿಫಿಟ್ ಆಫ್ ಡೌಟ್ ಎಂದರೂ ಅದು ನಿಮಗೇ ಸಿಕ್ಕಬೇಕು' ಎಂದಿದ್ದರು.

ಆ ಸಮಯದಲ್ಲಿ ನಡೆದ ಒಂದು ಘಟನೆ ಅವರಿಗೆ ಜೀವಮಾನದ ಸ್ಮರಣೀಯ ಘಳಿಗೆಯಲ್ಲಿ ಒಂದು. ಮೈಸೂರಿನ ವಿದ್ಯಾರ್ಥಿಸಂಘದ ಸಮಾರಂಭವೊಂದಕ್ಕೆ ಅಧ್ಯಕ್ಷರಾಗಿ ಆಗಮಿಸಿದ್ದರು ಪ್ರೊ.ಎಸ್. ರಾಧಾಕೃಷ್ಣನ್. ಬಹುಮಾನ ವಿತರಣೆ ನಡೆದಾಗ ಸಾಹಿತ್ಯ ಸ್ಪರ್ಧೆಗಳಲ್ಲಿಯೂ, ಒಳಾಂಗಣ ಆಟಗಳಲ್ಲಿಯೂ ಜಿ.ವಿ.ಯವರಿಗೆ ಬಹುಮಾನಗಳ ಸುರಿಮಳೆಯಾಗಿತ್ತು. ಡಾ। ರಾಧಾಕೃಷ್ಣನ್ ಜಿ.ವಿ.ಯವರ ಭುಜ ತಟ್ಟಿ, 'ಗುಡ್ ಅಟ್ ಬೋತ್' ಎಂದು ಮೆಚ್ಚುಗೆ ಸೂಚಿಸಿದ್ದರಂತೆ. ರಾಧಾಕೃಷ್ಣನ್ ಅವರು ತಟ್ಟಿದ ಭುಜದ ಬಗ್ಗೆ ಜಿ.ವಿ.ಯವರಿಗೆ ತುಂಬ ಅಭಿಮಾನ, ಹೆಮ್ಮೆ. ಬಿ.ಎ. ಆನರ್ಸ್‌ನಲ್ಲಿ ಪ್ರಥಮ ಸ್ಥಾನಕ್ಕಾಗಿ ಕೇಣಿ ಸಿದ್ಧಪ್ಪ ಸುವರ್ಣ ಪದಕ ಮತ್ತು ಹೊನ್ನಶೆಟ್ಟಿ ಬಹುಮಾನಗಳೊಂದಿಗೆ (ರೂ. ೩೫೦/- ವರ್ಷದ ಅತ್ಯುತ್ತಮ ಕನ್ನಡ ಪ್ರಬಂಧಕ್ಕೆ ಸೆಂಟ್ರಲ್ ಕಾಲೇಜು ಮತ್ತು ಮಹಾರಾಜ ಕಾಲೇಜು ಸೇರಿಸಿ ನಡೆಸುತ್ತಿದ್ದ ಸ್ಪರ್ಧೆ.) ಪದವಿಯನ್ನು ಪಡೆದ ಜಿ.ವಿ. ನಂತರ ಕನ್ನಡ ಎಂ.ಎ. ಹಾಗೂ ತಕ್ಷಣದಲ್ಲಿ ಕೆಲಸವಿಲ್ಲವೆಂಬ ಕಾರಣದಿಂದ ಅಲ್ಲಿಯೇ ೧೯೩೯ರಲ್ಲಿ ಬಿ.ಟಿ. ಪದವಿ ಕೂಡ ಪಡೆದರು. ಈಗ ಅವರ ಕೈಯಲ್ಲಿ ಮೂರು ಪದವಿಗಳು. ಆದರೇನು? ಕೆಲಸ ಸಿಕ್ಕುವುದು ಸುಲಭವಿರಲಿಲ್ಲ. ಕೇವಲ ೨೦ರೂ.ನ ಕೆಲಸವೂ ಕೈ ಸೇರಲಿಲ್ಲ. ೧೯೩೮-೩೯ ತುಂಬ ಕಷ್ಟದ ಕಾಲ. ಎಷ್ಟೋ ಇಲಾಖೆಗಳಲ್ಲಿ ಇದ್ದವರನ್ನು ಕೆಲಸದಿಂದ ತೆಗೆಯುತ್ತಿದ್ದರು. ಜಿ.ವಿ.ಯವರು ಖಾಸಗಿ ಪಾಠ ಹೇಳಿ, ಕಷ್ಟಪಟ್ಟು ೮-೧೦ ರೂ. ಸಂಪಾದಿಸುತ್ತಿದ್ದರು. ಎಂ.ಎ. ಮಾಡುವಾಗಲೇ ಉತ್ತಮವಾಗ್ಮಿ ಎಂದು ಹೆಸರು ಪಡೆದು ಬೇರೆ ಬೇರೆ ಕಡೆಗಳಿಗೆ ಉಪನ್ಯಾಸ ನೀಡಲು ಹೋಗುತ್ತಿದ್ದರು. ಹಾಗಾಗಿ ಹಲವರಿಗೆ ಇವರ ಪ್ರತಿಭೆಯ ಪರಿಚಯವಾಗಿತ್ತು. ಅದೇ ಸಮಯದಲ್ಲಿ ಮಂಡ್ಯದಲ್ಲಿನ ಒಂದು ಸಮಾರಂಭದಲ್ಲಿ ಭಾಷಣ ಮಾಡಲು ಹೋದ ಜಿ.ವಿ.ಯವರ ಮಾತುಗಳನ್ನು ಕೇಳಿದ ಅಲ್ಲಿನ ಡೆಪ್ಯುಟಿ ಕಮಿಷನರ್ ಎಸ್.ಜಿ. ಮೇಕ್ರಿ ಎಂಬುವವರು ಮುನಿಸಿಪಲ್ ಹೈಸ್ಕೂಲಿನ ಶಿಕ್ಷಕ ಹುದ್ದೆಯೊಂದಕ್ಕೆ ಆಹ್ವಾನಿಸಿದ್ದರು. ಜಿ.ವಿ.ಯವರ ತಂದೆ ಮೇಕ್ರಿಯವರಿಗೆ 'ಕುಮಾರವ್ಯಾಸ' ಪಾಠ ಮಾಡಿದ್ದರಂತೆ.

ತಿಂಗಳಗೆ ಮೂವತ್ತು ರೂ. ಸಂಬಳ. ಜಿ.ವಿ. ಆರು ತಿಂಗಳು ಅಲ್ಲಿ ಕೆಲಸ ಮಾಡಿದ್ದರು. ಕನ್ನಡ ಎಂ.ಎ. ಪದವಿ ಪಡೆದು ಆಂಗ್ಲಭಾಷೆಯ ಬೋಧನೆಯನ್ನು ಮಾಡುತ್ತಿದ್ದರು. ಕನ್ನಡ ಪಂಡಿತ, ಇಂಗ್ಲಿಷ್ ಮೇಷ್ಟ್ರು, ಪರಿಸ್ಥಿತಿಯ ಅನಿವಾರ್ಯತೆ ಸಿಕ್ಕಿದ್ದನ್ನು ಒಪ್ಪಿಕೊಳ್ಳುವಂತಾಗಿತ್ತು. ಆದರೇನು? ಕನ್ನಡದ ಪಾಂಡಿತ್ಯ ಎನಿತ್ತೋ ಹಾಗೆಯೇ ಆಂಗ್ಲಭಾಷೆಯನ್ನು ಕೂಡ ಕರತಲಾಮಲಕ ಮಾಡಿಕೊಂಡಿದ್ದರಲ್ಲ. ಕೆಲವೇ ದಿನಗಳಲ್ಲಿ ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾಗಿದ್ದರು. ಆ ಸಮಯದಲ್ಲಿ ನಡೆದ ಒಂದು ಘಟನೆ ಸ್ವಾರಸ್ಯಕರವಾದದ್ದು.

ಅದೊಂದು ದಿನ ಜಿ.ವಿ.ಯವರು ಪಾಠ ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ವಿದ್ಯಾ ಇಲಾಖೆಯಲ್ಲಿ ಡೆಪ್ಯೂಟಿ ಡೈರೆಕ್ಟರ್ ಆಗಿದ್ದ ಡಾ। ಕಿನಿ ಎಂಬುವವರು ಇವರ ತರಗತಿಗೆ ಬಂದರು. ಹಿಂದಿನ ಬೆಂಚಿನಲ್ಲಿ ಕುಳಿತರು. ಅಂದವರದು ಸರ್‌ಪ್ರೈಸ್ ಇನ್ಸ್‌ಪೆಕ್ಷನ್, ಆದರೆ ಅವರು ಬಂದ ವೇಳೆಗೆ ಪೀರಿಯಡ್ ಮುಗಿಯುತ್ತ ಬಂದಿತ್ತು. ಬೆಲ್ಲಾಗಲು ಇದ್ದದ್ದು ಕೇವಲ ಐದು ನಿಮಿಷವಷ್ಟೇ. ಪೂರೈಸಿದ್ದ ಪಾಠದ ಬಗ್ಗೆ ಒಂದೆರಡು ಮೂರು ಪ್ರಮುಖ ಅಂಶಗಳನ್ನು ಗುರುತು ಹಾಕಿಕೊಳ್ಳುವಂತೆ ಸೂಚಿಸಿದ್ದ ಜಿ.ವಿ.ಯವರು ಮೌನವಾಗಿ ಕುಳಿತಿದ್ದರು. ಹುಡುಗರೂ ಆ ಕಾರ್ಯದಲ್ಲಿ ತೊಡಗಿದ್ದರಿಂದ ತರಗತಿಯಲ್ಲಿ ಸೂಜಿ ಬಿದ್ದರೂ ಕೇಳಿಸುವಂತೆ ಮೌನ ತುಂಬಿತ್ತು. ಇದು ಜಿ.ವಿ.ಯವರ ಪಾಠದ ಕ್ರಮವಾಗಿತ್ತು. ಇದರಿಂದ ಅಂದರೆ ಯಾವ ಪಾಠವೂ ನಡೆಯುತ್ತಿಲ್ಲವೆಂದು ಅಧಿಕಾರಿಗಳು ವ್ಯಗ್ರರಾಗುವುದರಲ್ಲಿದ್ದರು. ಅಷ್ಟರಲ್ಲಿ ಪಿರಿಯಡ್ ಮುಗಿದಿತ್ತು. ಬೆಲ್ಲಾಗಿತ್ತು. ಹುಡುಗರೆಲ್ಲ ಹೊರಟು ಹೋದರು. ಸಾಹೇಬರು ತಮ್ಮಷ್ಟಕ್ಕೇ ತಾವೇ ಕೆನೆಯುತ್ತಾ ಹೊರಬಂದಿದ್ದರು. ಬಂದಿದ್ದ ವ್ಯಕ್ತಿ ಯಾರು, ಏಕೆ ಬಂದರು, ಏಕೆ ಹೋದರು ಒಂದೂ ಅರ್ಥವಾಗದೆ ಜಿ.ವಿಯವರು ನಕ್ಕು ಸುಮ್ಮನಾಗಿದ್ದರು.

ಆದರೆ, ಸಾಯಂಕಾಲವೇ ಸ್ಟಾಫ್ ಮೀಟಿಂಗ್.

ಇನ್ಸ್‌ಪೆಕ್ಷನ್ ನಡೆಸಿದ್ದ ಕಿನಿಯವರು ಎಲ್ಲ ಮಾಸ್ತರರ ಬಗ್ಗೆ ಮೆಚ್ಚಿಕೆಯ ಮಾತಾಡಿದ್ದರು. ಆದರೆ, ಜಿ.ವಿಯವರನ್ನು ಕುರಿತು ಅವರಾಡಿದ್ದು, 'His class was a tragedy'

`You came only at the last minute to my class when it was about to close.' ಎನ್ನಲು ಇವರನ್ನೇ ಕೆಕ್ಕರಿಸಿ ದಿಟ್ಟಿಸಿದ್ದ ಕಿನಿಯವರು ಎಚ್ಚರಿಸುವ ದನಿಯಲ್ಲಿ, ``It's O.K. young man, I understand what you say, well, I will come to your class tomorrow. Be prepared, young man" ಎಂದು ಹೇಳಿ ಹೊರಟು ಹೋಗಿದ್ದರು.

ಮಾರನೇ ದಿನ, ಸಿಬ್ಬಂದಿಯೆಲ್ಲ 'ಇಂದೀತ ಜಿ.ವಿ.ಯವರ ಜೀವತಿಂದು ಅವರ ಕೆರಿಯರನ್ನೇ ಹಾಳು ಮಾಡುತ್ತಾರೆ.' ಎಂದುಕೊಂಡರು. ಕಿನಿಯವರು ಜಿ.ವಿಯವರ ತರಗತಿಗೆ ಹೋಗಿ ಇಡೀ ಒಂದು ಪೀರಿಯಡ್ ಕಾಲ ಅವರ ಉಪನ್ಯಾಸದ ವೈಖರಿಯನ್ನು ನಿಬ್ಬೆರಗಾಗಿ, ಹುಬ್ಬೇರಿಸಿಕೊಂಡು ಕೇಳಿದ್ದರು, ತರಗತಿ ಮುಗಿದಾಗ ಜಿ.ವಿ.ಯವರಿಗೆ ಹಸ್ತಲಾಘವ ಕೊಟ್ಟು `You are an excellent teacher Mr. Venkatasubbaiah, Keept it up.' ಎಂದು ಪ್ರಶಂಸಿಸಿ ಹೋಗಿದ್ದರು. ಇದು ಕನ್ನಡ ಪಂಡಿತರ ಆಂಗ್ಲ ಭಾಷಾ ಬೋಧನೆಯ ಕರಾಮತ್ತು!

ಆರು ತಿಂಗಳು ಮಂಡ್ಯದಲ್ಲಿ ಕೆಲಸ ಮಾಡಿದ ಜಿ.ವಿ.ಯವರನ್ನು ಮೈಸೂರು ಮತ್ತೆ ಕರೆದಿತ್ತು. ಮಹಾರಾಜ ಕಾಲೇಜಿನಲ್ಲಿ ರಜೆಯ ಅವಧಿಯೆಂದು ಖಾಲಿಯಿದ್ದ ಹುದ್ದೆಗೆ ಆಹ್ವಾನ ಬಂದಿತ್ತು. ಕಾಲೇಜಿನ ಕೆಲಸ, ತಾತ್ಕಾಲಿಕವೇ ಆದರೂ ಮಹಾರಾಜ ಕಾಲೇಜು, ಸಂಬಳ ತಿಂಗಳಿಗೆ ೪೦ ರೂ. ಮೈಸೂರಿಗೆ ಬಂದು ನಾಲ್ಕು ವರ್ಷಗಳು ಅಲ್ಲಿ ಕೆಲಸ ಮಾಡಿದ ನಂತರ ಮತ್ತೆ ಕೈ ಖಾಲಿಯಾಗಿತ್ತು. ಎಂ.ಎ. ಪದವಿಯನ್ನು ಸುವರ್ಣಪದಕದೊಂದಿಗೆ ಪಡೆದಿದ್ದವರು ಕೆಲಸಕ್ಕಾಗಿ ಹುಡುಕಾಡುವಂತಾಗಿತ್ತು.

ಆಗ ಕೈಬೀಸಿ ಕರೆದಿತ್ತು ಬೆಂಗಳೂರು. ಅದು ೧೯೪೨-೪೩ರಲ್ಲಿ. ಈ ಮಧ್ಯೆ ಜಿ.ವಿ.ಯವರು ಇನ್ನೂ ವಿದ್ಯಾರ್ಥಿಯಾಗಿದ್ದಾಗಲೇ ಅಂದರೆ ೧೯೩೭ ಏಪ್ರಿಲ್ ೩೦ರಂದು ಸೋದರಮಾವನ ಮಗಳು ಲಕ್ಷ್ಮಿಯವರೊಂದಿಗೆ ವಿವಾಹವಾಗಿತ್ತು. ಅದೂ ಎಂಟುದಿನಗಳ ಅದ್ಧೂರಿ ಮದುವೆ. ಬೆಂಗಳೂರಿನಲ್ಲಿ 'ಪಾಲ್ ಚಿನ್ನಪ್ಪ' ಎಂಬುವವರು ತಮ್ಮ ಶಾಲೆಯನ್ನು ಅನಿವಾರ್ಯ ಕಾರಣದಿಂದ ಮುಚ್ಚಿದಾಗ ಅಲ್ಲಿದ್ದ ಶಿಕ್ಷಕರೆಲ್ಲ ಸೇರಿ ಬೆಂಗಳೂರು ಹೈಸ್ಕೂಲ್ ಎಂಬ ಶಾಲೆಯನ್ನು ಪ್ರಾರಂಭಿಸಿದ್ದರು. ಅದಕ್ಕಾಗಿ ಕೆಲವು ಸೀನಿಯರ್ ಪ್ರೊಫೆಸರ್‌ಗಳ ಕಮಿಟಿಯೊಂದನ್ನು ಮಾಡಿದ್ದರು. ಬಿ. ವೆಂಕಟೇಶಾಚಾರ್ಯ ಅಧ್ಯಕ್ಷರು. ಪ್ರೊ. ಸಿ.ಆರ್. ನಾರಾಯಣ್‌ರಾವ್ ಮುಖ್ಯೋಪಾಧ್ಯಾಯರು, (ಅವರು ಸೆಂಟ್ರಲ್ ಕಾಲೇಜಿನ ನಿವೃತ್ತ ಪ್ರಿನ್ಸಿಪಾಲರು) ಜಿ.ವಿ.ಯವರು ಆ ಶಾಲೆಗೆ ಅಪ್ಲಿಕೇಶನ್ ಕಳುಹಿಸಿದ್ದರು. ಅವರ ಅರ್ಹತೆಯ ಬಗ್ಗೆ ಜೆ.ಸಿ. ರಾಲೋ, ಬಿ.ಎಂ. ಶ್ರೀಕಂಠಯ್ಯ ಹಾಗೂ ಎಂ.ವಿ. ಗೋಪಾಲಸ್ವಾಮಿ ಸರ್ಟಿಫಿಕೇಟ್‌ಗಳನ್ನು ನೀಡಿದ್ದರು. ಹಿರಿಯರ ಆ ಹಾರೈಕೆಯ ನುಡಿಗಳು ತಮ್ಮ ಬದುಕಿನ ಯಶಸ್ಸಿಗೆ ಕಾರಣವೆಂದು ಜಿ.ವಿ.ಯವರು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಆ ಮೂವರ ಶಿಫಾರಸು ತಮ್ಮ ಪಾಲಿನ ಚಿಂತಾಮಣಿಗಳೆಂದೇ ಹೇಳುತ್ತಾರೆ. ಆ ಪತ್ರಗಳೆಂದರೆ,

**Jaipur : April 17, 1943**

Mr. G. Venkatasubbiah was a student and afterwards a lectuer in Kannada in the Maharaja's College, Mysore, when I was Principal of that College.

His work as a student showed much ability. He was awarded the Keni Siddappa Gold Medal, which is given to the student standing first in the M.A. or final year Bachelor's Degree class who writes the best importune eassy in Kannada. He distinguished himself in recitation and in acting, and was one of the best debaters in the College and chosen to represent it in inter -collegiate debate. When in the B.T. class he was elected Vice-President of the College Educational Association -that is its chief student office-bearer. Even as a student, he was greatly interested in welfarework. When he became a lectuer (in which office his work was excellent, and included lecturing to honours classes) this zeal for public work continued. He shared the work of the extension camps conducted for the University by the University Teachers Association and contributed a useful Kannada book to its publication series. Ha was also a keen scouter and keen and energitic in various departments of college life. He has done much broadcasting, in Kannada from the Mysore Station, Akashvani and has been very successful in this.

Mr. Venkatasubbiah is a man of special value in ability, energy, pubic spirit and character.

**J.C. Rollo**
Special Education officer, Jaipur,
Principal, Maharaja's College, Mysore.

## UNIVERSITY OF MYSORE

| | |
|---|---|
| Dept. of English<br>B.M. Srikantia, M.A., B.L.,<br>Prof. of English | Central College,<br>Bangalore,<br>25th April 1938. |

I have pleasure in stating that I have known Mr. G. Venkatasubbiah, for the last five years as a good Kannada Scholar. He has attended my special lectures to the Kannada honours and M.A. classes and my by personal contact I know he is a keen student of Kannada language and literature, with considerable debating and writting powers having taken prizes and Medals. He has studied History as subsidiary subject in the honours course and has now appeared for the B.T. Examination with History for special methods. His caracter and entusiasm for academic culture are praiseworthy and I can confidently recommend him as teacher in High Schools - specially for teaching Kannada which, in my opinion, requires a modern, criticalminded, English -Knowing teacher with inspiring personality.

B.M. Srikantia

## UNIVERSITY OF MYSORE

| | |
|---|---|
| Dr. M.V. Gopalaswami,<br>B.A., B.Sc., Ph.D.,<br>Professor of Psychology | Maharaj's College,<br>Mysore, 28th March, 1943. |

Mr.G.Venkatasubbiah M.A.,B.T., is known to me for some years as a able student of this College participating in all extra - curricular activities connected with the University Union. He was very popular with his fellow students as is evinced by the fact of his election to the Vice Presidentship of the Educational Association. During the past three years he has done useful work as a member of the teaching staff of the Kannada Department, and has earned for himself a reputation as a scholar of Classical kannada. He has given a number of Talks on Kannada Literature from Akashvani. By organising a Kannada study circle he has roused tne enthusiasm of Akashvani listeners to Kannada literature and has won their gratitude for the services he has rendered to the cause of the spread of literary appreciation. I wish him a very useful and successful career.

M.V. Gopalswami

ಅರ್ಜಿ ಕಳುಹಿಸಿ ಅನೇಕ ದಿನಗಳಾದರೂ ಉತ್ತರ ಬರಲಿಲ್ಲ. 'ನಾನೇ ನೋಡುತ್ತೇನೆ' ಎಂದು ಜಿ.ವಿ.ಯವರು ಬೆಂಗಳೂರಿಗೆ ಬಂದರು. ನೇರವಾಗಿ ನಾರಾಯಣ ರಾವ್ ಮನೆಗೆ ಹೋಗಿ ಭೇಟಿ ಮಾಡಿದರು. ಸುಮಾರು ಒಂದು ಗಂಟೆಯ ಕಾಲ ಇಬ್ಬರಲ್ಲಿ ಮಾತುಕತೆ ನಡೆಯಿತು. ಅದು ಇಂಗ್ಲಿಷ್‌ನಲ್ಲಿ. ಅದರಲ್ಲಿ ಇವರು ಓದಿದ್ದ ವಿಷಯಗಳ ಕುರಿತು ಸಹಜವಾಗೆಂಬಂತೆ ಮಾತು ಬೆಳೆದಿತ್ತು. ನಂತರ ಹೊರಡುವಾಗ ಜಿ.ವಿ. ಯವರು ಕೇಳಿದ್ದರು 'ಸಂದರ್ಶನಕ್ಕೆ ಯಾವಾಗ ಬರಲಿ?' 'ಸಂದರ್ಶನ ಈಗಾಗಲೇ ಮಾಡಿದ್ದೀನಲ್ಲ, ನಾಳೆಯೇ ಹೋಗಿ ಕ್ಲಾಸ್ ತೆಗೆದುಕೋ' ಎಂದಿದ್ದರು ನಾರಾಯಣರಾವ್. ಇಲ್ಲಿಯೂ ಅಷ್ಟೇ, ಕನ್ನಡ ಪಂಡಿತರಿಗೆ ಇಂಗ್ಲಿಷ್ ಶಿಕ್ಷಕರಾಗಿ ಕೆಲಸ ಸಿಕ್ಕಿತ್ತು. ಸಾಮಾನ್ಯವಾಗಿ ೪೦ ರೂ. ಸಂಬಳ. ಆದರೆ ಇವರಿಗೆ ಪ್ರಾರಂಭಕ್ಕೇ ಎರಡು ಇನ್‌ಕ್ರಿಮೆಂಟ್ ಸೇರಿಸಿ ೪೮ ರೂ. ನಿಗದಿಪಡಿಸಲಾಗಿತ್ತು. ಮೂವರೂ ವಿದ್ವಾಂಸರು ನೀಡಿದ್ದ ಅರ್ಹತಾ ಸರ್ಟಿಫಿಕೇಟುಗಳು, ಸ್ವತಃ ಅಭ್ಯರ್ಥಿಯ ಪ್ರತಿಭೆ ಎಲ್ಲವೂ ಚೆನ್ನಾಗಿಯೆ ಸಂದರ್ಶಕರ ಮೇಲೆ ಪ್ರಭಾವ ಬೀರಿದ್ದುವು.

ಮರುದಿನ ೬ನೇ ಫಾರಂ ತರಗತಿಗೆ ಇಂಗ್ಲಿಷ್ ವ್ಯಾಕರಣ ತೆಗೆದುಕೊಂಡಿದ್ದರು. ಅದವರಿಗೆ ಪ್ರಿಯವಾದ ವಿಷಯವೇ ಆಗಿತ್ತು. ಅದು ಮತ್ತೊಬ್ಬರು ತೆಗೆದುಕೊಳ್ಳುತ್ತಿದ್ದ ತರಗತಿಯಾಗಿತ್ತು. ಆ ಮತ್ತೊಬ್ಬ ಇಂಗ್ಲಿಷ್ ಶಿಕ್ಷಕರಿಗೆ ಈ ಕನ್ನಡ ಎಂ.ಎ. ಪಾಸು ಮಾಡಿದವರು ಇಂಗ್ಲಿಷ್ ಏನು ಬೋಧಿಸಿಯಾರು? ಎಂಬ ತಾತ್ಸರ ಭಾವನೆಯಿತ್ತು. ಜಿ.ವಿ. ಮೊದಲ ತರಗತಿಯಲ್ಲೇ ವಿದ್ಯಾರ್ಥಿಗಳನ್ನು ತಮ್ಮತ್ತ ಸೆಳೆದುಕೊಂಡಿದ್ದರು. ತರಗತಿ ಮುಗಿಸಿ ಶಿಕ್ಷಕರ ಕೊಠಡಿಗೆ ಬರುತ್ತಿದ್ದಂತೆಯೇ ಆ ಮತ್ತೊಬ್ಬರು ಹೇಳಿದ್ದರು. 'I am known as the prince of the teachers' ಕೂಡಲೇ ಮಿಂಚಿನಂತೆ ಉತ್ತರ ಬಂದಿತ್ತು ಜಿ.ವಿ. ಯವರಿಂದ. 'Now onwards there will be two princes' ಇಂಗ್ಲಿಷ್ ವ್ಯಾಕರಣದ ತರಗತಿಯನ್ನು ಆ ಬೇರೆ ಅಧ್ಯಾಪಕರಿಗೆ ಕೊಟ್ಟಾಗ ವಿದ್ಯಾರ್ಥಿಗಳು ಮುಷ್ಕರ ಮಾಡಿ ಮತ್ತೆ ಜಿ.ವಿ.ಯವರೇ ಪಾಠ ಮಾಡುವಂತಾಗಿತ್ತು.

ಮುಂದಿನ ಸುಮಾರು ಹತ್ತು ವರ್ಷಗಳು ಜಿ.ವಿ.ಯವರಿಗೆ ತುಂಬ ಕಷ್ಟದ ಕಾಲ. ಹೊಸ ನೌಕರಿಯಲ್ಲಿ ೫೦ ರೂ. ವೇತನವಿದ್ದರೂ ಮನೆಬಾಡಿಗೆಗೇ ಇಪ್ಪತ್ತೈದು ರೂಪಾಯಿಗಳಾಗುತ್ತಿತ್ತು. ಮನೆ ತುಂಬ ಜನ. ಇಬ್ಬರು ಮಕ್ಕಳು, ಮೂವರು ತಮ್ಮಂದಿರು, ಪಾಲಿಟೆಕ್ನಿಕ್ ಓದುತ್ತಿದ್ದ ಮೈದುನ, ಹೈಸ್ಕೂಲ್ ಓದುತ್ತಿದ್ದ ನಾದಿನಿ, ಎಲ್ಲರನ್ನೂ ಮನೆಯಲ್ಲಿ ಸರಿತೂಗಿಸಿಕೊಂಡು ಮುಚ್ಚಟೆಯಿಂದ ಸಂಸಾರ ನಿರ್ವಹಣೆ ಮಾಡಿದ ಜಾಣ್ಮೆ ಜಿ.ವಿ.ಯವರ ಪತ್ನಿ ಲಕ್ಷ್ಮಿಯವರದು. ಶಾಲೆಗೆ ಹೋಗುವ ಮೊದಲು ಹಾಗೂ ಶಾಲೆಯಿಂದ

ಚಿನ್ನದ ಪದಕದೊಂದಿಗೆ ಕನ್ನಡ ಎಂ.ಎ. ಪದವಿಯನ್ನು ಪಡೆದರೂ ಜಿ.ವಿಯವರಿಗೆ ಕೆಲಸ ಸಿಕ್ಕಿರಲಿಲ್ಲ. ಅದು ತುಂಬ ಕಷ್ಟದ ಕಾಲ. ಸುಮ್ಮನೆ ಕುಳಿತಿರುವುದೇಕೆಂದು ಅಲ್ಲಿ ಇಲ್ಲಿ ಪಾಠ ಹೇಳಿಕೊಡುತ್ತ ೮-೧೦ ರೂಪಾಯಿಗಳನ್ನು ಸಂಪಾದಿಸುತ್ತಿದ್ದರು. ಆಗ ಮಹಾರಾಜ ಕಾಲೇಜಿನಲ್ಲೇ ಬಿ.ಟಿ. ಕೋರ್ಸು ಪ್ರಾರಂಭವಾಗಿತ್ತು. ಉದ್ಯೋಗಸ್ಥರಿಗೆ ಹದಿನೈದು ಸೀಟುಗಳು ನಿಗದಿಯಾಗಿದ್ದರೆ ಉಳಿದ ಇಪ್ಪತ್ತೈದು ಸ್ಥಾನಕ್ಕೆ ದೇಶದ ಎಲ್ಲ ಕಡೆಗಳಿಂದ ಅರ್ಹ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುತ್ತಿದ್ದರು. ಅಷ್ಟೊಂದು ನಿಯಮಿತವಾಗಿ ನಡೆಯುತ್ತಿದ್ದ ಆಯ್ಕೆ ವಿಧಾನದಲ್ಲಿ ಜಿ.ವಿ.ಯವರನ್ನು ಕರೆದು ಬಿ.ಟಿ.ಗೆ ಸೀಟು ಕೊಟ್ಟಿದ್ದು ವಿಶೇಷ. ಆಟ, ಪಾಠಗಳೆರಡರಲ್ಲೂ ಒಳ್ಳೆಯ ಹೆಸರು ಮಾಡಿದ್ದ ಜಿ.ವಿ.ಯವರ ಪ್ರತಿಭೆಯನ್ನು ಎಲ್ಲರೂ ಗುರುತಿಸಿದ್ದರು. ಬಿ.ಟಿ. ಕೋರ್ಸು ಪ್ರಾರಂಭಿಸಿದ್ದ ಏಕಮಾತ್ರ ಕಾಲೇಜಾಗಿತ್ತು ಮಹಾರಾಜ ಕಾಲೇಜು. ಸೈಕಾಲಜಿ ಪ್ರೊಫೆಸರ್ ಎಂ.ವಿ. ಗೋಪಾಲಸ್ವಾಮಿಯವರು ಬಿ.ಟಿ. ಪದವಿಗೆ ಸೇರುವಂತೆ ಸಲಹೆ ನೀಡಿದ್ದರು.

ಬಂದ ನಂತರ ಮನೆಪಾಠ ಇಟ್ಟುಕೊಂಡಿದ್ದ ಜಿ.ವಿ.ಯವರಿಗೆ ದಿನವಿಡೀ ದುಡಿತವೇ. ಆಗಾಗ ಉಪನ್ಯಾಸಗಳಿಗೂ ಹೋಗುತ್ತಿದ್ದರು. ಅಂತೂ ಆ ಹತ್ತು ವರ್ಷಗಳಲ್ಲಿ ಬರೀ ಸಂಸಾರ ನಿರ್ವಹಣೆಯೇ. ಒಂದು ಹೋಟೆಲ್, ಒಂದು ಸಿನಿಮಾ ಎಂದು ಪತ್ನಿಯೊಡನೆ ಸುತ್ತಾಡಲು ಅವಕಾಶವೇ ಇರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅಧ್ಯಯನಪ್ರಿಯ ಜಿ.ವಿಯವರಿಗೆ ಆ ಅವಧಿಯಲ್ಲಿ ಒಂದು ಹೆಚ್ಚಿನ ಪುಸ್ತಕ ಓದಲು ಸಮಯ ಸಿಕ್ಕುತ್ತಿರಲಿಲ್ಲವೆಂದು ಅವರು ಈಗಲೂ ವಿಷಾದಿಸುತ್ತಾರೆ. ಪತಿ, ಪತ್ನಿ ಇಬ್ಬರೂ ಸಂಸಾರ ನಿರ್ವಹಣೆಯನ್ನು ಒಂದು ತಪಸ್ಸಿನಂತೆ ನಡೆಸಿದರು. ಈ ಮಧ್ಯೆ ಬಿ.ಹೆಚ್.ಎಸ್.ನಲ್ಲಿ ಮೂರು ವರ್ಷಗಳು ಕೆಲಸ ಮಾಡಿದ ನಂತರ 'ದಿ ಬೆಂಗಳೂರು ಇಂಟರ್ ಮೀಡಿಯೆಟ್ ಕಾಲೇಜ್' ಎಂದು ಪ್ರಾರಂಭಿಸಲಾಯಿತು. ನಂತರ ಅದು ವಿಜಯ ಕಾಲೇಜು ಎಂಬ ಹೆಸರಿನಲ್ಲಿ ಪದವಿ ಕಾಲೇಜು ಆದಮೇಲೆ ಜಿ.ವಿ.ಯವರು ಅಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಮುಂದುವರಿದರು. ಬೆಂಗಳೂರು ವಿಶ್ವವಿದ್ಯಾಲಯ ಆರಂಭಗೊಂಡ ನಂತರ ಆನರ್ಸ್ ತರಗತಿಗಳು ಪ್ರಾರಂಭವಾದಾಗ ಜಿ.ವಿ.ಯವರ ಪ್ರಯತ್ನದಿಂದ ವಿಜಯ ಕಾಲೇಜಿನಲ್ಲಿ ಭೌತಶಾಸ್ತ್ರದೊಂದಿಗೆ ಕನ್ನಡ ಆನರ್ಸ್ ತರಗತಿಯೂ ಆರಂಭವಾಗಿತ್ತು. ವಿಜಯ ಕಾಲೇಜಿನಲ್ಲಿ ಸತತವಾಗಿ ೧೯೪೩ರಿಂದ ೧೯೭೨ರವರೆಗೆ ಕನ್ನಡ ಪ್ರಾಧ್ಯಾಪಕರಾಗಿ, ೧೯೭೨-೭೩ರವರೆಗೆ ವಿಜಯ ಸಂಜೆ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ೧೯೭೩ರಲ್ಲಿ ನಿವೃತ್ತರಾದ ಜಿ.ವಿ.ಯವರು ತಮ್ಮ ಅಧ್ಯಾಪನಕ್ಕೆ ಸಂಬಂಧಿಸಿದಂತೆ ತುಂಬ ತೃಪ್ತಿ, ಸಮಾಧಾನ. "ಮೂರು ಪೀಳಿಗೆಗಳ ವಿದ್ಯಾರ್ಥಿಗಳಿಗೆ ನಾನು ಪಾಠ ಮಾಡಿದ್ದೇನೆ" ಎಂದು ಹೆಮ್ಮೆಯಿಂದ ಹೇಳುತ್ತಾರೆ. ಅಷ್ಟೇ ಅಲ್ಲ. ಅಂತಹ ಗುರುಗಳಲ್ಲಿ ವಿದ್ಯೆ ಕಲಿಯುವ ಸುಯೋಗ ಪಡೆದ ಅಪಾರ ಸಂಖ್ಯೆಯ ಶಿಷ್ಯವೃಂದಕ್ಕಂತೂ ಅವರ ಪಾಠ ಸದಾ ಮೆಲುಕುಹಾಕುವಂಥದ್ದು. ಜೊತೆಗೆ ಜಿ.ವಿಯವರ ಜೊತೆಯಾಗಿ ಶಿಕ್ಷಕ ವೃತ್ತಿಯಲ್ಲಿದ್ದವರಿಗಂತೂ ಅಧ್ಯಯನ, ಅಧ್ಯಾಪನ ಎರಡರ ಅನುಭವವೂ ಲಾಭವೂ ಸಿಕ್ಕಿತ್ತು. ವಿಜಯ ಕಾಲೇಜಿನಲ್ಲಿ ಆ ಸಮಯದಲ್ಲಿದ್ದ ಅಧ್ಯಾಪಕ ವರ್ಗದವರೆಲ್ಲ, ಅದು ತಮ್ಮ ಬದುಕಿನ ಅತ್ಯಂತ ಮಹತ್ವದ ಕಾಲವೆಂದೇ ಪರಿಗಣಿಸುತ್ತಾರೆ. ಜಿ.ವಿ.ಯವರು ನಡೆಸುತ್ತಿದ್ದ ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ವೈವಿಧ್ಯ, ವಿದ್ವದ್ಗೋಷ್ಠಿಗಳು ವಿದ್ಯಾರ್ಥಿಗಳಿರಲಿ, ಅಧ್ಯಾಪಕರಿಗೆ ಕೂಡ ಕಾತರದಿಂದ ನಿರೀಕ್ಷಿಸುವಂತಿರುತ್ತಿದ್ದುವು.

ಕಾಲೇಜು ಸೇವೆಯಿಂದ ನಿವೃತ್ತರಾದ ಜಿ.ವಿ.ಯವರನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಸೇವೆ ಕಾಯ್ದುಕೊಂಡಿತ್ತು. ಅದುವರೆಗಾಗಲೇ ಬೆಂಗಳೂರಿನ ಸಾಹಿತ್ಯವಲಯದಲ್ಲಿ, ವಿದ್ವತ್ಪ್ರಪಂಚದಲ್ಲಿ ಒಳ್ಳೆಯ ಹೆಸರು ಮಾಡಿದ್ದವರು ಅವರು. ಎಂ.ಎ. ಪರೀಕ್ಷೆಯ ಮೌಖಿಕ ಪರಿಕ್ಷೆಗೆಂದು ಹೋದಾಗ ಪರೀಕ್ಷಾ ಸಮಿತಿಯಲ್ಲಿದ್ದವರು ಪ್ರೊ. ಬಿ.ಎಂ.ಶ್ರೀ, ಟಿ.ಎಸ್. ವೆಂಕಣ್ಣಯ್ಯ ಮತ್ತು ಬೆನಗಲ್ ರಾಮರಾವ್. ಪರೀಕ್ಷೆ ಸಾಕಷ್ಟು ಹೊತ್ತು ನಡೆಯಿತು. ಕಡೆಯಲ್ಲಿ ಬಿ.ಎಂ.ಶ್ರೀ ಅಂದಿದ್ದರು, 'ಕನ್ನಡವನ್ನು ನಿಮ್ಮ ಕೈಯಲ್ಲಿಟ್ಟಿದ್ದೇವೆ, ಅದನ್ನು ಕಾಪಾಡಿ.' ಕಣ್ಣಿಗೊತ್ತಿ ಕಾಪಾಡುತ್ತ ಬಂದ ಜಿ.ವಿ. ಆಚಾರ್ಯರ ಮಾತನ್ನು ಶಿರಸಾವಹಿಸಿ ಪಾಲಿಸಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡ ನಿಘಂಟಿನ ಸೇವೆಗಾಗಿ ಜಿ.ವಿ.ಯವರನ್ನು ಡಿ.ಎಲ್. ನರಸಿಂಹಾಚಾರ್ಯರು ಕರೆದಿದ್ದರು. ಅಲ್ಲಿ ಅವರು ಮಾಡಿದ ಸೇವೆ ಹತ್ತಾರು ಬಗೆಗಳಲ್ಲಿ. ಕ.ಸಾ.ಪ.ದೊಂದಿಗೆ ಹೀಗೆ ಅವರ ಬಾಂಧವ್ಯ ಸುಮಾರು ಆರುದಶಕಗಳಿಗೂ ಹೆಚ್ಚು. ೧೯೫೪-೫೬ರವರೆಗೆ ಪರಿಷತ್ತಿನ ಕಾರ್ಯದರ್ಶಿಯಾಗಿ. ೧೯೬೪-೬೯ರವರೆಗೆ ಅಧ್ಯಕ್ಷರಾಗಿ, ೧೯೬೪-೬೯ರವೆಗೆ 'ಕನ್ನಡ ನುಡಿ'ಯ ಸಂಪಾದಕರಾಗಿ, ೧೯೬೫-೬೭ ಕನ್ನಡ ವಿಶ್ವಕೋಶ ಸಮಿತಿಯ ಸದಸ್ಯರಾಗಿ, ೧೯೫೪-೯೫ರ ದೀರ್ಘಕಾಲದವರೆಗೆ ಕನ್ನಡ -ಕನ್ನಡಕೋಶ ಸಮಿತಿಯ ಸದಸ್ಯರಾಗಿ, ೧೯೭೩ರಿಂದ ೧೯೯೨ರವರೆಗೆ ಕನ್ನಡ-ಕನ್ನಡ ಬೃಹತ್ ಕೋಶದ ಪ್ರಧಾನ ಸಂಪಾದಕರಾಗಿ, ಅದರಲ್ಲಿ ೧೯೮೦-೯೨ರವರೆಗೆ ಕನ್ನಡ -ಕನ್ನಡ ಕೋಶ ಸಮಿತಿಯ ಅಧ್ಯಕ್ಷರಾಗಿ ಹಾಗೂ ಏಳು ಸಂಪುಟಗಳನ್ನು ಸಿದ್ಧಪಡಿಸಿ ನಿರ್ವಹಿಸಿದ ಕೆಲಸಗಳು ಅವರ ಸಾಮರ್ಥ್ಯದ ಪ್ರತೀಕ.

ಜಿ.ವಿ.ಯವರು ಪರಿಷತ್ತಿನ ಸದಸ್ಯರಾಗಿ, ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ, ನಿಘಂಟು ಸಮಿತಿಯ

ಸದಸ್ಯರಾಗಿ, ಅಧ್ಯಕ್ಷರಾಗಿ, ವಿವಿಧ ಸಮಿತಿಗಳ ಅಧ್ಯಕ್ಷರಾಗಿ ಪರಿಷತ್ತಿನ ಒಳಹೊರಗನ್ನೆಲ್ಲ ಸಂಪೂರ್ಣವಾಗಿ ಕಂಡವರು. ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಅವರು ಹಿಂದಿನ ಜಾಡನ್ನು ಬಿಟ್ಟು ಹೊಸ ಸಾಹಿತ್ಯ, ಸಾಹಿತಿ, ವಿಚಾರಗಳಿಗೆ ಅನುವು ಮಾಡಿಕೊಟ್ಟರು. ಹಳಬರೊಂದಿಗೆ ಹೊಸಬರನ್ನು ಸೇರಿಸಿಕೊಂಡು ಯುವಜನಾಂಗಕ್ಕೆ ಹೆಚ್ಚು ಹೆಚ್ಚು ಅವಕಾಶಗಳನ್ನು ಕಲ್ಪಿಸಿಕೊಟ್ಟರು. ಅವರು ಕಾರ್ಯದರ್ಶಿಯಾಗಿದ್ದ ಎರಡು ವರ್ಷಗಳ ಅವಧಿಯಲ್ಲಿ (೧೯೫೪-೫೬) ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಹೊಸ ರೂಪವನ್ನು ಕೊಡಲಾಯಿತು. ನೂತನ ವ್ಯವಸ್ಥೆಯಿಂದ ನಷ್ಟದಲ್ಲಿ ನಡೆಯುತ್ತಿದ್ದ ಬಿ.ಎಂ.ಶ್ರೀ. ಅಚ್ಚುಕೂಟ ಲಾಭದಿಂದ ನಡೆಯುವಂತಾಗಿತ್ತು. ಪರಿಷತ್ತಿನಲ್ಲಿ ಸಿದ್ಧವಾಗುತ್ತಿದ ಕನ್ನಡ-ಕನ್ನಡ ನಿಘಂಟು ಸಂಚಿಕೆಗಳ ಮುದ್ರಣಗೊಳ್ಳಲು ಪ್ರಾಶಸ್ತ್ಯ ಕೊಟ್ಟಿದ್ದು ಅಂದಿನ ಮುಖ್ಯ ಬೆಳವಣಿಗೆ. ಪರಿಷತ್ತಿನಲ್ಲಿದ್ದ ಉಪನ್ಯಾಸ ಮಂದಿರವನ್ನು ಬದಲಾಯಿಸಿ ನಾಟಕ, ನೃತ್ಯ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಹೊಂದುವಂತೆ ಎತ್ತರವಾದ ವೇದಿಕೆಯನ್ನು ನಿರ್ಮಾಣ ಮಾಡಿಸಿದ್ದು ಆ ಕಾಲದ ಮುಖ್ಯ ಕೆಲಸಗಳಲ್ಲೊಂದು. ನಾಟಕೋತ್ಸವ ನಡೆಯಲು ಪ್ರಾರಂಭವಾಗಿದ್ದು ಪರಿಷತ್ತಿಗೆ ಸಾಹಿತ್ಯೇತರ ಕಲಾಭಿಮಾನಿಗಳೂ ಬರುವಂತಾಗಿತ್ತು.

ಪರಿಷತ್ತಿನ ಪ್ರಮುಖ ಆಸ್ತಿಯಾದ ಸರಸ್ವತಿ ಭಂಡಾರದಲ್ಲಿ ಕನ್ನಡದ ಎಲ್ಲ ಹೊಸ ಗ್ರಂಥಗಳ ಪರಿಚಯವನ್ನು ಸಾರ್ವಜನಿಕರೂ ಪಡೆಯುವಂತೆ ಪರಿಷತ್ತಿನ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಕನ್ನಡ ನಾಡಿನ ಹೊರಭಾಗಗಳಿಂದ ಸಾಹಿತಿ, ವಿದ್ವಾಂಸರು ಬಂದರೆ, ಅವರನ್ನು ಪರಿಷತ್ತಿಗೆ ಸ್ವಾಗತಿಸಿ, ಸತ್ಕರಿಸಿ ಪರಸ್ಪರ ವಿಚಾರ ವಿನಿಮಯಕ್ಕೆ ಅವಕಾಶ ಮಾಡಲಾಯಿತು. ಅಂತಹ ಕಾರ್ಯಕ್ರಮಗಳಿಗೆ ಡಿ.ವಿ.ಜಿ., ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮೊದಲಾದ ಹಿರಿಯ ಸಾಹಿತಿಗಳು ಬಂದು ಪ್ರೇಕ್ಷಕರೊಡನೆ ಕುಳಿತುಕೊಳ್ಳುತ್ತಿದ್ದರು. ಬೆಂಗಳೂರು ಮಾತ್ರವೇ ಸಾಹಿತ್ಯ ಚಟುವಟಿಕೆಗಳ ಕೇಂದ್ರವಾಗದೆ ಕುಮಟ, ಮೈಸೂರು, ರಾಯಚೂರುಗಳಲ್ಲಿ ರಾಜ್ಯಮಟ್ಟದ ಸಾಹಿತ್ಯ ಸಮ್ಮೇಳನಗಳಾದವು. ಜಿ.ವಿಯವರು ತಾವೊಬ್ಬ ದಕ್ಷ ಸಾಹಿತ್ಯ ಸಂಘಟಕರೆಂಬುದನ್ನು ಸಾಬೀತುಪಡಿಸಿದ್ದರು. ಗೌರವ ಕಾರ್ಯದರ್ಶಿ ಕಾರ್ಯ ನಿರ್ವಹಣೆಯ ಎಂಟು ವರ್ಷಗಳ ಆನಂತರ ಅವರು ಪರಿಷತ್ತಿನ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿ ಐದುವರ್ಷ ಸೇವೆ ಸಲ್ಲಿಸಿದರು. (೧೯೬೫-೬೯)

ಜಿ.ವಿ.ಯವರು ಪರಿಷತ್ತಿನ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಅಲ್ಲಿನ ಆರ್ಥಿಕ ವ್ಯವಸ್ಥೆಯನ್ನು ತಮ್ಮ ವ್ಯಾವಹಾರಿಕ ಜಾಣ್ಮೆಯಿಂದ ಸುಧಾರಿಸಿ ಅದುವರೆಗೆ ಬರುತ್ತಿದ್ದ ಮೂರುಸಾವಿರ ವಾರ್ಷಿಕ ಅನುದಾನ ಇಪ್ಪತ್ತೈದು ಸಾವಿರಕ್ಕೇರುವಂತೆ ಮಾಡಿದ್ದು, ಪರಿಷತ್ತಿನ ಕಾರ್ಯಕ್ರಮಗಳು ನಗರದ ಇತರ ಪ್ರಮುಖ ಬಡಾವಣೆಗಳಲ್ಲಿಯೂ ನಡೆಯುವಂತೆ ಮಾಡಿದ್ದು, ಪರಿಷತ್ತಿನ ಕಡೆಯಿಂದ ನಡೆಯುತ್ತಿದ್ದ ಗಮಕ ತರಗತಿಗಳು ಬೆಂಗಳೂರಿನ ಆಚೆಯೂ ನಡೆಯುವ ವ್ಯವಸ್ಥೆ ಮಾಡಿದ್ದು ಎಲ್ಲದರ ಹಿಂದೆ ಜಿ.ವಿ.ಯವರ ಪರಿಶ್ರಮದ ಮಹತ್ವದ ಸ್ಥಾನ.

ಕನ್ನಡ-ಕನ್ನಡ ನಿಘಂಟು ರಚನೆ ಪರಿಷತ್ತಿನ ಬಹುದೊಡ್ಡ ಜವಾಬ್ದಾರಿ. ಅದು ನಿಧಾನದ ಕೆಲಸ. ಹೆಚ್ಚು ಜನ ವಿದ್ವಾಂಸರ ಪ್ರತಿಭೆಯನ್ನು ಬುದ್ಧಿಮತ್ತೆಯನ್ನು ಬಸಿಯುವ ಮಂಥನ ಕ್ರಿಯೆ. ಸಾಕಷ್ಟು ವರ್ಷಗಳಾದರೂ ಗಣನೀಯ ಮೊತ್ತದ ಹಣ ವ್ಯಯವಾದರೂ ನಿಘಂಟು ಪ್ರಕಟವಾಗಲಿಲ್ಲ. ಸಾರ್ವಜನಿಕ ಟೀಕೆಗಳು ಪ್ರಾರಂಭವಾದುವು. ಜಿ.ವಿ.ಯವರು ಅಧ್ಯಕ್ಷರಾದ ಎರಡು ತಿಂಗಳುಗಳಲ್ಲಿ ಎರಡು ವಿಶೇಷ ಸಭೆ ನಡೆಸಿ, ತೊಂಬತ್ತಾರು ಪುಟಗಳ ಪ್ರಥಮ ಸಂಚಿಕೆಯನ್ನು ಸಿದ್ಧಪಡಿಸಿ, ಪರಿಷತ್ತಿನ ಅಚ್ಚುಕೂಟದಲ್ಲಿ ಮುದ್ರಿಸಿ ರಾಜ್ಯಸರ್ಕಾರದ ನಾಲ್ವರು ಮಂತ್ರಿಗಳ ಸಮ್ಮುಖದಲ್ಲಿ ಬಿಡುಗಡೆ ಆಗುವಂತೆ ಮಾಡಿದರು. ಕನ್ನಡ-ಕನ್ನಡ ನಿಘಂಟಿನ ಪ್ರಥಮ ಸಂಚಿಕೆ ನೋಡಿದವರು ಅದರ ವ್ಯಾಪ್ತಿ, ವಿಸ್ತಾರದ ಕಿರುನೋಟವನ್ನು ಕಂಡು ಅರ್ಥಮಾಡಿಕೊಂಡರು. ಆನಂತರ ಸಾರ್ವಜನಿಕರ ದೂರುಗಳು ಕಡಿಮೆಯಾದುವು.

ವಾರ್ಷಿಕ ಸಾಹಿತ್ಯ ಸಮ್ಮೇಳನಗಳಿಗೆ ಹೊಸ ರೂಪ ಕೊಟ್ಟಿದ್ದು ಜಿ.ವಿಯವರ ಕೊಡುಗೆ. ಅವರು ನಡೆಸಿದ ಮೊದಲ ಸಮ್ಮೇಳನದಲ್ಲಿ ಆ ಹಿಂದಿನ ಹತ್ತು ವರ್ಷದ ಸಾಹಿತ್ಯ ಸಮೀಕ್ಷೆ ನಡೆಯಿತು. ಎರಡನೆಯ ಸಮ್ಮೇಳನದಲ್ಲಿ ಆ ಹಿಂದಿನ ಎರಡು ವರ್ಷದ ಸಾಹಿತ್ಯ ಸಮೀಕ್ಷೆ ನಡೆಯಿತು. ಆ

ಬಿ.ಟಿ.ಎಂ. ಬಡಾವಣೆಯಲ್ಲಿ ಮಯ್ಯ ಗ್ರೂಪ್‌ನವರ ಹೊಸ ಹೋಟೆಲ್ ಪ್ರಾರಂಭವಾಗಿತ್ತು. ಶುಚಿ, ರುಚಿಯ ಊಟ ತಿಂಡಿಗಳೆಂದು ಎಲ್ಲರೂ ಪ್ರಶಂಸಿಸುತ್ತಿದ್ದರು. ಸದಾ ಜನ ತುಂಬಿರುತ್ತಿದ್ದರು. ಹಿರಿಯ ಪತ್ರಕರ್ತರಾದ ಗರುಡನಗಿರಿ ನಾಗರಾಜರು ಜಿ.ವಿ.ಯವರನ್ನು ಭೇಟಿ ಮಾಡಿದಾಗ ಹೇಳಿದ್ದರು. "ಸರ್, ಬಿ.ಟಿ.ಎಂ. ಬಡಾವಣೆಯಲ್ಲಿ ಮಯ್ಯ ಅವರ ಹೊಟೆಲ್ ಪ್ರಾರಂಭವಾಗಿದೆ. ಊಟ, ತಿಂಡಿ, ಎಲ್ಲ ತುಂಬ ಚೆನ್ನಾಗಿದೆ." ಕೂಡಲೇ ಜಿ.ವಿ.ಯವರ ಉತ್ತರ ಬಂದಿತ್ತು. "ಓ, ನಾನಾಗಲೇ ಹೋಗಿಬಂದಾಯ್ತು!" ಯಾವುದೇ ಬಡಾವಣೆಯಲ್ಲಿ ಒಳ್ಳೆಯ ಹೋಟೆಲ್ ಇದೆಯೆಂದು ತಿಳಿದರೆ ಆತ್ಮೀಯರೊಡನೆ ಅವರು ಕೂಡಲೇ ಅಲ್ಲಿಗೆ ಭೇಟಿಯಿತ್ತು ಅಲ್ಲಿನ ಪಾಕವೈವಿಧ್ಯವನ್ನು ಆಸ್ವಾದಿಸುತ್ತಾರೆಂಬುವುದು ಅವರ ಮಿತ್ರವರ್ಗಕ್ಕೆಲ್ಲ ತಿಳಿದದ್ದೇ. ಕಿರಿಯ ಮಿತ್ರರೊಡನೆ ಬೆಳಗಿನ ವಾಕಿಂಗ್, ಆಗಾಗ ವಿದ್ಯಾರ್ಥಿ ಭವನದಲ್ಲಿ ತಿನ್ನುವ ಮಸಾಲೆದೋಸೆ ಎರಡೂ ಅವರಿಗೆ ತುಂಬ ಪ್ರಿಯವಾದ ಕಾರ್ಯಕ್ರಮಗಳು.

ವಿಚಾರ ಸಂಕಿರಣದ ವಿಮರ್ಶಾ ಲೇಖನಗಳನ್ನು 'ಕನ್ನಡನುಡಿ' ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಅದರಿಂದ ಪತ್ರಿಕೆಗೆ ಒಂದು ನೂತನರೂಪ ಬಂದಿತ್ತು. ಜಿ.ವಿಯವರ ಸಂಪಾದಕತ್ವದಲ್ಲಿ ಕನ್ನಡ ನುಡಿ ಸಾಹಿತ್ಯ ಪತ್ರಿಕೆಯಾಗಿ ಹೊರಬಂದಿತ್ತು.

ರಾಷ್ಟ್ರಕವಿ ಪ್ರಶಸ್ತಿ ಗೌರವಕ್ಕೆ ಪಾತ್ರರಾದ ಮಹಾಕವಿ ಕುವೆಂಪು ಅವರನ್ನು ಪರಿಷತ್ತಿಗೆ ಬರಮಾಡಿಕೊಂಡು ಸನ್ಮಾನಿಸಿದ್ದು ಆ ಕಾಲದ ವಿಶೇಷ. ಸಾರ್ವಜನಿಕ ಸಮಾರಂಭಗಳಲ್ಲಿ ಹೆಚ್ಚಾಗಿ ಭಾಗವಹಿಸದಿದ್ದ ಕುವೆಂಪು ಅವರನ್ನು ಬೆಂಗಳೂರಿಗೆ ಬರಮಾಡಿಕೊಂಡಿದ್ದೇ ವಿಶೇಷ. ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸುವ ಹಿನ್ನೆಲೆಯಲ್ಲಿ ಜಿ.ವಿ.ಯವರು ಅದರ ಅಂಗರಚನೆಗೆ ತಿದ್ದುಪಡಿ ಮಾಡಲು ಕ್ರಮ ಕೈಗೊಂಡರು. 'ರಾಜ್ಯದ ಪ್ರತಿ ಜಿಲ್ಲೆಯಲ್ಲೂ, ಪರಿಷತ್ತಿನ ಘಟಕವಿರಬೇಕು, ಅದರ ಅಧ್ಯಕ್ಷರು ಕೇಂದ್ರ ಪರಿಷತ್ತಿನ ಪ್ರತಿನಿಧಿಯಾಗಿರಬೇಕು', ಎಂಬ ಹೊಸ ನಿಯಮವನ್ನು ರೂಪಿಸಿದರು. ಪರಿಷತ್ತಿನ ಕಾರ್ಯಚಟುವಟಿಕೆಗಳನ್ನು ಇಡೀ ರಾಜ್ಯಕ್ಕೆ ಹರಡುವ ಕನಸನ್ನು ಕಂಡದ್ದು ಪರಿಷತ್ತಿನ ಇತಿಹಾಸದಲ್ಲಿ ಬಹುದೊಡ್ಡ ಅಂಶ. ಅದರ ಬಹುಪಾಲು ಕಾರ್ಯಗತವಾಗಿದ್ದು ಕೂಡ ಅಷ್ಟೇ ಮುಖ್ಯ.

ಜಿ. ನಾರಾಯಣ ಪರಿಷತ್ತಿನ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಮಹಾಕವಿ ಕುವೆಂಪು ಅವರ 'ಜೈ ಭಾರತ ಜನನಿಯ ತನುಜಾತೆ' ಗೀತೆಯನ್ನು ಕರ್ನಾಟಕದ ನಾಡಗೀತೆಯಾಗಿ ಆಯ್ಕೆ ಮಾಡುವ ಸಂದರ್ಭದಲ್ಲಿ ಜಿ.ವಿ.ಯವರು ಪ್ರಮುಖ ಪಾತ್ರ ವಹಿಸಿದ್ದರು. ನಾಡಿನ ಗಣ್ಯರು ಸೇರಿದ್ದ ಸಭೆಯಲ್ಲಿ ಅವರು ಆ ಗೀತೆಯನ್ನು ಪೂರ್ತಿಯಾಗಿ ವಾಚನ ಮಾಡಿ ಅದರ ಅರ್ಥ ಶ್ರೀಮಂತಿಕೆಯನ್ನು ವಿವರಿಸಿ, ನಾಡಗೀತೆಯಾಗಲು ಇರುವ ಅರ್ಹತೆಯನ್ನು ಸಮರ್ಥವಾಗಿ ಪ್ರತಿಪಾದಿಸಿದ್ದರು.

ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳ ಮೂಲಕ ನಿಘಂಟು ಕ್ಷೇತ್ರಕ್ಕೆ ಪ್ರವೇಶಿಸಿದ ಜಿ.ವಿ.ಯವರು ನಿಘಂಟು ದಿಗ್ಗಜರೊಡನೆ ಪಳಗಿ ಸಿದ್ಧಿ ಪಡೆದುಕೊಂಡರು. ತಮ್ಮ ಅನುಭವವನ್ನು ನಿಘಂಟು ಸಿದ್ಧತೆಯಲ್ಲಿ ಧಾರಾಳವಾಗಿ ಧಾರೆಯೆರೆದರು. ಸುಮಾರು ಇಪ್ಪತ್ತು ವರ್ಷಗಳು ಪರಿಷತ್ತಿನಲ್ಲಿ ನಿಘಂಟು ಸಿದ್ಧತೆಗಾಗಿ ಜೀವತೇಯ್ದರು. ಆದರೆ ಕೊನೆಯ ಸಂಪುಟದ ಕೊನೆಯಲ್ಲಿ ಆಕಸ್ಮಿಕ ತಿರುವಿನ ಕಾರಣದಿಂದ ಬೇಸರಗೊಂಡು ಹೊರಬಂದರು.

ಪ್ರೊ. ಜಿ.ವಿ.ಯವರ ಶತಮಾನೋತ್ಸವದ ಶುಭ ಸಂದರ್ಭದಲ್ಲಿ ಅವರ ಗೌರವಾರ್ಥ ಕರ್ನಾಟಕ ಸರ್ಕಾರ ಇಡೀ ಒಂದು ವರ್ಷ ರಾಜ್ಯದಾದ್ಯಂತ ಹತ್ತು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಅತ್ಯಂತ ವಿಶೇಷವೂ, ಹಿಂದೆಂದೂ ನಡೆಯದ ವಿಶಿಷ್ಟ ಕಾರ್ಯಕ್ರಮವೂ ಆಗಿದೆ.

ಜಿ.ವಿ.ಯವರು ಕನ್ನಡ ನಿಘಂಟು ಸಂಪಾದಕ ಸ್ಥಾನವನ್ನು ಬಿಟ್ಟಮೇಲೆ ಖಾಸಗಿ ಸಂಸ್ಥೆಗಳಿಗೆ ಕೆಲವು ನಿಘಂಟುಗಳನ್ನು ಸಿದ್ಧಪಡಿಸಿಕೊಟ್ಟರು. ಅವುಗಳಲ್ಲಿ ಪ್ರೊ. ಜಿ.ವಿ. ಪ್ರಿಸಮ್ ಇಂಗ್ಲಿಷ್ ಕನ್ನಡ ನಿಘಂಟು, ಐ.ಬಿ.ಹೆಚ್. ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು, ಎರವಲು ಪದಕೋಶ, ಕನ್ನಡ ಕ್ಲಿಷ್ಟ ಪದಕೋಶ ಮುಖ್ಯವಾದವು. ಪ್ರಜಾವಾಣಿ ಪತ್ರಿಕೆಯ 'ಇಗೋ ಕನ್ನಡ' ಅಂಕಣವಂತೂ ನಾಡಿನ ಮನೆ ಮನೆಯಲ್ಲಿ ಚಿರಪರಿಚಿತ.

ಶಬ್ದಬ್ರಹ್ಮ, ಶಬ್ದವಿಹಾರಿ, ಶಬ್ದಸಾಗರ, ನಿಘಂಟು ಬ್ರಹ್ಮ, ಕನ್ನಡದ ಪಾಣಿನಿ, ಹೊಸಗನ್ನಡದ ಕಿಟ್ಟೆಲ್ ಇವೇ ಮುಂತಾದ ಹಲವು ಹೆಸರುಗಳಿಂದ ಜಿ.ವಿ.ಯವರನ್ನು ಕರೆದಿದ್ದಾರೆ. ಆದರೆ ಇವರ ಕಾರ್ಯಕ್ಷೇತ್ರ ಇದೊಂದೇ ಅಲ್ಲ. ವಿಮರ್ಶೆ, ಚರಿತ್ರೆ, ಜೀವನಚರಿತ್ರೆ, ವ್ಯಕ್ತಿ ಚಿತ್ರ, ಮಕ್ಕಳ ಸಾಹಿತ್ಯ, ಸಂಪಾದನೆ, ಅನುವಾದ, ಸಂಶೋಧನೆ ಎಂಬ ಎಲ್ಲ ಪ್ರಕಾರಗಳಿಗೆ ಇವರ ಸಾಹಿತ್ಯ ಕೊಡುಗೆ ಸಂದಿದೆ.

೨೦೦೩ರಲ್ಲಿ ಶ್ರೀರಂಗಪಟ್ಟಣ ತಾಲ್ಲೂಕು ಪ್ರಥಮ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ತಮ್ಮ ಪೂರ್ವಿಕರು ನೆಲೆಸಿದ್ದ ಊರಿನಲ್ಲಿ ಸಾಹಿತ್ಯಾಭಿಮಾನಿಗಳ ಪ್ರೀತಿಗೆ ಪಾತ್ರರಾದರು. ಜಿ.ವಿಯವರನ್ನು ಗೌರವಿಸಿದ ಪ್ರಶಸ್ತಿಗಳ ಪಟ್ಟಿಯೇ ದೊಡ್ಡದಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (೧೯೯೧), ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ (೧೯೮೨) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (೧೯೯೬), ಶಂಬಾ ಪ್ರಶಸ್ತಿ (೧೯೯೮), ಸೇಡಿಯಾಪು ಪ್ರಶಸ್ತಿ (೧೯೯೯), ಶಿವರಾಮಕಾರಂತ ಪ್ರಶಸ್ತಿ (೧೯೯೯), ಕರ್ನಾಟಕ ಪತ್ರಿಕಾ ಅಕಾಡೆಮಿ ಗೌರವ ಪ್ರಶಸ್ತಿ (೨೦೦೦), ಅಂಕಣಶ್ರೀ ಪ್ರಶಸ್ತಿ (೨೦೦೦), ಮುದ್ದಣ ಪುರಸ್ಕಾರ (೨೦೦೨), ಅನಕೃ–ನಿರ್ಮಾಣ ಪ್ರಶಸ್ತಿ (೨೦೦೮) ಇತ್ಯಾದಿ ಇತ್ಯಾದಿ.

ಜಿ.ವಿ.ಯವರು ಶಿಕ್ಷಣ, ಸಾಹಿತ್ಯ ಕ್ಷೇತ್ರಗಳ ಸೇವೆಗೆ ಮಾತ್ರ ತಮ್ಮನ್ನು ಸೀಮಿತಗೊಳಿಸದೆ ಸಮಾಜಸೇವೆಯಲ್ಲಿ ಕೂಡಾ ಮುಂದಾದವರು. ಬಡವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಸುಮಾರು ಐವತ್ತು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ, ವಸತಿಗಳನ್ನು ಒದಗಿಸುವ 'ಶ್ರೀರಾಮಕೃಷ್ಣ ಸ್ಟುಡೆಂಟ್ಸ್ ಹೋಂ' ಎಂಬ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಜಯನಗರದ ಎಂಟನೇ ಬ್ಲಾಕ್‌ನಲ್ಲಿರುವ 'ಶ್ರೀ ಜಯರಾಮ ಸೇವಾ ಮಂಡಲಿ' ಎಂಬ ಧಾರ್ಮಿಕ ಕೇಂದ್ರ ಪ್ರೊ. ಜಿ.ವಿ.ಯವರ ಮನೆ ಮತ್ತು ಮನಕ್ಕೆ ತುಂಬ ಸಮೀಪದಲ್ಲಿದೆ. ಸಾಂಸ್ಕೃತಿಕ ಚಟುವಟಿಕೆಗಳ ತಾಣವೂ ಆಗಿರುವ ಇದು ಪ್ರೊ. ಜಿ.ವಿ.ಯವರ ಮಾರ್ಗದರ್ಶನದಲ್ಲಿ ಬೆಳೆದುಬಂದಿದ್ದು, ತಮ್ಮ ಅಮೂಲ್ಯ ಸಲಹೆ, ಪ್ರೋತ್ಸಾಹಗಳೊಂದಿಗೆ ವೈವಿಧ್ಯಮಯವೂ, ಬೋಧಪ್ರದವೂ ಆದ ಕಾರ್ಯಕ್ರಮಗಳನ್ನು ನಡೆಸಲು

ಅಲ್ಲಿನ ವ್ಯವಸ್ಥಾಪಕರಿಗೆ ಸದಾ ಉತ್ಸಾಹ ತುಂಬುತ್ತಿರುವುದು ಮಂಡಳಿಯ ಎಲ್ಲ ಸದಸ್ಯರಿಗೆ ಚೈತನ್ಯದಾಯಕವಾಗಿದೆ.

ಕನ್ನಡ ಸಾಂಸ್ಕೃತ ಲೋಕದ ಅತ್ಯಂತ ಹಿರಿಯ ಚೇತನವಾಗಿರುವ ಜಿ.ವಿ.ಯವರನ್ನು ಬೆಂಗಳೂರಿನಲ್ಲಿ ೨೦೧೦ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದೊಂದಿಗೆ (ಬಹಳ ತಡವಾಗಿ) ಗೌರವಿಸಿದ್ದು ಇತ್ತೀಚಿನ ಸಂಗತಿ. ಕನ್ನಡ ಸಾಹಿತ್ಯದ ಶ್ರೇಷ್ಠ ಸಾಹಿತಿಗಳ, ವಿದ್ವಾಂಸರ ಗುರುಪರಂಪರೆಯ ಮಾರ್ಗದರ್ಶನದ ಬೆಳಕಿನಲ್ಲಿ ಮುನ್ನಡೆಯುತ್ತ ನಾಡು-ನುಡಿಯ ಸೇವೆಯ ದಾರಿಯಲ್ಲಿ ತಮ್ಮದೇ ಛಾಪನ್ನು ಒತ್ತಿ ಕನ್ನಡಿಗರೆಲ್ಲರ ಪ್ರೀತಿ, ಗೌರವಗಳನ್ನು ಹೊಂದಿರುವ ಜಿ.ವಿ.ಯವರ ಹೃದಯ ಶ್ರೀಮಂತಿಕೆಯ, ಗುರುತನದ ಪರಿಚಯವನ್ನು ಮಾಡಿಕೊಳ್ಳಲು ದೊರಕುವ ಮತ್ತೊಂದು ಅವಕಾಶ ಉದಯೋನ್ಮುಖ ಬರಹಗಾರರಿಗೆ ಅವರು ನೀಡುವ ಪ್ರೋತ್ಸಾಹದ, ಉತ್ತೇಜನದ ಪ್ರತಿಕ್ರಿಯೆ. ಈ ಅದೃಷ್ಟ ನನ್ನದೂ ಕೂಡ ಆಗಿದೆಯೆನ್ನಲು ಹೆಮ್ಮೆಪಡುತ್ತೇನೆ. ನನ್ನ ಮೊದಲ ಕೃತಿ 'ಅಪರೂಪದವರು' ಪುಸ್ತಕಕ್ಕೆ ಮುನ್ನುಡಿ ಬರೆದುಕೊಡಲು ವಿನಂತಿಸುವಂತೆ ನನ್ನ ಗುರುಗಳಾದ ಶ್ರೀ ಗರುಡನಗಿರಿ ನಾಗರಾಜರು ಸೂಚಿಸಿದಾಗ ಅಷ್ಟು ದೊಡ್ಡವರು ಒಪ್ಪುತ್ತಾರೆಯೇ ಎಂಬ ಸಂದೇಹದಿಂದಲೇ ಅವರನ್ನು ಕಂಡು ಕೇಳಿದ್ದೆ. ಪುಸ್ತಕದ ವಿಷಯವನ್ನು ಕೇಳಿ ತಕ್ಷಣ ಒಪ್ಪಿದ್ದಲ್ಲದೆ ತುಂಬ ಪ್ರೋತ್ಸಾಹಕರವಾದ ನುಡಿಗಳನ್ನು ಬರೆದು ಆಶೀರ್ವದಿಸಿದ್ದರು. ಮನೆಗೆ ಯಾರೇ ಬರಲಿ, ಯಾವ ವಯಸ್ಸಿನವರೇ ಆಗಲಿ, ಗಣ್ಯರೋ, ಸಾಮಾನ್ಯರೋ ಯಾರೇ ಆದರೂ ಸರಿ ತುಂಬ ವಿಶ್ವಾಸದಿಂದ ಮಾತನಾಡಿಸಿ, ಅವರು ಮನೆಯಿಂದ ಹೊರಟಾಗ ತಲೆಬಾಗಿಲಿನಲ್ಲಿ ನಿಂತು ಹೊರಡುವವರೆಗೂ ಅಲ್ಲಿಯೇ ಇದ್ದು ಕೈಬೀಸಿ ಬೀಳ್ಕೊಡುವ ಅವರ ಸುಸಂಸ್ಕೃತ ನಡವಳಿಕೆ ಎಂದೆಂದಿಗೂ ಮರೆಯಲಾಗದ ದೃಶ್ಯ. (ಅದವರ ತಂದೆಯವರಿಂದ ಕಲಿತ ಪಾಠವೆಂದು ಹೇಳುತ್ತಾರೆ.)

ಜೀವನೋತ್ಸಾಹದ, ಶಿಸ್ತಿನ, ಅಚ್ಚುಕಟ್ಟುತನದ ಸಾಕಾರವೆಂದರೆ ಜಿ.ವಿ.ಯವರು ಆಯಾ ಸಂದರ್ಭಕ್ಕೆ, ಸಮಾರಂಭಕ್ಕೆ ಅನುಗುಣವಾಗಿ ಗರಿಮುರಿಯದ ಉಡುಪನ್ನು ಧರಿಸಿ ಸಮಯಕ್ಕೆ ಸರಿಯಾಗಿ ಹಾಜರಾಗುವ ಸಮಯಪಾಲಕರು ಅವರು. ಶುಚಿ, ರುಚಿಯಾದ ಊಟ, ಮಸಾಲೆದೋಸೆ ಅವರಿಗೆ ಪ್ರಿಯ. ವಾಕಿಂಗ್, ಪ್ರವಾಸ ಅವರಿಗೆ ಪ್ರಿಯವಾದ ಹವ್ಯಾಸ. 'ಕನ್ನಡಕ್ಕೆ ಸೂಟು ತೊಡಿಸಿದವರು' ಎಂದೇ ಪ್ರಜಾವಾಣಿಯ 'ಛೂಬಾಣ' ಅಂಕಣದಲ್ಲಿ ಸಂಪಾದಕ ರಾಮಚಂದ್ರರಾವ್ ಜಿ.ವಿ.ಯವರನ್ನು ಪರಿಚಯಿಸಿದ್ದರು.

> ತಮ್ಮ ೧೦೦ ನೇ ಜನ್ಮದಿನದಂದು ಭಾರತೀಯ ವಿದ್ಯಾಭವನವು ನೀಡಿ 'ಕುಲಪತಿ ಡಾ॥ ಕೆ.ಎಂ. ಮುನ್ಷಿ ಸನ್ಮಾನ್' ಪ್ರಶಸ್ತಿ ಸ್ವೀಕರಿಸಿ ಮಾತನಾಡುವ ಸಂದರ್ಭದಲ್ಲಿ 'ಕನ್ನಡ ನಿಘಂಟು'ಗೆ ಶಾಶ್ವತ ಕಛೇರಿಯ ಅವಶ್ಯಕತೆಯನ್ನು ಪ್ರೊ. ಜಿ.ವಿ.ಯವರು ಪ್ರಸ್ತಾಪಿಸಿದ್ದರು. ಸಮಾರಂಭ ಮುಗಿಸಿ ಮನೆಗೆ ತಲುಪಿದಾಗ ಮುಖ್ಯಮಂತ್ರಿಗಳ ಕಛೇರಿಯಿಂದ ಬಂದ ಪತ್ರ ಕಾಯುತ್ತಿತ್ತು. ನಿಘಂಟು ಕಛೇರಿಗೆ ಶಾಶ್ವತ ವ್ಯವಸ್ಥೆ ನೀಡುವ ಆಶ್ವಾಸನೆಯ ಸಂತಸದ ಸುದ್ದಿ ಅದರಲ್ಲಿತ್ತು. ಜಿ.ವಿ.ಯವರ ಸಾರಸ್ವತ ಸೇವೆಗೆ ಮುಖ್ಯಮಂತ್ರಿಯವರು ಸ್ಪಂದಿಸಿದ್ದು ಹೀಗೆ.

ಮನವರಿತು ನಡೆಯುವ ಸ್ನೇಹಜೀವಿ ಪತ್ನಿ ಲಕ್ಷ್ಮಿಯವರೊಂದಿಗೆ, ಇಬ್ಬರು ಗಂಡುಮಕ್ಕಳು ಮತ್ತು ಇಬ್ಬರು ಹೆಣ್ಣುಮಕ್ಕಳು, ಅಳಿಯಂದಿರು, ಸೊಸೆಯರು ಹಾಗೂ ಮೊಮ್ಮಕ್ಕಳೊಂದಿಗೆ ಸಂತೃಪ್ತ ಜೀವನ ನಡೆಸುತ್ತಿರುವ ಪ್ರೊ. ಜಿ.ವಿ.ಯವರು ಕನ್ನಡ ಸಾರಸ್ವತಲೋಕಕ್ಕೆ ಹಲವು ಅಮೂಲ್ಯ ಕೊಡುಗೆಗಳನ್ನು ನೀಡಿರುವ ನಾಡೋಜ.

ಬದುಕು-ಬರಹ, ನಡೆ – ನುಡಿ ಎರಡರಿಂದಲೂ ಶಿಕ್ಷಣ ನೀಡುತ್ತಿರುವ ಈ ಹಿರಿಯರಿಂದ ಕಲಿಯಬೇಕಾದ ಪಾಠಗಳೆಷ್ಟು? ಪಟ್ಟಿ ಬೆಳೆಯುತ್ತಲೇ ಇರುತ್ತದೆ. ಸಮಯಪಾಲನೆ, ಪ್ರತಿಯೊಂದರಲ್ಲಿ ಅಚ್ಚುಕಟ್ಟುತನ, ಕ್ರಿಯಾಶೀಲತೆ, ಕಾರ್ಯಶ್ರದ್ಧೆ, ಹಿರಿಕಿರಿಯರೆಂಬ ಭೇದವಿಲ್ಲದೆ ಎಲ್ಲರೊಡನೆ ಸರಸವಾಗಿ, ಮುಕ್ತವಾಗಿ ಬೆರೆಯುವ ಸ್ನೇಹಪೂರ್ಣ ಸ್ವಭಾವ, ಸದಾ ಹಸನ್ಮುಖಿಯಾಗಿರುವ ಸಮಚಿತ್ತ, ಗುಣಗ್ರಾಹಿಯಾಗಿರುವ ಹೃದಯ ಶ್ರೀಮಂತಿಕೆ, ಸದಾಕಾಲಕ್ಕೂ ತೂಕ ತಪ್ಪದ ಮಾತುಗಾರಿಕೆ, ಕಿರಿಯರನ್ನು ಪ್ರೋತ್ಸಾಹಿಸುವ ರೀತಿಯ (ನಯಗಾರಿಕೆ) ಗುರುತನ, ಜ್ಞಾನಸಂಪತ್ತನ್ನು ತಮ್ಮದಾಗಿಸಿಕೊಂಡಿದ್ದರೂ ತೋರಿಸಿಕೊಳ್ಳದ ಸರಳತೆ, ವಿಷಯ ಪರಿಣತಿ, ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆಯದ ನಿರ್ಭೀಡೆಯ ನಡೆನುಡಿ, ಒಂದೇ? ಎರಡೇ? ಎಲ್ಲಕ್ಕಿಂತ ಹೆಚ್ಚಾಗಿ ತುಂಬಿ ತುಳುಕುತ್ತಿರುವ ಅಪಾರವಾದ ಜೀವನೋತ್ಸಾಹ. ಇಂತಹ ಮೇರು ವ್ಯಕ್ತಿತ್ವಕ್ಕೆ ಶಿರಸಾಷ್ಟಾಂಗ ಪ್ರಣಾಮಗಳು.

*

# ಅಭಿನಂದನ ಗ್ರಂಥಗಳು ಮತ್ತು ಗೌರವಾರ್ಪಣೆ

**ವಿದ್ಯಾಲಂಕಾರ** –ಶ್ರವಣ ಬೆಳಗೊಳದ ಶ್ರೀ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರಿಂದ (ಸ್ವರ್ಣ ಪದಕ ಸಹಿತ) ೧೯೬೭

**ಸಾಹಿತ್ಯ ಜೀವಿ** – ಅರವತ್ತನೇ ಜನ್ಮದಿನದಂದು ಅರ್ಪಿಸಿದ ಅಬಿನಂದನಾ ಗ್ರಂಥ – ೧೯೭೪

**ಶಬ್ದಸಾಗರ** – ತೊಂಬತ್ತನೇ ಜನ್ಮದಿನದಂದು ಶಿಷ್ಯರು ಮತ್ತು ಮಿತ್ರವೃಂದ ಗೌರವಿಸಿದ ಅಭಿನಂದನಾಗ್ರಂಥ – ೨೦೦೪

**ಪ್ರೊ. ಜೀವಿ ಜೀವ–ಭಾವ** – ಭಾರತೀಯ ವಿದ್ಯಾಭವನದ ವತಿಯಿಂದ – ೨೦೦೫

**ಕರ್ನಾಟಕ ಏಕೀಕರಣ ಸುವರ್ಣ ಪುರಸ್ಕಾರ** – ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವ ಆಚರಣೆಯ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದಿಂದ – ೨೦೦೭

**ಲಿಪ್ಯಂತರ**–ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರನ್ನು ಕುರಿತ ಸಾಕ್ಷ್ಯಚಿತ್ರ – ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ವತಿಯಿಂದ – ೨೦೧೦ (ನಿರ್ದೇಶನ ಶ್ರೀ. ಕೆ. ಸುಚೇಂದ್ರ ಪ್ರಸಾದ್)

**ಕನ್ನಡ ಜೀವ ಪ್ರೊ. ಜೀವಿ.** – ಜೀವಿ.ಯವರ ಬದುಕು ಬರಹದ ಕುರಿತು ಲೇಖನಗಳ ಸಂಗ್ರಹ – ಸುಂದರ ಪ್ರಕಾಶನ.

**ವಿದ್ವಜ್ಜೀವಿತ** – ಪ್ರೊ. ಜಿ. ವೆಂಕಟಸುಬ್ಬಯ್ಯ ಗೌರವ ಗ್ರಂಥ – ಜೀವಿ.ಯವರ ಸಾಹಿತ್ಯಕೃಷಿಗೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯ ವಿದ್ವಾಂಸರಿಂದ ವಿಮರ್ಶಾತ್ಮಕ ಲೇಖನಗಳ ಸಂಗ್ರಹ – ೭೭ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಅರ್ಪಣೆ. ಪ್ರಾದೇಶಿಕ ವಿದ್ವಾಂಸರಿಂದ ಸಾಹಿತ್ಯ ಸಮ್ಮೇಳದಲ್ಲಿ ಮೊಟ್ಟ ಮೊದಲಿಗೆ ಇಂತಹ ಗ್ರಂಥದ ಸಮರ್ಪಣೆ, ೨೦೧೧

ಪ್ರೊ.ಜಿ. ವೆಂಕಟಸುಬ್ಬಯ್ಯನವರ ಹೆಸರಿನಲ್ಲಿ ಒಂದು ಲಕ್ಷ ರೂ.ಗಳ ದತ್ತಿ ನಿಧಿ. ಹಂಪೆಯ ಕನ್ನಡ ವಿಶ್ವವಿದ್ಯಾಲಯದಲ್ಲಿನ ಪ್ರತಿಭಾವಂತ ವಿದ್ಯಾರ್ಥಿಯ ಪಿಹೆಚ್.ಡಿ. ಪ್ರಬಂಧಕ್ಕಾಗಿ.

## ೧೯೩೭ರಿಂದ ೨೦೧೨ರವರೆಗೆ ಜಿ.ವಿ.ಯವರಿಗೆ ಸಂದಿರುವ ಪುರಸ್ಕಾರಗಳು

ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದುದಕ್ಕೆ ಹೊನ್ನಶೆಟ್ಟಿ ಸುವರ್ಣ ಪದಕ.

೧೯೮೭– 'ಮುದ್ದಣ ಭಂಡಾರ' ಗ್ರಂಥಕ್ಕೆ ಅತ್ಯುತ್ತಮ ಪುಸ್ತಕವೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ.

೧೯೯೧ – ರಾಜ್ಯೋತ್ಸವ ಪ್ರಶಸ್ತಿ (ನಿಘಂಟು ರಚನೆ ಮತ್ತು ಸಾಹಿತ್ಯ ಸೇವೆಗಾಗಿ)

೧೯೯೭ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (ನಿಘಂಟು ಕ್ಷೇತ್ರದ ಸೇವೆಗಾಗಿ)

ಶಂಬಾ ಪ್ರಶಸ್ತಿ – ೧೯೯೮

ಸೇಡಿಯಾಪು ಪ್ರಶಸ್ತಿ – ೧೯೯೯

ಶಿವರಾಮ ಕಾರಂತರ ಪ್ರಶಸ್ತಿ – ೧೯೯೯

ಪತ್ರಿಕಾ ಅಕಾಡೆಮಿಯ ವಿಶೇಷ ಬಹುಮಾನ –

ಇಗೋ ಕನ್ನಡ ಅಂಕಣಕ್ಕಾಗಿ – ೨೦೦೦

ಮುದ್ದಣ್ಣ ಪುರಸ್ಕಾರ– ನಂದಳಿಕೆಯ ಕವಿ ಮುದ್ದಣ ಶತಸ್ಮೃತಿ ಸಮಿತಿಯಿಂದ – ೨೦೦೨

'ಅಂಕಣ ಶ್ರೀ ಪ್ರಶಸ್ತಿ' ಗದಗ್‌ನ ಕಲಾಚೇತನ ಸಾಂಸ್ಕೃತಿಕ ಅಕಾಡೆಮಿಯಿಂದ – ೨೦೦೨

ಆರ್ಯಭಟ ಪ್ರಶಸ್ತಿ – ೨೦೦೪

ಆಂದೋಲನ ಅಂಕಣ ಶ್ರೀ ಪ್ರಶಸ್ತಿ, ಜಿಲ್ಲಾ ಕಾರ್ಯನಿರತರ ಪತ್ರಕರ್ತ ಸಂಘ ಮಂಡ್ಯ

ಮಾಸ್ತಿ ಪ್ರಶಸ್ತಿ – ೨೦೦೫

ಗೊರೂರು ಪ್ರಶಸ್ತಿ – ೨೦೦೫

ಶ್ರೀ ಕೃಷ್ಣ ಪ್ರಶಸ್ತಿ – ಪೇಜಾವರ ಸ್ವಾಮೀಜಿ.

ಅ.ನ.ಕೃ. – ನಿರ್ಮಾಣ ಪ್ರಶಸ್ತಿ – ೨೦೦೮

ಮನುಶ್ರೀ ರಾಷ್ಟ್ರೀಯ ಪ್ರಶಸ್ತಿ – ಮೊಟ್ಟಮೊದಲಿಗೆ ಕ.ಸಾ.ಪ. ನೀಡಿದ್ದು – ೨೦೦೯

ಭಾಗೀರಥಿ ಸಾಹಿತ್ಯ ಪುರಸ್ಕಾರ – ಭಾಗೀರಥಿರಾವ್ ಎನ್. ಮಾನೆ ಶಿಕ್ಷಣ ಕೇಂದ್ರ – ೨೦೦೯

ಕೇಶವ ಪ್ರಶಸ್ತಿ – ತಾಳ್ತಜೆ ಕೇಶವಭಟ್ಟರ ಸ್ಮರಣಾರ್ಥ

ನೀಡಿದ ಮೊಟ್ಟ ಮೊದಲ ಪ್ರಶಸ್ತಿ – ೨೦೧೦

ಗೋಕಾಕ್ ಪ್ರಶಸ್ತಿ – (ಮೊದಲನೆಯದು) –೨೦೧೦

ಕನ್ನಡ ವಿಜ್ಞಾನ ಪರಿಷತ್ ರಾಜ್ಯೋತ್ಸವ ಪ್ರಶಸ್ತಿ – ವಿಜ್ಞಾನ ಪರಿಷತ್ತಿನ ಬೆಳ್ಳಿಹಬ್ಬದ ಪ್ರಯುಕ್ತ – ೨೦೧೦

ಶ್ರೀ ವನಮಾಲಿ ಸೇವಾ ಪ್ರಶಸ್ತಿ – ಮೈಸೂರಿನ ಶ್ರೀ ವಾಲ್ಮೀಕಿ ಸೇವಾ ಟ್ರಸ್ಟ್ ಪುರಸ್ಕಾರ – ೨೦೧೧

ಕರ್ನಾಟಕ ಭಾಷಾಭೂಷಣ – ಕರ್ನಾಟಕ ಸಂಶೋಧನ ವೇದಿಕೆ. ಬೆಂ. –೨೦೧೨

ಕುಲಪತಿ ಡಾ॥ ಕೆ.ಎಂ. ಮುನ್ಷಿ, ಸನ್ಮಾನ – ಕನ್ನಡ ನಿಘಂಟು, ಸಾಹಿತ್ಯ ಕ್ಷೇತ್ರದಲ್ಲಿನ ಅದ್ಭುತ ಸೇವೆಗಾಗಿ. ಭಾರತೀಯ ವಿದ್ಯಾಭವನ ಅವರ ೧೦೦ನೇ ವರ್ಷದ ಸಂದರ್ಭದಲ್ಲಿ.

ಇವಲ್ಲದೆ ಇನ್ನೂ ಹಲವು ಪ್ರಶಸ್ತಿ, ಪುರಸ್ಕಾರಗಳು ಪ್ರೊ.

ಜಿ.ವಿ.ಯವರನ್ನು ಗೌರವಿಸಿದೆ. ಜೊತೆಗೆ ೨೦೧೧ರಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದ ಗೌರವ.

### ಪ್ರೊ. ಜಿ.ವಿ.ಯವರ ಕಾರ್ಯಕ್ಷೇತ್ರ : ಶಿಕ್ಷಣ

೧. ೧೯೩೭–೪೩– ಉಪನ್ಯಾಸಕರು, ಕನ್ನಡ ವಿಭಾಗ ಮಹಾರಾಜ ಕಾಲೇಜು ಮೈಸೂರು.

೨. ೧೯೪೩–೭೨ ಕನ್ನಡ ಪ್ರಾಧ್ಯಾಪಕರು, ವಿಜಯ ಕಾಲೇಜು ಬೆಂಗಳೂರು

೩. ೧೯೭೨–೭೩ ಪ್ರಾಚಾರ್ಯರು, ವಿಜಯ ಸಂಜೆ ಕಾಲೇಜು, ಬೆಂಗಳೂರು

೪. ೧೯೬೮–೭೩ ಸಂದರ್ಶಕ ಪ್ರೊಫೆಸರ್, ಕನ್ನಡ ಭಾಷಾ ಬೋಧನೆಯ ವಿಧಾನ. ಆರ್.ವಿ. ಶಿಕ್ಷಣ ಕಾಲೇಜು, ಬೆಂಗಳೂರು.

೫. ೧೯೭೧–೮೦ ಸಂದರ್ಶಕ ಪ್ರೊಫೆಸರ್, ಕನ್ನಡ ಭಾಷಾ ಬೋಧನೆಯ ವಿಧಾನ. ಬಿ.ಇ.ಎಸ್. ಶಿಕ್ಷಣ ಕಾಲೇಜು ಬೆಂಗಳೂರು

೬. ೧೯೬೦–೬೪ ಸದಸ್ಯರು, ಅಕಾಡೆಮಿಕ್ ಕೌನ್ಸಿಲ್ – ಮೈಸೂರು ವಿಶ್ವವಿದ್ಯಾನಿಲಯ

೭. ೧೯೬೪–೬೯ ಸದಸ್ಯರು, ಸೆನೆಟ್, ಬೆಂಗಳೂರು ವಿಶ್ವವಿದ್ಯಾಲಯ

೮. ೧೯೬೪–೬೯ ಸದಸ್ಯರು, ಅಕಾಡೆಮಿಕ್ ಕೌನ್ಸಿಲ್, ಬೆಂಗಳೂರು ವಿಶ್ವವಿದ್ಯಾಲಯ

೯. ೧೯೬೪–೬೭ ಛೇರ್ಮನ್, ಬೋರ್ಡ್ ಆಫ್ ಸ್ಟಡೀಸ್ ಫಾರ್ ಕನ್ನಡ, ಬೆಂಗಳೂರು ವಿಶ್ವವಿದ್ಯಾಲಯ

**೨. ನಿಘಂಟು ರಚನೆ**

೧. ಐ ಬಿಎಚ್ ಕನ್ನಡ – ಕನ್ನಡ ಇಂಗ್ಲಿಷ್ ನಿಘಂಟು – ೧೯೮೧. (ಇತರರೊಡನೆ)

೨. ಕನ್ನಡ ಕನ್ನಡ ಸಂಕ್ಷಿಪ್ತ ನಿಘಂಟು ೧೯೭೫ (ಇತರರೊಡನೆ)

೩. ಇಗೋ ಕನ್ನಡ – ಸಾಮಾಜಿಕ ಕನ್ನಡ ನಿಘಂಟು (ಭಾಗ ೧, ೨, ೩)

೪. ಪತ್ರಿಕಾ ಪದಕೋಶ (೧೯೯೮) (೧೯೯೬, ೨೦೦೧, ೨೦೦೯)

೫. ಎರವಲು ಪದಕೋಶ – ೧೯೯೮.

೬. ಕನ್ನಡ ಕ್ಲಿಷ್ಟ ಪದಕೋಶ ೨೦೦೬

೭. ಪ್ರೊ. ಜಿ.ವಿ. ಪ್ರಿಸಮ್ ಇಂಗ್ಲೀಷ್ – ಕನ್ನಡ ನಿಘಂಟು (೨೦೦೧)

೮. ಕನ್ನಡ ನಿಘಂಟು ಪರಿವಾರ

೯. ಮುದ್ದಣ ಪದಪ್ರಯೋಗ ಕೋಶ. ೧೯೯೬

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ರಚನೆಯ ಸಮಿತಿಯ ಪ್ರಧಾನ ಸಂಪಾದಕ ೧೯೭೩ ರಿಂದ ೧೯೮೦. ೧೯೮೦ರಿಂದ ೧೯೯೨ರವರೆಗೆ ಛೇರ್ಮನ್ ಮತ್ತು ಪ್ರಧಾನ ಸಂಪಾದಕರು

೧೯೯೨ರಲ್ಲಿ ಏಳು ಸಂಪುಟಗಳ ರಚನೆಯಾಗಿ ಪೂರ್ಣಗೊಂಡ ನಿಘಂಟು ಕಾರ್ಯ ೯೦೦೦ ಪುಟಗಳನ್ನು ಹೊಂದಿದ್ದು ೨೦೧೦ರಲ್ಲಿ ಪುನರ್ಮುದ್ರಣಗೊಂಡಿದೆ.

೧೦. ವೆಬ್‌ಸೈಟ್‌ನಲ್ಲಿ ಪ್ರಥಮ ಬಾರಿಗೆ ಇಂಗ್ಲೀಷ್ ಕನ್ನಡ ನಿಘಂಟಿನ ಸೌಲಭ್ಯ

೧೧. ಬ್ರೈಲ್‌ನಲ್ಲಿ ಪ್ರಥಮ ಬಾರಿಗೆ ಇಂಗ್ಲಿಷ್ ಕನ್ನಡ ನಿಘಂಟು ಪ್ರಕಟಣೆ

೧೨. ಕನ್ನಡ ನಿಘಂಟು ಶಾಸ್ತ್ರ ಪರಿಚಯ ೧೯೯೩ (ಆಧುನಿಕ ನಿಘಂಟುಶಾಸ್ತ್ರದಲ್ಲಿ ಮೊದಲ ಕನ್ನಡ ಪುಸ್ತಕ)

೧೩. ಕನ್ನಡ ನಿಘಂಟು ಪರಿವಾರ – ೨೦೦೩

೧೪. ಶಬ್ದ ಮತ್ತು ಅರ್ಥ – ೨೦೧೦

೧೫. ಕನ್ನಡ ನಿಘಂಟು ಮತ್ತು ಇತರ ಲೇಖನಗಳು (ಇಂಗ್ಲಿಷ್) – ೨೦೧೨.

### ಸಾಹಿತ್ಯ ಗ್ರಂಥಗಳು

೧. ನಯಸೇನ (ವಿಮರ್ಶೆ) ೧೯೪೨

೨. ಭಾಷಾಂತರ ಪಾಠಗಳು ಭಾಗ ೧,೨,೩ – ೧೯೫೪

೩. ಅನುಕಲ್ಪನೆ (ವಿಮರ್ಶೆ) ೧೯೫೭

೪. ಕನ್ನಡ ಶಾಸನ ಪರಿಚಯ ೧೯೬೮

೫. ಕನ್ನಡ ಸಾಹಿತ್ಯ ನಡೆದು ಬಂದ ದಾರಿ – ೧೯೭೮

೬. ಪ್ರೊ.ಟಿ.ಎಸ್. ವೆಂಕಣ್ಣಯ್ಯ– ೧೯೮೬

೭. ಡಿ.ವಿ. ಗುಂಡಪ್ಪ – ೧೯೯೬

೮. ಕನ್ನಡವನ್ನು ಉಳಿಸಿ ಬೆಳೆಸಿದವರು – ೧೯೯೯

೯. ಸಾಹಿತ್ಯ ಮತ್ತು ಶಿಕ್ಷಣ ೨೦೦೦

೧೦. ಕನ್ನಡ ನಾಯಕ ಮಣಿಗಳು ೨೦೦೦

೧೧. ಇಣುಕು ನೋಟ ೨೦೦೨ (ಕನ್ನಡ ಪ್ರಾಚೀನ ಸಾಹಿತಿಗಳ ಪ್ರಮುಖ ಕೃತಿಗಳನ್ನು ಕುರಿತು)

೧೨. ಕರ್ನಾಟಕ ವೈಭವ (ಆಕಾಶವಾಣಿಗಾಗಿ) ೨೦೦೩

೧೩. ಪರಾಮರ್ಶನ (ವಿಮರ್ಶೆ) ೨೦೦೩

೧೪. ಕಾವ್ಯಚಿಂತನ (ಕಿರುಪ್ರಬಂಧಗಳು) ೨೦೦೩

೧೫. ಸೀಳು ನೋಟ (ಪ್ರಬಂಧಗಳು) ೨೦೦೩

೧೬. ಮಾರ್ಗದರ್ಶಕರು ೨೦೦೬

೧೭. ಗತಿ ಪ್ರಜ್ಞೆ ( ವಿಮರ್ಶೆ) ೨೦೦೭

೧೮. ಸಮಯ–ಸಂದರ್ಭ–ಸನ್ನಿವೇಶ ೨೦೦೮

೧೯. ಕುಮಾರವ್ಯಾಸನ ಅಂತರಂಗ ಯುದ್ಧ ಪಂಜರದಲ್ಲಿ (ವಿಮರ್ಶೆ) ೨೦೧೦

೨೦. ಸಿರಿಗನ್ನಡ ಸಾರಸ್ವತರು - ೨೦೧೧ (ಕನ್ನಡದ ಶ್ರೇಷ್ಠ ಸಾಹಿತಿಗಳ ಬದುಕು ಬರಹಗಳ ಕುರಿತ ಲೇಖನಗಳು)

೨೧. ಕಾವ್ಯ ಚಿಂತನ ಮತ್ತು ಜೀವನ ಮಂಥನ- ೨೦೧೧

೨೨. ಜಿ.ವಿ. ವಿಚಾರ ವಿಹಾರ - ೨೦೧೧

೨೩. ಒಂದಿಷ್ಟು ರಾಮಾಯಣ ಒಂದಿಷ್ಟು ಮಹಾಭಾರತ - ೨೦೧೧

೨೪. ಪುರಾಣ ಕಥಾವಳಿಯ ಗಂಜಾಲ ತಿಮ್ಮಣ್ಣಯ್ಯ (ಪ್ರೊ.ಜಿ.ವಿ.ಯವರ ತೀರ್ಥರೂಪರ ಜೀವನಚಿತ್ರ) ೨೦೧೨, ಮುದ್ರಣದಲ್ಲಿದೆ.

## ಮಕ್ಕಳಿಗಾಗಿ

೧. ರಾಬಿನ್‌ಸನ್ ಕ್ರೂಸೋ - ೧೯೬೭

೨. ಕವಿ ಜನ್ನ - ೧೯೭೨

೩. ಚಾವುಂಡರಾಯ - ೧೯೭೫

೪. ಚಿಣ್ಣರ ಚಿತ್ರ ರಾಮಾಯಣ - ೨೦೧೧

## ಸಂಶೋಧನೆ

೧. ೧೯೦೭ ರಲ್ಲಿ ಪ್ರಕಟಗೊಂಡ ಶ್ರೀ ರಾ. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತ್ರೆ'ಗಾಗಿ ಮತ್ತಷ್ಟು ಹೆಚ್ಚಿನ ಮಾಹಿತಿ ಸಂಗ್ರಹಣೆ. ಫಲವಾಗಿ ೧೯೬೧ರಲ್ಲಿ ಗ್ರಂಥ ಪುನಮುದ್ರಣಗೊಂಡಿದೆ.

೨. ಸಾಹಿತ್ಯ ಮತ್ತು ವಿಶ್ವಕೋಶಗಳಿಗೆ ಸಂಬಂಧಿಸಿದಂತೆ ತೌಲನಿಕ ಅಧ್ಯಯನದ ಮೂಲಕ ಹಲವಾರು ಲೇಖನಗಳ ಪ್ರಕಟಣೆ.

ಸಾಹಿತ್ಯಿಕ ವಿಮರ್ಶೆ ಮತ್ತು ನಿಘಂಟು ಶಾಸ್ತ್ರಕ್ಕೆ ಸಂಬಂಧಿಸಿದಂತೆ ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ಹಲವು ಲೇಖನಗಳ ಪ್ರಕಟಣೆ.

## ಸಂಪಾದಕರಾಗಿ....

೧. ಕನ್ನಡ ರತ್ನ ಪರಿಚಯ - ೧೯೬೪

೨. ನಳಚಂಪು ಸಂಗ್ರಹ-೧೯೬೬ (ಸಂಪಾದಿತ ಮತ್ತು ಪರಿಷ್ಕೃತ)

೩. ಅಕ್ರೂರ ಚರಿತ್ರೆಯ ಸಂಗ್ರಹ - ೧೯೬೬

೪. ಕರ್ಣ ಕರ್ಣಾಮೃತ - ೧೯೬೬

೫. ಕಾವ್ಯಲಹರಿ. ೧೯೬೮ ( ಇತರರೊಡನೆ)

೬. ನಾಗರಸನ ಕರ್ನಾಟಕ ಭಗವದ್ಗೀತೆ-೧೯೮೪ ಪುನರ್‌ಮುದ್ರಣ ೨೦೧೧

೭. ಮುದ್ದಣ ಭಂಡಾರ ಸಂಪುಟ ೧ ಮತ್ತು ೨- ೧೯೮೭

೮. ಶ್ರೀರಾಮ ಸಂಭವ - ೧೯೯೬

೯. ಬಾಳಿಗೊಂದು ಬೆಳಕು, ರಾಮಾಯಣದ ದೃಷ್ಟಿ - ೨೦೦೭

೧೦.ಸಂಸ್ಕೃತ ರಾಮಾಯಣ ನಾಟಕಗಳಲ್ಲಿ ಪಾತ್ರ ವೈವಿಧ್ಯ (ಹಲವು ಪ್ರಬಂಧಗಳು)_ ೨೦೧೦

೧೧. ರಾಮಾಯಣದ ಅಂತರಂಗ - ೨೦೧೨. ಮುದ್ರಣದಲ್ಲಿ.

(೧೭೫೦ ಪುಟಗಳುಳ್ಳ ಕಡೆಯ ನಾಲ್ಕು ಕೃತಿಗಳು ಪ್ರೊ. ಜಿ.ವಿ.ಯವರ ಮಾರ್ಗದರ್ಶನದಲ್ಲಿ ನಡೆದ ವಿಚಾರ - ಸಂಕಿರಣದ ಫಲಶೃತಿ. ಬೆಂಗಳೂರಿನ ಜಯನಗರ ಬಡಾವಣೆಯ ಎಂಟನೇ ಬ್ಲಾಕಿನಲ್ಲಿರುವ ಶ್ರೀ ಜಯರಾಮ ಸೇವಾ ಮಂಡಳಿಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಐವತ್ತಕ್ಕೂ ಮೀರಿ ವಿದ್ವಾಂಸರು ಪಾಲ್ಗೊಂಡು ಅತ್ಯುತ್ತಮವಾದ ಪ್ರಬಂಧಗಳು ಮಂಡನೆಯಾಗಿದ್ದವು, ಒಂದು ವಿಶ್ವವಿದ್ಯಾನಿಲಯ ಮಾಡುವಂತಹ ಕಾರ್ಯಕ್ಕೆ ಸಮನಾದ ಕಾರ್ಯವೆಂದು ವಿದ್ವಾಂಸರು ಮೆಚ್ಚುಕೆಯನ್ನು ಗಳಿಸಿತು.)

೧೨. ಕರ್ನಾಟಕ ಏಕೀಕರಣದ ಅನುಭವಗಳು (ಏಕೀಕರಣದ ಪ್ರಬಂಧಗಳು) ೨೦೦೭

೧೩. ಸಾಧನ ಸಮುದ್ದೇಶ (ಭರ್ತೃಹರಿಯ 'ವಾಕ್ಯಪದೀಯಂ' ಗ್ರಂಥದ ಒಂದು ಅಧ್ಯಾಯದ ಅನುವಾದ) - ೨೦೦೮

೧೪. ಹೊಯ್ಸಳ ಕರ್ನಾಟಕ ರಾಜ್ಯೋತ್ಸವ ಸಂಪುಟ

೧೫. ಹೊಯ್ಸಳ ಮಾಲೆಯ ೫೪ ಪುಸ್ತಕಗಳು ೨೦೦೮-೨೦೧೨

೧೬. ತಮಿಳು ಕಥೆಗಳು (ಅನುವಾದ ಕಾರ್ಯ) ೧೯೯೧

೧೭. ತೆಲುಗು ಕಥೆಗಳು - ೧೯೯೧

೧೮. ಮಲೆಯಾಳಂ ಕಥೆಗಳು - ೧೯೯೧

೧೯. ಕನ್ನಡ ಕಥೆಗಳು (ಅನುವಾದಕ್ಕೆ ಆಯ್ದದ್ದು) ೧೯೯೧

೨೦. ಇರುಪತ್ತು ಕನ್ನಡ ಚೆರುಕಥಕ್ಕಲ್ (ಮಲೆಯಾಳಂ) (ನವದೆಹಲಿಯ ಸಾಹಿತ್ಯ ಅಕಾಡೆಮಿ ೧೯೯೩ ಪ್ರಕಟಣೆ)

೨೧. ಕನ್ನಡ ಕಥಾನಿಕಲ ಸಂಕಲನಂ (ತೆಲುಗು) ೧೯೯೬

(ಪ್ರಕಟಣೆ- ಸಾಹಿತ್ಯ ಅಕಾಡೆಮಿ ನವದೆಹಲಿ)

೧೯೮೩ರಲ್ಲಿ ಕನ್ನಡ ಮತ್ತು ಸಂಸ್ಕೃತಿ, ಇಲಾಖೆಯಲ್ಲಿ ಡಾ. ರಾಮಚಂದ್ರ ಶರ್ಮರೊಂದಿಗೆ, 'ಅನುವಾದ ಕಾರ್ಯಗಾರದಲ್ಲಿ ಭಾಗಿ' ತಮಿಳು, ತೆಲುಗು ಮತ್ತು ಮಲೆಯಾಳಂ ಭಾಷೆಗಳಿಂದ ೨೦ ಪುಸ್ತಕಗಳ (ಸಣ್ಣಕತೆ) ಆಯ್ಕೆ, ಅನುವಾದ ಕಾರ್ಯ, ಜೊತೆಗೆ ೨೦ ಕನ್ನಡ ಸಣ್ಣ ಕತೆಗಳು ಇತರ ಮೂರು ಭಾಷೆಗಳಿಗೇ ಅನುವಾದಗೊಂಡು ಸಾಹಿತ್ಯ ಅಕಾಡೆಮಿಯಿಂದ ಪ್ರಕಟಣೆಗೊಂಡವು)

೨೨. ರತ್ನಾಕರವರ್ಣಿ

೨೩. ದಾಸ ಸಾಹಿತ್ಯ

೨೪. ಸರ್ವಜ್ಞ

೨೫. ಶ್ರೀ ಬಸವೇಶ್ವರ

ಕನ್ನಡ ಭಾಷೆಯ ಸೇವೆಯನ್ನು ಹಲವು ರೀತಿಗಳಲ್ಲಿ ನಡೆಸಿಕೊಂಡು ಬಂದಿರುವ ಪ್ರೊ. ಜಿ.ವಿ.ಯವರು ೧೯೬೫ರಿಂದ ೨೦೧೨ರವರೆಗೆ ರಾಜ್ಯದಾದ್ಯಂತ ನಡೆದಿರುವ ಹಲವು ವಿಚಾರ ಸಂಕಿರಣಗಳಲ್ಲಿ, ಮಾರ್ಗದರ್ಶಕರಾಗಿ ಅಯೋಜಕರಾಗಿ ಭಾಗವಹಿಸಿದ್ದಾರೆ.

*

# ಶುಭೋಕ್ತಿಗಳು

## ಮೊದಲ ಸಹಸ್ರಮಾನದ ಕನ್ನಡ ಶಾಸನಗಳಲ್ಲಿ ಬರುವ ಈ ಉಕ್ತಿಗಳ ಪ್ರಭೇದ ಮತ್ತು ಪರಿಭಾಷೆಯ ಅಧ್ಯಯನ

– ಷ. ಶೆಟ್ಟರ್

ಹಳೆಗನ್ನಡ ಶಾಸನಗಳಲ್ಲಿ ಮೊಟ್ಟಮೊದಲಿಗೆ ಶುಭೋಕ್ತಿ ಬರುವುದು ಬಾದಾಮಿ ಚಾಳುಕ್ಯ ಕೀರ್ತಿವರ್ಮನ ಕ್ರಿಶ ೫೬೭ರ ಆಡೂರು (೯)[೧] ಮತ್ತು ಸರಿಸುಮಾರು ಇದೇ ಕಾಲದ ಶಿರಸಿ ಸಮೀಪದ ಪುರ್ದುಕಾನಿನ ಕದಂಬ ಅಜವರ್ಮನ ಶಾಸನಗಳಲ್ಲಿ (೧೩). ಇವೆರಡನ್ನು ಹೊರತುಪಡಿಸಿ, ೫-೬ನೆಯ ಶತಮಾನದ ಇನ್ನಾವ ಕನ್ನಡ ಶಾಸನದಲ್ಲೂ ಇದರ ಪ್ರಸ್ತಾಪವಿಲ್ಲ. ಇನ್ನು ಮೊದಲ ಸಹಸ್ರಮಾನದ ಹೊರ ಅಂಚಿಗೆ, ಅಂದರೆ ೧೦ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿದ ಈ ವರ್ಗದ ಶಾಸನಗಳೆಂದರೆ ಕ್ರಿಶ ೯೯೧-೯೫ರ ಕಲ್ಯಾಣಿ ಚಾಲುಕ್ಯ ಆಹವಮಲ್ಲನ ಬೆನಕಲ್ಲು (೧೪೦೪) ಮತ್ತು ಸರಿಸುಮಾರು ಇದೇ ಕಾಲಾವಧಿಯ ವಾಸನ (ಕಲ್ಯಾಣಿ ಚಾಲುಕ್ಯ: ೧೪೧೫), ನಗರ್ತೆ (ಗಂಗ ಪೆರ್ಮನಡಿ: ೧೪೩೮), ಪುಷ್ಪಗಿರಿ (ರಾಷ್ಟ್ರಕೂಟ ಮುಮ್ಮಡಿ ಕೃಷ್ಣ: ೧೪೮೨), ಚಿಂತಲ ಪುತ್ತೂರು (ಯಾದವ ಸಿಂಗಳದೇವ: ೧೫೬೦), ಹಂಗರಗಿ (ದಶವರ್ಮನ: ೧೫೬೪) ಶಾಸನಗಳು. ರಾಜವಂಶವನ್ನು ಸ್ಪಷ್ಟಪಡಿಸದ ಈ ಕಾಲದ ಶಾಸನಗಳನ್ನು ಗಣನೆಗೆ ತೆಗೆದುಕೊಳ್ಳುವುದಾದರೆ, ಮುಳ್ಗುಂದ (೧೫೮೪) ಮತ್ತು ಬಸವಾಪಟ್ಟಣ(೧೫೭೭)ದ ಎರಡು ಶಾಸನಗಳನ್ನೂ ಇದರಡಿ ತರಬಹುದು.

ಇಲ್ಲಿಯವರೆಗೂ ಸಂಗ್ರಹಿಸಿರುವ ಸುಮಾರು ೧೮೦೦ ಕನ್ನಡ ಶಾಸನಗಳಲ್ಲಿ ಶುಭೋಕ್ತಿಗಳನ್ನೊಳಗೊಂಡ ಶಾಸನಗಳ ಸಂಖ್ಯೆ ನೂರರ ಗಡಿಯನ್ನು ದಾಟುವುದಿಲ್ಲ. ಮೊದಲ ಎರಡೂವರೆ ಶತಕಗಳಲ್ಲಿ (ಕ್ರಿಶ ೪೫೦ ರಿಂದ ೭೦೦) ತುಂಬಾ ವಿರಳವಾಗಿ ಬರುವ (೬+೧=೭) ಈ ಉಕ್ತಿಗಳು, ೮ನೆಯ ಶತಮಾನದಲ್ಲಿ ಬಲಸಂಪಾದಿಸಿಕೊಂಡು (೧೩+೨=೧೫), ಆನಂತರದ ಪ್ರತಿ ಶತಮಾನಕ್ಕೊಮ್ಮೆ ತಮ್ಮ ಸಂಖ್ಯೆಯನ್ನು ಇಮ್ಮಡಿಗೊಳಿಸಿಕೊಳ್ಳುತ್ತಾ ೯ ಮತ್ತು ೧೦ನೆಯ ಶತಮಾನಗಳಲ್ಲಿ ಸಕ್ರಮವಾಗಿ ಇವನ್ನು ೨೫ ಮತ್ತು ೪೩ಕ್ಕೆ ಎತ್ತರಿಸಿಕೊಂಡ ಚಿತ್ರ ಈ ಸರ್ವೇಕ್ಷಣದಲ್ಲಿ ಮೂಡಿರುವುದು.[೨] ಶುಭೋಕ್ತಿಗಳು ಮೊದಲ ಸಹಸ್ರಮಾನದ ನಂತರವೂ ಮುಂದುವರಿಯುವುದರಿಂದ ಅವುಗಳ ಹೊರ ಅಂಚನ್ನು ಈಗ ನಿಲುಕಿರುವ ಶಾಸನಗಳಿಗೆ ಸೀಮಿತಗೊಳಿಸುವುದು ಸರಿಯೆನಿಸಲಾಗದು; ಆದರೆ, ಯಾವ ಕಾಲ, ಪ್ರದೇಶ, ಮತ್ತು ರಾಜವಂಶದಡಿ ಮೊಟ್ಟಮೊದಲು ಇವು ಕನ್ನಡ ಶಾಸನಗಳಲ್ಲಿ ಕಾಣಿಸಿಕೊಂಡವು ಎಂಬುದನ್ನು ನಿಖರವಾಗಿ ಗುರುತಿಸಲು ಇಂದು ಸಾಧ್ಯವಾಗುವುದೊಂದು ಈ ಸಮಗ್ರ ಸಂಕಲನದಿಂದಾಗಿರುವ ಲಾಭ.[೩]

ಶುಭೋಕ್ತಿಗಳ ಪ್ರಭೇದ ಮತ್ತು ಪರಿಭಾಷೆಯನ್ನು ತಿಳಿದುಕೊಳ್ಳುವುದಕ್ಕಿಂತ ಮುಂಚೆ ಇವುಗಳಿಗೆ ಸಂಬಂಧಿಸಿದ ಒಂದೆರಡು ವಿಶೇಷತೆಗಳ ಬಗ್ಗೆ ಗಮನ ಹರಿಸುವುದವಶ್ಯ. ಇವು ಪ್ರತ್ಯೇಕ ಅಥವಾ ಸ್ವತಂತ್ರ ಹೇಳಿಕೆಗಳಾಗಿ (ಶಾಪೋಕ್ತಿಗಳಂತೆ) ಬಾರದೆ ಬಹುತೇಕ ಶಾಪೋಕ್ತಿಗಳ ಮುಮ್ಮಾತಾಗಿ ಮಾತ್ರ ಕಾಣಿಸಿಕೊಳ್ಳುವುವು, ಇದರಲ್ಲಿ ಒಂದು: ಶಾಪೋಕ್ತಿಗಳಲ್ಲಿ ಸಾಮಾನ್ಯವಾಗಿ ಬರುವ ಧರ್ಮಶಾಸ್ತ್ರ ಸಂಬಂಧಿತ ಸಂಸ್ಕೃತ ವಾಙ್ಮಯದ ಉದ್ಧರಣೆಗಳು ಇವುಗಳಲ್ಲಿ ಬಾರದಿರುವುದು, ಇನ್ನೊಂದು, ಕನ್ನಡ ಪರಿಭಾಷೆಗೆ ಪ್ರಾಧಾನ್ಯತೆ ದೊರಕಿರುವ ಈ ಉಕ್ತಿಗಳಲ್ಲಿ ಸಂಸ್ಕೃತ ಪದಗಳು ಬಂದರೂ ಅವು ಹೆಚ್ಚಾಗಿ ಕನ್ನಡದ ದೀಕ್ಷೆಗೊಳಗಾಗಿಯೇ ಬಂದಿರುವುದು ಇಷ್ಟೇ ಮುಖ್ಯವಾದ ವಿಷಯ. ಯಾವ ಶುಭೋಕ್ತಿಗಳು ಯಾವ ಕಾಲಘಟಕದಲ್ಲಿ ಹೆಚ್ಚು ಪ್ರಸಾರದಲ್ಲಿದ್ದವು ಎಂಬುದನ್ನು ತಿಳಿಯಲು ಸಾಧ್ಯವಾದರೂ ಸಹಸ್ರಮಾನದುದ್ದಕ್ಕೂ ಕಾಣಿಸಿಕೊಳ್ಳುವ ಹಲವಾರು ಉಕ್ತಿಗಳ ಆರಂಭವನ್ನು ಗುರುತಿಸುವಷ್ಟು ಸುಲಭವಾಗಿ ಅವುಗಳ ಅಂತ್ಯವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಶುಭೋಕ್ತಿಗಳನ್ನು ಸ್ಥೂಲವಾಗಿ ಈ ಎರಡು ವರ್ಗಗಳಡಿ ತರಬಹುದು:

ಪುಣ್ಯಫಲಗಳನ್ನು ತೂಗಿ, ಅಳೆದು, ಪ್ರಮಾಣೀಕರಣಿಸದೆ, ಇನ್ನೊಂದು ಪುಣ್ಯ ಕಾರ್ಯದೊಡನೆ ಸಮೀಕರಿಸಿ ಮೌಲೀಕರಿಸದೆ, ಮಂಗಳ ಗುಣಗಳನ್ನು ಮಾತ್ರ ಸ್ಥೂಲವಾಗಿ ಸೂಚಿಸುವ ಉಕ್ತಿಗಳು; ಮತ್ತು, ಪುಣ್ಯಫಲಗಳ ಲೆಕ್ಕಹಾಕಿ ಮತ್ತೊಂದು ಪುಣ್ಯ ಕಾರ್ಯದೊಡನೆ ಅವನ್ನು ಸಮೀಕರಿಸುವ ಉಕ್ತಿಗಳು.

**ರಕ್ಷಕನ ಅಡಿ ಮಣ್ಣೆಯ ಮೇಲೆ:** ಇನ್ನೊಬ್ಬರು ಮಾಡಿದ ದಾನವನ್ನು ಸೈರಿಸುವುದು, ಸಂರಕ್ಷಿಸುವುದು,

ಗೌರವ ನಿರ್ದೇಶಕರು, ಇಂದಿರಾಗಾಂಧಿ ರಾಷ್ಟ್ರೀಯ ಕಲಾಕೇಂದ್ರ, ದ.ಪ್ರಾ. ಕೇಂದ್ರ, ಬೆಂಗಳೂರು.

ಧರ್ಮ; ಈ ಧರ್ಮವನ್ನು ಪೂರೈಸಿಕೊಡುವವನ ಪಾದಗಳು ದಾನಿಯ ಅಥವಾ ದಾನಕ್ಕೆ ಪಾತ್ರನಾದವನ ತಲೆಯ ಮೇಲಿರಿಸಿಕೊಳ್ಳುವಷ್ಟು ಪೂಜನೀಯ. ದಾನಿಯು ಗಳಿಸುವ ಪುಣ್ಯದಲ್ಲಿ, ಕಲ್ಯಾಣದಲ್ಲಿ, ಇಂಥವನಿಗೆ ಪಾಲು ದೊರಕುವುದು, ಎಂದು ಭರವಸೆ ಕೊಡುವ ಒಂದು ಬಗೆಯ ಶುಭೋಕ್ತಿಗಳು ಕ್ರಿಶ ೮ನೆಯ ಶತಮಾನದ ಮಧ್ಯಭಾಗದಲ್ಲಿ ಪ್ರಾರಂಭಗೊಳ್ಳುವವು. 'ಸಳಿಸಿದೋನ್' 'ಇರಕ್ಷಿಚ್ಚಿದೋನ್ಸ್', 'ಸಲಿಸುವೊ' ಈ ಮುಂತಾದವರ ಅಡಿಗಳು ಶಿರವನ್ನು ಅಲಂಕರಿಸುವಷ್ಟು ಯೋಗ್ಯವೆಂಬ ಆಶಯ ಮೊದಲು ಬರುವುದು ಕ್ರಿಶ ೭೫೦ರ ಗಂಗರ ಶಾಸನದಲ್ಲಿ (೨೫೨). ಈ ಶತಮಾನದುದ್ದಕ್ಕೂ ಇದನ್ನು ಪ್ರತಿಪಾದಿಸಿದ ಇನ್ನೂ ಮೂರು ಶಾಸನಗಳು (೨೭೭, ೨೭೯, ೪೯೧) ಇದೇ ರಾಜಮನೆತನದ ಕಾಲದವಾಗಿವೆ. ಆದರೆ ಇದು ಗಂಗರ ಕಾಲಕ್ಕೆ ಮಾತ್ರ ಸೀಮಿತಗೊಂಡಿರಲಿಲ್ಲ. ಏಕೆಂದರೆ ಈ ಆಶಯವನ್ನು ೯ನೆಯ ಶತಮಾನದಲ್ಲಿ (೫೮೩, ೮೧೦) ನೊಳಂಬ ಪಲ್ಲವರು, ಮತ್ತು ೧೦ನೆಯ ಶತಮಾನದಲ್ಲಿ (೯೩೬) ರಾಷ್ಟ್ರಕೂಟರು ಮುಂದುವರಿಸಿದರು.

**ಧರ್ಮ, ಪುಣ್ಯಭಾಗಿ, ಕಲ್ಯಾಣಭಾಗಿ:** ಕೊಟ್ಟ ದಾನವನ್ನು ಮನ್ನಿಸುವವನು ದಾನಿ ಸಂಪಾದಿಸುವ ಪುಣ್ಯದಲ್ಲಿ ಭಾಜನವಾಗುವನಲ್ಲದೆ, ಆ ಮೂಲಕ ಕಲ್ಯಾಣ, ಪ್ರಗತಿ, ಶುಭ, ಜಯ, ಖ್ಯಾತಿ, ಶಾಂತಿ, ಸಂತತಿ, ಮಂಗಳ, ಮುಂತಾದವನ್ನು ಪ್ರಾಪ್ತಿಸಿಕೊಳ್ಳುವನೆಂದು ಪ್ರತಿಪಾದಿಸುವ ಇನ್ನೊಂದು ಬಗೆಯ ಶಾಸನಗಳು ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಳ್ಳುವುವು. ಇದೇ 'ಧರ್ಮ' ಎಂಬ ಉಕ್ತಿ ಮೊದಲಿಗೆ ಬರುವುದು ಕ್ರಿಶ ೫೬೭–೬೮ರ ಬಾದಾಮಿ ಚಾಳುಕ್ಯ ಕೀರ್ತಿವರ್ಮನ ಕಾಲದ ಆಡೂರಿನ (೯) ಶಾಸನದಲ್ಲಿ. ತುಂಬಾ ವಿರಳವಾಗಿ ಬರುವ ಈ ಆಶಯ ಈ ಕಾಲಾವಧಿಯಲ್ಲಿ ಇನ್ನೊಮ್ಮೆ ಮಾತ್ರ ಕಾಣಿಸಿಕೊಂಡದ್ದು, ಅದು ರಾಷ್ಟ್ರಕೂಟ ಕೃಷ್ಣನ ೧೦ನೆಯ ಶತಮಾನದ ಶಾಸನದಲ್ಲಿದೆ (೧೪೮೨). ಮೊದಲನೆಯದು 'ಧರ್ಮ'ವನ್ನು ಉಲ್ಲೇಖಿಸಿದರೆ, ಎರಡನೆಯದು 'ಧರ್ಮಫಲ'ವನ್ನು ಉಲ್ಲೇಖಿಸುವುದು. ಪುಣ್ಯಾರ್ಜನೆಗೆ ಇದೊಂದು ಉತ್ತಮ ಮಾರ್ಗ ಎಂದು ಕನಿಷ್ಠ ನಾಲ್ಕು ಶಾಸನಗಳಲ್ಲಿ (೧೭, ೬೪೯, ೧೪೯೬, ೧೫೪೮) ಪ್ರತಿಪಾದಿಸಲಾಗಿದೆ. ಈ ಬಗೆಯ ಉಕ್ತಿಗಳು ಪೊಲವೀರನ ೬–೭ನೆಯ ಶತಮಾನದ ತಗರೆ ತಾಮ್ರಪಟದಲ್ಲಿ (೧೭) ಪ್ರಾರಂಭಗೊಂಡು, ಕ್ರಿಶ ೮೮೦ರ ಪಲ್ಲವ ನೊಳಂಬಾದಿರಾಜನ ನಕ್ಕುಂದಿಯ ವೀರಗಲ್ಲು (೬೪೯), ೧೦ನೆಯ ಶತಮಾನದ ಗಂಗ ಸತ್ಯವಾಕ್ಯಪೆರ್ಮಾಡಿಯ ಅರಣಿಯ ಶಿಲಾ ಶಾಸನ (೧೪೯೬) ಮತ್ತು ರಾಜವಂಶದ ಉಲ್ಲೇಖವಿರದ ಮುಳ್ಳುಂದ ಶಾಸನದಲ್ಲಿ (೧೫೮೪) ಮುಂದುವರಿದಿವೆ. ಇವುಗಳಲ್ಲಿ ಮೊದಲೆರಡು ಶಾಸನಗಳು 'ಪುಣ್ಯಭಾಗಿ'ಯನ್ನು, ಉಳಿದೆರಡು 'ಅನಂತಪುಣ್ಯ' ಮತ್ತು 'ಪರಮಪುಣ್ಯ'ಗಳ ಫಲಾನುಭವಿಗಳನ್ನು ಉಲ್ಲೇಖಿಸಿವೆ. ಇವಕ್ಕೆ ಸರಿಸಮನಾದ 'ಕಲ್ಯಾಣ' ಮತ್ತು 'ಕಲ್ಯಾಣಭಾಗಿ' ಎಂಬ ಪದಗಳು ಪಲ್ಲವ ಮಹೇಂದ್ರನ ಗದ್ದೇಮನೆ ವೀರಗಲ್ಲಿನಲ್ಲಿ (೧೨೫) ಮೊದಲು ಕಾಣಿಸಿಕೊಂಡು ನಂತರ ೮ ಮತ್ತು ೯ನೆಯ ಶತಮಾನದ ಹೊರ ಅಂಚಿಗೆ ಸೇರಿದ ಮಾವಳ್ಳಿ ವೀರಗಲ್ಲಿನಲ್ಲಿ (೩೧೩) ಮತ್ತು ಕದಂಬ ಅಜವರ್ಮ್ಮರಸನ ಗೌಜ ಅಗ್ರಹಾರದ (೬೭೫) ಶಾಸನದಲ್ಲಿ ಮುಂದುವರೆದಿವೆ.

'ಕಲ್ಯಾಣ'ಕ್ಕೆ ಪ್ರತಿಯಾಗಿ ಬರುವ ಮತ್ತೊಂದು ಪದ 'ಅಭಿವಿಟ್ಸಿ' (ಅಭಿವೃದ್ಧಿ) ಮತ್ತು 'ಶುಭವೃದ್ಧಿ' (೧೧೩೭, ೧೩೫೮). ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ಮಾತ್ರ ಬರುವ ಈ ಫಲಸೂಚಿಗಳು ಒಂದೊಂದು ಬಾರಿ ಮಾತ್ರ ಪಲ್ಲವನೊಳಂಬ (ಕ್ರಿಶ ೯೫೦) ಮತ್ತು ಕಲ್ಯಾಣಿ ಚಾಳುಕ್ಯರ (ಕ್ರಿಶ ೯೮೦) ಶಾಸನಗಳಲ್ಲಿವೆ. 'ಕುಲಂ ಪೆಟ್ಸಿಗೆ'ಯ (ಕುಲವೃದ್ಧಿ) ಮತ್ತು 'ತಲೆ ಅಭಿವೃದ್ಧಿ'ಯ ಮಾತುಗಳು ೭ನೆಯ (೧೧೮) ಮತ್ತು ೮ನೆಯ (೩೫೩) ಶತಮಾನಗಳ ಅಳುಪ ಮತ್ತು ಗಂಗರ ಶಾಸನಗಳಲ್ಲಿವೆ.

ಈ ಎಲ್ಲಾ ಆಶಯಗಳೊಡನೆ ಇನ್ನೂ ಕೆಲವನ್ನು ಸೇರಿಸಿಕೊಂಡಿರುವ ೧೦ನೆಯ ಶತಮಾನದ ಎರಡು ಶಾಸನಗಳನ್ನಿಲ್ಲಿ ಗಮನಿಸಬಹುದು. ಇವುಗಳಲ್ಲಿ ಇಮ್ಮಡಿ ತೈಲಪನ ಸೊಗಲ (ಈಗ ಬ್ರಿಟಿಷ್ ಮ್ಯೂಜಿಯಂನಲ್ಲಿರುವ) ಶಾಸನದಲ್ಲಿ (ಕ್ರಿಶ ೯೮೦ರ ೧೩೫೮) "ಪುಣ್ಯ ಬಂದಾತಿಶಯಾಸ್ಪದ ಸುಖಪದಂ ಶುಭವೃದ್ಧಿ ಜಯಾಸ್ಪದಂ ಮಹಾಖ್ಯಾತಿ ಪದಂಗಳ್ ಎಂಬವು ತಪ್ಪವು" ಎಂದಿದ್ದರೆ, ಚಾಳುಕ್ಯ ಆಹವಮಲ್ಲನ ಬೆನಕಲ್ಲ ಶಾಸನದಲ್ಲಿ (ಕ್ರಿಶ ೯೯೧ರ ೧೪೦೪) "ನಡೆಯಿಪರ್ಗ್ಗೆಲ್ಲ ಶಾನ್ತಿಪ್ರದಿ ಸುಭಮಂ ಸನ್ತತಿ ಫಲಮಕ್ಕೆ ಮಂಗಳಂ ಕಲ್ಯಾಣಂ" ಎಂದಿದೆ. ಈ ಉಕ್ತಿಗಳು ಪ್ರಧಾನವಾಗಿ ಲೌಕಿಕ ಅಥವಾ ಐಹಿಕ ಶ್ರೇಯಸ್ಸನ್ನು ಹರಸಿದರೆ, ಪಾರಮಾರ್ಥಿಕ ಶ್ರೇಯಸ್ಸನ್ನು ಕೋರುವ ಶಾಸನಗಳು ಗಂಗರ ಕಾಲದಲ್ಲಿಯೇ ಪ್ರಚಲಿತವಿದ್ದವು ಎಂಬುದಕ್ಕೆ ೮ನೆಯ ಶತಮಾನದ ಶ್ರೀಪುರುಷನ (ಕ್ರಿಶ ೭೫೪) ಗುಂಡ್ಲಹಳ್ಳಿಯ ಎರಡು ಶಾಸನಗಳು (೨೮೦, ೨೮೨) ಉದಾಹರಣೆ. ಇಲ್ಲಿ "ರಕ್ಷಿಪೊನ್ ವೈಕೊನ್ತವಾಸಿ (ವೈಕುಂಠವಾಸಿ) ಅಕ್ಕುಂ" "ಇದನ್ ಸಲಿಪ್ಪೊನ್ ವೈಗೊನ್ತವಾಸಿ (ವೈಕುಂಠವಾಸಿ) ಅಕು", ಎಂಬ ಪಾಠಗಳಿವೆ. ಕ್ರಿಶ ೯೫೦ರ (೧೧೬೧) ಜಿನದತ್ತರಾಯನ ಕುಂಸಿ ಶಾಸನವು "ಈ ಧರ್ಮ್ಮವ ನಡಸಿದವರಿಗೆ ಸ್ವರ್ಗ್ಗಪದವ ಪಡೆದವರು" ಎಂಬ ಭರವಸೆ ಕೊಟ್ಟರೆ, ೯೫೧–೫೨ರ (೧೧೯೪) ರಾಷ್ಟ್ರಕೂಟ ನಾಲ್ವಡಿ ಕೃಷ್ಣನ ಸೊರಟೂರು ಶಾಸನವು ರುದ್ರಲೋಕದಲ್ಲಿ ಭದ್ರಸ್ಥಾನವನ್ನು, ೯೭೨ರ (೧೪೯೯) ರಾಷ್ಟ್ರಕೂಟ ಕೊಟ್ಟಿಗನ ಬಾಗಳಿ ಶಾಸನವು 'ಸ್ವರ್ಗಾಪವರ್ಗ ಮೋಕ್ಷ' ದ ಭರವಸೆಗಳನ್ನು ಇತ್ತಿರುವುವು.

ಈ ಯಾವ ಶಾಸನದಲ್ಲೂ ಒಂದು ಧರ್ಮಕಾರ್ಯವನ್ನು ಮತ್ತೊಂದು ಪುಣ್ಯ ಕಾರ್ಯದೊಡನೆ ಹೋಲಿಸಿಲ್ಲ,

ಮೌಲ್ಯಮಾಪನ ಮಾಡಿ ಮೊತ್ತವನ್ನು ನಿರ್ಧರಿಸಿಲ್ಲ, ಅಲ್ಲದೆ ಯಾವೊಂದು ಪವಿತ್ರ ಕ್ಷೇತ್ರವನ್ನಾಗಲೀ ದಾನದ ವಸ್ತುವನ್ನಾಗಲೀ ಹೆಸರಿಸಿಲ್ಲ.

ಈವರೆಗೂ ಚರ್ಚಿಸಿದ ಉಕ್ತಿಗಳ ವೈವಿಧ್ಯತೆ ಮತ್ತು ಅವುಗಳ ಪ್ರಸ್ತಾಪಿಸುವ ಮೊಟ್ಟಮೊದಲ ಉಲ್ಲೇಖಗಳು ಇಂತಿವೆ:

ಧರ್ಮ: ಕ್ರಿಶ ೫೬೭–೬೮

ಪುಣ್ಯ: ೬–೭ನೆಯ ಶತಮಾನ

ಕಲ್ಯಾಣ: ೭ನೆಯ ಶತಮಾನ

ಕುಲವೃದ್ಧಿ/ ಸಂತತಿವೃದ್ಧಿ: ೭–೮ನೆಯ ಶತಮಾನ

ಪೂಜನೀಯ ಅಡಿಗಳು: ೭೫೦

ವೈಕುಂಠ ಪ್ರಾಪ್ತಿ: ೭೫೦

ಸ್ವರ್ಗಪ್ರಾಪ್ತಿ: ೯೫೦–೯೭೨

ಅಭಿವೃದ್ಧಿ/ಶುಭವೃದ್ಧಿ: ೯೫೦–೯೮೦

ಸುಖಪದ–ಶುಭವೃದ್ಧಿ– ಮಹಾಖ್ಯಾತಿ– ಶಾಂತಿ,– ಸಂತತಿ, ಮುಂ– ೯೮೦–೯೯೧

**ದಾನ ರಕ್ಷಣೆ ಮಹಾದಾನಕ್ಕೆ ಸಮ:** ೯ನೆಯ ಶತಮಾನದ ಒಂದು ಘಟ್ಟದಲ್ಲಿ ಶುಭೋಕ್ತಿಗಳ ಪರಿಭಾಷೆ ತಿರುವು ಪಡೆದುಕೊಂಡದ್ದನ್ನು ದಾನರಕ್ಷಣೆಯನ್ನು ಮಹಾದಾನಗಳಿಗೆ ಸಮೀಕರಿಸಿರುವ ಪ್ರಕ್ರಿಯೆಯನ್ನೊಳಗೊಂಡ ಶಾಸನ ಭಾಷೆಯಲ್ಲಿ ಗುರುತಿಸಬಹುದು. ಕ್ರಿಶ ೫–೬ನೆಯ ಶತಮಾನಗಳಲ್ಲಿ ವಿರಳವಾಗಿದ್ದ ಈ ಸಮೀಕರಣವು ೯ನೆಯ ಶತಮಾನದಲ್ಲಿ ಮುಂದುವರಿದು, ೧೦ನೆಯ ಶತಮಾನದಲ್ಲಿ ಔನತ್ಯದಂಚನ್ನು ಮುಟ್ಟಿದ್ದು ಈ ಕಾಲದ ಶಾಸನಗಳಿಂದ ವ್ಯಕ್ತಗೊಳ್ಳುವುದು.

ಪುರಾತನ ಸಂಸ್ಕೃತ ವಾಙ್ಮಯದಂತೆ ಮಹಾದಾನಗಳು ಹದಿನಾರು. (ಅಗ್ನಿಪುರಾಣದಲ್ಲಿ ಈ ಸಂಖ್ಯೆ ಹತ್ತಕ್ಕೆ ಸೀಮಿತಗೊಂಡಿದೆ). ಈ ದಾನಗಳನ್ನೆಲ್ಲ ಆಚರಿಸಿದ ಮಾಹಿತಿ ಇತಿಹಾಸದಲ್ಲಿ ದೊರಕದಿದ್ದರೂ ಅಶ್ವಮೇಧ, ರಾಜಸೂಯ, ವಾಜಪೇಯ, ಅಗ್ನಿಷ್ಟೋಮ, ಹಿರಣ್ಯಗರ್ಭ, ತುಲಾಪುರುಷ, ಗೋಸಹಸ್ರ, ಮುಂತಾದವನ್ನು ಆಚರಿಸಿದವರ ಹೆಸರುಗಳು ದೊರೆಯುವುವು. ಮೌರ್ಯೋತ್ತರ ಕಾಲದ (ಕ್ರಿ.ಪೂ ೨ನೆಯ ಶತಮಾನ) ಉತ್ತರಭಾರತದಲ್ಲಿ ಪುಷ್ಯಮಿತ್ರಸುಂಗನ ಜೋಡಿ ಅಶ್ವಮೇಧದಿಂದ ಪ್ರಾರಂಭಗೊಂಡು, ಇದು ಬಹುಬೇಗ ದಕ್ಷಿಣ ಭಾರತವನ್ನು ಪ್ರವೇಶಿಸಿ, ಇಲ್ಲಿಯೇ ಹೆಚ್ಚು ಮಾನ್ಯತೆಗಳಿಸಿಕೊಂಡದ್ದು ಇತಿಹಾಸದಲ್ಲಿ ಸ್ಪಷ್ಟಗೊಂಡಿರುವುದು. ೯–೧೦ನೆಯ ಶತಮಾನಗಳ ರಾಷ್ಟ್ರಕೂಟರ ಮತ್ತು ಅವರ ಸಮಕಾಲೀನರ ಕನ್ನಡ ಶಾಸನಗಳ ಶುಭೋಕ್ತಿಗಳಲ್ಲಿ ಇದು ಸ್ಪಷ್ಟವಾಗಿ ಪ್ರತಿಬಿಂಬಿತವಾಗಿರುವುದು.

ಹಳೆಗನ್ನಡದ ಶಾಸನಗಳು ರಾಜಸೂಯ, ವಾಜಪೇಯ, ಅಗ್ನಿಷ್ಟೋಮವನ್ನು ಹೆಸರಿಸುವುದಿಲ್ಲ, ಆದರೆ ಅಶ್ವಮೇಧದ (ಒಂದು ಪಶುಮೇಧವನ್ನೊಳಗೊಂಡ) ಪ್ರಸ್ತಾಪ ಕನಿಷ್ಟ ೩೫ ಬಾರಿ, ತುಲಾಪುರುಷ, ಹಿರಣ್ಯಗರ್ಭ ಮತ್ತು ಗೋಸಹಸ್ರ, ಸಕ್ರಮವಾಗಿ ಐದು, ಎರಡು, ಒಂದು ಬಾರಿ ಬಂದಿವೆ. ಶುಭೋಕ್ತಿಯ ಅಂಗವಾಗಿ ಅಶ್ವಮೇಧವು ಮೊಟ್ಟಮೊದಲು ಬರುವುದು ೬ನೆಯ ಶತಮಾನದ ಕದಂಬ ಅಜವರ್ಮನ ಪುರ್ದುಕಾನ್ ಶಾಸನದಲ್ಲಿ (೧೩). ಕರ್ನಾಟಕದಿಂದ ಆಳಿದ ಆರಂಭಕಾಲದ ಅರಸರಲ್ಲಿ ಅಶ್ವಮೇಧವನ್ನು ಮೊದಲು ಆಚರಿಸಿದ ಕದಂಬ ಕೃಷ್ಣವರ್ಮನು 'ಅಶ್ವಮೇಧಯಾಜಿನ್' ಎಂದೇ ಇತಿಹಾಸದಲ್ಲಿ ಪ್ರಸಿದ್ಧಿಪಡೆದಿದ್ದವನು. ಅಲ್ಲದೆ ಪಲ್ಲವರನ್ನು ಕಂಚಿಯಲ್ಲಿ ಕೆಣಕಿ ಜಯ ಸಾಧಿಸಿದ ಇದೇ ವಂಶದ ಮಯೂರಶರ್ಮನು ಅಶ್ವಮೇಧವನ್ನು (ಆನಂತರ ಕಾಲದ ತಾಳಗುಂದದ ಶಾಸನದ ಪ್ರಕಾರ ೧೮ ಬಾರಿ) ಆಚರಿಸಿದ್ದೂ ಇತಿಹಾಸದಲ್ಲಿ ಮನ್ನಣೆ ಪಡೆದಿದೆ. ಕದಂಬರು ಅಗ್ನಿಷ್ಟೋಮ, ಅಗ್ನಿಚ್ಛಯನ, ವಾಜಪೇಯ, ಪೌಂಡರಿಕ, ಬಹುಸುವರ್ಣ ಮತ್ತು ಅಶ್ವಮೇಧ ಯಾಗಗಳನ್ನು ಪೂರೈಸಿದ ನಂತರ ಮಾಡಿದ ಪವಿತ್ರ ಸ್ನಾನದಿಂದ ಪರಿಶುದ್ಧರಾದರೆಂದು ಬಾದಾಮಿಯ (ಕ್ರಿಶ ೫೭೮) ಒಂದು ಶಾಸನದಲ್ಲಿ ವರ್ಣಿಸಲಾಗಿದೆ.

ಹಿರಣ್ಯಗರ್ಭದ ಪ್ರಸ್ತಾಪ ಶುಭೋಕ್ತಿಗಳಲ್ಲಿ ಸ್ವತಂತ್ರವಾಗಿ ಬರದಿದ್ದರೂ ಅಶ್ವಮೇಧದೊಡಗೂಡಿ ಕ್ರಿಶ ೮೦೦ರ ಬಾಣ ಚಂಡಿಯಣ್ಣನ ಅನಂತಪುರ ಜಿಲ್ಲೆಯ ಸೆನಗಲಗುಡೂರಿನ ಕನ್ನಡ ಶಾಸನದಲ್ಲಿದೆ (೧೫೫೬). ಈ ಕಾಲಕ್ಕಾಗಲೇ ಚಾಳುಕ್ಯ ಮೊದಲ ಪುಲಕೇಶಿ ಇದನ್ನಾಚರಿಸಿ (ಕ್ರಿಶ ೫೪೩–೪೪) ಎರಡೂವರೆ ಶತಕಗಳು ಕಳೆದಿದ್ದವು; ಅಲ್ಲದೆ ರಾಷ್ಟ್ರಕೂಟ ದಂತಿದುರ್ಗನು ಅದನ್ನು ಪುನರುತ್ಥಾನಗೊಳಿಸಿ ದಶಕಗಳೇ ಕಳೆದಿದ್ದವು.

ಶುಭೋಕ್ತಿಯಾಗಿ ತುಲಾಪುರುಷ ಗೋಚರಿಸಿಕೊಳ್ಳುವುದು ಕ್ರಿಶ ೮೮೩ರ ಬಾಣ ಧವಳೆಯರಸನ ಕಡಪ ಜಿಲ್ಲೆಯ ಪೊಟ್ಟಿಪಾಡುವಿನ ಕನ್ನಡ ಶಾಸನದಲ್ಲಿ. ಇಲ್ಲಿ ಅದು ಅಶ್ವಮೇಧ ಮತ್ತು ಹಿರಣ್ಯಗರ್ಭದೊಡಗೂಡಿ ಬಂದಿದೆ. ರಾಷ್ಟ್ರಕೂಟ ಮುಮ್ಮಡಿ ಇಂದ್ರ ಮತ್ತು ನಾಲ್ವಡಿ ಗೋವಿಂದ ಇದನ್ನು ಸ್ವತಃ ಆಚರಿಸುವುದರೊಂದಿಗೆ ಈ ಮಹಾದಾನವು ೧೦ನೆಯ ಶತಮಾನದಲ್ಲಿ ಮರುಜನ್ಮ ಪಡೆದುಕೊಂಡಿತೆನ್ನಬಹುದು.

ಗೋಸಹಸ್ರದ ಶುಭೋಕ್ತಿ ಮೊದಲು ಬರುವುದು ೧೦ನೆಯ ಶತಮಾನದ ಗಂಗ ಪೆರ್ಮಾನಡಿಯ ಶಾಸನದಲ್ಲಿ (೧೪೩೮). ಇಲ್ಲಿ ಒಮ್ಮೆ ಮಾತ್ರ ಬಂದಿದ್ದರೂ ಮೊದಲ ಸಹಸ್ರಮಾನದುದ್ದಕ್ಕೂ ಇದು ಅತಿ ಹೆಚ್ಚು ಆಚರಣೆಯಲ್ಲಿದ್ದ ದಾನವಾಗಿತ್ತು. ಇದರ ಅತ್ಯಂತ ಪುರಾತನ ದಾಖಲೆ. ಸು. ೬೯೦ರ ಒಂದು ಕನ್ನಡ ಶಾಸನದಲ್ಲಿದೆ (೩೭).

ಪ(ಹ)ಶುಮೇಧ ಒಮ್ಮೆ ಮಾತ್ರ ಉಲ್ಲೇಖ ಗೊಂಡಿರುವುದು. ಇದರಲ್ಲಿ ಆಹುತಿಕೊಟ್ಟ ಪಶು ಯಾವುದೇ ಆಗಿರಬಹುದಾದರೂ ಅಶ್ವವನ್ನೇ ಉದ್ದೇಶಿಸಿರುವ ಸಾಧ್ಯತೆ ಹೆಚ್ಚು. "ಕೋಟಿ ಪಶುಮೇಧ"ವು ಕ್ರಿಶ ೮೬೬ರ ರಾಷ್ಟ್ರಕೂಟ ಅಮೋಘವರ್ಷನ ಗದಗ ಜಿಲ್ಲೆಯ ಗಾವರವಾಡ ಶಾಸನದಲ್ಲಿ(೬೦೧)ರುವ ಒಂದು ಅಪರೂಪ ನಿದರ್ಶನ.

ಅಂದರೆ, ಮಹಾದಾನಗಳು ಅದರಲ್ಲೂ ಅಶ್ವಮೇಧ, ಹಿರಣ್ಯಗರ್ಭ, ತುಲಾಪುರುಷ, ಶುಭೋಕ್ತಿಯ ಅಂಗವಾಗಿ ಮಾತ್ರ ಈ ಕಾಲದಲ್ಲಿ ಪ್ರಸಾರದಲ್ಲಿರಲಿಲ್ಲ, ಖ್ಯಾತ ರಾಜವಂಶೀಯರ (ಪ್ರಮುಖವಾಗಿ ಕದಂಬ, ಬಾದಾಮಿ ಚಾಳುಕ್ಯ ಮತ್ತು ರಾಷ್ಟ್ರಕೂಟ) ಅದ್ದೂರಿಯ ಆಚರಣೆಗಳೂ ಆಗಿದ್ದವೆಂಬುದು ಇಲ್ಲಿ ಸ್ಪಷ್ಟಗೊಳ್ಳುವುದು. ಇದರಿಂದಾಗಿ ಶುಭೋಕ್ತಿಗಳೂ ಸಮಕಾಲೀನ ಆಶೋತ್ತರಗಳನ್ನು ಅಭಿವ್ಯಕ್ತಿಗೊಳಿಸುತ್ತಿದ್ದವೆಂಬ ಅನಿಸಿಕೆ ನಿರ್ಮಾಣವಾಗುವುದು. ಇಷ್ಟೆಲ್ಲ ಪ್ರಸಾರದಲ್ಲಿದ್ದ ಈ ಮಹಾದಾನಗಳ ಸ್ವರೂಪವನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ ಇದೆ, ಏಕೆಂದರೆ ಇವುಗಳ ವಾಸ್ತವತೆಯ ಬಗ್ಗೆ ಕೆಲವು ಪ್ರಶ್ನೆಗಳನ್ನೆತ್ತಲಾಗಿದೆ.

ದಾನಗಳಲ್ಲಿಯೇ ಮಹಾದಾನ ಅಶ್ವಮೇಧವಾಗಿದ್ದು ಅದರಷ್ಟು ಅದ್ದೂರಿಯಿಂದಾಚರಿಸಿದ ಮತ್ತೊಂದು ದಾನ ಪುರಾತನ ಕಾಲದಲ್ಲೂ ಇರಲಿಲ್ಲ. ಧರ್ಮಶಾಸ್ತ್ರದಂತೆ ಇದು ಹದಿನಾರು ದಾನಗಳಡಿ ಬರದೆ ಶ್ರೌತಗಳಡಿ ಬರುವ ಒಂದು ಧರ್ಮಕ್ರಿಯೆ. ಒಂದು ವರ್ಷದುದ್ದಕ್ಕೂ ನಡೆಯುವ ಈ ಯಜ್ಞವನ್ನು ನಿಯಮಬದ್ಧವಾಗಿ ಪೂರೈಸಲು ಸುಮಾರು ಮೂರು ವರ್ಷಕಾಲ ಬೇಕಾಗುತ್ತಿತ್ತೆಂಬ ಒಂದು ಅಂದಾಜಿದೆ. ಸಹಸ್ರಾರು ಸಂಖ್ಯೆಯ ಪ್ರಾಣಿಬಲಿ, ಲಕ್ಷಾಂತರ ಸಂಖ್ಯೆಯ ಗೋಗಳ ದಾನ, ಅಪಾರ ಪ್ರಮಾಣದ ಕ್ಷೇತ್ರ ಮತ್ತು ನಿಷ್ಕಗಳ ವಿತರಣೆ – ಈ ಮುಂತಾದವನ್ನೊಳಗೊಂಡ ಈ ಯಾಗವನ್ನು ತುಂಬಾ ವರ್ಚಸ್ವೀ ಸಾರ್ವಭೌಮರು ಮತ್ತು ಮುಕುಟಧಾರಿ ಅರಸರು ಮಾತ್ರ ಆಚರಿಸಲು ಸಾಧ್ಯವೆನ್ನುವ ಮಾತು ಧರ್ಮಶಾಸ್ತ್ರದಲ್ಲಿದೆ. ನಾಲ್ವರು ಪ್ರಧಾನ ಉದ್ಘಾತೃ ಅಥವಾ ಋತ್ವಿಜರಲ್ಲದೆ, ಅವರ ಸಹಾಯಕ್ಕೆ ನಿಲ್ಲುತ್ತಿದ್ದ ಅಧ್ವರ್ಯರ ಒಂದು ದೊಡ್ಡ ಗುಂಪೇ ಈ ಸುಧೀರ್ಘ ಯಾಗದಲ್ಲಿ ಪಾಲ್ಗೊಳ್ಳುತ್ತಿತ್ತು. ಕೊನೆಗೆ ದಾನರೂಪದಲ್ಲಿ ಬಂದ ಅಪಾರ ಸಂಪತ್ತನ್ನು ಇವರೆಲ್ಲರೂ ಹಂಚಿಕೊಳ್ಳುತ್ತಿದ್ದರು. ಉದಾಹರಣೆಗೆ, ನಾಲ್ವರು ಪ್ರಧಾನರಲ್ಲಿ ಒಬ್ಬೊಬ್ಬರಿಗೆ ೨,೪೦೦ ಗೋವುಗಳನ್ನು, ಉಳಿದವರಿಗೆ ಅವರವರ ಅರ್ಹತೆಗೆ ತಕ್ಕಂತೆ ೨೦೦೦ ದಿಂದ ೫೦೦ ಗೋವುಗಳನ್ನು, ಅಲ್ಲದೆ ಬಾರಿಹಣ್ಣಿನ ಗಾತ್ರದ ನೂರು ನಿಷ್ಕಗಳನ್ನು ಪ್ರತಿಯೊಬ್ಬರಿಗೂ ದಾನವಾಗಿ ಕೊಡಬೇಕಿತ್ತು. ಇದಲ್ಲದೆ, ದಿಗ್ವಿಜಯ ಕಾಲದಲ್ಲಿ ಸಾಮ್ರಾಟನು ವಶಪಡಿಸಿಕೊಂಡ ಬ್ರಾಹ್ಮಣೇತರರ ಎಲ್ಲ ಸಂಪತ್ತನ್ನು ಮತ್ತು ತನ್ನ ರಾಜ್ಯದ ಒಂದು ಜನಪದದ(ಆದಾಯ) ವನ್ನೂ ಇವರಿಗೆ ಹಂಚಿಕೊಡಬೇಕಿತ್ತು. ಇದಕ್ಕೆ ಪ್ರತಿಫಲವಾಗಿ ಯಜ್ಞದ ಯಜಮಾನನು ಸರ್ವಸಮೃದ್ಧಿ, ಸಕಲ ಸಂಪತ್ತು, ಸಾರ್ವಭೌಮತ್ವ, ಸ್ವರ್ಗದಲ್ಲಿ ಸ್ಥಾನ, ಈ ಮುಂತಾದವನ್ನು ಪಡೆದುಕೊಳ್ಳುವನೆಂಬ ಪ್ರತಿಪಾದನೆ ಧರ್ಮಶಾಸ್ತ್ರದಲ್ಲಿದೆ. ಇಂತಹ ವ್ಯಕ್ತಿಯು ಸಕಲ ಪಾಪಗಳಿಂದ ಮುಕ್ತನಾಗಿ ಪರಿಶುದ್ಧತೆ ಪಡೆದುಕೊಳ್ಳುವನೆಂಬುದು ವ್ಯಾಸನ ಅಭಿಮತವೂ ಆಗಿದೆ.

ಆದರೆ, ಅಶ್ವಮೇಧದ ಐತಿಹಾಸಿಕ ಆಚರಣೆಯ ಬಗ್ಗೆ ಕೆಲವು ಸಂಶಯಗಳನ್ನು ವ್ಯಕ್ತಪಡಿಸಲಾಗಿದೆ. ತೈತ್ತರೀಯ ಸಂಹಿತ ಮತ್ತು ಶತಪಥ ಬ್ರಾಹ್ಮಣ ಕಾಲಕ್ಕಾಗಲೇ ಇದೊಂದು 'ಉತ್ಸನ್ನ' ಅಥವಾ ಆಚರಣೆಯಲ್ಲಿಲ್ಲದ ಧರ್ಮ ಕ್ರಿಯೆಯಾಗಿತ್ತೆಂದೂ ಇದರ ಸುಧೀರ್ಘ ವರ್ಣನೆ ಮಹಾಭಾರತದಲ್ಲಿದ್ದರೂ ಅಲ್ಲಿ ವೈದಿಕ ವಿಧಿ ನಿಯಮಗಳಲ್ಲಿ ಕೆಲವನ್ನು ಮಾತ್ರ ಉಳಿಸಿಕೊಂಡು, ಜನಪ್ರಿಯ ಅಂಶಗಳಿಗೇ ಹೆಚ್ಚು ಒತ್ತು ಕೊಡಲಾಗಿದೆ ಎಂದೂ ಅಲ್ಲದೆ ವ್ಯಾಸನ ವಿವರಣೆ ಗ್ರಂಥಾಧಾರಿತವಾಗಿರುವುದಲ್ಲದೆ ಪ್ರತ್ಯಕ್ಷದರ್ಶಿಯದ್ದಾಗಿಲ್ಲವೆಂದೂ ವಾದಿಸಲಾಗಿದೆ. ಕ್ರಿಸ್ತಶಕದ ತಿರುವಿನಲ್ಲಿ ಇದನ್ನು ಪುನರುತ್ಥಾನಗೊಳಿಸಿದಾಗ, ಅದು ತನ್ನ ಬಹುತೇಕ ಶ್ರೌತ ಗುಣಗಳನ್ನು ಕಳಚಿಕೊಂಡು ಇಲ್ಲವೇ ಮಾರ್ಪಾಟು ಮಾಡಿಕೊಂಡು, ಒಂದು ಅದ್ದೂರಿ ದಾನದ ಹಂತಕ್ಕೆ ಕುಸಿದಿತ್ತೆನಿಸುವುದು.

ಅಶ್ವಮೇಧ ಯಾಗದ ಪುಣ್ಯಫಲವನ್ನು ಸಂಪಾದಿಸಿಕೊಳ್ಳಲೋ ಅಥವಾ ತಾವು ಇತ್ತೀಚೆಗೆ ಸಾಧಿಸಿಕೊಂಡ ಸಂಪತ್ತು ಮತ್ತು ಸಾರ್ವಭೌಮತ್ವದ ಅಗ್ಗಳಿಕೆಯನ್ನು ಮೆರೆಯಲೋ ದಖ್ಖಣದ ಬಹುತೇಕ ಅರಸರು ಮಹಾದಾನಗಳನ್ನು ಸಂಭ್ರಮದಿಂದ ಆಚರಿಸಿದ ಚಿತ್ರ ಇತಿಹಾಸದಲ್ಲಿ ಮೂಡಿರುವುದು. ಸಾರ್ವಭೌಮತ್ವವನ್ನು ಪ್ರಧಾನವಾಗಿ ಸಂಕೇತಿಸುವ ಈ ಮಹಾಯಾಗ ಅಥವಾ ಮಹಾದಾನವನ್ನು ಹಿಂದೂ ಮತೀಯರು (ಕದಂಬ, ಚಾಳುಕ್ಯ, ಪಲ್ಲವ, ವಿಷ್ಣುಕುಂಡಿ, ಮುಂ.) ಮಾತ್ರವಲ್ಲದೆ ಬೌದ್ಧ ಮತೀಯರೂ (ಶಾತವಾಹನ, ಇಕ್ಷ್ವಾಕು, ಆನಂದ, ಮುಂ.) ಆಚರಿಸಿದರು. ಇದು ಬೌದ್ಧರಿಗೆ ಒಪ್ಪಿತವಾಗಲು ಬಹುಶಃ ಮೂಲ ಪ್ರತಿಪಾದನೆಯಲ್ಲಿದ್ದ ಪ್ರಾಣಿ ಆಹುತಿಯ ಅಂಶ ಸಾಕಷ್ಟು ಮಾರ್ಪಾಟಾದದ್ದು ಕಾರಣವಾಗಿರಬಹುದು. ಜೈನ ಅರಸನೊಬ್ಬ ಅತಿ ಪುರಾತನ ಕಾಲದಲ್ಲಿ ಆಚರಿಸಿದ ಮಹಾದಾನದ ಶ್ರೇಯಸ್ಸು ಕಳಿಂಗದ ಖಾರವೇಳನಿಗೆ ಸಲ್ಲುವುದು.

ಎರಡು ಬಾರಿ ಅಶ್ವಮೇಧವನ್ನಾಚರಿಸಿ, ನಂಬಲಸಾಧ್ಯವೆನಿಸುವಷ್ಟು ಸಂಖ್ಯೆಯ ಪಶುಗಳನ್ನು, ಗ್ರಾಮಗಳನ್ನು, ಕಾರ್ಷಾಪಣ (ಬಂಗಾರದ ನಾಣ್ಯ) ಮುಂತಾದವನ್ನು ವಿತರಿಸಿ, ಈ ಮಹಾದಾನವನ್ನು ದಕ್ಷಿಣದಲ್ಲಿ ಪ್ರಾರಂಭಿಸಿದವನು ಶಾತವಾಹನ ಅರಸ ಶಾತಕರಣಿ. ನಾನಾಘಾಟ್ ಶಾಸನದಲ್ಲಿ ಈತನ ಮತ್ತು ಈತನ

ಕುಟುಂಬದವರು ಆಚರಿಸಿದರೆನ್ನಲಾದ ಮಹಾದಾನಗಳ ಒಂದು ದೊಡ್ಡ ಪಟ್ಟಿಯೇ ಇದೆ. ಇದು ಎರಡು ಅಶ್ವಮೇಧ, ಒಂದು ರಾಜಸೂಯ, ಗರ್ಗಾತಿರಾತ್ರ, ಅಗ್ನ್ಯಾಧೇಯ, ಅನಾರಂಭಣೀಯ, ಅಂಗಾರಿಕ, ಸಪ್ತದಶಾತಿರಾತ್ರ, ಭಗಾಲದಶರಾತ್ರ, ಗವಾಮಯನ, ಶತಾತಿರಾತ್ರ, ಆಂಗೀರಸಾತಿರಾತ್ರ, ಚ್ಛಂದೋಮಪವಮಾನಾತಿರಾತ್ರ, ಅಂಗೀರಸಾಮಯನ, ತ್ರಯೋದಶಾತಿರಾತ್ರ, ಮತ್ತು ದಶರಾತ್ರ ಒಳಗೊಂತ್ತು.[೪] ಅಶ್ವಮೇಧದೊಡನೆ ಇನ್ನೂ ಕೆಲವು ಮಹಾದಾನಗಳನ್ನು ದಖ್ಖಣದ ಪೂರ್ವಾರ್ಧದಲ್ಲಿ ಇಕ್ಷ್ವಾಕು, ಆನಂದ, ಸಾಲಂಕಾಯನ, ವಿಷ್ಣುಕುಂಡಿ, ಪಲ್ಲವರು ಮುಂದುವರಿಸಿದರೆ, ಪಶ್ಚಿಮಾರ್ಧದಲ್ಲಿ ಕದಂಬರು, ಬಾದಾಮಿ ಚಾಳುಕ್ಯರು, ಗಂಗರು, ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಳುಕ್ಯರು ಮುಂದುವರಿಸಿದರು. ಅಲ್ಲದೆ ವಾಕಾಟಕರೂ ಅವರ ದಖ್ಖಣದ ಬಂಧುವರ್ಗದವರೂ (ಬಾರಶಿವನಾಗ ಮುಂ.). ತಮ್ಮ ಕೊಡುಗೆಯನ್ನು ಇದಕ್ಕೆ ಸೇರಿಸಿದರು. ಇವರಲ್ಲಿ ಕೆಲವರು ಅಶ್ವಮೇಧವನ್ನು ಮಾತ್ರವಲ್ಲದೆ, ಅಗ್ನಿಷ್ಟೋಮ-ವಾಜಪೇಯ (ಇಕ್ಷ್ವಾಕು), ಹಿರಣ್ಯಗರ್ಭ-ಗೋಸಹಸ್ರ (ಆನಂದ), ಪೌಂಡರಿಕ-ಬಹುಸುವರ್ಣ-ಅಗ್ನಿಷ್ಟೋಮ-ಹಿರಣ್ಯಗರ್ಭ (ವಿಷ್ಣುಕುಂಡಿ), ಹಿರಣ್ಯಗರ್ಭ-ತುಲಾಪುರುಷ (ರಾಷ್ಟ್ರಕೂಟ), ಆಚರಿಸಿ ಅಪಾರ ಸಂಪತ್ತನ್ನು ದಾನಮಾಡಿದ್ದನ್ನು ದಾಖಲಿಸಲಾಗಿದೆ.

ಈ ಬಗೆಯ ಆಚರಣೆಗಳು ಈ ಕಾಲದ ಕನ್ನಡ ಶಾಸನಗಳ ಶುಭೋಕ್ತಿಗಳಲ್ಲಿ ಪ್ರತಿಬಿಂಬಿತವಾಗಿವೆ. ಉದಾಹರಣೆಗೆ –

'ಇದಂ ಸಲಿಪೋಂಗೆ ಅಶ್ವಮೇಧದ ತೊಲೆ(ತುಲಾ) ಪುರುಷದ ಹಿರಣ್ಯ ಗರ್ಭದ ಫಲ...' (೬೪೮)

'ಇದ ಕಾ[ದೊಂ]ಗೆ ಅಶ್ವಮೇಧದ ಫಲಮಕ್ಕು ಹಿರಣ್ಯಗರ್ಭದ ಫಲಮಕ್ಕು..'. (೫೫೬)

'ಈ ಧರ್ಮಮಂನ್ ಅ[ಉ?]ಳಿಯಿಸಿದಾತಂ ತುಳಾಪುರುಷನ್ ಇಟ್ಟ್ದ ಅಶ್ವಮೇಧಂ ಗೈಯ್ವ ಫಳಮನ್ ಎಯ್ದುವಂನ್' (೧೨೬೫)

'ಇದಂ ನಡೆಸಿದಾತಂ ತುಲಾಪುರುಷಮ್ ಇಟ್ಟಿ ಆತಮ್ ಅಶ್ವಮೇಧ ಯಜ್ಞಂ ಗೆಯ್ದ ಫಲಮನ್ ಎಯ್ದುವರ್' (೧೩೩೧)

'ಇದಂ ಕಾದಾತಂಗ್ ಅಶ್ವಮೇಧಂ ತುಳಾಪುರುಷಮ್ ಇಟ್ಟ್‌ಫಳ' (೧೪೮೧೫)

ಅಶ್ವಮೇಧಕ್ಕಿದ್ದ ಅಗ್ರಸ್ಥಾನ ಮತ್ತು ಅದರೊಡಗೂಡಿ ಬರುತ್ತಿದ್ದ ಇನ್ನೂ ಕೆಲವು ದಾನಗಳ ಚಿತ್ರ ಇಲ್ಲಿ ಸ್ಪಷ್ಟವಾಗಿ ಮೂಡಿದೆ.

ಒಮ್ಮೆ ಮಾತ್ರ ಅಶ್ವಮೇಧ ಆಚರಿಸಿ ತೃಪ್ತರಾಗದೆ ಇನ್ನೂ ಹೆಚ್ಚಿನ ಪುಣ್ಯಾರ್ಜನೆಗಾಗಿ ಎರಡು (ಶಾತವಾಹನ), ನಾಲ್ಕು (ವಾಕಾಟಕರು), ಹತ್ತು (ಭಾರಶಿವನಾಗ), ಹನ್ನೊಂದು (ವಿಷ್ಣುಕುಂಡಿ), ಹದಿನೆಂಟು (ಕದಂಬ?) ಬಾರಿ ಇದನ್ನಾಚರಿಸಿದವರ ಆಚರಿಸಿದವರ ಹೆಸರುಗಳಿವೆ. ಇದನ್ನೇ ಮಾರ್ದನಿಸುವಂತೆ, 'ಅಷ್ಟಗುಣ' (೮೪೩;೮೪೪), 'ದಶಗುಣ' (೨೧೬), 'ಪದಿವೇಣ್' (೧೨೮೭), ಸಹಸ್ರ (೧೪೯೩), ಕೋಟಿ (೬೦೧) ಅಶ್ವಮೇಧಗಳನ್ನಾಚರಿಸಿ ಪುಣ್ಯಗಳಿಸಿಕೊಳ್ಳುವ ಶುಭೋಕ್ತಿಗಳು ಈ ಕಾಲದ ಕನ್ನಡ ಶಾಸನಗಳಲ್ಲಿವೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ೯ನೆಯ ಶತಮಾನದ ಉತ್ತರಾರ್ಧದಿಂದ ೧೦ನೆಯ ಶತಮಾನದಂತ್ಯದವರೆಗಿನ ಕನ್ನಡ ಶಾಸನಗಳ ಶುಭೋಕ್ತಿಗಳಲ್ಲಿ ಬರುವಷ್ಟು ಸಂಖ್ಯೆಯ ಮಹಾದಾನಗಳ ಪ್ರಸ್ತಾಪ ದೇಶದ ಇನ್ನಾವ ಭಾಷೆಯ ಸಮಕಾಲೀನ ಶಾಸನಗಳಲ್ಲಿ ಬರುವುದಿಲ್ಲ ಎಂಬುದು.

ಅಶ್ವಮೇಧ ದಾನದಿಂದ ಗಳಿಸಬಹುದಾದ ಪುಣ್ಯಫಲದ ನಂಬಿಕೆ ಎಷ್ಟೊಂದು ಆಳವಾಗಿ ಬೇರುಬಿಟ್ಟಿತ್ತು ಮತ್ತು ಅದು ಎಷ್ಟು ವ್ಯಾಪಕವಾಗಿ ಹರಡಿತ್ತು ಎಂಬುದನ್ನು ಈ ಕಾಲದ ಶುಭೋಕ್ತಿಗಳು ತೆರೆದಿಡುವ ಬಗೆ ಇಂತಿದೆ:

**ಕಾಲಾಧಾರಿತ ಹಂಚಿಕೆ:** ಕ್ರಿ.ಶ. ೪೫೦-೮೦೦: ೭; ೮೦೦-೯೦೦: ೧೦; ೯೦೦-೧೦೦೦: ೧೭ = ಒಟ್ಟು ೩೪.

**ರಾಜ್ಯಾಧಾರಿತ ಹಂಚಿಕೆ:** ಗಂಗ: ೧; ಬಾದಾಮಿ ಚಾಳುಕ್ಯ: ೨; ನೊಳಂಬ ಪಲ್ಲವ: ೪; ಕದಂಬ: ೧: ಬಾಣ; ೨; ಅಳುಪ; ಮಹಾವಳಿ: ೧; ಸಾಂತರ: ೧; ಚೋಳಪರಕೇಶರಿವರ್ಮ: ೧: ಕಲ್ಯಾಣಿ ಚಾಳುಕ್ಯ: ೨; ರಾಷ್ಟ್ರಕೂಟ: ೯. ಒಟ್ಟು ೨೭ (ಉಳಿದ ಶಾಸನಗಳ ರಾಜಮನೆತನದ ವಿವರ ಲಭ್ಯವಿಲ್ಲ)[೫]

ವೈದಿಕ ಮೌಲ್ಯವನ್ನು ಸವಕಳಿಗೊಳಿಸಿಕೊಂಡ ಅಶ್ವಮೇಧವು ಇಷ್ಟೊಂದು ಗಟ್ಟಿಯಾಗಿ ಸ್ಮೃತಿಪಟಲದಲ್ಲಿ ನಿಲ್ಲಲು ಕಾರಣ ಅದೊಂದು ಆಡಂಬರಪೂರ್ಣ ಯಾಗವಾಗಿದ್ದು ಮಾತ್ರವಲ್ಲದೆ ಸಾಮ್ರಾಟತ್ವವನ್ನು ಅಥವಾ ಸ್ವಾತಂತ್ರ ಆಳ್ವಿಕೆಯನ್ನೂ ಸಂಕೇತಿಸುವ ರಾಜ ಘೋಷಣೆಯೂ ಆಗಿದ್ದು. ಜನಮೇಜಯನೆಂಬ ಐತಿಹ್ಯದ ಅರಸನ ನಂತರ ಯಾರೂ ಆಚರಿಸದ ಈ ಯಾಗವನ್ನು ಮೌರ್ಯೋತ್ತರ ಕಾಲದಲ್ಲಿ ಪುಷ್ಯಮಿತ್ರಸುಂಗನು ಪುನರುತ್ಥಾನಗೊಳಿಸಿದನೆಂಬುದನ್ನು ಈಗಾಗಲೇ ಗಮನಿಸಿದ್ದೇವೆ. ವೈದಿಕ ನಿಯಮಗಳನ್ನು ಭಾಗಶಃ ಪಾಲಿಸಿ, ದಿಗ್ವಿಜಯ ಕೈಗೊಂಡ ಏಕೈಕ ಐತಿಹಾಸಿಕ ವ್ಯಕ್ತಿ ಎಂದರೆ ಸಮುದ್ರಗುಪ್ತನೆನ್ನಬಹುದು; ಉಳಿದವರೆಲ್ಲರೂ ಸಾಂಕೇತಿಕವಾಗಿ ಮಾತ್ರ ಇದನ್ನು ಪೂರೈಸಿ ಸಾಮ್ರಾಟತ್ವವನ್ನು ಘೋಷಿಸಿಕೊಂಡವರು ಎನಿಸುವರು. ದಕ್ಷಿಣದಲ್ಲಿ ಮೊದಲಿಗನೆನಿಸಿದ ಶಾತವಾಹನ ಶಾತವರ್ಣಿ ಕೂಡಾ ಇದನ್ನು ಸ್ವತಃ ಕೈಗೊಳ್ಳಲಿಲ್ಲ. ಈತನ ಮರಣಾನಂತರ ಅವನ ಕುಟುಂಬ ವರ್ಗದವರು ಈತನ ಹೆಸರಿನಲ್ಲಿ ಘೋಷಿಸಿದ್ದನ್ನು ನಾನಾಘಾಟ್ ಶಾಸನದಲ್ಲಿ ಬರುವ "ಯನೇಹಿ ಇಥಮ್"

ಎಂಬ ಪದವನ್ನಾಧರಿಸಿ ಪ್ರತಿಪಾದಿಸಲಾಗಿದೆ. ಬರುಬರುತ್ತಾ ಇದೊಂದು ಆಡಂಬರಪೂರ್ಣ ಗೃಹವಿಧಿಯಾಗಿ ಪರಿವರ್ತನೆಗೊಂಡು, ಪುರೋಹಿತ ವರ್ಗಕ್ಕೆ ಧಾರಾಳವಾಗಿ ಕೊಟ್ಟು ಕೊಳ್ಳುವ ಸರಕಾಯಿತು. ದಾನವನ್ನು ಹೆಚ್ಚಿಸಿದಷ್ಟು ಯಜ್ಞ ಸಂಖ್ಯೆಯನ್ನು ಹೆಚ್ಚಿಸಿ ಶಾಸನ ಬರೆಸುವುದು ಎಷ್ಟು ಸುಲಭವಾಗಿತ್ತೆಂಬುದನ್ನು ಆಂಧ್ರದ ವಿಷ್ಣುಕುಂಡಿಗಳು ಹನ್ನೊಂದು ಪಟ್ಟು ದಾನಕೊಟ್ಟು ಹನ್ನೊಂದು ಅಶ್ವಮೇಧ ಪೂರೈಸಿದ ಅಗ್ಗಳಿಕೆಯನ್ನು ಖರೀದಿಸುವಲ್ಲಿ ಯಶಸ್ವಿಯಾಗಿದ್ದು ಒಂದು ಉತ್ತಮ ನಿದರ್ಶನ. ಒಂದಕ್ಕಿಂತ ಹೆಚ್ಚು ಅಶ್ವಮೇಧವನ್ನು ಆಚರಿಸಿದ ಘೋಷಣೆಗಳು ಬರುವೆಡೆಯಲ್ಲೆಲ್ಲಾ ಇಂತಹ ಅನುಮಾನಗಳು ಇದ್ದೇ ಇವೆ.

ಹಿರಣ್ಯಗರ್ಭ ತುಲಾಪುರುಷ ಮತ್ತು ಗೋಸಹಸ್ರ ಮಹಾದಾನಗಳು ವಾಸ್ತವದಲ್ಲಿ ಅಶ್ವಮೇಧದಷ್ಟು ಅಪಮೌಲ್ಯಕ್ಕೊಳಗಾಗದಿದ್ದರೂ ಸರಳೀಕರಣಕ್ಕೊಳಗಾಗಿದ್ದನ್ನು ಅಲ್ಲಗಳೆಯುವಂತಿಲ್ಲ. 'ಗೋಸಾಸ' ಅಥವಾ ಗೋಸಹಸ್ರದಲ್ಲಿ, ಉತ್ತರ ಪದವಾದ 'ಸಹಸ್ರ'ವು ಒಂದು ಪ್ರತ್ಯಯವಾಗಿ ಮಾತ್ರ ಉಳಿದುಕೊಂಡಿತ್ತು. ಒಂದೆರಡು ಗೋವುಗಳನ್ನು ದಾನ ಮಾಡಿದರೂ ಅದನ್ನು ಗೋಸಹಸ್ರವೆಂದು ಕರೆಯುವ ವಾಡಿಕೆ ಪ್ರಸಾರಕ್ಕೆ ಬಂದುದನ್ನು ಅನೇಕ ಶಾಸನಗಳು ಬಹಿರಂಗಗೊಳಿಸುವುವು.

ಅಶ್ವಮೇಧದ ನಂತರ ಹೆಚ್ಚು ಸಂಖ್ಯೆಯಲ್ಲಿ ಶುಭೋಕ್ತಿಗಳಲ್ಲಿ ಕಾಣಿಸಿಕೊಳ್ಳುವುದು 'ತುಲಾಪುರುಷ'. ಆದರೆ ಮೊದಲ ಸಹಸ್ರಮಾನದಲ್ಲಿ ಇದರ ಆಚರಣೆ ತುಂಬಾ ಅಪರೂಪವಾಗಿತ್ತು. ಇದನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಿದವರು ರಾಷ್ಟ್ರಕೂಟ ಇಂದ್ರ ಮತ್ತು ಗೋವಿಂದ. ಇಂದ್ರನ ತುಲಾಪುರುಷ ದಾನದಲ್ಲಿ ಇಪ್ಪತ್ತೂವರೆ ಲಕ್ಷ ದ್ರಮ್ಮ (ಬಂಗಾರದ ನಾಣ್ಯ)ವಲ್ಲದೆ, ಅನೇಕ ಗ್ರಾಮಗಳೂ ಸೇರಿದ್ದವು; ಅಲ್ಲದೆ (ಪಲ್ಲವರು ಹಿಂದೆ ಕೊಟ್ಟಿದ್ದ ಆದರೆ ಆನಂತರ ಅನೂರ್ಜಿತಗೊಂಡಿದ್ದ) ೪೦೦ ಗ್ರಾಮಗಳನ್ನು ಪಾಟಲೀಪುತ್ರದ ಬ್ರಾಹ್ಮಣರಿಗೆ ಈ ಸಂದರ್ಭದಲ್ಲಿ ಊರ್ಜಿತಗೊಳಿಸಬೇಕಾಯಿತು. ವಿಜಯನಗರದರಸ ಕೃಷ್ಣದೇವರಾಯನಿಂದ ಆಚರಿಸಲ್ಪಟ್ಟು, ಇಂದಿಗೂ ರೂಢಿಯಲ್ಲಿರುವ ಈ ದಾನದಲ್ಲಿ ತುಲನೆಗೊಳಗಾಗುವ ವಸ್ತು ಮಾತ್ರ ಸುವರ್ಣ ನಾಣ್ಯಗಳಾಗಿ ಉಳಿದಿಲ್ಲ.

ಹಿರಣ್ಯಗರ್ಭ ದಾನವನ್ನು ಹೆಚ್ಚು ಸರಳೀಕರಿಸಲಾಗಲೀ ಅಪಮೌಲ್ಯಗೊಳಿಸಲಾಗಲೀ ಸುಲಭವಾಗದ ಕಾರಣ ಮೊದಲ ಸಹಸ್ರಮಾನದಲ್ಲಿ ಇದರ ಆಚರಣೆಯೇ ಅಪರೂಪವಾಯಿತೆನಿಸುವುದು. ತುಲಾಪುರುಷದಂತೆ ಇದನ್ನಾಚರಿಸಲೂ ಸಂಪತ್ತು ಬೇಕಿತ್ತು. ಮುರಜ ಸದೃಶ ಹೊರಮೈ ಮತ್ತು ಅಷ್ಟದಳ ಕಮಲಾಕಾರದ (೭೨ X ೪೮ ಅಂಗುಲ ಪ್ರಮಾಣದ) ಒಳಮೈ ವಿನ್ಯಾಸದ ಶುದ್ಧ ಸುವರ್ಣ ಕರಂಡಕವನ್ನು ಮಾಡಿಸಿ, ಬ್ರಹ್ಮ ಮತ್ತು ಧರ್ಮರಾಜನ ಸುವರ್ಣ ಮೂರ್ತಿಗಳನ್ನು ಕೈಯಲ್ಲಿ ಹಿಡಿದು ಅದರಲ್ಲಿ ಸ್ವತಃ ಕುಳಿತು, ಗುರುವಿನ ಸುದೀರ್ಘ ಮಂತ್ರ ಘೋಷಣೆಯಾದನಂತರ ಮೊದಲು ತಾಯಿ ಗರ್ಭದಿಂದ ಹೊರಬಂದವನು ಈಗ ದೈವೀ ಕಾಯವನ್ನು ಪಡೆದುಕೊಂಡು ಹಿರಣ್ಯ ಗರ್ಭದಿಂದ ಹೊರಬಂದು, ಹಿರಣ್ಯ ಕರಂಡಕವನ್ನಲ್ಲದೆ ಅದರೊಡನೆ ಇನ್ನೂ ಹಲವಾರು ಅನರ್ಘ್ಯ ವಸ್ತುಗಳನ್ನು ಸೇರಿಸಿ, ಗುರುವಿಗೂ ಉಳಿದ ಬ್ರಾಹ್ಮಣರಿಗೂ ದಾನಮಾಡಬೇಕಾಗಿದ್ದ ಈ ಆಚರಣೆಯನ್ನು ಪೂರ್ತಿಗೊಳಿಸಲು ಎಷ್ಟು ಮೊತ್ತದ ಸುವರ್ಣ ಬೇಕಿತ್ತು ಎಂಬುದನ್ನು ಊಹಿಸಲೂ ಸಾಧ್ಯವಾಗದು. ಇದನ್ನಾಚರಿಸಿದರೆನ್ನಲಾದ ಇತಿಹಾಸ ಪುರುಷರಲ್ಲಿ ಆನಂದ (೩-೪ನೆಯ ಶತಮಾನ), ವಿಷ್ಣುಕುಂಡಿ (೬ನೆಯ ಶತಮಾನ) ಮತ್ತು ರಾಷ್ಟ್ರಕೂಟ (೮-೯ನೆಯ ಶತಮಾನ) ವಂಶಜರ ಹೆಸರುಗಳು ಇತಿಹಾಸದ ಪುಟ ಸೇರಿಕೊಂಡಿವೆ. ತನ್ನ ವಂಶದ ಮೂಲಪುರುಷ ದಂತಿದುರ್ಗನು ಉಜ್ಜೈನಿಯಲ್ಲಿ ಹಿರಣ್ಯಗರ್ಭದಾನಗೈದನೆಂದು ರಾಷ್ಟ್ರಕೂಟ ಅಮೋಘವರ್ಷನು ಸಂಜನ್ ತಾಮ್ರಪಟದಲ್ಲಿ ಹೇಳಿಕೊಂಡಿರವನು. ಇದು ಏನೇ ಇರಲಿ, ಕನ್ನಡ ಶುಭೋಕ್ತಿಗಳಲ್ಲಿ ಹಿರಣ್ಯಗರ್ಭ ಮೊದಲು ಕಾಣಿಸಿಕೊಳ್ಳುವುದು ರಾಷ್ಟ್ರಕೂಟರ ಸಮಕಾಲೀನನಾದ ಬಾಣ ಚಂಡಿಯಣ್ಣನ ಅನಂತಪುರ ಜಿಲ್ಲೆಯ ಸೆನಗಲ ಗುಡೂರಿನ ಕನ್ನಡ ಶಾಸನದಲ್ಲಿ (೫೫೬), ಮತ್ತೊಮ್ಮೆ ಮಾತ್ರ ಬಂದಿರುವುದು ಇದೇ ರಾಜವಂಶದ ಧವಳೆಯರಸನ ಕ್ರಿ.ಶ ೮೮೩ನೆಯ ಕಡಪ ಜಿಲ್ಲೆಯ ಪೊಟ್ಟಿಪಾಡುವಿನ ಕನ್ನಡ ಶಾಸನದಲ್ಲಿ (೬೪೮).[೬]

**ಟಿಪ್ಪಣಿಗಳು:**

೧. ಇದು ಮತ್ತು ಈ ಬಗೆಯಲ್ಲಿ ಮುಂದೆ ಬರುವ ಸಂಖ್ಯೆಗಳು **ಮೊದಲ ಸಹಸ್ರಮಾನದ ಕನ್ನಡದ ಶಾಸನಗಳು** (ಮೊಸಕಶಾ) ಅಚ್ಚಿನಲ್ಲಿರುವ ಸಂಕಲನದ ಸಂಖ್ಯೆಯನ್ನು ಸೂಚಿಸುವುವು.

೨. ಇದರ ಹೆಚ್ಚಿನ ವಿವರ ಇಂತಿದೆ: ೬ನೆಯ ಶತಮಾನ: (೯, ೧೩, ೧೭)= ೩; ೭ನೆಯ ಶತಮಾನ: (೩೬, ೧೧೮, ೧೨೫)= ೩; ೭-೮ನೆಯ ಶತಮಾನ: (೨೧೬)= ೧; ೮ನೆಯ ಶತಮಾನ: (೨೫೨, ೨೭೭, ೨೭೯, ೨೮೦, ೨೮೨, ೩೧೩, ೩೨೮, ೩೩೬, ೩೩೯, ೩೫೩, ೪೦೦, ೪೧೬, ೪೯೧)= ೧೩; ೮-೯ನೆಯ ಶತಮಾನ: (೫೧೭, ೫೩೧)= ೨; ೯ನೆಯ ಶತಮಾನ: (೫೫೬, ೫೭೮, ೫೮೩, ೫೯೭, ೫೯೮, ೫೯೯, ೬೦೧, ೬೧೪, ೬೧೯, ೬೨೯, ೬೪೮, ೬೭೫, ೬೮೩, ೬೮೮, ೬೯೦, ೬೯೯, ೮೦೨, ೮೧೦, ೮೧೯, ೮೨೦, ೮೨೫, ೮೩೭, ೮೪೨, ೮೪೩, ೮೪೪)= ೨೫; ೯-೧೦ನೆಯ ಶತಮಾನ: (೮೮೩, ೮೯೦)= ೨; ೧೦ನೆಯ ಶತಮಾನ: (೯೨೪, ೯೨೬, ೯೭೮, ೯೮೭, ೧೦೦೦, ೧೦೧೭, ೧೦೬೬, ೧೦೮೬, ೧೦೯೨, ೧೦೯೩, ೧೦೯೫, ೧೧೦೫, ೧೧೨೫, ೧೧೩೭, ೧೧೩೮, ೧೧೫೦, ೧೧೫೯, ೧೧೬೧, ೧೧೯೪, ೧೨೦೮, ೧೨೧೧, ೧೨೬೧, ೧೨೬೩, ೧೨೬೭, ೧೨೮೭, ೧೨೯೬, ೧೨೯೯, ೧೩೦೦, ೧೩೨೪, ೧೩೩೧,

೧೩೪೫, ೧೩೫೮, ೧೩೯೨, ೧೩೯೩, ೧೪೦೪, ೧೪೧೫, ೧೪೨೧, ೧೪೩೮, ೧೪೮೨, ೧೫೬೦, ೧೫೬೪, ೧೫೭೭, ೧೫೮೪)= ೪೩.

೩. ಈ ಅಭ್ಯಾಸ ಕನ್ನಡ ಶಾಸನಗಳಿಗೆ ಸೀಮಿತವಾಗಿರುವುದರಿಂದ ಇಲ್ಲಿ ಬರುವ (ಪ್ರಥಮ) ಉಲ್ಲೇಖಗಳ ಚಿತ್ರ ಕನ್ನಡ ನಾಡಿನ ಸಮಗ್ರ ಶಾಸನ (ಪ್ರಾಕೃತ, ಸಂಸ್ಕೃತಗಳನ್ನೊಳಗೊಂಡು) ಮಾಡುವ ಅಧ್ಯಯನದಿಂದ ಹೊರಹೊಮ್ಮಬಹುದಾದ ಚಿತ್ರಕ್ಕಿಂತ ಭಿನ್ನವಾಗಿರಲು ಸಾಧ್ಯ. ಆದರೆ ಅಲ್ಲಿಯವರೆಗೂ ಕನ್ನಡ ಶಾಸನಗಳ ವೈಶಿಷ್ಟ್ಯತೆಯನ್ನು ಗುರುತಿಸುವುದನ್ನು ತಡೆಹಿಡಿಯುವ ಅವಶ್ಯಕತೆ ಇಲ್ಲ.

೪. ಆರಂಭಕಾಲದ ಅಶ್ವಮೇಧ ಆಚರಣೆಯಲ್ಲಿ ಶಾತಕರಣಿ ಮತ್ತು ಕ್ಷತ್ರಪ ವೃಷಭದಾತರ ಆಚರಣೆಗಳು ತುಂಬಾ ಅದ್ದೂರಿಯಾಗಿದ್ದವೆಂಬುದಕ್ಕೆ ಅವರು ಮಾಡಿದ ೫೦,೦೦೦ ಮತ್ತು ೩೦,೦೦೦ ಕವಿಲೆಗಳ ದಾನ, ಒಂದೂವರೆ ಲಕ್ಷ ಕಾರ್ಷಪಣಗಳ ವಿತರಣೆ, ಅನೇಕ ಗ್ರಾಮಗಳ ಕೊಡುಗೆ, ಈ ಮುಂತಾದವು ನಿದರ್ಶನ.

೫. ಇದಕ್ಕೆ ಸಂಬಂಧಪಟ್ಟ ಕನ್ನಡ ಶಾಸನಗಳ ಸಂಖ್ಯೆ ಇಂತಿವೆ: ೫ನೆಯ ಶತಮಾನ– (ಕ್ರಿ.ಶ. ೪೫೦–೮೦೦ ಕಾಲಾವಧಿ): ಶೂನ್ಯ; ೬ನೆಯ ಶತಮಾನ: ಕದಂಬ(೧೩); ೭–೮ನೆಯ ಶತಮಾನ:? (೨೧೬); ೮ನೆಯ ಶತಮಾನ: ಬಾದಾಮಿ ಚಾಳುಕ್ಯ (೪೦೦):? (೪೧೬); ೮–೯ನೆಯ ಶತಮಾನ: ನೊಳಂಬ (೫೧೭), ? (೫೩೧), ಬಾಣ (೫೫೬): ಒಟ್ಟು ೭. ೯ನೆಯ ಶತಮಾನ: ರಾಷ್ಟ್ರಕೂಟ (೮೬೫, ೮೬೯, ೮೭೦, ೮೭೨, ೮೮೩), ಬಾಣ (೮೮೩), ಗಂಗ (೬೯೯), ಮಲ್ಲರಾಜ ? (೮೦೨), ನೊಳಂಬ ಪಲ್ಲವ (೮೧೯; ೮೨೦) ಕದಂಬ (೮೩೭), ಆಳುಪ (೮೪೨, ೮೪೩, ೮೪೪), ಇತರೆ: ೮೨೫= ಒಟ್ಟು ೧೫. ೧೦ನೆಯ ಶತಮಾನ: ಮಹಾವಳಿ (೧೦೦೦), ಸಾಂತರ (೯೭೮), ಚೋಳಪರಕೇಶರಿವರ್ಮ (೧೦೮೬), ಕಲ್ಯಾಣಿ ಚಾಳುಕ್ಯ (೧೩೯೩; ೧೪೧೫), ರಾಷ್ಟ್ರಕೂಟ (೧೦೧೭; ೧೦೯೩; ೧೧೦೫; ೧೨೬೧), ಮತ್ತು ಇತರೆ (೮೫೦; ೧೫೭೭)= ಒಟ್ಟು ೧೧.

೬. ಆಂಧ್ರಪ್ರದೇಶದಿಂದ ಆಳಿದ ಮೊದಮೊದಲ ಅರಸರು– ಇಕ್ಷ್ವಾಕು, ಆನಂದ, ಸಾಲಂಕಾಯನ, ವಿಷ್ಣುಕುಂಡಿ– ಮಹಾದಾನಗಳನ್ನು ಆಚರಿಸಿದ ಶಾಸನಿತ ಉಲ್ಲೇಖಗಳಿದ್ದರೂ ಅಶ್ವಮೇಧದ ಘೋಷಣೆಗಳು ಶುಭೋಕ್ತಿಯಾಗಿ ಅವರ ಕೆಲವೇ ಕೆಲವು ಶಾಸನಗಳಲ್ಲಿ ಕಾಣಿಸಿಕೊಂಡಿವೆ (೬೭೦–೮೦ರ EI VII ಪು.೨೦೩–೨೦೬; ಸು ೮ನೆಯ ಶತಮಾನದ JTA ಪು. ೧೫೮–೧೬೨; ೮೪೮ರ EI XIX ಪು. ೨೭೧–೭೫ ೮೯೦ನೆಯ EI XV ಪು. ೧೫೦–೧೫೯). ಅಂದರೆ ಸಮಕಾಲೀನ ಕನ್ನಡ ಶಾಸನಗಳಿಗೆ ಹೋಲಿಸಿದರೆ, ಸಂಖ್ಯೆಯಲ್ಲಿ ಅವು ತುಂಬಾ ಕಡಿಮೆ. ಮೊದಲ ಸಹಸ್ರಮಾನದ ತೆಲುಗು ಶುಭೋಕ್ತಿಗಳಲ್ಲಿ ತುಳಾಪುರುಷ, ಹಿರಣ್ಯಗರ್ಭ, ಗೋಸಹಸ್ರ, ಮುಂತಾದವುಗಳ ಪ್ರಸ್ತಾಪ ಇಲ್ಲವೇ ಇಲ್ಲವೆನ್ನುವಂತಹ ಚಿತ್ರವಿದೆ.

❑❑

# ‘ವಿರೂಪಾಕ್ಷ ಸಂಗ’ – ಬಸವಣ್ಣನ ಗೃಹ ಸಂಸಾರದ ಮೇಲೊಂದು ಕ್ಷ ಕಿರಣ

– ಎಂ. ಚಿದಾನಂದಮೂರ್ತಿ

ಬಸವಣ್ಣನವರ ಧರ್ಮಪತ್ನಿಯರಾದ ಗಂಗಾಬಿಕೆ, ನೀಲಲೋಚನೆಯರು ಅಕ್ಕತಂಗಿಯರು – ಇವರು ಬಿಜ್ಜಳನ ಬಳಿ ಅಧಿಕಾರಿಗಳಾಗಿದ್ದ ಬಲದೇವ ಮತ್ತು ಸಿದ್ಧರಸ ಎಂಬ ಸೋದರರ ಹೆಣ್ಣು ಮಕ್ಕಳು. (ನೀಲಲೋಚನೆಗೆ ‘ಮಾಯಿದೇವಿ’ ಎಂಬ ಇನ್ನೊಂದು ಹೆಸರಿತ್ತೆಂದು ಹೇಳಲು ಅವಕಾಶಗಳಿವೆ) ಅವರಿಬ್ಬರೂ ಬಸವಣ್ಣನಿಗೆ ಎಲ್ಲ ರೀತಿಗಳಿಂದ ಅನುರೂಪರಾಗಿದ್ದ ವಿದ್ಯಾವಂತ ಪತ್ನಿಯರಾಗಿದ್ದರು. (ನೀಲಲೋಚನೆಯು ಬಿಜ್ಜಳನ ಸಾಕು ತಂಗಿ ಎಂದು ಕೆಲವರು ದುರ್ಬಲ ಆಧಾರಗಳೊಡನೆ ಪ್ರತಿವಾದಿಸಿದ್ದರೂ ಅದಿನ್ನೂ ಕೇವಲ ಊಹೆ, ಕಲ್ಪನೆಯಾಗಿಯೇ ಉಳಿದಿದೆ) ಗಂಗಾಂಬಿಕೆ "ಗಂಗಾಪ್ರಿಯ ಕೂಡಲ ಸಂಗಮಯ್ಯಾ" ಎಂಬ ಅಂಕಿತದೊಡನೆ, ನೀಲಲೋಚನೆ “ಸಂಗಯ್ಯ” ಎಂಬ ಅಂಕಿತದೊಡನೆ ವಚನ ಬರೆದಿದ್ದಾರೆ. ಅವೆರಡೂ ಅಂಕಿತಗಳು ಬಸವಣ್ಣನ "ಕೂಡಲ ಸಂಗಮ ದೇವ" ಅಂಕಿತ ಆಧರಿಸಿ ರೂಪುಗೊಂಡವು ಎಂಬಲ್ಲಿ ಅನುಮಾನವಿಲ್ಲ.

ಗಂಗಾಂಬಿಕೆಯ ವಚನಗಳನ್ನು ನೋಡಿದರೆ ಅವಳು ಒಬ್ಬ ಸಾಧಕಿ, ಅನುಭಾವಿ ಎಂಬುದು ಸ್ಪಷ್ಟವಾಗುತ್ತದೆ. ನೀಲಲೋಚನೆಯೂ ಅಷ್ಟೇ.

ಇಬ್ಬರಿಗೂ ಮಕ್ಕಳಾದರೂ ಇಬ್ಬರೂ ಬಾಲ್ಯದಲ್ಲಿಯೇ ತೀರಿ ಹೋದರೆಂದು ಹೇಳಲು ಆಧಾರಗಳಿವೆ. ಆ ನೋವನ್ನು ಇಬ್ಬರೂ ಸಾಧನೆಯ ಭಕ್ತಿ ಭಾಗವಾಗಿ ಪರಿವರ್ತಿಸಿಕೊಂಡು ವಿರಾಗಗೊಂಡರು. ಅವರಲ್ಲಿ ನೀಲಲೋಚನೆಯು ಗಂಗಾಂಬಿಕೆಗಿಂತ ಹೆಚ್ಚು ಭಾವುಕಳು – ಅವಳು ಒಂದೆಡೆ ತನ್ನನ್ನು ‘ವಿಚಾರ ಪತ್ನಿ’ಯೆಂದು ಕರೆದುಕೊಂಡಿದ್ದಾಳೆ.

**ಪಾರ್ವತಿಯ ರೂಪ ಕಂಡು ಪರಶಿವನ ಸಂಗ ನಿಸ್ಸಂಗವಾಗಿ**
**ತಾಯಿ ಮಗನಸಂಗದಿಂದ ತನುವಳಿದು ನಿರಾಭಾರ ರೂಪವನೆಯ್ದಿ**
**ಬಸವನ ಅನುಭವದಿಂದ ವಿವರವ ಕಂಡು**
**ವಿಚಾರಪತ್ನಿಯಾದೆನಯ್ಯಾ ಸಂಗಯ್ಯಾ**

ಮೇಲ್ಕಂಡ ವಚನದ ನಿಜವಾದ ಧ್ವನಿತಾರ್ಥವನ್ನು ಗ್ರಹಿಸುವುದು ನನಗೆ ಕಷ್ಟವಾಗಿದೆ. ಪಾರ್ವತಿಯ ಸೌಂದರ್ಯವನ್ನು ಕಂಡ ಪರಶಿವನ ಸಂಗವು ನಿಸ್ಸಂಗವಾಯಿತು. ಎಂದರೆ ಪಾರ್ವತಿಯ ಸೌಂದರ್ಯವು ಶಿವನನ್ನು ಇಂದ್ರಿಯ ಭೋಗಿಯನ್ನಾಗಿಸಲಿಲ್ಲ. ಅದರ ಬದಲು ಅವನು ಇಂದ್ರಿಯ ನಿಗ್ರಹ ಮಾಡಿದ ತಪಸ್ವಿಯಾದ, ನಿಸ್ಸಂಗವಾದ, ಎಂದರೆ ತನ್ನ ಚೆಲುವನ್ನು ಕಂಡೂ ಬಸವ ಮೋಹಿತನಾಗಲಿಲ್ಲ, ನಿರ್ಮೋಹಿತನಾದ ಎಂದು ನೀಲಲೋಚನೆ ಇಲ್ಲಿ ಸೂಚಿಸಿರುವಂತೆ ಎರಡನೆಯ ಪಾದದ ಅರ್ಥವು ಹೀಗಿರಬಹುದು: ತಾಯಿಯಾದ ತಾನು ಮಗನನ್ನು ಕಳೆದುಕೊಂಡರೂ, ದೇಹಾಭಿಮಾನವನ್ನು ಅಳಿದು ‘ನಿರಾಭಾರಿ’ ಯಾದೆ – ಎಂದರೆ ತಾಯಿಯಾದ ತಾನು ಮಗನ ಸಾವಿನ ಯಾತನೆಯನ್ನು ‘ನಿರಾಭಾರಿ’ಯಾಗಲು ಬಳಸಿಕೊಂಡೆ ಎಂದು ತನ್ನನ್ನು ತಾನು ಸಂತೈಸಿಕೊಂಡಿರುವಂತಿವೆ. ಆ ಎಲ್ಲ ಸಹನೆ ತನ್ನ ಪತಿ ಬಸವಣ್ಣನ ಬದುಕಿನ ಅನುಭಾವಗಳ ಫಲ. ಅವನಿಂದ ಅದೆಲ್ಲವನ್ನೂ ತಾನು ಕಲಿತೆ ಎಂದು ನೀಲಲೋಚನೆ ಸೂಚಿಸಿದ್ದಾರೆ. ಆ ಎಲ್ಲ ದುಃಖಾನುಭವಗಳಿಂದ ತಾನು ‘ವಿಚಾರ ಪತ್ನಿ’ಯಾದೆ ಎಂದು ಹೇಳಿಕೊಂಡಿದ್ದಾಳೆ. ‘ವಿಚಾರ ಪತ್ನಿ (Intellectual consort) ಮಾತನ್ನು ಹೀಗೆ ವಿವರಿಸಬಹುದು. ನೀಲಲೋಚನೆ ಸ್ತ್ರೀ ನಿಜ: ಆದರೆ ಅವಳಿಗೆ ಪುರುಷನಷ್ಟೇ ವೈಚಾರಿಕ ಶಕ್ತಿಯಿತ್ತು. ಸರಿ ತಪ್ಪುಗಳನ್ನು ವಸ್ತುನಿಷ್ಠವಾಗಿ ವಿಮರ್ಶಿಸುವ ಮನೋಧರ್ಮ ಅವಳಲ್ಲಿದೆ – ಆ ಮನೋಧರ್ಮವು ಬಸವಣ್ಣನಿಂದ ಇನ್ನೂ ದೃಢಗೊಂಡಿತು. ಪುರುಷ–ಸ್ತ್ರೀಯರಿಗೆ ಸಮಾನ ಹಕ್ಕುಗಳಿವೆಯೆಂಬ ವಚನ ಚಳವಳಿಯ ತತ್ವಕ್ಕೆ ಸಂಪೂರ್ಣ ಬದ್ಧನಾಗಿದ್ದ ಬಸವಣ್ಣನ ಪತ್ನಿಯರೂ ಅಕ್ಷರಶಃ "ವಿಚಾರಪತ್ನಿ"ಯರಾಗಿದ್ದರು ಎಂಬುದು ಅತ್ಯಂತ ಗಮನಾರ್ಹ ಸಂಗತಿ. ನೀಲಮ್ಮ ತನ್ನ ಒಂದು ವಚನದಲ್ಲಿ "ಬಸವಯ್ಯನ ಮನೆಯ ತೊತ್ತಿನ ಮಗಳು" ಎಂದು ಹೇಳಿಕೊಂಡಿರುವುದು ಮೇಲಿನ ನನ್ನ ವಿವರಣೆಗೆ ಮೇಲ್ನೋಟಕ್ಕೆ ವಿರೋಧವಾಗಿದೆಯೆಂಬುದು ನಿಜ. ಆ ವಚನ ಹೀಗಿದೆ.

**ನಾನು ನಿಮ್ಮವಳಲ್ಲವಯ್ಯಾ, ನಾನು ಅನಿಮಿಷನರವಳು**
**ನಾನು ನಿಮ್ಮವಳಲ್ಲವಯ್ಯಾ, ನಾನು ಅಜಗಣ್ಣನವರವಳು**
**ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಭುವಿನ ಸಂತತಿಯವಳು**
**ನಾನು ನಿಮ್ಮವಳಲ್ಲವಯ್ಯಾ, ನಾನು ಮಾದಾರ ಚನ್ನಯ್ಯನ ಮೊಮ್ಮಗಳು**

# ೬/ಎ, ‘ಮಿಂಚು’, ೪ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಬೆಂಗಳೂರು ೫೬೦ ೦೪೦

ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಸಾದಿಗಳ ಮನೆಯ ಕೀಲುದೊತ್ತು
ನಾನು ನಿಮ್ಮವಳಲ್ಲವಯ್ಯಾ, ಸಂಗಯ್ಯಾ
ನಾನು ಬಸವಯ್ಯನ ಮನೆಯ ತೊತ್ತಿನ ಮಗಳು.

ನೀಲಲೋಚನೆ ತನ್ನ ಇಷ್ಟದೈವಕ್ಕೆ ಹೇಳುತ್ತಾಳೆ – ನಾನು ನಿನ್ನ ಕಡೆಯವಳಲ್ಲ ನಾನು ಅನಿಮಿಷ (ಅಲ್ಲಮನಿಗೆ ಗುಹೆಯಲ್ಲಿ ಇಷ್ಟಲಿಂಗ ದಯಪಾಲಿಸಿದ ಗುರುವಿನ ಹೆಸರು) ಅಜಗಣ್ಣ, ಅಲ್ಲಮಪ್ರಭು, ಮಾದಾರ ಚನ್ನಯ್ಯ, ಪ್ರಸಾದಿ (= ಪ್ರಸಾದಿ ಭೋಗಯ್ಯ) ಇವರಿಗೆ ಸೇರಿದವಳು, ಇವರ ದಾಸಿ; ಅಷ್ಟೇ ಅಲ್ಲ ನಾನು ಬಸವಣ್ಣನ ಮನೆಯ ದಾಸಿಯ ಮಗಳು ಎಂದು ಹೇಳಿಕೊಂಡಿದ್ದಾಳೆ. ಇಲ್ಲೆಲ್ಲ ಆ ಹಿರಿಯರ ಬಗ್ಗೆ ಅವಳಿಗಿರುವ ನಿಷ್ಕಲಂಕ ಶ್ರದ್ಧೆ, ಭಕ್ತಿ, ಗೌರವ ವ್ಯಕ್ತವಾಗಿರುವುದೇ ಹೊರತು, ತಾನು ಆ ಶ್ರೇಷ್ಠರು ಹೇಳಿದ್ದನ್ನೇ ಮಾಡುವ, ವ್ಯಕ್ತಿ ಸ್ವಾತಂತ್ರ್ಯವಿಲ್ಲದ ದಾಸಿ ಅಥವಾ ತೊತ್ತು ಎಂಬರ್ಥವಿಲ್ಲ. ನೀಲಲೋಚನೆ ತಾನು ಬಸವಣ್ಣನ "ವಿಚಾರ ಪತ್ನಿ" ಎಂದು ಹೇಳಿಕೊಂಡಿರುವುದೇ ಅವಳ ದೃಢ, ಸ್ಪಷ್ಟ ನಿಲುವು. ಎಂದರೆ, ಬಸವಣ್ಣ ತನ್ನ ಇಬ್ಬರು ಪತ್ನಿಯರಿಗೂ ನಡೆಯಲ್ಲಿ ಹಾಗೂ ನುಡಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ವಾತಾವರಣ ನಿರ್ಮಿಸಿದ್ದ; ಅವರೂ ಆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಹಜವಾಗಿಯೇ ವ್ಯಕ್ತಿಶಃ ಪಡೆದವರಾಗಿದ್ದರು. (ಅವರು ಹಿರಿಯ ಅಧಿಕಾರಿಗಳ ಮಕ್ಕಳು ಎಂಬುದು ಗಮನಿಸಬೇಕಾದ್ದು)

ಹಿಂದೆ ಹೇಳಿದಂತೆ ನೀಲಲೋಚನೆ ಒಬ್ಬ ಭಾವಜೀವಿ ಮತ್ತು ಅವಳ ವಚನಗಳಲ್ಲಿ ಅನೇಕವು ಬಸವಣ್ಣ ಐಕ್ಯನಾದ ಬಳಿಕ ಬರೆದಂಥವು. ಉದಾ:

ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು
ನಮ್ಮ ಬಸವಯ್ಯನ ನೆಲೆಮಾಡ ಕರುಮಾಡ*ವಾಯಿತ್ತು.
ನಮ್ಮ ಬಸವಯ್ಯ ಹೂವಿನ ರಥವನೇರಿದ
ನಮ್ಮ ಬಸವಯ್ಯ ಸಂಗಯ್ಯನಾದ
ಬಸವನ ರೂಪು ತದ್ರೂಪವಾಯಿತ್ತು

(* ಕರುಮಾಡ = ಉಪ್ಪರಿಗೆ. ಈ ವಚನವೂ ಗಮನಾರ್ಹ –

'ನಾಡಿನ ಹೆಣ್ಣುಗಳೆಲ್ಲ ಬನ್ನಿರೆ ಅಕ್ಕಗಳಿರಾ, ಅಕ್ಕನರಸ ಬಸವಯ್ಯನು ಬಯಲ ಕಂಡು ಬಟ್ಟಬಯಲಾದನು. ಅಕ್ಕನರಸನಲ್ಲದೆ ನಿಶ್ಶರನಾದನು ಬಸವಯ್ಯನು. ನಮ್ಮ ಸಂಗಯ್ಯನಲ್ಲಿ ಬಸವೈಯ್ಯನೈಕ್ಯ ಬಯಲಿಲ್ಲದ ಬಯಲು')

ನೀಲಲೋಚನೆಯ ಶೋಕವು ಒಂದು ಸಾಹಿತ್ಯಕ ಮೌಲ್ಯದ ಶೋಕಗೀತೆಯಾಗಿರುವುದನ್ನು ಗಮನಿಸಬೇಕು. (ಅವಳ ಹಲವು ಕೃತಿಗಳು Elegy ಅಥವಾ ಶೋಕ ಗೀತೆಗಳೇ) ಬಸವಣ್ಣನವರಂತೆಯೇ ಆಕೆಯದೂ ಕವಿ ಹೃದಯ, ಭಾಷೆಯೂ ಸಾಹಿತ್ಯಕ ಭಾಷೆ.

ಈ ಹಿನ್ನೆಲೆಯಲ್ಲಿ ಕೆಳಗಿನ ವಚನವನ್ನು ವಿಶ್ಲೇಷಿಸ ಬಯಸುತ್ತೇನೆ.

ಮುಕ್ತಿಯನಳಿದು ನಿರ್ಮುಕ್ತಳಾದ ಕಾರಣ
ಮುಕ್ತಿಯಿಲ್ಲವಯ್ಯಾ ಬಸವಯ್ಯಾ ಎನಗೆ.
ಸಂಗ ನಿಸ್ಸಂಗದವಳಾದ ಕಾರಣ
ಎನಗೆ ಸಂಗದ ಸಂಗವಿಲ್ಲವಯ್ಯಾ ಬಸವಯ್ಯಾ
ನನಗೇತರ ಪರಿಣಾಮದ ರೂಪಪ್ರಭೆ
ವಿರೂಪಾಕ್ಷ ಸಂಗವನನುಭಾವಿಸಿದೆನಯ್ಯಾ, ಬಸವಯ್ಯಾ.
ಸಂಗಯ್ಯಾ, ಬಸವ ಪರಪ್ರಣವ ಸ್ವರೂಪನಾಯಿತ್ತು.

ನೀಲಲೋಚನೆ ಹೇಳಿಕೊಂಡಿರುವಂತೆ 'ಮುಕ್ತ'ಳಾಗಬೇಕು ಎಂಬ ಬಯಕೆಯನ್ನು ಕೈಬಿಟ್ಟು ನಿರ್ಮುಕ್ತಳಾದವಳು; ಅವಳು 'ಸಂಗ', 'ನಿಸ್ಸಂಗ' ಎರಡರ ದ್ವಂದ್ವವನ್ನು ಮೀರಿದವಳು. ಇದರಿಂದ ಅವಳಿಗೆ ಸಾಧನೆಯ 'ಪರಿಣಾಮ'(ಫಲ)ವಾದ 'ಕೂಟ'ದ (ಜೀವ ಆತ್ಮರ ಏಕಾನುಭವ) ಬೆಳಕಿನ ಅಗತ್ಯವೂ ಇಲ್ಲ. ಇಂತಹ ಅತ್ಯುನ್ನತ ಸಿದ್ಧಿಯನ್ನು ಪಡೆದದ್ದು ಅವಳು ಅನುಭವಿಸಿದ 'ವಿರೂಪಾಕ್ಷ ಸಂಗ'ದಿಂದ. ಆ 'ವಿರೂಪಾಕ್ಷ ಸಂಗ'ಕ್ಕೆ ಮೂಲಕಾರಣನಾದ ಬಸವಯ್ಯನೇ ಅವಳಿಗೆ ಪ್ರಣವ, ಅಥವಾ ಓಂಕಾರ, ಅವಳಿಗೆ ವ್ಯಕ್ತಿಯ ಬಿಡುಗಡೆಯ ಅತ್ಯುನ್ನತ ಸಾಧನಮಾರ್ಗವಾದ ಪ್ರಣವ ಅಥವಾ ಓಂಕಾರವು ಯಾವುದೆಂದರೆ ಬಸವ, ಬಸವಣ್ಣ ನಾಮದ ಉಚ್ಚಾರ, ಬಸವ ನಾಮದ ಸ್ಮರಣೆ. (ಆದ್ದರಿಂದಲೇ ಅವಳ ಎಲ್ಲ ವಚನಗಳಲ್ಲಿ ಬಸವ ನಾಮಸ್ಮರಣೆಯಿದೆ)

ಮೇಲಿನ ವಚನದಲ್ಲಿ ಎದ್ದು ಕಾಣುವ ಭಾಗ 'ವಿರೂಪಾಕ್ಷ ಸಂಗ' ಆ ಸಮಾಸ ಪದ ಬಹು ಅರ್ಥಪೂರ್ಣ: ನೀಲಲೋಚನೆ, ಬಸವಣ್ಣ ಇವರ ದಾಂಪತ್ಯದ ಹಿನ್ನೆಲೆಯಲ್ಲಿ ಅದು ವ್ಯಾಖ್ಯಾನಾರ್ಹ. ವಿರೂಪಾಕ್ಷ ಎಂದರೆ ಶಿವ, ಫಾಲನೇತ್ರ ಅಥವಾ ಉರಿಗಣ್ಣ. 'ಶಿವ' ಮಾತಿಗೆ ಮಂಗಳ. ಸೌಮ್ಯ, ಶುಭ ಎಂಬರ್ಥಗಳಿವೆ. ಬಸವಣ್ಣ ಹೊರನೋಟಕ್ಕೆ ನಿಷ್ಠುರ ಸ್ವಭಾವದವನಾದರೂ, ಅವನ ನಿಜವಾದ ಲಕ್ಷಣ ಸೌಮ್ಯ, ದಯಾಪರ, ಸ್ನೇಹಜೀವಿ. ವಿರೂಪಾಕ್ಷನು ತನ್ನ ಮನಸ್ಸನ್ನು ಹಾಳುಮಾಡಲು ಯತ್ನಿಸಿದ ಕಾಮನನ್ನು ಸುಟ್ಟು, ಬಳಿಕ ತನ್ನನ್ನು ಒಲಿಸಿಕೊಳ್ಳಲು ತಪಸ್ಸು ಮಾಡಿದ ಗಿರಿಜೆ ಅಥವಾ ಪಾರ್ವತಿಯನ್ನು (ಇವಳು ಗಿರಿರಾಜ ಅಥವಾ ಪರ್ವತ ರಾಜನ ಮಗಳು) ಮೆಚ್ಚಿ ಅವಳ ಕೈ ಹಿಡಿಯುತ್ತಾನೆ. ಬಸವನಿಗಾಗಿ ಹಂಬಲಿಸಿ ಮದುವೆಯಾದವಳು ಅಥವಾ ಮನಃಪೂರ್ವಕವಾಗಿ ಅವನ ಕೈ ಹಿಡಿದವಳು ನೀಲಾಂಬಿಕೆ. (ಇದು ಆಕಸ್ಮಿಕ– ವಿರೂಪಾಕ್ಷನಿಗೆ ಗಿರಿಜೆ ಮತ್ತು ಪಂಪಾಂಬಿಕೆಯರು ಇಬ್ಬರು ಪತ್ನಿಯರು; ಬಸವಣ್ಣನಿಗೆ ನೀಲಲೋಚನೆ, ಗಂಗಾಂಬಿಕೆ ಎಂಬ ಇಬ್ಬರು ಪತ್ನಿಯರು)

ಶಿವನು ಹೊರಗೆ ಉರಿಗಣ್ಣನಾದರೂ ಲೋಕದ ಹಿತವನ್ನು ಬಯಸುವವನು – ಅವನ ದೃಷ್ಟಿ ಸದಾ ಸಂಸಾರದ ಹೊರಗೆ. ಅಂತಹ ಶಿವನ ಒಳಸಂಸಾರವನ್ನು ನಿರ್ವಹಿಸುವಲ್ಲಿ ಪಾರ್ವತಿ ಅನುಭವಿಸಿರುವ ಸಹನೆ, ಕಷ್ಟ ಇವುಗಳನ್ನು ನಾವು ಊಹಿಸಬಹುದು. ಪ್ರತಿ ದೊಡ್ಡ ಪ್ರಸಿದ್ಧ ಸಾಧಕನ ಯಶಸ್ಸಿನ ಹಿಂದೆ ಒಬ್ಬ ಪ್ರಸಿದ್ಧಳಲ್ಲದ ಮಹಿಳೆ ಇರುತ್ತಾಳೆ; ಅವನು ಪ್ರಸಿದ್ಧನಾಗಲು, ಶ್ರದ್ಧೆಯಿಂದ ಸಮಾಜಮುಖಿ ಕಾರ್ಯಗಳಲ್ಲಿ

ತೊಡಗಿಸಿಕೊಳ್ಳುವುದಕ್ಕೆ ಅವನು ಎಷ್ಟು ಕಾರಣನೋ ಅವನ ಎಲ್ಲ ಒಳ ಸಂಸಾರದ ಆಗುಹೋಗುಗಳನ್ನು, ಕಷ್ಟ ಸುಖಗಳನ್ನು ಶ್ರದ್ಧೆಯಿಂದ ನೋಡಿಕೊಂಡ ಅವನ ಗೃಹಿಣಿಯ ತ್ಯಾಗವೂ ಅಷ್ಟೇ ಕಾರಣ. (ಗಾಂಧೀಜಿ ಜೊತೆ ಬದುಕಿದ ಕಸ್ತೂರಿ ಬಾ ಅವರೂ ಕೂಡ ಮಹಾತ್ಯಾಗಿ; ಗಾಂಧೀಜಿ ಮಹಾತ್ಮರಾಗಲು ಅವರೂ ಕಾರಣ, ಅವರ ತ್ಯಾಗಜೀವನವೂ ಕಾರಣ)

ಬಿಜ್ಜಳನ ಭಂಡಾರಿ, ರಾಜಕೀಯ ಸಲಹೆಗಾರ, ಸಾಮಾಜಿಕ ಮುಖಂಡ, ರಾಷ್ಟ್ರ ಮಟ್ಟದ ಆಂದೋಲನವೊಂದರ ನೇತಾರ, ಎಲ್ಲರ ಜೊತೆ ಬೆರೆಯುವ ಶಿವಭಕ್ತ, ನಾನಾ ಭಾಗಗಳಿಂದ ಬರುತ್ತಿದ್ದ ಭಕ್ತರನ್ನು ಆರೈಸುವವನು ಆಗಿದ್ದ ಬಸವಣ್ಣನಿಗೆ ಸ್ವಂತ ಕೆಲಸಗಳಿಗೆ ಸಮಯವೇ ಇರಲಿಲ್ಲ. ಸಮಯ ದೊರಕಿದಾಗಲೂ ವಚನ ರಚನೆಯಲ್ಲಿ ಮಗ್ನನಾಗಿರುತ್ತಿದ್ದ. ಇಂತಹ ಬಸವಣ್ಣ ಒಮ್ಮೊಮ್ಮೆ ತನ್ನ ಪತ್ನಿಯರ ಜೊತೆ ಸಿಡಿಮಿಡಿಗೊಳ್ಳುತ್ತಿದ್ದುದು ಅಸಂಭವವಲ್ಲ. ಹೊರಗೆ ಆದ ನೋವನ್ನು ಮನೆಯಲ್ಲಿ ವ್ಯಕ್ತ ಮಾಡಿ ಹಗುರಗೊಳಿಸಿ ಕೊಳ್ಳುತ್ತಿದ್ದ ಎಂದು ಊಹಿಸುವುದರಲ್ಲಿ ತಪ್ಪಿಲ್ಲ. ಅವನ ಪತ್ನಿಯರಿಗೂ ಸ್ವಲ್ಪ ಬೇಸರವಾದರೂ ಅವರು ಅದೆಲ್ಲವನ್ನೂ ಸಂತೋಷದಿಂದ ಸಹಿಸಿಕೊಳ್ಳುತ್ತಿದ್ದರು. ಆದರೆ ಬಹುಶಃ ಅವನ ಪತ್ನಿಯರಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳು ಎಂದೂ ಬಂದಿರಲಾರವು. ಸ್ವಾಭಾವಿಕವಾಗಿ ಬಂದಿದ್ದರೂ ಅವು ಆ ಕ್ಷಣದಲ್ಲೇ ಪರಿಹಾರವಾಗುತ್ತಿದ್ದುವೆಂದು ಊಹಿಸಬಹುದು. ಇಷ್ಟಂತೂ ನಿಜ – ಮಕ್ಕಳಿಲ್ಲದಿದ್ದ ಆ ಇಬ್ಬರಿಗೂ ಬಸವಣ್ಣ ಒಂದು ಬಗೆಯಲ್ಲಿ ಮಗುವಿನಂತಿದ್ದ ಎಂದು ಹೇಳಬಹುದು.

ಹಿಂದೆ ಸೂಚಿಸಿದ ಹಾಗೆ ತನ್ನ ಸೂಕ್ಷ್ಮ ಅನುಭವಗಳನ್ನು ವಚನಗಳಲ್ಲಿ ನೀಲಲೋಚನೆ ಹೇಳಿಕೊಂಡಿರುವಂತೆ ಗಂಗಾಂಬಿಕೆ ಅಷ್ಟಾಗಿ ಹೇಳಿಕೊಂಡಿಲ್ಲ. ನೀಲಲೋಚನೆಯ "ವಿರೂಪಾಕ್ಷ ಸಂಗವನನುಭವಿಸಿದೆನಯ್ಯಾ ಬಸವಯ್ಯಾ' ಎಂಬ ಮಾತು ಬಸವಣ್ಣನವರ ಮನೆಯ, ಸಂಸಾರದ ಒಳಚಿತ್ರಣವನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಮೇಲಿನ ಮಾತುಗಳನ್ನು ಸಾರಾಂಶೀಕರಿಸುತ್ತೇನೆ. ಬಸವಣ್ಣನವರದು ಒಂದು ರೀತಿಯಲ್ಲಿ ಸಮಯ ಜೀವನವೇ. ಆದರೆ ಅವರ ಗಮನವು ಹೆಚ್ಚಾಗಿ ಲೋಕ ಹಿತಚಿಂತನೆಯ ಕಡೆ ಇದ್ದುದರಿಂದ ಸಂಸಾರದ ಒಳ ಮಾನಸಿಕ ಕಷ್ಟಗಳನ್ನು ಅವನ ಪತ್ನಿಯರೇ ವಹಿಸಬೇಕಾಗಿತ್ತು. ಆ ಕಷ್ಟ ಆರ್ಥಿಕವಲ್ಲ. ರಾಜಾಸ್ಥಾನದಲ್ಲಿ, ತಿರುಗಾಟದಲ್ಲಿ ಜನರ ಕಷ್ಟ ಸುಖಗಳನ್ನು ವಿಚಾರಿಸುವುದರಲ್ಲಿ ಮಗ್ನನಾಗಿರುತ್ತಿದ್ದ ಬಸವಣ್ಣ ರಾತ್ರಿ ಎಷ್ಟು ತಡವಾಗಿ ಬರುತ್ತಿದ್ದನೋ ತಿಳಿಯದು. ಎಷ್ಟೋ ವಾರ ಕಲ್ಯಾಣದಿಂದ ಹೊರಗಿರುತ್ತಿದ್ದ. ಮನೆಗೆ ಬಂದರೂ ಅವನಿಗೆ ಲೋಕದ ಚಿಂತೆಯೇ ಹೆಚ್ಚಾಗಿರುತ್ತಿತ್ತು. ಅದೆಲ್ಲವನ್ನೂ ಬಹುತೇಕ ನಗುಮೊಗದಿಂದ ಎದುರಿಸಿದ ಪತ್ನಿಯರ ಮಾನಸಿಕ ಸ್ಥಿತಿಯನ್ನು 'ವಿರೂಪಾಕ್ಷ ಸಂಗ' ಬಹು ಅರ್ಥಪೂರ್ಣವಾಗಿ ಧ್ವನಿಸುತ್ತದೆ. ಅವರ ಪತ್ನಿಯರ ಮಾನಸಿಕ ದುಗುಡ ಕ್ಷಣಿಕವಾದದ್ದು, ಆದರೆ ಒಂದು ಬಗೆಯ ತೃಪ್ತಿ, ಆನಂದ ಮಾತ್ರ ನಿರಂತರವಾದ್ದು, ಆನಂದ ಅವರ ಬದುಕೆಂಬ ಸಾಗರದ ಹರಹು. ದುಗುಡ ವೇದನೆ ಕಾತರ ಆತಂಕ ಇವು ಆ ಸಾಗರದ ಕ್ಷಣಿಕ ಅಲೆಗಳು.

❑❑

# ಪಂಪಭಾರತದ ಒಂದು ಪದ್ಯ

- ಟಿ.ವಿ. ವೆಂಕಟಾಚಲ ಶಾಸ್ತ್ರೀ

**ಪಂ**ಪಭಾರತದ ಪೀಠಿಕಾಭಾಗದಲ್ಲಿ ಬರುವ,

> ಕಮಲೋದ್ಭವನಮಳಿನ ಹೃ
> ತ್ಕಮಲದೊಳೊಗೆದರ್ ಸುರೇಂದ್ರಧಾರಕರಾ ವಾ
> ಗಮಳರ್ ನೆಗಟ್ಟೆರ್ದರ್ ಪುಲ
> ಹ ಮರೀಚ್ಯತ್ರ್ಯಂಗಿರಃ ಪುಳಸ್ತ್ಯ ಕ್ರತುಗಳ್ ॥

ಎಂಬ ಪದ್ಯದ (೧-೬೦) 'ಸುರೇಂದ್ರಧಾರಕರ್' ಎಂಬ ಸಮಾಸಪದದ ಪಾಠ ಅರ್ಥಗಳ ವಿಷಯದಲ್ಲಿ ಕೊಂಚ ಅನಿಶ್ಚಯತೆಯಿರುವುದು ತಿಳಿದ ವಿಷಯ.

ಪಂಪಭಾರತ ದೀಪಿಕೆಯಲ್ಲಿ "ಈ ಪದ್ಯದಲ್ಲಿ ಪಾಠಕ್ಲೇಶವಿದೆ. ಇಲ್ಲಿ ಸುರೇಂದ್ರಧಾರಕರ್ ಎಂಬುದಕ್ಕೆ ಕೊಟ್ಟಿರುವ ಅರ್ಥ ಸಂಶಯಾಸ್ಪದ" ಎಂದು ಟಿಪ್ಪಣಿ ಬರೆದಿದೆ. ಆ ಪದಕ್ಕೆ "ಶ್ರೇಷ್ಠವಾದ ನೀರಿನ ಕಮಂಡಲವನ್ನು ಹಿಡಿದುಕೊಂಡು" ಎಂದು ಅರ್ಥ ಮಾಡಿದ್ದು, ಸುರಾ ಶಬ್ದಕ್ಕೆ ನೀರು, ನೀರಿನ ಪಾತ್ರೆ ಎಂಬುದಾಗಿ ನೈಘಂಟುಕ ಅರ್ಥಗಳಿರುವುದು ಕಾರಣವಾಗಿ ಹಾಗೆ ಊಹಿಸಿರುವಂತಿದೆ.

ಉದ್ಧೃತಪದ್ಯದ ವಿಚಾರಣೀಯವಾದ ಭಾಗದಲ್ಲಿ ರೈಸ್ ಅವರ ಪರಿಷ್ಕರಣದಲ್ಲಿ (೧೮೯೮) 'ಸುರೇಂದ್ರದಾರಕರ್' ಎಂಬ ಪಾಠವಿದೆ. ಮೈಸೂರು ಅರಮನೆಯ ಸರಸ್ವತೀ ಭಂಡಾರದ ತಾಳೆಯೋಲೆಯು ಪ್ರತಿ ಆ ಪಾಠವನ್ನು ಘೋಷಿಸುತ್ತಿದೆ. ಆದರೆ ಅನೇಕ ವಿಧಗಳಲ್ಲಿ ಒಳ್ಳೆಯ ಪರಿಷ್ಕರಣವಾಗಿರುವ ಪರಿಷತ್ತಿನ ಪಂಪಭಾರತದ (೧೯೩೧) 'ಸುರೇಂದ್ರ ಧಾರಕರ್' ಎಂಬ ಪಾಠವನ್ನೇ ಒಪ್ಪಿ ವಿದ್ವಾಂಸರು ವಿಮರ್ಶೆ ವ್ಯಾಖ್ಯಾನಗಳನ್ನು ಮಾಡಿರುವುದು ಕಾಣುತ್ತದೆ.

ಪಂಪಭಾರತದ ಗದ್ಯಾನುವಾದದಲ್ಲಿ ಎನ್. ಅನಂತ ರಂಗಾಚಾರ್ಯರು ದೀಪಿಕೆಯ ಅರ್ಥವನ್ನೇ ಒಪ್ಪಿದ್ದಾರೆ. ಎಲ್. ಬಸವರಾಜು ಅವರು ತಮ್ಮ 'ಸರಳ ಪಂಪಭಾರತ'ದಲ್ಲಿ (೧೯೯೯) ಬಹುಶಃ ಹಸ್ತಪ್ರತಿಗಳ . ಬೆಂಬಲವೇನೂ ಇರದ 'ಅಮರೇಂದ್ರ ದಾರಕರ್' ಎಂಬ ಪಾಠವನ್ನಿಟ್ಟು, ಅರ್ಥಕೋಶದಲ್ಲಿ 'ದಾರಕರ್ – ಮಕ್ಕಳು, ಬಾಲಕರು,' ಎಂದು ಅರ್ಥಕೊಟ್ಟಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪಂಪಸಂಪುಟದಲ್ಲಿ (೨೦೦೬) ಆಗ್ಗೆ ನನಗೆ ಸರಿಕಂಡಂತೆ ಸುರೇಂದ್ರ ಧಾರಕರ್ ಎಂಬ ಪಾಠವನ್ನೇ ಒಪ್ಪಿ 'ಇಂದ್ರನನ್ನು ನಿಯಂತ್ರಿಸುವವನು' (ಏ.ವ.) ಎಂಬ ಅರ್ಥವನ್ನು ಶಬ್ದಾರ್ಥಕೋಶದಲ್ಲಿ ಕೊಟ್ಟಿದ್ದೇನೆ. ಬಡೆಕ್ಕಿಲ ರಾಮಭಟ್ಟರ ಅಪ್ರಕಟಿತ 'ಪಂಪಭಾರತ ಪ್ರಕಾಶಿಕೆ'ಯಲ್ಲಿ 'ಸುರೇಂದ್ರ –ದೇವೇಂದ್ರನಿಗೆ, ಧಾರಕರ್ – ಆಧಾರವಾಗಿರುವವರು ಎಂಬುದಾಗಿ ಅರ್ಥ ಹೇಳಿದೆ. ವಿದ್ವಾನ್ ಎನ್. ರಂಗನಾಥ ಶರ್ಮ ಅವರೊಂದಿಗೆ ನಡೆಸಿದ ಚರ್ಚೆಯಲ್ಲಿ, 'ದೇವೇಂದ್ರನಿಗೆ ಬುದ್ಧಿ ಹೇಳುವವರು, ತಿಳಿವಳಿಕೆ ಕೊಡುವವರು ಎಂದು ತಿಳಿಯಬಹುದು' ಎಂಬುದಾಗಿ ಸಲಹೆ ಮಾಡಿದರು.

ಮೂಲ ಭಾರತದ ಸಭಾಪರ್ವದ ೭ನೆಯ 'ಇಂದ್ರಸಭಾವರ್ಣನ'ದಲ್ಲಿ ಹಲವು ದೇವರ್ಷಿಗಳೊಂದಿಗೆ ಪುಲಕಾದಿಗಳಲ್ಲಿ ಕೆಲವರು ಇದ್ದರೆಂದು ಹೇಳಿದೆಯಲ್ಲದೆ ಬೇರೆ ವಿಚಾರವಿಲ್ಲ (೭-೧೭).

ಹೀಗೆ ಅಭಿಪ್ರಾಯ ಭೇದಗಳಿಗೆ ಅವಕಾಶ ಮಾಡಿರುವ ಈ ಶಬ್ದದ ಪಾಠ ಅರ್ಥಗಳು ದಿಟವಾಗಿ ಏನಿರಬೇಕು ಎನ್ನುವುದು ಕುತೂಹಲದ ಸಂಗತಿ.

ರೈಸ್ ಅವರ ಪರಿಷ್ಕರಣದ ಹಾಗೂ ಅದನ್ನು ಬೆಂಬಲಿಸುವ ಹಸ್ತಪ್ರತಿಯೊಂದರ ಪಾಠವನ್ನು ಒಪ್ಪಿದರೆ, 'ಸುರೇಂದ್ರ ದಾರಕರ್' ಎಂಬ ಪಾಠವೂ 'ದೇವೇಂದ್ರನ ಮಕ್ಕಳು' ಎಂಬ ಅರ್ಥವೂ ಆಗ ಹೊರಡುತ್ತದೆ. ಆದರೆ ಪದ್ಯದ ಆಶಯಕ್ಕೆ ಈ ಅರ್ಥ ಹೊಂದುವುದಿಲ್ಲ ಎನ್ನುವುದರಿಂದ ಅದನ್ನು ಬಿಡಬೇಕಾಗುತ್ತದೆ.

ಸುರೇಂದ್ರವೆಂಬ ಶಬ್ದಕ್ಕೆ ದೇವತೆಗಳ ಸ್ವಾಮಿ, ದೇವತೆಗಳಲ್ಲಿ ಮುಖ್ಯನಾದವನು ಎಂಬುದು ಪ್ರಾಥಮಿಕವಾದ ಅರ್ಥ. ಅದನ್ನು ನಿಘಂಟುಗಳು ದಾಖಲಿಸಿವೆ. ಆ ಅರ್ಥವನ್ನು ಬ್ರಹ್ಮನಿಗೆ ಅನ್ವಯಿಸಬಹುದೇ, ವಿಚಾರಣೀಯ. ನಿಘಂಟುಕಾರರು ಸುರೇಶ್ವರ ಎಂಬ ಮಾತಿಗೆ (ಮೋನಿಯರ್ ವಿಲಿಯಂಸ್ ನಿಘಂಟು, ಪು. ೧೨೩೩), ಸುರಜ್ಯೇಷ್ಠ ಎಂಬ ಮಾತಿಗೆ ಬ್ರಹ್ಮ ಎಂಬ ಅರ್ಥವನ್ನು ಹೇಳಿದ್ದಾರೆ.

# ೬೮/ಬಿ, 'ಬ್ರಾಹ್ಮೀ', ಆಶ್ರಮ ರಸ್ತೆ (ಹಿಂಭಾಗ), ೩ನೇ ಬ್ಲಾಕ್, ಜಯಲಕ್ಷ್ಮೀಪುರಂ, ಮೈಸೂರು ೫೭೦ ೦೧೨

ಹಾಗೆಯೇ ಪಂಪನೂ ಬ್ರಹ್ಮನನ್ನು ಸುರೇಂದ್ರ ಎಂದು ಕರೆದಿರುವುದು ಸಾಧ್ಯ. ಆಗ (ಅಭಿನವಾಭಿಧಾನಂ, [ಉ.೩.ಪ.೯) 'ಸುರೇಂದ್ರ ದಾರಕರ್' ಮಾತಿಗೆ ಬ್ರಹ್ಮನ ಮಕ್ಕಳು (ಮಾನಸಪುತ್ರರು) ಎಂಬ ಅರ್ಥ ಸಾಧ್ಯವಾಗಿ ಪದ್ಯದ ಆಶಯಕ್ಕೆ ಅದು ಸರಿಯಾಗಿ ಹೊಂದಿಕೊಳ್ಳುತ್ತದೆ. ಬ್ರಹ್ಮನ ಮಕ್ಕಳು ಮಾನವಯೋನಿಸಂಜಾತರಲ್ಲ, ದೇವಪುತ್ರರು ಎಂದು ವಿಶದಪಡಿಸುವುದು ಕವಿಯ ವಿವಕ್ಷೆ. ಹಾಗಾಗಿ 'ಸುರೇಂದ್ರದಾರಕರ್' ಎಂಬ ಮಾತನ್ನು ತಂದಿದೆ.

ದೇವತಾಪರ್ಯಾಯ ಶಬ್ದಗಳನ್ನು ಪೂರ್ವಪದವಾಗಿ, ಉತ್ತರಪದ 'ದಾರಕ'ವಾಗಿರುವ ಕಾವ್ಯಪ್ರಯೋಗಗಳು ತಕ್ಕಮಟ್ಟಿಗೆ ಕನ್ನಡದಲ್ಲಿ ಕಂಡುಬಂದಿವೆ. ಈ ಬಾಹ್ಯ ಸಾಕ್ಷ್ಯಗಳಿಂದಲೂ 'ಸುರೇಂದ್ರ ದಾರಕರ್' ಸಮಸ್ತ ಪದವನ್ನು ಸಮರ್ಥಿಸಲು ಶಕ್ಯವಿದೆ. ಕೆಲವು ಪ್ರಯೋಗಗಳು :

೧. ನಾಗವರ್ಮನ ವೀರವರ್ಧಮಾನ ಪುರಾಣ: 'ದಿವಿಜದಾರಕೋಪಾಸ್ಯಮಾನಂ" (೧೨-೬೩ವ.) 'ಸುರದಾರಕರೋಲಗಿಪರ್' (೧೨- ೬೭).

೨. ಕರ್ಣಪಾರ್ಯನ ನೇಮಿನಾಥ ಪುರಾಣ:"ಸಹಪಾಂಸು ಕ್ರೀಡಾಮುರದಾರಕಪ್ರಕರಮುಮಂ' (೮-೧೬೭ ವ.)

೩. ಇಮ್ಮಡಿ ಗುಣವರ್ಮನ ಪುಷ್ಪದಂತಪುರಾಣ: "ಒರಗೆಗಳಪ್ಪ ಬಹುವೃಂದಾಕರ ದಾರಕರನ್" (೧೨-೫೫).

೪. ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣ: "ಅಮರ್ದಮರದಾರಕರ್" (೧೫- ೯)

೫. ಕಮಲಭವನ ಶಾಂತೀಶ್ವರ ಪುರಾಣ: ಅನಿ(ಮೇ)ಷದಾರಕರ್ (೧೫-೧೫)

**ಇನ್ನು ಉದ್ಧೃತ ಪದ್ಯದ ಅನ್ವಯ:** ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಸುರೇಂದ್ರದಾರಕರ್, ಆ ವಾಗಮಳರ್, ನೆಗೞ್ದಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಃ ಪುಳಸ್ತ್ಯ ಕ್ರತುಗಳ್ ಒಗೆದರ್.

ಇಲ್ಲಿ ನೆಗೞ್ದಿರ್ದರ್ ಪದವನ್ನು ಕ್ರಿಯಾಪದವಾಗಿ ತಿಳಿಯದೆ ಕೃನ್ನಾಮವಾಗಿ, ನಾಮವಿಶೇಷಣವಾಗಿ ತಿಳಿದಿರುವುದಕ್ಕೆ ವ್ಯಾಕರಣದ ಸಮ್ಮತಿಯಿದೆ.

**ಪದ್ಯದ ಅರ್ಥ:** ಬ್ರಹ್ಮನ ಸ್ವಚ್ಛವಾದ ಹೃದಯ ಕಮಲದಲ್ಲಿ ಆ ದೇವಮುಖ್ಯನ (ಬ್ರಹ್ಮನ) ಪುತ್ರರು, ಪರಿಶುದ್ಧವಾದ ವಾಕ್ಕುಳ್ಳವರು, ಪ್ರಸಿದ್ಧರಾದವರು ಎನ್ನಿಸಿದ ಪುಲಹ, ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಹಾಗೂ ಕ್ರತು ಇವರು ಹುಟ್ಟಿದರು.

❑❑

# ಛಂದಸ್ಸು

– ಜಿ.ಎಸ್. ಸಿದ್ಧಲಿಂಗಯ್ಯ

ಛಂದಸ್ಸು ಎಂಬ ಪದವನ್ನು ಪದ್ಯಗಳ ನಿಯಮಗಳನ್ನು ತಿಳಿಸುವ ಒಂದು ಶಾಸ್ತ್ರ ಎನ್ನಲಾಗುತ್ತಿದೆ. ಕನ್ನಡ ಕೈಪಿಡಿಯಲ್ಲಿ 'ಪದ್ಯಗಳ ನಿಯಮವನ್ನು ಛಂದಶಾಸ್ತ್ರವು ತಿಳಿಸುವುದು'[೧] ಎಂದು ಹೇಳಲಾಗಿದೆ. ಈ ಹಿನ್ನೆಲೆಯಲ್ಲಿಯೇ ಲೌಕಿಕ ಛಂದಸ್ಸು, ವೈದಿಕ ಛಂದಸ್ಸು, ಅಕ್ಷರಗಣ ಛಂದಸ್ಸು, ಮಾತ್ರಾ ಗಣ ಛಂದಸ್ಸು, ಮಾತ್ರಾಕ್ಷರ ಗಣ ಛಂದಸ್ಸು, ಅಂಶ ಗಣ ಛಂದಸ್ಸುಗಳು ಎಂದು ಹೇಳುವುದೇ ಅಲ್ಲದೆ ತ್ರಿಪದಿ ಛಂದಸ್ಸು, ರಗಳೆ ಛಂದಸ್ಸು, ಷಟ್ಪದಿ ಛಂದಸ್ಸು ಎಂದೂ ಹೇಳುವುದೂ ಉಂಟು.

ವಿ.ಎಸ್. ಆಪ್ಟೆಯವರ ಸಂಸ್ಕೃತ – ಇಂಗ್ಲಿಷ್ ನಿಘಂಟಿನಲ್ಲಿ ಛಂದಸ್ ಪದಕ್ಕೆ ಕೊಟ್ಟಿರುವ ಅರ್ಥಗಳು ಹೀಗಿವೆ. 1. Wish, desire, fancy, 2. Free will, free or willful conduct, 3. Meaning, intention, 4. Fraud, trick, deawit, 5. The vedas, the sacred text of the vedic hymes, 6. A metre, 7. Metrical science, prosody ಮೇಲಿನ ಏಳು ಅರ್ಥಗಳಲ್ಲಿ ಆರು ಮತ್ತು ಏಳನೆಯ ಅರ್ಥಗಳು ಗಮನಾರ್ಹ. ಏಕೆಂದರೆ ಛಂದಸ್ಸು ಎಂಬ ಪದವನ್ನು ನಾವೀಗ ಬಳಸುತ್ತಿರುವುದು ಈ ಅರ್ಥದಲ್ಲಿದೆ.

ಛಂದಸ್ಸು ಶಬ್ದದ ಧಾತು 'ಛದ್' ಎಂಬುದಾಗಿದ್ದು ಅದರ ಅರ್ಥವನ್ನು ಆಪ್ಟೆಯವರು ಹೀಗೆ ಹೇಳಿದ್ದಾರೆ:

1. To cover, cover over, veil, 2. To spread anything (as a cover), cover oneself, 3. To hide, conceal, eclipse, keep secret.[೨]

ಮುಚ್ಚುವುದು, ಹೊದಿಸುವುದು, ಹೊದ್ದುಕೊಳ್ಳುವುದು, ಅಥವಾ ಬಚ್ಚಿಡುವುದು ಎಂಬುವು ಪ್ರಧಾನ ಅರ್ಥ ಛಾಯೆಗಳಾಗಿವೆ.

ಹೊದ್ದುಕೊಳ್ಳುವುದು ಅಥವಾ ಹೊದಿಸುವುದು ಎಂಬ ಅರ್ಥವನ್ನು ಭಾಷೆಗೆ ಸಂಬಂಧಿಸಿ ಹೇಳಬಹುದಾದರೆ ಅನುಭವಗಳನ್ನು ಅಥವಾ ಮತ್ತು ಆಲೋಚನೆಗಳನ್ನು ಹೊದ್ದುಕೊಳ್ಳುವುದು ಅಥವಾ ಹೊದಿಸುವುದು ಎಂದರ್ಥವಾಗುತ್ತದೆ. ಅಂದರೆ ಭಾಷೆಯೆನ್ನುವುದು ಅನುಭವಗಳನ್ನು ಅಥವಾ ಮತ್ತು ಆಲೋಚನೆಗಳನ್ನು ಹೊದ್ದುಕೊಳ್ಳುವುದನ್ನು ಛಂದಸ್ಸು ಎನ್ನುತ್ತೇವೆ.

ವ್ಯಕ್ತಿ ತನ್ನ ಅನುಭವಗಳನ್ನು ಅಥವಾ ಆಲೋಚನೆಯನ್ನು ಪ್ರಕಟಿಸುವ ವಿಧಾನವೇ ಛಂದಸ್ಸಾಗುತ್ತದೆ. ಈ ಅರ್ಥದಲ್ಲಿ ಛಂದಸ್ಸು ಬೇರೆ ಅಲ್ಲ, ಭಾಷೆ ಬೇರೆ ಅಲ್ಲ.

ಛಂದೋಹೀನಃ ನಶಬ್ದೋಽಸ್ತಿ (ಛಂದಸ್ಸಿಲ್ಲದ ಶಬ್ದವೇ ಇಲ್ಲ) ಎಂಬ ಹೇಳಿಕೆ ಹುಟ್ಟಿಕೊಂಡಿರುವುದು ಇದೇ ಕಾರಣಕ್ಕಾಗಿಯೇ ಇದೆ ..... ಇನ್ನೊಂದು ಉಲ್ಲೇಖ ಹೀಗಿದೆ: ಛಂದೋಭಾಗ್ ವಾಙ್ಮಯಂ ಸರ್ವಂ, ನ ಕಿಂಚಿಚ್ಛಂದಸಾ ವಿನಾ (ವಾಙ್ಮಯವೆಲ್ಲವೂ ಛಂದೋಮಯವಾದುದು; ಛಂದಸ್ಸಿಲ್ಲದುದು ಯಾವುದೂ ಇಲ್ಲ).

ಗದ್ಯವಾಗಲಿ, ಪದ್ಯವಾಗಲಿ ಅದು ಛಂದೋಮಯವಾದುದೇ. Prose talks, poetry sings ಅಥವಾ Prose walks, poetry dances ಎಂಬ ಹೇಳಿಕೆಗಳು ಭಾಷೆಯ ರೀತಿಯನ್ನು ಅಲಂಕಾರಿಕವಾಗಿ ಮಣಿಸುವ ಯತ್ನಗಳು. ಈ ಹಿನ್ನೆಲೆಯಲ್ಲಿ ಟಿ.ಎಸ್. ಎಲಿಯಟ್ ಎಂಬ ಪ್ರಸಿದ್ಧ ವಿಮರ್ಶಕ ಹೇಳಿದ ಮಾತು ನೆನಪಾಗುತ್ತದೆ. "ಗದ್ಯದಿಂದ ಪದ್ಯವೂ ಪದ್ಯದಿಂದ ಗದ್ಯವೂ ಕೊಡುಕೊಳೆಗೊಳುತ್ತ, ಕಸಿಗೊಳ್ಳುತ್ತ ಭಾಷೆ ತನ್ನ ಜೀವಂತಿಕೆಯನ್ನು ಸಾತತ್ಯವನ್ನು ಉಳಿಸಿಕೊಳ್ಳಬೇಕಾಗುತ್ತದೆ." ಈ ಸಂದರ್ಭದಲ್ಲಿ ನೆನಪಿಸಬೇಕಾದ ಮತ್ತೊಂದು ಮಾತು ಕವಿ ಬಾಣಭಟ್ಟನದು, ಪದ್ಯವೊಂದೇ ಕಾವ್ಯಲೋಕಕ್ಕೇ ಸಂಬಂಧಿಸಿದುದು ಎಂಬಂಥ ಭಾವನೆಯನ್ನು ಉದ್ದೇಶಿಸಿಯೆ ಅವನು ಹೇಳಿದ್ದು ಹೀಗಿದೆ: "ಗದ್ಯಮ್ ಕವಿನಾಂ ನಿಕಷಂ ವದನ್ತಿ", ಗದ್ಯವು ಕವಿ ಪ್ರತಿಭೆಯ ಒರೆಗಲ್ಲು ಎಂದು ಅವನು ಹೇಳುವಾಗ ಅದು ಸ್ವಲ್ಪ ಮಟ್ಟಿಗೆ ಪ್ರತಿಕ್ರಿಯಾತ್ಮಕ ಕೂಡ ಆಗಿದೆಯೆನ್ನಬೇಕು. ಗದ್ಯವಾಗಲಿ ಅಥವಾ ಪದ್ಯವಾಗಲಿ ಎಷ್ಟೆಷ್ಟು ಸಾಧ್ಯವೋ ಅಷ್ಟಷ್ಟು ಕಾವ್ಯಾತ್ಮಕ ಆಗುತ್ತದೆ ಎನ್ನಬೇಕು.

# ೨೦೩, 'ಲಲಿತಕೃಪ', ೭ ನೇ 'ಎ' ಅಡ್ಡರಸ್ತೆ, ವಿಜಯನಗರ ಪೂರ್ವ, ಆರ್.ಪಿ.ಸಿ. ಲೇಔಟ್, ಬೆಂಗಳೂರು – ೫೬೦ ೦೪೦

ಛದ್ ಧಾತುವು ಹೊದಿಸುವುದು ಮತ್ತು ಹೊದ್ದುಕೊಳ್ಳುವುದು ಎಂಬ ಎರಡು ಅರ್ಥಗಳಲ್ಲಿ ಬಳಕೆಯಾಗುವುದರಲ್ಲಿ ಇನ್ನು ಒಂದು ಸೂಕ್ಷ್ಮವಿರುವಂತಿದೆ.

ಹೊದ್ದುಕೊಳ್ಳುವುದು ಎಂಬುದು ಸ್ಫೂರ್ತಿವಾದವನ್ನು, ಹೊದಿಸುವುದು ಎನ್ನುವುದು ಪ್ರಜ್ಞಾಪೂರ್ಣ ಪ್ರಯತ್ನವನ್ನು ಧ್ವನಿಸುತ್ತದೆ ಎಂದುಕೊಂಡರೆ ಕಾವ್ಯಮೀಮಾಂಸೆಯ ಸೂಕ್ಷ್ಮವಲಯವೊಂದನ್ನು ಪ್ರವೇಶಿಸಿದಂತಾಗುತ್ತದೆ.

ಸ್ಫೂರ್ತಿವಾದದ ಮೀಮಾಂಸಕಾರರು ಕವಿತೆಯನ್ನು ಕುರಿತು ಹೇಳುವಾಗ ಉಕ್ಕುಕ್ಕಿ ಬರುವ ಶಕ್ತಿಯುತವಾದ ಭಾವನೆ (ಅನುಭವ)ಗಳನ್ನು ಶಮಸ್ಥಿತಿಯನ್ನು ಪುನರ್ಮನನ ಮಾಡುವುದು ಎಂದರೆ ಪ್ರಜ್ಞಾಪೂರ್ಣ ಕಾವ್ಯ ನಿರ್ಮಿತಿಯ ಮೀಮಾಂಸಕಾರರು ಕವಿಯ ಅನುಭವಗಳಿಗೆ ಸೂಕ್ತವಾದ ವಸ್ತುಪ್ರತಿರೂಪ(objective correlative)ಗಳನ್ನು ಅಥವಾ ಸೂಕ್ತವಾದ ಸಮೀಕರಣಗಳನ್ನು ನೀಡುವುದು ಎನ್ನುತ್ತಾರೆ. ಛದ್ ಧಾತುವಿನಿಂದ ಛಂದಸ್ಸು ಮೂಡಿತೆನ್ನುವುದನ್ನು ರೋಟ್, ಮ್ಯಾಗ್ಡೊನಲ್, ಕೀತ್ ಮೊದಲಾದ ವಿದ್ವಾಂಸರು ಪೂರ್ಣವಾಗಿ ಒಪ್ಪುವುದಿಲ್ಲ. ಯಾಸ್ಕನ ನಿರುಕ್ತದಲ್ಲಿ ಛಂದಾಂಸಿ ಛಾದನಾ ಎಂದಿರುವುದನ್ನು ಗಮನಿಸುತ್ತ ಮಂತ್ರಗಳು ಅರ್ಥವನ್ನು ಮರೆಮಾಚುತ್ತವೆಂಬ ಅರ್ಥವನ್ನು ಹಿಡಿದು ಈ ಧಾತುವು ವೈದಿಕ ಛಂದಸ್ಸಿನ ಮಾತ್ರ ಹೊಂದುವುದೆಂದೂ ಲೌಕಿಕ ಛಂದಸ್ಸಿಗೆ ಈ ಧಾತು ಸೂಕ್ತವಲ್ಲವೆಂದೂ 'ಚದಿ' ಧಾತುವನ್ನು ಆಶ್ರಯಿಸುತ್ತಾರೆ. ಚದಿ ಎಂದರೆ ಆಹ್ಲಾದವನ್ನುಂಟು ಮಾಡು ಎಂದರ್ಥ.

ಚದಿ ಆಹ್ಲಾದೇ, ಚಂದೇರಾ ದೇಶಶ್ಚ; ಅಸುನ್ ಪ್ರತ್ಯಯಶ್ಚ ಅಂದರೆ ಆಹ್ಲಾದಾರ್ಥಕವಾದ ಚದ್ ಧಾತುವಿನಿಂದ ನಿಷ್ಪನ್ನ ಗೊಂಡುದಕ್ಕೆ ಉಣಾದಿ ಸೂತ್ರವೊಂದರಿಂದ ಛಕಾರಕ್ಕೆ ಛಣರಾದೇಶವನ್ನು ಮಾಡಿ ಅದಕ್ಕೆ ಅಸುನ್ ಪ್ರತ್ಯಯವನ್ನು ಸೇರಿಸುವುದು.

ಆದರೆ ಆಧುನಿಕ ಭಾಷಾ ಶಾಸ್ತ್ರಜ್ಞರು ಇದನ್ನು ಒಪ್ಪುವುದಿಲ್ಲ. ಅದಕ್ಕೆ ಕಾರಣ 'ಚದಿ' ಶಬ್ದಕ್ಕೆ ಜ್ಞಾತಿ ಭಾಷೆಗಳಲ್ಲಿ ಪದಗಳೇ ಇಲ್ಲ. ಆದರೆ ಛದ್ ಧಾತುವಿಗೆ ಜ್ಞಾತಿ ಪದಗಳಿವೆ. ವಾಸ್ತವವಾಗಿ ಒಂದು ಪದ ಆ ಭಾಷೆಯ ಮೂಲ ಪದವೇ ಆಗಿದ್ದಾರೆ ಅದಕ್ಕೆ ಸಂಬಂಧಿಸಿದ ಭಾಷೆಗಳಲ್ಲಿ ಜ್ಞಾತಿ ಪದಗಳಿದ್ದೇ ಇರುತ್ತವೆ. ಹೀಗಾಗಿ ಛಂದಸ್ ಶಬ್ದದ ಮೂಲ 'ಛದ್' ಎಂಬುದು ಖಚಿತವಾಗುತ್ತದೆ.

❑❑

# ಆಜೀವಿಕ ಪಂಥ ಪ್ರವರ್ತಕರು

– ಹಂಪ. ನಾಗರಾಜಯ್ಯ

ಭಾರತದಲ್ಲಿ ಸಂಭವಿಸಿದ ಧಾರ್ಮಿಕ ಚಳವಳಿಗಳ ಚರಿತ್ರೆಯಲ್ಲಿ ಕ್ರಿಪೂ ಆರು–ಅಯ್ದನೆಯ ಶತಮಾನ ದೊಡ್ಡ ನಡುಗಡ್ಡೆ. ಅಂಗುತ್ತರ ನಿಕಾಯದಲ್ಲಿ (ಸಂಪುಟ : ಮೂರು) ಹತ್ತು ಪ್ರಾಚೀನ ಧರ್ಮ ಸಮುದಾಯಗಳನ್ನು ಹೇಳಿದೆ : ಆಜೀವಿಕ, ನಿಗಂಠ, ಮುಂಡಸಾವಕ, ಜಟಿಲಕ, ಪರಿಬ್ಬಾಜಕ, ಮಾಗಂಡಿಕ, ತೇದಂಡಿಕ, ಅವಿರುದ್ಧಕ, ಗೋತಮಕ ಮತ್ತು ದೇವಧಮ್ಮಿಕ. ಇದೇ ರೀತಿ ಬೌದ್ಧ ಲಲಿತ ವಿಸ್ತರ ಗ್ರಂಥದಲ್ಲಿ (ಪುಟ ೩೮೦) ಆರು ಪಂಥಗಳನ್ನು ಹೆಸರಿಸಿದೆ : ಚರಕ, ಪರಿವ್ರಾಜಕ, ವೃದ್ಧಶ್ರಾವಕ, ಗೌತಮ, ನಿರ್ಗ್ರಂಥ ಮತ್ತು ಆಜೀವಿಕ. ಬೌದ್ಧಗ್ರಂಥಗಳಲ್ಲಿ ದೊರೆಯುವ ಈ ಪಟ್ಟಿಗೆ ತಾರ್ಕಣೆ ಆಗಬಲ್ಲ ಪಟ್ಟಿಯೊಂದು ವರಾಹಮಿಹಿರನ ಬೃಹಜ್ಜಾತಕದಲ್ಲಿದೆ: ಶಾಕ್ಯ, ಆಜೀವಿಕ, ಭಿಕ್ಷು, ವೃದ್ಧ, ಚರಕ, ನಿರ್ಗ್ರಂಥ ಮತ್ತು ವನ್ಯಾಶನ. ಬೌದ್ಧ ಪಾಲಿಭಾಷಾ ಗ್ರಂಥಗಳ ವ್ಯಾಖ್ಯಾನಕಾರರಲ್ಲಿ ಪ್ರಸಿದ್ಧನಾದ ಬುದ್ಧಘೋಷನು ಆಜೀವಿಕರು ನಗ್ಗಪಬ್ಬಜಿತ (ನಗ್ನ ಪರಿವ್ರಾಜಕ) ರೆಂದು ವಿವರಿಸಿದ್ದಾರೆ. (ಮನೋರಥ ಪೂರಣೀ, ಸಂಪುಟ : ಮೂರು, ಪುಟ ೩೩೪). ಸುತ್ತ ವಿಭಂಗದಲ್ಲಿಯೂ (VI. ೨.೩.೨) ನಗ್ಗಾ ಆಜೀವಿಕಾ ಎಂದು ವರ್ಣಿಸಿದೆ. ಈ ಮತಧರ್ಮಗಳಲ್ಲಿ ಆಜೀವಿಕ, ಜೈನ, ಬೌದ್ಧ – ಇವು ಮೂರೂ ಆರ್ಯೇತರ ಮಗಧ ಮೂಲದವು. ಇವು ಒಂದೇ ಮಣ್ಣಿನಲ್ಲಿ ಹುಟ್ಟಿ, ಸಮಾನ ಪರಿಸರದಲ್ಲಿ ಪಲ್ಲವಿಸಿ ದಾಂಗುಡಿಯಿಟ್ಟು ಪ್ರಬಲವಾಗಿ ಬೆಳೆದುವು.

ಪುರಾತನ ಧಾರ್ಮಿಕ, ಸಾಮಾಜಿಕ ಮತಪಂಥ ಸಂಪ್ರದಾಯಗಳಲ್ಲಿ ಶ್ರಮಣ ಪರಂಪರೆ ವಿಶಿಷ್ಟವಾದುದು. ಆಜೀವಿಕರು, ಜೈನರು, ಬೌದ್ಧರು ಮೊದಲಾದವರು ಶ್ರಮಣರು. ಆಜೀವಿಕರೂ ನಗ್ನರು (ದಿಗಂಬರರು). ಆದರೆ ನಗ್ನರಾದ ಜೈನರು ಮತ್ತು ಆಜೀವಿಕರು ಪ್ರತ್ಯೇಕರು. ಜೈನಮುನಿಗಳು ನಿಗಂಠರು (ನಿರ್ಗ್ರಂಥರು). ಆಜೀವಿಕರೂ ನಿಗ್ರಂಥರೂ (ಜೈನರು) ದಿಗಂಬರರಾಗಿದ್ದ ಕಾರಣ ಪ್ರಾಚೀನ ಬೌದ್ಧ ಗ್ರಂಥಕಾರರು ಗೊಂದಲದಿಂದ ಆಜೀವಿಕರನ್ನೂ ನಿರ್ಗ್ರಂಥರನ್ನೂ ಒಂದೇ ಎಂದು ಭಾವಿಸಿದ್ದುಂಟು.

ಮಹಾವೀರ ಮತ್ತು ಗೌತಮಬುದ್ಧ ಸಮಕಾಲೀನ ಧಾರ್ಮಿಕ ನಾಯಕರೆಂಬುದು ಪ್ರಸಿದ್ಧ ಸಂಗತಿ. ಆದರೆ ಅವರಿಬ್ಬರು ಜೀವಿಸಿದ್ದ ಕಾಲದಲ್ಲಿ ಇನ್ನೂ ಹಲವರು ಧಾರ್ಮಿಕ ಮುಖಂಡರು ಕೀರ್ತಿವಂತರಾಗಿದ್ದರು ಎಂಬುದು ಅಷ್ಟು ಪ್ರಚಾರವಾಗಿಲ್ಲ. ಜೈನ–ಬೌದ್ಧ ಪ್ರಾಚೀನತಮ ಪ್ರಾಕೃತ–ಪಾಳಿ–ಸಂಸ್ಕೃತ ಭಾಷೆಯ ಆಗಮಗಳಲ್ಲಿಯೂ ವ್ಯಾಖ್ಯಾನಗಳಲ್ಲಿಯೂ ಅನೇಕಾನೇಕ ಸಮಕಾಲೀನ ಹಿರಿಯರು ಹಾಗೂ ಮಹಾಪುರುಷರು ನಡಸಿದ ಚಟುವಟಿಕೆಗಳ ವಿವರಗಳಿವೆ. ಟಿಬೆಟ್ ಮತ್ತು ಚೀನೀ ಭಾಷೆಯ ಪ್ರಾಚೀನ ಕೃತಿಗಳಲ್ಲೂ ಪೂರಕ ಮಾಹಿತಿಯಿದೆ.

ಬುದ್ಧ–ಮಹಾವೀರರಂತೆಯೇ ಸಂಪ್ರದಾಯವಾದಿ ಬ್ರಾಹ್ಮಣಧರ್ಮವನ್ನು ಒಪ್ಪದೆ ವಿರೋಧಿಸಿದ ಮತಧರ್ಮಗಳ ಹಾಗೂ ಮುಂದಾಳು ಋಷಿ ಮುನಿಗಳ ಚರಿತೆಗಳೂ ದೊರೆತಿವೆ. ಮುಖ್ಯ ಕೊರತೆಯೆಂದರೆ ಈ ಬಗೆಯ ಮೇಲಾಳುಗಳ ಮಾಹಿತಿಗಳು ಒಟ್ಟಿಗೆ ಒಂದು ಕಡೆ, ಒಂದು ನಿರ್ದಿಷ್ಟ ಕ್ರಮದಲ್ಲಿ ಸಿಗುವುದಿಲ್ಲ. ಬುದ್ಧ–ಮಹಾವೀರರನ್ನು ಕುರಿತು ವಿಪುಲವಾದ ವಿವರಗಳಿವೆ. ಅಲ್ಲದೆ ಸ್ವತಂತ್ರವಾದ ಕಾವ್ಯಗಳೂ ಇತರ ಗ್ರಂಥಗಳೂ ಕಾಲಕಾಲಕ್ಕೆ ಅಚ್ಚಾಗಿವೆ. ಈ ಅನುಕೂಲ ಮತ್ತು ಬರೆಹದ ಸಾಮಗ್ರಿ ಅವರಿಬ್ಬರ ಸಮಕಾಲೀನರಾಗಿದ್ದ ಇತರ ಪ್ರಮುಖರಿಗೆ ಒದಗಲಿಲ್ಲ.

ಮೇಲೆ ಹೇಳಿರುವಂತೆ, ಜೈನ ಹಾಗೂ ಬೌದ್ಧ ಧರ್ಮದ ಮೂಲ ಆಗಮ ಗ್ರಂಥಗಳು ಹಾಗೂ ಅವುಗಳಿಗೆ ಬರೆಯಲಾದ ಟೀಕಾಸಾಹಿತ್ಯ ಹಲವಾರು ಸಮಕಾಲೀನರಾದ ತತ್ವಜ್ಞಾನಿಗಳ ಪ್ರಸ್ತಾಪಗಳಿವೆ. ಅವುಗಳಲ್ಲಿ ಒಂದು ಸಂದರ್ಭವನ್ನು ಉದಾಹರಿಸುತ್ತೇನೆ. ಬೌದ್ಧ ದೀಘನಿಕಾಯ ಅಂತರ್ಗತ ಸಾಮನ್ನಫಲಸುತ್ತದಲ್ಲಿ ಆಜೀವಿಕ ಪಂಥಪ್ರಮುಖರ ಮಾಹಿತಿಗೆ ಹೆಬ್ಬಾಗಿಲು ತೆರೆದಿದೆ. ಈ ಉಲ್ಲೇಖ ಧುತ್ತೆಂದು ಇದ್ದಕ್ಕಿದ್ದ ಹಾಗೆ ಬಂದಿಲ್ಲ. ಅದೊಂದು ಪುಟ್ಟ ಮುದ್ದಾದ ಆಖ್ಯಾನದಂತೆ ಅನಾವರಣಗೊಂಡಿದೆ. ಕ್ರಿಪೂ ಆರನೆಯ–ಐದನೆಯ ಶತಮಾನದ, ಅಂದರೆ ಎರಡೂವರೆ ಸಾವಿರ ವರ್ಷದ ಹಿಂದಿನ ಐತಿಹಾಸಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಚಿತ್ರಣದ ಹಿನ್ನೆಲೆಯ ಅರಿವು ಇದ್ದರಂತೂ ಈ ಸುಂದರ ಸಂದರ್ಭ ರೋಮಾಂಚನಗೊಳಿಸುತ್ತದೆ.

# ೧೦೭೯, 'ಸ್ವನಿಮಾ', ೧೮ 'ಎ' ರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦

ನಾವು ಮೊದಲು ಈಗಿನ ಬಿಹಾರ್ ರಾಜ್ಯವನ್ನು ಮರೆತು ಆಗಿನ ಮಗಧ ಸಾಮ್ರಾಜ್ಯವನ್ನು ಮನಗಾಣಬೇಕು. ಮಹಾನ್ ಮಗಧದ ವಿಜಯ ಸ್ಕಂಧಾವಾರ ರಾಜಗೃಹ. ಆ ನೆಲೆವೀಡಿನ ಮಹಾ ಮಾಂಡಲಿಕ ಬಿಂಬಿಸಾರ ಶ್ರೇಣಿಕ (ಸೇಣಿಯ) ನನ್ನು ಸೆರೆಮನೆಗೆ ತಳ್ಳಿ ತಾನೇ ರಾಜನಾಗಿ ಸಿಂಹಾಸನ ಹತ್ತಿದವನು ಆತನ ಮಗ ಅಜಾತಶತ್ರು (ಕುಣಿಕ). ಒಮ್ಮೆ ಒಡ್ಡೋಲಗದಲ್ಲಿ ರಾಜಗದ್ದುಗೆ ಹತ್ತಿ ಕುಳಿತ ರಾಜ ಅಜಾತಶತ್ರುವಿಗೆ ಧಾರ್ಮಿಕ ಮಾರ್ಗದರ್ಶನದ ದಾಹವಾಯಿತು. ಸಹಜವಾಗಿಯೇ ಸಚಿವ ಸಂಪುಟದತ್ತ ರಾಜದೃಷ್ಟಿ ಹೊರಳಿತು. ದೊರೆಯ ಕೃಪಾಕಟಾಕ್ಷ ಪಾತ್ರರಾದ ಸಚಿವ ಸಂಪುಟದ ಆರು ಜನರಲ್ಲಿ ಒಬ್ಬೊಬ್ಬರೂ ಒಂದು ಹೆಸರಿನಂತೆ ಆರು ಜನ ಧರ್ಮಾಚಾರ್ಯರ ಹೆಸರುಗಳನ್ನು ಅಜಾತಶತ್ರುವಿನ ಸೂಕ್ತ ಆಯ್ಕೆಗೆಂದು ಹೇಳಿದರು :

> ಯೇ ತೇ ಸಮಣ ಬ್ರಾಹ್ಮಣಾ ಸಂಗಿನೋ ಗಣಿನೋ
> ಗಣಾಚರಿಯಾ ಆತಾ ಯಸಸ್ಸಿನೋ ತಿತ್ಥಕರಾ
> ಸಾಧು ಸಮ್ಮತಾ ಬಹುಜನಸ್ಸ ಸೇಷ್ಯಥಿದಂ –
> ಪೂರಣೋ ಕಸ್ಸಪೋ, ಮಕ್ಖಲಿ ಗೋಸಾಲೋ
> ಅಜಿತೋ ಕೇಸಕಂಬಲೀ, ಪಕುಧೋ ಕಚ್ಚಾಯನೋ
> ಸಂಜಯೋ ಬೇಲಟ್ಠಪುತ್ತಾ, ನಿಗಂಠೋ ನಾತಪುತ್ತೋ.
>
> (ಸುತ್ತನಿಪಾತ, ೩.೨ ಸಭಿಯಸುತ್ತ)

ಗೌತಮ ಬುದ್ಧನ ಸಮಕಾಲೀನರಾದ ಆರು ಜನ ಬೌದ್ಧರಲ್ಲದ ತೀರ್ಥಂಕರರು : ಪೂರಣ ಕಸ್ಸಪ, ಮಕ್ಖಲಿ ಗೋಸಾಲ, ಅಜಿತಕೇಸ ಕಂಬಲಿ, ಪಕುಧ ಕಚ್ಚಾಯನ, ಸಂಜಯ ಬೇಲಟ್ಠಿಪುತ್ತ ಮತ್ತು ನಿಗಂಠ ನಾತಪುತ್ತ. ಇವರು ಒಬ್ಬರೊಬ್ಬರೂ ಅಂದಿನ ಅತಿರಥ ಮಹಾರಥರೆಂದು ಇವರ ಪರಿಚಯವನ್ನು ಸಚಿವರು ಹೇಳಿದರು. ಇವರ ಪರಿಚಯ ಆಸಕ್ತಿದಾಯಕವೂ ಮಹತ್ವದ್ದೂ ಆಗಿದೆ. ಬೌದ್ಧ ಲೇಖಕರು ತಮ್ಮ ಧರ್ಮವನ್ನು ಪರಿಪಾಲಿಸದ, ಅನ್ಯಧರ್ಮಕ್ಕೆ ಸೇರಿದ ಮಹಾತ್ಮರನ್ನು ಹೇಗೆ ಕಂಡರು – ಎಂಬ ಕುತೂಹಲ ಸಹಜವೆ. ಅದನ್ನು ತಣಿಸುವ ದೃಷ್ಟಾಂತವಿದು. ಈ ಆರೂ ಜನ ದಾರ್ಶನಿಕರು ಬೌದ್ಧ ಧರ್ಮದ ಅನುಯಾಯಿಗರಲ್ಲ. ವಯೋವೃದ್ಧರು. ಮನೆತೊರೆದ ಚಿರಪರಿವ್ರಾಜಕರು. ಆ ಕಾಲದ ಪ್ರತಿಷ್ಠಿತರು. ಸಮಾಜದಲ್ಲಿ ಗೌರವ ಗಳಿಸಿದ ಗಣಾಚರಿಯರು. ತಮ್ಮದೇ ಆದ ಪಂಥ, ಸಂಪ್ರದಾಯ ಹೊಂದಿರುವವರು. ಇವರಿಗೆ ದೊಡ್ಡ ಹಿಂಬಾಲಕರ ತಂಡಗಳಿವೆ.

– ಹೀಗೆ ಈ ಆರು ಜನ ತಿತ್ಥಕರರನ್ನು (ಬೌದ್ಧರಲ್ಲದ ಋಷಿವರೇಣ್ಯರು) ಅಜಾತಶತ್ರು ರಾಜನ ಸಚಿವರು ಭಕ್ತಿಗೌರವ ಪುರಸ್ಸರವಾಗಿ ಒಡ್ಡೋಲಗದಲ್ಲಿ ಪರಿಚಯಿಸಿದರು. ಸಚಿವರ ಮಾತುಗಳಲ್ಲಿ ಲಾಘವತೆ ಇಲ್ಲ, ಕೊಂಕು ಇಲ್ಲ, ಉದಾಸೀನತೆ ಇಲ್ಲ. ಒಟ್ಟಾರೆ ಕಾಟಾಚಾರದ ಮಾತುಗಳಲ್ಲ. ಬೌದ್ಧ ಲೇಖಕರು ಪೂರ್ವ ಗ್ರಹಬಿಟ್ಟು ತಟಸ್ಥ ಭೂಮಿಕೆಯಿಂದ ಅಂದಿನ ಸಮಾಜದಲ್ಲಿ ಮನ್ನಣೆಯೊಂದಿದ ಹಿರಿಯ ತ್ಯಾಗಿಗಳನ್ನು ರಾಜಸಭೆಯ ಗಾಂಭೀರ್ಯಕ್ಕೆ ಕುಂದು ಬರದಂತೆ ಪರಿಚಯಿಸಿರುವುದು ಗಮನಸೆಳೆಯುತ್ತದೆ. ಅಜಾತಶತ್ರು ಒಡ್ಡೋಲಗದಲ್ಲಿ ತನ್ನ ಆಧ್ಯಾತ್ಮಿಕ ಹಸಿವನ್ನು ನಿವೇದಿಸಿಕೊಂಡ ಈ ಸಂದರ್ಭ ಕೂಡ ವಿಶಿಷ್ಟವಾದದ್ದು. ಆ ದಿನಗಳಲ್ಲಿ ಬುದ್ಧನ ಮಹಿಮೆ ನಾಡಿನ ಉದ್ದಗಲ ದಾಂಗುಡಿ ಇಟ್ಟಿತ್ತು. ಬುದ್ಧನ ಮಗಧದ ರಾಜಧಾನಿ ರಾಜಗೃಹಕ್ಕೆ ಬಂದು ತಂಗಿದ್ದನು. ಆತನೊಂದಿಗೆ ೧೨೫೦ ಭಿಕ್ಕುಗಳ ದೊಡ್ಡ ಪರಿವಾರ ಬೀಡು ಬಿಟ್ಟಿತ್ತು. ಮಕ್ಕಳವೈದ್ಯ ಜೀವಕನಿಗೆ ಸೇರಿದ ಆಮ್ರವನ (ಮಾವಿನ) ತೋಪಿನಲ್ಲಿ ಬೀಡು ಬಿಟ್ಟಿದ್ದರು. ಬುದ್ಧನ ಉಪದೇಶ ಪ್ರಭಾವದ ತರಂಗಗಳು ಅರಮನೆಯ ಒಳಹೊರಗೆ ಅನುರಣಿಸಿದ್ದುವು.

ಪ್ರತಿಯೊಬ್ಬ ಧರ್ಮಾಚಾರ್ಯನ ಘನ ವ್ಯಕ್ತಿತ್ವ ಹೇಳಿದ ಅಮಾತ್ಯರು ಮಾತನ್ನು ಮುಂದುವರಿಸಿ ಆಯಾ ಧರ್ಮ ಗುರುವನ್ನು ಹೋಗಿ ಕಾಣುವುದರಿಂದ ಅಜಾತಶತ್ರು ರಾಜನ ಮನಸ್ಸಿಗೆ ನೆಮ್ಮದಿ ಸಿಗುವುದೆಂದು ಕಳಕಳಿಯಿಂದ ಸೂಚಿಸಿದರು. ಆರು ಜನ ಮಂತ್ರಿಗಳು ಮಾತು ಕೇಳಿ, ಸೂಚನೆ ಆಲಿಸಿದ ಅಜಾತಶತ್ರು ತುಟಿ ಎರಡು ಮಾಡಲಿಲ್ಲ. ಸುಮ್ಮನೆ ಮೌನವಾಗಿದ್ದ ರಾಜನನ್ನು ಮಾತಿಗೆ ಎಳೆಯಲು ಜನಪ್ರಿಯನೂ ಮಕ್ಕಳ ವೈದ್ಯನೂ ಆದ ಜೀವಕನು ಎದ್ದು ನಿಂತನು; 'ಪ್ರಭುಗಳು ಬುದ್ಧನ ಬಳಿಗೆ ಹೋಗುವುದು ಲೇಸೆನಿಸುತ್ತದೆ' ಎಂದನು. ಮಂತ್ರಿಮಹೋದಯರ ಮಾತಿಗೆ ಮೌನವಾಗಿದ್ದ ದೊರೆಗೆ ಈ ಸೂಚನೆ ಹಿಡಿಸಿತು.

ಬುದ್ಧನು ತನ್ನ ಅಪರಿಮಿತ ಭಿಕ್ಕುಗಳೊಂದಿಗೆ ಇಳಿದುಕೊಂಡಿದ್ದ ರಾಜಗೃಹದ ಮಾವಿನ ತೋಟಕ್ಕೆ ಹೊರಟನು. ಆ ಆಮ್ರವನ ಜೀವಕನಿಗೆ ಸೇರಿದ್ದು. ಬುದ್ಧನ ದರ್ಶನ ಪಡೆದ ಮೇಲೆ ತನ್ನ ಅಂತರಂಗವನ್ನು ಕೊರೆಯುತ್ತಿದ್ದ ಸಂಗತಿಯನ್ನು ಅಜಾತಶತ್ರು ನಿವೇದಿಸಿದನು, ಮತ್ತು ತನ್ನ ಪ್ರಶ್ನೆಗೆ ಉತ್ತರ ಕೋರಿದನು :

<< ನಾನಾ ಲೌಕಿಕ ವ್ಯವಹಾರಗಳ, ವೃತ್ತಿಗಳ ಫಲಗಳು ನಿಚ್ಚಳವಾಗಿವೆ. ಹೀಗಿರುವಾಗ ಸನ್ಯಾಸತ್ವದಿಂದ ಏನಾದರೂ ಮೆಚ್ಚತಕ್ಕ ಪ್ರಯೋಜನ ಇದೆಯೆ? ನಾನು ಇದೇ ಪ್ರಶ್ನೆಯನ್ನು ಈ ಹಿಂದೆ ಬೇರೆ ಸನ್ಯಾಸಿ ತತ್ವಜ್ಞರಿಗೂ ಬ್ರಾಹ್ಮಣರಿಗೂ ಕೇಳಿದ್ದುಂಟು. ಆದರೆ ಇದು ತನಕ ನನಗೆ ತೃಪ್ತಿಯಾಗುವಂಥ ಉತ್ತರ ಸಿಕ್ಕಿಲ್ಲ >>.

<< ನೀವು ಕೇಳಿದ ಕೇಳ್ವಿಗಳಿಗೆ ದೊರೆತ ಉತ್ತರಗಳನ್ನು ತಿಳಿಸುವಿರಾ? >>

ಅದರಂತೆ ತನ್ನ ಕೇಳ್ವಿಗೆ ಆರೂ ಜನ ಶಮಣರು ಕೊಟ್ಟ ಉತ್ತರಗಳನ್ನು ಅಜಾತಶತ್ರು ನಿವೇದಿಸಿದನು. ಅವರು ಯಾರೂ ರಾಜನ ಪ್ರಶ್ನೆಗೆ ತಾರ್ಕಿಕವಾಗಿ ಸಮಂಜಸವಾದ ಉತ್ತರ ಕೊಡಲಿಲ್ಲ. "ಪ್ರತಿಯೊಬ್ಬರೂ ನುಣುಚಿಕೊಳ್ಳುತ್ತ ಹೊರಳು

ಮಾತಾಡಿದ್ದರು. ಅವರೆಲ್ಲರೂ ಅವರವರು ಆರಂಭಿಸಿದ ಪಂಥದ ಸಿದ್ಧಮಾದರಿಯಂತೆ ಇರುವ ಉತ್ತರಗಳನ್ನು ಪುನರುಚ್ಚರಿಸಿದ್ದರು. ಯಾರೊಬ್ಬರೂ ತರ್ಕಬದ್ಧ ಸಮಂಜಸ ಉತ್ತರ ಕೊಡಲು ಯತ್ನಿಸಲಿಲ್ಲ".

ಅಜಾತಶತ್ರು ಬೇರೆ ಬೇರೆ ಆರುಜನ ಧರ್ಮಾಚಾರ್ಯರನ್ನು ಕಂಡು ಬಂದ ವಿವರ ಹೇಳಿದ್ದನ್ನು ಬುದ್ಧನು ಸಾವಧಾನವಾಗಿ ಆಲಿಸಿದ್ದನು. ಅನಂತರ ಅಜಾತಶತ್ರುವಿಗೆ ಅನಿಕೇತನ ಜೀವನದ ಅನುಕೂಲಗಳು ಏನೇನು ಎಂಬುದನ್ನು ಉಪದೇಶಿಸಿದನು. ರಾಜನಿಗೆ ಆ ಧರ್ಮೋಪದೇಶ ಹಿಡಿಸಿತು, ಸಮಾಧಾನ ಸಿಕ್ಕಿತು.

ಈ ರೋಚಕ ಆಖ್ಯಾನದ ಆಯಾಮ ಮನನೀಯವಾಗಿದೆ. ಈ ಪ್ರಸಂಗ ಬೌದ್ಧ ಧರ್ಮದ ಗ್ರಂಥಗಳಿಗೆ ಸೇರಿದ್ದು, ದಿಟವೆ. ಇದು ಬುದ್ಧನಿಗೆ ಪ್ರಾಧಾನ್ಯ ಕೊಡುವ ಕಥನವೆಂಬುದೂ ನಿಜವೆ. ಅದೆಲ್ಲ ಒಪ್ಪಿಯೂ ಇದರ ಒಟ್ಟು ಸಂದರ್ಭದಿಂದ ಪ್ರತೀತವಾಗುವುದು ಯಾವುದು ಎಂಬುದನ್ನು ಮನಗಾಣಬಹುದು. ಬುದ್ಧನೂ ಬೌದ್ಧ ಧರ್ಮವೂ ಸಮಕಾಲೀನ ಬೌದ್ಧೇತರ ಮತಪಂಥ ಸಿದ್ಧಾಂತ ಹಾಗೂ ಅವುಗಳ ವರಿಷ್ಠ ಆಚಾರ್ಯ ಅಧ್ವರ್ಯುಗಳ ನಡುವೆ ಸ್ವಪ್ರಕಾಶ ಸ್ಥಾಪಿಸಬೇಕಾಗಿತ್ತು. ಸಮಕಾಲೀನ ಧರ್ಮ, ಗುರುವರ್ಯರ ವರ್ಚಸ್ಸು ಇರುವುದನ್ನು ಅಂಗೀಕರಿಸುತ್ತ ಅವರಿಗಿಂತ ಮಿಗಿಲಾದದ್ದು ತಮ್ಮ ಧರ್ಮದಲ್ಲಿ ಉಂಟು – ಎಂಬುದನ್ನು ತೋರಿಸಬೇಕಾದ ಜರೂರು ಒದಗಿತ್ತು. ಅಂದಿನ ಕಾಲದಲ್ಲಿ ಇದ್ದ ಇತರ ಮಹಾಮಹಿಮರು ತಮ್ಮ ಜನಪರ ಸಿದ್ಧಾಂತಗಳಿಂದ ಜನಾನುರಾಗಿ ಆಗಿದ್ದರು. ಅವರಲ್ಲಿ ಆಜೀವಿಕರು ಮತ್ತು ನಿರ್ಗ್ರಂಥರು ಪ್ರಮುಖರಾಗಿದ್ದರು.

ಅಜಾತಶತ್ರುವಿನ ಆಸ್ಥಾನದಲ್ಲಿ ಸಚಿವರು ಹೆಸರಿಸಿದ ಆರು ಜನ ಋಷಿಗಳಲ್ಲಿ ನಿಗಂಠನಾತಪುತ್ತನನ್ನು ಕುರಿತು ವಿಸ್ತಾರವಾದ ವಾಙ್ಮಯವಿದೆ. ಇನ್ನುಳಿದ ಅಯ್ದು ಜನರು – ಪೂರಣ ಕಸ್ಸಪ, ಮಕ್ಖಲಿ ಗೋಸಾಲ, ಅಜಿತಕೇಸ ಕಂಬಲಿ, ಪಕುಧ ಕಚ್ಚಾಯನ ಮತ್ತು ಸಂಜಯಬೇಲಟ್ಠಿಪುತ್ತ – ಇವರ ಜೀವನ ಸಾಧನೆ ಕುರಿತು ಉಪಲಬ್ಧ ಸಾಹಿತ್ಯ ಪರಿಮಿತವಾಗಿದೆ. ಆದರೆ ಇವರಲ್ಲಿಯೂ ಮಕ್ಖಲಿ ಗೋಸಾಲನನ್ನು ಕುರಿತು ಜೈನ ಆಕರಗಳಲ್ಲಿ ಸಾಕಷ್ಟು ಮಾಹಿತಿ ಸಿಗುತ್ತದೆ. ಭಗವತೀ ಸೂತ್ರ, ವ್ಯಾಖ್ಯಾ ಪ್ರಜ್ಞಪ್ತಿ, ವಿಯಾಹ ಪಣ್ಣತ್ತಿ ಎಂಬ ಮೂರು ಬೇರೆ ಬೇರೆ ಹೆಸರುಗಳಿರುವ ಗ್ರಂಥದಲ್ಲಿ ಇಡೀ ಹದಿನೈದನೆಯ ಶತಕ (ಅಧ್ಯಾಯ) ಮಕ್ಖಲಿ (ಮಂಖಲಿಪುತ್ತ) ಗೋಸಾಲನ ಜೀವನ ಚರಿತೆಗೆ ಮೀಸಲಾಗಿದೆ.

ಈ ಅಯ್ವರೂ ಆಜೀವಿಕರೆಂದು ಹೇಳುವುದುಂಟು. ಆದರೆ ಈ ಅಭಿಪ್ರಾಯವನ್ನು ಮರು ಪರಿಶೀಲಿಸುವುದು ಲೇಸು. ಸುತ್ತನಿಪಾತ ಪಾಲಿಗ್ರಂಥದಲ್ಲಿ ಹೇಳಿದ ಆರು ಜನ ಆಚಾರ್ಯರನ್ನು ಅವದಾನ ಶತಕ, ದಿವ್ಯಾವದಾನ, ಮಹಾವಸ್ತು, ಮಹಾವ್ಯುತ್ಪತ್ತಿ, ದೀಘನಿಕಾಯ, ಮಜ್ಝಿಮ ನಿಕಾಯ, ಸಮ್ಯುತ್ತ ನಿಕಾಯ – ಮುಂತಾದ ಬೌದ್ಧ ಗ್ರಂಥಗಳಲ್ಲಿಯೂ ಹೆಸರಿಸಿದೆ. ಇವರನ್ನು ಶಾಸ್ತಾರಃ (=ಮುಕ್ತಿ ಮಾರ್ಗ ಬೋಧಿಸುವ ಗುರುಗಳು) ಎಂದು ಹೇಳಿದೆ. ಈ ತತ್ವಜ್ಞಾನಿಗಳು ಅಂದಿನ ಸಮಾಜದಲ್ಲಿ ಪೂಜನೀಯರೆನಿಸಿದ್ದರು. ತೀರ್ಥಂಕರ ಮಹಾವೀರ (ನಿಗಂಠ ನಾತಪುತ್ತ) ಮತ್ತು ಗೌತಮ ಬುದ್ಧ – ಇವರಿಬ್ಬರನ್ನು ೭ ಬಿಟ್ಟು ಉಳಿಸಿ ಅಯ್ದುಜನ ಋಷಿಗಳ ಕಿರು ಪರಿಚಯ ಇಲ್ಲಿದೆ.

## ಸಂಜಯ ಬೇಲಟ್ಠಿಪುತ್ತ

ಬುದ್ಧ–ಮಹಾವೀರರು ಇದ್ದ ಕಾಲದಲ್ಲಿ ತತ್ವಜ್ಞಾನಿ ಸಂಜಯ ಬೇಲಟ್ಠಿಪುತ್ರನು ಕ್ರಿಯಾಶೀಲನಾಗಿದ್ದನು. ಪಾಲಿ ಭಾಷೆಯ ಬೌದ್ಧ ಗ್ರಂಥಗಳಲ್ಲಿ ಈತನ ಹೆಸರನ್ನು ಸಂಜಯೋ ಬೇಲಟ್ಠಿಪುತ್ತೋ ಎಂದೂ ಸಂಸ್ಕೃತದಲ್ಲಿ ಸಂಜಯಿನ್ ವೈರಾಟ್ಟೀ ಪುತ್ರ (ಸಂಜಯೀ ವೈರತಿಪುತ್ರ) ಎಂದೂ ಹೇಳಿದೆ. ಕ್ರಿಪೂ. ಎರಡನೆಯ ಶತಮಾನದ ಪ್ರಾಚೀನ ಪ್ರಾಕೃತ ಇಸಿಭಾಸಿಯಮ್ (ಋಷಿಭಾಷಿತಂ) ಗ್ರಂಥದಲ್ಲಿ, ೩೯ನೆಯ ಅಧ್ಯಾಯದಲ್ಲಿ, ಅರ್ಹತ್ ಋಷಿ ಸಂಜಯನ ಉಪದೇಶವನ್ನು ನಿರೂಪಿಸಿದೆ. ಉತ್ತರಾಧ್ಯಯನ ಗ್ರಂಥದಲ್ಲೂ ಈತನ ಪರಿಚಯ ಬಂದಿದೆ.

ಕಂಪಿಲಪುರದ ರಾಜ ಸಂಜಯನು ಕೇಶರೋದ್ಯಾನದಲ್ಲಿ ಬೇಟೆ ಆಡುವಾಗ ಜಿಂಕೆಗೆ ಬಾಣ ಹೂಡಿದನು. ಅದು ಅಲ್ಲಿ ತಪಸ್ಸು ಮಾಡುತ್ತಿದ್ದ ಗರ್ದಭಿಲ್ಲ ಮುನಿಯ ಬಳಿಗೆ ಬಂದು ಪ್ರಾಣ ಬಿಟ್ಟಿತು. ಸಂಜಯನು ಋಷಿಯ ಕ್ಷಮೆ ಕೇಳಿದನು. ಅಲ್ಲದೆ ಗರ್ದಭಿಲ್ಲ ಮುನಿಯ ಬೋಧನೆಯಿಂದ ಪ್ರಭಾವಿತನಾಗಿ ದೀಕ್ಷೆ ಪಡೆದನು [ಉತ್ತರಾಧ್ಯಯನ (ಕಿ.ಶ. ೩–೪ ಶತಮಾನ) : ಸನ್ಯತಿಯ (ಸಂಜಯಿಯ) ಅಧ್ಯಾಯ ೧೮]. ಋಷಿಭಾಷಿತ ಗ್ರಂಥದ ಪ್ರಕಾರ ಸಂಜಯನು ವಿದೇಹ ರಾಜ್ಯದ ರಾಜಧಾನಿಯಾದ ಮಿಥಿಲಯ ರಾಜ. (ಈಗಿನ ದರ್ಭಾಂಗ ಜಿಲ್ಲೆಯ ಜನಕ ಪುರವೇ ಅಂದಿನ ಮಿಥಿಲೆ). ಬೌದ್ಧ ಗ್ರಂಥಗಳಲ್ಲಿ (ದೀಘನಿಕಾಯ ೨. ೧೪೪) ಹೇಳಿರುವ ಸಂಜಯ ಬೇಲಟ್ಠಿಪುತ್ರನು ಋಷಿಭಾಷಿತ ಪರಿಚಯಿಸಿರುವ ಸಂಜಯ ಋಷಿಯೂ ಒಬ್ಬನೇ ಎಂದು ತಿಳಿಯಲಾಗಿದೆ. ಈತನ ಉಪದೇಶ ಕುರಿತು ಬೌದ್ಧ ಗ್ರಂಥದಲ್ಲಿ ಬಂದಿರುವುದಕ್ಕೆ ಹೋಲುವಂತಹ ವಿಚಾರ ಋಷಿಭಾಷಿತದಲ್ಲೂ ಹೇಳಿದೆ. ಉದಾಹರಣೆಗೆ, 'ರಹಸ್ಸೇ ಖಲುಭೋ ಪಾವಕಮ್ಮಂ' (ಋಷಿಭಾಷಿತ, ಅಧ್ಯಾಯ ೩೯), 'ಅಶುಭಕರ್ಮವನ್ನು ಸಮಗ್ರವಾಗಿ ಅರಿಯುವುದು ಸಂಶಯಾಸ್ಪದ ವಿಚಾರ' – ಎಂಬ ಸಿದ್ಧಾಂತ, ಹಾಗೂ 'ಕೆಟ್ಟ ಕೆಲಸಗಳನ್ನು ತಾನೂ ಮಾಡಬಾರದು, ಬೇರೆಯವರಿಂದಲೂ ಮಾಡಿಸಬಾರದು. ಪರಿಸರದ ಒತ್ತಡದಿಂದ ಅಕಸ್ಮಾತ್ತಾಗಿ ದುಷ್ಕೃತ್ಯವನ್ನು ಎಸಗಿದ್ದೇ ಆದರೆ ಅದನ್ನು ಮತ್ತೊಮ್ಮೆ ಮಾಡಬಾರದು' – ಎಂಬುದು

ಬೌದ್ಧ ಗ್ರಂಥಗಳಲ್ಲಿನ ಸಂಜಯ ಬೇಲಟ್ಠಿಪುತ್ರನ ತತ್ವಕ್ಕೆ ತಾಳೆ ಆಗುತ್ತದೆ.

ಸಂಜಯ ಬೇಲಟ್ಠಿಪುತ್ರನ ಒಟ್ಟು ಉಪದೇಶವನ್ನು ಪರಿಶೀಲಿಸಿ ನೋಡಿದರೆ ಈತನನ್ನು ಅಜೀವಿಕ ಸಂಪ್ರದಾಯದ ಬದಲು ಚಾರ್ವಾಕ ಪಂಥದವನೆಂದು ಹೇಳಬಹುದು. ಈತ ಪ್ರತಿಪಾದಿಸಿದ್ದು ಅಜ್ಞೇಯತಾವಾದ. ಆಜೀವಿಕರು ಅಜ್ಞೇಯತಾವಾದಿಗಳಲ್ಲ. ಈತನ ತತ್ವದ ತಿರುಳು ಹೀಗಿದೆ

<< ಜಡ ಪ್ರಪಂಚವನ್ನು ಉಳಿದು ಬೇರೆ ಯಾವುದೂ ಇಲ್ಲ. ಸೃಷ್ಟಿಕರ್ತನಿಲ್ಲ. ಇಂದ್ರಿಯ ಗೋಚರವಾದದ್ದರ ಹೊರತು ಬೇರೆ ಯಾವುದೇ ತತ್ವ ಇದೆ ಎಂಬುದನ್ನು ತಿಳಿಯಲು ಸಾಧ್ಯವಿಲ್ಲ >>.

ಇದು ಅಜ್ಞೇಯತಾವಾದದ ಸಾರ. ಚಾರ್ವಾಕರೂ ಲೋಕಾಯತರೂ ಅಜ್ಞೇಯತಾವಾದಿಗಳು. ಆದರೆ ಆಜೀವಿಕರು ಅಜ್ಞೇಯತಾವಾದಿಗಳಲ್ಲ. ಆದ್ದರಿಂದ ಸಂಜಯ ಬೇಲಟ್ಠಿಪುತ್ರನನ್ನು ಆಜೀವಿಕ ಸಮುದಾಯಕ್ಕೆ ಸೇರಿಸುವುದು ಸರಿಯಲ್ಲ – ಎಂಬ ಅಭಿಪ್ರಾಯವನ್ನು ಪರಿಗಣಿಸಬೇಕು. ಸಂಜಯನನ್ನು ಚಾರ್ವಾಕ ಪರಂಪರೆಗೆ ಆದಿಪುರುಷನೆಂದು ಕರೆಯಬಹುದು. ಆಜೀವಿಕ, ಚಾರ್ವಾಕ, ಜೈನ, ಬೌದ್ಧ ಸಿದ್ಧಾಂತಗಳ ಕವಲುದಾರಿಯಲ್ಲಿ ನಿಲ್ಲುವ ಕೈಗಂಬವೆಂದು ಸಂಜಯನನ್ನು ಗುರುತಿಸಿದರೆ ತಪ್ಪಾಗುವುದಿಲ್ಲ.

<< ತಾವು ನನ್ನನ್ನು 'ಪರಲೋಕವೆಂಬ ಇನ್ನೊಂದು ಲೋಕ ಇದೆಯಾ?' ಎಂದು ಕೇಳುವುದಾದರೆ, 'ಅದು ಇದೆ' ಎಂದು ನಾನು ನಂಬಿದವನಾಗಿದ್ದರೆ ನಾನು ಹಾಗೆಂದೇ ನಿನಗೆ ಹೇಳಬೇಕು. ಆದರೆ ನಾನು ಹಾಗೆಂದು ಹೇಳುವುದಿಲ್ಲವಾದಲ್ಲಿ ಆಗ 'ಅದು ಇದೆ' ಎಂದು ನಾನು ಹೇಳುವುದಿಲ್ಲ. 'ಅದು ಬೇರೆಯಾಗಿದೆ' ಎಂದೂ ನಾನು ಹೇಳುವುದಿಲ್ಲ. 'ಅದು ಹಾಗಿಲ್ಲ' ಎಂದೂ ನಾನು ಹೇಳುವುದಿಲ್ಲ. ಅಥವಾ 'ಅದು ಹಾಗಿಲ್ಲ, ಹಾಗಲ್ಲ' ಎಂದೂ ನಾನು ಹೇಳುವುದಿಲ್ಲ >> ಇದು ಸಂಜಯನ ಉಪದೇಶ ಸರಣಿಗೊಂದು ಉದಾಹರಣೆ.

ಸಾರಿಪುತ್ರ ಮತ್ತು ಮೊಗ್ಗಲ್ಲಾನ ಎಂಬ ಇಬ್ಬರು ಪರಿವ್ರಾಜಕ ಸಂಜಯ ಬೇಲಟ್ಠಿ ಪುತ್ರನ ಶಿಷ್ಯವರೇಣ್ಯರೆಂದು ಖ್ಯಾತನಾಮರು. ಆದರೆ ಗುರುವಿನ ಕಡೆಗಾಲದಲ್ಲಿ ಇವರಿಬ್ಬರೂ ಗುರುವನ್ನು ತೊರೆದು ಗೌತಮಬುದ್ಧನ ಶಿಷ್ಯರಾದರು. ಈ ಸುದ್ದಿಯನ್ನು ಕೇಳಿ ತಿಳಿದು ಸಂಜಯನು ನೆತ್ತರು ಕಾರಿದನು. ಅರಿವು ಅಳಿಯಿತು. ಉಸಿರು ನಿಂತು ಹೋಯಿತು.

### ಪೂರಣ ಕಸ್ಸಪ

ಆಜೀವಿಕ ಗುರುಪರಂಪರೆಯಲ್ಲಿ ಪೂರಣ ಕಸ್ಸಪನಿಗೆ ಗಣ್ಯಸ್ಥಾನವಿದೆ. ಪಾಲಿಭಾಷೆಯ ಗ್ರಂಥಗಳಲ್ಲಿ ಈತನ ಹೆಸರನ್ನು ಪೂರಣೋ ಕಸ್ಸಪೋ ಎಂದೂ ಸಂಸ್ಕೃತದಲ್ಲಿ ಪೂರಣ ಕಾಶ್ಯಪ ಎಂದೂ ಹೇಳಿದೆ. ಈತ ಮಕ್ಖಲಿ ಗೋಸಾಲನಿಗಿಂತ ಹಿರಿಯನಾಗಿದ್ದು ಆಜೀವಿಯ ಪಂಥ ಪ್ರವರ್ತಕ ಆದಿಪುರುಷರಲ್ಲಿ ಒಬ್ಬನು. ಬೌದ್ಧ ಸಾಮನ್ನಫಲಸುತ್ತದಲ್ಲಿ (೧. ಪು. ೬೬) << ಶಕ್ತಿಗುಂದಿಸುವುದರಲ್ಲಿ, ಕೊಲ್ಲುವುದರಲ್ಲಿ, ಹೊಡೆಯುವುದರಲ್ಲಿ, ಹಿಂಸೆಯಲ್ಲಿ ಪಾಪವೂ ಇಲ್ಲ, ಪುಣ್ಯವೂ ಇಲ್ಲ – ಎಂದು ಪೂರಣ ಕಸ್ಸಪನು ಭಾವಿಸಿದ್ದನು. ಈತನು ನಮ್ಮ (ಬೌದ್ಧ) ಧರ್ಮದಲ್ಲಿರುವ ಮಾತನ್ನೇ ಹೇಳಿರುವುದರಿಂದ ವಂದನೆಗೆ ಅರ್ಹನಾಗಿದ್ದಾನೆ (ಅರಹತಿ ಮಾನನಮ್) >> ಎಂದು ಮಾನ್ಯನಾಗಿದ್ದಾನೆ. ತಮಿಳು ಭಾಷೆಯಲ್ಲಿರುವ ನೀಲಕೇಶಿ ಕಾವ್ಯದಲ್ಲಿ (ಅಧ್ಯಾಯ ೧, ಪದ್ಯ ಸಂಖ್ಯೆ ೬೬೮, ೬೭೩) ಪೂರಣನ್ ಎನ್ಬಾನ್ ಪುರುವರಕ್ಕಜ್ಞವನ್ – (ಪೂರಣನು ಎಂಬುವನು ಪರಮಜ್ಞಾನಿ) ಎಂದು ಹೇಳಿದೆ.

ಬೌದ್ಧ ಸಂಯುತ್ತ ನಿಕಾಯ, ದಿವ್ಯಾವದಾನ, ಮಹಾವಸ್ತು ಮುಂತಾದ ಗ್ರಂಥಗಳಿಂದ ಈತನ ಜೀವನ ಚಿತ್ರಣ ತಿಳಿಯುತ್ತದೆ. ಮಕ್ಖಲಿ ಗೋಸಾಲನ ಸಿದ್ಧಾಂತಕ್ಕೆ ಪೂರಣನ ಸಿದ್ಧಾಂತ ಸಂವಾದಿಯಾಗಿದೆ. ನಂದವಚ್ಛ, ಕಿಸ ಸಂಕಿಚ್ಚ, ಮಕ್ಖಲಿ ಗೋಸಾಲ – ಇವರ ಸ್ಥಾನ – ಗೌರವಕ್ಕೆ ಸದೃಶವಾದ ಮನ್ನಣೆ ನೀಡಿರುವುದು ಈತನ ಅಸಾಧಾರಣ ವ್ಯಕ್ತಿತ್ವ ಮತ್ತು ಪಾಂಡಿತ್ಯವನ್ನು ಸೂಚಿಸುತ್ತದೆ. ಬುದ್ಧಘೋಷನು ಪೂರಣ ಎಂಬ ಹೆಸರು ಬರಲು ಕಾರಣ, ಮತ್ತು ಈತ ಸನ್ಯಾಸಿ ಆದದ್ದು ಯಾಕೆ – ಎಂಬುದಕ್ಕೆ ರೋಚಕ ಕಥಾತ್ಮಕ ವಿವರಣೆ ಕೊಟ್ಟಿದ್ದಾನೆ :

ಅ. ಪೂರಣನು ಒಬ್ಬ ಆಳಾಗಿ ಯಜಮಾನನ ಬಳಿ ಸೇರಿದನು. ಅದುವರೆಗೆ ೯೯ ಜನ ಆಳುಗಳಿದ್ದರು. ಈತ ಸೇರಿದ್ದರಿಂದ ನೂರರ ಸಂಖ್ಯೆ ಪೂರ್ಣವಾಯಿತು. ಅದರಿಂದ ಈತನಿಗೆ ಪೂರಣನೆಂದು ಹೆಸರಾಯಿತು.

ಆ. ಈತ ಒಳಿತಾದ ಗಳಿಗೆಯಲ್ಲಿ ಹುಟ್ಟಿದ್ದರಿಂದ ಬೈಗುಳ ಬಳಸದೆ ಅಕ್ಕರೆಯಿಂದ ಕಂಡರು. ಆದರೂ ತನ್ನ ಒಡೆಯನನ್ನು ತೊರೆದು ಓಡಿಹೋದ. ಪಲಾಯನ ಕಾಲದಲ್ಲಿ ಬಟ್ಟೆ ಬರೆಯನ್ನು ಕಳ್ಳರು ಕದ್ದರು. ಈತ ಜಾತರೂಪಧರನಾಗಿ ಬಂದಾಗ ಜನರು ಯತಿಯೆಂದು ಮನ್ನಣೆ ತೋರಿದರು. ನಗ್ನತೆಗೆ ಇಂಥ ಮರ್ಯಾದೆ ಇದೆಯೆಂದು ಅರಿತು ದಿಗಂಬರನಾದನು. ಧರ್ಮಶಾತ ಪ್ರತಿಚ್ಛನ್ನ, ಧರ್ಮವೇ ಹೊದಿಕೆ ಆಯಿತು!

ಆಜೀವಿಕ ಸಂಘದ ಪ್ರಮುಖ ನಾಯಕರಲ್ಲಿ ಒಬ್ಬನಾದ ಪೂರಣಕಸ್ಸಪನನ್ನು 'ನಿರ್ಗ್ರಂಥ'ನೆಂದು ಕೆಲವು ಕಡೆ ಪರಿಚಯಿಸಲಾಗಿದೆ :

i. ಪೂರಣೋ ನಿರ್ಗ್ರಂಥೋ ಕಾಲಗತಃ
   ಅಥ ತೇ ನಿರ್ಗ್ರಂಥಾಃ ಪೂರಣಂ ಮೃಗಯ ಮಾಣಾಃ.

ii. ಅನ್ಯತೀರ್ಥಿಕ ಶ್ರಾವಕೈರ್ ಅಪಿ ಪೂರಣಾದಿನಮ್
   ನಿರ್ಗ್ರಂಥಾನಾಂ ಪ್ರತ್ಯೇಕ ಪ್ರತ್ಯೇಕ ಮಂಡಪಃ ಕಾರಿತಃ.

ಪೂರಣನ ಮರಣದ ಹಿಂದೆ ಅಹಿತಕರ ಘಟನೆಯಿದೆ. ಕೋಸಲ ದೇಶದ ನೆಲೆವೀಡಾದ ಶ್ರಾವಸ್ಥಿಯಲ್ಲಿ ದೊಡ್ಡದೊಂದು ಪವಾಡ ನಡೆಯಿತು. ಬುದ್ಧನು ಗೆದ್ದನು. ಪೂರಣನೂ ಅವನ ಹಿಂಬಾಲಕರೂ ಸೋತು ಸುಣ್ಣವಾದರು. ಅಪಮಾನ ಸಹಿಸಲು ಆಗಲಿಲ್ಲ. ಪೂರಣನು ಕೊರಳಿಗೆ ಮಡಕೆ ಕಟ್ಟಿಕೊಂಡು ನೀರಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಂಡನು. ಈ ಘಟನೆಗಳು ನಡೆದದ್ದು ಮಗಧದ ರಾಜ ಶ್ರೇಣಿಕ (ಬಿಂಬಿಸಾರ) ಮತ್ತು ಕೋಸಲದ ರಾಜ ಪ್ರಸೇನಜಿತ (ಪಸೇನದಿ) ಆಳ್ವಿಕೆಯಲ್ಲಿ.

ಪೂರಣನು ಬೋಧಿಸಿದ್ದು ಅದೃಷ್ಟವಾದ (ದೈವಾಯತ್ತವಾದ). ದೀಘನಿಕಾಯದಲ್ಲಿ (i. ಪುಟ ೫೨) ಈತನ ಸಿದ್ಧಾಂತ ಸಾರ ನಿರೂಪಿತವಾಗಿದೆ : << ಯಾವುದೇ ಒಂದು ಕೆಲಸ ಮಾಡಿದಾತ, ಕೆಲಸ ಮಾಡಲು ಕಾರಣನಾದಾತ, ಒಬ್ಬನ ಬಾಳನ್ನು ಹಾಳು ಮಾಡಿದಾತ, ಕಳ್ಳ, ಮನೆ ಮುರುಕ, ಸುಲಿಗೆಕೋರ, ವ್ಯಭಿಚಾರಿ, ಸುಳ್ಳುಗಾರ – ಇವರು ಪಾಪ ಮಾಡಿದಂತೆ ಆಗುವುದಿಲ್ಲ. ಹರಿತ ಮೊನೆಯ ಆಯುಧದಿಂದ ತುಂಡರಿಸಿ ಈ ನೆಲದ ಮೇಲಿನ ಬದುಕನ್ನು ಕೇವಲ ಒಂದು ಮಾಂಸದ ಮುದ್ದೆಯಾಗಿ ಮಾಡಿದರೂ (ಏಕ ಮಂಸ ಪುಂಜಂ ಕರೇಯ್ಯ) ಆತ ಪಾಪಕೃತ್ಯ ಮಾಡಿರುವುದಿಲ್ಲ. ತಾನೇ ಖುದ್ದಾಗಿಯೊ ಅಥವಾ ಇತರರಿಂದಲೊ ಒಬ್ಬನನ್ನು ಹೊಡೆದು (ಹನಂತೋ) ಬಡಿದು (ಘಾತೇಂತೋ) ಅಂಗಹೀನಗೊಳಿಸಿ ಛಿಂದಂತೋ ಚಿತ್ರಹಿಂಸೆ ಕೊಟ್ಟು ಗಂಗಾನದಿಯ ತೆಂಕಣತಡಿಗೆ ಬಂದಾಗಲೂ ಆತ ಪಾಪ ಮಾಡಿದಂತಲ್ಲ, ಪಾಪ ಅವನನ್ನು ಅರಸಿ ಬರುವುದೂ ಇಲ್ಲ (ನತ್ಥಿ ಪಾಪಸ್ಸ ಆಗಮೋ). ಇದೇ ರೀತಿಯಲ್ಲಿ ಒಬ್ಬ ವ್ಯಕ್ತಿ ದಾನಧರ್ಮ ಮಾಡಿ, ಬಲಿಕೊಟ್ಟು, ಇಲ್ಲವೇ ದಾನಾದಿಗಳನ್ನು ಕೊಡಲೂ ಯಾಗಾದಿಗಳನ್ನು ಮಾಡಲೂ ಬಲಿಕೊಡಲೂ ಪ್ರೇರಣೆಯಿತ್ತು ಗಂಗಾನದಿಯ ಬಡಗಣ ದಂಡೆಯೆಡೆಗೆ ಹೋದಾಗಲೂ (ಗಂಗಾತೀರಂ ಗಚ್ಛೇಯ್ಯ) ಪುಣ್ಯ ಸಂಪಾದನೆ ಆಗುವುದಿಲ್ಲ. ಪುಣ್ಯ ಅವನ ಬಳಿ ಸುಳಿಯುವುದಿಲ್ಲ. ಉದಾರತೆ ಸಂಯಮ ಉಪವಾಸ ಪ್ರಾಮಾಣಿಕತೆ (ಸಚ್ಚವಜ್ಜೇನ) – ಇವನ್ನು ಪಾಲಿಸುವುದರಿಂದ ಪುಣ್ಯಗಳಿಕೆಯಿಲ್ಲ. ಅಥವಾ ಪುಣ್ಯ ಹುಡುಕಿಕೊಂಡು ಅವನ ಹತ್ತಿರ ಬರುವುದಿಲ್ಲ >> (ದೀಘನಿಕಾಯ).

ಆಜೀವಿಕರು ವಿರಾಗಿಗಳು. ಎಲ್ಲ ಆಸ್ತಿ ಸಂಪತ್ತನ್ನು ತೊರೆದವರು. ಭಿಕ್ಷಾಟನೆ ಮಾಡಿ ಬದುಕಿದವರು. ದೇಹದಂಡಿಸಲು ಉಪವಾಸ ಮಾಡುತ್ತಿದ್ದರು. ಆಮರಣಾಂತ ಉಪವಾಸ ಕೈಗೊಳ್ಳುತ್ತಿದ್ದುದೂ ಉಂಟು. 'ಆಜೀವಿಕ' ಎಂಬ ಮಾತಿನ ಹುರುಳು 'ಬಾಳುವಕ್ರಮ' ಎಂಬುದು. ಇವರು ಆಸ್ತಿಕರಲ್ಲ, ನಾಸ್ತಿಕರು. ಬಟ್ಟೆ ತೊಟ್ಟ ವಿರಕ್ತರಲ್ಲ. ದಿಗಂಬರ ತಪಸಿಗರು. ಆತ್ಮವು ಅದಕ್ಕೆ ನಿಗದಿಪಡಿಸಿದ ಕಾಲಾವಧಿ ಪೂರೈಸಿದ ಕೂಡಲೆ ಬಿಡುಗಡೆ ಪಡೆಯುತ್ತದೆ. ಅಲ್ಲಿಯವರೆಗೆ ಅನೇಕ ಜನ್ಮಗಳಲ್ಲಿ ಹಾದುಬರುತ್ತದೆ – ಎಂದು ನಂಬಿದವರು. ಇವರು ಸಮಾಜದ ಮೇಲೆ ತುಂಬ ಪ್ರಭಾವ ಬೀರಿದರು. ಇವರ ವರ್ಚಸ್ಸನ್ನು ತಗ್ಗಿಸಿದವರು ಬೌದ್ಧರು ಮತ್ತು ಜೈನರು. ಈ (ಧಾರ್ಮಿಕ) ಸನ್ಯಾಸಿಗಳ ಸಂಪ್ರದಾಯ ಮೊದಲು ಗಂಗಾನದಿಯ ಕಣಿವೆ ಪ್ರದೇಶದಲ್ಲಿ ಕುಡಿಯಿಟ್ಟು ಭಾರತದ ಉದ್ದಗಲಗಳಲ್ಲಿ ಹಬ್ಬಿತು.

ಆಜೀವಿಕ ಸಂಪ್ರದಾಯ ಬೌದ್ಧ ಧರ್ಮಕ್ಕಿಂತಲೂ ಪ್ರಾಚೀನವಾದದ್ದು. ಮೌರ್ಯರು ಪಟ್ಟಾಭಿಷಿಕ್ತರಾಗುವ ವೇಳೆಗಾಗಲೇನೆ ಇವರು ಪ್ರಚಾರಕ್ಕೆ ಬಂದಿದ್ದರು. ಮೌರ್ಯಪೂರ್ವ ಕಾಲದಿಂದ ಗುಪ್ತರಯುಗದವರೆಗೆ ಉತ್ತರ ಭಾರತದಲ್ಲಿ ಆಜೀವಿಕ ಸಂಪ್ರದಾಯ ಉಚ್ಛ್ರಾಯ ಸ್ಥಿತಿಯಲ್ಲಿ ಇತ್ತು. ಅನಂತರ ಇವರ ಏರುಗಾಲ ಇಳಿಮೊಗವಾಯಿತು. ಆದರೆ ಆಗಲೂ ಇದು ದಕ್ಷಿಣದಲ್ಲಿ ಸುಮಾರು ಹದಿನಾಲ್ಕನೆಯ ಶತಮಾನದವರೆಗೆ ಉಸಿರಾಡಿತು. ಆಜೀವಿ(ವ)ಕ ಸಂಪ್ರದಾಯ ರಚಿಸಿರಬಹುದಾದ ಯಾವೊಂದು ಗ್ರಂಥವೂ ಉ(ತಿ)ಳಿದುಬಂದಿಲ್ಲ. ಚಾರ್ವಾಕರ (ಲೋಕಾಯತ) ಗ್ರಂಥಗಳೂ ಉಳಿದುಬಂದಿಲ್ಲವಾದರೂ ಅವರು ಬರೆದಿದ್ದ ಕೃತಿಗಳನ್ನು ಮತ್ತು ಅವುಗಳ ವ್ಯಾಖ್ಯಾನಗಳನ್ನು ಕುರಿತ ಮಾಹಿತಿಯಿದೆ. ಆಜೀವಿಕರ ಸಿದ್ಧಾಂತ ಗ್ರಂಥಗಳು ಉಳಿದು ಬರದಿದ್ದರೂ ಅವರ ಕೆಲವು ಪ್ರಧಾನ ಆಚಾರ್ಯರ ಜೀವನ-ಸಾಧನೆ ವಿವರಗಳು ದೊರೆತಿವೆ, ಅವರ ಸಂಪ್ರದಾಯ ಸಿದ್ಧಾಂತ ಸಂಬಂಧವಾದ ಉಲ್ಲೇಖಗಳೂ ಶಾಸನಗಳೂ ಸಿಕ್ಕಿವೆ. ಅದಕ್ಕೂ ಮಿಗಿಲಾಗಿ ಆಜೀವಿಯರ ಪ್ರಬಲ ವಿರೋಧಿಗಳಾದ ಬೌದ್ಧ-ಜೈನ ಧರ್ಮಗ್ರಂಥಗಳಲ್ಲಿ ಹೆಚ್ಚಿನ ವಿವರಗಳು ಸಿಗುತ್ತವೆ.

### ಅಜಿತಕೇಸ ಕಂಬಲಿ

ಬುದ್ಧ-ಮಹಾವೀರರ ಸಮಕಾಲೀನ ತತ್ವಜ್ಞಾನಿಗಳಲ್ಲಿ ಈತನೂ ಒಬ್ಬ. ಜನತೆಯ ಗೌರವ ಗಳಿಸಿದ್ದ ಅಜಿತಕೇಸ ಕಂಬಲಿಯ ಶಿಷ್ಯರೂ ಅನುಯಾಯಿಗಳೂ ಹೆಚ್ಚಿನ ಸಂಖ್ಯೆಯಲ್ಲಿ ಇದ್ದರು. ಪಾಲಿ ಭಾಷೆಯ ಗ್ರಂಥಗಳಲ್ಲಿ ಈತನ ಪರಿಚಯ ಸಿಗುತ್ತದೆ. ಟಿಬೆಟ್ ಗ್ರಂಥದಲ್ಲಿ ಈತನ ಪರಿಚಯವಿದೆ. ರಾಜ ಅಜಾತಶತ್ರು ಈತನನ್ನು ಸಂದರ್ಶಿಸಿದ್ದನು. ರಾಜಾಪಸೇನದಿಗೆ ಅಜಿತನ ಪರಿಚಯವಿತ್ತು.

ಈತ ಮನುಷ್ಯರ ಕೂದಲಿಂದ ಮಾಡಿದ ಕಂಬಲಿಯನ್ನು ಹೊದೆಯುತ್ತಿದ್ದರಿಂದ ಕೇಸಕಂಬಲನೆಂಬ ಹೆಸರು ಬಂದಿತು. ಈ ಕಂಬಲಿಯು ಕೀಳುತರವೆನಿಸಿತ್ತು. ಏಕೆಂದರೆ ಇದು ಚಳಿಗಾಲದಲ್ಲಿ ತಣ್ಣಗಿರುತ್ತಿತ್ತು ಮತ್ತು ಬೇಸಗೆಯಲ್ಲಿ ಬೆಚ್ಚಗಿರುತ್ತಿತ್ತು. ಅಲ್ಲದೆ ಕೆಟ್ಟವಾಸನೆ ಉಂಟುಮಾಡುತ್ತಿತ್ತು ಮತ್ತು ಒಡ್ಡೊಡ್ಡಾಗಿ ಕಾಣುತ್ತಿತ್ತು. ಬೌದ್ಧ ಗ್ರಂಥಗಳಾದ ಸಾಮನ್ನಫಲಸುತ್ತ, ಮಹಾಬೋಧಿ ಜಾತಕ, ದೀಘನಿಕಾಯ, ಸುಮಂಗಲ ವಿಲಾಸಿನೀ ಕೃತಿಗಳಲ್ಲಿ ಈತನ ಮಾಹಿತಿಯಿದೆ.

ಅಜಿತಕೇಸ ಕಂಬಲಿಯ ಉಪದೇಶದ ತಿರುಳನ್ನು ಹೀಗೆ ಸಂಗ್ರಹಿಸಲಾಗಿದೆ :

ಪ್ರತಿಜೀವರೂ ಸಂಸಾರದಲ್ಲಿ ೮೪,೦೦೦ ಮಹಾಕಲ್ಪಗಳ ಕಾಲದವರೆಗೆ ತೊಳಲಾಡಲೇಬೇಕು. ದಾನಧರ್ಮ ಮಾಡುವುದರಲ್ಲಿ, ಯಾಗ ಸಮರ್ಪಣೆಯಲ್ಲಿ ಯಾವ ಹಿರಿಮೆಯೂ ಇಲ್ಲ, ಯಾವ ಫಲವೂ ಇಲ್ಲ. ಅವುಗಳನ್ನು ಆಚರಿಸುವುದರಿಂದ ಯಾವುದೇ ಒಳ್ಳೆಯ ಪರಿಣಾಮವಾಗಲಿ ಅಥವಾ ಕೆಟ್ಟ ಪರಿಣಾಮವಾಗಲಿ ಇಲ್ಲ. ಅವು ಯಾವುವೂ ಈ ಭೂಲೋಕದಿಂದ ಮುಂದಿನ ಲೋಕಕ್ಕೆ ಕೊಂಡೊಯ್ಯುವುದಿಲ್ಲ. ತಾಯಿ-ತಂದೆಯರಿಗೆ ಸೇವೆಗೈಯುವುದರಿಂದ ಯಾವ ಫಲವೂ ಪ್ರಾಪ್ತಿಯಾಗುವುದಿಲ್ಲ. ಮರಣಾನಂತರದ ಬಾಳು ಇಲ್ಲ. ಸಮ್ಯಗ್ ಪಥದಲ್ಲಿ ಪರಿಪೂರ್ಣತೆ ಪಡೆದ ಋಷಿಮುನಿಗಳಾಗಲಿ ಬ್ರಾಹ್ಮಣರಾಗಲಿ ಇಲ್ಲ. ಈ ಭವದ ಅಥವಾ ಇದರಾಚೆಗಿನ ಲೋಕದ ಅನುಭವ ಎಂಬುದೊಂದು ಇದ್ದರೆ ಆ ತಿಳಿವಳಿಕೆಯನ್ನು ಪ್ರಕಟಿಸಿಲ್ಲ. ಮನುಷ್ಯ ನಾಲ್ಕು ಭೂತಗಳಿಂದ ಆಗಿದ್ದಾನೆ. ಅವನು ಸತ್ತಾಗ ಪೃಥ್ವಿಯ ಅಂಶ ಪೃಥ್ವಿಕಾಯದೊಳಗೆ ಸೇರಿಹೋಗುತ್ತದೆ. ಅದೇ ಪ್ರಕಾರ ಅಪ್ (ನೀರು) ಜಲಕಾಯದಲ್ಲೂ ತೇಜವು ತೇಜೋಕಾಯದಲ್ಲೂ ವಾಯುವು (ಗಾಳಿ) ವಾಯುಕಾಯದಲ್ಲೂ ವಿಲೀನಗೊಳ್ಳುತ್ತವೆ. ಜ್ಞಾನೇಂದ್ರಿಯ ಚೈತನ್ಯವು ಆಕಾಶಕಾಯದಲ್ಲಿ ಬೆರೆತು ಬಯಲಾಗುತ್ತದೆ. ಸತ್ತ ವ್ಯಕ್ತಿಯ ಹೆಣ (ಶವ) ಇರುವ ಚಟ್ಟವನ್ನು ನಾಲ್ಕು ಜನ ಹೊರುತ್ತಾರೆ. ಚಟ್ಟ ಹೊತ್ತವರು ಸ್ಮಶಾನಕ್ಕೆ ಬರುವಾಗ ದಾರಿಯಲ್ಲಿ, ಮರಣ ಹೊಂದಿದ ವ್ಯಕ್ತಿಯ ವಿಚಾರವಾಗಿ ಗುಣ-ಅವಗುಣ ಪ್ರಸ್ತಾಪಿಸಿ ರುದ್ರಭೂಮಿಯವರೆಗೆ ಮಾತನಾಡುವರು. ಚಿತಾಗಾರದಲ್ಲಿ ಚಟ್ಟವನ್ನಿಟ್ಟು ಚಿತೆಗೆ ಬೆಂಕಿಯಿಟ್ಟ ಮೇಲೆ ಮೂಳೆಗಳು ಪಾರಿವಾಳದ ಪುಕ್ಕಗಳ ಬಣ್ಣ ಪಡೆಯುತ್ತವೆ. ಮೃತನು ಮಾಡಿ ಮಟ್ಟಿದ್ದೆಲ್ಲವೂ ಬೂದಿಯಲ್ಲಿ ಮುಗಿಯುತ್ತದೆ. ದಾನಧರ್ಮಾದಿಗಳನ್ನು ಮಾಡಿ ಪುಣ್ಯ ಕಟ್ಟಿಕೊಳ್ಳುವಂತೆ ಹೇಳುವವರು ಕಣ್ಣಿಗೆ ಕಾಣದುದನ್ನು ಇರುವುದಾಗಿ ಸುಳ್ಳುಪೊಳ್ಳು ಉಲಿಯುವರು. ತಿಳಿದವರಾಗಲಿ ತಿಳಿಗೇಡಿಗಳಾಗಲಿ ಈ ಮೈ ಬಿದ್ದು ಬೆಂದು ಅಥವಾ ಹೂತುಹೋದ ಮೇಲೆ ಅಲ್ಲಿಗೆ ಎಲ್ಲಾ ಮುಗಿಯಿತು. ಮರಣವಾದ ಮೇಲೆ ಅವರು ಯಾರೂ ಇರುವುದಿಲ್ಲ (ದೀಘನಿಕಾಯ, ಸಂಪುಟ. i. ಪುಟ ೫೫).

ಒಟ್ಟಾರೆಯಾಗಿ ಅಜಿತಕೇಸಕಂಬಲನ ಬೋಧನೆಯ ಸಾರವನ್ನು ಪುನರಾವಲೋಕನ ಮಾಡಿ ನೋಡಿದರೆ ಅದು ಆಜೀವಿಕ ಪಂಥದ ಸಿದ್ಧಾಂತಕ್ಕೆ ನೇರಾನ್ವಯವಾಗದೆ ದೂರಾನ್ವಯವಾಗಿದೆ. ಈತನ ಸಿದ್ಧಾಂತದ ಕೇಂದ್ರ ಪ್ರಜ್ಞೆ ಭೌತದ್ರವ್ಯ ವಾಸ್ತವತಾವಾದ. ಐಹಿಕ ಭೋಗಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ದೇಹಸೌಖ್ಯ ಪ್ರವೃತ್ತಿವಾದವು ಚಾರ್ವಾಕ (ಲೋಕಾಯತ) ವಾದದ ಕೆನೆ. ಅಜಿತಕೇಸ ಕಂಬಲನ ಸಿದ್ಧಾಂತವು ಚಾರ್ವಾಕ ಸಿದ್ಧಾಂತಕ್ಕೆ ಸಂವಾದಿಯಾಗಿದೆ. ಕ್ರಿಪೂ. ಎರಡನೆಯ ಶತಮಾನದ ಪ್ರಾಕೃತ ಗ್ರಂಥವಾದ ಸೂಯಗಡಂಗ (ಸೂತ್ರ ಕೃತಾಂಗ) ದ ಎರಡು ಗಾಥಾ (ಶ್ಲೋಕ) ಗಳಲ್ಲಿ ಚಾರ್ವಾಕ ಸಿದ್ಧಾಂತದ ಒಟ್ಟು ತಿರುಳು ಸಿಗುತ್ತದೆ :

> ಪತ್ತೇಯಂ ಕಸಿಣೇ ಆಯಾ ಜೇಯ ಪಂಡಿಯಾ ಸಂತಿ
> ಪೇಚ್ಚಾ ನ ತೇ ಸಂತಿ ನತ್ಥಿ ಸತ್ ಓವವಾಇಯಾ.
> ನತ್ಥಿ ಪುಣ್ಣೇವ ಪಾವೇವ ನತ್ಥಿ ಲೋಏ ಇತೋ ಪರೇ
> ಸರೀರಸ್ಸ ವಿಣಾಸೇಣಂ ವಿಣಾಸೋ ಹೋಇ ದೇಹಿಣೋ.
>
> – ಸೂತ್ರಕೃತಾಂಗ ೧.೧. ಗಾಥಾ ೧೧, ೧೨.

ಪಂಡಿತರಾದವರು ಹೇಳುತ್ತಾರೆ – 'ಆತ್ಮವೆಂಬುದು ಪ್ರತ್ಯೇಕ ಇದೆ' ಎಂದು. ಆದರೆ, ಪರೀಕ್ಷಿಸಿ ನೋಡಿದರೆ ಅದು ಇಲ್ಲವೇ ಇಲ್ಲ. ಪುಣ್ಯವೂ ಇಲ್ಲ, ಪಾಪವೂ ಇಲ್ಲ. ಇಹ ಮತ್ತು ಪರ ಎಂಬ ಲೋಕ ಇಲ್ಲ. ಶರೀರ ನಾಶವಾದರೆ ದೇಹ ಅಲ್ಲಿಗೆ ನಾಶವಾದಂತೆಯೇ.

ಈ ಚಾರ್ವಾಕ ವಾದಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಅಜಿತಕೇಸಕಂಬಲಿಯ ಉಪದೇಶ ಇದೆ. ಆಜೀವಿಕ, ಚಾರ್ವಾಕ, ಜೈನ, ಬೌದ್ಧ – ಇವರ ಸಿದ್ಧಾಂತಗಳಲ್ಲಿ ವೈದೃಶ್ಯದ ಜತೆಗೆ ಸಾದೃಶ್ಯಗಳೂ ಇದ್ದುವು. ಜೈನ ಆಗಮ ಪರಂಪರೆಗೆ ಸೇರಿದ ಪಣ್ಹ ವಾವರಣಸುತ್ತ (ಪ್ರಶ್ನ ವ್ಯಾಕರಣ ಸೂತ್ರ) ಗ್ರಂಥದಲ್ಲಿ ಹೇಳಿರುವ ನಾಸ್ತಿಕವಾದ ಸಿದ್ಧಾಂತಕ್ಕೆ ಸರಿಯಾಗಿ, ಸಮಾನವಾಗಿ ಇರುವ ಮಾತುಗಳ ಬೌದ್ಧ ಆಗಮ ಸಾಮನ್ನಫಲಸುತ್ತದಲ್ಲಿ ಬಂದಿವೆ. ಅದರಲ್ಲಿಯೂ ಮಕ್ಖಲಿ (ಮಂಖಲಿ) ಗೋಸಾಲ, ಮತ್ತು ಅಜಿತಕೇಸಕಂಬಲಿ – ಇವರ ಪ್ರವಚನಕ್ಕೆ ತಾರ್ಕಣೆ ಆಗುವ ಸಾಲುಗಳಿವೆ. ನತ್ಥಿ ಮಾತಾ ನತ್ಥಿ ಪಿತಾ ತಿ ತೇಸು ಸಮ್ಮಾ-ಪಟಿಪತ್ತಿಮ್ ಇಚ್ಛಾ – ಪಟಿಪತ್ತಿಮ್ ಫಲಾಭಾವವಸೇನ ವದತಿ (ಸುಮಂಗಲವಿಲಾಸಿನೀ. ಸಂಪುಟ I. ಪುಟ. ೧೬೫) ಎಂಬ ಸಾಲುಗಳನ್ನು ಅಮ್ಮಾ-ಪಿಯರೋ ನತ್ಥಿ, ನವಿ ಅತ್ಥಿ ಪುರಿಸಕಾರೋ (ಪ್ರಶ್ನ ವ್ಯಾಕರಣ : (ಸಂ) ಜ್ಞಾನವಿಮಲ, ಅಹಮದಾಬಾದು : ೧೯೩೫) – ಎಂಬುದರೊಂದಿಗೆ ಹೋಲಿಸಬೇಕು. ಜತೆಗೆ ಪಕುಧ ಕಚ್ಚಾಯನನು ಪ್ರತಿಪಾದಿಸಿದ ಸಪ್ತಕಾಯ (ಭೂತ) ಸಿದ್ಧಾಂತವನ್ನೂ ತುಲನೆ ಮಾಡಬೇಕು. ಅದರಿಂದ ಚಾರ್ವಾಕವಾದದೊಂದಿಗೆ ಇರುವ ಹೋಲಿಕೆ ಢಾಳಾಗಿ ಕಾಣುತ್ತದೆ.

### ಪಕುಧ ಕಚ್ಚಾಯನ

ಪಾಳಿ ಭಾಷೆಯ ಗ್ರಂಥಗಳಲ್ಲಿ ಪಕುಧೋ ಕಚ್ಚಾಯನ ಎಂಬ ನಾಮರೂಪವಿದೆ. ಸಂಸ್ಕೃತದಲ್ಲಿ ಕುಕುಧ ಕಾತ್ಯಾಯನ (ಕಾತಿಮಾನ) ಎಂಬ ರೂಪವಿದೆ. ಪಾಲಿ ಭಾಷೆಯಲ್ಲಿರುವ ಸಾಮನ್ನ ಫಲಸುತ್ತ ಗ್ರಂಥದ ಟಿಬಿಟ್ ಭಾಷೆಯ ಆವೃತ್ತಿಯಾದ ದುಲ್ವಗ್ರಂಥದಲ್ಲಿ 'ಪಕುಧ'ದ ಬದಲು 'ಕಕುಧ' ಎಂಬ ನಾಮರೂಪವಿದೆ. ಪಕುಧ ಶಬ್ದದ ಸಂಸ್ಕೃತ ರೂಪ ಪ್ರಕುಧ.

ಈತನು ಸಪ್ತಕಾಯ ಸಿದ್ಧಾಂತವನ್ನು ಪ್ರಸ್ತಾಪಿಸಿರುವುದು ಕುತೂಹಲಕರವಾಗಿದೆ. ಸತ್ತಿಮೇ... ಕತಮೇ ಸತ್ತ? – ಏಳು ಎಂದು ಹೇಳಿತಲ್ಲವೆ? (ಹಾಗಾದರೆ) ಆ ಏಳು ಯಾವುವು? (ಎಂಬುದರ ವಿವರಣೆ) ಪಠವೀಕಾಯೋ, ಆಪೋ–ಕಾಯೋ, ತೇಜೋ–ಕಾಯೋ, ವಾಯೋ–ಕಾಯೋ ಸುಖೇ ದುಕ್ಖೇ ಜೀವ ಸತ್ತಮೇ (ದೀಘನಿಕಾಯ, ಸಂಪುಟ i. ಪು. ೫೬). ಅಂದರೆ ನಾಲ್ಕು ಭೂತ (ಕಾಯ) ಗಳು – ಪೃಥ್ವಿ, ಅಪ್ಪು, ತೇಜ ಮತ್ತು ವಾಯು. ಇವು ನಾಲ್ಕು ಚಾರ್ವಾಕ ಮತ್ತು ಬೌದ್ಧ ಸಿದ್ಧಾಂತದ ಪರಿಗಣನೆಯಲ್ಲಿವೆ. ಪಕುಧ ಕಚ್ಚಾಯನನ ಪರಿಗಣನೆಯಲ್ಲಿ ಇವು ನಾಲ್ಕು ಕಾಯಗಳೊಂದಿಗೆ ಸುಖ, ದುಃಖ, ಜೀವ – ಎಂಬ ಮೂರು ಸೇರಿ ಏಳು ಕಾಯಗಳಾಗಿವೆ.

ಈ ಏಳು ಪ್ರಾಥಮಿಕ ವರ್ಗಗಳು ಮಾಡಲಾದವುಗಳಾಗಲಿ, ಹೇಳಿ ಮಾಡಿಸಿದವುಗಳಾಗಲಿ ಅಲ್ಲ. ಕಟ್ಟಿಸಿದವುಗಳಾಗಲಿ (ಮನುಷ್ಯರಿಂದ) ಕಟ್ಟದವುಗಳಾಗಲಿ ಅಲ್ಲ. ಅವು ಅನಿರ್ಮಿತ, ಬಂಜೆ. ಅವು ಬೆಟ್ಟಗಳಂತೆ ಅಚಲ, ಕಂಬಗಳಂತೆ ಗಟ್ಟಿ. ಅವು ನಡೆಯುವುದಿಲ್ಲ. ಅವು ಬೆಳೆಯುವುದಿಲ್ಲ. ಅವು ಒಂದು ಇನ್ನೊಂದನ್ನು ಗಾಯಗೊಳಿಸವು. ಒಬ್ಬನು ಇನ್ನೊಬ್ಬನ ನಲಿವು ಇಲ್ಲವೇ ನಲಿವು, ಅಥವಾ ನೋವು ಮತ್ತು ನಲಿವು ಸಂಬಂಧ ಪರಿಣಮಿಸುವುದು ಆಗದು. ಯಾವ ಮಾನವನೂ ಸಂಹರಿಸಲಾರ ಅಥವಾ ಸಂಹಾರ ಮಾಡಿಸಲಾರ, ಆಲಿಸಲಾರ ಅಥವಾ ಆಲಿಸುವಂತೆ ಮಾಡಲಾರ. ಹರಿತವಾದ ಕತ್ತಿಯಿಂದ ಒಬ್ಬನು ಇನ್ನೊಬ್ಬನ ತಲೆಯನ್ನು ಸೀಳಿದರೂ ಆತನ ಜೀವವನ್ನು ತೆಗೆಯಲಾರ. ಏಕೆಂದರೆ ಕತ್ತಿಯ ಗಾಯದ ಕಲೆ ಏಳು ಭೂತಗಳಲ್ಲಿ ಪಕುಧ ಕಚ್ಚಾಯನನು ಅದ್ಭುತ ಪರಮಾಣುವಾದ ಮತ್ತು ಅಚಲವಾದ – ಈ ಸಿದ್ಧಾಂತಗಳನ್ನು ಪ್ರತಿಪಾದಿಸಿದನು. ಆದರೆ ಈ ಸಿದ್ಧಾಂತ ತೀರ ವಿನೂತನವಾಗಲಿ ಹೊಚ್ಚ ಹೊಸದಾಗಲಿ ಅಲ್ಲ. ಏಕೆಂದರೆ ಇದು ಮಕ್ಖಲಿ ಗೋಸಾಲನು ಹೇಳಿದ್ದ – 'ಮನುಷ್ಯನಿಗೆ ಇಚ್ಛಾ ಸ್ವಾತಂತ್ರ್ಯ ಇಲ್ಲ' – ಎಂಬ ನಿಯತಿವಾದ ಸಿದ್ಧಾಂತದ ಮುಂದುವರಿಕೆಯೇ ಆಗಿದೆ.

ಪೂರಣ ಕಸ್ಸಪನ ಪರಸ್ಪರ ಭಾವ ವಿರೋಧಿ ನೀತಿ ನಿಯಮ ಕೂಡ ಮಕ್ಖಲಿ ಗೋಸಾಲನ ಆಧ್ಯಾತ್ಮ ಶಾಸ್ತ್ರಕ್ಕಿಂತ ಭಿನ್ನವೇನಲ್ಲ. ಪಕುಧ ಕಚ್ಚಾಯನ, ಪೂರಣಕಸ್ಸಪ ಮತ್ತು ಮಕ್ಖಲಿ ಗೋಸಾಲ – ಈ ಮೂವರ ಸಿದ್ಧಾಂತಗಳು ಒಂದೇ ಮರದಿಂದ ಹೊರಟ ಮೂರು ಕೊಂಬೆ ರೆಂಬೆಗಳು. ತಮ್ಮ ತಿಳಿವನ್ನು ಬೇರೆಯವರಿಗೆ ಹೇಳಲು ಬಳಸಿದ ಮಾತುಗಳಲ್ಲಿ ವ್ಯತ್ಯಾಸ ಬಂದಿದೆಯೇ ಹೊರತು ಒಟ್ಟು ತಿರುಳು ಒಂದೇ ಆಗಿದೆ. ಹೀಗೆ ಇವು ಒಂದೇ ಹೆಣಿಗೆಯ ಮೂರು ಎಸಳು ಆಗಿರುವುದರಿಂದ ಹುಟ್ಟುವ ಪ್ರಶ್ನೆ – ಈ ಮೂವರಲ್ಲಿ ಮೊದಲಿಗರು ಯಾರು ಅಥವಾ ಹಿರಿಯರು ಯಾರು ಎಂಬುದು. ಇದು ಯಕ್ಷಪ್ರಶ್ನೆಯೂ ಅಹುದು. ಇವರೆಲ್ಲ ಒಂದೇ ಕಾಲಕ್ಕೆ ಸೇರಿದ ಆಚಾರ್ಯರೆಂಬುದು ದಿಟ. ಜೈನ–ಬೌದ್ಧ ಲಭ್ಯ ಲಿಖಿತ ದಾಖಲೆಗಳಲ್ಲಿ ಮಕ್ಖಲಿ ಗೋಸಾಲನ ಪ್ರಸ್ತಾಪ ಹೆಚ್ಚು ಬಂದಿದೆ. ಈ ಮಟ್ಟದ ಪ್ರಾತಿನಿಧ್ಯ ಮತ್ತು ಪ್ರಾಧಾನ್ಯತೆಗೆ ಆತನ ವಯಸ್ಸಿನ ಹಿರಿತನಕ್ಕು ಮಿಗಿಲಾಗಿ ಆತನ ವರ್ಚಸ್ವಿ ವ್ಯಕ್ತಿತ್ವವೂ ಕಾರಣ.

## ಮಕ್ಖಲಿ ಗೋಸಾಲ

ಆಜೀವಿಕ ಪಂಥದ ಮಹಾನಾಯಕನಾದ ಮಕ್ಖಲಿ ಗೋಸಾಲನ ಜೀವನ–ಸಾಧನೆ ಜೈನ ಮತ್ತು ಬೌದ್ಧ ಆಗಮಗಳಲ್ಲಿ ವ್ಯಾಖ್ಯಾನಗಳಲ್ಲಿ ನಿರೂಪಿತವಾಗಿದೆ. ಭಗವತೀ ಸೂತ್ರ (ವಿಯಾಹ ಪಣ್ಣತ್ತಿ) ಗ್ರಂಥದಲ್ಲಿ ಹದಿನೈದನೆಯ ಅಧ್ಯಾಯ ಪೂರ್ತಿ ಈತನ ಜೀವನ ಚರಿತೆಯೇ ಆಗಿದೆ. ಪಾಳಿ ಭಾಷೆಯ ಗ್ರಂಥಗಳಲ್ಲಿ ಮಕ್ಖಲಿ ಗೋಸಾಲೋ ಎಂಬ ರೂಪವಿದೆ. ಸಂಸ್ಕೃತದಲ್ಲಿ ಮಸ್ಕರಿನ್ ಗೋಸಾಲೀ ಪುತ್ರ ಎಂದೂ ಜೈನ ಪ್ರಾಕೃತ ಗ್ರಂಥಗಳಲ್ಲಿ ಮಂಖಲಿಪುತ್ತ ಗೋಸಾಲ ಎಂದೂ ಹೆಸರುಗಳಿವೆ. ಗೋಶಾಲೆಯಲ್ಲಿ ಹುಟ್ಟಿದ್ದರಿಂದ ಗೋಸಾಲನೆಂದೂ, ಮಂಖನ ಮಗನಾದುದರಿಂದ ಮಂಖಲಿಪುತ್ತ ಎಂದೂ ಕರೆಯಲ್ಪಟ್ಟನು. ಈತ ಬರುವ ವೇಳೆಗೆ ಆಜೀವಿಕ ಸಂಘ ಹುಟ್ಟಿ ಬೆಳೆಯತೊಡಗಿತ್ತು. ನಂದವಚ್ಛ, ಕಿಸ ಸಂಕಿಚ್ಚ ಮೊದಲಾದ ಅಜ್ಜಪಜ್ಜರ್ಕಳು ಈ ಸಂಪ್ರದಾಯವನ್ನು ಮುನ್ನಡೆಸಿದ್ದರು. ಈತನ ಅನಂತರವೂ ಈ ಧರ್ಮ ಮುಂದುವರಿಯಿತು. ತನಗಿಂತ ಹಿಂದೆ ಆಗಿ ಹೋದವರ, ತನ್ನ ತರುವಾಯ ಮುಂದೆ ಬಂದವರ ನಟ್ಟ ನಡುವೆ ಮಕ್ಖಲಿ ಗೋಸಾಲನು ನಿಂತಿದ್ದಾನೆ ಮೇರು ಮಂದರವಾಗಿ. ಈತ ಆಜೀವಿಕದ ಪಾಲಿಗೆ ನವನವೋನ್ಮೇಷ ಶಾಲಿನಿಯಾಗಿ ಬಂದನು. ತನ್ನತನಕ ಬಂದಿದ್ದ ಪಂಥ–ಸಿದ್ಧಾಂತಕ್ಕೆ ಹೊಸ ಸಂಚಲನ ಉಂಟು ಮಾಡಿದನು. ತನ್ನ ಹೋರಾಟ ಮನೋಧರ್ಮದಿಂದ, ಸಂಘಟನ ಸಾಮರ್ಥ್ಯದಿಂದ ಈ ಪರಂಪರೆಯನ್ನು ಪುನರುಜ್ಜೀವಿಸಿದನು. ಈತನ ಮಹತ್ವಾಕಾಂಕ್ಷೆ ಆಜೀವಿಕ ಸಂಪ್ರದಾಯದ ಪ್ರಗತಿಗೆ ಸಂಜೀವಿನಿ ಆಯಿತು.

ಮಕ್ಖಲಿ ಗೋಸಾಲನು ತಾನೂ ಒಬ್ಬ ತೀರ್ಥಂಕರನೆಂದು ಹೇಳಿಕೊಂಡಿರುವುದಲ್ಲದೆ ತಾನೇ ಈ ಅವಸರ್ಪಿಣಿ ಕಾಲದ ಇಪ್ಪತ್ತು ನಾಲ್ಕನೆಯ (೨೪) ತೀರ್ಥಂಕರನೆಂದೂ ಸಾರಿದನು: ಇಮೀಸೇ ಓ ಸಪ್ಪಿಣೀ ಏ ತಿತ್ಥಕರಾಣಂ ಚರಿಮೇ ತಿತ್ಥಕರೇ (ಭಗವ– ಈಸುತ್ತ, XV). ಸಿರಿವಂತಳಾದ ಕುಂಬಾರಗಿತ್ತಿ ಹಾಲಾಹಲಾ ಎಂಬಾಕೆ ಈತನ ಪರಮ ಭಕ್ತಳು. ಈಕೆಗೆ ಸೇರಿದ ಕುಂಬಾರವಠಾರ ಮನೆಯಲ್ಲಿ ಮಕ್ಖಲಿ ಗೋಸಾಲ ವಾಸವಾಗಿದ್ದು ಕಡೆಗೆ ಇಲ್ಲಿಯೇ ಮರಣ ಹೊಂದಿದನು. ಆಜೀವಿಕ ಸನ್ಯಾಸಿಯಾಗಿದ್ದ ಅವಧಿಯಲ್ಲಿ ಮಹಾವೀರನ ಹಿರಿಮೆಯನ್ನು ಅರಿತು ಶಿಷ್ಯನಾದನು. ಆರು ವರ್ಷಕಾಲ ಈ ಗುರು–ಶಿಷ್ಯರು ವಿಹರಿಸಿದರು, ಸಾಧನೆ ಮಾಡಿದರು.

ತೀವ್ರ ಭಿನ್ನಾಭಿಪ್ರಾಯ ಉಂಟಾಗಿ ಮಕ್ಖಲಿ ಗೋಸಾಲನು ಮಹಾವೀರನನ್ನು ತೊರೆದನು. ಅನಂತರವೂ ವಿರಸ ಉಲ್ಬಣಿಸಿತು, ಗುರುಶಿಷ್ಯರು ಪರಮ ಶತ್ರುಗಳಾದರು. ಮಹಾವೀರನಿಂದ ಕಲಿತು ಸಾಧಿಸಿದ ತೇಜೋ ಲೇಶ್ಯೆಯನ್ನು ಗೋಸಾಲನು ಗುರುವಿನ ಮೇಲೆ ಪ್ರಯೋಗಿಸಿದನು. ಆದರೆ ಅದು ಮಹಾವೀರನನ್ನು ದಹಿಸದೆ ಹಿಂತಿರುಗಿ ಗೋಸಾಲನಿಗೇ ತಾಗಿತು. ಅದರ ವೇದನೆಯಿಂದ ಬಳಲಿದನು. ಪಿತ್ತಜ್ವರವೇರಿ ಬುದ್ಧಿಭ್ರಮಣೆ ಆಯಿತು. ತನ್ನ ಸಾವು ಸಮೀಪಿಸಿತೆಂದು ಅರಿತು ಗೋಸಾಲನು ತನ್ನ ಶಿಷ್ಯ ಸಮುದಾಯಕ್ಕೆ ತಿಳಿಸಿದನು. ಕುಂಬಾರಗಿತ್ತಿಯ ಮನೆಯಲ್ಲಿ ನರಳಿ ಕಡೆಯ ಉಸಿರೆಳೆದನು. ಆತನು ಮೊದಲೇ ಸೂಚಿಸಿದ ವಿಧಿ ವಿಧಾನದ ಪ್ರಕಾರ ಅಂತ್ಯ ಸಂಸ್ಕಾರವನ್ನು ಶಿಷ್ಯರು ನೆರವೇರಿಸಿದರು.

ಗಣಿತಶಾಸ್ತ್ರ ವಿಶಾರದನೂ ಶಿವಭಕ್ತನೂ ಆದ ಮಕ್ಖಲಿ ಗೋಸಾಲನು ಆಜೀವಿಕ ಧ್ರುವನಕ್ಷತ್ರ. ಈತನನ್ನು ಕುರಿತು ಹೇರಳ ಮಾಹಿತಿ ಬೆಳಕಿಗೆ ಬಂದಿದೆ. ಮಹಾವೀರನೊಂದಿಗೆ ಉಂಟಾದ ವಿರಸ ಮತ್ತು ಬುದ್ಧನು ಈತನ ವಿಚಾರವಾಗಿ ಮಾಡಿರುವ ಕಟುಟೀಕೆಗಳು ಈತನು ಸ್ವಾಭಿಮಾನವನ್ನು ತೋರಿದ ಫಲ. ಮಹತ್ವಾಕಾಂಕ್ಷಿಯಾದ ಗೋಸಾಲನು ಹೋರಾಟಗಾರ. ಮುಂದಾಳುತನದಿಂದ ಈತ ತನ್ನ ಪಂಥವನ್ನು ಪ್ರಬಲವಾಗಿ ಬೆಳಸಿದನು. ಐದು ಸಾವಿರ ಜನ ಆಜೀವಕರು ಇದ್ದರೆಂಬುದು ಈತನ ಯಶೋಗಾಥೆಗೆ ಸಾಕ್ಷಿ.

ಮಂಖಲಿ ಪುತ್ರ ಗೋಸಾಲನು ನಿಯತಿ (ವಿಧಿ) ವಾದವನ್ನು ಬಲವಾಗಿ ಪ್ರತಿಪಾದಿಸಿದನು << ಬದುಕಿರುವವರ ಪಾಪಗಳಿಗೆ ಕಾರಣಗಳಾಗಲಿ ಆಧಾರವಾಗಲಿ ಇಲ್ಲ. ಕಾರಣ ಇಲ್ಲದೆಯೇ ಅಥವಾ ಆಧಾರವಿಲ್ಲದೇನೆ ಮಾನವರು ಪಾಪಿಗಳಾಗುವರು. ಜೀವಿಸಿರುವವರ ನಿರ್ಮಲತೆಗೆ ಕಾರಣವಾಗಲಿ ಆಧಾರವಾಗಲಿ ಇಲ್ಲ. ಕಾರಣ ಅಥವಾ ಆಧಾರ ಇಲ್ಲದೆಯೇ ಅವರು ಶುದ್ಧರಾಗುವರು. ಮುಂದಿನ ಜನ್ಮವನ್ನು ಪ್ರಭಾವಿಸಬಲ್ಲುದು ಯಾವುದೂ ಇಲ್ಲ. ನಾವೇ ಮಾಡಿದ ಕಾರ್ಯಾಚರಣೆಗಳಾಗಲಿ ಇಲ್ಲವೇ ಬೇರೆಯವರಿಂದ ಮಾಡಿಸಿದ ಗೆಯ್ಮೆಯಾಗಲಿ ಮುಂದಿನ ಭವಕ್ಕೆ ಸಂಬಂಧಿಸುವುದಿಲ್ಲ. ಈ ಭವದಲ್ಲಿ ವ್ಯಕ್ತಿಯ ಹಣೆಯ ಬರೆಹ (ವಿಧಿ-ನಿಯತಿ) ಏರುಪೇರು ಮಾಡುವಂಥ ಮಾನವನ ಸಾಹಸ, ಶಕ್ತಿ, ಧೈರ್ಯ, ಸಹನೆ, ಪರಾಕ್ರಮಗಳು ಇಲ್ಲ. ಎಲ್ಲ ಜೀವರು – ಉಸಿರಾಡುವವರೆಲ್ಲ, ಹುಟ್ಟಿದವರೆಲ್ಲ, ಬಾಳು ಉಳ್ಳವರೆಲ್ಲ – ಯಾವುದೇ ಬಲ, ವೀರ್ಯ, ಗುಣ ಇಲ್ಲದವರು. ಆದರೆ ವಿಧಿಯಿಂದ, ಆಕಸ್ಮಿಕದಿಂದ ಮತ್ತು ಸ್ವಭಾವದಿಂದ ಬೆಳಸಿಕೊಳ್ಳುವರು. ಮನುಷ್ಯ ಕುಲ ಆರು ಬಗೆಯ ವರ್ಗಗಳಲ್ಲಿ ಅಳವಡುತ್ತದೆ. ಒಟ್ಟು ಆರು ಅಭಿಜಾತಿಗಳಲ್ಲಿ ವಿಂಗಡವಾಗುತ್ತಾರೆ (ಅತ್ಯುನ್ನತವಾದದ್ದು, ತುಂಬ ಬಿಳುಪಾದದ್ದು, ಮೂವರು ಸದಸ್ಯರು ಮಾತ್ರ ಇರುವುದು, ಇತ್ಯಾದಿ). ಶೀಲದಿಂದಾಗಲಿ ವ್ರತಗಳಿಂದಾಗಲಿ ತಪದಿಂದಾಗಲಿ ಬ್ರಹ್ಮಚರ್ಯದಿಂದಾಗಲಿ, ಪಕ್ವವಾಗದಿರುವ ಕರ್ಮವನ್ನು ಪಕ್ವವಾಗಿಸಲೂ ಪಕ್ವವಾಗಿರುವ ಕರ್ಮವನ್ನು ನಿತ್ರಾಣಗೊಳಿಸಲಾಗಲಿ ಸಾಧ್ಯವಿಲ್ಲ. ಧಾನ್ಯ ಮೊದಲಾದುವನ್ನು ಅಳತೆಯ ಮಾನದಿಂದ ಅಳೆಯುವಂತೆ ಈ ಸಂಸಾರವನ್ನೂ ಅದರ ಅಂತಿಮ ಗತಿಯನ್ನೂ ಸುಖ-ದುಃಖಗಳಿಂದ ಅಳೆಯಲಾಗುವುದು. ಅದರ ಆಯುರ್ಮಾನವನ್ನು ಕಡಮೆಯಾಗಲಿ ಹೆಚ್ಚಾಗಲಿ ಮಾಡಲು ಬರುವುದಿಲ್ಲ. ಅದರಲ್ಲಿ ಅತಿಯೂ ಇಲ್ಲ ಮಿತಿಯೂ ಇಲ್ಲ. ದಾರದ ಉಂಡೆಯನ್ನು ಉರುಳಿಸಿದರೆ ಅದರ ದಾರ ಇರುವಷ್ಟು ಸುರುಳಿ ಬಿಚ್ಚಿಕೊಳ್ಳುತ್ತದೆ. ಅದರಂತೆ ಜಾಣರೂ ದಡ್ಡರೂ ಸಮನಾಗಿ ನಿಗದಿಯಾಗಿರುವಷ್ಟು ಕಾಲ ಸಂಸಾರದಲ್ಲಿ ಇದ್ದು ದುಃಖವನ್ನು ಅಂತ್ಯಗೊಳಿಸುವರು >> (ಬುದ್ಧಘೋಷ : ಸುಮಂಗಲ ವಿಲಾಸಿನೀ, ಪುಟ. ೫೩-೫೪).

**ಆಧಾರ ಗ್ರಂಥಗಳು:**


೧. ಬಷಮ್, ಎ.ಎಲ್ : ಹಿಸ್ಟರಿ ಅಂಡ್ ಡಾಕ್ಟ್ರಿನ್ಸ್ ಆಫ್ ದಿ ಆಜೀವಿಕಾಸ್, ದೆಹಲಿ, (೧೯೫೧, ೧೯೮೧, ೨೦೦೨) ೨೦೦೯.

೨. ಜೋಸೆಫ್ ದೆಲೆಯು : ವಿಯಾಹಪನ್ನತ್ತಿ (ಭಗವಈ), ದೆಹಲಿ, ೧೯೯೬.

೩. ಹಂಪನಾ : (ಸಂ) ಜೈನ ಕಥಾಕೋಶ (ಪೀಠಿಕಾ ಭಾಗ), ಹಂಪಿ ವಿಶ್ವವಿದ್ಯಾಲಯ, ೧೯೯೭.

೪. ಹಂಪನಾ : ಯಾಪನೀಯ ಸಂಘ, ಸಪ್ನ ಬುಕ್ ಹೌಸ್, ಬೆಂಗಳೂರು (೧೯೯೯) ೨೦೧೧.


❑❑

# ಸಂಶೋಧನೆ : ಪ್ರಾಥಮಿಕ ನೆಲೆಗಳು

– ಕಮಲಾ ಹಂಪನಾ

ಕೆಲವು ತಿಂಗಳುಗಳ ಹಿಂದೆ ಸೆನೆಟ್ ಹಾಲಿನಲ್ಲಿ ನಡೆದ ಒಂದು ಸಮಾರಂಭದಲ್ಲಿ ಡಾ. ಪ್ರಭುದೇವ್ ಅವರು "ನಾನು ಇಲ್ಲಿಯವರೆಗೂ ಹತ್ತು ಸಾವಿರ ಹೃದಯಗಳನ್ನು ತೆರೆದು (ಆಪರೇಷನ್) ನೋಡಿದ್ದೇನೆ. ಆದರೆ ಆ ಹೃದಯದಲ್ಲಿ ನನಗೆ ಯಾರೂ ಕಾಣಲಿಲ್ಲ. 'ನೀನು ನನ್ನ ಹೃದಯದಲ್ಲಿಯೇ ಇದ್ದೀಯೆ' – ಎಂದು ತುಂಬ ಜನರು ಹೇಳುವುದನ್ನು ಕೇಳಿದ್ದೇನೆ. ಆದರೆ ನಾನು ಶಸ್ತ್ರಚಿಕಿತ್ಸೆ ಮಾಡಿದ ಯಾರ ಹೃದಯಗಳಲ್ಲೂ ಯಾರೊಬ್ಬರೂ ಕಾಣಲಿಲ್ಲ, ಅಲ್ಲಿ ಯಾರೂ ಇರಲಿಲ್ಲ" ಎಂದು ಹೇಳಿದರು. ಹೌದು, ಅವರು ಹೇಳಿದ್ದು ವಾಸ್ತವ, ಅದು ಸತ್ಯ.

ಆದರೆ ಸಾಹಿತಿಗಳಿಗೆ, ಕವಿಗಳಿಗೆ ಹಾಗೂ ಕಲಾವಿದರಿಗೆ ಆ ಹೃದಯದಲ್ಲಿ ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕ–ತಂಗಿ, ಅತ್ತೆ–ಮಾವ ಹಾಗೂ ನಲ್ಲ–ನಲ್ಲೆ– ಹೀಗೆ ಇನ್ನೂ ಅನೇಕರು ಕಾಣುತ್ತಾರೆ. ಅದು ಅವರವರ ಕಲ್ಪನೆ, ಕನಸು, ಭಾವನೆ – ಆಸೆ. ಅದೂ ಸಹಜವೇ. ಸಂಶೋಧನೆ ಎನ್ನುವುದು ಹೀಗೆ ವಾಸ್ತವ ಹಾಗೂ ಕಲ್ಪನೆಯ ನೆಲಗಟ್ಟಿನ ಮೇಲೆ ನಿಲ್ಲುತ್ತದೆ.

ಸಂಶೋಧನೆಯ ಅನೇಕ ಅಂಶಗಳಲ್ಲಿ ಕೆಲವನ್ನು ಮಾತ್ರ ನಾನು ಇಲ್ಲಿ ಹೇಳುವವಳಿದ್ದೇನೆ.

**ನಿರಂತರ ಅಧ್ಯಯನ:** ಸಂಶೋಧನೆಯ ಮುಖ್ಯ ಅಂಶಗಳಲ್ಲಿ ಒಂದು, ನಿರಂತರ ಅಧ್ಯಯನ. ಈ ಅಧ್ಯಯನಶೀಲತೆಯನ್ನು ಸಂಶೋಧಕ ಮೊದಲು ಗಳಿಸಿಕೊಳ್ಳಬೇಕು, ರೂಢಿಸಿಕೊಳ್ಳಬೇಕು. ಅಧ್ಯಯನ, ನಿತ್ಯದ ಪ್ರವೃತ್ತಿಯಾಗಬೇಕು. ಸಂಶೋಧಕನಿಗೆ ಅಧ್ಯಯನ ಅವನ ಬದುಕಿನ ಭಾಗವಾಗಬೇಕು.

**ಉತ್ತೇಜನ-ಶ್ರಮ:** ಸಾಹಿತ್ಯ ಪ್ರಕಾರಗಳಲ್ಲಿ ಬಹುವಿಧಗಳಿವೆ. ಸ್ಥೂಲವಾಗಿ ಎರಡು ಪಂಗಡಗಳಾಗಿ ಗುರುತಿಸಬಹುದು. ಒಂದು ಸೃಜನ ಸಾಹಿತ್ಯ, ಮತ್ತೊಂದು ಸಂಶೋಧನ ಸಾಹಿತ್ಯ. ಸೃಜನದಲ್ಲಿ ಸಂಶೋಧನೆಯ ಅಂಶಗಳು, ಸಂಶೋಧನೆಯಲ್ಲಿ ಸೃಜನಶೀಲತೆಯ ಗುಣಗಳು ಕಾಣಬಾರದೆಂಬ ನಿಯಮವೇನಿಲ್ಲ. ಸಂಶೋಧನೆಯಲ್ಲಿ ಸೃಜನಶೀಲತೆ, ಸೃಜನಶೀಲತೆಯಲ್ಲಿ ಸಂಶೋಧನೆಯ ಅಂಶಗಳೂ ಮೇಳವಿಸಿಕೊಂಡಿರುವುದೂ ಉಂಟು. ಸೃಜನ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ಕವನ, ನಾಟಕ, ರೂಪಕ, ಲಲಿತ ಪ್ರಬಂಧಗಳು – ಇನ್ನೂ ಕೆಲವು ಪ್ರಕಾರಗಳು ಸೇರುತ್ತವೆ. ಆ ಪ್ರಕಾರದ ಸಾಹಿತಿಗಳಿಗೆ inspiration ಬೇಕಾಗುತ್ತದೆ. Inspiration ಜೊತೆಗೆ ಕಲಾತ್ಮಕತೆ ಹಾಗೂ ಅನುಭವವೂ ಕೂಡಿ ಸಾಹಿತ್ಯ ಸೃಷ್ಟಿಯಾಗುತ್ತದೆ. ಆ ಸಾಹಿತ್ಯ ಸೃಜನಾತ್ಮಕ ಸಾಹಿತ್ಯ ಎನಿಸಿಕೊಳ್ಳುತ್ತದೆ ಮತ್ತು ಓದುಗರಿಗೂ ಸಂತಸ ನೀಡುತ್ತದೆ.

ಆದರೆ ಸಂಶೋಧನೆ, ಸಂಶೋಧಕನಿಗೆ perspiration ಮೂಡಿಸುತ್ತದೆ, ಬೆವರು ತರಿಸುತ್ತದೆ. ಸಂಶೋಧನೆ, ಆಳವಾದ ಅಧ್ಯಯನದ ಜೊತೆಗೆ ಶಾಂತಿ – ಸಹನೆ, ಸಂಯಮ ಹಾಗೂ ಶ್ರಮವನ್ನು ಬಯಸುತ್ತದೆ. ಇಲ್ಲಿ ಬೆವರು ಹರಿಸಬೇಕು. ಶ್ರಮಪಡಬೇಕು. ಸಂಶೋಧಕನಿಗೂ Inspiration ಬೇಕೇ ಬೇಕು. Inspiration ಇಲ್ಲದೆ ಸಂಶೋಧಕನೂ ಸಂಶೋಧನೆಗೆ ತೊಡಗಲಾರ, ಬರವಣಿಗೆ ಮಾಡಲಾರ.

**ಹುಡುಕಾಟ:** ಸಂಶೋಧಕನ ಮೊದಲ ಕೆಲಸ, ನಿರಂತರ ಹುಡುಕಾಟ. ಹೊಸದನ್ನು ಹುಡುಕುವುದರಲ್ಲಿಯೇ ಅವನ ಸಂತೋಷ ಅಡಗಿರುತ್ತವೆ. ಆತನದು ಸುದೀರ್ಘ ಮಾರ್ಗ. ಆ ಮಾರ್ಗದಲ್ಲಿ ಎಲ್ಲಿಯಾದರೂ ಒಂದು ಹೊಸ ಮಾಹಿತಿ ದೊರೆತರೆ ಅದೇ ಸಂಶೋಧಕನಿಗೆ ದೊರೆಯುವ ಸಂತಸ, ಸಮಾಧಾನ.

**ವ್ಯಾಪಕ ಓದು:** ಸಂಶೋಧಕನಿಗೆ ವ್ಯಾಪಕ ಓದಿನ ಹರಿವು ಇರಬೇಕು. ನನ್ನ ಗುರುಗಳೂ ಸಂಶೋಧಕರೂ ನಡೆದಾಡುವ ವಿಶ್ವಕೋಶವೂ ಆಗಿದ್ದ ಡಿ.ಎಲ್. ನರಸಿಂಹಾಚಾರ್ಯರು (ಡಿ.ಎಲ್.ಎನ್) ನಮ್ಮ ತರಗತಿಯಲ್ಲಿ ಆಗಾಗ ಹೇಳುತ್ತಿದ್ದ ಮಾತುಗಳು ನೆನಪಿಗೆ ಬರುತ್ತಲೇ ಇರುತ್ತದೆ. 'ನೀವು, ವಿದ್ಯಾರ್ಥಿಗಳು, ತೊಂಡು ದನ ಮೇಯುವ ಹಾಗೆ ಮೇಯುತ್ತಿರಬೇಕು. ವಿಷಯ ಸಂಗ್ರಹಿಸಬೇಕು. ಹೊಸ ಹೊಸ ವಿಷಯಗಳಿಗೆ ನಮ್ಮ ಬುದ್ಧಿಭಾವಗಳು ತೆರೆದುಕೊಳ್ಳುತ್ತಿರಬೇಕು. ಕೈಗೆ ಸಿಕ್ಕಿದ ಪುಸ್ತಕಗಳನ್ನು ಓದುತ್ತಿರಬೇಕು. ಅವು ಮೌಲಿಕವಾಗಿಲ್ಲ ಎನ್ನುವುದನ್ನು

# ೧೦೭೯, 'ಸ್ವನಿಮಾ', ೧೮ 'ಎ' ರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦

ಹೇಳುವುದಕ್ಕಾದರೂ ಓದಬೇಕು' – ಎನ್ನುತ್ತಿದ್ದರು. ಈ ಮಾತು ವ್ಯಾಪಕ ಓದಿಗೆ ನಮ್ಮನ್ನು ತೊಡಗಿಸಿಕೊಳ್ಳುವ ಕೀಲಿಕೈಯಾಗಿದೆ. ವ್ಯಾಪಕ ಓದಿನಿಂದ ನಮ್ಮ ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಳ್ಳಬೇಕು. ಅಕ್ಷರಲೋಕದ ಪ್ರಭುತ್ವ ಗಳಿಕೆಗೆ ದಣಿವರಿಯದ ಸತತಾಭ್ಯಾಸಬೇಕು. There is no short cut to knowledge. ಅಡ್ಡದಾರಿ, ಒಳದಾರಿ, ಗಲ್ಲಿಗಳು ಸಂಶೋಧನೆಗೆ ತುಸು ನೆರವಾಗಬಲ್ಲವಾದರೂ ಅದು ಬಯಸುವುದು ರಾಜಮಾರ್ಗವನ್ನೆ.

**ಹೊಸ ಹೊಳವುಗಳು:** ಸಂಶೋಧನೆಯಲ್ಲಿ ಹೊಸ ಹೊಸ ಹೊಳವುಗಳು ಇರಬೇಕು. ನನ್ನ ಮತ್ತೊಬ್ಬ ವಿದ್ಯಾಗುರುಗಳಾದ ಪ್ರೊ. ತೀ.ನಂ. ಶ್ರೀಕಂಠಯ್ಯನವರು ಹೇಳುತ್ತಿದ್ದ ವಾಕ್ಯವನ್ನು ಇಲ್ಲಿ ಉದ್ಧೃತ ಮಾಡುತ್ತೇನೆ. Never accept second hand information when you have an access to the soruce. Go to the original source. Make a pilgrimage to library. ಪುಸ್ತಕ ಇರುವ ಕಡೆಗೆ, ಗ್ರಂಥ ಭಂಡಾರಗಳಿಗೆ ಸಂಶೋಧಕ ಯಾತ್ರೆ ಕೈಗೊಳ್ಳಬೇಕು. ಅವು ಹೊಸ ಹೊಸ ಹೊಳವುಗಳಿಗೆ ತೆರೆದ ಹೆಬ್ಬಾಗಿಲುಗಳು.

**ಪೂರ್ಣ ವಿವರಾಮ ಇಲ್ಲ:** ಸಂಶೋಧನೆಗೆ ಪೂರ್ಣ ವಿರಾಮ ಎಂದೂ ಇಲ್ಲ; ಸಂಶೋಧನೆಯ ಎಲ್ಲ ಸಾಧ್ಯತೆಗಳು ಮುಗಿದುವೇನೋ ಎನ್ನುವ ಹಂತ ಮುಟ್ಟಿದಾಗ ಯಾವುದೋ ಒಂದು ಸ್ಥಳದಲ್ಲಿ ಮುರಿದು ಬಿದ್ದಿರುವ ಒಂದು ಶಾಸನ, ಭಗ್ನಗೊಂಡಿರುವ ಒಂದು ವಿಗ್ರಹ, ಶಿಥಿಲಗೊಂಡು ನಾಶವಾಗಿರುವ ದೇವಾಲಯದ ಒಂದು ಕಂಬ, ಒಂದು ನಿಶಿದಿಗಲ್ಲು, ಒಂದು ಮಾಸ್ತಿಗಲ್ಲು ದೊರೆಯಬಹುದು. ಅವುಗಳಲ್ಲಿ ಯಾವುದಾದರೊಂದರಲ್ಲಿ ದೊರೆಯುವ ಮಾಹಿತಿ ಅಧ್ಯಯನಕ್ಕೆ ಹೊಸ ಬೆಳಕು ನೀಡಬಹುದು; ಮತ್ತೊಂದು ದಾರಿಗೆ ಕೊಂಡೊಯ್ಯಬಹುದು. ನಿಲುಗಡೆ ಹಂತ ಮುಟ್ಟಿದೆ ಎನ್ನುವ ಸಂಶೋಧನೆ, ಮತ್ತೆ ಹೊಸ ಅನ್ವೇಷಣೆಯಿಂದ ಮುಂದುವರೆಯುತ್ತದೆ. ಹೀಗಾಗಿ ಸಂಶೋಧನೆಗೆ, ಮತ್ತೆ ಹೊಸ ಅನ್ವೇಷಣೆಯಿಂದ ಮುಂದುವರೆಯುತ್ತದೆ. ಹೀಗಾಗಿ ಸಂಶೋಧನೆಗೆ ಪೂರ್ಣವಿರಾಮವಿರುವುದಿಲ್ಲ. ಅದು ಯಾವಾಗಲೂ ಅಲ್ಪ ವಿರಾಮದಲ್ಲಿ ನಿಂತಿರುತ್ತದೆ.

**ವಿಷಯದ ಖಚಿತತೆ:** ಸಂಶೋಧಕ ತಾನು ಸಂಶೋಧನೆಗೆ ತೊಡಗುವುದಕ್ಕೆ ಮೊದಲು ತಾನು ಸಂಶೋಧಿಸಬೇಕಾದ ವಿಷಯವನ್ನು ನಿರ್ದಿಷ್ಟಗೊಳಿಸಿಕೊಳ್ಳಬೇಕು. ಆಯ್ದು ಕೊಂಡಿರುವ ವಿಷಯದ ಬಗೆಗೆ ಆ ವೇಳೆಗಾಗಲೇ ನಡೆದಿರುವ ಸಂಶೋಧನ ಕೆಲಸವನ್ನು, ಪ್ರಕಟಗೊಂಡಿರುವ ಪುಸ್ತಕಗಳನ್ನು ಹಾಗೂ ಪ್ರಬಂಧ, ಲೇಖನಗಳನ್ನು ಕ್ರೋಡೀಕರಿಸಿಕೊಂಡು ಆಳವಾಗಿ ಅಧ್ಯಯನ ಮಾಡಬೇಕು. ಮುಂದೆ ಆಗಬೇಕಾಗಿರುವ, ಪರಿಶೀಲಿಸಬೇಕಾಗಿರುವ ಅಧ್ಯಯನ ಪಟ್ಟಿ ಸಿದ್ಧವಾಗಬೇಕು. ಅವುಗಳಲ್ಲಿರುವ ಸಿಕ್ಕು ತೊಡಕುಗಳನ್ನು ಬಗೆಹರಿಸಿಕೊಳ್ಳುವ ಪ್ರಯತ್ನವಾಗಬೇಕು. ಸವಾಲುಗಳು ಹಾಗೂ ಸಮಸ್ಯೆಗಳನ್ನು ಸಂಶೋಧನೆಯ ಮೂಲಕ ಪರಿಹರಿಸಿಕೊಳ್ಳಲು ಪ್ರಯತ್ನಿಸಬೇಕು.

**ಎರಡು ವಿಧ:** ಸಂಶೋಧನೆ ಕೈಗೊಳ್ಳುವವರು ಎರಡು ವಿಧಗಳಲ್ಲಿ ಕಾರ್ಯ ಪ್ರವೃತ್ತರಾಗಬಹುದು. ಒಂದು, ಕ್ಷೇತ್ರಕಾರ್ಯವನ್ನು ಬಯಸುವ ಸಂಶೋಧನೆ, ಎರಡನೆಯದು, ಮೇಜು ಕಾರ್ಯ. ಇವೆರಡರಲ್ಲಿ ಸಂಶೋಧಕ ತಾನು ಆಯ್ಕೆ ಮಾಡಿಕೊಳ್ಳಬೇಕಾಗದುದನ್ನು ಮೊದಲು ನಿರ್ಧರಿಸಿಕೊಳ್ಳಬೇಕು.

ಕ್ಷೇತ್ರ ಕಾರ್ಯದ ಸಂಶೋಧನೆಯಲ್ಲಿ, ಅಲ್ಲೊಂದು ದೇವಾಲಯ, ಇಲ್ಲೊಂದು ಮಾಸ್ತಿಕಲ್ಲು. ಅಲ್ಲೊಬ್ಬ ಜಾನಪದ ಕಥೆಯ ಅಜ್ಜಿ, ಇಲ್ಲೊಬ್ಬ ಜಾನಪದ ಹಾಡುಗಾರ ಮತ್ತೆಲ್ಲೊ ಒಂದು ಶಾಸನ – ಹೀಗೆ ಸಂಶೋಧಕ ವಿಷಯ ಸಂಗ್ರಹಕ್ಕೆ ಅಲೆಮಾರಿಯಾಗಿ ಅಲೆಯಬೇಕಾಗುತ್ತದೆ. ಗುಡ್ಡ–ಕಾಡುಗಳು, ಬೆಟ್ಟ–ಕಣಿವೆಗಳು, ಊರು–ಕೇರಿಗಳು, ಹಳ್ಳ–ಕೊಳ್ಳಗಳು ತಿಪ್ಪೆ ಚರಂಡಿಗಳು – ಇವುಗಳು ಆತ ಕೈಗೊಳ್ಳಬೇಕಾದ ಯಾತ್ರಾಸ್ಥಳಗಳಾಗಬೇಕು, ವಿಷಯ ಸಂಗ್ರಹಿಸಬೇಕು. ಅಲ್ಲಿಗೆ ಸಂಶೋಧಕನ ಅರ್ಧ ಕೆಲಸ ಮುಗಿಯುತ್ತದೆ. ಇದು ಶ್ರಮದಲ್ಲಿ ಶ್ರಮದ ಕೆಲಸ. ಅನಂತರ ವಿಷಯಾನುಕ್ರಮದಲ್ಲಿ ಬರವಣಿಗೆಯ ಕಾರ್ಯ ಪ್ರಾರಂಭಿಸಬೇಕು.

ಮೇಜು ಕಾರ್ಯದ ಸಂಶೋಧನೆಯಲ್ಲಿ, ಸಂಶೋಧಕ ಸ್ವಲ್ಪ ಶ್ರಮವಹಿಸಿ ತನ್ನ ಸಂಶೋಧನೆಗೆ ಸಂಬಂಧಿಸಿದ ಗ್ರಂಥಗಳು, ಲೇಖನ, ಪ್ರಬಂಧಗಳು ಕ್ರೋಢೀಕರಿಸಿ ಕೊಳ್ಳಬೇಕು. ಅಲ್ಲಿಗೆ ಆತನ ಅರ್ಧ ಕೆಲಸ ಮುಗಿಯುತ್ತದೆ. ಉಳಿದರ್ಧ ಆ ಗ್ರಂಥಗಳನ್ನು ಓದಿ, ಅನೇಕ ವಿದ್ವಾಂಸರ, ವಿಮರ್ಶಕರ ಅಭಿಪ್ರಾಯಗಳನ್ನು ಪರಾಮರ್ಶಿಸಿ, ಕಡೆಗೆ ತನ್ನ ನಿಲುವು, ನಿರ್ಣಯಗಳನ್ನು ಉದಾಹರಣೆಗಳ ಮೂಲಕ ಸಮರ್ಥಿಸಿಕೊಂಡು ಪ್ರಬಂಧ ಸಿದ್ಧಪಡಿಸಬೇಕು.

ಇಲ್ಲಿ ನಾನು ಸಂಶೋಧನೆಯ ಎರಡು ಉದಾಹರಣೆಗಳನ್ನು ಪ್ರಸ್ತಾಪ ಮಾಡಬಯಸುತ್ತೇನೆ.

ಒಂದು, ಆದಿಕವಿ ಮಹಾಕವಿ ಪಂಪ, ತನ್ನ ವಿಕ್ರಮಾರ್ಜುನ ವಿಷಯ ಮಹಾಕಾವ್ಯದಲ್ಲಿ ಬನವಾಸಿಯ ಬಗೆಗೆ ತನ್ನ ಒಲವನ್ನು ಹೀಗೆ ಬಿತ್ತರಿಸಿದ್ದಾನೆ.

**ತೆಂಕಣಗಾಳಿ ಸೋಂಕಿದೊಡಂ ಒಳ್ನುಡಿಗೇಳ್ದೊಡಂ ಇಂಪನಾಳ್ದಗೇ**
**ಯಂಕಿವಿಪೊಕ್ಕಡಂ ಬಿರಿದಮಲ್ಲಿಗೆಗಂಡೊಡಂ ಆದಕೆಂಪಲಂ**
**ಪಂಗೆಡೆಗೊಂಡಡಂ ಮಧುಮಹೋತ್ಸವಮಾದೊಡಂ ಏನನೆಂಬೆನಾ**
**ರಂಕುಸಮಿಟ್ಟೊಡಂ ನೆನವುದೆನ್ನಮನಂ ಬನವಾಸಿ ದೇಶಮಂ**

**– ಪಂಪ ೯೪೧. ವಿಕ್ರಮಾರ್ಜುನ ವಿಜಯಂ : ೪.೩೦**

ಇಲ್ಲಿ ಕವಿ ಪಂಪ, ಪ್ರಕೃತಿಯ ಸೊಬಗಿನ ಐಸಿರಿಯನ್ನೂ ಶೃಂಗಾರ ಭೋಗದ ಮೈಸಿರಿಯನ್ನೂ ವರ್ಣಿಸುತ್ತಾ

'ಆರಂಕುಶಮಿಟ್ಟೊಡಂ ನೆನವುದೆನ್ನ ಮನಂ ಬನವಾಸಿ ದೇಶಮಂ' – ಎಂದು ವರ್ಣಿಸಿದ್ದಾನೆ. ಮದಿಸಿದ ಆನೆಯನ್ನು ತಹಬದಿಗೆ ತರುವ ಅಂಕುಶದ ತಿವಿತ ನೋವಿನದು. ಈ ಪದ್ಯದಲ್ಲಿ ಪಂಪ 'ನನಗೆ ಯಾರಾದರೂ ಅಂಕುಶದಿಂದ ತಿವಿದರೂ ಆ ನೋವಿನಲ್ಲೂ ನಾನು ಬನವಾಸಿ ದೇಶವನ್ನು ನೆನೆಯುವೆ' – ಎಂದು ಹೇಳುವ ಮೂಲಕ ಬನವಾಸಿ ದೇಶದ ಮೇಲಿನ ತನ್ನ ಗಾಢವಾದ ಪ್ರೀತಿ – ಒಲವನ್ನು ಮೆರೆದಿದ್ದಾನೆ ಎನ್ನುವ ವಿವರವನ್ನು ಹಲವು ಸಂಶೋಧಕರು ಹಾಗೂ ವಿಮರ್ಶಕರು ಹೇಳುತ್ತ ಬಂದಿದ್ದಾರೆ. ಈಗಲೂ ಹೇಳುತ್ತಿದ್ದಾರೆ.

ಆದರೆ ಈ ವಾಕ್ಯಪುಂಜಕ್ಕೆ ಮತ್ತೊಂದು ರೀತಿಯ ವಿಶ್ಲೇಷಣೆಯನ್ನು ಕೊಡುವ ಸಂಶೋಧಕರೂ ಇದ್ದಾರೆ. ನನ್ನ ಗುರುಗಳು, ಸಂಶೋಧಕರೂ ಆದ ಪ್ರೊ.ಸಿ. ಮಹಾದೇವಪ್ಪನವರು ಮತ್ತು ಸಂಶೋಧಕರೂ ಸಾಹಿತಿಗಳೂ ಆದ ಪ್ರೊ. ಹಂಪ. ನಾಗರಾಜಯ್ಯನವರು ಇನ್ನೂ ಕೆಲವರು ಪಂಪನ ಈ ಮಾತಿಗೆ ಬೇರೊಂದು ರೀತಿಯ ವಿವರಣೆಯನ್ನು ನೀಡಿದ್ದಾರೆ. 'ಆರ್ + ಅಂಕುಶಂ + ಇಟ್ಟೊಡಂ' – ಎನ್ನುವ ಪದದ ಪದ ವಿಭಾಗವನ್ನು 'ಆರಂ + ಕುಶಮಿಟ್ಟೊಡಂ' – ಎಂದು ವಿಭಜಿಸಬೇಕೆಂದು ಹೇಳಿದ್ದಾರೆ. ಹಾಗೆ ಪದ ವಿಭಾಗ ಮಾಡಿ ಅವರು ಕೊಡುವ ವಿವರ ಹೀಗಿದೆ;

ಮಲೆನಾಡಿನ ಪ್ರದೇಶದಲ್ಲಿ, ಬನವಾಸಿಯ ಸುತ್ತಮುತ್ತ ಹಲಸಿನ ಮರಗಳು ತುಂಬಾ ಬೆಳೆಯುತ್ತವೆ. ಅವುಗಳಲ್ಲಿ ಒಂದು ಜಾತಿಯ ಹಲಸು, 'ದಿವ್ಯಹಸಲು'. ಅದನ್ನು 'ದಿವಿಹಲಸು' ಎನ್ನುವುದು ಉಂಟು. ಆ ಜಾತಿಯ ಹಲಸು ಆ ಪ್ರದೇಶದಲ್ಲಿ ಜಾಸ್ತಿ ಬೆಳೆಯುತ್ತದೆ. ಆ ಮರಕ್ಕೆ ಆರಂ – ಎಂಬುದು ಮತ್ತೊಂದು ಹೆಸರು. ಮತ್ತು ಅದಕ್ಕೆ 'ನಿಚುಲ ವೃಕ್ಷ' ಎಂಬ ಮತ್ತೊಂದು ಹೆಸರೂ ಇದೆ.

'ಆರಂ' – ಎಂದರೆ ದಿವ್ಯ ಹಲಸಿನ ಮರ, 'ಆರಂ + ಕುಶಮಿಟ್ಟೊಡಂ' – ಎಂದರೆ, ಆ ಹಲಸಿನ ಮರ ಹೂ ಬಿಟ್ಟರೆ, ಹಾಗೆ ಹೂ ಬಿಟ್ಟಾಗ ನನ್ನ ಮನ ಬನವಾಸಿ ದೇಶವನ್ನು ನೆನೆಯುತ್ತದೆ ಎನ್ನುವ ವಿವರಣೆಯನ್ನು ಕೊಟ್ಟಿದ್ದಾರೆ.

ಪ್ರಕೃತಿ ಸೊಬಗನ್ನು – ವರ್ಣಿಸುವ, ಮಾನವನ ಮಧು ಮಹೋತ್ಸವವನ್ನು ಚಿತ್ರಿಸುವ, ಚೇತೋಹಾರಿ, ಉಲ್ಲಾಸದಾಯಕ ಅನುಭವ ಪಡೆಯುವ ವರ್ಣನೆಯ ಈ ಪದ್ಯದಲ್ಲಿ 'ಅಂಕುಶ'ಕ್ಕೆ ಜಾಗವಿಲ್ಲ; ಎನ್ನುವ ಇನ್ನೊಂದು ಅಭಿಪ್ರಾಯವೂ ಗಮನಿಕೆಗೆ ಮುಖ್ಯವಾದುದು, ಗಮನಿಸಬೇಕಾದುದೂ ಆಗಿದೆ.

ಇನ್ನು ಎರಡನೆಯ ಉದಾಹರಣೆ ಎಂದರೆ, ದಾನ ಚಿಂತಾಮಣಿ ಅತ್ತಿಮಬ್ಬೆಗೆ ಸಂಬಂಧಿಸಿದುದು. ಕಳೆದ ಅರವತ್ತು ಎಪ್ಪತ್ತು ವರುಷಗಳಿಂದಲೂ ನಮಗೆ ಬಿ.ಎ. ಆನರ್ಸ್ ಹಾಗೂ ಎಂ.ಎ. ತರಗತಿಗಳಿಗೆ ಪಾಠ ಮಾಡಿದ ಪ್ರಾಧ್ಯಾಪಕರು, ಅತ್ತಿಮಬ್ಬೆಯ ಬಗೆಗೆ ನಾಲ್ಕು ಚಾರಿತ್ರಿಕ, ಸಾಹಿತ್ಯಕ ಆಕರ ನೆಲೆಯಲ್ಲಿ ಪಾಠ ಮಾಡುತ್ತಿದ್ದರು. ನಾನೂ ಸಹ ೧೯೯೧ ನೆಯ ಇಸವಿಯವರೆಗೂ ಆ ಆಕರಗಳನ್ನೇ ಆಧಾರವಾಗಿ ಇಟ್ಟುಕೊಂಡು ಪಾಠ ಮಾಡುತ್ತಿದ್ದೆ. ಆ ನಾಲ್ಕು ಆಕರಗಳೆಂದರೆ:

೧. ಪೊನ್ನ ಕವಿಯ ಶಾಂತಿನಾಥ ಪುರಾಣ

೨. ರನ್ನನ ಅಜಿತಪುರಾಣ

೩. ರನ್ನನ ಲಕ್ಕುಂಡಿ ಶಾಸನ

೪. ಬ್ರಹ್ಮಶಿವನ ಸಮಯ ಪರೀಕ್ಷೆ

ಅತ್ತಿಮಬ್ಬೆಯ ಸಾವಿರ ವರುಷದ (೧೯೯೩) ಉತ್ಸವವನ್ನು ನಾಡಿನಾದ್ಯಂತ ಹಾಗೂ ಹೊರನಾಡುಗಳಲ್ಲಿಯೂ ವಿಜೃಂಭಣೆಯಿಂದ ಆಚರಿಸಬೇಕೆಂದೂ, ಅತ್ತಿಮಬ್ಬೆಯ ಹೆಸರಿನಲ್ಲಿ ಪ್ರತಿವರುಷ ಒಬ್ಬ ಮಹಿಳಾ ಸಾಹಿತಿಗೆ ದಾನ ಚಿಂತಾಮಣಿ ಹೆಸರಿನ ಪ್ರಶಸ್ತಿಯೊಂದನ್ನು ನೀಡಬೇಕೆಂದೂ ರಾಜ್ಯ ಸರ್ಕಾರಕ್ಕೆ ನಾನು ಮನವಿಯನ್ನು ಕೊಟ್ಟದ್ದಲ್ಲದೆ. ೧೯೯೨ರಲ್ಲಿ ಬೆಂಗಳೂರು, ಶಿವಮೊಗ್ಗ ಹಾಗೂ ಮಂಗಳೂರು ಇಲ್ಲೆಲ್ಲಾ ಪತ್ರಿಕಾಗೋಷ್ಠಿಯನ್ನು ಕರೆದು ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ಪ್ರಚುರಪಡಿಸಿದೆ.

ಅಂದಿನ ಕರ್ನಾಟಕ ರಾಜ್ಯದ ಘನಸರ್ಕಾರ ನನ್ನ ಮನವಿಯನ್ನು ಪುರಸ್ಕರಿಸಿ ಅತ್ತಿಮಬ್ಬೆಯ ಊರಾದ ಲಕ್ಕುಂಡಿಯಲ್ಲಿ, ಅತ್ತಿಮಬ್ಬೆಯ ಹೆಸರಿನಲ್ಲಿ ಪ್ರತಿವರುಷ 'ಲಕ್ಕುಂಡಿ ಉತ್ಸವ'ವನ್ನು ಆಚರಿಸಲು ಕ್ರಮ ಕೈಗೊಂಡಿತು. ಮತ್ತು ಪ್ರತಿ ವರುಷವೂ 'ಲಕ್ಕುಂಡಿ ಉತ್ಸವ'ವನ್ನು ಸರ್ಕಾರ ಆಚರಿಸಿಕೊಂಡು ಬರುವುದಕ್ಕೆ ಕ್ರಮ ಕೈಗೊಂಡು ಆಚರಿಸಿಕೊಂಡು ಸಹ ಬರುತ್ತಿದೆ. ಹಾಗೆಯೇ 'ದಾನಚಿಂತಾಮಣಿ' – ಪ್ರಶಸ್ತಿಯ, ನನ್ನ ಮನವಿಯನ್ನೂ ಪುರಸ್ಕರಿಸಿ ಪ್ರತಿವರುಷವೂ 'ದಾನಚಿಂತಾಮಣಿ' ಪ್ರಶಸ್ತಿಯನ್ನು ಲೇಖಕಿಯರಿಗೆ ನೀಡುತ್ತಾ ಬಂದಿದೆ. ಅನೇಕ ಲೇಖಕಿಯರು ಈಗಾಗಲೇ ಈ ಪ್ರಶಸ್ತಿಯಿಂದ ಭೂಷಿತರಾಗಿದ್ದಾರೆ.

೧೯೯೨ರಲ್ಲಿ ಅತ್ತಿಮಬ್ಬೆ ಮೇಲಿನ ಸಹಜ ಕುತೂಹಲದಿಂದ ನಾನೂ ಹಾಗೂ ಪ್ರೊ. ಹಂಪನಾ ಕೆಲವು ಶಾಸನಗಳ ಬೆನ್ನು ಹತ್ತಿದೆವು. ಎರಡು ವರುಷಗಳಲ್ಲಿ ಅತ್ತಿಮಬ್ಬೆಯ ಬಗೆಗೆ ಸುಮಾರು ೪೨ ಶಾಸನಗಳನ್ನು ಪತ್ತೆ ಮಾಡಿದೆವು. 'ಅತ್ತಿಮಬ್ಬೆ; ಶಾಸನಗಳ ನೆಲೆಯಲ್ಲಿ' – ಎನ್ನುವ ನನ್ನ ಸುದೀರ್ಘ ಸಂಶೋಧನ ಪ್ರಬಂಧದಲ್ಲಿ ಈ ವಿವರವನ್ನು ಕೊಡಲಾಗಿದೆ. ಅತ್ತಿಮಬ್ಬೆಯನ್ನು ಮತ್ತು ಆಕೆಗಿದ್ದ ಬಿರುದಾವಳಿಗಳನ್ನು ಹೆಸರಿಸಿರುವ ಶಾಸನದ ಸಾಲುಗಳನ್ನು, ಶಾಸನ ಸಂಖ್ಯೆಯ ವಿವರವನ್ನು ಕೊಡಲಾಗಿದೆ. ಇಷ್ಟೆಲ್ಲ ವಿವರವನ್ನು ಕೊಡಲು ಕಾರಣ ಸಂಶೋಧನೆಯಲ್ಲಿ ಹೊಸ ಶೋಧದ ವಿಷಯಗಳನ್ನು ಪರಿಚಯಿಸುವುದೇ ಆಗಿದೆ.

ಶಾಸನಗಳ ಉದಾಹರಣೆಯ ಮೂಲಕ ಅತ್ತಿಮಬ್ಬೆಯ ಬಗೆಗೆ ಹೆಚ್ಚಿನ ವಿವರಗಳನ್ನು, ಆಕೆಯ ವ್ಯಕ್ತಿತ್ವದ ಹಿರಿಮೆಯನ್ನು ಗಣಿಸಬಹುದಾಗಿದೆ.

ಇತ್ತೀಚಿನ ವರುಷಗಳಲ್ಲಿ ದೊರೆತ ಮತ್ತೆರಡು ಹೊಸ ಶಾಸನಗಳು, ಅತ್ತಿಮಬ್ಬೆ ಹಾಗೂ ಆಕೆಯ ಗಂಡನಾದ ನಾಗದೇವನ ಬಗೆಗೆ ಹೊಸ ಬೆಳಕನ್ನು ನೀಡಿವೆ. ಈ ಎರಡು ಶಾಸನಗಳು ದೊರೆಯುವವರೆಗೂ ಅತ್ತಿಮಬ್ಬೆಯ ಗಂಡನಾದ ನಾಗದೇವನು ಜೈನ ಧರ್ಮೀಯನೆಂದು ಭಾವಿಸಲಾಗಿತ್ತು.

೧. ಕೊಪ್ಪಳದ ಬಿ.ಸಿ. ಪಾಟೀಲರು ಪತ್ತೆ ಮಾಡಿದ 'ಗುಡ್ಲೂನೂರು' ಶಾಸನ ಅಂದರೆ 'ಸಿಂದವುಗೆ ಶಾಸನ' (ಕ್ರಿ.ಶ. ೯೮೮) ಹಾಗೂ ೨. ಹಂಪಿ, ಕನ್ನಡ ವಿಶ್ವವಿದ್ಯಾಲಯ ಸಂಶೋಧಕ ಡಿ.ವಿ. ಪರಮಶಿವಮೂರ್ತಿ ಕಂಡುಹಿಡಿದ 'ಶಿರೂರು ಶಾಸನ', ಅಂದರೆ 'ಸಿರವುರ ಶಾಸನ' (ಕ್ರಿ.ಶ. ೯೮೯). ಈ ಶಾಸನಗಳಲ್ಲಿ, ನಾಗದೇವಶೈವ ಬ್ರಾಹ್ಮಣನಾಗಿದ್ದ ಎಂಬುದಕ್ಕೆ ಆಧಾರಗಳು ದೊರೆತಿವೆ. ನಾಗದೇವ ಯುದ್ಧದಲ್ಲಿ ಹೋರಾಡುತ್ತಾ ಮರಣಿಸಿದಾಗ ಆತನ ಪರೋಕ್ಷ ವಿನಯಕ್ಕಾಗಿ ಅತ್ತಿಮಬ್ಬೆಯು 'ನಾಗಲಿಂಗೇಶ್ವರನ ದೇವಾಲಯ'ವನ್ನು ಕಟ್ಟಿಸಿದ ವಿಷಯ ಆ ಶಾಸನಗಳಲ್ಲಿ ನಿರೂಪಿತವಾಗಿದೆ. ಈ ಅಂಶದಿಂದ ಅತ್ತಿಮಬ್ಬೆ ಜೈನ ಧರ್ಮೀಯಳೆಂದೂ ನಾಗದೇವ ಶೈವ ಧರ್ಮೀಯನೆಂದೂ ತಿಳಿದು ಬರುವುದಲ್ಲದೆ ಆ ಶತಮಾನಗಳಲ್ಲಿ ಜೈನ ಹಾಗೂ ಶೈವ ಧರ್ಮಗಳೊಡನೆ ಕೊಡು-ಕೊಳೆ ಮೂಲಕ ವಿವಾಹ ಸಂಬಂಧಗಳು ಏರ್ಪಡುತ್ತಿದ್ದವು ಎನ್ನುವ ಅಂಶವೂ ತಿಳಿದುಬರುತ್ತದೆ.

ಹೀಗೆ ಎಲ್ಲಿ, ಏಕೆ, ಹೇಗೆ ಮತ್ತು ಯಾವಾಗ ಎನ್ನುವ ಪ್ರಶ್ನೆಗಳಿಗೆ ಉತ್ತರ ಹುಡುಕುವುದೇ ಸಂಶೋಧನೆಯ ಮೂಲ ಆಶಯ.

❑❑

# ಇಮ್ಮಡಿ ಜಗದೇಕಮಲ್ಲನ ಗುಲ್ಬರ್ಗ ಜಿಲ್ಲೆಯ ಬೋದನ ಶಿಲಾಶಾಸನ

– ಎಚ್.ಎಂ. ನಾಗರಾಜರಾವ್

ಕರ್ನಾಟಕವನ್ನು ಆಳಿದ ಕಲ್ಯಾಣದ ಚಾಳುಕ್ಯ ವಂಶಕ್ಕೆ ಸೇರಿದ ದೊರೆ ಇಮ್ಮಡಿ ಜಗದೇಕಮಲ್ಲ – ಈತನ ಆಳ್ವಿಕೆಯ ಆರಂಭವರ್ಷದ ವಿಷಯದಲ್ಲಿ ವಿದ್ವಾಂಸರಲ್ಲಿ ತುಸು ಗೊಂದಲವಿದೆ. ಈತನ ತಂದೆ ಸರ್ವಜ್ಞ ಮುಮ್ಮಡಿ ಸೋಮೇಶ್ವರನ ಆಳ್ವಿಕೆಯನ್ನು ಉಲ್ಲೇಖಿಸುವ ಕೊನೆಯ ಶಾಸನದ ತೇದಿ ಕ್ರಿ.ಶ. ೧೧೩೮ ರ ನವೆಂಬರ್ ೨೯ ಕ್ಕೆ ಹೊಂದುತ್ತದೆ.[೧] ಹೀಗಾಗಿ ಕ್ರಿ.ಶ. ೧೧೩೮–೩೯ ಕ್ಕೆ ಹೊಂದುವ ಕಾಳಯುಕ್ತಿ ಸಂವತ್ಸರವನ್ನೇ ಜಗದೇಕಮಲ್ಲನ ಪ್ರಥಮ ಆಳ್ವಿಕೆಯ ವರ್ಷವೆಂದು ಡಾ॥ ಜೆ.ಎಫ್. ಫ್ಲೀಟ್ ಅವರು ಊಹಿಸುತ್ತಾರೆ.[೨] ದೊರೆಯು ಪಟ್ಟಾಭಿಷಿಕ್ತನಾದ ಮೊದಲ ವರ್ಷದಲ್ಲಿಯೇ ಮಹಾಭೈರವ ಮೈಲಾರ ದೇವಾಲಯಕ್ಕೆ ಭೇಟಿಕೊಟ್ಟ ಸಂಗತಿ ಆಣದೂರು ಶಾಸನದಿಂದ ತಿಳಿದು ಬರುತ್ತದೆ ಎಂದು ಡಾ॥ ಬಾ.ರಾ. ಗೋಪಾಲ್ ಅವರು ಅಭಿಪ್ರಾಯಪಟ್ಟಿದ್ದಾರೆ ಹಾಗೂ ಕ್ರಿ.ಶ. ೧೧೩೮ ರ ಡಿಸೆಂಬರ್ ೮ ರಂದು ಜಗದೇಕಮಲ್ಲನು ಸಿಂಹಾಸನವನ್ನು ಏರಿದನೆಂದು ತಿಳಿಸುತ್ತಾರೆ.[೩] ಅನೇಕ ಇತಿಹಾಸ ಕೃತಿಗಳಲ್ಲಿ ಇಮ್ಮಡಿ ಜಗದೇಕಮಲ್ಲನ ಆಳ್ವಿಕೆಯ ಅವಧಿ ಕ್ರಿ.ಶ. ೧೧೩೯–೧೧೪೯ ಎಂದು ಸೂಚಿಸಿದೆ.

ಪ್ರಕೃತ ಶಾಸನವು ಇಂದಿನ ಕರ್ನಾಟಕ ರಾಜ್ಯದ ಗುಲ್ಬರ್ಗ ಜಿಲ್ಲೆಯ ಅಳಂದ ತಾಲ್ಲೂಕಿಗೆ ಸೇರಿರುವ ಬೋದನ ಗ್ರಾಮದ ಮಲ್ಲಿಕಾರ್ಜುನ ಅಥವಾ ಮಲ್ಕನ ದೇವಾಲಯದ ಬಳಿ ಇದ್ದ ಶಾಸನವಾಗಿದೆ. ಈ ಶಾಸನವು ಈಗಾಗಲೇ ವಿ. ಶಿವಾನಂದ ಅವರಿಂದ ಸಂಪಾದಿತವಾಗಿರುವ ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು ಎಂಬ ಶಾಸನ ಸಂಗ್ರಹದೊಳಗೆ ಮುದ್ರಿತವಾಗಿದೆ.[೪] ಶಿವಾನಂದ ಅವರು ಕಲ್ಕತ್ತೆಯ ರಾಯಲ್ ಏಷ್ಯಾಟಿಕ್ ಸೊಸೈಟಿಯಲ್ಲಿರುವ ಕರ್ನಲ್ ಮೆಕೆಂಜಿ ಅವರ ಸಂಗ್ರಹವನ್ನು ಮೈಕ್ರೋಫಿಲಂ ಮಾಡಿಕೊಂಡು ಅದರ ಆಧಾರದಿಂದ ಈ ಶಾಸನ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಪ್ರಕೃತ ಬೋದನ ಶಿಲಾಶಾಸನವು ಕೂಡ ಮೆಕೆಂಜಿ ಸಂಗ್ರಹದಲ್ಲಿದ್ದ ಶಾಸನವಾಗಿದೆ. ಪ್ರಕೃತ ಲೇಖನದಲ್ಲಿ ಬೋದನ ಶಿಲಾಶಾಸನವನ್ನು ದಿವಂಗತ ಎಂ. ಹನುಮಂತರಾಯರ[೫] ಸಂಗ್ರಹದಲ್ಲಿದ್ದ ಹಸ್ತಪ್ರತಿ ಪುಸ್ತಕದ ಆಧಾರದ ಮೇಲೆ ನೀಡಲಾಗಿದೆ. ಈ ಹಸ್ತಪ್ರತಿ ಪುಸ್ತಕವು ಬಹುಶಃ ಮದ್ರಾಸಿನ ಗೌರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯಲ್ಲಿ ನಿಕ್ಷೇಪಗೊಂಡಿದ್ದ ಕರ್ನಲ್ ಮೆಕೆಂಜಿ ಅವರ ಸಂಗ್ರಹದ ನಕಲು ಪ್ರತಿಯಾಗಿದೆ ಎಂದು ತೋರಿಬರುತ್ತದೆ. ವಿ. ಶಿವಾನಂದ ಅವರು ನೀಡಿರುವ ಪಾಠಕ್ಕೂ ಹನುಮಂತರಾಯರ ಸಂಗ್ರಹದ ಹಸ್ತಪ್ರತಿಯ ಪಾಠಕ್ಕೂ ಅನೇಕ ವ್ಯತ್ಯಾಸಗಳಿವೆ. ಶಿವಾನಂದ ಅವರು ದಾಖಲಿಸಿರುವ ಪಾಠ ಅಲ್ಲಲ್ಲಿ ತ್ರುಟಿತವಾಗಿದ್ದರೆ ಹನುಮಂತರಾಯರ ಸಂಗ್ರಹದ ಪಾಠ ಎಲ್ಲಿಯೂ ತ್ರುಟಿತವಾಗಿರದೆ ಸ್ಪಷ್ಟವಾಗಿದೆ. ಜೊತೆಗೆ ಎರಡೂ ಪಾಠಗಳಲ್ಲಿ ಕಂಡು ಬರುವ ಕಾಗುಣಿತದ ಬರವಣಿಗೆಯ ವೈಚಿತ್ರ್ಯ ಗಮನಾರ್ಹವಾಗಿದೆ. ಇಂತಹ ಹಲವು ಅಂಶಗಳ ಕಾರಣ ಇಲ್ಲಿ ಶಾಸನದ ಕಿರು ಸಮೀಕ್ಷೆಯೊಂದಿಗೆ ಹನುಮಂತರಾಯರ ಸಂಗ್ರಹದ ಪಾಠವನ್ನು ಯಥಾವತ್ತಾಗಿ ದಾಖಲಿಸಲಾಗಿದೆ. ಶಾಸನದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಹಸು, ಕರು ಮುಂತಾದ ಉಬ್ಬುಶಿಲ್ಪಗಳಿದ್ದುದನ್ನು ಹಸ್ತ ಪ್ರತಿಯಲ್ಲಿ ನಮೂದಿಸಿದೆ.

ಪ್ರಸ್ತುತ ಶಾಸನದಲ್ಲಿ ಕೊಟ್ಟಿರುವ ತೇದಿ ವಿವರಗಳೆಂದರೆ ಜಗದೇಕಮಲ್ಲ ವರ್ಷ ೫, ದುಂದುಭಿ ಸಂವತ್ಸರದ ಪುಷ್ಯ ಶುದ್ಧ ೫ ಶುಕ್ರವಾರ. ಇವು ಕ್ರಿ.ಶ. ೧೧೪೨ರ ಡಿಸೆಂಬರ್ ೨೫ ಶುಕ್ರವಾರಕ್ಕೆ ಸರಿಹೊಂದುತ್ತವೆ.[೬] ಶಾಸನದ ಲಿಪಿ ಮತ್ತು ಭಾಷೆ ಕನ್ನಡ. ಆದರೆ ಶಾಪಾಶಯ ಭಾಗಶಃ ಸಂಸ್ಕೃತದಲ್ಲಿದೆ.

ಈ ಶಾಸನದಲ್ಲಿನ ಗಮನಾರ್ಹ ಅಂಶವೆಂದರೆ ಶಾಸನಕವಿಯ ಹೆಸರಿರುವುದು. ಸಹಜಕವಿ ಸಾರ್ವಭೌಮನೆನಿಸಿದ ಅವಧಾನಿಯೂ ವಿನಯವಿಲಾಸಿಯೂ ಆದ ಮಾಧವ ವಿಭು 'ಉಚಿತ ಚತುರೋಕ್ತಿ'ಗಳಿಂದ ಶಾಸನವನ್ನು ಹೇಳಿದನಂತೆ. ಪದಪ್ರಯೋಗ, ಭಾಷಾಬಂಧ, ರಚನಾಕೌಶಲಗಳನ್ನು ಗಮನಿಸಿದರೆ ಈತ ಉತ್ತಮ ಕವಿಯಾಗಿದ್ದನೆಂದು ಹೇಳಬಹುದು. ಈತನ ರಚನೆಯಲ್ಲಿ ಕಂದಗಳ ಬಳಕೆ ಅಧಿಕ ಉಳಿದಂತೆ ಕೆಲವು ಪ್ರಸಿದ್ಧ ಮತ್ತು ಚಿರಪರಿಚಿತ ವೃತ್ತಗಳ ಬಳಕೆ ಕಂಡುಬರುತ್ತದೆ.

# ೨೭೮, 'ನೆರಳು', ೫ನೇ ಮುಖ್ಯರಸ್ತೆ, ಎಚ್ ಬ್ಲಾಕ್, ರಾಮಕೃಷ್ಣನಗರ, ಮೈಸೂರು – ೫೭೦ ೦೨೨

ಕಣ್ಣಿಗೆ ಕಟ್ಟುವಂತೆ ವರ್ಣಿಸುವ ಕವಿಯ ಸಾಮರ್ಥ್ಯಕ್ಕೆ ಒಂದು ಉದಾಹರಣೆ:

**ಪರೆದ ಕರುಳು ಸಿಡಿಲ್ದತಲೆ ಜೋಲ್ದಕಳೇವರವಾಡುವಟ್ಟಕಾ।**
**ಳ್ಪುರವೆನೆ ಬಪ್ಪನೀತೆರಕಡಲು ನಲಿದಾಡುವ ಭೂತ ಕೋಟಿ ಝೇಂ।**
**ಕರಿಸುವ ಯೋಗಿನೀ ವಿತತಿ ಕಿತ್ತುವ ಸೂಯ್ಪರೆವರ ಪುಣ್ಗಳ।**
**ಚ್ಚರಿಯೆನೆರತಾದ್ರವಾಯ್ತುರಿದು ಗೆಲ್ದರಣಕಲಿ ವಾಸುದೇವನಂ॥**

ಶಿವಸ್ತುತಿಯಿಂದ ಪ್ರಾರಂಭವಾಗುವ ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ವಂಶಾವಳಿಯನ್ನು ನೀಡಿದೆ:




ದೊರೆಯು ಕಲ್ಯಾಣದಿಂದ ರಾಜ್ಯವಾಳುತ್ತಿದ್ದ. ಈ ಕಾಲದಲ್ಲಿ ಬಮ್ಮಣ್ಣಯ್ಯ ದಂಡನಾಯಕ ಕನ್ನಡ ಸಂಧಿವಿಗ್ರಹಿ, ಮಹಾಪ್ರಧಾನ ಹಾಗೂ ಕರಿತುರಗಸಾಹಣಿ ವೆಗ್ಗಡೆಯಾಗಿದ್ದ. ಅಭಿನವ ಸರಸ್ವತಿ ಮತ್ತು ಸರಸ್ವತಿ ನಿಲಯ ಎಂದು ಖ್ಯಾತಳಾದ ಚಾಲುಕ್ಯ ರಾಣಿ ಮಲಯಮತಿ ಮಾಡಿಸಿದ ಸರಸ್ವತಿಪುರದ ಧರ್ಮವನ್ನು ಆತ ಪಾಲಿಸುತ್ತಿದ್ದ. ಸರಸ್ವತಿಪುರದ ತಳಾರ ಸಾಂತೆಯನಾಯಕ; ಈತನ ಜೀವಿತಕ್ಕೆ ಅಲಂದೆ ಸಾವಿರ ಪ್ರದೇಶಕ್ಕೆ ಸೇರಿದ, ಗೋಕನೂರಿಪ್ಪತ್ತರ ಬಳಿಯ ನರವಣಿ ಹನ್ನೆರಡರೊಳಗೆ ಬೋದನ ಗ್ರಾಮವಿತ್ತು. ಇದು 'ನಿಖಿಳಾ ಧರಾದೇವಿ ಮುಖಲೀಲ' ಹಾಗೂ 'ಸಕಳ ಜನಾನಂದಕರಂಡ' ಎನಿಸಿತ್ತಂತೆ. ಈ ಬೋದನದ ಪ್ರಭು ನಾರಣದೇವ. ಸಮಸ್ತ ಧರ್ಮೋದ್ಧಾರಕ. ಈತ ಬೋದನದಲ್ಲಿ ಮೂಲಸ್ಥಾನ ದೇವಾಲಯವನ್ನು ಕಟ್ಟಿಸಿದ. ದೇವಾಲಯ ನಿರ್ಮಾಣ ಕಾಲದಲ್ಲಿ ನೆಲಗಟ್ಟಿನಲ್ಲಿ ಲಿಂಗವೊಂದು ದೊರೆಯಿತಂತೆ. ಹಾಗಾಗಿ 'ತ್ರಿಕೂಟನಗದವೊಲ್' ಎಸೆವ ತ್ರಿಕೂಟಾಚಲ ದೇವಾಲಯವನ್ನು ಕಟ್ಟಿಸಿದ. ಮೂಲಸ್ಥಾನ ಪೂರ್ವಾಭಿಮುಖವಾಗಿದ್ದು, ಉತ್ತರಾಭಿಮುಖವಾಗಿ ಮಲ್ಲಿಕಾರ್ಜುನಲಿಂಗ ಹಾಗೂ ದಕ್ಷಿಣಾಭಿಮುಖವಾಗಿ ಕೇಶವ ಗುಡಿಗಳಿದ್ದವು. ಈ ದೇವಾಲಯ ಸಮುಚ್ಚಯ ಬ್ರಹ್ಮನ ಸೃಷ್ಟಿಯೋ, ವಿಶ್ವಕರ್ಮನ ನಿರ್ಮಾಣವೋ ಅಥವಾ ಮಯನ ಮಾಟವೋ ಎನ್ನುವಂತಿತ್ತು. ಉಮಾಮಹೇಶ್ವರ, ಮುರಾರಿ, ಸಪ್ತಮಾತೃಕೆಯರು, ಭೈರವ, ಚಂಡಿ, ಸೂರ್ಯ, ನಾಗ, ಬ್ರಹ್ಮ, ಗಣಪತಿ – ಹೀಗೆ ಎಲ್ಲ ದೇವತೆಗಳೂ ಅಲ್ಲಿ ಪ್ರತಿಷ್ಠಾಪಿತರಾದರು. ದೇವರಿಗೆ ಹೊಂದುವ ಗದ್ದುಗೆ ಮತ್ತು ಬಾವಿಗಳನ್ನೂ ಮಾಡಿಸಲಾಯಿತು.

ದಂಡನಾಥ ನಾರಣದೇವ ಕಮ್ಮೆ ಕುಲದವನು, ಕೌಶಿಕ ಗೋತ್ರಜ. ಆತನ ವಂಶಾವಳಿ ಇದು.




ಇವರಲ್ಲಿ ಹಲವು ದಂಡನಾಥರ ಸೊಗಸಾದ ವರ್ಣನೆ ಪ್ರಸ್ತುತ ಶಾಸನದಲ್ಲಿದೆ. ದೇವರ ಸೇವೆಗೆ ಭೂಮಿದಾನ ಮಾಡಲಾಯಿತು. ಮಾಧವವಿಭು ಶಾಸನ ರಚಿಸಿದ. ದೇವಾಲಯಕ್ಕೆ ಸ್ಥಾನಪತಿ ಇಲ್ಲವೆಂದು ಸ್ಪಷ್ಟವಾಗಿ ಹೇಳಿರುವುದು ಗಮನಾರ್ಹ. ಹಾಗೆಯೇ ಶೂದ್ರರಿಗೆ ಪೂಜಾಧಿಕಾರವಿಲ್ಲ.

ಪ್ರಸ್ತುತ ಶಾಸನ ವಿಷಯ ಮತ್ತು ವಸ್ತುವಿನ ದೃಷ್ಟಿಯಿಂದ ಇಮ್ಮಡಿ ಜಗದೇಕಮಲ್ಲನ ಶಾಸನಗಳಿಗೆ ಹೊಸ ಸೇರ್ಪಡೆಯಾಗಿದೆ.[೭]

**ಟಿಪ್ಪಣಿಗಳು:**

೧. ARIE 1961-62, App B. No. 448

೨. Bombay Gazetteer, Vol. – I, Part – II, Page 457

೩. **The Chalukyas of Kalyana and the Kalachuris**, Karnatak University, Dharwad – 1981, Page. 315 [ಈ ಕೃತಿಯಲ್ಲಿ ಈ ದೊರೆಯ ಆಳ್ವಿಕೆಯ ಬಗೆಗೆ ಚರ್ಚೆ ಇದೆ]

೪. **ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು** – (ಸಂ) ವಿ. ಶಿವಾನಂದ, ಕನ್ನಡ ಪೀಠ : ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ ಉತ್ತರಪ್ರದೇಶ – ೧೯೯೨. ಶಾಸನ ಸಂಖ್ಯೆ – ೬೭, ಪುಟ ೧೬೫–೧೭೨

೫. ಎಂ. ಹನುಮಂತರಾಯರು ಮೈಸೂರು ಪುರಾತತ್ತ್ವ ಇಲಾಖೆಯಲ್ಲಿ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸಿ ನಿವೃತ್ತಿಯ ತರುವಾಯ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರತಿಷ್ಠಿತ ಯೋಜನೆಯಾದ ಎಪಿಗ್ರಾಫಿಯ ಕರ್ನಾಟಕ ಶಾಸನ ಸಂಪುಟಗಳ ಪರಿಷ್ಕೃತ ಆವೃತ್ತಿಗಳ ಸಂಬಂಧದಲ್ಲಿ ಉಪ ಶಾಸನ ತಜ್ಞರಾಗಿ ಸೇವೆ ಸಲ್ಲಿಸಿದರು.

೬. ವಿ. ಶಿವಾನಂದ ಅವರು ಈ ಶಾಸನದ ಕಾಲವನ್ನು ಕ್ರಿ.ಶ. ೧೧೪೩ ಎಂದಷ್ಟೇ ನೀಡಿರುತ್ತಾರೆ.

೭. ಪ್ರಸ್ತುತ ಲೇಖನಕ್ಕೆ ಬೆಂಗಳೂರಿನ ಶ್ರೀ ಎಸ್. ಕಾರ್ತಿಕ್ ಅವರ ಪ್ರೇರಣೆ, ಒತ್ತಾಯ ಮತ್ತು ಪ್ರೋತ್ಸಾಹ ಕಾರಣ. ಅವರಿಗೆ ನನ್ನ ಕೃತಜ್ಞತೆಗಳು.

## ಶಾಸನ ಪಾಠ

ಓಂ ನಮ(:)ಶ್ಶಿವಾಯಾ॥
ನಮಸ್ತುಂಗ ಶಿರಶ್ಚುಂಬಿ। ಚಂದ್ರ ಚಾಮರ ಚಾರವೆ[ೕ]॥
ತ್ರೈಲೋಕ್ಯ ನಗರಾರಂಭ। ಮೂಲಸ್ತಂಭಾಯ ಶಾಂಭವೆ[ೕ]॥ [೧*]

ವೃತ್ತ॥
ತನಯಂ ತೈಲನ್ರುಪಂಗೆ ಸತ್ತಿಗೆ ನರೇಂದ್ರಂ ತತ್ಸುತಂ ವಿಕ್ರಮಾಂ।
ಕನ ತಂಮಂ ನೆಗರ್ದ್ದೈಯ್ಯಣಂಗೆ ಜಯಸಿಂಹ್ವಂ ತಂಮನಾತಂಗೆ ನಂ।
ದನನಾದಾಹವಮಲ್ಲದೇವನ ಮಗಂ ಸೋಮೇಶ್ವರೋರ್ವ್ವೀಶ್ವರಂ।
ಗನುಜಂ ವಿಕ್ರಮ ಚಕ್ರವರ್ತ್ತಿ ತದಪತ್ಯಂ ಸೋಮಭೂವಲ್ಲಭಂ॥ [೨*]

ಆ ನ್ರುಪನಗ್ರಸೂನು ಭವನಸ್ತುತ ಕೀರ್ತ್ತಿ ಮುಕುಂದ ಮೂರ್ತ್ತಿತೇ।
ಜೋನಿಧಿ ಚಕ್ರವರ್ತ್ತಿತಿಲಕಂ ಜನಪಂ ಜಗದೇಕಮಲ್ಲನಂ।
ಬೋನಿಧಿವೇಷ್ಟಿತಾಖಿಳ ಸಮಸ್ತಧಾರಾತಳಮಂ ಪ್ರತಾಪದಿಂ।
ಭೂನುತನೇಶಚೋದ್ಯವೆನೆ ಮಾಡಿದನಾದಿನರೇಂದ್ರ ಪೌರುಷಂ॥ [೩*]

ಸ್ವಸ್ತಿ ಸಮಸ್ತಭುನವಾಶ್ರಯ ಶ್ರೀಪ್ರುಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಲತಿಲಕ ಚಾಳೊಕ್ಯಾಭರಣಂ ಶ್ರೀಮತ್ಪ್ರತಾಪ ಚಕ್ರವರ್ತ್ತಿ ಜಗದೇಕಮಲ್ಲದೇವರ ವಿಜಯ ರಾಜ್ಯ ಮುತ್ತರೋತ್ತರಾಭಿವ್ರಿದ್ಧಿ ಪ್ರವರ್ಧಮಾನಮಾ ಚಂದ್ರಾರ್ಕತಾರಂಬರಂ ಶ್ರೀಮದ್ರಾಜಧಾನಿ ಕಲ್ಯಾಣಪುರದ ನೆಲೆವೀಡಿನೊಳು ಸುಖ ಸಂಕಥಾವಿನೋದದಿಂ ರಾಜ್ಯಂ ಗೈಯ್ಯುತ್ತಮಿರೆ॥ ತತ್ಪಾದಪದ್ಮೋಪಜೀವಿ ಮಹಾಪ್ರಧಾನಂ ಕಂನಡಹೇ[ರಿ] ಸಂಧಿವಿಗ್ರಹಿ ಕರಿ ತುರಗ ಸೋಹಣವೆಗ್ಗಡೆ ಬಂಮಣ್ಣೈಯ್ಯ ದಂಡನಾಯಕಂ ಸರಸ್ವತಿ ನಿಲಯಂ ಶ್ರೀಮದಭಿನವ ಸರಸ್ವತಿ ಮಲಯಮತಿದೇವಿಯ[ರು] ಮಾಡ್ಸಿದ ಸರಸ್ವತಿಪುರದ ಧರ್ಮಮನಾರೈವುತ್ತಿರ್ದ್ದಲ್ಲಿ ಆ ಸರಸ್ವತಿಪುರದ ತಳಾರಂ ಸಾಂತೇಯನಾಯಕನ ಜೀವಿತಕ್ಕಾಳುತಿರ್ದಲಂದೆಯ ಸಾಸಿರದೊಳಗಣ ಗೊಂಕನೂರಿಪ್ಪತ್ತರ ಬಳಿಯ ಕಂಪಣಂ ನರವಣೆ ಹಂನೆರಡರೊಳಗೆ

॥ ಕಂದಾ ॥
ಬೋದನಮೆಸದದು ನಿಖಿಳಧ।
ರಾದೇವಿ ಮುಖಲೀಲಮೆನೆ ಸಕಳ ಜ।
ನಾದದ ಕರಂದ ಸದಸಪ್ಪುರ
ಮಿದೊರೆತಲೆನಿಸೊದವಿದ ಶೋಭಾ ನಿಲಯಂ॥ [೪*]

ಅಲ್ಲಿಯ ಪ್ರಭು॥
ನಾರಣದೇವಂ ಪೇರಲ್ಲಾತ।
ಕಾರಣವಮುವಿಮುಳ ಕೀರ್ತ್ತಿಮನಸಿಜ ಭದ್ರಾ
ಕಾರಂ ಸಮಸ್ತಧರ್ಮೋ।
ದ್ಧಾರಂ ಮಾಡಿಸಿದ ಧರ್ಮಮೆಂತೆನೆ ಪೇರ್ಗ್ವಯಿಂ॥ [೫*]

ಬೋದನವಾಡಲ್ಸಂದಿದ।
ರಾದಿಯನರಿಯಲ್ಕದುಂಬ ಸಾಮ।
ಥೋರ್ದಯದಿಂತಂಕರಮುದಿ।
ತೋದಿತ ಮೆನಿಸಿದುದು ನೆಗರ್ದ ಮೂಲಸ್ಥಾನಂ॥ [೬*]

ಆ ದೇವರ ದೇಗುಲಮಂ।
ಸಾದರದಿಂ ಮಾಡಿಸಲ್ಕೆನೆಲಗಟ್ಟಲುಪುಂ।
ಣ್ಯೋದಯದಿನಲ್ಲಿಸಂನಿಧ।
ವಾದರುಮನಮೆಸದು ಮಲ್ಲಿಕಾರ್ಜುನದೇವರೂ॥ [೭*]

ಆ ದೇವರು ಬಿಜಯಂಗೈ।
ದಾದಿನದೊಳು ದಂಡನಾಥ ನಾರಣದೇವಂ।
ಶ್ರೀದಯಿತಂ ಭಕ್ತಿಯನ।
ಚ್ಛೋದರದೇವರುಮನಕ್ಕರಿಂ ಮಾಡಿಸಿದಂ॥ [೮*]

ಅಂತು ಶ್ರೀ ಮಲ್ಲಿಕಾರ್ಜುನದೇವರುಮಂ ಶ್ರೀ ಕೇಶವದೇವರುಮನಾ ಮೂಲಸ್ಥಾನದಿಕ್ಕೆಲದೊಳಂ ಪ್ರಥಿಷ್ಟೆಯಂ ಮಾಡಿದನದೆಂತೆನೆ
॥ಕಂದಾ॥
ಮೂಲಸ್ಥಾನಂ ಧರ್ಮದ।
ಮೂಲಸ್ಥಾನಮೆನಿಸಿತ್ತು ಪೂರ್ವಾಭಿಮುಖಂ।
ಶ್ರೀ ಲಲನೇಶ ಗ್ರುಹಂ ಮಹಿ!
ಮಾಲಂಬಂ ದಕ್ಷಿಣಾಭಿಮುಖಮೆನಲೆಸೆಗುಂ॥ [೯*]

ಭಾವಿಪಡೆ ಮಲ್ಲಿಕಾರ್ಜುನ।
ದೇವಾಲಯ ಮೆಸೆಗುಮುತ್ತರಾಭಿಮುಖಂ ಶೋ।
ಭಾವಸದಮಾತ್ರಿಕೂಟವಿ।
ಳಾ ವಿಖ್ಯಾತಂ ತ್ರಿಕೂಟನಗದವೊಲೆಸೆಗುಂ॥ [೧೦*]

ವನಜಭವಂ ಸಮೆದನೊ ವಿಶ್ವಕ।
ರ್ಮ ನಿಮ್ಮಿತಮೋ ಮಯನ ಮಾಟಮೋ ಪೇಳಿಂ।
ಬನೆಗಂ ತ್ರಿಕೂಟಮೊಪ್ಪುಗು।
ಮನಿತರ್ಕಮದೊಂದೆ ಮಂಡಪಂ ಸೊಗಯಿಸುಗುಂ॥ [೧೧*]

ವಿಲಸದುಮಾಮಹೇಶ್ವರ ಮುರಾರಿ ಕುಮಾರಿಗಳಿಂದೆ ಭೈರವಂ।
ಸಲಲಿತ ಚಂಡಿ ಭಾನು ಫಣಿ ಪದ್ಮಭವಂ ಗಣನಾಥನೆಂಬಿವ।
ರ್ನೆಲಸಿರೆ ಮಾತ್ರುಕಾಗಣಯುತಂ ಬಲದಿಂದೆಣಿಸಲ್ಕೆತಂನದೇ।
ಗುಲದೊಳೆನಲ್ತೆ ನೆಗಳ್ತೆ ವಡೆದಂ ಪ್ರಭು ನಾರಣ ದಂಡನಾಯಕಂ॥ [೧೨*]

॥ಕಂದಾ॥

ದೇವಗೋರ್ಪ್ಪುವ ಗದ್ದುಗೆ।
ವಾವಿಯನಗುಳಿಸಿದನಲ್ಲಿಶಶಿವಿಶಯಶಂ!
ಶ್ರೀವಲ್ಲಭನಾನಂದಿತ।
ಭೂವಲಯಂ ದಂಡನಾಥ ನಾರಣದೇವಂ॥ [೧೩*]

ಆ ಮಹಾನುಭಾವನ ವಂಶಾವತಾರಮೆಂತೆಂದಡೆ॥

॥ಕಂದಾ॥

ಕಮಲಭವ ವಂಶಜರೊಳು।
ತ್ತಮ ಕೌಶಿಕಗೋತ್ರಜಾತರೊಳೂ ಕಂಮೆಗಳೊಳ್।
ವಿಮಳಮತಿ ನ್ರುಪಚಮೂಪೋ।
ತ್ತಮ ನೆಸದಂ ನಾರಣ್ಣೈಯ್ಯದಂಡಾಧೀಶಂ॥ [೧೪*]

ಆ ನಾರಣದೇವಾಗ್ರಜ।
ನಾನಂದಿತ ಭುವನನೆನಿಪ ಚಿದ್ದರಸಂ ವಿ।
ಜ್ಞಾನ್ನಾನಿಧಿ ವಾಸುದೇವ ಚ।
ಮೂನಾಥಂ ತಾರಹರಶಶಿವಿಶದಯಶಂ॥ [೧೫*]

॥ವೃತ್ತ॥
ಕರಿಘಟಕೂಡೆನೂಂಕಿದಮವಾಜಿದಳಂ ನಡೆ ತಂದ ವೊಡ್ಡಣಂ।
ತರತರದಿಂದ ವೊಡ್ಡಿ ನಡೆಗೊಟ್ಟವೊಲೆತ್ತಿಬರುತ್ತವಿರ್ದವಾ।
ಸುರವೆನೆ ಬಪ್ಪ ಚಲ್ಲಣೆಗೆ ಚಿಲ್ಲಣೆಗೊಡ್ಡಿಪನಾವನೆಂಬ ಸಂ।

ಗರದೊಳದಿರ್ಚಿ ಗೆಲಿದ ಸುಭಟಾಗ್ರಣಿ ಚಿದ್ದಣ ದಂಡನಾಯಕಂ॥ [೧೬*]

ಅಧಟಂ ಮಾರಾಂಪಗಾಂಪಂ ಬಸುಟು ಸಾಕಾವಿರಿಂ ಪೆಟ್ಟುವೊಯ್ದಕ್ಕಟಸಾ।
ಯದಿರಿಂ ವೀರಾರಿ ಸಾಮಂತರಿರ ಕದನದೊಳು ಚಿದ್ದಿ ದಂಡಾಧಿನಾಥಂ॥
ಗಿದಿರಾಗಲು ಮಾರಿಯೊಳು ಮಾರ್ಮಲೆಯಲುರದಿದಿರ್ಚಿಲು ಮದೇಭೇಂದ್ರ
ದೊಳುಬ।
ರ್ಮದೆ ಕಾದಲು ಕಾಯ್ದ ಕಾಲಾಂತಕನೊಳೆಲೆಲೆ ಚಾಮುಂಡಿಯೊಳೆ
ಚಲ್ಲವಾಡಲ್॥ [೧೭*]

ಭೂಪಲಯಕ್ಕೆ ವಾಸಿಯ ಭುಜಾಸಿಯೆನಗ್ಗಿದರೆಂನರೆನರೆಂ।
ದಾಪಾತಗಳ್ದು ಬಲದೊಡೆ ಪಲವಪ್ಪರಿ ವಧೂಕದಂಬದೇ।
ಶಾವಳಿಯಿಂದ ಪೊಂದದ ಕೊರಳ್ ಮಣಿನೂಪುರವಿಲ್ಲದಂಘ್ರಿಕಾಂ!
ಚೀಮಿಗತಂ ನಿತಂಬವವತಂಸಹರಿಭ್ರತ ಕರ್ನಮಂಡಲಂ॥ [೧೮*]

ಪರೆದ ಕರುಳು ಸಿಡಿಲ್ದ ತಲೆ ಜೋಲ್ದ ಕಳೇವರವಾಡುವಟ್ಟ ಕಾ।
ಳ್ಪುರವೆನೆ ಒಪ್ಪನೀ ತೆರಕಡಲು ನಲಿದಾಡುವ ಭೂತಕೋಟಿ ಝೇಂ।
ಕರಿಸುವ ಯೋಗಿನೀ ವಿತತಿ ಕಿತ್ತುವ ಸೂಯ್ಪೊರೆವರಮುಣ್ಣಳ್।
ಚ್ಚರಿಯೆನೆರತಾದ್ರವಾಯ್ತರಿದುಗೆಲ್ದ ರಣಕಲಿ ವಾಸುದೇವನಂ॥ [೧೯*]
॥ಕಂದಾ॥

ಗುಣಗಣನಿಧಿಯೆನಿಸಿದ ನಾ।
ರಣದಂಡಾಧೀಶನರಸಿಪರಿಜನರಕ್ಷಾ।
ಮಣಿ ವಿವಿಧ ವಿಬುಧ ಚಿಂತಾ।
ಮಣಿ ಜಕ್ಕಲದೇವಿ ಕಮಲಮುಖಿ ಸೊಗಯಿಸಿದಳ್॥ [೨೦*]

ಆವಗೆ ಸಮುದ್ಭವಿಸಿದನು।
ತ್ಸವದಿಂ ವಿಭು ಮಲ್ಲಿದೇವದಂಡೀಶ್ವರನಾ।
ಭುವನನುತಂಗೆ ಮಹಾದೇ।
ವಿ ವಧೂತ್ತಮೆ ನೆಗಳ್ದ ಪುಣ್ಯವತಿ ಸತಿಯಾದಳೂ॥ [೨೧*]

ಆವಗೆ ತನೂಭವನಾದಂ।
ಭುವನಸ್ತುತಕೀರ್ತಿಪುಣ್ಯಾಮೂರ್ತಿಜಯಶ್ರೀ।
ಧವನಖಿಳಗೋತ್ರ ಬುಧ ಬಾಂ
ಧವ ಪರಿಜನಕಾಮಧೇನು ನಾರಣದೇವಂ॥ [೨೨*]

ಹರಿಗೆ ಸಿರಿ ಕಮಲಯೋನಿಗೆ।
ಸರಸ್ವತಿ ಪಶುಪತಿಗೆ ಗೌರಿಸತಿಯಪ್ಪವೊಲಾ।
ಪುರುಷರಿಗೆ ಚಾರುಬಿಂಬಾ
ಧರೆ ನಾಗಲದೇವಿ ಚಿತ್ತವಲ್ಲಭೆಯಾದಳ್॥ [೨೩*]

ವರಗುಣ ನಿಧಿ ನಾರಣದೇ।
ವರಸಂಗೆ ತನೂಜರಾದರಮಳಯಶರ್ಮಾ।
ಲ್ಲರಸಂ ತ್ರಿಪುರಾಂತಕರೆಬರಿ।
ಬ್ಬರು ಮನುಮುನೀಂದ್ರಚಾರುಚರಿತ್ರರೊಗೆದರ್॥ [೨೪*]

ನಾರಾಣದೇವನ ತಂಮನು।
ದಾರಗುಣಂ ವಾಸುದೇವದಂಡಾಧಿಪನಾ।
ಚಾರದೊಳ್ಗಗ್ಗಳಮನುಗಂ।
ವೀರದೊಳಾಶೂದ್ರಿಕಂಗವಣೆಯವೆನೆಗರ್ದಂ॥ [೨೫*]

॥ವೃತ್ತ॥

ಜನಕಂ ಶ್ರೀ ಮಲ್ಲಿದೇವಂ ನಿಜಜ[ನ*]ನಿ ಮಹಾದೇವಿ ಮುತ್ತೈಯ್ಯಮರ್ವೀ।
ಶನ ದಂಡಾಧೀಶ್ವರಂ ವಿಶ್ರುತ ವಿಶದಯಶೋರಾಸಿ ನಾರಾಯಣ ತಂ।
ಮನುದಾತ್ತಂ ವಾಸುದೇವಂ ಶಶಿಧರನಧಿ ದೈವ್ವಂ ಜಗಂನಾಥನೆಂದಂ।
ದುನರರ್ದಂಡಾಧಿಪಂ ನಾರಣನೊಳೆಣೆಯೆ ಭೂಭಾಗದೊಳೆನೋರ್ಪಡೆಂತುಂ॥
[೨೬*]

ಗುಣದೊಳ್ಸಂತಾನದೊಳು ದಾನದಳ ಖಿಳಕಳಾಪ್ರೌಢಿಯೊಳ ರೂಢಿಯೊಳು ಲ।
ಕ್ಷಣದೊಳು ಚಾತುರ್ಯ್ಯದೊಳು ಧೈರ್ಯ್ಯದೊಳು ಪಶಮದೊಳು ಸತ್ಯದೊಳು
ವಿಪ್ರಸಂತ।
ರ್ಪಣದೊಳ್ವಿಕ್ರಾಂತದೊಳು ತಂನೊರೆಗೆ ಪಪ್ಪಂನರಾರ್ಪೇಳೆನಲ್ಕಾ।
ರಣದಂಡಾಧೀಶನಿರ್ದಂ ನಿಜಕುಳ ವಿಪುಳಾಂಬೋಧಿ ಸಂಪೂರ್ಣಚಂದ್ರಾಂ॥
[೨೭*]

॥ಕಂದ॥

ವಿತ್ತಪರಿತ್ತಪರೆನಲಾ।
ನೆತ್ತರಿವಂ ದಂಡನಾಥ ನಾರಾಯಣನಂ।
ರಿತ್ತಪರೆ ಬುಧರ ಪೊರೆಯಂ।
ಪೊತ್ತಪರೆ ಧರಿತ್ರಿಯೊಳು ಝುಸಂಬೆತ್ತಪರೇ॥ [೨೮*]

॥ವೃತ್ತ॥

ಪದನರಿದಾಸಿದಪ್ಪಿಸದೆ ಬೇಳ್ಪರ ಬೇಳ್ಪುದನಿತ್ತು ಸದ್ಗುಣಾ।
ಸ್ಪದನೆನಿಸಲ್ಕೆ ನಿಂನ ವೆಸರಂಗಳ ನಾರನಾದಂಡನಾಥನೆಂ।
ಬುದೆ ಶುಚಿಯಂಬುದು ಖಚರ ನಾಯಕನೆಂಬುದೆ ಚಾರು[ದ]ತ್ತನೆಂ।
ಬುದೆ ಬಲಿಯಂಬುದೆ ರವಿತನೂಭನೆಂಬುಂದೆ[ಗು]ತ್ತನೆಂಬುದೆ॥ [೨೯*]

ಪೊಗಳುತ್ತಿರ್ದಪರ್ಪೆ ನಾರಣನಿರೆ ಪರರಂ ದಂಡನಾಥರ್ಕಳಂವಾ।
ಪಿಗಳಂ ವಾರಾಸಿಯಿರ್ದರಿತರತರುಗಳಂ ಕಲ್ಪಭೂಜಾತ ವಿರ್ದಂ।
ತಗಮಾತ್ರಾಭ್ರಾತಮಂ ಮಂದರ ಮಹಿತತವಿರ್ದಂತಿ ಭಾಖ್ಯಿಕ್ಕಿನೋಂತಂ।
ನ್ನಗಜಾನೀಕಗಳಂ ವಾಸವವದಗಜ ಮಿರ್ದಂತೆ ಮೂಢತ್ವದಿಂದಂ॥ [೩೦*]

ಯಿಂತೆನಿಸಿ ನೆಗರ್ದ ನಾರಾಣದೇವಂ॥ ಸ್ವಸ್ತಿ ಶ್ರಿಮಚ್ಚಾಳೊಕ್ಯ ಪ್ರತಾಪ ಚಕ್ರವರ್ತಿ
ಜಗದೇಕಮಲ್ಲ ವರ್ಷದ ೫ನೆಯ ದುಂದುಭಿ ಸಂ॥ ರದ ಪುಷ್ಯ ಶುಶಿ
ಸುಕ್ರವಾರದಂದುತ್ತರಾಯಣ ಸಂಕ್ರಮಣದೊಳೆ ತಂಮ ಮುಂನ ಮಾಡಿಸಿದ
ಮೂಲಸ್ತಾನ ದೇವಕ್ಕಲದೊಳಂ ಮಾಡಿಸಿದ ಶ್ರೀ ಮಲ್ಲಿಕಾರ್ಜುನ ದೇವರ್ಗಂ
ಮಾಧವದೇವರ್ಗೆ ಅಂಗಭೋಗಕ್ಕಂ ನೈವೇದ್ಯಕ್ಕಂ ಚೈತ್ರ ಪವಿತ್ರಕ್ಕಮೆಂದು
ಮಹಾಪ್ರಧಾನಂ ಮನೆವೆಗ್ಗಡೆ ಬಂಮಣೈಯ್ಯ ದಂಡನಾಯಕನುಮತದೊಳಂ
ಮಂನೆಯ ಕಾಚರಸನ ಪೇಳ್ಕೆಯೊಳಂ ಸರಸ್ವತಿಪುರದ ತಳಾರಂ ಸಾಂತೇಯ
ನಾಯಕನ ಸಂಮತದೊಳಂ ತಂಮ ಭಾಗದ ಪ್ರಭುಗಳ್ ಚಾಚರಸನ
ಮಲ್ಲಿದೇವರಸನೊಡಂಬಡಿಲ್ಲಿಳಂ ಮೇಲಾಳ್ಳಿ ಮಂನೆಯಕ್ಕಾಚಂದ್ರಾರ್ಕತಾರ
ವರುವಣಂ ಸೇಸಿಯಬುದಿಲ್ಲದಂತಾಗಿ ಸರ್ವನಮಸ್ಯಂ ಮಾಡಿ ಮೂಲಸ್ತಾನ

ದೇವರದಲ್ಲೆ ಬಿಟ್ಟು ಕಾಲಡಿಯ ಮತ್ತರು ೧೦ ಆ ಕೇಯ ಹತ್ತಿ[ರ] ದಾರಿಯಂ
ಬಡಗಲ ಮತ್ತರು ೨ ಆ ಕೇಯಾಗ್ನೆಯದ ಗೊಂದಿನಲಂಕೋಲೆಯ ಮಿಳೆಯ
ಹೊರೆಯಲು ದೇವರ್ಗೆ ತೋಟಂ ಕಾಲಡಿಯ ಮತ್ತರು ಅರ್ಧ/ಪೂರ್ವದ
ದೇವಭೂಮಿಯಂ ಹತ್ತಿರ ಬಡಗಲು ಕಾಲಡಿಯ ಮತ್ತರು ೩ ತಂಮನುಥ್ಯಾಯದ
ಗರ್ದೇಯ ನಡುವೆ ಬಟ್ಟಗರ್ದೆ ಕಂಮ ಐವತ್ತು। ಅಂತು ದೇವರ್ಗೆ ಕೇಯಿ
ಕಾಲಡಿಯ ಮತ್ತರು ೧೫ ಪೂವಿನ ತೋಂಪರೆಮತ್ತರು। ಗರ್ದೆ ಹತ್ತಡಿ ಪ್ರಭುತ್ವದ
ಗರ್ದೆಯನಾರೊರ್ವಂ ಮಾಡುವರದರ್ಕೆ ದೇವರ ಗರ್ದೆಯಪ್ಪುದಾಗಿ ಮಾಡಿ
ಭಾಗವೆಂನದೆ ಬೆಳದ ಫಲವೆನಿತನಿತುವನೊಪ್ಪಿಸುವರು। ದೇಗುಲದಿಂ ತೆಂಕಣ
ದೆಶೆಯಲುಯಿಪ್ಪತ್ತು ಕೈಯ್ಯ ನಿವೇಶನಮಂ ಬಟ್ಟರೂ। ಮತ್ತಮೂರಲ್ಲು ಮುಂ
ತಂಮನಥ್ಯಾಯದಾ ವಟಮುಮಂ ಗಾಣವಾ ಯಲೆಯುಮಂ ಮುದ್ರಾಪಣ

ಮುಮಂ ಬಿಟ್ಟರೂ॥ ಯೀ ಧರ್ಮಕ್ಕಾವನೊರ್ವಂ ಸ್ಥಾನಪತಿಯೆಂಬುದಿಲ್ಲ ದೇ
ವಕಾಯ್ಯಮನಾರೊರ್ವರುಯಲ್ಲ ಸಾಗಿ ಮಾಡುವವರನೇ ನಡಿಯಿಸುವರು।
ಹೊಲ್ಲಾಗಿ ನಡದವರಂ ಯಜಮಾನರೆ ಕಿತ್ತು ಕಳದು ಮತ್ತೊರ್ವ ಶುಭೆಯಪ್ಪನಂ
ನಿಲಿಸುವರು। ಯಿಲ್ಲಿ ಬ್ರಾಂಹ್ಮಣನಲ್ಲದೆ ಶೂದ್ರಂ ಪೂಜಿಸಲಾಗದು। ಯಿಲ್ಲಿ
ನಡವಂಗೆ ಗುಣಶಾಸನವಲ್ಲದಿಂತ್ತಪ್ಪಂಗವಾನೊಡೆಯನೆನೆಂನನೇಕೆ ಕಳದ
ಪೀಶೆನಲು ಬಾರದು॥ ಯಿಂತೀ ಧರ್ಮವನಾನವ ನಾವ ತೆರದಿಂ ಕಾವಂ ಯಥಾ
ನ್ಯಾಯದಿಂ। ದಂತಾತಂಗೆ ಹಿತಂಗೆ ಗಂಗೆಗಯಕೇದಾರಂಗಳೊಳ್ಪಂದ ಮ। ತ್ತಂ
ತೀರ್ಥಂಗಳೊಳಂದಿನ ಗ್ರಹಣ ತಾರಾಲಂಗಳೊಳ್ ಭಕ್ತಿಯಿಂ। ದಂತಾ ಕೊಟ್ಟ
ಫಲಂ ಮಹಾದ್ವಿಜರ್ಗೆ ಭಾಸ್ವದ್ಗೋ ಸಹಸ್ರಂಗಳಂ॥ [೩೧*]

ಕಂದಾ॥

ಗಂಗಾ ಯಮುನೆಗಳೆರಡರ।
ಸಂಗಮದೊಳಗಣ್ಯಪುಂಣ್ಯವರ ತೀರ್ಥಸ್ಥಾ।
ನಂಗಳೊಳರ್ದ ತಪೋಧನ।
ರಂ ಗೋಬ್ರಾಹ್ಮಣರನಳಿದ ನಿಂತಿದನಳಿದಂ॥ [೩೨*]

ಶ್ಲೋಕ॥

ಸ್ವದತ್ತಂ ಪರದತ್ತಂವಾ। ಯೋ ಹರೇತಿ ವಸುಂದರಾ।
ಷಷ್ಟಿರ್ವರ್ಷ ಸಹಸ್ರಾಣಿ। ವಿಷ್ಟಾಯಾಂ ಜಾಯತೇ ಕ್ರಿಮಿಃ॥ [೩೩*]

ಬಹುರ್ಭಿ ವಸುಧಾ ಭುಕ್ತಾ। ರಾಜಭಿಃ ಸ್ವಗರಾಧಿಭಿಃ।
ಯಸ್ಯಯಸ್ಯ ಯದಾಭೂಮಿ। ತಸ್ಯ ತಸ್ಯ ತದಾಪಲಂ॥ [೩೪*]

ಸಾಮಾಂನೇಯಂ ಧರ್ಮಶೇತುರ್ನ್ರುಪಾಣಾಂ।
ಕಾಲೇ ಕಾಲೇ ಪಾಲನೀಯೋ ಭವದ್ಭಿಃ।
ಸರ್ವಾನೇತಾನ್ ಭಾಗಿನಃ ಪಾರ್ಥಿವೇಂದ್ರಾನ್।
ಭೂಯೋ ಭಯೋ ಯಾಚತೇ ರಾಮಚಂದ್ರಾ। [೩೫*]

ಕಂದಾ॥

ಅವಧಾನ ನಿಧಾನಂ ಮಾ।
ಧವವಿಭು ಸಹಜಕವಿ ಸಾರ್ವಭೌಮಂ ವಾಕ್ತ್ರೀ।
ಧವಂನೀ ಶಾಸನಮಂ ವಿನ।
ಯವಿಲಾಸಂ ಪೇಳ್ದನುಚಿತ ಚತುರೋಕ್ತಿಗಳಿಂ॥ [೩೬*]

ಓಂ ನಮಃ ಶಿವಾಯಾ॥

**ಪದ್ಯಗಳ ಛಂದಸ್ಸು :**

| ಪದ್ಯ ಸಂಖ್ಯೆ | |
|---|---|
| ೧, ೩೩–೩೪ | ಶ್ಲೋಕ |
| ೨ | ಮತ್ತೇಭವಿಕ್ರೀಡಿತ |
| ೩, ೧೮ (ಅಶುದ್ಧ) | ಉತ್ಪಲಮಾಲೆ |
| ೪, ೫–೧೧, ೧೩–೧೫, ೨೦–೨೫, ೨೮, ೩೨, ೩೬ | ಕಂದ |
| ೧೨, ೧೬, ೧೯, ೨೯ | ಚಂಪಕಮಾಲೆ |
| ೧೭ (ಅಶುದ್ಧ), ೨೬–೨೭, ೩೦ | ಮಹಾಸ್ರಗ್ಧರೆ |
| ೩೫ | ಶಾಲಿನಿ |
| ೩೧ ? | |

❑❑

# ಏಕವಚನವೂ ಸಾಮಾಜಿಕ ಸಂಧಾನಗಳೂ

– ಕೆ.ವಿ. ತಿರುಮಲೇಶ್

ಒಂದು, ಎರಡು, ಅಥವಾ ಹೆಚ್ಚನ್ನು ಸೂಚಿಸುವ ರೂಪಗಳಿಗೆ ವಚನ ಎನ್ನುತ್ತೇವೆ; ಹೆಚ್ಚಿನ ಭಾಷೆಗಳಲ್ಲೂ ಏಕವಚನ ಮತ್ತು ಬಹುವಚನ ಎಂಬ ಭೇದಗಳಿವೆ. ಸಂಸ್ಕೃತ, ಅರೆಬಿಕ್ ಮುಂತಾದ ಭಾಷೆಗಳಲ್ಲಿ ದ್ವಿವಚನ ರೂಪವೂ ಇದೆ (ಎರಡು ವಸ್ತುಗಳನ್ನು, ವ್ಯಕ್ತಿಗಳನ್ನು ಸೂಚಿಸುವಂತಹದು). ವಚನ ರೂಪಗಳು ಸರ್ವನಾಮ ಪದಗಳಲ್ಲಿ, ನಾಮಪದಗಳಲ್ಲಿ, ಕ್ರಿಯಾಪದಗಳಲ್ಲಿ ಬರಬಹುದು. ಕೆಲವು ಭಾಷೆಗಳಲ್ಲಿ ವಿಶೇಷಣ ಪದಗಳಲ್ಲೂ ಬರುತ್ತವೆ. ಕನ್ನಡದಲ್ಲಿರುವುದು ಎರಡೇ ವಚನಗಳು: ಏಕವಚನ ಮತ್ತು ಬಹುವಚನ. ಏಕವಚನ ಬರುವುದು ಏಕ ವ್ಯಕ್ತಿ, ವಸ್ತು ಅಥವಾ ಸಂಗತಿಗಳಿಗೆ; ಬಹುವಚನ ಬರುವುದು ಏಕಕ್ಕಿಂತ ಹೆಚ್ಚಿನ ವ್ಯಕ್ತಿ, ವಸ್ತು ಅಥವಾ ಸಂಗತಿಗಳಿಗೆ; ಇವು ಎರಡಾಗಿರಬಹುದು, ಅಥವಾ ಎರಡಕ್ಕಿಂತ ಹೆಚ್ಚಾಗಿರಬಹುದು. ವಚನದ ಮಟ್ಟಿಗೆ ಒಂದಕ್ಕಿಂತ ಹೆಚ್ಚಿನದೆಲ್ಲವೂ ಬಹುವಚನವೇ. ಕನ್ನಡ ಏಕವಚನ ಸರ್ವನಾಮಗಳು ಇಂತಿವೆ:

ನಾನು

ನೀನು

ಅವನುಇವನು

ಅವಳು ಇವಳು

ಅದು ಇದು

'ನಾನು' ಪ್ರಥಮ ಪುರುಷ ಏಕವಚನ; 'ನೀನು' ದ್ವಿತೀಯ ಪುರುಷ ಏಕವಚನ. ಪ್ರಥಮ ಮತ್ತು ದ್ವಿತೀಯ ಪುರುಷಗಳಲ್ಲಿ ಲಿಂಗಭೇದವಿಲ್ಲ. 'ಅವನು', 'ಇವನು' ತೃತೀಯ ಪುರುಷ ಏಕವಚನ, ಪುಲ್ಲಿಂಗ; 'ಅವಳು', 'ಇವಳು' ತೃತೀಯ ಪುರುಷ ಏಕವಚನ, ಸ್ತ್ರೀಲಿಂಗ. 'ಅದು', 'ಇದು' ತೃತೀಯ ಪುರುಷ ಏಕವಚನ ನಪುಂಸಕ ಲಿಂಗ. ಅವನು–ಇವನು, ಅವಳು–ಇವಳು, ಅದು–ಇದು ನಡುವಣ ವ್ಯತ್ಯಾಸವೆಂದರೆ, ಅಕಾರದಲ್ಲಿ ಈ ಸರ್ವನಾಮಗಳು ಅಸಾಮೀಪ್ಯವನ್ನು ಸೂಚಿಸಿದರೆ, ಇಕಾರದಲ್ಲಿ ಅವು ಸಾಮೀಪ್ಯವನ್ನು ಸೂಚಿಸುತ್ತವೆ. ಇಲ್ಲಿ ಸಾಮೀಪ್ಯ/ ಅಸಾಮೀಪ್ಯ ಮಾತಾಡುವ ವ್ಯಕ್ತಿಗೆ ಸಂಬಂಧಿಸಿ ಅರ್ಥ ಪಡೆಯುವಂಥವು. ಆ, ಈ ಎಂಬ ನಿರ್ದೇಶಕ ಸರ್ವನಾಮಗಳಲ್ಲಿಯೂ ನಾವಿದನ್ನು ಕಾಣುತ್ತೇವೆ.

ಅವನು, ಇವನು, ಅವಳು ಮತ್ತು ಇವಳು ಸರ್ವನಾಮಗಳಿಗೆ ಪರ್ಯಾಯವಾಗಿ ಆತ(ನು), ಈತ(ನು), ಆಕೆ ಮತ್ತು ಈಕೆ ಎಂಬ ಪದಗಳೂ ಇವೆ. ಆತ, ಈತ ಮೊದಲಾದುವು ಆಡುಮಾತಿನ ಪದಗಳು ಎಂದು ಲೆಕ್ಕ; ಆದರೆ ಬರಹದಲ್ಲಿ ವರ್ಜ್ಯವೇನೂ ಅಲ್ಲ. ಈ ಪ್ರತಿಯೊಂದು ಏಕವಚನ ಸರ್ವನಾಮಪದಗಳಿಗೂ ಬಹುವಚನ ರೂಪಗಳಿವೆ:

ನಾನು ನಾವು

ನೀನು ನೀವು

ಅವನು ಅವರು

ಇವನು ಇವರು

ಅವಳು ಅವರು

ಇವಳು ಇವರು

ಅದು ಅವು

ಇದು ಇವು

ನಾನು, ನೀನು ಪದಗಳಿಗೆ ಹೇಗೆ ಪುಲ್ಲಿಂಗ ಸ್ತ್ರೀಲಿಂಗ ಭೇದವಿಲ್ಲವೋ ಅದೇ ರೀತಿ ಮನುಷ್ಯ ವಾಚಕ ಇತರ ಪದಗಳಲ್ಲಿ ಬಹುವಚನಕ್ಕೆ ಲಿಂಗಭೇದವಿಲ್ಲ: ಅವರು, ಇವರು ಎಂದರೆ ಗಂಡುಗಳೂ ಆಗಬಹುದು, ಹೆಣ್ಣುಗಳೂ ಆಗಬಹುದು, ಇವೆರಡೂ ಸೇರಿದ ಜನಕೂಟವೂ ಆಗಬಹುದು. ಅದರೆ ನಪುಂಸಕ ಲಿಂಗ ಏಕವಚನವೂ ಬಹುವಚನವೂ ಸ್ತ್ರೀ ಪುರುಷ ಭೇದವಿಲ್ಲದೆ ವರ್ತಿಸುತ್ತದೆ. ಮನುಷ್ಯರ ಹೊರತಾದ ಎಲ್ಲದಕ್ಕೂ – ಪ್ರಾಣಿ, ಮರಗಿಡ, ಅಮೂರ್ತ ವಿಚಾರ ಘಟಕಗಳು ಮುಂತಾದುವಕ್ಕೆ – ನಪುಂಸಕ ಲಿಂಗ ಬರುತ್ತದೆ. ಆದರೆ ಸೂರ್ಯ, ಚಂದ್ರ, ದೇವರು, ದೇವತೆಗಳು ಮುಂತಾದವಕ್ಕೆ ಪುಲ್ಲಿಂಗ ಸ್ತ್ರೀಲಿಂಗಗಳನ್ನು ಹಚ್ಚುವುದು ವಾಡಿಕೆ; ಯಾಕೆಂದರೆ ಇವು ಮಾನುಷೀಕರಣಗೊಂಡಿವೆಯೆಂದು ಲೆಕ್ಕ. ಸೂರ್ಯ ಚಂದ್ರರನ್ನು 'ಸೂರ್ಯ ಮೂಡಿದ್ದ', 'ಚಂದ್ರ ಮರೆಯಾಗಿದ್ದ' ಎಂದು ಪುಲ್ಲಿಂಗದಲ್ಲಿ ಹೇಳುವುದು ರೂಢಿ. ಅಪರೂಪಕ್ಕೆ 'ಸೂರ್ಯ ಮೂಡಿತ್ತು', 'ಚಂದ್ರ

# ೫೦೧, ಸಿದ್ಧಾರ್ಥ, ಏಷಿಯಾನಾ, ೧೨–೧೨–೯, ರವೀಂದ್ರನಗರ, ಸೀತಾಫಲ ಮಂಡಿ, ಹೈದರಾಬಾದ್ ೫೦೦೦೬೧, ಆಂಧ್ರಪ್ರದೇಶ

ಮರೆಯಾಗಿತ್ತು' ಎಂಬ ನಪುಂಸಕಲಿಂಗ ಪ್ರಯೋಗಗಳು ಇಲ್ಲದೆ ಇಲ್ಲ. 'ಗುರು', 'ಮಂಗಳ', 'ಬುಧ' ಮುಂತಾದ ಇತರ ಗ್ರಹಗಳನ್ನು ಪುಲ್ಲಿಂಗ ಏಕವಚನದಲ್ಲಿ ಅಥವಾ ನಪುಂಸಕ ಏಕವಚನದಲ್ಲಿ ಕರೆಯುವುದಿದೆ. ಈ ಗ್ರಹಗಳನ್ನು ಮಾನುಷೀಕರಿಸಿದಾಗ ಅವಕ್ಕೆ ಪುಲ್ಲಿಂಗ ಹಚ್ಚುತ್ತೇವೆ. ಇನ್ನು ದೇವತೆಗಳು ಮಾನುಷೀಕರಣಕ್ಕೆ ಒಳಗಾಗಿರುವ ಕಾರಣ, ಪುರುಷ ದೇವರುಗಳಿಗೆ ಪುಲ್ಲಿಂಗವನ್ನೂ, ಸ್ತ್ರೀ ದೇವತೆಗಳಿಗೆ ಸ್ತ್ರೀಲಿಂಗವನ್ನೂ ಹಚ್ಚುತ್ತೇವೆ.

'ದೇವರು' ಎಂಬ ಪದ ವಿಲಕ್ಷಣವಾದುದು: ಇದರಲ್ಲಿರುವ 'ರು'ಕಾರ ಪ್ರತ್ಯಯವನ್ನು ನೋಡಿದರೆ ಇದು ಬಹುವಚನ ಎಂದುಕೊಳ್ಳಬೇಕು; ಆದರೆ ರೂಢಿಯಲ್ಲಿ ಇದು ಏಕವಚನ: 'ದೇವರು ಒಳ್ಳೆಯದನ್ನು ಮಾಡುತ್ತಾನೆ' ಎನ್ನುತ್ತೇವೆ. 'ದೇವರು ಒಳ್ಳೆಯದನ್ನು ಮಾಡುತ್ತಾರೆ' ಎನ್ನುವುದು ಕಡಿಮೆ.

ಏಕವ್ಯಕ್ತಿಗೆ ಅಥವಾ ಏಕಘಟಕಕ್ಕೆ ಏಕವಚನ ಹತ್ತುತ್ತದೆ ಎನ್ನುವುದು ತೀರಾ ಸರಳ ಸೂತ್ರವಾಯಿತು. ಆದರೆ ಏಕವಚನ ಮತ್ತು ಬಹುವಚನ ಉಪಯೋಗ ಮಾತಾಡುವ ವ್ಯಕ್ತಿ (ಮಾತುಗ) ಉದ್ದೇಶಿತ ವ್ಯಕ್ತಿಯ ಬಗೆಗೆ ತಾನು ತಳೆದಿರುವ ಸಂಬಂಧವನ್ನು ಮತ್ತು ಧೋರಣೆಯನ್ನು ಸಹಾ ಸೂಚಿಸುತ್ತದೆ, ಅರ್ಥಾತ್ ಉದ್ದೇಶಿತ ವ್ಯಕ್ತಿಯ ಕುರಿತಾಗಿ ತಾನು ಹೊಂದಿರುವ ಸಂಬಂಧ ಗೌರವದ್ದೋ, ಅಗೌರವದ್ದೋ, ಸಮಾನತೆಯದ್ದೋ, ಮೇಲು-ಕೀಳಿನದ್ದೋ ಎಂದು ಮುಂತಾಗಿ. ಇದು ಭಾಷೆ ಸಮಾಜವನ್ನು ಪ್ರತಿಬಿಂಬಿಸುವ ಒಂದು ವಿಧಾನ ಕೂಡ ಹೌದು. ಹಿಂದಿ, ಜರ್ಮನ್, ಫ್ರೆಂಚ್ ಮೊದಲಾದ ಭಾಷೆಗಳಲ್ಲಿ ಮೂರು ಬಗೆಯ ದ್ವಿತೀಯ ಪುರುಷ ಸರ್ವನಾಮಗಳಿವೆ; ಉದಾಹರಣೆಗೆ, ಹಿಂದಿಯಲ್ಲಿ:

ಆಪ್: ಉನ್ನತ ಸಂಬಂಧವನ್ನು ತೋರಿಸುವುದು

ತುಮ್: ಸಮಾನ ಸಂಬಂಧವನ್ನು ತೋರಿಸುವುದು

ತೂ: ನಿಮ್ನ ಸಂಬಂಧವನ್ನು ತೋರಿಸುವುದು

ಕನ್ನಡದಲ್ಲಾದರೆ, ಸಾಮಾನ್ಯವಾಗಿ ಎರಡು ಬಗೆಯ ದ್ವಿತೀಯ ಪುರುಷ ಸರ್ವನಾಮಗಳು ಮಾತ್ರವೇ ಇವೆ: ಉನ್ನತ (ನೀವು) ಮತ್ತು ಸಮಾನ / ನಿಮ್ನ (ನೀನು). ಅತ್ಯುನ್ನತ ಸಂಬಂಧವನ್ನು ಸೂಚಿಸುವ 'ತಾವು' ಕೂಡ ಇದೆ. ಇವೆಲ್ಲವೂ ಮಾತುಗ ಉದ್ದೇಶಿತ ವ್ಯಕ್ತಿಯ ಕುರಿತಾಗಿ ಹೊಂದಿದ ಸಂಬಂಧವನ್ನು ಸೂಚಿಸುತ್ತವೆ. ಇವುಗಳನ್ನು ನಾವು 'ಸಂಧಾನ'ವೆಂದು ಕರೆಯೋಣ.

**ಬಹುಮಾನಸೂಚಕ ಬಹುವಚನ:** ವ್ಯಕ್ತಿ ಒಬ್ಬನಾಗಿದ್ದಾಗಲೂ ನಾವು ಉದ್ದೇಶಿತ ವ್ಯಕ್ತಿಯನ್ನು ಗೌರವದಿಂದ ಕಾಣುತ್ತೇವೆ ಎನ್ನುವುದನ್ನು ಸೂಚಿಸುವುದಕ್ಕೆ ಬಹುವಚನವನ್ನು ಬಳಸುತ್ತೇವೆ (ಉನ್ನತಸಂಧಾನ); ಇಲ್ಲಿ ನಾವು ತೋರಿಸುವ ಗೌರವ ಪ್ರಾಮಾಣಿಕವಾದ್ದೋ ಸಾಮಾಜಿಕವಾದ್ದೋ (ಔಪಚಾರಿಕವಾದ್ದೋ)ಎನ್ನುವುದು ಮುಖ್ಯವಲ್ಲ.

೧. ರಾಮರಾಯರು ನಾಳೆ ಬರುತ್ತಾರೆ.

ಎಂಬ ವಾಕ್ಯವನ್ನು ಗಮನಿಸಿ: ಈ ವಾಕ್ಯದಲ್ಲಿ ರಾಮರಾಯ ಒಬ್ಬನೇ ವ್ಯಕ್ತಿ; ಆ ಹೆಸರಿಗೆ 'ರು' ಸೇರಿಸಿರುವುದು ಬಹುಮಾನಸೂಚಕ; ಅದು 'ಬರುತ್ತಾರೆ' ಎಂಬಲ್ಲಿನ 'ರೆ' ಪ್ರತ್ಯಯದಲ್ಲೂ ವ್ಯಾಕರಣ ರೀತ್ಯ ಪ್ರತಿಬಿಂಬಿಸಿದೆ. ಆದ್ದರಿಂದ ಮಾತುಗ ಉದ್ದೇಶಿತ ವ್ಯಕ್ತಿಯ ಕುರಿತಾಗಿ ಉನ್ನತ ಸಂಧಾನ ಯೋಜಿಸಿದ್ದಾನೆ ಎಂದಾಗುತ್ತದೆ. ಈಗ ಈ ವಾಕ್ಯವನ್ನು ನೋಡಿ:

೨. ಪ್ರಧಾನ ಮಂತ್ರಿಯವರು ಸೇತುವೆ ಉದ್ಘಾಟಿಸುತ್ತಾರೆ.

ಇಲ್ಲಿ ಉದ್ದೇಶಿಸಿರುವ ಪ್ರಧಾನಮಂತ್ರಿ ಒಬ್ಬನೇ ವ್ಯಕ್ತಿ; ಆ ಹುದ್ದೆ ಗೌರವಾರ್ಹವಾದ ಕಾರಣ 'ಅವರು' ಎಂಬ ಪ್ರತ್ಯಯವನ್ನು ನಾಮಪದಕ್ಕೆ ಸೇರಿಸಿದ್ದೇವೆ; ಈ ಬಹುಮಾನಸೂಚಕ ಬಹುವಚನವು ಕ್ರಿಯಾಪದದ 'ರೆ'ಯಲ್ಲಿ ಪ್ರತಿಬಿಂಬಿಸಿದೆ. ಇದೂ ಕೂಡ ಮೊದಲಿನ ವಾಕ್ಯದಲ್ಲಿ ಇರುವಂತೆಯೇ ಉನ್ನತ ಸಂಧಾನ.

ಒಂದು ವೇಳೆ ಈ ಎರಡೂ ವಾಕ್ಯಗಳಲ್ಲಿ ಏಕವಚನ ಬಳಸಿದರೆ ನಮಗೆ ಸಿಗುವ ಆವರ್ತಗಳು ಹೇಗಿರುತ್ತವೆ ಮತ್ತು ಅಂಥಾ ಬಳಕೆಯ ಅರ್ಥ ಏನಿರುತ್ತದೆ?

೩. ರಾಮರಾಯ ನಾಳೆ ಬರುತ್ತಾನೆ.

೪. ಪ್ರಧಾನ ಮಂತ್ರಿ ಸೇತುವೆ ಉದ್ಘಾಟಿಸುತ್ತಾನೆ.

೩ನೇ ವಾಕ್ಯವನ್ನು ಬಳಸುವುದು ಯಾವ ಸಂದರ್ಭದಲ್ಲಿ? ರಾಮರಾಯ ಎಂಬ ಉದ್ದೇಶಿತ ವ್ಯಕ್ತಿ ಮಾತುಗನಿಗೆ ಸಮನಾಗಿದ್ದು ಸಲಿಗೆ ತೋರುವುದು ಸಾಧ್ಯವಾದಾಗ (ಸಮ ಸಂಧಾನ); ಅಥವಾ ಮಾತುಗನಿಗಿಂತ ವಯಸ್ಸಿನಲ್ಲಿ, ಶ್ರೇಣಿಯಲ್ಲಿ ಕೆಳಗಿನವನಾಗಿದ್ದಾಗ (ನಿಮ್ನ ಸಂಧಾನ). ಇವಲ್ಲದೆ ಇನ್ನೂ ಒಂದು ಸಾಧ್ಯತೆಯಿದೆ: ಮಾತುಗನು ಉದ್ದೇಶಿತ ವ್ಯಕ್ತಿಯನ್ನು ಉನ್ನತ ಸಂಬಂಧದಲ್ಲಿ ಕರೆಯುವುದು ಸಾಮಾಜಿಕವಾಗಿ ಅಪೇಕ್ಷಣೀಯವಾಗಿದ್ದು, ಆತ (ಮಾತುಗ) ಕೇವಲ ಅಗೌರವ ಸೂಚಿಸಲೆಂದು ಏಕವಚನ ಉಪಯೋಗಿಸಿದಾಗ. ಇದನ್ನು ನೈಚ್ಯ ಸಂಧಾನವೆಂದು ಕರೆಯಬಹುದು.ನೈಚ್ಯ ಸಂಧಾನ ನಿಂದನೆಯಾಗುತ್ತದೆ ಎಂದು ಬೇರೆ ಹೇಳಬೇಕಿಲ್ಲ.

೩ನೇ ವಾಕ್ಯದಲ್ಲಿ ಏಕವಚನ ಯಾವ ಸಂಧಾನದಲ್ಲಿದೆ ಎಂದು ತಿಳಿಯಬೇಕಿದ್ದರೆ ನಮಗೆ ಸಂದರ್ಭ (ಮಾತುಗ ಮತ್ತು ಉದ್ದೇಶಿತ ವ್ಯಕ್ತಿಯ ಸಂಬಂಧ) ಗೊತ್ತಿರಬೇಕಾಗುತ್ತದೆ. ಆದರೆ ೪ನೇ ವಾಕ್ಯದಲ್ಲಿ ಇದು ನೈಚ್ಯ ಸಂಧಾನವೆನ್ನುವುದು ಸ್ವಯಂ ವೇದ್ಯ: ಯಾಕೆಂದರೆ ಪ್ರಧಾನ ಮಂತ್ರಿ ಎನ್ನುವುದು ಗೌರವಾನ್ವಿತ ಪದವಿ. ಇದನ್ನು ಎಲ್ಲರೂ ಸಾಮಾಜಿಕವಾಗಿ

ಗೌರವಿಸಬೇಕು. ಆದರೆ ಯಾರೋ ಒಬ್ಬಾತ ಈ ಳನೇ ವಾಕ್ಯ ಬಳಸಿದರೆ ಆತ ಪ್ರಧಾನ ಮಂತ್ರಿಯನ್ನು ದ್ವೇಷಿಸುತ್ತಾನೆ ಎಂದು ಅರ್ಥವಾಗುತ್ತದೆ. ಇಂಥ ಕಡೆ ಮಾತಾಡುವ ವ್ಯಕ್ತಿ ಸಾಮಾಜಿಕ ನೈತಿಕತೆಯನ್ನು ಉಲ್ಲಂಘಿಸಿದ್ದು ಈ ಉಲ್ಲಂಘನೆ ಮಾತುಗನ ಸ್ವಂತ ವ್ಯಕ್ತಿತ್ವದ ಕೀಳುತನಕ್ಕೆ ಕುರುಹೂ ಆಗುತ್ತದೆ. ಮಾತು ಕೇವಲ ಬಾಹ್ಯಕ್ಕೆ ಸೂಚನೆಯಾಗಿರದೆ, ಮಾತುಗನ ವ್ಯಕ್ತಿತ್ವಕ್ಕೂ ಸೂಚಕವಾಗಿರುತ್ತದೆ. ಏಕವಚನ ಮತ್ತು ಬಹುವಚನಸರ್ವನಾಮ ಪದಗಳು ಮತ್ತು ಅವಕ್ಕೆ ಸಂಬಂಧಿಸಿದ ನಾಮಪದ ಹಾಗೂ ಕ್ರಿಯಾಪದ ಪ್ರತ್ಯಯಗಳು ಭಾಷೆಯಲ್ಲಿ ಈ ರೀತಿಸಂಧಾನಸೂಚಿಗಳಾಗಿ, ವ್ಯಕ್ತಿತ್ವದ ಪ್ರಕಟಣೆಗಳಾಗಿ ಬಳಕೆಯಾಗುವುದು ಸ್ವಾರಸ್ಯದ ಸಂಗತಿ.

ಉನ್ನತ, ಸಮ, ನಿಮ್ನ ಮತ್ತು ನೈಚ್ಯ ಸಂಧಾನಗಳಲ್ಲಿ ಮೊದಲನೆಯದರಲ್ಲಿ ಮಾತ್ರವೇ ಬಹುವಚನ ಬಳಕೆಯಾಗುತ್ತದೆ; ಉಳಿದ ಮೂರರಲ್ಲೂ ಏಕವಚನ ಬರುತ್ತದೆ. ಆದ್ದರಿಂದ ಏಕವಚನದ ಮೇಲಣ ಹೊರೆ ತುಸು ಹೆಚ್ಚೆಂದೇ ಹೇಳಬೇಕು. ಇಲ್ಲಿ ನಮೂದಿಸಿದ ನಾಲ್ಕು ಸಂಧಾನಗಳಲ್ಲದೆ ಇನ್ನಿತರ ಸಂಧಾನಗಳೂ ಇವೆ. ಉದಾಹರಣೆಗೆ, ಆತ್ಮೀಯ ಸಂಧಾನ: ಅಮ್ಮ, ಅಪ್ಪ, ಅಜ್ಜ, ಅಜ್ಜಿ, ಅಣ್ಣ, ಅಕ್ಕಮುಂತಾದ ಕೌಟುಂಬಿಕ ಸಂಬಂಧಗಳಲ್ಲಿ ಬಳಕೆಯಾಗುವ ಏಕವಚನ ಈ ರೀತಿಯದು. ಇಲ್ಲಿ ನಮೂದಿಸಿದವರೆಲ್ಲರೂ ಹಿರಿಯರಾದರೂ, ಸಾಧಾರಣವಾಗಿ ಇವರನ್ನು ಏಕವಚನದಲ್ಲಿ ಕರೆಯುವ ರೂಢಿಯೂ ಇದೆ: ಹೆಚ್ಚಾಗಿ ನೇರ ಸಂಬೋಧನೆಯಲ್ಲಿ. ಇದು ಅಗೌರವದಿಂದಲ್ಲ, ಸಮಾನತೆಯಿಂದಲೂ ಅಲ್ಲ, ಆತ್ಮೀಯತೆಯಿಂದ. ಆದರೆ ಇಲ್ಲಿ ವೈಯಕ್ತಿಕ ಹಿನ್ನಲೆಯ ಹಾಗೂ ಮಾತಿನ ಸಂದರ್ಭದ ಆಯ್ಕೆಗಳು ಇಲ್ಲದಿಲ್ಲ; ಎಂದರೆ, ಕೆಲವು ಮಂದಿ ಗೌರವ ಸೂಚಕ ಬಹುವಚನ ಬಳಸಿ ಈ ವ್ಯಕ್ತಿಗಳನ್ನು ಸಂಬೋಧಿಸಬಹುದು.

ಪಂಪ, ಪೊನ್ನ, ರನ್ನ ಮುಂತಾದ ಪುರಾತನ ಕವಿಗಳು ನಮಗಿಂತ ಎಷ್ಟೋ ಶತಮಾನಗಳಷ್ಟು ಹಿರಿಯರು; ನಾವು ಅವರನ್ನು ಅತ್ಯಂತ ಗೌರವದಿಂದ ಕಾಣುವವರು. ಆದರೂ ಅವರನ್ನು ಏಕವಚನದಿಂದ ಕರೆಯುತ್ತೇವೆ! ವಾಸ್ತವದಲ್ಲಿ ಅವರ ಕುರಿತಾಗಿ ಬಹುವಚನ ಉಪಯೋಗಿಸಿದರೆ ಅದು ಆಭಾಸ ಅನಿಸುತ್ತದೆ. ಅವರನ್ನು ಏಕವಚನದಿಂದ ಕರೆಯುವುದೇ ರೂಢಿಯಾಗಿದೆ ಎಂದು ಹೇಳಬಹುದು. ಆದರೆ ಈ ರೂಢಿ ಹೇಗೆ ಬಂತು ಎನ್ನುವುದೇ ಪ್ರಶ್ನೆ. ಬಹುಶಃ ಈ ಆತ್ಮೀಯ ಸಂಧಾನಕ್ಕೆ ನಾವು ಅವರ ಕುರಿತಾಗಿ ಇರಿಸಿಕೊಂಡಿರುವ ಒಲವೇ ಕಾರಣ ಎನಿಸುತ್ತದೆ. ಆದರೆ ಇಲ್ಲಿಯೂ ಎಲ್ಲವೂ ಸರಳವಾಗಿಲ್ಲ. ಉದಾಹರಣೆಗೆ ಮುದ್ದಣ ಮತ್ತು ನಂದಳಿಕೆ ಲಕ್ಷ್ಮೀನಾರಣಪ್ಪ ಒಬ್ಬನೇ ವ್ಯಕ್ತಿಯಾಗಿದ್ದರೂ, ಮುದ್ದಣ ಎನ್ನುವಲ್ಲಿ ಏಕವಚನವನ್ನೂ, ಲಕ್ಷ್ಮೀನಾರಣಪ್ಪ ಎನ್ನುವಲ್ಲಿ ಬಹುಮಾನಸೂಚಕ ಬಹುವಚನವನ್ನೂ ಉಪಯೋಗಿಸುವುದು ಕಂಡುಬರುತ್ತದೆ. ಎಂದರೆ ಕವಿಯನ್ನು ಕಾವ್ಯನಾಮದಿಂದ ಹೆಸರಿಸಿದಾಗ ಆತ್ಮೀಯ ಸಂಧಾನದ ಏಕವಚನ ಉಪಯೋಗಿಸುತ್ತೇವೆ ಎಂದುಕೊಳ್ಳೋಣವೇ? ಆದರೆ ಕುವೆಂಪು ಮತ್ತು ಕೆ.ವಿ. ಪುಟ್ಟಪ್ಪ ಎಂಬ ಎರಡೂ ಹೆಸರು ಬಳಸಿದಾಗಲೂ ನಾವು ಉಪಯೋಗಿಸುವುದು ಬಹುಮಾನ ಸೂಚಕ ಬಹುವಚನವನ್ನೇ. ಕುವೆಂಪು ಕಾವ್ಯನಾಮವಾಗಿದ್ದರೂ ಏಕವಚನಕ್ಕೆ ಒಳಗಾಗುವುದಿಲ್ಲ. ಕುವೆಂಪು ಆಧುನಿಕರು ಎಂದು ಇದಕ್ಕೆ ಸಮಜಾಯಿಷಿ ನೀಡಬಹುದು.

ಹಿಂದಿನವರಲ್ಲೂ ಬಸವಣ್ಣ, ಪುರಂದರ ದಾಸರು, ಕನಕದಾಸರು, ಶಿಶುನಾಳ ಷರೀಫರು ಮುಂತಾದವರ ವಿಷಯಕ್ಕೆ ಬಂದಾಗ ನಾವು ಆತ್ಮೀಯ ಸಂಧಾನದ ಏಕವಚನವನ್ನು ಬಳಸುವುದಿಲ್ಲ; ಗೌರವ ಸೂಚಕವಾದ ಬಹುವಚನವನ್ನೇ ಬಳಸುತ್ತೇವೆ. ಈ ವ್ಯಕ್ತಿಗಳನ್ನು ನಾವು ಆತ್ಮೀಯತೆಯಿಂದ ಕಾಣುವುದಿಲ್ಲ ಎಂದು ಇದರ ಅರ್ಥವಲ್ಲ; ಬಹುಶಃ ಇವರನ್ನು ಗುರು ಸ್ಥಾನದಲ್ಲಿ ಇರಿಸಿದ್ದೇವೆ ಎನ್ನುವುದು ಕಾರಣವಾಗಿರಬಹುದು. ಇನ್ನು ವಾಲ್ಮೀಕಿ, ವ್ಯಾಸ ಮುಂತಾದವರನ್ನು ಏಕವಚನದಿಂದಲೂ ಬಹುವಚನದಿಂದಲೂ ಉಲ್ಲೇಖಿಸುವ ಪದ್ಧತಿಯಿದೆ. (ಬಸವಣ್ಣನ ಕುರಿತಾಗಿಯೂ ಕೆಲವೊಮ್ಮೆ ಏಕವಚನ ಬಳಕೆಯಾಗುವುದಿದೆ.)

ದೇವರುಗಳನ್ನು ಮತ್ತು ಪೌರಾಣಿಕ ಪಾತ್ರಗಳ ಕುರಿತಾಗಿ (ರಾಮ, ಕೃಷ್ಣ, ಶಿವ, ಸೀತೆ, ಯುಧಿಷ್ಠಿರ, ಧೃತರಾಷ್ಟ್ರ, ಕುಂತಿ ಮೊದಲಾಗಿ) ನಾವು ಆತ್ಮೀಯ ಸಂಧಾನದ ಏಕವಚನ ಬಳಸುತ್ತೇವೆ; ಆದರೆ ಇಲ್ಲಿಯೂ ನಾರದ, ವಶಿಷ್ಠ, ಕಣ್ವ ಮುಂತಾದವರಿಗೆ ಗೌರವ ಸೂಚಕ ಬಹುವಚನ ಉಪಯೋಗಿಸುತ್ತೇವೆ (ಉನ್ನತ ಸಂಧಾನ). ಪೌರಾಣಿಕ ಸ್ತ್ರೀಯರ ಕುರಿತು ಆತ್ಮೀಯ ಸಂಧಾನದ ಏಕವಚನವೇ ಬಳಕೆಯಲ್ಲಿರುವುದು. ಅವರಲ್ಲಿ ಯಾರನ್ನೂ ಸಮಾಜ ಗುರು ಸ್ಥಾನದಲ್ಲಿ ಇರಿಸದೆ ಇರುವುದೇ ಇದಕ್ಕೆ ಕಾರಣವಿರಬಹುದು. ವಿದ್ಯಾದೇವತೆಯಾದ ಶಾರದೆ ಕೂಡ ಏಕವಚನದ ಆತ್ಮೀಯ ಸಂಧಾನಕ್ಕೆ ಒಳಗಾಗುತ್ತಾಳೆ! ಎಲ್ಲಾ ಸ್ತ್ರೀ ದೇವತೆಗಳೂ 'ಅಮ್ಮ' (ಅಥವಾ ಮಾತೆ, ತಾಯಿ) ಎಂದು ಕರೆಸಿಕೊಳ್ಳಲ್ಪಡುತ್ತಾರೆ ಎನ್ನುವುದನ್ನು ಗಮನಿಸಬೇಕು.

ಕೆಲವು ಭಾಷಿಕರು ಸ್ವ ಮತ್ತು ಅನ್ಯ ಎಂಬ ಭೇದ ಗುರುತಿಸುವುದಿದೆ; ಇಂಥ ಭಾಷಿಕರಲ್ಲಿ ಬಹುಶಃ ಕನ್ನಡಿಗರೂ ಸೇರಿದ್ದಾರೆ. ಎಂದರೆ ಪರ ದೇಶ ಅಥವಾ ಸಂಸ್ಕೃತಿಯ ಜನರನ್ನು ಅನ್ಯ ಸಂಧಾನದಲ್ಲಿ ಉಲ್ಲೇಖಿಸುವುದು. ಉದಾಹರಣೆಗೆ, ಜಾನ್ ಸ್ಮಿತ್ ಎಂಬ ಇಂಗ್ಲಿಷ್ ವ್ಯಕ್ತಿಯ ಬಗ್ಗೆ ಪ್ರಸ್ತಾಪಿಸುವಾಗ ನಾವು ಬಹುವಚನ ಬಳಸುವುದು ಅಪರೂಪ; ಏಕವಚನ ಬಳಸುವುದೇ ಜಾಸ್ತಿ. ಇದು ಅಗೌರವದಿಂದ ಅಲ್ಲ; ಆತ ವಿದೇಶೀ ಎಂಬ ಕಾರಣಕ್ಕೆ ಮಾತ್ರ. 'ನಾನು

ಇಂಗ್ಲೆಂಡಿನಲ್ಲಿ ಇದ್ದಾಗ ಜಾನ್ ಸ್ಮಿತ್ ಎಂಬ ಪ್ರೊಫೆಸರ್ ಒಬ್ಬನನ್ನು ಭೇಟಿಯಾದೆ' ಎನ್ನುತ್ತೇವೆ. ಇನ್ನು ಪ್ರಸಿಡೆಂಟ್ ಒಬಾಮ ಕೂಡ ಇಂಥ ಏಕವಚನಕ್ಕೆ ಪಾತ್ರನಾಗುತ್ತಾನೆ. ಇದನ್ನು ಅನ್ಯ ಸಂಧಾನ ಎಂದು ಕರೆಯಬಹುದು; ಯಾಕೆಂದರೆ ಉದ್ದೇಶಿತ ವ್ಯಕ್ತಿ ಅನ್ಯ ಸಂಸ್ಕೃತಿಗೆ ಸೇರಿರುವುದೇ ಈ ಏಕವಚನ ಪ್ರಯೋಗ ಕ್ಕೆ ಕಾರಣವಾಗಿರುವುದು. ಆದರೆ ವ್ಯಕ್ತಿ ಭಾರತೀಯನಾಗಿದ್ದಾಗ ಏಕವಚನ ಮತ್ತು ಬಹುವಚನದ ಆಯ್ಕೆಯಿದೆ: 'ನಾನು ಚಂಡೀಗರದಲ್ಲಿದ್ದಾಗ ಕುಲದೀಪ್ ಸಿಂಗ್ ಎಂಬ ಪ್ರೊಫೆಸರ್ ಒಬ್ಬರನ್ನು ಭೇಟಿಯಾದೆ' ಎನ್ನುವುದು 'ನಾನು ಚಂಡೀಗರದಲ್ಲಿದ್ದಾಗ ಕುಲದೀಪ್ ಎಂಬ ಪ್ರೊಫೆಸರ್ ಒಬ್ಬನನ್ನು ಭೇಟಿಯಾದೆ' ಎನ್ನುವುದಕ್ಕಿಂತ ಹೆಚ್ಚು ಸ್ವೀಕೃತ. ಆದರೆ ವಿದೇಶೀ ಎಂದ ಮಾತ್ರಕ್ಕೆ ನಾವು ಎಲ್ಲರ ಕುರಿತಾಗಿಯೂ ಏಕವಚನ ಬಳಸಲು ಬಾಧ್ಯರು ಎಂದೇನೂ ಇಲ್ಲ: 'ನಾನು ಅಮೇರಿಕದಲ್ಲಿ ಇದ್ದಾಗ ನೋಮ್ ಚಾಮ್‌ಸ್ಕಿಯವರನ್ನು ಭೇಟಿಯಾದೆ' ಎನ್ನುವುದು ಭಾಷಾವಿಜ್ಞಾನದ ಅಭ್ಯಾಸಿಯಾದ ಪ್ರಕೃತ ಲೇಖಕನಿಗೆ ಹೆಚ್ಚು ಪ್ರಿಯವಾಗಿ ಕಾಣುತ್ತದೆ. ನೋಮ್ ಚಾಮ್‌ಸ್ಕಿ ಸುಪ್ರಸಿದ್ಧ ಸಮಕಾಲೀನ ಭಾಷಾವಿಜ್ಞಾನಿಯಾಗಿರುವುದು ಇದಕ್ಕೆ ಕಾರಣವಿರಬಹುದು. ಅದೇ, ಫರ್ಡಿನಾಂಡ್ ದ ಸಸ್ಸೂರ್ ಸಹಾ ಅಷ್ಟೇ ಪ್ರಸಿದ್ಧನಿದ್ದರೂ, ಆತ ಹಿಂದಿನ ಶತಮಾನಕ್ಕೆ ಸೇರಿದವನು ಎಂಬ ಕಾರಣಕ್ಕೆ ಏಕವಚನದ ಆತ್ಮೀಯ ಸಂಧಾನಕ್ಕೆ ಸೂಕ್ತವಾಗುತ್ತಾನೆ. ಇಬ್ಬರೂ ಅನ್ಯ ದೇಶೀಯರು ಎಂಬುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು.

ನಮ್ಮ ಏಕವಚನ, ಬಹುವಚನ ಸಂಧಾನಗಳು ಮಾತುಗ ಮತ್ತು ಆತ ಸೂಚಿಸುವ ವ್ಯಕ್ತಿಗಳನ್ನು ಮಾತ್ರವೇ ಅವಲಂಬಿಸಿರುವುದಿಲ್ಲ; ಯಾರ ಜತೆ ಮಾತಾಡುತ್ತಿದ್ದೇವೆ ಎಂಬುದನ್ನೂ ಹೊಂದಿಕೊಂಡಿರುತ್ತದೆ. ಯಾಕೆಂದರೆ ಹಲವು ಸಂದರ್ಭಗಳಲ್ಲಿ ನಾವು ನಮ್ಮ ಮಾತುಗಳನ್ನು ಕೇಳುಗನದೃಷ್ಟಿಕೋನಕ್ಕೆ ಹೊಂದಿಸಿಕೊಂಡು ಆಡುತ್ತೇವೆ. ಉದಾಹರಣೆಗೆ, 'ನನ್ನ ಶ್ರೀಮತಿಯವರಿಗೆ ಹುಷಾರಿಲ್ಲ' ಎಂದು ಒಬ್ಬ ಹೇಳಬಹುದು; ಇಲ್ಲಿ ಶ್ರೀಮತಿ ಎಂದು ಆತ ಸೂಚಿಸುವುದು ತನ್ನ ಹೆಂಡತಿಯನ್ನು. ಖಾಸಗಿಯಾಗಿ ಆತ ಹೆಂಡತಿಯನ್ನು ಸಂಬೋಧಿಸುವಲ್ಲಿ ಏಕವಚನವನ್ನು ಉಪಯೋಗಿಸುತ್ತಿರಬಹುದು. ಆದರೆ ಸಾರ್ವಜನಿಕವಾಗಿ ಆತನ ಅಪೇಕ್ಷೆ ಜನ ತನ್ನ ಹೆಂಡತಿಗೆ ಗೌರವ ತೋರಿಸಬೇಕು ಎಂದು. ಅಥವಾ ಆತ 'ಅಮ್ಮನವರಿಗೆ ಹುಷಾರಿಲ್ಲ' ಎನ್ನಬಹುದು, ತನ್ನ ಹೆಂಡತಿಯನ್ನು ಸೂಚಿಸಿ. ಇಲ್ಲಿ 'ಅಮ್ಮನವರು' ಎಂದರೆ ಕೇಳುಗನ ದೃಷ್ಟಿಯಲ್ಲಿ ಎಂದು ಅರ್ಥ. ಹೀಗೆ ನಾವು ಮಾತಾಡುವಾಗ ಕೇಳುಗರ ದೃಷ್ಟಿಕೋನವನ್ನು ತೆಗೆದುಕೊಳ್ಳುವುದು ಸಾಧಾರಣವಾದುದು. ಇದು ಏಕವಚನ, ಬಹುವಚನ ಸಂಧಾನದ ಮೇಲೆ ಪರಿಣಾಮ ಬೀಳಬಹುದಾಗಿದೆ. ಆದ್ದರಿಂದ ಒಂದು ವೇಳೆ ನಾವು ಅನ್ಯ ಸಂಧಾನದ ಕಾರಣಕ್ಕೆ ಒಬ್ಬ ವ್ಯಕ್ತಿಯ ಕುರಿತಾಗಿ ಆತನ ಅನುಪಸ್ಥಿತಿಯಲ್ಲಿ ಏಕವಚನ ಬಳಸಿದರೂ, ಆತನ ಉಪಸ್ಥಿತಿಯಲ್ಲಿ ಬಹುವಚನ ಬಳಸಬಹುದು. ಜಾನ್ ಸ್ಮಿತ್‌ನ ಉಪಸ್ಥಿತಿಯಲ್ಲಿ (ಉದಾಹರಣೆಗೆ, ವೇದಿಕೆಯಲ್ಲಿ) ನಾವು ಆತನ ಕುರಿತು ಗೌರವ ಸೂಚಕವಾದ ಬಹುವಚನ ಬಳಸಬೇಕಾಗುತ್ತದೆ (ಉನ್ನತ ಸಂಧಾನ).

ಈ ಹಿಂದೆ ನಾವು ಕೌಟುಂಬಿಕ ಸಂಬಂಧಗಳಲ್ಲಿ ಆತ್ಮೀಯ ಸಂಧಾನದ ಏಕವಚನ ಬಳಕೆಯಾಗುವುದನ್ನು ನೋಡಿದೆವು. ಆದರೆ ಇಲ್ಲಿಯೂ ಮಾತಿನ ಪರಿಸರ ಸಾರ್ವಜನಿಕ ಎನಿಸಿದಾಗ ಆತ್ಮೀಯ ಸಂಧಾನದ ಬದಲಿಗೆ ಉನ್ನತ ಸಂಧಾನದ ಬಹುವಚನ ಬರಬಹುದು. ಉದಾಹರಣೆಗೆ, ಆತ್ಮೀಯತೆಯ ಏಕವಚನದಿಂದ ತಂದೆ ತಾಯಿಯರನ್ನು ಸಂಬೋಧಿಸುವ ಮಂದಿ ಕೂಡ ಅವರ ಕುರಿತು ಸಾರ್ವಜನಿಕರೆದುರು ಉಲ್ಲೇಖಿಸಿದಾಗ ಗೌರವದ ಬಹುವಚನ ಬಳಸುವುದು ರೂಢಿ. 'ನನ್ನ ಅಪ್ಪ ಬೆಂಗಳೂರಿಗೆ ಹೋಗಿದ್ದಾರೆ' ಎಂದು ಮಗ ಅನ್ನಬಹುದು; ಇದೇ ಬಹುಮಾನ ಸೂಚಕ ಬಳಕೆ ಕೆಲವೊಮ್ಮೆ ಸರ್ವನಾಮ ವಿಶೇಷಣಕ್ಕೂ ಹರಡಿ, 'ನಮ್ಮ ಅಪ್ಪ ಬೆಂಗಳೂರಿಗೆ ಹೋಗಿದ್ದಾರೆ' ಎಂಬ ರೂಪ ತಳೆಯುವುದೂ ಇದೆ! ಹೀಗೆ ನೇರ ಸಂಬೋಧನೆಯಲ್ಲಿ ಏಕವಚನ, ಉಲ್ಲೇಖದಲ್ಲಿ ಬಹುವಚನ ಸಾಮಾನ್ಯವಾಗಿ ಕಂಡುಬರುತ್ತದೆ.

ಉನ್ನತ ಸಂಧಾನಕ್ಕೆ ಸರಿಸಮನಾದ ಅಲಿಪ್ತ ಸಂಧಾನವೊಂದಿದೆ. ಇದೂ ಕೂಡ ಏಕ ವ್ಯಕ್ತಿಯ ಕುರಿತು ಬಹುವಚನವನ್ನು ಅಪೇಕ್ಷಿಸುತ್ತದೆ. ಸಾಮಾನ್ಯವಾಗಿ ನಾವು ಕಚೇರಿಗಳಲ್ಲಿನ ಸಹೋದ್ಯೋಗಿಗಳನ್ನು, ಆಕಸ್ಮಿಕವಾಗಿ ಸಿಕ್ಕ ಅಗಂತುಕ ವ್ಯಕ್ತಿಗಳನ್ನು ಬಹುವಚನದಿಂದ ಮಾತಾಡಿಸುತ್ತೇವೆ. ಹೀಗೆ ಬಹುವಚನ ನೀಡಿ ಗೌರವದಿಂದ ಮಾತಾಡಿಸುವುದು ಶಿಷ್ಟಾಚಾರ. ಇಂಥ ಕಡೆ ಏಕವಚನದ ಬಳಕೆ ನೈಚ್ಯ ಸಂಧಾನವೆಂದು ಪರಿಗಣಿಸಲ್ಪಡುತ್ತದೆ. ಸಾಮಾಜಿಕ ಶ್ರೇಣಿಯಲ್ಲಿ ಕೆಳಗಿರುವವರನ್ನು ಸಹಾ ನಾವು ಬಹುವಚನದಲ್ಲಿ ಕರೆಯಬೇಕಾಗುತ್ತದೆ. ಅವರ ಅನುಪಸ್ಥಿತಿಯಲ್ಲಿ ಅವರ ಕುರಿತಾಗಿ ಏಕವಚನ ಉಪಯೋಗಿಸಲೂ ಬಹುದು, ಆದರೆ ಉಪಸ್ಥಿತಿಯಲ್ಲಿ ಅಲ್ಲ. ನಾನಿಲ್ಲಿ ಹೋಗೋ ಬಾರೋ ಎನ್ನುವ ನಿಕಟಪೂರ್ವ ಕಾಲದ ಬಗ್ಗೆ ಹೇಳುತ್ತಿಲ್ಲ. ಆಗ ಕೆಳವರ್ಗದ ಜನರನ್ನು ಏಕವಚನದ ನಿಮ್ನ ಸಂಧಾನದಲ್ಲಿ ಕರೆಯುವುದೇ ರೂಢಿಯಾಗಿತ್ತು. ಈಗ ಕಾಲ ಬದಲಾಗಿದೆ: ಊಳಿಗಮಾನ್ಯ ಪದ್ಧತಿಯಿಂದ ಪ್ರಜಾಪ್ರಭುತ್ವ ಪದ್ಧತಿಯ ಕಡೆಗೆ ನಾವು ಸಾಗಿರುವೆವು. ಪ್ರಜಾಪ್ರಭುತ್ವದಲ್ಲಿ ಸಮಾನತೆ ಒಂದು ದೊಡ್ಡ ಮೌಲ್ಯ. ಆದ್ದರಿಂದ ಪ್ರತಿಯೊಬ್ಬರನ್ನೂ ಗೌರವಿಸುವ ಅಲಿಪ್ತ ಸಂಧಾನ ಸರ್ವ ಸ್ವೀಕೃತ ವಿಧಾನ. ಹಾಗಿದ್ದರೂ ಸಮಾಜ ಅಷ್ಟು ಬೇಗನೆ ತನ್ನ ಪೂರ್ವವಾಸನೆಗಳನ್ನು ಬಿಟ್ಟು ಕೊಡುವುದಿಲ್ಲ. ಆದ್ದರಿಂದಲೇ ನಾವು ದೈನಂದಿನ ಸಂಪರ್ಕದಲ್ಲಿ ಹಲವು ರೀತಿಗಳನ್ನು ಬಳಸುವುದು ಅಗತ್ಯವಾಗುತ್ತದೆ.

ಪ್ರಜಾಪ್ರಭುತ್ವಕ್ಕೂ ನಮ್ಮ ಸಂಸ್ಕೃತಿಗೂ ಸಂಘರ್ಷ ಬರುವ ಹಲವು ಸಂದರ್ಭಗಳೂ ಇವೆ. ಇಲ್ಲೆಲ್ಲ ಭಾಷೆಯ ಪ್ರಯೋಗ ಬಹಳ ಸೂಕ್ಷ್ಮವಾಗುತ್ತದೆ.

ಶ್ರೇಣೀಕೃತ ಸಮಾಜದಲ್ಲಿನ ಕೆಳವರ್ಗದವರು ಕೆಲವೊಮ್ಮೆ ಸ್ವಯಂ ಉಲ್ಲೇಖ ಮಾಡುವ ಸಂದರ್ಭದಲ್ಲಿ ಬಹುವಚನ ಉಪಯೋಗಿಸುವುದು ಕಂಡುಬರುತ್ತದೆ. ಉದಾಹರಣೆಗೆ:

೫. ನಾವು ಕೊಪ್ಪಳದಿಂದ ಬಂದೀವಿ, ಕೂಲಿ ಕೆಲಸ ಮಾಡ್ತೀವಿ.

ಈ ವಾಕ್ಯವನ್ನು ಹೇಳುವ ವ್ಯಕ್ತಿ ಸೂಚಿಸುವುದು ಕೇವಲ ತನ್ನೊಬ್ಬನನ್ನೇ ಆಗಿರಬಹುದು. ಅಂಥ ಕಡೆ:

೬. ನಾನು ಕೊಪ್ಪಳದಿಂದ ಬಂದೀನಿ, ಕೂಲಿ ಕೆಲಸ ಮಾಡ್ತೀನಿ.

ಎಂಬ ಹೆಚ್ಚು 'ತರ್ಕಬದ್ಧ'ವಾದ ವಚನರೀತಿಯನ್ನು ನಾವು ನಿರೀಕ್ಷಿಸುತ್ತೇವೆ. ಆದರೆ ಇಲ್ಲಿ ಈ ವ್ಯಕ್ತಿ ತನ್ನ ಕುರಿತಾಗಿ ಬಹುವಚನ ಬಳಸಿದ್ದಕ್ಕೂ ಒಂದು ತರ್ಕ ಇರುವಂತೆ ಕಾಣುತ್ತದೆ: ತಾನು ಯಾರಿಗೆ ಈ ಮಾತನ್ನು ಹೇಳುವನೋ ಆ ವ್ಯಕ್ತಿಯಿಂದ (ಹಾಗೂ ಆ ಮೂಲಕ ಎಲ್ಲರಿಂದಲೂ) ಗೌರವವನ್ನು ಅಪೇಕ್ಷಿಸುವುದು ಅವನ ಉದ್ದೇಶ ಇದ್ದೀತು. ಇದನ್ನವನು ಪ್ರಜ್ಞಾಪೂರ್ವಕ ಮಾಡುತ್ತಾನೆ ಎಂದಲ್ಲ; ಇದೇ ರೂಢಿಯಲ್ಲಿ ಬಂದಿದೆ. ಆದರೆ ಶ್ರೇಣೀಕರಣ ಎಷ್ಟು ಬೇರೂರಿದೆಯೆಂದರೆ, ಸ್ವಂತಕ್ಕೆ ಸಂಬಂಧಿಸಿ ಈ ತರದ ಬಹುವಚನ ಪ್ರಯೋಗವೇ (ಉನ್ನತ ಸಂಧಾನ) ಕೆಳವರ್ಗದ ಒಂದು ಗುರುತಾಗಿಬಿಡುತ್ತದೆ!

ಉನ್ನತ ಸಂಧಾನದಲ್ಲಿ ಬಹುವಚನ ಬಳಕೆಯಾಗುತ್ತದೆ; ಹಾಗೆಂದು ಬಹುವಚನ ಬಳಕೆಯಾದಾಗಲೆಲ್ಲ ಅದು ಉನ್ನತ ಸಂಧಾನವನ್ನು ಸೂಚಿಸುತ್ತದೆ ಎನ್ನಲಾಗದು. ಕೆಲವೊಮ್ಮೆ ಅದು ಆತ್ಮೀಯತೆಯ ನಿರಾಕರಣೆಯಾಗಿ ಬಳಕೆಯಾಗಬಹುದು, ಎಂದರೆ ಅನಾತ್ಮೀಯ ಸಂಧಾನವಾಗಿ. ಉದಾಹರಣೆಗೆ ನಾವು ಏಕವಚನದ ಆತ್ಮೀಯತೆಯಿಂದ ಕರೆಯುವ ವ್ಯಕ್ತಿಯ ಜತೆ ವಿರಸವಾಗಿದೆ ಎಂದಿಟ್ಟುಕೊಳ್ಳೋಣ; ಆಗ ಏಕವಚನವನ್ನು ಬಿಟ್ಟು ಬಹುವಚನದಿಂದ ಆ ವ್ಯಕ್ತಿಯನ್ನು ಕರೆದರೆ ಅದು ಅನಾತ್ಮೀಯತೆಯ ಸೂಚಕವಾಗುತ್ತದೆ. ಇದು ವೈಯಕ್ತಿಕ ನೆಲೆಯಲ್ಲಿ ನಡೆಯುವಂತಹದು. ಇನ್ನು ಕೆಲವೊಮ್ಮೆ ವೈಯಕ್ತಿಕ ನೆಲೆಯಲ್ಲಿ ಏಕವಚನದ ಸಲಿಗೆ ಉಪಯೋಗಿಸುವವರು ಸಾರ್ವಜನಿಕವಾಗಿ (ಇತರರೆದುರು) ಬಹುವಚನ ಬಳಸಬಹುದು. ಇದೆಲ್ಲದರ ಅರ್ಥವೆಂದರೆ, ಏಕವಚನಕ್ಕೆ ಇಂಥಾ ಅರ್ಥ, ಬಹುವಚನಕ್ಕೆ ಇಂಥಾ ಅರ್ಥ ಎಂದು ನಿರಪೇಕ್ಷವಾಗಿ ಹೇಳುವುದು ಕಷ್ಟ.

❑❑

# ಕವಿ – ಕಾವ್ಯ : ಶಬ್ದ ಶಿಲ್ಪ

– ಎಸ್.ಜಿ. ಜೈನಾಪೂರ

ಕಾವ್ಯವೆಂದರೆ ಅಕ್ಷರಗಳು ಕಟ್ಟಿದ ಶಬ್ದ–ಸೌಧ. ಅದರ ಬಿಗಿಯಾದ ಕಟ್ಟಡದೊಳಗೆ ಸ್ವರ–ವ್ಯಂಜನಗಳು ಜಗತ್ತನ್ನು ಆಳುವ ಅರಮನೆ. ಶಬ್ದಗಳು ಕಾವ್ಯ–ಲೋಕ ದರ್ಶನದ ಪ್ರಧಾನ ಪ್ರವೇಶದ್ವಾರ. ಶಬ್ದಗಳು ಅಥವಾ ಪದಗಳು ಕಾವ್ಯ ಶರೀರದ ಪ್ರಮುಖ ಅಂಗ. ಪದಗಳಿಲ್ಲದೆ ಪದ್ಯವಿಲ್ಲ. ಅವು ಕಾವ್ಯ ರಚನೆಯ ಮೂಲಭೂತ ಸರಕು–ಸಾಮಗ್ರಿ, ಸಂಪತ್ತು. ಒಟ್ಟಿನಲ್ಲಿ ಅವು ಕಾವ್ಯದ ಉಸಿರು. ಶಬ್ದವೆಂದರೆ ಒಂದು ಭಾವನೆ, ವಿಚಾರ ಮತ್ತು ವಿಷಯ ಎಂಬುದು ವಿದಿತ ವಿಚಾರ. ಅವುಗಳೆಂದರೆ 'ಬುವಿಯ ಹೆಣ್ಣುಮಕ್ಕಳು' ಎನ್ನುತ್ತಾನೆ ಇಂಗ್ಲಿಷ್ ನಿಘಂಟುಕಾರ ಡಾ. ಸ್ಯಾಮುಯಲ್ ಜಾನಸನ್. 'ಒಂದು ಭಾಷೆಯ ಶಬ್ದಸಂಪತ್ತು ಆ ಭಾಷೆಯ ಸಾಂಸ್ಕೃತಿಕ, ಸಾಮಾಜಿಕಸಾಧನೆಗಳನ್ನು ಗುರುತಿಸುವ ಮೂಲ ಸಾಮಗ್ರಿಯಾಗಿದೆ; ಆ ಭಾಷೆಯ ಅಂತರಂಗವಾದ ಶಬ್ದ–ಸಂಪತ್ತು ಆ ಭಾಷಿಕರ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿಹಿಡಿಯುವ ದೃಷ್ಟಾಂತ.'[೧]

ಶಬ್ದಗಳು ಮಾತ್ರ ಅಜರಾಮರ. ಕಾಲಾತೀತ, ಪ್ರತಿಯೊಬ್ಬ ಸೃಜನಶೀಲಬರಹಗಾರನ ಬಂಡವಾಳ. ಮೂಲಶಕ್ತಿಯುತ ಆಸ್ತಿ. ಆದರೆ ಶಬ್ದಗಳನ್ನು ಬಳಸುವರೀತಿಯಲ್ಲಿ ಅವನ ಕಲೆಗಾರಿಕೆ ವೈವಿಧ್ಯಮಯ. ಅದೊಂದು ವಿಸ್ಮಯ. ಉಲಿಯುವದೇ ಒಂದು ದಿವ್ಯ ಅನುಭವ. ಈ ಪ್ರಬಂಧದಲ್ಲಿ ಕವಿ ಎಂದರೆ ಯಾರು?, ಕಾವ್ಯವೆಂದರೇನು? ಕಾವ್ಯಸೃಷ್ಟಿ ಪರಿಯ ಅನುಸಂಧಾನ ಮುಂತಾದ ಅಂಶಗಳನ್ನು ಪ್ರಾಸಂಗಿಕವಾಗಿ ಸ್ಪರ್ಶಿಸಿ, ಆಳದಲ್ಲಿ ಇಳಿಯದೇ, ಶಬ್ದಗಳ ಪಾತ್ರ ಮತ್ತು ಮಹತ್ವವನ್ನು ಬಿಂಬಿಸುವ ಚಿಕ್ಕ ಪ್ರಯತ್ನ ಮಾಡಲಾಗಿದೆ.

ಕವಿ ಎಂದರೆ ಯಾರು? ಕಾವ್ಯದ ಉತ್ಪತ್ತಿಯ ಕಾಲದಲ್ಲಿಂದ ಇಂದಿನವರೆಗೆ ಅದರ ಬಗೆಗೆ ಚಿಂತನೆ ನಡೆದೇ ಇದೆ. ಅಗಣಿತವ್ಯಾಖ್ಯೆಗಳು, ಮಂಡನೆಗಳು ಎಲ್ಲಭಾಷೆ, ಸಾಹಿತ್ಯಗಳಲ್ಲಿ ಲಭ್ಯವಿವೆ. ಕವಿಯಾದವನು ಜೀವನದ ಅಸ್ತಿತ್ವದ ಕತ್ತಲಲ್ಲಿ ಬೆಳಕನ್ನು ಬೀರುವವನು. ಜೀವನದ ಮಾಧ್ಯಮವೇ ಕಾಲ. ಆದ್ದರಿಂದ ಕಾಲವೇ ಕವಿಯ ಮಾಧ್ಯಮವು ಹೌದು. ಕಾಲವು ಪ್ರತಿಯೊಬ್ಬ ಕವಿಯ ವಿಧಿ ಎಂಬ ಮಾತು ಸತ್ಯ. ವಿಶಾಲಾರ್ಥದಲ್ಲಿ ಕಾಲ, ಕವಿ ಎರಡೂ ಪರಸ್ಪರ ಬೆಸುಗೆಗೊಂಡಿವೆ. ವ್ಯಾಲೇಸ್ ಸ್ಟೀವನ್ಸನ ಅಭಿಮತದಲ್ಲಿ ಕವಿ ಅದೃಶ್ಯ ಲೋಕದ ಆರಾಧಕ – ಅರ್ಚಕ. ಹಾಗೆಂದು ಜೀವನಿಷ್ಠತೆ ಇಲ್ಲವೆಂದಲ್ಲ. ವ್ಯಾಸ, ವಾಲ್ಮೀಕಿ, ಕಾಳಿದಾಸ, ಪಂಪ, ರನ್ನ, ಡಾಂಟೆ, ಷೇಕ್ಸ್‌ಪಿಯರ್, ಬೇಂದ್ರೆ, ಕುವೆಂಪು, ಮೊದಲಾದವರು ಆಂತರಿಕ, ಬಾಹ್ಯ, ಲೌಕಿಕ ಮತ್ತು ಅಲೌಕಿಕ ಎಲ್ಲ ಲೋಕವನ್ನು ಜಾಲಾಡುತ್ತಾರೆ. ಬೇಂದ್ರೆ ಮುಖ್ಯವಾಗಿ ಪ್ರಜ್ಞೆಯ ಹಲವು ಹಂತಗಳನ್ನು ಕನ್ನಡದಲ್ಲಿ ಅನನ್ಯವೆಂಬಂತೆ ರೂಪಿಸಿರುವ ಕವಿ ಎಂಬಲ್ಲಿ ಎರಡು ಮಾತಿಲ್ಲ. ಬೇಂದ್ರೆಯಂತಹ ಉದಾತ್ತ ಕವಿಗೆ ಕಾವ್ಯ ಕೇವಲ ಶಬ್ದನೇಯುವ ಕಲೆಯಾಗಿ ಉಳಿಯಲಿಲ್ಲ. ಅವರಲ್ಲಿರುವ 'ಅಂಬಿಕಾತನಯದತ್ತ'ನಿಗೆ ಯೋಗ ಸಾಧನೆಯ ಪಥ ಮತ್ತು ಆತ್ಮಸಾಕ್ಷಾತ್ಕಾರದ ಮಾರ್ಗವಾಗಿತ್ತು.

ಭಾರತೀಯ ಕಾವ್ಯಪರಂಪರೆಯಲ್ಲಿ ಕವಿಯನ್ನು 'ಮಂತ್ರದ್ರಷ್ಟಾರ'ನ ರೂಪದಲ್ಲಿ ನೋಡಲಾಗಿದೆ. ತನ್ನ ಕವಿದೃಷ್ಟಿಯನ್ನು ಕಾವ್ಯಸೃಷ್ಟಿಯಲ್ಲಿ ಮಂತ್ರದ ಘನತೆಯನ್ನಾಗಿ ರೂಪಿಸುವ ಶಕ್ತಿಯನ್ನು ಪಡೆದವನು ಅವನು. ಕಾವ್ಯೋಚ್ಚಾರಗಳಿಂದಲೂ ನವೀನಸೃಷ್ಟಿ ನಿರ್ಮಾಣವಾಗುತ್ತದೆ. ಕವಿ ಬೇಂದ್ರೆಯವರ ಕಾವ್ಯವಾಚನ ಅನುಭವಿಸಿದವರಿಗೆ ಈ ಮಾತು ಹೆಚ್ಚು ಅರ್ಥವಾಗುವುದು. 'ಹಕ್ಕಿ ಹಾರುತಿದೆ ನೋಡಿದಿರಾ?' ಎಂದು ಕವಿ ಮೊದಲಸಲ ಸಾರ್ವಜನಿಕ ಸಭೆಯಲ್ಲಿ ಬೆಳಗಾವಿಯಲ್ಲಿ ಹಾಡಿದಾಗ ಕೇಳುಗರು ರೋಮಾಂಚಿತವಾಗಿದ್ದರು ಎಂಬ ದಾಖಲೆ ಇದೆ. ಇದು ಒಂದು ದೃಷ್ಟಾಂತ ಮಾತ್ರ, ಅವರ ವಾಚನ, ಶಬ್ದಗಾರುಡಿಗತನ ಕೇಳುಗರನ್ನು ಮಂತ್ರಮುಗ್ಧರನ್ನಾಗಿ ಬೇರೆ ಲೋಕಕ್ಕೆ ಕರೆದೊಯ್ಯುತ್ತಿತ್ತು. ಅದು ಅನುಭವಿಸಿದವರ ಸುಕೃತ.

ಕಾವ್ಯದ ಪರಿಜ್ಞಾನ ಧೀಮಂತ ಕವಿಗಳಲ್ಲಿ ಸಮಕಾಲೀನ ಪ್ರಜ್ಞೆಯೊಂದಿಗೆ ಮೇಳವಿಸಿ ಕಾವ್ಯಸೃಷ್ಟಿಗೆ ಕಾರಣವಾಗುತ್ತದೆ ಎಂದು ಅಭಿಪ್ರಾಯಪಡುತ್ತಾನೆ ಟಿ.ಎಸ್. ಎಲಿಯಟ್. ಅವನೇ ತನ್ನ ಈ ಹೇಳಿಕೆಗೆ ದೊಡ್ಡ ದೃಷ್ಟಾಂತ. ಪರಂಪರೆಯ

'ಶುಭ ತರಂಗ', ೧೭೬, ವಿಹೆಚ್‌ಬಿ ಕಾಲೋನಿ: ಪಿಎಸ್ ಕಾಲೋನಿ, ೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಮಹಾಲಕ್ಷ್ಮಿಪುರ, ಬೆಂಗಳೂರು ೮೬

ಪೂರ್ಣಜ್ಞಾನ ಕವಿಗೆ ಇದ್ದೇ ಇರುತ್ತದೆ. ಅವನ ಪ್ರತಿಭೆ ಅದರೊಡನೆ ಸಮರಸವಾದಾಗ ಶಾಶ್ವತಕಾವ್ಯ ಅವನಿಂದ ರೂಪಿತವಾಗುತ್ತದೆ. ತಲ್ಲೀನತೆ ಅವನ ಸ್ವಾಭಾವಿಕ ಗುಣ ವಿಶೇಷವಾಗಿ ಬೆಳೆದುಬರುತ್ತದೆ. ಸತ್‌ಭಾವ, ಸತ್‌ವಸ್ತು ಕಾವ್ಯಸೃಷ್ಟಿಗೆ ಕಾರಣವಾಗುತ್ತದೆ. ಕಾವ್ಯವು ಸಾಂದ್ರತೆ, ಆಳ ಪಡೆಯಲು ಇದೂ ಕಾರಣ. ಇಂಗ್ಲಿಷ್‌ನಲ್ಲಿಯೂ ಕವಿಪುಂಗವರ ಮಹಾನ್ ಪರಂಪರೆ ಇದೆ. ಕಾಲಕ್ಕನುಸಾರವಾಗಿ ಕಾವ್ಯದ ಆಶಯ, ಸ್ವರೂಪ ಬದಲಾಗುವುದು ತೀರಸ್ವಾಭಾವಿಕ. ರೊಮ್ಯಾಂಟಿಕ್ ಕಾವ್ಯದ ಭಾವಾತಿರೇಕದಿಂದ – ಷೆಲ್ಲಿ, ಕೀಟ್ಸ್, ವರ್ಡ್ಸ್‌ವರ್ಥ್‌ರಂತಹ ಅದ್ಭುತ ಕಾವ್ಯದಿಂದ – ಅದನ್ನು ಹೊಸ ಮಾರ್ಗಕ್ಕೆ ಕರೆತಂದವರ ಒಂದು ದೊಡ್ಡ ಕವಿಗುಂಪೇ ಇದ್ದಿತು. ಎಝ್ರಾ ಪೌಂಡ್, ಎಲಿಯಟ್, ಆಡೆನ್, ಏಟ್ಸ್ ಹಾಗೆ ಹೆಸರಿಸುತ್ತಲೇ ಹೋಗಬಹುದು. ಅದನ್ನು ಆಧುನಿಕ ಕಾವ್ಯ ಎಂದರು ಕನ್ನಡದಲ್ಲಿ. ಹಳಗನ್ನಡದ ಕಾವ್ಯ ಪರಂಪರೆಯ ನಂತರ ನವೋದಯ, ನವ್ಯ, ಬಂಡಾಯ ಹೀಗೆ ವಿವಿಧ ಕಾವ್ಯಮಾರ್ಗಗಳು ಕಾಲಹಂತದ ಮುಖವಾಣಿಯಾದವು. ಗೋಪಾಲಕೃಷ್ಣ ಅಡಿಗರು ನವ್ಯಮಾರ್ಗಕ್ಕೆ ಕಾರಣರಾದರು. ಕಾವ್ಯದಲ್ಲಿ ಮತ್ತೆ ಮಣ್ಣಿನವಾಸನೆ ಹೊಡೆಯಬೇಕೆಂದು ಮುನ್ನುಗ್ಗಿದರು. ಜೀವನಾವಲಂಬಿಯಾದ ಕಾವ್ಯಕ್ಕೆ ಪರಿವರ್ತನೆ ಬೇಕೆಂದು ಹೋರಾಡಿದರು. ಹೊಸ ಕಾವ್ಯಭಾಷೆಯನ್ನು ಪರಿಚಯಿಸಿದರು. ಒಟ್ಟಿನಲ್ಲಿ ಕಾಲದ ಮೂರು ಆಯಾಮಗಳನ್ನು – ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳನ್ನು – ಒಂದು ಬಿಂದುವಿನಲ್ಲಿ ತರಲು ಯಶಸ್ವಿಯಾದವನು ನಿಜವಾದ ಕವಿ. ಅದಕ್ಕೆ ಬೇಂದ್ರೆ ಅವರು ಕವಿಯೆಂದರೆ 'ಆಗಸದೇಹಿ' 'ಮಾನಸ ಪುತ್ರ' ಎಂದು ಕರೆದರು.

ರೋಮನ್ನರು ಕವಿಗೆ ಪ್ರವಾದಿ (Vates) ಎಂದು ಹೆಸರಿಸಿದರು. ಗ್ರೀಕರು ಕವಿಗೆ 'Poet' ಎಂದು ಕರೆದರು. 'Poier' ಎಂದರೆ ಮಾಡು To make ಎಂದರ್ಥ. ಆದ್ದರಿಂದ ಕವಿಯನ್ನು ಕರ್ತೃ ಎಂದು ಕರೆದರು. ಇದು ಉದಾತ್ತತೆಯನ್ನು ಪ್ರತಿಬಿಂಬಿಸುತ್ತದೆ. ಕವಿಯಾದವನು, ಪ್ರತಿಸೃಷ್ಟಿ ನಿರ್ಮಿಸುತ್ತಾನೆ. ರವಿ ಕಾಣದ್ದನ್ನು ಕವಿ ಕಾಣುತ್ತಾನೆ ಎಂಬ ಲೋಕರೂಢಿಯ ಕ್ಲಿಷೆ ಮಾತೂ ಚಲಾವಣೆಯಲ್ಲಿದೆ. ಅವನು ನವೀನ ವಸ್ತು, ಕಲ್ಪನೆ, ವಿಚಾರಗಳನ್ನು ಸೃಷ್ಟಿಸುತ್ತಾನೆ. ಇಂಗ್ಲಿಷದ ರೋಮ್ಯಾಂಟಿಕ್ ಕಾವ್ಯದ ಕವಿಗಳ ದೃಷ್ಟಿಯಲ್ಲಿ ಕಾವ್ಯವು ಅನುಕರಣೆಯ ಸ್ತರದಿಂದ 'ಪುನರ್‌ಸೃಷ್ಟಿ'ಯ ಸ್ತರಕ್ಕೆ ರೂಪಾಂತರವಾಗಿತ್ತು. 'ಫ್ಯಾನ್ಸಿ' ಮತ್ತು 'ಇಮ್ಯಾಜಿನೇಶನ್' ಶಬ್ದಗಳು ಮೊದಲೇ ಬಳಕೆಯಾಗಿದ್ದರೂ ಈ ಕಾಲದಲ್ಲಿ ಅವುಗಳ ಅರ್ಥಬದಲಾಯಿತು. ವಿಲಿಯಂ ಬ್ಲೇಕ್‌ನನ್ನೇ ತೆಗೆದುಕೊಳ್ಳಿ. ಕಣಸು (Vision) ಅವನ ವೈಶಿಷ್ಟ್ಯತೆ. ಉದಾಹರಣೆಗಾಗಿ ಅವನ ಮುಖ್ಯ ಕೃತಿಯಾದ 'ಟೈಗರ್' ಕವನ ತೆಗೆದುಕೊಳ್ಳೋಣ. ಹುಲಿಯ ಪುನರ್‌ಸೃಷ್ಟಿ ಇಲ್ಲಿ ಆಗಿದೆ. What immortal hand or eye/Dare frame thy fearful symmetry? ಸಾಲು ಯಾರಿಗೆ ನೆನಪಾಗುವುದಿಲ್ಲ?

ಬಿ.ಎಂ.ಶ್ರೀಯವರ ಇಂಗ್ಲಿಷ್‌ಗೀತೆಗಳಲ್ಲಿ ರಾಬರ್ಟ್ ಬರ್ನ್ಸನ ಬಹುಕವನಗಳು ಕನ್ನಡಕ್ಕೆ ರೂಪಾಂತರವಾಗಿರುವದು ಗಮನಿಸಿರಬಹುದು. ವರ್ಡ್ಸ್‌ವರ್ಥನ ಯಶಸ್ವಿ ಕವನವಾದ 'ದಿ ಡ್ಯಾಫೋಡಿಲ್ಸ್' ದಲ್ಲಿಯ 'I gazed – and gazed – but little thought / What wealth the show to me had brought' ಎಂಬಲ್ಲಿ ಕವಿದೃಷ್ಟಿಗೆ ಅನುಭವವಾಗುವ ಆ ಸೃಷ್ಟಿಸಂಪತ್ತು ಅಮೋಘ. 'ದಿ ಸಾಲಿಟರಿ ರೀಪರ್'ದಲ್ಲಿಯೂ ಅವನ ನೆನಪಿನ ಸಾಮ್ರಾಜ್ಯ, ವರ್ತಮಾನದ ಅನುಭಾವದ ಕೇಂದ್ರವೂ ಆಗುತ್ತದೆ. ಹಲವು ಕವನಗಳಲ್ಲಿ ಅವನು ಮನಸ್ಸನ್ನು 'a mansion for all lovely thoughts' ಎಂದು ಮಂಡಿಸುತ್ತಾನೆ. ಕಾವ್ಯದ ಶ್ರೇಷ್ಠತೆಗೆ ಇನ್ನೂ ಹಲವು ಹೆಸರಿಸಬಹುದು. ಕೋಲರಿಜ್‌ನ ಪ್ರತಿಮಾತ್ಮಕ ಅರ್ಥಪೂರ್ಣ 'Water, water, everywhere / Nor any drop to drink' ಸಾಲನ್ನು ಯಾರು ಆನಂದಿಸುವುದಿಲ್ಲ ! ಅಥವಾ 'O Lady! We receive but what we give/And in our Life alone does Nature live; Ours is her wedding garment, ours her shroud! (Dejection: An ode)' ಎನ್ನುವ ಮನಗೆಲ್ಲುವ ಸಾಲುಗಳು ಷೆಲ್ಲಿಯ 'ಟು ಎ ಸ್ಕೈಲಾರ್ಕ್'ದಲ್ಲಿವೆ. 'Our sweetest songs are those that tell of saddest thought' ಅಜರಾಮರ ಅರ್ಥಪೂರ್ಣ ಸಾಲು. ಕೀಟ್ಸ್‌ನ Beauty is Truth, Truth Beauty – that is all / Ye know on earth, and all Ye need to know ಎಂಬ ಸೂತ್ರರೂಪಕ ಹೇಳಿಕೆ ಸ್ಮರಣೀಯ. ಇಲ್ಲಿ ಉದಾಹರಣೆಗಾಗಿ ಕೆಲ ಕವಿಗಳ ಉಕ್ತಿಗಳನ್ನು ಮಾತ್ರ ಎತ್ತಿಕೊಳ್ಳಲಾಗಿದೆ.

ಕನ್ನಡದ ನವೋದಯದ ಕವಿಗಳು ಇಂಗ್ಲಿಷ್ ರೋಮ್ಯಾಂಟಿಕ್ ಕವಿಗಳಿಂದ ಪ್ರಭಾವಿತರಾದದ್ದು ಈಗ ಇತಿಹಾಸ. 'ಚಿಟಗುಬ್ಬಿ ಚಿಂವು ಚಿಂವು' 'ಇದು ಹಾಲಗಡಲಿನ ಸೀಮಿ / ಚಂದ್ರಮನೆ ಸ್ವಾಮಿ / ಚಂದ್ರಮನೆ ಸ್ವಾಮಿ ? 'ಹುಲ್ಲು ಹೂವು ಆದರೇನು ಹಬ್ಬಿದುಬ್ಬಿನಲ್ಲಿವೆ ದಿಬ್ಬಗಳನು ತಬ್ಬಲೆಂದು/ ಎಲ್ಲ ನೆಲಕು ಹಬ್ಬಿವೆ'.

'ಅರಿಯದ ಅಳವು / ತಿಳಿಯದು ಮನವು / ಕಾಣದೊ ಬಣ್ಣಾ / ಕಣ್ಣಿಗೆ ಕನಾದೊ ಬಣ್ಣಾ ಶಾಂತಿರಸವೇ ಪ್ರತಿಯಿಂದಾ / ಮೈದೋರಿತಣ್ಣ / ಇದು ಬರಿ / ಬೆಳಗಲ್ಲೊ ಅಣ್ಣಾ ? (ಅಂಬಿಕಾತನಯದತ್ತ) ೧೯೨೦ ರಿಂದ ೧೯೩೦ ರ ವರೆಗಿನ ದಶಕವನ್ನು ಗೋಕಾಕರು ಕನ್ನಡ ಕಾವ್ಯದ 'ಪ್ರಾದುರ್ಭಾವದ' ಕಾಲವೆಂದು ಕರೆದಿದ್ದಾರೆ. ೧೯೩೦ ವೇಳೆಗಾಗಲೆ 'ಇಂಗ್ಲಿಷ್ ಗೀತಗಳು' ಪ್ರಕಟವಾಗಿತ್ತು. 'ಅವು ಭಾಷಾಂತರಗಳಾದರೂ ಹೊಸಗನ್ನಡ ಭಾವಗೀತೆಗಳಿಗೆ ಮಾರ್ಗದರ್ಶಕ ಆಗಿವೆ'[೨]

ಎಂದು ಬೇಂದ್ರೆಯವರೇ ದಾಖಲಿಸಿರುವುದು ಮಹತ್ವದ ಅಂಶವಾಗಿದೆ 'ಹಕ್ಕಿ ಹಾರುತಿದೆ! ನೋಡಿದಿರಾ?' ಕವನದಲ್ಲಿ ಕವಿಹೃದಯದ ಸಂಪರ್ಕ, ಕವಿ ಜೀವನದ ಕಾವನ್ನು' ವಿ.ಸೀ ಗುರುತಿಸಿದ್ದಾರೆ. ಪುತಿನ ಅವರ 'ಗಣೇಶದರ್ಶನ' ದ ಈ ಸಾಲುಗಳನ್ನು ಗಮನಿಸಿ: 'ಮೇಲೊಂದು ಗರುಡ ಹಾರುತಿಹುದು / ಕೆಳಗದರ ನೆರಳು ಓಡುತಿಹುದು ಅದಕೆ ಅದರಿಚ್ಛೆ ಹಾದಿ / ಇದಕು ಹರಿದತ್ತ ಬೀದಿ?' ಅದು ಹೇಗೆ ಭಾವ, ಸನ್ನಿವೇಶ ಕವಿಯನ್ನು ಪ್ರಭಾವಿಸುತ್ತದೆ ಎಂದು ಹೇಳಿದ ವರ್ಡ್ಸ್‌ವರ್ಥನ ಮಾತು ಇಲ್ಲಿ ಜ್ಞಾಪಕಕ್ಕೆ ಬರುತ್ತದೆ. ಕುವೆಂಪುರವರ 'ತೆಂಗಿನ ಮರದಡಿ ನಾನೂ ನೀನೂ, ಯೌವನ ಶಿಶುತನಗಳ ಜೋಡಿ / ನಮ್ಮಿಬ್ಬರ ನೆಳಲೂ ಎಳಬಿಸಿಲೂ / ಕುಣಿ ಕುಣಿದಾಡಿದೆ ಜೊತೆಗೂಡಿ / ತಲ್ಲಣಿಸಿದೆ ತ್ರೈಭುನಾಕ್ಷಿ / ಶಿವಸಾಕ್ಷಿ ಜೇನಾಗುವಾ[೩] ಉದಾಹರಣೆಗಾಗಿ ನೋಡಬಹುದು.

ಕವಿಯಾದವನು ತನ್ನ ಹೃದಯದ ಆಳದಿಂದ ಕಾವ್ಯವನ್ನು ಸೃಷ್ಟಿಸಬೇಕು. ಕಾವ್ಯರೂಪ, ಅಭಿವ್ಯಕ್ತಿ ಹೆಚ್ಚು ಮಹತ್ವದ ಅಂಶಗಳು. ಕವಿಯ ಆಶಯ, ಉದ್ದೇಶ, ಪ್ರಯೋಗ ಶತಮಾನಗಳು ಉರುಳಿದಂತೆ ಕಾಲ ಕಾಲಕ್ಕೆ ಪರಿವರ್ತನೆ ಹೊಂದಿವೆ. ಪ್ರತಿಭೆ, ಪ್ರಜ್ಞೆ, ಹಾಗೂ ಬುದ್ಧಿಗ್ರಹಣಸಾಮರ್ಥ್ಯ, ಅಂತರಂಗದಸಾಮರ್ಥ್ಯ ಇವು ನಿಜವಾದ ಕವಿಗೆ ಇರಬೇಕಾದ ಗುಣಗಳು. ಈ ಕಾವ್ಯ ಸಾಮರ್ಥ್ಯವನ್ನು ಪರಿಶ್ರಮದಿಂದ ವರ್ಧಿಸಿಕೊಳ್ಳಬೇಕು ಎಂದು ಕವಿ ವಿಮರ್ಶಕರ ಅಭಿಪ್ರಾಯ. ಪರಿಷ್ಕರಣೆಯೂ ಅಷ್ಟೇ ಅವಶ್ಯಕ. ವರ್ಜಿಲ್ ಕವಿ ತನ್ನ ಪದ್ಯಗಳನ್ನು ಕರಡಿಯಂತೆ ಹೆತ್ತು ನಾಲಗೆಯಿಂದ ಸವರಿ-ಸವರಿ ಅವುಗಳಿಂದ ರೂಪಕೊಡುತ್ತಿದ್ದನಂತೆ ಎಂಬುದು ದಾಖಲಾಗಿದೆ. ಕಾವ್ಯನಿರ್ಮಿತಿಯನ್ನು ಒಂದು ತರಹದ ವಿವಿಧ ಪುಷ್ಪಗಳಿಂದ ಸಂಗ್ರಹಿಸಲಾಗುವ ಮಧುಸಂಗ್ರಹಕ್ಕೂ ಹೋಲಿಸಲಾಗಿದೆ. ಬೇಂದ್ರೆ, ಅಡಿಗರಂಥವರು ಹೊಸನಿಯಮಗಳನ್ನು ರೂಪಿಸುವ ಶಕ್ತಿಯನ್ನುಪಡೆದ ಉತ್ಕೃಷ್ಟ ಕಲಾವಿದರು. ಷೇಕ್ಸ್‌ಪಿಯರನು ಎಷ್ಟೋ ವ್ಯಾಕರಣದ ನಿಯಮಗಳನ್ನು ಮುರಿದು ಹೊಸ ಶಬ್ದ-ರೂಪಗಳ ಸೃಷ್ಟಿಯ ಪ್ರಯೋಗಮಾಡಿದುದು ಗಂಭೀರ ಸಾಹಿತ್ಯ ಅಭ್ಯಾಸಿಗಳಿಗೆ ಗೊತ್ತಿರುವ ವಿಷಯ. ಸಾರ್ವತ್ರಿಕ ಸತ್ಯವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ರೂಪಿಸಲು ಶಕ್ತನಾದವನೇ ನೈಜ ಕವಿ. ಕವಿಯಲ್ಲಿ ವೀಕ್ಷಣೆ, ಸಂವೇದನೆ, ಚಿಂತನೆ, ಕಲ್ಪನೆ, ನಿರ್ಣಾಯಕ ಮತ್ತು ಶೋಧಕ ಶಕ್ತಿಗಳಿರಬೇಕೆಂದು ವರ್ಡ್ಸ್‌ವರ್ಥ್ ಗುರುತಿಸುತ್ತಾನೆ. ಕಾವ್ಯವು ಜ್ಞಾನದುಸಿರು. ಕವಿ ಅದರ ಅಭಿವ್ಯಕ್ತಿಗೆ ಕಾರಣ. ಬದುಕಿನ ಭೂಮಿಕೆಗೆ ಆದರ್ಶಗಳ ಮೆರುಗು ಎಂದು ಷೆಲ್ಲಿಯ ಅಭಿಮತ. ಕವಿಗೂ ಸಂಸ್ಕೃತಿಗೂ ಅಪಾರ ನಂಟು. ಅವನು ಅದರ ರಕ್ಷಕ ಎಂಬ ಅಂಶವನ್ನು ಎಲ್ಲರೂ ಒಪ್ಪಿಕೊಳ್ಳುವ ಮಾತು. ಮಾನವನ ನಾಗರಿಕತೆಯ ಬೆಳವಣಿಗೆ ಗುರುತಿಸಿದಾಗ ಚಿಂತಕರು, ವಿಚಾರವಾದಿಗಳು, ಕವಿಗಳು ಕಲೆ-ನಾಗರಿಕತೆ ಉಳಿಸಬಲ್ಲರು ಎಂಬುದು ಸಿದ್ಧವಾಗಿದೆ. ಅವರೇ ನಿಜವಾದ ಮಾರ್ಗದರ್ಶಿಗಳು. ಕವಿಯಾದವನು, ಕಲಾವಿದನಾದವನು ಲೌಕಿಕದಲ್ಲಿ ಅಲೌಕಿಕತೆಯನ್ನು, ಅಲೌಕಿಕತೆಯಲ್ಲಿ ಲೌಕಿಕತೆಯನ್ನು ಸೃಷ್ಟಿಮಾಡಬಲ್ಲನು. ಕವಿಯು ತಾನು ಪಡೆಯುವ ಮತ್ತು ಓದುಗರಿಗೆ ನೀಡುವ ಆನಂದದಿಂದ ವಿಶೇಷವಾದ ಕಲಾವಿದನಾಗಿ ಕಂಗೊಳಿಸುತ್ತಾನೆ. ಮಹಾಕವಿಗಳು ಶಿಲ್ಪಿ ಮತ್ತು ರೂವಾರಿಗಳಂತೆ. ಕವಿಯ ಕಾವ್ಯವು ವಿಶ್ವದ ಆತ್ಮಕ್ಕೊಂದು ಆದರ್ಶದ ರಂಗಮಂದಿರ ಎಂದು ಸುಂದರವಾಗಿ ಹೇಳಿದ ಅಭಿಪ್ರಾಯವೂ ಉಂಟು. ಆಲೋಚನೆ, ಭಾವನೆ, ಕಲ್ಪನೆ, ಅಭಿವ್ಯಕ್ತಿ ಮತ್ತು ಸಾಹಿತ್ಯಕ್ರಿಯೆಗಳ ಅದ್ಭುತ ಸಂಗಮವೇ ಕವಿವ್ಯಕ್ತಿತ್ವ

ಬದುಕಿಗೆ ಭರವಸೆಯನ್ನು ತುಂಬುವವನೇ ಕವಿ. 'ಇರುವ ತನಕ ಭರವಸೆಯನ್ನು ತಾನಿಟ್ಟುಕೊಂಡು ಉಳಿದವರಿಗೆ ಭರವಸೆಯನ್ನು ಕೊಡುತ್ತ ಇರಬೇಕಾದದ್ದು ಕವಿಯ ಕೆಲಸ'[೪] ಕವಿಯು ಬದುಕಿನ ಸುಖ-ಶಾಂತಿ ಲಕ್ಷ್ಯವನು ಹಾಡಬೇಕು ಎಂಬುದು ಕವಿಯ ಬದ್ಧತೆ. ಕವಿಗೆ ಏಕಾಂತಬೇಕು. ಸುತ್ತಲೆಲ್ಲ ಕಾವ್ಯವಸ್ತುವಿನ ಜಾತ್ರೆಯೇ ನೆರೆದಿರುತ್ತದೆ. ಆದರೆ ಏಕಾಂತದಲ್ಲಿ ಅವುಗಳಿಗೆ ಬೌದ್ಧಿಕ ಚಿಂತನೆಯ ಕಾವ್ಯಸ್ವರೂಪ ರೂಪಗೊಳ್ಳಬೇಕು.

'ವರ್ತಮಾನದ ಸರಕಷ್ಟೇ ಸಾಕು ನಾನು ಒಬ್ಬನೇ ಕುಳಿತು ಹಿಡಿದು ಚೌಕಟ್ಟು ಹಾಕುವೆ'[೫] ಎನ್ನುತ್ತಾರೆ ಕವಿ ಜಿ.ಎಸ್. ಶಿವರುದ್ರಪ್ಪನವರು. ತಮ್ಮ ವೇದನೆ ಸಂವೇದನೆಗಳನ್ನು ಕ್ರಿಯೆ-ಪ್ರತಿಕ್ರಿಯೆಗಳನ್ನು ದಾಖಲುಮಾಡುವುದಕ್ಕೆ ಕಾವ್ಯಬರೆಯುತ್ತೇನೆ ಎನ್ನುತ್ತಾರೆ. ಕವಿಗೆ ನಿಂತನೀರಾಗುವ ಇಚ್ಛೆ ಇಲ್ಲ. ಕಾವ್ಯ ಎಲ್ಲದರ ಜತೆ ಬೆರೆಯುವುದಕ್ಕೆ, ಖುಷಿಗೆ, ನೋವಿಗೆ, ನಂದಿಸಲಾರದ ಕಿಚ್ಚಿಗೆ ರೂಪಗೊಳ್ಳುತ್ತದೆ. ಹಾಡುವದು ಅನಿವಾರ್ಯವಾಗಿದೆ ಕವಿಗೆ ಯಾಕೆಂದರೆ ಅದರಿಂದ ಅಗಾಧ ತೃಪ್ತಿ ಅವರದು. ಕವಿ ತನ್ನನ್ನು ಮರೆತು, ಪ್ರಜ್ಞೆಯ ಎಲ್ಲ ಸ್ಥಳಗಳಲ್ಲಿ ನಿರಂತರ ಪರಿಶ್ರಮ, ತಾಳ್ಮೆಯಿಂದ ತಕ್ಕ ಮುಹೂರ್ತ ರಚಿಸುವ ಕಾವ್ಯ ಉತ್ತಮವಾಗಿರುತ್ತದೆ ಎಂದು ಕವಿ ಗೋಪಾಲಕೃಷ್ಣ ಅಡಿಗರ ಅಭಿಮತ. ಅಂದರೆ ಅಸ್ಪಷ್ಟತೆಯನ್ನು ಸ್ಪಷ್ಟವಾಗಿ ಅನುಭವಿಸಿ ಅದನ್ನು ತಕ್ಕ ಶಬ್ದಗಳಲ್ಲಿ ಮೂರ್ತಿಗೊಳಿಸಿ ಆ ಮೂರ್ತಿಯಲ್ಲಿ ಅದರ ಆದರ್ಶ ರೂಪವೂ ಹೊಳೆಯುವ ಹಾಗೆ ಕವಿ ಮಾಡುತ್ತಾನೆ ಎಂದು ಅವರು ವಿಶದೀಕರಿಸಿದ್ದಾರೆ. ಷೇಕ್ಸ್‌ಪಿಯರನು-ಕವಿಯ ಕಣ್ಣು ಒಂದು ಆವೇಶದ ಮಾಧುರ್ಯದಲ್ಲಿ ಮರ್ತ್ಯದಿಂದ ಸ್ವರ್ಗದವರೆಗೆ ದಿಟ್ಟಿಸುತ್ತದೆ ಎನ್ನುತ್ತಾನೆ. ...'And as imagination bodies forth / The form of things unknown, the poet's pen / Turns them to shapes and gives to airy nothing / A local habitation and a name' ಎಂಬ ಸಾಲುಗಳು ಪ್ರಸಿದ್ಧವಾಗಿವೆ.

ದರ್ಶನವಿಲ್ಲದೆ ಉತ್ತಮ ಕಾವ್ಯವಿಲ್ಲ. ಕಾವ್ಯ-ಶರೀರದ ಎಲ್ಲ ಅಂಗಗಳು ಪುಷ್ಟವಾಗಿಯೂ ಕವಿಯ ಕಾಣ್ಕೆ ಇರದಿದ್ದರೆ ಅಂತಹ ಕಾವ್ಯ-ಕವಿ ಎತ್ತರಕ್ಕೆ ಕಾಣಿಸಿಕೊಳ್ಳುವುದಿಲ್ಲ. ಪ್ರತಿಭೆಯ ಬೆಳಕಿನ ಪುಂಜವಾಗಿರುತ್ತಾನೆ ಕವಿ. ಒಮ್ಮೊಮ್ಮೆ ಈ ಪ್ರತಿಭೆಗೆ ಪೂರ್ವ ಜನ್ಮದ ಸಂಸ್ಕಾರವಿದ್ದರಂತೂ ಹೆಚ್ಚಿನ ಕಾವ್ಯ ಶಕ್ತಿ ಆಯಾಮ. ಇದು ಆರ್ಷದೃಷ್ಟಿಯ-ಫಲವು.

**ಇದು ಘಣಾಕ್ಷರ ನ್ಯಾಯ! ಹುಳ ತಿಂದ ಪ್ರೀತಿಯದು?**
**ನನ್ನ ಮನ ಘನದ ಯಾವದೊ ತುಂಬಿ ಹಾತೊರೆದು**
**ಮುದ್ದಿಡುತ್ತಿದೆ ಮತ್ತೆ ಎದ್ದೆದ್ದು. ಹಾ! ಸದ್ದು,**
**ಇತ್ತ ಕಣ್ಣಿಗೆ ಗೊಂಬೆ, ಅತ್ತ ಗೊಂಬೆಗೆ ಕಣ್ಣು.**
**ಯಾರೆ ಕೊರೆದಿರಲಿ, ತೆರೆದಿರಲಿ ಈ ಸಾದ್ರಶ್ಯ**
**ಅದೃಷ್ಟದ ದೃಷ್ಟಿದಾನ ದ್ರಶ್ಯಕವಶ್ಯ**

**– ಸಾದೃಶ್ಯ: ನಾಕುತಂತಿ, ಪುಟ: ೨೭**

'ಈ ಕವಿ ಪ್ರತಿಭೆಗೆ 'ಕಾರಯಿತ್ರೀ' ಅಂದರೆ ಪೂರ್ವಜನ್ಮದ ಸಂಸ್ಕಾರ ಬಲವೂ ಒಳಗೊಂಡಿರಬೇಕು'[೬] ಆದರೆ ಈ ಆರ್ಷದೃಷ್ಟಿ ಪಾಶ್ಚಾತ್ಯ ಕಾವ್ಯ ಪರಂಪರೆಯಲ್ಲಿ ಸಿಗದು ಎಂಬುದು ಎಲ್ಲರಿಗೂ ತಿಳಿದ ಸತ್ಯ ಅವರಲ್ಲಿ ಅನುಭಾವ ಕಾವ್ಯವೆಂಬ ವರ್ಗವನ್ನು ಅವರು ಸ್ವೀಕರಿಸುತ್ತಾರೆ ಅದು ಕಾವ್ಯವನ್ನು ಮೀರಿದ್ದು ಎಂಬ ಅವರ ಕಲ್ಪನೆ ಒಪ್ಪತಕ್ಕ ಮಾತು. ಅದಕ್ಕೇ ಪು.ತಿ.ನ ಕವಿಗೆ 'ಮನದ ಮೊನೆಯ ಮಾಡು ಶಿವಸೂಚಿಯಂತೆ / ಮರ್ಮವನು ನುಡಿ ಲೋಕವನ್ನು ತಾ ಅರಿವಂತೆ'[೭] ಎಂದು ಹೇಳುತ್ತಾರೆ.

II

ಕವಿಗೂ ಶ್ರೀಸಾಮಾನ್ಯನಿಗೂ ಇರುವ ಅಂತರವೇನು? ಅನುಭವಗಳು ಇಬ್ಬರಿಗೂ ಸಾಮಾನ್ಯವೇ ಇರಬಹುದು. ಸೃಷ್ಟಿಯ ವಸ್ತುಗಳು, ಋತುಗಳು, ಸಮಸ್ಯೆಗಳು ಇಬ್ಬರಿಗೂ ವಿದಿತವೆ. ಇಷ್ಟೊಂದು ಪರಿಚಿತವಸ್ತು ಅನುಭವದ ಕ್ಷಣಗಳಿದ್ದರೂ ಸಂವೇದನೆ, ಅನುಭೂತಿಗಳಲ್ಲಿ ಮಹದಂತರವಿರುತ್ತದೆ. ಯಾವುದೇ ಅನುಭವವನ್ನು ಆಳ ಸ್ತರಗಳಲ್ಲಿ ಕಲಾತ್ಮಕವಾಗಿ ಅಭಿವ್ಯಕ್ತಿಪಡಿಸುವದರಲ್ಲಿ ಕವಿಯ ಮತ್ತು ಸಾಮಾನ್ಯನ ಅಂತರವು ಗೋಚರಕ್ಕೆ ಲಭ್ಯ. ಅಭಿವ್ಯಕ್ತಿಯ ಹಂಬಲವಿದ್ದರೆ ಸಾಲದು ಅದು ಅದಮ್ಯವಾಗಿರಬೇಕು. ಅನುಭವಕ್ಕೆ ರೂಪಕೊಡಲು ಯತ್ನಿಸಿದಾಗ ಕವನ ಹುಟ್ಟುತ್ತದೆ. ಸೂಕ್ತವಾದ, ಸೂಕ್ಷ್ಮವಾದ, ಶಬ್ದ ಪ್ರಯೋಗ ಅವಶ್ಯಕ. ಕವಿಯ ವೈಶಿಷ್ಟ್ಯವೆಂದರೆ ಶಬ್ದಗಳನ್ನು, ಪದಗಳನ್ನು ಬಳಸುವ ಕಲಾಕುಶಲತೆ, ಸೂಕ್ಷ್ಮ ಒಳನೋಟ. ಕವಿಹೃದಯ ಹೊಂದಿರಬೇಕು. ಸಂತುಷ್ಟ ಇಚ್ಛಾಶಕ್ತಿಯನ್ನು ಹೊಂದಿರಬೇಕು. ಅಂಥವನು ತನ್ನ ವ್ಯಕ್ತಿತ್ವದ ಸಾರಸತ್ವವನ್ನೇ ನೀಡುತ್ತಾನೆ ಎಂದು ಇಂಗ್ಲಿಷ್ ಕಾದಂಬರಿಗಾರ್ತಿ ವ್ಹರ್ಜಿನಿಯಾ ಊಲ್ಫಳ ಅಭಿಮತ. ಅಂಥವನಲ್ಲಿ ಚಿಂತನಶೀಲತೆ ಅತ್ಯಂತ ಪ್ರಗಲ್ಭವಾಗಿರುತ್ತದೆ. ಇಂಗ್ಲಿಷ್ ಕಾವ್ಯದ ಒಂದೆರಡು ಉದಾಹರಣೆಗಳು:

೧. They also serve who only stand and wait, (On His Blindness – John Milton).

೨. In vacant or pensive mood / they flash upon that inward eye / which is the bliss of solitude (Daffodils : Wordsworth)

**ಕನ್ನಡ ಕಾವ್ಯದ ಕೆಲ ಉದಾಹರಣೆಗಳು :**

೧. ಇದು ಬರೀ ಬೆಳಗಲ್ಲೊ ಅಣ್ಣಾ (ಬೆಳಗು : ಅಂಬಿಕಾತನಯದತ್ತ).

೨. ಭವದ ಬೆನ್ನಲಿ ಅನುಭವ ಬಂತು, ಅನುಭಾವ ಭಾವದ ತಳಿಯಲ್ಲಿ ಮೈದೋರಿತು (ಬಾಲ್ಯಕಾಂಡ: ಅಂಬಿಕಾತನಯದತ್ತ).

೩. ನಿಜವ ಕಂಡವರಿಲ್ಲ / ನಿಜ ಕಾಣುವಂತಿಲ್ಲ / ನಿಜವೇನು ಮಳಲಹುಡಿಗಿಂತ ಕೀಳೇ? (ಬಾಲ್ಯಕಾಂಡ: ಅಂಬಿಕಾತನಯದತ್ತ).

೪. ನಮ್ಮ ಆಶೆ ಈ ಆಶೆ ಸಿದ್ಧ ಸರೋವರ ಒಣಗಿ ಹೋಯಿತಲ್ಲ. ಅಧೋಲೋಕದಲ್ಲಿ ಹುದುಗಿ ಹೋದವೋ / ನಮ್ಮ ಹಾಡು ಎಲ್ಲ (ಅಕ್ಕಕ್ಕು ಹಾಡುಗಳೇ: ಚಂದ್ರಶೇಖರ ಕಂಬಾರ).

III

ಕಾವ್ಯವೆಂದರೇನು? ಅದರ ವ್ಯಾಖ್ಯೆ ಉತ್ಪತ್ತಿಯಿಂದ ಪ್ರಸಕ್ತಕಾಲದವರೆಗೆ ಅನಂತತೆಯಲ್ಲಿ ಬೆರೆತಿದೆ. ಕಾವ್ಯವು ಭಾಷಾಮಾಧ್ಯಮದಲ್ಲಿ ನಡೆಯುವ ಒಂದು ಭಾವನಾತ್ಮಕ ಕ್ರಿಯೆ. ಕವಿ ಶಬ್ದದ ಉತ್ಪತ್ತಿ ಕವ್ರ ಧಾತುವಿನಿಂದ ಅಂದರೆ 'ವರ್ಣಿಸು' ಎಂದರ್ಥ. ಹಾಗೆಂದ ತಕ್ಷಣ ಶಬ್ದಗಳು ಬೇಕೇಬೇಕು. ಕಲಾವಿದನಿಗೆ ಕುಂಚ, ವರ್ಣಗಳ ಅವಶ್ಯಕತೆಯಿದ್ದಂತೆ ಕವಿಗೆ ಶಬ್ದಗಳೇ ಸರ್ವಸ್ವ, ಕಾವ್ಯ ಮಾತಿನ, ಉಲಿಯ ಒಂದು ಕ್ರಿಯೆ. ಕಾವ್ಯ ನುಡಿಸುತ್ತದೆ. ಕೇಳುತ್ತದೆ ಸತ್ಯ. ಹಿಡಿತಕ್ಕೆ ಸಿಗಲಾರದ ಚಿಂತನೆ ಹಿಡಿದಿಡುತ್ತವೆ ಶಬ್ದಗಳು.

ಕಾವ್ಯವೆಂದರೆ ಲೋಕದಲ್ಲಿ ಚದುರಿ ಬಿದ್ದಿರುವ ಸಾವಿರಾರು ಗೂಢ ಸಂಜ್ಞೆಗಳನ್ನು ಶಬ್ದವನ್ನಾಗಿಸುವ ಅಗೋಚರದ ಭಾಷೆಯನ್ನು ಗ್ರಹಿಸುವ ಕಲೆಯದು. ಅದರ ಶಬ್ದ-ನುಡಿಗಟ್ಟುಗಳ ಅರ್ಥೈಸುವಿಕೆಯಿಂದ ಕಾವ್ಯದಲ್ಲಿ ಕವಿಯ ಮಾಂತ್ರಿಕಮೋಡಿ ಇರುತ್ತದೆ. ಅವನು ಹೃದಯ ಮತ್ತು ಕಾವ್ಯ ಶಕ್ತಿಗಳೆರಡನ್ನು ಕೇಂದ್ರೀಕರಿಸುತ್ತಾನೆ. ಹೀಗಾಗಿ ಕಾವ್ಯವು ಕಲ್ಪನೆಯ ಕೂಸಾಗಿ, ಉದಾತ್ತ ಭಾವನೆಗಳಾಗಿ, ಅರಳುವ ಉದಾತ್ತಮಾಧ್ಯಮ. ಅದು ಜೀವನದಗೊಂದಲಗಳಿಂದ ರಕ್ಷಿಸುವ ಪರಿಪೂರ್ಣಸಾಧನೆಯೆಂದು ಪರಿಗಣಿಸಬಹುದು. ಮನದ ಅಂತರಾಳದ ಘರ್ಷಣೆಗಳೇ ಕಾವ್ಯವಸ್ತುಗಳು ಎನ್ನುತ್ತಾನೆ ಕವಿ ಯೇಟ್ಸ್.

ಪಾಶ್ಚಾತ್ಯರಲ್ಲಿ ಕಾವ್ಯದ ಕಲ್ಪನೆ, ವ್ಯಾಖ್ಯೆ, ಚಿಂತನೆ ಪ್ಲೇಟೋನಿಂದ ಎಲಿಯಟ್‌ನವರೆಗೆ ಸಾಗಿ ಬಂದಿದೆ. Poetry ಪದವು Poesis ದಿಂದ ರೂಪ ತಾಳಿದೆ. ಅದರ ಅರ್ಥ ನಿರ್ಮಿಸುವುದು, ಮಾಡುವದು ರಚಿಸುವದು ಇತ್ಯಾದಿ. ಕಾವ್ಯ ಒಂದು ನಿರ್ಮಿತಿಯ ಕಲೆ. ಪಾಶ್ಚಾತ್ಯ ಚಿಂತನೆಯನ್ನು ಕ್ರೋಢೀಕರಿಸಿ ಹೇಳುವುದಾದರೆ ಕಾವ್ಯದಾಶಯದಲ್ಲಿ ಆದರ್ಶವನ್ನು ಅಪೇಕ್ಷಿಸುತ್ತಾನೆ ಅರಿಸ್ಟಾಟಲ್. ಜೀವನಮುಖಿಯಾಗಿ ಇರಬೇಕೆಂದು ನಿರೀಕ್ಷಿಸುತ್ತಾನೆ. ವಿಮರ್ಶಕ ಸಿಡ್ನಿಯು ಅವನಂತೆ ಕಾವ್ಯ ಅನುರಣನಾತ್ಮಕ ಕಲೆ ಎಂದು ಹೇಳಿ ಮಾತನಾಡುವ ಚಿತ್ರ ಎಂದು ಕರೆಯುತ್ತಾನೆ. ಶಿಕ್ಷಣ ಮತ್ತು ಸಂತಸ ಕೊಡುವ ಮೂಲ ಎನ್ನುತ್ತಾನೆ ಫ್ರಾನ್ಸಿಸ್ ಬೇಕನ್. ಕಾವ್ಯವು ರಚನಾತ್ಮಕ ಅಭಿವ್ಯಕ್ತಿ, ಕಲಾಕ್ರಿಯೆ ಎಂದು ಧ್ವನಿಗೂಡಿಸುತ್ತಾನೆ. ಕಲ್ಪನಾಶಕ್ತಿಯಿಂದ ವಿವೇಚನೆಯಿಟ್ಟುಕೊಂಡು ಆನಂದ ಮತ್ತು ಸೌಂದರ್ಯ ನಿರ್ಮಿಸುವದೇ ಕಾವ್ಯ ಎಂದು ಎನ್ನುತ್ತಾನೆ ಸ್ಯಾಮುಯಲ್ ಜಾನ್ಸನ್. ಅತ್ಯುತ್ತಮ ಕ್ರಮದಲ್ಲಿ ಅತ್ಯುತ್ತಮ ಶಬ್ದಗಳು ಅನ್ನುವುದೇ ಕೊಲರಿಜ್‌ನ ಅಭಿಮತ. ಸತ್ಯ-ಸೌಂದರ್ಯಗಳ ಪ್ರತಿಪಾದನೆ, ಜೀವನ ವಿಮರ್ಶೆ ಕಾವ್ಯವೆಂದಾಯಿತು. ರಿಚರ್ಡ್ಸ್‌ನಿಗೆ ಕಾವ್ಯವು ಭಾವನೆಗಳ ಸಂಗೀತವಾದರೆ ಎಲಿಯಟ್‌ನಿಗೆ ಭಾವನೆ ಮತ್ತು ಪ್ರತಿಮೆಗಳಿಂದ ಕೂಡಿದ ರಚನೆ. ರೊಮ್ಯಾಂಟಿಕ್ ಕವಿಗಳನ್ನು ಮರೆಯುವಂತಿಲ್ಲ. ವರ್ಡ್ಸ್‌ವರ್ಥ್ ಕವಿಗೆ ಕಾವ್ಯ ಪ್ರಶಾಂತಕಾಲದಲ್ಲಿ ಸ್ಮರಿಸಿಕೊಂಡ ಭಾವಲಹರಿಯಾದರೆ ಷೆಲ್ಲಿಗೆ ಅದು ಕವಿಯ ಕಲ್ಪನಾಶಕ್ತಿಯ ಅಭಿವ್ಯಕ್ತಿ. ಕೀಟ್ಸನ ಕಲ್ಪನೆಯಲ್ಲಿ ಅದು ಗಿಡಕ್ಕೆ ಹೂವ ಬಿಟ್ಟಷ್ಟು ಸಹಜ ಕ್ರಿಯೆಯಾಗಿರಬೇಕು ಎಂಬ ಆಶಯ.

ಕೆಲ ಕನ್ನಡ ಕವಿಗಳ ಚಿಂತನೆ ಉದಾಹರಣೆಗಾಗಿ; ಕವಿತೆ ಏನೇಲ್ಲವಲ್ಲ ಎಂದು ಹೇಳುತ್ತ, ಅದು ಋತುಗತಿಯಲ್ಲ, ಶೈಲಮತಿಯಲ್ಲ, ಶಬ್ದರತಿಯಲ್ಲ ಎಂದು ಕೆ.ಎಸ್. ನರಸಿಂಹಸ್ವಾಮಿ ವ್ಯಕ್ತಪಡಿಸಿ, 'ನಿಮ್ಮುಸಿರು ನಮ್ಮ ಕವಿತೆ' ಎಂಬ ಅರ್ಥಪೂರ್ಣ ವ್ಯಾಖ್ಯೆ ನೀಡುತ್ತಾರೆ. (ಮಲ್ಲಿಗೆಯ ಮಾಲೆ: ಪು ೨೬೫) ಕಾವ್ಯವು ಒಂದು ಆತ್ಮಶೋಧ ಎಂದು ಹಲವರ ಮತ. ನವ್ಯದವರಲ್ಲಿಯಂತೂ ಅದು ವ್ಯಕ್ತಿತ್ವದ, ಮಾನವನ ಮೂಲಭೂತ ಪ್ರವೃತ್ತಿಗಳ ಅನ್ವೇಷಣೆಯ ಮಾರ್ಗವಾಗುತ್ತದೆ. ಜಿ.ಎಸ್. ಶಿವರುದ್ರಪ್ಪನವರೂ ಆತ್ಮಾನ್ವೇಷಣೆ ಅಂಶವನ್ನು ಒಪ್ಪುತ್ತಾರೆ. ಅದು ಅಶರೀರದ, ಶಬ್ದಾರ್ಥಸಂಪುಟದೊಳಗೆ ಹೊಳೆವ ಮುತ್ತಾಗಿ ಮಿನುಗುವ ಭಾವ. ಕವನಗಳೆಂದರೆ 'ಗೂಡಿನಿಂದಾಚೆ ನೀಲಿಮೆಯಲಿ ರೆಕ್ಕೆ ಬಡಿಯುತ್ತ ಹಕ್ಕಿಗಳ ತರಹ. ಅಗಾಧ ಕತ್ತಲೆಯಲ್ಲಿ ತಾರೆಗಳ ಜೊತೆ ಕನಸು ಕಾಣುತ್ತಾ'[೬] ಎಂದು ಅಭಿವ್ಯಕ್ತಿಸುತ್ತಾರೆ. ಕವಿಯ ಚತುರತೆಯೆಂದರೆ ಅವನ ಉಲಿವಸಂಪತ್ತು. ಅದು ಅವನಿಂದ ಮಥಿಸಿ ಹೊರಗೆ ವಾಣಿಯಾಗಿ ಬರಬೇಕು. 'ಗವಿ ಒಳಗ ಕವಿ / ಅವನ ಒಳಗ ಕಿವಿ / ಅದನ್ನು ತಿವಿ / ಹುಟ್ಟಿತದ ವಿದ್ಯುಚ್ಛವಿ / ಭವಿ – ಆಗು – ಅನುಭಾವಿ ಅಂದತ್ತಾ' (ಅಂಬಿಕಾತನಯದತ್ತ: ಚತುರೋಕ್ತಿ, ಪು ೪೯) ಕಾವ್ಯವು ಸೃಷ್ಟಿಕರ್ಮದ ಆವಿರ್ಭಾವ. ಕಾವ್ಯದಲ್ಲಿ ಹೊಸತನ, ವಸ್ತು ಪರಿಪಾಕ, ವಿಶಿಷ್ಟ ಧೋರಣೆ, ಆದರ್ಶವಿಶೇಷದ ಆಕರ್ಷಣೆ ಅಡಿಗರ ಆಶಯ. ಅವರೂ ಪರಂಪರೆಯನ್ನು ಗೌರವಿಸುತ್ತಾರೆ. ಆದರೆ ಸಂಪ್ರದಾಯ ಬದ್ಧವಾಗಬಾರದೆನ್ನುತ್ತಾರೆ. 'ಮುಖ್ಯವಾದದ್ದು ಅದು ಸಹಜವೂ ಧ್ವನಿಪೂರ್ಣವಾದದ್ದೂ ಸರ್ವಾಂಗಸುಂದರವೂ ಆದ ಶಿಲ್ಪ ಎನ್ನಿಸಬೇಕು'[೭] ಎನ್ನುತ್ತಾರೆ. ಅನುಕರಣೆಯ ಗ್ರಹಣದಿಂದ ಸಂಪೂರ್ಣ ಬಿಡುಗಡೆ ಅವರ ಹಂಬಲ.

IV

ಕಾವ್ಯ-ಸೃಷ್ಟಿ ಪ್ರಕ್ರಿಯೆಯ ಬಗೆಗೆ ಕೊಂಚ ನೋಟಹರಿಸೋಣ. ಇದು ಅಭ್ಯಾಸಯೋಗ್ಯ. ಕವಿಯಲ್ಲಿ ಅಂತಃಪ್ರೇರಣೆ ಸ್ಫುರಿಸಿ ಕಾವ್ಯವು ಉದ್ಭವವಾಗುತ್ತದೆ ಎಂದು ಸಾಮಾನ್ಯ ಅಭಿಪ್ರಾಯವಿದ್ದರೂ ಇದು ವಾದ-ವಿವಾದಗಳಿಗೆ ಹೊರತಾಗಿಲ್ಲ. ಪೌರ್ವಾತ್ಯ, ಪಾಶ್ಚಾತ್ಯ ದೃಷ್ಟಿಗಳಲ್ಲಿ ಭಿನ್ನತೆಯಿದೆ. ಅಭಿಜಾತ ಕೃತಿಗಳ ಸಂಪದದ ಕಾನಿನಲ್ಲಿ ಕವಿ ಸುತ್ತಿರುತ್ತಾನೆ ಎಂಬುದು ಅಲ್ಲಗಳೆಯದ ಮಾತು. ಅದರಿಂದ ಶೈಲಿ-ಕಾವ್ಯ ಸಾರಗಳ ಸೊಗಸಾದ ಸಮತೂಕದ ಅರಿವು ಕವಿಯ ಪ್ರಜ್ಞೆಯನ್ನು ಆವರಿಸಿರುತ್ತದೆ. ಲೇಖನಿ-ಕುಂಚದಿಂದ ಶಬ್ದಗಳ ಸ್ಫುರಣೆ ರೂಪಗೊಳ್ಳುತ್ತ ಹೋಗುತ್ತದೆ. ಕವಿ ಚೇತನ ಜಾಗೃತಿಯಾಗುವುದು. ಎಂಟು ಸೀಮೆಗಳಿಗೂ ಧಾವಿಸಬಹುದು. ಕವನಕಟ್ಟುವ ಸಂದರ್ಭದಲ್ಲಿ ಸಂಭವಿಸುವದನ್ನು ನಿಲ್ಲಿಸಲಾಗದು. ಅದು ಇದ್ದಲಿನ ಗುಪ್ತಕೆಂಡದ ತರಹ. ಅಬ್ಬರದಿಂದ ಪ್ರಜ್ವಲಿಸುವ ಸಾಧ್ಯತೆ ಅಲ್ಲಗಳೆಯುವಂತಿಲ್ಲ.

ಅರುಣೋದಯದ ತೆರದಿ ಕಲ್ಪನೆಯ ಪ್ರತಿಮೆಗಳು ಏಕೀಭವಿಸುವವು. ನವೀನ ಪ್ರತಿಮೆಗಳು ರೂಪಗೊಳ್ಳುವವು. ಕೆಲವುಸಲ ಪದಗಳು ನಿರೋಧಿಸುವವು. ಆದರೆ ಕವಿ ಶುದ್ಧ ಅಂತಃಕರಣ ಮತ್ತು ನೈಜಶಕ್ತಿಯಿಂದ ಅವುಗಳನ್ನು ನಿಯಂತ್ರಿಸುವನು. ಎರಡು-ಮೂರು ತಲೆಮಾರು ನಿರ್ಲಕ್ಷಿಸಲ್ಪಟ್ಟ ಶಬ್ದಪುಂಜಗಳು ಹೊಸಜನ್ಮ ಪಡೆಯುವ ಸಾಧ್ಯತೆಯುಂಟು. ಅದುವರೆಗೆ ಅರಿಯದ ಪ್ರಾಸಗಳೂ ರೂಪ ಸ್ಪರ್ಶಿಸುವ ಸಾಧ್ಯತೆಯೂ ಉಂಟು. ಹೀಗೆ ಶುದ್ಧ ಚಿಂತನಾವಸ್ಥೆಗೆ ಪಕ್ಕಾದ ಕವಿ ಕಾವ್ಯರಚನಾ ಕಾರ್ಯಕ್ಕಿಳಿಯುವನು. ಪ್ರಾರಂಭವಾದ ಪ್ರಕ್ರಿಯೆ ವಿಷಯವಲಯ ಮತ್ತು ಪದಗಳ ಶೋಧನೆ ನಡೆಸುವನು. ಸಮಗ್ರ ಕ್ರಮ-ಬದ್ಧತೆಯ ಪರಿಶೋಧನೆಯ ಕಾಳಜಿಯೂ ಜಾಗೃತವಾಗಿರುತ್ತದೆ. ಕವಿ ಪದಗಳ ರೂಪಾಂತರ ಮುಕ್ತಗೊಳಿಸುವನು. ಪ್ರತಿಮೆಗಳ ಹೊಸಹೊಸ ರಾಗಗಳ ಆಲಾಪ ಸಾಧ್ಯ. ಇದು ಟೊಂಗೆಗಳಿಗೆ ಎಲೆಗಳು ಚಿಗುರೊಡೆಯುವ ಸ್ವಾಭಾವಿಕ ಕ್ರಿಯೆ. ಇದನ್ನೇ ಕೀಟ್ಸ್ ಎತ್ತಿ ಹೇಳಿದ್ದನು. ಕೆಲಪದಗಳು ಸಮರಸವಾಗಿ ಹೊಂದಿಕೊಳ್ಳುವವು.

ಪ್ರಶಾಂತತೆಯಲ್ಲಿ ಅಪ್ಪಟ ಶಬ್ದಗಳನ್ನು ಪಡೆಯುವನು. ಕಾಂಡ ಮರ ಎತ್ತರಿಸುವ ತೆರದಿ ಸಾರಪೂರ್ಣ ಅಂತಃಸತ್ವ ತೆರೆದು ಭಾಷೆ, ಟೊಂಗೆ, ಎಲೆ, ಫಲಗಳಾಗಿ ರೂಪಗೊಳ್ಳುವುದು. ಶಬ್ದ-ತಿರುಳು ಸಮರಸವಾಗಿ ಕಾವ್ಯ-ಕ್ರಿಯೆ ನಡೆಯುವದು.

ಆಗಲೇ ನೋಡಿದಂತೆ ಕವಿ ರಿಕ್ತತೆಯಲಿ ನವೀನಜೀವನ ರೂಪಿಸುವನು. ಕಾಲ ಅಂತರವನ್ನು ಬಂಧಿಸಿ ತನ್ನ ಶುದ್ಧಚೈತನ್ಯದಿಂದ ಧಾರೆಯನ್ನೆ ಹರಿಸುವನು. ಶಬ್ದಗಳಿಂದ ಶಬ್ದಗಳ ಜನನ. ಅದುವೆ ಆನಂದ ಸ್ಫುರಣೆ. ಭಾಷಾ-ನಿಯಂತ್ರಣ ಕಾವ್ಯಕೌಶಲದ ಕಡೆಗೆ ದಿಟ್ಟಿಸುವದು. ಕಾವ್ಯ ಸೃಷ್ಟಿಯ ಕಡೆಗೆ ಪಯಣಿಸುವದು. ಈ ಕಾವ್ಯಕೌಶಲವು ಪ್ರಾಚೀನ ಕಾಲದಿಂದ ಶಬ್ದಗಳೆಂಬ ವಾಹಕನಾಳಗಳಿಂದಲೇ ಸಾಗಿಬಂದ ಸಂಪತ್ತು ಎಂದು ಈ ಮೊದಲೇ ಪ್ರತಿಪಾದಿಸಲಾಗಿದೆ.

ಕಾವ್ಯವನ್ನು ವರ್ಣಿಸಿದ ಹಲವು ಬಗೆಗಳಲ್ಲಿ ಅದು ಐಂದ್ರಿಕ ಭಾವನೆಗಳ ಒಂದು ಬೆಳಕಿನ ಬಲೆ, ಪ್ರಾಸಬದ್ಧವಾದ ಒಂದು ಪ್ರಬಂಧ, ನಿಖರ ಮತ್ತು ಏಕರೂಪಿಯಾದ ಒಂದು ಮಂಡನೆ ಎಂದೆಲ್ಲ ಬಣ್ಣಿಸಲಾಗಿದೆ. ಕಾವ್ಯಗಳಿಗೆ ಹಲವು ರೂಪಗಳ ಭಾಗ್ಯ. ಅವು ಮೃದುತ್ವ, ಅಂತರಾರ್ಥ, ಚಿಂತನೆ ಮತ್ತು ಶಕ್ತಿಯುತ ತರ್ಕದ ಸೊಬಗಿನ ಶೈಲಿಗಳಿಂದ ಕೂಡಿರುವವು.

ಕವಿಗೆ ಹೊಸ ರಚನೆ ಹೇಗೆ ಸಾಧ್ಯವಾಗುತ್ತದೆ? ವಿಚಾರ, ಭಾವನೆ ಮತ್ತು ಶಬ್ದಗಳು ರೇಷ್ಮೆ ವಸ್ತ್ರದಂತೆ ಸುಂದರ ಮಿಶ್ರಣ ಮತ್ತು ಚಿತ್ತಾರಗಳೊಡನೆ ಕಂಗೊಳಿಸಬೇಕಾಗುವದು. ಭಾವಶುದ್ಧಿಯೇ ಸ್ವೋಪಜ್ಞತೆಯ ಆತ್ಮ. ಮೂಲಭೂತ ಕ್ರಮಬದ್ಧತೆಯ ಮತ್ತು ಪರಿವರ್ತನೆಯ ನಿಯಮಗಳು ಕವಿಗೆ ಕರತಲಾಮಲಕವಾಗಿದ್ದರೆ ಶುದ್ಧಕಾವ್ಯ ನಿರ್ಮಿತಿ ಆಗುವದರಲ್ಲಿ ಸಂದೇಹವಿಲ್ಲ. ಒಮ್ಮೊಮ್ಮೆ ಕವನ ಚೆನ್ನಾಗಿ ಅರಳುವ ಮೊದಲೇ ಮುಕ್ತಾಯವಾಗಿದ್ದರೆ, ಅಂದರೆ ತೀರ ಚಿಕ್ಕದಾಗಿದ್ದರೆ, ಒಂದು ತರಹದ ಏಕಾಂತ ಉಂಟಾಗಿ ಹಿನ್ನಡೆಯಾಗುವದು ಈಗ ಮಿನಿ ಕವನಗಳು, ಹನಿಗವನಗಳು ಉದಯಿಸಿವೆ. ಇದೂ ಆಧುನಿಕ ಕಾಲದ ಕಾವ್ಯಕಲ್ಪನೆಯ ಅಂಗ.

ಕಾವ್ಯ ಅತಿರೇಕಗಳಿಂದ ಮುಕ್ತವಾಗಿರಬೇಕು. ಸದಭಿರುಚಿಯ ರಾಯಭಾರಿಯಾದ ಅದು ಕೊಳಲ ನಿನಾದದ ಮಾಧುರ್ಯತೆಯನ್ನು ಸಾರುತ್ತಿರಬೇಕು. ಔಚಿತ್ಯಪೂರ್ಣವೆನಿಸಿ ಸಂವೇದಿಸಿದಾಗ ಹೊರಹೊಮ್ಮುವದೆ ನೈಜಕಾವ್ಯ. ಸೂಕ್ಷ್ಮ ವ್ಯತ್ಯಾಸಗಳೆನಿಸಿದಾಗ ಕವಿ ಬದಲಾಯಿಸಲು ಹಿಂದೆ-ಮುಂದೆ ನೋಡುವದಿಲ್ಲ. ಪರಿಷ್ಕರಣಬೇಕು ನಿಜ. ಆದರೆ ಅಪರಿಷ್ಕೃತ ಭಾಷೆ ಒಮ್ಮೊಮ್ಮೆ ಚತುರವಿಚಾರ ತಿಳಿಸುವ ಸಾಧ್ಯತೆಯುಂಟು. ಹಲವು ಬಾರಿ ಒಂದೇ ಮಿಂಚಿನ ಕ್ಷಣದಲ್ಲಿಯೂ ಸಮಗ್ರತೆ ಸಾಧಿಸಬಹುದು. ಕಾವ್ಯಕಲೆ ಒಮ್ಮೊಮ್ಮೆ ಕೇವಲ ಉತ್ಕೃಷ್ಟಶಬ್ದಗಳಿಂದ ವಶಮಾಡಿಕೊಳ್ಳುವದು ಕವಿಗೆ ಕಷ್ಟವಾಗಬಹುದು. ಶಬ್ದಗಳೆಂದರೆ ಜೀವನದ ನೆರಳುಗಳು. ಅರ್ಧಮಾತ್ರ ವ್ಯಕ್ತ ಎಂದು ಪ್ರಾಜ್ಞರು ವ್ಯಕ್ತಹೇಳಿದ್ದರಲ್ಲಿ ಗೂಡಾರ್ಥವಿದೆ. ನೈಜಕಾವ್ಯ ಕೌಶಲ್ಯದ ಕುಂಭ ಅಥವಾ ಕಳಶವಿದ್ದಂತೆ. ಕವಿಗೆ ತನ್ನ ಶಕ್ತಿಮಿತಿಯ ಅರಿವು ಇದ್ದೇ ಇರುವದು. ಎಲ್ಲ ಗ್ರಹಿಕೆ ಅಸಾಧ್ಯ ಎಂಬ ಪ್ರಜ್ಞೆ ಇದೆ. ತಾನು ಸಾಧಿಸಿದ ಬಗೆಗೆ ಪೂರ್ಣತೃಪ್ತಿ ಇರದು. ತೇಪೆಮಾಡಿರುವ ಶಂಕೆ. ಅದು ನಿಜವಾದ ಕಲಾವಿದ ಕವಿಯ ಲಕ್ಷಣವು. ಪರಿಪೂರ್ಣತೆಯು ಸದಾ ನಿಜವಾದ ಕಲಾಕಾರನ ಕನಸು, ಗುರಿಯು.

ಉತ್ತಮ ಕವನವೆಂದರೆ ಯಾವದು? ಹೇಳುವದು ಕಷ್ಟ ಅನುಭವಿಸಬಹುದು. ಒಳ್ಳೆಯ ಕವನ ವಿಚಾರ-ನಾದಗಳ ಸೊಗಸಾದ ಸಮ್ಮಿಳನ. ಒಳ್ಳೆಯ ಕವನಕ್ಕೆ ಜೀವ ಇರಬೇಕು. ಅದರಲ್ಲಿ ಚೈತನ್ಯ ತುಳುಕಾಡುತ್ತಿರಬೇಕು. ಕವನ ಕವಿಯಲ್ಲಿ ಸಂಭವಿಸುತ್ತದೆ. ಅದು ಅವನ ನಿಯಂತ್ರಣದಲ್ಲಿಲ್ಲ. ಅಡಿಗರು 'ಕವನವೊಂದಕ್ಕೆ ಮನುಷ್ಯರಿಗಿರುವಂತೆಯೇ ಪ್ರಮಾಣಬದ್ಧ ಶರೀರಬೇಕು. ಒಳ್ಳೆಯ ಕವನ ಒಳ್ಳೆಯ ಕವನವಾಗಿರುತ್ತದೆ. ಅದು ಓದಿದಾಗ ಅದು ಒಳ್ಳೆಯ ಕವನ ಎಂದು ನಮಗೆನಿಸುತ್ತದೆ' ಎಂದು ಅಭಿಪ್ರಾಯಪಟ್ಟಿದ್ದಾರೆ. ಬೌದ್ಧಿಕ ಮತ್ತು ಭಾವನೆಯ ಒತ್ತಡ ಸಂಧಿಸಿ ಬೆರೆತಾಗ ಒಳ್ಳೆಯ ಕವನ ಹುಟ್ಟುತ್ತದೆ ಒಳ್ಳೆಯ ಕವನ ಎಷ್ಟು ಹೇಳಬೇಕೋ ಅಷ್ಟನ್ನೆ ಹೇಳುತ್ತದೆ. ಕೆಟ್ಟಕವನಕ್ಕೆ ನೀವು ಏನನ್ನಾದರೂ ಸೇರಿಸಬಹುದು. ಅದರಿಂದ ತೆಗೆದುಹಾಕಬಹುದು. ಕಾವ್ಯಸೃಷ್ಟಿಯ ಅನುಭವ ಬೇರೆಬೇರೆಯಾಗಿದ್ದರೂ ಅದೊಂದು ಮಂತ್ರದಂತೆ. ಕಾವ್ಯ ವ್ಯಕ್ತಿತ್ವ ಸ್ಪಂದಿಸಬೇಕು. ಶಬ್ದಕ್ಕೆ ನಾದ, ದರ್ಶನ ಉಂಟು. ಇವೆಲ್ಲ ಅಂಶಗಳನ್ನಂತೂ ಸರ್ವರೂ ಒಪ್ಪಬೇಕಾದ ಮಾತು. ಆಧುನಿಕ ಕಾವ್ಯದಲ್ಲಿಯೂ ಕಾವ್ಯದ ಮೂಲಭೂತ ಆಶಯಗಳನ್ನು, ಉದ್ದೇಶಗಳನ್ನು ಬಿಟ್ಟು ಹೋಗುವದಾಗುವದಿಲ್ಲ. ಬಹುಶಃ ಹೊಸ ಕಾವ್ಯ-ಶಬ್ದ ಪ್ರಯೋಗ, ತಂತ್ರ, ಶೈಲಿ, ವಸ್ತುವಿನಲ್ಲಿ ವೈವಿಧ್ಯತೆ ಕಾಲಕ್ಕೆ ತಕ್ಕಂತೆ ಕಾಣಬಹುದು.

## V

ಕಾವ್ಯದ ಅವಶ್ಯಕ ಅಂಗ 'ಶಬ್ದಗಳು' ಎಂದ ಮೇಲೆ ಈ ಶಬ್ದವೆಂದರೇನು? ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸೋಣ. ಕವಿ ಬೇಂದ್ರೆಯವರಂತೆ ಶಬ್ದ ಬ್ರಹ್ಮ. ಈ ಜಗತ್ತು ಶಬ್ದದಲ್ಲಿ ಹುಟ್ಟಿ ಶಬ್ದದಲ್ಲಿ ಅಳಿಯುತ್ತದೆ.

> ಅಲ್ಲಾ ಇಲ್ಲಾ ಎಂದಿತ್ತು
> ಬ್ರಹ್ಮಕೆ ಇಂದಂತೆನಿಸಿತ್ತು
> ಶಬ್ದ ಬ್ರಹ್ಮವೆನಿಸಿತ್ತು (ಶಬ್ದ: ಪು. ೨೫೮)

'ಶಬ್ದಬ್ರಹ್ಮದ ಗುಮ್ಮಟದಲ್ಲಿ ಹಗಲೂ ಇರುಳೂ ಛಿಳಿ-ಛಿಟಿ ಬೆಂಕಿ' ಎಂದು 'ತುತ್ತಿನ ಚೀಲ'ದಲ್ಲಿ ನುಡಿಯುತ್ತಾರೆ (ಚೈತ್ಯಾಲಯ). ಮಾತೇ ಜ್ಯೋತಿರ್ಲಿಂಗ. ಬ್ರಹ್ಮನಿಂದ ಮಾಯೆ ಮಂಗಲವಾದ ಶಬ್ದಬ್ರಹ್ಮದ ಜನನ. ಬಿಂಬ-ಪ್ರತಿಬಿಂಬದ ಅರಿವು ಈ ಶಬ್ದ ಬ್ರಹ್ಮಕ್ಕೆ ಉಗಮ. ಇದು ಸೃಷ್ಟಿ

ಪೂರ್ವ ಶಬ್ದಜನನದ ಕಲ್ಪನೆ. ಆದರೆ ಕಾಲಗತಿಸಿದಂತೆ ಕವಿ-ಶಬ್ದ ಜನನವಾಯಿತು. 'ಬರುವ ಸೃಷ್ಟಿಯ ಬೇಳೆಯೊಡದಿದೆ / ಶಬ್ದವಾಗಿದೆ / ಶಬ್ದ ಕೇಳಣ್ಣಾ' ಎಂದಿದ್ದಾರೆ ಅದೇ ಮಹಾಕವಿ. ಶೂನ್ಯದಲಿ ಹುಟ್ಟುಗಟ್ಟಿತು 'ಹದುಳದೊಂದು ಹುಣ್ಣಿಮೆ?' ('ಅಲ್ಲಮನಿಗೆ' ಪದ್ಯದಲ್ಲಿ) ಎಂಬ ಸಾಲು ಗಮನಿಸಬೇಕು. ಈ 'ಹದುಳ' ಪಡೆದ ಕವಿ ನೂತನ ಬ್ರಹ್ಮನೇ ಅಲ್ಲವೇ?

ಮೂಲ ಬೇರಿಗೆ ಹೋದರೆ 'Logos' ಎಂದರೆ ಗ್ರೀಕದಲ್ಲಿ ವಿಶಿಷ್ಟ ಅರ್ಥ ಶಬ್ದ. ಅದರ ಜೊತೆ ಅರ್ಥವಿವೇಚನೆ ಮತ್ತು ಜಾಣ್ಮೆಯ ಅರ್ಥಪದರುಗಳನ್ನು ತರುತ್ತದೆ. ಕ್ರೈಸ್ತ ಮತದ ಮೊದಲ ಭಾಗದಲ್ಲಿ 'Logos' ಎಂಬ ಪದವನ್ನು ದೇವನಶಬ್ದ (Word of God) ಎಂಬ ಅರ್ಥದಲ್ಲಿ ಹೊಂದಿಸಿಕೊಂಡಿದ್ದರು. ಕಾವ್ಯೋಚ್ಚಾರಗಳಿಂದಲೂ ನವೀನ ಅನುಭವದ ಲೋಕ ನಿರ್ಮಾಣವಾಗುತ್ತದೆ. ಇದನ್ನು ಈಗಾಗಲೇ ಬೇಂದ್ರೆಯವರ ಕಾವ್ಯ-ವಾಚನದ ಪರಿಯಿಂದ ಮನಗಾಣಿಸಲಾಗಿದೆ.

ಶಬ್ದಸಂಪನ್ನತೆ ಕವಿಯ ಆಸ್ತಿ. ಹೀಗಾಗಿ ಅದು ಅವನ ವಶವಾಗಲು ಕಾಯಬೇಕು. ಶಬ್ದಗಳಿಗೂ ಒಂದು ಸೌಂದರ್ಯ ಕಾಂತಿಗಳಿದ್ದು ಅವುಗಳ ಒಂದು ಆಯ್ಕೆಯಲ್ಲಿ ಒಂದು ಸಹಜ, ನಿರ್ದಿಷ್ಟ ಆತ್ಮವಿಶ್ವಾಸ, ಭರವಸೆ ಅತ್ಯಗತ್ಯ. ಒಂದೇ ಗುಣಮಟ್ಟದ ಶಬ್ದಗಳ ಬಳಕೆಗೆ ಕವಿಯ ಸ್ವೋಪಜ್ಞತೆಯು ಆಧಾರನೆಲಗಟ್ಟಾಗುವುದು. ಗುಣಮಟ್ಟದಲ್ಲಿ ಲಕ್ಷ್ಯ ತಪ್ಪಿದಾಗ ಒಮ್ಮೊಮ್ಮೆ ಫಲಿತಾಂಶ ಸಮಾಧಾನಕರವಿರುವುದಿಲ್ಲ. ಶಬ್ದಗಳಿಗಾಗಿ ಶಬ್ದ ಬಳಕೆಗಿಂತ ಪ್ರಭಾವಕ್ಕಾಗಿ, ಅರ್ಥಸಂದೇಶದಲ್ಲಿ ಸಾಮರಸ್ಯ ಪ್ರಧಾನಗುಣವಾಗಿ ಮಿಂಚಬೇಕು. ಅಪರಿಚಿತ ಶಬ್ದಗಳನ್ನು ಬಳಸುವ ಆತುರ ತೋರಿದಾಗ ಸ್ವಾಭಾವಿಕತೆ ಮಾಯವಾಗಿ ಮಂದವಾದ ಬೆಳಕಿನಂತೆ ತೋರುವ ಸಾಧ್ಯತೆಯುಂಟು. ಅಸಂಗತ ಶೂನ್ಯತೆಯ ಅನ್ವೇಷಣೆ ಕವಿ ಮಾಡುವದಿಲ್ಲ. ತಿರುಳನೆಲೆಯನ್ನು ಕೇಂದ್ರ ಬಿಂದುವನ್ನಾಗಿಟ್ಟು ಕವಿ ಶಬ್ದಗಳ ಆಯ್ಕೆ ಮಾಡುವನು. ಆದ್ದರಿಂದ 'ಘನತೆ'ಯ ಅಂಶ ಪ್ರಧಾನ. ಮುತ್ತುಗಳನ್ನು ಶೋಧಿಸುವ ಮನೋಭಾವ ಕವಿಯದಾಗಿರುತ್ತದೆ. ಕೀಳುದರ್ಜೆಯ ಶಿಂಪುಮಿಶ್ರಣದ ಬೆನ್ನುಹತ್ತಬಾರದು. ಕವಿಯ ಕಾವ್ಯದ ಎತ್ತರ ಶಬ್ದಗಳ ಆಯ್ಕೆಯಲ್ಲಿ ಅಡಗಿದೆ ಎಂದು ಮತ್ತೆ ಒತ್ತಿ ಹೇಳುವ ಅಂಶ. ಇಲ್ಲದಿದ್ದರೆ ಕೆಳಮಟ್ಟದ ಕಾವ್ಯ ರಚನೆಗೆ ಅವಕಾಶ.

ಗ್ರೀಕ್ ಕವಿಯೊಬ್ಬ ಶಬ್ದಗಳ ವೈಚಿತ್ರ್ಯವನ್ನು ಬಹುಮಾರ್ಮಿಕವಾಗಿ ಚಿತ್ರಿಸುತ್ತಾನೆ. ದೂರದ ನಾಡಿನಲ್ಲಿ ಚಳಿಯ ರೌದ್ರತೆ ಎಷ್ಟಿತ್ತೆಂದರೆ ನುಡಿದೊಡನೆ ಶಬ್ದಗಳು ಘನೀಭೂತವಾಗುತ್ತವೆ. ಕೆಲ ಕಾಲದ ನಂತರ ಕೇಳಿಸುತ್ತವೆ. ಅಂದರೆ ಚಳಿಗಾಲದಲ್ಲಿ ಉಪಯೋಗಿಸಿದ ಶಬ್ದ ಕೇಳಿಸದಂತಾಗಿ ವಸಂತದ ಆಗಮನದವರೆಗೆ ಕಾಯಬೇಕಾಗುತ್ತದೆ. ಹಾಗೆ ನೋಡಿದಲ್ಲಿ ಮನುಷ್ಯ ತಾನೇ ಭಾಷೆಯಗುರು ಎಂದು ತಿಳಿದಿರುತ್ತಾನೆ. ಯಾಕೆಂದರೆ ತಾನೇ ಶಬ್ದಗಳ ರೂಪಕ್ಕೆ ಕಾರಣ ಎಂಬ ಭ್ರಮೆ. ಆದರೆ ಭಾಷೆಯೆ ಅವನ ಗುರು ಎಂಬುದನ್ನು ಮರೆತಿರುತ್ತಾನೆ. ಶಬ್ದ-ಭಾಷೆಗಳ ಸ್ಪಷ್ಟ ಉಪಯೋಗವಾದಾಗ ಅದಕ್ಕೆ ಓದುಗರು ದೊರೆಯುತ್ತಾರೆ. ಸಂದಿಗ್ಧತೆಯಿಂದ ಬರೆಯುವರಿಗೆ ವ್ಯಾಖ್ಯಾನಕಾರರು ಬೇಕಾಗುತ್ತಾರೆ ಎಂಬ ಆಲ್‌ಬರ್ಟ್ ಕಾಮೂನ ಮಾತು ನೆನಪಾಗುತ್ತದೆ. ಕಾಗುಣಿತ – ಅಕ್ಷರಗಳೇ ಇಡೀ ಪ್ರಪಂಚವನ್ನು ಆಳುತ್ತವೆ ಎಂಬ ಹೇಳಿಕೆ ಎಲ್ಲರ ಅನುಭವಕ್ಕೆ ಬರುವ ವಿಚಾರ. ಆಧುನಿಕಕಾಲದ ವಿಶ್ವಗ್ರಾಮದಲ್ಲಿ ಸಂವಹನ ಯಶಸ್ವಿಯಾಗುವದೇ ಶಬ್ದಗಳಿಂದ. ಶಬ್ದಗಳು ಒಮ್ಮೊಮ್ಮೆ ಕೂಗಿ-ಕೂಗಿ ತಮ್ಮ ಅಸ್ತಿತ್ವ ಹೇಳಲೇಬೇಕೆಂದೇನಿಲ್ಲ. ಮಿತಬಳಕೆ, ಮೌನವಾಗಿದ್ದೂ ಕೂಡ ಅರ್ಥಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತವೆ. ಶಬ್ದವು ಅರ್ಥ ಭಾವನೆಗಳಿಂದ ತುಂಬಿಕೊಂಡಿರುವದಿಲ್ಲ. ಕವಿ ಅವುಗಳಲ್ಲಿ ಹೊಸ ಹೊಸ ಅರ್ಥಬರುವಂತೆ ಭಾವನೆಗಳನ್ನು ಸ್ಫುರಿಸುತ್ತಾನೆ 'ಮಾತೆಂಬುದು ಅರ್ಥರೂಪದ ಬೆವರು' (ಅಂಬಿಕಾತನಯದತ್ತ ಪದ್ಯ : ಸುಮ್ಮನಿರು).

ಶಬ್ದಗಳ ಮೆರುಗು, ಬೆರಗು, ಅರ್ಥವೈಖರಿ, ಶಬ್ದಾರ್ಥಗಳ ಹಲವು ಮಜಲುಗಳು, ಮಗ್ಗಲುಗಳು, ತಿರುವುಗಳು, ಲಯ, ಧ್ವನಿ ಆಳ, ಒಳನೋಟ, ವಿಶಿಷ್ಟತೆ ಹೀಗೆ ಪದ್ಯ ನಿರ್ಮಿತಿಯಲ್ಲಿ ಶಬ್ದಸಂಪತ್ತನ್ನು ದುಡಿಸಿಕೊಳ್ಳುತ್ತಾನೆ ಎಂಬುದನ್ನು ನೋಡಿದೆವು. ಸೂಕ್ಷ್ಮ, ಪ್ರಭಾವೀಪ್ರತಿಮೆಗಳು, ಸಂಕೇತಗಳು ಹೀಗೆ ಹಲವಾರು ರೂಪ ಸಾಧ್ಯತೆಗಳನ್ನು ಕವಿ ಸ್ವೋಪಜ್ಞತೆಯಿಂದ, ಶಬ್ದ-ಬಂಧದಿಂದ ಕಾವ್ಯ-ಕಟ್ಟುತ್ತಾನೆ. ಒಟ್ಟಿನಲ್ಲಿ ಹೇಳುವದಾದರೆ ಶಬ್ದ-ಕಲ್ಪಕತೆಯ ತಿರುಳನ್ನು ಶಬ್ದಗಳ ಆಯ್ಕೆಯಲ್ಲಿ ಕಾಣಬಹುದು.

ಶಬ್ದಗಳ ಅನ್ವೇಷಣೆಯೆಂದರೆ ಅಭಿವ್ಯಕ್ತಿಪಡಿಸಲು ಸೂಕ್ಷ್ಮವಾದ ರೂಪದ ಒಂದು ಅವಿರತ ಶೋಧವೆಂದಂತಾಯಿತು. ಶಬದ ಆಯ್ಕೆ, ಅನುಭೂತಿ ಅವನ ಅಂತಃಚಕ್ಷುವಿಗೆ ಹೊಳೆಯುವುದು; "For oft when on my couch I lie / in vacant or in pensive mood / they flash upon that inward eye / which is the bliss of solitude; (Daffodils: Wordsworth)." ಆಧುನಿಕ ಕಾವ್ಯ ಸಿದ್ಧಾಂತಿಗಳಿಗೆ ಇದು ವಾದದ ಅಂಶ. ಯಾವದೇ ಕವನದಲ್ಲಿ ಅರ್ಥಲಯವು ಶಬ್ದ ಅಥವಾ ಶಿಲ್ಪಪುಂಜಗಳ ಹೆಣೆಯುವ ತಂತ್ರಗಾರಿಕೆಯಲ್ಲಿ ಅಡಕವಾಗಿರುತ್ತದೆ. ಕನ್ನಡಕ್ಕೆ ಕಾವ್ಯಮೀಮಾಂಸೆಯ ಹಿನ್ನೆಲೆ ಮುಖ್ಯವಾಗಿ ಸಂಸ್ಕೃತದಿಂದಲೇ ಬಂದುದು ಎಂದು ಗುರುತಿಸಲಾಗಿದೆ. ಆನಂತರ ಕನ್ನಡದಲ್ಲಿ ಲಕ್ಷಣ ಗ್ರಂಥಗಳು ಬಂದವು. ಶಬ್ದ ಮತ್ತು ಅರ್ಥಗಳ ಸಮ್ಯಗ್‌ಜ್ಞಾನವನ್ನು ಒದಗಿಸಬೇಕೆಂದು ಕಾಳಿದಾಸನು ರಘುವಂಶದಲ್ಲಿ ಶಿವ-ಪಾರ್ವತಿಯನ್ನು ಸ್ತುತಿಸುತ್ತಾನೆ. ಇದು ಶಬ್ದ-ಅರ್ಥಗಳ ಬಗೆಗೆ ಬಹು ಸುಂದರ ಮಾತಿನಲ್ಲಿ ಹೇಳಿದ ಬಹು ಮಹತ್ವದ ಹೇಳಿಕೆ.

ಕವಿ ಮನೋಧರ್ಮ ಶಬ್ದಗಳ ಕಲ್ಪಕತೆಯನ್ನು ಸೂಚಿಸುತ್ತದೆ. ನಾನು ಹುಟ್ಟಿದ್ದು ಉರಿಬಿಸಿಲಿನಲ್ಲಿ; / ಬೆಳೆದದ್ದು / ಚಂಡ ಪ್ರಚಂಡ ಕೆಂಡಗಳ ಮೇಲೆ.. ಇವಳೆತ್ತಿ ನಿಲ್ಲಿಸಿದ ಬಿದಿರನೇಣಿಯ ಮೇಲೆ / ನಾನು ನಕ್ಷತ್ರಗಳ ಹಿಡಿಯಹೋದೆ (ಕೆ.ಎಸ್.ಎನ್) ಅದರಂತೆ ಅವರ ಶಬ್ದಗಳಲ್ಲಿ ಮನ್ಮಥಸ್ಪರ್ಶ ಕಾಣಬಹುದು. ಉದಾ: ಶ್ರೀಗಂಧದ ಕಂಪು, ಜಾಜಿಹೂವಿನ ನೆನಪು, ಮಲ್ಲಿಗೆಯ ತೋಟದಲ್ಲಿ ನಿಂತ ಅನುಭವ. ಮಳೆಬಿಲ್ಲು, ಬಾನಾಡಿ ವೀಣೆ, ಒಲುಮೆ, ಇರುಳು, ಇಂಥ ಸರಳ ಸ್ವಾಭಾವಿಕತೆಯ ಶಬ್ದಸಂಪತ್ತು ಅವರದಾಗಿದೆ.

ಆಧುನಿಕ ವಿಮರ್ಶಕರು ಚಿಂತಕರು, ಕವಿಗಳಲ್ಲಿ 'ಹೃದಯಸ್ಪರ್ಶಿ' ಮತ್ತು 'ನಿರ್ದೇಶಕತ್ವ'ದ ವರ್ಗೀಕರಣ ಮಾಡಿದ್ದಾರೆ. ಜಿಜ್ಞಾಸೆಯ ಮಾರ್ಗವೂ ಕವಿಮಾರ್ಗವೇ! ವಿ.ಸೀ ಯವರ ಕಾವ್ಯದಲ್ಲಿ, ಗೋಕಾಕರ ಕಾವ್ಯದಲ್ಲಿ ಈ ಮಾರ್ಗದ ಶಬ್ದಸಂಪತ್ತು ಧಾರಾಳವಾಗಿ ಸಿಗುತ್ತದೆ. ಕುವೆಂಪುರವರು ನಿಸರ್ಗದ ಕವಿ, ಪ್ರಕೃತಿಪೂಜಕ ಕವಿ. ಕಾವ್ಯವನ್ನು ಮಂತ್ರದೆತ್ತರದಂತೆ ಕಾವ್ಯದರ್ಶಿಸಿದ ಕವಿ. ಪು.ತಿ.ನ ಭಾಗವತ ಕವಿಗಳು. ಅವರ ಒಲವು ಆಧುನಿಕ ಕನ್ನಡ ಶಬ್ದಗಳಿಗಿಂತ ಹಳೆಯ ಸಂಪ್ರದಾಯದ ಬಳಕೆಯಲ್ಲಿ ಎದ್ದು ಕಾಣುತ್ತದೆ.

'ಅಮಂತ್ರಮಕ್ಷರಂ ನಾಸ್ತಿ' ಮಂತ್ರ ಸಾಮರ್ಥ್ಯವಿಲ್ಲದ ಅಕ್ಷರವಿಲ್ಲ. ಕಾವ್ಯಭಾಷೆ ಹೆಚ್ಚು ತಾತ್ವಿಕ, ವಿಶೇಷ ಎಂಬ ವಿಚಾರಧಾರೆ ಹಿಂದೊಮ್ಮೆ ಇದ್ದಿತು. ಕಾವ್ಯಶಬ್ದಕೋಶ ಬೇರೆಯಾಗಿರುತ್ತದೆ. ಅವುಗಳನ್ನು ಅಪರಿಚತತೆ, ಸ್ಪಷ್ಟತೆ, ಸಾಮಾನ್ಯತೆ ಮತ್ತು ತಾಜಾತನ ಎಂದು ವರ್ಗೀಕರಿಸಿದ ಅಂಶಗಳು ಪ್ರಯೋಜನವಾಗುತ್ತವೆ ಎನ್ನುತ್ತಾರೆ ವಿ.ಕೃ. ಗೋಕಾಕರು[೧೦] ಸ್ಪೆನ್ಸರ್, ಷೇಕ್ಸ್‌ಪಿಯರ್, ಡನ್, ಪೋಪ್, ವರ್ಡ್ಸ್‌ವರ್ಥ್, ಬ್ರೌನಿಂಗ್, ಹಾಪ್‌ಕಿನ್ಸ್, ಎಲಿಯಟ್‌ರ ಕಾವ್ಯ ಪರೀಕ್ಷಿಸಿದಾಗ ಅವರ ಕಾವ್ಯದ ಶಬ್ದ-ಶಬ್ದಗುಂಫನಗಳ ಆಯ್ಕೆ ಮತ್ತು ಅವರ ಕಾವ್ಯಧರ್ಮಗಳ ಸಂಲಗ್ನತೆ ಅರ್ಥವಾಗುತ್ತದೆ. ಹಳೆಯ ಕವಿಗಳಂತೆ, ನವೋದಯದ ಬೇಂದ್ರೆ, ಪುಟ್ಟಪ್ಪ, ಪುತಿನ ಮತ್ತು ಇತ್ತೀಚಿನ ಕಂಬಾರರಿಗೂ ಈ ಮಾತು ಅನ್ವಯಿಸುತ್ತದೆ.

ಪ್ರಸಿದ್ಧ ಕವಿ-ವಿಮರ್ಶಕ ಎಲಿಯಟ್‌ನ ಅನುಭವದ ಮಾತು ಗಮನಾರ್ಹ. ಕೆಲಸಲ ಶಬ್ದಗಳು ನಿಜಾರ್ಥದಿಂದ ತಿರುಚುವವು. ಶಬ್ದಗಳು ಬಳಲುವವು. ಸೀಳಿ ಭಿನ್ನವಾಗುವವು. ಮುರಿಯುವವು. ಉದ್ವೇಗದಿಂದ ಮಾನಸಿಕ ಒತ್ತಡದಲ್ಲಿ ಜಾರುವವು. ಬದಿಗೆ ಸರಿಯುವವು. ಭಾರದಿಂದ ಶಿಥಿಲವಾಗುವವು. ನುಣಚುವವು. ಅಖಚಿತವೆನಿಸುವವು ಕ್ಷಯಿಸುವವು. ನಶಿಸುತ್ತ ಅಸ್ತಿತ್ವ ಕಳೆದುಕೊಳ್ಳುವವು. ಅಭಿವ್ಯಕ್ತಿಪಡಿಸಿದ ಒಂದು ಶಬ್ದವನ್ನು ಮತ್ತೆ ವಾಪಸು ಕರೆಸಿಕೊಳ್ಳದಾಗದು. ಅವು ಒಮ್ಮೆಬಿಟ್ಟ ಬಾಣದ ತೆರದಿ. ಶಬ್ದಗಳೆಂದರೆ ಹಕ್ಕಿಯ ರೆಕ್ಕೆಗಳು ಎಂಬ ಪ್ರತಿಮೆ. ಅದೊಂದು ಬಿಳಿಗಾಳಿಪಟ. ಒಮ್ಮೆ ಕೈಜಾರಿ ಹೋದರೆ ಅಸಹಾಯಕತೆ. ಉಲಿಯದ ಪದ ಜನ್ಮವಿರದ ಆತ್ಮ. ಉಲಿದರೆ ಮಾತ್ರ ಇಲ್ಲ ದೇವರೂ ಗತಿ.

ಅಡಿಟಿಪ್ಪಣಿ:

೧. ಪ್ರೊ. ಜಿ. ವೆಂಕಟಸುಬ್ಬಯ್ಯ: **ಎರವಲು ಪದಕೋಶ**, ನವಕರ್ನಾಟಕ ಪ್ರಕಾಶನ, ಪೀಠಿಕೆ, ಪು.೮

೨. ದ.ರಾ. ಬೇಂದ್ರೆ: **ಸಂಭಾವನೆ**, ಇಂಗ್ಲಿಷ್ ಗೀತಗಳು, ಪು.೬೪

೩. ಕುವೆಂಪು: **ಜೇನಾಗುವಾ**, ಪು.೬೧, ೧೯೪೫

೪. ಕೆ.ಎಸ್. ನರಸಿಂಹಸ್ವಾಮಿ: **ಪ್ರತಿಭಾದರ್ಶನ**, ರಾಮಚಂದ್ರ ಶರ್ಮ, ಪುಟ.೩೦

೫. ಜಿ.ಎಸ್. ಶಿವರುದ್ರಪ್ಪ: ಕವಿ-ಕಿವಿ, **ಅನಾವರಣ** ೧೯೬೩

೬. ಸುರೇಂದ್ರನಾಥ ಮಿಣಜಗಿ: **ಸೃಜನಕ್ರಿಯೆ ಮತ್ತು ಸಂವೇದನೆ**, ಪು.೧೫೨

೭. ಪು.ತಿ. ನರಸಿಂಹಾಚಾರ್: **ಸಮಗ್ರ ಕಾವ್ಯ**, ಕವಿ. ಪು.೧೨೪

೮. ಜಿ.ಎಸ್. ಶಿವರುದ್ರಪ್ಪ: ಕವಿತೆ **ಸಮಗ್ರ ಕಾವ್ಯ**, ಪುಟ.೨೮

೯. ಗೋಪಾಲಕೃಷ್ಣ ಅಡಿಗ: **ಸಮಗ್ರ ಕಾವ್ಯ**, ಪು.೬೫

೧೦. ವಿ.ಕೃ.ಗೋಕಾಕ: Winged Words: The Vocabulary of Poetry, ಪು.೧-೨, ದತ್ತಿ ಉಪನ್ಯಾಸ, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

❑❑

# ಕೆಳದಿ ನಾಯಕರಿಗೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು

– ಎ.ಕೆ. ಶಾಸ್ತ್ರಿ

ವಿಜಯನಗರ ಸಾಮ್ರಾಜ್ಯವು ಕ್ರಿಸ್ತಶಕ ೧೫೬೫ರಲ್ಲಿ ಪತನವಾದ ನಂತರ ಕರ್ನಾಟಕದಲ್ಲಿ ಸ್ವಲ್ಪಕಾಲ ಅರಾಜಕತೆ ಉಂಟಾಯಿತು. ದಕ್ಷಿಣದ ರಾಜ್ಯಗಳನ್ನೇ ಒಂದುಗೂಡಿಸುವ ಸಾಮರ್ಥ್ಯ ಯಾರಿಗೂ ಇರಲಿಲ್ಲ. ದಕ್ಷಿಣದಲ್ಲಿ ಐದು ಮುಸಲ್ಮಾನ ರಾಜ್ಯಗಳ ಉದಯ,[೧] ಕ್ರಾಂತಿ ಮತ್ತು ರಾಜಮನೆತನಗಳ ಬದಲಾವಣೆಗಳು ರಾಜಕೀಯ ಅಸ್ಥಿರತೆಯನ್ನುಂಟು ಮಾಡಿದವು. ಇಂಥ ಪರಿಸ್ಥಿತಿಯಲ್ಲೂ, ವಿಜಯನಗರ ಸಾಮ್ರಾಟರ ಸಾಮಂತರಲ್ಲಿ ಸಮರ್ಥರೆನಿಸಿದ ಕೆಳದಿಯ ನಾಯಕರು ಸಾಮ್ರಾಜ್ಯದ ಪತನಾನಂತರ ಕರ್ನಾಟಕದ ಚಾರಿತ್ರಿಕ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ನಿರ್ವಹಿಸಿದರು. ಕೆಳದಿ ನೃಪರು ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ ಶ ೧೪೯೯–೧೭೬೩) ಕರ್ನಾಟಕದ ಮಧ್ಯ-ಪಶ್ಚಿಮ ಭಾಗದ ಒಡೆಯರಾಗಿದ್ದರು. ಕೆಳದಿ ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಈಗಿನ ಶಿವಮೊಗ್ಗ, ಮಂಗಳೂರು, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಬಹುಭಾಗ, ಕಾರವಾರ, ಧಾರವಾಡ, ಚಿತ್ರದುರ್ಗ ಜಿಲ್ಲೆಗಳ ಕೆಲವು ಭಾಗ ಮತ್ತು ಕೇರಳದ ಸ್ವಲ್ಪ ಭಾಗಗಳನ್ನು ಒಳಗೊಂಡಿತ್ತು. ಕೆಳದಿ ನಾಯಕರು ಅನುಕೂಲಕ್ಕೆ ತಕ್ಕಂತೆ, ಕ್ರಮವಾಗಿ, ಕೆಳದಿ, ಇಕ್ಕೇರಿ, ಬಿದನೂರು ಮತ್ತು ಭುವನಗಿರಿದುರ್ಗ (ಕವಲೇದುರ್ಗ) ಗಳೆಂಬ ರಾಜಧಾನಿಗಳಿಂದ ರಾಜ್ಯವನ್ನಾಳಿದರು.

ವಿಜಯನಗರ ಸಾಮ್ರಾಜ್ಯದ ಪರಂಪರೆಯನ್ನು ಕೆಲಮಟ್ಟಿಗೆ ಮುಂದುವರಿಸುವಲ್ಲಿ ಕೆಳದಿ ನಾಯಕರು ಯಶಸ್ವಿಯಾದರು. ಕೆಳದಿ ನೃಪರು ವೀರಶೈವ ಶಕ್ತಿ ವಿಶಿಷ್ಟಾದ್ವೈತ ಮತಾನುಯಾಯಿಗಳು ಆಗಿದ್ದರೂ, ಸಕಲ ಮತಧರ್ಮೀಯರನ್ನು ಸಮಾನವಾಗಿ ಪೋಷಿಸಿ, ಅವರವರ ಮಠಗಳಿಗೆ ಭೂದಾನ ಮಾಡಿ, ಮಠಗಳ ಗುರುಗಳನ್ನು ಗೌರವಿಸಿದ್ದು ವಿಜಯನಗರ ಸಾಮ್ರಾಜ್ಯದ ಪರಂಪರೆ ಮುಂದುವರಿಯಿತೆಂಬುದಕ್ಕೆ ಒಂದು ನಿದರ್ಶನ. ವೀರಶೈವ ಮಠಗಳಿಗೆ ದತ್ತಿ ಬಿಡುವುದರ ಜೊತೆಗೆ, ಅದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಪ್ರತಿಪಾದಿಸುವ ಮಠಗಳಿಗೆ, ಜೈನರ ಬಸದಿಗಳಿಗೆ ಮತ್ತು ಮುಸಲ್ಮಾನರ ಮಸೀದಿಗಳಿಗೆ ದತ್ತಿ ನೀಡಿ ತಮ್ಮ ಧಾರ್ಮಿಕ ವಿಶಾಲ ಮನೋಭಾವನೆಯನ್ನು ತೋರಿದ್ದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಹಿರಿಯ ವೆಂಕಟಪ್ಪನಾಯಕ, ಶಿವಪ್ಪನಾಯಕ, ಮೊದಲನೇ ಸೋಮಶೇಖರ ನಾಯಕ, ಚೆನ್ನಮ್ಮಾಜಿ, ಮೊದಲನೇ ಬಸಪ್ಪನಾಯಕ, ಇಮ್ಮಡಿ ಸೋಮಶೇಖರ ನಾಯಕ, ಇಮ್ಮಡಿ ಬಸಪ್ಪ ನಾಯಕ, ಮೊದಲಾದವರು ಕೆಳದಿ ರಾಜ್ಯವನ್ನಾಳಿದವರಲ್ಲಿ ಪ್ರಮುಖರು. ಕೆಳದಿಯ ನಾಯಕರು ವೀರಶೈವರಾಗಿದ್ದರೂ, ಶೃಂಗೇರಿಯ ಅದ್ವೈತ ಪೀಠದ ಜಗದ್ಗುರುಗಳನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ವಿಜಯನಗರ ಸಾಮ್ರಾಟರಂತೆ ಇವರೂ ಕೂಡ ಶೃಂಗೇರಿ ಮಠಕ್ಕೆ ಹಲವಾರು ಸಲ ಭೇಟಿ ಕೊಟ್ಟು, ಮಠಕ್ಕೆ ಭೂಮಿ ಮತ್ತು ವಸ್ತು-ವಡವೆಗಳನ್ನು ದಾನ ಮಾಡಿ, ಜಗದ್ಗುರುಗಳ ಆಶೀರ್ವಾದ ಪಡೆಯುತ್ತಿದ್ದರು. ಅದರಂತೆ ಹಲವಾರು ಸಂದರ್ಭಗಳಲ್ಲಿ ಶ್ರೀಗಳವರನ್ನೂ ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು ಸಂಭ್ರಮದ ಸ್ವಾಗತ ನೀಡುತ್ತಿದ್ದರು. ಮಠವು ಆಂತರಿಕ, ಇಲ್ಲವೆ, ಬಾಹ್ಯ ತೊಂದರೆಗಳಲ್ಲಿ ಸಿಲುಕಿದಾಗ, ನಾಯಕರು ಮಠಕ್ಕೆ ಸಹಾಯ ನೀಡಿ ಅದನ್ನು ರಕ್ಷಿಸುತ್ತಿದ್ದರು. ಜಗದ್ಗುರುಗಳ ತೀರ್ಥಯಾತ್ರಾ ಕಾಲದಲ್ಲಿ, ಅವರ ಪರಿವಾರಕ್ಕೆ ಬೇಕಾದ ಸಕಲ ಅನುಕೂಲತೆಗಳನ್ನೂ ಒದಗಿಸಿಕೊಡುತ್ತಿದ್ದರು.

ಆದಿ ಶಂಕರಾಚಾರ್ಯರಿಂದ ಸ್ಥಾಪಿತವಾದ ಕರ್ನಾಟಕದ ಇಂದಿನ ಚಿಕ್ಕಮಗಳೂರು ಜಿಲ್ಲೆಯಲ್ಲಿ ಇರುವ ಶೃಂಗೇರಿ ಮಠಕ್ಕೆ ಸುಮಾರು ೧,೨೦೦ ವರ್ಷಗಳ ಚರಿತ್ರೆ ಇದೆ. ಕಾಲಕಾಲಕ್ಕೆ ಎಷ್ಟೋ ರಾಜಕೀಯ, ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳುಂಟಾಗಿದ್ದರೂ, ಶೃಂಗೇರಿ ಜಗದ್ಗುರು ಪರಂಪರೆಯು ಇಂದಿಗೂ ಅವಿಚ್ಛಿನ್ನವಾಗಿ ಸಾಗಿಬಂದಿದ್ದು, ಶೃಂಗೇರಿ ಮಠವು ಬಹುದೊಡ್ಡ ಧಾರ್ಮಿಕ ಕೇಂದ್ರವಾಗಿ ಮುಂದುವರೆದುಕೊಂಡು ಬಂದಿದೆ. ಶೃಂಗೇರಿ ಚರಿತ್ರೆಯಲ್ಲೇ ೧೪ನೇ ಶತಮಾನವು ಒಂದು ಸುವರ್ಣ ಯುಗ. ಶ್ರೀ ವಿದ್ಯಾತೀರ್ಥ, ಶ್ರಿ ಭಾರತೀ ಕೃಷ್ಣತೀರ್ಥ ಮತ್ತು ಶ್ರೀ ವಿದ್ಯಾರಣ್ಯರು ಕ್ರಮವಾಗಿ ಶೃಂಗೇರಿಯ ಅದ್ವೈತ

'ಭವಾನಿ', ಟಿ.ಆರ್.ಎಸ್. ರೈಸ್ ಮಿಲ್ ಕೆಳಗೆ, ವಿದ್ಯಾಗಿರಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ – ೫೮೧ ೪೦೨

ಪೀಠವನ್ನು ಅಲಂಕರಿಸಿ, ಶ್ರೀ ಮಠದ ಉಚ್ಛ್ರಾಯಕ್ಕೆ ಕಾರಣರಾದರು. ವಿದ್ಯಾರಣ್ಯರ ಸಹಾಯದಿಂದ ಹರಿಹರ ಮತ್ತು ಅವನ ಸಹೋದರರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ್ದರಿಂದ ಶೃಂಗೇರಿ ಜಗದ್ಗುರುಗಳ ಬಿರುದಾವಳಿಗಳನ್ನು ಶಾಸನ ಮತ್ತು ಕಡತಗಳಲ್ಲಿ, "ವಿದ್ಯಾನಗರ ಮಹಾರಾಜಧಾನಿ", "ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ" ಎಂಬುದಾಗಿ ಉಲ್ಲೇಖಿಸಲಾಗಿದೆ.

ವಿಜಯನಗರ ಸಾಮ್ರಾಟರು ಶೃಂಗೇರಿ ಮಠಕ್ಕೆ ಸಾಕಷ್ಟು ಭೂದಾನ ಮಾಡಿ, ರಾಜಾಶ್ರಯ ನೀಡಿದ್ದರಿಂದ, ಅದೊಂದು ಸಂಸ್ಥಾನವಾಗಿ ರೂಪುಗೊಂಡಿತು. ಶೃಂಗೇರಿ ಸಂಸ್ಥಾನವು ಕೇವಲ ಭೂಕಂದಾಯ ವಸೂಲು ಮಾಡುವ ಸಂಸ್ಥಾನವಾಗಿರದೆ, ಧರ್ಮ ರಕ್ಷಿಸುವ ಕಾರ್ಯ ನಿರ್ವಹಿಸಿದ್ದರಿಂದ, 'ಧರ್ಮ ಸಂಸ್ಥಾನ' ಎಂದೇ ಪ್ರಸಿದ್ಧಿಗೆ ಬಂದಿತು. ವಿಜಯನಗರ ಸಾಮ್ರಾಟರಂತೆ ಕೆಳದಿ ನಾಯಕರು, ಮುಸಲ್ಮಾನ ದೊರೆಗಳಾದ ಹೈದರಲಿ, ಟಿಪ್ಪುಸುಲ್ತಾನ್, ಹೈದರಾಬಾದಿನ ನಿಝಾಮ ಮೈಸೂರಿನ ಒಡೆಯರು ಮತ್ತು ಮರಾಠಾ ಪೇಶ್ವೆ ಮತ್ತು ಅನೇಕ ರಾಜಮನೆತನದವರು ಮತ್ತು ಪ್ರಜೆಗಳು ಶೃಂಗೇರಿ ಮಠಕ್ಕೆ ದಾನಧರ್ಮಾದಿಗಳನ್ನು ಮಾಡಿ, ಜಗದ್ಗುರುಗಳನ್ನು ಗೌರವಿಸಿದರು. ಬ್ರಿಟಿಷ್ ಕಮಿಷನರರು ಮತ್ತು ಅಧಿಕಾರಿಗಳೂ ಮಠವನ್ನು ಗೌರವಿಸಿ, ರಕ್ಷಿಸಿದರು.

## ಆಕರಗಳು

ಕೆಳದಿ ಚರಿತ್ರೆಯನ್ನರಿಯಲು ಶಾಸನ, ವಿದೇಶಿಯರ ಕಥನ ಮತ್ತು ಕಾಗದ ಪತ್ರಗಳು ಉಪಯುಕ್ತವಾಗಿವೆ. ಕೆಳದಿ ಬಸವಪ್ಪ ನಾಯಕರ ಶಿವತತ್ತ್ವ ರತ್ನಾಕರ, ಲಿಂಗಣ್ಣ ಕವಿಯ ಕೆಳದಿ ನೃಪವಿಜಯಂ ಮತ್ತು ಕಾಶಿಲಕ್ಷ್ಮಣಶಾಸ್ತ್ರಿಯ 'ಗುರುವಂಶಕಾವ್ಯಂ' ಈ ಕೆಲವು ಶ್ರೇಷ್ಠ ಸಾಹಿತ್ಯಕ ಕೃತಿಗಳು ಕೆಳದಿ ಚರಿತ್ರೆಯ ಮೇಲೆ ವಿಶೇಷ ಬೆಳಕು ಚೆಲ್ಲುತ್ತವೆ.

ಇನ್ನು ಶೃಂಗೇರಿ ಧರ್ಮಸಂಸ್ಥಾನದ ಚರಿತ್ರೆಯ ಮೇಲೆ ಬೆಳಕು ಬೀರುವ ಆಕರ ಸಾಮಗ್ರಿಗಳು ಹೇರಳವಾಗಿಯೂ, ವೈವಿಧ್ಯವಾಗಿಯೂ ಇವೆ. ಶಿಲಾ ಮತ್ತು ತಾಮ್ರ ಶಾಸನಗಳು ಭೂದಾನಕ್ಕೆ ಸಂಬಂಧಿಸಿದವುಗಳಾಗಿವೆ. ಆದಿ ಶಂಕರಾಚಾರ್ಯರ ಮತ್ತು ನಂತರದ ಜಗದ್ಗುರುಗಳ ರಚನೆಗಳು 'ಶ್ರೀ ಪುರುಷೋತ್ತಮ ಭಾರತೀ ಚರಿತ' 'ವಿದ್ಯಾರಣ್ಯ ಕಾಲಜ್ಞಾನ' 'ಗುರುಶತಕ' 'ಗದ್ಯವಲ್ಲರಿ' 'ಶಿವತತ್ತ್ವ ರತ್ನಾಕರ' 'ಗುರುವಂಶಕಾವ್ಯ' 'ಕೆಳದಿ ನೃಪವಿಜಯಂ' 'ರಾಮಚಂದ್ರ ಮಹೋದಯ' 'ರಮಣೀಯ ರಾಘವ' 'ಸಂಧಾನ ಕಾವ್ಯ' ಮುಂತಾದ ಅನೇಕ ಸಾಹಿತ್ಯಕ ಕೃತಿಗಳು ಶೃಂಗೇರಿಮಠದ ಚರಿತ್ರೆಯನ್ನರಿಯಲು ಉಪಯುಕ್ತವಾಗಿವೆ.

ಈ ಸಂಕ್ಷಿಪ್ತ ಪೀಠಿಕೆಯನ್ನು ಹಿನ್ನಲೆಯಾಗಿರಿಸಿಕೊಂಡು, ಪ್ರಸ್ತುತ ವಿಷಯದಲ್ಲಿ ಪ್ರವೇಶಿಸಿದರೆ, ಓದುಗರಿಗೆ ಲೇಖನ ಹೆಚ್ಚು ಅರ್ಥಪೂರ್ಣವಾಗುವುದೆಂಬುದು ನನ್ನ ಭಾವನೆ. ಕೆಳದಿ ಮತ್ತು ಶೃಂಗೇರಿಗೆ ಸಂಬಂಧಿಸಿ ಸಾಕಷ್ಟು ಆಕರ ಸಾಮಗ್ರಿಗಳು ಇದ್ದರೂ, ಅವುಗಳ ವಿಶ್ಲೇಷಣೆ ಪ್ರಸ್ತುತ ಲೇಖನದ ವ್ಯಾಪ್ತಿಗೆ ಮೀರಿದ್ದರಿಂದ, ಅಂಥ ಆಕರಗಳನ್ನು ಕುರಿತು ಪ್ರಸ್ತಾಪಿಸಲಾಗಿಲ್ಲ. 'ಕೆಳದಿ ನಾಯಕರಿಗೆ ಸಂಬಂಧಿಸಿ ಶೃಂಗೇರಿ ಮಠದ ದಾಖಲೆಗಳು ಈ ಶೀರ್ಷಿಕೆಯೇ ತಿಳಿಸುವಂತೆ, ಪ್ರಸ್ತುತ ಲೇಖನ ದಾಖಲೆಗಳ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ. ಐತಿಹಾಸಿಕ ಮಹತ್ವವುಳ್ಳ ಅನೇಕ ಸನದುಗಳು ಮತ್ತು ಕಾಗದ ಪತ್ರಗಳು ಶ್ರೀ ಮಠದಲ್ಲಿವೆ. ಇವುಗಳ ಹೊರತಾಗಿ, ಹದಿನಾಲ್ಕರಿಂದ ಹತ್ತೊಂಬತ್ತನೇ ಶತಮಾನದವರೆಗಿನ, ಮುಖ್ಯವಾಗಿ, ಶೃಂಗೇರಿ ಧರ್ಮ ಸಂಸ್ಥಾನದ ಮತ್ತು ಸಾಮಾನ್ಯವಾಗಿ, ಕರ್ನಾಟಕ ಮತ್ತು ಭಾರತದ ರಾಜಕೀಯ, ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನರಿಯಲು ಶೃಂಗೇರಿ ಮಠದಲ್ಲಿಯ ಕಡತಗಳು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಅತ್ಯಮೂಲ್ಯ ಆಕರಗಳು. ಇಂಥ ಆಕರಗಳು ಪ್ರಸಕ್ತ ಲೇಖನಕ್ಕೆ ಅದೆಷ್ಟು ಉಪಯುಕ್ತ ಎಂಬುದನ್ನು ಸ್ವಲ್ಪದರಲ್ಲಿ ಅರಿಯೋಣ.[೨]

## ಸಂಬಂಧದ ಸ್ವರೂಪ

ಪ್ರಸ್ತುತ ಲೇಖನವು ಮುಖ್ಯವಾಗಿ ಶೃಂಗೇರಿ ಮಠದ ಕಾಗದ ಪತ್ರ[೩] ಮತ್ತು ಕಡತಗಳ[೪] ಮೇಲೆ ಆಧಾರಿತವಾಗಿದೆ. ಕೆಳದಿಯ ನಾಯಕ ಮನೆತನದಲ್ಲಿ ಹಿರಿಯ ವೆಂಕಟಪ್ಪ ನಾಯಕ (ಕ್ರಿ.ಶ. ೧೫೮೨–ಕ್ರಿ.ಶ. ೧೬೨೯) ಘನವಂತನಾಗಿದ್ದನು. ಶೃಂಗೇರಿ ಜಗದ್ಗುರು ಪರಂಪರೆಯಲ್ಲಿ ೨೩ನೆಯವರಾದ ಐದನೆಯ ಶ್ರೀ ನರಸಿಂಹ ಭಾರತೀ (ಕ್ರಿ. ಶ. ೧೫೭೬ – ಕ್ರಿ. ಶ. ೧೫೯೯), ೨೪ನೆಯವರಾದ ಪ್ರಥಮ ಶ್ರೀ ಅಭಿನವ ನರಸಿಂಹ ಭಾರತೀ (ಕ್ರಿ. ಶ. ೧೫೯೯–ಕ್ರಿ. ಶ. ೧೬೨೨) ಮತ್ತು ೨೫ನೆಯವರಾದ ಪ್ರಥಮ ಶ್ರೀ ಸಚ್ಚಿದಾನಂದ ಭಾರತೀ (ಕ್ರಿ. ಶ. ೧೬೨೨–ಕ್ರಿ. ಶ. ೧೬೬೩) ಸ್ವಾಮಿಗಳು ಹಿರಿಯ ವೆಂಕಟಪ್ಪನಾಯಕನ ಸಮಕಾಲೀನರು. ಹಿರಿಯ ವೆಂಕಟಪ್ಪ ಒಬ್ಬ ಶ್ರೇಷ್ಠ ಕವಿ; ಧರ್ಮ ಮತ್ತು ವಿದ್ಯಾಪೋಷಕ, ವೆಂಕಟಪ್ಪನ ಪೂರ್ವಜರು ವಿಜಯನಗರ ಚಕ್ರವರ್ತಿಗಳ ಸಾಮಂತರಾಗಿದ್ದರು. ಆದರೆ ವೆಂಕಟಪ್ಪನು ಆ ಹಿಡಿತದಿಂದ ಪಾರಾಗಿ, ತನ್ನ ಮನೆತನದಲ್ಲಿ ಪ್ರಥಮ ಸ್ವತಂತ್ರ ದೊರೆಯೆನಿಸಿದನು. ಕ್ರಿ. ಶ. ೧೬೨೩ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ, ಪೆಟ್ರೊ ಡೆಲ್ಲಾವೆಲ್ಲೆ ಕೂಡ ಈ ಸಂಗತಿಯನ್ನು ಒತ್ತಿ ಹೇಳಿದ್ದಾನೆ.[೫] ವೆಂಕಟಪ್ಪನ ರಾಜ್ಯಭಾರ, ದಿಗ್ವಿಜಯದ ವರ್ಣನೆ, ಆಧ್ಯಾತ್ಮ ಶಾಸ್ತ್ರದಲ್ಲಿ ಆಸಕ್ತಿ, ಪ್ರಜಾಹಿತ ಕಾರ್ಯಗಳು, ದೇವಾಲಯಗಳ ನಿರ್ಮಾಣ, ಶೃಂಗೇರಿ ಮಠಕ್ಕೆ ತೋರಿದ ಗೌರವ, ಇವುಗಳನ್ನೆಲ್ಲ 'ಕೆಳದಿ ನೃಪವಿಜಯ'ದಲ್ಲಿ ಚಿತ್ರಿಸಲಾಗಿದೆ.[೬] ವೆಂಕಟಪ್ಪನು ಶೃಂಗೇರಿ ಮಠದೊಂದಿಗೆ ಇರಿಸಿಕೊಂಡ ಸಂಬಂಧವನ್ನು

'ಗುರುವಂಶಕಾವ್ಯ'ದಲ್ಲಿಯೂ ವರ್ಣಿಸಲಾಗಿದೆ.[೭]

ಕಡಊರು ಸೀಮೆಯ ಲಿಂಗಲಾಪುರವನ್ನು ಶೃಂಗೇರಿ ಮಠಕ್ಕೆ ಬಿಟ್ಟ ಕಾರಣ, ಅದಕ್ಕೆ ಸಂಬಂಧಿಸಿದ ಪಟ್ಟಿ ಹಣವನ್ನು ಕೇಳಬಾರದಾಗಿ ವೆಂಕಟಪ್ಪನು ಶಾರ್ವರಿ ಸಂವತ್ಸರದ ಕಾರ್ತಿಕ ಬಹುಳ ೬ (೧೬-೧೧-೧೬೦೦) ಯಂದು ಬಾಗೂರ ವೀರಣ್ಣಗೆ ನಿರೂಪ ಕಳುಹಿಸಿದನು.[೮]

ಪ್ರಥಮ ಶ್ರೀ ಅಭಿನವ ನರಸಿಂಹ ಭಾರತೀ ಸ್ವಾಮಿಗಳು ಬಿದರೂರಿಗೆ ಹೋದ ಸಂದರ್ಭದಲ್ಲಿ, ವೆಂಕಟಪ್ಪನು ಶೃಂಗೇರಿ ಮಠದ ಧರ್ಮಕ್ಕಾಗಿ ಮುಕ್ಕರನಾಡ ಸೀಮೆಯ ಗದ್ಯಾಣ ೫೦ ಹಣ ೭ ಮತ್ತು ೧ ಮುಪಾಗದ ಭೂಮಿಯನ್ನು ದಾನ ಮಾಡಿದನೆಂದು, ನಾಯಕನು ಕಳಶಣ್ಣಗೆ, ಶಾರ್ವರಿ ಸಂವತ್ಸರದ ಕಾರ್ತೀಕ ಬ. ೧೨ (೨೨-೧೧-೧೬೦೦) ಯಂದು, ಹೊರಡಿಸಿದ ನಿರೂಪದಿಂದ ತಿಳಿದುಬರುತ್ತದೆ.[೯] ಈ ಸತ್ಕಾರ್ಯಕ್ಕಾಗಿ ವೆಂಕಟಪ್ಪನಿಗೆ "ಶ್ರಂಗೇರಿ ಪ್ರತಿಷ್ಠಾಪಕ" ಎಂಬ ಪ್ರಶಸ್ತಿ ಲಭಿಸಿತು.[೧೦]

ಆಶ್ರಮ ಧರ್ಮದ ವಿಷಯದಲ್ಲಿ ಗೊಂದಲ ಉಂಟಾದಾಗ, ಸಂಬಂಧಿಸಿದ ಕೋಮಿನವರು ಕೆಳದಿ, ಸೋದೆ, ಬಿಳಗಿ ಮತ್ತು ಗೇರುಸೊಪ್ಪೆಯ ಅರಸುಗಳಿಗೆ ಅರಿಕೆ ಮಾಡಿಕೊಂಡಾಗ, ಅಂತಿಮ ನಿರ್ಣಯ ನೀಡುವಂತೆ ಅರಸುಗಳು ಶೃಂಗೇರಿ ಜಗದ್ಗುರುಗಳನ್ನು ವಿನಂತಿಸಿ ಕೊಳ್ಳುತ್ತಿದ್ದರೆಂದು ಕಡತದಲ್ಲಿಯ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[೧೧] ಜಗದ್ಗುರುಗಳು ಮಯೂಖ, ಹೇಮಾದ್ರಿ, ಪರಾಶರ, ವಿಜ್ಞಾನೇಶ್ವರ, ನಿರ್ಣಯಸಿಂಧು, ಭೈರವಪುರಾಣ, ಮುಂತಾದ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಆಧಾರವಾಗಿರಿಸಿಕೊಂಡು, ವೈಶ್ಯಕೊಂಕಣಿಗರಿಗೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮ ಮತ್ತು ಪೌರೋಹಿತ್ಯ, ವೇದಾಧ್ಯಯನ, ದೇವರ ಪೂಜೆ, ಮೆರವಣಿಗೆ ತಳಿಗೆ, ತೋರಣ, ಕಳಸ, ಕನ್ನಡಿ, ದಂಡಿಗೆ, ಬಾಸಿಂಗ ಇತ್ಯಾದಿ ಸಲ್ಲವು ಎಂದು ನಿರ್ಣಯ ನೀಡಿದರು.

ಶೃಂಗೇರಿಯಲ್ಲಿ ಪ್ರಥಮ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಯೋಗ ಸಾಮ್ರಾಜ್ಯವನ್ನಾಳುತ್ತಿದ್ದಾಗ (ಕ್ರಿ.ಶ. ೧೬೨೨- ಕ್ರಿ. ಶ. ೧೬೬೩), ಕೆಳದಿ ಸಂಸ್ಥಾನವನ್ನು ಹಿರಿಯ ವೆಂಕಟಪ್ಪ ನಾಯಕನ ಮೊಮ್ಮಗ ವೀರಭದ್ರ ನಾಯಕನು ಆಳುತ್ತಿದ್ದನು (ಕ್ರಿ. ಶ. ೧೬೨೯- ಕ್ರಿ. ಶ.೧೬೪೫).

## ವೀರಭದ್ರ ನಾಯಕ

ವೀರಭದ್ರ ನಾಯಕನು ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ಪಟ್ಟಗುಪ್ಪೆ ಹೊಳೆ ಬಳಿಯ ಮನೆವಾರ್ತೆ ವೆಂಕಣ್ಣನು ಕಟ್ಟಿಸಿದ ಮಠವನ್ನು ಸಮರ್ಪಿಸಿದ್ದಕ್ಕೆ ಸಂಬಂಧಿಸಿದ ತಾಮ್ರಶಾಸನದ ಪ್ರತಿಯೊಂದು ಕಡತದಲ್ಲಿ ಉಲ್ಲೇಖವಾಗಿದೆ.[೧೨] ಆ ಮಠದ ದೇವಪೂಜೆ, ಅಮೃತಪಡಿ ಮತ್ತು ನಂದಾದೀಪ್ತಿಗಾಗಿ ವೀರಭದ್ರನಾಯಕನು ಶಾಲಿವಾಹನ ಶಕವರುಷ ೧೫೫೨ನೆಯ ಶುಕ್ಲ ಸಂವತ್ಸರದ ಪುಷ್ಯ ಶು. ೧೦ (೧೫-೧೨ ೧೬೨೯) ಯಂದು ಪಟ್ಟಗುಪ್ಪೆ ಸೀಮೆಯೊಳಗಿನ ಏಳು ಹಣ, ಅಡ್ಡದ, ಚಉಡಿಸೆಟ್ಟಿ ಕೊಪ್ಪ ಗ್ರಾಮದ ಸರ್ವಸ್ವಾಮ್ಯವನ್ನು ಪೂರ್ವದಿಂದ ಬಂದ ಮರ್ಯಾದೆಯಂತೆ ದೇವತಾವೆಚ್ಚ ಮತ್ತು ಸತ್ರ ಧರ್ಮವನ್ನು ನಡೆಸಿ ಬರುವಂತೆ ತಾಮ್ರಶಾಸನ ನೀಡಿದನೆಂದು ದಾಖಲೆಯಲ್ಲಿ ನಮೂದಿಸಲಾಗಿದೆ. ಪೂರ್ವದಲ್ಲಿ ವೆಂಕಟಪ್ಪನಾಯಕನು ಚಉಡಿಸೆಟ್ಟಿ ಗ್ರಾಮವನ್ನು ಶೃಂಗೇರಿ ಮಠಕ್ಕೆ ನೀಡಿದ ಸಮಾಚಾರವೂ ದಾಖಲೆಯಲ್ಲಿ ಉಲ್ಲೇಖವಾಗಿದೆ. ತಾಮ್ರಶಾಸನದ ೩ ಹಲಿಗೆಗಳಲ್ಲಿಯ ಪಾಠವನ್ನು ಪ್ರಸ್ತುತ ಕಡತದಲ್ಲಿ ಉಲ್ಲೇಖಿಸಲಾಗಿದ್ದು ಅಂತ್ಯದಲ್ಲಿ, "ಆದಿತ್ಯ, ಚಂದ್ರ" ಎಂಬ ಸಾಕ್ಷಿ ಗ್ರಂಥವನ್ನು ಬರೆಯಲಾಗಿದೆ.

ತಮಗೆ ಸಲ್ಲದ ಲಾಂಛನವನ್ನು ತೀರ್ಥಹಳ್ಳಿಯ ಸ್ವಾಮಿಗಳು ಪ್ರದರ್ಶಿಸಿರುವರಾಗಿ ಶೃಂಗೇರಿ ಮಠದ ಅಧಿಕಾರಿಗಳು ವೀರಭದ್ರನಾಯಕನಿಗೆ ದೂರಿತ್ತರು. ನಾಯಕನು ತೀರ್ಥಹಳ್ಳಿ ಸ್ವಾಮಿಗಳು ಆ ರೀತಿ ಮಾಡುವದನ್ನು ತಡೆಹಿಡಿದು, ಮಿಕ್ಕೆಲ್ಲ ಸನ್ಯಾಸಿಗಳಿಂದ ಶೃಂಗೇರಿ ಜಗದ್ಗುರುಗಳಿಗೆ ಗೌರವ ಸಲ್ಲುವುದಾಗಿ, ಶೃಂಗೇರಿ ಗುರುಗಳಿಗೆ ಪತ್ರ ಕಳುಹಿದನು.[೧೩] ಅದೇ ರೀತಿ, ಕೂಡ್ಲಿ ಮಠದ ಸ್ವಾಮಿಗಳು ಬಿಜಾಪುರದ ಆಧಿಕಾರಿಗಳನ್ನು ಪ್ರಚೋದಿಸಿ, ಹರಕೆರಿ ಮತ್ತು ಮಂಡಲಿ ಗ್ರಾಮವನ್ನು ಪಡೆಯಲೆತ್ನಿಸಿದಾಗ ವೀರಭದ್ರ ನಾಯಕನು, ಶ್ರೀ ಸಚ್ಚಿದಾನಂದ ಭಾರತೀಸ್ವಾಮಿಗಳ ಒಡೆತನಕ್ಕೆ ಧಕ್ಕೆ ಬರದಂತೆ ನೋಡಿಕೊಳ್ಳಲು ವಿಜಪುರದ ಅಧಿಕಾರಿಗಳಿಗೆ[೧೪] ಪತ್ರ ಬರೆದನು.[೧೫]

ಶಾಲಿವಾಹನ ಶಕ ೧೫೫೨ ನೆಯ ಶುಕ್ಲ ಸಂವತ್ಸರದ ಪುಷ್ಯ ಶು. ೧೦ಯಂದು ಶೃಂಗೇರಿಯ ಶ್ರೀಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ವೀರಭದ್ರ ನಾಯಕನು ವಿಶ್ವನಾಥಪುರ ಅಗ್ರಹಾರದ ೫೪ ವೃತ್ತಿಯೊಳಗಿನ ಕುಂದನೂರು ಗ್ರಾಮದಲ್ಲಿಯ ಕೆಲವು ಮೂಲ ವೃತ್ತಿವಂತರು ನಷ್ಟ ಸಂತಾನವಾಗಿ ಹೋದದ್ದರಿಂದ, ಸರ್ವಸ್ವಾಮ್ಯವನ್ನು ಅನುಭವಿಸಿಕೊಂಡು, ಪಟ್ಟಗುಪ್ಪೆ ಹೊಳೆ ಬಳಿಯ ಮನೆವಾರ್ತೆ ವೆಂಕಣ್ಣನು ಕಟ್ಟಿಸಿದ ಮಠದ ಛತ್ರಧರ್ಮವನ್ನು ನಡೆಸಿಕೊಂಡು ಬರಲೆಂದು, ಸರ್ವಮಾನ್ಯವಾಗಿ ಬಿಟ್ಟನೆಂದು ಕಡತದಲ್ಲಿಯ ತಾಮ್ರಶಾಸನದ ಪ್ರತಿಯಿಂದ ತಿಳಿದುಬರುತ್ತದೆ.[೧೬] ಪಟ್ಟಗುಪ್ಪೆ ಹೊಳೆ ಬಳಿಯ ಮಠದ ದೇವಪೂಜೆ, ಅಮೃತಪಡಿ ಮತ್ತು ನಂದಾದೀಪ್ತಿಗಾಗಿ, ಹಿರಿಯ ವೆಂಕಟಪ್ಪನಾಯಕನು ಪಟ್ಟಗುಪ್ಪೆ ಸೀಮೆಯೊಳಗಿನ ಚಉಡಿಸೆಟ್ಟಿ ಕೊಪ್ಪದ ಗ್ರಾಮವನ್ನು ವಿಭವ (ಕ್ರಿ. ಶ. ೧೬೨೯) ಸಂವತ್ಸರದಲ್ಲಿ ಬಿಟ್ಟಿದ್ದನೆಂದೂ ಶಾಸನದಲ್ಲಿ ನಮೂದಿಸಲಾಗಿದೆ. "... ಶ್ರೀಮದ್ದೆಡವ ಮುರಾರ್‍ರಿ ಕೊಟ್ಟೆ ಕೊಳಾಹಳ ವಿಶುಧ ವೈದಿಕಾದ್ವೈತ ಸಿಧಾಂತ್ತ ಪ್ರತಿಷ್ಠಾಪಕ

ಶಿವಗುರು ಭಕ್ತಿ ಪರಾಯಣರಾದ ಕೆಳದಿ ವೆಂಕಟಪ್ಪ ನಾಯಕರ ಪಉತ್ರರಾದ ಭದ್ರಪನಾಯಕರ ಪುತ್ರರಾದ ವಿರಭದ್ರ ನಾಯಕರು..." ಎಂಬುದಾಗಿಯೂ ಶಾಸನದಲ್ಲಿ ನಮೂದಿಸಲಾಗಿದೆ. "... ಮೂವತ್ತು ವಂದು ವರಹಾನು ಯೆಳು ಹಣ ಅಡದ ಭೂಮಿಗೆ ಸಲುವ ಸರ್ವಸ್ವಾಂಮ್ಯವಂನ್ನು ಪ್ರಾಕು ಮರಿಯಾದೆಯಲ್ಲಿ ಆಗಮಾಡಿಕೊಂಡು ದೆವತ್ತಾ ವೆಚ್ಚ ಸತ್ರ ಧರ್ಮವನು ನಡಸಿ ಬಹಿರಿ ಯಂದು ಕೊಟ್ಟ ತ್ತಾಂಮ್ರಶಾಸನ। ಆದಿತ್ಯಚಂದ್ರ ಎಂಬ ಗ್ರಂಥಗ..." ಎಂದು ಶಾಸನದ ಅಂತ್ಯದಲ್ಲಿ ಉಲ್ಲೇಖಿಸಲಾಗಿದೆ.

ಸಕಲ ಮಠಗಳು ಶೃಂಗೇರಿ ಮಠಕ್ಕೆ ಅಧೀನವಾಗಿರುವಂತೆ ವೀರಭದ್ರನಾಯಕನು ಮೂವತ್ತೆರಡು ಗ್ರಾಮಗಳ ಪ್ರಜೆಗಳಿಗೆ ನಿರೂಪ ಹೊರಡಿಸಿದನೆಂದು ಕಡತ ಒಂದರ ಆಧಾರದಿಂದ ಹೇಳಬಹುದು. "... ವಿಕ್ರಮ ಸಂವತ್ಸರದ ವೈಶಾಖ ಶು ೧೨ ರಲೂ ಶ್ರೀಮತ್ಕೆಳದಿ ವೀರಭದ್ರ ನಾಯ್ಕರೂ ಪರಿಪಾಡಿ ಮೂವತೆರಡು ಗ್ರಾಮದ ಪ್ರಜೆಗಳು ಮುಂತ್ತಾದ ಸಮಸ್ತರ್ಗಿಗೆ ಬರ್ಸ್ಸ ಕಳುಹಿದ ಕಾರ್ಯ ಸಕಲ ಧರ್ಮಸ್ಥಳ ಮಠ ಮುಂತ್ತಾದಕೆಲಾ ಶ್ರುಂಗೆರ್ರಿ ಸ್ವಾಮಿಗಳವರ ಅಧಿನದಲ್ಲಿ ನಡೆದು ಬಂದದು ಸರ್ರಿಯಷ್ಟೆ ಪಲಿಪಾಡ್ಡಿ ಮಠದ ಸನ್ಯಾಸಿಗಳ ಮೆಲ್ಲೆ ಅಪವಾದ ಬಂದು ಅವರು ಯದಹೊಗಿದರೂ ಯಿ ಪಲಿಪಾಡ್ಡಿ ಮಠದ ವಿಚಾರವಂನ್ನು ನಡಸುವುದಕ್ಕೆ ಶ್ರುಂಗೆರ್ರಿ ಸ್ವಾಮಿಗಳವರುಧಿನ ಮಾಡ್ಡಿಸಿ ನರಸಪ ಮುಂತ್ತಾದವರ್ರಿಗೆ ಬರ್ಸ್ಸದೆವೆ ಆ ಪ್ರಮಾಣು ಕಾರುಕಳದ ಸಿಮೆಯಲ್ಲು ಕುಂಭಾಡ್ಡಿ ಮಠ ಕೃರಬೆಟಿನ ಮಠ ಶಂಕಂತ್ತಾಳು ಬೊಳಪಾಡ್ಡಿ ಮಠ ಮುಂತಾದಕ್ಕೆ ಸ್ವಾಮಿಗಳು ಯಿಟ ಮನುಶ್ಯರ ಮುಖಾಂತ್ರ ನಿಉಕೊಟ್ಟು ಬಾಹ ಅಕಿ ರ್‍ಯೊವಂನ್ನು ಕೊಡಬಾಹದು ಈ ವಿಶಯದಲ್ಲಿ ಯಾರು ತವ್ವ ಸಲಾಗರ್ರು ಯಂದು ನಿ ೧..."[೧೭] ಇತ್ಯಾದಿ ವಿಷಯಗಳನ್ನು ಕುರಿತು ನಿರೂಪದಲ್ಲಿ ಉಲ್ಲೇಖಿಸಲಾಗಿದೆ.

**ಶಿವಪ್ಪನಾಯಕ**

ವೀರಭದ್ರನಾಯಕನ ನಂತರ ಚಿಕ್ಕಸಂಕಣ್ಣ ನಾಯಕನ ಮೊಮ್ಮಗ ಮತ್ತು ಸಿದ್ಧಪ್ಪನಾಯಕನ ಹಿರಿಯ ಮಗ ಶಿವಪ್ಪನಾಯಕನು (ಕ್ರಿ. ಶ. ೧೬೪೫-ಲಿ. ಶ. ೧೬೬೦) ವೀರಭದ್ರನಾಯಕನ ಕಾಲದಲ್ಲಿಯೇ ಅಪಾರ ಆಡಳಿತ ಅನುಭವ ಪಡೆದು ಸಾಮಂತ ಪಾಳೆಗಾರರನ್ನು ಅಂಕಿತದಲ್ಲಿರಿಸಿಕೊಂಡು ಸದ್ಧರ್ಮದಿಂದ ರಾಜ್ಯಭಾರ ಮಾಡಿದನೆಂದು ತಿಳಿದುಬರುತ್ತದೆ. ಕೆಳದಿನಾಯಕರ ವಂಶಾವಳಿಯಲ್ಲಿಯೇ ಶಿವಪ್ಪನ ಕೀರ್ತಿ ಮುಕುಟಪ್ರಾಯವಾದುದು. ತನ್ನ ಪೂರ್ವಿಕರಂತೆ ಈತನೂ ಅನೇಕ ಧಾರ್ಮಿಕ ಸಂಸ್ಥೆಗಳನ್ನು ಪೋಷಿಸಿದನು. ವಿಜಾಪುರದ ರಣದುಲ್ಲಾಖಾನನ ಇಕ್ಕೇರಿಯನ್ನು ಲೂಟಿ ಮಾಡಿದ್ದರಿಂದ, ೧೬೩೯-೪೦ರ ಅವಧಿಯಲ್ಲಿ ನಾಯಕನು ಬಿದನೂರಿಗೆ ಪ್ರಯಾಣಿಸಿದನು. ಈತ ಬಿದನೂರನ್ನು ರಾಜಧಾನಿಯಾಗಿಸಿಕೊಂಡು ಕೆಳದಿಯನ್ನಾಳಿದನು. ನಾಯಕನು ವೀರಶೈವನಾಗಿದ್ದರೂ, ಶೃಂಗೇರಿ ಅದ್ವೈತ ಮಠವನ್ನು ಪೋಷಿಸಿ, ಬ್ರಾಹ್ಮಣರಿಗೆ ದಾನ ಧರ್ಮಗಳನ್ನು ಮಾಡಿದನು. ಭೂಮಿಗೆ ಸಂಬಂಧಿಸಿದ ವಿಷಯಗಳನ್ನೆಲ್ಲ ಸುವ್ಯವಸ್ಥಿತಗೊಳಿಸಿ, ಸರಕಾರಕ್ಕೆ ಮತ್ತು ಪ್ರಜೆಗಳಿಗೆ ಹಿತವಾಗುವ ಸಿಸ್ತು (ಪ್ರಮಾಣಬದ್ಧವಾದ ಭೂಕಂದಯ) ರೂಪಿಸಿ, ಅದನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದದ್ದರಿಂದ, ಆತನು 'ಸಿಸ್ತಿನ ಶಿವಪ್ಪ' ಎಂದೇ ಪ್ರಸಿದ್ಧಿಗೆ ಬಂದನು.

ಶೃಂಗೇರಿ ಮಠದ ಗುರುಪರಂಪರೆಯಲ್ಲಿ ಪ್ರಥಮ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಶಿವಪ್ಪನಾಯಕನ ಸಮಕಾಲೀನರು. ಶೃಂಗೇರಿ ಧರ್ಮಸಂಸ್ಥಾನದ ಕೆಲವು ಗೇಣಿದಾರರು ಮಠಕ್ಕೆ ಕಾಲಕಾಲಕ್ಕೆ ಗುತ್ತಿಗೆಯನ್ನು ಸರಿಯಾಗಿ ಸಲ್ಲಿಸದ್ದರಿಂದ, ಶ್ರೀಗಳವರು ಶಿವಪ್ಪನಾಯಕನಿಗೆ ವಿಷಯ ತಿಳಿಸಲಾಗಿ, ನಾಯಕನು ವಿಚಾರಣೆ ಮಾಡಿ, ಇಂಥ ಅಕಾರ್ಯಗಳನ್ನು ನಿಲ್ಲಿಸಿದ್ದಲ್ಲದೆ, ಮಠಕ್ಕೆ ನ್ಯಾಯವಾಗಿ ದೊರೆಯಬೇಕಾದ ಭೂಮಿಯನ್ನೂ ದೊರಕಿಸಿಕೊಟ್ಟನು. ಕಡತದಲ್ಲಿಯ ದಾಖಲೆಯೊಂದು ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಪಾಠ ಇಂತಿದೆ.

"ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯವರ್ಯ್ಯ ಪದವಾಕ್ಯ ಪ್ರಮಾಣ ಪಾರವಾರ ಪಾರಿಣ ಯಮನಿಯಮಾದ್ಯಷ್ಟಾಂಗ ಯೋಗ ನಿರುತರಾದ ಶ್ರುಂಗೆರಿ ಶ್ರೀ ಸಚಿದಾನಂದ ಭಾರತಿ ಸ್ವಾಮಿಗಳಿಗೆ"॥ ॥ವಿಜಯ ಸಂವತ್ಸರದ ಜೆಷ್ಠ ಶು ೧೩ರಲ್ಲು ಕೇಳದಿ ಶಿವಪ್ಪನಾಯಕರು ಮಾಡುವ ಬಿಂನಹಾ। ನಿವು ತಾತ್ತಂಭಟ್ಟನಾ ಕೂಡಾ ಕಳುಹಿದ ಆಶಿರ್ವಾದ ಪತ್ರಿಕೆಯಿಂದೆಲ್ಲಾ ವಿವರವನು ಮನಶಿಗೆ ತ್ತಂದೆಉ ನಿಂಮ ಮಠದ ಧರ್ಮಕ್ಕೆ ಹಿಂದೆ ಹರಿಹರ್‍ರ ಮಹಾರಾಯರ್‍ರು ಮಲ್ಲಿಕಾರ್ಜುನ ವಿದ್ಯಾಶಂಕರ್‍ರ ಸರಸ್ವತ್ತಿ ಮುಂತಾದ ದೆವತ್ತಾ ಪೂಜೆಗಳಿಗೂ। ಮಠದಲ್ಲಿ ಯಿರ್‍ರು ಬ್ರಾಂಭರ ಜೀವನ। ಅಂನಧರ್ಮ ಅಗ್ರಹಾರಗಳಲ್ಲಿ ಯಿರುವ ಬ್ರಾಂಭರುಗಳಿಗೆ। ಉತ್ತಿ ನಡೆದು ಬರುವ ಹಾಗೆ ಸಹಾ। ಬಿಟ್ಟ ಶಿಮೆಯಂನ್ನು। ಮಠದಿಂದಾ ಹೆರಳ ದ್ರವ್ಯಾ ಮುಟ್ಟಿಸಿ ಭೂಮಿಗಳಲ್ಲಿ ಪೂಗಾರಾಮಾದಿಗಳ ಹಾಕಿಸಿ ಉತ್ಪತ್ಯಾಧಿಕವಾಗುವ ಪ್ಪಂದಾ ಆಗುಮಾಡಿದಲ್ಲಿ ಪ್ರಜಾಧರ್ಮದವರ್‍ರು ಆ ಭೂಮಿಗಳ ಅನುಭವಾ ಮಾಡಿಕೊಂಡು ಮಠ ದೆವಸ್ವ ಅಗ್ರಹಾರಗಳ ಬ್ರಾಂಹ್ಮರ್‍ರುಗಳಿಗೆ ಕೊಡುವ ಹಣಕ್ಕೆ ದಿಂಡೆತ್ತನಾ ಮಾಡುತ್ತಾರೆಂದು ನಿಉ ಬಿದರೂರ್‍ರಿಗೆ ತೆರಳಿದಾಗ್ಯೆ ಮಠದಿಂದಾ ಉತ್ಪತ್ಯಾಧಿಕ ಮಾಡಿಸಿದ್ದನ್ನು ಯಲ್ಲಾ ಧರ್ಮಗಳಿಗು ಉಪಯೋಗವಾಗುವಪ್ಪಂದ ಆಚಂದ್ರಾರ್ಕ ನಡೆಯುವಂತ್ತೆ ಅವಗಳ ನಿಗ್ರಹಿಶಿ ಕಟ್ಟು ಮಾಡ್ಸಿಕೊಡಬೆಕೆಂದು ನಿರೂಪಿಶಿದ ರ್‍ರಿತ್ತಿಗೆ ನಾಉ ಮನಶಿಗೆ ತ್ತಂದು ನಿಂಮ ಮಠದ ಶಿಮೆಯಲ್ಲಿ ವಿಚಾರ್‍ರಿಶಿ। ಅಉಗಳನ್ನೆಲ್ಲಾ ನಿಗ್ರಹಿಶಿ ನಿವು ಮಾಡಿಶಿದ

ಉತ್ಪತ್ಯಾಧಿಕದ ದ್ರವ್ಯ ಸಹಾ ವಟ್ಟು ಮಾಡಿಶಿ ಮಠ ದೆವಸ್ವ ಅಗ್ರಹಾರಗಳಿಗೆ ಸಹಾ। ನಿಂಮ ಅನುಮತ್ತಿಯಿಂದ ಪಂದ ವಿಂಗಡಿಶಿ ನಡವ ಮರ್‍ಯ್ಯಾದಿಗೆ ಬರಸಿದ ಶಿಸ್ತು ಪ್ರಮಾಣಿನಲ್ಲಿ ಸಕಲವು ಸಾರೋಧಾರ ವ್ಯಕ್ತವಾಗಿ ನಡೆಸುತ್ತೆನೆ. ... ... ಬರ್‍ರೆಶಿದ ಪ್ರಮಾಣಿಗೆ ನ್ಯೂನತ್ತೆ ಆದರ್‍ರೆ ಹೈಮಾಲೆ ನಡೆಶಿದವ್ರಿಗೂ ಹೊಬಳಿ ಚಾವಡಿ ಸೆನಭವರ್‍ರುಗಳಿಗು ತ್ತಕ್ಕ ಬುದ್ಧಿ ಆದಿತ್ತೆಂದು ಬರಶಿದೆವಾಗಿ ನಿಉ ಚಂದ್ರಮೌಳಿಶ್ವರ್‍ರ ಸ್ವಾಮಿಯ ವಿಭೂತ್ತಿ ಪ್ರಸಾದ ಸಹ ಕಳುಹಿದ್ದಿತ್ತೆಂದು ಬರ್‍ರೆಶಿ ಯಿದ್ರಿ ನಿಉ ತಪೋನಿಧಿಗಳು ಮಹಾನುಭಾವರಾಗಿ ಕರ್ಮ್ಮಕಾರ್ಯ್ಯದಲ್ಲಿ ನಿಷ್ಠರಾಗಿ ಯಿಹಲ್ಲಿ ಮಾಡಿದ ಕಟ್ಟಲೆ ಪ್ರಮಾಣಿನ ಮಲ್ಲಿಕಾರ್ಜುನ ವಿದ್ಯಾಶಂಕರ್‍ರ ಸರಸ್ವತ್ತಿ ಮೊದಲಾದ ದೆವತ್ತಾ ಸೆವೆ ಅಂನಧರ್ಮ್ಮ ಮುಂತ್ತಾದ್ದಲ್ಲು ಸಾಂಗವಾಗಿ ನಡೆಶಿಕೊಡು ನಂಮ ಉತ್ತರೊತ್ತರಾಭಿಉದ್ದಿನು। ಕ್ಷೆಮವನು ಅಪೆಕ್ಷಿಶಿ ಆರ್‍ರಿತ್ತಿಗೆ ಸ್ವಾಮಿಯ ಪ್ರಾರ್ಥನೆ ಮಾಡಿ ಆಶಿರ್ವದಿಸುವಂತಾದ್ದು ನಿಮಗೆ ಸಹಜವಷ್ಟೆ ನಾಉ ನಿಮಗೆ ವೆಗ್ಗಳಾ ಬರಸುವದೇನು ಯಿಧೆ। ಕಳುಹಿಸಿದ ಮಂತ್ರಾಕ್ಷತ್ತೆ ಪ್ರಸಾದ ಬಂತು। ತೆಗೆದುಕೊಂಡೆವಾಗಿ ಬಿನ್ನಹ।"[೧೮]

ಕೂಡಲಿ ಮಠಕ್ಕೆ ಸಲ್ಲುವ ದೇವಪೂಜೆ, ಎಲ್ಲ ಶೃಂಗೇರಿ ಸಂಸ್ಥಾನಕ್ಕೆ ಸಲ್ಲಬೇಕಾಗಿ ಶಿವಪ್ಪ ನಾಯಕನು ಶಿವಮೊಗ್ಗೆ ಭದ್ರಪ್ಪ ನಾಯಕನಿಗೆ ವಿಳಂಬಿ ಸಂವತ್ಸರದ ಮಾಘ ಬ. ೫ರಂದು (೩-೧-೧೬೫೯) ನಿರೂಪ ಕಳಿಸಿದನು.[೧೯] ಕೂಡಲಿ ಶೃಂಗೇರಿ ಮಠದ ವಿದ್ಯಾರಣ್ಯರು ಮೃತರಾದ ಮೇಲೆ, ಆ ಮಠಕ್ಕೆ ಸೇರಿದ ಗ್ರಾಮಗಳನ್ನು ಅರಮನೆಗೆ ಹವಾಲೆ ಮಾಡಿದ್ದರಿಂದ, ಆ ಗ್ರಾಮಗಳನ್ನು ಶೃಂಗೇರಿ ಸ್ವಾಮಿಗಳವರ ಬಗೆಯವರ ಹವಾಲೆ ಮಾಡಿಕೊಡಬೇಕಾಗಿ ಶಿವಪ್ಪನಾಯಕನು ನರಸಗೆ ಶಾರ್ವರಿ ಸಂವತ್ಸರದ ಭಾದ್ರಪದ ಶು. ೯ (೩-೯೧೬೬೦) ಯಂದು ನಿರೂಪ ಬರೆಸಿ ಕಳುಹಿದನು. ನಿರೂಪದ ಪಾಠ ಇಂತಿದೆ: "ಕೂಡಲಿ ಮಠದ ಅಮ್ಮಾಜಿ ಸ್ವಾಮಿಗಳಿಗೆ ಪ್ರಾಕು ಉತ್ತಾರವಾಗಿ ಯಿದ ಗ್ರಾಮಗಳು ಅವರ ಶಿಷ್ಯ ವಿದ್ಯಾರಂಣ್ಯರು ಮುಕ್ತರಾದ ಮೇಲೆ ಅರಮನೆ ಹವಾಲೆಯ ಮಾಡಿಕೊಂಡಿತ್ತಲ್ಲಿ ಅ ಮಠಉ ಶ್ರುಂಗೇರಿ ಕೂಡ್ಡಿದ ಸಮ್ಮಂಧ ಮಠದ ಧರ್ಮಕೆ ಪೂರ್ವಪ್ರಮಾಣಿನ ಗ್ರಾಮಗಳ ಉತ್ತಾರವ ಕೊಡಬೆಕೆಂದು ಶ್ರುಂಗೇರಿ ಸ್ವಾಮಿಗಳು ಆಶಿರ್ವಾದ ಬರೆಸಿದಲ್ಲಿ ಮಠದಲ್ಲಿ ಯೆಂದಿನ ರೀತಿ ಧರ್ಮ್ಮವ ಸಾಂಗವಾಗಿ ನಡೆಶಿಕೊಂಡು ಬಾಹಾಗೆ ಕಟ್ಟು ಮಾಡಿಸಿಕೊಟ್ಟಿದು ಹೊಳೆಹೊಂನೂರ ಸಿಮೆಯೊಳಗಣ ಹಳೆಭೈರಯಿರವನಹಳ್ಳಿ ಗ ೧೨ ॥ ೧ ಕನಸಿನಕಟ್ಟೆಯಿಂದ ಗ ೨೫.೨ ಮೆಲುವಾಸಿ ಬಗೆಯಲ್ಲಿ ಗ ೩೪ ॥ ೩ ಉಭಯಂ ಗ ೬೦ ಉಭಯಂ ಗ ೭೨ ॥ ೧ ಗಾಜನೂರು ಸಿಮೆ ಯೆಡೆತೊರೆಯಲ್ಲಿ ಮಾಚೆನಹಳ್ಳಿಯಿಂದ ಗ ೫೦ ಉಭಯಂ ಗ ೧೨೨ ॥ ೧ ವನ್ನು ಶಿವಾರ್ಪಿತವಾಗಿ ಬಿಟ್ಟಿಧೆವೆ ಯಿ ಗ್ರಾಮಗಳ ಸ್ವಾಮಿಗಳ ಬಗೆಯವರ ಹವಾಲೆ ಮಾಡಿಕೊಡುವದು । ಯಿ ಕಾಗದದ ಸೆನಬವರ ಕಡಿತಕ್ಕೆ ಬರಸಿ ತಿರಿಗಿ ಅವರ ಬಗೆಯವರ ವಶಕ್ಕೆ ಕೊಡುವದೆಂದು ಬರದ ನಿರೂಪ ಪ್ರತಿ।[೨೦]

## ಇಮ್ಮಡಿ ಭದ್ರಪ್ಪ ನಾಯಕ

ಕೆಳದಿ ಮನೆತನದಲ್ಲಿ ಹತ್ತನೆಯವನಾದ ಇಮ್ಮಡಿ ಭದ್ರಪ್ಪ ನಾಯಕನು (ಕ್ರಿ. ಶ. ೧೬೬೧-ಕ್ರಿ. ಶ ೧೬೬೭), ಶೃಂಗೇರಿ ಮಠಕ್ಕೆ ಕೆರೆಹಳ್ಳಿ ಗಾವಟೂರು ಗ್ರಾಮದ ಗ ೪೬೦ ॥ ೧ (ನಾನೂರು ಅರವತ್ತು ವರಹ ಮತ್ತು ಆರು ಹಣ)ವಿನ ಭೂಮಿಯನ್ನು, ರವಿವಾರ, ಮಕರ ಸಂಕ್ರಮಣ ಪುಣ್ಯಕಾಲದಲ್ಲಿ ಶ್ರೀ ಚಂದ್ರಮೌಳೇಶ್ವರನ ಸನ್ನಿಧಾನದಲ್ಲಿ ಶಿವಾರ್ಪಿತವಾಗಿ ಬಿಟ್ಟನೆಂಬ ಸಮಾಚಾರ, ಭದ್ರಪ್ಪ ನಾಯಕನು ಪ್ಲವ ಸಂವತ್ಸರದ ಪುಷ್ಯ ಬ. ೭ (ಮಂಗಳವಾರ, ३-೧೨-೧೬೬೨) ಆವಿನಹಳ್ಳಿ ಕೃಷ್ಣಪ್ಪನಿಗೆ ಬರೆಸಿ ಕಳುಹಿದ ಕಾರ್ಯದಿಂದ ಖಚಿತವಾಗುತ್ತದೆ.[೨೧] ಶೃಂಗೇರಿ ಮಠದ ಅಂದಿನ ಗುರುಗಳಾದ ಪ್ರಥಮ ಶ್ರೀ ಸಚ್ಚಿದಾನಂದ ಭಾರತಿಗಳು ಬಿದರೂರಿಗೆ ಚಿತ್ತೈಸಿದಾಗ ಶ್ರೀಮಠದ ಧರ್ಮಕ್ಕೆ ಭೂಮಿಯನ್ನು ದಾನ ಮಾಡಲಾಯಿತೆಂದೂ, ಪೂರ್ವದಲ್ಲಿ ಆ ಗ್ರಾಮವು ಶೃಂಗೇರಿ ಮಠಕ್ಕೆ ನಡದು ಬರುತ್ತಿತ್ತೆಂದೂ, ನಂತರದಲ್ಲಿ ಅದು ಅರಮನೆಯ ಹವಾಲಗಿತ್ತೆಂದೂ ನಿರೂಪದಿಂದ ತಿಳಿದುಬರುತ್ತದೆ. ಕೆರೆಹಳ್ಳಿ ಮತ್ತು ಗಾವಟೂರು ಗ್ರಾಮಗಳ ಒಕ್ಕಲುಗಳನ್ನೂ ಸಹ ಮಠದ ಹವಾಲೆ ಮಾಡಿಕೊಡುವಂತೆ ನಾಯಕನು ಕೃಷ್ಣಪ್ಪನಿಗೆ ಆಜ್ಞಾಪಿಸಿದನೆಂಬ ಸಂಗತಿಯೂ ಉಲ್ಲೇಖವಾಗಿದೆ.

## ಮೊದಲನೆ ಸೋಮಶೇಖರ ನಾಯಕ

ನಂತರದಲ್ಲಿ ಬಂದ ಮೊದಲನೇ ಸೋಮಶೇಖರ ನಾಯಕನು ಶೃಂಗೇರಿ ಮಠದೊಂದಿಗೆ ತನ್ನ ಪೂರ್ವಜರು ಇರಿಸಿಕೊಂಡ ಸಂಬಂಧವನ್ನು ಮುಂದುವರಿಸಿದನು. ಶೃಂಗೇರಿ ಸಂಸ್ಥಾನದಲ್ಲಿಯ ತಪ್ಪಿತಸ್ಥರನ್ನು ಶಿಕ್ಷಿಸುವ ಮಠದ ಅಧಿಕಾರವನ್ನು ನ್ಯಾಯಸಮ್ಮತವೆಂದು ಅಂಗೀಕರಿಸಿ, ಧರ್ಮವನ್ನು ಪರಿರಕ್ಷಿಸಿಕೊಂಡು ಬರುವಂತೆ ನಾಯಕನು ಪ್ರಥಮ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳಲ್ಲಿ ಪ್ರಾರ್ಥಿಸಿಕೊಂಡನು. ಕಡತದಲ್ಲಿ ನಮೂದಿಸಲಾದ ಕ್ರಿ.ಶ. ೧೬೬೩ ರ ದಾಖಲೆಯ ಪಾಠ ಇಂತಿದೆ. "ಶ್ರೀ ಮತ್ಪರಮಹಂಸ ಪರ್‍ರಿವ್ರಾಜಕಾಚಾರ್ಯ್ಯವರ್ಯ್ಯ... ಶ್ರೀ ಸಚಿದಾನಂದ ಭಾರತ್ತಿ ಸ್ವಾಮಿಗಳಿಗೆ। ಕೆಳದಿ ಸೊಮಶೆಕರ ನಾಯಕರ್‍ರು ಮಾಡುವ ಬಿಂನಹ ಕಳುಹಿದ ಆಶಿರ್ವಾದ ಪತ್ರಿಕೆಯಿಂದೆಲ್ಲ ಮನಸ್ಸಿಗೆ ತಂದೆಉ। ಮಲಣ ವಿರೂಪಾಕ್ಷನ ಸಹಾ ವಿಶೆಷ ಪಾರುಪತ್ಯದ ವಿಚಾರವಾಗಿ ಹುಜರ್‍ರು ಕರಶಿದಲ್ಲಿ ನಂಮ ಶ್ರೀಮಠದ ವಿಚಾರವೆನಿಸಿದ್ದರ್‍ರು ಪೂರ್ವದಾರ್ಭ್ಯ ನಾವೆ ವಿಚಾರವ ಮಾಡ್ದಿಸಿ ಕಟ್ಟುಮಾಡ್ದಿಸುವದೆಂದು ನಿಉ

ಬರಸಿದ್ದರ್ರಿಂದ ಅದೆ ರ್ರಿತ್ತಿಲಿ ಅವರಂನು ತ್ತಿರುಗಿ ಕಳುಹಿಶಿದ್ದೆವೆ ಘಟ್ಟಿಯಾಗಿ ವಿಚಾರವ ಮಾಡ್ಡಿಶಿ ತಪ್ಪು ಮಾಡ್ಡಿದವರಿಗೆ ಬುಧಿಯ ಹೆಳಿಶಿ ಹೊರಡಿಸುವಂಥವರ ಹೊರಡ್ಡಿಸಿ ಅಪಂಥ ಮನುಷ್ಯರ್ರ ಬದುಕಿಗೆ ಕಟ್ಟು ಮಾಡ್ಡಿಸಿ ಮಠಕ್ಕೆ ರ್ರುಣವಾಗದಂತ್ತೆ ಧರ್ಮವ ಸಾಂಗವಾಗಿ ನಡವ ರೀತಿ ಕಟಲೆ ಮಾಡ್ಡಿಸಬೆಕಾಗಿ ನಿಉ ಮಹಾನುಭಾವರ್ರು ತಪೊನಿಷ್ಟರಾಗಿಹಲ್ಲಿ ನೂತನವಾಗಿ ಬರಸುವಂಥಾದೆನದೆಯಾಗಿ।..."[೨೨]

ಶೃಂಗೇರಿ ಚಂದ್ರಮೌಳೀಶ್ವರ, ಶಾರದಾಂಬ ದೇವತಾ ಸೇವೆಗೆ ಕಂದಿಕೆರೆ ವಳಗಣ ಯೆರೆಹಳ್ಳಿ ಗ್ರಾಮದಲ್ಲಿ ಪ್ರಾಕು ಬಿಟ್ಟದ್ದ ೩೦೦ ವರಹಗಳ ಸ್ವಾಸ್ಥಿಗೆ, ರೇಖೆ ಪ್ರಮಾಣದ ಭೂಮಿ ವಿಂಗಡಿಸಿಕೊಡಿವಂತೆ ಸೋಮಶೇಖರ ನಾಯಕನು ಕ್ರೋಧಿ ಸಂವತ್ಸರ ಮಾರ್ಗಶಿರ ಶು. ೧೫ (೧೩-೧೧-೧೬೬೪) ಯಂದು, ತಿರುಮಲೆಗೆ ಆಜ್ಞಾಪಿಸಿದನು.[೨೩] ದೀಪಾವಳಿ ಹಬ್ಬದ ಉಡುಗೊರೆಯನ್ನು ಸ್ವಾಮಿಗಳಿಗೆ ಕಳುಹಿಸಿಕೊಟ್ಟನು.[೨೪]

## ಚೆನ್ನಮ್ಮಾಜಿ

ಶೃಂಗೇರಿಮಠ ಮತ್ತು ಗುರುಗಳನ್ನು ಮೊದಲನೇ ಸೋಮಶೇಖರ ನಾಯಕನ ರಾಣಿ ಚೆನ್ನಮ್ಮಾಜಿ (ಲಿ. ಸ ೧೬೭೧-ಲಿ. ಶ. ೧೬೯೭) ಗೌರವಿಸುತ್ತಿದ್ದಳೆಂಬುದಕ್ಕೆ ದಾಖಲೆಗಳೇ ಸಾಕ್ಷಿ. ದುರ್ಮತಿ ಸಂವತ್ಸರದ ನಿಜ ಆಶ್ವಿಜ ಶು. ೧೦ ಯಂದು (ಬುಧವಾರ, ೧೨-೧೦-೧೬೮೩) ಲಿಂಗಾಪುರ ಗ್ರಾಮವನ್ನು ಶೃಂಗೇರಿ ಮಠದ ಧರ್ಮಕ್ಕೆ ನಡೆದು ಬರುವ ರೀತಿ ಕಟ್ಟುಮಾಡಿಶಿ ಆ ಗ್ರಾಮವನ್ನು ಸ್ವಾಮಿಗಳ ಬಗೆ ಮನುಷ್ಯನ ಹವಾಲೆ ಮಾಡಿಕೊಡಬೇಕಾಗಿ ಚೆನ್ನಮ್ಮಾಜಿಯು ಭದ್ರಯನಿಗೆ ನಿರೂಪ ಬರೆಸಿದಳು.[೨೫] ಆರನೇ ಶ್ರೀ ನರಸಿಂಹ ಭಾರತಿಗಳು (ಕ್ರಿ. ಶ. ೧೬೬೩-ಕ್ರಿ. ಶ. ೧೭೦೫) ಚೆನ್ನಮ್ಮಾಜಿಯ ಸಮಕಾಲೀನರು.

ತನ್ನ ಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗ ಬೇಕೆಂದು, ಶೃಂಗೇರಿ ಶಾರದಮ್ಮನವರ ನಿತ್ಯ ನೈವೇದ್ಯ, ತುಪ್ಪದ ನಂದಾದೀಪ ಮತ್ತು ಉಪಾಧಿ ಬಗ್ಗೆ, ತನ್ನ ಅಜ್ಜ ಕೊನೆರಿ ಭಟ್ಟರಿಗೆ ಚೆನ್ನಮ್ಮಾಜಿಯು ಪಾಲಿಸಿದ ದಾನಪಟ್ಟೆಯನ್ನು ತಾನು ಶಿವಾರ್ಪಿತವಾಗಿ ಧಾರೆನೆರೆದುದಾಗಿ ಬರೆದುಕೊಟ್ಟ, ಪ್ರಜೋತ್ಪತ್ತಿ ಸಂವತ್ಸರದ ಮಾರ್ಗಶಿರ ಬ. ೬ (೧-೧೨-೧೬೯೧) ಯ ವಾಲೆಯ ಪ್ರತಿಯು ಕಡತದಲ್ಲಿ ಲಭಿಸಿದೆ.[೨೬]

ಶೃಂಗೇರಿ ಮಠದ ಧರ್ಮಕ್ಕೆ ಮುಕ್ಕರನಾಡು ಸೀಮೆಯೊಳಗೆ ಬಿಟ್ಟ ಗ್ರಾಮ ಸರ್ವಮಾನ್ಯವಾಗಿರುವುದರಂದ, ಆ ಸೀಮೆ ಮಣೆಗಾರ ಹಣಕಾಸು ಕೇಳದೆ ನಿರುಪದ್ರವದಲ್ಲಿ ನಡೆಸುವಂತೆ ಪ್ರಜೋತ್ಪತ್ತಿ ಸಂವತ್ಸರದ ಕಾರ್ತಿಕ ಬ. ೧೪ (ರವಿವಾರ, ೮-೧೧-೧೬೯೨) ಯಂದು ಚೆನ್ನಮ್ಮಾಜಿಯು ಅಹೋಬಲರಾಯರಿಗೆ ನಿರೂಪ ಕಳಿಸಿದಳು. ಈ ವಿಷಯಕ್ಕೆ ಸಂಬಂಧಿಸಿ ಚೆನ್ನಮ್ಮಾಜಿ ಶ್ರೀ ನರಸಿಂಹ ಭಾರತೀ ಸ್ವಾಮಿಗಳಿಗೆ ಬರೆದ ಜಿನ್ನವತ್ತಳೆಯ ಪಾಠ ಇಂತಿದೆ[೨೭] "... ಕಳುಓಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ ಕೆಳಿ ಮನಸ್ಸಿಗೆ ತಂದೆಉ। ಶ್ರುಂಗೆರಿ ಮಠದ ಧರ್ಮಕ್ಕೆ ತಂದಂಥಾ ಜಿನಿಸಿಗೆ ಸುಂಕ ಬರಬೆಕೆಂದು ಕೆಳುತಿಧಾರೆ। ಸುಂಕವ ಕೆಳದ ರಿತಿ ಕಟ್ಟು ಮಾಡಿಸಬೆಕೆಂಬ ಹಾಗೆ ಬರಸಿದ್ರಿ ಮಠದ ಧರ್ಮಕ್ಕೆ ಯೆಂದಿನ ರಿತಿ ತಂದುಕೊಂಬಂಥಾ ಜಿನಿಸಿಗೆ ಸುಂಕ ಬರಬೆಕೆಂದು ಕೆಳದ ಹಗೆ ಸುಂಕದ ಪಾರುಪತ್ಯಗಾರ್ರಿಗೆ ಬರೆಸಿಧೆವಾಗಿ ಬಿನ್ನಹ"[೨೮]

## ಮೊದಲನೆ ಬಸವಪ್ಪ

ಕೆಳದಿ ನಯಕ ಮನೆತನದ ೧೩ನೇ ಅರಸು, ಚೆನ್ನಮ್ಮಾಜಿಯ ಪುತ್ರ, ಮೊದಲನೇ ಬಸಪ್ಪ ನಾಯಕನು (ಕ್ರಿ. ಶ. ೧೬೯೭- ಕ್ರಿ. ಶ. ೧೭೧೪) ತನ್ನ ತಾಯಿಯ ಮರ್ಗವನ್ನೇ ಅನುಸರಿಸಿದನು. ಶೃಂಗೇರಿ ಮಠದ ಆರನೇ ಶ್ರೀ ನರಸಿಂಹ ಭಾರತಿಗಳು ಬಸಪ್ಪ ನಾಯಕನ ಸಮಕಾಲೀನರು. ಸ್ವಾಮಿಗಳ ಶಿಷ್ಯರ ಆಚಾರ ವಿಚಾರಕ್ಕೆ ಸಂಬಂಧಿಸಿದ ಕೆಲವು ದಾಖಲೆಗಳನ್ನು ಗಮನಿಸಬಹುದಾಗಿದೆ.

ಈಶ್ವರ ಸಂವತ್ಸರದ ಮರ್ಗಶಿರ ಶು. ೧೦ (ಶನಿವಾರ, ೧೩-೧೧-೧೬೯೮) ಯಂದು, ಕುಂಬಳಸೀಮೆಯಲ್ಲಿ ಆಚಾರ ವಿಚಾರ ಮಠಕ್ಕೆ ಬರುವ ಮರ್ಯಾದೆ, ಮುಂತಾದ್ದನ್ನು ಶೃಂಗೇರಿ ಸ್ವಾಮಿಗಳು ವಿಚಾರಿಸುತ್ತಿರುವಲ್ಲಿ, ಅವರ ನಿಯಮ ಪ್ರಕಾರ ನಡೆದುಕೊಳ್ಳದೆ ಸ್ವೇಚ್ಛೆಯ ಮಾಡುವಂಥವರನ್ನು ನಿಯಮ ಪ್ರಕರ ನಡೆದುಕೊಂಬ ಹಾಗೆ ಮಾಡಿಸಬೇಕಾಗಿ ಬಸವಪ್ಪ ನಾಯಕನು ಶಿವಸಿಂಹರಸರಿಗೆ ನಿರೂಪ ಹೊರಡಿಸಿದನು.[೨೯]

ಭಟ್ಕಳದ ಹೋಬಳಿ, ಕಾರಕಳದ ಹೋಬಳಿ, ಕೆಳದಿ ಹೋಬಳಿ, ಮುಂತಾದ ಹೋಬಳಿ ಸೀಮೆ ದೇವಸ್ಥಾನಗಳಲ್ಲಿ ಸಹ, ಶೃಂಗೇರಿ ಸ್ವಾಮಿಗಳವರು ಆಚಾರ ವಿಚಾರ, ಮಠಕ್ಕೆ ಬರುವ ಮರ್ಯಾದೆ, ಮುಂತಾಗಿ ನಡೆವಂಥಾದ್ದಕ್ಕೆ ಅವರು ಕಟ್ಟು ಮಾಡಿಸಿದ ರೀತಿ ನಡೆದುಕೊಂಬ ಹಾಗೆ ತಾಕೀತು ಮಾಡಬೇಕಾಗಿ ನಾಯಕರು ಈಶ್ವರ ಸಂವತ್ಸರದ ಮಾರ್ಗಶಿರ ಶು. ೧೦ ಯಂದು ಕೃಷ್ಣಪ್ಪನಿಗೆ ನಿರೂಪ ಹೊರಡಿಸಿದರು.[೩೦] ಅದೇ ರೀತಿ ಅರವತ್ತಗ್ರಹಾರ, ಬಾರಕೂರು ಹೋಬಳಿ, ಇಕ್ಕೇರಿ, ದುರ್ಗ, ಬಿದರೂರು ಮತ್ತು ವುಡಗಣಿ ಹೋಬಳಿಗಳ ಸೀಮೆಗಳಲ್ಲಿಯ ಆಚಾರ ವಿಚಾರಕ್ಕೆ ಸಂಬಂಧಿಸಿ ನಾಯಕರು ಅಧಿಕಾರಿಗಳಿಗೆ ಕಳುಹಿದ ನಿರೂಪಗಳು ಲಭ್ಯವಾಗಿವೆ.[೩೧]

ಮೊದಲನೆ ಬಸಪ್ಪನಾಯಕನು ಕ್ರಿ.ಶ. ೧೭೦೯ರಲ್ಲಿ ಸಂಸ್ಕೃತದ ಬೃಹತ್ ವಿಶ್ವಕೋಶ ಕೃತಿಯೆನಿಸಿದ 'ಶಿವತತ್ವರತ್ನಾಕರ'ವನ್ನು ರಚಿಸಿದರು. ಶೃಂಗೇರಿ ಮಠದೊಂದಿಗೆ ಕೆಳದಿ ನಾಯಕರು ಇರಿಸಿಕೊಂಡ ಸಂಬಂಧವನ್ನರಿಯಲು ಇದೊಂದು ಬಹು ಉಪಯುಕ್ತ ಗ್ರಂಥವಾಗಿದೆ.

## ಇಮ್ಮಡಿ ಸೋಮಶೇಖರ ನಾಯಕ

ನಂತರದಲ್ಲಿ ಬಂದ ಇಮ್ಮಡಿ ಸೋಮಶೇಖರ ನಾಯಕನು (ಕ್ರಿ.ಶ. ೧೭೧೪-೧೭೩೯) ಶೃಂಗೇರಿಯ ಶಾರದಾಂಬೆಯ ಮಡಿಲಲ್ಲಿ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳ (ಕ್ರಿ.ಶ. ೧೭೦೫-ಕ್ರಿ.ಶ.೧೭೪೧) ದರ್ಶನ ಪಡೆದು, ಸಾಲದ ಬಾಧೆಯಿಂದ ಜರ್ಜರಿತವಾದ ಮಠವನ್ನು ಋಣದಿಂದ ವಿಮೋಚಿಸಿದನು.[೩೨]

ಶ್ರೀಗಳವರ ಅಪೇಕ್ಷೆಯಂತೆ, ತಪ್ಪು ಮಾಡಿದವರಗೆ ಬುದ್ಧಿ ಹೇಳಿಸಿ, ಮಠಕ್ಕೆ ಋಣವಾಗದಂತೆ, ಧರ್ಮವ ಸಾಂಗವಾಗಿ ನಡೆವ ರೀತಿ ಕಟ್ಟಳೆ ಮಾಡಿಸಿರುವುದಾಗಿ ನಾಯಕನು ವಿಕಾರಿ ಸಂವತ್ಸರದ ಮಾಘ ಶು. ೮ (೫-೨-೧೭೨೦)ಯಂದು ಶ್ರೀಗಳಿಗೆ ಬಿನ್ನವತ್ತಳೆ ಕಳುಹಿದನು.[೩೩]

ಶೃಂಗೇರಿಯ ಚಂದ್ರಮೌಳೇಶ್ವರ ಸ್ವಾಮಿಗೆ ಪ್ರತಿವರ್ಷ ನಡೆಸುವ ಲಕ್ಷ ದೀಪಾರಾಧನೆಗೆ ಸಂಬಂಧಿಸಿ, ಬಿದರೂರಿಂದ ಮಠಕ್ಕೆ ಬಂದ, ಸಾಧಾರಣ ಸಂವತ್ಸರದ ಕಾರ್ತಿಕ ಬ. ೧೩ (೨೭-೧೧-೧೭೩೦)ಯ ಚೀಟು ಪ್ರತಿಯೊಂದರ ಪಾಠ ಇಂತಿದೆ:

"ಶ್ರುಂಗೇರಿಯಲ್ಲು ಚಂದ್ರಮೌಳಿಶ್ವರ ಸ್ವಾಮಿಯವರ್ರಿಗೆ ಪ್ರತ್ತಿ ವರ್ಷದಲು ನಡಸುವ ಲಕ್ಷ ದಿಪಾರಾಧನೆಗೆ ತ್ತಾರಂಗ ಸ್ಮಾರ್ತ ಗ್ರುಹಸ್ಥರು ವಿವರವ ಮಾಡ್ಡಿ ಕಳುಹಿಸಿಕೊಡುವ ಹಣವಿಸಲು ನಡೆಸುವ ದೆವತ್ತಾ ಸೆವೆ ವಿವರ ಕಾರ್ತ್ತಿಕ ಬ ೩೦ ದಿವಸ ಚಂದ್ರಮೌಳಿಶ್ವರ ಸ್ವಾಮಿಗೆ ಪಂಚಾಮ್ರುತ ಬಗೆ ೧ ರದು ೧ಲು ಅಭಿಷೆಕವಾಗಬೇಕು. ನೂರಾ ವಂದು ಮಂದಿ ಬ್ರಾಹ್ಮರ ಕಯ ಏಕಾದಶ ರುದ್ರಾಭಿಷೆಕವ ಮಾಡಿಸಬೇಕು ಫಲ ಪಂಚಾಮ್ರುತವ ಮಾಡಸಬೆಕು. ರುದ್ರಾಭಿಷೇಕವ ಮಡಿದ ಬ್ರಾಹ್ಮರಿಗೆ ಚಕ್ರದಲ್ಲು ದಕ್ಷಿಣೆ ಕೊಡಿಸಬೇಕು. ಯಿನ್ನೂರ್ರೈವತ್ತು ಮಂದಿ ಬ್ರಾಹ್ಮರ ಸಮರಾಧನೆ ಮಾಡಸಬೆಕು. ಸಾಯಂಕಾಲಕ್ಕೆ ಲಕ್ಷ ದಿಪಾರಾಧನೆ ಮಾಡಸಬೆಕು ಉತ್ಸಹಕ್ಕೆ ಮಠದಿಂದಲೆ ಉಮಾಮಹೆಶ್ವರ ಮೂರ್ತ್ತಿ ತೆರಳಿಸಿಕೊಂಡು ಹೊಗಬೆಕು ಲಕ್ಷ ದಿಪಾರಾಧನೆ ಸಂಮಧ ಹವನ ದಶದಾನ ಮುಂತಾಗಿ ಮಾಡಿಸಬೆಕು ಯಿ ಪ್ರಮಾಣ ಮಠದ ಕಡಿತ್ತತ್ತಕ್ಕೆ ಸಿಸ್ತು ಬರವ ಹಾಗೆ ಅಪ್ಪಣೆ ಕೊಟ್ಟು ಮತ್ತು ಅತ್ತಿಶಯವಾಗಿ ಆ ದಿವಸ ಪೂಜೆ ನಡೆಸಿದಲ್ಲಿ ಪುಂಣ್ಯ ಕಿರ್ತ್ತಿ ಉಂಟಾದಿತ್ತು। ಯಿ ಪ್ರಮಾಣ ನಡೆದಲ್ಲಿ ಸಕಲರಿಗು ಭಕ್ತಿ ಹುಟ್ಟಿ ಕಾಲಂ ಪ್ರತ್ತಿಯಲು ಕೊಟ್ಟು ಬಂದಾರು ಯಿ ಬಗ್ಗೆ ಸಿಮೆ ಸಿಮೆಗಳಿಂದಲು ಗ್ರುಹಸ್ಥರಿಂದ ವಿವರವಾಗಿ ಅಧಿಕವಾಗಿ ಹುಟ್ಟಿತ್ತು। ಚಿತ್ತಕ್ಕೆ ತ್ತಂದು ಯಿ ಪ್ರಮಾಣ ನಡಸುವ ಹಾಗೆ ಅಪ್ಪಣೆ ಪಾಲಿಸಬೆಕು। ಚಿಟು ಬೊಕಸ"[೩೪]

ದೀಪಾವಳಿ ಹಬ್ಬದ ಸಂಬಂಧ ಉಡುಗೊರೆಯನ್ನು ಕಟ್ಟಿಸಿ, ಕೃಷ್ಣನ ಸಂಗಡ ಕಳುಹಿಸಿರುವುದಾಗಿ ಸೋಮಶೇಖರ ನಾಯಕನು ಶ್ರೀಗಳವರಿಗೆ ಬಿನ್ನವತ್ತಳೆ ಕಳುಹಿದನು.[೩೫]

ಶೃಂಗೇರಿಯಲ್ಲಿಯೇ ಎರಡು ವೀರಶೈವ ಮಠಗಳು ಸ್ಥಾಪಿತವಾದ್ದರಿಂದ ಸ್ವಾಮಿಗಳಿಗೆ ಖೇದವಾಯಿತು. ಗುರುಗಳ ನೋವನ್ನರಿತ ಸೂಕ್ಷ್ಮಮತಿ ಸೋಮಶೇಖರನು ಪೇಶ್ವೇ ಮತ್ತಿನ್ನಿತರ ಆದೇಶದ ಮೇರೆಗೆ ಆ ವೀರಶೈವ ಮಠಗಳನ್ನು ತೆಗೆದು ಹಾಕಿಸಿದನು.[೩೬]

## ಇಮ್ಮಡಿ ಬಸವಪ್ಪ ನಾಯಕ

ಶೃಂಗೇರಿ ಮಠಕ್ಕೆ ಸಂಬಂಧಿಸಿದ ಇಮ್ಮಡಿ ಬಸಪ್ಪ ನಾಯಕರ ಕಾಲದ (ಕ್ರಿ.ಶ. ೧೭೩೯-ಕ್ರಿ.ಶ. ೧೭೫೪) ಅನೇಕ ದಾಖಲೆಗಳು ಶ್ರೀಮಠದಲ್ಲಿ ಲಭ್ಯವಾಗಿವೆ. ಬಸವಪ್ಪನು ಪಟ್ಟಕ್ಕೆ ಬಂದಾಗ, ದ್ವಿತೀಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಶೃಂಗೇರಿ ಮಠಾಧೀಶರಾಗಿದ್ದರು.

ಗುರುಗಳಿಗೆ ದೇಹದಲ್ಲಿ ಸೌಖ್ಯವಿಲ್ಲವೆಂದು ತಿಳಿದಾಗ, ಅವನು ಅವರಿಗೆ ಸಕ್ಕರೆ, ಕಲ್ಲುಸಕ್ಕರೆ, ದ್ರಾಕ್ಷಿ ಮುಂತಾದವುಗಳನ್ನು ಕಳುಹಿದ ಸಮಾಚಾರ, ರೌದ್ರಿ ಸಂವತ್ಸರದ ಮಾಘ ಬ. ೧೧ (ಸೋಮವಾರ, ಮಾರ್ಚ ೨, ೧೭೪೧) ಯ ಬಿನ್ನವತ್ತಳೆಯಿಂದ ವಿದಿತವಾಗುತ್ತದೆ.[೩೭] ಅದೇ ರೀತಿ, ಶ್ರೀಗಳವರ ಚಾತುರ್ಮಾಸ್ಯದ ಸಂಬಂಧ ನಾಯಕನು ಉಡುಗೊರೆಯನ್ನು ಕಟ್ಟಿಸಿ, ಸೂರಾಪಂಡಿತನ ಸಂಗಡ ಕಳುಹಿದನು.[೩೮]

ಶ್ರೀ ಸಚ್ಚಿದಾನಂದ ಭಾರತಿಗಳ ದೇಹಸ್ಥಿತಿ ಸರಿಯಾಗಿರದ್ದರಿಂದ, ಶಿಷ್ಯ ಸ್ವೀಕಾರ ಮಾಡಿದ ಸಮಾಚಾರವನ್ನು ಬಸವಪ್ಪ ನಾಯಕನಿಗೆ ಅರುಹಿದರು. ದಾಖಲೆಯ ಮಹತ್ವದ ಸಾಲುಗಳು ಇಂತಿವೆ.

"... ಶ್ರುಂಗೇರಿಯ ಶ್ರೀ ಸಚ್ಚಿದಾನಂದ ಭಾರತ್ತಿ ಸ್ವಾಮಿಗಳೂ ಕೆಳದಿ ಬಸಪ್ಪ ನಾಯಕರಿಗೆ ಶ್ರೀ ನರಾಯಣ ಸ್ಮರಣೆ ಪೂರ್ವಕವಾಗಿ ಮಾಡುವ ಆಶೀರ್ವಾದ ನಾಉ ನಿಂಮ ವಿಚಾರದಿಂದ ಜಪದೆವ ಪೂಜಾ ಸಮಯದಲ್ಲೂ ನಿಂಮ ಅಭ್ಯುದಯವಂನ್ನು ಆಕಾಂಕ್ಷಿಸಿಕೊಂಡು ವೆದಾಂತ್ತ ವ್ಯಾಖ್ಯಾನವ ಮಾಡಿಕೊಂಡ್ಯೆಧೆವೆ ಯಿತ್ತಲಾಗಿ ಶರಿರ ಸ್ಥಿತಿ ಸ್ವಸ್ಥವಿಲ್ಲದೆ ಶ್ರಮವಾಗಿ ಯಿರುತ್ತಿದ್ದಲ್ಲಿ ದೆಹಧರ್ಮ ವಿಷಯವಾದರಿಂದ ಶಿಷ್ಯ ಸಂಪಾದನವ ಮಾಡಿರಬೆಕೆಂದು ಅಂತಃಕರಣಿಕೆ ಕಂಡು ದುರ್ಮತ್ತಿ ಸಂವತ್ಸರದ ಜೇಷ್ಠ ಬ ೩ ಯೂ ಶುಕ್ರವಾರ ದಿವ ಅವದಾನದ ತ್ತಿರುಮಲಭಟ್ಟರ ಮಗ ತ್ತಿಪ್ಪಾಭಟ್ಟರಿಗೆ ಆಶ್ರಮವ ಕೊಟ್ಟು ಅಭಿನವ ಸಚ್ಚಿದಾನಂದ ಭಾರತ್ತಿಗಳೆಂಬ ನಾಮಾಂಕಿತವನ್ನು ಮಾಡಿಧೆವೆ ಯಿ ಧರ್ಮಸಂಸ್ಥಾನಉ ಸಕಲದೆವ ಬ್ರಾಂಹ್ಮರಿಗು ಉಪಯೊಗವಾಗಿ ನಡೆವಂಥಾದರಲ್ಲಿ ನಿಂಮ ಹಿರೆರಾರಭ್ಯವಾಗಿ ಪರಿರಕ್ಷಿಸಿ ಬಾಹಂಥಾದರಲ್ಲಿ ನಾಉ ವಿಶೆಷವಾಗಿ ಬರಸುವಂಥಾದೆನದೆ

ಶ್ರುತವಾಗಿರಬೇಕಾಗಿ ಆಶಿರ್ವದಿಸಿ ಕಳುಹಿಸುತ್ತೆಲು।[೩೯]

ಇಮ್ಮಡಿ ಬಸಪ್ಪ ನಾಯಕನ ಪೂರ್ವಿಕರೂ ಶೃಂಗೇರಿ ಮಠವನ್ನು ಪರೀಕ್ಷಿಸಿಕೊಂಡು ಬಂದ ಸಮಾಚಾರ, ದುರ್ಮತಿ ಸಂವತ್ಸರ (ಕ್ರಿ ಶ. ೧೭೪೨)ದ ಈ ದಾಖಲೆಯಿಂದ ಸ್ಪಷ್ಟವಾಗುತ್ತದೆ. ಅದೇ ರೀತಿ ಶ್ರೀ ಸಚ್ಚಿದಾನಂದ ಭಾರತಿಗಳ ಉತ್ತರಾಧಿಕಾರಿಯಾಗಿ ಅಭಿನವ ಸಚ್ಚಿದಾನಂದ ಭಾರತಿಗಳು ನಿಯೋಜಿತರಾದರೆಂದು ತಿಳಿದುಬರುತ್ತದೆ. ಈ ಬೆಳವಣಿಗೆಯನ್ನೆಲ್ಲ, ಶೃಂಗೇರಿ ವಿದ್ಯಾರಣ್ಯಪುರಸ್ಥಿತಾಶೇಷ ವಿದ್ವನ್ಮಹಾಜನಂಗಳು ಬಸವಪ್ಪ ನಾಯಕನಿಗೆ ಅಶೀರ್ವಾದ ಪತ್ರಿಕೆಯನ್ನು ಕಳುಹಿದರು.[೪೦] ಆವಧಾನದ ತಿರುಮಲ ಭಟ್ಟರ ಮಗ ತಿಪ್ಪಾಭಟ್ಟರಿಗೆ ದುರ್ಮತಿ ಸಂವತ್ಸರದ ಜೇಷ್ಠ ಬ. ೩ ಶುಕ್ರವಾರದ ದಿವಸ ಸಮಸ್ತರ ಮುಂದಿಟ್ಟು ಆಶ್ರಮವನ್ನು ಕೊಟ್ಟು ಮಂತ್ರೋಪದೇಶ ಮಾಡಿ, ಅಭಿನವ ಸಚ್ಚಿದಾನಂದ ಭಾರತಿಗಳೆಂಬ ನಾಮಾಂಕಿತದಿಂದ ಶಿಷ್ಯ ಸಂಪಾದನೆ, ಅ ಮೇಲೆ ದುರ್ಮತಿ ಸಂವತ್ಸರದ ಜೇಷ್ಠ ಬ. ೧೦ ಗುರುವಾರ ವಂಬತ್ತು ತಾಸಿನಲ್ಲಿ ಶ್ರೀ ಸಚ್ಚಿದಾನಂದ ಭಾರತಿಗಳು ಮುಕ್ತರಾದ ಸಮಾಚಾರ, ಇತ್ಯಾದಿ ಸಂಗತಿಗಳನ್ನು ಆಶೀರ್ವಾದ ಪತ್ರಿಕೆಯಲ್ಲಿ ಉಲ್ಲೇಖಿಸಲಾಗಿದೆ.

ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಪಟ್ಟಾಭಿಷೇಕಕ್ಕೆ ಎಲ್ಲಪ್ಪ ಜೋಯಿಸರ ಶಂಕರನಾರಾಯಣ ಜೋಯಿಸರು ಬರೆಸಿಕೊಟ್ಟ ಲಗ್ನಪತ್ರಿಕೆಯಲ್ಲಿ ಪಟ್ಟಾಭಿಷೇಕ ಶಾಲಿವಾಹನ ಶಕವರುಷ ೧೬೬೩, ಕಲಿವರುಷ ೪೭೪೨ ದುರ್ಮತಿ ಸಂವತ್ಸರ, ಆಷಾಡ ಶು ೬ ಸೋಮವಾರದಂದು (ಜೂನ್ ೮, ೧೭೪೨), ಎಂದು ಸಮೂದಿಸಲಾಗಿದೆ.[೪೧]

ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳಿಗೆ ಪಟ್ಟವಾದ ಸಂಬಂಧ, ಬಸಪ್ಪನಾಯಕನು ಉಡುಗೊರೆ ಕಳುಹಿಸಿ, ಸ್ವೀಕರಿಸುವಂತೆ ಸ್ವಾಮಿಗಳಲ್ಲಿ ಪ್ರಾರ್ಥಿಸಿಕೊಂಡನು. ರಕ್ತಾಕ್ಷಿ ಸಂವತ್ಸರ, ಶ್ರಾವಣ ಬ.೧೦ (ಜುಲೈ ೨೫, ೧೭೪೨), ಎಂದು ಬಿನ್ನವತ್ತಳೆಯಲ್ಲಿ ನಮೂದಿಸಲಗಿದೆ.

## ಚೆನ್ನಬಸವಪ್ಪ ನಾಯಕ

ಇಮ್ಮಡಿ ಚೆನ್ನಬಸವಪ್ಪ ನಾಯಕನ ದತ್ತಕಪುತ್ರ ಚೆನ್ನಬಸವಪ್ಪ ನಾಯಕನೂ (ಕ್ರಿ.ಶ. ೧೭೫೪ – ಕ್ರಿ.ಶ. ೧೭೫೭) ತನ್ನ ಪೂರ್ವಿಕರಂತೆ ಶೃಂಗೇರಿಯ ಶ್ರೀ ಅಭಿನವ ಸಚ್ಚಿದಾನಂದ ಭರತೀ ಸ್ವಾಮಿಗಳಿಗೆ ಯುವ ಸಂವತರದ ಮಾಘ ಬ. ೧ (೧೭-೨-೧೭೫೬)ಯಂದು ಉಡುಗೊರೆ ಕಳುಹಿ ಧರ್ಮಸಂಸ್ಥಾನದ ಘನತೆಯನ್ನು ಕಾಪಾಡಿದನು.[೪೨] ಶ್ರೀಗಳವರು ರಾಜದರ್ಶನಕ್ಕಾಗಿ ನವರಾತ್ರೆಯ ನಂತರ ಬರಬೇಕಾಗಿ ಬಿದರೂರಿಂದ ಆಮಂತ್ರಣ ಕಳುಹಿದನು.[೪೩]

## ವೀರಮ್ಮಾಜಿ

ಚನ್ನಬಸವಪ್ಪನಾಯಕನ ಕಾಲದಲ್ಲಿಯೇ ನಿಜವಾದ ಅದಿಕಾಲ ಚಲಾಯಿಸುತ್ತಿದ್ದ ಅವನ ತಾಯಿ ವೀರಮ್ಮಾಜಿಯು[೪೪] ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳನ್ನು (ಕ್ರಿ.ಶ. ೧೭೪೧– ಕ್ರಿ.ಶ. ೧೭೪೨) ತನ್ನ ಆಸ್ಥಾನಕ್ಕೆ ಬರಮಾಡಿಕೊಂಡಳೆಂಬುದು 'ಕೆಳದಿನೃಪ ವಿಜಯ' ದಿಂದ ಖಚಿತವಾಗಿತ್ತದೆ. ಆ ಸಂದರ್ಭದಲ್ಲಿ ರಾಣಿಯ ಜಗದ್ಗುರುಗಳಿಗೆ ಸ್ಫಟಿಲಿಂಗ, ರತ್ನಖಚಿತ ಗೋಪಾಲಕೃಷ್ಣ ಮೂರ್ತಿ ಮತ್ತು ೭೪ ವರಹಗಳ ಭೂಮಿಯನ್ನು ಕಾಣಿಕೆಯಾಗಿ ಕೊಟ್ಟಳು. ಇನ್ನೊಂದು ಸಂದರ್ಭದಲ್ಲಿ ಅವಳು ಮಠಕ್ಕೆ ಭೂ ಬಾಡಿಗೆರಹಿತ ಭೂಮಿಯನ್ನು ದಾನ ಮಾಡಿ, ಮಠವನ್ನು ಸಾಲದಿಂದ ವಿಮೋಚಿಸಲು ಸಹಾಯವಾದಳು.

## ಮುಮ್ಮಡಿ ಸೋಮಶೇಖರ ನಾಯಕ

ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳು ನಾಯಕನ (ಕ್ರಿ.ಶ. ೧೭೫೭– ಕ್ರಿ.ಶ. ೧೭೬೩) ಸಮಕಾಲೀನರು. ನಾಯಕನು ಚೆನ್ನವೀರ ರಾಜೇಶ್ವರ ದೇವರ ಮತ್ತು ರತ್ನಮಯ ವೇಣುಗೋಪಾಲಕೃಷ್ಣ ದೇವರ ಅಮೃತಪಡಿ, ನಂದಾದೀಪ, ಮುಂತಾದ ದೇವತಾ ಸೇವೆಗಾಗಿ ಸ್ವಾಮಿಗಳಿಗೆ ೩೬೦ ವರಹ, ೪ ಹಣವಿನ ಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಉತ್ತಾರವ ಕೊಟ್ಟಿದ್ದಕ್ಕೆ, ಈಶ್ವರ ಸಂವತ್ಸರದ ಮಾಘ ಶು. ೩ (೧೦-೨-೧೭೫೮)ದ ಪಟ್ಟೆ[೪೫] ಶೃಂಗೇರಿ ವಿದ್ಯಾಶಂಕರ ದೇವರಿಗೆ ಮತ್ತು ಸೊನ್ನ ಹೆಗ್ಗಡೆ ವೆಂಕಟೇಶ ದೇವಸ್ಥಾನಕ್ಕೆ ೮ ವರಹ, ೫ ಹಣ, ಮುಪಾಗ, ಬೇಳೆಯ ಸ್ವಾಸ್ಥೆಯನ್ನು ಶಿವಾರ್ಪಿತವಾಗಿ ನೀಡಿದ ಬಗ್ಗೆ ನಂಬ್ಯಣ್ಣಗೆ ನಾಯಕನು ಈಶ್ವರ ಸಂವತ್ಸರದ ಮಾಘ ಶು, ೩ (೧೦-೨-೧೭೫೮)ದಂದು ಬರೆಸಿ ಕಳುಹಿದ ನಿರೂಪ:[೪೬]

ಬೆಟ್ಟದ ಮಲ್ಲಿಕಾರ್ಜುನ ದೇವರ ಸನ್ನಿಧಿಯಲ್ಲಿ ಕಾಲು ಮಂಡಲ ಪರ್ಯಂತ ಪರ್ಜನ್ಯ ಮಾಡಿಸುವ ಬಗ್ಗೆ ಬಿದರೂರಿಂದ ಬಹುಧಾನ್ಯ ಸಂವತ್ಸರದ ಶ್ರಾವಣ ಬಹುಳದಲ್ಲಿ (ಕ್ರಿ. ಶ. ೧೭೫೮) ಬಂದ ಕಾಗದ ಪ್ರತಿ;[೪೭] ಸ್ವಾಮಿಗಳು ರಾಮೇಶ್ವರ ಯಾತ್ರೆಗೆ ಹೋಗುವುದರಿಂದ, ಉಡುಗೊರೆ ಸ್ವೀಕರಿಸುವಂತೆ ನಾಯಕನು ಸ್ವಾಮಿಗಳಿಗೆ ವಿಕ್ರಮ ಸಂವತ್ಸರದ ಜ್ಯೇಷ್ಠ ಶು. ೧೨, ಸೋಮವಾರ (೨೧-೫-೧೭೬೧)ದಂದು ಬರೆದ ಬಿನ್ನವತ್ತಳೆ ಪ್ರತಿ,[೪೮] ಶೃಂಗೇರಿ ಶಾರದಾಂಬಾ ಸನ್ನಿಧಿಯಲ್ಲಿ ನವರಾತ್ರೆ ಉತ್ಸವದ ಕಟ್ಟಳೆ ಕಂದಾಚಾರದ ಬಗ್ಗೆ ಶೃಂಗೇರಿಯಿಂದ ಅಡಿಕೆ, ಮೆಣಸು, ಯಾಲಕ್ಕಿ, ಗಂಧ ಮುಂತಾದ ಜಿನಿಸಿಗೆ ಅರಮನೆ ಸೀಮೆಗಳಲ್ಲಿ ತೆರುವ ಸುಂಕವನ್ನು ಶ್ರೀ ಶಾರದಾ ಅಮ್ಮನವರ ಸೇವೆಗೆ ಶಿವಾರ್ಪಿತವಾಗಿ ಬಿಟ್ಟುಕೊಡುವಂತೆ ನಾಯಕನು ವಿಷು ಸಂವತ್ಸರದಲ್ಲಿ (ಕ್ರಿ.ಶ. ೧೭೬೧-೬೨), .ೋಪಾಲನ

ಮಹದೇವನಾಗ, ಕೃಷ್ಣಲಿಂಗರಾಮ ಮತ್ತು ಸೂರಮಲ್ಲಿಗೆ ನಾಗಗೆ ಕಳುಹಿದ ನಿರೂಪ,[೪೯] ಇತ್ಯಾದಿ ಅನೇಕ ದಾಖಲೆಗಳು ಕೆಳದಿ ಮತ್ತು ಶೃಂಗೇರಿಯ ಪರಸ್ಪರ ಸಂಬಂಧದ ಮೇಲೆ ಬೆಳಕು ಬೀರುತ್ತದೆ.

ಈ ರೀತಿಯಾಗಿ ಕೆಳದಿ ನೃಪರು ವೆಂಕಟಪ್ಪ ನಾಯಕನ ಕಾಲದಿಂದ ಮುಮ್ಮಡಿ ಸೋಮಶೇಖರನ ಕಾಲದವರೆಗೂ, ಶೃಂಗೇರಿ ಜಗದ್ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸಿ, ರಕ್ಷಿಸಿ, ಪೋಷಿಸಿದರೆಂದು ಶೃಂಗೇರಿ ಮಠದ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಪರಸ್ಪರ ಸಂಬಂಧವನ್ನರಿಯಲು ಶಾಸನ ಮತ್ತು ಸಾಹಿತ್ಯಕ ಕೃತಿಗಳಿಗಿಂತ ಶೃಂಗೇರಿ ಮಠದಲ್ಲಿಯ ಕಾಗದ ಪತ್ರಗಳು ಮತ್ತು ಬಹು ಅಪರೂಪದ ಕಡತಗಳು ಮಹತ್ವ ಶ್ರೀಮಠದ ದಾಖಲೆಗಳು ಶೃಂಗೇರಿ ಧರ್ಮಸಂಸ್ಥಾನದ ಚರಿತ್ರೆಯನ್ನು ತಿಳಿಸುವುದರ ಜೊತೆಗೆ ಕರ್ನಾಟಕ ಮತ್ತು ಭಾರತದ ಅಂದಿನ ಆಗುಹೋಗುಗಳ ಮೇಲೂ ಬೆಳಕು ಚೆಲ್ಲುತ್ತದೆ. ಆಧಾರಸೂಚಿಯಲ್ಲಿ ನಮೂದಿಸಲಾದ ಲೇಖಕರ ಗ್ರಂಥಗಳು ಈ ದಿಶೆಯಲ್ಲಿ ಬಹು ಉಪಯುಕ್ತ.

**ಆಧಾರಸೂಚಿ ಮತ್ತು ಟಿಪ್ಪಣೆಗಳು:**

೧. ಬೀದರದ ಇಮದ್‌ಶಾಹಿಗಳು ಅಹಮ್ಮದನಗರದ ನಿಝಾಮಶಾಹಿಗಳು, ವಿಜಾಪುರದ ಆದದಿಲ್‌ಶಾಹಿಗಳು ಬೀದರದ ಬರೀದಶಾಹಿಗಳು ಮತ್ತು ಗೋಳಕೊಂಡದ ಕುತುಬ್‌ಶಾಹಿಗಳು

೨.. ಶೃಂಗೇರಿ ಮಠದ ಚರಿತ್ರೆ ಮತ್ತು ಕೆಳದಿಯೊಂದಿಗೆ ಆ ಮಠದ ಸಂಬಂಧ ಕುರಿತು ಈ ಕೆಳಗಿನ ಗ್ರಂಥಗಳನ್ನು ಓದಿರಿ.

* ಡಾ॥ ಎ.ಕೆ. ಶಾಸ್ತ್ರಿ, ಶೃಂಗೇರಿ ಧರ್ಮಸಂಸ್ಥಾನ – ಶೃಂಗೇರಿ ಮಠ, ೧೯೮೩.

* ಡಾ॥ ಎ.ಕೆ. ಶಾಸ್ತ್ರಿ, ಶೃಂಗೇರಿ ಮಠದ ಕಡಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ೨ ಸಂಪುಟಗಳು (ಶೃ.ಕ.) – ಕೃ. ಕ. ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ೨೦೦೩ ಮತ್ತು ೨೦೦೬

* ಡಾ॥ ಎ.ಕೆ. ಶಾಸ್ತ್ರಿ, ಶೃಂಗೇರಿ ಮಠದ ಕಡತಗಳ ವಿಷಯಸೂಚಿ – ಕರ್ನಾಟಕ ರಾಜ್ಯ ಪತ್ರಾಗಾರ, ೨೦೦೯

* Dr. A.K. Shastry, A History of Sringeri, Prasaranga, Karnataka University, Dharwad, First edition 1998

* Dr. A.K. Shastry, The records of the Sringeri Dharmasmsthana (S.R.) Sringeri Matha, 2009

* Dr. A.K. Shastry, The records of the Sringeri Matha relating to Keladi, Keladi Museum and Historical Research Bureau, 2001

* B. Ramakrishna Row, Selections from the records of the Sringeri Mutt (Sg.R.) Vol I, Govt branch press, Mysore, 1927

* ಡಾ॥ ಎ.ವಿ. ನರಸಿಂಹಮೂರ್ತಿ, ಶೃಂಗೇರಿ – ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ೨೦೦೭

* Dr. A.V. Narashimhamurthy, Sringeri - Abhijnana, 2005

* B.L. Rice, Epigraphia Carnatika (E.C.) Vol. vi (first edition)

* The Annual Reports of the Mysore Archeological Departments (MAR) 1916, 1927, 1933, 1934

* ಡಾ॥ ಜಿ.ಎಸ್. ದೀಕ್ಷಿತ್, ಕೆಳದಿ ನಾಯಕರು – ಕರ್ನಾಟಕ ವಿಶ್ವವಿದ್ಯಾಲಯ, ೧೯೬೯

* ಲಿಂಗಣ್ಣ ಕವಿ, ಕೆಳದಿ ನೃಪವಿಜಯ – ಗದ್ಯಾನುವಾದ : ಕೆಳದಿ ಗುಂಡಾಜೋಯ್ಸಾ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೭

೩. ಪೂರ್ವೋಲ್ಲೇಖಿತ The records of the Sringeri Dharmasmsthana (S.R.)

೪. 'ಕಡತ' ಅಥವಾ 'ಕಡಿತ'ವು ಪುಸ್ತಕ ರೂಪದಲ್ಲಿ ಮಡಿಚಿದ ಉದ್ದನೆಯ ದಪ್ಪ ಕಪ್ಪು ಬಟ್ಟೆಯಾಗಿದ್ದು, ಇದರ ಮೇಲೆ ಸೀಸದಂಥ ಬಳಪದ ಕಲ್ಲನ್ನು ಚೂಪು ಮಾಡಿ ಬರೆಯಲಾಗುತ್ತಿತ್ತು. ಮಠಕ್ಕೆ ಬಂದ ಬಿನ್ನವತ್ತಳೆ ಮತ್ತು ಮಠದಿಂದ ಹೊರಡಿಸಲಾದ ನಿರೂಪದ ಪ್ರತಿಗಳನ್ನು ಕಡತಗಳಲ್ಲಿ ಮಾಡಿಡಲಾಗುತ್ತಿತ್ತು. ಆದಾಯ-ವೆಚ್ಚದ ವಿವರಗಳು ಕಡತಗಳಲ್ಲಿವೆ. ಹೆಚ್ಚಿನ ಮಾಹಿತಿಗಾಗಿ, ಲೇಖಕರ ಕಡತಗಳಿಗೆ ಸಂಬಂಧಿಸಿದ ಪೂರ್ವೋಲ್ಲೇಖಿತ ಗ್ರಂಥಗಳನ್ನು ಓದಿರಿ.

೫. ದಿ ಟ್ರಾವೆಲ್ಸ್ ಇನ್ ಇಂಡಿಯಾ – ಜಿ. ಹಾವರ್ಸ್‌ರವರ ೧೯೬೪ರ ಭಾಷಾಂತರ, ಎಡ್‌ವರ್ಡ್ ಗ್ರೇ, ಲಂಡನ್, ೧೯೮೨, ಸಂ.೧, ಪು.೧೯೧

೬. ಕೆಳದಿ ನೃಪವಿಜಯ (ಕೆ.ನೃ.ವಿ) ಗದ್ಯಾನುವಾದ: ಗುಂಡಾ ಜೋಯ್ಸ್, ಪಂಚಮಾಶ್ವಾಸಂ, ಪು.೧೦೯-೧೩೭

೭. ಕಾಶೀ ಲಕ್ಷ್ಮಣ ಶಾಸ್ತ್ರಿ, ಗುರುವಂಶ ಕಾವ್ಯಂ (ಗು.ಶಾ.), ವಾಣಿವಿಲಾಸ ಪ್ರೆಸ್, ಶ್ರೀರಂಗಮ್, ೧೯೬೬, ೯ ಮತ್ತು ೧೦ನೇ ಸರ್ಗಗಳು, ಪು.೯೪-೧೧೨

೮. S.R. 21

೯. ಅದೇ, ೨೨

೧೦. ಇ.ಅ. ತು, ಶೃಂಗೇರಿ ೫

೧೧. ಶೃ.ಕ. ೨೪, (ಕ[ಕಡತ] ೨೫, ದಾ.[ದಾಖಲೆ] ೫೨, ೫೫)

೧೨. ಅದೇ, ೨೭, (ಕ. ೭೨, ದಾ.೪೩), ಎಸ್.ಆರ್.೨೬, ಕೆ.ಡಿ. ೭೨, ಆರ್.ಡಿ. ೪೩)

೧೩. ಎಂ.ಎ.ಆರ್. ೧೯೧೬, ಪು.೬೫

೧೪. ಖೊದಾ ಇಸ್ಮಾಯಿಲ್ ಖಾನ್, ಆದಮ್ ಅಫಝುಲ್ ಖಾನ ಮತ್ತು ಖಾನ್ ಅಲಿಶಹ

೧೫. ಎಂ.ಎ.ಆರ್. ೧೯೧೬, ಪುಟ ೬೫

೧೬. ಎಸ್.ಆರ್. ೨೬, ಕ.೭೨, ದಾ.೧೨೪, ಶೃ.ಕ.೩೦, ಎಸ್.ಆರ್. ೩೦

೧೭. ಅದೇ, ೨೮, ಕ.೪೫, ದಾ.೧೨೪, ಕೃ.ಕ.೩೦, ಎಸ್. ಆರ್.೩೦

೧೮. ಎಸ್.ಆರ್.೩೩, ಶೃ.ಕ.೩೭, ಕ.೫೦, ದಾ.೫

೧೯. ಶೃ.ಕ.೩೮, ಕ.೧೩, ದಾ.೩೬

೨೦. ಎಸ್.ಆರ್. ೩೮, ಶೃ.ಕ.೪೦, ಕ.೧೩, ದಾ.೩೯

೨೧. ಎಸ್.ಆರ್.೪೦, ಎಸ್‌ಜಿ.ಆರ್.೧೬

೨೨. ಕ.೮೯. ದಾ.೨೭, ಎಸ್‌ಜಿ.ಆರ್.೧೭

೨೩. ಶೃ.ಕ.೪೩, ಕ.೬೬, ದಾ.೬

೨೪. ಎಸ್‌ಜಿ.ಆರ್. ೧೯

೨೫. ಎಸ್.ಆರ್. ೪೨, ಕ.೧೭೫, ದಾ.೨

೨೬. ಶೃ.ಕ. ೪೮, ಕ.೨೫, ದಾ.೮೭

೨೭. ಎಸ್.ಆರ್. ೪೩, ಎಸ್‌ಜಿ.ಆರ್.೨೦

೨೮. ಅದೇ ೪೪, ಅದೇ ೨೧

೨೯. ಎಸ್.ಆರ್.೪೫, ಅದೇ ೨೨

೩೦. ಅದೇ ೪೬, ಅದೇ ೨೩

೩೧. ಅದೇ ೪೭, ೪೮, ೪೯, ಅದೇ ೨೪,೨೫,೨೬

೩೨. ಪೂರ್ವೋಲ್ಲೇಖಿತ 'ಕೆಳದಿ ನೃಪವಿಜಯ', ಸರ್ಗ ೧೦, ಪುಟ ೧೮೫

೩೩. ಶೃ.ಕ. ೫೦, ಕ.೮೯, ದಾ.೨೭

೩೪. ಅದೇ ೫೪, ಕ.೬೬, ದಾ.೩೯

೩೫. ಎಸ್.ಆರ್. ೫೧

೩೬. ಗು.ಕಾ. ೧೭, ಶ್ಲೋ.೩೮, ೪೫, ೩೪೨

೩೭. ಎಸ್.ಆರ್.೫೫, ಕ.೫೧, ದಾ.೨೧

೩೮. ಅದೇ ೫೬, ಕ.೫೧, ದಾ.೨೧

೩೯. ಅದೇ ೨೭, ಕ.೨೦, ದಾ.೭೬

೪೦. ಅದೇ ೫೮, ಕ.೨೦, ದಾ.೭೮, ಶೃ.ಕ.೬೦

೪೧. ಅದೇ ೫೯, ಕ.೨೦, ದಾ.೮೨, ಶೃ.ಕ. ೬೪, ಕ.೨೦, ದಾ.೮೨

೪೨. ಶೃ.ಕ. ೭೩, ಕ.೧೧೩, ದಾ.೭೨

೪೩. ಅದೇ ೭೪, ಕ.೧೧೩, ದಾ.೮೦

೪೪. ಚೆನ್ನಬಸವಪ್ಪ ನಾಯಕನು ವೀರಮ್ಮಾಜಿಹ ದತ್ತಕಪುತ್ರ

೪೫. ಶೃ.ಕ. ೭೫, ಕ.೪೫, ದಾ.೧೦೫

೪೬. ಅದೇ ೭೬, ಕ.೧೧೩, ದಾ.೧೧೬

೪೭. ಅದೇ ೭೭, ಕ.೪೫, ದಾ.೧೧೬

೪೮. ಅದೇ ೮೧, ಕ.೮೬, ದಾ.೧೪

೪೯. ಎಸ್‌ಜಿ.ಆರ್. ೨೮

❑❑

# ಜಿನಸೇನ ಮತ್ತು ಪಂಪ

## (ಆಕರ-ಸ್ವೀಕಾರ-ಸಾಧನೆಗಳು-ಸಮಸ್ಯೆಗಳು)

- ಎಸ್.ಎಂ. ವೃಷಭೇಂದ್ರಸ್ವಾಮಿ

ಹತ್ತನೆಯ ಶತಮಾನದ ಮಹಾಕವಿ ಪಂಪ, ಇಪ್ಪತ್ತನೆಯ ಶತಮಾನದಲ್ಲಿಯೂ ಪ್ರಸ್ತುತನೂ, ಪ್ರಶ್ನಿತನೂ ಆಗುತ್ತಿರುವುದು ಆತನ ಹಾಗೂ ಆತನ ಕೃತಿಗಳ ಹಿರಿಮೆಯನ್ನು ತೋರಿಸುತ್ತದೆ. ಆತ ಕನ್ನಡದ ಆದ್ಯ ಹಾಗೂ ಆರಾಧ್ಯ ಕವಿಯಾದುದು ಕನ್ನಡ ಸಾಹಿತ್ಯ ಪರಂಪರೆಯ ಪುಣ್ಯ. ಪಂಪ ಪ್ರಪ್ರಥಮವಾಗಿ ಜೀವನ ಸರ್ವಸ್ವವನ್ನು ಪ್ರತಿಸುವ ಮಹಾಮಾನವ. ಈ ಮೌಲ್ಯಾನ್ವೇಷಣೆಗಾಗಿ ಆತ ಹಿಡಿದ ದಾರಿ, ಮಹಾಕವಿ ಮಾರ್ಗ. ಅದರ ಗುರಿ ಸೌಂದರ್ಯಾನ್ವೇಷಣೆ ಹಾಗೂ ಉನ್ಮೇಷಣೆ; ಅದೇ ಅವನ ಕಾವ್ಯಧರ್ಮ, ಕಾವ್ಯೋದ್ದೇಶವಾಯಿತು. ಇದಕ್ಕೆ ಪ್ರೇರಣೆ ಪೋಷಣೆ ನೀಡಿದುದು ಜಿನಧರ್ಮಮೂಲವಾದ ಮಾನವೀಯ ಧರ್ಮ. ತನ್ನ ಸಮಕಾಲೀನ ಜೀವನ ಸಮಷ್ಟಿಯನ್ನು ಸಮಗ್ರವಾಗಿ ಅರಗಿಸಿಕೊಂಡು, ತನ್ನತನವನ್ನು ಸಮಷ್ಟಿಯಲ್ಲಿ ಎರಕ ಹೊಯ್ದುಕೊಂಡು ಸುಸಂಸ್ಕೃತ ವ್ಯಕ್ತಿತ್ವವನ್ನು ಪಡೆದ ಪಂಪ ತನ್ನೆರಡು ಕೃತಿಗಳ ಮೂಲಕ ವಿಶ್ವಸಾಹಿತ್ಯಕ್ಕೆ ಕನ್ನಡದ ಪ್ರಥಮ ಕಾಣಿಕೆಯನ್ನು ಸಲ್ಲಿಸಿರುವನು. 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಪಂಪನಾವಗಂ' ಎಂಬ ಅಭಿಮಾನದ ಅಚ್ಚುನುಡಿಯನ್ನು ಪರಿಷ್ಕರಿಸಿ - ಕನ್ನಡ ಸಾಹಿತ್ಯಕ್ಕಿರುವ ಹಲವು ಒಡೆಯರಲ್ಲಿ ಒಬ್ಬ - ಆಗಲೂ, ಈಗಲೂ, ಯಾವಾಗಲೂ. ಆದರೆ ಅವರಲ್ಲಿ ಪ್ರಥಮನೆಂಬ ಪಟ್ಟವಂತೂ ಪಂಪನಿಗೆ ಅಬಾಧಿತ, ಸಾವಿರ ವರ್ಷಗಳ ಅಧ್ಯಯನ, ಅನುಸರಣ-ಪರೀಕ್ಷಣದ ಕಡಿಹಕ್ಕೆ, ಬಡಿಹಕ್ಕೆ ಸಿಕ್ಕರೂ, ತೇಜಮ ಹಾಕಿದ ಚೊಕ್ಕ ಚಿನ್ನವಾಗಿಯೇ ಉಳಿದಿದ್ದಾನೆ! ತಿಕ್ಕಿ ತೀಡಿದಷ್ಟೂ ತನ್ನ ಚೊಕ್ಕತನವನ್ನು ಪ್ರಕಾಶಿಸುವ ಕವಿಯಾಗಿದ್ದಾನೆ. ಸಾಹಿತ್ಯ-ಸಂಸ್ಕೃತಿ-ಧರ್ಮಪ್ರಿಯರು ದಿನನಿತ್ಯದ ವ್ಯವಹಾರದಲ್ಲಿ, ಬಳಸಲೇಬೇಕಾದ ಸುವರ್ಣ ನಾಣ್ಯವಾಗಿರುವವನು. ಆತನ ಕೃತಿಗಳು, ಕಾವ್ಯಾನುಸಂಧಾನಕ್ಕೆ, ಸಾಹಿತ್ಯ ವಿಮರ್ಶೆಗೆ ಕನ್ನಡ ಕಾವ್ಯದ 'ಸ್ಟರ್ಲಿಂಗ್'(Gold Standard)ಗಳಾಗಿವೆ.

ಮಹಾಕವಿಯಾಗಬಲ್ಲ ಸ್ವೋಪಜ್ಞ ಪ್ರತಿಭೆಯ ಪಂಪ, ತನ್ನ ಜೀವನ ಹಾಗೂ ಕಾವ್ಯೋದ್ಯೋಗಕ್ಕೆ ತೆಕ್ಕೆ ಬಿದ್ದುದು ಎರಡು ಮಹಾ ಬೆಟ್ಟಗಳಿಗೆ! ಗೊಮ್ಮಟ ಮಹಾಮೂರ್ತಿಯನ್ನು ತನ್ನ ಒಡಲಿನಲ್ಲಿಟ್ಟುಕೊಳ್ಳಬಲ್ಲ ಎತ್ತರ-ಬಿತ್ತರಗಳನ್ನೊಳಗೊಂಡ, ಶ್ರವಣಬೆಳಗೊಳದ ದೊಡ್ಡ ಬೆಟ್ಟ! ಅದೇ ಜಿನಸೇನಾಚಾರ್ಯರ ಪೂರ್ವಪುರಾಣ.

ಆ ಕಲ್‌ಬೆಟ್ಟವನ್ನು ಕಡಿದು, ಕಡಿದು, ಪ್ರಥಮ ಜಿನೇಂದ್ರ ಮೂರ್ತಿಯನ್ನು ರೂಪಿಸಿದ ತನ್ನ 'ಆದಿಪುರಾಣ'ದಲ್ಲಿ. ಶ್ರೀ ಪನ್ನಾಲಾಲ್ ಜೈನರೆನ್ನುಂತೆ 'ಪೂರ್ವ ಪುರಾಣ ಮಹಾಕಾವ್ಯ, ಧರ್ಮಕಾವ್ಯ, ಧರ್ಮಶಾಸ್ತ್ರ, ರಾಜನೀತಿ ಶಾಸ್ತ್ರ, ಆಚಾರ ಶಾಸ್ತ್ರ ಮತ್ತು ಯುಗದ ಆದ್ಯ ವ್ಯವಸ್ಥೆಯನ್ನು ಹೇಳುವ ಮಹಾ ಇತಿಹಾಸ - ಎಲ್ಲವೂ ಆಗಿದೆ.' ಇಂಥ ಪುರಾಣ ಮಹಾಕಾವ್ಯ (Epic of growth) ವಿಸ್ತಾರದಲ್ಲಿ ಪಂಪ ಆದಿಪುರಾಣವೆಂಬ ಕಲಾತ್ಮಕ ಕಾವ್ಯ (Epit of art) ಅಥವಾ ಕ್ಲಾಸಿಕ್ ಕಾವ್ಯವನ್ನು ಕಂಡರಿಸಿಕೊಂಡಿರುವನು. ಇದೇ ಪಂಪನ ಮಹತ್ತರವಾದ ಸಾಹಸ, ಸಾಧನೆ.

ಮಹಾಕವಿ ಪಂಪ ತೆಕ್ಕೆಬಿದ್ದ ಇನ್ನೊಂದು ಮಹಾಕಲ್‌ಬೆಟ್ಟ, ಕೈಲಾಸ ದೇವಾಲಯವನ್ನೊಳಗೊಂಡಿದ್ದ, ಎಲ್ಲೋರದ ಕಲ್‌ಬೆಟ್ಟ! ಅದೇ ವ್ಯಾಸ ಮಹಾಭಾರತ. ವಿಸ್ತಾರವಾದ ದೇವಾಲಯ, ಸಾವಿರಾರು ಮೂರ್ತಿಗಳು, ಕಂಭ, ಛತ್ತು, ಮಂಟಪ, ಪಾವಟಿಗೆ, ಮಹಾದ್ವಾರ - ಮುಂತಾದವುಗಳನ್ನೆಲ್ಲ ಕಲ್ಲನ್ನು ಕಟೆಕಟೆದು ರೂಪಿಸಿಕೊಂಡ ಕೈಲಾಸ ದೇವಾಲಯದ ಮಹಾಶಿಲ್ಪಿಯಂತೆ, ಕೌರವ ಪಾಂಡವರ ಕಥೆ, ಸಮಕಾಲೀನ ರಾಜರ ಇತಿಹಾಸ, ಸಾರ್ವಕಾಲೀನ ಮಾನವ ಪ್ರಪಂಚದ ಗುಣ, ವ್ಯಕ್ತಿ, ಸಂಘರ್ಷದ ಮಾನವೀಯ ಚಿತ್ರಣದ ಮಹಾಕಾವ್ಯ ಪಂಪನ "ವಿಕ್ರಮಾರ್ಜುನ ವಿಜಯ". "ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆನ್" ಎಂದೇ ಹೊರಟಿದ್ದಾನೆ ಪಂಪ. ಈ ಸಾಹಸ ಕೈಕೊಳ್ಳಲು ಪಂಪನಿಗಿರಬಹುದಾದ ಭುಜಬಲ, ಎದೆಬಲಗಳು ಸಾಮಾನ್ಯರಿಗೆ ಎಂದೂ ಸಾಧ್ಯವಿಲ್ಲ.

ಸಾಮ್ಯಾನವಾಗಿ ಒಂದು ಜೀವಮಾನದಲ್ಲಿ ಒಂದು ಮಹಾಕಾವ್ಯವನ್ನು ಸೃಷ್ಟಿಸಿ, ತನ್ನ ಪ್ರತಿಭಾಪುಣ್ಯವೆಲ್ಲ ಖರ್ಚಾಯಿತೆನ್ನುವದೇ ಸಹಜವಾಗಿರುವ ಕವಿ ಸಮುದಾಯದಲ್ಲಿ ಒಂದು ವೈದಿಕ, ಇನ್ನೊಂದು ಜೈನ ಮಹಾಕಾವ್ಯವನ್ನು

'ಶಿವಪ್ರಸಾದ', ಕಲ್ಯಾಣನಗರ, ಧಾರವಾಡ - ೫೮೦ ೦೦೭

ನಿರ್ಮಿಸಿದ ಪಂಪನ ಪ್ರತಿಭೆ ಅನ್ಯಾದೃಶವಾದುದು. ಪಂಪನ ಕೃತಿಗಳ ಕಲಾತ್ಮಕ ಸಾಧನೆ ಅವುಗಳಿಗಿದ್ದ ಮೂಲಾಕರ – ಜಿನಸೇನನ ಪೂರ್ವಪುರಾಣ, ವ್ಯಾಸನ ಮಹಾಭಾರತಗಳ ವೈಶಾಲ್ಯಗಳನ್ನು ಒಟ್ಟಾಗಿ ಗಮನಿಸಿದರೆ, ಪಂಪನ ಕವಿಶಕ್ತಿ, ಕ್ರತುಶಕ್ತಿಯ ಅನನ್ಯತೆ ಗೋಚರವಾಗುತ್ತದೆ. ಅರ್ಧಶತಮಾನದ ಆಯಸ್ಸು ತುಂಬುವುದರೊಳಗೇ (ಆರು, ಮೂರು ತಿಂಗಳಲ್ಲಿ ಎಂಬುದು ಉತ್ಪ್ರೇಕ್ಷೆ!) ಈ ಎರಡು ಮಹಾಕಾವ್ಯಗಳನ್ನು ಬರೆದು ಮುಗಿಸಿದ; ಉಳಿದ ಆಯುಷ್ಯದಲ್ಲಿ ರಾಮಾಯಣಕ್ಕೂ ಕೈ ಹಾಕಿದ್ದರೂ ಇರಬಹುದೆ? ಇದು ಊಹೆ ಮಾತ್ರ. ಆದರೂ ಜೈನಧರ್ಮದ ಶ್ರದ್ಧೆಯಿಂದ ರೂಪಿತವಾದ ಪಂಪನ ಜೀವನದರ್ಶನ 'ಆದಿಪುರಾಣ'ದಲ್ಲಿ, ವೈದಿಕ ಧರ್ಮ ನಿಷ್ಠೆಯಿಂದ ಆಕಾರ ಪಡೆದ ಮಾನವೀಯ ಜೀವನದರ್ಶನ 'ವಿಕ್ರಮಾರ್ಜುನ ವಿಜಯ'ದಲ್ಲಿ, ಅಭಿವ್ಯಕ್ತಗೊಂಡಿರುವುದ ಸುವೇದ್ಯ. ಆದರೆ, ಈ ಎರಡು ದೃಷ್ಟಿಗಳನ್ನು ಪಂಪ ತನ್ನ ಬದುಕಿನಲ್ಲಿ ಸಮನ್ವಯಗೊಳಿಸಿಕೊಳ್ಳಲಿಲ್ಲ ಎಂಬ ಆಧುನಿಕರ ಟೀಕೆ ಅರ್ಥವಿಲ್ಲದ್ದು. ಪಂಪನ ಈ ದ್ವಿಮಹಾಕಾವ್ಯ ಸೃಷ್ಟಿಯ ಸಾಧನೆಯ ವೈಶಿಷ್ಟ್ಯ ಹಾಗೂ ಅನನ್ಯತೆಯನ್ನು ಮಾತ್ರ ಒಪ್ಪದಿರಲು ಸಾಧ್ಯವೇ ಇಲ್ಲ. ಎರಡು ರಾಷ್ಟ್ರೀಯ ಮಹಾಕಾವ್ಯ (National Epic) ಸಮುದ್ರಗಳನ್ನು ಈಸಿ, ಜಾಲಾಡಿ, ತನ್ನ ಪ್ರತಿಭೆಯಿಂದ ಎರಡು ವಿಶ್ವಮಹಾಕಾವ್ಯ(World Epic) ಗಳನ್ನು ಸೃಷ್ಟಿಸಿದ ಪಂಪನ ಸಾಧನೆ ಕನ್ನಡಕ್ಕಂತೂ ಹೆಮ್ಮೆ, ವಿಶ್ವಕ್ಕೂ ಹೆಮ್ಮೆಯೇ.

ಆದರೆ ಆದಿಪುರಾಣ ಶ್ರೇಷ್ಠಮಟ್ಟದ ಜೈನ ಕಾವ್ಯವಾಗಿಯೇ ಉಳಿಯಿತು. ಮತ ಸಂಬಂಧ ಸಿದ್ಧಾಂತಗಳ ಅಕ್ಟೋಪಸ್ ಹಿಡಿತದಿಂದ ಪಾರಾಗಿ ಜೀವದೇಳುಬೀಳುಗಳ ಶಾಶ್ವತ ಸಮಸ್ಯೆಗಳ ಕೇಂದ್ರವಾದ ಈ ಕಥಾವಸ್ತುವಿನಲ್ಲಿ ವೈಚಾರಿಕ ಅಂಶಗಳೊಡನೆ ಪಂಪನಂತಹ ಶಕ್ತ, ಅತ್ಯಂತ ಶ್ರೇಷ್ಠಕೃತಿಯನ್ನು ನಿರ್ಮಿಸಬಹುದಿದ್ದ ಸಾಧ್ಯತೆ ಮಾತ್ರ ಇಲ್ಲವಾಯಿತು[3] ಎಂಬ ರಂ.ಶ್ರೀ. ಮುಗಳಿಯವರ ಮಾತುಗಳಿಗೂ, ಕುವೆಂಪು ಅವರ 'ಯಾವ ಮತದ ಸಿದ್ಧಾಂತದ ಬಂಧನಕ್ಕೂ ಒಳಗಾಗದೆ ಉದಾತ್ತ ದರ್ಶನಗಳೆಲ್ಲವುಗಳ ಸಾರವನ್ನು ಹೀರಿಕೊಂಡು ನೂತನ ದರ್ಶನದ ಜಗತ್ಕಾವ್ಯವನ್ನು' ಮುಂದಿನವರು ಸೃಜಿಸಬಲ್ಲವರೆಂಬ ದೂರದ ಆಶಾವಾದದಲ್ಲಿಯೂ ಸತ್ಯಾಂಶವಿಲ್ಲ. ತನ್ನ ಜನ, ದಿನ, ಧರ್ಮ, ಪರಿಸರ, ದರ್ಶನಗಳಿಲ್ಲದ, ವಿಶ್ವದ ಮಹಾಕಾವ್ಯವಿದೆಯೆ? ಮುಂದೆಯಾದರೂ ಬರಲು ಸಾಧ್ಯವೆ? ಕಾವ್ಯಕ್ಕೆ ವಿಶ್ವದೃಷ್ಟಿಯನ್ನು ನೀಡುವುದು ತನ್ನ ಸಂಸ್ಕೃತಿ ದರ್ಶನದಲ್ಲಿ, ವಿಶ್ವಸಾಮಾನ್ಯ ಮಾನವೀಯತೆಯನ್ನು ಬಿಂಬಿಸಿದಾಗ ಮಾತ್ರ. ಪಂಪನ ಕೃತಿಗಳಲ್ಲಿ ಈ ಮಹತ್‌ದರ್ಶನವಿದೆ. ಈ ಮಹತ್ವ ಬೃಹತ್ತಾಗಿದೆ ಎಂಬುದರಲ್ಲಿ ಅಳುಕೇಕೆ? ಬಳುಕೇಕೆ?

``Read the work with the spirit it is writ'' ಎಂಬ ಪೋಪನ ಹೇಳಿಕೆ ಕಾವ್ಯ ವಿಮರ್ಶೆಯ ದಿಕ್ಸೂಚಿ; ಆಧುನಿಕ ವಿಮರ್ಶಕರಿಗೆ ಎಚ್ಚರಿಕೆ ನುಡಿ. ಕವಿಯ, ಕೃತಿಯ, ಮೂಲೋದ್ದೇಶ ಹಾಗೂ ಅಂದಂದಿನ ವೈಯಕ್ತಿಕ ಹಾಗೂ ಸಾಮಾಜಿಕ ಒಲವು-ಒತ್ತಡಗಳ ಹಿನ್ನೆಲೆಯ ವಲಯದಲ್ಲಿಯೇ ಪರೀಶೀಲಿಸುವುದು ಸೂಕ್ತವಿಧಾನ. ಪ್ರಾಚೀನ ಕೃತಿಗಳಲ್ಲಿ ಅತ್ಯಾಧುನಿಕತೆಯನ್ನು ಅರಸ ಹೋಗುವುದು ಬುದ್ಧಿಯ ಕಸರತ್ತು, ಅದರಿಂದ ಒದಗುವುದು ಮೂಲದಲ್ಲಿಲ್ಲದ ಕರಿಯ ಬೆಕ್ಕಿನ ಕತ್ತಲಮನೆ ಹುಡುಕಾಟ. ಆದಿಪುರಾಣದಲ್ಲಿ ಪಂಪ ತನ್ನ ಸ್ಪಷ್ಟ ನಿಲುಮೆಯನ್ನು ಗುರುತಿಸಿಕೊಂಡಿದ್ದಾನೆ. ಅದು ಅವನ ಪ್ರತಿಭಾವಿಲಾಸದ ಸ್ಫೂರ್ತಿ ನೀಡಿದೆ. ಜಿನಸೇನಾಚಾರ್ಯರ ಪೂರ್ವಪುರಾಣ. ಅಲ್ಲಿ ಧರ್ಮ, ಮೊದಲು ಮತ್ತು ಕೊನೆ; ಕಾವ್ಯಧರ್ಮ ಉಪಷ್ಟಂಭಕ, ಆದರೆ, ಪಂಪ 'ನೆಗಳ್ದಾದಿ ಪುರಾಣದೊಳ್ ಅಜಿವುದು ಧರ್ಮಮಮಂ, ಕಾವ್ಯಧರ್ಮಮುಮಂ' ಎಂದು ತನ್ನ ಗುರಿ-ಗಮ್ಯಗಳನ್ನು ಖಚಿತಪಡಿಸಿರುವನು, ಇವೆರಡನ್ನು ಪೃಥಕ್ಕಾಗಿ ಚಿತ್ರಿಸಿಲ್ಲ; ಜೊತೆ ಜೊತೆಯಾಗಿಯೇ ಬಿಂಬಿಸಿರುವನು. ಜಿನಸೇನರಲ್ಲಿ ಬರುವ ಕಾವ್ಯಾರಂಭದ ವಿಸ್ತಾರದ ಪಂಚಪರಮೇಷ್ಠಿಗಳ ಸ್ತೋತ್ರ, ಪಂಪನಲ್ಲಿ ಸಂಗ್ರಹಿತವಾಗಿ ಅರ್ಥಪೂರ್ಣವಾಗಿ ಬಂದಿದೆ. ಹಾರೈಕೆಯ ನುಡಿಗಳಲ್ಲಿ – ಮುಕ್ತಶ್ರೀಸುಖ – ಓಸರಿಸಿ ಕಳೆಗೆ ಸಂಸಾರ ಕಾಂತಾರದಿಂದಂ- ಜ್ಯೋತಿಸುಗೆ ಚಿತ್ತಗೃಹದೊಳ್ ರತ್ನತ್ರಯ ಜ್ಯೋತಿಯಂ- ಕಾರ್ಯವೆಮಗಿದುವೆ ಶಿವಪದ ಅವಿಘ್ನ ಮನಃಪ್ರವೃತ್ತಿ – ಭವ್ಯಕೋಟಿಗೆ ಸೌಖ್ಯ- ಶಾಶ್ವತ ಪದ-ಭವ್ಯೋತ್ಸವ – ಇದೆಲ್ಲ ಧರ್ಮೋದ್ದೇಶ, ಅಂತೆಯೇ ಕೃತಿ ಪುಣ್ಯವನಿತೆಯಂತೆ ವಿದಗ್ಧ ಬುಧಜನದ ಮನಮನಲೆವುದು- ಕೊಂಕುವೆತ್ತ ಪೊಸನುಡಿ-ಉದಾತ್ತ ಅರ್ಥಪ್ರತೀತಿ- ಕಾವ್ಯರತ್ನ-ಕೋಮಳಮತಿಸುಭಗಂ ಸುಂದರಂ ಸೂಕ್ತಗರ್ಭಂ ಮೃದು ಸಂದರ್ಭಂ, ನಿಚ್ಚಂ ಮನಂಗೊಳ್ವುದು – ಇತ್ಯಾದಿ ಕಾವ್ಯೋದ್ದೇಶ ವಿಚಾರಗಳನ್ನು ಬಿಂಬಿಸಿ, ಕೊನೆಯಲ್ಲಿ ಇವೆರಡನ್ನು ಒಡಬೆರಿಸಿದುದನ್ನು ಅಭ್ಯುದಯ ಪ್ರಾಪ್ತಿ ನಿಮಿತ್ತಂ ಉತ್ತಮಯಶಂ ಸಂಸಾರದೊಳ್ ಸಾಮುಪ್ಪದರಿಂ, ಧರ್ಮಂ, ಅದಂ ನಿಮಿರ್ಚುವುದರಿಂದ ಸಂಸಾರಸಾರೋದಯ'ನೆಂದು ತನ್ನ ಬದುಕಿನ ಕಾವ್ಯದ ಗುರಿಯನ್ನು ಗುರುತಿಸಿಕೊಂಡಿದ್ದಾನೆ. ಅಂತೆಯೇ,

'ಇದುವೆ ಸುಕವಿ ಪ್ರಮೋದ ಪ್ರಮೋದ
ಪ್ರಮಿದುವೆ ಸಮಸ್ತ ಭವ್ಯಲೋಕ ಪ್ರಮುದ।
ಪ್ರದಮೆನೆ ನೆಗಟ್ದಾದಿ ಪುರಾ
ಣದೊಳಜಿವುದು ಕಾವ್ಯಧರ್ಮಮಂ ಧರ್ಮಮುಮಂ॥'

ಎಂದು ಬಿಚ್ಚುನುಡಿ ನುಡಿದಿರುವನು. ಅದನ್ನು 'ಪ್ರಾಣಿಹಿತ, ವಿನೇಯ ಹಿತ. ಜಗತ್‌ಕಲ್ಯಾಣ ಹೇತುವಾದ ಆದಿಪುರಾಣವನ್ನು ಭಕ್ತಿಯಿಂದ ವಿರಚಿಸುವಂ' ಎಂದು ಹೇಳಿ, ಕಾವ್ಯಾಂತ್ಯದಲ್ಲಿ ಈ ಗುರಿ ಸಾಧಿತವಾಗಿರುವುದನ್ನು ಹೆಮ್ಮೆಯಿಂದ ಸೂಚಿಸಿರುವನು. ಆದಿಪುರಾಣವು ಪಂಪನ ಕೈಯಲ್ಲಿ ಆದಿದೇವಚರಿತ, ಭವ್ಯಾಳಿಗೆ ಕರ್ಣಾಮೃತಸ್ಯಂದಿ,

ಸ್ವರ್ಗ-ಅಪವರ್ಗ, ಆಸ್ಪದಮಾದ ವಸ್ತುಕೃತಿ, ದೇಸಿ-ಮಾರ್ಗ ಸಮನ್ವಿತವಾದ ಬೆಡಗಿನ ಕಾವ್ಯವನ್ನು, ಸಂಸಾರ ಸಾರೋದಯದ ಪಂಪ, ಸಂಸಾರ ಸಾರೋದಯಕ್ಕಾಗಿಯೇ ಬರೆದನೆಂದು ಜಾಹೀರುಗೊಳಿಸಿರುವನು.

ರಸಭಾವೋಪೇತ ಧರ್ಮಾಮೃತ ರಸಮಯದೊಳ್, ಘೋರ ಸಂಸಾರ ನಾನಾ ವ್ಯಸನ ವ್ಯುಚ್ಛೇದಿಯೊಳ್, ಧಾರ್ಮಿಕ ಜನಜನಿತಾನಂದಸಂದೋಹವಿದ್ಯಾ ರಸದೊಳ್ ಸಂಸಾರಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತಾದಿ ತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯ ಕೋಶಂ.

(೧೬-೩೯)

ಇಲ್ಲಿನ ಪ್ರತಿಶಬ್ದವೂ, ಅರ್ಥಪೂರ್ಣವಾದ ಮಾಣಿಕ್ಯ, ಕವಿಯಾದ ಪಂಪ ಕಂಡು, ಕಾಣಿಸಿದುದು ಧರ್ಮಾಮೃತವನ್ನು ರಸಭಾವೋಪೇತವಾಗಿ. ಅದರಿಂದ ಘೋರ ಸಂಸಾರ ನಿರಸನವುಂಟಾಗಿ ಧಾರ್ಮಿಕರಲ್ಲಿ ಆನಂದವನ್ನುಂಟು ಮಾಡುವುದಲ್ಲದೆ, ಸಹೃದಯರಿಗೆ 'ಹೃದ್ಯವಿದ್ಯಾರಸ'ಮ್, ವಾಗ್ವಧೂ ಮುದ್ರೆಯಲ್ಲಿ ನಿಕ್ಷೇಪಿಸಿರುವುದರಿಂದ. ಆದಿಪುರಾಣ ವಾಕ್ಯ ಮಾಣಿಕ್ಯ ಕೋಶ-ಮಾಣಿಕ್ಯದ ಬೆಡಗೂ ಇದೆ, ಬೆಲೆಯೂ ಇದೆ ಈ ಕೃತಿಯಲ್ಲಿ, ಇದು ಭವ್ಯರಿಗಂತೂ ಅನಂತ ಸುಖಾಭಿಲಾಷೆಯನ್ನು ನೀಡುತ್ತದೆ. ಹೀಗೆ, ಆದಿಪುರಾಣದ ಗುರಿ ಭವ್ಯೋತ್ಸಾಹ, ಕಾವ್ಯರಸೋತ್ಸಾಹ. ಅದನ್ನು ಸಾಧಿಸಿದ ಪಂಪ ಸಂಸಾರಸಾರೋದಯ ಭವಸಂಸಾರ ಸಾರೋದಯವೇ ಆದಿಪುರಾಣದ ಗುರಿ-ಗಮ್ಯ.

ಪಂಪನ ಜೀವನದೃಷ್ಟಿ, ಕಾವ್ಯೋದ್ದೇಶ ರೂಪಣೆಗೆ, ಮುಖ್ಯ ಕಾರಣ ಜಿನಸೇನಾಚಾರ್ಯರೇ. ಅವರ ಪೂರ್ವಪುರಾಣದಲ್ಲಿಯೇ ಈ ಉದ್ದೇಶ ನಿರ್ದಿಷ್ಟವಾಗಿದೆ. ಅಲ್ಲಿ ಧಾರ್ಮಿಕಾಂಶಗಳಿಗೆ ಒತ್ತು, ಒತ್ತಡ. ಕಾವ್ಯಾಂಶಕ್ಕೂ ಕೊರತೆಯಿಲ್ಲ. ಆದರೆ, ಪಂಪ, ಮಾನವೀಯಾಂಶಗಳನ್ನು, ಮಾನವೀಯ ಮೌಲ್ಯಗಳನ್ನು ಕಂಡುಕೊಳ್ಳಲು ಹೊರಟವನಾದ್ದರಿಂದ "ಪೂರ್ವಪುರಾಣ"ದಲ್ಲಿ ತನ್ನ 'ಆದಿಪುರಾಣ'ದ ಮೂರ್ತಿಯನ್ನು ಕಡೆದಿದ್ದಾನೆ, ಕಂಡಿದ್ದಾನೆ. ಮೂಲಕಾವ್ಯದ ಋಣವನ್ನು ಒಪ್ಪಿಕೊಂಡೂ, ತನ್ನ ಪ್ರತಿಭಾ ವಿಲಾಸದ ಧನ-ಮಹದ್ಧನವನ್ನು ಸಾಧಿಸಿರುವನು. ಆಧುನಿಕ ದೃಷ್ಟಿಯ ಕಾವ್ಯಕೇಂದ್ರ ಬಿಂದು ಹಾಗೂ ಐಕ್ಯತೆಯಿಲ್ಲದ, ಮೂಲವನ್ನು ಸಂಗ್ರಹಿಸುವಲ್ಲಿ, ರಸ-ಭಾವ ಸನ್ನಿವೇಶ ವಿಸ್ತರಣೆಯಲ್ಲಿ, ಭೋಗಜೀವಿಯಾದ ಮಾನವ, ತ್ಯಾಗಜೀವಿಯಾದ ತೀರ್ಥಂಕರತ್ವ ಸಾಧನೆಯ ಚಿತ್ರಣದಲ್ಲಿ ಪಂಪ ತನ್ನತನವನ್ನು ಮೆರೆದಿದ್ದಾನೆ, ಮುಂದಿನವರಿಗೆ ಮಾರ್ಗದರ್ಶನ ನೀಡಿದ್ದಾನೆ.

ಜೈನ ಧಾರ್ಮಿಕ ಸಾಹಿತ್ಯೇತಿಹಾಸದಲ್ಲಿ ವೀರಸೇನ-ಜಿನಸೇನ ಗುಣಭದ್ರರು ಅತ್ಯಂತ ಪ್ರಮುಖರು. ಈ ಗುರು ಶಿಷ್ಯ ಪರಂಪರೆ ಜೈನ ತತ್ವದರ್ಶನ-ಸಾಹಿತ್ಯದ ತ್ರಿಕೂಟವೇ ಆಗಿದೆ. ಮಾನ್ಯಖೇಟದ ರಾಷ್ಟ್ರಕೂಟ ದೊರೆ ನೃಪತುಂಗನ ಗುರುಗಳಾದ ಜಿನಸೇನಾಚಾರ್ಯರು, ಇಂದು ಮಹಾಪುರಾಣವೆಂದು ಪ್ರಸಿದ್ಧವಾಗಿರುವ ಪ್ರಥಮ ಭಾಗವಾದ ಆದಿಪುರಾಣದ 47 ಪರ್ವಗಳಲ್ಲಿ 12,000 ಶ್ಲೋಕ ವಿಸ್ತಾರದ 42 ಪರ್ವಗಳನ್ನು ಬರೆದರು. ಉಳಿದ ಭಾಗವನ್ನು ಅವರ ಶಿಷ್ಯ ಗುಣಭದ್ರಾಚಾರ್ಯರು ಬರೆದು ಮುಗಿಸಿದರು. ಒಟ್ಟಿನಲ್ಲಿ, 20,000 ಶ್ಲೋಕಗಳ ಮಹಾಪುರಾಣ, ಒಂದು ಮಹಾಪುರಾಣವೇ, ಒಂದು National Epic. ಜಿನಸೇನಾಚಾರ್ಯರ ಕೃತಿ ನೇರವಾಗಿ ಪ್ರಥಮ ತೀರ್ಥಂಕರನ ಕಥೆ, ಜನ್ಮಾವಳಿ, ಪಂಚಕಲ್ಯಾಣ, ಕೊನೆಯಲ್ಲಿ ಭರತ-ಬಾಹುಬಲಿ ಪ್ರಸಂಗಗಳ ಕಥೆ ಹಾಗೂ ಸವಿಸ್ತಾರವಾದ ಧಾರ್ಮಿಕ ಸಂಗತಿಗಳನ್ನು ಒಳಗೊಂಡ ಒಂದು ಧರ್ಮಾರಣ್ಯ; ಮಹಾಭಾರತ, ರಾಮಾಯಣಗಳಂತೆ ಜೈನರ ಪೂಜ್ಯ ಕಾವ್ಯ ಮಹಾಪುರಾಣ. ಅದರ ವಿಸ್ತಾರ, ಘನತೆ, ಅದ್ಭುತತೆಗಳ ಸಮಗ್ರ ಕಲ್ಪನೆ ಜಿನಸೇನಾಚಾರ್ಯರಿಗೆ ತಿಳಿದೇ ಇತ್ತು. ಮಹಾಪಂಡಿತರೂ, ಧರ್ಮವ್ಯಾಖ್ಯಾನಕಾರರೂ ಆದ, ಅವರೂ ಕೂಡ,

"ತತ್ಪುರಾಣಕವೀನೇವ ಮತ್ವಾ ಹಸ್ತಾವಲಂಬನಂ
ಮಹತೋ ಅಸ್ಯ ಪುರಾಣಾಬ್ದೇ ಸ್ತರಣಾಯೋದ್ಯತೋಸ್ಮ್ಯಹಂ" (೧-೩೫)

. ಹಿಂದಿನ ಪುರಾಣ ಕವಿಗಳ ಕೈ ಹಿಡಿದುಕೊಂಡೇ, ಈ ಮಹಾಸಮುದ್ರವನ್ನು ದಾಟಲು ಧೈರ್ಯ ಮಾಡಿದ್ದೇನೆಂದು ವಿನಯಪೂರ್ವಕವಾಗಿ ತಿಳಿಸಿರುವರು. ಅದನ್ನನುಸರಿಸಿದ ಪಂಪನೂ ಅದೇ ದೃಷ್ಟಿ, ಅದೇ ವಿನಯ ತೋರಿ, 'ಧರ್ಮ ಸಂಬಂಧಿ'ಯಾದ ಮೂಲದಿಂದ, ಜೀವನ ರಸಸಂಬಂಧಿಯಾದ ಕಾವ್ಯವನ್ನೂ ರೂಪಿಸಿದನು. 210 ಶೋಕ್ಲಗಳ ಕವಿ-ಕಾವ್ಯ-ಸಹೃದಯ ಸಂಗತಿಗಳನ್ನು ಪಂಪನು ವೃತ್ತ, ಕಂದ, ಗದ್ಯದಲ್ಲಿ, ಹಿತ-ಮಿತ-ಮೃದು ವಚನದಿಂದ, ರಸೋದಯವಾಗುವಂತೆ ನಿರೂಪಿಸಿರುವನು.

ಪಂಪನ ಆದಿಪುರಾಣ ಹಾಗೂ ಜಿನಸೇನರ ಪೂರ್ವ ಪುರಾಣಗಳ ತೌಲನಿಕ ಅಧ್ಯಯನವಿನ್ನೂ ಸಮಗ್ರವಾಗಿ ಆಗಬೇಕಾಗಿದೆ. ಆದಿಪುರಾಣದ ವಸ್ತು ವಿನ್ಯಾಸ ಹಾಗೂ ಕಾವ್ಯ ವಿಮರ್ಶೆ ಮಾಡಿದವರೆಲ್ಲ ಇದನ್ನು ಕ್ವಚಿತ್ತಾಗಿ ಸಾಧಿಸಿರುವರು. ಆದಿಪುರಾಣದ ಪ್ರಮುಖ ಘಟ್ಟಗಳು - ಮಹಾಬಲನ ಆಸ್ಥಾನದ ಸ್ವಯಂಬುದ್ಧೋಪದೇಶ - ಲಲಿತಾಂಗ ಸ್ವಯಂಪ್ರಭೆಯರ ವೃತ್ತಾಂತ-ವಜ್ರದಂತ ಮಗಳು ಶ್ರೀಮತಿಗೆ ನೀಡಿದ ಬೋಧನೆ (ಶಾಕುಂತಲ ನಾಟಕದ ನಾಲ್ಕನೆ ಆಶ್ವಾಸದ ನೆನಪು) ಪುರುದೇವನ ಪ್ರಥಮ ಐದು ಭವಗಳಲ್ಲಿ ಭೋಗ ಜೀವನದ ತೀವ್ರ ಆಕಾಂಕ್ಷೆ, ಮುಂದಿನ ಭವಗಳಲ್ಲಿ ತ್ಯಾಗ ಜೀವನ ಚಿತ್ರಣ- ನೀಲಾಂಜನೆಯ ನರ್ತನ ಪ್ರಸಂಗ-ಪುರದೇವನ ಪಂಚಕಲ್ಯಾಣ-ಸಮವಸರಣ ಭವ್ಯತೆ- ಭರತ-ಬಾಹುಬಲಿ ಪ್ರಸಂಗಗಳಲ್ಲಿ, ಪಂಪನು ಮೂಲವನ್ನನು ಸರಿಸಿರುವದೆಷ್ಟು, ಸ್ವಂತಿಕೆಯನ್ನು ಮೆರೆದುದೆಷ್ಟು ಎನ್ನುವ ವಿಮರ್ಶೆ ಹಾಗೂ ಪಂಪನ ಕವಿತ್ವದ ಮಹತ್ವವನ್ನು ವಿಮರ್ಶಕರು ಎತ್ತಿ ತೋರಿರುವರು. ಅಲ್ಲಲ್ಲ ಪಂಪನ

ಧರ್ಮ-ಶಾಸ್ತ್ರ-ಸಾಹಿತ್ಯಾಭ್ಯಾಸ, ಅನುಸಂಧಾನ ಪರಿಣತಿ, ಸಂಗ್ರಹ-ಸಂಕ್ಷೇಪ-ವಿಕ್ಷೇಪಕ ವಿಸ್ತಾರಕ ತಾರತಮ್ಯಜ್ಞಾನ, ಅದರ ಔಚಿತ್ಯ, ಅನೌಚಿತ್ಯಗಳು, ಬೇಡ ಬೇಡವೆಂದರೂ, ಧಾರ್ಮಿಕ ಭಾವನಾವೇಶಕ್ಕೊಳಗಾಗಿ ತುಂಬಿದ ನೀತಿ-ಆಚರಣೆ-ಭೋದನೆಗಳು - ಈ ಎಲ್ಲ ಪರಿಧಿಗಳನ್ನು ದಾಟಿ, ಮಹಾಮಾನವ ಮೌಲ್ಯ ರಸೋಪೇತ ಚಿತ್ರಣದ ಪ್ರಮುಖ ಘಟ್ಟಗಳನ್ನು ರಸೋಜ್ವಲವಾಗಿ ಚಿತ್ರಿಸಿರುವುದರ ಮಹತ್ವವನ್ನು ವಿವೇಚಿಸಿರುವರು. ಸಂಪದ್ಭರಿತವಾದ ಕಾಲದಲ್ಲಿ ಬೆಳೆದು ರಾಜಾಶ್ರಯದ ಸುಖವನ್ನುಂಡು ಸ್ವಯಂ ರಸಿಕನಾಗಿ ಬಾಳಿದ ಪಂಪ ತನ್ನ ಆದಿಪುರಾಣದಲ್ಲಿ ಭೋಗ ಜೀವನ ವೈವಿಧ್ಯದ ತುತ್ತತುದಿಯನ್ನು, ಇನ್ನಿಲ್ಲವೆಂಬ ನುಡಿ ವಿನ್ಯಾಸದಿಂದ ಚಿತ್ರಿಸಿರುವನು. ಯುದ್ಧ ವಿದ್ಯಾವಿಲಾಸ (-ಭಾರತದಲ್ಲಿ ವಿಪುಲವಾಗಿದೆ) ಹಾಗೆಯೇ ಪ್ರಕೃತಿ-ಪುಷ್ಪ-ಪ್ರಾಣಿ-ಪಕ್ಷಿ-ವೈಭವ ಆದಿಪುರಾಣದಲ್ಲಿ ಮುಗಿಲು ಮುಟ್ಟಿದೆ.

ಇವುಗಳಿಗೆಲ್ಲ ಮೂಲದಲ್ಲಿಯೇ ಎಡೆಯಿದ್ದರೂ ಪಂಪನ ವಿಶಿಷ್ಟ ಸೌಂದರ್ಯ ಪ್ರಜ್ಞೆ, ರಸಾರ್ದ್ರಹೃದಯ, ನಿತಾಂತವಚೋವಿಲಾಸಗಳು 'ಆದಿಪುರಾಣ'ವನ್ನು ಮಹಾಕಾವ್ಯದ ಎತ್ತರಕ್ಕೆ ಏರಿಸಿವೆ. ಪಂಚಕಲ್ಯಾಣಗಳ ಭವ್ಯತೆ, ನೀಲಾಂಜನೆ ನೃತ್ಯದ ಅನನ್ಯತೆ, ಭರತ ಬಾಹುಬಲಿ ಸೆಣಸಾಟದ ರುದ್ರರಮ್ಯ ಚಿತ್ರಣ ಜಗತ್ತಿನ ಸಾಹಿತ್ಯದಲ್ಲಿಯೇ ಹೆಚ್ಚಾಗಿ ಕಾಣಬರುವ 'ವೈಭವದೃಶ್ಯ'ಗಳೆಂದು ಹೆಸರಾಗಿವೆ. ಶೃಂಗಾರಪ್ರಿಯರಾದ ಕವಿಗಳಲ್ಲಿ ಸಹಜವಾಗಿರುವ ಕಲ್ಪನಾಲೋಲುಪತೆಗೆ ಪಂಪನೂ ಅಲ್ಲಲ್ಲಿ ಬಲಿಯಾಗಿರುವಂತೆ ಭಾಸವಾದರೂ, ತ್ಯಾಗಭೂಮಿಗೆ ಹಿನ್ನೆಲೆಯಾಗಿ ನಿಲ್ಲುವ ಭೋಗಶೃಂಗಾರ ವರ್ಣನೆಯಲ್ಲಿ ಪಂಪನ ವಿಶೇಷ ಅನುಭೂತಿ, ವಿನೂತನೋಪಮಾನಗಳಿಂದ ಮೂಡಿಸುವ ನಿತಾಂತ ಅನುಭವ ಚಿತ್ರ, ಸಹೃದಯರನ್ನು ಸುಖಮೂರ್ಛೆಗೆ ತಳ್ಳುತ್ತದೆ. ಮೂಲದಲ್ಲಿಲ್ಲದ, ಸಂನ್ಯಾಸಿಯಾದ ಜಿನಸೇನರು ಕಾಣಲಾರದ, ಚಿತ್ರಿಸಲಾರದ, ಈ ಅನುಪಮ ಸಾಧನೆಯು, ಸಂಸಾರ ಸಾರೋದಯನೂ, 'ವನಿತಾ ಕಟಾಕ್ಷಕುವಳಯ ವನಚಂದ್ರನೂ,' 'ಜಿನ ಚರಣಕಮಲ ಭೃಂಗನೂ' ಆದ ಪಂಪನಿಗೆ ಸಾಧ್ಯವಾದುದು ಅತೀ ಸಹಜವಾಗಿದೆ. ಪುರದೇವನ ಹತ್ತು ಭವಗಳ ವರ್ಣನೆ, ಭರತ ಚಕ್ರವರ್ತಿಯ ವೈಭವಗಳ ಚಿತ್ರಣದಲ್ಲಿ ಆ ಅಭಿವ್ಯಕ್ತಿಗೆ ಸಹಜಾವಕಾಶ ದೊರಕಿದೆ; ವೇಶ್ಯಾವಾಟಿಕೆಯ ವರ್ಣನೆಯೂ ಸಕಾರಣವಾಗಿದೆ. ಅದೆಲ್ಲ ಅತಿಯಾಯಿತೆನ್ನುವುದು, ಆಯಾ ಸಹೃದಯ ವಿಮರ್ಶಕರ ಅರಕೆಯ ವ್ಯಕ್ತಿತ್ವದ ದ್ಯೋತಕ.

ಬನವಾಸಿಯ ಬೆಡಗಿನ ನಾಡಿನ ಕಂದನಾದ ಪಂಪನಲ್ಲಿ ಬರುವ ಪ್ರಕೃತಿ ವರ್ಣನೆ ತಾದಾತ್ಮ್ಯತೆಯನ್ನೂ, ರಸತೃಪ್ತಿಯನ್ನೂ ನೀಡುವಂತಿದೆ. ಆದಿಪುರಾಣದಲ್ಲಿ ಈ ಪ್ರಕೃತಿ ವರ್ಣನೆಗೆ ಸಹಜಾವಕಾಶಗಳಿವೆ. ಅವುಗಳನ್ನೆಲ್ಲ ತುಂಬು ಹೃದಯದಿಂದ ಬಳಸಿಕೊಂಡಿರುವನು. ಮಹಾಭಾರತದ ಬನವಾಸಿಯ ವರ್ಣನೆಯನ್ನಷ್ಟೇ ಮೆಚ್ಚಿ ಮರುಳಾಗುವ ಜನ, ಆದಿಪುರಾಣದ ಭರತನ ದಿಗ್ವಿಜಯ ವರ್ಣನೆಯ ಹನ್ನೊಂದನೆಯ ಆಶ್ವಾಸನವನ್ನು ಓದಿ ಆನಂದಿಸಿ, ಹುಚ್ಚರಾಗುವುದು ಸಹಜ. ಪಂಪನ ಪುಷ್ಪ ವರ್ಣನೆಯನ್ನು ಈಗಾಗಲೇ ಕವಿ ಸಹೃದಯರು ಕೊಂಡಾಡಿರುವರು. ಅದು ಇಂದ್ರಿಯ ಮಟ್ಟವನ್ನು ಮೀರಿದ ಆತ್ಮಸಂಬಂಧಿಯಾದ ಸೌಂದರ್ಯವರ್ಣನೆ ಎಂದು ಗುರುತಿಸಿರುವರು ಡಾ. ಜಿ.ಎಸ್. ಶಿವರುದ್ರಪ್ಪ. ಆದರೆ, ಲತೆ-ಪುಷ್ಪ-ಲತಾಂಗಿಯರ ಸಮನ್ವಯ ವರ್ಣನೆಯಲ್ಲಿ ಅಭೂತಪೂರ್ವವಾದ ಯಶಸ್ಸನ್ನು ಸಾಧಿಸಿರುವನು ಪಂಪ. ತೀನಂಶ್ರೀ ಪಂಪನನ್ನು ಕನ್ನಡದ ಕಾಳಿದಾಸನೆಂದು ವರ್ಣಿಸಿದುದು ಅತಿಯಾಯಿತೆಂದು ಭಾವಿಸಿ, ಡಾ. ಜಿ.ಎಸ್.ಎಸ್. 'ಪಂಪ ಕಾಳಿದಾಸನ ತಮ್ಮ' ಎಂದು ಕರೆದರು. ಪಂಪನ ವರ್ಣನೆಗಳನ್ನು ಸವಿಸ್ತಾರ ಪರಿಶೀಲನೆಗೊಳಗಾಗಿಸಿದರೆ, ಈ ನೈಚ್ಯಾನುಸಂಧಾನದ ಅಭಿಪ್ರಾಯಗಳಿಗೆ ಅವಕಾಶವಿಲ್ಲ. ಪಂಪ ಪ್ರಪಂಚದ ಅಂಥ ಎಲ್ಲ ಶ್ರೇಷ್ಠ ಕವಿಗಳಿಗೆ ಹೆಗಲೆಣೆಯಾದ ಕವಿ.

ಪಂಪನ ಕಾವ್ಯರಚನಾ ಕೌತುಕಗಳಲ್ಲೊಂದಾದ 'ವರ್ಣನೆ'ಯ ಔಚಿತ್ಯ ಮಹತ್ವವನ್ನೂ ಬಿಂಬಿಸುವ ಈ ಪ್ರಸಂಗ ನೋಡಿ:

ವಜ್ರಜಂಘ - ಶ್ರೀಮತಿಯರು ಪರಿವಾರಸಮೇತ ಸರೋವರದ ಹತ್ತಿರ ಬೀಡು ಬಿಟ್ಟಿರುವ ಪ್ರಸಂಗವನ್ನು ಜಿನಸೇನರು ವರ್ಣಿಸುವುದು ಹೀಗೆ

'ಯದಂಬುಜರಜಃ ಪುಂಜ ಪುಂಜರೀಕೃತವೀಚಕಂ
ಕನಕದ್ರವಸಚ್ಛಾಯಂ ಬಿಭತಿಸ್ಮಾಂಬುಶೀತಲಂ (೮-೧೫೭)

ಈ ಪುಷ್ಪ ಸರೋವರದ ಶೀತಲವಾದ ನೀರು, ಕಮಲಗಳ ಧೂಳುಗಳಿಂದ ಹಳದಿ ಬಣ್ಣವಾದ ತೆರೆಮಾಲೆಗಳುಳ್ಳದಾಗಿಯೂ, ಬಂಗಾರ ರಸದಂತೆ ಕಾಂತಿಯುಳ್ಳದ್ದಾಗಿಯೂ ಇದ್ದಿತು. (ಮಹಾಪುರಾಣ ಸಂ.೧ ಪು. ೩೧೩) ಈ ಮಾಮೂಲಿ ವರ್ಣನೆಗೆ ವಿನೂತನ ಕಲ್ಪನೆಯನ್ನು ರೂಪಿಸಿ, ಪಂಪ ಹೊಸ ಸೊಗಸಿನ ಅರ್ಥವನ್ನು ಚಿಮುಕಿಸುತ್ತಾನೆ.

ಇದು ಗಹನಾಂತರಾಳಮಿದರೊಳ್ ನೆಲಸಿರ್ದ ಮದೀಯ ತೋಯದಿಂ
ಪೊದವಿದ ನೀರಜಾವಳಿಯ ಚೆಲ್ವು ನಿರರ್ಥಕಮಾದುದಿಂದು ಪೊ
ರ್ದಿದಜನದಿಂ ಕರಂ ಸಫಳಮಾದುದು ಪೆಂಪೆನಗಾದುದೆಂದು ರಾ
ಗದಿನುಲಿವಂತುಟಾಯ್ತು ಕಲಹಂಸನಿನಾದದಿನಾಸರೋವರಂ (ಆ.ಪು. ೪-೯೩)

ಮೂಲದಲ್ಲಿಲ್ಲದ ಕಲಹಂಸ ನಿನಾದವನ್ನು ಕಲ್ಪಿಸಿ, ಅವುಗಳ ಮೂಲಕ ಸರೋವರ, ಅಲ್ಲಿರುವ ಶೀತಲವಾದ ನೀರು, ಸುಂದರವಾದ ಕಮಲಗಳ ಚೆಲ್ವು, ನಿರರ್ಥಕವಾಗಿದ್ದಿತು. ಇಂದು ತಮ್ಮಂಥವರ ಬರವಿನಿಂದ ಅದು ಸಫಲವಾಯಿತೆಂಬ ಕಲ್ಪನೆಯನ್ನು ಬಿಂಬಿಸಿರುವನು ಪಂಪ.

ಅಂತೆಯೇ, ಮುಂದುವರಿದು, ವಜ್ರಜಂಘನ ಆನೆಗಳು ಆ ಸರೋವರದಲ್ಲಿ ಅವಗಾಹಕ್ಕಿಳಿದವು ಎಂಬ ಸಂಗತಿಗೆ ಪಂಪನು ವಿವರವಾದ ವರ್ಣನೆ ನೀಡಿ, ಪರಂಪರೆಯ ಚಿತ್ರ ಇನ್ನಷ್ಟು ಸೊಗಸಾಗುವಂತೆ ಮಾಡಿರುವನು. ಅಲ್ಲಿ ತೋರುತ್ತದೆ ಅವನ ಸೌಂದರ್ಯ ಪ್ರಜ್ಞೆ,

ಮೂಲದಲ್ಲಿ ಇಂತಿದೆ:

ಕುಸುಮಾಪಚಯೇ ತೇಷಾಂ ಪದ ಪಾಟಪೈರ್ನತಾಃ
ಅನುಕೂಲ್ಯಮಿವಾತೇನುಃ ಸಮಂತಾತಿಥ್ಯ ಸತ್ಕ್ರಿಯಾಃ (೮–೧೫೮)
ಕಾಯಮಾನೇ ಮಹಾಮಾನೇ ರಾಜಾ ತತ್ರಾವ ಸತ್ಸುಖಂ!
ಸರೋಜಲ ತರಂಗೋತ್ಥ ಮೃದು ಮಾರುತ ಶೀತಲೇ (೮–೧೬೬)

ಈ ಸನ್ನಿವೇಶದಲ್ಲಿ ಜಿನಸೇನಾಚಾರ್ಯರು ಆನೆ, ಕುದುರೆ ಹಾಗೂ ಸ್ತ್ರೀಯರು ಸರೋವರದ ಲಾಭ ಪಡೆದರೆಂಬ ವಿವಿಧ ಚಿತ್ರಗಳನ್ನು ನೀಡುತ್ತಾ ೧೦–೧೫ ಶ್ಲೋಕಗಳಷ್ಟು ವಿಸ್ತರಿಸುತ್ತಾರೆ. ಆದರೆ, ಪಂಪನು ವಿನೂತನ ದೃಷ್ಟಿಯ ವರ್ಣನೆಯಿಂದ ಒಟ್ಟು ಸನ್ನಿವೇಶವೇ ಜೀವಂತವಾಗುವಂತೆ ಮಾಡಿರುವನು.

ಆಗಳೆ ಮಾಲ್ಪ ಚಿತ್ರ ರಚನಾಳಿಗೆ, ಜೈನಗೃಹಕ್ಕೆ, ಕಾಂತ ಕಾಂ
ತಾಗಣ ಕರ್ಣಪೂರ ಕುಸುಮಾಭರಣಾಳಿಗೆ ಯೋಗ್ಯವಾಗಿ, ಮೇ
ಲಾಗಿ ತೆರಳ್ದು ಪೊಕ್ಕು ಪೊರಮಟ್ಟ ಮದೇಭಗಣಕ್ಕೆ ಮಂಡನಾ
ಯೋಗಮುಮಾದುವಾ ಕೊಳದಕೋಮಲ ನೀರಜ ಪುಷ್ಪ ಜಾತಿಗಳ್ (೪–೯೪)

ಚಲಕಲಹಂಸ ಸಾರಸರಥಾಂಗ ಮದಾಳಿ ನಿನಾದ ಕೈರವೋ
ತ್ಪಲ ಶತಪತ್ರ ಮಂದಮಕರಂದ ರಸೋತ್ಕಟ ಗಂಧ ಬಂಧುರಂ
ಲಲಿತ ನೃಪಾಂಗನಾಲಕಚಯಂಗಳನಾಡಿಪುದಾಯ್ತು ಸಂತತೋ
ಚ್ಚಲಿತ ತರಂಗ ಶೀಕರ ತುಷಾರಜಲಂ ಸರಸೀಸಮೀರಣಂ (೪–೯೫)

ಪ್ರಕೃತಿ ರಮಣೀಯ ಸರೋವರ, ವನರಾಜಿ, ಪುಷ್ಪಸಮುದಾಯವನ್ನು ಕಂಡ ಕೂಡಲೇ ಪಂಪನು ಕಲ್ಪನಾಶೀಲನಾಗುತ್ತಾನೆ; ಭಾವಭರದಲ್ಲಿ ಬರೆಯತ್ತಾನೆ. ಮೂಲದ ಸೂಚನೆಗಳ ಸುತ್ತ ವಿನೂತನ ಚಿತ್ತ ಚಿತ್ತಾರವನ್ನೇ ನೀಡುತ್ತಾನೆ; ಅದನ್ನು ಅನುಭವಿಸಿ ಚಿತ್ರಿಸುತ್ತಾನೆ. ಆ ಸರೋವರದ ಶೀತಲ ಜಲ, ಸುಂದರ ಪುಷ್ಪ ಹಾಗೂ ಮಂದಮಾರುತಗಳು ವಜ್ರಜಂಘ ರಾಜನನ್ನು ಸೇವಿಸಿದುವೆಂಬ ಅರ್ಥದ ಹಿಂದಿನ ಧ್ವನಿ–ರಾಜ್ಯದಲ್ಲಿ ನೆಮ್ಮದಿ ಸ್ಥಾಪಿಸಲು ಸೈನ್ಯ ಸಮೇತ ಹೊರಟ ರಾಜನಿಗೆ ವೈರಿಗಳೆಲ್ಲ ಶರಣರಾದರು, ಅಷ್ಟೇ ಅಲ್ಲ, ಅವರ ಜೀವನ ಸಾರ್ಥಕವಾಯಿತು. ಈತನ ಸೈನ್ಯಕ್ಕೆ ಮುಂದಿನದೆಲ್ಲ ಲೀಲಾಜಾಲವಾಯಿತು ಎಂದು. ಪಂಪನ ಪ್ರತಿಭೆಯ ಸ್ಪರ್ಶ ಆತನ ಕಾವ್ಯಕ್ಕೆ ಸೌಂದರ್ಯದ ಕಮನೀಯತೆಯನ್ನು ತಂದಿದೆ ಎಂಬುದಕ್ಕೆ ಇದೊಂದು ಪುಟ್ಟ ನಿದರ್ಶನ! ಆತನ ಸೌಂದರ್ಯಾಸಕ್ತಿಯ ಅನುರಕ್ತಿಯ ಪ್ರದರ್ಶನ.

ಮೂಲದಲ್ಲಿಲ್ಲದ ನೀಲಾಂಜನೆಯ ನರ್ತನದ ಸೊಗಸು–ಸೊಗಡುಗಳನ್ನು ಅನೇಕ ವಿಮರ್ಶಕರು ಇನ್ನಿಲ್ಲದ ಮಾತುಗಳಿಂದ ವರ್ಣಿಸಿರುವರು ನಿಜ, ಅಂತೆಯೇ ಸಣ್ಣ ಪುಟ್ಟ ಸನ್ನಿವೇಶಗಳಲ್ಲಿಯೂ ಇಂಥ ಸೊಗಸನ್ನು ಸಿಂಪಡಿಸಬಲ್ಲ ಪಂಪನ ಸಾಮರ್ಥ್ಯಕ್ಕೆ ಇನ್ನೊಂದು ಪುಟ್ಟ ಉದಾಹರಣೆ ಇಂತಿದೆ :

ಭರತನ ದಿಗ್ವಿಜಯ ಪ್ರಯಾಣದಲ್ಲಿ ಬರುವ ಸರ್ವಋತು ವೈಭವದ ವರ್ಣನೆ ಪ್ರಸಿದ್ಧವಾಗಿದೆ. ಮೂಲವನ್ನು ಮೀರಿನಿಂತ ಪಂಪನ ಸೌಂದರ್ಯ ದೃಷ್ಟಿಯ ಪ್ರತೀಕವೆಂದು ಇದು ಪ್ರಸಿದ್ಧವಾಗಿದೆ. ಆದರೆ, ವನಸ್ತ್ರೀಯರು, ಭರತರಾಜನಿಗೆ ಆತಿಥ್ಯ ಮಾಡಿದರು. ಆ ವನದೇವತೆ ಹಾಗೂ ವನಸ್ತ್ರೀಯರು ಕೂಡಿ, ಭರತನಿಗೆ ಸಂಗೀತ–ನರ್ತನದ ಅಮೋದವನ್ನುಂಟು ಮಾಡಿದರು. ಅದನ್ನು ಪಂಪ ವರ್ಣಿಸುವುದು ಹೀಗೆ:

ಅಳಿನಿನದದ ಮದಕೋಕಿಳ।
ಕಳನಿನದದ ಜತಿಯೊಳಭಿನಯಮಂ ನೆಗಳ್ಚಿನಗಂ
ಲಲಿತಮನೇನಾಡಿಸಿದನೊ।
ಮಲಯಾನಿಲ ನರ್ತಕಂ ಲತಾನರ್ತಕಿಯಂ॥

ಅಂಕುರ ಪಲ್ಲವ ಕುಸುಮಾ।
ಲಂಕಾರದ ಚೂತಲತಿಕೆ ನರ್ತಕಿವೊಲ್ ತ
ನ್ನಂಕುರದಿಂ ಶಾಖೇಯಿನೇ।
ನಂಕುರ ಶಾಖಾಭಿನಯಮನಭಿನಯಿಸಿದುದೊ

ಮುಱುಕದ ವೆಲ್ಪಿನ ಭಂಗಿಯ।
ನೆಱನೊಳಿವೆ ಮಿಗಿಲವರ್ಕಮೆನೆ ಭರತನ ಕ
ಣ್ಣೆಱಮನೆ ಪಡೆದು ಚೆಲ್ವಂ।
ಮರೆಯಿಸಿದುವುದ್ಯಾನ ಲತೆಗಳಮ ವನಲತೆಗಳ್

(೧೧–೯೧, ೯೨, ೯೩)

ಈ ಮೂರು ಕಂದ ಪದ್ಯಗಳ ಸಂಕ್ಷಿಪ್ತ ವಿನ್ಯಾಸದಲ್ಲಿ, ವನಲತೆಗಳ ನರ್ತನಸೇವೆ, ಸಂಗೀತಸೇವೆಗಳ ಸಮನ್ವಯ ಚಿತ್ರಣವನ್ನು ಪಂಪ ನೀಡಿ, ಮುಂದಿನ ಗದ್ಯಭಾಗದಲ್ಲಿ 'ಅಲ್ಲಿ ವನಮಾಲಿಕಾ ಕುಸುಮ ಸುಕಮಾರಿಯರ್ ಶಾತಕುಂಭ ರಂಭಾ ವನುಗಳುಮಂ... ಕಾಮಕಾರ್ಮುಕೋಪಮಾನ ಭ್ರೂಲತೆಯರ್ ಪುನ್ನಾಗ ತಿಲಕೆಗಳುಮಂ ನೋಡುತ್ತುಂ ಕುಸುಮಾಪಚಯ ಕ್ರೀಡಾ ವಿಳಾಸದಿಂ' ತೊಳಲಿದರೆಂಬ ವರ್ಣನೆಯಲ್ಲಿಯೂ ಈ ಪ್ರಕೃತಿ–ಪುರುಷ ಸೌಂದರ್ಯ ಸಮನ್ವಯದ ಚಿತ್ರಣ ಪಂಪನ ಕೊಡುಗೆ. ಉದ್ಯಾನಲತೆಗಳನ್ನೂ ವನಲತೆಗಳು ಮರೆಯಿಸಿದುವೆಂಬಲ್ಲಿ ಕಾಳಿದಾಸನ ನೆನಪು ಬಂದರೂ, ಒಟ್ಟಿನ ದೃಶ್ಯದಲ್ಲಿ, ಪಂಪನ ಸೌಂದರ್ಯಾಭಿವ್ಯಕ್ತಿ ಗುಣವನ್ನು ಮೆಚ್ಚದವರಾರು? ಆದರೆ ಶಬ್ದ ಸಮೂಹದಲ್ಲಿ ಹೊಕ್ಕು, ಅರ್ಥವಂತಿಕೆಯನ್ನು ಗಮನಿಸುವ ಸಹೃದಯನಿಗೆ ವ್ಯವಧಾನ, ರಸಿಕತೆ ಬೇಕು, ಅಷ್ಟೇ.

ಪಂಪನು ಕಥಾವಸ್ತು, ವರ್ಣನೆಗಳಿಗಷ್ಟೇ ಜಿನಸೇನರಿಗೆ ಋಣಿಯಾಗಿಲ್ಲ, ಉದಾತ್ತ ಪಾತ್ರ ಚಿತ್ರಣಕ್ಕೆ, ತತ್ವವಿವೇಚನೆಗೆ, ಜೀವನ ದರ್ಶನಕ್ಕೂ ಚಿರಋಣಿಯಾಗಿದ್ದಾನೆ. ಶಿಲೆಯನ್ನೇ ಕಲ್ಪಿಸಿ, ಶಿಲ್ಪಿಸಿದ ಮಹಾಕವಿ ಶಿಲ್ಪಿ ಜಿನಸೇನಾಚಾರ್ಯರಿಗೆ,

ಪಂಪನ ಶಿಲ್ಪಚಾತುರ್ಯ ಅಡಿಯಾಳಾಗದೆ ಸ್ವಂತಿಕೆ ಮೆರೆದಿದೆ. ಆದಿಪುರಾಣದಲ್ಲಿ ಬರುವ ಹಿರಿ-ಕಿರಿ ಪಾತ್ರಗಳು, ಅವುಗಳು ನಡೆದಾಡುವ ಸನ್ನಿವೇಶ, ಅವುಗಳು ಸಾಧಿಸಿದ ಕಾರ್ಯಗಳೆಲ್ಲ ಪಂಪನಲ್ಲಿ ಮಟ್ಟಸವಾಗಿ ಬಂದಿರುವುದು ಆತನ ಕಲಾದೃಷ್ಟಿ, ಜೀವನ ಶ್ರದ್ಧೆ, ಜೈನ ಧರ್ಮಶಾಸ್ತ್ರ ಪರಿಣತಿ, ಕನ್ನಡ-ಸಂಸ್ಕೃತ ಭಾಷಾ ಪಾಂಡಿತ್ಯಗಳ ಸಮನ್ವಯದಿಂದ ಎಂಬುದು ಸತ್ಯ. ಜಿನಸೇನರ ಕೃತಿಯ ದೊಡ್ಡ ಬೆಟ್ಟದಲ್ಲಿ, ಆದಿಪುರಾಣದ ಗೊಮ್ಮಟ ಮೂರ್ತಿಯನ್ನು ಬಿಡಿಸಿ, ಕಡೆದು, ನಿಲ್ಲಿಸಿದ ದೇವಮಾನವ ಕಲೆಗಾರ ಪಂಪ. ಜಿನಸೇನ ಹಾಗೂ ಪಂಪರ ಕೊಡು-ಪಡೆಗಳನ್ನು ಅಳೆದು-ಸುರಿದ ನೋಡುವ ಕಾರ್ಯ ಇನ್ನೂ ಆಗಬೇಕಾಗಿದೆ. ಈ ಎರಡು ಕೃತಿಗಳು ಇಂದು ನೇರವಾಗಿ ಕನ್ನಡದಲ್ಲಿಯೇ ದೊರೆಯುವುದರಿಂದ, ಸಾಹಸಿಗಳು ಇದನ್ನು ಎತ್ತಿಕೊಳ್ಳಲು ವೀಳ್ಯ ಸ್ವೀಕರಿಸಬೇಕು.

ಆದಿಪುರಾಣದ ಕಥೆ, ಕಲೆ, ಪಾತ್ರ ಜೀವನ ದರ್ಶನಗಳ ವಿಚಾರ ವಿಮರ್ಶೆಯನ್ನು ಮೀರಿದ, ಕೆಲವು ಮೂಲಭೂತ ಸಂಗತಿಗಳ ಬಗೆಗೂ ನಾವಿಂದು ಗಮನಹರಿಸಬೇಕಾಗಿದೆ.

೧) ಜೈನಧರ್ಮ ಪ್ರತಿಪಾದಿಸುವ ಲೋಕಾಲೋಕಗಳ ಕಲ್ಪನೆ, ಇಂದಿನ ವಿಜ್ಞಾನದ ಸಿದ್ಧಾಂತಕ್ಕೆ (Expanding Universe) ಒಪ್ಪುವುದೇ? ವಿಚಾರ ಮಾಡಬೇಕು.

೨) ಜೈನ ಶಾಸ್ತ್ರ, ಕಾವ್ಯಗಳು ರಂಜನೀಯವಾಗಿ ವರ್ಣಿಸುವ ಜನ್ಮ ಜನ್ಮಾಂತರದ ಸಂಗತಿ, ಸತ್ಯವೇ? ಕಲ್ಪನೆಯೇ? ಇಂದಿನ ಜೀವಶಾಸ್ತ್ರ, ತಳಿಶಾಸ್ತ್ರಗಳು ಸಂಶೋಧನೆ ಮಾಡುತ್ತಿರುವ ಜೀವಕಣ- ಜೀವಕೋಶ-ಜೀನ್ಸ್‌ಗಳ ಗುಣಲಕ್ಷಣ ವಿಕಾಸಗಳ ಹಿನ್ನೆಲೆಯಲ್ಲಿ ಈ ಜನ್ಮ ಜನ್ಮಾಂತರ ಸತ್ಯವನ್ನು ಪರೀಕ್ಷಿಸಬೇಕಾಗಿದೆ.

೩) ಜೈನ ಕಾವ್ಯ-ಶಾಸ್ತ್ರಗಳು ವಿಪುಲವಾಗಿ ವರ್ಣಿಸುವ ಇಹಭೋಗ ಜೀವನದ ಚಿತ್ರ, ಲೌಕಿಕ ಜೀವನದ ವಿವರಗಳು, ಕವಿ ಕಲ್ಪನೆಗಳು ಮಾತ್ರವೇ ಅಥವಾ ಅವು ಪರಂಪರೆಯ ಭಾರತ ಸಂಸ್ಕೃತಿ ಕಂಡುಕೊಂಡ ಜೀವನ ಸತ್ಯ ಸಂಗತಿಗಳಿರಬಹುದೆ? ವಿಚಾರ ಮಾಡಬೇಕು.

೪) ಜೈನ ಪುರಾಣ ಕಾವ್ಯಗಳಲ್ಲಿ ಬರುವ ಗಿಡ-ಮರ- ನೆಲ-ಜಲ-ಪ್ರಕೃತಿ, ಹಣ್ಣು - ಹೂ - ಚಿಗುರು, ಪಕ್ಷಿ-ಪ್ರಾಣಿ ಪ್ರಪಂಚ, ನಗರ-ಕೋಟೆ- ಸೈನ್ಯ-ಯುದ್ಧ ಮುಂತಾದ ಮಾನವನ ಭೌತಸಂಸ್ಕೃತಿ ಚಿತ್ರಣದಲ್ಲಿ ಸತ್ಯವೆಷ್ಟು, ಕಲ್ಪನೆ ಎಷ್ಟು? ಇಂದಿನ ವಿವಿಧ ವಿಜ್ಞಾನಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು.

ಕೊನೆಯದಾಗಿ, ಜೈನ ಧರ್ಮ ಬಿಂಬಿಸುವ ಜೀವನ ದರ್ಶನ-ನಿರೂಪಿಸುವ ವ್ರತಾಚರಣೆ, ಬೋಧಿಸುವ ತ್ಯಾಗ-ಯೋಗ-ಸಿದ್ಧಿಗಳು ಅದೆಷ್ಟು ಮಟ್ಟಿಗೆ ವೈಜ್ಞಾನಿಕ? ಅದೆಷ್ಟು ರೀತಿಯಲ್ಲಿ ವ್ಯಾವಹಾರಿಕ? ಪರೀಕ್ಷಿಸಬೇಕು. ಪಂಪನ ಆದಿಪುರಾಣ ಕವಿ-ಕಾವ್ಯ ಕಲಾ ಅಧ್ಯಯನದಷ್ಟೇ ಮುಖ್ಯವಾದುದು, ಈ ಮೇಲಿನ ಐದು ಅಂಶಗಳ ವಿಶ್ಲೇಷಣೆ, ವಿವೇಚನೆ, ನಿರ್ಣಯ. ಆದರೆ ಅದೆಲ್ಲ ಇಂದು ಯಾರಿಗೆ ಬೇಕಾಗಿದೆ? ಯಾರು ಮಾಡಬಲ್ಲರು? ಮಾಡಿಸಬಲ್ಲರು? - ಇವೆಲ್ಲ ಪ್ರಶ್ನೆಗಳು ಮಾತ್ರ ಇಂದಿಗೆ.

❑❑

# ಮಹಾಭಾರತದ ಸ್ವರೂಪ ಮತ್ತು ಪಾಠ ಪರಿಷ್ಕರಣ ಕಾರ್ಯ : ಒಂದು ಸಂಕ್ಷಿಪ್ತ ನೋಟ

– ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

ಮಹಾಭಾರತ ಜಗತ್ತಿನ ಅತ್ಯಂತ ಪ್ರಾಚೀನ ಕಾವ್ಯಗಳಲ್ಲಿ ಒಂದು. ಭರತಖಂಡದ ಸಂಸ್ಕೃತಿ ಜನಜೀವನಗಳನ್ನು ರೂಪಿಸಿದ ಪ್ರಮುಖ ಸಾಧನಗಳಲ್ಲಿ ಇದೂ ಒಂದು ಎಂಬ ಘನತೆ ಅದರದ್ದು. ವಸ್ತುವಿನ ಹರಹು, ಕೃತಿಯ ಪ್ರಮಾಣ ಮತ್ತು ಕಾವ್ಯಸತ್ವಗಳಲ್ಲಿ ಇದು ಅದ್ವಿತೀಯವಾದ ಗ್ರಂಥ. ಮಾನವಜೀವನದ ಬಹಿರಂಗವನ್ನು ಮಾತ್ರವಲ್ಲದೆ ಅದರ ಅಂತರಂಗದ ಸೂಕ್ಷ್ಮಗಳನ್ನು ನಿಗೂಢ ಮುಖಗಳನ್ನೂ ಬೆರಗುಗೊಳಿಸುವಂತೆ ಅನಾವರಣ ಮಾಡಿರುವ ಕಾವ್ಯ ಇದು. ಇದರ ಗಾತ್ರ ಕೂಡ ಆಶ್ಚರ್ಯಗೊಳಿಸುವಂಥದೇ. ಪ್ರಾಚೀನ ಪಾಶ್ಚಾತ್ಯ ಮಹಾಕವಿ ಹೋಮರನ 'ಇಲಿಯಡ್' ಮತ್ತು 'ಒಡೆಸ್ಸಿ' ಎಂಬ ಎರಡೂ ಕಾವ್ಯಗಳನ್ನು ಒಟ್ಟು ಸೇರಿಸಿದರೆ ಆಗುವ ಎಂಟರಷ್ಟು ಪ್ರಮಾಣ ಇದರದ್ದು! ಒಟ್ಟು ಸ್ವರೂಪವನ್ನು ಗಮನಿಸಿದಾಗ ಈ ಕಾವ್ಯ ಒಂದು ಮಹಾರಣ್ಯದಂತಿದೆ. ಮೂಲಕಥೆಗೆ ತಳುಕು ಹಾಕಿ ಕೊಂಡಿರುವ ನೂರಾರು ಕಥೆಗಳು, ಉಪಕಥೆಗಳು ಇದರಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಅಷ್ಟೇ ಅಲ್ಲ, ಶಕುಂತಲೋಪಾಖ್ಯಾನ, ಸಾವಿತ್ರೀ ಉಪಾಖ್ಯಾನ, ನಳೋಪಾಖ್ಯಾನ, ರಾಮೋಪಾಖ್ಯಾನಗಳಂಥ ದೊಡ್ಡ ಗಾತ್ರದ ಉಪಾಖ್ಯಾನಗಳೇ ಅದರಲ್ಲಿ ಸೇರಿಹೋಗಿವೆ. ಭಗವದ್ಗೀತೆಯಂಥ ಲೋಕ ಪ್ರಸಿದ್ಧ ದಾರ್ಶನಿಕ ಗ್ರಂಥ ಕೂಡ ಅಲ್ಲಿ ಬರುವ ಎರಡು ಪಾತ್ರಗಳ ನಡುವಿನ ಒಂದು ಸಂವಾದ ಮಾತ್ರ. ಇದನ್ನು ಹಾಯ್ದು ಬಂದವರಿಗೆ ಆಶಾಪೀಡಿತ ಮಾನವನ ಅಂತರ್ಲೋಕದ ಢಾಳ ಪರಿಚಯವಾಗುತ್ತದೆ. ಎಂಥೆಂಥವರೆಲ್ಲ ಏನಾದರು ಎಂದೆನ್ನಿಸಿ ದಟ್ಟವಾದ ಬೆರಗು ಕವಿಯುತ್ತದೆ. ಇದರಲ್ಲಿರುವುದು ದಾಯಾದಿಗಳ ಸಂಘರ್ಷದ ಕಥೆ ಮಾತ್ರವಲ್ಲ; ಲೋಕವ್ಯವಹಾರ, ರಾಜನೀತಿ, ತತ್ವಬೋಧೆ ಮೊದಲಾದುವೂ ಅದರಲ್ಲಿ ಸಂದರ್ಭಾನುಸಾರ ನಿರೂಪಿತವಾಗಿದೆ. ಹಾಗೆಂದೇ ಅದು ಐದನೆಯ ವೇದ, ಮಹಾವಿಶ್ವಕೋಶ ಎಂಬೆಲ್ಲ ಪ್ರಶಂಸೆಗೆ ಪಾತ್ರವಾಗಿದೆ. ವ್ಯಾಸರು ಈ ಕಾವ್ಯದ ವಸ್ತುವನ್ನು ಹುಟ್ಟು ಹಾಕಿರುವ ರೀತಿ, ಅದ್ಭುತವೆನ್ನಿಸುವಂತೆ ಅದನ್ನು ಬೆಳೆಸಿಕೊಂಡು ಹೋಗಿರುವ ಬಗೆ, ವಸ್ತುನಿಷ್ಠವಾಗಿ, ಕೌಶಲಪೂರ್ಣವಾಗಿ ಅದನ್ನು ಮುಗಿಸಿರುವ ವಿಧಾನ ಇವುಗಳನ್ನು ಕಂಡು ಬೆರಗಾಗದವರೇ ಇಲ್ಲ. 'ಲೋಕದಲ್ಲಿ ಏನೇನಿದೆಯೋ ಅದೆಲ್ಲ ಮಹಾಭಾರತದಲ್ಲಿದೆ, ಆದರೆ ಅದರಲ್ಲಿ ಇಲ್ಲದ್ದು ಲೋಕದಲ್ಲಿ ಇಲ್ಲ' ಎಂಬ ಪ್ರಶಂಸೆಗೆ ಅದು ಪಾತ್ರವಾಗಿದೆ. 'ಬ್ರಹ್ಮನು ಭರತ ಖಂಡದಲ್ಲಿ ಸರಸ್ವತೀ ನದಿಯನ್ನು ಸೃಷ್ಟಿಸಿ ಅದನ್ನು ಪಾವನಗೊಳಿಸಿದ. ಈ ವ್ಯಾಸಬ್ರಹ್ಮನೋ ಮಹಾಭಾರತದಲ್ಲಿ ಸರಸ್ವತಿಯನ್ನು ಹಾಯಿಸಿ ಅದನ್ನು ಪವಿತ್ರಗೊಳಿಸಿದ' ಎಂದು ಮಹಾಕವಿ ಬಾಣಭಟ್ಟನೇ ಆಶ್ಚರ್ಯೋದ್ಗಾರ ತೆಗೆದಿದ್ದಾನೆ.

ಮಹಾಭಾರತದ ಪ್ರತಿಗಳು ಹಲವು ಶತಮಾನಗಳ ಹಿಂದೆಯೇ ಭಾರತದ ಆಚೆಯ ಪ್ರದೇಶಗಳಿಗೂ ಹೋಗಿ ತಲುಪಿವೆ. ಜ್ಯಾಪನೀಸ್ ಭಾಷೆಯಲ್ಲಿ ಮಹಾಭಾರತ ಸಿಗುತ್ತದೆ. ನಮ್ಮಲ್ಲಿ ದೊರೆತಿರುವ ಮಹಾಭಾರತದ ಪ್ರಾಚೀನ ಪ್ರತಿಗಳಿಗೆ ಹೋಲಿಸಿದರೆ ಜ್ಯಾವನೀಸ್ ಭಾರತಪಾಠ ಇನ್ನೂ ಹಳೆಯದು. ಜುಯ್ನ್ ಬೋಲ್ ಎಂಬ ವಿದ್ವಾಂಸ ಜ್ಯಾವನೀಸ್ ಭಾರತದ ಎಂಟು ಹಸ್ತಪ್ರತಿಗಳ ಆಧಾರದ ಮೇಲೆ ಅದನ್ನು ಪರಿಷ್ಕರಿಸಿ ಸಂಪಾದಿಸಿದ್ದಾನೆ. ಅವನೇ ಅದರ ಕೆಲವು ಪರ್ವಗಳನ್ನು, ಪರ್ವಭಾಗಗಳನ್ನು ಡಚ್ ಭಾಷೆಗೆ ಭಾಷಾಂತರಿಸಿ ಅವುಗಳನ್ನು ರೋಮನ್ ಲಿಪಿಯಲ್ಲಿ ಪ್ರಕಟಿಸಿದ್ದಾನೆ. ಅವನು ಡಾಕ್ಟರೇಟ್ ಪಡೆದ ಪ್ರಬಂಧದ ವಸ್ತು ಕೂಡ ಮಹಾಭಾರತವೇ. ಜ್ಯಾವನೀಸ್ ಮಹಾಭಾರತದ ಪಾಠವನ್ನು ಡಾ. ಸುಕ್ತಂಕರ್ ಅವರು ತಮ್ಮ ಭಾರತ ಪಾಠ ಪರಿಷ್ಕರಣ ಕಾರ್ಯದಲ್ಲಿ ಬಳಸಿಕೊಂಡಿದ್ದಾರೆ.

ಮಹಾಭಾರತವು ಪರ್ಷಿಯನ್ ಭಾಷೆಗೆ ಅನುವಾದವಾಗಿದೆ. ಇದನ್ನು ಮಾಡಿಸಿದವನು ಅಕ್ಬರ್ ಚಕ್ರವರ್ತಿ. ಅದರ ಅನುವಾದ ಕಾರ್ಯ ಮಾಡಿದವರಲ್ಲಿ ಹಲವರು ಪ್ರಸಿದ್ಧ ಕವಿಗಳೂ ವಿದ್ವಾಂಸರೂ ಆಗಿದ್ದರು. ನಖೀಬ್‌ಖಾನ್, ಬದನಿ, ಮೌಲಾನಾ ಅಬ್ದುಲ್ ಖಾದಿರ್, ಷೇಕ್‌ಸುಲ್ತಾನ್, ಮುಲ್ಲಾಷೆರಿ, ಸ್ಥಾಣೇಶ್ವರದ ಸುಲ್ತಾನ್ ಹಾಜೀ ಮೊದಲಾದ ಆ ಕಾಲದ ಹಲವರು ಪ್ರಸಿದ್ಧ ಲೇಖಕರು, ಅನುವಾದಕರಲ್ಲಿ ಕೆಲವರೆಂದು "ಐನೇ ಅಕ್ಬರಿ" ಗ್ರಂಥದಲ್ಲಿ ಹೇಳಿದೆ. ಇದಕ್ಕೆ ಹಲವರು ಹಿಂದೂ ವಿದ್ವಾಂಸರೂ ನೆರವಾಗಿರಬೇಕು. ಈ ಅನುವಾದಕೃತಿಗೆ ಮುನ್ನುಡಿ

# ೨೨೬೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೭೦

ಬರೆದಿರುವವನು ಅಕ್ಬರನ ಆಸ್ಥಾನದಲ್ಲಿದ್ದ ಅಬುಲ್ ಫಜಲ್.

ಮೂಲದಲ್ಲಿ ಮಹಾಭಾರತಕ್ಕೆ ಇದ್ದ ಹೆಸರು 'ಜಯ' ಎಂದು ದಾಯಾದಿಗಳ ನಡುವಿನ ಯುದ್ಧದಲ್ಲಿ ಧರ್ಮಿಷ್ಠರಾದ ಪಾಂಡವರು ಜಯಿಸಿದ್ದರಿಂದ 'ಜಯ' ಎಂಬ ಹೆಸರು ಅದಕ್ಕೆ ಬಂದಿರಬೇಕು.

'ನಾರಾಯಣಂ ನಮಸ್ಕೃತ್ಯ ನರಂ ಚ ಏವ ನರೋತ್ತಮಂ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಂ ಉದೀರಯೆತ್?
ಎಂಬ ಶ್ಲೋಕ ಭಾರತದಲ್ಲಿಯೇ ದೊರೆಯುತ್ತದೆ.

ಮಹಾಭಾರತದ ಮೂಲಸ್ವರೂಪ ಈಗಿನಷ್ಟು ದೊಡ್ಡದಾಗಿರಲಿಲ್ಲ. 'ಅಷ್ಟೌಶ್ಲೋಕ ಸಹಸ್ರಾಣಿ ಅಷ್ಟಾ ಶ್ಲೋಕ ಶತಾನಿಚ' ಎಂಬ ಶ್ಲೋಕಭಾಗದಿಂದ ಇದು ತಿಳಿಯುತ್ತದೆ. ಈ ಮೂಲಕಥೆಯನ್ನು ವ್ಯಾಸರು ವೈಶಂಪಾಯನನಿಗೆ ಹೇಳಿದರು. ಅಭಿಮನ್ಯುವಿನ ಮೊಮ್ಮಗ (ಪರೀಕ್ಷಿತ ರಾಜನ ಮಗ) ಜನಮೇಜಯ ಮಹಾರಾಜ ಮಾಡಿದ ಸರ್ಪಯಾಗದ ಹೊತ್ತಿನಲ್ಲಿ ಅವರು ಬಂದಿದ್ದಾಗ ಆ ರಾಜನಿಗೆ ಅವನ ಮುತ್ತಜ್ಜಂದಿರ ಈ ಕಥೆಯನ್ನು ಹೇಳಿದರು. ಆ ಸಂದರ್ಭದಲ್ಲಿ ಇದನ್ನು ಪೂರ್ಣವಾಗಿ ಕೇಳಿದ್ದ (ಲೋಹರ್ಷಣನ ಮಗನಾದ) ಉಗ್ರಶ್ರವ ಎಂಬ ಸೂತ ಪುರಾಣಿಕನು ಶೌನಕನೆಂಬ ಕುಲಪತಿಯು ನಡೆಸುತ್ತಿದ್ದ ಯಜ್ಞಕ್ಕೆ ಬಂದಿದ್ದ. ಅಲ್ಲಿ ಸೇರಿದ್ದ ಋಷಿಗಳಿಗೆ ಅವನು ಈ ಕಥೆಯನ್ನು ಹೇಳಿದ. 'ಜಯ' ಕಾವ್ಯವು ಈ ಹೊತ್ತಿಗೆ ಕ್ರಮ ಕ್ರಮೇಣ ಬೆಳೆದು 'ಭಾರತ' ಕಾವ್ಯವಾಗತೊಡಗಿತ್ತು. ಆ ಹೊತ್ತಿಗೆ ಅದು ೨೪,೦೦೦ ಶ್ಲೋಕಗಳ ಗ್ರಂಥವಾಗಿತ್ತು. ಮುಂದೆ ಇನ್ನೂ ಕೆಲವು ಕಥೆ, ಉಪಕಥೆ, ಉಪಖ್ಯಾನಗಳೂ ಇದರ ಜೊತೆ ಸೇರಿ ಲಕ್ಷ ಶ್ಲೋಕಗಳಿಗೂ ಮೀರಿ 'ಮಹಾಭಾರತ' ಎಂಬ ಹೆಸರು ಪಡೆಯಿತು.

ಹೀಗೆ ಮೂಲಮಹಾಭಾರತದ ಪಾಠಕ್ಕೆ ಹೊರಗಿನಿಂದ ಎಷ್ಟೋ ಭಾಗಗಳು ಪ್ರಕ್ಷೇಪವಾಗಿ ಬಂದು ಸೇರಿವೆ. ಇದ್ದದ್ದೇ ಅಲ್ಲಲ್ಲಿ ಬದಲಾಗಿದೆ. ಭಾರತದ ಕೆಲವು ಹಸ್ತಪ್ರತಿಯಲ್ಲಿ ಸಿಗುವ ಕಥೆ ಮತ್ತು ಕೆಲವು ಪ್ರತಿಗಳಲ್ಲಿ ಸಿಗದಿರುವದೂ ಉಂಟು. ಲೋಪ, ಆಗಮ, ಅದೇಶಗಳು ಕೇವಲ ವ್ಯಾಕರಣದ ಸಂಧಿಕ್ರಿಯೆಯಷ್ಟೇ ಅಲ್ಲದೆ ಜೀವನಕ್ಕೂ ಅನ್ವಯಿಸುತ್ತದೆ. ಹಾಗಿರುತ್ತ ಮಹಾಭಾರತದಂಥ ಆಕರ್ಷಕ ಬೃಹತ್ ಗ್ರಂಥದಲ್ಲಿ ಇದು ನಡೆದಿರುವುದು ಅಚ್ಚರಿಯ ಸಂಗತಿಯೇನಲ್ಲ.

ಮಹಾಭಾರತದ ಆಳವಾದ ಅಧ್ಯಯನ ನಡೆಸಿದ ಪಾಶ್ಚಾತ್ಯ ವಿದ್ವಾಂಸರಲ್ಲಿ ಪ್ರಮುಖರಾದ ವಿಂಟರ್‌ನಿಟ್ಸ್ ಅವರ ಅಭಿಪ್ರಾಯದಂತೆ ಭಾರತಯುದ್ಧ ಕ್ರಿ.ಪೂ. ಹತ್ತನೆಯ ಶತಮಾನದ ಹಿಂದೆ ಜರುಗಿರಬೇಕು. ಮಹಾಭಾರತದ ಮೂಲ ರೂಪವಾದ 'ಜಯ' ಕಾವ್ಯವು ಕ್ರಿಪೂ. ಐದನೆಯ ಶತಮಾನದ ಹೊತ್ತಿಗೆ ವ್ಯಾಸರಿಂದ ರಚಿತವಾಗಿರಬೇಕು. ವೈಶಂಪಾಯನ, ಉಗ್ರಶ್ರವರು ಈ ಕಥೆಯನ್ನು ಬೇರೆಯವರಿಗೆ ಹೇಳುವ ಹೊತ್ತಿನಲ್ಲೇ ಅದು ಸ್ವಲ್ಪ ದೊಡ್ಡದಾಗಿರಬೇಕು. ಅಲ್ಲಿಂದ ಸುಮಾರು ಎಂಟೊಂಬತ್ತು ಶತಮಾನಗಳ ಅವಧಿಯಲ್ಲಿ ಅದಕ್ಕೆ ಪ್ರಕ್ಷೇಪ ಭಾಗಗಳು ಸೇರುತ್ತ ಹೋಗಿ ಅದು ಈಗಿರುವ ಪ್ರಮಾಣಕ್ಕೆ ಬೆಳೆದಿರಬೇಕು. (ಭಾರತ ಯುದ್ಧದ ಕಾಲವನ್ನು ತಕ್ಕ ಕಾರಣಗಳನ್ನು ನೀಡಿ ಇನ್ನೂ ಹಿಂದಕ್ಕೆ ತೆಗೆದುಕೊಂಡು ಹೋಗಿರುವ ವಿದ್ವಾಂಸರೂ ಇದ್ದಾರೆ.)

ಒಂದು ಮೌಲಿಕವಾದ ಬೃಹತ್‌ಕಾವ್ಯ ಸೃಷ್ಟಿಯಾದ ಮೇಲೆ ಆ ಕೃತಿಗೆ ವ್ಯಾಖ್ಯಾನಗಳೂ ರಚನೆಯಾಗುವುದು ಸಹಜ. ಮಹಾಭಾರತಕ್ಕೆ ಕ್ರಿಸ್ತಪೂರ್ವದಲ್ಲಿಯೇ ಅನೇಕ ವ್ಯಾಖ್ಯಾನಗಳು ರಚನೆಯಾಗಿರಬೇಕು. ಆದರೆ ಅಂಥವು ಯಾವುವೂ ನಮಗೆ ಲಭ್ಯವಾಗಿಲ್ಲ. ಯಾವುದೇ ಗ್ರಂಥದ ಹದಿನೈದು ಶತಮಾನಗಳಿಗೂ ಹಿಂದಿನ ಪ್ರತಿಗಳು ದೊರೆಯುವುದು ತೀರ ದುಸ್ಸಾಧ್ಯ. ನಮಗೆ ದೊರೆಯುವ ಭಾರತದ ವ್ಯಾಖ್ಯಾನಗಳು ಏನಿದ್ದರೂ ಕ್ರಿ. ಶ. ಎಂಟನೆಯ ಶತಮಾನದಿಂದ ಈಚೀನವೇ. ಆ ವ್ಯಾಖ್ಯಾನಗಳ ಮೂಲಕ ನಮಗೆ ಆ ಕಾಲದ ಮಹಾಭಾರತ ಪ್ರತಿಗಳಲ್ಲಿರುವ ಪ್ರಾಚಿನ ಪಾಠಗಳೂ ಲಭ್ಯವಾಗುತ್ತವೆ. ಆ ಪ್ರಕಾರ ನಮಗೆ ದೊರೆಯುವ ಪ್ರಾಚೀನ ಪಾಠಗಳೆಂದರೆ ಕ್ರಿಶ. ಎಂಟನೆಯ ಶತಮಾನದ ಕಾಲದ್ದು ಮಾತ್ರ.

ನಮಗೆ ತಿಳಿದಿರುವ ಪ್ರಾಚೀನ ವ್ಯಾಖ್ಯಾನಕಾರರಲ್ಲಿ ದೇವಬೋಧ, ವಿಮಲಬೋಧ, ಶಾಂಡಿಲ್ಯ, ಸರ್ವಜ್ಞನಾರಾಯಣ, ಅರ್ಜುನ ಮಿಶ್ರ, ನೀಲಕಂಠ ಚತುರ್ಧರ ಎಂಬ ಏಳು ಜನ ಬಹಳ ಮುಖ್ಯರಾದವರು. ಇವರಲ್ಲೆಲ್ಲ ಜ್ಞಾನದೀಪಿಕೆ ಎಂಬ ವ್ಯಾಖ್ಯಾನ ಬರೆದ ದೇವಬೋಧನೇ ಹೆಚ್ಚು ಪ್ರಾಚೀನನಾದವನು. ಅವನ ಕಾಲ ಕ್ರಿಶ ೧೧೦೦ ರಿಂದ ೧೩೦೦ ರ ಒಳಗೆ ಎಂದು ಭಾವಿಸಲಾಗಿದೆ. ಅವನು ತನಗಿಂತ ಹಿಂದಿನ ವ್ಯಾಖ್ಯಾನಕಾರರ ಕೆಲವು ಪಾಠಗಳನ್ನು ನೀಡುತ್ತಾನೆ.

ಬಗೆ ಬಗೆಯ ಕಾರಣಗಳಿಂದಾಗಿ ಅನೇಕ ಪ್ರಕ್ಷೇಪ ಪಾಠಗಳು (ಎಂದರೆ ಮೊದಲು ಮಹಾಭಾರತದಲ್ಲಿ ಇಲ್ಲದಿದ್ದ ಪಾಠಭಾಗಗಳು) ಕ್ರಮೇಣ ಮಹಾಭಾರತದಲ್ಲಿ ಸೇರಿಕೊಳ್ಳತೊಡಗಿದವು – ಬ್ರಹ್ಮನು ವ್ಯಾಸರಿಗೆ ಕಾಣಿಸಿಕೊಂಡು ಅವರು ಹೇಳುವ ಭಾರತ ಕಥೆಯನ್ನು ಬರೆದು ಕೊಳ್ಳಲು ಗಣಪತಿಯನ್ನು ಗೊತ್ತುಮಾಡಿದ ಕಥೆ, ದ್ರೌಪದಿಯ ಬಹುಪತಿತ್ವವನ್ನು ಸಮರ್ಥಿಸಲು ವ್ಯಾಸರು ದ್ರುಪದನಿಗೆ ನಿರೂಪಿಸುವ ನಾಳಾಯಣಿ ಮತ್ತು ಭೌಮಾಶ್ವಿ ಕಥಾಪ್ರಸಂಗಗಳು, ದೂರ್ವಾಸರು ಹತ್ತು ಸಾವಿರ ಶಿಷ್ಯರ ಜೊತೆ ಧರ್ಮರಾಯನಲ್ಲಿಗೆ ಹೋಗಿ ಆತಿಥ್ಯ ಕೋರಿದ ಪ್ರಸಂಗ, ಅರ್ಜುನ ಊರ್ವಶಿಯನ್ನು ಕೂಡಲು ಒಪ್ಪದೆ ಹೋದಾಗ ಊರ್ವಶಿ ಅವನಿಗೆ ನಪುಂಸಕನಾಗುವಂತೆ ಶಾಪಕೊಟ್ಟ ಕಥೆ – ಇಂಥವೆಲ್ಲ ಇಡಿ ಇಡಿಯಾಗಿ

ಹೊರಗಿನವರು ಭಾರತದೊಳಗೆ ಸೇರಿಸಿರುವ ಭಾಗಗಳು. ಇವು ಯಾವುವೂ ಹೆಚ್ಚು ಪ್ರಾಚೀನವಾದ ಮಹಾಭಾರತದ ಹಸ್ತಪ್ರತಿಗಳಲ್ಲಿ ಇಲ್ಲವೇ ಇಲ್ಲ. ದ್ಯೂತದಲ್ಲಿ ಪಾಂಡವರು ಸೋತ ನಂತರ ದುರ್ಯೋಧನನ ಆಜ್ಞೆಯಂತೆ ದುಶ್ಯಾಸನನು ರಜಸ್ವಲೆಯಾಗಿದ್ದ ದ್ರೌಪದಿಯನ್ನು ಸಭೆಗೆ ಎಳೆದು ತರುವುದು, ಅವಳ ವಸ್ತ್ರವನ್ನು ಸೆಳೆಯುವುದು ಮೂಲಪಾಠದಲ್ಲಿ ಇದೆಯಾದರೂ ಅವಳು ವಿವಸಿತಳಾಗುವಾಗ ಅವಳ ಸೀರೆ ಕೃಷ್ಣ ಮಹಿಮೆಯಿಂದ ಅಕ್ಷಯವಾಗುವುದು ಇಲ್ಲ. ಇದು ಶತಮಾನಗಳ ನಂತರ ಭಾರತದಲ್ಲಿ ಸೇರಿಕೊಂಡದ್ದು, ಇಂಥ ಪ್ರಕ್ಷೇಪಗಳು ಹತ್ತು, ಇಪ್ಪತ್ತು, ಮೂವತ್ತು, ಕೆಲವು ಸಲ ಇನ್ನೂ ಹೆಚ್ಚು ಶ್ಲೋಕಗಳಿಂದ ಕೂಡಿವೆ. ಆದಿಪರ್ವವೊಂದರಲ್ಲಿಯೇ ೧೨೧ ದೀರ್ಘಪ್ರಕರಣಗಳು, ೧೬೩೪ ಸಣ್ಣ ಪ್ರಕರಣಗಳು ಇದ್ದರೆ ವಿರಾಟಪರ್ವದಲ್ಲಿ ೬೨ ದೀರ್ಘ ಪ್ರಕರಣಗಳು ೧೧೭೮ ಸಣ್ಣವು ಇದೆ. ಹೊರಗಿನಿಂದ ಬಂದು ಸೇರಿದ ಭಾಗ ಯಾವ ಪ್ರಮಾಣದಲ್ಲಿ ಇವೆ ಎನ್ನುವುದನ್ನು ಇದರಿಂದ ತಿಳಿಯಬಹುದು. ಹಳೆಯ ಹಸ್ತಪ್ರತಿಗಳಲ್ಲಿ ಇವು ಇಲ್ಲ ಎನ್ನುವುದೇ ಇವು, ಮೂಲಪಾಠಕ್ಕೆ ನಂತರ ಬಂದು ಸೇರಿಕೊಂಡವು ಎನ್ನುವುದಕ್ಕೆ ಸಾಕ್ಷಿ.

ಮೇಲೆ ಪ್ರಸ್ತಾಪಿಸಿದವೆಲ್ಲ ಸಾಮಾನ್ಯ ಪ್ರಮಾಣದ ಪ್ರಕ್ಷೇಪಗಳು ಇವುಗಳಿಗಿಂತ ಬಹಳ ದೊಡ್ಡದಾದ ಪ್ರಕ್ಷೇಪಗಳು ಭಾರತದೊಳಕ್ಕೆ ನುಗ್ಗಿ ಉಳಿದು ಬಂದಿವೆ. ಅವುಗಳೆಲ್ಲ ಉಪಾಖ್ಯಾನಗಳು, ಎಂದರೆ ಸ್ವತಂತ್ರ ಕೃತಿಗಳಾಗಿರುವಂಥವು. ನಳೋಪಾಖ್ಯಾನ, ಸಾವಿತ್ರಿ ಉಪಖ್ಯಾನ, ಯಯಾತಿ ಉಪಾಖ್ಯಾನ, ರಾಮೋಪಾಖ್ಯಾನ, ಶಕುಂತಲೋಪಾಖ್ಯಾನ – ಇವು ಇಡಿ ಇಡಿಯಾಗಿ ಮೂಲ ಭಾರತ ಕಥೆಯ ಜೊತೆ ಗಂಟುಹಾಕಿಕೊಂಡಿವೆ. ಇವು ಎಷ್ಟು ಗಾತ್ರದವು ಎನ್ನಲು ನಳೋಪಾಖ್ಯಾನವನ್ನು ನಿದರ್ಶನವಾಗಿ ನೋಡಬಹುದು. ಇದು ಇಪ್ಪತ್ತೇಳು ಅಧ್ಯಾಯಗಳಿರುವ ೧೧೧೦ ಶ್ಲೋಕಗಳ ಒಂದು ಸ್ವತಂತ್ರ್ಯಕಾವ್ಯ. ಈ ಉಪಾಖ್ಯಾನದೊಳಗೇ ಇನ್ನೊಂದು ಪ್ರಕ್ಷೇಪವಿದೆ. ಅದು ರಾಮಾಯಣದಿಂದ ಕೊಂಚ ರೂಪಮರೆಸಿಕೊಂಡು ಸೇರಿರುವ ಹತ್ತೊಂಬತ್ತು ಶ್ಲೋಕಗಳ ಒಂದು ಭಾಗ. ಇವುಗಳೆಲ್ಲ ಭಾರತದೊಳಗೆ ಸೇರಿ ಅದರ ಮೂಲಸ್ವರೂಪ ತಿಳಿಯದಂತೆ ಆಗಿರಬಹುದು. ಅದೇನೇ ಆದರೂ ಈ ಶ್ರೇಷ್ಠ ಸುಂದರ ಕೃತಿಗಳು ನಮ್ಮತನಕ ಉಳಿದು ಬಂದಿರುವುದಕ್ಕೆ ಅವು ಮಹಾಭಾರತದ ಗರ್ಭದಲ್ಲಿ ಸೇರಿಕೊಂಡದ್ದೇ ಕಾರಣ. ತಮ್ಮ ಕರ್ತೃತ್ವವನ್ನು ಪ್ರತ್ಯೇಕವಾಗಿ ಘೋಷಿಸಿಕೊಳ್ಳದೆ ಅವುಗಳನ್ನು ಹೀಗೆ ಭಾರತ ಕಥೆಗೆ ದತ್ತು ನೀಡಿದ್ದು ಒಂದು ಅಸಾಧಾರಣ ಸಂಗತಿಯೇ ಸರಿ. ಇದಕ್ಕಾಗಿ ನಾವು ಅವುಗಳ ಕರ್ತೃಗಳಿಗೂ ಅವುಗಳನ್ನು ಭಾರತದೊಳಕ್ಕೆ ಸೇರಿಸಿದ ಪ್ರಾಚೀನ ಪುರಾಣಿಕರಿಗೂ ಕೃತಜ್ಞರಾಗಿರಬೇಕು.

ಇಷ್ಟು ಜಟಿಲ ಸ್ವರೂಪದಿಂದ ಕೂಡಿದ (ಮೂಲ ಕಥೆಯ ಬಹುಶಃ ಎಂಟು ಹತ್ತರಷ್ಟು ಪಾಲು) ದೊಡ್ಡ ಪ್ರಕ್ಷೇಪಪಾಠಭಾಗಗಳಿರುವ ಮಹಾಭಾರತದ ವಿಮರ್ಶಾತ್ಮಕ ಪಾಠಪರಿಷ್ಕರಣ ಕಾರ್ಯ ಆಗಲೇ ಬೇಕಾಗಿದ್ದ ಒಂದು ಭೀಮಸಾಹಸ ಈ ಕಾರ್ಯಕ್ಕೆ ಮಹಾಭಾರತದ ಸಾವಿರಾರು ಲಭ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಕೂಲಂಕಷವಾಗಿ ಪರಿಶೀಲಿಸಿ, ತೌಲನಿಕ-ಪಾಠ ವಿವೇಚನೆ ಮಾಡುವುದು ಅಗತ್ಯ. ಹಲವರು ಶ್ರೇಷ್ಠ ವಿದ್ಯಾಂಸರು ಒಟ್ಟುಗೂಡಿ ಹಲವು ವರ್ಷ ಶ್ರಮಿಸಿ ಮಾಡಬೇಕಾಗಿದ್ದ ಈ ಕೆಲಸ ಕಳೆದ ಶತಮಾನದಲ್ಲಿ ಪೂನಾದಲ್ಲಿ ನಡೆಯಿತು. ಹದಿನೆಂಟು ಜನ ತಜ್ಞರ ಸಮಿತಿ ಸುಮಾರು ಇಪ್ಪತ್ತೈದು ವರ್ಷ ಕಾಲ ಶ್ರಮಿಸಿ ಈ ಕೆಲಸವನ್ನು ಪೂರ್ಣಗೊಳಿಸಿತು. ಈ ಸಮಿತಿಯಲ್ಲಿ ಕಾವ್ಯ ಮತ್ತು ಭಾಷಾಶಾಸ್ತ್ರಗಳಿಗೆ ಸಂಬಂಧಿಸಿದ ತಜ್ಞರಿದ್ದುದರ ಜೊತೆಗೆ ಯಾಕೊಬಿ, ಎ.ಬಿ. ಕೀತ್, ಗಂಗಾನಾಥ ಝಾ ಮೊದಲಾದ ಮೇಧಾವಿಗಳಿದ್ದ ಸಲಹಾಮಂಡಲಿಯೊಂದು ಈ ಸಮಿತಿಗೆ ನೆರವು ನೀಡಿತು.

ವ್ಯಾಸರು ರಚಿಸಿದ ಭಾರತದ ಮೂಲಕಥಾನಕ ಸರಿಸುಮಾರು ೮೮೦೦ ಶ್ಲೋಕಗಳಷ್ಟು ಇದ್ದು ಮುಂದೆ ಅದಕ್ಕೆ ಹೊರಗಿನಿಂದ ಅನೇಕ ವಿಷಯಗಳು ಬಂದು ಸೇರಿ ಅದು ಲಕ್ಷ ಶ್ಲೋಕಕ್ಕೂ ಮೀರಿ ಬೆಳೆದು ಇಂದಿನ ಮಹಾಭಾರತವಾಗಿದೆ ಎಂದು ಹಿಂದೆ ಹೇಳಿತು. ಈ ಪ್ರಕ್ಷೇಪಗಳ ರೀತಿ ಎಂಥದು, ಇವು ಆಗಲು ಕಾರಣಗಳೇನು ಎನ್ನುವುದನ್ನು ತಿಳಿಯಲು ಒಂದು ಕುತೂಹಲಕರ ಪ್ರಕ್ಷೇಪವನ್ನು ಇಲ್ಲಿ ಪರಿಶೀಲಿಸಬಹುದು. ಅರ್ಜುನ ದ್ವಾರಕೆಗೆ ಸನ್ಯಾಸಿವೇಷದಲ್ಲಿ ಹೋಗಿ, ಬಲರಾಮನಿಂದ ಸತ್ಕೃತನಾಗಿ, ಅಲ್ಲಿ ಕೆಲಕಾಲ ಇದ್ದು ತನ್ನ ಉಪಚಾರ ಸೇವೆಗಳಿಗೆ ಗೊತ್ತು ಮಾಡಿದ್ದ ಅವನ ತಂಗಿ ಸುಭದ್ರೆಯನ್ನು ಗಾಂಧರ್ವವಿಧಿಯಲ್ಲಿ ವರಿಸಿದ್ದು ಮತ್ತು ಅವಳನ್ನು ದ್ವಾರಕೆಯಿಂದ ಹಾರಿಸಿ ತಂದದ್ದು ಎಲ್ಲರಿಗೂ ಗೊತ್ತಿರುವ ಕಥಾಭಾಗ. ಇಷ್ಟು ಕಥೆ ಮಹಾಭಾರತದ ಎಲ್ಲ ಹಸ್ತಪ್ರತಿಗಳಲ್ಲಿ ದೊರೆಯುತ್ತದೆ. ಗಾಂಧರ್ವ ವಿವಾಹ ಆ ಕಾಲದಲ್ಲಿ ಶಾಸ್ತ್ರೋಕ್ತವಾದ ವಿವಾಹದ ನೆಲೆಯಲ್ಲಿಯೇ ಮಾನ್ಯವಾಗಿತ್ತು. ಆದರೆ ಮುಂದೆ ಹಲವು ಶತಮಾನಗಳ ನಂತರ ರಚಿತವಾದ ಹಸ್ತಪ್ರತಿಗಳಲ್ಲಿ ಆ ಹಸ್ತಪ್ರತಿಗೆ ಇನ್ನೂ ೨೮೧ ಶ್ಲೋಕಗಳಿಂದ ಕೂಡಿದ ಅಧಿಕಪಾಠ ಸೇರಿಕೊಂಡಿತು. ಗಾಂಧರ್ವವಿಧಿಯಲ್ಲಿ ಪರಸ್ಪರ ಒಪ್ಪಿ ಒಂದಾಗಿದ್ದ ಅರ್ಜುನ ಸುಭದ್ರೆಯರಿಗೆ ಧರ್ಮರಾಜ ಮತ್ತೆ ಪುರೋಹಿತರ ಮೂಲಕ ಶಾಸ್ತ್ರೋಕ್ತವಾಗಿ ವಿವಾಹ ಮಾಡಿಸಿದ್ದನು ಎಂದು ಈ ಅಧಿಕಪಾಠದಲ್ಲಿ ಹೇಳಲಾಗಿದೆ. ಆ ವಿವಾಹಕ್ಕೆ ನಾನಾ ಭಾಗಗಳಿಂದ ಸಾವಿರಾರು ಜನ ಮುನಿಗಳು ಬಂದದ್ದು ಮತ್ತು ಆ ವಿವಾಹ ಅರಣ್ಯದಲ್ಲೂ ಬಹಳ ವೈಭವದಿಂದ ನಡೆದದ್ದು ಅಲ್ಲಿ ನಿರೂಪಿತವಾಗಿದೆ.

ಈ ಪ್ರಕ್ಷೇಪಪಾಠ ಸೃಷ್ಟಿಯಾಗಲು ಕಾರಣ ಇದೆ. ಆ ಕಾರಣ ಬಹಳ ಅರ್ಥವತ್ತಾದ ಒಂದು ಸಾಮಾಜಿಕ ಕಾರಣ. ಗಂಧರ್ವ ವಿವಾಹವೆಂದರೆ ಗಂಡು ಹೆಣ್ಣು ಪರಸ್ಪರ ಒಲಿದು

ಜೊತೆಗೂಡಿ ಬಾಳಲು ಒಪ್ಪಿ ಒಂದಾಗುವುದು. ಇದನ್ನು ವಿವಾಹವೆನ್ನುವುದಕ್ಕಿಂತ ಕೂಡಿಕೆ ಎಂದು ಕರೆಯಬಹುದಷ್ಟೆ. ಇದಕ್ಕೆ ಮಂತ್ರ, ಹೋಮ, ಬಂಧು, ಪುರೋಹಿತರ ರಕ್ಷೆ, ಹಾರೈಕೆ ಇಲ್ಲ. ಎಂದರೆ ಇದು ಶಾಸ್ತ್ರವಿಧಿ ಸಹಿತ ಅಗ್ನಿಸಾಕ್ಷಿಯಾಗಿ ಸಮಾಜದ ಎದುರು ಆದ ವಿವಾಹವಲ್ಲ. ಮಹಾಭಾರತದ ಕಾಲದಲ್ಲಿ ಇಂಥ ಗಾಂಧರ್ವವಿವಾಹವನ್ನೂ ಶಾಸ್ತ್ರೋಕ್ತ ವಿವಾಹದಂತೆಯೇ ಸ್ವೀಕರಿಸಲಾಗುತ್ತಿತ್ತು. ಮುಂದೆ ಹಲವು ಶತಮಾನಗಳ ನಂತರ ಅದಕ್ಕೆ ಈ ಮನ್ನಣೆ ತಪ್ಪಿತು; ಅದು ಶಾಸ್ತ್ರೋಕ್ತ ವಿವಾಹದಂತೆ ಕಾನೂನು ಬದ್ಧವಾದ ಮದುವೆಯಲ್ಲ ಎಂದಾಯಿತು. ಹೀಗೆ ಬದಲಾದ ಹೊಸ ಕಾಲದ ರೀತಿ ನೀತಿ ನಡವಳಿಕೆಗಳಿಗೆ ಮಹಾಭಾರತದ ಘಟನೆಗಳನ್ನು ಹೊಂದಿಸಿ ತಿದ್ದಿ ಹೇಳಬೇಕು. ಆಗ ತಮ್ಮ ವಿವಾಹ ರೀತಿಯೊಂದೇ ಸರಿ, ಮಹಾಭಾರತದಲ್ಲಿ ಸಹ ಹಾಗೆಯೇ ಇದೆ ಎಂದು ತೋರಿಸಿದಂತಾಯಿತು. ಇಂಥ ಪ್ರಕ್ಷೇಪಕ್ಕೆ ಇದೇ ಮೊದಲ ಕಾರಣ

ಇನ್ನೊಂದು ಕಾರಣವೂ ಇದೆ. ಅದು ಮೊದಲಿದಕ್ಕಿಂತ ಹೆಚ್ಚು ಬಲವತ್ತರನಾದದ್ದು ಕಾನೂನುಬದ್ಧವಲ್ಲದ ರೀತಿಯಲ್ಲಿ ಕೂಡಿಕೊಂಡವರ ಮಕ್ಕಳಿಗೆ ಪಿತ್ರಾರ್ಜಿತವಾದ ಆಸ್ತಿಯ ಮೇಲೆ ಹಕ್ಕು ಬರುವುದಿಲ್ಲ. ಮಹಾಭಾರತದಲ್ಲಿ ಮೊದಲು ಇದ್ದ (ಗಾಂಧರ್ವವಿಧಿಯ) ಕಥೆಯ ಪ್ರಕಾರ ಇದು ಸಮಸ್ಯೆಗೆ ಕಾರಣವಾಗುತ್ತದೆ. ಅರ್ಜುನ ಸುಭದ್ರೆಯರ ಏಕೈಕ ಪುತ್ರ ಅಭಿಮನ್ಯು. ಅವನ ಒಬ್ಬನೇ ಮಗ ಪರೀಕ್ಷಿತ ರಾಜ. ಭಾರತ ಯುದ್ಧ ಮುಗಿದು ಕೌರವ ಪಾಂಡವರೆಲ್ಲ ತೀರಿಕೊಂಡ ನಂತರ ಅವನೇ ಕೌರವರಾಜ್ಯಕ್ಕೆ ಅಧಿಪತಿಯಾದ. ತನ್ನ ಪಿತಾಮಹರಿಗೆಲ್ಲ ತರ್ಪಣ, ಪಿಂಡಪ್ರದಾನ ಮಾಡಿದ. ಎಂದರೆ ಗಾಂಧರ್ವ ವಿವಾಹದಿಂದ ಜನಿಸಿದ ವ್ಯಕ್ತಿಗೆ ಕಾನೂನುಬದ್ಧವಾದ ಎಲ್ಲಾ ಅಧಿಕಾರವೂ ಇದೆಯೆಂದಾಯಿತು.

ಮಹಾಭಾರತ ಕಾವ್ಯಮಾತ್ರವಲ್ಲ, ಬಹಳ ಕಾಲದವರೆಗೆ ಕಾನೂನು ಸಂಬಂಧವಾದ ನಿಯಮಗಳಿಗೆ ಒಂದು ಅಧಿಕೃತ ಗ್ರಂಥವೂ ಆಗಿತ್ತು; ಹಿಂದೂ ಧರ್ಮವಿಧಿಗಳ ಆಧಾರ ಗ್ರಂಥವಾಗಿ ಪರಿಗಣಿತವಾಗಿತ್ತು. ಅದರಲ್ಲಿದ್ದ ಗಾಂಧರ್ವವಿಧಿಯನ್ನು ಮಾನ್ಯ ಮಾಡಿದರೆ ಈಗಿನ ಕಾಲದ 'ಕೂಡಿಕೆ/ಯಿಂದಾದ ಮಕ್ಕಳಿಗೂ (ಎಂದರೆ ಬಂಗಾರದವಳ ಅಥವಾ ಇಟ್ಟುಕೊಂಡವಳ ಮಕ್ಕಳಿಗೂ) ಆಸ್ತಿಯಲ್ಲಿ ಪಾಲುಕೊಡಬಹುದು ಎಂದಾಗುತ್ತದೆ. ಇದರಿಂದ ಆಸ್ತಿ ವ್ಯಾಜ್ಯ ಶುರುವಾಗುತ್ತದೆ. ಮನೆಯೇ ಒಡೆದು ಹೋಗುವ ಅನಾಹುತಕ್ಕೆ ಕಾರಣವಾಗುತ್ತದೆ. ಹೀಗಾಗದಿರಬೇಕಾದರೆ ಇರುವ ದಾರಿ ಒಂದೇ. ಮಹಾಭಾರತದ ಆ ಪ್ರಸಂಗವನ್ನು ತಮ್ಮ ಕಾಲದ ನಿಯಮಗಳಿಗೆ ಅನುಸಾರವಾಗಿ ಬದಲಿಸಿಬಿಡುವುದು, ಗಾಂಧರ್ವವಿವಾಹ ತನಗೆ ತಾನೇ ಶಾಸ್ತ್ರೋಕ್ತ ವಿವಾಹವಲ್ಲ ಎಂದು ತೋರಿಸುವುದು. ಸುಭದ್ರಾಹರಣದ ಪ್ರಸಂಗದ ಕೊನೆಗೆ ಸೇರಿಕೊಂಡ ಶಾಸ್ತ್ರೋಕ್ತ ವಿವಾಹದ ಅಧಿಕ ಪಾಠ ಸೃಷ್ಟಿಯಾಗಲು ಇದೇ ಮುಖ್ಯ ಕಾರಣ. ಪ್ರಕ್ಷೇಪಗಳಾಗಲು ಎಂಥೆಂಥ ಕಾರಣಗಳಿರುತ್ತವೆ ಎಂದು ತೋರಿಸಲು ಈ ಪ್ರಸಂಗವನ್ನು ವಿವರಿಸಲಾಯಿತು.

ಹೀಗೆ ಜಟಿಲ ಪಾಠಗಳಿಂದ ಇಡಿಕಿರಿದ ಮಹಾಭಾರತದ ಪರಿಷ್ಕರಣ ಕಾರ್ಯ ಅತ್ಯಗತ್ಯವಾಗಿತ್ತು. ಇಂಥ ಕೆಲಸವೊಂದು ಅಗತ್ಯವಾಗಿದೆಯೆಂದು ಮೊದಲು ಪ್ರಸ್ತಾಪ ಮಾಡಿದವರು ಮಹಾಭಾರತದ ಸಂಬಂಧವಾದ ಅಧ್ಯಯನದಲ್ಲಿ ಪ್ರಸಿದ್ಧ ವಿದ್ವಾಂಸರೆನಿಸಿದ್ದ ಪ್ರೊ. ಎಂ. ವಿಂಟರ್‌ನಿಟ್ಸ್. ೧೮೯೭ರಲ್ಲಿ ರೋಮ್ ನಗರದಲ್ಲಿ ಜರುಗಿದ ಹನ್ನೊಂದನೆಯ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಅವರು ಈ ವಿಷಯವನ್ನು ವಿದ್ವಾಂಸರ ಮುಂದೆ ಇಟ್ಟರು. ಮುಂದೆ ಇದು ಹಲವು ಬಾರಿ ಪ್ರಸ್ತಾಪಿತವಾಗಿ ೧೯೦೪ರಲ್ಲಿ ಲಂಡನ್‌ನಲ್ಲಿ ಅಕಾಡೆಮಿಗಳ ಸಮ್ಮೇಳನ ನಡೆದಾಗ ಕಾರ್ಯರೂಪಕ್ಕೆ ಬಂತು. ಬರ್ಲಿನ್ ಮತ್ತು ವಿಯನ್ನಾ ಅಕಾಡೆಮಿಗಳು ಇದಕ್ಕೆ ಹಣ ಸಹಾಯ ನೀಡಿದದು. ಕೆಲಸ ಆರಂಭವಾಗಿ ಕುಂಟುನಡಿಗೆಯಲ್ಲಿ ಸಾಗಿತು. ಆದರೆ ಮೊದಲ ಮಹಾಯುದ್ಧದ ಕಾರಣದಿಂದಾಗಿ ಎಲ್ಲ ವಿದ್ವತ್ ಕಾರ್ಯಗಳೂ ಸ್ಥಗಿತವಾಗಿ ಹೋದವು. ಮುಂದೆ ೧೯೧೮ರಲ್ಲಿ ಪೂನಾದಲ್ಲಿರುವ ಭಂಡಾರ್‌ಕರ್ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಈ ಕೆಲಸವನ್ನು ಕೈಗೆತ್ತಿಕೊಂಡಿತು.

ಹತ್ತಾರು ವಿದ್ವಾಂಸರು ೨೫ ವರ್ಷಗಳ ಕಾಲ ನಡೆಸಿದ ನಿರಂತರ ಪರಿಶ್ರಮದ ಫಲವಾಗಿ ಈ ಕೆಲಸ ತೃಪ್ತಿದಾಯಕ ರೀತಿಯಲ್ಲಿ ಕೊನೆಗೊಂಡಿತು ಈ ಮಹಾಪಾಠಪರಿಷ್ಕರಣ ಕಾರ್ಯದಲ್ಲಿ ಭಂಡಾರ್‌ಕರ್, ಸುಕ್ತಂಕರ್, ಬೇಲ್ವಾಲ್‌ಕರ್, ವೈದ್ಯ, ಪುಲಸ್ಕರ್, ತಗೀಕರ್, ಮೊದಲಾದ ಭಾರತೀಯ ವಿದ್ವಾಂಸರೇ ಅಲ್ಲದೆ ವಿಂಟರ್‌ನಿಟ್ಸ್, ಹಾಪ್‌ಕಿನ್ಸ್, ಫ್ರಾನ್ಸ್ ಬಾವ, ವೆಬರ್, ಎಡ್ವಿಜ್, ಸೊರೆನ್‌ಸೆನ್, ಬ್ಯೂಲರ್, ಲ್ಯಾಸನ್, ದಾಲ್‌ಮನ್, ಯಾಕೊಬಿ, ಎಜರ್‌ಟನ್ – ಹೀಗೆ ಅನೇಕ ಜರ್ಮನ್, ಅಮೆರಿಕನ್, ಇಂಗ್ಲಿಷ್, ಫ್ರೆಂಚ್ ವಿದ್ವಾಂಸರು ವಿಶೇಷವಾಗಿ ದುಡಿದರು.

ಪಾಠ ಪರಿಷ್ಕರಣದ ಕಾರ್ಯ ೧೯೧೯ನೆಯ ಇಸವಿ ಏಪ್ರಿಲ್‌ನಲ್ಲಿ ಆರಂಭವಾಯಿತು. ಅದನ್ನು ಉದ್ಘಾಟಿಸಿದವರು ಆ ಕಾಲಕ್ಕೆ ನಮ್ಮ ದೇಶದ ಪ್ರಾಚ್ಯವಿದ್ಯಾಪ್ರವೀಣರಿಗೆಲ್ಲ ಆಚಾರ್ಯಪ್ರಾಯರಾಗಿದ್ದ ಶ್ರೀ ರಾಮಕೃಷ್ಣ ಗೋಪಾಲ ಭಂಡಾರ್‌ಕರ್. 'ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ। ದೇವಿಂ ಸರಸ್ವತೀಂ ವ್ಯಾಸಂ ತತೋ ಜಯಂ ಉದೀರಯೇತ್॥' ಎಂಬ ಮಹಾಭಾರತದ ಪ್ರಸಿದ್ಧ ಶ್ಲೋಕವನ್ನು ಅವರು ಬರೆಯುವದರ ಮೂಲಕ ಈ ಕೆಲಸಕ್ಕೆ ನಾಂದಿಯಾಯಿತು. ಮುಂದೆ ಸುಮಾರು ೨೫ ವರ್ಷಗಳ ಕಾಲಕ್ಕೂ ಮೀರಿ ಸಾಗಿದ ಮಹಾಭಾರತದ ಬೃಹತ್ ಕಾರ್ಯಕ್ಕೆ ಹೀಗೆ ಚಾಲನೆ ದೊರೆಯಿತು.

ಪಾಠಪರಿಷ್ಕರಣದ ಸಲುವಾಗಿ ಭಾರತದಲ್ಲಿ ಮತ್ತು

ಹೊರ ರಾಷ್ಟ್ರಗಳಲ್ಲಿ ಲಭ್ಯವಿದ್ದ ಮಹಾಭಾರತದ ಎಲ್ಲ ಲಭ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಲಾಯಿತು. ಭಂಡಾರ್‌ಕರ್ ಸಂಸ್ಥೆಯಲ್ಲೇ ಅಲ್ಲದೆ ತಂಜಾವೂರಿನ ಸರಸ್ವತೀ ಮಹಲ್, ಬಂಗಾಳದ ವಿಶ್ವಭಾರತಿ – ಹೀಗೆ ಬೇರೆ ಬೇರೆ ಕಡೆಗಳಲ್ಲಿಯೂ ಪಾಠಪರಿವೀಕ್ಷಣೆಯ ಕೇಂದ್ರಗಳು ಏರ್ಪಟ್ಟವು. ತಂಜಾವೂರಿನಲ್ಲಿ ಶ್ರೀ ಟಿ. ಸಾಂಬಮೂರ್ತಿರಾವ್ ಮತ್ತು ವಿಶ್ವಭಾರತಿಯಲ್ಲಿ ಪಂಡಿತ ವಿಧುಶೇಖರ ಭಟ್ಟರ ಕಣ್ಗಾವಲಿನಲ್ಲಿ ಪಾಠ ಪರಿಶೀಲನೆಯ ಕೆಸಲ ನಡೆಯಿತು.

ಸಂಪಾದನೆಗಾಗಿ ದೊರಕಿಸಿಕೊಂಡ ಮಹಾಭಾರತದ ಪ್ರತಿಗಳು ಹತ್ತಾರು ಅಥವಾ ನೂರಾರು ಅಲ್ಲ, ಸಾವಿರಾರು ಹಸ್ತಪ್ರತಿಗಳನ್ನು ಸಂಗ್ರಹಿಸಲಾಯಿತು. ಪೂನಾ, ಬರೋಡಾ, ಲಾಹೋರ್, ಕೊಚಿನ್, ನೇಪಾಳದ ಅರಮನೆ ಪುಸ್ತಕ ಭಂಡಾರ, ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯ ಹಸ್ತಪ್ರತಿಗಳೂ ಈ ಕಾರ್ಯಕ್ಕೆ ಒದಗಿದುವು. ಇದಕ್ಕೂ ಮುಂಚೆ ಅಸೋಸಿಯೇಷನ್ ಆಫ್ ಇಂಟರ್‌ನ್ಯಾಷನಲ್ ಅಕಾಡೆಮಿಸ್ ಸಂಸ್ಥೆಯ ಹೆನ್ರಿ ಲ್ಯುಡೆರ್ಸ್‌ರವರ ನೇತೃತ್ವದಲ್ಲಿ ಕಲೆಹಾಕಿದ್ದ ಸಾಮಗ್ರಿಗಳ ಸಹಾಯವೂ ದೊರೆಯಿತು. ಭಾರತದ ದೇಶೀಯ ಭಾಷೆಗಳಲ್ಲಿ ರಚಿತವಾಗಿದ್ದ ಮಹಾಭಾರತದ ಪ್ರಾಚೀನ ಕೃತಿಗಳ ಪಾಠವನ್ನು ಅಗತ್ಯವಾದ ಕಡೆಗಳಲ್ಲಿ ಬಳಸುವುದೆಂದಾಯಿತು.

ಲಭ್ಯವಾದ ಹಸ್ತಪ್ರತಿಗಳೆಲ್ಲ ಒಂದೇ ಲಿಪಿಯಲ್ಲಿ ಬರೆದದಾಗಿರಲಿಲ್ಲ. ಹೆಚ್ಚಿನವು ದೇವನಾಗರಿ ಲಿಪಿಯಲ್ಲಿ ಇದ್ದರೂ ಹಲವು ಬೇರೆ ಬೇರೆ ದೇಶೀಯ ಭಾಷಾಲಿಪಿಗಳಲ್ಲಿ ಇದ್ದವು. ಬಂಗಾಳಿ, ನೇಪಾಳಿ, ತೆಲುಗು, ಮಲೆಯಾಳಿ, ಗ್ರಂಥಾಕ್ಷರ ಮತ್ತು ಶಾರದಾ ಲಿಪಿಗಳಲ್ಲಿ ಬರೆದಿದ್ದ ಹಸ್ತಪ್ರತಿಗಳೂ ಈ ಲಭ್ಯಪ್ರತಿಗಳಲ್ಲಿದ್ದವು. ಅವುಗಳನ್ನೆಲ್ಲ ಪರಿಶೀಲಿಸಿ ಹೆಚ್ಚು ಪ್ರಾಚೀನವಾದ ಪ್ರತಿಗಳು ಯಾವುವು ಮೂಲ ಪಾಠದ ಕಡೆಗೆ ಬೆರಳು ತೋರಿಸುವ ಮೌಲಿಕ ಪ್ರತಿಗಳು ಯಾವುವು ಎಂದು ವಿವೇಚಿಸಿ ಪಾಠಪರಿಷ್ಕರಣೆಗೆ ಸಹಾಯಕವಾಗುವ ಹಸ್ತಪತ್ರಿಗಳನ್ನು ಪ್ರತ್ಯೇಕಿಸಿಕೊಳ್ಳಲಾಯಿತು. ಕೆಲಕೆಲವು ಪರ್ವಗಳ ಪಾಠ ನಿರ್ಣಯಕ್ಕೆ ಕೆಲ ಕೆಲವು ಪ್ರತಿಗಳು ಸಹಾಯಕವಾಗಿದ್ದವು. ಮಹಾಭಾರತದ ಸಮಗ್ರಪಾಠದ ವಿಷಯಕ್ಕೆ ಒಟ್ಟು ೧೨೫೯ ಹಸ್ತಪ್ರತಿಗಳನ್ನು ವಿವರವಾಗಿ ಪರಿಶೀಲಿಸಿ, ಕಡೆಗೆ ೭೩೪ ಪ್ರತಿಗಳು ಪಾಠ ಸಂಪಾದನೆಗೆ ಆಧಾರಯೋಗ್ಯವೆಂದು ನಿರ್ಣಯಿಸಿ ಅವುಗಳನ್ನು ವಿಶೇಷವಾಗಿ ಬಳಸಲಾಯಿತು.

ಗಮನಾರ್ಹವಾದ ಮತ್ತೊಂದು ವಿಷಯವೆಂದರೆ ಮಹಾಭಾರತದ ಪಾಠ ಸಂಪಾದನೆಯು ಆವರೆಗೆ ಆಗಿದ್ದ ಯಾವುದೇ ಪಾಠ ಸಂಪಾದನೆಯ ಕಾರ್ಯಕ್ಕಿಂತ ಭಿನ್ನವಾಗಿದ್ದುದು. ಆವರೆಗೆ ಬೆಳೆದಿದ್ದ ಗ್ರಂಥಸಂಪಾದನೆಯ ತಿಳಿವಳಿಕೆ ಲ್ಯಾಟಿನ್ ಮತ್ತು ಗ್ರೀಕ್ ಕೃತಿಗಳ ಪಾಠಸಂಪಾದನೆಯಿಂದ ರೂಪುಗೊಂಡಿದ್ದುದಾಗಿತ್ತು. ಅದರ ಸಹಾಯ ಮಾತ್ರದಿಂದಲೇ ಮಹಾಭಾರತವನ್ನು ಸಂಪಾದಿಸುವುದು ಸಾಧ್ಯವಾಗುವಂತೆ ಇರಲಿಲ್ಲ. ಮಹಾಭಾರತ ತಂದೊಡ್ಡುವ ಪಾಠಸಮಸ್ಯೆಗಳು ಪಾಶ್ಚಾತ್ಯ ಕೃತಿಗಳ ಪಾಠ ಸಮಸ್ಯೆಗಳಿಗಿಂತ ತೀರಭಿನ್ನವಾಗಿತ್ತು. ಮಹಾಭಾರತದ ಪಾಠಸ್ವರೂಪವನ್ನೇ ಮತ್ತೆ ಮತ್ತೆ ಅಧ್ಯಯನ ಮಾಡಿ ಅದರ ಸಂಪಾದನೆಗೆ ಅಗತ್ಯವಾಗುವ ನಿಯಮ ವಿಧಾನಗಳನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳಬೇಕಾಗಿತ್ತು. ಮಹಾಭಾರತ ಹಲವು ಶತಮಾನಗಳ ಕಾಲದುದ್ದಕ್ಕೂ ಬೆಳೆಯುತ್ತಲೇ ಹೋದ, ಹಲವು ಪಾಠಗಳನ್ನು ಹೊಸ ಹೊಸದಾಗಿ ಸೇರಿಸಿಕೊಳ್ಳುತ್ತಲೇ ಹೋದ ಗ್ರಂಥ. ಆ ಮೂಲಕ ಬೇರೆ ಬೇರೆ ಕಾಲದ ಸಾಮಾಜಿಕ ರೀತಿ, ನೀತಿ, ಧಾರ್ಮಿಕ ವಿಧಿ ಮತ್ತು ಇತರ ಹಲವು ಆಶಯಗಳಿಗೆ ಅನುಗುಣವಾಗಿ ಪಾಠ ಬದಲಾವಣೆಗೆ ಒಳಗಾಗುತ್ತಲೇ ಹೋದ ಅಪೂರ್ವವಾದ ಬೃಹತ್ಕೃತಿ. ಈ ಬಗೆಯ ಕೃತಿಯ ಪಾಠಪರಿಷ್ಕರಣೆ ಮಾಡಿದ ಮಾದರಿಯೊಂದು ಹಿಂದೆ ಇರಲಿಲ್ಲ. ಆದ್ದರಿಂದ ಇದು ಅಭೂತಪೂರ್ವವಾದ ಕೆಲಸವಾಗಿತ್ತು.

ಲಭ್ಯವಾಗಿದ್ದ ಸಾವಿರಾರು ಹಸ್ತಪ್ರತಿಗಳ ಪಾಠವನ್ನು ಪರಿಶೀಲಿಸಿ ಮೊದಲ ಎರಡು ವಿಭಾಗಗಳನ್ನು ರೂಪಿಸಿಕೊಳ್ಳಲಾಯಿತು. ಒಂದು 'ಔತ್ತರೇಯ ಪಾಠ ಸಂಪ್ರದಾಯ' ಮತ್ತೊಂದು 'ದಾಕ್ಷಿಣಾತ್ಯ ಪಾಠ ಸಂಪ್ರದಾಯ'. ಒಂದೊಂದು ಸಂಪ್ರದಾಯದ ಹಸ್ತ ಪ್ರತಿಗಳಲ್ಲಿದ್ದ ಪಾಠ ಸಾಮ್ಯಗಳು ವಿಶಿಷ್ಟವಾಗಿದ್ದವು. ಹಾಗೆಯೇ ಒಂದು ಸಂಪ್ರದಾಯಕ್ಕೂ ಮತ್ತೊಂದು ಸಂಪ್ರದಾಯಕ್ಕೂ ಇದ್ದ ಪಾಠ ವ್ಯತ್ಯಾಸಗಳೂ ವಿಶಿಷ್ಟವಾಗಿದ್ದವು. ಪದಗಳ ಕಾಗುಣಿತದಿಂದ ಮೊದಲುಗೊಂಡು ಪದಪುಂಜಗಳು, ಪಾದಗಳು, ಶ್ಲೋಕಗಳು, ಶ್ಲೋಕಗುಚ್ಛಗಳು, ಉಪಕಥೆಗಳು, ವರ್ಣನೆಗಳು ಎಲ್ಲದರಲ್ಲೂ ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಗಳು ಅನೇಕ ಕಡೆ ಪರಸ್ಪರ ಭಿನ್ನವಾಗಿದ್ದವು. ಒಂದು ಸಾಲಿನ ಪ್ರಕ್ಷೇಪದಿಂದ ಹಿಡಿದು ಒಟ್ಟಿಗೇ ನೂರು ಸಾಲಿಗೂ ಮೀರಿದ ಪ್ರಕ್ಷೇಪ ಆಗಿರುವುದುಂಟು. ಕೌರವ ಪಾಂಚಾಲರ ನಡುವೆ ಯುದ್ಧ ಮತ್ತು ದ್ರುಪದನ ಸೆರೆ ಇವಿಷ್ಟನ್ನೇ ಹೇಳುವ ಭಾಗದಲ್ಲಿ ದಾಕ್ಷಿಣಾತ್ಯ ಪ್ರತಿಗಳ ಪಾಠದಲ್ಲಿ ೧೯೯ ಸಾಲುಗಳ ಪ್ರಕ್ಷೇಪವಾಗಿದೆ; ಪಾಂಡುವಿನ ಮರಣವನ್ನು, ಅವನ ಅಂತ್ಯ ಸಂಸ್ಕಾರವನ್ನೂ ಹೇಳುವ ಭಾಗದಲ್ಲಿ ೧೨೩ ಸಾಲುಗಳ ಪ್ರಕ್ಷೇಪವಾಗಿದೆ. ಸುಭದ್ರಾಹರಣದ ಪ್ರಸಂಗವಂತು ದಾಕ್ಷಿಣಾತ್ಯಪಾಠದಲ್ಲಿ ೪೬೦ ಸಾಲುಗಳಷ್ಟು ವಿಸ್ತಾರವಾಗಿದೆ. ಅರ್ಜುನ ಸನ್ಯಾಸಿ ವೇಷ ಹಾಕಿ ಕೊಂಡದ್ದು, ಸುಭದ್ರೆಯ ಜೊತೆ ಹಿಂತಿರುಗುತ್ತಿರುವಾಗ ಯಾದವ ಸೇನೆ ವಿಪೃಥುವಿನ ನಾಯಕತ್ವದಲ್ಲಿ ಅರ್ಜುನನನ್ನು ಎದುರಿಸಿದ್ದು, ಸುಭದ್ರೆ ಅರ್ಜುನನಿಗೆ ಸಾರಥಿಯಾಗಿ ರಥ ನಡೆಸಿದ್ದು, ಅರ್ಜುನ ಏಕಾಂಗಿಯಾಗಿ ಯಾದವ ಸೇನೆಯನ್ನು ಪರಾಭವಗೊಳಿಸಿ ಹಿಮ್ಮೆಟ್ಟಿಸಿದ್ದು – ಇವು ಯಾವುವೂ ಔತ್ತರೇಯ

ಹಸ್ತಪ್ರತಿಗಳಲ್ಲಿ ದೊರೆಯುವುದಿಲ್ಲ. ಇಂಥ ಹೊತ್ತಿನಲ್ಲಿ ಒಂದು ಸಮಸ್ಯೆ ಎದುರಾಗುತ್ತದೆ. ಒಂದು ಕಾವ್ಯಕ್ಕೆ ಎರಡು ಭಿನ್ನ ಸಂಪ್ರದಾಯಗಳಿದ್ದು ಒಂದರಲ್ಲಿ ಇರುವ ಪಾಠ ಭಾಗ ಮತ್ತೊಂದರಲ್ಲಿ ಇಲ್ಲದಿದ್ದರೆ ಆ ಪಾಠ ಭಾಗ ಮೂಲದ್ದಾಗಿದ್ದೂ ಒಂದು ಸಂಪ್ರದಾಯದಲ್ಲಿ ಲೋಪವಾಗಿದೆಯೇ ಅಥವಾ ಮೂಲದಲ್ಲಿ ಇಲ್ಲದ ಪಾಠವಾಗಿದ್ದು ಒಂದು ಸಂಪ್ರದಾಯದಲ್ಲಿ ಹೊಸದಾಗಿ ಒಂದು ಸೇರಿಕೊಂಡಿದೆಯೇ ಎಂದು ಖಚಿತ ಮಾಡಿಕೊಳ್ಳಬೇಕು. ಇಂಥ ತಿಳಿವಳಿಕೆ ಲಭಿಸಬೇಕಾದರೆ ಎರಡೂ ಭಿನ್ನಸಂಪ್ರದಾಯಗಳ ಪೂರ್ಣ ಪಾಠ ಸ್ವರೂಪದ ಗಾಢ ಪರಿಚಯ ಅತ್ಯಗತ್ಯ.

ತಾನು ರೂಪಿಸಿಕೊಂಡಿರುವ ಪಾಠ ಪರಿಷ್ಕರಣ ಯೋಜನೆಯ ಸ್ವರೂಪವನ್ನು ಶ್ರೇಷ್ಠ ಪಾಠತಜ್ಞರಿಗೆ ತಿಳಿಸಿ ಅವರ ಅಭಿಪ್ರಾಯ, ಸಲಹೆ ಪಡೆಯುವ ಕೆಲಸವನ್ನು ಪಾಠಸಮಿತಿ ಕೈಗೊಂಡಿತು. ಇದಕ್ಕಾಗಿ ತಾನು ನಡೆಸುತ್ತಿರು ಕೆಲಸದ ರೀತಿ ಸ್ವರೂಪಗಳನ್ನು ವಿಶದ ಪಡಿಸುವ ಮಾದರಿಸಂಚಿಕೆಯೊಂದನ್ನು ಅದು ರೂಪಿಸಿತು. ಎಸ್.ಬಿ. ಉತಗೀಕರ್‌ರವರು ವಿರಾಟಪರ್ವದ ಒಂದು ತಾತ್ಕಾಲಿಕ ಪರಿಷ್ಕೃತ ಪಾಠವನ್ನು ೧೯೨೩ರಲ್ಲಿ ಸಿದ್ಧಮಾಡಿದರು. ಅದರ ಒಂದೊಂದು ಪ್ರತಿಯನ್ನು ಪ್ರಾಚ್ಯಸಂಶೋಧನೆಯಲ್ಲಿ ಪರಿಣತರಾದ ಅಮೆರಿಕನ್, ಯೂರೋಪಿಯನ್ ಮತ್ತು ಭಾರತೀಯ ಸಂಸ್ಕೃತ ವಿದ್ವಾಂಸರಿಗೆ ಉಚಿತವಾಗಿ ಕಳಿಸಿ ಅದರ ಗುಣದೋಷಗಳನ್ನು ತಿಳಿಸಬೇಕೆಂದೂ ಸಲಹೆಗಳೇನಾದರೂ ಇದ್ದಲ್ಲಿ ಸೂಚಿಸಬೇಕೆಂದೂ ಕೇಳಲಾಯಿತು. ಬಂದ ಪ್ರತಿಕ್ರಿಯೆಗಳೆಲ್ಲ ಮಾದರಿ ಸಂಚಿಕೆಯ ಪರವಾಗಿಯೇ ಇತ್ತು. ಸಂಸ್ಥೆ ಅನುಸರಿಸುತ್ತಿರುವ ಪರಿಷ್ಕರಣ ವಿಧಾನಕ್ಕೆ ಮೆಚ್ಚಿಕೆಯೂ ವ್ಯಕ್ತವಾಗಿತ್ತು. ಕೆಲವು ಉಪಯುಕ್ತ ಸಲಹೆಗಳೂ ಬಂದಿದ್ದುವು. ಸಮಿತಿ ಅವುಗಳನ್ನು ಒಪ್ಪಿಕೊಂಡು ತನ್ನ ಕಾರ್ಯದಲ್ಲಿ ಅಳವಡಿಸಿಕೊಂಡಿತು.

೧೯೨೫ರಲ್ಲಿ ಡಾ. ವಿ.ಎಸ್. (ವಿಷ್ಣು ಸೀತಾರಾಮ್) ಸುಕ್ತಂಕರ್ ಪಾಠಸಮಿತಿಯ ಪ್ರಧಾನ ಸಂಪಾದಕರಾಗಿ ನೇಮಕಗೊಂಡರು. ಸುಕ್ತಂಕರ್ ಅಪಾರ ಮೇಧಾಶಕ್ತಿ, ಪರಿಶ್ರಮ, ಸಂಕಲ್ಪ ಬಲಗಳಿದ್ದ ಶ್ರೇಷ್ಠ ವ್ಯಕ್ತಿ; ಕೇಂಬ್ರಿಡ್ಜ್, ಬರ್ಲಿನ್ ವಿಶ್ವವಿದ್ಯಾನಿಲಯಗಳಲ್ಲಿ ಗಣಿತಶಾಸ್ತ್ರ, ಭಾಷಾಶಾಸ್ತ್ರಗಳಲ್ಲಿ ಉನ್ನತ ಅಧ್ಯಯನ ನಡೆಸಿದ್ದವರು ಹೆನ್ರಿ ಲ್ಯುಡೆರ್ಸ್‌ರಂಥ ಶ್ರೇಷ್ಠ ಭಾಷಾತಜ್ಞರ ಶಿಷ್ಯರಾಗಿ ಭಾರತೀಯ ಪ್ರಾಚ್ಯಸಂಶೋಧನಾ ವಿಭಾಗದಲ್ಲಿ ನಾಲ್ಕು ವರ್ಷ ದುಡಿದಿದ್ದ ಸುಕ್ತಂಕರ್ ತಾವು ವಹಿಸಿಕೊಂಡ ಕೆಲಸಕ್ಕೆ ಹೇಳಿ ಮಾಡಿಸಿದ ವ್ಯಕ್ತಿಯಾಗಿದ್ದರು. ಅವರು ಬರುತ್ತಿದ್ದಂತೆ ಕೆಲಸ ಮೊದಲಿಗಿಂತ ಚುರುಕುಗೊಂಡು ಅವ್ಯಾಹತವಾಗಿ ಮುಂದುವರಿಯಿತು. ಸಮಿತಿಯಲ್ಲಿದ್ದ ಇತರ ವಿದ್ವಾಂಸರ ಜೊತೆಗೂಡಿ ೧೯೨೫ರಿಂದ ೧೯೩೪ರವರೆಗೆ ಎಂದರೆ ತಮ್ಮ ಕೊನೆದಿನಗಳವರೆಗೆ ಸುಕ್ತಂಕರ್ ಅವಿರತವಾಗಿ ದುಡಿದರು. ಅವರ ನೇತೃತ್ವದಲ್ಲಿ ನಡೆದ ಮಹಾಭಾರತದ ಪಾಠಪರಿಷ್ಕರಣ ಕಾರ್ಯಕ್ಕೆ ಸಮನಾದ ಇನ್ನೊಂದು ವಿದ್ವತ್ ಕಾರ್ಯ ಜಗತ್ತಿನಲ್ಲೇ ಈಚೆಗೆ ಎಲ್ಲೂ ನಡೆದಿಲ್ಲ. ಪ್ರಾಚ್ಯವಿದ್ಯೆ, ಸಂಶೋಧನೆಗಳಿಗೆ ವಿಶ್ವವಿಖ್ಯಾತರಾಗಿದ್ದ ಪ್ರೊ. ಎಂ. ವಿಂಟರ್‌ನಿಟ್ಸ್ ಈ ಕೆಲಸ ಕುರಿತು ಹೇಳುತ್ತ, In my opinion, neither in India nor in Europe only one scholar would be found who would have done the work better than Dr. Suktankar has done ಎಂದು ಶ್ಲಾಘಿಸಿದ್ದಾರೆ. ಮುಂದುವರಿದು I have no hesitation in saying that this is the most important event in the history of Sanskrit philology since the publication of Max Muller's edition of the Rugveda with Sayana's commentary ಎಂದೂ ಪ್ರಶಂಸಿಸಿದ್ದಾರೆ. ಡಾ. ಸುಕ್ತಂಕರ್ ಮತ್ತು ಅವರ ಸಹವಿದ್ವಾಂಸರ ಪರಿಶ್ರಮ ವಿದ್ವತ್ತುಗಳಿಗೆ ಇದಕ್ಕಿಂತ ಹೆಚ್ಚಿನ ಮೆಚ್ಚಿಕೆ ಯಾವುದಿದೆ?

❑❑

# ಮೌಖಿಕಗೀತಗಳಲ್ಲಿ ಮೌಲಿಕ ತತ್ತ್ವಗಳು

– ಡಿ. ಲಿಂಗಯ್ಯ

ಜಾಗತಿಕ ಮಟ್ಟದಲ್ಲಿ ಎಲ್ಲಾ ಪ್ರಾಚೀನ ಜನಾಂಗಗಳಲ್ಲೂ ಮೌಖಿಕಗೀತ ಪರಂಪರೆಯಿದೆ. ಕನ್ನಡ ಜನಾಂಗವೂ ಇದಕ್ಕೆ ಹೊರತಾಗಿಲ್ಲ. ಕನ್ನಡ ಮೌಖಿಕ ಗೀತ ಸಂಪ್ರದಾಯ ಕನ್ನಡ ಜನಾಂಗದಷ್ಟೇ ಸನಾತನವಾದದ್ದು. ಇದರ ಕರ್ತೃ ಹುಟ್ಟು ವಿಕಾಸ ವಿನೂತನತೆ ಅಸ್ಪಷ್ಟ. ಇದು ಸಾಮಾನ್ಯವಾಗಿ ನಿರ್ದಿಷ್ಟ ಕಾಯಕದ ಹಿನ್ನೆಲೆಯಲ್ಲಿ ಸೃಷ್ಟಿಯಾಗಿ, ಸಾಮೂಹಿಕವಾಗಿ ಮನ್ನಣೆ ಪಡೆದು, ಸಾರೋದ್ಧಾರವಾಗಿ ಸಾಗಿ, ಉಳಿದು ಬೆಳೆದು ಮನುಕುಲಕ್ಕೆ ಮುದನೀಡಿರುವ ಮೌಖಿಕ ಸಂಸ್ಕೃತಿಯ ಮಹಾಪ್ರವಾಹ. ಆದಿ ಮಾನವನಿಂದ ಆಧುನಿಕ ಮಾನವನ ವರೆಗೂ ಇದರ ಹರಹು ಇದೆ.

ಮೌಖಿಕ ಗೀತಗಳು ಶಿಷ್ಟರ ಅಕ್ಷರ ಸಂಸ್ಕೃತಿಗೆ ಮೊದಲು ಹುಟ್ಟಿದವು; ತಾವು ನಂಬಿದ ಸಂಸ್ಕೃತಿ ಪಥದಲ್ಲಿ ಸಾಗಿದಂಥವು. ಮೌಖಿಕ ಗೀತಗಳಿಗೆ ಬಾಯ್ದೆರೆ ಹಾಡು, ಪಾಮರ ಹಾಡು, ಹಳ್ಳಿಪದ, ಗ್ರಾಮೀಣ ಗೀತೆ, ಲೋಕಗೀತೆ, ನಾಡಗೀತೆ, ವಾಕ್ ಪರಂಪರೆ ಹಾಡು, ತೋಂಡಿ ಸಂಪ್ರದಾಯದ ಹಾಡು, ಜನಪದ ಗೀತೆ ಮೊದಲಾದ ಹೆಸರುಗಳಿವೆ. ಎಲ್ಲವೂ ಹಿಂದೆ ಆಗಿಹೋದ, ಈಗಲೂ ಅಲ್ಲಲ್ಲಿ ಉಳಿದಿರುವ ತಾಜಾ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಬದುಕಿನ ಎಲ್ಲಾ ವಿದ್ಯಮಾನಗಳಲ್ಲಿ ಇವುಗಳ ದನಿಯಿದೆ, ಬನಿಯಿದೆ. ಕನ್ನಡ ಜನರ ದಿನನಿತ್ಯದ ಆಡು ಮಾತುಗಳನ್ನು ಯಥೋಚಿತವಾಗಿ ಬಳಸಿಕೊಂಡಿರುವ ಕನ್ನಡ ಮೌಖಿಕ ಗೀತಗಳು ಕನ್ನಡ ಭಾಷೆಯನ್ನು ಜೀವಂತವಾಗಿ ಉಳಿಸಿವೆ, ಸಮೃದ್ಧವಾಗಿ ಬೆಳೆಸಿವೆ. ಮಾತ್ರವಲ್ಲ ಇವು ಕನ್ನಡಿಗರ ಸೃಜನ ಶೀಲತೆಯ ಸಹಜ ಅಭಿವ್ಯಕ್ತಿಗಳಾಗಿವೆ; ಕರ್ನಾಟಕ ಸಂಸ್ಕೃತಿಯ ಸಂಜೀವಿನಿ ಸಾಕ್ಷಿಗಳಾಗಿವೆ; ಅವಿಭಾಜ್ಯ ಅಂಗವಾಗಿವೆ.

ಶಿಷ್ಟ ಸಮುದಾಯದ ಅಕ್ಷರ ಸಂಸ್ಕೃತಿಗೆ ಮೊದಲು ಮನುಕುಲದ ಪ್ರತಿಯೊಂದು ವಿದ್ಯಮಾನವೂ ಮೌಖಿಕ ಸಂಸ್ಕೃತಿಯಿಂದ ಕೂಡಿತ್ತು. ಅದು ತನ್ನದೇ ಆದ ಹೆದ್ದಾರಿಯಲ್ಲಿ, ಅನ್ಯದರ ಹಂಗಿಲ್ಲದೆ, ಸಾಗಿ ಬಂತು. ತನ್ನ ಸುದೀರ್ಘ ಪಯಣದ ಹಾದಿಯಲ್ಲಿ, ಕೊಡುವಿಕೆಗೂ ಕೊಳ್ಳುವಿಕೆಗೂ ಮುಕ್ತ ಅವಕಾಶನೀಡಿತು. ಆದರೂ ತನ್ನ ಅನನ್ಯತೆಯನ್ನು ಉಳಿಸಿಕೊಂಡಿತು. ಈಗ ಲಭ್ಯವಿರುವ ಗೀತರಾಶಿಯಲ್ಲಿ ಸರ್ವ ಸಮ್ಮತವಾದ, ಸಾರ್ವಕಾಲಿಕವಾದ, ಮನುಕುಲಕ್ಕೆ ಮಹೋಪಕಾರಿಯಾದ ಮೌಲಿಕ ತತ್ತ್ವಸಾರ ಮಡುಗಟ್ಟಿರುವುದನ್ನು ಸ್ಪಷ್ಟವಾಗಿ ಕಾಣಬಹುದು. ಮೌಖಿಕ ಸಂಸ್ಕೃತಿಯ ದರ್ಶನಕ್ಕೆ ಮೌಖಿಕ ಗೀತಗಳ ಹೊಳಹುಗಳು ವಿನೂತನ ಬೆಳಕಿಂಡಿಯಾಗಿವೆ. ಸನಾತನ ಸಂಸ್ಕೃತಿ ಅಧ್ಯಯನಕ್ಕೆ, ಇತರ ಪ್ರಾಚ್ಯ ಪರಿಕರಗಳಂತೆ ಮೌಖಿಕ ಗೀತಗಳೂ ಆಕರಗಳಾಗಿವೆ.

ಮೌಖಿಕ ಗೀತಗಳಲ್ಲಿ ಬಿಡಿಗೀತೆ (ಮುಕ್ತಕ), ಕಾಯಕ ಗೀತೆ, ಭಾವಗೀತೆ, ಸಂಪ್ರದಾಯ ಗೀತೆ, ದೇವರ ಗೀತೆ, ಆಚರಣೆ ಗೀತೆ, ಕೋಲಾಟ ಗೀತೆ, ಮನೋರಂಜಕ ಗೀತೆ, ಕಥನಗೀತೆ, ಮಹಾಕಾವ್ಯ ಮೊದಲಾದ ಗೀತ ಪ್ರಕಾರಗಳಿವೆ. ಅವೆಲ್ಲ ಕನ್ನಡ ಕುಲಕೋಟಿಯ ಅಭಿವ್ಯಕ್ತಿ ಮಾಧ್ಯಮಗಳಾಗಿ ಪಲ್ಲವಿಸಿವೆ, ಕನ್ನಡ ಸ್ತ್ರೀ ಪುರುಷರ ಸೃಜನಶೀಲ ಸಂವೇದನೆಗಳಾಗಿವೆ. ಅವುಗಳ ಹೂರಣದ ಹರವು ಆಳ ಮನನೀಯವಾಗಿವೆ.

ಆದಿ ಮಾನವನ ಅಲೆಮಾರಿ ಜೀವನದ ಅವಧಿಯಲ್ಲಾಗಲೀ ಕೃಷಿ ಕಾರ್ಯದ ಹಿನ್ನಲೆಯಲ್ಲಿ ಒಂದೆಡೆ ನೆಲೆನಿಂತ ಮೇಲಾಗಲೀ ಪ್ರಕೃತಿ ಪರಿಸರಗಳು ಅವನಿಗೆ ನೀಡಿರುವ ಅನುಭೂತಿ ಅಷ್ಟಿಷ್ಟಲ್ಲ. ಮನುಕುಲದ ಅರಿವಿನ ಅಂಕುರಕ್ಕೆ ಪ್ರಕೃತಿ ಪ್ರಧಾನ ಚೋದಕವಾಗಿದೆ. ಭೂಮಿ ಮನುಕುಲದ ಆಡುಂಬೊಲವಾಯಿತು. ಆಕಾಶ ನೋಡುಂಬೊಲವಾಯಿತು. ಸಕಲ ಜೀವಕೋಟಿಯನ್ನು ಒಳಗೊಂಡ ಭೂಮಿ, ಅದನ್ನು ಒಳಗೊಂಡ ಬ್ರಹ್ಮಾಂಡ, ಸರ್ವಸ್ವಕ್ಕೂ ಕಾರಣನಾದ ಸೃಷ್ಟಿಕರ್ತ – ದೇವರು – ಮನು – ಕುಲದ ಪರಿಕಲ್ಪನೆಯನ್ನು, ದಾರ್ಶನಿಕತೆಯನ್ನು ಬೆಳೆಸಿದವು. ಸೃಷ್ಟಿ ಕ್ರಿಯೆಯ ಜೀವನ ವಿಧಾನ, ಮನುಕುಲದ ಜೀವನ ವಿಧಾನ ಪರಸ್ಪರ ಪೂರಕವಾಗಿರುವುದರ ಜ್ಞಾನೋದಯವಾದದ್ದು ಅರಿವುಕೋಶದ ಮಹಾ ಅಧ್ಯಾಯವಾಯಿತು. ಅರಿವಿನ ಏನೆಲ್ಲ ಅಂಶಗಳು ಗೀತಗಳಾಗಿ ಹೊರ ಹೊಮ್ಮಿದವು. ಅವೆಲ್ಲ ಮೌಖಿಕ ಗೀತ ಪ್ರವಾಹವಾಗಿ

# ೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು ೫೬೦ ೦೮೫

ಉಕ್ಕಿ ಹರಿದವು, ತಲೆಮಾರಿನಿಂದ ತಲೆಮಾರಿಗೆ, ಬಾಯ್ದೆರೆಯ ಜೀವಧಾತುವಾದವು; ಬದುಕಿಗೆ ಸ್ಫೂರ್ತಿಯಾದವು.

ಮೌಖಿಕಗೀತಗಳು ಕೇವಲ ಶುಷ್ಕಹಾಡುಗಳಲ್ಲ. ಸಂಸ್ಕೃತದ ಸುಭಾಷಿತಗಳಂತೆ, ಉಪನಿಷತ್ತಿನ ಸೂತ್ರಗಳಂತೆ ಅರ್ಥಗರ್ಭಿತವಾದವು. ಮಿಗಿಲಾಗಿ ದೇಸಿ ಛಂದಸ್ಸಿನಲ್ಲಿ ಹಾಡಿಕೊಳ್ಳುವಂಥವು. ಅವುಗಳಲ್ಲಿ ಆದಿ ಮಹಾ ಸಂಸ್ಕೃತಿಯ ಮಹಾದರ್ಶನದ ಸುಳುಹು ಹೊಳಹುಗಳ ಪರಿವೇಷಗಳಿವೆ. ಅವು ಸಹಜವಾಗಿವೆ, ಸುಂದರವಾಗಿವೆ, ಸರಳವಾಗಿವೆ, ಸುಜ್ಞಾನ ಸೂಕ್ತಿಗಳಾಗಿವೆ. ಅವುಗಳಲ್ಲಿ ಇಹಪರದ ಜಿಜ್ಞಾಸೆಯಿದೆ; ಮನುಕುಲದ ಮಹಾಗಾಥೆಯಿದೆ. ಅವು ಹೊರಹೊಮ್ಮಿಸುವ ವೈಚಾರಿಕ ವಿವೇಚನೆಯ ಹೊಂಬೆಳಕು ವಿಸ್ಮಯ ಹುಟ್ಟಿಸುತ್ತದೆ.

ಕೆಲವು ಜನಪ್ರಿಯ ಮೌಖಿಕ ಗೀತೆಗಳ ಪರಿಶೀಲನೆಯಿಂದ ಅವುಗಳ ಮಹತ್ವವನ್ನು ಮನಗಾಣಬಹುದು.

ಭೂಮಿಯಲ್ಲಿ ವಾಸಿಸುವ ಇರೆಂಬತ್ತು ಕೋಟಿ ಜೀವರಾಶಿಗೆ ಆಹಾರ ಅಗತ್ಯ. ಅದರ ಪೂರೈಕೆ ಭೂಮಿಯಿಂದ. ಹಾಗಾಗಿ ಮನುಕುಲಕ್ಕೆ ಭೂಮಿಯ ಬಗೆಗೆ ಅಪಾರವಾದ ಪ್ರೀತಿ, ಗೌರವ, ನಂಬಿಕೆ. ಭೂಮಿ ರಹಿತ ಮನುಕುಲ ಅರ್ಥಹೀನ.

ಭೂಮಿಯು ಅನುಗ್ರಹಿಸುವ ವಸ್ತುಗಳಿಂದ ಆಹಾರ ಸಿದ್ಧಪಡಿಸುವಿಕೆಯ ಅರಿವಾದುದು ದೊಡ್ಡ ತಿಳುವಳಿಕೆ. ಈ ಹಿನ್ನೆಲೆಯಲ್ಲಿ 'ಬೀಸುವ ಕಲ್ಲು' ದೊಡ್ಡ ಸಂಶೋಧನೆ. ಬೀಸುವ ಕಲ್ಲು ಅಥವಾ ರಾಗಿಯ ಕಲ್ಲು ಗ್ರಾಮೀಣ ಜನ ಸಮುದಾಯದ ಯಂತ್ರ ದೇವತೆ. ಹಿಂದೆ ಪ್ರತಿ ಮನೆಯಲ್ಲೂ ಬೀಸುವ ಕಲ್ಲಿನ ದನಿಕೇಳುತ್ತಿತ್ತು. ಅದರೊಟ್ಟಿಗೆ ತಾಯಿ ಮಗಳ, ಅಕ್ಕ ತಂಗಿಯ, ಅತ್ತೆ ಸೊಸೆಯ, ಅತ್ತಿಗೆ ನಾದಿನಿಯರ ಹಾಡಿದ ದನಿ ಹೊರಡುತ್ತಿತ್ತು. ಬೀಸುವ ಕಲ್ಲು ಶ್ರುತಿ; ಬೀಸುವವರ ಕಂಠ ರಾಗಮೂಲ. ಆ ದನಿ ಮೌಖಿಕ ಗೀತಗಳ ಅಕ್ಷಯ ನಿಧಿಯಾಗಿತ್ತು. ಬದುಕಿನ ಏನೆಲ್ಲ ವಿದ್ಯಮಾನಗಳು ಆ ಹಾಡುಗಳ ಜೀವಧಾತುವಾಗಿದ್ದವು. ಅವು ವ್ಯಷ್ಟಿ ಸಮಷ್ಟಿ ಅನುಭವದ ಮುಖವಾಣಿಯಾಗಿದ್ದವು.

**ಏಳುತಲೆ ಎದ್ದು ಯಾರ್ಯಾರು ನೆನೆಯಲಿ**
**ಎಳ್ಳು ಜೀರಿಗೆ ಬೆಳೆಯೋಳ – ಭೂಮಿ ತಾಯ್ನ**
**ಎದ್ದೊಂದು ಗಳಿಗೆ ನೆನೆದೇನು.**

ಶಿವಪೂಜೆಗೆ ಹೂವು, ಶನಿ ಪೂಜೆಗೆ ಎಳ್ಳು, ಮದುವೆ ಮುಂಜಿಗೆ ಜೀರಿಗೆ, ಸಾವು ಸಂತರ್ಪಣೆಗೆ ಎಳ್ಳು, ಎರಡೂ ಭೂಮಿಯಲ್ಲೇ ಬೆಳಯುತ್ತವೆ. ಹುಟ್ಟು ಸಾವು, ಶುಭ ಅಶುಭ ಎಲ್ಲಾ ಘಟನೆಗಳಿಗೂ ನೆಲೆ ಭೂಮಿ. ಇಂಥ ಭೂಮಿತಾಯಿಗೆ ಮೌಖಿಕ ಗೀತೆಗಳ ಮೊದಲ ಮನ್ನಣೆ. ಬದುಕಿಗೆ ಮೂಲಧಾರ ಭೂಮಿ. ಭೂಮಿ ಅನುಗ್ರಹಿಸಿದರೆ ಬಾಳಿನಲ್ಲಿ ಆನಂದ. ಭೂಮಿ ಮುನಿದರೆ ಆಘಾತ. ಕೃಷಿಯೇ ಸರ್ವಸ್ವವಾದವರಿಗೆ ಭೂಮಿಯೇ ಸರ್ವಸ್ವ. ಹೆಚ್ಚು ಕಡಮೆ ಕರ್ನಾಟಕದ ಎಲ್ಲಾ ಕಡೆಯೂ ಈ ಮೌಖಿಕ ಗೀತೆ ಪ್ರಚಾರದಲ್ಲಿದೆ. ಇದು ಮೌಖಿಕ ಗೀತ ಕರ್ತೃವಿನ ಆಶಯದ ಪ್ರತೀಕವಾಗಿದೆ.

**ಮಳೆಯಪ್ಪ ಮಳೆರಾಜ ಕರೆಯುತಾರೋ ನಿನ್ನ**
**ಮೊದಲು ಕೂರಿಗೆಯ ರೈತಾರೋ – ಹೊಲದಾಗ**
**ಬೆಳೆ ಎದ್ದು ಕೈಯ ಮುಗಿದಾವ.**

ಭೂಮಿಗೂ ಬಾಣಕ್ಕೂ ನಂಟು. ಭೂಮಿ ಸಮೃದ್ಧ ಫಲ ನೀಡಬೇಕಾದರೆ ಆಕಾಶ ಅನುಗ್ರಹಿಸಬೇಕು. ಮಳೆ ಬಿದ್ದರೆ ಬೆಳೆ. ಮಳೆಯಿಲ್ಲದಿದ್ದರೆ ಬರಡು. ಬೆಳೆ ಬಯಸುವ ರೈತ ಕಾಲ ಕಾಲಕ್ಕೆ ಆಕಾಶ ನೋಡುವುದು ಅನಿವಾರ್ಯ. ಬೀಜ ಬಿತ್ತುವ ಸಂದರ್ಭದಲ್ಲಂತೂ ಮಳೆ ಅಗತ್ಯ. ರೈತರ ಪಾಲಿಗೆ ಮಳೆ ಕೇವಲ ನೀರಲ್ಲ; ಮಳೆಯಪ್ಪ, ಮಳೆರಾಜ, ಮಳೆ ದೇವರು. ಹೊಲದಲ್ಲಿ ಬೀಜ ಬಿತ್ತುವ ಕಾಲಕ್ಕೆ ಮಳೆಯಾದರೆ ಬೆಳೆ ಹುಲುಸು. ಮಳೆ ಹನಿಯುವಾಗ ಹೊಲದಲ್ಲಿ ಬೆಳೆದ ಬೆಳೆಯೇ ಎದ್ದು ಮಳೆಗೆ ಕೈ ಮುಗಿಯುವುದು, ನಮಸ್ಕರಿಸುವುದು, ಅನುಪಮ ಶಬ್ದ ಚಿತ್ರವಾಗಿದೆ. ಇಂತಹ ಕಾವ್ಯಾಲಂಕಾರ ಮೌಖಿಕ ಗೀತಗಳಲ್ಲಿ ಮಾತ್ರ ಕಂಡು ಬರುತ್ತವೆ. ಬಾಗಿಲ ಕೋಟೆ ಜಿಲ್ಲೆಯ ಒಣಬೇಸಾಯ ಕೃಷಿಕರ ಈ ಗೀತೆ ಅವರ ಒಡಲ ದನಿಯಂತೆ ಭಾಸವಾಗುತ್ತದೆ.

**ರಾಗಿ ದೇವನೆ ಲೋಲ ಸಂಪನ್ನಾನೆ**
**ಸೋಗೆಲ್ಲ ಮುತ್ತು ನವರತುನ – ರಾಗಿ ದೇವ**
**ತೂನಿ ಬೆಳೆಯೋ ನಮ್ಮ ಹೊಲದಲ್ಲಿ**

ಮೂಲತಃ ಮನುಕುಲದವರೆಲ್ಲ ಕೃಷಿಕ ಮೂಲದವರೇ. ಕಾಲ ಕ್ರಮೇಣ ಜನಸಂಖ್ಯೆ ಹೆಚ್ಚಿದಂತೆ, ಕೃಷಿ ಕಾಯಕದ ಒತ್ತಡ ಮೇಲಾದಂತೆ ದುಡಿಮೆಯ ವಿಕೇಂದ್ರಿಕರಣವಾಗಿದೆ. ಆದರೂ ಕೃಷಿ ಅವಲಂಬಿತರೇ ಹೆಚ್ಚು. ಆಹಾರದ ಸಮಸ್ಯೆ ನೀಗಿದರೆ ಉಳಿದದ್ದು ಸುಲಭ. ಕೃಷಿಯ ಹಿನ್ನೆಲೆಯಲ್ಲಿ ಹುಟ್ಟಿರುವ ಹಾಡು ಆಚರಣೆ ಕಲೆ ಕುಣಿತ ದಂಡಿಯಾಗಿವೆ. ರಾಗಿ ಕೇವಲ ಧಾನ್ಯವಲ್ಲ, ಸಾಕ್ಷಾತ್ ದೇವರು. ಅದರ ಒಂದೊಂದು ಕಾಳು ಜಾತಿ ಮುತ್ತು ನವರತ್ನಕ್ಕೆ ಸಮ. ಸಮೃದ್ಧಿ ಬೆಳೆ ಸಂತೋಷದ ಸಂಕೇತ. 'ರಾಗಿ ದೇವ ತೂಗಿ ಬೆಳೆಯೋ ನಮ್ಮ ಹೊಲದಲ್ಲಿ' ಚಿತ್ರ ಆಕರ್ಷಕವಾಗಿದೆ. ಆದಿಮಾನವನ ಆಹಾರದಲ್ಲಿ ರಾಗಿ ಬಹು ಮುಖ್ಯವಾದ ಧಾನ್ಯವಾಗಿತ್ತು. ಈಗಲೂ ಅದರ ಮಹತ್ವ ಕಡೆಯಾಗಿಲ್ಲ.

**ಹಂಚ್ಕೊಂಡು ಬಾಳೋ ಭೂಮಿ ಹಕ್ಕು ಎಲ್ಲಾರ್ಗುಂಟು**
**ಉತ್ತಿ ಬಿತ್ತಿ ಬೆಳೆಯೋ ರೈತ – ತಗಾಲಪ್ಪು**
**ಕೂತ್ಕೊಂಡ್ ಉಣ್ಣೋ ಗೆಣೆಯಗ್ಯಾಕೆ ಭೂಮಿ ಪಟ್ಟು?**

ಮನುಷ್ಯ ಸಂಪೂರ್ಣವಾಗಿ ಭೂಮಿಯನ್ನು ಅವಲಂಬಿಸಿದುದರಿಂದ ಕೃಷಿಭೂಮಿಯ ಹಕ್ಕಿನ ಸಮಸ್ಯೆ ಹುಟ್ಟಿತು. ನಿಜವಾಗಿಯೂ ಭೂಮಿಯ ಹಕ್ಕು ಯಾರಿಗಿರ ಬೇಕು? ರೈತರಿಗೆ, ದುಡಿಯುವವರಿಗೆ, ಬೆವರು ಸುರಿಸಿ

ದುಡಿಯದೆ ಕುಳಿತು ಉಣ್ಣುವ ಶ್ರೀಮಂತರಿಗಲ್ಲ. ಈ ಮೌಖಿಕ ಗೀತೆ ಉಳುವವನೇ ನೆಲದೊಡೆಯ ಎಂಬ ಸಮತಾವಾದದ ಕಡೆಗೆ ಗಮನ ಸೆಳೆಯುತ್ತದೆ.

ಪ್ರಕೃತಿ ಪರಿಸರ, ಭೂಮಿಯ ವೈವಿಧ್ಯಮಯವಾದ ಸಂಪತ್ತು, ಗಿಡಮರ, ನದಿ, ಹಣ್ಣು ಹಂಪಲು, ಸಸ್ಯ ಸಂಕುಲ, ಸೊಪ್ಪುಸದೆ ಏನೆಲ್ಲ ವಸ್ತು ವಿಶೇಷಗಳು ಮನುಕುಲದ ಆದಿ ಚಿಂತಕರಿಗೆ ವಿಸ್ಮಯ ಹುಟ್ಟಿಸಿವೆ. ಇವುಗಳನೆಲ್ಲ ಸೃಷ್ಟಿಸಿದವನು ಯಾರು? ಸೃಷ್ಟಿಸಿದ್ದು ಯಾಕೆ? ಅವನು ಎಲ್ಲಿದ್ದಾನೆ? ಹೇಗಿದ್ದಾನೆ? ಇದ್ದರೆ ಕಾಣುವುದಿಲ್ಲವೇಕೆ? ಮೊದಲಾದ ಪ್ರಶ್ನೆಗಳು ಕಾಡಿವೆ. ಇದಕ್ಕೆಲ್ಲಾ ಕಾರಣವಾಗಿರುವ ಮೂಲ ಶಕ್ತಿಗೆ 'ದೇವರು' ಎಂದು ಹೆಸರಿಸಿದೆ. ಅದೊಂದು ನಂಬಿಕೆ. ನೇರವಾಗಿ ಕಾಣದಿದ್ದರೂ ಪರೋಕ್ಷ ದರ್ಶನಕ್ಕೆ ಕೊರತೆಯಿಲ್ಲ. ಮೌಖಿಕ ಗೀತಕಾರರು ಮನುಕುಲದ ಸಮೂಹ ಪ್ರಜ್ಞೆಯ ಪ್ರತಿರೂಪವೆಂಬಂತೆ ದೇವರ ಅಸ್ತಿತ್ವವನ್ನು ನಾನಾ ರೀತಿಯಲ್ಲಿ ಕಲ್ಪಿಸಿ ಹಾಡಿದ್ದಾರೆ. ಅವರ ಅವ್ಯಕ್ತ ಶಕ್ತಿಯ ಕಲ್ಪನೆ ಸರಳವಾಗಿದೆ, ಸಹಜವಾಗಿದೆ, ನಂಬಿಕೆಗೆ ಇಂಬಾಗಿದೆ.

**ಹೂವಿನಾಗ ಹುದುಗಾನ ಮಾಲ್ಯಾಗ ಮಲಗ್ಯಾನ**
**ಮೊಗ್ಗಾಗ ಕಣ್ಣು ತೆರೆದಾನ- ಲಿಂಗಯ್ಯನ**
**ನೋಡಟಗೆ ನಿದ್ದಿ ಬಯಲಾಗಿ.**

ಪ್ರಕೃತಿಯೆಂಬ ಆಡುಂಬೊಲದಲ್ಲಿ ವಿಹರಿಸುವ ಜನಪದರಿಗೆ ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲಿಯೂ ದೇವರ ಅಂಶವನ್ನೇ ಕಾಣುವುದು ಆನಂದ ದಾಯಕವಾಗಿದೆ. ದೇವರ ಅವ್ಯಕ್ತ ಚೈತನ್ಯ ಸ್ಪರ್ಶವಿಲ್ಲದಿದ್ದರೆ ಹೂವು ಹೂವಿನಂತೆ ಕಾಣುತ್ತಿರಲಿಲ್ಲ. ದೇವರು ಹೂಮಾಲೆಯಲ್ಲಿ ನಿದ್ರಾವಶನಾಗದಿದ್ದರೆ ಹೂಮಾಲೆ ಅಷ್ಟು ಸುಂದರವಾಗಿ ಆಕರ್ಷಿಸುತ್ತಿರಲಿಲ್ಲ. ಹೂವಿನ ಮೊಗ್ಗು ಅರಳುವುದಕ್ಕೂ ಮಲಗಿದ ದೇವರು ಕಣ್ಣು ತೆರೆಯುವುದಕ್ಕೂ ವ್ಯತ್ಯಾಸವಿರುತ್ತಿರಲಿಲ್ಲ. ಇಂತಹ ಪ್ರಕೃತಿ ವಿಸ್ಮಯವನ್ನು ಕಂಡರೆ ಜಡತನದ ನಿದ್ದೆ ಮಾಯವಾಗುತ್ತದೆ. ದೈವ ಚಿಂತನೆಯ ರಸಾನಂದದಲ್ಲಿ ಮನಸ್ಸು ಲೀನವಾಗುತ್ತದೆ. ಮೌಖಿಕ ಗೀತಕಾರರ ಕಂಡರಿಕೆ ಸೀಮಾತೀತವಾದದ್ದು. ಎಲ್ಲವೂ ಈಶ್ವರಮಯವಾದ ಮೇಲೆ ಬೇರೆಯ ಕಡೆ ಶಿವನನ್ನು ನೋಡುವುದಾಗಲೀ ಬೇರೆ ರೀತಿಯಲ್ಲಿ ಅವನನ್ನು ಕಲ್ಪಿಸಿಕೊಳ್ಳುವುದಾಗಲೀ ಅಗತ್ಯವಿಲ್ಲ.

**ಆಕಾಶದದವ್ವಾಗ ಧೂಪದ ಹೊಗೆಯೆದ್ದು**
**ಆಯ್ತು ಮಲ್ಲಯ್ಯನ ಶಿವಪೂಜೆ – ಆಗಾಗ**
**ಆಕಾಶದ ಗಂಟೆ ಘಳಲೆಂದು**

ಮೌಖಿಕಗೀತಕಾರರ ಈ ಪುಟ್ಟ ತ್ರಿಪದಿ ಅವರ್ಣನೀಯವಾದ ಕಾವ್ಯಧ್ವನಿಯನ್ನು ಹೊಂದಿದೆ. ನೆಪಕ್ಕೆ ಇದೊಂದು ಮುಂಗಾರು ಮಳೆಯ ವರ್ಣನೆ. ಅಖಂಡ ಭೂಮಿಯನ್ನು ಶಿವಲಿಂಗವಾಗಿ ಕಲ್ಪಿಸಿದೆ. ಶಿವಪೂಜೆಯ ಕ್ರಿಯೆಗೆ ಪ್ರಕೃತಿಯ ಘಟನೆಗಳನ್ನು ಅನ್ವಯಿಸಿದೆ. ವಿಶಾಲವಾದ ಬಾನು, ವಿಸ್ತಾರವಾದ ಕಾಡನ್ನು ಧ್ವನಿಸಿದೆ. ಶಿವಪೂಜೆಯಲ್ಲಿ ಧೂಪದ ಹೊಗೆ ಕವಿಯುವಂತೆ, ಮುಂಗಾರು ಮೋಡದಿಂದ ಆಕಾಶ ಮುಚ್ಚಿದೆ ಶಿವಪೂಜೆಯಲ್ಲಿ ಗಂಟೆಯ ದನಿ ಕೇಳುವಂತೆ, ಗಗನದಲ್ಲಿ ಗುಡುಗಿನ ದನಿ ಕೇಳುತ್ತಿದೆ. ದೇವಾಲಯದಲ್ಲಿ ಶಿವಲಿಂಗಕ್ಕೆ ಅಭಿಷೇಕವಾಗುವಂತೆ, ಪ್ರಕೃತಿಗೆ ಅಂದರೆ ಭೂಮಿಗೆ ಮಳೆಯ ನೀರಿನ ಅಭಿಷೇಕವಾಗುತ್ತಿದೆ. ಸಮಸ್ತ ಪ್ರಕೃತಿ ದೇವಾಲಯದ ಅನುಭೂತಿಯನ್ನು ನೀಡುವುದು ಚೇತೋಹಾರಿಯಾಗಿದೆ.

ಇದಕ್ಕೆ ಪೂರಕವಾಗಿ ವರಕವಿ ಬೇಂದ್ರೆ ಅವರ 'ಶ್ರಾವಣ' ಭಾವಗೀತೆಯನ್ನು ಮನನ ಮಾಡಬಹುದು.

**ಮುಂದೇನು ಕೊಟ್ಟೀತ ಮನವೇನು ದಣಿದೀತ**
**ಮಂಜಾನದಾನ ಗಿರಿಮಲ್ಲ – ಕೊಟ್ಟರ**
**ಮನಿ ತುಂಬಿ ನಮ್ಮ ಮನ ತುಂಬಿ**

ಮನುಷ್ಯರಲ್ಲಿ ದಾನಧರ್ಮದ ಗುಣವಿದೆ. ಆದರೆ ಅದಕ್ಕೆ ಇತಿಮಿತಿಯಿದೆ. ಏನೇ ಆದರೂ ಮನುಷ್ಯ ಮನುಷ್ಯನಿಗೆ ಕೊಟ್ಟು ತೃಪ್ತಿ ಪಡಿಸಲಾರ. ಮಂಜು ನೆಲೆವಾಸಿ ಶಿವ ಧಾರಾಳವಾಗಿ ಅನುಗ್ರಹಿಸಿದರೆ, ಮನುಷ್ಯರ ಮನೆ ತುಂಬುತ್ತದೆ, ಮನಸ್ಸು ತುಂಬುತ್ತದೆ. ದೇವರ ಅನುಗ್ರಹದ ಮುಂದೆ ಮನುಷ್ಯನ ಧಾರಾಳತನ ಏನೇನೂ ಅಲ್ಲ. ದಾನವೀರ, ದಾನಶೂರ ಮೊದಲಾದ ಬಿರುದುಗಳನ್ನು ಮನುಷ್ಯರಿಗಿಂತ ದೇವರಿಗೆ ನೀಡಿದರೆ ಹೆಚ್ಚು ಸೂಕ್ತವಾಗಿರುತ್ತದೆ. ದೇವರ ಔದಾರ್ಯ ಅತಿಶಯವಾದದ್ದು ಎಂಬುದು ಮೌಖಿಕಗೀತಕಾರರ ನಂಬಿಕೆ.

ಮನುಕುಲದ ವಿಕಾಸದಲ್ಲಿ ಸಂಸಾರ ಒಂದು ಪ್ರಮುಖ ಘಟ್ಟ, ಸಾಮಾಜಿಕ ಕಟ್ಟುಪಾಡು, ಧಾರ್ಮಿಕ ಆಚಾರ ವಿಚಾರ, ನೀತಿಯ ನೆಲೆಗಟ್ಟು, ಮನುಷ್ಯ ಸಂಬಂಧದ ಗೂಢ ಮೊದಲಾದವೆಲ್ಲ ಸಾಂಸಾರಿಕ ವ್ಯವಸ್ಥೆಯ ಸುತ್ತ ಸುತ್ತಿಕೊಂಡಿವೆ. ಅವೆಲ್ಲ ಮೌಖಿಕ ಸಂಸ್ಕೃತಿಯ ನಿರ್ಮಾಣಕ್ಕೆ ನೆರವಾಗಿವೆ.

ಕೃಷಿಗೆ ಕಾರಣಳಾದ ಹೆಣ್ಣು ಸಾಂಸಾರಿಕ ಕೇಂದ್ರವಾದದ್ದು ಸಾಂಸ್ಕೃತಿಕ ಸತ್ಯ. ತಾಯಿ ಸಂಸಾರದ ಸಾರಸರ್ವಸ್ವ. ಮೌಖಿಕ ಗೀತಗಳಲ್ಲಿ ತಾಯಿಯ ವ್ಯಕ್ತಿತ್ವ ಇನ್ನಿಲ್ಲದಂತೆ ರೂಪುಗೊಂಡಿದೆ.

**ತಾಯಿಯ ಹಾಡಿಗೆ ಕೂಸು ತಾನಾಡೀತು**
**ಒಣಗಿದ ಮಲ್ಲಿಗೆ ಚಿಗತೀತು– ನಕ್ಕೀತು**
**ಮಾಸಿದ ಮನವು ಮಡಿಯಾಯ್ತು.**

ಈ ಗೀತೆ ತಾಯಿಯ ಹೆಚ್ಚಳವನ್ನು ಕಾವ್ಯಮಯವಾಗಿ ಕಡೆದಿದೆ. ಜೋಗುಳ ಹಾಡಿಗೆ ತಾಯಿಯೇ ಕಾರಣಕರ್ತೆ. ತಾಯಿಯ ಸದಾಶಯದ ಜೋಗುಳ ಕೇಳಿ ಬೆಳೆಯಿಂದ ಮಗು ಬಹುಶಃ ಇಲ್ಲ. ಒಣಗಿದ ಮಲ್ಲಿಗೆಯ ಬಳ್ಳಿ ಚಿಗುರಿದಂತೆ, ಮೂಸಿದ ಮನಸ್ಸು ಮಡಿಯಾದಂತೆ ಜೋಗುಳ ಪರಿಣಾಮ ಬೀರುತ್ತದೆ. ತಾಯಿಯ ಕಂಠಕ್ಕೆ ಅಂಥ ಮಾಂತ್ರಿಕ

ಶಕ್ತಿಯಿರುತ್ತದೆ.

ಮೌಖಿಕ ಗೀತಗಳು ಕಟ್ಟಿಕೊಡುವ ನೀತಿ ಬೋಧಕ ಸೂಕ್ತಿ ಸಮುಚ್ಚಯ ಅರ್ಥಗರ್ಭಿತವಾಗಿವೆ. ಮನುಕುಲ ಪ್ರಾಚೀನ ಕಾಲದಿಂದಲೂ ತನ್ನ ಸಂತಾನಾಭಿವೃದ್ಧಿಗೆ ಮುತುವರ್ಜಿ ವಹಿಸಿದೆ. ಮಕ್ಕಳನ್ನು ಪಡೆದರಷ್ಟೇ ಸಾಲದು, ಅವರನ್ನು ಸಮಾಜ ಒಪ್ಪುವಂತೆ ಸಾಕಬೇಕು, ಬೆಳಸಬೇಕು. ಸಮಾಜ ಘಾತಕ ಮಕ್ಕಳನ್ನು ಮೌಖಿಕ ಸಂಸ್ಕೃತಿ ಮಾನ್ಯ ಮಾಡುವುದಿಲ್ಲ. ತಾಯಿ, ತಂದೆಗಳು ತಮ್ಮ ಗಂಡು ಮಕ್ಕಳು ಹೀಗಾಗಬೇಕೆಂದು ಬಯಸುತ್ತಾರೆ.

**ಆಚಾರಕರ ಸಾಗು ನೀತಿಗೆ ಪ್ರಭುವಾಗು**
**ಮಾತಿನಲಿ ಚೂಡಾಮಣಿಯಾಗು – ನನಕಂದ**
**ಜ್ಯೋತಿಯೇ ಆಗು ಜಗಕೆಲ್ಲ**

ಮಗನಾದವನು ಸಾಮಾಜಿಕ ವ್ಯವಸ್ಥೆಯ ಆಚಾರಕ್ಕೆ ಬದ್ಧನಾಗಬೇಕು. ಸಮಾಜ ಒಪ್ಪಿರುವ ನೀತಿಗೆ ಒಡೆಯನಾಗಬೇಕು. ಮಾತು ಮೌಲಿಕವಾಗಿರಬೇಕು. ಒಟ್ಟಿನಲ್ಲಿ ನಡೆನುಡಿ ಆದರ್ಶವಾಗಿರಬೇಕು. ಆ ಮೂಲಕ ಜಗಜ್ಯೋತಿಯಾಗಬೇಕು. ಮೌಖಿಕ ಸಂಸ್ಕೃತಿಗೆ ಉದಾತ್ತತೆಯ ಬಯಕೆ. ತಾಯಿ ತಂದೆಯರ ಉದಾತ್ತ ಬೋಧನೆಯ ಹಾದಿಯಲ್ಲಿ ಸಾಗಿದರೆ ಮಕ್ಕಳ ಮನಸ್ಸು, ಬದುಕು ಉದಾತ್ತವಾಗುತ್ತದೆ ಎಂಬುದು ಸರ್ವಕಾಲಕ್ಕೂ ಸಲ್ಲುವ ಆಶಯವಾಗಿದೆ.

ಬಾಳು ಹೇಗಿರಬೇಕು? ಇನ್ನೊಂದು ಆಲೋಚನೆ ಹೀಗಿದೆ.

**ಬೆಳಕು ಬಾಳುತಿರಲಿ ಬಾಳು ಬೆಳಕಾಗಿರಲಿ**
**ಹೂವು ಬೆಳಗಾಗ ತೆರನಂತೆ – ಬಾಳಿರಲಿ**
**ಬೆಳಕಿಗರಳುವ ಹೂವಾಗಿ**

ಬೆಳಕು ಚೈತ್ಯನ್ಯ ಸ್ವರೂಪಿ, ಸೃಷ್ಟಿಯ ಸೆಳಕು. ಬ್ರಹ್ಮಾಂಡ ಕತ್ತಲಮಯವಾಗಿದ್ದರೆ ಚೈತನ್ಯ ಶೂನ್ಯತೆ ಕವಿಯುತ್ತಿತ್ತು. ಹಾಗಾಗದಿರುವುದು ಪುಣ್ಯ. ಜ್ಞಾನವೂ ಬೆಳಕುಮಯವೇ. ಜೀವ ಸಂಚಲತೆ ಬೇಕು ಎಂದರೆ ಬೆಳಕು ನಿರಂತರವಾಗಿರಬೇಕು. ಬೆಳಕು ಬಾಳುತ್ತಿದ್ದರೆ ಬದುಕು; ಇಲ್ಲದಿದ್ದರೆ ನಿರ್ಜೀವದ ಉಸುಕು. ಹಾಗೆಯೇ ಜ್ಞಾನ ವಿಜ್ಞಾನದ ಹೊಳಹು ಇಲ್ಲದಿದ್ದರೆ ಬಾಳು ಅರ್ಥಹೀನ. ಬೆಳಕು ಸಾರೋದ್ಧಾರವಾಗಿ ಇರುವುದಷ್ಟೇ ಅಲ್ಲ, ಬಾಳೇ ಬೆಳಕಾಗಬೇಕು. ಹೇಗೆ? ಮುಂಜಾನೆಯಲ್ಲಿ ಅರಳಿದ ಹೂವು ತಾಜಾ ಸ್ಥಿತಿಯಲ್ಲಿ ಇರುತ್ತದಲ್ಲಾ ಹಾಗೆ. ಅಂದರೆ ಬೆಳಕಿಗೆ ಅರಳುವ ಹೂವಿನ ಹಾಗೆ ಬಾಳಿರಬೇಕು. ಜೊತೆಗೆ ಜ್ಞಾನ ವಿಜ್ಞಾನದ ಕಂಡರಿಕೆಯಿಂದ ಕೂಡಿರಬೇಕು. 'ಬೆಳಕು' ಶಬ್ದಕ್ಕೆ ನಾನಾ ಅರ್ಥಗಳನ್ನು ಅನ್ವಯಿಸಿಕೊಳ್ಳಲು ಅನುವಾಗುವಂತೆ ಈ ಗೀತೆ ಸಂಕೀರ್ಣವಾಗಿದೆ.

ಮೌಖಿಕ ಗೀತಗಳು ಚಾರಿತ್ರ್ಯ ಶುದ್ಧಿಗೆ ಆದ್ಯತೆ ನೀಡುತ್ತವೆ. ಬಾಳಾಟದಲ್ಲಿ ಮಾನವೀಯತೆ ಮುಖ್ಯವೆಂದು ಸಾರುತ್ತವೆ.

**ನೂರನೋದಿದರೇನು ನೂರ ಕೇಳಿದರೇನು**
**ನೂರು ನುಡಿ ಆಡಿ ಫಲವೇನು – ನಡೆವಂಥ**
**ನಡೆ ಚಂದವಿರಬೇಕು ನೋಡ.**

ಓದಿದವರೆಲ್ಲ ಮನುಷ್ಯರಾಗುವುದಿಲ್ಲ. ನೂರಾರು ಉಪನ್ಯಾಸ ಕೇಳಿದವರೆಲ್ಲ ಉದಾತ್ತರಾಗುವುದಿಲ್ಲ. ಮಾತುಗಾರಿಕೆ ಕಲಿತ ಮಾತ್ರಕ್ಕೆ ಅನುಸರಣತೆಗೆ, ಅನುಕರಣೆಗೆ ಯೋಗ್ಯರಾಗುವುದಿಲ್ಲ. ನಡತೆ ಚೆನ್ನಾಗಿರುವವನು ಮಾತ್ರ ನಿಜವಾದ ಮನುಷ್ಯನೆನಿಸಿಕೊಳ್ಳುತ್ತಾನೆ. ಚಾರಿತ್ರ ಹೀನರಿಗೆ ಯಾವ ಕಾಲದಲ್ಲೂ ಮನ್ನಣೆಯಿಲ್ಲ.

ಮನುಷ್ಯ ತನ್ನ ನಡೆನುಡಿಯಿಂದ, ಪರೋಪಕಾರ ಬುದ್ಧಿಯಿಂದ ಪುಣ್ಯ ಗಳಿಸಿಕೊಳ್ಳಬಹುದೆಂದು ಮೌಖಿಕ ಗೀತ ನಿರೂಪಿಸುತ್ತದೆ.

**ಹಸಿದವಗೆ ಉಣಿಸಿತ್ತು ಶಿಶುವಿಗೆ ಬೆಣ್ಣೆ ಕೊಟ್ಟು**
**ಬಿಸಿಲಿಗಿ ನಿಂತವರ ನೆರಳಿಗೆ–ಕರೆದರ**
**ಅಸವಲ್ಲದ ಪುಣ್ಯ ಮಗನೀಗೆ.**

ಹೊಟ್ಟೆಯ ಹಸಿವಿನ ನಿವಾರಣೆಗೆ ಆಹಾರವೇ ಮದ್ದು, ಬೇರೆಯಲ್ಲ. ಅನ್ನ ಕೊಟ್ಟವನನ್ನು ಆಯಸ್ಸಿರುವ ತನಕ ನೆನೆಯುತ್ತಾರೆ. 'ಉಪ್ಪು ಕೊಟ್ಟವನ ಮುಪ್ಪಿನವರೆಗೆ ನೆನೆ' ಎಂಬ ನಾಣ್ಣುಡಿಯಿದೆ. ಶಿಶುವಿನ ಪೋಷಣೆಗೆ ಬೆಣ್ಣೆ ಮುಖ್ಯ. ಖಾಲಿ ಹೊಟ್ಟೆಯಲ್ಲಿ ಬೆಳವಣಿಗೆ ಕುಂಠಿತ. ಬಿಸಿಲಿನಲ್ಲಿ ಬಳಲುವವನಿಗೆ ನೆರಳಿನ ಆಶ್ರಯ ನೀಡಿದರೆ ಎಷ್ಟೋ ಉಪಕಾರ ಮಾಡಿದಂತಾಗುತ್ತದೆ. ಬಿಸಿಲಿನಲ್ಲಿ ನಿಂತವರನ್ನು ನೆರಳಿಗೆ ಕರೆಯದಷ್ಟು ಹಿಂಸಾ ವಿನೋದಿಗಳು ಸಮಾಜದಲ್ಲುಂಟು. ಹಾಗಾಗ ಬಾರದು. ಪರೋಪಕಾರದಿಂದ ಅಧಿಕವಾದ ಪುಣ್ಯ ಪ್ರಾಪ್ತಿಯಾಗುತ್ತದೆ. ಪುಣ್ಯವಂತ ಜೀವನವೇ ಪರಮ ಪವಿತ್ರ ಜೀವನ. ಪಾಪಾತ್ಮ ಬಾಳು ಸಮಾಜ ಮಾನ್ಯವಲ್ಲ.

ಸಂಸಾರವೆಂಬುದು ಪ್ರಾಚೀನ ವ್ಯವಸ್ಥೆ. ಎಲ್ಲರೂ ಸಂಸಾರಸ್ಥರೇ. ಆದರೆ ಎಲ್ಲರೂ ಯಶಸ್ವಿ ಸಂಸಾರಿಗಳಲ್ಲ. ಸಂಸಾರದಲ್ಲಿ ಉದ್ಭವಿಸುವ ಅಡ್ಡಿ ಆತಂಕಗಳಿಂದ ತತ್ತರಿಸಿ ಹೋಗುವವರೇ ಹೆಚ್ಚು.

**ಸಂಸಾರವೆಂಬೂದು ಸಾಗರ ಹೊಳೆಯಪ್ಪ**
**ರಸ ಬಲ್ಲವಗೆ ಎದೆಯುದ್ದ– ನನ ಕಂದ**
**ಓದು ಬಲ್ಲವಗೆ ಕೈಲಾಸ**

ಗಂಡು ಹೆಣ್ಣು ಇಬ್ಬರಿಗೂ ಅನ್ವಯಿಸುವಂತೆ ಈ ಹಾಡನ್ನು ಬಳಸುವುದುಂಟು. ಸಂಸಾರವೆಂಬುದು ಸಾಗರಕ್ಕೆ ಸಮ. ಈಜು ಬಲ್ಲವನಿಗೆ ಸಾಗರದ ಭಯವಿಲ್ಲ. ಅದು ಎದೆಯುದ್ದದಷ್ಟೇ ಆರಾಮ. ಸಂಸಾರದ ಮರ್ಮ ತಿಳಿದವನಿಗೆ ನಿರ್ವಹಣೆಯ ಭಯವಿಲ್ಲ. ಸಂಸಾರದ ಅಂತರಂಗವನ್ನು ಓದಿಕೊಂಡರೆ ಕೈಲಾಸ ಕಂಡಷ್ಟು ಆನಂದವಾಗುತ್ತದೆ. ಇಲ್ಲದಿದ್ದರೆ ನರಕ ಸದೃಶವಾಗುತ್ತದೆ. ಈಜು ಬಲ್ಲಾತ ಸಾಗರವನ್ನು ದಾಟುವಂತೆ,

ವಿವೇಕಿಯಾದವನು ಸಂಸಾರ ಸಾಗರವನ್ನು ದಾಟಬೇಕು. ಆಗಲೇ ಸಂಸಾರಿಯಾದುದಕ್ಕೆ ಸಾರ್ಥಕತೆ.

ಇದಕ್ಕೆ ಪೂರಕವಾಗಿ ಬಸವಣ್ಣನ ವಚನವನ್ನು ಪರಿಭಾವಿಸಬಹುದು: 'ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಚೆಂಡು, ತೇಲಲೀಯದು ಗುಂಡು, ಮುಳುಗಲೀಯದು ಬೆಂಡು.'

ಮಕ್ಕಳನ್ನು ಬಯಸಿ ಪಡೆದು, ಸಾಕಿ ಸಲಹಿ ಬೆಳೆಸುವುದು ಒಂದು ಹಂತ. ಆ ಮಕ್ಕಳು ಪ್ರಾಯಸ್ಥರಾಗದ ಮೇಲೆ ಅವರಿಗೆ ಮದುವೆ ಮುಂಜಿ ಮಾಡಿ, ಸೊಸೆಯನ್ನು ಮನೆಗೆ ತುಂಬಿಸಿಕೊಳ್ಳುವುದು ಇನ್ನೊಂದು ಹಂತ. ಈ ಹಂತದಲ್ಲಿ ತಾಯಿ ತಂದೆಯರ ಮಾನಸಿಕ ನೆಮ್ಮದಿ ಹಾಳಾದರೆ, ಬದುಕು ಯಾತನಾಮಯವಾದರೆ ಆಶ್ಚರ್ಯವಿಲ್ಲ.

**ಸೊಸೆಯು ಬರುತಾಳಂತ ಖುಷಿ ಭಾಳ ಮನದಾಗ**
**ಸೊಸೆ ಬಂದು ಮಗನ ಕಸಗೊಂಡು**
**ಬಾಳ್ವಾಗ ಮುಗಿಲೀಗಿ ಬಾಯಿ ತೆರದಾಳ.**

ಮಗನ ಹೆಂಡತಿಯಾಗಿ ಸೊಸೆ ಮನೆಗೆ ಬರುವುದು ಸಂತೋಷದ ವಿಷಯವೇ. ಆದರೆ ಬಂದಂತಹ ಸೊಸೆ ತಾಯಿ ಹಾಗೂ ಮಗನನ್ನು ಪ್ರತ್ಯೇಕಿಸಿದರೆ ತಾಯಿಯಾದವಳು ಏನು ಮಾಡಬೇಕು? ಮುಗಿಲತ್ತ ಬಾಯಿ ತೆರೆದು ದುಃಖಿಸುವುದೊಂದೇ ಅವಳಗಿರುವ ದಾರಿ. ಆ ತಾಯಿಯ ನೋವು ಅವರ್ಣನೀಯ.

**ಹಾಲು ಬಾನ ಉಣಿಸಿ ಮಾರಿ ಸೆರಗಲಿ ಒರಸಿ**
**ನೀಯಾರಿಗ್ಯಾದೋ ನನ ಮಗನೆ – ಬಂದಂತ**
**ನಾರಿಗಾದ್ಯಲ್ಲೋ ಹಡದಪ್ಪ**

ಇದು ಸ್ವಗತ ಗೀತೆಯಂತಿದೆ. ಸಂಸಾರದಲ್ಲಿ ಕಾಣಸಿಕೊಂಡ ವಿಪರೀತ ಸ್ಥಿತಿಗೆ ಅನ್ನವಂತಿಲ್ಲ, ಅನುಭವಿಸುವಂತಿಲ್ಲ. ಮಗನ ಪೋಷಣೆಯ ಸಂದರ್ಭದಲ್ಲಿ ತಾಯಿ ತೋರಿದ ಪ್ರೀತಿ ಅನನ್ಯವಾದದ್ದು. ಅದನ್ನು ಮರೆತ ಮಗನ ಸ್ವಭಾವಕ್ಕಾಗಿ ವ್ಯಥೆ. ಹೆಂಡತಿ ಬಂದ ಮೇಲೆ ತಾಯಿಯನ್ನು ಅಲಕ್ಷಿಸುವ ಮಕ್ಕಳ ಗುಣವನ್ನು ಪ್ರಕೃತಿ ಸಹಜ ಎನ್ನ ಬೇಕೆ? ಕಾಲ ವಿಪರ್ಯಾಸ ಎನ್ನಬೇಕೆ? ಆಧುನಿಕ ಕಾಲದಲ್ಲಿ ಇಂಥ ಪ್ರಸಂಗಗಳು ಹೆಚ್ಚುತ್ತಿವೆ. ಅಧಿಕ ಸಂಖ್ಯೆಯಲ್ಲಿ ಹುಟ್ಟಿಕೊಳ್ಳುತ್ತಿರುವ ವೃದ್ಧಾಶ್ರಮಗಳು ಇದಕ್ಕೆ ಸಾಕ್ಷಿಯಾಗಿವೆ. ಹಿಂದೆ ಅಲ್ಲೊಂದು ಇಲ್ಲೊಂದು ಉದಾಹರಣೆ. ಇಂದು ಹಾದಿ ಬೀದಿಯಲ್ಲೆಲ್ಲಾ ಇವೆ.

ನಮ್ಮ ಸಾಂಸಾರಿಕ ವ್ಯವಸ್ಥೆಯಲ್ಲಿ ಹೆಣ್ಣು ಮಕ್ಕಳದೇ ಪ್ರತ್ಯೇಕ ಲೋಕ. ಅವಳು ಹುಟ್ಟಿದ ಮನೆ, ಕೊಟ್ಟ ಮನೆಗೆ ಬೆಳಕಾಗುವಂಥವಳು. ಅವಳ ಬಗೆಗೆ ಮನೆಯವರು ತೋರುವ ಪ್ರೀತಿ ಪ್ರಶಂಸೆ ಮಮತೆ ಕಡಮೆಯೇನೂ ಅಲ್ಲ.

**ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕೆ?**
**ಹೆಣ್ಣು ಕಂದವ್ವ ಬಳಹೊರಗು – ಓಡಾಡಿದರ**
**ಕನ್ನಡಿ ಹಂಗ ಹೊಳೆವಳು**

ಹೆಣ್ಣಾದವಳು ಹಿರಿಯರ ಕಣ್ಗಾವಲಿನಲ್ಲಿ, ಅನುಕರಣೆಯಲ್ಲಿ, ತಿಳಿವಳಿಕೆಯಲ್ಲಿ, ಲೋಕ ಜ್ಞಾನದಲ್ಲಿ ತನ್ನ ಬದುಕನ್ನು ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಹಾಗಾದರೆ ಅವಳು ಮನೆಯವರ ಪಾಲಿಗೆ ಸ್ವಚ್ಛತೆಯ ಪಾರದರ್ಶಕವಾಗುತ್ತಾಳೆ, ಕನ್ನಡಿಯ ನಿಷ್ಕಲ್ಮಶ ನಗೆಯ ಹೊಳಪಾಗುತ್ತಾಳೆ.

ಮಗಳು ಮದುವೆಯಾಗಿ ಗಂಡನ ಮನೆಗೆ ಹೊರಟಾಗ ನಾನಾ ರೀತಿಯ ಬುದ್ಧಿವಾದ ಹೇಳುವುದು ರೂಢಿ :

**ಬಾಳುವೆ ಮಾಡಿದರೆ ಬಾ ತಂಗಿ ಅಂದಾರು**
**ಬಾಳುವೆಗೆಟ್ಟು ಮತಿಗೆಟ್ಟು – ಬಾಳಿದರೆ**
**ಹೆತ್ತವರ ಕುಲಕೆ ಹಗೆಯಾದೆ.**

ಸಂಸಾರ ನಿರ್ವಹಣೆ ಸುಲಭವಲ್ಲ. ಎಲ್ಲರಿಗೂ ಅದು ಸುಲಭ ಸಾಧ್ಯವೂ ಅಲ್ಲ. ಸಂಸಾರ ಎನ್ನುವುದು ಸುಖ ದುಃಖ, ನಲಿವು ಗೆಲವು, ಒಳಿತು ಕೆಡಕು, ನಗು ಅಳುಗಳ ಮಿಶ್ರಣ. ಗಂಡನ ಮನೆಯಲ್ಲಿ ಸರೀಕರು ಒಪ್ಪುವಂತೆ ಬಾಳುವೆ ಮಾಡಬೇಕು. ಅಂಥ ಮಗಳಿಗೆ ಮನ್ನಣೆ. ಮದುವೆಯಾಗಿ ಹೋದ ಮನೆಯಲ್ಲಿ ಸರಿಯಾಗಿ ಬಾಳದೆ ಬುದ್ಧಿಗೆಟ್ಟು ಹಾಳಾದರೆ, ಅವಳ ಬದುಕು ಕೆಡುವುದಷ್ಟೇ ಅಲ್ಲ, ಹೆತ್ತವರ ಹಗೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಹಾಗಾಗಬಾರದು. ಇಲ್ಲಿ ಹೆಣ್ಣು ಆಗಬೇಕಾದ ರೀತಿಯಿದೆ. ಹೆಣ್ಣು ಬಾಳಬೇಕಾದ ಸಾಮತಿಯಿದೆ.

**ಬಂದಿದ್ದು ಬರಲವ್ವ ಎದಿಕೊಟ್ಟು ನಿಲಬೇಕು**
**ಹೆದರಿದರ ಬೆನ್ನ ಬಿಡದವ್ವ – ನನ್ನ ಮಗಳ**
**ಒದಗಿದರೆ ದುಃಖ ಒಳನುಂಗ**

ಸಂಸಾರದಲ್ಲಿ ಏನೇ ಬಂದರೂ ಧೈರ್ಯವಾಗಿ ಎದುರಿಸಬೇಕು, ಎದೆಗೊಟ್ಟು ನಿಲ್ಲಬೇಕು. ಹೆದರಿದರೆ, ಪಲಾಯನ ಮಾಡಿದರೆ, ಬೆನ್ನು ತಿರುಗಿಸಿದರೆ ಅದು ನಮ್ಮನ್ನು ಮತ್ತಷ್ಟು ಕಾಡುತ್ತದೆ. ಹೆದರುವವರಿಗೆ ಹುಲ್ಲಿನ ಹಗ್ಗವೂ ಹಾವಾಗಿ ಗೋಚರಿಸುತ್ತದೆ. ದುಃಖ ಬಂದರೆ ನುಂಗಿ ಕೊಳ್ಳುವುದು ಜಾಣತನ. ಸಂಸಾರ ಗುಟ್ಟು, ರೋಗ ರಟ್ಟು ಎಂಬ ನಾಣ್ನುಡಿ ಜ್ಞಾಪಕದಲ್ಲಿರುವುದು ಒಳ್ಳೆಯದು. ಈಸಬೇಕು ಇದ್ದು ಜೈಸಬೇಕು ಎಂಬ ದಾಸರ ನುಡಿ ಮನದಾಳದಲ್ಲಿರುಬೇಕು. ಈಸಲಾರದವಳು ನೀರಿಗೆ ಬಿದ್ದರೆ, ಬೀಸಲಾರದವಳು ರಾಗಿ ಮುಕ್ಕಂಡಳು ಎಂಬ ಗಾದೆಯ ಕುಟುಕನ್ನು ಅರ್ಥ ಮಾಡಿಕೊಳ್ಳಬೇಕು.

ಸಂಸಾರದಲ್ಲಿ ಲಭ್ಯವಾಗುವ ರಸಕ್ಷಣಗಳನ್ನು ಅನುಭವಿಸಬೇಕು. ಮೈಮರೆತರೆ ಮತ್ತೆ ಅವು ಸಿಗದೇ ಹೋಗಬಹುದು.

**ಹಡೆದವ್ವ ಆದಿ ಏನ, ಒಳಗೇನ ಮಾಡತಿ?**
**ನೋಡು ಬಾ ನನ್ನ ಮಗನಾಟ – ನನ್ನ ಮಗ**
**ನೀರಾಗ ನವಿಲ ತೆಗೆದಾನ**

ಇದು ತನ್ನ ಮಗನ ಆಟಪಾಠವನ್ನು ನೋಡಿ ಸಂಭ್ರಮಿಸುತ್ತಿರುವ ಮಗಳು ತಾಯಿಗೆ ಕೂಗಿ ಹೇಳಿದ ಪ್ರಸಂಗ. ಹೆತ್ತವಳಿಗೆ ಹೆಗ್ಗಣ ಮುದ್ದು. ಮಗ ಬಾಲ್ಯದಲ್ಲಿ ಏನು ಮಾಡಿದರೂ ಅಚ್ಚುಮೆಚ್ಚು. ಅವನ ನೀರಾಟವೂ ತಾಯಿಗೆ ಹೊಸ ಅನುಭವ. 'ನನ್ನ ಮಗ ನೀರಾಗ ನವಿಲ ತೆಗೆದಾನ' ಎಂಬ ನವೀನ ಶಬ್ದ ಚಿತ್ರ ಅತ್ಯಾಕರ್ಷಕವಾಗಿದೆ. ಅನೂಹ್ಯ ಕಲ್ಪನೆಗಳು ಗ್ರಾಮೀಣರಿಗೆ ಹೊಳೆಯುವುದು ಆಶ್ಚರ್ಯ ಹುಟ್ಟಿಸುತ್ತದೆ.

ಗಂಡ ಹೆಂಡತಿಯರಲ್ಲಿ ಪ್ರೀತಿ ವಿಶ್ವಾಸ, ಸಮಾನ ಮನೋಧರ್ಮ, ಸಾಮರಸ್ಯವಿದ್ದರೆ ಬಡತನ ಸಿರಿತನ ಮೊದಲಾದವು ಲೆಕ್ಕಕ್ಕೆ ಬರುವುದಿಲ್ಲ. ಇದ್ದುದರಲ್ಲಿ ನೆಮ್ಮದಿಯಾಗಿ ಸಂಸಾರ ಮಾಡಬಹುದು.

**ಕೂಲಿ ಮಾಡಿದರೇನ ಕೋರಿ ಹೊದ್ದರೇನ ರಾಯನ**
**ಮಗ ನಮ ರಾಯ ಬಡವೇನ**
**ಬಂಗಾರ ಮಾಲ ಇದ್ದಾಂಗ ಮುನಿಯಾಗ**

ಪ್ರೀತಿಯ ಗಂಡ ಕೂಲಿ ಮಾಡಿ ಜೀವಿಸಬಹುದು. ಹರಕು ಕಂಬಳಿಯನ್ನು ಹೊದ್ದು ಕೊಳ್ಳಬಹುದು. ಆದರೂ ಅವನನ್ನು ನಲ್ಮೆಯ ಹೆಂಡತಿ ಬಡವನೆಂದು ತಿರಸ್ಕರಿಸಲಾರಳು. ಆ ಗಂಡ ಸಾಮಾನ್ಯನಲ್ಲ, ಬಂಗಾರದ ಸರ ಮನೆಯಲ್ಲಿ ಇದ್ದ ಹಾಗೆ ಬೆಲೆ ಬಾಳುವಂಥವನು. ಹೆಣ್ಣಿನ ವಿಶಾಲ ಮನೋವೃತ್ತಿ ಇಲ್ಲಿ ವೇದ್ಯವಾಗುತ್ತದೆ.

ದಂಪತಿಗಳಿಗೆ ಮಕ್ಕಳು ಬೇಕು. ಆದರೆ ಎಷ್ಟು ಬೇಕು? ಅದಕ್ಕೆ ಇತಿ ಮಿತಿ ಇರಬೇಕು. ಮಕ್ಕಳಿರಲವ್ವ ಮನೆ ತುಂಬ ಎಂದು ಹಾಡುವ ಗರತಿಯರೂ ಇಲ್ಲದಿಲ್ಲ. ಈ ಮಹಿಳೆಯದು ಮತ್ತೊಂದು ತೆರನಾದದ್ದು :

**ಮಕ್ಕಳರ್ಥಿ ಉಳ್ಳವರಿಗೆ ಮಕ್ಕಳ ಕೊಡು ದೇವ**
**ಮಕ್ಕಳು ಸಾಕೆಂದು ತಿರಿದುಂಬ – ಬಡವರಿಗೆ**
**ಮಕ್ಕಳ ಕೊಡಬ್ಯಾಡ ಮನಿತುಂಬ**

ಮಿತ ಸಂತಾನದ ಕಲ್ಪನೆ ಹಿಂದಿನಿಂದಲೂ ಇದೆಯೆಂಬುದಕ್ಕೆ ಈ ಹಾಡು ಸಾಕ್ಷಿಯಾಗಿದೆ. ಮೊದಲೇ ಭಿಕ್ಷೆ ಬೇಡಿ ಹೊಟ್ಟೆ ಹೊರೆಯುವ ಬಡದಂಪತಿಗಳಿಗೆ ಮಿತಿಮೀರಿ ಮಕ್ಕಳಾದರೆ, ಸಂಸಾರ ನಿರ್ವಹಣೆ ದುರ್ಭರವಾಗುತ್ತದೆ. ಬಡತನ ಕಲಿಸುವ ಲೋಕಜ್ಞಾನ ಮಿಗಿಲಾದದ್ದು.

ಸಮಾಜದ ಎಲ್ಲಾ ವರ್ಗದ ಜನರಲ್ಲೂ ಆರ್ಥಿಕ ಸಮಾನತೆ ಇರಬೇಕೆಂದು ಪ್ರಜ್ಞಾವಂತ ಮಾನವಕೋಟಿ ಸದಾ ಆಶಿಸುತ್ತಿರುತ್ತದೆ. ಆದರೆ ಅದು ಎಂದೂ ಫಲಕಾರಿಯಾಗಿಲ್ಲ. ನಾನಾ ಕಾರಣಗಳಿಂದ ಶ್ರೀಮಂತ, ಬಡವ ಎಂಬ ಭೇದ ಢಾಳಾಗಿ ಕಾಣಿಸುತ್ತಲೇ ಇದೆ. ಇದರಿಂದ ಮನುಷ್ಯರಲ್ಲಿ ತರತಮ ಭಾವನೆಯೂ ಉಂಟಾಗುತ್ತಿರುತತದೆ. ಇದು ಮೌಖಿಕ ಗೀತೆಯ ಮನಸ್ಸಿಗೆ ಹಿಡಿಸುವುದಿಲ್ಲ.

**ಬಂಗಾರ ಬಳಿಯಿದೆ, ಬೈಬ್ಯಾಡ ಬಡವರಿಗೆ**
**ಬಂಗಾರ ನಿನಗೆ ಸ್ಥಿರವಲ್ಲ – ಮಧ್ಯಾಹ್ನ**
**ಬಿಸಿಲು ಹೊಳ್ಳುವುದು ತಡವಲ್ಲ**

ಸಾಮಾನ್ಯವಾಗಿ ಶ್ರೀಮಂತಿಕೆ ದೀರ್ಘಕಾಲ ಅಂದರೆ ತಲೆಮಾರಿನಿಂದ ತಲೆಮಾರಿಗೆ ಮುಂದುವರಿಯುವುದು ಅಪರೂಪ. ಇಂದು ಶ್ರೀಮಂತವಾಗಿದ್ದವನು ನಾಳೆ ಬಡವನಾಗುವುದು ಆಶ್ಚರ್ಯವೇನಲ್ಲ. ಅಂದ ಮಾತ್ರಕ್ಕೆ ಸಿರಿತನ ಶಾಶ್ವತವಾಗಿರುವುದೆಂದು ಭ್ರಮಿಸಿ, ಬಡವರನ್ನು ನಿಕೃಷ್ಟವಾಗಿ ಕಾಣಬಾರದು; ಅವರನ್ನು ಹೀನಾಯವಾಗಿ ಟೀಕಿಸಬಾರದು. ಏಕೆಂದರೆ ಮಧ್ಯಾಹ್ನದ ಬಿಸಿಲಿನ ಹಾಗೆಯೇ ಸಿರಿತನವೂ ಬದಲಾಗಬಹುದು ಎಂಬುದು ಇಲ್ಲಿನ ಗೂಢಾರ್ಥ. ಇಲ್ಲಿ ಸಿರಿತನದ ಟೀಕೆಯಿದೆ; ಬಡತನದ ಸಹನೆಯಿದೆ.

ಮೌಖಿಕ ಗೀತಗಳು ಬಡತನದ ತೀವ್ರತೆಯನ್ನು ಇನ್ನಿಲ್ಲದಂತೆ ವರ್ಣಿಸಿವೆ. ಸಾಮಾಜಿಕ ಕಟ್ಟುಪಾಡುಗಳು ರೂಪಾಂತರಗೊಂಡಾಗ ಅವು ಎಲ್ಲರಿಗೂ ಸಹ್ಯವಾಗಿರುತ್ತವೆ ಎಂದು ಹೇಳಲಾಗುವುದಿಲ್ಲ. ಶವಗಳನ್ನು ಹೂಳುವ ಪದ್ಧತಿಯಿಂದ ಸುಡುವ ಪದ್ಧತಿಗೆ ಸಂಸ್ಕೃತೀಕರಣಗೊಂಡಾಗ ಅದಕ್ಕೆ ಕಡುಬಡವರು ಹೊಂದಿಕೊಳ್ಳುವುದಕ್ಕೆ ಕಷ್ಟವಾಯಿತು. ಅಂತಹ ಒಂದು ಅಭಿವ್ಯಕ್ತಿ ಹೀಗಿದೆ:

**ಬಡವರು ಸತ್ತಾರೆ ಸುಡಲೀಕೆ ಸೌದಿಲ್ಲ**
**ಒಡಲ ಬೆಂಕೀಲಿ ಹೆಣ ಬೆಂದೋ – ದೇವರೆ**
**ಬಡವರಿಗೆ ಸಾವು ಕೊಡಬ್ಯಾಡ**

ಸತ್ತವನನ್ನು ಸುಡುವುದಕ್ಕೂ ಸೌದೆಯಿಲ್ಲದಷ್ಟೂ ಕ್ರೂರ ಬಡತನದ ಬೇಗೆಯಲ್ಲಿರುವ ಸಂಸಾರದ ಚಿತ್ರ, ಬಡತನದ ಭಯಂಕರತೆಯನ್ನು ಇದಕ್ಕಿಂತ ಮೇಲಾದ ಶಬ್ದ ಚಿತ್ರದಿಂದ ವರ್ಣಿಸಲಾಗುವುದಿಲ್ಲ. ಒಡಲ ಬೆಂಕೀಲಿ ಹೆಣಬೆಂದೊ' ವರ್ಣನೆ ಊಹಾತೀತ. 'ಬಡವರಿಗೆ ಸಾವು ಕೊಡಬೇಡ' ಎಂದು ದೇವರಿಗೆ ಮೊರೆಯಿಡುವುದು ಅಸಹಾಯಕತೆಯ ಪರಮಾವಧಿ. ಆದರೆ ಸಾವಿಗೆ ಬಡವ ಬಲ್ಲಿದ ಎಂಬ ಭೇದವಿಲ್ಲ.

ವಿಧವಾ ಸಮಸ್ಯೆ ನಮ್ಮ ಸಮಾಜದ ಭಯಂಕರ ಪಿಡುಗುಗಳಲ್ಲಿ ಒಂದು. ಪ್ರಾಚೀನ ಕಾಲದಿಂದಲೂ ಅದು ಸುಡುಬೆಂಕಿಯಾಗಿ ಕಾಡುತ್ತಿದೆ. ಮೌಖಿಕ ಸಂಸ್ಕೃತಿಯಲ್ಲಿ ವಿಧವೆಗೆ ಪುನರ್ವಿವಾಹದ ಅವಕಾಶವಿದ್ದರೂ ಆಕೆ ಅವಮಾನಕ್ಕೆ ಗುರಿಯಾಗುವುದುಂಟು. ಗಂಡನ ಸಾವಿಗೆ ಅವಳೇ ಕಾರಣಳೇನೋ ಎಂಬ ಅಪಕೀರ್ತಿಗೂ ಒಳಗಾಗಬೇಕಾಗುತ್ತದೆ.

**ಗಂಡ ಸತ್ತವ್ಗಗ ರಂಡೆ ಮುಂಡೆನಬೇಡ**
**ಕಂದನ ಹಿಡಿದು ತಪಹಾಳ – ಅವಳಿಗೆ**
**ಗಂಗಾದೇವೆಂದು ಕರಿಬೇಕ**

ಕಾರಣಾಂತರಗಳಿಂದ ಗಂಡ ಸತ್ತರೆ, ವಿಧವೆಯನ್ನು ರಂಡೆ ಮುಂಡೆ ಅನ್ನಬಾರದು. ಆಕೆ ಗಂಡನಮ್ಮ ಕಳೆದುಕೊಂಡು ಹಸುಗೂಸನ್ನು ಹಿಡಿದುಕೊಂಡು ಅದನ್ನು ಸಾಕಿ ಸಲಹಲು ತಪಸ್ಸು ಮಾಡುತ್ತಿದ್ದಾಳೆ. ಅವಳಿಗೆ ಧೈರ್ಯ ಹೇಳಬೇಕು, ಪ್ರೋತ್ಸಾಹ ನೀಡಬೇಕು. ಅವಳು ಎಲ್ಲರಂತೆ ಬದುಕಲು ಅವಕಾಶ ಕಲ್ಪಿಸಬೇಕು. ಅವಳನ್ನು ಗೌರವದಿಂದ ಗಂಗಾದೇವಿ ಎನ್ನಬೇಕು. ಏಕೆಂದರೆ ಆಕೆ ಗಂಗೆಯಷ್ಟೇ ಪವಿತ್ರಳು, ಪರಿಶುದ್ಧಳು. ಗಂಡನ ಸಾವೇ ಅವಳ ಬದುಕಿಗೆ ಕೊನೆಯಾಗಬಾರದು.

ಗ್ರಾಮೀಣ ಸಂಸ್ಕೃತಿಯಲ್ಲಿ ಸ್ತ್ರೀಯ ಪಾತ್ರ ದೊಡ್ಡದು. ಅವಳು ಸಹನಾಮೂರ್ತಿಯಾದರೂ ತ್ಯಾಗಶೀಲೆಯಾದರೂ ಶೋಷಣೆಗೆ ತುತ್ತಾದಾಗ ಸೌಮ್ಯವಾಗಿಯೋ ಉಗ್ರವಾಗಿಯೋ ಪ್ರತಿಭಟಿಸಿ ತನ್ನ ಸ್ವಾಭಿಮಾನವನ್ನು ಕಾದಿರಿಸಿಕೊಳ್ಳುವುದುಂಟು.

**ಕರಿಯ ಹೆಂಡತಿಯೆಂದು ಕಿರಿಕಿರಿ ಮಾಡಬ್ಯಾಡ**
**ಹರ ಕೊಳ್ಳೋ ನಿನ್ನ ಗುಳದಾಳಿ – ತವರೂರು**
**ರೈತರ ಮಗಳಾಗಿ ಇರತೇನೋ**

ಸ್ತ್ರೀ ಪುರುಷರ ಕಪ್ಪು ಮೈಬಣ್ಣ ನಾನಾ ಕಾರಣಗಳಿಂದ ಕೀಳರಿಮೆಗೆ ಅವಕಾಶ ನೀಡಿದೆ. ಬಿಳುಪು ಶ್ರೇಷ್ಠ, ಕಪ್ಪು ಕನಿಷ್ಠ ಎಂಬ ತಪ್ಪು ಕಲ್ಪನೆ ಹೇಗೋ ತಲೆಹಾಕಿದೆ. ಕಪ್ಪು ಮೈಬಣ್ಣವನ್ನೇ ನೆಪಮಾಡಿಕೊಂಡು, ಕೈಹಿಡಿದ ಹೆಂಡತಿಗೆ ಕಿರುಕೊಳ ಕೊಡಲಾರಂಭಿಸಿದಾಗ ಆಕೆ ಪ್ರತಿಭಟಿಸಿ, ನೀನು ಕಟ್ಟಿರುವ ಕೊರಳ ಮಾಂಗಲ್ಯವನ್ನು ಬೇಕಾದರೆ ಕಿತ್ತುಕೋ ನಿನ್ನ ಆಶ್ರಯ ತಪ್ಪಿದರೂ ನಾನು ತೌರಿನಲ್ಲಿ ರೈತನ ಮಗಳಾಗಿ ಬದುಕುತ್ತೇನೆ ಎಂದು ದಿಟ್ಟವಾಗಿ ಹೇಳುತ್ತಾಳೆ. ದುಡಿಮೆಯಿಂದ ಬಾಳುವ ಹೆಣ್ಣಿಗೆ ಮಾತ್ರ ಇಂಥ ಛಲಹುಟ್ಟುತ್ತದೆ.

ಸಂಸಾರಸ್ಥ ಗಂಡು ಹೆಣ್ಣಿನ ವಿರಸಕ್ಕೆ, ವಿವಾಹ ವಿಚ್ಛೇದನಕ್ಕೆ ಹಲವು ಕಾರಣಗಳಿರುತ್ತವೆ. ಅವು ಸಹಜವಾಗಿರಬಹುದು ಅಥವಾ ಕೃತಕವಾಗಿರಬಹುದು. ಅಂಥ ಸಂದರ್ಭಗಳಲ್ಲಿ ಹೆಣ್ಣು ಹೆಚ್ಚಿನ ತೊಂದರೆಗೆ ಸಿಕ್ಕಿಕೊಳ್ಳುತ್ತಾಳೆ. ಗಂಡ ಹೆಂಡತಿ ದೂರವಾಗುವ ಸಂರ್ಭಗಳಲ್ಲಿ ಹೆಣ್ಣು ಹೆಚ್ಚಿನ ತೊಂದರೆಗೆ ಸಿಕ್ಕಿಕೊಳ್ಳುತ್ತಾಳೆ. ಗಂಡ ಹೆಂಡತಿ ದೂರವಾಗುವ ಸಂದರ್ಭವೊಂದು ಒದಗಿದಾಹ ವಿವಾಹಿತ ಮಹಿಳೆಯೊಬ್ಬಳ ಪ್ರತಿಭಟನೆ ಹೀಗಿದೆ :

**ಬಾಳೆಯ ಕಡಿದಾರೆ ತೋಟ ಹಾಳಾಗಬಲ್ಲದೇ**
**ಬಾಳೀಸಲಾರದೆ ಮಡದೀಯ – ಬಿಟ್ಟರೆ**
**ಬಾಳೆ ಹಣ್ಣೇನೆ ಕೊಳಿಯಾಕೆ?**

ಬಾಳೆಯ ಬದುಕೇ ಕುತೂಹಲಕಾರಿಯಾದದ್ದು. ಬಾಳೆಗಿಡದ ಸುತ್ತಲೂ ಹತ್ತಾರು ದಸಿಗಳು ಹುಟ್ಟುತ್ತಲೇ ಇರುತ್ತವೆ. ಒಂದು ಬಾಳೆಗಿಡವನ್ನು ಕಡಿದರೆ ಮತ್ತೊಂದು ದಸಿ ಬೆಳೆದು ದೊಡ್ಡದಾಗುತ್ತದೆ. ಬಾಳೆಯ ಸಂತಾನಕ್ಕೆನೂ ನಷ್ಟವಾಗುವುದಿಲ್ಲ. ಕ್ಷುಲ್ಲಕ ಕಾರಣಕ್ಕೆ ಹೆಂಡತಿಯಿಂದ ದೂರವಾಗುವ ಗಂಡನಿಗೆ ಆಕೆ ಬಾಳೆಯ ಸಂಕೇತದಲ್ಲಿ ಉತ್ತರಿಸಿದ್ದಾಳೆ. ಬಾಳಿಸಲಾರದೆ ಹೆಂಡತಿಯನ್ನು ಬಿಟ್ಟು ಬಿಟ್ಟರೆ ನಾನೇನು ಬಾಳೆಯ ಹಣ್ಣಿನ ಹಾಗೆ ಕೊಳೆತು ಹೋಗುವುದಿಲ್ಲ. ಇನ್ನೊಂದು ಸಂಸಾರ ಹೂಡುವ ಕಸುವು, ಛಲವು ತನ್ನಲ್ಲಿದೆಯೆಂದು ಸವಾಲು ಎಸೆಯುತ್ತಾಳೆ.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ, ಸಾಂಸಾರಿಕ ಕಟ್ಟು ಪಾಡುಗಳಲ್ಲಿ ಹೆಣ್ಣಿಗೆ ಎಷ್ಟೋ ಗೌರವ ಸ್ಥಾನಮಾನಗಳಿದ್ದರೂ ಅವಳು ಅನುಭವಿಸುವ ನೋವಿಗೆ ಲೆಕ್ಕವಿಲ್ಲ. ಅದನ್ನು ಸಹಿಸಲಾರದವಳು ಸಂಬಂಧಿಸಿದವರಿಗೆ ಶಾಪಹಾಕಬಹುದು. ಅಥವಾ ಅವಳ ಗೋಳೇ ಶಾಪವಾಗಿ ಪರಿಣಮಿಸಬಹುದು. ಅದರ ತೀವ್ರತೆ ಊಹಾತೀತವಾಗಿರುತ್ತದೆ.

**ಹೆಣ್ಣೀನ ಗೋಳ್ಹತ್ತಿ ಬನ್ನಿಯ ಮರಬೆಂದೊ**
**ಅಲ್ಲಿ ಸನ್ಯಾಸಿ ಮಠ ಬೆಂದೋ – ಹಾರವ್ರ**
**ಪಂಚಾಂಗ ಕತ್ತಿ ಉರಿದಾವೋ**

ಎಲ್ಲಾ ಸಮರಸವಾಗಿದ್ದರೆ ಹೆಣ್ಣು ಮಂಗಳ ಗೌರಿ ಆಯತಪ್ಪಿದರೆ ರುದ್ರಕಾಳಿ. ಸಹನೆಯ ಕಟ್ಟೆ ಒಡೆದಾಗ ಗೋಳಿನ ದಾವಾನಿಲ ಬಿರುಗಾಳಿಯಂತೆ ಹರಡುತ್ತದೆ; ಸಿಕ್ಕಿದ್ದನ್ನೆಲ್ಲ ಸುಡುತ್ತದೆ. ಅಸಹಾಯಕ ಹಾಗೂ ಶೋಷಿತ ಹೆಣ್ಣಿನ ಸಿಟ್ಟು ಹೀಗೆಂದು ಹೇಳಲಾಗುವುದಿಲ್ಲ. ಅದರಿಂದ ಪವಿತ್ರವಾದ, ಪೂಜಾರ್ಹವಾದ ಬನ್ನಿಯ ಮರವೂ ಬೆಂದು ಹೋಗುತ್ತದೆ. ಸನ್ಯಾಸಧರ್ಮವನ್ನು ಬಿಟ್ಟು ಅಡ್ಡ ಹಾದಿ ಹಿಡಿದ ಸನ್ಯಾಸಿಯ ಮಠವೂ ಭಸ್ಮವಾಗುತ್ತದೆ. ಅಷ್ಟೇ ಅಲ್ಲ ಹೆಣ್ಣಿಗೆ ಮಾರಕವಾಗುವ ಕಣಿ ಹೇಳಿ ಹಿಂಸಿಸುತ್ತಿದ್ದ ಹಾರುವನ ಪಂಚಾಂಗವೂ ಹೊತ್ತಿಕೊಂಡು ಉರಿಯುತ್ತದೆ. ಈ ಶೋಷಿತ ಸ್ತ್ರೀಯ ಪ್ರತಿಭಟನೆ ಮಾರ್ಮಿಕವಾಗಿದೆ; ಅತ್ಯುಗ್ರವಾಗಿದೆ.

'ತಾಯಿ ಶಾಪವೋ ನಾಯಿ ಶಾಪವೋ', 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ' ಎಂಬ ನಾಣ್ನುಡಿಗಳನ್ನು ಇದಕ್ಕೆ ಪೂರಕವಾಗಿ ವಿವೇಚಿಸಬಹುದು.

ಮನುಕುಲಕ್ಕೆ ಅರಿವು ಬಂದಂದಿನಿಂದ ಬದುಕಿನ ಬಗೆಗೆ ಏನೆಲ್ಲ ಕಲ್ಪಿಸಿದೆ. ಹೀಗೇ ಸರಿಯೆಂದು ವಿವರಿಸಿದೆ. ಆದರೆ ಬದುಕಿನ ಅಘಟಿತ ಘಟನೆಗಳ, ಆಕಸ್ಮಿಕ ತಿರುವುಗಳ ಬಗೆಗೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ. ನಡೆದ ಮೇಲೆ ಹಾಗೆ ಹೀಗೆ ಎಂದು ಸಾವಿರ ಹೇಳಬಹುದು. ಅದರಿಂದೇನು ಫಲ?

**ಬರುವಾಗ ತರಲಿಲ್ಲ ಹೋಗುವಾಗ ಕೊಂಡೋಗಲಿಲ್ಲ**
**ಲೋಕದಾಗೆ ಸುಮ್ಮಾಗೆ ಇರಲಿಲ್ಲ – ಈ ಜನುಮಾಕೆ**
**ಏನೇನೋ ತಿರುವ ಮಡಗವನೆ.**

ಮನುಕುಲ ಬಹಳ ಮುತುವರ್ಜಿಯಿಂದ, ಬುದ್ಧಿವಂತಿಕೆಯಿಂದ, ಹೆಬ್ಬಯಕೆಯಿಂದ, ಹೆಚ್ಚಳದಿಂದ

ಬದುಕು ಮಾಡುತ್ತಿದೆ. ಅನಿಶ್ಚಯದ ಬಗೆಗೆ ನೆನೆಸದೆ, ಶಾಶ್ವತತೆಯ ನಂಬಿಕೆಯಿಂದ ಬಾಳು ಕಟ್ಟುತ್ತದೆ. ಅಂತ್ಯದಲ್ಲಿ ನಿಂತು ಹಿಂದಿನ ಪುಟಗಳನ್ನು ಮಗುಚಿಹಾಕಿದಾಗ ನಿರಾಶೆ ವಿಸ್ಮಯ, ವಿಷಾದ ಹುಟ್ಟುತ್ತದೆ.

ಭೂಮಿಗೆ ಬೆತ್ತಲೆ ಬರುವ ಮನುಷ್ಯ ಏನನ್ನೂ ತರುವುದಿಲ್ಲ. ಭೂವ್ಯಾಪಾರ ಮುಗಿಸಿ ಹಿಂದಿರುಗುವಾಗ ಏನನ್ನೂ ತೆಗೆದುಕೊಂಡು ಹೋಗುವುದಿಲ್ಲ. ಆಗಲೂ ಬೆತ್ತಲೆಯ ಪಯಣವೇ. ಆದರೆ ಬದುಕು ಮಾಡುವಾಗ ಎಲ್ಲವೂ ತಾನೇ, ಎಲ್ಲವೂ ತನ್ನಿಂದಲೇ ಎಂಬಂತೆ ನಡೆದುಕೊಳ್ಳುತ್ತಾನೆ. ಅಂತಹ ಜನ್ಮಕ್ಕೆ ಊಹಾತೀತವಾದ 'ತಿರುವು' ಸಂಭವಿಸುತ್ತದೆ, ಅಂತ್ಯ ಕಾಣುತ್ತದೆ. ಅದು ಯಾರೂ ಅರಿಯದ ಬೆರಗಾಗಿರುತ್ತದೆ.

ಮನುಕುಲವನ್ನು ಬಹಳವಾಗಿ ಕಾಡಿರುವ ವಿಷಯಗಳಲ್ಲಿ ಸಾವೂ ಕೂಡ ಒಂದು. ಹುಟ್ಟು ಮತ್ತು ಸಾವು ಸಹಜವೂ ಹೌದು, ಆಕಸ್ಮಿಕವೂ ಹೌದು. ಹುಟ್ಟಿ ನೊಡನೆಯೇ ಸಾವು ಜೊತೆಗೂಡಿರುತ್ತದೆ. ಸಾವನ್ನು ಒಟ್ಟಿಗಿಟ್ಟುಕೊಂಡೇ ಬದುಕು ಸಾಗುತ್ತದೆ. ಮೌಖಿಕ ಗೀತ ಸಂಸ್ಕೃತಿ ಸಾವಿನ ಬಗೆಗೆ ನಾನಾ ರೀತಿಯಲ್ಲಿ ಚಿಂತಿಸಿದೆ. ಕನ್ನಡ ಕುಲ ಕೋಟಿಯಲ್ಲಿ ಸಾವಿಗೆ ಸಂಬಂಧಿಸಿದ ಹಲವು ಲೋಕಗೀತಗಳು ಜನಪ್ರಿಯವಾಗಿವೆ. ಅವುಗಳಲ್ಲಿ 'ಜವರಾಯ' ಲಘು ಕಥನ ಗೀತೆ ಗಮನಾರ್ಹವಾಗಿದೆ.

**ಜವರಾಯ ಬಂದಾರೆ ಬರಿಕೈಲಿ ಬರಲಿಲ್ಲ**
**ಕುಡುಗೋಲು ಕೊಡಲಿ ಹೆಗಲೇರಿ – ಜವರಾಯ**
**ಒಳ್ಳೊಳ್ಳೆ ಮರನ ಕಡಿ ಬಂದ**
**ಫಲ ಬಿಟ್ಟ ಮರನ ಕಡಿ ಬಂದ.**

ಸಾವಿನ ಆಗಮನವೇ ವಿಶಿಷ್ಟ ರೀತಿಯಲ್ಲಿರುತ್ತದೆ. ಜವರಾಯನ ಸಿದ್ಧತೆಯೂ ಭಿನ್ನ. ಅವನು ಬಲಿ ತೆಗೆದುಕೊಳ್ಳುವುದು ಉತ್ತಮವಾದುದನ್ನೇ. ಕುರಿದೊಡ್ಡಿಗೆ ನುಗ್ಗಿದ ಕಳ್ಳನು ಬಡಕಲು ಕುರಿಯನ್ನು ಕದಿಯುವುದಿಲ್ಲ; ಕೊಬ್ಬಿದ ಕುರಿಯನ್ನೇ ಕದಿಯುತ್ತಾನೆ. ಹಾಗೆಯೇ ಸಾವಿನ ಅಧಿಪತಿ ಯಮಧರ್ಮರಾಯ ತನ್ನ ಆಯುಧದಿಂದ ಫಲ ಬಿಟ್ಟ ಒಳ್ಳೆಯ ಮರವನ್ನು ಕಡಿಯುತ್ತಾನೆ. ಅಂದರೆ ಅತ್ಯುತ್ತಮ ಜೀವಗಳನ್ನೇ ಬಲಿ ತೆಗೆದುಕೊಳ್ಳುತ್ತಾನೆ. ಏಕೆ ಹೀಗೆಂದು ಕೇಳುವವರಿಲ್ಲ. ಈ ವಿಷಯದಲ್ಲಿ ಅವನದೇ ಅಂತಿಮ ತೀರ್ಮಾನ, ಅವನೇ ಸರ್ವಾಧಿಕಾರಿ.

ಯಮಧರ್ಮರಾಯ ತೆಗೆದುಕೊಳ್ಳುವ ನಿರ್ಧಾರ ಅವನ ಮಟ್ಟಿಗೆ ಸರಿಯಿರಬಹುದು. ಆದರೆ ಬಾಳಾಟ ಮಾಡುವವರಿಗೆ ನೋವಿನ ಸಂಗತಿಯಾಗಿರುತ್ತದೆ. ಸಾವಿಗೆ ಹೊತ್ತು ಗೊತ್ತಿಲ್ಲ. ಆಯಸ್ಸು ಪ್ರಮಾಣವಿಲ್ಲ. ಪ್ರಾಯಸ್ಥರೂ ದೃಢಕಾಯರೂ ಆರೋಗ್ಯವಂತರೂ ಇನ್ನೂ ಬಾಳಬೇಕಾದವರೂ ಮಹಾಜ್ಞಾನಿಗಳೂ ಮಹಾತ್ಮರೂ ಬಲಿಯಾಗಬಹುದು. ಹಾಗೆ ತಾರತಮ್ಯ ಕಂಡಾಗ ಒಬ್ಬ ಗ್ರಾಮೀಣ ಮಹಿಳೆ ಹೀಗೆ ಸಿಡುಕಿದ್ದಾಳೆ, ಶಾಪ ಹಾಕಿದ್ದಾಳೆ.

**ಒಬ್ಬಳನ್ನು ಅಳಿಸೀದ, ಒಬ್ಬಳನ್ನು ನಗಿಸೀದ**
**ಇಬ್ಬಂದಿಕಾರ ಜವರಾಯ್ನ – ಮಗ್ಗುಲಿಗೆ**
**ನೆಗ್ಗಲು ಮುಳ್ಳು ಮುರಿಯಲಿ !**

ಸಮಾನ ವಯಸ್ಸಿನ ಇಬ್ಬರು ಸಂಸಾರಸ್ಥರಲ್ಲಿ ಒಬ್ಬಳು ಗಂಡನನ್ನು ಕಳೆದುಕೊಂಡು ಅಳುವಂತಾದರೆ, ಇನ್ನೊಬ್ಬಳು ಗಂಡನ ಸಹಿತ ನಗುವಂತಾದರೆ ಏನು ಮಾಡಬೇಕು? ಅಂಥ ವಿಷಮ ಪರಿಸ್ಥಿತಿಗೆ ಯಾರು ಕಾರಣ? ಎರಡು ಬಗೆಯುವ, ಇಬ್ಬಂದಿಕಾರ ಯಮನಲ್ಲದೆ ಮತ್ತಾರು? ಅವನು ಸಾವು ನೀಡುವುದಕ್ಕೆ ನ್ಯಾಯ ಸಮ್ಮತವಾದ ಪ್ರಮಾಣ ಬೇಡವೆ? ನಿರ್ದಯಿಯಾದ ಅವನ ಮಗ್ಗುಲಿಗೆ ನೆಗ್ಗಲು ಮುಳ್ಳು ಮುರಿದರೆ ಒಳ್ಳೆಯದು! ಅಸಹಾಯಕ ಹೆಣ್ಣಿನ ನೋವಿನ ಉಪಶಮನ ಶಾಪವಾಗಿ ಪರಿಣವಿಸಿದೆ.

ಹಾಗೆಂದು ಸಾವಿನ ಅನಿವಾರ್ಯತೆ ಮೌಖಿಕರಿಗೆ ಗೊತ್ತಿಲ್ಲ ಎಂದಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಈ ಹಾಡು ಸಾವನ್ನು ಕುರಿತು ಹೀಗೆ ವ್ಯಾಖ್ಯಾನಿಸಿದೆ.

**ನಿದ್ದಿಗಿ ಮದ್ದುಂಟೆ? ಬುದ್ದಿಗೆ ಕೇಡುಂಟೆ?**
**ಇದ್ಯ ಬಲ್ಲವಗೆ ಭಯವುಂಟೆ – ದೇವರೆ**
**ಮದ್ದುಂಟೆ ಜನನ ಮರಣಕ್ಕೆ?**

ನಿದ್ದೆ ಪ್ರಕೃತಿ ಸಹಜವಾದದ್ದು. ಅದನ್ನು ತಡೆಗಟ್ಟುವುದಕ್ಕೆ ಆಗುವುದಿಲ್ಲ. ಬುದ್ಧಿಯಿದ್ದರೆ ಕೇಡಿಲ್ಲ. ಮನುಕುಲದ ವಿಕಾಸಕ್ಕೆ ಬುದ್ಧಿಯೇ ಕಾರಣ. ವಿದ್ಯೆಯಿದ್ದರೆ ಬದುಕಲು ಭಯವಿಲ್ಲ. ಆದರೆ ಜನನ ಮರಣಕ್ಕೆ ಮದ್ದಿಲ್ಲ. ಅದು ಅನಿವಾರ್ಯ ಕ್ರಿಯೆ. ಅದನ್ನು ನಿವಾರಿಸಲು ಸಾಧ್ಯವಿಲ್ಲ. ಸ್ವೀಕರಿಸಿ ಅನುಭವಿಸಬೇಕು.

ಪ್ರಕೃತಿಯ ಸಹಜಕ್ರಿಯೆಯಂತೆ ಸಾವು ಸಂಭವಿಸುತ್ತದೆ. ಸಾವಿಗೆ ಒಳಗಾದವನು ವಿಧಿನಿಯಮದಂತೆ ವರ್ತಿಸಬೇಕಾಗುತ್ತದೆ. ಸಾವನ್ನು ತಪ್ಪಿಸುವುದಕ್ಕಗುವುದಿಲ್ಲ. ಸತ್ತವನು ಮರಳಿ ಬದುಕಿ ಬರುವುದಕ್ಕಾಗುವುದಿಲ್ಲ.

**ಮಾಗೀನೆ ತಿರುಗ್ಯಾವು ಮಳೆಗಾಲ ತಿರುಗ್ಯಾವು**
**ಹೋವ ಬ್ಯಾಸೀಗೆ ತಿರುಗ್ಯಾವು – ಕಂದಯ್ಯ**
**ಸಗ್ಗಕ್ಹೋದವನು ತಿರುಗಾನು.**

ಪ್ರಾಕೃತಿಕ ಋತುಮಾನದಲ್ಲಿ ಮಾಗಿಕಾಲ ಬರುತ್ತೆ, ಹೋಗುತ್ತೆ. ಹಾಗೆಯೇ ಮಳೆಗಾಲ, ಬೇಸಿಗೆ ಕಾಲ ಬದಲಾಗುತ್ತವೆ, ಮರಳಿ ಬರುತ್ತವೆ. ಆದರೆ ಸತ್ತು ಸ್ವರ್ಗಕ್ಕೆ ಹೋದವನು ಮತ್ತೆ ಹಿಂದಿರುಗಿ ಬರುವುದಿಲ್ಲ. ವಿಷಾದ ಛಾಯೆಯನ್ನು ನಿರ್ಲಿಪ್ತ ಭಾವದಲ್ಲಿ, ನಿರ್ಣಾಯಕ ನಿಲವಿನಲ್ಲಿ ಮೌಖಿಕಗೀತೆ ಸಾರ್ವತ್ರಿಕ ಷರಾ ಬರೆದಿರುವುದು ಕುತೂಹಲಕಾರಿಯಾಗಿದೆ.

ಮೌಖಿಕ ಗೀತ ಪ್ರಕಾರದಲ್ಲಿ ತತ್ತ್ವಪದಕಾರರದೇ ಪ್ರತ್ಯೇಕ ಪ್ರಪಂಚ. ಅವರು ಸದಾಕಾಲ ಆಧ್ಯಾತ್ಮಿಕ

ನೆಲೆಯಲ್ಲೇ ವಿಹರಿಸುತ್ತಾರೆ. ಅವರ ಪಾರಿಭಾಷಿಕ ಸಾಂಕೇತಿಕ ಪರಿಕಲ್ಪನೆಯೂ ಭಿನ್ನ. ನಿಗೂಢ ವಿಷಯವನ್ನು ಇನ್ನಷ್ಟು ನಿಗೂಢವಾಗಿ ಪ್ರತಿಮಿಸುವುದು ಅವರ ವಿಶೇಷ. ಅವರ ಇಹಪರ ತಿಳಿವಳಿಕೆಯೂ ಮೌಲಿಕವಾಗಿದೆ. ಹಂಸ ಪಕ್ಷಿಯನ್ನು ಪ್ರಾಣಕ್ಕೆ ಅನ್ವಯಿಸಿ ಸಾವಿನ ಲೀಲೆಯನ್ನು ಹಾಡಾಗಿಸಿರುವುದು ಚೋದಿಗವಾಗಿದೆ.

**ತನುವಿನೊಳಗನುದಿನವಿದ್ದು**
**ತನ್ನ ಮನಕೊಂದು ಮಾತ ಹೇಳದೆ ಹೋದೆ ಹಂಸ ॥ಪಲ್ಲವಿ॥**

**ಹಳ್ಳಕೊಳ್ಳದ ಮಧ್ಯೆ ತಂಪಿನ ಬಳ್ಳಿ ಹುಟ್ಟಿ**
**ಬಳ್ಳಿಯ ಹಣ್ಣು ನೆಲಕುದುರಿ ಹೋಗುವಾಗ**
**ತನ್ನ ಬಳ್ಳಿಗೊಂದು ಮಾತೇಳದೆ ಹೋದೆ ಹಂಸ.**

**ಕಾಯದ ಕೊಂಬೆ ಮೇಲೆ ಮಾಯದ ಗಿಳಿ ಕುಳಿತು**
**ಕಾಯುವ ಬಿಟ್ಟು ಗಿಳಿಹಾರಿ ಹೋಗುವಾಗ**
**ತನ್ನ ಕಾಯಕೊಂದು ಮಾತೇಳದೆ ಹೋದೆ ಹಂಸ.**

**ಗಾಳಿ ಪಂಜರದಂತೆ ಮಾಳಿಗೆ ಮಾಡಿ**
**ಗಾಳಿಯು ಬೀಸಿ ಎಲೆ ತೂರಿ ಹೋಗುವಾಗ**
**ತನ್ನ ಗಾಳಿಗೊಂದು ಮಾತೇಳದೆ ಹೋದೆ ಹಂಸ.**

**ಕಾರೆಂಬ ಕತ್ತಲಲ್ಲಿ ಭೋರೆಂಬ ಮಳಿ ಸುರಿದು**
**ಕೆರೆ ಕಟ್ಟಿ ಬಯಲಾಗಿ ಹೋಗುವ ಕಾಲಕ್ಕೆ**
**ಬಯಲಿಗೊಂದು ಮಾತೇಳದೆ ಹೋದೆ ಹಂಸ.**

**ಅಡ್ಡ ಗೊಡ್ಡಾರಣ್ಯ ಇಟ್ಟೆಡೆ ಮೆಳೆಯೊಳು**
**ಜೇನು ತನ್ನ ಸವಿಗಾಗಿ ಎಲೆ ಜೀವವೆ**
**ತುಪ್ಪವ ಸವಿದುಂದು ಹುಳು ಹಾರಿ ಹೋಗುವಾಗ**
**ತನ್ನ ಹಿಪ್ಪೆಗೊಂದು ಮಾತೇಳದೆ ಹೋದೆ ಹಂಸ.**

**ನೀರುಳ್ಳ ಕೆರೆಯನು ಏರಿಯ ತಡೆದಂತೆ**
**ನೀ ನನ್ನ ತಡೆದೆ ಎಲೇ ದೇಹವೇ**
**ಏರಿಯ ಹೊಡೆದು ನೀರ್ಹರಿದು ಹೋಗುವಾಗ**
**ತನ್ನ ಏರಿಗೊಂದು ಮಾತೇಳದೇ ಹೋದೆ ಹಂಸ.**

ಪ್ರಾಣವು ಹುಟ್ಟಿನಿಂದ ನಮ್ಮ ದೇಹದ ಅವಿಭಾಜ್ಯ ಅಂಗವಾಗಿದ್ದು, ದೇಹದ ಅಥವಾ ದೇಹಧಾರಿಯ ಎಚ್ಚರಿಕೆಯ ಎಲ್ಲಾ ಸೌಲಭ್ಯವನ್ನೂ ಅನುಭಿಸಿ, ಯಾವುದೋ ಮಾಯದಲ್ಲಿ ದೇಹವನ್ನು ಬಿಟ್ಟು ತೆರಳುತ್ತದೆ. ಅನುದಿನ ರಕ್ಷಿಸಿದ ದೇಹಕ್ಕೆ ಒಂದು ಮಾತನ್ನು ಹೇಳದೆ ನಿಷ್ಠುರವಾಗಿ ಹೊರಟುಹೋಗುವ ಪ್ರಾಣವನ್ನು ಕುರಿತು ದೇಹ ಅಸಹಾಯಕವಾಗಿ ಪ್ರಲಾಪಿಸುತ್ತದೆ. 'ಸಾವು' ಶಬ್ದವನ್ನು ಬಳಸದೆ ಹಂಸದಂತಹ ಪ್ರಾಣವನ್ನು ವಿವಿಧ ರೀತಿಯಲ್ಲಿ ವರ್ಣಿಸಿದೆ.

ಪಕ್ವವಾದ ಹಣ್ಣು ನೆಲಕ್ಕೆ ಉದುರುವಾಗ ಸಾಕಿ ಸಲಹಿದ ಬಳ್ಳಿಗೆ ಹೇಳಿ ಹೋಗುವುದಿಲ್ಲ.

ಗಾಳಿಯ ಪಂಜರದಲ್ಲಿ ಎಲೆಯ ರೂಪದಲ್ಲಿದ್ದ ಪ್ರಾಣ, ಗಾಳಿ ಬೀಸಿ ತೂರಿ ಹೋಗುವಾಗ, ತನಗಾಗಿ ಶ್ರಮಿಸುತ್ತಿದ್ದ ಉಸಿರಿಗೆ ಒಂದು ಮಾತನ್ನೂ ಹೇಳಿ ಹೋಗುವುದಿಲ್ಲ.

ಪ್ರಕೃತಿ ವಿಕೋಪಕ್ಕೆ ಸಿಕ್ಕಿ ಕೆರೆ ಕಟ್ಟೆಯಂತಿದ್ದ ಪ್ರಾಣ ಬಯಲಾಗುವಾಗ ತನಗೆ ರಕ್ಷಣೆ ನೀಡಿದ್ದ ಬಯಲಿಗೆ ಹೇಳಿ ಹೋಗುವುದಿಲ್ಲ.

ಜೇನು ಸಂಗ್ರಹಿಸ್ಸಿ ತಾನೇ ಅದನ್ನು ಸವಿದುಂಡ ಪ್ರಾಣ ಸ್ವರೂಪಿ ಹುಳು ಹಾರಿ ಹೋಗುವಾಗ ತನ್ನ ಹೂವಿಗೆ ಹೇಳಿ ಹೋಗುವುದಿಲ್ಲ.

ನೀರನ್ನು ಕೆರೆಯ ಏರಿ ತಡೆಯುತ್ತದೆ. ಏರಿ ಒಡೆದು ಪ್ರಾಣ ಮಯ ನೀರು ಹರಿದು ಹೋಗುವಾಗ ತನ್ನನ್ನು ತಡೆದಿದ್ದ ಏರಿಗೆ ಹೇಳಿ ಹೋಗುವುದಿಲ್ಲ. ಹಾಗೆಯೇ ಪ್ರಾಣ ಮತ್ತು ದೇಹದಾಟ ನಡೆಯುತ್ತಿರುತ್ತದೆ.

ಜೀವ ಪ್ರಕೃತಿಯ ಈ ವಿಚಿತ್ರದಾಟ ಹೀಗೆ ನಡೆಯಬಹುದು ಬೇರೆ ರೀತಿಯಲ್ಲೂ ನಡೆಯಬಹುದು. ಆದರೆ ಮನುಷ್ಯ ಮಾತ್ರನಿಂದ ಇದಕ್ಕೆ ಪರಿಹಾರ ಕಂಡು ಕೊಳ್ಳುವುದಕ್ಕೆ ಸಾಧ್ಯವಿಲ್ಲ ಲಾಗಾಯ್ತಿನಿಂದ ಈ ಪರಿಯನ್ನು ನೋಡಬೇಕು, ನೋಡಿ ಅನುಭವಿಸಬೇಕು ಅಷ್ಟೇ.

ಹೀಗೆ ಮನುಕುಲದ ಏನೆಲ್ಲ ವಿದ್ಯಮಾನಗಳನ್ನು ಕರಿತಂತೆ ಮೌಖಿಕ ಗೀತೆಗಳು ಹುಟ್ಟಿವೆ. ಅವು ಕಳೆದು ಹೋದ ಅಭಿಜಾತ ಸಂಸ್ಕೃತಿಯ ಪಳೆಯುಳಿಕೆಗಳಂತೆ ಭಾಸವಾಗುತ್ತವೆ. ಆದರೂ ಆಧುನಿಕ ಶಿಷ್ಟ ಸಂಸ್ಕೃತಿಯ ಮರುವ್ಯಾಖ್ಯಾನಕ್ಕೆ ಸಕ್ರಿಯವಾಗಿ ಸ್ಪಂದಿಸುವ ಪ್ರಸ್ತುತತೆಯನ್ನು ಪಡೆದಿರುವುದು ಸಮಾಧಾನದ ವಿಷಯವಾಗಿದೆ.

ಹಿಂದೆ ಗ್ರಾಮೀಣ ಪ್ರದೇಶಗಳಲ್ಲಿ ಮೌಖಿಕ ಗೀತ ಸಂಸ್ಕೃತಿ ದಟ್ಟವಾಗಿತ್ತು. ಊರೊಟ್ಟಿನ ಮದುವೆ ಮುಂಜಿ, ಹಬ್ಬ ಜಾತ್ರೆ, ಧಾನ್ಯ ಒಕ್ಕುವ ಕಣದ ಚಟುವಟಿಕೆ ಮೊದಲಾದೆಡೆಗಳಲ್ಲಿ ಹೊತ್ತು ಕಳೆಯಲು, ಬೇಸರ ನೀಗಲು, ಕಾಯಕದ ಶ್ರಮ ಕಡಿಮೆಯಾಗಲು, ಸೃಜನಶೀಲ ಪ್ರತಿಭೆ ಹೊರಹೊಮ್ಮಲು ಮೌಖಿಕ ಗೀತಗಳು ಪುಂಖಾನುಪುಂಖವಾಗಿ ಹುಟ್ಟಿಕೊಳ್ಳುತ್ತಿದ್ದವು. ಅಲ್ಲಿ ಸ್ಥಳೀಯರು ಪರಸ್ಥಳದ ನೆಂಟರು ಸೇರಿಕೊಳ್ಳುತ್ತಿದ್ದರು. ಅವರಲ್ಲಿ ಗಂಡು ಹೆಣ್ಣಿನ ಭೇದವಿರಲಿಲ್ಲ, ಸಂಕೋಚವಿರಲಿಲ್ಲ. ಎಲ್ಲವೂ ದೈವಾರ್ಪಿತ ಎಂಬ ಭಾವನೆಯಲ್ಲಿ ಜರಗುತ್ತಿದ್ದವು. ಅವರು ಹಾಡುವದಕ್ಕೂ ಸೈ; ಕುಣಿಯುವುದಕ್ಕೂ ಸೈ. ಎಲ್ಲಾ ಕಲೆಗಳೂ ಅವರಿಗೆ ಮಾನ್ಯ.

ಯಾರೋ ಒಬ್ಬ ತುಂಬಿದ ಸಭೆಯಲ್ಲಿ ಹೀಗೆ ಸವಾಲು ಎಸೆಯುತ್ತಿದ್ದ :

**ಹತ್ತು ಸಾವಿರ ಪದವ ಎತ್ತಿನ್ಮೇಲ್ಹೇರ್ಕೊಂಡು**
**ಮತ್ತೆ ಸಾವಿರ ಕೈಲಿ ಹಿಡಿಕೊಂಡು – ಬಂದಿವ್ನಿ**
**ಬಾರೋ ಬಸವಣ್ಣ ಬಯಲಿಗೆ.**

ಎದೆಯ ತುಂಬ ಪದಗಳಿದ್ದವು. ಅವು ತುಂಬಿ ತುಳುಕುತ್ತಿದ್ದವು. ಒಂದು ಸಾವಿರ, ಹತ್ತು ಸಾವಿರ ಪದಗಳ ಸಂಖ್ಯೆ ಅವರಿಗೆ ಲೆಕ್ಕಕ್ಕಿಲ್ಲ. ಒಬ್ಬನ ಸವಾಲಿಗೆ ಪ್ರತ್ಯುತ್ತರವೆಂಬಂತೆ

ಮತ್ತೊಬ್ಬ ತಡೆಯಿಲ್ಲದೆ ಹಾಡಿನ ಮಳೆ ಸುರಿಸುತ್ತಿದ್ದ. ಈಗ ಅಂತಹ ಗೀತಗಾಯನ ದೃಶ್ಯಗಳು ಅಷ್ಟಾಗಿ ಕಂಡು ಬರುವುದಿಲ್ಲ.

ಬೀಸುವ ಕಲ್ಲಿನ ಮುಂದೆ ಕುಳಿತು ಕುರುಕುವ ಗಾಯನ ಬಲ್ಮೆಗೂ ಕೊನೆ ಮೊದಲಿರಲಿಲ್ಲ.

**ರಾಗಿ ಕಲ್ಲಿನ ಮೇಲೆ ಚೆಲ್ಲಿದೆ ನಮ್ಮ ಹಾಡು**
**ಬಲ್ಲಂತ ಜಾಣರು ಬರಕೊಳ್ಳಿ – ನಮ್ಮ ಹಾಡ**
**ಬಳ್ಳ ತಕ್ಕಂಡು ಅಳಕೊಳ್ಳಿ**

ಹಳ್ಳಿಯ ಹೆಂಗಸರ ಸಮಸ್ತ ಬದುಕೇ ಬೀಸುವ ಪದಗಳ ಜೀವನಾಡಿಯಾಗಿತ್ತು. ಹಾಗಾಗಿ ಲೆಕ್ಕವಿಲ್ಲದಷ್ಟು ಹಾಡುಗಳು ರೂಪುಗೊಳ್ಳುತ್ತಿದ್ದವು. ಹಿಂದೆ ಕೇಳಿಕೊಂಡರೂ ಬರೆದು ಕೊಳ್ಳುವುದಕ್ಕೆ, ಬಳ್ಳ ತೆಗೆದುಕೊಂಡು ಅಳೆದು ಕೊಳ್ಳುವುದಕ್ಕೆ ಜನರಿಗೆ ಅಗತ್ಯ ಕಾಣುತ್ತಿರಲಿಲ್ಲ. ಪ್ರತಿಯೊಬ್ಬರೂ ತಾವು ಕೇಳಿದ್ದನ್ನು ಬಾಯಿಗೆ ಹಾಕಿಕೊಂಡು, ಎದೆಯಲ್ಲಿ ಬಚ್ಚಿಟ್ಟುಕೊಂಡು ಬೀಗುತ್ತಿದ್ದರು. ಅವು ಇನ್ನೆಲ್ಲೋ ಹೊರಹೊಮ್ಮುತ್ತಿದ್ದವು.

ಇತ್ತೀಚೆಗೆ ಆಶುಕವಿಗಳ ಆಶುಗೀತೆಗಳನ್ನು ಸಂಗ್ರಹಿಸಲು ಸಿದ್ಧರಾಗಿ ಹೋದಾಗ ಆಘಾತ ಕಾದಿತ್ತು. ಮೌಖಿಕಗೀಗೆಗೆ ಮೂಲ ಪ್ರೇರಣೆಯಾದ ರಾಗಿಕಲ್ಲು ಹಳ್ಳಿಯ ಮನೆಗಳಿಂದ ಮಾಯವಾಗಿದ್ದವು. ರಾಗಿ ಕಲ್ಲಿನ ದನಿಯ ಶ್ರುತಿಗೆ ಮನನೆಟ್ಟು ರಾಗ ಪಾಡುವ ಗರತಿಯರ ಕಂಠ ಅಪರೂಪವಾಗಿದ್ದವು. ಬತ್ತ ಬೆಳೆದ ಗದ್ದೆಯಲ್ಲಿ ಕೊಯ್ಲು ಮುಗಿದ ಮೇಲೆ, ಚೆಲ್ಲಿರುವ ಬತ್ತದ ತೆನೆಗಳನ್ನು ಹಕ್ಕಲು ಆಯುವಂತೆ, ಸಿಕ್ಕಿದಷ್ಟೂ ಹಾಡುಗಳನ್ನು ಸಂಗ್ರಹಿಸಿದಾಗ ಅದರದೇ ದೊಡ್ಡ ಒಟ್ಟಿಲಾಯಿತು. ಈಗ ನಾವು ಪ್ರಾಚೀನ ಮೌಖಿಕ ಸಂಸ್ಕೃತಿಯ ಬಗೆ ಸಂವಾದ ಮಾಡುತ್ತಿರುವುದು ಅಳಿದುಳಿದ ಆಕರಗಳಿಂದಲೇ.

ಹಿಂದಿನ ಮೌಖಿಕಗೀತಕಾರರ ಜೀವನ ಉದ್ದೇಶ ಪಾರದರ್ಶಕವಾಗಿತ್ತು. ಆಧುನಿಕ ಜೀವನದ ಪರಿಯೇ ಬೇರೆ.

**ಮುತ್ತು ಮಾಣಿಕ ಬೇಡ ಮತ್ತೆ ಸಂಪದ ಬೇಡ**
**ಸುತ್ತು ಕೋಟೆಯ ವೈಭವ ಬೇಡ – ನಮ್ಮವ್ವ**
**ಸುತ್ತೆಲ್ಲ ಜನಪದ ಹಾಡಿರಲಿ**

ಮೌಖಿಕ ಗೀತೆಗಳು ಜನಪದ ಜೀವನವನ್ನು ಸಂಪೂರ್ಣವಾಗಿ ಆವರಿಸಿಕೊಂಡಿದ್ದವು. ಇಲ್ಲದಿದ್ದರೆ ಇಂತಹ ಆಶಯ ಸೂಕ್ತಯಾಗುತ್ತಿರಲಿಲ್ಲ. ಮೌಖಿಕ ಗೀತಗಳ ದನಿ ಬನಿ ಸಂದೇಶ ಸುಲಭವಾಗಿ ತಳ್ಳಿ ಹಾಕುವಂಥದ್ದಲ್ಲ. ಉಚಿತವರಿತು ಬಳಸಿಕೊಂಡರೆ ಉಪಯೋಗ ಜಾಸ್ತಿ.

ಮೌಖಿಕಗೀತಗಳನ್ನು ಸಮಯ ಸಂದರ್ಭಕ್ಕೆ ತಕ್ಕಂತೆ ನಾನಾ ರೀತಿಯಲ್ಲಿ ವ್ಯಾಖ್ಯಾನಿಸಬಹುದು. ಕೇವಲ ಕಾವ್ಯದ ದೃಷ್ಟಿಯಿಂದಷ್ಟೇ ಅಲ್ಲ; ಸಾಂಸ್ಕೃತಿಕ ದೃಷ್ಟಿಯಿಂದಲೂ ಕೂಡ. ಈಗಿನ ನನ್ನ ವ್ಯಾಖ್ಯಾನ ಒಂದು ಸಾಧಾರಣ ಪ್ರಯತ್ನ ಅಷ್ಟೇ.

❑❑

# ಶಿವಮೊಗ್ಗ ಜಿಲ್ಲಾಧಿಕಾರಿ ಹಳೆಯ ಧಫ್ತರಖಾನೆಯಲ್ಲಿ ಕಂಡ ಕನ್ನಡ ಮೋಡಿ ಲಿಪಿ ನಿಘಂಟು

– ಕೆಳದಿ ಗುಂಡಾಜೋಯಿಸ್

ಕ್ರಿ.ಶ. ೧೭೬೩ರಲ್ಲಿ ಕೆಳದಿ ರಾಜ್ಯ ಅಂತ್ಯಕಾಲದಲ್ಲಿ ಹೈದರ್, ಟಿಪ್ಪು ಹಾಗೂ ಶೇಖ್‌ಅಯಾಜ್ ಕೆಳದಿ ರಾಜಧಾನಿ ಬಿದನೂರು (ಈಗಿನ ಹಳೇನಗರ) ರಾಜಧಾನಿಯನ್ನಾಗಿಸಿಕೊಂಡು ಆಡಳಿತ ನಡೆಸಿದರು. ಶೇಶ್ ಅಯಾಜನು ಟಿಪ್ಪುವಿನ ಕಡು ವೈರಿಯಾಗಿದ್ದರಿಂದ ಟಿಪ್ಪುವನ್ನು ಹಿಮ್ಮೆಟ್ಟಿಸಲು ಆಯಾಜನು ಬೊಂಬಾಯಿಗೆ ಹೋಗಿ ತನ್ನ ರಕ್ಷಣೆಯ ಸಲುವಾಗಿ ಬ್ರಿಟಿಷ್ ಅಧಿಕಾರಿ ಮ್ಯಾಥ್ಯೂಸ್‌ನ ಸಹಾಯವನ್ನು ಯಾಚಿಸಿದನು. ಕರ್ನಲ್ ಮ್ಯಾಥ್ಯೂಸ್ ಬ್ರಿಟಿಷ್ ಸೇನೆಯೊಂದಿಗೆ ಧಾವಿಸಿ ಟಿಪ್ಪುವಿನೊಂದಿಗೆ ಹೋರಾಟ ಕೈಗೊಂಡಿರುವುದು ಇತಿಹಾಸದಲ್ಲಿ ಕಾಣಬಹುದು. ಹಳೇನಗರದಲ್ಲಿ ಬ್ರಿಟಿಷರ ರೆಸಿಡೆಂಟ್ ಕಛೇರಿಯೊಂದಿಗೆ ಶಿವಮೊಗ್ಗ ಜಿಲ್ಲಾಧಿಕಾರಿ ಹಳೆಯ ಕಟ್ಟಡವೊಂದೂ ಬ್ರಿಟಿಷರ ಆಡಳಿತಾಂಗದಲ್ಲಿ ಒಂದಾಗಿದ್ದುದು ಕಂಡು ಬರುತ್ತದೆ. ಬೆಂಗಳೂರಿನಲ್ಲಿರುವ ದಿವಾನ್ ಪೂರ್ಣಯ್ಯನವರ ಕಟ್ಟಡದ ವಿನ್ಯಾಸದಂತೆ ಈ ಕಟ್ಟಡವೂ ಪುರಾತತ್ವ ಇತಿಹಾಸ ಹಾಗೂ ವಾಸ್ತು ಶೈಲಿಯಲ್ಲಿ ಗಣನೀಯ ಪ್ರಾಮುಖ್ಯತೆ ಹೊಂದಿತ್ತು. ವಿಶೇಷವಾಗಿ ಈ ಕಟ್ಟಡದಲ್ಲಿದ್ದ ಪುರಾತನ ಪತ್ರಾಗಾರವು ಕಡತಗಳು, ಚಾರಿತ್ರಿಕ ದಾಖಲೆಗಳನ್ನೊಳಗೊಂಡು ಸ್ವಾತಂತ್ರ್ಯ ಪೂರ್ವ ಇತಿಹಾಸ ಕುರಿತ ಗ್ರಂಥ ಭಂಡಾರದ ಖನಿಜವಾಗಿದ್ದುದನ್ನು ನಾನು ಅವಲೋಕಿಸಿದ್ದೇನೆ.

ಈ ಕಟ್ಟಡದಲ್ಲಿಯೇ ಅಧಿಕಾರಿಗಳಾದ ಮ್ಯಾಥ್ಯುಸ್, ಮೆಕಂಜಿ, ತಂಬೂಚೆಟ್ಟಿ ಮುಂತಾದವರು ಜಿಲ್ಲಾಧಿಕಾರಿಗಳಾಗಿ ಆಡಳಿತ ನಡೆಸಿದ್ದರು. ೧೯೦೬ರಲ್ಲಿ ವೇದಾಂತ ದೇಶಿಕಾಚಾರ್ ಜಿಲ್ಲಾಧಿಕಾರಿಗಳಾಗಿದ್ದ ದಾಖಲೆಯೊಂದು ಕೆಳದಿ ಮ್ಯೂಜಿಯಂನಲ್ಲಿದೆ. ನನ್ನ ಸರ್ವೇಕ್ಷಣೆಯಲ್ಲಿ ಕಂಡುಬಂದ ಅಪೂರ್ವ ಮಾಹಿತಿಯೊಂದು ನವಾಬ್ ಹೈದರಾಲಿಯ ದಿವಾನನಾಗಿದ್ದ ಪ್ರಧಾನಿ (ದಿವಾನ್) ವೆಂಕಪ್ಪಯ್ಯನೂ ಇಲ್ಲಿಂದಲೇ ಆಡಳಿತ ನಡೆಸಿರುವುದೂ ಶಿವಮೊಗ್ಗದಲ್ಲಿದ್ದ ಹಳೆಯ ಜಿಲ್ಲಾಧಿಕಾರಿಗಳ ಕಟ್ಟಡ ಸಮೀಪದಲ್ಲಿದ್ದ ನಗರ ದರ್ವಾಜಾ ಹಾಗೂ ಹೈದರನು ಕುದುರೆಗೆ ನೀರುಣಿಸಲು ನಿರ್ಮಿಸಿದ್ದ ಕೊಳ, ಓಲೆಗರಿ ಹಸ್ತಪ್ರತಿಗಳೂ ಕುತೂಹಲಾಸಕ್ತಿಗಳಿಂದ ಕೂಡಿವೆ. ಆಗಿನ ಜಿಲ್ಲಾಧಿಕಾರಿ ಶ್ರೀ ಬಾಲಸುಬ್ರಮಣ್ಯಂ ಐ.ಎ.ಎಸ್.ರವರು ಜಿಲ್ಲಾ ಕಛೇರಿಯ ಪತ್ರಾಗಾರದಲ್ಲಿರುವ ಅಪೂರ್ವ ಸಂಗ್ರಹಗಳ ಕ್ಯಾಟಲಾಗ್ ಸಿದ್ಧಪಡಿಸಿಕೊಡಲು ನನಗೆ ಪ್ರೋತ್ಸಾಹಿಸಿದ್ದು, ಇದರ ಪ್ರಕಟಣೆಗೂ ಆರ್ಥಿಕ ಸೌಲಭ್ಯಕ್ಕಾಗಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು. ನಾನು ಕ್ಯಾಟಲಾಗ್‌ನಲ್ಲಿ ದಾಖಲಿಸಿದ್ದ ಶಿಕಾರಿಪುರದ ಈಸೂರು ಕ್ವಿಟ್ ಇಂಡಿಯಾ ದಾಖಲೆಗಳು, ಬೂದಿ ಬಸಪ್ಪನಾಯಕ, ಬಸಪ್ಪಾಜಿ ಅರಸು, ಧೋಂಡಿಯಾ ವಾಘ್‌ರ ಬ್ರಿಟಿಷರ ವಿರುದ್ಧದ ಬಂಡಾಯಗಳು, ಜಿಲ್ಲಾಧಿಕಾರಿ ನವನೀತಂ ನಾಯ್ಡು ಆದಿಯಾಗಿ ಸ್ವಾತಂತ್ರ್ಯಪೂರ್ವದ ಅಪೂರ್ವ ದಾಖಲೆಗಳು, ಪತ್ರುಗಳು ಇಲ್ಲಿದ್ದವು. ಹಳೆಯ ಕಟ್ಟಡ ಕಣ್ಮರೆಯಾಗುವ ಮುನ್ನ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಅನಿಲ್‌ಕುಮಾರ್‌ರವರು ಇಂತಹ ಪಳೆಯುಳಿಕೆಗಳನ್ನು ಮುಂದಿನ ಪೀಳಿಗೆಗೆ ಉಳಿಸಲು ಕೆಳದಿ ಮ್ಯೂಜಿಯಂನಲ್ಲಿ ಕಾಪಾಡಲು ಪ್ರಯತ್ನಿಸಿದರಾದರೂ ಕಾರಣಾಂತರಗಳಿಂದ ಅದು ಸಫಲವಾಗಲಿಲ್ಲ.

ಇಷ್ಟಾದರೂ ಈ ದಾಖಲೆಗಳನ್ನು ಮುಂದಿನ ಪೀಳಿಗೆಗಾಗಿ ರಕ್ಷಿಸಲು ಛಾಯಾಚಿತ್ರಗಳನ್ನೊಳಗೊಂಡ ಸಿ.ಡಿ.ಯನ್ನು ಸಿದ್ಧಪಡಿಸಲಾಗಿದ್ದು ಅದು ನನ್ನಲ್ಲಿದೆ. ಈ ಸಂಗ್ರಹದಲ್ಲಿ ಕನ್ನಡ ಮೋಡಿ ಲಿಪಿಯಲ್ಲಿರುವ ಅಪೂರ್ವ ಮಾಹಿತಿಯೊಂದರಲ್ಲಿ "ಸಂಸ್ಕೃತ ಕರ್ನಾಟಕ ನಿಘಂಟು" ಹಸ್ತಪ್ರತಿಯೊಂದು ದೊರೆತಿದ್ದು ಅದನ್ನು ವಿದ್ವಾಂಸರ ಅವಲೋಕನೆಗೆ ಇಲ್ಲಿ ಲಿಪ್ಯಂತರಿಸಿ ನೀಡಲಾಗಿದೆ. (ಅನುಬಂಧ ನೋಡಿರಿ)

**ಹಸ್ತಪ್ರತಿ ಸ್ವರೂಪ**

| | | |
|---|---|---|
| ಸಾಮಾಗ್ರಿ | : | ಕಾಗದ |
| ಪ್ರಮಾಣ | : | ಉದ್ದ ೩೨-೮ ಸೆಂ.ಮೀ.<br>ಅಗಲ ೨೧-೦ ಸೆಂ.ಮೀ. |
| ಲಿಪಿ | : | ಕನ್ನಡ ಮೋಡಿ |
| ಭಾಷೆ | : | ಕನ್ನಡ-ಸಂಸ್ಕೃತ |
| ಕಾಲ | : | ಸು.೧೮-೧೯ ನೇ ಶತಮಾನ |
| ಸ್ವರೂಪ | : | ಅಸಮಗ್ರ; ಸಾಲು; ೨೧ |

**ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.**

ಈ ನಿಘಂಟಿನ ಕೃತಿಕಾರ – ಲಿಪಿಕಾರನ ಉಲ್ಲೇಖವಿಲ್ಲ ಇದನ್ನು "ಸತ್ತ ಖಾಲಸಾ ಜವಿನಿಯ ಕಬಜೆದಾರರ ಅಥವಾ ಇನಾಂ ಜಮಿನು ಧಾರಣ ಮಾಡುವವರ ಹಾಗೂ ಅವರ ಭೂಮಿಗಳು ಯಾರ ಕಬಜೆಯಲಿ ಹೋಗಿರುವವೋ ಆ ಮನುಷ್ಯರಯಾದಿಯಲಿ" ಎಂಬ ರೆವಿನ್ಯೂ ಮುದ್ರಿತ ದಾಖಲಾತಿ ಪುಸ್ತಕದಲ್ಲಿ ನಿಘಂಟು ತಜ್ಞನಿಂದ ರಚಿಸಲ್ಪಟ್ಟ ಕೃತಿಯಾಗಿರುವುದು ಕಂಡು ಬರುತ್ತಿದೆ. ಈತನು ರೆವಿನ್ಯೂ ಅಧಿಕಾರಿ ಅಥವಾ ಶ್ಯಾನುಭೋಗನೋ ಹಾಗೂ ಸಿಬ್ಬಂದಿಯೋ ಆಗಿದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಕೃತಿಯೋ ಅಸಮಗ್ರವಾಗಿದ್ದು "ಅ" (ಅಪೂರ್ಣ) "ತ"ವರೆಗೆ ಮಾತ್ರ ಉಪಲ್ಧವಿದೆ ಯಾದಿ ಪುಸ್ತಕವು ಆರು ಕಾಲಂಗಳನ್ನೊಳಗೊಂಡ ಮುದ್ರಿತ ಪುಸ್ತಕವಾಗಿದ್ದು ಮೋಡೀಲಿಪಿಯಲ್ಲಿ ಕೈಬರಹಗಳಿಂದ ಕೂಡಿದೆ.

**ನಿಘಂಟುವಿನ ಪಠ್ಯಭಾಗ**

**ಪುಟ ೧ ಮುಂಭಾಗ**

ಸಾಲು ೧ – ಶ್ಯಾವಿಗೇ ಬಳ್ಳಿ ಅಕಾಶದಲ್ಲಿ – ಪಾರಾ – ಪಾದರಸ

೨ ಅಮರಬಳ್ಳಿ – ಆಭ್ರಕ – ಅಭರಂಗ – ಭಾಗು

೩ ಅಕ್ರೋಡ – ಬೆಟ್ಟದಗೋನು – ಅಕ್ಷೋ(ಡ್ಯ) – ಗೈದಿಕಾ – ಸೊಂನೆತ್ಥಾಲಿ

೪ ಟ್ಯಾಂಕಣಖಾರ – ಬಳಗಾರ

೫ ಕಲ್ಯಾನವರಿ – ಕಲ್ಲ ಕ(ದ್ಪ)ಡಾ

೬ ಅಸಮಗ್ರ

ಆ

೭. ಆಗಬೋಂಡ್ಯಾ – ಆಗ್ಯಾ – ಚುರ್ಚಿಯಗಿಡಾ – ಬರ್ಪದಂಷ್ಟ್ರಿಕಾ, ತೀಕ್ಷ್ಣಬಾಣ – ಶೆಂದೂರ– ಕಂಚಿಯ ಚಂದ್ರ

೮. ಆಷಾಡಾ – ವೃತ್ತರಾಣಿ – ರೇಣಿ – ಆಪಾಮಾರ್ಗ, ಖರಮಂಜರಿ ಹೀಂಗುಳ – ಯಿಂಗಲೀಕು.

೯. ಆಪಟ್ಯಾ – ಆರಿ – ಆಸು – ಆದಿವೃಕ್ಷ, ಆದಿರಾಜ – ಶುಕ್ತಿ – ಶಂಖಾ, (ಶಾಪು)

೧೦. ಆಬ್ಯೆ – ಶಂಬೀಕಾಯಿ, ಶಿಂಬಿ – ಬಿಬ್ಬಲೀಬೀಜ

೧೧. ಆಬೋಲಿ – ಸಂಣ ಕೆಂಗೊರಟಿ – ಪ್ರೀಯದರ್ಶಿನಿ – ಖಿಖ್ವೀಗಿಡಾ

೧೨. ಆಮ್ಲವೇತಸ, ಆಂಬಟ್ಟವೇಲ, ಮಜ್ಜಿಗೆಯ ಗಿಡಾ ಸಹಸ್ರವೇಧಿ, ಚುರ್‍ರೇಕಾ, ಚುಕ್ತ

೧೩. ಆಂಬ – ಹುಳಿ, ಕಡ್ಲೆ ಹುಳಿ, ಆಮ್ಲಜನಕ – ಲ್ಲೊಣೆ

೧೪. ಆಮ್ಲರಸ – ಮಾವಿನ ಶೀಕರಣೆ, ಆಮ್ರರಸ,

೧೫. ಆರಸ್ವದ – ಕಕ್ಕೆಮರಾ

೧೬. ಆಂಬ ಸೋಲು, ಅರುಸೋಲ – ಸೋಲು– ತ್ರಿತ್ತಡಿಫಲಾ

೧೭. ಆಂಬಾ – ಮಾವಿನಹಣ್ಣು ರಕ್ತಪೊ(ತ)ಕ, ಆಮ್ಲಾತಕಂ, ಅನ್ರುವಾಟ್ಟ ಆಮ್ರಫಲ

೧೮. ಆಂಬಾಡಾ – ಪುಂಡಿ, ಪುಂಡಿಬೀಜಾ ಸದರಾ

೧೯. ಆಂಬೇಹಳದಿ – ಆಂಬೀ ಹಳದಿ–ಗಂಟ್ಯೆ– ಆಮ್ರನಿಶಾಮಲ ಚಕೋರಾ

**ಪುಟ ೨ (ಹಿಂಭಾಗದಲ್ಲಿ)**

ಸಾಲು ೧. ಸಂಸ್ಕೃತ ಕರ್ನಾಟಕ ನಿಘಂಟು

೨. ಆಂಬೋಶಿ– ಮಾವಿನ ಬಾಳಕಾ – ಆಮ್ರಪೇಶಿ ಆತ್ತಿ ಮುಕ್ತಕ, ಹುಲಿಗೀಮರಾ, ಹುಲಗಲಿ,

೩. ಆಲೆ – ಖಾರಗೆಣಸು, ಹಶಿಶುಂಠಿ, ಆದ್ರಕ, ನಿಮ್ಮಿ ಹೋಗೆ,

೪. ಆವಳ ಕಾಟ್ಟಿ – ನೆಲ್ಲಿಚೆಟ್ಟಿ – ಶುಷ್ಕಾಮಾಲಕೆ – ಅಶ್ವಕರ್ಣಕ, ಮದ್ದಿಮರಾ, ಮರಿಗಿಡಾ

೫. ಆಂವಳಾ – ನೆಲ್ಲಿಕಾಯಿ – ಆಮಾಲ಼ ಧಾತ್ರೀವಯಸ್ಯಾ – ಶ್ವೇತಾರ್ಜುನ ವೃಕ್ಷ

೬. ಆಸ್ಕಂದ, ಆಸಂದ – ಹಿರೇಮದ್ದಿನ ಬೇರು, ಆಂಗದ ಬೇರು ಅಶ್ವಗಂಧಾ,

ಅಶೋಕಾ – ಕೆಂಪು ಚಾನೆಲಯ ಗಿಡಾ, ಆನಂದವೃಕ್ಷ

೭. ಆಸಾಣಾ – ಹಿರೆಬೇರ್‍ರು – ಹಂದಿಗಟ್ಟಿ ಹೊಂನ್ನೆ – ಮುರ್‍ರಡ ಶೀಂಗಾ – ಆರ್ಜಿಕಾ – ಬೀಳೀಸಗ್ನಿ – ಯಗಿಡಾ, ಬಿಳೀಕಗೊರ್ತಿ

೮. ಆಹಲಿ – ನೆಲವರಿ – ವಿಭಾಂತಿಕಾ – ಆಲಕ್ಯಾ, ಬಿಳೇಯಕ್ಕೆಯಗಿಡಾ, ಚೇತನಯಕ್ಕೆ

೯. ಆಹಾಳೀವ – ಆಳಿವೆ – ಆಹವಲಿ – ರಕ್ತರಾಜ

೧೦. ಆಳಶೀ – ಆಗಶಿ – ಆತಶೀ – ಅಶೋಕಾ– ಕಟ್ಟುಕ– ಆಘ್ರಿಪರ್ಣಿಕಾ– ನರೀಹೊಂನ್ನೆಯ ಗಿಡಾ ಆಜಗಂಧಿಕಾ – ನಾ(ಡ)ರಿಬಾಳೆಯಗಿಡಾ ಅಗ್ನಿಮುಖಿ–ಗೊಗ್ರಮರಾ, ಕೇ(?)

**(ಸಾಲು–೧೧) ಇ**

೧೧. ಯಿಂದ್ರ ಜವಾ – ಕೋಡುಮುರ್‍ರುಕನ ಬೀಜಾ, ಕಳಿಂಗ, ಭದ್ರಯನಾ, ಆಪಾಮಾರ್ಗ–ವೃತ್ತರಾಣಿಗಿಡಾ

೧೨. ಯಿಂದ್ರಕಾರ್‍ರುಣಿ – ಕಾಡಕನಡಿ – ಯಿಂದ್ರಿ, ಯಿಂದ್ರಾಣಿ– ಅಜಶೃಂಗೀ ಕುರುಟ್ಟಗೇ ಗಿಡಾ.

೧೩. ಯಿಂದೀವಣ – ಕತ್ಕವಟಿಯಕಾಯಿ – ವಿಶ್ಯಾಲಾ,

ಆಮೋಲುಘ–ವಾಯುವಿಳಂಗ

೧೪. ಯಿಲಾಯಟಿ – ದೊಡ್ಡಯಾಲಕ್ಕೆ, ಯಲಟಿ – ಪೃಥ್ವಿಕಾದಿಬಹುಲಾ, ಅಂಬುಜ– ಗಂನೇಕಳೇಗಿಡಾ, ಕಣಗಲಗಿಡಾ, ನೀರ ಹಲಶೀಗಿಡಾ

೧೫. ಯಿಡಲಾಖ – ದೊಡಲೀಕಾಯಿ – ಜಂಬೀರ ಆವಲ್ಲುಜ ಬಾಹುಜಿಗೆ ಆರಿ ರಂಗುನಾಳದ ಗಿಡ ಅಜಿಝುಟ್ಟಾ ಕರಿನೆಲ್ಲಿಯಗಿಡಾ.

ಉ

೧೬, ವುಟ್ಟಕೆಟ್ಟಾರಿ (ಎ) ನೀರಗೊಳಗೊಳರೆ ಕ್ಷುರಕ (ಬಿ) ಬ್ರಹ್ಮದಂಡಿ (ಎ) ಕಾಡುಮಲ್ಲಿಗೆ ಭೇದಾ, ಶೇವಂತಿಗೆ (ಬಿ) ಗಿಡಾ, ಆಗರು ಶುಂಠಿ–

೧೮. ವುಡಾಗಣ ಯಿಂಗಳಕಾರ ಯಾಗುದೀ ಆವ್ಯಂಡಾ ನಸಗುಂನಿಗಿಡಾ ಕಪಿತುರುಬೇಗಿಡಾ

೧೯. ವೂಡೀ ಕಡಪೀ ಸುರಹೊಂನಿ, ಭೈಸುರಿಗೆ ಸುರದುಂನಾಗ, ಪುಂನಾಗ ಆರುಣ ಆರೇಬಜಿ

೨೦.ವುತರಂಡೀ, ವುತರಣೆ (ಅ) ಕುಂಟ್ವಿಗಾ, ಕುರಟ್ವಿಗಾ (ಎ) ತ್ರಿವಲ್ಲಿಫಲಾ (ಬಿ) ತಳವಾರನಬಳ್ಳಿ (ಬಿ) ಕಂಟ್ಟಿಕಾಫಲಾ (ಅ) ಆಸನಪಣೀ ಸಿಡಿಲ್ಲೊಲ್ಲದಗಿಡ, (ಬಿ) ಆತಿಮುಕ್ತಾ – ಕಾಡುಯಿರುಂತಿಕೆ

೨೧. ಪುತಾಟ್ಟ – ಪುನ್ನಾಳಿ ನೀರಗೊಳಗೊಳಕೆ ಶರಪುಂಖ ಅನಾಧ್ಯತಿಕ್ತಾ – ನೆಲಬೇವು, ಜಿರಾಯಿತು,

೨೨. ವುದರಸಾಳಿ, ವುಪಲಸರಿ ಕರಿಬಂಟಾ ಗೋಪಿಶ್ಯಾಮಾ ವೃತ್ಪಲ ಶಾರಿಖಾ ಆನಂತ ಲೇಟ್ಟಕ ಸಂಧಿ ಚುರ್ಚಿಬಳ್ಳಿ

೨೩. ವುಪಲ್ಲೋಟ್ಟ ಕಾವೇರ ಬೆಂಣೆಬಿದರಿ.

೨೪. ವೊದರಕಾನಿ ಯಲಕಿವಿ ಗಿಡಾ ಯಲಿಯಾಲದ ಗಿಡಾ ದ್ರವಂತೀ ಅಮೃತಾ, ಅಮೃತಬಳ್ಳಿ, ಕೋತಾನ ಬಳ್ಳಿ, ಅಳಿಲೇಗಿಡಾ

೨೫. ವುಂಬರ ಅತ್ರಿ ವುದುಂಬರ, ಔದುಂಬರ ಅಪರಾಜಿತ ವಿಷ್ಣುಕ್ರಾಂತಿ, (ಶಿಡಿಲ್ಲೋಲ್ಲಹ) ಅಶ್ವತ್ಥ, ಅರಳೀಮರಾ (ತ್ರುಟಿತ)

ಇಲ್ಲಿಂದ ಮಾದರಿಗಾಗಿ (ಲೇಖನ ವಿಸ್ತಾರ ಭಯದಿಂದ) ಮಾತ್ರ ಉಲ್ಲೇಖರಿತಿ ಪದಗಳನ್ನು ನಿರೂಪಿಸಲಾಗಿದೆ.

ಋ

೧. ಋಧ್ಧಿ, ವೃಧ್ಧಿ ಮುರಿಗೇಕಾಯಿ ಲೋಹ್ಯಾ,

ಆಮ್ಲಾ – ದೊಡ್ಡಗೋರಂಟೀ

ಆಶೋಘ್ನ – ಸುವರ್ಣಗಡ್ಡೆ

ಆಭ್ರೀಪುಷ್ಪಾ – ಹಚ್ಚೀ ಗಿಡಾ

ಆಶ್ಮ ಪುಷ್ಪ – ಕಲ್ಲು ಹೂಲೀ

ಆಲಾಬೂ – ಶೀಯಿಸಗುಂಬಳಾ

(ಎ) – ಏ

೧. ಯೇರಂಡ: ಅವುಡಲಾ ಹರಳಗಿಡಾ ವ್ಯಾಘ್ರ ಪು(ಷ್ಪ)ಛ ವೆಡಂಬರ, ಅಭಯ – ಬಿಳೀಲಾವಂಚ ಸೂನಂಗಿ, ಅಳಲೇಗಿಡಾ

೨. ಯೇರವಣೇ : ಹುಚ್ಚು ಶೀಗೆಯ ಭೇದ ಕಂಟ್ಟಕವೃಕ್ಷ, ಆಗರು ಅಶೋಕಮರಾ ಕೃಷ್ಣಾಗರುಗಂಧ

೩. ಯೇಲದೋಡಾ : ಯಲಚಿ ಯಾಲಕ್ಕೆ ತ್ರುಟ್ಟಿ

೪. ಯೋಲಾವಾಲೂಕ : ಸುರಸುರಿಕೆ ಸಂಣಯಾಲಕ್ಕೆ ಯಲಾ ಹರಿವಾಲುಕ ಆಭೀರು ಆಸಲೀ ಆಘಾಡಿ–ಬೇರು) ಮಜ್ಜಿಗೇ ಗಟ್ಟಿ

೫. ಯೋಳ್ಯಾಬೋಳಾ : ಕರೆಬಾಳಿ ಕೃಷ್ಣಬೋಲ ಆಮ್ರನಾಳ, ಮಡಿವಾಳ, ಅಗ್ನಿಜ್ವಾಲಾ – ಆರೇಹೋವು, ಆಮಲಾ– ನೆಲನಲ್ಲಿ

ಐ

೧. ಆಯಿರಣ : ತರ್ಕೆಲೆ ತಗ್ಗಿ ಆಯಿರಿಣ, ಆಗ್ನಿಮಂಥ, ಅಂಗಾರವಲ್ಲಿ (ಗಂಟ್ಟು ಭಾರಂಗೀ–) "ಓ" (ವೋ) ಉಲ್ಲೇಖ ಹಸ್ತ ಪ್ರತಿಯಲ್ಲಿ ಕಂಡುಬರುವುದಿಲ್ಲ

೧. ವೋಂಬ್ಯಾ : ವುಂಬಾನೆ ವಬಿಕಾ ವೂಬಿ ಆರಳು ಹೇಮರಾ

೨. ವೋಪಿ ಚಘಾಡ : ಸಂಣ ಹಲಸಿನಗಿಡಾ ನಿರ್ರುಥ ಆರ್ಕಾವ್ಹಯಕ್ಕಿಯ ಗಿಡಾ

೩. ವೋವಾ : ಅಜಿವಾನ – ವೋಮು ಆಜಮೋದಾ ಯನಾನಿಕಾ ಆಂಜಾನಕೇಶಿ – (ಕೇಳಿ) – ಗೊನಗುತ್ತಿಗೆ ನಳಿಯಂಖ ಗಂಧದ್ರವ್ಯ

೪. ವೋಷಧೀ : ನೀರಾನದೀ ಪೈರು ವೋಷಧಿ ಆಟ್ರೂ – ಅಡಸಾಲ ಅಡಮಟ್ಟದ ಗಿಡ.

೫. ಆವದುಂಬರ : ಅತ್ತೀಗಿಡ ಹಂಣು ಜೀತುಫಲ

ಅಲ್ಪಮಾರಿಷ – ಕರಿಕ ಸಾಲಿ –

ಆವದಾಹ – ಮಡಿವಾಳ

ಆಮ್ಲಕಾ – ಹಣಶೀಮರಾ

ಆಮ್ಲಲ್ಲೋ(ರ್ಣಿ) ಮಲ್ಲಿಂಬಚ್ಚಿ– ಸೊಪ್ಪು

ಆಮಲಕೀ – ನೆಲ್ಲೀಮರಾ

ಕ

೧. ಕಂಕೋಳ (ಕಪ್ಪದಚಾನಿ) ಕಂಕೋಲಕ– ಸ್ಥೋಲಮರೀಚಕ ಆಸ್ಫೋಟ್ಯಾ – ಕಾಡುಮಲ್ಲಿಗೆ –

ವಿಷ್ಣುಕ್ರಾಂತ್ರಿ

೨. ಕಚರಾ, ಕಚೋರಾ – ಗಂಧಕಚೋರ, ಕರ್ಜೂರಕ, ವೇದ ಮುಖ್ಯಾಕ ಆರಸ್ವದಾ, ಕಕ್ಕೆಗಿಡಾ

೩. ಕಟ್ಟಿಕೆ – (ಎ) ಪಟ್ಟಲಕಾಯಿ ತುಂಬರೋ ಆವಿಗ್ನೆ ಕರಿಬೇವಿನ ಗಿಡಾ, (ಬಿ) ಶೀರಕೆ ಗಿಡಾ

೪. ಕಟ್ಟು ಹರಾ ಹಲಸು, ಪನಸು
ಆಮೀಷೀ – (ಜಟ್ಯಾಮಾಶಿ)

೫. ಕಟ್ಟುಕೇ (ಎ) ಕಟ್ಟುಗರೋಳಿ ಕಟ್ಟು, ಶಕುಲಾದನಿ ಯಕ್ಷಾಕು (ಬಿ) ಕತ್ತಿಗರ (ಟು)

ಯಿಂದ್ರಾಣಿ ಕಾ– ಕಾಪಿಲಗಿಡಾ, ಲಕ್ಕಿಗಿಡಾ

ಖ ಆದಿ – (ಮಾದರಿ)

೧. ಖಜೂರ – ಕಜ್ಜೂರು – ರಕ್ತಖಾಂಡವ – ಕೃಷ್ಣಭೇದಿ – ಕಟ್ಟುಗ ರೋಹಿಣಿ

೨. ಖಡಾನಾಗ – ಕೋಲುಕುಟ್ಟುಕ – ಕೋಳಿಕುಕ್ಕ – ಲಾಂಗಲಕಿ ಅಗ್ನಿಶಿಖಾ – ಕೃಷ್ಣಾ–ಹಿಪ್ಪಲಿಗಿಡಾ

ಅಂತ್ಯ

೧೩. ಖುರಿಟ್ಟಿ – ಮೋಟ್ಟಮರಾ – ಸ್ಥಾಣು – ಖರಾಗರೀ, ಗರಾಗರೀ, ದೇವತಾಳವೃಕ್ಷ

೧೪. ಖುಳಖುಳೀ – ಗಿಲಗಂಚಿಯ ಗಿಡ – ಶನಮಷ್ಟಿಕಾ – ಖರಾಶ್ವ– ಅಜಿವಾನ,

೧೫. ಖೈರಾ – ತರೆ – ಕಗ್ಗಲೀಗಿಡಾ – (ಗಾಯತ್ರಿ) – ದಂತಧಾವನಾ – ಗಣಿಕಾರಿಕಾ – ನೆಲ್ಲಿಮರಾ

೧೬. ಖೋಡ – ಬೊಡ್ಡೆಕೊಂಡು – ಪ್ರಕಾಂಡ – ಗಣಿಕಾ – ಕಾಡುಮಲ್ಲಿಗೆ ಗವೇಧುಕಾ – ಗವೇಧು – ಕಾಡಗೋದಿ ಗರ್ದಭಾಂಡ – ಬ್ಸರೀಗಿಡಾ

ಗವಾಕ್ಷೀ – ಗೋತುಂಬ – ಬುಡುಮೇಕಾಯಿ

ಗ (ಆದಿ)

೧. ಗಜಪಿಂಪಳಿ – ದೊಡ್ಡ ಹಿಪ್ಪಲಿ – ಕರಿಪಿಪ್ಪಲಿ – ವಶಿರಾ ಗಂಧರ್ವಹಸಕಾ = ಹರಳುಮರಾ, ಅವುಡಾಲ

೨, ಗರೋನಾ – ಮಂಚಪತ್ರಿಯ ಭೇದ – ಗ್ರಂಥಪರ್ಣೀ– ಗ್ರಂಥಿಪತ್ರಿ ಗಂಧಮೂಲಿ – ಗಂಟ್ಟು ಕಚೋರಿ

೩. ಗಂಡರದೂರ್ವ – ಬಳ್ಳಿ ಕರಿಕೆ – ಗಂಡಾಲಿ – ಶಕುಲಾಕ್ಷರಾ – ಗಂಡಾಲಿ – ಬಳ್ಳಿಗರಿಕೆ

೪. ಗಂಧವೇಲ – (ಕತ್ತಿಗರುಲ) – ಕಟ್ಟುಕೇ – ರೋಹಿಣಿ – ಗಂಧನಾ – ಕುಲಿ – ಸಂಜಾರೆಂಯ ಗಿಡಾ

೨೨. ಗೋಡೀ – ಶೀಂದಣೀ – ಸರಿಮಕ್ಕೀ – ಚಿತ್ರಾ – ಗೋಡುಂಬಾ ಚಿತ್ರಾ – ಯಕ್ಕಿ ಆಲದಗಿಡಾ – ಹಾವುಮೆಕ್ಕೆ ತಿಲಕವೃಕ್ಷ.

೨೩. ಗೋರಖಮುಂಡೀ – ಮುಂಡೀಕಸಾ – ಅತಿ ತಪಸ್ವಿನಿ, ಚಿತ್ರಕೃತ – ಚಿರಿಬಿಲ್ವ – ಹುಲುಗಲಿ – ಹೊಂಗೆ

೨೪. ಗೋಂವಾರಿಚೆ ಶೇಂಗ – ಜವಳೀಕಾಯಿ – ಗೌರಾಣಿ ಜಿಕಾಯು – ಬೂರ್ರುಗದ ಮರಾ

೨೬.ಗೋಂದ್ರಣಿ – ಸಂಣಚಳ್ಳು – ಶ್ಲೇಷಲಫಲಾ – (ಚುಶ್ರಿಕಾ) ಹುಳಿಚಿಕ್ಕಾ (ಹುಳಿಚುಕ್ಕೆ)

ಘ ಆದಿ

೧. ಘಡ ಘೇಲಿಸಾಳಾ – ಗೊಂಚಲ ಹೀರಿ – ಘೋಷ – ಚುಕ್ರ – ಬಚ್ಚಲ ಹುಣಶಿ

೨. ಘಂಟ್ಯಾರವಘಾಗರಿ – ತಪಶೀಗಿಡಾ – ಸೌಲೆ ಗಿಡಾ – ಹೊಂಗೇಭೆದ – ಪೂಲೆಕರಜ

ಪೂಲೆಕಾ – ಭತ್ರಾರೆ – ಸರ್ಪಾಕ್ಷಿಗಿಡಾ, ಸಂಜಾರೆಯ ಗಿಡಾ

೩. ಘಾಯಪತಾ ಕಲ್ನಾರು ಅಸ್ಥಿಭಕ್ಷಾ – ಭಗಲಾಂಡಿ, ಜುಂಗ ಘಾಯಣರೀ ಹರಧಚ್ಚಕಾ ಖದ್ದೀ ಸೊಪ್ಪು – ಅನಂತನ ಗೊಂಡೆ – ಸೊಪ್ಪು

೪. ಘೇವಡಾ – ಚಳ್ಳವರಿ – ಗಂಟ್ಟವರಿ – ಗ್ರಮಜಾ – ಮಾರ್ಧ್ವೀಕಾ, ಜತೂಕ, ಜಿನಶಿ – ಚಕ್ರವರ್ತಿಸೊಪ್ಪು

ಅಂತ್ಯ

೧೦. ಘೋಲಿಸಾಳಿ – ತುಪ್ಪಹೀರಿ – ಘೋಷಕಾ – ಜ್ಯಾತಿಫಲಾ ಜ್ಯಾತಿಫಲಾ ಜ್ಯಾತಿಕೋಶ್ಯಾ (ತ್ರುಟಿತ)

೧೧. ಘೋಳ – ಗೋಳಿ– (ಪಲ್ಲ್ಯಾ) – ಘೋಲಿಕಾ ಜೀನಂತಿಕೆ – ಅಮೃತ ಬಳ್ಳಿ ಜೀರಕಾ – ಹೋಂನೆಯ ಮರಾ,

ಚ ಆದಿ

೧. ಚಂಚುಬೀಜ – ಚುಂಚಲಬೀಜಾಗಿಡಾ – ಚಂಚು– ಚಂಚುಪತ್ರಿ, ಜೀವಂತ್ತಿ – ಜೀವನಿ– ಜೀವರಿಯಾ – ಕರಿಹಾಲಿ(ಸೊಪ್ಪು)

೨. ಚಣಿ – ಕಡ್ಲಿ – ಮೊನೆಗಡ್ಲಿ – ಚಣಕ – ಹರಿಮಂಥ – ಜೋತ್ಸ್ನಿ – ಪಡವಲಗಿಡಾ

೩. ಚಂಡಾಳ ಕಂದ – ಬಾಳರಾಕ್ಷಶೀಗಡ್ಡಿ – ರಾಕ್ಷಶೀಚಂಡಾ – ಝುಟ್ಟಿಲಾ – ಮೆಕ್ಕೆಯ ಗಿಡಾ–

ಅಂತ್ಯ

೩೭. ಚೂರ್ಣ – ಪುಡಿ ಸುಂಣ – ಚೂರ್ಣ – ದಾಡಿಯ ಪುಷ್ಪಕಾ – ಮುಳ್ಳು ಮುತ್ತಲದ ಗಿಡಾ.

೩೮. ಚೋಕ – ಹಳದಿಗುಳಗೋಲಕಿ ಬೇರು್ರ ಕೋಷ್ಟ ಸ್ವರ್ಣಕ್ಷೀರಿಮೂಲಿಕಾ

ದಾರ್ವಿಕಾ – ಬೆಂಡಿಗಿಡಾ – ಯತ್ತಿನ ನಾಲಿಗೆ ಗಿಡಾ – ರಸಾಂಜಕ

೩೯. (ಚಾಪೇಟನಿ) – ಧರಿಂಗ ಚಕ್ಕೆ – ವ್ಯಾಧಿನಾಶನ – ದಾರ್ರಿಪುರಿ – ತುಂಗಮುನ್ನಿ

೩೦. ಚೋರವೋರಾ – ಖುರಾಸಾನಿ ಅಜವಾನ – ತೋಹಾಕ – ದಾರ್ರು ಹರಿದ್ದು, ದಾರ್ವಿ – ಮರ ಅರಿಶಿಣ – ದೀರ್ಘವೃಂತಾ – ದಿಂಡುಗದ ಮರಾ ದೀಪ್ಯ – ಆಜವಾನಾ – ದುಸ್ಪರ್ಶ – ಚುರ್ಚಿ ದುದೇಮ – ವುಳ್ಳೇಗಡ್ಡಿ

"ಜ" ಆದಿ

೧. ಜಂಗಲಿ (ಅ)ಗಾರು – ಬಂದರಿಕೆ – ದಾಡಿಮ ಪುಷ್ಪಕ – ದೇವಿ – ಹೆಗ್ಗರುಟ್ಟಿಗೆ, ಸಂತೇಬೇರು್ರ ಸಾಲು? (ದ್ರವಂತಿ – ಯಯಾಲದ ಮರಾ)

೨. ಜಟ್ಯಾಮಾಶಿ – ಜಟ್ಯಾ ಮಾಈ – ತಪಶ್ವಿನಿ – ಅಷೀ ಸಾಲು? (ದ್ರಾವಿಡಕ – ಕಂದಕ ಚೋರ)

೩. ಜಪಾಳ – ಜೇಪಾಳ – ಜಾಪಾಳ –ಜಮಾಲಗೋಟ್ಟಿಹ – ದಾಂತಿ ದೃಕಿಲಮ – ದೇವದಾರ್ರು ವೃಕ್ಷ

೫. ಜಯಪರ್ಣವೃಕ್ಷ – ನರ್ರುವಲ – ಶ್ರೀಪರ್ಣ –ದೃಮಾಮಯ – ಅರಗು

ಅಂತ್ಯ

೧೭ ಜಯಾ–ಜಹಾ– ಸೂಜಿ ಮಲ್ಲಿಗೆ–ದವನ ಮಲ್ಲಿಗೆ – ಯೂಥಿಕಾ, ರಕ್ತಮೂಲ, ಹೊಂಗೆ, ಹುಲಾಶಲಗಿಡಾ

೧೮ ಜೋಂಧಳಾ – ಜೋಳಾ – ಯಾವನಾಳ –ಜೋಂತಾಲ – ನಾಗರಂಗ – ಜೌಡಲಾ

೧೯. ಜೇಷ್ಟಮಧ – ನ ಮಧುಕಾ – ಯಷ್ಟಮಧು – ಮಧುಕ – ಮಧುಕಯಷ್ಟೆ – ನಾಡೇಯಾ – ನೀರಹಬ್ಬೆ, ಕಾಗಿ ನೇರಲಾ, ಕಗ್ಗಲಿ ನೆಲನೀರಲಾ

೨೦. ಜೋತಿಷ್ಟತಿ – ಕರಿಸೊಂಗೆ– ಮಾಲಕಂಗುಣಿ– ಜೋತಿಷ್ಪತಿ, ನಾಳಿಕೇರ – ತೆಂಗಿನಮರಾ

ಝ

೧ ಝೂಡ – ಗಿಡಾ – ಮರಾ – ವೃಕ್ಷ – ನಾಗರ – ಶುಂಠಿ

೨ ಝುಂಫ(ರ್ತಿ) – ವಟ್ಟು ನಟ್ಟಿಗೆ – ಕಟ್ಟು ನಾಣಿ – ಝುಂಝುರಾ – ನಾಗಬಲಾ – ಹೀರಿಗಿಡಾ ನಿಷ್ಕ – ಹಿರಿಯಾಲಕ್ಕೀ ನಿಶ್ಮಾಖ್ಯ – ಅರಿಷಿಣಾ ಗಿಡಾ, ನಿಚುಲ – ಕಣಗಲ ಗಿಡಾ.

ಟ

ಆದಿ

೧. ಟ್ವೆರಕಾಂಕಡಿ – ದೊಡ್ಡಪಾಲೆ – ಗ್ರೀಷ್ಟ ಕರ್ಕಟ – ನೀಲಕಾ

೨. ಟಾಕಣಖಾರ – ಬಳಗಾರ – ದ್ರಾವಕರಾ –ದ್ರಾವಣಕಾ ಕರಿತಿಕ್ಕಿ – ನೀಲಿನೀ – ನೀಲಿಯ ಗಿಡಾ

೩. ಟಾಂಕಳಾ – ಟಾಂಕಳೀ – ಟಕ್ಕಂಕೆ – ಹೊಸಲಂಗಿ ತಗ್ಗಚೆ ವುರಣಾಕ್ಷ – ಪ್ರಪಾನಾಟ – ನೀಲಿ – ಕಂಗೋರಂಟಗಿಡ ನೀಲಿಗಿಡ

೪. ಟೆಂಟುವೃಕ್ಷ – ತೆಗಡುಮರಾ – ದಿಂಡಲಮರಾ – ಮಂಡೂಕಪರ್ಣ–ಆರಲು ನೇ(ಮಿ)–ಹುಲಗಲಿಯ ಗಿಡಾ –

ಅಂತ್ಯ

೧೨. ಢೋರಗುಂಜ – ಹಿರೇಮದ್ದಿನಗಟ್ಟಿ – ಅಶ್ವಗಂಧಿ (ತ್ರುಟಿತ)

೧೩. ಢೋಲ – ಹೊದರ್ರು, ಹೊಟ್ಟಿ – ಕಲ್ಕಟ್ಟಿಕ

೧೪. ಡೇಖ – (ಡಾಂಗಳೀ) – ತೂಬು –ಪ್ರಸರಬಂಧನಾ

೧೫. ಢಬಕಾ – ಗೊಂಚಲುಗೊನೆ – ಗುಚ್ಛ – ಸ್ತಖಕ

ತ ಆದಿ

೧. ತಗರ – ನಂದಿಬಟ್ಟಲಾ – ನನ್ಯಾವರ್ತ

೨. ತಂಬಾಕು – ತಂಬಾಕು – ತಾಮ್ರಕುಷ್ಪಕಾ – ಪರಿಪೇಲರ, ಪ್ಲವ – ತುಂಗಮುಸ್ತಿ

೩. ತಮಾಲವೃಕ್ಷ – ಹುಲಗಲಿಭೇದ – ಕಾಲಸ್ಕಂಧತಾವಿಚ್ಛ ಪಲಾಶೆ – ಮುತ್ತಲಮರ

೪. ತರಬೂಜ – ಕಲ್ಲಂಗಡಿ – ಕಲಿಂಗ –(ಲೆಮಾಧ) ಪಲಾಕಷ – ನೆಗ್ಗಲಿಯ ಮರಾ

ಅಂತ್ಯ

೭. ತನಖೀರ – ತವರೆಲದ ಹಿಟ್ಟು – ತರಕ್ಷೀರ (ಗಳಲೋದ್ಭವ) ಪಂಚಾಂಗುಲ – ಆವುಡಲ ಗಿಡ ದೇವದಾರ್ರಿ – ಪಾರಿಭದ್ರಕ, ದೇವದಾರ್ರು (ತ್ರುಟಿಕ)

ಲಿಪ್ಯಂತರ ವಿವರಣೆ

ಹಸ್ತಪತ್ರಿಯಲ್ಲಿ ಈ ಕೆಳಕಂಡಂತೆ ಉಲ್ಲೇಖನಗಳು ಕಂಡು ಬರುತ್ತವೆ. ದಫ್ತರದ ಪುಸ್ತಕದಲ್ಲಿರುವ ೧ ಮತ್ತು ೩ ನೇ ಕಾಲಂನಲ್ಲಿ ಅಕಾರಾದಿ ಪದಗಳು ಹಾಗೂ ಅರ್ಥಗಳಿದ್ದು ೬ ನೇ ಕಾಲಂನಲ್ಲಿರುವ ನಿಘಂಟು ಪದಗಳು ವಿಭಿನ್ನವಾಗಿರುವಂತೆ ಕಂಡು ಬರುತ್ತದೆ, ೬ ನೇ ಕಾಲಂನಲ್ಲಿಯೂ "ಅ" ಕಾರದಿಂದ

"ಪ" ಕಾರದ "ಪಂಚಾಂಗುಲ ನಿಘಂಟು ಶಬ್ಬಗಳವರೆಗೆ ಅಂತ್ಯಗೊಂಡಿದೆ. ಇವುಗಳನ್ನು ತುಲನಾತ್ಮಕ ಅಧ್ಯಯನಕ್ಕೆ ಒಳಪಡಿಸಿ ಸಶಾಸ್ತ್ರೀಯವಾಗಿ ಪಠ್ಯವನ್ನು ಸಿದ್ಧಪಡಿಸುವ ಅಗತ್ಯ ಕಂಡುಬರುತ್ತದೆ. ಲಿಪಿಕಾರನು ಸರಕಾರಿ ಉದ್ಯೋಗದಲ್ಲಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿಯೇ ಮೂಲ ಕೃತಿಯಿಂದ ಲಿಪ್ಯಂತರ ಮಾಡಿರುವುದು ವ್ಯಕ್ತಪಡುತ್ತದೆ. ಅಕಾರಾಧಿ ನಿಘಂಟು ಶಬ್ಧಗಳನ್ನು ಹಸ್ತಪ್ರತಿಯಲ್ಲಿ ಕಂಡಂತೆ ಸಂಕ್ಷಿಪ್ತವಾಗಿ ಅಂಕಿ ಅಂಶಗಳೊಂದಿಗೆ ಅಧ್ಯಯನ ಶ್ರೀಲರ ಗಮನಕ್ಕಾಗಿ ನೀಡಲಾಗಿದೆ.

**ನಿಘಂಟು ಅಕಾರಾದಿ ಪದಸೂಚಿ:**

ಅ (ತ್ರುಟಿತ) ೩ ; ಆ ೨೨ ; ಇ ೫ ; ಉ ೧೪ ; ಏ ೫ ;

ಐ ೧ ; ಓ ೪ ; ಔ ೧ ; ಕ ೩೯ ; ಕಾ ೪೪ ; ಕಿ ೨ ;

ಕು ೧೨ ; ಕೂ ೧ ; ಕೃ ೧ ; ಕೇ ೩ ; ಕೊ ೧೬ ; ಕಂ ೧ ;

ಖ ೪ ; ಖಾ ೬ ; ಖಿ ೨ ; ಖು ೨ ; ಖೈ ೧ ; ಖೊ ೧ ;

ಗ ೧೨ ; ಗಾ ೭ ; ಗೀ ೧ ; ಗು ೯ ; ಗೊ ೬ ; ಘ ೨ ;

ಘಾ ೨ ; ಘೇ ೨ ; ಘೋ ೫ ; ಚ ೮ ; ಚಾ ೬ ;

ಚಿ ೧೦ ; ಚೀ ೨ ; ಚು ೧ ; ಚೂ ೧ ; ಚೋ ೩ ;

ಜ ೯ ; ಜಾ ೭ ; ಜೋ ೫ ; ಝು ೨ ; ಟ ೬ ;

ಡ ೫ ; ಡೊ ೩ ; ಡ ೧ ; ೩ ೭ ;

ಒಟ್ಟು ೩೧೨ ಪದಗಳಲ್ಲಿ ೧ ಮತ್ತು ೨ (ಅರ್ಥ) ಕಾಲಂನಲ್ಲಿ ಉಲ್ಲೇಖನಗೊಂಡಿವೆ.

ಕನ್ನಡ ಮೋಡೀಲಿಪಿಯ ವಿಭಿನ್ನ ನಿಘಂಟು ಪದಗಳು ೧೦ ; ಸಂಸ್ಕೃತ ಕರ್ನಾಟಕ ನಿಘಂಟು ಉಲ್ಲೇಖನದಲ್ಲಿ

'ಅ' ಮತ್ತು 'ಆ' ೫೬ ; ಯಿ (ಇ) ೮ ; ವು (ಉ) ೭; ವೂ (ಊ) ೩;

ರ್ರು (ಋ) ೪; ಯೇ (ಏ) ೩ ; ಅ (ಐ) ೧ ;. ವೊ (ಓ) ೧;

ಕ ೪೨ ; ಕಾ ೨೦ ; ಕಿ ೩ ; ಕು ೨೧ ; ಕೂ ೨ ; ಕೃ ೬ ;

ಕೊ (ಕೋ) ೫ ; ಖ ೪ ; ಗ ೧೦ ; ಗಾ ೨ ; ಗು ೪ ; ಗೊ ೪;

ಘ ೫; ಚ ೯ ; ಚಾ ೨ ; ಚಿ ೫ ; ಚು ೨ ; ಛ ೨ ;

ಛಿ ೧ ; ಜ ೫ ; ಜಾ ೨ ; ಜೀ ೨ ; ಜೊ ೧ ; ಝು ೩;

ಡ 1 ; ಡು 1 ; ತ 5 ; ತಾ 6 ; ತಿ 1 ; ತು 6 ;

ತೃ 2 ; ತೇ 2 ; ದ 1 ; ದಾ 4 ; ದೀ 2 ; ದು 2 ;

ದೇ 1 ; ದೃ(ದ್ರ) 5; ದಂ 2 ; ಧ 1; ಧಾ 3;

ಧು 1 ; ನ 2 ; ನಾ 9 ; ನಿ 2 ; ನೀ 3 ; ನೇ 1 ;

ಪ 22; ಪಾ 1 ; ತ್ರುಟಿತ

ಒಟ್ಟು 331 ಪದ (ನಿಘಂಟು)ಗಳು 9ನೇ ಕಾಲಂನಲ್ಲಿ ಉಲ್ಲೇಖಿಗೊಂಡಿವೆ.

**ಉಪ ಸಂಹಾರ**

ಸ್ವಾತಂತ್ರ್ಯ ಪೂರ್ವದಲ್ಲಿರುವ ತಾಲ್ಲೂಕು ಕಚೇರಿಗಳು, ಜಿಲ್ಲಾಧಿಕಾರಿ ಕಚೇರಿಗಳು, ಮುನಿಸಿಪಾಲಿಟಿ ಮುಂತಾದ ಕಚೇರಿಗಳ ದಫ್ತರಖಾನೆಗಳು ಜ್ಞಾನ ಭಂಡಾರದ ಖಜಾನೆಗಳಾಗಿದ್ದವು. ಕರ್ನಾಟಕದ ಸರಕಾರಿ ದಾಖಲೆಗಳಲ್ಲಿ ಕುಂದಗೋಳ ಮುನಿಸಿಪಾಲಿಟಿ, ಹುಬ್ಬಳ್ಳಿ ತಾಲ್ಲೂಕು ಕಚೇರಿ ಪ್ರಾಚಿನವಾದುದೆಂದು ಕೇಳಿದ್ದೇನೆ, ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ತೀರ್ಥಹಳ್ಳಿಗೆ ಬದಲಾಗಿ ಕೌಲೇ ದುರ್ಗ ಅಮಲ್‌ದಾರರ ಕಚೇರಿಯಾಗಿದ್ದು ಈ ಸಂಬಂಧದ ದಾಖಲೆಗಳು ಉಪಲಬ್ಧವಿವೆ, ಸ್ವಾತಂತ್ರ್ಯ ಪೂರ್ವದಲ್ಲಿ ಅಮಲ್ದಾರರು, ಗುಮಾಸ್ತರು, ಶಾನುಭೋಗರು ಪಟೇಲರುಗಳೂ ಸಾಹಿತ್ಯಗಳಲ್ಲಿ ಪರಿಣಿತರಾಗಿರುವುದೂ ಕಂಡುಬಂದಿದೆ, ಉದಾ : ಎಂ.ಎಸ್. ಪುಟ್ಟಣ್ಣ, ರಾಜ ಪುರೋಹಿತರು ಎಸ್. ಕೆ. ಲಿಂಗಣ್ಣಯ್ಯ ಇತ್ಯಾದಿ, ಅವರೇ ಬರೆದಿಟ್ಟ ಹಸ್ತಪ್ರತಿಗಳು ಅನುಪಲಬ್ಧವಾಗಿವೆ. ಹಲವು ನ್ಯಾಯಾಲಯಗಳ ರಿಕಾರ್ಡ್ ರೂಂ ನಲ್ಲಿಯೂ ಹಸ್ತಪ್ರತಿಗಳಿದ್ದು, ಸಾಗರದ ನ್ಯಾಯಾಲಯದಲ್ಲಿ ನನ್ನ ಕಣ್ಣಮುಂದೆಯೇ ಹಸ್ತಪ್ರತಿ ಅಗ್ನಿಗಾಹುತಿಯಾಗಿರುವುದನ್ನು ನೋಡಿದ್ದೇನೆ. ಕರ್ನಾಟಕ ಸರಕಾರದ ಸಾಹಿತ್ಯ ನಿಯೋಗಿಯಾಗಿ ಮದರಾಸಿನಲ್ಲಿದ್ದಾಗ 86,000 ಕನ್ನಡ ಚಾರಿತ್ರಿಕ ದಾಖಲಾತಿ ಹಸ್ತಪ್ರತಿಗಳನ್ನು ಸರಕಾರವೇ ಅಗ್ನಿಗಾಹುತಿ ಮಾಡಿದ್ದುದನ್ನು ನಾನು ವರದಿ ಮಾಡಿದ್ದು ಈಗ ಇತಿಹಾಸ. ಇದೇ ನಿಟ್ಟಿನಲ್ಲಿ ಶಿವಮೊಗ್ಗ ಹಳೇ ಜಿಲ್ಲಾಧಿಕಾರಿಗಳ ಪ್ರಯತ್ನವೂ ಸಫಲವಾಗದೆ ಕೇವಲ ಸಿ.ಡಿ. ಮಾತ್ರ ಇರುವುದೂ ದುರ್ದೈವ.

❑❑

# ಹರತಿ ನಾಯಕರ ಕಾಲದ ಶಾಸನಗಳು ಮತ್ತು ಸಾಹಿತ್ಯ

– ಎಚ್.ಎಸ್. ಗೋಪಾಲ ರಾವ್

ಶಾಸನಗಳಿಗೂ ಸಾಹಿತ್ಯಕ್ಕೂ ಇರುವ ಸಂಬಂಧ ಬಹಳ ಪ್ರಾಚೀನ. ಚಿತ್ರದುರ್ಗ ಜಿಲ್ಲೆಯ ತಮಟಕಲ್ಲಿನ ಶಾಸನವು ವೀರನೊಬ್ಬನ ಪ್ರಶಸ್ತಿ. ಅದು ರಚಿತವಾಗಿರುವುದು ಅತ್ಯಷ್ಟಿ ವರ್ಗಕ್ಕೆ ಸೇರಿದ ವೃತ್ತರೂಪದಲ್ಲಿ ಎಂಬುದು ಡಾ.ಎಂ.ಚಿದಾನಂದ ಮೂರ್ತಿ ಅವರ ಅಭಿಪ್ರಾಯ ಇದು 'ನರ್ಕುಟಕ' ವೃತ್ತ ಎಂಬ ಅಭಿಪ್ರಾಯವೂ ಇದೆ. ಈ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಈ ವೀರನು ಯಾವ ರಾಜವಂಶಕ್ಕೆ ಸೇರಿದವನು ಎಂದೂ ಖಚಿತವಾಗಿ ತಿಳಿದಿಲ್ಲ. ಆದ್ದರಿಂದ ಅವನನ್ನು ಯಾವುದೇ ಪ್ರಖ್ಯಾತ ವಂಶಕ್ಕೆ ಸೇರದ ಒಬ್ಬ ಅಸಾಮಾನ್ಯ ವೀರ ಎಂದಷ್ಟೇ ತಿಳಿಯಬೇಕಾಗುತ್ತದೆ.

ಬಾದಾಮಿಯ ಕಪ್ಪೆಅರಭಟ್ಟನ ಶಾಸನವು ಅಂಶ ತ್ರಿಪದಿಯ ಮೊದಲ ಉದಾಹರಣೆಯಾಗಿದೆ. ಕವಿರಾಜಮಾರ್ಗಕ್ಕೆ ಮೊದಲಿನ ಕನ್ನಡ ಕಾವ್ಯದ ಬಗ್ಗೆ ತಿಳಿಯಲು ಶಾಸನಗಳೇ ಆಕರಗಳು. ಕಾವ್ಯಾತ್ಮಕ ಶಾಸನಗಳು ಪ್ರಸಿದ್ಧ ರಾಜವಂಶಗಳಿಗೆ ಮೀಸಲು ಎಂಬ ಅಭಿಪ್ರಾಯವಿದೆ. ಇದಕ್ಕೆ ಈ ಮೊದಲು ಪ್ರಸ್ತಾಪಿಸಿರುವ ಬಾದಾಮಿ ಚಲುಕ್ಯರ ಕಾಲದ ಕಪ್ಪೆಅರಭಟ್ಟನ ಶಾಸನ ಮಾತ್ರವಲ್ಲದೆ, ಐಹೊಳೆಯ ಮೇಗುತಿ ಗುಡಿಯ ಗೋಡೆಯ ಮೇಲಿರುವ ರವಿಕೀರ್ತಿ ರಚಿಸಿರುವ ಬಾದಾಮಿ ಚಲುಕ್ಯ ಪೊಲೆಕೇಶಿಯ ಪ್ರಶಸ್ತಿಶಾಸನ ಹಾಗೂ ರಾಷ್ಟ್ರಕೂಟ ಮೂರನೆಯ ಕೃಷ್ಣನ ಜೂರ ಪ್ರಶಸ್ತಿಶಾಸನ ಇತ್ಯಾದಿ ಇನ್ನೂ ಹಲವು ಶಾಸನಗಳು ಪ್ರಮುಖ ಉದಾಹರಣೆಗಳಾಗಿವೆ. ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ವಂಶದ ಪ್ರಸಿದ್ಧ ಅರಸರ ಬಗೆಗೂ ಶಾಸನಗಳಲ್ಲಿ ಪ್ರಶಸ್ತಿಗಳಿವೆ. ಪ್ರಮುಖರು ಮತ್ತು ಪ್ರಸಿದ್ಧರ ಬಗ್ಗೆ ಶಾಸನಗಳು ಮತ್ತು ಕಾವ್ಯಗಳು ಪ್ರಶಂಸಿಸಿರುವುದು ವಿಶೇಷ ಎನಿಸುವುದಿಲ್ಲ.

ಕರ್ನಾಟಕವನ್ನಾಳಿದ ಕೆಲವು ಅಪ್ರಮುಖ ಎನಿಸಿಕೊಂಡ ಸಣ್ಣಪುಟ್ಟ ರಾಜಮನೆತನಗಳ ಕೆಲವು ಮಹನೀಯರೂ ಪ್ರಶಂಸೆಗೆ ಒಳಗಾಗಿರುವುದು ವಿಶೇಷ ಗಮನ ಸೆಳೆಯುತ್ತದೆ. ಅವರು ಕವಿಪ್ರಶಂಸೆಗೆ ಪಾತ್ರರೋ, ಅಪಾತ್ರರೋ ಎಂಬ ವಿಚಾರ ಅಪ್ರಸ್ತುತ. ಪ್ರಸ್ತುತ ವಿಚಾರವೆಂದರೆ, ಅಪ್ರಮುಖ ಎನಿಸಿಕೊಂಡರೂ, ಆಳಿದ ಕೆಲವು ಮನೆತನಗಳ ಕೆಲವು ವ್ಯಕ್ತಿಗಳು ಸಮಕಾಲೀನ ಕವಿಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಕವಿಗಳಿಗೆ ಉಪ್ಪಿನ ಋಣ ತೀರಿಸುವ ಅನಿವಾರ್ಯತೆ ಇದ್ದಿರಬಹುದು. ಆದ್ದರಿಂದ ಪ್ರಶಂಸೆಗಳು ಉತ್ಪ್ರೇಕ್ಷೆ ಎನಿಸಿದರೂ, ಕಾವ್ಯಗಳು ಗ್ರಂಥರೂಪದಲ್ಲೋ, ಶಾಸನರೂಪದಲ್ಲೋ ಉಳಿದುಹೋಗಿವೆ. ಆದ್ದರಿಂದ ಸಾಹಿತ್ಯದ ವಿದ್ಯಾರ್ಥಿಗಳು ಅನಿವಾರ್ಯವಾಗಿಯಾದರೂ ಗಮನಿಸಬೇಕು. ಐತಿಹಾಸಿಕ ವ್ಯಕ್ತಿಗೆ ಸಂಬಂಧಿಸಿದ ಕಾವ್ಯವಾದರೆ ಇತಿಹಾಸದ ವಿದ್ಯಾರ್ಥಿಗಳು ವ್ಯಕ್ತಿನಿಷ್ಠವಾಗಿಯಾದರೂ ಗಮನಿಸಬೇಕಾದ್ದು ಅನಿವಾರ್ಯ.

ಪ್ರಸ್ತುತ ಲೇಖನದಲ್ಲಿ ಹರತಿ ನಾಯಕರ ರಾಜಕೀಯ ವಿಚಾರಗಳನ್ನು ಪ್ರಸ್ತಾಪಿಸುವ ಪ್ರಸಂಗವಿಲ್ಲ. ಆ ಕಾಲದ ಶಾಸನಗಳಲ್ಲಿ ಬಳಕೆಯಾಗಿರುವ ಕಾವ್ಯಾತ್ಮಕ ಭಾಗಗಳನ್ನು ಮಾತ್ರ ಪ್ರಸ್ತಾಪಿಸಲಾಗುತ್ತಿದೆ. ಜಾನಪದೀಯ ಮತ್ತು ಐತಿಹ್ಯ ಮೂಲದಿಂದ ಹರತಿ ನಾಯಕರ ಆರಂಭವನ್ನು ಮುಖ್ಯ ಮಾಡಿಕೊಳ್ಳದೆ, ಶಾಸನಗಳ ಮೂಲಕ ದೊರೆತಿರುವ ಮಾಹಿತಿಗಳ ಪ್ರಕಾರ ವಿಜಯನಗರ ಸಾಮ್ರಾಜ್ಯದ ಪತನಾನಂತರ ಅಸ್ತಿತ್ವಕ್ಕೆ ಬಂದ ಕೆಲವು ಅಮರನಾಯಕ ಅಥವಾ ನಾಯಕ ಮನೆತನಗಳ ಪೈಕಿ ಹರತಿಯ ಮನೆತನವೂ ಪ್ರಸಿದ್ಧಿ ಪಡೆದಿತ್ತು. ಕರ್ನಾಟಕದ ಪ್ರಬಲ ರಾಜಕೀಯ ಶಕ್ತಿಯಾಗಿಯೂ, ಇತಿಹಾಸದ ವಿದ್ಯಾರ್ಥಿಗಳ ಗಮನವನ್ನು ಹೆಚ್ಚಾಗಿ ಸೆಳೆಯದ, ಅಪ್ರಮುಖ ಎನಿಸಿಕೊಂಡರೂ ಗೌಣವೇನೂ ಅಲ್ಲದ ಕೆಲವು ನಾಯಕ/ ಮಹಾಪ್ರಭು/ ಪಾಳೆಯಗಾರರು ಎನಿಸಿಕೊಂಡ ಆಳುವ ವರ್ಗದ ಜನರು ನಾಡಿನ ಸಂಸ್ಕೃತಿಗೆ ನೀಡಿರುವ ಕೊಡುಗೆ ಗೌಣವೇನೂ ಅಲ್ಲ.

ಕ್ರಿ.ಶ.೧೬ನೆಯ ಶತಮಾನದ ಕೊನೆಯ ನಾಲ್ಕು ದಶಕಗಳಲ್ಲಿ ಬಲವರ್ಧನೆ ಮಾಡಿಕೊಂಡು ಸುಮಾರು ೧೦೦ ವರ್ಷಗಳ ತಮ್ಮ ಆಡಳಿತದ ಅವಧಿಯಲ್ಲಿ ಹಲವು ಶಾಸನಗಳ ಮೂಲಕ ಗಮನ ಸೆಳೆದಿರುವ ಹರತಿ ನಾಯಕರ ಕಾಲದಲ್ಲಿ ಸಾಹಿತ್ಯ ರಚನೆಯೂ ಆಗಿದೆ. ಅವರ ಕಾಲದ ಯಾವುದೇ ಸಾಹಿತ್ಯ ಕೃತಿಗಳು ನನ್ನ ಗಮನಕ್ಕೆ ಬಂದಿಲ್ಲವಾದ್ದರಿಂದ, ನನ್ನ ಗಮನಕ್ಕೆ ಬಂದಿರುವ ಕೆಲವು ಶಾಸನಗಳ ಮೂಲಕ ಅವರ

# ೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ, ಅರಸಿನಕುಂಟೆ, ನೆಲಮಂಗಲ ತಾ., ಬೆಂಗಳೂರು ಗ್ರಾ ಜಿಲ್ಲೆ–೫೬೨ ೧೨೩

ಕಾಲದ ಸಾಹಿತ್ಯಿಕ ವಿಚಾರಗಳ ಪರಿಚಯ ಮಾಡಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಪ್ರಸ್ತಾಪಿಸುತ್ತಿರುವ ಐದು ಶಾಸನಗಳ ಪೈಕಿ ಒಂದು ಮಾತ್ರ ತಾಮ್ರಶಾಸನ. ಉಳಿದ ನಾಲ್ಕು ಶಿಲಾಶಾಸನಗಳು. ಇವುಗಳ ಕಾಲಘಟ್ಟ ಕ್ರಿ.ಶ.೧೬೨೧ ರಿಂದ ೧೬೭೦. ಕ್ರಿ.ಶ.೧೬೨೧ರ ತಾಮ್ರಶಾಸನದಲ್ಲಿ ಇರುವ ಎರಡು ಶ್ಲೋಕ ಮತ್ತು ಒಂದು ಉಪಜಾತಿ ಛಂದಸ್ಸಿನ ಭಾಗಗಳು ಸಂಸ್ಕೃತ ಭಾಷೆಯಲ್ಲೇ ಇವೆ. ಎರಡೂ ಶ್ಲೋಕಗಳು ಬಹುತೇಕ ಶಾಸನಗಳಲ್ಲಿ ಬಳಸಲಾಗಿರುವ ಶಿವನ ಪ್ರಾರ್ಥನೆಯ ರೂಪದ ನಾಂದಿ ಪದ್ಯವಾದ 'ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥' ಮತ್ತು ಶಾಪಾಶಯದ 'ದಾನಪಾಲನಯೋರ್ಮಧ್ಯೇ ... ಪಾಲನಾದಚ್ಯುತಂಪದಂ ॥', 'ಸ್ವದತ್ತಂ ದ್ವಿಗುಣಂ ಪುಣ್ಯಂ.... ಸ್ವದತ್ತಂ ನಿಷ್ಪಲಂ ಭವೇತ್॥', 'ಯೇಕೈವ ಭಗಿನೀ ಲೋಕೇ ...... ವಿಪ್ರದತ್ತಾ ವಸುಂಧರಾ॥' ಮತ್ತು 'ಸ್ವದತ್ತಾ ದುಹಿತಾ ಧಾತ್ರೀ...... ಭೂಮಿಂ ಪರಿತ್ಯಜೇನ್॥' ಎಂಬ ಶ್ಲೋಕಗಳು.

**ಆದಿತ್ಯಚಂದ್ರಾ ಅನಿಲೋನಲಶ್ಚಾ।**
**ದ್ಯೌರ್ಭೂಮಿರಾಹೋ ಹದಯ್ಯೆಯಮಶ್ಚ॥**
**ಅಹಶ್ಚರಾತ್ರಿಶ್ಚ ವುಭೇಚ ಸಂಧೌ।**
**ಧರ್ಮಸ್ಯ ಚಾನಾತಿ ನರಸ್ಯವೃತ್ತಂ॥**

ಇದನ್ನು ಶ್ಲೋಕ ಎಂದು ಶಾಸನದ ಕವಿ ಅಥವಾ ಲಿಪಿಕಾರ ನಮೂದಿಸಿದ್ದರೂ, ಛಂದಸ್ಸಿನ ಅಧ್ಯಯನ ಮಾಡಿದವರಿಗೆ ಇದರಲ್ಲಿ ಉಪಜಾತಿಯ ಲಕ್ಷಣಗಳಿರುವುದು ಗಮನಕ್ಕೆ ಬರುತ್ತದೆ. ಇದು ನಾಲ್ಕು ಪಾದಗಳಿರುವ ಒಂದು ರಚನೆ. ವಿಷಮ ಚತುಷ್ಪದಿಯಾಗಿರುವ ಇದನ್ನು ಉಪಜಾತಿ ವರ್ಗ ಎಂದು ತಿಳಿದರೆ ಅಡ್ಡಿಯಿಲ್ಲ. ಈ ಮೇಲೆ ಪ್ರಸ್ತಾಪಿಸಿದ ಶಾಸನ ಭಾಗವು ಸಂಸ್ಕೃತ ಭಾಷೆಯದು. ಪ್ರಖ್ಯಾತ ಅಥವಾ ಸಾಮಾನ್ಯವಾಗಿ ಬಳಕೆಯಾಗಿರುವ ಶಿವಸ್ತುತಿ, ವಿಷ್ಣುಸ್ತುತಿ, ಅಥವಾ ಜಿನ ಸ್ತುತಿಗಳ ಮೂಲಕ ಶಾಸನಗಳಲ್ಲಿನ ಸಾಹಿತ್ಯಿಕ ವಿಚಾರಗಳನ್ನು ವಿಶ್ಲೇಷಿಸುವುದು ಮಹತ್ವದ ವಿಚಾರ ಎಂದು ನನಗನಿಸುವುದಿಲ್ಲ. ಸಿದ್ಧಪಾಠವನ್ನು ಬಿಟ್ಟ ಜಾಗವನ್ನು ಭರ್ತಿ ಮಾಡಲು ಬಳಸುವಂತೆ ಬಳಸಿಕೊಳ್ಳುವುದು ಕವಿಯ ಸ್ವಂತ ಪ್ರತಿಭೆ ಅಥವಾ ಶ್ರಮ ಎನಿಸಿಕೊಳ್ಳುವುದಿಲ್ಲ.

ಹರತಿ ನಾಯಕರಿಗೆ ಸಂಬಂಧಿಸಿದ ಪಾವುಗಡ ತಾಲ್ಲೂಕಿನ ನಾಲ್ಕು ಶಿಲಾಶಾಸನಗಳು ಆ ಕಾಲದ ಸಾಹಿತ್ಯಿಕ ವಿಚಾರಗಳಿಗೆ ಸಂಬಂಧಿಸಿದಂತೆ ಮಹತ್ವದ ಉದಾಹರಣೆಗಳಾಗಿವೆ.

೧

ಕ್ರಿ.ಶ.೧೬೫೩ರ ನಿಡುಗಲ್ಲು ಶಾಸನದ ಉದ್ದೇಶವು ವೇದಾವತಿ ನದಿಯ ಪೂರ್ವಕ್ಕಿರುವ ಕಾಳಾಂಜನಗಿರಿಯಲ್ಲಿ ಬಸವದೇವನ ದೇವಾಲಯದ ನಿರ್ಮಾಣ ಮತ್ತು ಅಲ್ಲಿನ ಸೇವೆಗಳಿಗೆ ನೀಡಿದ ದಾನಗಳ ಉಲ್ಲೇಖವಾದರೂ, ಶಾಸನವು ಅಷ್ಟೇ ವಿಷಯವನ್ನು ಕಾವ್ಯಾತ್ಮಕವಾಗಿ ದಾಖಲಿಸಿದೆ. ಹರತಿಯ ವೀರ ತಿಪ್ಪರಾಜನಿಂದ ಹೊಟ್ಟೆನಾಯಕನವರೆಗೆ ಹರತಿ ನಾಯಕರ ವಂಶಾವಳಿಯನ್ನು ನೀಡಿರುವ ಶಾಸನವು ತಿಮ್ಮರಾಜನನ್ನು ಚಂಪಕಮಾಲಾ ವೃತ್ತದಲ್ಲಿ ವರ್ಣನಾತ್ಮಕವಾಗಿ ಪರಿಚಯಿಸಿದೆ.

**ಚಂಪಕಮಾಲೆ**
**ಹರತಿಯ ತಿಪ್ಪರಾಜಸುತ ಕಾಮಯಭೂಪತಿಗಬ್ಬಭೂಪಗಂ**
**ವರಸುತಬೊಂಮಭೂಮಿಪತಿತತ್ಸುತನಾದಿಸುರೇಂದ್ರನಾತಗಂ**
**ಹಿರಿಯೊಡೆಯರ್ಗೆಚಿಕ್ಕನ್ರುಪನಾತಗೆ ಹೊಟ್ಟೆನ್ರುಪಾಲ ತತ್ಸುತಂ**
**ನರನುತ ನಂದಿಭೂಪಸುತಹೊಟ್ಟೆನ್ರುಪಾತ್ಮಜತಿಮ್ಮಭೂವರಂ**

ವೃತ್ತದ ಪ್ರತಿ ಪಾದದ ಮೊದಲ ನಾಲ್ಕು ಅಕ್ಷರಗಳು ಲಘುವಾಗಿರುವುದು ಚಂಪಕಮಾಲಾ ವೃತ್ತದ ಸಾಮಾನ್ಯ ಲಕ್ಷಣ. ಇಲ್ಲಿ ಬಳಕೆಯಾಗಿರುವ ಭಾಷೆಯು ಮಧ್ಯಕಾಲೀನ ಕನ್ನಡದ ಲಕ್ಷಣಗಳನ್ನು ಒಳಗೊಂಡಿದೆ.

ಇದೇ ಶಾಸನದಲ್ಲಿ ಕವಿಯು ಎರಡು ಕಂದ ಪದ್ಯಗಳನ್ನೂ ರಚಿಸಿದ್ದು, ಅವುಗಳ ಪಾಠ ಕ್ರಮವಾಗಿ ಹೀಗಿವೆ.

**ಧೀರನಾ ತಿಂಮಭೂಪ ಕೊ**
**ಮಾರಂ ಹೊಟ್ಟೇಂದ್ರನಾತನಂಗನೆ ಸಾಕ್ಷಾತ್।**
**ಶ್ರೀರಮಣಿ ಚಿಂನಮಾಂಬೆಗೆ**
**ಕಾರಣಿಕಂ ವೀರಹೊಟ್ಟೆನ್ರುಪನುದಯಿಸಿದಂ॥**

**ಶ್ರೀರಂಗರಾಯರಾಳಿಕೆ**
**ಯೋರಂತಿರೆ ವಿಜಯವರುಷ ಕಾರ್ತಿಕದೊಳಂ।**
**ದಾರೆಯ ತ್ರಯೋದಸಿಯ ಶಶಿ**
**ವಾರದೊಳ್ ವೇದವತಿಗೆ ಮೂಡಣ ದಿಶೆಯೊಳ್॥**

**ವರಕಾಳಾಂಜನಗಿರಿಯೊಳ್**
**ವಿರಚಿಸಿದಂ ಗುಡಿಯ ಬಸವದೇವಂಗೊಲವಿಂ।**
**ವರಕುಲಕನಂತ ಸುಶ್ರುತಂ**
**ದೊರಕೊಂಬೋಲು ವೀರಹೊಟ್ಟೆ ಧರಣೀಪಾಲಂ॥**

ಮೇಲಿನ ಮೂರೂ ಕಂದ ಪದ್ಯಗಳು ಕಂದದ ಎಲ್ಲಾ ಲಕ್ಷಣಗಳನ್ನೂ ಪ್ರತಿನಿಧಿಸುವುದಿಲ್ಲ. ಇವು ಅಶುದ್ಧವಾಗಿವೆ. ಗಣಗಳ ಲೆಕ್ಕಾಚಾರದಲ್ಲೇ ತಪ್ಪಿದೆ. ಈ ಕಾರಣದಿಂದ ಈ ಶಾಸನದ ಕವಿಯ ಪ್ರತಿಭೆಯ ಬಗ್ಗೆ ಅನುಮಾನ ಮೂಡುತ್ತದೆ. ಚಂಪಕಮಾಲೆಯ ಆರಂಭದಲ್ಲಿ ಕವಿಯು ಗಣಪಾಲನೆ ಮಾಡಿದ್ದರೂ ನಂತರ ಗಣಪಾಲನೆಯಿಂದ ದೂರವೇ ಉಳಿದಿದ್ದಾನೆ. ಈ ಕಾರಣದಿಂದ ಕವಿಯ ಸಾಮರ್ಥ್ಯದ ಬಗ್ಗೆ ಅನುಮಾನ ಬರುವುದಾದರೂ, ಲೋಪಕ್ಕೆ ಲಿಪಿಕಾರನೂ ಕಾರಣನಾಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಲೋಪಗಳು ಏನೇ ಇದ್ದರೂ, ಇಂತಹ ಪ್ರಯೋಗಕ್ಕಾದರೂ ಹರತಿಯ ನಾಯಕರ ಆಳ್ವಿಕೆಯಲ್ಲಿ ಅವಕಾಶವಿತ್ತು ಎನ್ನುವುದು ಮೆಚ್ಚುಗೆಯ ವಿಚಾರ. ಈ ಶಾಸನದಲ್ಲಿ ಕವಿಯ ಅಥವಾ ಲಿಪಿಕಾರನ ಅಥವಾ ಓಜನ ಹೆಸರಿಲ್ಲ. ಆದ್ದರಿಂದ ಈ ಬಗ್ಗೆ ಹೆಚ್ಚಿನ ಚರ್ಚೆಗೆ ಅವಕಾಶ ಇಲ್ಲವಾಗಿದೆ.

ಮೂರನೆಯ ಕಂದಪದ್ಯವು ನಿಡುಗಲ್ಲಿಗೆ ಕಾಳಾಂಜನಗಿರಿ ಎಂಬ ಹೆಸರೂ ಇದ್ದುದನ್ನು ಸೂಚಿಸುತ್ತದೆ.

೨

ನಿಡುಗಲ್ಲಿನ ಕ್ರಿ.ಶ.೧೬೬೧ರ ಶಾಸನ ವು ಹರತಿಯ ವೀರ ಹೊಟ್ಟೆ ನೃಪನು ನಿಡುಗಲ್ಲಿನಲ್ಲಿ ತನ್ನ ತಂದೆ ಮತ್ತು ತಾಯಿಗೆ ಒಳಿತಾಗಲಿ ಎಂದು ಸಾರವಾಥೀಶ ಮಂದಿರವನ್ನು ಕಟ್ಟಿಸಿದ ವಿಷಯವನ್ನು ದಾಖಲಿಸಿದೆ. ಈ ಶಾಸನವೂ ನಿಡುಗಲ್ಲನ್ನು ಕಾಳಾಂಜನಪುರ ಎಂದು ಸಂಬೋಧಿಸಿದೆ.

ಈ ಶಾಸನದಲ್ಲೂ 'ನಮಸ್ತುಂಗ ಶಿರಶ್ಚುಂಬಿ' ಮತ್ತು 'ಸ್ವದತ್ತಾ ದ್ವಿಗುಣಂ ಪುಣ್ಯಂ ..... ...ನಿಷ್ಪಲಂ ಭವೇತ್' ಎಂಬ ಸಂಸ್ಕೃತ ಶ್ಲೋಕಗಳಿವೆ.

ಜೊತೆಗೆ ಒಂದು ಚಂಪಕಮಾಲಾ ವೃತ್ತ ಮತ್ತು ಏಳು ಕಂದಪದ್ಯಗಳಿವೆ ಈ ಶಾಸನವನ್ನು ರಚಿಸಿದ ಕವಿಂಯೂ ತನ್ನ ಹೆಸರನ್ನು ತಿಳಿಸಿಲ್ಲ.

ಚಂಪಕಮಾಲೆ
ಹರತಿಯ ತಿಪ್ಪರಾಜಸುತ ಕಾಮಮಹೀಪತಿಯಬ್ಬಭೂಪಗಂ
ವರಸುತಬೊಂಮಭೂಮಿಪತಿತತ್ಸುತನಾದಿಸುರೇಂದ್ರನಾತಗಂ
ಹಿರಿಯೊಡೆಯರ್ಗೆಚಿಕ್ಕನ್ರುಪನಾತಗೆ ಹೊಟ್ಟೆನ್ರುಪಾಲ ತತ್ಸುತಂ
ನರನುತ ನಂದಿಭೂಪಸುತಹೊಟ್ಟೆನ್ರುಪಾತ್ಮಜತಿಂಮಭೂವರಂ

ಕ್ರಿ.ಶ.೧೬೫೩ರ ಶಾಸನದಲ್ಲಿ ಪ್ರಯೋಗಗೊಂಡಿರುವ ಚಂಪಕಮಾಲೆಯ ಪಾಠವೇ ಇಲ್ಲಿ ಸ್ವಲ್ಪ ಮಾತ್ರ ಬದಲಾವಣೆ ಹೊಂದಿದೆ. ಮೊದಲ ಪಾದದಲ್ಲಿನ 'ಕಾಮಯಭೂಪತಿ' ಈ ಶಾಸನದಲ್ಲಿ ಕಾಮಮಹೀಪತಿ' ಯಾಗಿದೆ. ಇದರಿಂದ ಛಂದಸ್ಸಿಗೆ ಯಾವುದೇ ತೊಂದರೆಯಾಗಿಲ್ಲ. ಉಳಿದಂತೆ ಯಾವುದೇ ಬದಲಾವಣೆಗಳಿಲ್ಲ.

ಧೀರನಾ ತಿಂಮಭೂಪಕೊ
ಮಾರಂ ಹೊಟ್ಟೇಂದ್ರನಾತನಂಗನೆ ಸಾಕ್ಷಾ।
ಸ್ತ್ರೀರಮಣಿ ಚಿಂನ್ನಮಾಂಬಿಗೆ
ಕಾರಣಿಕಂ ವೀರಹೊಟ್ಟೆನ್ರುಪನುದಯಿಸಿದಂ॥

ಈ ಹಿಂದೆ ಉಲ್ಲೇಖಿಸಲಾಗಿರುವ ಕ್ರಿ.ಶ.೧೬೫೩ರ ಶಾಸನದಲ್ಲೂ ಇದೇ ಕಂದ ಪದ್ಯವಿದೆ. ಪಾಠದಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ.

ಗುರುಕರದಿ ತತ್ಸಮೀಪದ
ಪರಸಾದವ ತರಿಸಿ ಮನದ ಪರಮಾನಂದದಿ।
ವರ ಹೊಟ್ಟೇಶ್ವರ ನಾಮದಿ
ಧರೆಯೊಳು ಪ್ರಖ್ಯಾತವಾಗಿ ಚಿರಮಿರಲೆಂದುಂ॥

ತುಂಬಿರ್ದ್ದ ಪುಂಣ್ಯಲೋಕದ
ಯಿಂಬಿನೊಳಿರಲೆಂದು ಪಿತರಿಗಾ ಹೊಟ್ಟೆನ್ರುಪಂ।
ಚೆಂಬಳಿಸಾವಿರದೈನೂ
ರೆಂಬತ್ತೆರಡನೆಯಶಾಲಿವಾಹನಶಖದೊಳ್॥

ಶ್ರೀರಂಗರಾಯದಿನದೊಳ್ವಾ
ವ್ವರಿಸಂವತ್ಸರದ ಮಾಘ ಶಿತ ಯೇಕಾದಶಿ।
ವಾರ ಸುಸೌಂಮ್ಯ ಸುಲಗ್ನದಿ
ಧಾರುಣಿಪತಿ ಹೊಟ್ಟೆಭೂಪ ವಿರಚಿತಲಿಂಗಂ॥

ವರಕಾಳಾಂಜನಗಿರಿಗಾ
ಪುರಭಾಗದಿರಚಿಸಿದಂಥಸುರವರ ಮಧ್ಯದಿ
ವಿರಚಿಸಿ ಗುಡಿಯಂ ಪ್ರೇಮದಿ
ಕರುಣಾನಿಧಿ ವೀರಹೊಟ್ಟೆ ಧರಣೀಪಾಲಂ॥

ನಿಜಕುಲಕನಂತ ಸುಕ್ರುತಂ
ಭಜನರ್ಗಿಷ್ಟಾರ್ಥಫಲವು ಯಜಸರ್ಗ್ಗೆಲ್ಲಂ।
ನಿಜಪದದೊರವೊಲುಸೀಘ್ರದಿ
ಸ್ರುಜಿಸಿದ ವೇದಾಗಮೋಕ್ತ ದ್ವಿಜಸಂಕುಲದಿಂ॥

ಮೇಲಿನ ಆರೂ ಕಂದಪದ್ಯಗಳ ಛಂದಸ್ಸಿನಲ್ಲಿ ಸ್ವಲ್ಪಮಟ್ಟಿನ ವ್ಯತ್ಯಾಸಗಳಿರುವುದನ್ನು ಗಮನಿಸಿದಾಗ, ಕವಿಗೆ ಪಾದದಲ್ಲಿ ಇರಬೇಕಾದ ಒಟ್ಟು ಮಾತ್ರೆಗಳ ಬಗ್ಗೆ ಲಕ್ಷ್ಯವಿತ್ತಷ್ಟೇ ಹೊರತು ಗಣಗಳ ವಿಚಾರದಲ್ಲಿ ಸ್ವಲ್ಪಮಟ್ಟಿನ ಸ್ವಾತಂತ್ರ್ಯ ಬಳಸಿಕೊಂಡಂತೆ ಕಾಣುತ್ತದೆ.. ಈ ಶಾಸನದಲ್ಲಿಯೂ 'ವರಕಾಳಾಂಜನಗಿರಿ . ಧರಣೀಪಾಲಂ' ಕಂದಪದ್ಯದಲ್ಲಿ ಈ ಮೊದಲ ಶಾಸನದಲ್ಲಿನ ಕಂದಪದ್ಯಕ್ಕಿಂತ ಸ್ವಲ್ಪಮಟ್ಟಿನ ವ್ಯತ್ಯಾಸಗಳಿವೆ.

೩

'ಹರತಿಯ ತಿಪ್ಪರಾಜಸುತ .... .....' ಈ ಚಂಪಕಮಾಲಾ ವೃತ್ತವನ್ನು ಬಹುತೇಕ ಹರತಿಯ ನಾಯಕರ ವಂಶಾವಳಿ ಉಲ್ಲೇಖಗೊಂಡಿರುವ ಎಲ್ಲ ಶಾಸನಗಳಲ್ಲೂ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಬಳಸಿಕೊಳ್ಳಲಾಗಿದೆ. ನಿಡುಗಲ್ಲಿನ ಮತ್ತೊಂದು ಶಾಸನದಲ್ಲಿ ಇದೇ ಪಾಠವುಳ್ಳ ಚಂಪಕಮಾಲಾ ವೃತ್ತ ಬಳಕೆಯಾಗಿದೆ. ಆ ಪಾಠವು ಹೀಗಿದೆ.

ಚಂಪಕಮಾಲೆ
ಹರತಿಯ ತಿಪ್ಪರಾಜಸುತ ಕಾಮಮಹೀಪತಿಯೆಂಬ ಭೂಪಗಂ
ವರಸುತ ಬೊಂಮಭೂಮಿಪತಿತತ್ಸುತನಾದಿಸುರೇಂದಪ್ರನಾತಗಂ
ಹಿರ್‍ರಿಯೊಡೆಯಂಗೆ ಚಿಕನ್ರುಪನಾತಗೆ ಹೊಟನ್ರುಪಾಲತತ್ಸುತಂ
ನರನುತ ನಂದಿಭೂಪಸುತ

ಶಾಸನದಲ್ಲಿ ಉಲ್ಲೇಖಿತ ಚಂಪಕಮಾಲಾ ವೃತ್ತದ ನಾಲ್ಕನೆಯ ಪಾದದ ಕೊನೆಯ ಭಾಗವು ಕೈತಪ್ಪಿದೆ ಅಥವಾ ನಷ್ಟವಾಗಿದೆ. ಒಟ್ಟಾರೆ ಇದೊಂದು ಅಪೂರ್ಣ ವೃತ್ತ ಎಂದು ತಿಳಿಯಲಾಗಿದೆ.

೪

ನ್ಯಾಯದಕುಂಟೆಯ ಒಂದು ಶಾಸನದಲ್ಲೂ ಹರತಿಯ ನಾಯಕರ ವಂಶಾವಳಿ ಮತ್ತು ವೀರ ತಿಮ್ಮಣ್ಣನಾಯಕನು ಕಾಳಾಂಜನಗಿರಿಯ ದಕ್ಷಿಣಕ್ಕೆ ಆರೂಢೇಶ್ವರ ಲಿಂಗದ ಪ್ರತಿಷ್ಠೆ ಮಾಡಿ, ಅದಕ್ಕೆ ದೇವಾಲಯವನ್ನು ಕಟ್ಟಿಸಿ, ದೇವಾಲಯದಲ್ಲಿನ

ವಿವಿಧ ಸೇವೆಗಳಿಗಾಗಿ ದಾನದತ್ತಿಗಳ ವ್ಯವಸ್ಥೆ ಮಾಡಿದ ದಾಖಲೆ ಇದ್ದು, ಅದರಲ್ಲಿಯೂ ಸಂಸ್ಕೃತ ಶ್ಲೋಕಗಳಲ್ಲದೆ, ತಲಾ ಒಂದು ಚಂಪಕಮಾಲಾ ಮತ್ತು ಶಾರ್ದೂಲವಿಕ್ರೀಡಿತ ವೃತ್ತಗಳು ಹಾಗೂ ಹನ್ನೊಂದು ಕಂದಪದ್ಯಗಳ ಬಳಕೆಯಾಗಿದೆ. ಶಾಸನದ ಛಂದೋಬದ್ಧ ಭಾಗವು ಹರತಿಯ ನಾಯಕರ ವಂಶಾವಳಿಯನ್ನು ಕುರಿತಾಗಿಯೇ ಇದೆ.

ಶಾಸನದ ಆರಂಭದಲ್ಲಿನ 'ನಮಸ್ತುಂಗ ಶಿರಶ್ಚುಂಬಿ ... ... ಶಂಭವೇ' ಮತ್ತು ಶಾಸನದ ಅಂತ್ಯದಲ್ಲಿನ 'ಸ್ವದತ್ತಾ ದ್ವಿಗುಣಂ... .... ನಿಷ್ಫಲಂ ಭವೇತ್' ಸಂಸ್ಕೃತ ಶ್ಲೋಕಗಳು ವಾಡಿಕೆಯಂತೆ ಬಳಕೆಯಾಗಿವೆ. ಅವುಗಳನ್ನುಳಿದು, ಕನ್ನಡ ಭಾಷೆಯ ಎರಡು ವೃತ್ತಗಳು ಮತ್ತು ಹನ್ನೊಂದು ಕಂದಪದ್ಯಗಳು ಶಾಸನಕವಿಯ ಮತ್ತು ದಾನಿಯ ಕಾವ್ಯಪ್ರೀತಿಯ ದ್ಯೋತಕಗಳಾಗಿವೆ.

ಮೇಲಿನ ಮೂರು ಶಾಸನಗಳಲ್ಲಿ ಉಲ್ಲೇಖಗೊಂಡಿರುವ

ಚಂಪಕಮಾಲೆ

ಹರತಿಯ ತಿಪ್ಪರಾಜಸುತ ಕಾಮಯಭೂಪತಿಗಬ್ಬಭೂಪಗಂ
ವರಸುತಬೊಂಮಭೂಮಿಪತಿತತ್ಸುತನಾದಿಸುರೇಂದ್ರನಾತಗಂ
ಹಿರಿಯೊಡೆಯರ್ಗೆಚಿಕ್ಕನ್ರುಪನಾತಗೆ ಹೊಟ್ಟೆನ್ರುಪಾಲ ತತ್ಸುತಂ
ನರನುತ ನಂದಿಭೂಪಸುತಹೊಟ್ಟೆನ್ರುಪಾತ್ಮಜತಿಮ್ಮಭೂವರಂ

ಈ ಚಂಪಕಮಾಲಾ ವೃತ್ತವು ಪ್ರಸ್ತುತ ಶಾಸನದಲ್ಲೂ ಬಳಕೆಯಾಗಿದೆ. ಮೊದಲ ಪಾದದ ಅಂತ್ಯದಲ್ಲಿನ 'ಕಾಮಯಭೂಪತಿ'ಯು ಈ ಶಾಸನದಲ್ಲಿ 'ಕಾಮಮಹೀಪತಿ' ಯಾಗಿ ಪಾಠಾಂತರಗೊಂಡಿದೆ. ಇದನ್ನು ಹೊರತುಪಡಿಸಿದರೆ ಮತ್ತಾವ ವ್ಯತ್ಯಾಸವೂ ಈ ವೃತ್ತದಲ್ಲಿ ಆಗಿಲ್ಲ. ಈ ಪಾಠಾಂತರವನ್ನು ಈಗಾಗಲೇ ಪ್ರಸ್ತಾಪಿತವಾಗಿರುವ ಕ್ರಿ.ಶ.೧೬೬೧ ಮತ್ತು ೧೭೦೦ರ ಶಾಸನಗಳಲ್ಲೂ ಕಾಣಬಹುದು.

ಪ್ರಸ್ತುತ ಶಾಸನದಲ್ಲಿ ಪ್ರಸ್ತಾಪಿತ ಚಂಪಕಮಾಲೆಯಲ್ಲದೆ ಒಂದು ಶಾರ್ದೂಲವಿಕ್ರೀಡಿತ ವೃತ್ತದ ಪ್ರಯೋಗವೂ ಇದೆ. ಅದು ಈ ಕೆಳಕಂಡಂತಿದೆ.

ಶಾರ್ದೂಲವಿಕ್ರೀಡಿತ

ಶ್ರೀಕಾಂತಂ ಕಮಲಾಂಬಕಂಶಿವಸಖಂ ಶ್ರೀವಿಷ್ಣುವೆಂಬಂತೆವೋಲ್
ಲೋಕೇಶಂಚತುರಾನನಂನಿರುತಭೂಲೋಕಾವನಂಬ್ರಂಮ್ಹನೊಲ್
ಶ್ರೀಕಂಠಂ ವಿಬುಧಪ್ರಿಯಂ ಶಿವನವೋಲ್ ಶ್ರೀವೀರಹೊಟ್ಟೇಂದ್ರ ಧಾ
ತ್ರೀಕಾಂತಾತ್ಮಜವೀರತಿಂಮಜನಪಂ ದೀನೌಘಕಲ್ಪದ್ರುಮಂ

'ಗುರುಮೊದಲ್ಮೂರಾಗೆ ಶಾರ್ದೂಲಂ' ಎಂಬ ಸೂತ್ರದ ಪ್ರಕಾರ ಮೇಲಿನ ಪದ್ಯವು ಶಾರ್ದೂಲವಿಕ್ರೀಡಿತವಾಗುತ್ತದೆ. ಮೇಲೆ ಉಲ್ಲೇಖಿಸಿದ ಎರಡು ವೃತ್ತಗಳಲ್ಲದೆ, ಶಾಸನದಲ್ಲಿ ಹನ್ನೊಂದು ಕಂದಪದ್ಯಗಳಿವೆ. ಅವುಗಳ ಪಾಠ ಈ ಕೆಳಕಂಡಂತಿದೆ.

ಧೀರನಾ ತಿಂಮಭೂಪಕು
ಮಾರಂ ಹೊಟ್ಟೇಂದ್ರನಾತನಂಗನೆ ಸಾಕ್ಷಾ।
ಶ್ರೀರಮಣಿ ಚಿಂನಮಾಂಬೆಗೆ
ಕಾರಣಿಕಂ ವೀರಹೊಟ್ಟೆನ್ರುಪನುದಯಿಸಿದಂ॥

ಧರೆಯೊಳಗಣ ವೀರಹೊಟ್ಟೆಯ
ವರನ್ರುಪಗಂಚಿಕ್ಕಮಾಂಬೆಯೀರ್ವರಿನಿಂದಂ।
ಸ್ಥಿರದಿಂ ಜನಿಸಿದ ಶುಭದಿಂ
ಕರುಣಾನಿಧಿ ವೀರ ತಿಂಮನ್ರುಪನೆಸೆದಿರ್ದ್ದಂ॥

ಕರುಣಾನಿಧಿ ಆರೂಢೇ
ಶ್ವರನ ಪದಾಂಭೋಜ ಮತ್ತಮಧುಕರನೆನಿಸುವ।
ಧೊರೆ ವೀರತಿಂಮನ್ರುಪತಿಗೆ
ಸ್ಫುರಮತಿಯಂ ಕರುಣದಿಂದ ನಿರುಪಿಸಲಾತಂ॥

ಪರಮಸಂತಸದೀ ಬುಧರಂ
ಕರಯಿಸಿ ಕಲ್ಪಾಗಮೋಕ್ತಪ್ರಕ್ರುತಿಗಳಿಂದಲಿ।
ಧರೆಯೊಳಗಾರೂಢೇಶ್ವರ
ಸ್ಥಿರಮೆನೆ ತಿಂಮೇಂದ್ರಭೂಪ ವಿರಚಿತಲಿಂಗಂ॥

ವರಕಾಳಾಂಜನಗಿರಿಗಾ
ಪುರ ದಕ್ಷಿಣಭಾಗದಲ್ಲಿ ಕೆರೆವನ ಸರಸಿಯ।
ವಿರಚಿಸಿ ಗುಡಿಯಂ ಪ್ರೇಮದಿ
ಧರೆಯೊಳು ಪ್ರಖ್ಯಾತಮಾಗಿ ಚಿರಮಿರಲೆಂದುಂ॥

ರಂಭೆಯ ರಮಣನ ಗದ್ದುಗೆ
ಯಂಬದು ಪಿತಗಾಗಲೆಂದು ತಿಂಮನ್ರುಪಾಲಂ।
ಚೆಂಬಳಿಸಾವಿರದೈನೂ
ರೆಂಬತ್ತೈದನೆಯ ಶಾಲಿವಾಹನ ಶಕದೊಳೂ॥

ಕ್ಷಿತಿಯ ಶ್ರೀರಂಗರಾಯರು
ಪ್ರತಿಪಾಲಿಪ ದಿವಸದಲ್ಲಿ ವತ್ಸರ ಶೋಭಾ
ಕ್ರುತು ಮಾರ್ಗಶಿರ(ದ) ದ್ವಾದಶಿ
ಸಿತವಾರ ಸೌಂಮ್ಯ ತಿಂಮ ವಿರಚಿತ ಲಿಂಗಂ॥

ಕುಲಕೆಲ್ಲಂ ಸುಕ್ರುತಂ ನಿ
ಚ್ಚಲು ಪೂಜಿಸುವವರಿಗಿಷ್ಟ ಸಂಪದವಹುದುಂ।
ಅಲಸದೆ ಸ್ಮರಿಸುವ ಮನುಜರ
ಖಲುಷಹರಂ ಈಶನೊಲುಮೆ ತಪ್ಪದಮೋಘಂ॥

ವರಕಂನ್ಯಧೇನು ಧನಮಂ
ಧರೆ ಹಯ ಕರಿವಸ್ತ್ರ ಅಂನ ಬ್ರಂಹ್ಮ ಸ್ಥಾಪ್ಯಂ।
ತರಣಿ ಸೋಮೋಪರಾಗದಿ
ನೆರೆದಾಣ ಸಹಸ್ರಫಲವು ದೊರೆವುದು ಸಿಧಂ॥

ಮ್ರುಗರಾಜನಂತೆ ಭಾರಿಯ
ನಿಗಳದ ಪಾದದಲಿಯಳದ ಮಂನೆಯನಾರೆ
ನಗೆಮೊಗದ ರಸಿಕರಂನನು
ಸೊಗಸಿನ ಸವಿಗಾರ ವೀರ ತಿಂಮವಜೀರಾ॥
ಆಡಿದ ವಾಕ್ಯ ಸಿಲಾಕ್ಷರ

ಬೇಡಿದರಿಲ್ಲೆಂಬ ಬಿನುಗು ಲೋಭಿನ್ರುಪಾಲರ।
ಮೂಡುವ ಮೀಸೆಗೆ ಗಂಡನು
ರೂಢಿಗೆ ಸತ್ಕೀರ್ತಿವಂತ ತಿಂಮಜಯಂತಾ॥

ಮೇಲಿನ ಹನ್ನೊಂದು ಕಂದಪದ್ಯಗಳಲ್ಲಿ 'ವರಕಾಳಾಂಜನಗಿರಿ ... ... ಚಿರಮಿರಲೆಂದುಂ' ಬಹುತೇಕ ಹರತಿ ನಾಯಕರ ಎಲ್ಲ ಶಾಸನಗಳಲ್ಲಿ ಮರುಕಳಿಸಿವೆ. 'ಮ್ರುಗರಾಜನಂತೆ ... ... ವೀರ ತಿಂಮವಜೀರಾ' ಮತ್ತು 'ಆಡಿದ ವಾಕ್ಯ ... ... ತಿಂಮವಜೀರಾ' ಕಂದಪದ್ಯಗಳು ಮನಸೆಳೆಯುವುವಲ್ಲದೆ, ಈ ಶಾಸನವನ್ನು ರಚಿಸಿದ ಕವಿಯ ಕಾವ್ಯಪ್ರತಿಭೆಯ ಬಗ್ಗೆ ಯಾವುದೇ ಅನುಮಾನಗಳನ್ನೂ ಉಳಿಸುವುದಿಲ್ಲ.

೫

ನಿಡುಗಲ್ಲಿನ ಕ್ರಿ.ಶ.೧೬೭೦ರ ಮತ್ತೊಂದು ಶಾಸನವೂ ಹರತಿಯ ನಾಯಕರಿಗೇ ಸಂಬಂಧಿಸಿದ್ದು, ಇದರಲ್ಲೂ 'ನಮಸ್ತುಂಗ ... ... ಶಂಭವೇ', 'ಸ್ವದತ್ತಾ ದ್ವಿಗುಣಂ ... ... .ನಿಷ್ಫಲಂಭವೇತ್' ಎಂಬ ಹೆಚ್ಚು ಬಳಕೆಯ ಶ್ಲೋಕಗಳಲ್ಲದೆ, 'ಯೇತತ್ ಬ್ರಂಹ್ಮಾದಿದೇವಾನಾಂ ... ... ಶಿವಮುಖಾಕ್ರುತಿ' ಎಂಬ ಮತ್ತೊಂದು ಶಿವಪರವಾದ ಶ್ಲೋಕವಿದೆ. ಈ ಶಾಸನದಲ್ಲೂ ತಿಪ್ಪರಾಜನಿಂದ ಆರಂಭಿಸಿ ತಿಮ್ಮನ್ರುಪನವರೆಗೆ ಹರತಿಯ ನಾಯಕರ ವಂಶಾವಳಿ ದಾಖಲಾಗಿದೆ.

ಈ ಶಾಸನದಲ್ಲಿಯೂ ಚಂಪಕಮಾಲಾ ವೃತ್ತದ ಮೊದಲನೆಯ ಪಾದದ 'ಹರತಿಯ ತಿಪ್ಪರಾಜಸುತ ಕಾಮಯಭೂಪತಿಗಬ್ಬಭೂಪಗಂ' ಅಥವಾ 'ಕಾಮಮಹೀಪತಿಯಬ್ಬಭೂಪಗಂ' ಎಂಬ ಭಾಗವು 'ಹರತಿಯ ತಿಪ್ಪರಾಜಸುತ ಕಾಮಮಹೀಪತಿಯನ್ನಭೂಪಗಂ' ಎಂಬ ಪಾಠಾಂತರದೊಡನೆ ಬಳಕೆಯಾಗಿದೆ.

ಹಿಂದಿನ ಶಾಸನದಲ್ಲಿನ 'ಧೀರಧೀರನಾ ತಿಂಮಭೂಪಕುಮಾರಂ....... ವೀರಹೊಟ್ಟೆನ್ರುಪನುದಯಿಸಿದಂ।' ಮತ್ತು 'ಧರೆಯೊಳಗಣ ... ... ತಿಂಮನ್ರುಪನೆಸೆದಿರ್ದಂ' ಎಂಬ ಕಂದಪದ್ಯಗಳು ಬದಲಾವಣೆಯೇ ಅಲ್ಲ ಎಂಬ ಮಟ್ಟಿನ ಸ್ವಲ್ಪಮಟ್ಟಿನ ಬದಲಾವಣೆಗಳೊಂದಿಗೆ ಬಳಕೆಯಾಗಿವೆ. ಆದರೆ ನಂತರದ ಹದಿಮೂರು ಕಂದಪದ್ಯಗಳು ಈ ಶಾಸನಕ್ಕೇ ಪ್ರತ್ಯೇಕವಾಗಿ ರಚನೆಗೊಂಡಿರುವಂತಿವೆ.

ಧರೆಯೊಳಗಧಿಕ ಕಳಾಂಜನ
ಗಿರಿಯೆನುತಲಿ ಬಂದು ಸಿಖರದೆಡೆಯೊಳು ನೆಲಸಿದ।
ವರ ಕಾಳಹಸ್ತಿಲಿಂಗನು
ಹರತಿಯ ತಿಂಮೇಂದ್ರಗೊಲಿದು ಮತಿಯಂಪಾಲಿಸೆ॥

ನಳಿನಾಕ್ಷ ರಾಮಭದ್ರನು
ವಲಿದುಂ ಪ್ರತಿಷ್ಠೆಗೈದ ಲಿಂಗದ ಗುಡಿ ತಾಂ।
ಹಳದಾಯಿತೆಂದು ಮನದಲಿ
ತಿಳಿದಾಕ್ಷಣ ಆಪ್ತರೊಡನೆ ಯೋಚಿಸಿ ಬೇಗದಿ॥

ಕರಸಿ ಶಿಲ್ಪಿಗಳನೈವರ
ಬರಿಸಿದ ಚಿತ್ರಗಳ ಬರದ ವಾಸ್ತುಜ್ಞರಿಗುಂ।
ತರಿಸಿ ಉಡುಗರೆಯ ವೀಳ್ಯಮ
ಹರತಿಯ ತಿಂಮೇಂದ್ರನಿತ್ತು ಸೀಘ್ರದಿ ರಚಿಸೆನೆ॥

ವಿರಚಿಸಿದರಂತರಾಳದ
ಕರದೊಪ್ಪುವ ರಂಗಮಂಟಪವನತಿರಂಮ್ಯದಿ।
ಸಿರಿವೆತ್ತ ಚಂದ್ರಶಾಲೆಯ
ನರಪತಿ ತಿಂಮೇಂದ್ರ ಪೇಳ್ದ ನೇಮದೊಳಾಗಂ॥

ಕಲ್ಲಕಂಭವನು ವಿರಚಿಸಿ
ತಲ್ಲಕ್ಷಣದಿಂದಲಾಗಸಿಖರವ ಸ್ಥಾಪಿಸಿ।
ಉಲ್ಲಾಸದಿಂ ಶಾಸನ
ದಲ್ಲಿಯೆ ಬರಸಿದನು ತಂಮ ವಂಶಾವಳಿಯನೂ॥

ಮದುವೇಮುಂಜಿಗಳಗಳದೆನುವ
ಮುದದಿಂ ಭೂಮಿಯನು ವಸ್ತ್ರಧನಧಾನ್ಯಂಗಳು।
ಮೊದಲಾದ ಶ್ರೇಷ್ಠ ದಾನದ
ಬುಧರಿಗೆ ಭೋಜನಉಸಹಿತ ದಣಿಸಿದ ತಿಂಮಂ॥

ಶಂಭುಸ್ತಿರವಾಗಿ ನೆಲೆಸಿಹ
ಯಿಂಬಿನೊಳ್ಪಿತನಿರಲಿಯೆಂದು ತಿಂವಜೀರಂ।
ಬೆಂಬಳಿ ಸಾವಿರದೈನೂ
ರ್ತೊಂಭತೆರಡನೆಯ ಶಾಲಿವಾಹನ ಶಖದೊಳ್॥

ಗುಣನಿಧಿ ಶ್ರೀರಂಗರಾಯಂ
ಯೆಣೆಕಿಲ್ಲದ ಕ್ಷಿತಿಯ ನಾಳೆ ವತ್ಸರ ಸಾಧಾ।
ರಣ ಜೇಷ್ಟ ಶುಧ ದ್ವಾದಸಿ
ಗಣನೆಗೆ ಸ್ತಿರವಾರ ತಿಂಮ ರಚಿಸಿದ ಮುದದಿಂ॥

ಕುಲಕೋಟಿಗೆ ಸುಕ್ರುತವಾಗಲಿ
ಫಳಲನೆ ಸಂತಾನ ಪೆರ್ಚ್ಚಿಪೈಶ್ವರಿ ತನಗಂ।
ನೆಲೆಯಾಗಿರಲೆಂದು ಯೀಶನ
ಸಲೆ ಭಜಿಸುತಲಿರ್ದ ತಿಂಮಭುವಿಸಧರ್ಮಾ॥

ಉತ್ಪಲಮಾಲೆ
ವೃಚಂದನಕುಂದ ಕಂದುಕಮುರಂಧರಸೈಂಧವದಂದಶೂಕ
ರಾಡಿಂದುಧರೇಂದು ಸಮಾನಕೀರ್ತಿಸುಂಧರಿನಂದಿತ
ವೀರಹೊಟ್ಟೆನ್ರುಪನಂದನ ಮಂದರಧೈರ್ಯವೈರಿರಾಟ್ಟಂದಿತ
ವೀರತಿಂಮನ್ರುಪ ಭೂಮಿಪ ಪಾಲಿಸು ಸುಧರ್ಮಚಿತ್ತದಿಂ

ಮತ್ತೇಭವಿಕ್ರೀಡಿತ
ವರಭಾರೀನಿಗಳಾಂಕವೀರಜಡೆಯಿಂದೊಪ್ಪೀಹ ರತ್ನಂಗಳಿಂ
ನಿರುತಂ ಭಾಸಿಗಕಂಠಮಾಲದೊಲವಿಂರಾಜಿಪ್ಪ ಮೌಕ್ತಿಂಗಳೊಳ್
ಬಿರುದುಂಬಾಉಲಿಬೊಂಬೆಪಾದಯುಗದಿಂದೆಸೆದಿರ್ಪ್ಪಶೌರ್ಯಂಗಳಿಂ
ಅರಿರಾಯಂ ಗಿರಿವಜ್ರತಿಂಮನ್ರುಪತೇಮತ್ತೇಭಕಂಠೀರವಾ

ಶ್ರೀಕನಕಾಂಗೀರಮಣದ
ಯಾಕಲಿತಕಟಾಕ್ಷವೀಕ್ಷಣಾಂಮ್ರುತಧಾರಾ।
ಸೀಕರಸಂಪಾದಿತಲಕ್ಷ್ಮೀ
ಕರಭವನಾಂತರಾಳತಿಂಮನ್ರುಪಾಲಾ॥

ಆಡಿದ ವಾಕ್ಯ ಸಿಲಾಕ್ಷರ
ಬೇಡಿದರಿಲ್ಲೆಂಬಬಿನುಗು ಲೋಭನ್ರುಪಾಲರ।
ಮೂಡುವ ಮೀಸೆಗೆ ಗಂಡನು
ರೂಢಿಗೆ ಸತ್ಕೀರ್ತಿವಂತ ತಿಂಮಜಯಂತಾ॥

ಮ್ರುಗರಾಜನಂತೆ ಭಾರಿಯ
ನಿಗಳದ ಪಾದದಲಿಯಳವ ಮಂನೆಯನಾರೆ।
ನಗೆಮೊಗದ ರಸಿಕರಂನದ
ಸೊಗಸಿನ ಸವಿಗಾರ ವೀರತಿಂಮವಜೀರಾ॥

ನಂಬುಗೆಯ ಕೊಟ್ಟು ತಪ್ಪುವ
ಡೊಂಬಿಯ ನಾಯಕರ ಗಂಡ ಧುರಕಿದಿರಾಗದಾ।
ಹೆಂಬೆಡಿನ್ರುಪರ ಮಿಂಡನು
ಶಂಬರ ಜಯರೂಪ ತಿಂಮ ಕಲಿಯುಗದರ್ಮಾ॥

ಸುರರಾಜನಂತೆ ಭಾಗ್ಯದಿ
ವರರೂಪಿಲಿ ಮದನನಂತೆ ರಾಜಿಸುತಿರ್ಪ್ಪಾ।
ಸರಸ ವಿದ್ಯದಲಿ ಭೋಜಗೆ
ನೆರೆ ಮಿಗಿಲೆನಿಸಿದೆಯೊ ವೀರ ತಿಂಮವಜೀರಾ॥

ರೂಪು ಗುಣ ಹರೆಯ ಚತುರತೆ
ಚಾಪದ ವಿದ್ಯದಲಿ ನರಗೆ ಮಿಗಿಲೆನಿಸಿದೆ ಬಹು।
ಭೂಪದೊಳು ಕೀರ್ತಿವಡದೆಯೊ
ಭಾಪುರೆ ರಣದೀರ ವೀರ ತಿಂಮವಜೀರಾ॥

ಮದವೆದ್ದ ಶತ್ರು ತಿಮಿರವ
ಕದುಬುವ ಮಾರ್ತಾಂಡನಂತೆ ರಾಜಿಸಿದಿಳೆಯೊಳ್।
ಮುದದಿ ಸ್ತಿರದಾಳು ಸತ್ಯದ
ಹದಗಾರನು ವೀರ ತಿಂಮರಾಯವಜೀರಾ॥

ಈ ಶಾಸನದಲ್ಲಿ ಪ್ರಯೋಗವಾಗಿರುವ ಚಂಪಕಮಾಲೆ, ಉತ್ಪಲಮಾಲೆ ಮತ್ತು ಮತ್ತೇಭವಿಕ್ರೀಡಿತ ವೃತ್ತಗಳು ಶುದ್ಧವಲ್ಲ. ಕಂದಪದ್ಯಗಳಲ್ಲೂ ದೋಷಗಳಿವೆ. 'ಹರತಿಯ ತಿಪ್ಪರಾಜಸುತ ಕಾಮಯಭೂಪತಿಗಬ್ಬಭೂಪಗಂ' ಅಥವಾ 'ಕಾಮಮಹೀಪತಿಯಬ್ಬಭೂಪಗಂ' ಮತ್ತು 'ಮ್ರುಗರಾಜನಂತೆ ಭಾರಿಯ ... ... ವೀರ ತಿಂಮವಜೀರಾ॥' ಎಂಬ ಕಂದಪದ್ಯಗಳು ಶಾಸನಗಳಲ್ಲಿ ಪುನರುಕ್ತಗೊಂಡಿವೆ.

೬

ಹರತಿಯ ನಾಯಕರಿಗೆ ಸಂಬಂಧಿಸಿದ ಮೇಲಿನ ಐದು ಶಾಸನಗಳನ್ನು ಗಮನಿಸಿದಾಗ, ತಮ್ಮ ನಾಯಕರನ್ನು ಕಾವ್ಯಾತ್ಮಕವಾಗಿ ಪ್ರಶಂಸಿಸುವ ಸಮಕಾಲೀನ ಕವಿಗಳ ಪ್ರಯತ್ನ ಅರಿವಿಗೆ ಬರುತ್ತದೆ. ಈ ಶಾಸನಗಳ ಕಾವ್ಯಭಾಗದಲ್ಲಿನ ಕೆಲವು ಪದ್ಯಗಳು ಪುನರುಕ್ತಗೊಂಡಿವೆ. ಬಹುತೇಕ ಇವು ಸಿದ್ಧಪಾಠಗಳು. ಕೆಲವು ಭಾಗಗಳು ಸಂದರ್ಭಾನುಸಾರ ಸೇರ್ಪಡೆ ಆಗಿರುವಂತಿದೆ. ಇವು ಎಲ್ಲವೂ ಛಂದೋಬದ್ಧವಾಗಿಲ್ಲ. ಉಳಿದ ಕಾವ್ಯಾಂಶಗಳು ಗೌಣವಲ್ಲ. ಈ ಶಾಸನಕವಿಗಳು ಕಾವ್ಯರಚನೆಯಲ್ಲಿ ನುರಿತವರಾಗಿರಲಿಲ್ಲ ಎಂದು ಸ್ಪಷ್ಟವಾಗುತ್ತದೆ. ಆದರೂ ಇವರನ್ನು ಪ್ರೋತ್ಸಾಹಿಸಿದ ಹರತಿಯ ನಾಯಕರ ಅಕ್ಷರಪ್ರೇಮವನ್ನು ಗೌರವದಿಂದ ನೆನೆಯಬೇಕಾಗುತ್ತದೆ. ಇದೇ ಕವಿಗಳು ಶಾಸನಗಳನ್ನಲ್ಲದೆ ಕಾವ್ಯಗಳನ್ನೇನಾದರೂ ರಚಿಸಿದ್ದರೆ. ಅವುಗಳನ್ನು ಪತ್ತೆಹಚ್ಚುವ ಕೆಲಸ ಆಗಬೇಕು. ಇದರಿಂದ ಆ ಕಾಲದ ಸಾಹಿತ್ಯಚರಿತ್ರೆಯನ್ನು ತಿಳಿಯಲು ಸಾಧ್ಯವಾಗುತ್ತದೆ.

❑❑

# ಶೃಂಗೇರಿ ಮಠದೊಂದಿಗೆ ದಕ್ಷಿಣ ಕನ್ನಡದ ಸಂಬಂಧ

– ಪಿ.ಎನ್. ನರಸಿಂಹಮೂರ್ತಿ

ಕರ್ನಾಟಕದ ಕರಾವಳಿ ಭಾಗವಾದ ದಕ್ಷಿಣ ಕನ್ನಡ (ಅವಿಭಜಿತ ಜಿಲ್ಲೆ) ಶೃಂಗೇರಿ ಮಠದೊಂದಿಗೆ ಅಪಾರ ಸಂಬಂಧ ಹೊಂದಿದೆ. ಶಂಕರಾಚಾರ್ಯರ ಆಗಮನದಿಂದ ಇಂದಿನವರೆಗೆ ಬೆಳೆದು ಬಂದ ಸಂಬಂಧ ಇದು. ಇದರ ಮಾಪಕಗಳಾಗಿ ಈಗ ಇರುವುದು ಶಂಕರ ವಿಜಯ, ಮಠದ ದಾಖಲೆಗಳು ಮತ್ತು ಇಲ್ಲಿ ದೊರೆತಿರುವ ಶಾಸನಗಳು. ಗುರುವಂಶ ಮಹಾಕಾವ್ಯ ಮತ್ತು ಲಿಂಗಣ್ಣ ಕವಿಯ ಕೆಳದಿ ನೃಪವಿಜಯವೂ ಪೂರಕ ಮಾಹಿತಿಯನ್ನು ನೀಡುತ್ತವೆ. ಪ್ರಸ್ತುತ ಇವುಗಳ ಒಂದು ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ಶೃಂಗೇರಿ ಮತ್ತು ಅದರ ಪೀಠಾಧಿಪತಿಗಳ ಬಗ್ಗೆ ಬಹಳಷ್ಟು ಸಂಶೋಧನೆ ಮತ್ತು ಕೃತಿ ರಚನೆಗಳಾಗಿವೆ. ಬಹುತೇಕ ಈ ಅಧ್ಯಯನಗಳು ಘಟ್ಟದಮೇಲಿನ ಪ್ರದೇಶಕ್ಕೆ ಹರಡಿದ್ದು ಈ ಭಾಗದಲ್ಲಿದ್ದ ವಿಜಯನಗರಕಾಲ ಮತ್ತು ಆ ನಂತರದ ಕಾಲಗಳಲ್ಲಿದ್ದ ರಾಜವಂಶ ಮತ್ತು ಅಧಿಕಾರಿಗಳು ಈ ಮಠ ದೊಂದಿಗೆ ಇರಿಸಿಕೊಂಡಿದ್ದ ಸಂಬಂಧಗಳ ಮೇಲೆ ಬೆಳಕು ಚೆಲ್ಲುತ್ತವೆ. ಇಲ್ಲಿ ಕರ್ನಾಟಕದ ಕರಾವಳಿ ಇವರ ಗಮನಕ್ಕೆ ಬಂದಂತೆ ಕಾಣುವುದೇ ಇಲ್ಲ. ಆದರೆ ಕ್ರಿಸ್ತ ವರ್ಷಾರಂಭಕ್ಕೂ ಮೊದಲಿನಿಂದಲೇ ಈ ಭಾಗ ಹಲವಾರು ಬಂದರು ನಗರಗಳನ್ನು ಹೊಂದಿದ್ದು ಅಂದಿನ ಕರ್ನಾಟಕದ ಆರ್ಥಿಕ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿತ್ತು. ಕರ್ನಾಟಕದ ನಾನಾ ಭಾಗಗಳಿಂದ ವರ್ತಕ ಸಮುದಾಯ ಇಲ್ಲಿಗೆ ಬಂದು ತಮ್ಮ ವ್ಯವಹಾರ ನಡೆಸಿದ್ದರು ಎಂಬುದಕ್ಕೆ ಇಲ್ಲಿ ಹಲವು ರೀತಿಯ ಆಧಾರಗಳು ದೊರೆಯುತ್ತವೆ. ವಿಜಯನಗರ ಕಾಲಕ್ಕೆ ಇದು ಉತ್ತುಂಗಕ್ಕೆ ಏರಿದ್ದು ಚಕ್ರವರ್ತಿಗಳು ಇದರಮೇಲೆ ತಮ್ಮ ನೇರ ಹಿಡಿತ ಸಾಧಿಸಿದ್ದರು. ಇಲ್ಲಿ ಇವರು ಹೊಸ ಪ್ರಾಂತ್ಯಗಳನ್ನು ರಚಿಸಿ ಮಂಗಳೂರು, ಬಾರಕೂರು ಮತ್ತು ಹೊನ್ನಾವರ ನಗರಗಳನ್ನು ಪ್ರಾಂತೀಯ ರಾಜಧಾನಿಗಳನ್ನಾಗಿ ಮಾಡಿಕೊಂಡರು. ಕ್ರಮವರಿತು ಕಾಲದಿಂದ ಕಾಲಕ್ಕೆ ಇಲ್ಲಿಗೆ ತಮ್ಮ ಪ್ರತಿನಿಧಿಗಳಾದ ರಾಜ್ಯಪಾಲರನ್ನು ನೇಮಕ ಮಾಡುತ್ತಿದ್ದರು. ಕರಾವಳಿ ಭಾಗ ಇಲ್ಲೇ ಹುಟ್ಟಿ ಬೆಳೆದ ಹಲವಾರು ಜೈನ ರಾಜವಂಶಗಳಿಂದ ಒಡೆದ ಮನೆಯಾಗಿದ್ದರೂ ವಿಜಯನಗರದ ಆಡಳಿತ ಇವುಗಳನ್ನು ಬೆಸೆಯುವ ಕೊಂಡಿಯಾಗಿತ್ತು. ಚಕ್ರಾಧಿಪತ್ಯದ ಆರ್ಥಿಕ ಪ್ರಾಬಲ್ಯಕ್ಕೆ ಈ ಭಾಗ ಪ್ರಮುಖ ಬೆನ್ನೆಲುಬಾಗಿತ್ತು. ಹಲವು ನೂರು ಸಂಖ್ಯೆಯಲ್ಲಿ ದೊರೆಯುವ ಶಾಸನಗಳು ಈ ವಿಷಯದ ಕುರಿತಾಗಿ ಬಹುವಿಧದ ಬೆಳಕನ್ನು ಚೆಲ್ಲುತ್ತವೆ. (ಈ ಬಗೆಗಿನ ಹೆಚ್ಚಿನ ಮಾಹಿತಿಗಾಗಿ ಡಾ. ಕೆ.ವಿ. ರಮೇಶ ಅವರ "ಎ ಹಿಸ್ಟರಿ ಆಫ್ ಸೌತ್ ಕೆನರ" (೧೯೭೦) ಎಂಬ ಗ್ರಂಥವನ್ನು ನೋಡಬಹುದು). ಶೃಂಗೇರಿ ಮಠದ ಮೇಲೂ ಇದರ ಪ್ರಭಾವ ಬಹಳವಾಗಿ ಆಗಿರುವುದು ನಿಚ್ಚಳವಾಗಿ ಕಾಣುತ್ತದೆ. ಆದರೆ ಶೃಂಗೇರಿ ಕುರಿತಾದ ಅಧ್ಯಯನಗಳಲ್ಲಿ ಈ ಬಗೆಗಿನ ಮಾಹಿತಿ ಇಲ್ಲದಿರುವುದು ಒಂದು ಚೋದ್ಯ. ಈ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ನೀಗಿಸುವ ಪ್ರಯತ್ನವನ್ನು ಈ ಲೇಖನದ ಮೂಲಕ ಮಾಡಲಾಗಿದೆ.

## ದಕ್ಷಿಣ ಕನ್ನಡದಲ್ಲಿ ಶಂಕರಾಚಾರ್ಯರು

ಆನಂದಗಿರಿಗಳ ಶಂಕರವಿಜಯವು[1] ಉಡುಪಿ ಸೇರಿದಂತೆ ದಕ್ಷಿಣಕನ್ನಡದ ಭಾಗಗಳಲ್ಲಿ ಆಚಾರ್ಯ ಶಂಕರರು ಭೇಟಿ ಇತ್ತ ಸ್ಥಳಗಳು ಮತ್ತು ಅವರ ಸಾಧನೆಗಳನ್ನು ವರ್ಣಿಸುತ್ತದೆ. ಸೌರ, ಶಾಕ್ತ, ಗಾಣಾಪತ್ಯ, ಪಾಶುಪತ, ಕಾಳಾಮುಖ, ಕಾಪಾಲಿಕ, ಕೌಮಾರ ಇತ್ಯಾದಿ ಪಂಥಗಳಿಂದ ವಿಭಜನೆಗೊಂಡಿದ್ದ ಅಂದಿನ ಸಮಾಜದ ಒಗ್ಗಟ್ಟು ಕ್ಷೀಣಗೊಂಡಿತ್ತು. ಆಚಾರ್ಯ ಶಂಕರರು ಅವುಗಳನ್ನು ಬೆಸೆದು ಸಮಾಜವನ್ನು ಒಂದುಗೂಡಿಸಿದರು. ಈ ಎಲ್ಲ ಪಂಥಗಳೊಂದಿಗೆ ಭಾಗವತ ಸಂಪ್ರದಾಯವೂ ಆಗ ಇಲ್ಲಿ ಇತ್ತು. ಇದನ್ನು ಧೃಡೀಕರಿಸಲು ಸಾಕಷ್ಟು ಪುರಾತತ್ವ ಆಧಾರಗಳು ನಮಗೆ ಈ ಭಾಗದಲ್ಲಿ ದೊರೆತಿವೆ[2].

ಆ ವೇಳೆಗಾಗಲೇ ಕ್ಷೇತ್ರವಾಗಿ ರೂಪುಗೊಂಡಿದ್ದ ಕುಕ್ಕೆ ಸುಬ್ರಹ್ಮಣ್ಯಕ್ಕೆ ಶಂಕರಾಚಾರ್ಯರು ಭೇಟಿಕೊಟ್ಟ ವಿಚಾರವನ್ನು ಶಂಕರ ವಿಜಯವು ತಿಳಿಸುತ್ತದೆ. ಇಲ್ಲಿ ಎಲ್ಲ ಪಂಥಗಳ ಪ್ರತಿನಿಧಿಗಳನ್ನು ವಾದದಲ್ಲಿ ಸೋಲಿಸಿದ ಶಂಕರಾಚಾರ್ಯರು ಅವರುಗಳನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಅಷ್ಟೇ ಅಲ್ಲ ಪಂಚಾಯತನ ಪೂಜಾ ಪದ್ಧತಿಯನ್ನು ರೂಢಿಗೆ

# ೨೦೩೭, 'ಗುರುಕೃಪಾ' ೧೦ನೇ ಅಡ್ಡರಸ್ತೆ, ಕಲ್ಲಹಳ್ಳಿ, ವಿ.ವಿ. ನಗರ, ಮಂಡ್ಯ – ೫೭೧ ೪೦೧

ತಂದರು[೩]. ಕುಕ್ಕೆ ಲಿಂಗನನ್ನು ಪೂಜಿಸಿ ಭಜಿಸಿದರು. ಪ್ರಾಯಶಃ ಇಲ್ಲೆ "ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರ"ವನ್ನು ರಚಿಸಿದರು[೪].

ಮುಂದೆ ಕೊಲ್ಲೂರಿಗೆ ಭೇಟಿ ನೀಡಿದ ಶಂಕರಾಚಾರ್ಯರು ದೇವಿ ಮೂಕಾಂಬಿಕೆಯನ್ನು ಪೂಜಿಸಿ ಇಲ್ಲೆ ಸ್ವಲ್ಪ ಕಾಲ ತಪಸ್ಸು ಮಾಡಿದರೆಂಬುದು ಇಲ್ಲಿನ ಐತಿಹ್ಯ. ಅವರು ತಪಸ್ಸಿಗೆ ಬಳಸಿದ ಶಿಲಾ ಪೀಠವು ಈಗಲೂ ಭಕ್ತಾದಿಗಳ ಶ್ರದ್ಧಾ ಭಕ್ತಿಯ ಸ್ಮಾರಕವಾಗಿ ಇಲ್ಲಿಯ ದೇವಾಲಯದಲ್ಲಿದೆ[೫].

ಆದಿಶಂಕರರ ಮುಖ್ಯ ಶಿಷ್ಯರಲ್ಲೋರ್ವರಾದ ಹಸ್ತಾಮಲಕರು ರಜತಪೀಠಕ್ಕೆ (ಇಂದಿನ ಉಡುಪಿಗೆ) ಭೇಟಿ ನೀಡಿ ಇಲ್ಲಿ ಕೃಷ್ಣನ ಪ್ರತಿಮೆಯೊಂದನ್ನು ಸ್ಥಾಪಿಸಿದರು ಎಂದು ಶಂಕರವಿಜಯವು ತಿಳಿಸುತ್ತದೆ. ತೈಲ ಕೃಷ್ಣ ಎಂದು ಕರೆಯುವ ಈ ಪ್ರತಿಮೆಯು ದಕ್ಷಿಣ ಭಾರತದ ಅತ್ಯಂತ ಪ್ರಾಚೀನತಮ ಕೃಷ್ಣ ವಿಗ್ರಹ ಎಂದು ಡಾ. ಪಿ. ಗುರ್ರುರಾಜಭಟ್ಟರು ಅಭಿಪ್ರಾಯ ಪಟ್ಟಿದ್ದಾರೆ[೬]. ಇದರಿಂದ ವೈಷ್ಣವ ಸಂಪ್ರದಾಯ ಉಡುಪಿಯಲ್ಲಿ ಮೈತಳೆಯುವಂತಾಯಿತು ಎಂಬ ಅಭಿಪ್ರಾಯವನ್ನೂ ಇವರು ವ್ಯಕ್ತಪಡಿಸಿದ್ದಾರೆ. ಆದರೆ ಈ ಅಭಿಪ್ರಾಯ ಸರಿಯಲ್ಲ. ಕಾರಣ ಆ ವೇಳೆಗಾಗಲೇ ಉಡುಪಿಯ ಆಸುಪಾಸಿನಲ್ಲಿ ವಿಷ್ಣುವಿನ ಚತುರ್ವಿಂಶತಿ ರೂಪಗಳಲ್ಲಿ ಒಂದಾದ ಜನಾರ್ದನನ ವಿಗ್ರಹಗಳು ಸ್ಥಾಪನೆಗೊಂಡು ಪೂಜಿಸಲ್ಪಡುತ್ತಿದ್ದುವು. ಉಡುಪಿ ನಗರಕ್ಕೆ ಉತ್ತರದಲ್ಲಿ ಸಮೀಪವೇ ಇರುವ ಸ್ಥಳ ಪಡುಪೆರಂಪಳ್ಳಿ (ಇದು ಕಕ್ಕುಂಜೆ ಗ್ರಾಮಕ್ಕೆ ಸೇರಿದೆ). ಇಲ್ಲೊಂದು ತೀರ ಇತ್ತೀಚೆಗೆ ನಿರ್ಮಾಣಗೊಂಡ ದೇವಾಲಯವಿದೆ. ಇಲ್ಲಿಯ ದೇವರನ್ನು ವಿಷ್ಣುಮೂರ್ತಿ ಎಂದು ಕರೆಯುತ್ತಾರೆ, ಆದರೆ ಇದು ಜನಾರ್ದನ. ನಿತ್ಯ ಪೂಜೆಗೊಳ್ಳುತ್ತಿರುವ ಈ ವಿಗ್ರಹ ಅತ್ಯಂತ ಪ್ರಚೀನವಾದುದು. ಪ್ರಾಯಶಃ ಇದು ೬–೭ ನೆಯ ಶತಮಾನಕ್ಕೆ ಹೋಗುವಷ್ಟು ಪ್ರಾಚೀನವಾದುದು. ಅಂದಮೇಲೆ ಉಡುಪಿಯಲ್ಲಿ ವಿಷ್ಣುವಿನ ಆರಾಧನೆ ಆಚಾರ್ಯ ಶಂಕರರು ಬರುವುದಕ್ಕೂ ಹಲವು ಶತಮಾನಗಳಿಗೂ ಹಿಂದಿನಿಂದಲೆ ಇತ್ತು ಎಂದಾಯಿತು. ಇದು ಕೇವಲ ಉಡುಪಿ (ಅಂದಿನ ಶಿವಳ್ಳಿ)ಗೆ ಸೀಮಿತವಾಗದೆ ಇಡೀ ಕರಾವಳಿಗೆ ಹರಡಿತ್ತು. ಈ ಸಮಯದಲ್ಲಿ ಹರಿ–ಹರರಲ್ಲಿ ಅಭೇದ ಕಲ್ಪನೆಯೂ ಅನನ್ಯವಾಗಿ ಬೆಳೆದಿತ್ತು ಎಂಬುದಕ್ಕೆ ಗೋಕರ್ಣದಲ್ಲಿರುವ ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟ ಹರಿಹರ ಶಿಲಾ ವಿಗ್ರಹವನ್ನು ಇಲ್ಲಿ ಉದಾಹರಿಸಬಹುದು. ಖ್ಯಾತ ಪುರಾತತ್ವಜ್ಞರಾದ ಡಾ. ಅ ಸುಂದರ ಅವರ ಪ್ರಕಾರ ಈ ವಿಗ್ರಹದ ಕಾಲ ಸುಮಾರು ಕ್ರಿ.ಶ. ೫ ನೆಯ ಶತಮಾನ. ಮುಂದೆ ಹದಿಮೂರನೆಯ ಶತಾಬ್ದದವರೆಗೆ ಮಠದೊಂದಿಗಿನ ಈ ಭಾಗದ ಸಂಬಂಧ ಕುರಿತಾದ ಯಾವ ಮಾಹಿತಿಯೂ ದೊರೆಯುವುದಿಲ್ಲ. ಅಚ್ಯುತ ಪ್ರೇಕ್ಷಾಚಾರ್ಯರೆಂಬುವರು ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ಶಂಕರ ತತ್ವವೂ ಸೇರಿದಂತೆ ಹಲವಾರು ವಿಷಯಗಳಲ್ಲಿ ಶಿಕ್ಷಣ ನೀಡುತ್ತಿದ್ದರು ಎಂಬ ಮಾಹಿತಿ ಬೇರೆ ಮೂಲಗಳಿಂದ ತಿಳಿದು ಬರುತ್ತದೆ. ಇವರು ದ್ವೈತ ಮತ ಸ್ಥಾಪಕರಾದ ಮಧ್ವಾಚಾರ್ಯರ ಗುರುಗಳು[೭].

ಪ್ರಾಯಶಃ ಆ ವೇಳೆಗೆ ದಕ್ಷಿಣ ಕನ್ನಡದಾದ್ಯಂತ ಪ್ರಮುಖ ಸ್ಥಳಗಳಲ್ಲಿ ಶೃಂಗೇರಿ ಮಠದ ಶಾಖೆ ಗಳಿದ್ದು ಅವು ಶಂಕರಾಚಾರ್ಯರ ತತ್ವ ಪ್ರಚಾರ ಕಾರ್ಯವಷ್ಟೇ ಅಲ್ಲದೆ ಪಾಠ ಶಾಲೆಗಳಾಗಿಯೂ ಕಾರ್ಯ ನಿರ್ವಹಿಸಿದ್ದುವು. ಆದರೆ ಇವುಗಳ ಬಗೆಗಿನ ಮಾಹಿತಿ ಮಾತ್ರ ಅಲಭ್ಯ.

### ವಿಜಯನಗರ ಕಾಲ

ವಿಜಯನಗರ ಸಾಮ್ರಾಜ್ಯದ ಹುಟ್ಟು ದಕ್ಷಿಣ ಕನ್ನಡದಲ್ಲಿ ಹೊಸ ವಿದ್ಯುತ್ ಸಂಚಾರವನ್ನುಂಟುಮಾಡಿತು. ಪ್ರಗತಿಯ ಹಲವು ಮುಖಗಳು ಚಿಗುರೊಡೆದು ವಿಜೃಂಭಿಸಿದವು. ಇದನ್ನು ಸ್ಥಿರೀಕರಿಸಲು ನೂರಾರು ಶಿಲಾಶಾಸನಗಳು ಈ ಭಾಗದಲ್ಲಿ ಲಭ್ಯವಿದೆ. ಶೃಂಗೇರಿ ಮಠದೊಂದಿಗಿನ ಈ ಭಾಗದ ಸಂಬಂಧ ಕುರಿತಾಗಿ ಹಲವಾರು ಶಿಲಾ ಶಾಸನಗಳು ಇಲ್ಲಿ ಪತ್ತೆಯಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಈ ಶಾಸನಗಳು ಕೊಡುವ ಮಾಹಿತಿ ಅತಿ ಅಮೂಲ್ಯದ್ದಾಗಿದೆ.

### ಆಳುಪ–ಹೊಯ್ಸಳ–ಶೃಂಗೇರಿ ಸಂಬಂಧ

ಕ್ರಿ.ಶ. ೧೩೪೬ ಕ್ಕೆ ಸೇರುವ ಶೃಂಗೇರಿ ಶಾಸನವೊಂದು[೮] ಹೊಯ್ಸಳ ಮೂರನೆಯ ಬಲ್ಲಾಳನ ರಾಣಿ ಹಾಗು ಆಳುಪ ರಾಜ ಕುಮಾರಿ ವೀರ ಚಿಕ್ಕಾಯಿ ತಾಯಿಯು ಶ್ರೀ ಭಾರತೀ ತೀರ್ಥ ಶ್ರೀಪಾದರು ಹಾಗು ಅವರ ಪರಿಚಾರಕ ವರ್ಗದವರ ಜೀವನ ವೆಚ್ಚ ಭರಿಸುವ ಸಲುವಾಗಿ ಕೆಲವು ಗ್ರಾಮಗಳನ್ನು ದಾನ ಮಾಡಿದ ವಿಚಾರ ತಿಳಿಸುತ್ತದೆ.

ಈಗಿನ ಶೃಂಗೇರಿ ಇತಿಹಾಸಕ್ಕೊಂದು ಅತಿ ಮುಖ್ಯವಾದ ದಾಖಲೆ ಈ ಶಾಸನ. ವಿಜಯನಗರ ಸಾಮ್ರಾಜ್ಯದ ಸ್ಥಾಪನಾ ನಂತರ ಚಕ್ರವರ್ತಿ ಹರಿಹರ ಮತ್ತು ಆತನ ಸಹೋದರರು ಕೂಡಿ ಶೃಂಗೇರಿಗೆ ಪ್ರಥಮ ಭೇಟಿ ನೀಡಿ, ಗುರುವಂದನೆ ಸಲ್ಲಿಸಿ ದಾನಗಳನ್ನು ಮಾಡಿದ ವಿಚಾರವನ್ನು ಇದು ತಿಳಿಸುತ್ತದೆ. ಹೀಗೆ ಹೊಯ್ಸಳ ಮತ್ತು ವಿಜಯನಗರ ಪ್ರಭುಗಳ ಸಮಾಗಮ ಶೃಂಗೇರಿಯಲ್ಲಾದುದನ್ನು ಶಾಸನ ತಿಳಿಸುವುದು ಒಂದು ಮುಖ್ಯ ವಿಷಯವೇ ಹೌದು.

ಹೊಯ್ಸಳ ರಾಣಿಯಾಗಿ ವೀರ ಚಿಕ್ಕಾಯಿ ತಾಯಿಯು ತನ್ನ ಮಗ ವೀರ ಕುಲಶೇಖರನೊಂದಿಗೆ ಕ್ಷೇತ್ರಕ್ಕೆ ಭೇಟಿ ಕೊಟ್ಟು ತನ್ನ ಕರ್ತವ್ಯ ನಿರ್ವಹಿಸಿದಳು. ಆದರೆ ಆಳುಪರಿಗೂ ಶೃಂಗೇರಿ ಕ್ಷೇತ್ರಕ್ಕೂ ಅತ್ಯಂತ ಪ್ರಾಚೀನ ಕಾಲದಿಂದ ಸಂಬಂಧ ಇತ್ತು. ಈ ಮಾಹಿತಿಯನ್ನು ಕೊಡುವ ಒಂದು ಶಾಸನ ಕಿಗ್ಗದ ಋಷ್ಯಶೃಂಗೇಶ್ವರ ದೇವಾಲಯದಲ್ಲಿದೆ[೯].

ಕ್ರಿ.ಶ. ಏಳನೆಯ ಶತಮಾನದ ಮಧ್ಯ ಭಾಗಕ್ಕೆ ಸೇರುವ ಈ ಶಾಸನವು ಕೊಡುವ ಮಾಹಿತಿ ಬಹಳ ಮುಖ್ಯವಾದುದು. ಆ ಭಾಗದ ಶಾಸನ ಪಾಠ ಹೀಗಿದೆ-

**ಶ್ರೀಮತು ಆಳು ಅರಸರ್ ಗುಣಸಾಗರ ದ್ವಿತೀಯ ನಾಮಧೇಯಾನ್**
**ಕದಂಬ ಮಂಡಲಮನಾಳುತ್ತುಂ ಆಳುಅರಸರುಂ ಮಹಾದೇವಿಯರುಂ**
**ಚಿತ್ರವಾಹನರುಂ ಕುನ್ದವರ್ಮರಸಂ ಮುದಿಮೆಗೆಯೆ**
**ಕಿಟಿಸ್ಗಾಣ ದೇವಕೆ ಎಲ್ಲಮಾನ್ ಸರ್ವ ಪರಿಹಾರಮ್ ಬಿಟ್ಟ ಮೊದಲಿನನಿತ್ತೋರಾ**
**ನಿತ್ತಂತೆ ಬಿಟ್ಟ [ಧರ್ಮ*]**[೧೧]

ಎಂದು ಶಾಸನ ಹೇಳುತ್ತದೆ. ಇದರ ಅರ್ಥ ಗುಣಸಾಗರ ಎಂಬ ದ್ವಿತೀಯ ಹೆಸರನ್ನು ಹೊಂದಿದ್ದ ಆಳುಅರಸನು (ಆಳುಪ ಅರಸು) ಕದಂಬ ಮಂಡಲವನ್ನು ಆಳುತ್ತಿದ್ದಾಗ (ಅವನ ಆಜ್ಞಾವರ್ತಿಯಾಗಿ) ಕುನ್ದವರ್ಮರಸನು (ಈ ಭಾಗದ) ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸಿದ್ದ ಸಂದರ್ಭದಲ್ಲಿ ಆಳುವರಸ (ಆತನ ರಾಣಿ) ಮಹಾದೇವಿ ಮತ್ತು (ಇವರ ಮಗ) ಚಿತ್ರವಾಹನ (ಮೂವರೂ ಕೂಡಿ) ಕೀಟಿಸ್ಗಾಣ ದೇವರಿಗೆ ಹಿಂದೆ ಮಾಡಿದ್ದ ಎಲ್ಲ ದಾನಗಳನ್ನೂ ಪುನರುತ್ಥಾನಗೊಳಿಸಿ ತೆರಿಗೆಮುಕ್ತವನ್ನಾಗಿ ಘೋಷಿಸಿದರು.

ಡಾ. ಕೆ. ವಿ. ರಮೇಶ ಅವರ ಪ್ರಕಾರ ಕಿಗ್ಗ ಶಾಸನದ ಕಾಲ ಕ್ರಿ.ಶ. ಸುಮಾರು ೬೮೦[೧೧]. ಪ್ರಾಯಶಃ ಈ ಕಾಲಕ್ಕೂ ಮುಂಚಿನಿಂದಲೇ ತುಳುನಾಡಿನ ಆಳುಪ ಅರಸರು ಶೃಂಗೇರಿ ಭಾಗವನ್ನು ಆಳುತ್ತಿದ್ದರು. ಆಗ ಕಿಗ್ಗ 'ಕಿಟಿಸ್ಗಾಣ' ಎಂಬ ಹೆಸರನ್ನು ಹೊಂದಿತ್ತು. ಈಗ 'ಋಷ್ಯ ಶೃಂಗೇಶ್ವರ' ಎಂದು ಕರೆಯಲಾಗುವ ದೇವಸ್ಥಾನ ಹಿಂದೆ 'ಕೀಟಿಸ್ಗಾಣೇಶ್ವರ' ಎಂಬ ಹೆಸರಿನಿಂದ ಕರೆಯಲ್ಪಟ್ಟಿತ್ತು. ಕಿಗ್ಗ ಶೃಂಗೇರಿಗೆ ಅತಿ ಸಮೀಪವೇ ಇರುವ ಒಂದು ಹಳ್ಳಿ.

ಶೃಂಗೇರಿಯಲ್ಲಿ ಮಠ ಸ್ಥಾಪನೆ ಆಗುವ ಕಾಲಕ್ಕೂ ಹಿಂದಿನಿಂದಲೇ ಆಳುಪ ಅರಸರು ಈ ಭಾಗದ ಪಾವಿತ್ರ್ಯತೆ, ತಪೋನಿಷ್ಠರ ರಕ್ಷಣೆ ಮತ್ತು ಸೇವೆ ಇತ್ಯಾದಿಗಳ ಬಗ್ಗೆ ಶ್ರದ್ಧಾಪೂರ್ವಕ ಕಾಳಜಿ ವಹಿಸಿದ್ದರು ಎಂಬುದು ಇಲ್ಲಿ ವಿದಿತ. ಆಚಾರ್ಯ ಶಂಕರರು ಇಲ್ಲಿ ಮಠ ಸ್ಥಾಪನೆ ಮಾಡುವಾಗ ಧರ್ಮ ಶ್ರದ್ಧೆಯಿಂದ ಇದ್ದ ಈ ಆಳುಪ ಅರಸು ಮನೆತನ ತನ್ನ ಭಕ್ತಿ ಪೂರ್ವಕ ಸಹಕಾರಗಳನ್ನು ನೀಡಿರಬೇಕು. ಅಲ್ಲದೆ ಇಲ್ಲಿ ನೆಲೆಸಿದ್ದ ಶಾಂತಿ, ಸಮೃದ್ಧಿ, ಉತ್ತಮ ಆಡಳಿತ ಹಾಗು ನ್ಯಾಯ ಮತ್ತು ಧರ್ಮ ಪರಿಪಾಲನೆ- ಇವೆಲ್ಲವೂ ಶ್ರೀಮದ್ ಆಚಾರ್ಯರ ಮನಸ್ಸನ್ನು ಮುದಗೊಳಿಸಿ ಆಕರ್ಷಿಸಿರಬೇಕು. ಈ ಅನಿಸಿಕೆಗಳಿಗೆ ಆಧಾರಗಳ ಕೊರತೆ ಇದೆ. ಆದರೆ ಮಲೆನಾಡಿನ ಈ ಭಾಗಗಳಲ್ಲಿ ಹೆಚ್ಚಿನ ಶೋಧ ಕಾರ್ಯ ನಡೆದಲ್ಲಿ ಹೊಸ ಶಾಸನಗಳು ಪತ್ತೆಯಾಗುವ ಸಾಧ್ಯತೆಗಳಿವೆ. ಇವು ಕೊಡುವ ಹೊಸ ಮಾಹಿತಿಗಳಿಂದ ಶೃಂಗೇರಿ ಮಠದ ವಿಜಯನಗರ ಪೂರ್ವಕಾಲೀನ ಇತಿಹಾಸವು ಹೆಚ್ಚು ಅರ್ಥಪೂರ್ಣವಾಗಿ ಪ್ರಕಟಗೊಳ್ಳುವುದರಲ್ಲಿ ಸಂದೇಹವಿಲ್ಲ. (ಮಲೆನಾಡಿನ ಈ ಭಾಗದಲ್ಲಿ ದಿನೇ ದಿನೇ ಆಗುತ್ತಿರುವ ಅಭಿವೃದ್ಧಿ ಕಾರ್ಯಗಳು ವೇಗೋತ್ಕರ್ಷದಿಂದ ಕೂಡಿವೆ. ಐತಿಹಾಸಿಕ ಮಹತ್ವದ ಅದೆಷ್ಟೋ ಸ್ಮಾರಕಗಳು, ಆಕರಗಳು ಮತ್ತು ಶಾಸನಗಳು ಸಮಾಧಿಸ್ತವಾಗಿ ಶಾಶ್ವತವಾಗಿ ನಷ್ಟವಾಗಿವೆ. ಪರಿಸ್ಥಿತಿ ಹೀಗಿರುವಲ್ಲಿ ಈ ಭಾಗದಲ್ಲಿ ಹೊಸ ಆಕರಗಳಿಗಾಗಿ ಸಮೀಕ್ಷೆ, ಕ್ಷೇತ್ರಕಾರ್ಯ ಮತ್ತು ಅಧ್ಯಯನಗಳು ಇನ್ನೂ ನಡೆಯದಿರುವುದು ಖೇದದ ಸಂಗತಿ. ಅಳಿದುಳಿದವನ್ನಾದರೂ ರಕ್ಷಿಸುವ ಸಲುವಾಗಿ ಈ ಕಾರ್ಯ ಜರೂರಾಗಿ ಆಗಬೇಕು).

ಈ ನಿಟ್ಟಿನಲ್ಲಿ ಆಳುಪ ರಾಜಕುಮಾರಿಯೂ, ಹೊಯ್ಸಳ ಬಲ್ಲಾಳನ ರಾಣಿಯೂ ಆದ ವೀರ ಚಿಕ್ಕಾಯಿ ತಾಯಿಯು ತನ್ನ ಪುತ್ರ ವೀರ ಕುಲಶೇಖರನೊಂದಿಗೆ ಕೂಡಿ ಶೃಂಗೇರಿಯ ಶ್ರೀ ಭಾರತೀ ತೀರ್ಥ ಶ್ರೀಪಾದರಿಗೆ ಮಾಡಿದ ಧರ್ಮ ಆಳುಪ ವಂಶದ ಅರಸರ ಧರ್ಮ ಪರಂಪರೆಯ ದ್ಯೋತಕ.

ವೀರ ಚಿಕ್ಕಾಯಿತಾಯಿಯ ಮಗ ವೀರ ಕುಲಶೇಖರನ ಹೆಸರಿನ ಬಗ್ಗೆ ಡಾ. ಎ.ಕೆ. ಶಾಸ್ತ್ರಿ ಮತ್ತು ಶ್ರೀ ಹರಗಲವಾಡಿ ಲಕ್ಷ್ಮೀನರಸಿಂಹ ಶಾಸ್ತ್ರಿಗಳಿಗೆ ಯಾವುದೋ ರೀತಿಯ ಗೊಂದಲ ಇದ್ದಂತೆ ಕಾಣುತ್ತದೆ. ಈರ್ವರೂ ಇವನ ಹೆಸರನ್ನು ತಪ್ಪಾಗಿ ಉಲ್ಲೇಖಿಸಿದ್ದಾರೆ[೧೨]. ಶಾಸ್ತ್ರಿಯವರು ವೀರ ಕಿಕ್ಕಾಯಿ(ಚಿಕ್ಕಾಯಿ) ತಾಯಿಯ ಮಗನ ಹೆಸರನ್ನು "ಬಸವ ಸಂಕರರಾಯ" ಎಂದು ಹೇಳಿ ಈತನಿಗೆ "ಗಜಾಂಕುಸ ವೀರ ಕುಲಶೇಖರದೇವ" ಎಂಬ ಬಿರುದಿತ್ತು ಎಂದಿದ್ದಾರೆ. ಇದಕ್ಕೆ ಇವರು ಕೊಟ್ಟಿರುವ ಆಧಾರ ಕೆ.ವಿ. ರಮೇಶ ಅವರ ಗ್ರಂಥ. ಶಾಸ್ತ್ರಿಯವರು ಹೆಸರನ್ನು ಬಿರುದು ಎಂದು ತಪ್ಪಾಗಿ ಗ್ರಹಿಸಿದ್ದಾರೆ. ಇದಕ್ಕೆ ರಮೇಶ ಅವರ ಗ್ರಂಥ "ಎ ಹಿಸ್ಟರಿ ಆಫ್ ಸೌಥ್ ಕೆನರ"ದಲ್ಲಿ ಆಧಾರವಿಲ್ಲ. ಹ.ಲ.ನ. ಶಾಸ್ತ್ರಿಯವರು ಈತನನ್ನು "ಗಜಾಂಕುಸ ಇಮ್ಮಡಿ ಬಸವರಾಯ" ಎಂದು ಹೇಳಿ ಮತ್ತೊಂದು ರೀತಿಯ ತಪ್ಪು ಮಾಡಿದ್ದಾರೆ. ಶೃಂಗೇರಿ ಕುರಿತಾದ ಕೆಲವು ಹೊಸ ಗ್ರಂಥಗಳಿಗೆ ಈ ಈರ್ವರ ಗ್ರಂಥಗಳೇ ಆಧಾರವಾಗಿವೆ.

ಶಾಸನಗಳಲ್ಲಿ ಬರುವ ಹೊಯ್ಸಳ ಬಿರುದಾವಳಿ ಬಗ್ಗೆ ಈ ವಿದ್ವಾಂಸರಿಗೆ ಮಾಹಿತಿ ಇದ್ದಂತೆ ಕಾಣುವುದಿಲ್ಲ. ದಕ್ಷಿಣ ಕನ್ನಡದ ಶಾಸನಗಳ ಪರಿಚಯವಿಲ್ಲದಿದ್ದರೆ ಆಗುವ ಅನಾಹುತವೇ ಇದು. ದಕ್ಷಿಣ ಕನ್ನಡದ ಶಾಸನಗಳಲ್ಲಿ ಹೊಯ್ಸಳರ ಬಿರುದಾವಳಿ ಇಂತಿದೆ:

**"ಶ್ರೀಮತ್ಪಾಂಡ್ಯಚಕ್ರವರ್ತಿ ಅರಿರಾಯ ಬಸವ ಸಂಕರ ರಾಯ ಗಜಾಂಕುಸ**
**ಶ್ರೀಮತು ಪ್ರತಾಪ ಚಕ್ರವರ್ತಿ**
**ಹೊಯಿಸಣ ಶ್ರೀ ವೀರ ಬಲ್ಲಾಳ ದೇವರಸರ ಪಟ್ಟದ ಪಿರಿಯರಸಿ**
**ಚಿಕ್ಕಾಯಿತಾಯಿ"**

ಇದರಲ್ಲಿ "ಶ್ರೀಮತ್ಪಾಂಡ್ಯಚಕ್ರವರ್ತಿ ಅರಿರಾಯ ಬಸವ ಸಂಕರ ರಾಯ ಗಜಾಂಕುಶ" ಎನ್ನುವುದು ಆಳುಪರಿಗಿದ್ದ ಬಿರುದು. ಅದೇ ಬಿರುದಾವಳಿಯನ್ನು ಹೊಯ್ಸಳರು ಕರಾವಳಿ ಭಾಗದಲ್ಲಿ ಹೊಂದಿದರು. ಶೃಂಗೇರಿ ಶಾಸನದಲ್ಲಿರುವುದು ಇದೇ.

ಆಳುಪ ಅರಸರು ಆಡಳಿತದಲ್ಲಿ ಅನುಸರಿಸಿದ ನೀತಿ ದಕ್ಷಿಣ ಕನ್ನಡ(ಉಡುಪಿ ಸಹಿತ)ದ ಜ್ಞಾನಾಕಾಂಕ್ಷಿ ಸಮಾಜಕ್ಕೆ ಪ್ರೇರಕ ಶಕ್ತಿಯಾಯಿತು. ಜನ ಶೃಂಗೇರಿ ಮಠದೊಂದಿಗೆ ಉನ್ನತ ಮಟ್ಟದಲ್ಲಿ ಸಂಬಂಧ ಇರಿಸಿ ಕೊಂಡರು. ಇದು ಕೇವಲ ಗುರು ಶಿಷ್ಯ ಸಂಬಂಧಕ್ಕೆ ಅಷ್ಟೇ ಅಲ್ಲದೆ ಉನ್ನತ ಜ್ಞಾನಾರ್ಜನೆಗೂ ಅವಕಾಶ ಮಾಡಿಕೊಟ್ಟಿತು. ಇವರು ವೇದ ವಿದ್ಯಾಪಾರಂಗತರಾದರು. ಅಷ್ಟೇ ಅಲ್ಲ ತಮ್ಮ ಆಸಕ್ತ ವಿಷಯಗಳಲ್ಲಿ ಪರಿಪೂರ್ಣತೆಯ ಮಟ್ಟ ಸಾಧಿಸಿದರು. ವಿದ್ವಾಂಸ, ಆಸ್ಥಾನ ವಿದ್ವಾಂಸ, ಕವಿ, ಕವಿಚಕ್ರವರ್ತಿ ಇತ್ಯಾದಿಯಾದ ಪ್ರಶಸ್ತಿಗಳಿಂದ ಪುರಸ್ಕೃತರಾದರು. ಇವರ ಪರಂಪರೆಯೇ ಇಲ್ಲಿ ಬೆಳೆದಿತ್ತು. ಆದರೆ ಇದರ ಆಧಾರಪೂರ್ವಕ ಮಾಹಿತಿ ದೊರೆಯುವುದು ವಿಜಯನಗರ ಸಾಮ್ರಾಜ್ಯ ಉದಯ ಆದಂದಿನಿಂದ.

### ಶಾಸನ ಸಂಪತ್ತು

ಶೃಂಗೇರಿಯೊಂದಿಗಿನ ಸಂಬಂಧದ ಮಾಹಿತಿ ನೀಡುವ ಸುಮಾರು ಹದಿನಾಲ್ಕು ಶಿಲಾ ಶಾಸನಗಳು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ದೊರೆತಿವೆ. ಇದರಲ್ಲಿ ಅರ್ಧ ಭಾಗದಷ್ಟು ಹೊಸದು; ನನಗೆ ದೊರೆತವು, ಉಳಿದವು ಶಾಸನ ಇಲಾಖೆಯ ಸಂಪುಟಗಳಲ್ಲಿ ಪ್ರಕಟವಾಗಿವೆ [೧೩].

### ಶಾಸನಗಳಲ್ಲಿ ವಿದ್ಯಾರಣ್ಯರ ಉಲ್ಲೇಖ

ವಿಜಯನಗರ ಸಾಮ್ರಾಜ್ಯದ ಉದಯದಲ್ಲಿ ವಿದ್ಯಾರಣ್ಯರ ಪಾತ್ರ ಹಿರಿದಾದುದು. ಇವರ ಬಗ್ಗೆ ಹೊಸ ಶಾಸನಗಳು ದೊರೆಯುತ್ತಲೇ ಇವೆ. ವಿದ್ಯಾರಣ್ಯರನ್ನು ಹೆಸರಿಸುವ ಹಲವು ಶಾಸನಗಳು ಕರಾವಳಿಯಲ್ಲಿವೆ[೧೪]. ಎರಡರಲ್ಲಿ ಅವರ ವ್ಯಕ್ತಿತ್ವದ ಸುಂದರ ವರ್ಣನೆ ಇದೆ. ಕ್ರಿ.ಶ. ೧೪೦೦ಕ್ಕೆ ಸೇರುವ ಬಸರೂರಿನ ಶಾಸನ ವೊಂದರಲ್ಲಿ ಹೀಗೆ ಹೇಳಿದೆ-

**ವಾಚಾಳಂ ಕುರುತೇ ಮೂಕಂ ಮೂಕಂ ವಾಚಾಳ ಮುಂಗವಂ**
**ವಿದ್ಯಾರಣ್ಯ ಗುರೋಶ್ಚಿತ್ರಂ ಚರಿತ್ರಂ ಚತುರಾನನಂ [॥*]**[೧೫]

ಕ್ರಿ.ಶ. ೧೪೦೬ ಕ್ಕೆ ಸೇರಿದ ವೊಡೇರ ಹೋಬಳಿ (ಕುಂದಾಪುರ) ಶಾಸನದಲ್ಲಿನ ವರ್ಣನೆ ಇಂತಿದೆ-

**ಯ(ತ್ಮ್ರ ಪಾ) ವೀಕ್ಷಣಂ ದಿಕ್ಷು ಸರ್ವಾ ವೇದ ಪತಿಂ ಸತಿ ।**
**ವಿದ್ಯಾರಣ್ಯ ಗುರು ವಿದ್ಯಾರಾಜ ಕೇಸರಿಣಂ ಭಜೇ ॥** [೧೬]

ವಿದ್ಯಾರಣ್ಯರು ತಪಃಶಕ್ತಿ, ಜ್ಞಾನ ಶಕ್ತಿ ಮತ್ತು ಸಂಘಟನಾಕಾರ್ಯ ಶಕ್ತಿಗಳ ಮೂರ್ತಸ್ವರೂಪರಾಗಿದ್ದರು. ಇವು ಅವರು ಪ್ರೇರಕಶಕ್ತಿಯಾಗಿ ಸ್ಥಾಪಿಸಲ್ಪಟ್ಟ ವಿಜಯನಗರ ಸಾಮ್ರಾಜ್ಯದ ಕಾರ್ಯಗಳಲ್ಲಿ ಪ್ರತಿಫಲಿತವಾಗಿವೆ.

### ಕುಡುಪು ಶಾಸನ

ಚಕ್ರವರ್ತಿ (ಒಂದನೆಯ) ಬುಕ್ಕರಾಯನು ವಿದ್ಯಾರಣ್ಯರಿಗೆ ನೇರವಾಗಿ ಕೊಡಮಾಡಿದ ದಾನಗಳ ಮಾಹಿತಿ ನೀಡುವ ಎರಡು ಶಾಸನಗಳು ಮಂಗಳೂರು ತಾಲೂಕಿನಲ್ಲಿ ದೊರೆತಿವೆ (೧೭). ಕ್ರಿ.ಶ. ೧೩೭೫ ಅಕ್ಟೋಬರ್ ೨೫ಕ್ಕೆ ಸೇರುವ ಕುಡುಪು ಅನಂತಪದ್ಮನಾಭಸ್ವಾಮಿ ದೇವಸ್ಥಾನದ ಶಾಸನವು (೧೮) ಚಕ್ರವರ್ತಿ ಬುಕ್ಕರಾಯನು ಸ್ವತಃ 'ಸಿಂಗೇರಿಯ ಶ್ರೀ ವಿದ್ಯಾರಣ್ಯ ಶ್ರೀ ಪಾದಂಗಳಿಗೆ' ನೇರವಾಗಿ ಕುಡುಪು ಮತ್ತು ಮಾಲೂರು ಎಂಬ ಎರಡು ಹಳ್ಳಿಗಳನ್ನು, ೨೪೦ ಕಾಟಿ ಗದ್ಯಣಗಳನ್ನು ಮತ್ತು ವಾರ್ಷಿಕ ೪೨೦ ಮುಡಿ ಉತ್ಪತ್ತಿ ಬರುವ ಗದ್ದೆಗಳನ್ನು ದಾನಮಾಡಿದ ವಿಚಾರ ತಿಳಿಸುತ್ತದೆ.

**ರಾಯನು ಸಿಂಗೇರಿಯ ವಿದ್ಯಾರಣ್ಯ ಶ್ರೀ ಪಾದಂಗಳಿಗೆ ಸಮರ್ಪಿಸಿದ ಧರ್ಮದ ಕ್ರಮ ವೆಂತಂದತಾ (ವೆಂತೆಂದರೆ) ಕುಡುಪಿನ ದೇವಾಲ್ಯದಲು ಯತಿಗಳು ಬ್ರಾಹ್ಮಣರಿಗೆ ಪ್ರತಿ ದಿನ (ಜನ) ೧೨ ಕಂ ಬ್ರಾಹ್ಮಣ ಭೋಜನ ನಡವಂತಾಗಿ**
**(ಶಾಸನ ಪಾಠ-ಸಾಲು ೫-೮)**

ನಂದಳಿಕೆಯ ನಾಡಿನ ಎರಡು ಗ್ರಾಮಗಳನ್ನು ದಾನ ಮಾಡಿದ. ಇದರ ಉತ್ಪತ್ತಿಯಲ್ಲಿ ೩೬೦ ಮುಡಿ ಬತ್ತ ಈ ಛತ್ರಕ್ಕೆ ಹಾಗೂ ಇದರ ಮೇಲು ವೆಚ್ಚಕ್ಕಾಗಿ ೬೦ ಮಂಗಳೂರು ಕಾಟಿ ಗದ್ಯಾಣಗಳ ವ್ಯವಸ್ಥೆ ಮಾಡಲಾಯಿತು.

ದಾನದ ಎರಡನೆಯ ಭಾಗ

**"ಕುಡುಪಿನ ದೇವರಿಗೆ ಯಿರುಳಿನ ನಿವೇದ್ಯಕ್ಕೆ ಮಾಲೂರು ಹರವರಿ ಯಿಂದ ಭತ್ತ ಮೂಡೆ ೬೦ ಕುಡಿ . ಅಕಿ ಹಾನೆ (೩೨) ನು ನಡವುದು" ಎಂದು ಹೇಳುತ್ತದೆ. ಅನಂತ ಪದ್ಮನಾಭ ಸ್ವಾಮಿ ಎಂದು ಈಗ ಕರೆಯಲಾಗುತ್ತಿರುವ ಕುಡುಪಿನ ಈ ದೇವರು "ನಾಗ-ಸುಭ್ರಹ್ಮಣ್ಯ".**

ಶಾಸನದ ಮೂರನೆಯ ಭಾಗದಲ್ಲಿ "ಶಂಕರ ದೇವರ ಅಮೃತಪಡಿ .. ಮಂಗಳೂರ ಕಾ.ಗ ೧೫೦" ಎಂದು ಹೇಳಿದೆ. ಈ 'ಶಂಕರ ದೇವ' ಯಾರೆಂದು ಗೊತ್ತಾಗುವುದಿಲ್ಲ. ಮುಂದೆ "ಅಂತ್ತು ಕಾ ಗ ೨೪೦ ಭತ್ತ ಮೂಡೆ ೪೨೦ ವರುಷಂ ಪ್ರತಿಯಲು ನಡವುದು" (ಸಾಲು ೧೪-೧೫)ಎಂದು ಹೇಳಿ ಯಿಸ್ತಾನವನೂ ಧರ್ಮವನೂ ಶ್ರೀಪಾದಂಗಳ ನಿರೂಪದಿಂದಲಿ... ಶಂಕರ ರಾಮನಾಥ ದೇವರಿಗೆ ಧಾರಾಪೂರ್ವ್ವಕ ನಡವಂತಾಗಿ ಕೊಟ್ಟರು" (ಸಾಲು ೧೫-೧೭) ಎಂದು ತಿಳಿಸುತ್ತದೆ.

ಪ್ರಾಯಶಃ ಕುಡುಪಿನ ದೇವಾಲಯದಲ್ಲಿ ಶೃಂಗೇರಿ ಮಠದ ಶಾಖೆಯೊಂದಿತ್ತು. ಇಲ್ಲಿ ಯತಿಗಳೂ ಇದ್ದರು. ಶಾಸನದಲ್ಲಿ ಹೇಳಿರುವ 'ಶಂಕರದೇವ' ಪ್ರಾಯಶಃ ಆದಿಶಂಕರಾಚಾರ್ಯರು. ಈ ಗುರುಪೂಜೆ ಇಲ್ಲಿ ನಿರಂತರವಾಗಿತ್ತು. ಮುಂದೆ 'ರಾಮನಾಥ ದೇವರಿಗೆ' ಎಂದಿರುವುದು ಈ ಶಾಖಾ ಮಠದ ಮೂಲ ದೇವರಿರಬೇಕು. ಈ ಹಿನ್ನೆಲೆಯಲ್ಲಿ ಕುಡುಪಿನಲ್ಲಿದ್ದ ಮಠವು ಮೂಲ ಭಾಗವತ ಸ್ಮಾರ್ತ ಸಂಪ್ರದಾಯದ್ದು ಎಂದು ಹೇಳಬಹುದು. ಈ ಪ್ರಾಚೀನ ಮಠವನ್ನು ವಿದ್ಯಾರಣ್ಯರು ಪುನರುತ್ಥಾನಗೊಳಿಸಿ

ಇಲ್ಲಿ ಪೂಜಾದಿ ಕಾರ್ಯಗಳು ಸರಿಯಾಗಿ ನಡೆಯುವಂತೆ ಹಾಗು ದೇವಾಲಯದಲ್ಲಿ ಪೂಜಾದಿ ಉತ್ಸವಗಳು ಕ್ರಮ ಪ್ರಕಾರ ನಡೆಯುವಂತೆ ವ್ಯವಸ್ಥೆ ಮಾಡಿದರು.

ಬುಕ್ಕರಾಯನು ಗ್ರಾಮಗಳ ಮತ್ತು ಹಿರಣ್ಯ ದಾನ ಮಾಡಿದ ಮೇಲೆ ಅದಕ್ಕೆ "ಯಿ (ಯೀ)ವೂರ ವೊಡೆತನಮುಂ ಶ್ರೀ ಪಾದಂಗಳಿಗಲ್ಲದೆ ಅರಸಿನ ವೊಡೆತನ ಸಲ್ಲದು" ಎಂದು ಸಂಪೂರ್ಣ ತೆರಿಗೆರಹಿತವನ್ನಾಗಿ ಮಾಡಿ ಶಾಸನಾಂಕಿತ ಮಾಡಿಸಿದ.

## ಉಳಾಯಿಬೆಟ್ಟಿನ ಶಾಸನ

ಕುಡುಪು ಶಾಸನ ಕಾಲಕ್ಕೆ ಕೇವಲ ನಾಲ್ಕು ತಿಂಗಳ ಹಿಂದೆ ಕ್ರಿ.ಶ.೧೩೭೫ ಜೂನ್ ೧೪ ರಂದು ಚಕ್ರವರ್ತಿ ಬುಕ್ಕರಾಯನು ವಿದ್ಯಾಗಿರಿ ತೀರ್ಥ ಶ್ರೀ ಪಾದಂಗಳಿಗೆ ದಾನ ಮಾಡಿದ ವಿಚಾರವನ್ನು ಉಳಾಯಿ ಬೆಟ್ಟಿನ ಈಶ್ವರ ದೇವಾಲಯದ ಶಾಸನ ತಿಳಿಸುತ್ತದೆ[೧೯]. "ಓಮಂಜೂರ ಸಾಲೆ ಮಠ ದೇವಾಲ್ಯವನು" ಧಾರೆಯೆರದು ಕೊಟ್ಟು ಇದರ ಪೂಜಾದಿ ಕಾರ್ಯಗಳಿಗೆ ೨೬ ಮುಡಿ ಭತ್ತ ಉತ್ಪತ್ತಿಯ ಭೂಮಿ ಮತ್ತು ಮೂರು ಗದ್ಯಾಣ ಹೊಂನು ವರ್ಷಂಪ್ರತಿ ದೊರೆಯುವಂತೆ ರಾಜ್ಯಪಾಲ ಪಂಡರಿದೇವನು "ಬುಕ್ಕಂಣ ವೊಡೆಯರಿಗೆ ರಾಜ್ಯಾಭ್ಯುದಯವಾಗಿರ ಬೇಕೆಂದು" ದಾನ ಮಾಡಿದ.

ಇಲ್ಲಿ ದಾನ ಸ್ವೀಕರಿಸಿದ ವಿದ್ಯಾಗಿರಿ ಶ್ರೀಪಾದರು ಯಾರು ಎಂಬುದು ತಿಳಿಯದಾಗಿದೆ. ವಿದ್ಯಾತೀರ್ಥರಲ್ಲಿಗೆ ಬಂದ ಯುವಕರೀರ್ವರಲ್ಲಿ ಕಿರಿಯರಿಗೆ ಮೊದಲು ಸಂನ್ಯಾಸ ದೀಕ್ಷೆ ದೊರೆತು ಭಾರತೀತೀರ್ಥರಾದರು. ಕೆಲಸಮಯದ ನಂತರ ಹಿರಿಯರೂ ಸಂನ್ಯಾಸ ದೀಕ್ಷೆ ಪಡೆದು ವಿದ್ಯಾರಣ್ಯರಾದರು ಎಂಬುದು ಶೃಂಗೇರಿ ಐತಿಹ್ಯ. ವಿದ್ಯಾತೀರ್ಥರ ನಂತರ (ಸು. ಕ್ರಿ.ಶ. ೧೨೨೮- ೧೩೩೩) ಭಾರತೀ ತೀರ್ಥರು ಬಹಳ ಕಾಲದವರೆಗೆ (ಸು. ಕ್ರಿ.ಶ. ೧೩೩೩-೧೩೮೦) ಶೃಂಗೇರಿ ಪೀಠಾಧಿಪತಿಗಳಾಗಿದ್ದರು. (ಇವರಿಗೆ ಶ್ರೀ ಭಾರತೀಕೃಷ್ಣ ತೀರ್ಥ ಎಂಬ ಅಭಿದಾನವೂ ಇತ್ತು). ಇವರ ನಂತರ ವಿದ್ಯಾರಣ್ಯರು ಪೀಠಾಧಿಪತಿಗಳಾದರು (ಕ್ರಿ.ಶ. ೧೩೮೦-೧೩೮೬). ಇವರಲ್ಲಿ ಯಾರಿಗಾದರೂ ವಿದ್ಯಾಗಿರಿ ಶ್ರೀ ಪಾದಂಗಳೆಂಬ ಹೆಸರಿತ್ತೆ ಅಥವ ವಿದ್ಯಾತೀರ್ಥರ ತಪಃಶಕ್ತಿಯ ಪ್ರಭಾವದಿಂದಾಗಿಯೇ ಜನ ಅವರನ್ನು ಹೀಗೆ ಕರೆದರೆ- ಈ ಯಾವ ಪ್ರಶ್ನೆಗಳಿಗೂ ಸರಿಯಾದ ಉತ್ತರವಿಲ್ಲ. ಶಾಸನದಲ್ಲಿ ತಿಳಿಸಿರುವಂತೆ ಬುಕ್ಕರಾಜನ ಶ್ರೇಯೋಕಾಂಕ್ಷಿಯಾದ ರಾಜ್ಯಪಾಲ ಪಂಡರಿದೇವನು ಕೊಟ್ಟ ದಾನವನ್ನು ವಿದ್ಯಾಗಿರಿ ಶ್ರೀಪಾದಂಗಳು ಸ್ವತಃ ಸ್ವೀಕರಿಸಿದ್ದಾರೆ. ಶಾಸನದ ಕಾಲ ಕ್ರಿ.ಶ. ೧೩೭೫ ರಲ್ಲಿ ಶೃಂಗೇರಿಯ ಪೀಠಾಧಿಪತಿಗಳಾಗಿದ್ದವರು ಭಾರತೀ ತೀರ್ಥರು. ವಿದ್ಯಾರಣ್ಯರು ವಿದ್ಯಾನಗರ(ವಿಜಯನಗರ)ದಲ್ಲೇ ಹೆಚ್ಚಿನ ಸಮಯ ವಾಸ್ತವ್ಯದಲ್ಲಿದ್ದರು. ಈ ಕಾರಣದಿಂದಾಗಿ ರಾಜ್ಯಪಾಲ ಪಂಡರಿದೇವನು ತನ್ನ ದಾನ ಶಾಸನದಲ್ಲಿ "ವಿದ್ಯಾಗಿರಿ ತೀರ್ಥ ಶ್ರೀಪಾದ" ಎಂದು ಸಂಬೋಧಿಸಿರುವುದು ವಿದ್ಯಾರಣ್ಯರನ್ನು ಕುರಿತಾಗಿಯೇ ಇರಬಹುದೆಂಬ ಅನುಮಾನ ಬರುತ್ತದೆ. ವಿದ್ಯಾರಣ್ಯರೇನಾದರೂ ತಮ್ಮ ಗುರು ವಿದ್ಯಾತೀರ್ಥರ ಹೆಸರಿನಲ್ಲಿ ದಾನ ಸ್ವೀಕರಿಸಿದ್ದರೆ ಶಾಸನದಲ್ಲಿ ಇಬ್ಬರ ಹೆಸರೂ ಉಲ್ಲೇಖಗೊಳ್ಳುತ್ತಿತ್ತು. ಪ್ರಸಕ್ತ ಹಾಗಾಗಿಲ್ಲ.

ಈ ವಿಷಯವನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ವಿದ್ಯಾರಣ್ಯರಿಗೆ ಸಂಬಂಧಿಸಿದ ಒಂದು ಹೊಸ ಶಾಸನವನ್ನು ಇಲ್ಲಿ ಅವಲೋಕಿಸುವುದು ಸೂಕ್ತ.

## ನೀರುಮಾರ್ಗದ ಶಿಲಾ ಶಾಸನ

ಈ ಶಾಸನ ಮಂಗಳೂರು ತಾಲೂಕಿನ ನೀರುಮಾರ್ಗ ಎಂಬಲ್ಲಿ ನನಗೆ ದೊರೆತದ್ದು[೨೦]. ಈ ಸ್ಥಳ ಕುಡುಪು ಗ್ರಾಮಕ್ಕೆ ಪೂರ್ವ ಭಾಗದಲ್ಲಿ ತೀರ ಸಮೀಪದಲ್ಲಿದೆ. ಅತ್ಯಂತ ಪ್ರಮುಖವಾದ ಈ ಶಾಸನ ಬಹಳ ಆಶ್ಚರ್ಯಕರವಾದ ರೀತಿಯಲ್ಲಿ ಪತ್ತೆಯಾಯಿತು. ನೀರುಮಾರ್ಗದ ಕ್ಷೇತ್ರ ಅಧ್ಯಯನ ಕಾರ್ಯದಲ್ಲಿ ನಿರತನಾಗಿದ್ದಾಗ ಮಧ್ಯಾಹ್ನ ಕೈಕಾಲು ತೊಳೆಯಲು ಅಧ್ಯಾಪಕ ಮಿತ್ರರಾದ ಶ್ರೀನಿವಾಸ ಭಟ್ಟರ ಮನೆಯ ಅಂಗಳದಲ್ಲಿದ್ದ ಬಾವಿಯ ಬಳಿಗೆ ಹೋಗಿ ಕಾಲಿಗೆ ನೀರನ್ನು ಹಾಕಿಕೊಂಡಾಗ ಏನೋ ಮುಜುಗರವಾಗಿ ನೆಲಕ್ಕೆ ಹಾಸಿದ ಕಲ್ಲನ್ನು ನೋಡಿದೆ, ಬೇಸರವಾಯಿತು; ಕಾರಣ ನಾನು ಶಾಸನ ಕಲ್ಲೊಂದರ ಮೇಲೆ ನಿಂತಿದ್ದೆ. ಕೂಡಲೇ ಅಲ್ಲಿ ಬಿದ್ದ ನೀರನ್ನು ಸರಿಸಿ ಅಕ್ಷರಗಳನ್ನು ನೋಡಲು, ಓದಲು ಮುಂದಾದೆ. ಬರಹ ಬಹಳ ಮಾಸಿದಂತೆ ಕಂಡಿತು. ಆದರೂ ಮಾಡಿದ ಪ್ರಯತ್ನದ ಫಲ ಅಲ್ಲಿಯವರೆಗೆ ಬಿಸಿಲಿನಲ್ಲಿ ಆಗಿದ್ದ ಆಯಾಸವೆಲ್ಲಾ ಪರಿಹಾರ ಆಗಿತ್ತು, ಅದರೊಂದಿಗೆ ಆಶ್ಚರ್ಯವೂ ಮೂಡಿತ್ತು. ಇದಕ್ಕೆ ಕಾರಣ ಶಾಸನದಲ್ಲಿ "ವಿದ್ಯಾರಣ್ಯ ಶ್ರೀ ಪದಂಗಳಿಗೆ" ಎಂದಿದ್ದ ಬರಹ. ಕೂಡಲೆ ಶಾಸನದ ಪಡಿಯಚ್ಚನ್ನು ತೆಗೆದುಕೊಂಡೆ. ಬಟ್ಟೆ ಒಗೆಯುವ ಕಲ್ಲಾಗಿ ಇದನ್ನು ಬಹಳ ಕಾಲದಿಂದ ಉಪಯೋಗಿಸುತ್ತಿದ್ದ ಕಾರಣ ಇದರಲ್ಲಿನ ಬರಹ ಬಹಳ ಮಾಸಿಹೋಗಿದೆ. ಸುಮಾರು ೧೮ - ೨೩ ಇಂಚು ಅಳತೆಯ ಈ ಕಲ್ಲಿನ ಬಲದ ಮೂಲೆ ಭಾಗ ಸ್ವಲ್ಪ ತುಂಡಾಗಿ ನಷ್ಟವಾಗಿದೆ.

ಇದರಿಂದಾಗಿ ಕೊನೆಯ ಎರಡು ಸಾಲಿನ ಕೆಲವು ಅಕ್ಷರಗಳು ನಷ್ಟವಾಗಿವೆ. ಕಲ್ಲಿನ ಮೇಲ್ಭಾಗ ವೃತ್ತಾಕಾರದಲ್ಲಿದ್ದು ಇದರ ಪರಿಧಿಯಲ್ಲಿ ಒಂದು ಸಾಲು ಬರಹ ಇದೆ. ಇದರ ಕೆಳಗೆ ಸರಳ ರೇಖೆಯಲ್ಲಿ ಒಂದು ಸಾಲು ಬರಹ ಇದೆ. ಇದರ ಕೆಳಗೆ ಹದಿಮೂರು ಒಟ್ಟು ಹದಿನೈದು ಸಾಲುಗಳ ಬರಹವನ್ನು ಶಾಸನ ಹೊಂದಿದೆ. ಇದರ ಪಾಠ ಕೆಳಗಿನಂತಿದೆ:

೧ * * * ವಿಜೆಯ * ಮ * * * * * *

೨ * (ಹಡಪ) * * * ಡೆ * * * * *
೩ ಸ್ವಸ್ತಿ ಶ್ರೀ ವೀರ ಬುಕ್ಕರಾಯನ ನಿರೂಪದಿಂದ ಪಂ-
೪ ಡರಿ ದೇವ (ರು) ಗಳು ನೀರುಮಾರ್ಗದೊಳಗೆ (ಕಟ್ಟ) ದ ಮಠ
೫ ಛತ್ರದ (ಧರ್ಮದ) ವೋರೆಯನು * * (ಸೋಮ) * * * * *
೬ * ನಿವೇದ್ಯ ಯತಿಗಳ (ಭಿಕ್ಷೆ) * * ಶ್ರೀ ವಿದ್ಯಾರಂ-
೭ ಣ್ಯ ಶ್ರೀ ಪದ (ಂ)ಗಳಿಗೆ ಧಾರಾ ಪೂರ್ವಕವಾಗಿ
೮ ಬಿತ್ತುವಾನೆ * * ಮ ಮೂಡೆ ೭೬ ಯಿದಕುಳ್ಳ (ವಿಸ್ತಾರ)
೯ ಕುರುಂಭೆ ನಿಡಿಲು ಚತು ಸೀಮೆ ಸಹಿತ ಕೊಟ-
೧೦ ರುಮಲ್ಲಿಯ ವೊಡೆತನ ಶ್ರೀ ಪದಂಗಳಿಗೆ ಅ-
೧೧ ಲ್ಲದೆ ಮತಾರಿಗೆ ಸಲ್ಲದು [।*] ಆರೊಬ್ಬರು ತಪ್ಪಿ-
೧೨ ದಾದಡೆ ಅರ (ಸಿಂಗೆ ಕ) ಗ ೨೦೦೦ ತಪ್ಪಿದ
೧೩ ಅಡಕ [।*] ಈ ಧರ್ಮ್ಮಕೆ ವೊಕ್ರವಾದಡೆ
೧೪ ೧೦೦೦ ಕವಿಲೆನೂ ಕೊಂದ ದೋ(ಷ) * *
೧೫ ಗಳ ಮಹಾ ಶ್ರೀ ಶ್ರೀ ಶ್ರಿ * * * * * [।।*].

**ಇದರ ಅರ್ಥ:** (ಒಂದನೆಯ) ಬುಕ್ಕರಾಯನ ನಿರೂಪದಿಂದ ಪಂಡರಿದೇವನು ನೀರುಮಾರ್ಗದಲ್ಲಿ ನಿರ್ಮಿಸಿದ ಮಠ ಮತ್ತು ಛತ್ರ ಇಲ್ಲಿ ನಡೆಯುವ (ದೇವರ ಪೂಜೆ ಮತ್ತು) ಯತಿಗಳ ಭಿಕ್ಷೆಗಾಗಿ ೭೬ ಮುಡಿ ಬೀಜ ಬಿತ್ತುವ (ಅಷ್ಟು ವಿಸ್ತಾರವಾದ) ಭೂಮಿಯನ್ನು ಅದಕ್ಕಿದ್ದ ಚತುಃ ಸೀಮೆ ಸಹಿತ (ತೆರಿಗೆ ರಹಿತವನ್ನಾಗಿ ಮಾಡಿ) ಶ್ರೀ ವಿದ್ಯಾರಣ್ಯ ಶ್ರೀ ಪಾದಂಗಳಿಗೆ ಧಾರೆ ಯೆರದು ಕೊಟ್ಟ. ಇದರ ಮೇಲಿನ ಒಡೆತನ ಶ್ರೀ ಪಾದಂಗಳಿಗಲ್ಲದೆ ಬೇರಾರಿಗೂ ಸಲ್ಲುದು ಎಂದು ಕಟ್ಟು ಮಾಡಿದ. ಇದಕ್ಕೆ ತಪ್ಪಿದರೆ ಅರಸನಿಗೆ ತಪ್ಪು (ದಂಡ) (ಕಟಿ) ಗದ್ಯಾಣ ೨೦೦೦ (ತೆರುವರು). ಈ ಧರ್ಮಕ್ಕೆ ಅಡ್ಡಿಬಂದರೆ ೧೦೦೦ ಕವಿಲೆಯನು ಕೊಂದ ದೋಷ. ಮಂಗಳವಾಗಲಿ.

ಶಾಸನದಲ್ಲಿ ಅಕ್ಷರಗಳು ಬಹಳ ಮಾಸಿರುವುದರಿಂದ ಇಲ್ಲಿ ಇರಬಹುದಾದ ಕಾಲ ನಿರ್ದೇಶನ ಸರಿಯಗಿ ಅರ್ಥವಾಗುವುದಿಲ್ಲ. ಮೊದಲನೆಯ ಸಾಲಿನಲ್ಲಿ 'ವಿಜೆಯ' ಎಂಬ ಅಕ್ಷರಗಳನ್ನು ಗುರುತಿಸಬಹುದಾದರೆ, ಎರಡನೆಯ ಸಾಲಿನಲ್ಲಿ ಅಸ್ಪಷ್ಟವಾಗಿ 'ಹಡಪ' ಅಕ್ಷರಗಳನ್ನು ಗುರುತಿಸಬಹುದು. ಇಲ್ಲಿ 'ವಿಜೆಯ' ಏನನ್ನು ಸೂಚಿಸುತ್ತದೆ ಎಂಬುದನ್ನು ಸುಲಭವಾಗಿ ಹೇಳಲು ಆಗುವುದಿಲ್ಲ. ಆದರೆ 'ಹಡಪ' ಎನ್ನುವುದನ್ನು ಅರ್ಥೈಸಬಹುದು. ಒಂದನೆಯ ಹರಿಹರ ಮಹಾರಾಯನ ಆಳ್ವಿಕೆ ಕಾಲದಲ್ಲಿ ಹಡಪದ ಗೌತರಸ ಎಂಬಾತ ಮಂಗಳೂರು ರಾಜ್ಯದ ರಾಜ್ಯಪಾಲನಾಗಿ ಕಾರ್ಯ ನಿರ್ವಹಿಸಿದ್ದ. ಈತನ ಬಗ್ಗೆ ಇರುವ ಒಂದೇ ಒಂದು ದಾಖಲೆ– ಶಾಸನ ಕಾನ್ತಾವರದ ಕಾನ್ತೇಶ್ವರ ದೇವಾಲಯದಲ್ಲಿದೆ (ಎಸ್. ಐ.ಐ. ಸಂ.೭ ನಂ. ೨೩೧). ಇದರ ಕಾಲ ಕ್ರಿ.ಶ. ೧೩೪೮ ಏಪ್ರಿಲ್ ೨೯. ಶಾಸನ ಗೌತರಸನನ್ನು 'ಪ್ರಧಾನಂ' ಎಂದು ಉಲ್ಲೇಖಿಸಿದೆ. ಈ ಆಧಾರದಲ್ಲಿ ನೀರುಮಾರ್ಗದ ಶಾಸನದಲ್ಲಿರುವ 'ವಿಜೆಯ'ವನ್ನು ಸಂವತ್ಸರ ಎಂದು ಗ್ರಹಿಸಿದಲ್ಲಿ ಅದು ಶಕವರ್ಷ ೧೨೭೫ ಆಗುತ್ತದೆ. ಇದು ಕ್ರಿಸ್ತ ವರ್ಷ ೧೩೫೩–೫೪ಕ್ಕೆ ಸರಿಹೊಂದುತ್ತದೆ. ಪ್ರಾಯಶಃ ಹಡಪದ ಗೌತರಸನು ಮಂಗಳೂರು ರಾಜ್ಯದ ರಾಜ್ಯಪಾಲನಾಗಿ ಅಧಿಕಾರದಲ್ಲಿ ಮುಂದುವರೆದಿದ್ದಾಗ ಪಂಡರಿದೇವನು ಸ್ವಲ್ಪ ಸಮಯ ಇಲ್ಲಿದ್ದು ಬುಕ್ಕರಾಯನ ನಿರೂಪದಿಂದ ನೀರುಮಾರ್ಗದಲ್ಲಿ ಮಠ ಮತ್ತು ಛತ್ರಗಳನ್ನು ನಿರ್ಮಿಸಿ ಅವನ್ನು ವಿಶಾಲವಾದ ಭೂಮಿಯೊಂದಿಗೆ ಶ್ರೀ ವಿದ್ಯಾರಣ್ಯ ಶ್ರೀ ಪಾದಂಗಳಿಗೆ ಧಾರೆ ಎರೆದುಕೊಟ್ಟ. ಮಂಗಳೂರು ರಾಜ್ಯದ ರಾಜ್ಯಪಾಲನಾಗಿ ಶ್ರೀ ವಿದ್ಯಾರಣ್ಯ ಶ್ರೀ ಪಾದಂಗಳಿಗೆ ಪಂಡರಿದೇವನು ಮಾಡಿದ ದಾನಕಾರ್ಯಗನ್ನು ತಿಳಿಸುವ ಎರಡು ಶಾಸನಗಳನ್ನು ಮೇಲೆ ಉಲ್ಲೇಖಿಸಿದೆ. ಈ ನಿಟ್ಟಿನಲ್ಲಿ ನೀರುಮಾರ್ಗದ ಹೊಸ ಶಾಸನ ಕೊಡುವ ಮಾಹಿತಿ ಅತ್ಯಂತ ಮಹತ್ವ ಪೂರ್ಣವಾದುದು. ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ಆವೇಳೆಗಾಗಲೆ ಕರಾವಳಿಯಲ್ಲಿ ಹಲವಾರು ಶಾಸನಗಳು ಹುಟ್ಟಿಕೊಂಡಿದ್ದವು. ಆದರೆ ಶೃಂಗೇರಿ ಮಠಕ್ಕೆ ಮತ್ತು ವಿದ್ಯಾರಣ್ಯರಿಗೆ ಸಂಬಂಧಿಸಿದಂತೆ ಇಷ್ಟು ಪ್ರಾಚೀನವಾದ ಉಲ್ಲೇಖ ಇಲ್ಲಿ ದೊರೆತಿರಲಿಲ್ಲ. ಬುಕ್ಕರಾಯ ಕ್ರಿ.ಶ. ೧೩೫೪ ರಲ್ಲಿ ಯುವರಾಜನಾಗಿದ್ದ. ಆಗ ಮಾಡಿದ ದಾನ ಇದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಸದ್ಯಕ್ಕೆ ಇಡೀ ಕರಾವಳಿಯಲ್ಲಿ) ವಿದ್ಯಾರಣ್ಯರನ್ನು ಕುರಿತಾಗಿ ದೊರೆಯುವ ಅತ್ಯಂತ ಪ್ರಾಚೀನ ದಾಖಲೆ ಇದು. ಅದೇರೀತಿಯಲ್ಲಿ ರಾಜ್ಯಪಾಲ ಪಂಡರಿದೇವನ ಬಗ್ಗೆಯೂ ಇಲ್ಲಿರುವುದು ಪ್ರಪ್ರಥಮ ಉಲ್ಲೇಖ.

ಈ ಶಾಸನ ಮತ್ತು ಕುಡುಪಿನ ಶಾಸನದಲ್ಲಿ ವಿದ್ಯಾರಣ್ಯರನ್ನು ಶ್ರೀಪಾದರೆಂದೇ ಸಂಬೋಧಿಸಲಾಗಿದೆ. ಆದರೆ ಆಗ ಶೃಂಗೇರೀ ಪೀಠಾಧಿಪತಿಗಳಾಗಿದ್ದವರು ಶ್ರೀ ಭಾರತೀ ತೀರ್ಥರು. ಇಲ್ಲಿನ ಶಾಸನಗಳಲ್ಲಿ ಅವರ ಹೆಸರಿಲ್ಲ. ಈ ಸಂದರ್ಭದಲ್ಲಿ ವಿದ್ಯಾರಣ್ಯರ ಪಾತ್ರವನ್ನು ಕೀಳು ಅಭಿರುಚಿಯ ಮಟ್ಟದಲ್ಲಿ ನೋಡಲು ಸಾಧ್ಯವಿಲ್ಲ. ಅಲ್ಲದೆ ವಿದ್ಯಾರಣ್ಯರ ಪಾತ್ರವೇನಾದರೂ ಇತ್ತೇ ಎಂಬ ಯೋಚನೆ ಸಹ ಸಾಧುವಲ್ಲ.

ಸಮಸ್ಯೆಯ ಪರಿಹಾರಕ್ಕೆ ಒಂದು ಮಾರ್ಗೋಪಾಯವನ್ನು ಇಲ್ಲಿ ಆಲೋಚಿಸಬಹುದು. ಚಕ್ರವರ್ತಿ ಒಂದನೆಯ ಬುಕ್ಕರಾಯನಿಗೆ ವಿದ್ಯಾರಣ್ಯರಲ್ಲಿ ಅಪಾರವಾದ ಭಕ್ತಿ, ಶ್ರದ್ಧೆ ಮತ್ತು ಅಭಿಮಾನಪೂರ್ವಕ ಪ್ರೀತಿ ಇತ್ತು. ರಾಜನಿಗೆ ಅವರೊಂದು ಸಂಚಾರೀಶಕ್ತಿಯಾಗಿದ್ದರು. ಹಾಗಾಗಿ ರಾಜ ಇವರನ್ನು ಕೇವಲ ಯತಿಗಳೆಂದು ಸಂಬೋಧಿಸುವ ಮನಸ್ಸು ಇಲ್ಲವಾಗಿದ್ದನು. ಅವರನ್ನು 'ಶ್ರೀ ಪಾದ'ರೆಂದೇ ಸಂಬೋಧಿಸಿ ತನ್ನ ಭಕ್ತಿ–ಶ್ರದ್ಧೆಯನ್ನು ಪ್ರಕಟಪಡಿಸಿದನು. ಇದರಲ್ಲಿ ಪೀಠಾಧಿಪತಿಗಳಾಗಿದ್ದ ಭಾರತೀತೀರ್ಥರನ್ನು ಅಗೌರವಿಸ ಬೇಕೆಂಬ ಭಾವನೆ ಇರಲಿಲ್ಲ. ಅಲ್ಲದೆ ಸ್ವತಃ ಭಾರತೀ ತೀರ್ಥರೇ ವಿದ್ಯಾರಣ್ಯರನ್ನು ಈ ರೀತಿಯಲ್ಲಿ ಗೌರವಿಸಬೇಕೆಂಬುದಕ್ಕೆ ತಮ್ಮ ಪ್ರೀತಿಯ ಪರೋಕ್ಷ ಸಮ್ಮತಿ ಸೂಚಿಸಿದ್ದಿರಬಹುದು.

ಇದೊಂದು ನಿಜಕ್ಕೂ ಅಪೂರ್ವವಾದ ಸಂಗತಿ. ಆದರೆ ವಿದ್ಯಾರಣ್ಯರಾದರೋ ತಮಗೆ ಸಂದಾಯವಾದ ಎಲ್ಲ ಗೌರವ, ಸಮ್ಮಾನಗಳನ್ನು ವಿನಮ್ರತೆಯಿಂದ ಗುರುಗಳಾದ ಭಾರತೀ ತೀರ್ಥರಿಗೆ ಅರ್ಪಿಸಿ ಗುರು-ಶಿಷ್ಯ ಸಂಬಂಧದ ಮಹತ್ವವನ್ನು ಎತ್ತಿಹಿಡಿದು ಪ್ರಕಾಶಿಸಿದವರು.

ಒಟ್ಟಿನಲ್ಲಿ ಮೇಲೆ ಗಮನಿಸಿದ ಈ ಮೂರು ಶಾಸನಗಳೂ ಶೃಂಗೇರಿ ಇತಿಹಾಸದ ಬಗ್ಗೆ ಹೊಸ ಆಲೋಚನೆಗಳಿಗೆ ಮತ್ತು ಸಂಶೋಧನೆಗೆ ಮಾರ್ಗಸೂಚೀ ಆಧಾರಗಳಾಗಿವೆ.

## ಇಮ್ಮಡಿ ಹರಿಹರನ ಚಾಂತಾವು ಶಾಸನ

ಉಡುಪಿ ತಾಲೂಕಿನ ಚಾಂತಾವುನಲ್ಲಿ ದೊರೆತಿರುವ ಇಮ್ಮಡಿ ಹರಹರನ ಕಾಲಕ್ಕೆ ಸೇರುವ ಶಿಲಾ ಶಾಸನವೊಂದು ವಿದ್ಯಾರಣ್ಯರ ಶಿಷ್ಯರಾದ ಶಂಕರಾರಣ್ಯ ಶ್ರೀಪಾದರ ಉಲ್ಲೇಖ ಮಾಡುತ್ತದೆ[೨೧]. ಕ್ರಿಶ. ೧೪೦೪ ಫೆಬ್ರವರಿ ೧೨ (ಮಂಗಳವಾರ) ಕ್ಕೆ ಸೇರುವ ಈ ಶಾಸನವು ಜಾತಣ್ಣ ಉಪಾಧ್ಯ ಎಂಬುವರಿಂದ ಪಡೆದ ಭೂದಾನವನ್ನು ನಿಡುವಂಪಳ್ಳಿಯ ಶಂಕರನಾರಾಯಣ ದೇವಸ್ಥಾನಕ್ಕೆ ಶ್ರೀ ಶಂಕರಾರಣ್ಯರು ಕೊಡಮಾಡಿದರು ಎಂದು ಹೇಳುತ್ತದೆ. ಆಗ ಶೃಂಗೇರಿಯ ಪೀಠಾಧಿಪತಿಗಳಾಗಿದ್ದವರು ಒಂದನೆಯ ಶ್ರೀ ನರಸಿಂಹ ಭಾರತೀ ತೀರ್ಥರು. ಇದು ಶಾಸನದಲ್ಲಿ ಉಲ್ಲೇಖಗೊಂಡಿಲ್ಲ.

ಸೀತಾನದಿ ಸಮುದ್ರ ಸೇರುವ ಅಳಿವೆಯಲ್ಲಿ ಬಾಳೆಕುದ್ರು ಎಂಬ ಗ್ರಾಮ ಇದೆ. ಇದರ ಸಮೀಪ ಹಂಗಾರುಕಟ್ಟೆ ಎಂಬ ಬಂದರು ಕಟ್ಟೆ ಇದೆ. ಇದು ಖ್ಯಾತ ಪ್ರಾಚೀನ ಬಾರಕೂರಿನ ಬಂದರು ಸ್ಥಳ. ಬಾಳೆಕುದ್ರುವಿನಲ್ಲೊಂದು ಸ್ಮಾರ್ತ ಭಾಗವತ ಸಂಪದಾಯದ ಮಠವೊಂದಿದೆ. ಇಲ್ಲಿಯ ಪೀಠಾಧಿಪತಿಗಳನ್ನು ಪರಂಪರಾಗತವಾಗಿ 'ಶಂಕರಾರಣ್ಯ ಶ್ರೀ ಪಾದರು' ಎಂದು ಕರೆಯುತ್ತಾರೆ. (ಇತ್ತೀಚೆಗೆ ಪೀಠ ಸ್ವೀಕಾರ ಮಾಡಿದ ಶ್ರೀಪಾದರ ಹೆಸರಿನಲ್ಲಿ(ಪ್ರಶಸ್ತಿಯಲ್ಲಿ) ಬದಲಾವಣೆ ಇದೆ. ಅದು 'ಶ್ರೀ ನೃಸಿಂಹಾಶ್ರಮ' ಎಂದಾಗಿದೆ.) ಚಾಂತಾವಿನ ಶಾಸನ ಜಾತಂಣ ಉಪಾಧ್ಯನು ಮಾಡಿದ ದಾನವನ್ನು ಸ್ವೀಕರಿಸಿದವರು ಶ್ರೀ ವಿದ್ಯಾರಣ್ಯರ ಶಿಷ್ಯರಾದ ಶ್ರೀ ಶಂಕರಾರಣ್ಯ ಶ್ರೀಪಾದರು ಎಂದು ಹೇಳುತ್ತದೆ. ಬಾಳೆಕುದ್ರು ಮಠದ ನೇರ ಪ್ರಸ್ತಾಪ ಇಲ್ಲಿ ಇಲ್ಲದಿದ್ದರೂ ಶೃಂಗೇರಿ ಪರಂಪರೆಗೆ ಸೇರಿದ್ದು ಸ್ಮಾರ್ತ ಸಂಪ್ರದಾಯದ ಮಠ ಅದರ ಪೀಠಾಧಿಪತಿಗಳೊಂದಿಗೆ ಈಗಲೂ ಇರುವುದು ಇದೊಂದೇ. ಈಗಲೂ ಶೃಂಗೇರಿಮಠ ದೊಂದಿಗೆ ಈ ಮಠದ ಸಂಪರ್ಕ ಮತ್ತು ಸಂಬಂಧ ಇದೆ. ಹಾಗಾಗಿ ಶಾಸನದಲ್ಲಿ ಉಲ್ಲೇಖಗೊಂಡಿರುವ ಶ್ರೀ ಶಂಕರಾರಣ್ಯ ಶ್ರೀಪಾದರು ಈ ಮಠದ ಅಧಿಪತಿಗಳೆಂದು ತಿಳಿಯಬಹುದು.

ಕ್ರಿ.ಶ. ೧೩೭೫ ರ ಕುಡುಪು ಶಾಸನದಲ್ಲಿ ವಿದ್ಯಾರಣ್ಯರು ಅಲ್ಲಿಯ ಮಠ ಮತ್ತು ದೇವಸ್ಥಾನವನ್ನು ಪುನರುತ್ಥಾನಗೊಳಿಸಿದ ವಿಚಾರ ಮೇಲೆ ನೋಡಿದ್ದೆವೆ. ಪ್ರಾಯಶಃ ಇಂತಹ ಪುನರುತ್ಥಾನದ ಕೆಲಸಗಳನ್ನು ವಿದ್ಯಾರಣ್ಯರು ದಕ್ಷಿಣ ಕನ್ನಡದ ಹಲವಾರು ಸ್ಥಳಗಳಲ್ಲಿ ಮಾಡಿರಬೇಕು. ಅದರಲ್ಲಿ ಬಾಳೇಕುದ್ರು ಮಠವೂ ಒಂದು. ಅಲ್ಲಿಯ ಯೋಗಕ್ಷೇಮ ನಿರ್ವಹಣಾರ್ಥ ಖಾಲಿ ಇದ್ದಿರಬಹುದಾದ ಪೀಠಕ್ಕೆ ತಮ್ಮ ಶಿಷ್ಯರೋರ್ವರನ್ನು ಅಧಿಪತಿಯನ್ನಾಗಿ ಮಾಡಿದರು. ಶಂಕರಾರಣ್ಯ ಶ್ರೀಪಾದರು ತಮ್ಮನ್ನು ವಿದ್ಯಾರಣ್ಯರ ಶಿಷ್ಯರೆಂದು ಶಾಸನದಲ್ಲಿ ಉಲ್ಲೇಖಿಸಿಕೊಂಡಿರುವುದು ಈ ವಿಚಾರಕ್ಕೆ ಆಧಾರವಾಗಿದೆ.

ಧರ್ಮದ ಪುನರುತ್ಥಾನ ಕಾರ್ಯದಲ್ಲಿ ಇಡೀ ಚಕ್ರಾಧಿಪತ್ಯದಲ್ಲಿ ಅದರಲ್ಲೂ ಕರಾವಳಿಯ ಈ ಭಾಗದಲ್ಲಿ ವಿದ್ಯಾರಣ್ಯರು ತುಂಬಾ ಕ್ರಿಯಾಶೀಲರಾಗಿದ್ದರು ಎಂಬುದು ಈ ಶಾಸನಗಳಿಂದ ವ್ಯಕ್ತವಾಗುತ್ತದೆ.

## ವೊಡೇರಹೋಬಳಿ ಶಾಸನ

ಕ್ರಿ.ಶ. ೧೪೦೬ ಕ್ಕೆ ಸೇರುವ ಕುಂದಾಪುರ ವೊಡೇರಹೋಬಳಿ ಶಾಸನವು[೨೨] ನರಸಿಂಹ ಭಾರತೀ ತೀರ್ಥರು ಹಂಗರು ಅಧಿವಾಸದ ಕೆಲವು ಜನರು ಮಾಡಿದ ಭೂ ದಾನವನ್ನು ಸ್ವೀಕರಿಸಿದ ವಿಚಾರ ತಿಳಿಸುತ್ತದೆ. ಶೃಂಗೇರಿ ಮಠದೊಂದಿಗೆ ಕುಂದಾಪುರದ ಕುಂದೇಶ್ವರ ಮತ್ತು ಕೋಟೇಶ್ವರದ ಕೋಟಿಲಿಂಗೇಶ್ವರ ದೇವಸ್ಥಾನಗಳ ಸಂಬಂಧ ಇಲ್ಲಿ ಪ್ರಕಟವಾಗಿದೆ. ಈ ಶಾಸನದ ಮುಖ್ಯ ವಿಚಾರವೆಂದರೆ ಮಠದ ಯತಿಗಳ ಗುಣ ವರ್ಣನೆ ಮಾಡಿಕೊಡುವ ಮೂಲಕ ಮಠದ ಯತಿಗಳ ವಂಶಾವಳಿಯನ್ನು ಕೊಡುವುದು. ಇಲ್ಲಿ ಅನುಕ್ರಮವಾಗಿ ವಿದ್ಯಾತೀರ್ಥ, ವಿದ್ಯಾರಣ್ಯ, ಭಾರತೀ ತೀರ್ಥ ಮತ್ತು ನರಸಿಂಹ ಭಾರತೀ ತೀರ್ಥ ಇವರ ವರ್ಣನೆ ಇದೆ. ಶೃಂಗೇರಿ ಮಠ ಪರಂಪರೆಯಲ್ಲಿ ಬರುವ ಹೆಸರುಗಳೆಂದರೆ- ವಿದ್ಯಾತೀರ್ಥ, ಭಾರತೀ ತೀರ್ಥ, ವಿದ್ಯಾರಣ್ಯ, ಚಂದ್ರಶೇಖರ ಭಾರತೀ ತೀರ್ಥ ಮತ್ತು ನರಸಿಂಹಭಾರತೀ ತೀರ್ಥ[೨೩].

ವೊಡೇರಹೋಬಳಿ ಶಾಸನದಲ್ಲಿ ಕೆಲವು ಮುಖ್ಯ ವ್ಯತ್ಯಯಗಳನ್ನು ಕಾಣುತ್ತೇವೆ. ಇಲ್ಲಿ ಭಾರತೀತೀರ್ಥರು ವಿದ್ಯಾರಣ್ಯರ ನಂತರ ಬರುತ್ತಾರೆ. ಚಂದ್ರಶೇಖರ ಭಾರತಿಗಳ ಉಲ್ಲೇಖವೇ ಇಲ್ಲಿ ಇಲ್ಲ. ನರಸಿಂಹ ಭಾರತೀತೀರ್ಥರ ಕಾಲದ ಶಾಸನದಲ್ಲಿ ಅವರ ಗುರುಗಳಾದ ಚಂದ್ರಶೇಖರ ಭಾರತಿಗಳ ಹೆಸರೇ ಇಲ್ಲದಿರುವುದು, ಭಾರತೀತೀರ್ಥ ಮತ್ತು ವಿದ್ಯಾರಣ್ಯರ ಕಾಲವು ವ್ಯತ್ಯಯವಾಗಿರುವುದು ಆಶ್ಚರ್ಯದ ಸಂಗತಿಗಳು. ಈ ವಿಚಾರ ಯಾವ ವಿದ್ವಾಂಸರ ಗಮನಕ್ಕೆ ಈವರೆಗೆ ಬಾರದಿರುವುದೂ ಆಶ್ಚರ್ಯವೇ! ಇದು ಕೂಟ ಶಾಸನವಲ್ಲ. ಇಲ್ಲಿರುವ ಮಾಹಿತಿ ವಿಚಾರಯೋಗ್ಯ.

### ಆಸ್ಥಾನ ವಿದ್ವಾಂಸರು

ಕವಿಗಳು, ವಿದ್ವಾಂಸರು, ವೇದವಿದ್ಯಾ ಪಾರಂಗತರು ಇತ್ಯಾದಿಯಾಗಿ ಇಲ್ಲಿನ ಸಾರಸ್ವತಲೋಕದ ಜನರು ಶ್ರೀ ಮಠದ ಆಸ್ಥಾನದಲ್ಲಿ ಪುರಸ್ಕೃತರಾಗಿದ್ದರು. ಬಸರೂರು ಮತ್ತು ವಾಂಟ್ಯಾಳ ಶಾಸನಗಳು ಈ ಬಗ್ಗೆ ಮಾಹಿತಿ ನೀಡುತ್ತವೆ. ಶೃಂಗೇರಿ ಮಠದ ವಿದ್ವಾಂಸರಾಗಿದ್ದ ಸಿಂಗಂಣ ಅಯ್ಯಗಳಿಗೆ ಕೊಟ್ಟ ಭೂದಾನದ ವಿಚಾರವನ್ನು ಕ್ರಿ.ಶ. ೧೪೦೦ರ ಬಸರೂರು ಮಹಾಲಿಂಗೇಶ್ವರ ದೇವಸ್ಥಾನ ದಲ್ಲಿರುವ ಒಂದು ಶಾಸನ ತಿಳಿಸುತ್ತದೆ [೨೪].

ಈ ದಾನವನ್ನು ಕೊಟ್ಟವ ಬಸರೂರ ಸೆಟ್ಟಿಕಾರ ಮಾದಂಣ ಸೆಟ್ಟಿ, ಸಿಂಗಂಣ ಅಯ್ಯಗಳು ಚಕ್ರವರ್ತಿ ಉಪಾಧ್ಯಾಯರ ಮಗ ಎಂದು ಶಾಸನ ತಿಳಿಸುತ್ತದೆ.

ಕ್ರಿ.ಶ. ೧೪೦೬ ಕ್ಕೆ ಸೇರುವ ವಾಂಟ್ಯಾಳ ಶಾಸನವು ಬಹಳ ಮುಖ್ಯವಾದ ವಿಚಾರವೊಂದನ್ನು ತಿಳಿಸುತ್ತದೆ[೨೫]. ಶೃಂಗೇರಿ ಮಠದಲ್ಲಿ ಆಗ ಒಂದು ಅಪೂರ್ವವಾದ ಪ್ರಾಚೀನ ಗ್ರಂಥ ಭಂಡಾರವಿತ್ತು. ಪುರಾಣಿಕ ಕವಿ ಕೃಷ್ಣಭಟ್ಟ ಎನ್ನುವವರು ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಇವರ ಜೀವನ ನಿರ್ವಹಣೆಗಾಗಿ ಕಾರ್ಕಳ ತಾಲೂಕಿನ ಶಿವಪುರ ದಲ್ಲಿ ಭೂ ದಾನ ಮಾಡಲಾಯಿತು. ಶಾಸನದಿಂದ ಈ ವಿಷಯ ಬೆಳಕಿಗೆ ಬಂದಿದೆ.

ಇವರ ಮಗ ಕವಿ ಶಂಕರ ಭಟ್ಟ ಸಹ ಇದೇ ಕಾರ್ಯ ಮುಂದುವರೆಸಿಕೊಂಡು ಬಂದರೆಂದು ಕಾಣುತ್ತದೆ. ಇವರಿಗೆ ಚಕ್ರವರ್ತಿ ಇಮ್ಮಡಿ ದೇವರಾಯನು ಕ್ರಿ.ಶ. ೧೪೩೧ ರಲ್ಲಿ ಇದೇ ಶಿವಪುರದಲ್ಲಿ ಭೂ ದಾನವನ್ನು ಮಾಡಿದ. ಈ ವಿಚಾರವನ್ನು ವಾಂಟ್ಯಾಳದ ಇನ್ನೊಂದು ಶಾಸನ ಕೊಡುತ್ತದೆ[೨೬].

### ವೊಡೇರ ಮಠ

ಉಡುಪಿ ತಾಲೂಕಿನ ಹಾಲಾಡಿಯಲ್ಲಿ ಶೃಂಗೇರಿಯ ಶಾಖಾಮಠವೊಂದು ಇತ್ತು. ಇದು ಶೃಂಗೇರಿ ದಾಖಲೆಗಳಿಂದ ತಿಳಿದು ಬರುತ್ತದೆ. ಈ ಮಠವನ್ನು ಜನರು ಗೌರವಪೂರ್ವಕವಾಗಿ ವೊಡೇರ ಮಠ ಎಂದೇ ಸಂಬೋಧಿಸಿದ್ದರು. ಇಲ್ಲಿಯ ಶ್ರೀ ಲಕ್ಷ್ಮೀ ನರಸಿಂಹ ದೇವಾಲಯವು ಶ್ರೀ ನರಸಿಂಹ ಭಾರತಿ ತೀರ್ಥರ ಕಾಲದಲ್ಲಿ ನಿರ್ಮಾಣವಾದ್ದು ಎಂದು ಇಲ್ಲಿನ ಐತಿಹ್ಯ[೨೭] ಹೇಳುತ್ತದೆ. ಈ ದೇವಾಲಯದ ಆವರಣದಲ್ಲಿ ಎರಡು ಶಾಸನಗಳಿವೆ. ಆದರೆ ಇವು ಇದಾವುದನ್ನೂ ಹೇಳುವುದಿಲ್ಲ. ಇದರಲ್ಲಿ ಮೊದಲನೆಯದು ಕ್ರಿ.ಶ. ೧೪೩೩ ಆಗಸ್ಟ್ ೨೬ ಬುಧವಾರಕ್ಕೆ ಸೇರಿದ್ದು[೨೮]. ಆ ಸಮಯ ಉಡುವರ ಬಳಿಯ ಅಂಣ ಭಂಡಾರಿಯು ತನ್ನ ಬ್ರಹ್ಮಾದಾಯದ ಮೂಲದ ೪೦ ಮುಡಿ ಬಿತ್ತುವಷ್ಟು ವಿಸ್ತಾರದ ಭೂಮಿಯನ್ನು ಶ್ರೀ ಲಕ್ಷ್ಮಿನರಸಿಂಹ ದೇವರಿಗೆ 'ದಾನಧಾರಾಪೂರ್ವಕವಾಗಿ ಧಾರೆಯನೆರದು ಕೊಟ್ಟ'ವಿಚಾರವನ್ನು ಈ ಶಾಸನ ತಿಳಿಸುತ್ತದೆ. ಶಾಸನದ ಉತ್ತರಾರ್ಧ ಬಹಳ ತ್ರುಟಿತವಾಗಿರುವುದರಿಂದ ಅಸ್ಪಷ್ಟತೆ ಇಲ್ಲಿ ಉಳಿದಿದೆ. ಸಾಲು ೨೧ರಲ್ಲಿ 'ಲಕ್ಷ್ಮೀನಸಿಂಹದೇವರ ನಿರೂಪದಿಂ' ಭಟ್ಟರು (ಹೆಸರು ಅಳಿಸಿಹೋಗಿದೆ) ದೇವರ ಪರವಾಗಿ ದಾನ ಸ್ವೀಕರಿಸಿದರು (ಸಾಲು ೨೧) ಎಂದಿದೆ. ಇಲ್ಲಿ ದೇವರ ನಿರೂಪ ಎನ್ನುವುದು ಶೃಂಗೇರಿಯ ನರಸಿಂಹ ಭಾರತೀ ತೀರ್ಥರನ್ನು ಸಂಬೋಧಿಸುವುದೇ ಎಂಬುದು ಸ್ಪಷ್ಟವಿಲ್ಲ. ಶಾಸನದ ಕೊನೆ ಭಾಗದಲ್ಲಿರುವ '...ಕಿಯನು ದೇವರ ವಿನಿಯೋ...' ಎಂದಿರುವುದು ಈ ದಾನದ ಭೂಮಿಯ ವರಮಾನವು ದೇವರ ಪೂಜಾಕಾರ್ಯಗಳ ವಿನಿಯೋಗಾರ್ಥ ಎಂಬುದು ಸ್ಪಷ್ಟ ವಾಗುತ್ತದೆ. ಶಾಸನ ಚಕ್ರವರ್ತಿ ಇಮ್ಮಡಿ ದೇವರಾಯನ ಆಳ್ವಿಕೆಯನ್ನು ಮತ್ತು ಆಗ ಬಾರಕೂರಿನ ರಾಜ್ಯಪಲನಾದ ಚಂಡಪ್ಪನನ್ನೂ ಹೆಸರಿಸಿದೆ.

ಇನ್ನೊಂದು ಶಾಸನ ಕ್ರಿ.ಶ.೧೪೫೫ಕ್ಕೆ ಸೇರಿದ್ದು ಚಕ್ರವರ್ತಿ[೨೯] ಮಲ್ಲಿಕಾರ್ಜುನ ಮತ್ತು ಅವನ ಬಾರಕೂರು ರಾಜ್ಯದ ರಾಜ್ಯಪಾಲ ಪಂಡರಿದೇವನನ್ನು ಹೆಸರಿಸಿದೆ. ಇದೂ ಒಂದು ದಾನ ಶಾಸನ. ಇಲ್ಲೂ ಸಹ 'ನಾರಸಿಂಹ ದೇವರ ನಿರೂಪದಿಂ" ಎಂದಿದೆ (ಸಾಲು ೧೦). ಇದು ಯಾರನ್ನು ಸಂಬೋಧಿಸುತ್ತದೆ ಎಂಬುದು ತಿಳಿಯುವುದಿಲ್ಲ. ಈ ಶಾಸನವೂ ಬಹಳ ತ್ರುಟಿತವಾಗಿರುವುದರಿಂದ ದಾನದ ವಿಷಯ ಸ್ಪಷ್ಟವಾಗಿಲ್ಲ. ಮಠಕ್ಕೆ ಸಂಬಂಧಿಸಿದಂತೆ ಹಾಲಾಡಿ ಸುತ್ತಮುತ್ತ ಹಾಕಿಸಲಾಗಿದ್ದ ಹಲವು ಶಿಲಾಶಾಸನಗಳ ನಕಲುಗಳು ಶೃಂಗೇರಿ ಮಠದ ಕಡತಗಳಲ್ಲಿ ದಾಖಲಾಗಿವೆ. ಈ ಭಾಗದೊಂದಿಗೆ ಶ್ರೀಮಠಕ್ಕೆ ಇದ್ದ ನಿರಂತರ ಸಂಪರ್ಕ ಮತ್ತು ಸಂಬಂಧವನ್ನು ಇದು ಶೃತಪಡಿಸುತ್ತದೆ.

### ಹಿಲಿಯಾಣದ ಶಿಲಾ ಶಾಸನ

ಇತ್ತೀಚೆಗೆ ಉಡುಪಿ ತಾಲೂಕಿನ ಹಿಲಿಯಾಣದಲ್ಲಿ ಒಂದು ಶಾಸನ ದೊರೆತಿದೆ[೩೦]. ಇದು ಕ್ರಿ.ಶ. ೧೪೮೮ಕ್ಕೆ ಸೇರಿದ್ದು, ಶಂಕರ ಮಂಜಾಳ ಎಂಬುವವನು ಶ್ರೀ ನರಸಿಂಹಭಾರತೀ ಶ್ರೀ ಪಾದರಿಗೆ ಮಾಡಿದ ದಾನಗಳನ್ನು ವಿವರಿಸುತ್ತದೆ. ಇಲ್ಲಿ ನಮಗೊಂದು ಸಮಸ್ಯೆ ಎದುರಾಗುತ್ತದೆ. ಅದೇ ಕ್ರಿ.ಶ. ೧೪೮೮ರ ಈ ಶಾಸನದಲ್ಲಿ ಶ್ರೀ ನರಸಿಂಹ ಭಾರತೀ ಶ್ರೀ ಪಾದರು ದಾನ ಸ್ವೀಕರಿಸಿದರು ಎಂಬುದೇ ಸಮಸ್ಯೆ. ಇವರು ಯಾರು? ಮಠದ ಆಧಾರಗಳ ಪ್ರಕಾರ ಇಮ್ಮಡಿ ನರಸಿಂಹ ಭಾರತೀ ತೀರ್ಥರು ಕ್ರಿ.ಶ.೧೪೬೪ ರಿಂದ ೧೪೭೯ ರವರೆಗೆ ಶ್ರೀ ಮಠದ ಪೀಠಾಧಿಪತಿಗಳಾಗಿದ್ದರು[೩೧]. ಆದರೆ ಇವರು ಕ್ರಿ.ಶ. ೧೪೮೮ರಲ್ಲೂ ಇದ್ದು ದಾನ ಪಡೆದ ಮಾಹಿತಿಯನ್ನು ಹಿಲಿಯಾಣದ ಶಾಸನ ನೀಡುತ್ತದೆ. ಕೂಟ ಎನ್ನಬಹುದಾದ ಯಾವ ಅಂಶವೂ ಈ ಶಾಸನದಲ್ಲಿ ಇಲ್ಲ. ಹಾಗಾಗಿ ಶ್ರೀ

ನರಸಿಂಹ ಭಾರತೀತೀರ್ಥರ ಕಾಲದ ಬಗ್ಗೆ ಮರುಚಿಂತನೆ ಮಾಡಬೇಕಾದ ಸಂದರ್ಭ ಇಲ್ಲಿ ಇದೆ.

## ಮಠಕ್ಕೆ ದಾನ ಮತ್ತು ವ್ಯವಹಾರ

ಶೃಂಗೇರಿ ಮಠಕ್ಕೆ ಉಡುಪಿ ಜಿಲ್ಲೆಯಾದ್ಯಂತ ಅಪಾರವಾದ ಭೂದಾನಗಳನ್ನು ವಿಜಯನಗರ ಕಾಲದಲ್ಲಿ ಮಾಡಿದ್ದಂತೆ ಕಾಣುತ್ತದೆ. ಶಾಸನಗಳಲ್ಲಿ ಶೃಂಗೇರಿ ಮಠದ ಜಾಗ, ಗದ್ದೆ, ಜಾಗದ ಗಡಿ ಎಂಬ ಉಲ್ಲೇಖ ಇದೆ (ಶೃಂಗೇರಿ ಮಠದ ದಾಖಲೆಗಳಾದ (ಅಳಿದುಳಿದ) ಕಡತಗಳಲ್ಲಿ ಬಹಳ ಶಾಸನನ ಮಾಹಿತಿ ಇದೆ). ಉಪ್ಪಿನಕುದ್ರು, ಬಸರೂರು, ಕಂದಾವರ, ಶಿವಪುರ ಇತ್ಯಾದಿ ಸ್ಥಳಗಳಲ್ಲಿ ನನಗೆ ದೊರೆತಿರುವ ಹಲವಾರು ಶಾಸನಗಳಲ್ಲಿ ಈ ಸ್ಥಳಗಳ ಉಲ್ಲೇಖ ಇದೆ. ಹಿಂದೆ ಕಾಲದಿಂದ ಕಾಲಕ್ಕೆ ಮಾಡಿದ ಈ ದಾನಗಳ ದಾಖಲೆಗಳು ಇನ್ನೂ ದೊರೆಯಬೇಕಾಗಿದೆ.

ಶೃಂಗೇರಿ ಮಠದ ವ್ಯವಹಾರವೂ ಈ ಭಾಗದಲ್ಲಿ ನಾನಾ ರೂಪದಲ್ಲಿ ಇದ್ದಂತೆ ಕಾಣುತ್ತದೆ. ಕ್ರಿ.ಶ. ೧೫೪೮ ಕ್ಕೆ ಸೇರುವ ಬಸರೂರು ಶಾಸನವೊಂದು[೩೨] ಕೊಡುವ ಮಾಹಿತಿ ಮಠದ ಆರ್ಥಿಕ ಪರಿಸ್ಥಿತಿಯ ಮೇಲೆ ಕ್ಷ ಕಿರಣ ಬೀರುತ್ತದೆ. ಈ ಶಾಸನ ಕಲ್ಲುಸೆಟಿ ಎಂಬಾತ ಬಸರೂರಿನಲ್ಲಿ ಕಟ್ಟಿಸಿದ ಮಠವನ್ನು ಮುಂದೆ ಅವನ ವಂಶದ ಬೆಂಮಚ ಸೆಟ್ಟಿಯು ಜೀರ್ಣೋದ್ಧಾರ ಮಾಡಿ ಅದಕ್ಕೆ ಭೂಮಿ ಮತ್ತು ಹೊನ್ನಿನ ದಾನಗಳನ್ನು ಮಾಡಿದ ವಿಚಾರವನ್ನು ತಿಳಿಸುತ್ತದೆ. ತನ್ನ ಬಡ್ಡಿ ವ್ಯವಹಾರದಲ್ಲಿ ತನಗೆ ಬರಬೇಕಾದ ಕೆಲವು ಮೂಲಗಳ ಬಡ್ಡಿಯನ್ನು ಈತ ಈ ಮಠಕ್ಕೆ ದಾನಮಾಡುತ್ತಾನೆ. ಹಾಗೆ ಬರುವ ಬಡ್ಡಿಯಲ್ಲಿ ಶೃಂಗೇರಿ ಮಠದಿಂದ ಬರುವ ಬಡ್ಡಿಯೂ ಸೇರಿದೆ. ಶಾಸನದಲ್ಲಿ ಈ ಬಗೆಗಿನ ವಿವರಣೆ ಇಂತಿದೆ–

**"ಮತ್ತಂ ಸಿಂಗರಿ (ಸಿಂಗೆರಿ) ವೊಡೆಯರ ಮೇಲೆ ಮೆಯಿಸಾಲದ ವರಹ ಗ ೫೦ ಕ್ಕೆ ಬಡ್ಡಿ ವರಹ ಗ ೫ ಯಿದರ ಅರ್ಥ ಬಂದರೂ ಮಠಕ್ಕೆ".**

**(ಶಾಸನ ಪಾಠ ಸಾಲು ೨೩–೨೫).**

ಶೃಂಗೇರಿ ಪೀಠಾಧಿಪತಿಗಳಿಗೆ (ಅವರ ವೈಯ್ಯಕ್ತಿಕ ನೆಲೆಯಲ್ಲಿ) ಈತ ೫೦ ವರಹ ಗದ್ಯಾಣಗಳನ್ನು ಸಾಲವಾಗಿ ನೀಡಿದ್ದ. ಮಠದ ವಂಶಾವಳಿಯ ಪ್ರಕಾರ ಆಗ ಪೀಠಸ್ಥರಾಗಿದ್ದವರು ತೃತೀಯ ನರಸಿಂಹ ಭಾರತೀ ತೀರ್ಥರು (೧೫೪೬–೧೫೭೩)[೩೩]. ಶಾಸನ ಇವರನ್ನು ಹೆಸರಿಸುವುದಿಲ್ಲ.

ಬೃಹತ್ತಾಗಿ ಬೆಳೆದಿದ್ದ ಶೃಂಗೇರಿ ಮಠಕ್ಕೆ ತನ್ನ ಅಗಾಧ ಖರ್ಚು ವೆಚ್ಚಗಳನ್ನು ನಿಭಾಯಿಸಲು ಸಹಜವಾಗಿಯೆ ಹಣದ ಅವಶ್ಯಕತೆ ಇತ್ತು. ಆದರೆ ಈ ಅವಶ್ಯಕತೆಯ ಪೂರೈಕೆಗೆ ಕೆಲವೊಮ್ಮೆ ಸ್ವಾಮಿಗಳು ತಮ್ಮ ವೈಯ್ಯಕ್ತಿಕ ನೆಲೆಯಲ್ಲಿ ಸಾಲ ಪಡೆದು ನಿಭಾಯಿಸುವ ಪರಿಸ್ಥಿತಿ ನಿಜಕ್ಕೂ ಆಶ್ಚರ್ಯಕರವಾದುದು. ವಿಜಯನಗರದ ಆಳ್ವಿಕೆಯ ಕೊನೆ ಹಂತದಲ್ಲಿ ಪರಿಸ್ಥಿತಿ ಅಷ್ಟೇನು ಒಳ್ಳೆಯದಿರಲಿಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಆದರೆ ಬಸರೂರಿನಲ್ಲಿ ಶೃಂಗೇರಿ ಮಠದ ಪರಿಸ್ಥಿತಿ ಚೆನ್ನಾಗಿಯೇ ಇತ್ತು ಎಂಬ ವಿಚಾರವನ್ನು ಕ್ರಿ.ಶ. ೧೫೨೮ ಕ್ಕೆ ಸೇರುವ ಇಲ್ಲಿನ ಶಾಸನವೊಂದು ತಿಳಿಸುತ್ತದೆ[೩೪]. ಶೃಂಗೇರಿ ಮಠಕ್ಕೆ ಸೇರಿದ ಗದ್ದೆಗಳೂ ಮತ್ತು ಭೂಮಿ ಇಲ್ಲಿತ್ತು. "ತೆಂಕಲು ಕಟಿಂದಂ ಬಡಗಲು ಪಡುವಲು ಸಿಂಗೇರಿಯ ವೊಡೆಯರ ಕಳಿಯ ಕಟ್ಟಿಂದಂ ಮೂಡಲು ಬಡಗಲು ಹರೆಯಂಗೋಡ ಕಳಕಡಿಯಿಂದಂ ತೆಂಕಲು ಯಿಂತೀ ಚತುಸೀಮೆಯಿಂದ ..." (ಶಾಸನ ಪಾಠ ಸಾಲು ೨೯–೩೦) ಎಂದು ಶಾಸನದಲ್ಲಿ ಉಲ್ಲೇಖ ಇದೆ. ಇಲ್ಲಿ ಮಠದ ವ್ಯವಹಾರಗಳನ್ನು ನೋಡಿಕೊಳ್ಳುವ ಸಲುವಾಗಿ ಸೇನಬೋವ (ಶ್ಯಾನುಭೋಗ)ನೊಬ್ಬ ಇದ್ದ. ಶಾಸನದಲ್ಲಿ ಮಲ್ಲಪಸೆಟ್ಟಿಯು (ತನ್ನ - ತಂದೆ) ಸಂಕರಸೆಟ್ಟಿಯು ಕಟ್ಟಿಸಿದ ಮಠಕ್ಕೆ ಮಾಡಿದ ಭೂ ದಾನಕ್ಕೆ ಸಾಕ್ಷಿಗಳಾಗಿದ್ದ ಹಲವು ಮಂದಿ ಪ್ರಮುಖರಲ್ಲಿ ಈತನೂ ಒಬ್ಬ. ಶಾಸನದಲ್ಲಿ ಈಬಗೆಗಿನ ಉಲ್ಲೇಖ ಇಂತಿದೆ– "ಯೀ ಪತ್ರಕ್ಕೆ ಆದ ಹೊಣೆ ಕೋಟೆಯ ಕೇರಿಯ ನಾರುಸೆಟ್ಟಿ ಸಾಕ್ಷಿಗಳು ಜಂನಿ ಅಂಣಮೇಲಾಡಿ ಹೆಬ್ಬಾರು ಭಂಡಾರಿ ಸಿಂಗೇರಿಯ ವೊಡೆಯರ ಮನುಷ್ಯ ರಾಮ ಸೇನಬೋವ ..." (ಶಾಸನ ಪಾಠ ಸಾಲು ೩೪–೩೫). ಶೃಂಗೇರಿ ಮಠದ ಪರವಾಗಿ ಆಗ ಬಸರೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದವನು ರಾಮಸೇನಬೋವ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಹೀಗಿದ್ದ ಪರಿಸ್ಥಿತಿ ಕೇವಲ ಎರಡು ದಶಕಗಳಲ್ಲಿ ಬದಲಾಗಿರುವುದು ಸಾಮಾನ್ಯ ವಿಷಯ ಎಂದು ಪರಿಗಣಿಸಲು ಕಷ್ಟಸಾಧ್ಯವಾದುದು. ಈ ಬಗ್ಗೆ ಮಠದ ದಾಖಲೆಗಳನ್ನು ಒಮ್ಮೆ ಪುನರವಲೋಕನಕ್ಕೆ ಒಳಪಡಿಸಿದರೆ ಇಂತಹ ಪರಿಸ್ಥಿತಿಗಳ ಬಗ್ಗೆ ಹೆಚ್ಚಿನ ಮತ್ತು ಹೊಸ ಮಾಹಿತಿ ವಿವರ ದೊರೆಯಬಹುದು. ಇದು ಸತ್ಯ ಸಂಗತಿಗಳ ಅವಲೋಕನಕ್ಕೆ ದಾರಿ ಮಾಡಿಕೊಡುತ್ತದೆ. ಇದಕ್ಕಾಗಿ ಹೊಸ ಶಾಸನಗಳ ಶೋಧಕಾರ್ಯ ನಡೆಯಬೇಕು. ಹೊಸ ಶಾಸನಗಳ ಅಧ್ಯಯನದೊಂದಿಗೆ ಈಗಾಗಲೆ ಬೆಳಕಿಗೆ ಬಂದಿರುವ ಶಾಸನಗಳ ಅಧ್ಯಯನ ಅಥವ ಮರು ಅಧ್ಯಯನ ಆದಲ್ಲಿ ಶೃಂಗೇರಿಯ ಇತಿಹಾಸ ಹೆಚ್ಚು ಸ್ಪಷ್ಟಗೊಳ್ಳುವುದರಲ್ಲಿ ಸಂದೇಹವಿಲ್ಲ.

## ಕೆಳದಿ ಅರಸರ (ನಾಯಕರ) ಕಾಲ

ವಿಜಯನಗರ ಸಾಮ್ರಾಜ್ಯದ ಪತನಾ ನಂತರ ಕರಾವಳಿ ಕರ್ನಾಟಕ ಭಾಗವು ಕೆಳದಿ ನಾಯಕರ ವಶವಾಯಿತು. ಆದರೆ ಆವೇಳೆಗೂ ಬಹಳ ಹಿಂದಿನಿಂದಲೆ ಈ ಭಾಗದಲ್ಲಿ ಹಲವಾರು ಜೈನ ರಾಜವಂಶಗಳು ತಮ್ಮ ತಮ್ಮ ರಾಜ್ಯಗಳನ್ನು ಸ್ವತಂತ್ರ ನೆಲೆಯಲ್ಲಿ ಆಳುತ್ತಿದ್ದವು. ಇವುಗಳನ್ನು ತಮ್ಮ

ವಶಮಾಡಿಕೊಳ್ಳುವ ಕಾರ್ಯವನ್ನು ಕೆಳದಿ ನಾಯಕರು ಮಾಡಿದರು. ಘಟ್ಟದ ಮೇಲೆ ಮತ್ತು ಕೆಳಗೆ ವಿಶಾಲವಾದ ರಾಜ್ಯವನ್ನು ಮತ್ತು ಪ್ರಬಲ ಸೈನಿಕ ಶಕ್ತಿಯನ್ನೂ ಹೊಂದಿದ್ದ ಕಳಸ-ಕಾರ್ಕಳ ರಾಜ್ಯದ ಅರಸರಾದ ಭೈರರಸ ಒಡೆಯರಿಗೆ ಕೆಳದಿ ಅರಸರ ನೀತಿ ಪದೇ ಪದೆ ಕಿರಿ ಕಿರಿ ಉಂಟುಮಾಡುತ್ತಿತ್ತು. ಇದು ಯುದ್ಧಗಳಲ್ಲಿ ಪರ್ಯವಸಾನವಾಗುವಂತೆ ಮಾಡಿತು.

ಕಾರ್ಕಳ ರಾಜ್ಯದ ಕೊಪ್ಪ-ಶೃಂಗೇರಿ ಭೂ ಪ್ರದೇಶವು ಕೆಳದಿ ಅರಸರ ಮಹತ್ವಾಕಾಂಕ್ಷೆಯ ಆಕ್ರಮಣಕ್ಕೆ ಒಳಗಾಯಿತು. ಇದನ್ನು ವಾಪಸ್ಸು ಪಡೆಯಲು ಮಾಡಿದ ಕಾರ್ಕಳ ಅರಸರ ಪ್ರಯತ್ನವನ್ನು ತಪ್ಪಾಗಿ ಅರ್ಥೈಸಿ ಸಾಹಿತ್ಯ ರಚಿಸಲಾಗಿದೆ[೩೫].

ಹಿರಿಯ ವೆಂಕಟಪ್ಪ ನಾಯಕ ಮೊದಲು ಈ ಭಾಗವನ್ನು ಭೈರರಸ ವೊಡೆಯನನ್ನು ಸೋಲಿಸಿ ತನ್ನ ವಶ ಮಾಡಿಕೊಂಡ[೩೬]. ಈತ ತುಳು ನಾಡಿನ ಇತರ ಜೈನ ಅರಸರನ್ನೂ ಸೋಲಿಸಿ ಅವರ ಮೇಲೆ ತನ್ನ ಪ್ರಭುತ್ವ ಸಾರಿ ಕಪ್ಪ ಕಾಣಿಕೆಗಳನ್ನು ಪಡೆದುದೇ ಅಲ್ಲದೆ ಅಲ್ಲಿಯ ಕೆಲವು ಆಯಕಟ್ಟಿನ ಪ್ರದೇಶಗಳನ್ನು ತನ್ನ (ನೇರ) ವಶ ಮಾಡಿಕೊಂಡ[೩೭]. "ಕಾರ್ಕಳದ ಭೈರಸವೊಡೆಯರ ನಿಗ್ರಹಿಸಿ ತದ್ರಾಜ್ಯ ಪರಿಸ್ತರಣಂಗಳಂ ವಶಗೈದ ನಂತರ" ಎಂದು ಕೆಳದಿ ನೃಪ ವಿಜಯ (ಪು ೭೦) ಹೇಳುತ್ತದೆ.

ವಿಜಯನಗರದ ಅರಸರ ನೀತಿಗೆ ವಿರುದ್ಧವಾದ ನೀತಿ ಇದಾದ್ದರಿಂದ ಕಾರ್ಕಳದ ಅರಸು ಹೋರಾಟ ಮನೋಭಾವವನ್ನು ಬೆಳೆಸಿಕೊಂಡು ತಾನು ಕಳೆದುಕೊಂಡ ಭೂ ಭಾಗಗಳನ್ನು ವಾಪಸ್ಸು ಪಡೆಯುವ ಪ್ರಯತ್ನ ಮಾಡಿದ. ಆದರೆ ಈ ಪ್ರಯತ್ನದಲ್ಲಿ ಸಫಲನಾಗಲಿಲ್ಲ ಎಂದು ಕಾಣುತ್ತದೆ (೩೮). "ಇಂತೆಸಗಿದ ಭೈರಸವೊಡೆಯರ ಮದೋದ್ರೇಕಮಂ ಮಗ್ಗಿಸಿ ಮುತ್ತಿಗೆದೆಗಸಿ ಬಳಿಕವನತಿರೇಕದಿಂದಾಕ್ರಮಿಸಿದ ಭೂಮಿಯಂ ತೆಗೆದುಕೊಂಡು ಶೃಂಗಪುರದ ಸ್ವಾಮಿಗಳ್ಗಿತ್ತು ..." (ಪು. ೭೫).

ವೆಂಕಟಪ್ಪ ನಾಯಕ (೧೫೮೬-೧೬೨೯) ಬಲವಂತವಾಗಿ ಆಕ್ರಮಿಸಿಕೊಂಡ ಪ್ರದೇಶವನ್ನು ಭೈರರಸ ವೊಡೆಯನು ಪುನಃ ಪಡೆಯಲು ಮಾಡಿದ ಪ್ರಯತ್ನವನ್ನು ಲಿಂಗಣ್ಣ ಕವಿ "ಭೈರರಸವೊಡೆಯರ ಮದೋದ್ರೇಕಮಂ ಮಗ್ಗಿಸಿ ಮುತ್ತಿಗೆ ತೆಗಿಸಿ" ಎಂದು ವರ್ಣಿಸಿರುವ ರೀತಿ ಮಾತ್ರ ಆಶ್ಚರ್ಯಕರವಾದುದು. ಕವಿ ಭೈರರಸನನ್ನೇ ತಪ್ಪಿತಸ್ಥ ನನ್ನಾಗಿ ಮಾಡಿದ್ದಾನೆ. ಮೊದಲು ತಪ್ಪು ಮಾಡಿದ ಕೆಳದಿ ಅರಸು ಕವಿಯ ದೃಷ್ಟಿಯಲ್ಲಿ ತಪ್ಪಿತಸ್ಥನಾಗಲೇ ಇಲ್ಲ.

ಆದರೆ ಕಾರ್ಕಳದ ಅರಸು ತನ್ನ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಪ್ರಾಯಶಃ ವೀರಭದ್ರ ನಾಯಕನ ಕಾಲದಲ್ಲಿ ಶೃಂಗೇರಿ ಭಾಗವನ್ನು ತನ್ನ ವಶಮಾಡಿಕೊಂಡ. ಕೆಳದಿ ನೃಪವಿಜಯದಲ್ಲಿ- "ಮಾರ್ಮಲೆತ ಕಾರ್ಕಳದೊಡೆಯನ ನಿಗ್ರಹಿಸಿ ವಿತ್ತಮಂ ನೆರೆಕೊಂಡಂ" ಎಂದಿದೆ[೩೯]. ಪ್ರಾಯಶಃ ವೀರಭದ್ರ ನಾಯಕನು ಭೈರರಸನನ್ನು ಸೋಲಿಸುವ ಬದಲು ಅವನು ಕೊಟ್ಟ ಹಣಕ್ಕೆ ತೃಪ್ತಿ ಹೊಂದಿದ್ದಾನೆ ಅಷ್ಟೆ

ಲಕ್ಷ್ಮಣ ಶಾಸ್ತ್ರಿಗಳ 'ಗುರುವಂಶ ಕಾವ್ಯ' ವನ್ನು ಆಧರಿಸಿ ಕೆಲ ವಿದ್ವಾಂಸರು -ಕಾರ್ಕಳದ ಅರಸು ಶೃಂಗೇರಿ ಮಠಕ್ಕೆ ಮುತ್ತಿಗೆ ಹಾಕಿ ಅದನ್ನು ಸೂರೆಗೈವ ಸಂಚು ಮಾಡಿದ್ದ- ಎಂದಿದ್ದಾರೆ[೪೦]. ಆದರೆ ಇದು ಸತ್ಯಕ್ಕೆ ದೂರವಾದುದು. ಕಾರ್ಕಳದ ಅರಸರು ಸದಾಕಾಲ ಪರಧರ್ಮ ಸಹಿಷ್ಣುಗಳಾಗಿ ಜನಹಿತ ಕಾರ್ಯಗಳನ್ನು ನಡೆಸಿದ್ದಕ್ಕೆ ಆಧಾರವಾಗಿ ಶಾಸನಗಳಿವೆ[೪೧]. ಕೆಲವೊಮ್ಮೆ ಸಮಸ್ಯೆಗಳ ಪರಿಹಾರಕ್ಕೆ ರಾಜಧಾನಿ ಕಳಸದಲ್ಲಿ ಶೃಂಗೇರಿ ಮಠದ ಪ್ರತಿನಿಧಿಗಳ ಸಮಕ್ಷಮದಲ್ಲಿ ವಿಚಾರಣೆ ನಡಿಸಿದ್ದಕ್ಕೆ ಆಧಾರಗಳಿವೆ[೪೨]. ಅಲ್ಲದೆ ಕಳಸ-ಕಾರ್ಕಳದ ಅರಸರು ತಮ್ಮ ರಾಜ್ಯದ ಹಲವಾರು ದೇವಸ್ಥಾನಗಳ ಸ್ಥಾಪನೆ, ಜೀರ್ಣೋದ್ಧಾರ ಇತ್ಯಾದಿ ಕಾರ್ಯಗಳಿಗೆ ಕಾರಣರಾಗಿದ್ದು, ಅಲ್ಲಿ ಪೂಜಾದಿ ವಿನಿಯೋಗಗಳಿಗೆ ದಾನ ಧರ್ಮ ಗಳನ್ನು ಮಾಡಿದ್ದಾರೆ[೪೩]. ಹೀಗಿರುವಲ್ಲಿ 'ಮಠವನ್ನು ಲೂಟಿ ಮಾಡಲು ಬಂದಿದ್ದ ಕಾರ್ಕಳದ ಅರಸು' ಎಂಬ ಮಾತು ಕೇವಲ ಕಲ್ಪಿತ ವಿಚಾರ. ತನ್ನ ರಾಜ್ಯದ ಒಂದು ಭಾಗವನ್ನು ಕೆಳದಿ ಅರಸರು ಬಲ ಪ್ರಯೋಗದಿಂದ ಪಡೆದಿದ್ದನ್ನು ಹಿಂದೆ ಪಡೆಯುವುದು ಇವನ ಉದ್ದೇಶ. ಅದಕ್ಕೆ ಯುದ್ಧ ಅನಿವಾರ್ಯವಾಗಿತ್ತು. ಅದು ಕೆಳದಿ ವಿರುದ್ಧವೇ ಹೊರತು ಮಠದ ವಿರುದ್ಧವಲ್ಲ. ಮಠದ ದಾಖಲೆಗಳು ಮತ್ತು ಶ್ರೀ ಮಠ ಕುರಿತಾಗಿ ಪ್ರಕಟಗೊಂಡಿರುವ ಗ್ರಂಥಗಳಲ್ಲಿ ದೊರೆಯುವ ಮಾಹಿತಿ ಪ್ರಕಾರ ತಮಗೆ ಅನಿವಾರ್ಯವೂ ಮತ್ತು ಸಂಕಟ ಕಾಲಗಳು ಬಂದೊದಗಿದಾಗ ಶ್ರೀ ಮಠದ ಪೀಠಸ್ಥ ಗುರುಗಳು ಘಟ್ಟದ ಕೆಳಗಣ ಕಾರ್ಕಳಕ್ಕೆ ಹೋಗಿ ವಿಶ್ರಾಂತಿ ಮತ್ತು ರಕ್ಷಣೆ ಪಡೆದ ಉದಾಹರಣೆಗಳಿವೆ[೪೪]. ಇದು ಕಾರ್ಕಳದ ಅರಸರಿಗೂ ಶ್ರೀ ಮಠಕ್ಕೂ ವೈರತ್ವ ವಿದ್ದಿದ್ದರೆ ಸಾಧ್ಯವಾಗುತ್ತಿತ್ತೆ? ಸಾಹಿತ್ಯಕೃತಿಗಳು ಕೊಡುವ ವಿಷಯಗಳನ್ನು ತುಲನಾತ್ಮಕ ಪರಾಮರ್ಶೆಗೆ ಒಳಪಡಿಸದೆ ದೊರೆಯಬಹುದಾದ ಇನ್ನಿತರ ಸಮಕಾಲೀನ ಆಕರಗಳನ್ನು ನೋಡದಿದ್ದಲ್ಲಿ ಅಭಿಪ್ರಾಯಗಳು ಏಕಪಕ್ಷೀಯವಾಗೇ ಉಳಿಯುತ್ತವೆ. ಇದರೊಂದಿಗೆ ಐತಿಹಾಸಿಕ ಸತ್ಯ ಪ್ರಶ್ನೆಯಾಗೇ ಉಳಿಯುತ್ತದೆ.

ಯುದ್ಧಗಳು ಆತಂಕದ ಕ್ಷಣಗಳನ್ನು ಹುಟ್ಟಿಸಿದ್ದರೂ ಕರ್ನಾಟಕದ ಕರಾವಳಿಯ (ಅಂದಿನ ಮಂಗಳೂರು ಮತ್ತು ಬಾರಕೂರು ರಾಜ್ಯಗಳ) ಸಮಾಜ ಶೃಂಗೇರಿ ಮಠದೊಂದಿಗೆ ತನ್ನ ನಿಕಟ ಸಂಪರ್ಕ ಮತ್ತು ಸಂಬಂಧಗಳನ್ನು ಇರಿಸಿಕೊಂಡಿತ್ತು. ಮಠದ ಆಗು-ಹೋಗುಗಳಿಗೆ ಈ ಭಾಗ ಸದಾ ಸ್ಪಂದಿಸುತ್ತಿತ್ತು. ಘಟ್ಟದ ಮೇಲೆ ಘಟಿಸುತ್ತಿದ್ದ ಪ್ರಕೃತಿ ವಿಕೋಪಗಳ ಕಾಲಗಳಲ್ಲಿ ಶ್ರೀ ಮಠಕ್ಕೆ ಆಹಾರ ಪೂರೈಕೆಯಲ್ಲಿ ಪ್ರಮುಖ ಆಧಾರವಾಗಿದ್ದುದು ದಕ್ಷಿಣದ ಕರಾವಳಿ ಪ್ರದೇಶ.

ಇಲ್ಲಿದ್ದ ಅಪಾರವಾದ ಭೂಮಿಗಳಿಂದ ನಿರಂತರವಾಗಿ ಶ್ರೀಮಠಕ್ಕೆ ಆಹಾರ ಧಾನ್ಯಗಳ ಸರಬರಾಜು ಆಗುವಂತೆ ನೋಡಿಕೊಳ್ಳುವ ವ್ಯವಸ್ಥೆ ಟಿಪ್ಪೂ ಸುಲ್ತಾನನ ಕಾಲದಲ್ಲೂ ಇತ್ತು. ಬ್ರಿಟಿಷರ ಕಾಲದಲ್ಲಿ ಇದು ಗಮನಾರ್ಹವಾಗಿ ಇಳಿಮುಖವಾದರೂ ಕಾರ್ಕಳ, ಉಡುಪಿ ಮತ್ತು ಕುಂದಾಪುರ ತಾಲೂಕುಗಳಿಂದ (ಇಂದಿನ ಉಡುಪಿ ಜಿಲ್ಲೆಯಿಂದ) ಸಾಕಷ್ಟು ಆದಾಯವನ್ನು ಶೃಂಗೇರಿ ಮಠ ವರ್ಷಂಪ್ರತಿ ಪಡೆಯುತ್ತಿತ್ತು. ಆದಿ ಶಂಕರರ ಕಾಲದಿಂದ ಬೆಳೆದು ಬಂದ ಈ ಗುರು ಶಿಷ್ಯ ಸಂಬಂಧ ಇಂದಿಗೂ ನಿರಂತರವಾಗಿ ಸಾಗಿದೆ. ಈ ಬಗ್ಗೆ ಅಧ್ಯಯನ ಮಾತ್ರ ಸರಿಯಾಗಿ ಆಗಬೇಕು.

ಒಂದು ಮಹಾನ್ ಪ್ರಾಚೀನ ಧರ್ಮಕೇಂದ್ರವಾದ ಶೃಂಗೇರಿ ಸಂಸ್ಥಾನದ ಇತಿಹಾಸದ ಅಧ್ಯಯನ ಆಸಕ್ತ ವಿದ್ವಾಂಸರ ಮತ್ತು ಸಂಶೋಧಕರ ಗಮನವನ್ನು ಬಹಳ ಹಿಂದಿನಿಂದಲೇ ಸೆಳೆದ ಅತ್ಯಂತ ಗಂಭೀರವಾದ ವಿಷಯ. ಈ ಬಗ್ಗೆ ಹಿಂದಿನ ವಿದ್ವಾಂಸರುಗಳು ಮಾಡಿರುವ ಕೆಲಸ ಮತ್ತು ಸಾಧನೆ ಸ್ತುತ್ಯಾರ್ಹ. ಆದರೂ ಹೊಸ ಶೋಧಗಳು ಪರಂಪರಾಗತ ನಂಬಿಕೆಗಳಿಗೆ ನಿಖರತೆಯನ್ನು ತಂದು ಕೊಡಬಹುದು. ಇದಕ್ಕೆ ಇತ್ತೀಚೆಗೆ ಪತ್ತೆಯಾದ ಹಲ್ಕವಟಿಗೆ ತಾಮ್ರ ಶಾಸನವನ್ನು ಉದಾಹರಣೆಯಾಗಿ ಕೊಡಬಹುದು[೪೫]. ಈ ಶಾಸನದಲ್ಲಿ ವಿಜಯನಗರ ಸಾಮ್ರಾಜ್ಯದ ಹುಟ್ಟಿನ ಕಾಲ ಮತ್ತು ಅದರಲ್ಲಿ ಗುರು ವಿದ್ಯಾರಣ್ಯರ ಪಾತ್ರ ಸ್ಪಷ್ಟವಾಗಿ ಇರುವುದರಿಂದ ಆ ಬಗೆಗಿನ ಸಂದೇಹಗಳು ದೂರವಾಗಿವೆ. ಅಷ್ಟೇ ಅಲ್ಲ ಈ ಹಿಂದೆ ಪತ್ತೆಯಾಗಿದ್ದ ಕ್ರಿ.ಶ. ೧೩೩೬ಕ್ಕೆ ಸೇರಿದ ತಾಮ್ರ ಶಾಸನಗಳು ನೈಜವೆಂದು ಸಾಬೀತಾಗಿದೆ. ವಿದ್ಯಾರಣ್ಯ ಎಂಬುವರೊಬ್ಬರು ಇದ್ದರೆ ಮತ್ತು ವಿಜಯನಗರ ಸಾಮ್ರಾಜ್ಯದ ಉದಯ ಯಾವಾಗ ಎಂಬ ಪ್ರಶ್ನೆಗಳಿಗೆ ಉತ್ತರ ದೊರೆತಿದೆ. ಇದಕ್ಕೆ ಹೊರತಾಗಿ ನೊಡಿದರೆ ನವಶೋಧಗಳು ಹೊಸ ವಿಷಯಗಳ ದ್ವಾರ ತೆಗೆಯಬಹುದು. ಎರಡೂ ಸ್ವಾಗತಾರ್ಹ.

**ಅಡಿ ಟಿಪ್ಪಣಿಗಳು**

೧ ಆನಂದಗಿರಿಗಳ ಶಂಕರ ವಿಜಯ.

೨ ಡಾ. ಪಿ. ಗುರುರಾಜ ಭಟ್ಟ : **ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್** (೧೯೭೫) ಪು.೨೭೦. (ಎಸ್.ಟಿ.ಹೆಚ್.ಸಿ).

೩ ಅದೇ. ಪು. ೨೪೦, ೨೭೦–೨೭೨.

೪ ಅದೇ. ಪು. ೩೪೮.

೫ ಅದೇ. ಪು. ೩೦೧.

೬ ಅದೇ. ಪು. ೩೧೫.

೭ ಡಾ. ಎಂ. ಚಿದಾನಂದ ಮೂರ್ತಿ: **ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ** (೧೯೭೯) ಪು. ೧೭೩.

೮ **ಎಪಿಗ್ರಾಫ಼ಿಯ ಕರ್ನಾಟಿಕ:** ಸಂಪುಟ–೧೧(ಹೊಸ ಆವೃತ್ತಿ) ಶೃಂ.೧.

೯ ಅದೇ. ಸಂ. ೬ (ಹಳೆ ಆವೃತ್ತಿ) ಕೆಪಿ. ೩೮.

೧೦ ಡಾ. ಕೆ.ವಿ. ರಮೇಶ: **ಎ ಹಿಸ್ಟರಿ ಆಫ್ ಸೌತ್ ಕೆನರ** (೧೯೭೦) ಪು.೪೪.

೧೧ ಅದೇ. ಪು. ೪೫–೪೮.

೧೨ ಡಾ. ಎ.ಕೆ. ಶಾಸ್ತ್ರಿಯವರು ಇದಕ್ಕೆ ಕೊಟ್ಟಿರುವ ಆಧಾರ ಡಾ. ಕೆ.ವಿ. ರಮೇಶ ಅವರ ಮೇಲೆ ಉದಹರಿಸಿದ ಗ್ರಂಥ. ಶಾಸ್ತ್ರಿಯವರು ಮಾಡಿರುವ ತಪ್ಪು ಗ್ರಹಿಕೆ ಈ ಪ್ರಮಾದಕ್ಕೆ ಎಡೆ ಮಾಡಿದೆ. ಹೆಸರನ್ನು ಬಿರುದೆಂದು ಇವರು ಹೇಳಿರುವುದಕ್ಕೆ ರಮೇಶ ಅವರ ಗ್ರಂಥದಲ್ಲಿ ಆಧಾರವಿಲ್ಲ.

ನೋಡಿ; ಡಾ. ಎ.ಕೆ. ಶಾಸ್ತ್ರಿ: **ಶೃಂಗೇರಿ ಧರ್ಮ ಸಂಸ್ಥಾನ** (೧೯೮೩) ಪು.೨೪–೨೫. ಲ.ನ. ಶಾಸ್ತ್ರಿಯವರು "ಗಜಾಂಕುಸ ಇಮ್ಮಡಿ ಬಸವರಾಯ" ಎಂದು ವೀರ ಕುಲಶೇಖರನನ್ನು ಹೆಸರಿಸಿ ಮತ್ತೊಂದು ರೀತಿಯ ತಪ್ಪು ಮಾಡಿದ್ದಾರೆ. ನೋಡಿ ಇವರ ಗ್ರಂಥ: "ಶೃಂಗೇರಿ ಶ್ರೀ ಶಾರದಾ ಪೀಠ" ಪು.೩೫.

ಇದರಿಂದ ಈ ಇಬ್ಬರು ಸಂಶೋಧಕರಿಗೂ ಆಳುಪ ಶಾಸನಗಳ ಪರಿಚಯವಿಲ್ಲ ಎಂದು ತಿಳಿಯುತ್ತದೆ.

೧೩ ಎಸ್. ಐ. ಐ. ಸಂ. ೯ (೨) ನಂ. ೪೨೩, ೪೩೦.

ಅದೆ. ಸಂ. ೨೭. ನಂ. ೫೫, ೫೬, ೭೮, ೮೨ ಮತ್ತು ೧೦೪.

೧೪ ಅದೆ. ಸಂ. ೯ (೨) ನಂ.೪೨೩, ೪೩೦: ಸಂ. ೨೭. ನಂ.೫೫, ೫೬ ಮತ್ತು ೧೦೪

೧೫ ಅದೆ.ಸಂ. ೯(೨) ನಂ.೪೨೩. ಶಾಸನ ಪಾಠ ಸಾಲು ೨–೪.

೧೬ ಅದೆ. ನಂ. ೪೩೦. ಶಾಸನ ಪಾಠ ಸಾಲು ೯–೧೦.

೧೭ ಅದೆ. ಸಂ.೨೭. ನಂ. ೫೫ ಮತ್ತು ೫೬.

೧೮ ಅದೆ. ನಂ. ೫೬.

೧೯ ಅದೆ. ನಂ. ೫೫.

೨೦ ನೀರುಮಾರ್ಗ ಗ್ರಾಮದಲ್ಲಿ ಶಾಸನ ಶೋಧಕ್ಕಾಗಿ ಕ್ಷೇತ್ರ ಕಾರ್ಯ ಕೈಗೊಂಡಿದ್ದಾಗ ಮನೆಯೊಂದರ ಬಾವಿ ಕಟ್ಟೆಯ ನೆಲಕ್ಕೆ ಹಾಸಿ ಬಟ್ಟೆ ಒಗೆಯುವ ಕಲ್ಲಾಗಿ ಇದನ್ನು ಉಪಯೋಗಿಸುತ್ತಿದ್ದುದು ನನ್ನ ಗಮನಕ್ಕೆ ಬಂತು. ಅದನ್ನು ಅಲ್ಲಿಂದ ಸುರಕ್ಷಿತ ಜಾಗಕ್ಕೆ ಸ್ಥಾಳಾಂತರಿಸ ಬೇಕೆಂಬ ನನ್ನ ಪ್ರಯತ್ನ ಇನ್ನೂ ಫಲ ಕಂಡಿಲ್ಲ.

೨೧ ಎಸ್.ಐ.ಐ. ಸಂ.೨೭. ನಂ. ೭೮.

೨೨ ಅದೆ. ಸಂ. ೯(೨). ನಂ. ೪೩೦.

೨೩ ಎ.ಕೆ. ಶಾಸ್ತ್ರಿ: 'ಶೃಂಗೇರಿ ಧರ್ಮ ಸಂಸ್ಥಾನ' (೧೯೮೩) ಪರಿಶಿಷ್ಟ– ೪.

೨೪ ಎಸ್.ಐ.ಐ. ಸಂ. ೯(೨). ನಂ. ೪೨೩.

೨೫ ಅದೆ. ಸಂ. ೨೭. ನಂ. ೮೨.

೨೬ ಅದೆ. ನಂ. ೧೦೪.

೨೭ ಹೆಚ್. ಲಕ್ಷ್ಮೀನರಸಿಂಹ ಶಾಸ್ತ್ರಿ: **ಶೃಂಗೇರಿ ಶ್ರೀ ಶಾರದಾ ಪೀಠ** ಪು.೪೫. : **ಶಾಂಕರ ದಕ್ಷಿಣಾಮ್ನಾಯ ಪೀಠ** (೨೦೦೨) ಪು. ೩೫.

೨೮ ಎಸ್.ಐ.ಐ. ಸಂ. ೨೭. ನಂ. ೧೦೯.

೨೯ ಅದೆ. ನಂ. ೧೩೪.

೩೦ ಇದೊಂದು ಹೊಸ ಶಾಸನ. ಈ ಶಾಸನ ಕಲ್ಲನ್ನು

ಈಗ ಗೋವಿಂದ ಪೈ ಸಂಶೋಧನ ಕೇಂದ್ರ, ಎಮ್.ಜಿ.ಎಮ್. ಕಾಲೇಜು, ಉಡುಪಿ ಇಲ್ಲಿ ರಕ್ಷಿಸಿ ಇಡಲಾಗಿದೆ.

೩೧ ಎ.ಕೆ. ಶಾಸ್ತ್ರಿ (೧೯೮೩) ಪರಿಶಿಷ್ಟ– ೪.

೩೨ ಎಸ್.ಐ.ಐ. ಸಂ.೯(೨) ನಂ. ೬೩೨.

೩೩ ಎ.ಕೆ. ಶಾಸ್ತ್ರಿ (೧೯೮೩). ಪರಿಶಿಷ್ಟ– ೪.

೩೪ ಎಸ್.ಐ.ಐ. ೯(೨) ನಂ. ೫೨೫.

೩೫ ಲಿಂಗಣ್ಣ ಕವಿಯ–**ಕೆಳದಿ ನೃಪ ವಿಜಯ**, ಕನ್ನಡ ಸ್ಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ (೧೯೭೩) ಲಕ್ಷ್ಮಣ ಶಾಸ್ತ್ರಿಗಳ–ಗುರುವಂಶ ಕಾವ್ಯ.

೩೬ **ಕೆಳದಿ ನೃಪ ವಿಜಯ:** ಪು. ೭೦. ಡಾ. ಪಿ.ಎನ್. ನರಸಿಂಹ ಮೂರ್ತಿ: **ಜೈನಿಸಮ್ ಆನ್ ದಿ ಕೆನರ ಕೋಸ್ಟ್** (೧೯೮೩) ಪು.೧೬೩–೧೬೪.

೩೭ **ಕೆಳದಿ ನೃಪವಿಜಯ**. ಪು. ೬೮–೭೧.

೩೮ ಅದೆ. ಪು. ೭೪–೭೫.

೩೯ ಅದೆ. ಪು. ೮೭.

೪೦ ಎ.ಕೆ. ಶಾಸ್ತ್ರಿ ಮತ್ತು ಲ.ನ. ಶಾಸ್ತ್ರಿ– ಇವರುಗಳು, ಮೇಲೆ ಉದಾಹರಿಸಿರುವ ಗ್ರಂಥಗಳು.

೪೧ ಎ.ಆರ್. ೧೯೨೮–೧೯೨೯. ನಂ.೫೩೧. ಎಮ್.ಎ.ಆರ್. ೧೯೩೪. ನಂ.೧೮, ೨೧. ಎ.ಕೆ. ಸಂ. ೬ (ಹಳೆಯದು). ಮೂಡಿಗೆರೆ: ನಂ. ೪೦, ೪೧, ೪೭, ೪೮, ೫೦, ೫೪, ೫೬, ೬೦, ೬೨, ೬೩, ಇತ್ಯಾದಿ; ಕೊಪ್ಪ: ೫೭ ಇತ್ಯಾದಿ. ನಾನು ಪತ್ತೆಮಾಡಿರುವ ಹೊಸ ಶಾಸನಗಳು: ಚಂಡೆ, ಹೆರ್ಮುಂಡೆ, ಕಾಬೆಟ್ಟು, ವಿನಾಯಕಬೆಟ್ಟು ಇತ್ಯಾದಿ.

೪೨. ಪಿ.ಎನ್. ನರಸಿಂಹ ಮೂರ್ತಿ (ಇತರರೊಂದಿಗೆ) (ಸಂ)೧೯೮೫. **ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ** (ಕಾರ್ಕಳ ಶ್ರೀ ಭುವನೇಂದ್ರ ಕಾಲೇಜು ರಜತೋತ್ಸವ ಸಮಿತಿ ಪ್ರಕಟಣೆ). ಪು. ೧೫.

೪೩ ಮೇಲೆ ಉದಹರಿಸಿರುವ ಸಂಖ್ಯೆ ೪೧ ರಲ್ಲಿರುವ ಶಾಸನಗಳು.

೪೪ ಲ.ನ. ಶಾಸ್ತ್ರಿ: **ಶೃಂಗೇರಿ ಶ್ರೀ ಶಾರದಾ ಪೀಠ** ಪು.೫೩, ೫೭–೫೮. ಬಾಹುಬಲಿ (ಜೈನ ಕವಿ)ಯ ನಾಗಕುಮಾರ ಚರಿತೆ ಪದ್ಯ–೪೮.

೪೫ ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ. ಪರಮಶಿವ ಮೂರ್ತಿ ಇದನ್ನು ಪತ್ತೆ ಮಾಡಿ ಪ್ರಕಟಿಸಿದ್ದಾರೆ. ನೋಡಿ: ಕರ್ನಾಟಕ ಸರ್ಕಾರದ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ (ಮೈಸೂರು), ಪ್ರಕಟಿಸಿರುವ **ವಿಜಯನಗರ** ಸಂ. ೧೦ (೨೦೦೫).

❑❑

# ಆಗಮಗಳ ಪ್ರಾಚೀನತೆ ಮತ್ತು ಸ್ವರೂಪ

– ಎಂ.ಎನ್. ಪ್ರಭಾಕರ್

ಆಗಮ ಎಂದಲ್ಲಿ ಅದೊಂದು ಹಲವು ಪ್ರಾಚೀನ ಸಂಪ್ರದಾಯಗಳ ಮೊತ್ತ. ಅದಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ತಾತ್ತ್ವಿಕ ಹಿನ್ನೆಲೆ ಇರುವ ಹಲವು ಜ್ಞಾನಶಾಖೆಗಳು ಪ್ರಧಾನವಾಗಿ ಬೆಳೆದಿವೆ. ಈ ಜ್ಞಾನಕ್ಕೆ ಸಂಬಂಧಿಸಿದಂತೆ ಆಚಾರ ವಿಚಾರಗಳೂ ಅಗಾಧವಾಗಿ ಬೆಳೆದಿದೆ. ಇಲ್ಲಿ ವಿವಿಧ ಆಚರಣೆಗಳೇ ಕಣ್ಣಿಗೆ ಕಾಣುವ ಪ್ರಮುಖವಾದ ಅಂಶ. ಇದು ವೈಯಕ್ತಿಕ ನೆಲೆಯಲ್ಲಿ ದೀಕ್ಷೆ, ಯೋಗ ಸಾಧನೆ, ಗೃಹಾರ್ಚನೆಗಳನ್ನು ಹಾಗೂ ಸಾಂಘಿಕವಾಗಿ ಆಲಯಾರ್ಚನೆ, ಉತ್ಸವಾದಿಗಳನ್ನು ಒಳಗೊಳ್ಳುತ್ತದೆ. ಇವುಗಳಲ್ಲಿ ಆಲಯಾರ್ಚನೆಗೆ ಹೆಚ್ಚು ಒತ್ತು ಲಭಿಸಿದ್ದು, ಇಂದು ಆಗಮ ಎಂದಲ್ಲಿ ದೇವಾಲಯ ಸಂಸ್ಕೃತಿ ಎನ್ನುವಷ್ಟರ ಮಟ್ಟಿಗೆ ವಿಸ್ತಾರವಾಗಿ ಬೆಳೆದಿದೆ.

ಆಗಮ ಪದದ ನಿಷ್ಪತ್ತಿಯನ್ನು ಕೆಳಕಂಡಂತೆ ವಿದ್ವಾಂಸರು ಗುರುತಿಸಿದ್ದಾರೆ.

'ಆಜ್ ಪೂರ್ವಕಾದ್ ಗತ್ಯರ್ಥಕಾದ್ ಗಮ್‌ಲೃಧಾತೋಃ (ಗಹವೃದೃವಿಶ್ಚಿಗಮಶ್ಚ' – ಅಷ್ಟಾಧ್ಯಾಯಿಯ ಸೂತ್ರಪಾಠ. ಈ ಉಪಸರ್ಗವು ಗಮ್‌ಧಾತುವಿಗೆ ಸೇರಿ ಅಪ್ ಪ್ರತ್ಯಯದೊಂದಿಗೆ ಆಗಮ ಪದ ನಿಷ್ಪನ್ನವಾಗಿದೆ. (ಶಂಕರಭಟ್ಟ ಉ. ೧೯೮೮.೧).

'ಅಪ್‌ಸತ್ಯಯೇ ನಿಷ್ಪನ್ನೋ ಅಯಂ ಆಗಮಶಬ್ದಃ ತಂತ್ರ ಸಂಹಿತಾತ್ಮಕಂ ಗ್ರಂಥಜಾತಂ' – ಆಗಮವು ತಂತ್ರ, ಸಂಹಿತೆ ಮುಂತಾದ ಶಾಸ್ತ್ರ ಗ್ರಂಥಗಳನ್ನೊಳಗೊಳ್ಳುತ್ತದೆ. (ಅದೇ.,) ಈ ಶಾಸ್ತ್ರಗಳ ರೂಪ ಒಂದೇ; ಆದರೆ ಹೆಸರುಗಳು ಬೇರೆ ಬೇರೆ ರೀತಿಯದು. ಪರ್ಯಾಯ ಪದಗಳೆಂದಾರೂ ಸರಿಯೇ.

ಆಗಮ ಪದದೊಂದಿಗೆ ಇದರ ಜ್ಞಾತಿಪದ ನಿಗಮವನ್ನೂ ಗಮನಿಸಬೇಕು. ನಿಗಮದ ಮೂಲವೂ ಈ ರೀತಿಯಲ್ಲಿ ನಿಷ್ಪನ್ನಗೊಂಡದ್ದು. ಗಮ್‌ಧಾತು ಮೂಲದ್ದು. ಗತ್ಯರ್ಥ ಸೂಚಕ ಧಾತುಗಳೆಲ್ಲವೂ ಜ್ಞಾನಾರ್ಥವನ್ನು ಸೂಚಿಸುವಂಥದ್ದು. "ಗತ್ಯರ್ಥಕಾನಾಂ ಜ್ಞಾನಾರ್ಥಕತ್ವಂ". ನಿಗಮವು ನಿರ್ದಿಷ್ಟವಾದದ್ದು; ವೈದಿಕ ಸಾಹಿತ್ಯವನ್ನು ಒಳಗೊಂಡಿದೆ. ಆಗಮವು ತದನಂತರ ಕಾಲದಲ್ಲಿ ಬಂದದ್ದು ಎಂದೂ ಅರ್ಥೈಸಬಹುದಾಗಿದ್ದು, ಆಗಮ, ತಂತ್ರ, ಸಂಹಿತೆಯನ್ನು ಒಳಗೊಂಡಿದೆ.

ಆಗಮವನ್ನು ಪ್ರತಿನಿಧಿಸುವ ಈ ಪರ್ಯಾಯ ಪದಗಳು, ಆಗಮಗಳನ್ನು ಶೈವ, ಶಾಕ್ತ, ವೈಷ್ಣವ ಎಂಬ ವರ್ಗೀಕರಣಕ್ಕೆ ಎಡೆಮಾಡಿಕೊಟ್ಟಿದೆ. ಈ ವರ್ಗೀಕರಣ ಆಗಮಗಳನ್ನು ವಸ್ತುನಿಷ್ಠವಾಗಿ ನೋಡುವ ಪರಿಯನ್ನು ತಪ್ಪಿಸಿ, ಶೈವ, ಶಾಕ್ತ, ವೈಷ್ಣವ ರೂಪಗಳಲ್ಲಿ ವಿಶ್ಲೇಷಿಸಲು ವಿದ್ವಾಂಸರನ್ನು ಸೆಳೆದಿದೆ. ಇದು ದಾರಿ ತಪ್ಪಿಸಿದ ಪರಿಯೂ ಹೌದು. ಕೆಲವು ವಿದ್ವಾಂಸರು ಮತ್ತೊಂದು ಹೆಜ್ಜೆ ಮುಂದೆ ಹೋಗಿ ವೈದಿಕ, ಅವೈದಿಕ ಎಂದೂ ವರ್ಗೀಕರಿಸಿದ್ದಾರೆ. ಆಗಮ ಸಾಹಿತ್ಯದ ಸಮಗ್ರ ದೃಷ್ಟಿಯ ಕೊರತೆಯೇ ಇದಕ್ಕೆ ಕಾರಣವೆನ್ನಿಸಿದೆ. ವೈದಿಕ ಸಾಹಿತ್ಯವನ್ನು ನಿಗಮದಡಿ ಗುರುತಿಸಿದ್ದು ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳನ್ನು ಒಳಗೊಂಡಿದೆ. ಉಪನಿಷತ್ತುಗಳನ್ನು ವೇದಾಂತವೆಂದು ಗುರುತಿಸುತ್ತಾರೆ. ಉಪನಿಷತ್ತುಗಳು ಆಗಮ ಮತ್ತು ನಿಗಮಗಳ ನಡುವೆ ಕೊಂಡಿಯಂತಿವೆ. ಆಗಮಸಾಹಿತ್ಯಕ್ಕೆ ವೈದಿಕಸಾಹಿತ್ಯಕ್ಕೆ ಇರುವಂತೆ ಮಹತ್ವದ ಸ್ಥಾನವೇ ದಕ್ಕಿದೆ.

ಆಗಮಗಳಲ್ಲಿ ಆಚರಣೆಗೆ ಹೆಚ್ಚು ಪ್ರಾಶಸ್ತ್ಯವಿದ್ದು, ಪರಮಸಂಹಿತೆಯಲ್ಲಿ 'ಸರ್ವಾಗಮನಾಂ ಆಚಾರಃ ಪ್ರಥಮಂ ಪರಿಕಲ್ಪ್ಯತೇ' ಎಂದು ವಿವರಿಸಿದೆ. (ಕೃಷ್ಣಸ್ವಾಮಿ ಅಯ್ಯಂಗಾರ್, ೧೯೪೦. ೨೯) ಪ್ರತಿಯೊಂದು ವ್ಯವಸ್ಥೆಗೂ ಎರಡು ಮುಖಗಳು. ಒಂದು ಶಾಸ್ತ್ರ, ಮತ್ತೊಂದು ಸಂಪ್ರದಾಯ; ಒಂದು ತಾತ್ತ್ವಿಕ ಸಿದ್ಧಾಂತ, ಮತ್ತೊಂದು ಆಚಾರ ಸಂಹಿತೆ. ಆಚರಣೆಯನ್ನು ರೂಢಿಗೆ ತರುವ ಮುನ್ನ ತಾತ್ತ್ವಿಕ ಸಿದ್ಧಾಂತವನ್ನು ಅರ್ಥ ಮಾಡಿಕೊಳ್ಳಬೇಕು.

**ಯಃ ಕಶ್ಚಿದಿಹ ಲೋಕೇಽಸ್ಮಿನ್ನಾಗಮಃ ಪರಿಕೀರ್ತಿತಃ**
**ತಸ್ಯಾಂತಗಮನಂ ಶ್ರೇಯಃ ಕೀರ್ತಿರೇಷಾ ಸನಾತನೀ**

ಇದು ಮಹಾಭಾರತದ ಕಾವ್ಯೋಕ್ತಿ, ಈ ಲೋಕದಲ್ಲಿ "ಆಗಮ" ಎಂದು ಯಾವುದಿದೆಯೋ ಅದರ ಅಂತರ್ಯವನ್ನು, ತಾತ್ತ್ವಿಕ ಸಿದ್ಧಾಂತವನ್ನು ಮೊದಲಿಗೆ

'ಪದ್ಮಪ್ರಭಾ' # ೪೨, ಬ್ಲಾಕ್ : ೧೭ ಬ್ಯಾಂಕ್ ಕಾಲೋನಿ, ಶ್ರೀರಾಂಪುರ ಎರಡನೆಯ ಹಂತ, ಮೈಸೂರು – ೫೭೦೦೨೩

ಅರ್ಥ ಮಾಡಿಕೊಳ್ಳಬೇಕು. ಇದು ಸನಾತನಿಗಳ ಅಭಿಮತ. (ರಂಗಸ್ವಾಮಿ ಎಚ್.ಎನ್. ೧೯೮೫, ೫೮೮೨ ಸಂ. ೨೦) ಆಗಮಗಳಲ್ಲಿ ತಾತ್ತ್ವಿಕ ಸಿದ್ಧಾಂತಕ್ಕಿಂತ ಆಚಾರವಿಚಾರಗಳಿಗೆ ಪ್ರಾಶಸ್ತ್ಯ. ಮೊದಲು ರೂಪುಗೊಂಡದ್ದು ಆಚರಣೆಗಳು, ನಂತರ ತಾತ್ತ್ವಿಕ ಚೌಕಟ್ಟಿನಲ್ಲಿ ಅಳವಡಿಕೆ. ಶಾಸ್ತ್ರಾತ್ ರೂಢೀ ಗರೀಯಸೀ – ಈ ಮಾತು ಬಹುಶಃ ಆಗಮ ಸಂಪ್ರದಾಯಗಳಿಗೇ ಅನ್ವಯ.

ಆಗಮ ಸಾಹಿತ್ಯ ಮತ್ತು ವಐದಿಕ ಸಾಹಿತ್ಯಗಳ ವರ್ಗೀಕರಣವಿರುವಂತೆ, ಆಗಮಗಳಲ್ಲಿ ಸಂಪ್ರದಾಯ ಭೇದವಿದೆ. ಈ ಪ್ರಭೇದಗಳನ್ನು ಕೆಲವು (ಗ್ರಂಥಗಳು ವೈದಿಕ, ತಾಂತ್ರಿಕ ಎಂದು ವಿವರಿಸಿವೆ.

**ಶ್ರುತಿ ಪ್ರಮಾಣಕೋಧರ್ಮಃ । ಶ್ರುತಿಶ್ಚ ದ್ವಿವಿಧಾ । ವೈದಿಕೀ ತಾಂತ್ರಿಕೀ ಚೇತಿ ।**

ಕ್ರಿ.ಶ. ೧೨ನೆಯ ಶತಮಾನದಲ್ಲಿ ಕುಲ್ಲೂಕ ಭಟ್ಟನೂ ಈ ರೀತಿಯ ವಿವರಣೆ ನೀಡಿದ್ದಾನೆ. (ದೊರೆಸ್ವಾಮಿ ಅಯ್ಯಂಗಾರ್, ೧೯೯೬. XI) ಶ್ರುತಿ ಮತ್ತು ಸ್ಮೃತಿ ಎಂದು ಗುರುತಿಸುವುದರಲ್ಲಿ ದೊಡ್ಡ ಜಿಜ್ಞಾಸೆಯೇ ಇದೆ.

ವೈದಿಕ ಸಾಹಿತ್ಯವನ್ನು ಕುರಿತು ನಡೆದಷ್ಟು ಅಧ್ಯಯನ ತಾಂತ್ರಿಕ ಅಥವಾ ಆಗಮ ಸಾಹಿತ್ಯದಲ್ಲಿ ನಡೆದಿಲ್ಲವೆಂದೇ ನಮ್ಮ ಎಣಿಕೆ. ವೈದಿಕ ಸಂಹಿತೆಯಲ್ಲಿ ಹಲವು ಶಾಖೆಗಳ ಹೆಸರುಗಳಷ್ಟೇ ತಿಳಿದಿದೆ. ಮಂತ್ರದ್ರಷ್ಟಾರರು ಕಂಡ ಜ್ಞಾನದ ಬೆಳಕು ಇಂದು ಸಂಹಿತಾ ರೂಪದಲ್ಲಿವೆ. ಕೆಲವು ಶಾಖೆಯ ಗ್ರಂಥಗಳು ಈಗಷ್ಟೇ ಲಿಖಿತ ರೂಪದಲ್ಲಿ ಲಭ್ಯ. ವೇದಗಳು ಅಪೌರುಷೇಯವೆಂದು ಇಂದಿಗೂ ನಂಬಿಕೆ.

ಆಗಮ ಸಾಹಿತ್ಯದ ಹಲವು ಗ್ರಂಥಗಳು ಈಗ ಲಭ್ಯ. ಇವನ್ನು ಅಪೌರುಷೇಯ ಎನ್ನಲಾಗದು. ವ್ಯವಸ್ಥಿತ ಅಧ್ಯಯನವೂ ಸಾಧ್ಯ. ಆಗಮಗಳ ಆರಂಭ, ಪೂರ್ವ ವೃತ್ತಾಂತ, ಕ್ರಿಸ್ತಪೂರ್ವದ ಕಾಲಗರ್ಭಕ್ಕೆ ಸೇರಿದ್ದರೂ, ಇವುಗಳ ಬೆಳವಣಿಗೆ ಮಹಾಭಾರತ ಕಾವ್ಯದ ನಂತರ. ತಾಂತ್ರಿಕ ಅಥವಾ ಆಗಮಿಕ ಸಂಪ್ರದಾಯದ ಆರಂಭದ ಮೂಲವನ್ನು ಗುರುತಿಸಲು ವ್ಯವಸ್ಥಿತ ಅಧ್ಯಯನ ನಡೆಯಬೇಕಾಗಿದೆ. ವೈದಿಕ ಮತ್ತು ತಾಂತ್ರಿಕ ಸಂಪ್ರದಾಯಗಳು ನೇರವಾಗಿ ಆಚರಣೆಗೆ ಸಂಬಂಧಿಸಿದ್ದು, ಕಾಲಚಕ್ರ ಉರುಳಿದಂತೆ ಮಿಶ್ರ ಎಂಬ ಪ್ರಭೇದವೂ ಸೇರ್ಪಡೆಯಾಯಿತು. ಇದನ್ನು ಭಾಗವತ ಗ್ರಂಥ ಗುರುತಿಸಿದೆ. (ರಾಮಚಂದ್ರ ರಾವ್. ಎಸ್.ಕೆ. ೧೯೮೯, ೧೧೬, ಸಂ.೧)

**ವೈದಿಕೀ ತಾಂತ್ರಿಕೀ ಮಿಶ್ರ ಇತಿತ್ರಿವಿ ಧೋ ಮಖಃ**
**ತ್ರಯಾಣಾಂ ಈಪ್ಸಿತೇನೈವ ವಿಧಿನಾಂ ಮಾಂ ಸಮರ್ಚಯೇತ್**

ವೈಖಾನಸವನ್ನು ವೈದಿಕವೆಂದೂ, ಪಾಂಚರಾತ್ರವನ್ನು ತಾಂತ್ರಿಕವೆಂದೂ, ಭಾಗವತವನ್ನು ಮಿಶ್ರವೆಂದೂ ವೈಷ್ಣವ ಸಂಪ್ರದಾಯದಡಿಯಲ್ಲಿ ವಿವರಿಸಲಾಗಿದೆ. ಆಗಮ ಸಂಪ್ರದಾಯಕ್ಕೆ ಸ್ವತಂತ್ರ ಅಸ್ತಿತ್ವವಿದೆ. ಇದು ವೈದಿಕ ಸಂಪ್ರದಾಯದಿಂದ ಭಿನ್ನವಾದುದು. ವೈದಿಕ ಸಂಪ್ರದಾಯವು ಖಂಡಿತವಾಗಿ ಪ್ರಾಚೀನ ಸಂಪ್ರದಾಯ. ಇದನ್ನು ತಿಳಿಯದ ಸಂಪ್ರದಾಯವಾದಿಗಳು ತಮ್ಮ ಪ್ರಾಚೀನತೆಯನ್ನು ಸಾಧಿಸಲು ಹೋಗಿ ವೈದಿಕ ಸಂಪ್ರದಾಯಕ್ಕೆ ಶರಣಾಗುತ್ತಾರೆ. ಇದು ಆಗಮ ಮೂಲಕ್ಕೆ ಬಿದ್ದಕೊಡಲಿಪೆಟ್ಟು, ಆಗಮವು ತದನಂತರ ಕಾಲದ್ದು. ಇದು ಬೆಳೆದು ವೈದಿಕಕ್ಕೆ ಸಮಾನಾಂತರವಾಗಿ ವೃದ್ಧಿಸಿತು. ಮೊದಲಿಗೆ ವೈದಿಕ, ಆಗಮಿಕ ಸಂಪ್ರದಾಯಗಳನ್ನು ಅದರ ಲಕ್ಷಣಗಳನ್ನು, ಸರಳವಾಗಿ ಕೆಳಕಂಡಂತೆ ಗುರುತಿಸಲಾಗಿದೆ.

ಯಜ್ಞಯಾಗಾದಿಗಳನ್ನು ಒಳಗೊಂಡದ್ದು ವೈದಿಕ; ದೀಕ್ಷೆ, ಯೋಗ, ವಿಗ್ರಹಾರಾಧನೆಗಳನ್ನೊಳಗೊಂಡದ್ದು ಆಗಮಿಕ. ಪರಬ್ರಹ್ಮನನ್ನು ಗುರುತಿಸುವುದು ವೈದಿಕ; ಪರಮಾತ್ಮನನ್ನು ಗುರುತಿಸುವುದು ಆಗಮಿಕ.

ಯಜ್ಞ ಪದಾರ್ಥ ಎನಿಸಿದರೆ, ಯಾಗ ಸ್ವಾರ್ಥಪರವಾದದ್ದು. ಮೂರ್ತಿಪೂಜೆಯಲ್ಲಿ ಮನೆಯಲ್ಲಿ ಆಚರಣೆ ಸ್ವಾರ್ಥ. ದೇವಾಲಯದಲ್ಲಿ ಆಚರಣೆ ಪರಾರ್ಥ. ಯಜ್ಞಗಳ ಆಚರಣೆಯೊಂದಿಗೆ ತಪಸ್ಸು, ಸ್ವಾಧ್ಯಾಯ, ದಾನಗಳಿಗೆ ವೈದಿಕ ಸಂಪ್ರದಾಯದಲ್ಲಿ ಮಹತ್ವದ ಸ್ಥಾನವಿದೆ. ಮೂರ್ತಿಪೂಜೆ ಇರಲಿಲ್ಲವೇ ಎಂದು ಪ್ರಶ್ನಿಸಿದಲ್ಲಿ, ಇತ್ತು ಆದರೆ ಅದರ ಸ್ಥಾನ ಗೌಣ. ಆ ಯಜ್ಞಗಳ ಆಚರಣೆ ಮೊದಲಿಗೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ದೇವತೆಗಳನ್ನು ಗೌರವಿಸುವ ಕ್ರಿಯೆ ಎನಿಸಿತ್ತು. ತದನಂತರ ಕಾಲದಲ್ಲಿ ಯಾಗಗಳ ಮೂಲಕ ದೇವತೆಗಳನ್ನು ತಮ್ಮ ಇಷ್ಟ ಕಾಮ್ಯಗಳನ್ನು ಪೂರೈಸಲು ಸಂಪ್ರೀತಿಗೊಳಿಸಲು ನಡೆಸುವ ಕ್ರಿಯೆಯಾಯಿತು. ಪ್ರತಿಭೆಯಿಂದ ಕೂಡಿದ ಉಪನಿಷತ್‌ಸಾಹಿತ್ಯ ಆಗಮಗಳಿಗೆ ಮೂಲದ್ರವ್ಯ ಒದಗಿಸಿದೆ ಎನ್ನುವುದು ಸತ್ಯ.

ಸೃಷ್ಟಿಯ ವಿವರಗಳು ವೈದಿಕ ಸಾಹಿತ್ಯದಲ್ಲಿ ಅಸತ್‌ನಿಂದ ಪ್ರಾರಂಭವಾಗುತ್ತವೆ. ಇಲ್ಲಿ ಪರಬ್ರಹ್ಮನೇ ಅಂತಿಮ ಲಕ್ಷ್ಯ.

ಆಗಮ ಸಾಹಿತ್ಯದಲ್ಲಿ ಅವ್ಯಕ್ತದಿಂದ ಸೃಷ್ಟಿಯ ಆರಂಭ. ಆತ್ಮ ಮತ್ತು ಪರಮಾತ್ಮರ ನಡುವಣ ಸಂಬಂಧದ ಬಗ್ಗೆ ವಿಪುಲವಾದ ವಿಚಾರ ಸರಣಿ ಇದೆ. ತಾತ್ತ್ವಿಕವಾಗಿ ಕೆಲವೆಡೆ ಪರಮಾತ್ಮನಿಲ್ಲ. ಮತ್ತೊಂದೆಡೆ ಪರಮಾತ್ಮನಿದ್ದಾನೆ. ಪರಮಾತ್ಮನ ಇರುವನ್ನು ಅಂಗೀಕರಿಸಿದ್ದರಿಂದ ಅವನ ಆರಾಧನೆಯು ಹಲವು ರೂಪ ಪಡೆಯುತ್ತದೆ. ಈ ಹಾದಿಯಲ್ಲಿ ಹಲವು ಕವಲುಗಳು, ನಿರಾಕಾರ, ಸಾಕಾರ ಎಂಬ ವಿಭಿನ್ನ ನಿಲುವುಗಳು. ಧ್ಯಾನದಿಂದ ನಿರಾಕಾರ ರೂಪಿಯ ಆರಾಧನೆ ಸಾಧ್ಯ. ಧ್ಯಾನದಲ್ಲಿ ಅವಲಂಬನೆಗೆ ಪ್ರತಿಮಾ ರೂಪದ ಅವಶ್ಯಕತೆಯನ್ನು ಪ್ರಕೀರ್ಣಾಧಿಕಾರವೂ, ವಿಷ್ಣು ಸಂಹಿತೆಯೂ ಗುರುತಿಸುತ್ತದೆ. ನಿರಾಕಾರೋಪಾಸನೆಗೆ ಆಗಮಗಳಲ್ಲಿ ಸ್ಥಾನವಿಲ್ಲವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ನಿರಾಕಾರ ರೂಪಿ ಭಗವಂತನ ಆರಾಧನೆಯೂ ಸಾಧ್ಯ. ಆಗಮಗಳಲ್ಲಿರುವ

ಯೋಗಪಾದ ಭಾಗವು ಮೊದಲಿಗೆ ಇದನ್ನೇ ಪ್ರತಿಪಾದಿಸಿದೆ. ಇಂದಿನ ಆಗಮಿಕರು ಕೇವಲ ಸಾಕಾರ ರೂಪೀ ಭಗವಂತನ ಗೃಹಾರ್ಚನೆ, ಆಲಯಾರ್ಚನೆಗೆ ಹೆಚ್ಚು ಪ್ರಾಧಾನ್ಯತೆ ನೀಡಿದ್ದಾರೆ. ಆಗಮುಗಳಲ್ಲಿ ವಿಷಯ ನಿರೂಪಣೆಗಾಗಿ ನಾಲ್ಕು ಭಾಗಗಳು. ಈ ರೀತಿಯ ವಿಭಾಗಗಳು ತದನಂತರ ಕಾಲದ್ದು. ಇವನ್ನು ಜ್ಞಾನ, ಯೋಗ, ಕ್ರಿಯಾ, ಚರ್ಯಾಪಾದಗಳೆಂದು ಗುರುತಿಸಿದ್ದಾರೆ. ಇದರಿಂದ ಆಗಮಗಳಿಗೆ ಖಚಿತವಾದ ಚೌಕಟ್ಟು ಲಭಿಸಿದೆ. ಜ್ಞಾನ ಹಾಗೂ ಯೋಗಪಾದಗಳು ನಿರಾಕಾರಕ್ಕೆ ಸಂಬಂಧಿಸಿದರೆ ಕ್ರಿಯಾ ಹಾಗೂ ಚರ್ಯಾಪಾದಗಳು ಸಾಕಾರ ರೂಪಿ ಭಗವಂತನ ಆರಾಧನೆಯನ್ನು ಬೆಂಬಲಿಸುತ್ತವೆ. ಜ್ಞಾನಪಾದವು ಪ್ರಧಾನವಾಗಿ ನಿರೀಶ್ವರ ಸಾಂಖ್ಯದ ಮೂಲವನ್ನು ಆಶ್ರಯಿಸಿದೆ. ಯೋಗಪಾದವು ಸೇಶ್ವರ ಸಾಂಖ್ಯವನ್ನು ವಿವರಿಸುತ್ತದೆ.

ಸಾಂಖ್ಯದ ತರ್ಕ, ಯೋಗದ ಸಾಧನ ಮಾರ್ಗಗಳು ನಿರ್ಲಕ್ಷಿಸಲ್ಪಟ್ಟು, ಕ್ರಿಯಾ, ಚರ್ಯಾಪಾದಗಳ ಆಚಾರ ವಿಚಾರಗಳೇ ಪ್ರಮುಖವೆನಿಸಿ, ಸಾಕಾರ ರೂಪಿ ಭಗವಂತನ ಆರಾಧನೆಗೆ ಹೆಚ್ಚು ಒತ್ತು ಲಭಿಸಿತು. ಈ ಬದಲಾವಣೆ ಐತಿಹಾಸಿಕವಾಗಿ ಆಗಮ ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಆಗಮಗಳಲ್ಲಿದ್ದ ನಾಲ್ಕು ಪಾದಗಳಲ್ಲಿ ಜ್ಞಾನ, ಯೋಗ ಪಾದಗಳು ಕ್ಷೀಣಿಸಿದವು. ಯೋಗಪಾದವನ್ನು ಕಡೆಗಣಿಸಿರುವುದು ಹಲವು ಗ್ರಂಥಗಳಲ್ಲಿ ಮೇಲುನೋಟಕ್ಕೆ ಸ್ಪಷ್ಟ, ಜ್ಞಾನಪಾದದಲ್ಲಿ ಸೃಷ್ಟಿಯ ವಿವರಗಳನ್ನು ಗುರುತಿಸಿದ್ದು ತಾತ್ತ್ವಿಕ ವಿಚಾರಗಳು ಔಪಚಾರಿಕವೆನಿಸಿ, ಪುರಾಣಾದಿಗಳಿಂದ ಆಯ್ದ ಇನ್ನಿತರ ವಿವರಗಳು ಕೊರತೆಯನ್ನು ತುಂಬಿ ವಿಜೃಂಭಿಸಿದವು. ಇದರಿಂದ ಆಗಮಗಳ ಸ್ವರೂಪವೂ ಬದಲಾಯಿತು.

ಆಗಮಗಳ ಆರಂಭಕ್ಕೆ ಪೂರಕವಾದ ಪರಿಸರ, ಕಾಲ, ಪ್ರಧಾನ ಭೂಮಿಕೆಯನ್ನು, ಉಪನಿಷತ್ತು ಮತ್ತು ದರ್ಶನಗಳ ಕಾಲಕ್ಕೆ ಕೊಂಡೊಯ್ಯಬಹುದು. ದರ್ಶನಗಳಲ್ಲಿ ಮೊದಲಿಗೆ ಹೆಸರಿಸಲ್ಪಡುವುದು ಸಾಂಖ್ಯ. ಅತಿ ಪ್ರಾಚೀನವೆನಿಸಿದ ಸಾಂಖ್ಯವು ಕಪಿಲ ಮಹರ್ಷಿಯ ಕಾಣ್ಕೆ ಎಂದು ಪ್ರಕಟಗೊಂಡಿದೆ. ಕಪಿಲನ ಬಗ್ಗೆ ಹೆಚ್ಚು ತಿಳಿದಿಲ್ಲವಾದರೂ, ಮಹಾಭಾರತ ಕಾವ್ಯದಲ್ಲಿ ಈತನ ಪ್ರಸ್ತಾಪವಿದೆ. ಯಜ್ಞ ಯಾಗಾದಿಗಳಲ್ಲಿ ನಡೆಯುವ ಪ್ರಾಣಿ ಬಲಿಯನ್ನು ಧಿಕ್ಕರಿಸುತ್ತಾನೆ. ಇವನಿಗೆ ವೇದಗಳ ಬಗ್ಗೆ ಗೌರವವಿದ್ದರೂ ವೈದಿಕ ಆಚರಣೆಯಲ್ಲಿರುವ ಹಿಂಸೆಯನ್ನು ಪ್ರತಿಭಟಿಸುತ್ತಾನೆ. ವೇದಗಳಲ್ಲಿನ ಕರ್ಮಕಾಂಡದ ಅತಿರೇಕವನ್ನು ಪ್ರತಿಭಟಿಸಿದ್ದರಿಂದ ಉದಯಿಸಿದ್ದು ಜ್ಞಾನಕಾಂಡ. ಉಪನಿಷತ್ತುಗಳ ಸಂಕಲನಗಳೂ ಈ ರೀತಿಯಲ್ಲಿ ಮೂಡಿ ಬಂದದ್ದು. ಮಹರ್ಷಿ ಕಪಿಲ ಪ್ರತಿಪಾದಿಸಿದ ಸಾಂಖ್ಯದ ಸ್ವರೂಪ ತತ್‌ಕ್ಷಣದಲ್ಲಿ ವ್ಯಕ್ತವಾಗುವುದಿಲ್ಲ. ಈ ದರ್ಶನ ಗಟ್ಟಿಗೊಂಡು ಅವನ ಶಿಷ್ಯರಿಂದ ಮಂಡಿತವಾದದ್ದು ತದನಂತರದ ದಿನಗಳಲ್ಲಿ.

**"ಸಾಂಖ್ಯ ಯೋಗಃ ಪಾಂಚರಾತ್ರಂ ವೇದಾ ಪಾಶುಪತಂ ತಥಾ"**

– ಮಹಾಭಾರತ ಕಾವ್ಯದ ಶಾಂತಿ ಪರ್ವದಲ್ಲಿ ಸಾಂಖ್ಯ, ಯೋಗದೊಂದಿಗೆ ಪಾಶುಪತ ಮತ್ತು ಪಾಂಚರಾತ್ರದ ಉಲ್ಲೇಖವಿದೆ. ವೇದದೊಂದಿಗೆ ಇವೆಲ್ಲವೂ ಜ್ಞಾನದ ಶಾಖೆಗಳು. (ವರದಾಚಾರಿ. ವಿ. ೨೦೦೧, ೭-೮ ಅಡಿಟಿಪ್ಪಣಿ) ಮಹಾಭಾರತ ಕಾವ್ಯದುದ್ದಕ್ಕೂ ಸಾಂಖ್ಯ ಮತ್ತು ಯೋಗ ದರ್ಶನಗಳ ಪ್ರಸ್ತಾಪ ಹಲವು ಬಾರಿ ಪುನರಾವರ್ತನೆಗೊಂಡಿದೆ. ಸಾಂಖ್ಯ, ಯೋಗದರ್ಶನಗಳಿಗೆ ಲಭ್ಯವಿರುವ ಪ್ರಾಚೀನ ಸಾಹಿತ್ಯ ಮಹಾಭಾರತ ಕಾವ್ಯ ಹಾಗೂ ಉಪನಿಷತ್ ಮೂಲದ್ದು. ಮಹಾಭಾರತದುದ್ದಕ್ಕೂ ಈ ದರ್ಶನಗಳ ಪ್ರತಿಪಾದನೆ ಇದೆ. ಇವುಗಳೊಂದಿಗೆ ಸಹಬಾಳ್ವೆ ನಡೆಸಿದ್ದು ಪಾಂಚರಾತ್ರ ಮತ್ತು ಪಾಶುಪತ ಸಂಪ್ರದಾಯಗಳು. ವೈಖಾನಸ, ಪಾಂಚರಾತ್ರ, ಪಾಶುಪತ ಭಾಗವತ ಸಂಪ್ರದಾಯಗಳೂ ಅಂದು ಚಾಲ್ತಿಯಲ್ಲಿದ್ದವು. ಮೊದಲ ಎರಡು ಸಂಪ್ರದಾಯಗಳು ಶಿಷ್ಟ ಎನಿಸಿದರೆ, ಇನ್ನೆರಡು ಜಾನಪದ ಮೂಲದ್ದು. ಇವುಗಳಲ್ಲಿ ಪ್ರಾಚೀನವೆನಿಸಿದ ವೈಖಾನಸವು ವೈದಿಕ ಮೂಲದ್ದು; ಪಾಂಚರಾತ್ರವು ತಾಂತ್ರಿಕವೆಂದು ಸ್ಪಷ್ಟಪಡಿಸಲಾಗಿದೆ. ಪಾಶುಪತ ಮತ್ತು ಭಾಗವತಗಳ ಜಾನಪದ ಮೂಲ ಕೊಂಚ ಅಸ್ಪಷ್ಟ. ಪ್ರಾಚೀನ ಎನ್ನುವಲ್ಲಿ ಎರಡು ಮಾತಿಲ್ಲ.

ಸಾಮಾನ್ಯವಾಗಿ ವೈಖಾನಸ ಮತ್ತು ಪಂಚರಾತ್ರಗಳನ್ನು ವೈಷ್ಣವಾಗಮದಡಿಯಲ್ಲಿ ಗುರುತಿಸುತ್ತಾರೆ. ಮೂಲತಃ ವೈಖಾನಸವನ್ನು ಆಗಮದಡಿಯಲ್ಲಿ ಹೆಸರಿಸುವುದೇ ತಪ್ಪು ಗ್ರಹಿಕೆ. ಆಗಮಗಳೆಂಬ ವರ್ಗೀಕರಣ ಮೂಡುವ ಹೊತ್ತಿಗೆ ವೈಖಾನಸ, ಪಾಂಚರಾತ್ರಗಳೆರಡೂ ಪ್ರಕಟಗೊಂಡಿದ್ದವು. ಪಾಂಚರಾತ್ರದ ಕೆಲವು ಗ್ರಂಥಗಳು ತದನಂತರ ಕಾಲದಲ್ಲಿ ಆಗಮ ಸ್ವರೂಪ ಪಡೆದು ಪ್ರಕಟಗೊಂಡವು. ವೈಖಾನಸ ಗ್ರಂಥಗಳನ್ನು ಭಗವಚ್ಛಾಸ್ತ್ರಗಳೆಂದು ಗುರುತಿಸಲಾಯಿತು. ಈ ಗ್ರಂಥಗಳಲ್ಲಿ ಜ್ಞಾನ, ಯೋಗ, ಕ್ರಿಯಾ, ಚರ್ಯಾಪಾದಗಳಿಲ್ಲ.

ಅರಣ್ಯಗಳಲ್ಲಿ ವಾಸಿಸುತ್ತಿದ್ದ ವೈಖಾನಸರನ್ನು "ವೈಖಾನಸೋ ವಾನಪ್ರಸ್ಥೋ ಏವ" ಎಂದು ಗುರುತಿಸಲಾಗಿದೆ. ಇವರು ವೈದಿಕ ಸಂಪ್ರದಾಯದ ವರ್ಣಾಶ್ರಮಿಗಳು.

**ಋಷೀಣಾಂ ಉಗ್ರತಪಸಾಂ ಧರ್ಮ ನೈಪುಣ್ಯ ದರ್ಶಿನಾಃ**
**ಅನ್ಯೇಚ ಅಪರಿಮೇಯಾಶ್ಚ ಬ್ರಾಹ್ಮಣಾಃ ವನಮಾಶ್ರಿತಾಃ**
**ವೈಖಾನಸೋ ವಾಲಖಿಲ್ಯಾಃ ಸೈಕತಾಶ್ಚ ತಥಾಪರೇ**

ವೈಖಾನಸರು, ವಾಲಖಿಲ್ಯರು, ಸೈಕತರು, ಇವರೆಲ್ಲಾ ಅರಣ್ಯಗಳಲ್ಲಿ ಗುಂಪುಗಳಲ್ಲಿ ವಾಸಿಸುತ್ತಿದ್ದ ಸಮುದಾಯದವರು (ರಂಗಸ್ವಾಮಿ ಎಚ್.ಎನ್. ೧೯೯೨, ೨೨೨೬, ಸಂ. ೨೪) ವಿಷ್ಣು ಸಂಹಿತೆಯು ವೈಖಾನಸರ ಸ್ಪಷ್ಟಚಿತ್ರಣವನ್ನು ತನ್ನ ಒಡಲಲ್ಲಿರಿಸಿಕೊಂಡಿದೆ. ವನಗಳಲ್ಲಿ ವಾಸಿಸುತ್ತಾ, ಕೃಷ್ಣಾಜಿನದ ಮೇಲೆ ಮಲಗುತ್ತಿದ್ದ ವೈಖಾನಸರು ತ್ರಿಸಂಧ್ಯಾರ್ಚನೆ, ಜಪ, ಹೋಮಾದಿಗಳಲ್ಲಿ ನಿರತರಾಗಿರುತ್ತಿದ್ದರು.

ಮಹಾಭಾರತ ಕಾವ್ಯದ ಕಾಲದಲ್ಲಿ ದೇವಾಲಯಗಳು

ಅಸ್ತಿತ್ವದಲ್ಲಿದ್ದವು ಎನ್ನಲು ಪುರಾವೆಗಳಿವೆ. ನದೀತೀರದಲ್ಲಿ, ವನಗಳಲ್ಲಿ, ಉಪವನಗಳಲ್ಲಿ, ಸರೋವರಗಳಲ್ಲಿ, ಬೆಟ್ಟದ ತಪ್ಪಲಿನಲ್ಲಿ, ರಮ್ಯ ಪ್ರದೇಶಗಳಲ್ಲಿ, ಗುಹೆಗಳಲ್ಲಿ ದೇವರ ಸ್ಥಾನಗಳಿದ್ದವು. ವೈಖಾನಸರು ಮೂರು ರೀತಿಯ ಪೂಜಾ ವಿಧಾನವನ್ನು ಅಳವಡಿಸಿಕೊಂಡಿದ್ದರು. ವೈದಿಕ ಕರ್ಮರೀತ್ಯಾ ಹೋಮಪೂಜೆಯನ್ನು, ಧ್ಯಾನಾದಿಗಳ ಮೂಲಕ ಮಾನಸ ಪೂಜೆಯನ್ನೂ, ಇದರೊಂದಿಗೆ ವಿಗ್ರಹಾರಾಧನೆಯನ್ನೂ ಅಂಗೀಕರಿಸಿದ್ದು ಬೇರೆ ಪೂಜೆಯನ್ನೂ ಕೈಗೊಳ್ಳುತ್ತಿದ್ದರು. ಅರಣ್ಯಗಳಲ್ಲಿ ವಾಸಿಸುತ್ತಿದ್ದ ವೈಖಾನಸರು, ಬೇರೆ ಪೂಜೆಗೆ ಅಣಿಗೊಳಿಸಿದ ತಾಣಗಳು ದೇವತಾಯತನಗಳೆನಿಸಿದವು. ವೈಖಾನಸರು ವೈದಿಕ ಧರ್ಮವನ್ನೇ ಅನುಸರಿಸಿದ್ದು, ವಿಷ್ಣು ಅವರಿಗೆ ಆರಾಧ್ಯ ದೈವವೆನಿಸಿದ. ಅವರಿಗೆ ವಿಷ್ಣುವನ್ನು ಬಿಟ್ಟು ಅನ್ಯ ದೇವರಿಲ್ಲ. ಬೇರೆ ಪೂಜೆಯಲ್ಲಿಯೂ ವಿಷ್ಣುವನ್ನೇ ಪೂಜಿಸಿದರು. ಬೇರೆ ಪೂಜೆಗಾಗಿ ಪ್ರತ್ಯೇಕವಾಗಿ ಯಾವ ತಾತ್ತ್ವಿಕ ಸಿದ್ಧಾಂತವನ್ನೂ ಅಂಗೀಕರಿಸಲಿಲ್ಲ. ವೈದಿಕ ಮಂತ್ರಗಳನ್ನೇ ಸಂಪೂರ್ಣವಾಗಿ ಬೇರೆ ಪೂಜೆಯಲ್ಲಿ ಬಳಸಿದರು. ಆದ್ದರಿಂದ ಇವರು ಅನುಸರಿಸಿದ ಹಾದಿ ವೈದಿಕವೆನ್ನಿಸಿತು. ಬೇರೆ ಪೂಜೆಯನ್ನು ಅಳವಡಿಸಿಕೊಂಡಿದ್ದರಿಂದ ಆಗಮ ಸಂಪ್ರದಾಯವೆಂಬ ಹೆಸರು; ವೈದಿಕ ಮಂತ್ರಗಳನ್ನೇ ಬಳಸಿದ್ದರಿಂದ ವೈದಿಕ ಸಂಪ್ರದಾಯ. ಆನಂದ ಸಂಹಿತೆಯು ವೈಖಾನಸ ಸಂಪ್ರದಾಯವನ್ನು ವೈದಿಕವೆಂದೂ ಪಾಂಚರಾತ್ರವನ್ನು ತಾಂತ್ರಿಕವೆಂದೂ ಉಲ್ಲೇಖಿಸಿದೆ.

**ವೈಖಾನಸಂ ಪಾಂಚರಾತ್ರಾಂ ವೈದಿಕಂ ತಾಂತ್ರಿಕಂ ಕ್ರಮಾತ್.**
**(ರಾಘವ ಪ್ರಸಾದ್ ಚೌಧುರಿ. ೧೯೮೭. ೧೧) ಅಡಿಟಪ್ಪಣಿ)**

ಇದೇ ಗ್ರಂಥವು ವೈಖಾನಸವು ನಿಗಮ ಮೂಲದ್ದೆಂದೂ, ಪಾಂಚರಾತ್ರವನ್ನು ಆಗಮ ಮೂಲದ್ದೆಂದೂ ಮತ್ತೊಂದೆಡೆಯಲ್ಲಿ ವಿವರಿಸಿದೆ. (ಅದೇ.,)

**ವೈಖಾನಸಂ ಹಿನಿಗಮಃ ಪಾಂಚರಾತ್ರಂ ತಥಾಗಮಃ**

ಇದರೊಂದಿಗೆ ಮಿಶ್ರವೆಂಬ ಪ್ರಭೇದವನ್ನೂ ಹೆಸರಿಸಿದೆ. (ಅದೇ.,)

**ನಿಗಮಸ್ತಾಂತ್ರಿಕೋ ಮಿಶ್ರಃ ತ್ರಿವಿಧಃ ಪ್ರೋಕ್ತಃ ಆಗಮಃ**
**ನಿಗಮಃವಿಖನಃಸ್ರೋಕ್ತಃ ಮಿಶ್ರೋ ಭಾಗವತಃ ಸ್ಮೃತಃ**

ಭಾಗವತನ್ನು ಮಿಶ್ರವೆಂದು ಗುರುತಿಸಿದ್ದರೂ, ಅದಕ್ಕೆ ದಕ್ಕಿದ ಸ್ಥಾನ ವೈಖಾನಸಕ್ಕೆ ಸಮವಾದದ್ದು. ಭಾಗವತವೂ ಪ್ರಾಚೀನ ಸಂಪ್ರದಾಯ ಎನ್ನಿಸಿದೆ. ಇದರ ಮೂಲ ಮತ್ತು ಪ್ರಾಚೀನತೆಯನ್ನು ನಿಷ್ಕರ್ಷಿಸುವುದು ದೊಡ್ಡ ಸವಾಲು.

ಆರಂಭದಲ್ಲಿ ವೈಖಾನಸರು ಕೇವಲ ವಿಷ್ಣುವಿನ ಆರಾಧಕರು. ಭಾಗವತರು ವಾಸುದೇವ ಕೃಷ್ಣನ ಆರಾಧಕರು. ಪಾಂಚರಾತ್ರರು ವಾಸುದೇವನ ಆರಾಧಕರು. ಪಾಂಚರಾತ್ರರು ವಾಸುದೇವನೊಂದಿಗೆ ಬೆಳೆದ ಇನ್ನಿತರ ದೇವತೆಗಳ ಆರಾಧಕರೂ ಹೌದು. ಈ ಸಂಪ್ರದಾಯಗಳನ್ನು ವ್ಯವಸ್ಥಿತವಾಗಿ ಐತಿಹಾಸಿಕವಾಗಿ ಗುರುತಿಸಬೇಕು. ಇದು ಮುಂದಿನ ಅಧ್ಯಯನಕ್ಕೆ ಸೋಪಾನವಾಗಬಲ್ಲದು. ವೈದಿಕ ಧರ್ಮವನ್ನು ಆಶ್ರಯಿಸಿ, ವಿಷ್ಣು ಪೂಜೆಯನ್ನು ಪ್ರತಿಮಾವಿಧಾನದ ಮೂಲಕ ಅಳವಡಿಸಿಕೊಂಡ ವೈಖಾನಸರು ಕ್ರಿಸ್ತಶಕದ ಹಲವು ಶತಕಗಳ ನಂತರ ತಮ್ಮದೇ ಆದ ಶಾಸ್ತ್ರ ಸಂದೋಹವನ್ನು ಬೆಳೆಸಿದರು. ದೇವಾಲಯ ರಚನೆ, ಬಹು ಬೇರೆ ಪೂಜಾವಿಧಾನಗಳು, ವಿಗ್ರಹ ಪ್ರತಿಷ್ಠಾಪನೆ ಮೊದಲಾದ ವಿಷಯಗಳಿಗೆ ಹೆಚ್ಚು ಒತ್ತು ನೀಡಲಾಯಿತು. ಈ ಸಂದರ್ಭದಲ್ಲಿ ರಚಿಸಲ್ಪಟ್ಟ ಗ್ರಂಥಗಳನ್ನು ಭಗವಚ್ಛಾಸ್ತ್ರಗಳೆಂದು ಗುರುತಿಸಲಾಯಿತು. ಈ ಬೆಳವಣಿಗೆ ಅರ್ವಾಚೀನ ಎನ್ನುವುದು ಸ್ಪಷ್ಟ.

ವೈಖಾನಸರ ಪಂಗಡವು ಇಂದು ದಕ್ಷಿಣದ ಆಂಧ್ರ, ತಮಿಳುನಾಡು, ಕರ್ನಾಟಕ ರಾಜ್ಯಗಳಲ್ಲಿ ಕೆಲವೆಡೆ ಪ್ರಧಾನವಾಗಿ ಅರ್ಚಕ ವೃತ್ತಿಯನ್ನು ಕೈಗೊಂಡು ನೆಲೆಸಿದೆ. ಇವರನ್ನು ಮಡಿವಂತ ಬ್ರಾಹ್ಮಣರ ಪ್ರಾಚೀನ ಸಂಗಡವೆನ್ನಬಹುದೇ ವಿನಃ ಕಾಲವನ್ನು ಗುರುತಿಸಲಾಗಿಲ್ಲ. ಮಹಾಭಾರತದ ವೇಳೆಗೆ ಅಸ್ತಿತ್ವದಲ್ಲಿದ್ದ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಸಂಗಡವೆಂದು ತಿಳಿಯಬಹುದು. ವೈಖಾನಸರ ಧಾರ್ಮಿಕ ವಿಧಿ ವಿಧಾನಗಳನ್ನು ನಿರ್ದೇಶಿಸುವ "ವೈಖಾನಸ ಗೃಹ್ಯಸೂತ್ರ ಮತ್ತು ವೈಖಾನಸ ಧರ್ಮಸೂತ್ರ"ವನ್ನು ಡಾ. ಡಬ್ಲ್ಯೂ. ಕೈಲಾಂಡ್‌ರವರು ಕಳೆದ ಶತಮಾನದ ಆರಂಭದಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಗ್ರಂಥವು ಭಗವಚ್ಛಾಸ್ತ್ರಗಳೆಂದು ಗುರುತಿಸುವ ಗ್ರಂಥಗಳಿಗಿಂತ ಸುಮಾರು ೩-೪ ಶತಕಗಳಷ್ಟು ಹಿಂದಿನದು. ಈ ಗ್ರಂಥದ ಗೃಹ್ಯಸೂತ್ರದ ನಾಲ್ಕನೆಯ ಅಧ್ಯಾಯದಲ್ಲಿ ವಿಷ್ಣು ಪಾರಮ್ಯವನ್ನು ಎತ್ತಿ ಹಿಡಿಯಲಾಗಿದೆ. ವೈದಿಕ ಪರಂಪರೆಯ ಸ್ಪಷ್ಟ ಪ್ರಭಾವವನ್ನು ಗುರುತಿಸಬಹುದು. ವಿಷ್ಣುವಿನ ಪಾರಮ್ಯದೊಂದಿಗೆ ಹವ್ಯವಾಹನವಾದ ಅಗ್ನಿಯನ್ನು ಗುರುತಿಸಲಾಗಿದೆ. ಅಗ್ನಿಯ ಮೂಲಕ ಇತರ ದೇವತೆಗಳೂ ಹವಿಸ್ಸನ್ನು ಸ್ವೀಕರಿಸುವುದರಿಂದ ಈ ರೀತಿಯ ಉಲ್ಲೇಖಗಳು ಸಾಧ್ಯವಾಗಿದೆ. ವೇದಗಳಲ್ಲಿ ಕಾಣುವ 'ಅಗ್ನಾ ವಿಷ್ಣು' ಎಂಬ ಸಂಬೋಧನೆಯೂ ಬಹುಶಃ ಈ ಮೂಲದ್ದು. ಎಂಟನೆಯ ಅಧ್ಯಾಯದಲ್ಲಿ ಧ್ಯಾನವನ್ನೂ, ಸಾಕಾರ ರೂಪಿ ಭಗವಂತನನ್ನೂ ಉಲ್ಲೇಖಿಸಲಾಗಿದೆ. ಈ ಗ್ರಂಥದ ರಚನೆಯ ಕಾಲ ಪತಂಜಲಿಯ ಅಷ್ಟಾಂಗ ಯೋಗಸೂತ್ರಗಳಿಗಿಂತ ಹೆಚ್ಚು ಹಿಂದೆ ಹೋಗಲಾರದು. ಕ್ರಿಸ್ತಶಕ ಮೂರನೆಯ ಶತಮಾನವೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. **(ವೆಂಕಟರಾಮನ್ ಕೆ.ಆರ್. ೧೯೮೮. ೧೨೩)**

ಜಾನಪದ ಮೂಲದಿಂದ ಉದಯಿಸಿದ ಭಾಗವತ ಸಂಪ್ರದಾಯದ ಮೂಲದ ಎಳೆಗಳನ್ನು ಬಿಡಿಸುವುದು ಇನ್ನೂ ಕಷ್ಟದ ಕೆಲಸ. ಆದರೆ ಖಚಿತವಾದ ಮೈಲಿಗಲ್ಲುಗಳಿವೆ. ಕ್ರಿಸ್ತಪೂರ್ವದ ಹಲವು ಶತಕಗಳಲ್ಲಿ ಮೂಲತಃ ಪಶುಪಾಲನ ವೃತ್ತಿಯನ್ನು ಅವಲಂಬಿಸಿದ್ದ ಯಾದವ ಸಮುದಾಯವು

ವಾಸುದೇವ ಕೃಷ್ಣನ ಜೀವನ ಆದರ್ಶಗಳನ್ನು ಸ್ವೀಕರಿಸಿ, ಭಕ್ತಿ ಮಾರ್ಗವನ್ನು ಅನುಸರಿಸಿ ಬೆಳೆಯಿತು. ಮಹಾಭಾರತ ಕಾವ್ಯ ರಚನೆಯ ಕಾಲಕ್ಕೇ ವೃಷ್ಣೀ ಸಂತತಿಯ ವೀರರು ದೈವತ್ವಕ್ಕೇರಿ, ಈ ಸಮುದಾಯದಲ್ಲಿ ಆರಾಧಿಸಲ್ಪಟ್ಟರು. ಕ್ರಿಸ್ತಶಕದ ವೇಳೆಗೆ ಶಿಷ್ಟ ಸಂಸ್ಕೃತಿಯ ಆಚರಣೆಗಳನ್ನು ಅಳವಡಿಸಿಕೊಂಡು ಬೆಳೆದು, ಎಲ್ಲರನ್ನು ತನ್ನೆಡೆಗೆ ಆಕರ್ಷಿಸಿತು. ಭಾಗವತ ಧರ್ಮವು ಕ್ರಿಸ್ತಶಕದ ಮೊದಲ ಶತಕಗಳಲ್ಲಿ ಪ್ರಚಾರದಲ್ಲಿದ್ದು ಆಗಮಗಳ ಪ್ರಭಾವ ಹೆಚ್ಚಿದಂತೆ ನಿಧಾನಗತಿಯಲ್ಲಿ ಸ್ವತಂತ್ರ ಆಸ್ತಿತ್ವವನ್ನು ಕಳೆದುಕೊಳ್ಳುತ್ತಾ ಏಳನೆಯ ಶತಮಾನದ ನಂತರ ಬೇರೆ ಬೇರೆ ರೂಪಗಳಲ್ಲಿ ಪ್ರವಹಿಸಿತು.

ಐತಿಹಾಸಿಕ ವಾಸುದೇವ ಕೃಷ್ಣನ "ಘೋರ ಅಂಗೀರಸಃ ಕೃಷ್ಣಾಯ ದೇವಕೀಪುತ್ರಾಯ" ಎಂಬ ಉಲ್ಲೇಖ ಛಾಂದೋಗ್ಯೋಪನಿಷತ್ತಿನಲ್ಲಿದೆ. **(ಸ್ವಾಮಿ ಆದಿದೇವಾನಂದ. ೨೦೦೧. ೧೯೨)** ಇವನು ಯಾದವ ಕುಲದ ವೀರಾಗ್ರಗಣ್ಯ. ವಿದ್ವಾಂಸ ಶ್ರೀಯುತ ವೈದ್ಯ ಅವರ ಪ್ರಕಾರ ಯಾದವರು ಯಮುನಾನದಿಯ ತೀರದಲ್ಲಿ ಪಶುಪಾಲನಾ ವೃತ್ತಿಯನ್ನು ಅವಲಂಬಿಸಿ ಬದುಕುತ್ತಿದ್ದ ಕ್ಷತ್ರಿಯರು. **(ರಾಧಾಕೃಷ್ಣನ್. ಎಸ್. ೧೯೯೬. ೪೯೪)**. ವಾಸುದೇವ ಕೃಷ್ಣ ಬೆಳೆದಿದ್ದು ಈ ಸಮುದಾಯದಲ್ಲಿ. ಅಂಧಕ ವೃಷ್ಣಿಗಳನ್ನು ಸಾತ್ವತರೆಂದು ಪುರಾಣಗಳಲ್ಲಿ ಗುರುತಿಸಲಾಗಿದೆ. ಐತರೇಯ ಬ್ರಾಹ್ಮಣದ ಪ್ರಕಾರ ಭೋಜರ ಮುಂದುವರೆದ ಸಂತತಿಯೇ ಸಾತ್ವತರು. ಆಡಳಿತದಲ್ಲಿ ಭಾಗಿಯಾದ ಅಂಧಕರನ್ನು ಭೋಜರೆಂದು ಹೆಸರಿಸಲಾಗಿದೆ. ಭೋಜರೂ ಯಾದವ ಮೂಲದವರು. **(ಜಯಸ್ವಾಲ್ ಕೆ.ಪಿ. ೧೯೭೮. ೭೪)** ಮಹಾಭಾರತ ಕಾವ್ಯದಲ್ಲಿ ವಾಸುದೇವಕೃಷ್ಣನ ಹಲವು ರೂಪಗಳನ್ನು ಕಾಣಬಹುದು. ಇವನು ಮೊದಲಿಗೆ ಆರ್ಯೇತರ ವೀರ, ನಂತರ ಜನಪದರ ನಡುವೆ ಪೂಜಾರ್ಹನಾಗಿ ಬೆಳೆದವ; ಆಧ್ಯಾತ್ಮ ಸಂಸ್ಕೃತಿಯ ವಕ್ತಾರನೂ ಹೌದು. **(ರಾಧಾಕೃಷ್ಣನ್. ಎಸ್. ೧೯೯೬, ೪೯೬)**

ಶಾಸನಗಳ ಮೂಲಕ ಸಂಪ್ರದಾಯದ ಸೀಮಾರೇಖೆಗಳನ್ನೂ ಸುಮಾರಾಗಿ ಗುರುತಿಸಲು ಸಾಧ್ಯ. ಮಿತ್ರ, ವರುಣ, ಇಂದ್ರ, ನಾಸತ್ಯ ಮೊದಲಾದ ದೇವತೆಗಳನ್ನು, ಏಷ್ಯಾ ಮೈನರ್‌ನಲ್ಲಿರುವ ಕ್ರಿಪೂ. ೧೪೦೦ರ ಶಾಸನವೊಂದನ್ನು ಆಧರಿಸಿ, ಧ್ವನಿಮಾ ಸಂಕೇತದ ಆಧಾರದಲ್ಲಿ ವಿದ್ವಾಂಸ ಮ್ಯಾಕ್‌ಡೊನೆಲ್‌ರವರು ಗುರುತಿಸಿದ್ದಾರೆ. **(ಮ್ಯಾಕ್‌ಡೊನೆಲ್ ಎ.ಎ. ೧೯೮೧. xii)** ಇದು ವೈದಿಕ ಸಂಪ್ರದಾಯದ ಪ್ರಥಮ ಮಾಹಿತಿ. ಇದನ್ನು ಹೊರತು ಪಡಿಸಿದರೆ ಪುನಃ ದಾಖಲೆಗಳು ಲಭ್ಯವಾಗುವುದು ಕ್ರಿಪೂ. ಎರಡನೆಯ ಶತಮಾನದಲ್ಲಿ.

ವೈದಿಕ ಅಥವಾ ಶಿಷ್ಟ ಸಂಪ್ರದಾಯ ಹಾಗೂ ಜಾನಪದ ಮೂಲದ ಭಾಗವತ ಸಂಪ್ರದಾಯ, ಈ ಕಾಲದಲ್ಲಿ ಸಮಾನಾಂತರವಾಗಿ ಬೆಳೆದು ಸಹಬಾಳ್ವೆ ನಡೆಸಿವೆ. ಏತನ್ಮಧ್ಯೆ, "ವಾಸುದೇವ ಸಂಕರ್ಷಣಾಭ್ಯಾವುನ್" ಎಂಬ ಪಾಣಿನಿಯ ಸೂತ್ರವು ನಮ್ಮ ಗಮನ ಸೆಳೆಯುತ್ತದೆ. ಇದು ಭಾಗವತ ಸಂಪ್ರದಾಯದ ಯಾದವ ಬುಡಕಟ್ಟು ಜನಾಂಗದ ವೀರರನ್ನು ಗುರುತಿಸುತ್ತದೆ. **(ವರದಾಚಾರಿ. ವಿ. ೨೦೦೧. ೨೦ ಅಡಿಟಿಪ್ಪಣಿ)** ಇದನ್ನು ಪಾಂಚರಾತ್ರಕ್ಕೆ ಮೂಲವೆಂದು ಕೆಲವು ವಿದ್ವಾಂಸರು ಆರೋಪಿಸುತ್ತಾರೆ. ಆರಂಭದ ಪಾಂಚರಾತ್ರವನ್ನು ಗುರುತಿಸಲು ಸಾಧ್ಯವಾಗಿಲ್ಲ. ಪಾಂಚರಾತ್ರದ ಉಲ್ಲೇಖ ಮಹಾಭಾರತದ ಕಾವ್ಯದೊಂದಿಗೆ. ಶಿಷ್ಟ ಸಂಪ್ರದಾಯವಾಗಿ ದ್ವಿಜ ಸಮಾಜದಲ್ಲಿ ಮೂಡಿದ ಪಾಂಚರಾತ್ರವು ತಾತ್ತ್ವಿಕ ನೆಲೆಗಟ್ಟನ್ನು ಪಡೆದು ಮಹಾಭಾರತ ಕಾಲದಿಂದ ವಿಸ್ತರಿಸಿ ಬೆಳೆಯಿತು.

ಮಹಾಭಾರತ ಕಾವ್ಯದಲ್ಲಿ ಉಲ್ಲೇಖಿತವಾಗಿರುವ ಸಾತ್ವತ ವಿಧಿ ಹಾಗೂ ಏಕಾಂತಿಕಾ ಧರ್ಮಗಳು ಭಕ್ತಿ ಮೂಲದವು. ಇವು ಭಾಗವತವನ್ನು ಅಪ್ಪಿಕೊಂಡವೋ ಅಥವಾ ಪಾಂಚರಾತ್ರವನ್ನೂ ಬೆಳೆಸಿದವೋ ಎಂದು ನಿರ್ಣಾಯಕವಾಗಿ ಹೇಳುವುದು ಅಸಾಧ್ಯ.

ಕ್ರಿಪೂ. ಎರಡನೆಯ ಶತಮಾನದ ವಿದಿಷಾ ನಗರದ ಪ್ರಸಿದ್ಧ ಶಾಸನವೊಂದರಲ್ಲಿ ಗ್ರೀಕ್ ರಾಯಭಾರಿ, ಭಾಗವತನೆನಿಸಿದ ಹೆಲಿಯೋಡೊರಸ್ ವಾಸುದೇವನಿಗಾಗಿ ನಿರ್ಮಿಸಿದ ಗರುಡ ಸ್ತಂಭದ ಉಲ್ಲೇಖವಿದೆ. **(ಸರ್ಕಾರ್ ಡಿ.ಸಿ. ೧೯೪೨. ೧೧-೧೨)** ಇವನನ್ನು ಭಾಗವತವೆಂದು ಗುರುತಿಸಿರುವುದೇ ವೈಶಿಷ್ಟ್ಯ. ಭಾಗವತ ಸಂಪ್ರದಾಯ ಯವನರನ್ನು ಆಕರ್ಷಿಸಿದ ಪರಿ ಎನ್ನಬಹುದು. ಗುಪ್ತ ಸಂತತಿಯ ದೊರೆಗಳು ಆರಂಭದಲ್ಲಿ ತಮ್ಮನ್ನು ಪರಮ ಭಾಗವತರೆಂದೇ ಗುರುತಿಸಿಕೊಂಡಿದ್ದಾರೆ. ಮಥುರಾ ಸಮೀಪದ ಮೋರ್ ಶಾಸನವು ವೃಷ್ಣೀ ಸಂತತಿಯ ಪೂಜಾರ್ಹರಾದ ಪಂಚವೀರರಿಗೆ ಶಿಲಾಗೃಹವನ್ನು ನಿರ್ಮಿಸಿದ್ದನ್ನು ದಾಖಲಿಸಿದೆ. ಕ್ರಿಶ. ಒಂದನೆಯ ಶತಮಾನದ ಮೇವಾರದ ನಾಗರೀ ಶಾಸನವು ಪಾರಾಶಪುತ್ರನಾದ ರಾಜಾಗಾಜಾಯನನು ವಾಸುದೇವ - ಸಂಕರ್ಷಣರಿಗಾಗಿ ಪೂಜಾ ಶಿಲಾ ಪ್ರಕಾರವಾದ "ನಾರಾಯಣ ವಾಟಿಕಾ"ದ ನಿರ್ಮಾಣವನ್ನು ಸೂಚಿಸುತ್ತದೆ. ಈತನು ಭಾಗವತನಾಗಿ ಅಶ್ವಮೇಧಯಾಜಿ ಎಂದೂ ಗುರುತಿಸಲ್ಪಟ್ಟಿದ್ದಾನೆ. **(ಸರ್ಕಾರ್ ಡಿ.ಸಿ. ೧೯೪೨. ೯೦-೯೧)** ಭಾಗವತ ಸಂಪ್ರದಾಯವು ಜಾನಪದ ಮೂಲದ್ದಾದ್ದರಿಂದ ವರ್ಣಾಶ್ರಮಗಳ ಕಟ್ಟುಪಾಡುಗಳಿಲ್ಲ. ಅದು ಜನಸಾಮಾನ್ಯರನ್ನು ಆಕರ್ಷಿಸಿದೆ. ವರ್ಣಾಶ್ರಮಗಳ ನೆರಳಿನಲ್ಲಿ ಬೆಳೆದದ್ದು ವೈಖಾನಸ, ಪಾಂಚರಾತ್ರ ಆಗಮ ಸಂಪ್ರದಾಯಗಳು.

ಅಂದು ರಾಜ್ಯವನ್ನೂ ಮುನ್ನಡೆಸಿದ ರಾಜ ಮಹಾರಾಜರುಗಳು ವೈದಿಕ ಧರ್ಮದ ಆಚರಣೆಯಲ್ಲಿಯೂ ಒಲವು ತೋರಿದರು. ಅದು ಪ್ರತಿಷ್ಠೆಯ ಸಂಕೇತವಾಗಿತ್ತು. ಅಶ್ವಮೇಧಾದಿ ಯಜ್ಞಗಳನ್ನು ಆಚರಿಸಿದರು. ರಾಜ ಅಥವಾ ಆಡಳಿತದ ಚುಕ್ಕಾಣಿ ಹಿಡಿದವರು ಸರ್ವಧರ್ಮ ಸಹಿಷ್ಣುತೆಯನ್ನು ಪ್ರದರ್ಶಿಸುತ್ತಿದೆದರು. ಅದು ಅವನ

ಅವಶ್ಯಕತೆಯಾಗಿತ್ತು. ಅಂದು ಪ್ರಚಲಿತದಲ್ಲಿದ್ದ ಧಾರ್ಮಿಕ ಸಂಪ್ರದಾಯಗಳ ಉಲ್ಲೇಖಗಳು ಶಾಸನಗಳಲ್ಲಿವೆ. ಇವುಗಳು ಏಳು ಬೀಳುಗಳು ಸಾಮಾಜಿಕ ಜೀವನವನ್ನು ಅವಲಂಬಿಸಿತ್ತು. ಈ ಕಾಲದಲ್ಲಿ ದಕ್ಷಿಣದಲ್ಲಿ ಕಂಡು ಬಂದ ಚಿತ್ರಣವನ್ನು ಗಮನಿಸಬೇಕು.

**ನಮೋ ಸಂಕರ್ಷಣ ವಾಸುದೇವಾನಾಂ ಚಂದ್ರ ಸೂರ್ಯಾನಾಂ**
**ಮಹಿಮಾವತಾನಾಂ ಚತುರ್ನಾಂ ಚ ಲೋಕಪಾಲಾನಾಂ**
**ಯಮ-ವರುಣ-ಕುಬೇರ-ವಾಸನಾನಾಂ ನಮೋ**

**(ಶ್ರೀನಿವಾಸ ಪಾಡಿಗಾರ್, ೧೯೯೬.೨೬)**

ಈ ಶಾಸನದ ಸಾಲುಗಳು ಕ್ರಿಪೂ. ಎರಡನೆಯ ಶತಮಾನದ್ದು, ಶಾತವಾಹನರ ಒಂದನೆಯ ಶಾತಕರ್ಣಿಯ ರಾಣಿ ನಾಗವಿಕಾ ತನ್ನ ಮಗ ವೇದೀಶ್ರೀಯ ಪ್ರತಿನಿಧಿಯಾಗಿ ಆಳ್ವಿಕೆ ನಡೆಸುತ್ತಿದ್ದ ಕಾಲವದು. ಒಂದನೆಯ ಶಾತಕರ್ಣಿ ಯಜ್ಞಯಾಗಾದಿಗಳನ್ನು ನೇರವೇರಿಸಿದ್ದನ್ನು, ದಾನಾದಿಗಳನ್ನು ನೀಡಿದ್ದನ್ನೂ, ಶಾಸನವು ಚಿತ್ರಿಸಿದೆ. ದಕ್ಷಿಣದಲ್ಲಿ ವೈದಿಕ ಸಂಪ್ರದಾಯ ಹಾಗೂ ಭಾಗವತ ಸೂರ್ಯ-ಚಂದ್ರ, ಯಮ-ವರುಣ-ಕುಬೇರ-ವಾಸವಾದಿಗಳು ಒಟ್ಟಿಗೆ ಸ್ತುತಿಸಲ್ಪಟ್ಟಿದ್ದಾರೆ. ವಾಸುದೇವ-ಸಂಕರ್ಷಣರೂ ದೇವದೇವತೆಗಳ ಸಾಲಿನಲ್ಲಿ ಸೇರಿದ್ದಾರೆಯೇ ವಿನಃ ಬುಡಕಟ್ಟು ಜನಾಂಗದ ವೀರರಲ್ಲ. ದಕ್ಷಿಣದಲ್ಲಿ ಭಾಗವತ ಸಂಪ್ರದಾಯವನ್ನು ನೋಡುವ ಪರಿಯೇ ಬೇರೆ. ಇಲ್ಲಿ ಭಕ್ತಿಯೇ ಅದರ ಶಕ್ತಿ. ತಮಿಳುನಾಡಿನಲ್ಲಿಯೂ ಅಚಲವಾದ ಭಕ್ತಿಯೇ ಪ್ರಧಾನ ಪಾತ್ರ ವಹಿಸಿತು. ಮುಂದೆ ರಾಮಾನುಜರ ಪ್ರಪತ್ತಿ ಎಲ್ಲ ವರ್ಗದ ಜನರನ್ನು ಆಕರ್ಷಿಸಿತು.

ಆಂಧ್ರದ ಗುಂಟೂರು ಜಿಲ್ಲೆಯ ಕೊಂಡುಮೋಟುವಿನ ಶಿಲ್ಪ ಫಲಕದಲ್ಲಿ ಪಾಂಚರಾತ್ರದ ಬೆಳವಣಿಗೆಯನ್ನು ಕಾಣಲು ಸಾಧ್ಯವಿದೆ. ಏಳು ದೇವತೆಗಳುಳ್ಳ ಶಿಲಾಫಲಕದಲ್ಲಿ ಮಧ್ಯದಲ್ಲಿ ಪ್ರಧಾನವಾಗಿ ಆಸೀನ ನರಸಿಂಹ, ಬಲಗಡೆ ಪ್ರದ್ಯುಮ್ನ ಮತ್ತು ದ್ವಿಭುಜ ವಿಷ್ಣು; ಬಲಬದಿಯ ತುದಿಯಲ್ಲಿನ ವಿಗ್ರಹ ತೃಟಿತವಾಗಿದೆ. ಎಡಗಡೆ ವಾಸುದೇವ, ಸಂಕರ್ಷಣ, ಅನಿರುದ್ಧರಿದ್ದಾರೆ. ತೃಟಿತಗೊಂಡ ವಿಗ್ರಹ ಸಾಂಬವಿರಬಹುದೆಂದೂ, ಈ ಶಿಲಾಫಲಕ ಕ್ರಿಶ. ಮೂರು ಅಥವಾ ನಾಲ್ಕನೆಯ ಶತಮಾನದ್ದೆಂದು ವಿದ್ವಾಂಸರು ಅಭಿಪ್ರಾಯ ಮಂಡಿಸಿದ್ದಾರೆ (**ಶ್ರೀನಿವಾಸ ಪಾಡಿಗಾರ್. ೧೯೯೬. ೩೩**) ವೈದಿಕ ಅಥವಾ ಪಾಂಚರಾತ್ರದ ಬೆಳವಣಿಗೆಯ ಕಾಣ್ಕೆಯಾಗಿರಲು ಸಾಧ್ಯ ಎಂದು ನಮ್ಮ ಮತ. ಯಾವುದೇ ಸಂಪ್ರದಾಯ ಸಿದ್ಧಾಂತಗಳು ನೆಲೆಯೂರಲು ಹಲವು ಶತಮಾನಗಳು ಬೇಕು. ಮೊದಲ ಹಂತಗಳನ್ನು ಗುರುತಿಸುವುದು ಕಷ್ಟ. ತಾತ್ತ್ವಿಕವಾಗಿ ರೂಪುಗೊಂಡು, ಗಟ್ಟಿಯಾಗಲು ಕಾಲಾವಕಾಶಬೇಕು. ಇದು ಆಗಮ ಶಾಸ್ತ್ರಗಳಿಗೂ ಅನ್ವಯವಾಗುತ್ತದೆ.

ಕರ್ನಾಟಕದಲ್ಲಿ ಭಾಗವತ ಸಂಪ್ರದಾಯವನ್ನು ಅನುಸರಿಸಿದವರಲ್ಲಿ ಬಾದಾಮಿಯ ಚಾಲುಕ್ಯರೂ ಪ್ರಮುಖರು. ಪರಮ ಭಾಗತವನೆನಿಸಿದ ಮಂಗಲೇಶ ಕ್ರಿಶ. ೫೭೮ರಲ್ಲಿ ಬಾದಾಮಿಯಲ್ಲಿ ಮೂರನೆಯ ಗುಹೆಯನ್ನು ವಿಷ್ಣು ಗೃಹವಾಗಿ ನಿರ್ಮಿಸಿದ. ಇವನ ಪೂರ್ವಜರು ಅಶ್ವಮೇಧಾದಿ ಯಜ್ಞಗಳನ್ನೂ, ಹಿರಣ್ಯದಾನವನ್ನು ಮಾಡಿದವರು. ಇವರು ವೈದಿಕ ಸಂಪ್ರದಾಯದ ಅನುಯಾಯಿಗಳು. ಚಾಲುಕ್ಯವಲ್ಲಭೇಶ್ವರ ಒಂದನೆಯ ಪೊಲೆಕೇಶಿ ಕ್ರಿಶ. ೫೪೩ರಲ್ಲಿ ಬಾದಾಮಿಯ ಕೋಟೆಯನ್ನು ನಿರ್ಮಿಸಿದ. ಚಾಲುಕ್ಯರು ವರಾಹ ಲಾಂಛನರು; ಪರಮಭಾಗವತರೆಂದೂ ಪ್ರಸಿದ್ಧರು, ಇವರ ಗುಹಾರಚನೆಗಳಲ್ಲಿ ವರಾಹಾವತಾರ, ತ್ರಿವಿಕ್ರಮಾವತಾರ, ಪರವಾಸುದೇವ, ನಟೇಶ, ನಂದಿವಾಹನ ಶಿವ ಮೊದಲಾದ ವಿಗ್ರಹಗಳು ಕಡೆಯಲ್ಪಟ್ಟಿವೆ. ಇವರು ವೈದಿಕ ಧರ್ಮವನ್ನು ಆಚರಿಸಿದರೆಂದು ಸ್ಪಷ್ಟವಿದೆ. ಪರಮಭಾಗವತ ಮಂಗಳೇಶನನ್ನು ವಿಷ್ಣು ಆರಾಧಕನೆಂದು ನೆರೂರು ತಾಮ್ರ ಪಟವು ಗುರುತಿಸಿದೆ. ಕ್ರಿಶ. ೬೩೦ರ ಶಾಸನವು ಇಮ್ಮಡಿ ಪೊಲೆಕೇಶಿಯನ್ನು ಪರಮ ಭಾಗವತನೆಂದು ಚಿತ್ರಿಸಿದೆ.

ವರ್ಣಾಶ್ರಮಿಗಳಿಗೆ ಜ್ಞಾನ ಸಂಪಾದನೆಯ ಆರಂಭದಲ್ಲಿ ಉಪನಯನ ವಿಧಿ ಇದ್ದಂತೆ, ವೈದಿಕೇತರ ಧರ್ಮ, ಸಂಪ್ರದಾಯಗಳಲ್ಲಿ 'ದೀಕ್ಷಾವಿಧಿ' ಇದೆ. ಆಗಮ ಮತ್ತು ತಾಂತ್ರಿಕ ಸಂಪ್ರದಾಯಗಳಲ್ಲಿ ಪ್ರವೇಶಕ್ಕೆ ಮುನ್ನ ದೀಕ್ಷಾವಿಧಿ ಕಡ್ಡಾಯ. ದೀಕ್ಷೆ ವೈದಿಕೇತರ ಮೂಲದ್ದು ಎನ್ನುವುದು ಸ್ಪ[illegible] ಬುದ್ಧ ತನ್ನ ಸಂಘಕ್ಕೆ ಸೇರಿಸಿಕೊಳ್ಳುವಾಗ ಜಾತಿ, ವ[illegible]. ಧರ್ಮಗಳನ್ನು ಪ್ರಶ್ನಿಸದೆ ದೀಕ್ಷೆ ನೀಡಿ ಭಿಕ್ಷುಗಳನ್ನಾಗಿ ಪರಿವರ್ತಿಸಿದ. ಬೌದ್ಧಧರ್ಮದ ಜನಪ್ರಿಯತೆಗೆ ಇದೂ ಪ್ರಮುಖ ಕಾರಣವಿರಬಹುದು. ದೀಕ್ಷಾ ವಿಧಿಯನ್ನು ಜಾರಿಗೆ ತಂದವನು ಬಹುಶಃ ಮೊದಲಿಗೆ ಗೌತಮಬುದ್ಧ. ಇದು ಬೌದ್ಧ ಧರ್ಮದ ಕೊಡುಗೆ.

ದೀಕ್ಷಾ ಪದ ವ್ಯುತ್ಪತ್ತಿಯನ್ನು 'ದಾ-ದಾನೇ' ಮತ್ತು 'ಕ್ಷಿ - ಕ್ಷಯೇ' ಎಂಬ ಎರಡು ಧಾತುಗಳೊಂದಿಗೆ ಗುರುತಿಸಲಾಗಿದೆ. ಇಲ್ಲಿ ಕೊಡಲ್ಪಡುವ ದಾನವೇ ಜ್ಞಾನ; ಕ್ಷಯಿಸಲ್ಪಡುವುದು ಅಜ್ಞಾನ. ಶಾಸ್ತ್ರೋಪದಿಷ್ಟ ಪದ್ಧತಿಯಲ್ಲಿ ಸಮರ್ಥವಾದ ಗುರುವಿನಿಂದ, ಯೋಗ್ಯವಾದ ಶಿಷ್ಯನಿಗೆ ಕೊಡಲ್ಪಡುವುದು ಜ್ಞಾನ; ಮಂತ್ರಾರಾಧನ ವಿಧಿಯಿಂದ ಕೊಡಮಾಡಿದ್ದರಿಂದ ಅಜ್ಞಾನವು ನಶಿಸಿ ಜ್ಞಾನಾಂಕುರವಾಗಿ ಸರ್ವತೋಮುಖವಾದ ಬೆಳವಣಿಗೆಗೆ ದೀಕ್ಷೆ ಕಾರಣವಾಗುತ್ತದೆ. (**ಆಚಾರ್ಯ ವ್ರಜವಲ್ಲಭ ದ್ವಿವೇದಿ. ೧೯೯೭. ೩೯**) ಆರಂಭದ ವೈಖಾನಸ ಮತ್ತು ಪಾಂಚರಾತ್ರಗಳಲ್ಲಿ ದೀಕ್ಷೆಯ ಸ್ವರೂಪ ಕೊಂಚ ಭಿನ್ನವಾದುದು. ಇದು ವೈದಿಕ ಮತ್ತು ಆಗಮಗಳ ಸಂಬಂಧ ಸೂಚಿಯೂ ಹೌದು. ಅತಿ ಪ್ರಾಚೀನರೆನಿಸಿದ ವೈಖಾನಸರನ್ನು ಗರ್ಭ ವೈಷ್ಣವರೆಂದು ಗುರುತಿಸುತ್ತಾರೆ. ಇವರಿಗೆ ಪ್ರತ್ಯೇಕ ದೀಕ್ಷಾವಿಧಿ ಅಗತ್ಯವಿಲ್ಲ. ಶಿಶುವು ತಾಯಿಯ ಗರ್ಭದಲ್ಲಿದ್ದಾಗ ನಡೆಸುವ ಸಂಸ್ಕಾರಗಳಲ್ಲೊಂದಾದ ಸೀಮಂತೋನಯನದಲ್ಲಿ (ಗರ್ಭ ಚಕ್ರ ಸಂಸ್ಕಾರ) ವಿಷ್ಣು ಬಲಿಯನ್ನು ಆಚರಿಸಲಾಗುತ್ತದೆ

ಇದರಿಂದ ಗರ್ಭಸ್ಥ ಮಗುವಿನ ದೀಕ್ಷಾ ವಿಧಿ ಪೂರ್ಣವಾದಂತೆ. (ಅದೇ., ಪು. ೧೧-೧೨) ಹುಟ್ಟಿದ ಮಗುವಿಗೆ ಜಾತಕರ್ಮ, ಉಪನಯನ ಇತ್ಯಾದಿ ಸಂಸ್ಕಾರಗಳು ಎಂದಿನಂತೆ ನಡೆಯುತ್ತವೆ. ವೈಖಾನಸವು ವೈದಿಕ ಸಂಪ್ರದಾಯದ ಹಿನ್ನೆಲೆಯುಳ್ಳದ್ದು ಎಂದು ಅವಶ್ಯವಾಗಿ ನೆನೆಯಬೇಕು. ಪಾಂಚರಾತ್ರರಲ್ಲಿ ತಪ್ತ ಮುದ್ರಾಂಕನ ಎಂಬ ವಿಧಿ ಇದೆ. ಉಪನಯನದಲ್ಲಿ ಪಟು ಅಥವಾ ಶಿಷ್ಯನ ಎರಡು ಭುಜಗಳಲ್ಲಿ ಉಪನಯನಾಗ್ನಿಯಿಂದ ವಿಷ್ಣು ಚಿಹ್ನೆಗಳ ಮುದ್ರೆಧಾರಣೆ, ದೀಕ್ಷಾವಿಧಿ ಎಂದೆನಿಸಿದೆ. ಇದು ದೇಹದ ಹೊರಭಾಗದ ಆಚರಣೆಯಾದ್ದರಿಂದ ಬಹಿಸ್ತಾಪವೆಂದೂ, ವೈಖಾನಸರ ಆಚರಣೆಯನ್ನು ಅಂತಸ್ತಾಪ ಎಂದೂ ಹೆಸರಿಸಲಾಗಿದೆ. ಈ ಆಚರಣೆಯಲ್ಲಿ ಸಾಮಾನ್ಯವಾಗಿ ಭಾಗವಹಿಸುವ ಗುರುಗಳು, ಗುರುಪರಂಪರೆಯುಳ್ಳವರು, ಸನ್ಯಾಸಾಶ್ರಮಿಗಳು, ಮಠಾಧಿಪತಿಗಳೂ ಅಥವಾ ಪುರೋಹಿತರು. ದೀಕ್ಷೆಯಿಂದಾಗಿ ಗುರು ಶಿಷ್ಯರ ಸಂಬಂಧ ಮಹತ್ವ ಸ್ಥಾನ ಪಡೆಯಿತು. ಗುರುವಿನ ಸ್ಥಾನ, ಜವಾಬ್ದಾರಿಯೂ ಹೆಚ್ಚಾಯಿತು. ದೀಕ್ಷೆಯನ್ನು ಪಡೆದವರು ದೀಕ್ಷಿತ. ದೀಕ್ಷಿತರಲ್ಲಿ ಸಮಯಿ, ಪುತ್ರಕ, ಸಾಧಕ, ಆಚಾರ್ಯ ಎಂಬ ಭೇದಗಳಿವೆ. ಶೈವ, ಶಾಕ್ತರಲ್ಲಿಯೂ ಈ ರೀತಿ ಭೇದಗಳಿವೆ. ಇವರಲ್ಲಿ ಆಚಾರ್ಯನಿಗೆ ಮಾತ್ರ ದೀಕ್ಷೆ ನೀಡುವ ಅರ್ಹತೆಯುಂಟು.

ಮಹಾಭಾರತ ಕಾವ್ಯದ ಕಾಲವನ್ನು ಕ್ರಿಪೂ. ನಾಲ್ಕನೆಯ ಶತಮಾನದಿಂದ ಕ್ರಿ.ಶ. ನಾಲ್ಕನೆಯ ಶತಮಾನದವರೆಗೆ ವಿದ್ವಾಂಸರು ಗುರುತಿಸುತ್ತಾರೆ. ಈ ಅವಧಿಯೊಳಗಿನ ಹಲವಾರು ಘಟಾನಾವಳಿಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡಿರುವುದರಿಂದ ಮಹಾಭಾರತಕಾವ್ಯದಲ್ಲಿ ಬೃಹತ್ತಾದ ಚಿತ್ರಣ ದೊರೆಯುತ್ತದೆ. ಕಲಿಯುಗದ ಆರಂಭದ ಸಮಾಜದ ಹಿಂದು ಮುಂದಿನ ಚಿತ್ರಣ ಎನ್ನಲು ಅಡ್ಡಿ ಇಲ್ಲ. ಇವುಗಳಲ್ಲಿ ಐತಿಹಾಸಿಕ, ಧಾರ್ಮಿಕ, ಸಮಾಜಿಕ ಎಳೆಗಳ ಸೂಕ್ಷ್ಮಗಳನ್ನು ನಿಧಾನವಾಗಿ ಬಿಡಿಸಿಕೊಳ್ಳಬೇಕು. ಪಾಂಚರಾತ್ರ, ಪಾಶುಪತಗಳ ಉಲ್ಲೇಖ ಇಲ್ಲಿದೆ. ಆಗಮ ಪರಂಪರೆಯ ಮೂಲವನ್ನು ಇಲ್ಲಿಂದಲೇ ಆರಂಭಿಸಬೇಕು. ಪಾಂಚರಾತ್ರದ ಆರಂಭಿಕ ನಡೆ ಇಂತಿದೆ. (ಪಂಡಿತ ಕೃಷ್ಣಮಾಚಾರ್ಯ ಎ. ೨೦೦೦. ೭)

ಇದಂ ಮಹೋಪನಿಷದಂ ಚತುರ್ವೇದ ಸಮನ್ವಿತಂ
ಸಾಂಖ್ಯ ಯೋಗ ಕೃತಾಂತೇನ ಪಾಂಚರಾತ್ರಾನು ಶಬ್ದಿತಂ
ವೇದಾಂತೇಷು ಯಥಾಸಾರಂ ಸಂಗೃಹ್ಯ ಭಗವಾನ್ ಹರಿಃ
ಭಕ್ತ್ಯಾನುಕಂಪಯಾ ವಿದ್ವಾನ್ ಸಂಚಿಕ್ಷೇಪ ಯಥಾಸುಖಂ

(ಮಹಾಭಾರತ: ಶಾಂತಿಪರ್ವ: ಅ: ೩೪೮ ಶ್ಲೋ: ೬೩-೬೪)

ಇದು ಪಾಂಚರಾತ್ರಕ್ಕೆ ಸಂಬಂಧಿಸಿದ ಮೊದಲ ವಿವರಣೆ. ಉಪನಿಷತ್ತು ಎಂದು ಆರಂಭದಲ್ಲಿ ಗುರುತಿಸಲಾಗಿದೆ. ಈ ವಿವರಣೆಯ ಪ್ರಕಾರ ಪಾಂಚರಾತ್ರವು ಉಪನಿಷತ್ತು ಮತ್ತು ನಾಲ್ಕು ವೇದಗಳ ಸಾರ. ಸಾಂಖ್ಯ ಮತ್ತು ಯೋಗಗಳನ್ನು ಒಳಗೊಂಡಂತೆ ದೊಡ್ಡ ಮೊತ್ತವೆನಿಸಿದೆ. ಭಕ್ತರಿಗಾಗಿ ಅನುಕಂಪದಿಂದ ಸಂಗ್ರಹಿಸಿದ್ದರಿಂದ ಭಗವದಾರಾಧನೆಗೂ ಸ್ಥಾನವುಂಟು. ಆರಂಭದಲ್ಲಿ ಆಗಮಗಳು ವೈದಿಕ ಪರಂಪರೆಯಿಂದ ಸಂಪೂರ್ಣವಾಗಿ ಕಳಚಿಕೊಂಡು ಹೊರಬರಲಾಗಲಿಲ್ಲ ಎನ್ನುವುದು ಸತ್ಯ. ವೈಖಾನಸವು ವೈದಿಕ ಪರಂಪರೆಯ ಮುಂದುವರಿಕೆಯಾಗಿ ಕೊಂಚ ಭಿನ್ನವಾಗಿ ಮೂಡಿದ್ದೆಂದು ಗಮನಿಸಿದ್ದೇವೆ. 'ಆಗಮ' ಸ್ವರೂಪವನ್ನು ಪಡೆಯುವಾಗ ಯಜ್ಞಯಾಗಾದಿಗಳ ಸ್ಥಾನ ಗೌಣವೆನಿಸಿ, ವಿಗ್ರಹಾರಾಧನೆಯನ್ನು ಬೆಂಬಲಿಸಿತು. ಅಗ್ನಿಯ ಸ್ಥಾನದಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಯಿತು. "ವಿತಾನಾಗ್ನಿನಿಭಂ ವಿಷ್ಣೋರ್ಬಿಂಬಂ" ಎಂಬ ಉಲ್ಲೇಖ ಈ ಬದಲಾವಣೆಯನ್ನು ಪುಷ್ಟೀಕರಿಸುತ್ತದೆ. (ಗಣಪತೀಶಾಸ್ತ್ರಿ. ೧೯೯೧. ೧೯೮) ವಿಷ್ಣು ಪರಮ ಪುರುಷನೆನಿಸಿದ. ಇದಕ್ಕೊಂದು ತಾತ್ತ್ವಿಕ ಹಾದಿ ಸಿದ್ಧವಾಯಿತು. ನಿರೀಶ್ವರ ಸಾಂಖ್ಯ, ಸೇಶ್ವರ ಸಾಂಖ್ಯ, ನಿರಾಕಾರ, ಸಾಕಾರ, ವ್ಯೂಹಾವತಾರ, ಚತುರ್ವಿಂಶತಿ ಮೂರ್ತಿಗಳು ಹೀಗೆ ಹಾದಿ ಸುಗಮವೆನಿಸಿತು. ಇವೆಲ್ಲದರ ಉದ್ದೇಶ ಒಂದೇ. ಕೈವಲ್ಯಕ್ಕೆ ದಾರಿ.

ಪಾಂಚರಾತ್ರವು ಮಹಾಭಾರತ ಕಾವ್ಯದಲ್ಲಿ ಉಲ್ಲೇಖಗೊಳ್ಳುವ ವೇಳೆಗೆ ಆಗಲೇ ಸ್ಪಷ್ಟರೂಪ ಪಡೆದಿತ್ತು. ತಾತ್ತ್ವಿಕ ಸ್ವರೂಪವೂ ಖಚಿತಗೊಂಡಿತ್ತು.

ಸುಸೂಕ್ಷ್ಮಂ ಸತ್ತ್ವ ಸಂಯುಕ್ತಂ ತ್ರಿಭಿರಕ್ಷರೈಃ
ಪುರುಷಃ ಪುರುಷಂ ಗಚ್ಛೇನ್ ನಿಷ್ಕ್ರಿಯಃ ಪಂಚವಿಂಶಕಃ
ಏವಮೇಕಂ ಸಾಂಖ್ಯಯೋಗಂ ವೇದಾರಣ್ಯಕಮೇವ ಚ
ಪರಸ್ಪರ ಅಂಗಾನ್ಯೇತಾನಿ ಪಾಂಚರಾತ್ರಂ ಕಥ್ಯತೇ

(ರಂಗಸ್ವಾಮೀ ಎಚ್.ಎನ್. ೧೯೯೦. ೩೩೪೪-೪೫)

ಆರಂಭದ ಸಾಂಖ್ಯ ಅಥವಾ ಪಾಂಚರಾತ್ರವು ಒಳಗೊಂಡ ಸಾಂಖ್ಯದ ಸ್ವರೂಪವನ್ನು ಗುರುತಿಸುವುದು ಕಷ್ಟ. ಇಲ್ಲಿ ಇಬ್ಬರು ಪುರುಷರಿದ್ದಾರೆ. ಸಾತ್ವಿಕ ಸ್ವರೂಪದ ಪುರುಷ ಹಾಗೂ ಇಪ್ಪತ್ತೈದನೆಯ ತತ್ತ್ವವೆನಿಸಿದ ಪುರುಷ. ಪ್ರಕೃತಿಯ ಮೂರು ಗುಣಗಳಿಂದ ಆವರಿಸಿದ ಇಪ್ಪತ್ತ ನಾಲ್ಕು ತತ್ತ್ವಗಳ ಪುರುಷ: ಇವನು ಪುರುಷದೇಹಿ, ಸಾತ್ವಿಕ ಪುರುಷ. ಸತ್ವವೇ ಪ್ರಧಾನವಾಗಿ ಉಳ್ಳವನು. ಈ ಪುರುಷನು ನಿಷ್ಕ್ರಿಯನಾದ ಇಪ್ಪತ್ತೈದನೆಯ ತತ್ತ್ವವೆನಿಸಿದ ಅಕ್ಷರ ಪುರುಷನೆಡೆಗೆ ಸಾಗುತ್ತಾನೆ. ಮೇಲ್ಕಂಡ ಶ್ಲೋಕವು ಇದನ್ನು ಸಾಂಖ್ಯಯೋಗವೆನ್ನುತ್ತದೆ. ಇದು ಸಾಂಖ್ಯವು ವಿವರಿಸುವ ಪ್ರಕೃತಿ, ಪುರುಷರ ಸಂಬಂಧದ ಸಾಂಖ್ಯವೋ ಅಥವಾ ಯೋಗವೋ ಖಚಿತವಾಗದು. ವೇದಾರಣ್ಯಕದ (ಉಪನಿಷತ್!) ಅರ್ಥವೂ ಸಂದಿಗ್ಧ. ಪಾಂಚರಾತ್ರವು ಇವೆಲ್ಲವನ್ನೂ ಒಳಗೊಳ್ಳುತ್ತದೆ ಎನ್ನುವುದು ಸ್ಪಷ್ಟ.

ಪಾಂಚರಾತ್ರರಲ್ಲಿ ಪುರುಷನೆಂದರೆ ವಾಸುದೇವ. ಇವನು ಸಹಸ್ರ ಶೀರ್ಷಾ ಪುರುಷನಿಂದ ಇಳಿದು ಬಂದವನು. ಷಡ್ಗುಣಗಳಿಂದ ಕೂಡಿರುವವನು. ಷಡ್ಗುಣಗಳ ವೈಷಮ್ಯದಿಂದ

ಚತುರ್ವ್ಯೂಹ ರೂಪಗಳು, ಚತುರ್ವ್ಯೂಹಗಳಿಂದ ಚತುರ್ವಿಂಶತಿ ಮೂರ್ತಿಗಳು. ಇದು ಸಾಕಾರ ರೂಪೀ ಭಗವಂತ ಅರ್ಚನೆಗೆ ಅಣಿಯಾಗಿ ಇಳಿದು ಬಂದ ಹಾದಿ. ಪಾಂಚರಾತ್ರವು ತಾತ್ತ್ವಿಕವಾಗಿ ರೂಪುಗೊಳ್ಳಲು ಈ ಅಂಶಗಳು ಸಹಕಾರಿಯಾಗಿವೆ.

ಪಾಂಚರಾತ್ರ ಮತ್ತು ಪಾಶುಪತದ ಉಲ್ಲೇಖ ಮಹಾಭಾರತ ಕಾವ್ಯದಲ್ಲಿ ಒಟ್ಟಿಗೆ ಬಂದಿದೆ. ಪಾಶುಪತಕ್ಕೆ ಸಂಬಂಧಿಸಿದ ಕೌಂಡಿನ್ಯಭಾಷ್ಯವನ್ನೊಳಗೊಂಡ ಪಾಶುಪತ ಸೂತ್ರಗಳು ರತ್ನಟೀಕಾ ಎಂಬ ವ್ಯಾಖ್ಯಾನವುಳ್ಳ ಗಣಕಾರಿಕಾ ಎಂಬ ಗ್ರಂಥವೂ ಲಭ್ಯವೆಂದು ವಿದ್ವಾಂಸರು ತಿಳಿಸಿದ್ದಾರೆ (ಚಿದಾನಂದ ಮೂರ್ತಿ ಎಂ. ೧೯೬೬. ೧೪೬) ಪಾಶುಪತವು ತತ್ತ್ವ ಪ್ರಧಾನ ಎನ್ನುವುದಕ್ಕಿಂತ ಆಚರಣೆಗಳನ್ನು ಹೆಚ್ಚು ಅವಲಂಬಿಸಿದೆ ಎನ್ನಬಹುದು. ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ರಚನೆಗೊಂಡ ಸಾಯಣ – ಮಾಧವಾಚಾರ್ಯರ ಸರ್ವದರ್ಶನ ಸಂಗ್ರಹದಲ್ಲಿ 'ಲಾಕುಲೀಶ ಪಾಶುಪತ ದರ್ಶನ'ದ ಪ್ರತ್ಯೇಕ ಅಧ್ಯಾಯವಿದೆ. ಈ ವಿವರಗಳಿಗೆ ಪಾಶುಪತ ಸೂತ್ರಗಳೇ ಆಧಾರ ಎಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಪ್ರಾಚೀನ ಎನ್ನುವ ಪಾಶುಪತ ಸೂತ್ರಗಳ ಕಾಲ ಕ್ರಿ.ಶ. ಒಂದನೆಯ ಶತಮಾನವೆಂದು ಗುರುತಿಸಲಾಗಿದ್ದರೂ ನಿಶ್ಚಿತವಲ್ಲ.

ಪಾಣಿನೀಯ ಭಾಷ್ಯಗಳನ್ನು ರಚಿಸಿದವರಲ್ಲಿ ಪತಂಜಲಿಯೂ ಒಬ್ಬನು. ಇವನ ಕಾಲ ನಿಶ್ಚಿತವಲ್ಲ. ಇವನ ಭಾಷ್ಯದಲ್ಲಿ ಶಿವಭಾಗವತರ ಉಲ್ಲೇಖವಿದೆಯೆಂದು ವಿದ್ವಾಂಸ ಲೊರೆಂಜೆನ್ ಪ್ರಸ್ತಾಪಿಸಿದ್ದಾರೆ. **(ಡೇವಿಡ್ ಎನ್. ಲೊರೆಂಜೆನ್. ೨೦೦೫. ೨೩೦)** ಶಿವಭಾಗವತರ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ. ಕ್ರಿಪೂ. ಎರಡನೆಯ ಶತಮಾನದ್ದೆಂದು ತಿಳಿಯಲಾದ ಗುಡಿಮಲ್ಲಂನಲ್ಲಿರುವ ಲಿಂಗ ಸ್ವರೂಪ ಶಿವನ ಪ್ರಾತಿನಿಧ್ಯವೆನ್ನುತ್ತಾರೆ. ಇದು ಪುರುಷನನ್ನು ಮೆಟ್ಟಿ ನಿಂತ ಕಿರಾತನ ರೂಪ ಅಥವಾ ಯಕ್ಷರೂಪಿ ಕುಬೇರ ಶಿಲ್ಪವೂ ಆಗಿರಲು ಸಾಧ್ಯ. ಈ ಪ್ರತಿಮೆಯಲ್ಲಿ ಜಾನಪದೀಯ ಲಕ್ಷಣಗಳೂ ಇವೆ ಎನ್ನಬಹುದು. ಇದಕ್ಕಿಂತ ಪ್ರಾಚೀನ ಎಂದಲ್ಲಿ ಸಿಂಧೂ ಸಂಸ್ಕೃತಿಯಲ್ಲಿ ಗುರುತಿಸಲಾದ ಪಶುಪತಿಯ ಮುದ್ರೆ. ಸಿಂಧೂ ಲಿಪಿಯನ್ನು ಖಚಿತವಾಗಿ ಓದಿ ಅರ್ಥೈಸುವವರೆಗೆ ಇದರ ಅರ್ಥವೂ ಸಂದಿಗ್ಧ. ಭಾಗವತ ಮತ್ತು ಪಾಶುಪತ ಸಂಪ್ರದಾಯಗಳನ್ನು ಜಾನಪದ ಮೂಲದ್ದೆಂದು ಈ ಹಿಂದೆ ಗುರುತಿಸಲಾಗಿದೆ. ಭಾಗವತ ಸಂಪ್ರದಾಯದಲ್ಲಿ ವಾಸುದೇವ ಕೃಷ್ಣ ಗೋವಳನಾದರೆ, ಪಾಶುಪತ ಸಂಪ್ರದಾಯದಲ್ಲಿ ಶಿವ ಪಶುಗಳ ಒಡೆಯ. ಜಾನಪದ ಮೂಲದ ವಿಶ್ಲೇಷಣೆ ತುಸು ಕಷ್ಟ. ಇದಮಿತ್ಥಂ ಎಂದು ಹೇಳಲಾಗದು. ಪಾಶುಪತ ಮತ್ತು ಪಾಂಚರಾತ್ರ ಸಂಪ್ರದಾಯಗಳು ಈ ನೆಲದಲ್ಲಿ ಪ್ರಕಟಗೊಂಡ ಕಾಲದ ಒಂದೆರಡು ಶತಮಾನಗಳ ಧಾರ್ಮಿಕ ವಾತಾವರಣ, ಹಿನ್ನೆಲೆ, ತದನಂತರದ ಬೆಳವಣಿಗೆಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಇದು ಬೌದ್ಧಮತದ ಬೆಳವಣಿಗೆಯೇ ಆಗಿದೆ.

ಬುದ್ಧ ತನ್ನ ಜೀವಿತಾವಧಿಯಲ್ಲಿ ತತ್ತ್ವಗಳಿಗೆ ಅಷ್ಟಾಗಿ ಗಮನ ಕೊಡದೆ ತನ್ನ ಉಪದೇಶಗಳ ಅನುಷ್ಠಾನಕ್ಕೆ ಹೆಚ್ಚು ಮಹತ್ವ ನೀಡಿದ. ಬುದ್ಧನ ಚಿಂತನೆ ಹಾಗೂ ಉಪದೇಶಗಳು ನೇರವಾದದ್ದು. ಆತ ನಿರಾಶಾವಾದಿ; ಎಲ್ಲವೂ ದುಃಖಮಯ ಎಂದು ಉಪದೇಶಿಸಿದ. ನಂತರ ವಾಸ್ತವತೆಯ ಅರಿವು ಮೂಡಿಸಿದ. ತತ್ತ್ವಗಳ ಅತಿಯಾದ ಚರ್ಚೆ ಗೋಜಲು ಗೋಜಲಾಗಿ ಅವ್ಯವಸ್ಥೆಗೆ ಕಾರಣವಾಗಿತ್ತು. ಆದ್ದರಿಂದ ಬದುಕಿನ ಕಟು ಸತ್ಯಗಳನ್ನು ಎದುರಿಸಲು ನೇರವಾಗಿ ಪ್ರಯತ್ನಿಸಿದ. ಕೇವಲ ವ್ಯವಹಾರ ದೃಷ್ಟಿಗೆ ಮನ್ನಣೆ ನೀಡಿದ. ಬುದ್ಧ ಬದುಕಿಗೆ ಅಗತ್ಯವಾದುದ್ದನ್ನು ಮಾತ್ರ ಬೋಧಿಸಿದ. **(ಹಿರಿಯಣ್ಣ ಎಂ. ೨೦೦೪. ೧೩೩-೧೩೪)** ಬುದ್ಧನ ತರುವಾಯ ಅವನ ಶಿಷ್ಯರು ಅವನ ಉಪದೇಶಗಳ ಸಂಗ್ರಹಕ್ಕಾಗಿ ಶ್ರಮಿಸಿದರು.

ಬೌದ್ಧ ಧರ್ಮದ ವಿವಿಧ ದೃಷ್ಟಿಗಳನ್ನು ಸ್ಥೂಲವಾಗಿ ಎರಡು ಹಂತಗಳಲ್ಲಿ ವಿಭಾಗಿಸಲಾಗಿದೆ. ಒಂದು ಹೀನಯಾನ ಮತ್ತೊಂದು ಮಹಾಯಾನ. ಅವುಗಳ ತಾತ್ತ್ವಿಕ ವಿಚಾರದಲ್ಲಿ ಹಲವು ವ್ಯತ್ಯಾಸಗಳಿವೆ. ಕಾಲಮಾನದಲ್ಲಿಯೂ ವ್ಯತ್ಯಾಸವಿದೆ. ಪ್ರತಿ ವ್ಯಕ್ತಿಯೂ ಸಂಸಾರ, ಬಂಧನದಿಂದ ಬಿಡುಗಡೆ ಹೊಂದಲು ಅಗತ್ಯ ಸಾಧನಗಳನ್ನು ಸೂಚಿಸಿ ಹೀನಯಾನ ಸುಮ್ಮನಾಗುತ್ತದೆ. ಮಹಾಯಾನವು ಈ ರೀತಿ ಜಾಗೃತನಾದ ವ್ಯಕ್ತಿಯು ವಿಶ್ರಾಂತನಾಗದೆ ಜಗತ್ತಿನ ಯೋಗಕ್ಷೇಮಕ್ಕೆ ಶ್ರಮಿಸಲು ಸೂಚಿಸುತ್ತದೆ. **(ಅದೇ. ಪು. ೧೯೫-೧೯೬)** ಬೌದ್ಧ ಧರ್ಮದ ವಿಪುಲ ಸಾಹಿತ್ಯ ಕ್ರಿ.ಶ. ಒಂದು – ಎರಡನೆಯ ಶತಮಾನದಲ್ಲಿ ರಚಿತವಾಗಿದೆ. ಈ ಅವಧಿಯಲ್ಲಿ ಹಲವು ಶಾಖೆಗಳು ಬೆಳಕಿಗೆ ಬಂದವು. ಪ್ರಮುಖ ಶಾಖೆಗಳಾದ ಸೌಂತ್ರಾತಿಕ, ಮಾಧ್ಯಮಿಕ, ವೈಭಾಷಿಕ, ಯೋಗಾಚಾರ ಮೊದಲಾದವು ತಾತ್ತ್ವಿಕವಾಗಿ ಅಮೂಲಕ ಕಾಣಿಕೆಗಳನ್ನು ನೀಡಿವೆ. **(ಹಿರಿಯಣ್ಣ ಎಂ. ೨೦೦೪. ೧೯೫-೧೯೭)** ಇವುಗಳಿಗೆ ರಾಜಾಶ್ರಯವೂ ಲಭ್ಯವಿತ್ತು. ಕ್ರಿ.ಶ. ಮೂರು – ನಾಲ್ಕನೆಯ ಶತಮಾನಗಳಲ್ಲಿ ಪ್ರಾಬಲ್ಯದಿಂದ ಮೆರೆದವು. ಈ ಅವಧಿಯಲ್ಲಿ ಹಿಂದೂ ಧರ್ಮದ ಶಾಖೆಗಳೂ ಪ್ರತಿರೋಧವನ್ನು ಎದುರಿಸಿದವು.

ಹೀನಯಾನ ಪಂಥದವರ ದೃಷ್ಟಿಯಲ್ಲಿ ದೇವರಿಗೆ ಯಾವ ಸ್ಥಾನವೂ ಇಲ್ಲ. ಬುದ್ಧನನ್ನು ಒಬ್ಬ ಪರಿಪೂರ್ಣ ಮಾನವನಾಗಿ ಅವರು ಭಾವಿಸಿದ್ದರು. ಆದರೆ ಮಹಾಯಾನ ಪಂಥದವರು ಬುದ್ಧನನ್ನು ದೇವರು ಎಂದು ಪರಿಗಣಿಸಿದರು. ಸಕಲ ದೇವ ದೇವತೆಗಳ ಆಲಯವನ್ನು ಒಳಗೊಂಡ ವಿಸ್ತೃತ ಭೌತಾತೀತ ಜ್ಞಾನವಾಗಿ ಮಹಾಯಾನ ಪಂಥವನ್ನು ಮಾರ್ಪಡಿಸಿದರು. ದುಷ್ಕರವಾದ ನೈತಿಕ ಜೀವನ ನಡೆಸುವುದಕ್ಕಿಂತ ಹೆಚ್ಚಾಗಿ ಬುದ್ಧನಲ್ಲಿ ಭಕ್ತಿ ಭಾವನೆ, ಬುದ್ಧ ವಿಗ್ರಹ ಪೂಜೆಯನ್ನು ಬೆಳಕಿಗೆ ತಂದರು. ಇದು ಅವರಿಗೆ ಅನಿವಾರ್ಯವೆನಿಸಿತು. ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವುದು ಬೌದ್ಧ ಧರ್ಮದ ಲಕ್ಷಣವೆನಿಸಿತು. ಮಹಾಯಾನದ ಕೆಲವು ತಾಂತ್ರಿಕ ಪಂಥಗಳು ಧರ್ಮದ ಹೆಸರಿನಲ್ಲಿ ವೇಷ ಹಾಕಿಕೊಂಡು ಶಿಥಿಲ ನೀತಿಯ

ಆಚರಣೆಗಳನ್ನು ಅನುಸರಿಸಿದವು. ಇದರಿಂದ ರಾಜಾಶ್ರಯವೂ ತಪ್ಪಿತು. ಬೌದ್ಧ ಧರ್ಮ ಈ ನೆಲದಲ್ಲಿ ಅವನತಿ ಎಡೆಗೆ ಸಾಗಿತು.

ಬುದ್ಧನನ್ನು ದೇವರೆಂದು ಪರಿಗಣಿಸಿದ್ದು ಹಿಂದೂ ಧರ್ಮದವರಿಗೆ ಅನುಕೂಲವಾಯಿತು. ಪುರಾಣಗಳ ಕಾಲದಲ್ಲಿ ಹಿಂದೂ ಧರ್ಮದ ವಿಭಿನ್ನ ಪಂಥಗಳ ಸಾಮರಸ್ಯಕ್ಕೆ ಹೆಚ್ಚು ಗಮನಹರಿಸಿದ್ದು ಶಿವ-ವಿಷ್ಣುವಿನಲ್ಲಿ ಭೇದವೆನಿಸದೆ ಅನನ್ಯತೆಯನ್ನು ಸ್ಥಾಪಿಸುವ ಪ್ರಯತ್ನಗಳು ನಡೆಯುತ್ತಿದ್ದವು. ಇದರ ಫಲವೇ ಹರಿಹರ, ಶಂಕರನಾರಾಯಣ, ಅರ್ಧನಾರೀಶ್ವರ, ತ್ರಿಮೂರ್ತಿಗಳ ಸ್ವರೂಪಕ್ಕೆ ನಾಂದಿಯಾಯಿತು. ಈ ಸಂದರ್ಭದಲ್ಲಿ ಬುದ್ಧನೂ ವಿಷ್ಣುವಿನ ದಶಾವತಾರಗಳಲ್ಲಿ ಪ್ರವೇಶ ಪಡೆದು ಹಿಂದೂ ಧರ್ಮದಲ್ಲಿ ಪಾಲ್ಗೊಂಡ.

ಗುಜರಾತಿನ ಬರೋಡಾ ಸಮೀಪದಲ್ಲಿರುವ "ಕಾರವಾಣ" (ಕಾಯಾವರೋಹಾಣ) ದಿಂದ ಪಾಶುಪತದ ಹಾದಿಯನ್ನು ವಿದ್ವಾಂಸರು ಗುರುತಿಸುತ್ತಾರೆ. ಚರಿತ್ರೆಯುದ್ದಕ್ಕೂ ಶೈವ ಸಂಪ್ರದಾಯ ಅನುಯಾಯಿಗಳನ್ನು "ಮಾಹೇಶ್ವರ"ರೆಂದೇ ಹೆಸರಿಸಲಾಗುತ್ತಿದೆ. ಪಾಶುಪತ ಸೂತ್ರಗಳ ಕಾಲ ಸುಮಾರು ಕ್ರಿ.ಶ. ಎರಡನೆಯ ಶತಮಾನವೆನ್ನಲಾಗಿದೆ. ಪಾಶುಪತವು ಕಾಶ್ಮೀರದಿಂದ ಅಡಿ ಇರಿಸಿದ್ದೆಂದು ನಂತರ ದಕ್ಷಿಣದಲ್ಲಿ ಪಸರಿಸಿದೆ ಎಂದು ಅಭಿಪ್ರಾಯಗಳಿವೆ. ವಿದ್ವಾಂಸಲೊರೆಂಜೆನ್ ಪಾಶುಪತರ ಬಗ್ಗೆ ತಮ್ಮ ಗ್ರಂಥದಲ್ಲಿ ಸುದೀರ್ಘವಾಗಿ ಚರ್ಚೆ ನಡೆಸಿದ್ದಾರೆ. **(ಡೆವಿಡ್ ಎನ್. ಲೊರೆಂಜೆನ್. ೨೦೦೫. ೨೩೩)** ಕರ್ನಾಟಕದಲ್ಲಿ ಕದಂಬರ ಕಾಲದಿಂದ ಮಾಹೇಶ್ವರರ ಪ್ರಸ್ತಾಪವಿದೆ. ಕ್ರಿ.ಶ. ೫೪೫ ರ ಸಂಗೊಳ್ಳಿಯ ತಾಮ್ರ ಪಟದಲ್ಲಿ ಕದಂಬರ ಹರಿವರ್ಮನು ಪರಮ ಮಾಹೇಶ್ವರವೆಂದು ಉಲ್ಲೇಖಿಸಲ್ಪಡುತ್ತಾನೆ. **(ಶ್ರೀನಿವಾಸ ಪಾಡಿಗಾರ್. ೧೯೯೬.೪೫)** ಬಾದಾಮಿ ಚಾಲುಕ್ಯರ ದೊರೆ ಒಂದನೆಯ ವಿಕ್ರಮಾದಿತ್ಯ ಕ್ರಿ.ಶ. ೬೬೦ರ ವೇಳೆಗೆ ಪರಮ ಮಾಹೇಶ್ವರನೆಂದು ಗುರುತಿಸಲ್ಪಟ್ಟಿದ್ದ. ಈತ ತನ್ನ ಆಳ್ವಿಕೆಯ ಐದನೆಯ ವರ್ಷದಲ್ಲಿ ಸುದರ್ಶನಾಚಾರ್ಯದಿಂದ ದೀಕ್ಷೆ ಪಡೆದ. ಬಾದಾಮಿ ಚಾಲುಕ್ಯರ ಕಾಲದ ಪಟ್ಟದ ಕಲ್ಲು, ಮಹಾಕೂಟ ದೇವಾಲಯಗಳಲ್ಲಿ ಲಾಕುಲೀಶನ ಶಿಲ್ಪಗಳು ಲಭ್ಯ. ಆಗಮ ಸಂಪ್ರದಾಯಗಳ ಖಚಿತವಾದ ಗುರುತಿಸುವಿಕೆ ಆರಂಭವಾಗುವುದು ಕ್ರಿ.ಶ. ಏಳನೆಯ ಶತಮಾನದ ಅಂತ್ಯದಿಂದ. ಚಿಕ್ಕಮಗಳೂರು ಜಿಲ್ಲೆ ಕಿಗ್ಗದ ಕ್ರಿ.ಶ. ೭೦೦ರ ಶಾಸನವು ಪಾಶುಪತವನ್ನು ಹೆಸರಿಸಿದೆ **(ಚಿದಾನಂದಮೂರ್ತಿ ಎಂ. ೧೯೬೬.೧೨೪)** ಶಿವ-ವಿಷ್ಣುವಿನ ದೇವಾಲಯಗಳು ಕ್ರಿಸ್ತಶಕದ ಆರಂಭದಿಂದ ದೊರೆತರೂ, ತ್ರಿಮೂರ್ತಿಗಳ ದೇವಾಲಯಗಳು ಕಾಣಿಸತೊಡಗಿದ್ದು ಏಳನೆಯ ಶತಮಾನದಿಂದ. ಇಲ್ಲಿಂದ ಆಗಮಗಳ ಬೆಳವಣಿಗೆಯನ್ನು ಗುರುತಿಸಲು ಸಾಧ್ಯ. ಈ ಹಿಂದಿನ ದೇವಾಲಯಗಳಿಗೆ ಹಾಗೂ ಪ್ರತಿಮಾಲಕ್ಷಣಗಳಿಗೆ ಯಾವ ಗ್ರಂಥವನ್ನೂ ಬೆಟ್ಟು ಮಾಡಿ ತೋರಿಸಲು ಸಾಧ್ಯವಾಗದು. ಆಗಮಗಳ ಸಾಮಾನ್ಯ ವಿವರಣೆಯಲ್ಲಿ "ಆಗತಂ ಶಿವವಕ್ತ್ರೇಭ್ಯೋ ಗತಂ ತು ಗಿರಿಜಾನನೇ" ಎಂಬ ಶ್ಲೋಕ ಪದೇಪದೇ ಉಚ್ಚರಿಸಲಾಗಿದೆ. ಇದು ಕೇವಲ ಶೈವಾಗಮಗಳ ವ್ಯಾಪ್ತಿಯುಳ್ಳದ್ದು. ಶೈವಾಗಮಗಳು ಬೆಳೆಯತೊಡಗಿದಾಗ ಈ ರೀತಿಯ ವಿವರಣೆಗಳು ಅನಿವಾರ್ಯವಾಗಿ ಮೂಡಿಬಂದವು. ಆರಂಭದ ಆಗಮ ಗ್ರಂಥಗಳಲ್ಲಿ ಪೂರ್ವ ಮತ್ತು ಉತ್ತರಭಾಗಗಳನ್ನೊಳಗೊಂಡಿವೆ. ಅವುಗಳಲ್ಲಿ ಹಲವಾರು ಅಧ್ಯಾಯಗಳಿವೆ. ಆಗಮಗಳ ಬೆಳವಣಿಗೆಯಲ್ಲಿ ಸಾಂಖ್ಯ ಮತ್ತು ಯೋಗದ ಪಾತ್ರ ದೊಡ್ಡದು, ಇವೆರಡನ್ನೂ ನಿರೀಶ್ವರ ಸಾಂಖ್ಯ, ಸೇಶ್ವರ ಸಾಂಖ್ಯ ಎನ್ನಲಾಗಿದೆ. ಸಾಕಾರ ರೂಪಿ ಭಗವಂತನನ್ನು ಅರ್ಥಮಾಡಿಕೊಳ್ಳುವ ಮುಂಚೆ ಎವರೆಡೂ ದರ್ಶನಗಳ ಸ್ವರೂಪವನ್ನು ತಿಳಿಯಬೇಕು. ಶೈವಾಗಮಗಳು ತಾತ್ತ್ವಿಕವಾಗಿ ಬೆಳೆಯುವ ಮುನ್ನ ಆಚರಣೆಗೆ ಹೆಚ್ಚು ಗಮನ ನೀಡಿವೆ. ಇಲ್ಲಿ ಜಾನಪದ ಪ್ರಭಾವವೂ ಇರಲು ಸಾಧ್ಯ. ಸರ್ವದರ್ಶನ ಸಂಗ್ರಹದಲ್ಲಿ ಶೈವದರ್ಶನದ ಭಾಗದಲ್ಲಿ ತಂತ್ರದ ವಿವರಣೆ ಇದ್ದು "ತ್ರಿಪದಾರ್ಥಂ ಚತುಷ್ಪಾದಂ ಮಹಾತಂತ್ರ ಜಗದ್ಗುರು:" ಎಂಬ ವಿವರವಿದೆ. **(ಪಂಡಿತ ಉದಯ ನರೇನ್‌ಸಿಂಹ, ೨೦೦೬, ೧೫೪)**.

ಚತುಷ್ಪಾದಗಳ ಚೌಕಟ್ಟು ಶೈವಾಗಮಗಳಿಗೇ ಮೀಸಲು. ತದನಂತರ ಕಾಲದಲ್ಲಿ ಬಂದ ಕೆಲವು ವೈಷ್ಣವಾಗಮಗಳು ಅಂಗೀಕರಿಸಿದವು. ಮಧ್ಯಕಾಲೀನ ವೈಷ್ಣವ ಸಂಪ್ರದಾಯಗಳಲ್ಲಿ ಭಕ್ತಿ ಹೆಚ್ಚಾಗಿ ಪ್ರದರ್ಶನಗೊಂಡರೆ, ಶೈವ ಸಂಪ್ರದಾಯದಲ್ಲಿ ಯೋಗದ ಸಾಧನೆಗೆ ಹೆಚ್ಚು ಒತ್ತು ಲಭಿಸಿತು. ಇಲ್ಲಿ ಪತಂಜಲಿಯ ಅಷ್ಟಾಂಗ ಯೋಗಕ್ಕಿಂತ ಭಿನ್ನವಾದ ಅಂಶಗಳನ್ನು ಕಾಣಬಹುದು. ಶೈವಾಗಮಗಳಲ್ಲಿ ದೀಕ್ಷೆ, ಯೋಗಸಾಧನೆ, ಭಸ್ಮಧಾರಣೆ, ಲಿಂಗಪೂಜೆ, ಆವರಣಪೂಜೆ ಇತ್ಯಾದಿಗಳು ಸಾಮಾನ್ಯವಾಗಿ ಕಾಣುವ ಅಂಶಗಳೆನಿಸಿದವು. ಭಸ್ಮಧಾರಣೆ ಬಹುಶಃ ಜಾನಪದ ಮೂಲದಿಂದ ಗಟ್ಟಿಯಾದದ್ದು. ಈ ಸಂಪ್ರದಾಯವಾದಿಗಳಲ್ಲಿಯೂ ಶ್ರೌತ, ಅಶ್ರೌತ ಎಂಬ ಗುಂಪುಗಳಿದ್ದವು.

ದೇವಾಲಯಗಳ ರಚನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಶಾಸ್ತ್ರ ಸಂದೋಹಗಳು ಬೆಳೆದಂತೆ ಸಾಂಖ್ಯ ಮತ್ತು ಪಾರಂಪರಿಕ ಯೋಗದ ವಿವರಗಳು ಕ್ಷೀಣಿಸಿದವು. ಅಜಿತಾಗಮ, ಕೌರವಾಗಮಗಳಲ್ಲಿ, ಜ್ಞಾನ, ಯೋಗ, ಕ್ರಿಯಾ, ಚರ್ಯಾಪಾದಗಳಿವೆ. ಜ್ಞಾನಪಾದಕ್ಕೆ ಪರ್ಯಾಯವಾಗಿ ವಿದ್ಯಾಪಾದವೆಂಬ ಹೆಸರು ಬಳಸಿದ್ದಾರೆ. ಸುಪ್ರಭೇದಾಗಮದಲ್ಲಿ ಸಾಂಖ್ಯದ ವಿವರಣೆಗಳನ್ನು ಕಾಣಬಹುದು. ಕೆಲವು ಗ್ರಂಥಗಳಲ್ಲಿ ತಂತ್ರೋದ್ಧಾರ, ಮಂತ್ರಾವತಾರ ಎಂಬ ಅಧ್ಯಾಯಗಳಿವೆ. ಕಾಮಿಕಾಗಮಗ್ರಂಥವು ತಂತ್ರಾವತಾರ, ಮಂತ್ರೋದ್ಧಾರ ಅಧ್ಯಾಯಗಳಿಂದ ಆರಂಭಗೊಂಡಿದ್ದು, ನಂತರ ಅರ್ಚನೆ, ದೇವಾಲಯ, ಪ್ರತಿಮಾಲಕ್ಷಣ, ಪ್ರತಿಮಾ

ಸ್ಥಾಪನೆ, ನಿತ್ಯೋತ್ಸವ, ಲಿಂಗಪ್ರತಿಷ್ಠೆ ಹೀಗೆ ಹಲವು ಬಗೆಯ ಹತ್ತಾರು ಅಧ್ಯಾಯಗಳನ್ನೊಳಗೊಂಡಿದೆ.

ಈಶಾನ ಶಿವಗುರುದೇವ ಪದ್ಧತಿಯಲ್ಲಿ ಕ್ರಮವಾಗಿ ಸಾಮಾನ್ಯಪಾದ, ಮಂತ್ರಪಾದ, ಕ್ರಿಯಾಪಾದ, ಯೋಗ ಪಾದಗಳಿವೆ. ಯೋಗಪಾದವು ಚಿಕ್ಕದಾದರೂ ಹಲವು ವಿವರಗಳನ್ನೊಳಗೊಂಡಿದೆ.

ವಾತುಲ ಶುದ್ಧಾಗಮವು ತತ್ತ್ವಭೇದ ಎನ್ನುವ ಮೊದಲ ಅಧ್ಯಾಯದಲ್ಲಿ ಶಿವ, ಸದಾಶಿವ, ಮಹೇಶ ತತ್ತ್ವಗಳನ್ನು ವಿವರಿಸಿದೆ. ಇವು ಕ್ರಮವಾಗಿ ನಿಷ್ಕಲ, ಸಕಲ ನಿಷ್ಕಲ ಮತ್ತು ಸಕಲ ರೂಪಗಳನ್ನು ಪ್ರತಿನಿಧಿಸುತ್ತದೆ. ಮಹೇಶ ತತ್ತ್ವವು ಶಿವನ ಇಪ್ಪತ್ತೈದು ಲೀಲಾಮೂರ್ತಿಗಳನ್ನು ನಿರೂಪಿಸಿದೆ. ಇದು ಪ್ರತಿಮಾ ಶಾಸ್ತ್ರಕ್ಕೆ ಪೂರಕವಾದುದು. **(ಮಲ್ಲೇದೇವರು ಹೆಚ್.ಪಿ. ೧೯೮೮.೫೦-೫೪)** ಪಾಂಚರಾತ್ರವು ಷಡ್ಗುಣಗಳನ್ನು ಆಧರಿಸಿ ವ್ಯೂಹಾವತಾರದೊಂದಿಗೆ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳನ್ನು ಪ್ರಸ್ತುತಪಡಿಸಿದರೆ ಶೈವಾಗಮಗಳು, ಶಿವ, ಸದಾಶಿವ, ಮಹೇಶ ತತ್ತ್ವಗಳೊಂದಿಗೆ ಮೂರ್ತಿ ಪೂಜೆಯ ಆಳಕ್ಕಿಳಿದು ಶಿವನ ಐದು ಸ್ವರೂಪಗಳೊಂದಿಗೆ, ಇಪ್ಪತ್ತೈದು ಅಥವಾ ಹದಿನಾರು ಮೂರ್ತಿಗಳನ್ನು ಕಣಕ್ಕೆ ಇಳಿಸಿದೆ. ಶೈವಾಗಮ ಸಿದ್ಧಾಂತ ಗ್ರಂಥಗಳಲ್ಲಿ ಜ್ಞಾನಪಾದದಲ್ಲಿ ಪಶು, ಪತಿ, ಪಾಶಗಳೆಂಬ ತ್ರಿಪದಾರ್ಥಗಳನ್ನು ವಿಸ್ತೃತವಾಗಿ ಪರಿಚಯಿಸಲಾತಗಿದೆ. ಇವುಗಳೊಂದಿಗೆ ಕುಂಡಲಿನಿ, ಮಾಯಾ, ದೀಕ್ಷೆಗಳನ್ನು ಗುರುತಿಸಲಾಗಿದೆ. ಪೌಷ್ಕರಾಗಮವು ಪತಿ, ಕುಂಡಲಿನಿ, ಮಾಯಾ, ಪಶು, ಪಾಶ, ಕಾರಿಕಾ ಎಂಬ ತತ್ತ್ವಗಳನ್ನು ವಿವರಿಸಿದೆ. **(ಪಂಡಿತ ರಾಮಚಂದ್ರ ಶರ್ಮ ಕೆ. ೧೯೯೫.೧)** ಈ ರೀತಿ ಹಲವು ವಿವರಗಳನ್ನು ನಾಲ್ಕಾರು ಗ್ರಂಥಗಳಲ್ಲಿ ಅಲ್ಪ ವ್ಯತ್ಯಾಸಗಳೊಂದಿಗೆ ಕಾಣಬಹುದು.

ಕುಂಡಲಿನೀ ಶಕ್ತಿಯ ವಿಸ್ತೃತ ವಿವರಣೆಗಾಗಿ ಶಾಕ್ತ ತಂತ್ರ ರೂಪದಲ್ಲಿ ಹಲವಾರು ಗ್ರಂಥಗಳು ಹುಟ್ಟಿಕೊಂಡವು. ತಂತ್ರಗ್ರಂಥಗಳಲ್ಲಿ ಸಾತ್ವಿಕ ಸ್ವಭಾವವು ಮಾಯವಾಗುತ್ತಾ ಕುಂಡಲಿನೀ ಶಕ್ತಿಯನ್ನು ಮುಂದಿಟ್ಟುಕೊಂಡು ರಾಜಸ, ತಾಮಸ ಭಾವದ ಗ್ರಂಥಗಳಿಗೆ ಎಡೆಮಾಡಿಕೊಟ್ಟಿತು.

ದಕ್ಷಿಣ ಭಾರತದ ಮಲೆಬಾರ್ ಮತ್ತು ಕರಾವಳಿ ಪ್ರದೇಶದಲ್ಲಿ ತಂತ್ರದ ಸೌಮ್ಯ ವಾಹಿನಿಯಾದ ಸಮಯಾಚಾರ ಪದ್ಧತಿ ಒಂದು ಪರಂಪರೆಯನ್ನೇ ಸೃಷ್ಟಿಸಿತು. ಶಂಕರಾಚಾರ್ಯರು ರಚಿಸಿದ್ದು ಎಂಬ ನಂಬಲಾದ ಪ್ರಪಂಚ ಸಾರತಂತ್ರವು ಸಮಯಾಚಾರ ಪದ್ಧತಿಗೆ ಮೂಲವೆನ್ನಲಾಗಿದೆ. ತಂತ್ರ ಸಮುಚ್ಚಯ, ಈಶಾನ ಶಿವಗುರುದೇವ ಪದ್ಧತಿ, ವಿಷ್ಣು ಸಂಹಿತೆ, ಶೇಷ ಸಮುಚ್ಚಯ, ವಾರಿವಸ್ಯ ರಹಸ್ಯ ಮೊದಲಾದ ಗ್ರಂಥಗಳು ಈ ಪರಂಪರೆಗೆ ಸೇರಿವೆ.

ಪ್ರಾಚೀನ ಕರ್ನಾಟಕದ ಕಾಳಾಮುಖ, ಪಾಶುಪತ ಗುರುಪರಂಪರೆಯನ್ನು ಶಾಸನಗಳು ಸುದೀರ್ಘವಾಗಿ ಬಣ್ಣಿಸಿವೆ. ಇವರಲ್ಲಿ ಹೆಚ್ಚಿನವರು ನೈಷ್ಠಿಕ ತಪೋಧನರಾಗಿ ದೇವಸ್ಥಾನಗಳ ಆಡಳಿತವನ್ನು ಸ್ಥಾನಪತಿಗಳಾಗಿ ನಿರ್ವಹಿಸುತ್ತಿದ್ದರು. ಕೆಲವೆಡೆ ದೇವಸ್ಥಾನಗಳಿಗೆ ಹೊಂದಿಕೊಂಡಿದ್ದ ಮಠಗಳಿದ್ದು ಘಟಿಕಾ ಸ್ಥಾನಗಳನ್ನೂ ನೋಡಿಕೊಳ್ಳುತ್ತಿದ್ದವು. ದೇವಾಲಯಗಳಿಗೆ ನೀಡಿದ ದೇವದಾನಗಳ ಉಸ್ತುವಾರಿ ಇವರದಾಗಿತ್ತು. ಕೆಲವು ಗೃಹಸ್ಥಾಶ್ರಮಿಗಳೂ ಸ್ಥಾನಿಕರಾಗಿ ಕರ್ತವ್ಯ ನಿರ್ವಹಿಸಿದ್ದನ್ನು ಶಾಸನಗಳು ಚಿತ್ರಿಸಿವೆ.

ಕರ್ನಾಟಕದಲ್ಲಿ ಗುರುತಿಸಲಾದ ಪಾಶುಪತ, ಕಾಳಾಮುಖ, ಲಾಕುಲೀಶ ಸಂಪ್ರದಾಯಗಳಲ್ಲಿ ವ್ಯತ್ಯಾಸಗಳನ್ನು ಗುರುತಿಸಲು ಸಾಧ್ಯವಾಗಿಲ್ಲ. ಹನ್ನೆರಡನೆಯ ಶತಮಾನದ ಶಾಸನವೊಂದರಲ್ಲಿ "ಲಾಕುಲಾಗಮ ಸಮಯ ಸಮುದ್ಧರಣಂ" ಎಂಬ ಬಣ್ಣಿಸಿದೆ. "ಮುನೀಂದ್ರ ವಂದನಾ ನಂದರುಂ ಕಾಳಾಮುಖ ಪ್ರತಿಬದ್ಧರುಂ" ಎಂಬ ಬಣ್ಣಿಸಿದೆ. ಇವರುಗಳು ಯೋಗ ಸಾಧನೆಗೆ ಹೆಚ್ಚು ಗಮನ ಕೊಡುತ್ತಿದ್ದರೆಂದು ಸ್ಪಷ್ಟ. ಶಾಸನವು ಗುರುತಿಸುವ "ಲಾಕುಲಾಗಮ" ಈವರೆಗೂ ಲಬ್ಧವಿಲ್ಲ. **(ರೈಸ್. ಬಿ.ಎ. ೧೯೦೨. ೪೧೮-೪೧೯)** ಶಾಸನಗಳು ಯತಿಗಳನ್ನು "ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ವ್ರತಾನುಷ್ಠಾನ ಜಪಸಮಾಧಿ ಶೀಲ ಸಂಪನ್ನರ್" ಎಂದಿವೆ. ಶಾಸನಗಳು ಅಷ್ಟಾಂಗ ಯೋಗದ ಮತ್ತೊಂದು ಮುಖವನ್ನು ಪ್ರದರ್ಶಿಸಿದರೆ, ಧ್ಯಾನಬಿಂದು ಉಪನಿಷತ್ತು, ಅಮೃತನಾದ ಉಪನಿಷತ್ತು ಷಡಂಗಗಳನ್ನು ವಿವರಿಸಿದೆ. ವಿಷ್ಣು ಸಂಹಿತೆಯೂ ಷಡಂಗ ಯೋಗವನ್ನು ವಿವರಿಸಿದ್ದು ಇದನ್ನು ಭಾಗವತ ಸಂಪ್ರದಾಯವೆನ್ನುತ್ತದೆ. ಯೋಗದ ಸರಳರೂಪವನ್ನು ಇಲ್ಲಿ ಕಾಣಲು ಸಾಧ್ಯ. ಯೋಗವು ವೈಯಕ್ತಿಕ ಹಂತದಲ್ಲಿ ಸಾಧನೆಯ ಸಂಕೇತವಾದರೆ, ದೇವಾಲಯವು ಪರರಿಗಾಗಿ ಸಮಾಜಮುಖಿಯಾಗಿ ಬೆಳೆಯಿತು.

ಮಹಾಭಾರತ ಕಾವ್ಯದ ಉಲ್ಲೇಖವನ್ನು ಮತ್ತೊಮ್ಮೆ ಗಮನಿಸಬೇಕು.

**ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾ ಪಾಶುಪತಂ ತಥಾ**
**ಜ್ಞಾನಾನಿ ಏತಾನಿ ರಾಜರ್ಷೇ ವಿದ್ಧಿ ನಾನಾ ಮತಾನಿ ವೈ**

ಸಾಂಖ್ಯ, ಯೋಗ, ಪಾಂಚರಾತ್ರ, ವೇದ (ವೈಖಾನಸ?) ಪಾಶುಪತ ಇವು ಜ್ಞಾನಗಳೆಂದೂ, ಮತ-ಸಂಪ್ರದಾಯಗಳೆಂದೂ ಗುರುತಿಸಲಾಗಿದೆ. ಈ ಐದು ಜ್ಞಾನಗಳನ್ನು ಒಂದೇ ಸೂತ್ರದಲ್ಲಿ ಬಂಧಿಸಿದ್ದು, ಇವುಗಳು ಒಂದೆಡೆ ಗುರುತಿಸಲು ಸಮಾನ ಅಂಶಗಳಾವುವು ಎಂಬುದು ಅಸ್ಪಷ್ಟ. ಇವು ವಿಗ್ರಹಾರಾಧನೆಗೆ ಸೋಪಾನಗಳಾಗಿರಲೂ ಸಾಧ್ಯ! ಈ ದಿಸೆಯಲ್ಲಿ ಅಧ್ಯಯನ ಮುಂದುವರೆಯಬೇಕಾಗಿದೆ.

**ಆಧಾರ ಗ್ರಂಥಗಳು**


೧. ಆಚಾರ್ಯ ವ್ರಜವಲ್ಲಭ ದ್ವಿವೇದ (೧೯೯೭) **ವೈಷ್ಣವಾಗಮವಿಮರ್ಶ: ಸಂಪೂರ್ಣಾನಂದ,** ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ.

೨. ಕೃಷ್ಣಸ್ವಾಮಿ ಅಯ್ಯಂಗಾರ್ ೯೧೯೪೦) **ಪರಮ ಸಂಹಿತಾ** ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬರೋಡಾ.

೩. ಕೈಲಾಂಡ್. ಡಬ್ಲು. (೧೯೮೯) **ವೈಖಾನಸ ಗೃಹ್ಯ ಸೂತ್ರಂ ವೈಖಾನಸ ಧರ್ಮ ಸೂತ್ರಂಚ** ಮೆಹರ್‌ಚಂದ್ ಲಚ್ಮಣ್ ದಾಸ್ ಪಬ್ಲಿಕೇಷನ್ಸ್, ನವದೆಹಲಿ.

೪. ಗಣಪತಿಶಾಸ್ತ್ರೀ ಎಂ.ಎಂ. (೧೯೯೧) **ವಿಷ್ಣು ಸಂಹಿತಾ** ನಾಗ್ ಪಬ್ಲಿಷರ್ಸ್, ಡೆಲ್ಲಿ.

೫. ಚಿದಾನಂದ ಮೂರ್ತಿ ಎಂ. (೧೯೬೬) **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬. ಜಯಸ್ವಾಲ್ ಕೆ.ಪಿ. (೧೯೭೮) **ಹಿಂದೂ ಪಾಲಿಟ,** ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷರ್ಸ್, ಬೆಂಗಳೂರು.

೭. ಡೇವಿಡ್ ಎನ್. ಲೊರೆಂಜೆನ್/ವಿರೂಪಾಕ್ಷ ಕುಲಕರ್ಣಿ (ಅನು) ೨೦೦೫ **ಕಾಪಾಲಿಕರು ಮತ್ತು ಕಾಳಾಮುಖರು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಆಗಳೂಅರು.

೮. ದೊರೆಸ್ವಾಮಿ ಅಯ್ಯಂಗಾರ್ (೧೯೯೬) **ಶ್ರೀ ಪಾಂಚರಾತ್ರ ರಕ್ಷಾ** ದಿ ಅಡ್ಯಾರ್ ಲೈಬ್ರರಿ ಅಂಡ್ ರೀಸರ್ಚ್ ಸೆಂಟರ್, ಮದ್ರಾಸ್.

೯. ಪಂಡಿತ ಉದಯ ನರೇನ್‌ಸಿಂಹ (೨೦೦೬) **ಸರ್ವದರ್ಶನ ಸಂಗ್ರಹ** ಖೇಮರಾಜ್ ಶ್ರೀಕೃಷ್ಣದಾಸ್ ಪಬ್ಲಿಕೇಷನ್ಸ್, ಬಾಂಬೆ.

೧೦. ಪಂಡಿತ ಕೃಷ್ಣಮಾಚಾರ್ಯ (೨೦೦೦) **ಲಕ್ಷ್ಮೀತಂತ್ರ** ದಿ ಅಡ್ಯಾರ್ ಲೈಬ್ರರಿ ಅಂಡ್ ರೀಸರ್ಚ್ ಸೆಂಟರ್, ಮದ್ರಾಸ್.

೧೧. ಪಂಡಿತ ರಾಮಚಂದ್ರ ಶರ್ಮ ಕಿ.ವಿ. (೧೯೯೫) **ಪೌಷ್ಕರಾಗಮ** ದಿ ಅಡ್ಯಾರ್ ಲೈಬ್ರರಿ ಅಂಡ್ ರೀಸರ್ಚ್ ಸೆಂಟರ್, ಮದ್ರಾಸ್.

೧೨. ಮಲ್ಲೇದೇವರು ಹೆಚ್.ಪಿ. (೧೯೮೮) **ವಾತುಲ ಶುದ್ಧಾಗಮ** ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು.

೧೩. ಮ್ಯಾಕ್‌ಡೊನೆಲ್ ಎ.ಎ. (೧೯೮೧) **ದಿ ವೇದಿಕ್ ರೀಡರ್** ಆಕ್ಸ್‌ವಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್.

೧೪. ರಾಘವ ಪ್ರಸಾದ್ ಚೌಧರಿ (೧೯೪೭) **ಪಾಂಚರಾತ್ರಾಗಮ** ಬಿಹಾರ್ ರಾಷ್ಟ್ರ ಭಾಷಾ ಪರಿಷದ್, ಪಾಟನಾ

೧೫. ರಾಧಾಕೃಷ್ಣನ್ ಎಸ್. (೧೯೯೬) **ಇಂಡಿಯನ್ ಫಿಲಾಸೊಫಿ (ಸಂಪುಟ ೧)** ಆಕ್ಸ್‌ವರ್ಡ್ ಯೂನಿವರ್ಸಿಟಿ ಪ್ರೆಸ್, ದೆಹಲಿ.

೧೬. ರಾಮಚಂದ್ರರಾವ್ ಎಸ್.ಕೆ. (೧೯೮೯) **ಆಗಮ ಕೋಶ (ಸಂಪುಟ ೧)** ಕಲ್ಪತರು ರೀಸರ್ಚ್ ಅಕಾಡೆಮಿ, ಬೆಂಗಳೂರು.

೧೭. ರಂಗಸ್ವಾಮೀ ಹೆಚ್.ಎಸ್. ಮತ್ತು ಇತರರು **ಶ್ರೀಮನ್ಮಹಾಭಾರತ (ಸಂಪುಟಗಳು)** ಭಾರತದರ್ಶನ ಪ್ರಕಾಶನ, ಬೆಂಗಳೂರು.

೧೮. ರೈಸ್ ಬಿ.ಎಲ್. (೧೯೦೨) **ಎಪಿಗ್ರಾಫಿಯಾ ಕರ್ನಾಟಿಕ, ಸಂ. ೫** (ಹಳೇ ಆವೃತ್ತಿ)

೧೯. ವರದಾಚಾರಿ ವಿ. (೨೦೦೧) **ಪಾಂಚರಾತ್ರಾಗಮ,** ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ.

೨೦. ವೆಂಕಟರಾಮನ್ ಕೆ.ಆರ್. (೧೯೮೮) **ವೈಖಾನಸರು –** ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ – ೪) ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೧. ಶಂಕರಭಟ್ಟ ಉ. (೧೯೮೮). **ವಿಶ್ವಾಮಿತ್ರ ಸಂಹಿತಾಯಾಂ ತುಲನಾತ್ಮಕ ಅಧ್ಯಯನಂ** ಕೇಂದ್ರಿಯ ಸಂಸ್ಕೃತ ವಿದ್ಯಾಪೀಠಂ, ತಿರುಪತಿ.

೨೨. ಸರ್ಕಾರ್ ಡಿ.ಸಿ. (೧೯೪೨) **ಸೆಲೆಕ್ಟ್ ಇನ್‌ಸ್ಕ್ರಿಪ್‌ಷನ್ಸ್,** ಕಲ್ಕತ್ತಾ

೨೩. ಶ್ರೀನಿವಾಸ ವಿ. ಪಾಡಿಗಾರ್ (೧೯೯೬) **ವಿಷ್ಣು ಕಲ್ಟ್ ಇನ್ ಕರ್ನಾಟಕ,** ಡೈರೆಕ್ಟರೇಟ್ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಸಿಯಂಸ್, ಮೈಸೂರು.

೨೪. ಸ್ವಾಮಿ ಆದಿ ದೇವಾನಂದ (೨೦೦೧) **ಛಾಂದೋಗ್ಯೋಪನಿಷತ್** ಶ್ರೀರಾಮಕೃಷ್ಣಾಶ್ರಮ, ಮೈಸೂರು.

೨೫. ಹಿರಿಯಣ್ಣ ಎಂ. ಪ್ರಭುಶಂಕರ (ಅನು) (೨೦೦೪) **ಭಾರತೀಯ ತತ್ತ್ವಶಾಸ್ತ್ರದ ರೂಪುರೇಖೆಗಳು,** ಅಭಿನವ, ಬೆಂಗಳೂರು.

# ಶಾಸನಗಳಲ್ಲಿ ಶಬ್ದಾರ್ಥ ಸಂಚಲನ ಮತ್ತು ಸಂಸ್ಕೃತಿ

– ಎಂ.ಜಿ. ನಾಗರಾಜ್

ಗಟ್ಟಿ ವಸ್ತುಗಳ ಮೇಲೆ ಶಾಶ್ವತವಾಗಿ ಉಳಿಯುವಂತೆ ಬರೆದ ಬರಹವು, ಶಾಸನವೆನ್ನುವುದು ಶಾಸನ ಶಾಸ್ತ್ರದ ಸಾಮಾನ್ಯ ಸೂತ್ರ. ಈ ಬರಹವೊಂದು ಇತಿಹಾಸದ ದಾಖಲೆ. ಅದರಲ್ಲಿ ಮಿತಿಗಳಿರಬಹುದು. ಶ್ರುತಸತ್ಯವಂತು ಮುಖ್ಯವಾಗಿ ಇರುತ್ತದೆ. ವೈವಿಧ್ಯಮಯ ವಿಷಯಗಳಿರುತ್ತವೆ. ಶಬ್ದಗಳ ಬೆಳವಣಿಗೆಗಳ ಇತಿಹಾಸವೇ ಅಲ್ಲಿ ಕಾಣಬರುತ್ತದೆ. ಲಿಪಿಯ ಮೈಕಟ್ಟು ಕಾಲಕಾಲದ ಜಾಯಮಾನಕ್ಕನುಗುಣವಾಗಿ ಬದಲಾವಣೆಗೊಂಡುದೂ ಕಾಣಬರುತ್ತದೆ. ಸಂಸ್ಕೃತಿಯ ಅನಾವರಣವನ್ನು, ಇತಿಹಾಸದ ಪುಳಕವನ್ನು ಅವು ತೋರಬಲ್ಲವು. ಸದ್ಯ ಅವುಗಳನ್ನೆಲ್ಲಾ ಶಬ್ದಗಳಲ್ಲಿ ಅವು ತೆರೆದಿಡುವ ಬಗೆಗೆ ಆಲೋಚನೆ, ಸಂಚಲಿಸಿದ ಶಬ್ದದ ಹೊಸತುಗಳನ್ನು ಸಾಂಸ್ಕೃತಿಕ ಅಭಿವ್ಯಕ್ತಿಯ ಮೂಲಕ ನಮ್ಮ ಗಮನ ಸೆಳೆದಿರುವ ಬಗ್ಗೆ ಆಲೋಚನೆ ನಡೆಯಬೇಕು. ಶಿಲೆ, ಲೋಹ, ಮೃಣ್ಮುದ್ರೆ ಇತ್ಯಾದಿ ಮಾಧ್ಯಮಗಳಲ್ಲಿ ಅವು ಹೆಚ್ಚು ಪ್ರಚಲಿತ. ಚರ್ಮ, ಮೂಳೆ, ಆಭರಣ ಇತ್ಯಾದಿಗಳ ಮೇಲೆ ಅವು ಕಡಿಮೆ ಪ್ರಚಲಿತ.

ಶಬ್ದಕ್ಕೆ ನಮ್ಮೆಲ್ಲ ಭಾವನೆಗಳು ಋಣಿ. ಕಾರಣ ಭಾವನೆಗಳು ಶಬ್ದಗಳ ಮೂಲಕವೇ ಅಭಿವ್ಯಕ್ತ. ಬೌದ್ಧಿಕ ಮಂಥನಗಳಿಗೆ, ವಿಚಾರಧಾರೆಗೆ ಅವೇ ಆಡುಂಬೋಲ. ಶಾಸನಗಳಲ್ಲಿ ಅವುಗಳ ಸಾಂಸ್ಕೃತಿಕ, ಸಾಮಾಜಿಕ ಆಯಾಮಗಳು ಹೆಚ್ಚು ಬಿತ್ತರವಾಗಿವೆ. ನಾವು ನಮ್ಮ ವಿಷಯ ಪ್ರತಿಪಾದನೆಗೆ ಆಧಾರವೆಂದು ಬಳಸಿಕೊಳ್ಳುವುದು ಆ ಶಬ್ದಗಳಲ್ಲಿನ ಮಾಹಿತಿ ಮತ್ತು ಧ್ವನಿಗಳೇ ಆಗಿವೆ. ಸಾಲುಗಳ ಮಧ್ಯೆ ಇರುವ ಅರ್ಥವೇ ಧ್ವನಿಪೂರ್ಣವಾದುದಲ್ಲವೇ!

ಕಾವ್ಯ ಮೀಮಾಂಸೆಯ 'ಧ್ವನಿ' ಇನ್ನೊಂದು ಪಾರಿಭಾಷಿಕ ಚಿಂತನೆಯಲ್ಲಿ 'ನಿಶ್ಶಬ್ದ'ವೆನಿಸುತ್ತದೆ. ಅಕ್ಷರದ ಸಾಲುಗಳ ನಡುವಣ ಅರ್ಥದ ಶಬ್ದ (To read between the Lines!) ನೇರ ಕೇಳದಿದ್ದರೂ ಒಳಗೆ ಕೇಳಿಸುವ ಧ್ವನಿ ಅಲ್ಲವೇ! ಹೊರಗೆ ನಿಶ್ಶಬ್ದ, ಒಳಗೆ ಶಬ್ದ. ಅವರ ವೈಖರಿ ಎಂದರೆ, ಹೊರಗೆ ಕೇಳಿಸುವುದಿಲ್ಲ. ಒಳಗೆ ಕೇಳಿಸುತ್ತದೆ, ಎಂಬುದಾಗಿದೆ.

ಈ ಶಾಸನೋಕ್ತ ಪದಗಳಿಂದ, ನಮ್ಮ ವೀರರ ಯಶೋಗಾಥೆ, ರಾಜಕೀಯ ಸಂಘರ್ಷ, ತತ್ಕಾಲೀನ ಜೀವನಕ್ರಮ, ಕಲಾಮಾದರಿಗಳೂ ನಮ್ಮ ಅರಿವಿಗೆ ಬಂದಿವೆ. ರಾಜರ ಆಡಳಿತದ ವಿಚಾರವಲ್ಲದೆ, ಪ್ರಶಸ್ತಿ ಸಂಕಲನಗಳೂ ತಿಳುವಿಗೆ ಬಂದಿವೆ. ಧಾರ್ಮಿಕ ಅವಸರಗಳೂ ವ್ಯಕ್ತಿತ್ವ ಚಿತ್ರಣಗಳೂ ಕಂಡುಬಂದಿವೆ. ಆದರೆ ಸಾಮಾನ್ಯ ಜನರ ಜೀವನಚಿತ್ರ ಹೆಚ್ಚು ಶಬ್ದಗೊಂಡಿಲ್ಲ ಎಂಬ ಮಿತಿಯನ್ನು ಅವಕ್ಕೇ ತಾಗಿಸಲಾಗಿದೆ. ಅದರಲ್ಲಿ ಕೆಲಮಟ್ಟಿನ ಸತ್ಯಾಂಶವಿದ್ದರೂ, ವಾಸ್ತವವೇ ಬೇರೆಯೇ ಇದೆ. ಸಾಮಾನ್ಯ ಜನರೂ ಶಾಸನಗಳ ಮೂಲಕ ತಮ್ಮಲ್ಲಿಯ ಸಂದರ್ಭಗಳನ್ನು ಶಬ್ದ ಸಂಚಲನಗಳಲ್ಲಿ ತೋಡಿಕೊಂಡಿದ್ದಾರೆ.

ಕೊಡಗಿನ ಕ್ರಿ.ಶ. ೧೦೦೧ನೇ ಮಡಿಕೇರಿಯ ಶಾಸನಗಳಲ್ಲಿ 'ಮೊದಲ್ಕಾವೇರಿಯಂ ಮಿನ್ದು' ಎಂಬ ಶಬ್ದವಿದೆ.[೧] ಶಾಸನ ಸಂಪುಟದಲ್ಲಿ ಇದಕ್ಕೆ ರೈಸ್ ಅವರು ಕೊಟ್ಟ ಅರ್ಥ. First bathed in the River Kaveri'. ಆದರೆ ಕೊಡಗಿನ ಸಂದರ್ಭದಲ್ಲಿ ಅದು ತಲಕಾವೇರಿಗೆ ಅನ್ವಯವಾಗುವ ಶಬ್ದವಾಗಿದೆ. ಶಾಸನದ ಆ ಸಾಲಿನಲ್ಲಿ ಮುಂದಿನ ಶಬ್ದ, 'ರಾಮೇಶ್ವರ ಮರ್ಚಿ;' ಎಂದಿದೆ. ವೀರನೊಬ್ಬ ಕಾಳಗದಲ್ಲಿ ಗೆದ್ದು ಗ್ರಾಮಗಳನ್ನು ಪಡೆದು ರಾಮೇಶ್ವರನಿಗೆ ದಾನ ಮಾಡಿದ ಸಂದರ್ಭವಿದು.

ಮೈಸೂರು ವಿಶ್ವವಿದ್ಯಾಲಯ ಕಾಳಗದಲ್ಲಿ ಪಡೆದ ಯಶಸ್ಸು, ತತ್ಫಲವಾಗಿ ಗಳಿಸಿದ ದಾನ, ವೀರನ ದೇವಭಾವಾತ್ಮಕ ಸಂಬಂಧವಾಗಿ ವೀರ ದೇವದಾನ ಮಾಡಿದ ಸಂದರ್ಭವಿದು. ಕೊಡಗಿನಲ್ಲಿ ತೀರ್ಥೋದ್ಭವ ನೆಲೆ 'ತಲಕಾವೇರಿ'ಯಲ್ಲಿ ಮಿಂದ ಎಂಬ ಅರ್ಥ ಇಲ್ಲಿ ಸಾಮಯಿಕ ಸೂಕ್ತವಾಗುತ್ತದೆ. ಇರ್ಪು ರಾಮೇಶ್ವರ ರಾಮಸ್ವಾಮಿ ಕಣಿವೆಯ ಬಳಿಯ ಶಿವಾಲಯಕ್ಕಿಂತ ಪ್ರಾಚೀನ. ಹೀಗಾಗಿ ತಲಕಾವೇರಿಯಲ್ಲಿ ಮಿಂದು, ಇರ್ಪು ರಾಮೇಶ್ವರನಿಗೆ ದಾನ ಮಾಡಿದ ಎಂಬ ಅರ್ಥ ಹೆಚ್ಚು ಶಬ್ದ ಸಂಚಲನವನ್ನು ನೀಡುತ್ತದೆ.

೯ನೇ ಶತಮಾನದಲ್ಲಿ ನಕಲು ಮಾಡಿದ ಗಂಗರ

'ಅನರ್ಘ್ಯ', ಶ್ರೀ ಜಚನಿ ಕೃಪ, ೨೨೧, ೬ಲನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು – ೫೬೦ ೦೧೦

ಕ್ರಿ.ಶ. ೪೬೬ರದೆನ್ನಲಾದ ಮಡಿಕೇರಿ ಶಾಸನದಲ್ಲಿ ತಗಕೂಡ 'ಕುಜುಗೋವರು' ಎಂಬ ಶಬ್ದವಿದೆ.[೨] ರೈಸರ ಆಂಗ್ಲ ಅನುವಾದದಲ್ಲಿ ಅದೇ ಶಬ್ದವನ್ನು (Kulugover) ಆಂಗ್ಲ ಲಿಪಿಯಲ್ಲಿ ಬರೆಯಲಾಗಿದೆ. ಈ ಕುಟಿಗೋವರು ಸ್ಥಳೀಯ ಸಾಕ್ಷಿಗಳಾಗಿ ಉಕ್ತರಾಗಿದ್ದಾರೆ. ಈ ಶಬ್ದದ ಅರ್ಥ ಕುತೂಹಲಕಾರಿ ಆಗಿದೆ. 'ಕುಟಿ' ನೇಗಿನ ಭಾಗವೊಂದಕ್ಕೆ ಸಂಬಂಧಿಸಿದ ಶಬ್ದ. 'ಗೋವ' ಎಂಬ ಶಬ್ದಕ್ಕೆ 'ಅಧಿಪತಿ' ಎಂಬ ಅರ್ಥವಿದೆ. ಇವೆರಡೂ ಕ.ಕ. ನಿಘಂಟಿನ ಅರ್ಥಗಳೇ. ಅಂದರೆ ಕೃಷಿ ಒಕ್ಕಲುಗಳ ಮುಖ್ಯಸ್ಥ, ಅಥವಾ ಗೇಣಿದಾರರ ತಲೆಯಾಳು ಎಂದು ಅರ್ಥೈಸಿದರೆ, ಅದಕ್ಕೊಂದು ಹೊಸ ಅರ್ಥ ಸಂಚಲನವಾದೀತು. ಸಾಕ್ಷಿಯಾಗುವಂಥವರು ಹೊಣೆಗಾರ ವ್ಯಕ್ತಿಗಳೆಂಬುದನ್ನು ಗಮನಿಸಬೇಕು.

ಕ್ರಿ.ಶ. ಸು ೧೪ನೇ ಶತಮಾನದ ಪಾಲೂಡಿನ ಮಿಶ್ರ ಲಿಪಿ, ಮಿಶ್ರ ಭಾಷಾ (ಗ್ರಂಥ, ತಮಿಳು, ಮಲೆಯಾಳ, ತುಳು) ಶಾಸನದಲ್ಲಿ[೩], 'ಪುರುಷೋತ್ತಮ ವರ್ಷದ ವಿದ್ಯಾಮೃತ್ಯು ಭಟ್ಟಾರಕರ ಶಿಷ್ಯ ಬೋಧ ರೂಪ ಭಾಗವತ ಪಾಲೂರು ಮಹಾದೇವರಿಗೆ ನೀಡಿದ ದಾನದ ವಿಷಯವಿದೆ. ಇದರ ರಕ್ಷಣೆಗೆ ನಿರ್ವಹಣೆಗೆಗಿರುವವರಲ್ಲಿ 'ನಾಲು ಮುತ್ತಾಮಯ್ಯಾಳು ಮ್ಮುನೂಟ್ಟುಮು' ಸೇರಿದ್ದಾರೆ. ಇಲ್ಲಿ ಶಿವಾಲಯಕ್ಕೆ ಅರ್ಪಿಸಿದ ದಾನದ ವಿಷಯವಿದೆ. ಹೀಗಾಗಿ 'ಪುರುಷೋತ್ತಮ ವರ್ಷ' ಎನ್ನುವುದು ಎಳಮೇಲ ಸಿಂಹವರ್ಷ, ಇತ್ಯಾದಿ ಶೈವ ಸಂಬಧಿಯಾದ ಪರಿಷತ್ತು ಆಗಿರುವ ಸಂಭವವಿದೆ. ಅಂತಾದರೆ ಶೈವ ಸಮಯದ ಒಂದು ಹೊಸ ವಿಭಾಗವು ಈ ಶಾಸನದಿಂದ ವ್ಯಕ್ತವಾಗುವಂತಿದೆ. 'ಅವಿದ್ಯಾಮೃತ್ಯು ಭಟ್ಟಾರಕ' ಎನ್ನುವಲ್ಲಿ ತಾತ್ವಿಕ ಅರ್ಥದಲ್ಲಿಯೂ ಅವಿದ್ಯೆಗೆ ಮೃತ್ಯು ಎಂದರೆ 'ಮಹಾಶಿವಜ್ಞಾನಿ' ಎಂಬ ಅರ್ಥ ಸಂಚಲಿಸುತ್ತದೆ. 'ನಾಲು ಮುತ್ತಾ' ಅಂದರೆ ನಾಲ್ವರು ಹಿರಿಯರೊಡಗೂಡಿದ 'ಮಯ್ಯಾಳು' ಎಂದರೆ ವಿನಿಮಯ ಸೇವೆ ಸಲ್ಲಿಸುವ ಮುಯ್ಯಾಳುಗಳೂ ಇದ್ದು, ಅವರು ಮುನ್ನೂರು ಸಂಖ್ಯೆಯಲ್ಲಿದ್ದರು ಎಂದಾಗುತ್ತದೆ. ದ್ರಾವಿಡ ವರ್ಗಕ್ಕೆ ಸೇರಿದ ಭಾಷಾ ಘಟಕಗಳಾಗಿ, ಮಯ್ಯಾಳು –ಮುಯ್ಯಾಳು ಎಂದು ಕೃಷಿ ಸಂದರ್ಭವೆಂದು ಪರಿಗಣಿಸಿದರೆ ಶಬ್ದಾರ್ಥ ಸಂಚಲನಗೊಳ್ಳುತ್ತದೆ. ಈ ಮಹಾದೇವರ ಜನಪ್ರಿಯತೆ, ಪ್ರಸಿದ್ಧಿಯ ಚಿತ್ರವೂ ಸೂಚನೆಗೊಳ್ಳುತ್ತದೆ.

ಹುಲಕೋಡಿನ ಕ್ರಿ.ಶ. ೧೩೫೯ನೇ ಶಾಸನದಲ್ಲಿ[೪] 'ತ್ರಿನಮೇರದೇವಣ್ಣ', 'ಗವುಡ ಬೊವ ದೇಮ್ಮಯ್ಯ', ಎಂಬ ಶಬ್ದಗಳು ಬರುತ್ತವೆ. ಕೊಡಗಿನಲ್ಲಿ ಮನೆತನದ ಹೆಸರನ್ನು 'ಮನೆಪೆದ'ದಿಂದ ಸೂಚಿಸುತ್ತಾರೆ. ಇಲ್ಲಿ ಬರುವ 'ತ್ರಿನಮೇರ' ಸಾಂದರ್ಭಿಕವಾಗಿ ಕೊಡಗಿನ ಗೌಡಜನಾಂಗದ 'ಮನೆಪೆದ'ವನ್ನು ಸೂಚಿಸುತ್ತದೆ. ಗವುಡ ಬೋವ, ಎಂಬ ಶಬ್ದವು ಶಾನುಬೋವ ಅರುಕೆಯ ಬೋವ, ಕಟಕಗೋವ, ಕುಮಿಗೋವ ಎಂಬಂತೆ ಗೌಡಜನಾಂಗದ ಮುಖ್ಯನು ಅರ್ಥಾತ್ ಜಾತಿಗೌಡಿಕ ಪದವಿಯವನು ಎಂಬ ಸಂವಾದಿ ಅರ್ಥ ಸೂಚನೆ ಒದಗಿ, ಶಬ್ದಕೋಶಕ್ಕೆ ಹೊಸ ಶಬ್ದವಾಗಿ ದಕ್ಕುತ್ತದೆ.

ಕ್ರಿ.ಶ. ೧೦೯೫ರ ಯಡೂರು ಶಾಸನದಲ್ಲಿ[೫] ಹಾನುಗಲ್ಲು ಕದಂಬ ಶಾಖೆಯ ಕೊಡಗಿನ ಕದಂಬದ ದುಡ್ಡ ರಸನನ್ನು 'ಅಯ್ಯನಂಕಕಾರ ಶಿವಪಾದ ಸೇಕರಂ' ಇನ್ನೂಱಯ್ವತ್ತು ಎಕ್ಕಟಿಗರುಂ', 'ಕೆಂಜೆಯಂ ಕಟ್ಟಿಸಿ... ಯಮನೆತ್ತಿಸಿ,' 'ಬ್ರಾಹ್ಮಣರ್ಗ್ಗೆ ಚಿತ್ತಮಂ ನಿಲಿಸಿ' ಇತ್ಯಾದಿ ಶಬ್ದಗಳಿವೆ. ಇಲ್ಲಿ 'ಅಂಕಕಾರ' ಎಂದರ 'ಯುದ್ಧವೀರ' ಎಂಬ ಅರ್ಥವಿದ್ದರೂ ಅಯ್ಯನ ಅಂಕಕಾರ, ಶಿವಪಾದ ಶೇಖರ, ಎಂದಿರುವಲ್ಲಿ ವೀರಶೈವ ಗುರುವಿನ ಪಾದರಾಧಕ ಎಂಬ ಅರ್ಥ, ಕೇವಲ ಸೇವಕ ಎಂಬ ಸಮಾನ್ಯ ಅರ್ಥಕ್ಕಿಂತ ಹೆಚ್ಚು ಧ್ವನಿಪೂರ್ಣ ಸಂಚಲನವಾಗುತ್ತದೆ. ಜೊತೆಗೆ ಈ ಯಡೂರಿನ ಸನಿಹ ಪ್ರದೇಶದಲ್ಲಿಯೇ ಪ್ರಾಚೀನ ವೀರಶೈವ ಸಂಪ್ರದಾಯದ ಅಬ್ಬಿಮತವೂ ಇರುವುದು ಗಮನಾರ್ಹ.

'ಎಕ್ಕಟಿಗರು' ಎಂದರೆ ಗೂಢಚಾರರು, ಎಂಬಷ್ಟೇ ಅರ್ಥಕ್ಕೆ ನಿಲ್ಲದೆ ಅಲುಕೆಯ ಬೋವರಾಗಿ ಲಿಂಗರಕ್ಷಕರಾಗಿದ್ದರು ಎಂಬ ಪೋಷಕ ಅರ್ಥವು ಕ್ರಿ.ಶ. ೧೧೮೯ರ ರಣಕಟ್ಟೆ ಹಾಗೂ ಕ್ರಿ.ಶ. ೧೧೮೬ರ ಕುರುವಂಶದ ಶಾಸನಗಳಿಂದ[೬] ತಿಳಿಯುತ್ತದೆ. ದುದ್ದರಸನಲ್ಲಿ ೨೫೦ ಎಕ್ಕಟಿಗದಿದ್ದರೆಂದರೆ ಅವನ ಗುಪ್ತಚಾರ ವ್ಯವಸ್ಥೆಯ ವ್ಯಾಪ್ತಿಯು ತಿಳಿಯುವಂತಾಗುತ್ತದೆ. ಕೊಡಗಿನಂಥ ಮಲೆ, ಅರಣ್ಯ ಪ್ರದೇಶಕ್ಕೆ ಅದು ಅಗತ್ಯವೇ ಆಗಿತ್ತು. 'ಕೆಜೆಯಂ ಕಟ್ಟಿಸಿ ಯಮನೆತ್ತಿಸಿ' ಎಂಬುದು ಸಹಜವಾಗಿ ಕೆರೆಯ ಹೂಳನ್ನೆತ್ತಿಸುವ ಅರ್ಥವಿದ್ದು, ಆ ಪದ್ಧತಿಯ ಪ್ರಾಚೀನತೆಯೂ ತಿಳಿಯುವಂತಾಗುತ್ತದೆ. 'ಬ್ರಾಹ್ಮಣರ್ಗೆ ಛತ್ರವನ್ನೂ ನಿಲ್ಲಿಸುವುದು, ಎಂಬಲ್ಲಿ ಐತಿಹಾಸಿಕವಾಗಿ ಕೊಡಗಿನ ಸಂದರ್ಭದಲ್ಲಿ ವಿಶೇಷ ಅರ್ಥವನ್ನು ಪಡೆಯುವುದಿದೆ. ಕಾರಣ ೧೯ನೇ ಶತಮಾನದ ಆಂಗ್ಲ ಇತಿಹಾಸಕಾರರು ಹಾಗೂ ಅವರನ್ನನುಸರಿಸಿ ಕೆಲವು ಆಧುನಿಕ ಬರಹಗಾರರು ಕೊಡಗಿಗೆ ಬ್ರಾಹ್ಮಣರು ಕೇವಲ ಮುನ್ನೂರು ವರ್ಷಗಳ ಹಿಂದೆ ಆಗಮಿಸಿದವರು ಎನ್ನುತ್ತಾರೆ. ಆದರೆ ಯಡೂರು ಶಾಸನವು ಬ್ರಾಹ್ಮಣವರ್ಗವೂ ೧೧ನೆಯ ಶತಮಾನದಲ್ಲಿಯೆ ಕೊಡಗಿನಲ್ಲಿ ಅಸ್ತಿತ್ವ ತೋರಿಕೊಂಡಿತ್ತು ಎಂಬ ಅರ್ಥವನ್ನು ಒದಗಿಸಿಕೊಡುತ್ತದೆ. ಈ ಶಾಸನ ಭಾಷೆಯು ಕನ್ನಡದ ವೀರಗತ್ತು, ಆವರಣವನ್ನೂ ತುಂಬಿಕೊಟ್ಟಿದೆ.

ಕ್ರಿ.ಶ. ೧೨೯೬ರ ಮುಳ್ಳೂರು ಶಾಸನವು[೭] 'ಬೊಪ್ಪಗೌಡಿಯ ಮಲ್ಲೆಯ' ಮುಳ್ಳೂರು ಕೋಟೆಯಲ್ಲಿ ಹೋರಾಡಿ ವೀರಸ್ವರ್ಗವೇರಿದ ಅವನಿಗೆ 'ವೀರಸೇಸೆ'ಯಾಗಿ ಕೊಟ್ಟ ದಾನದ ವಿವರಗಳನ್ನು ಹೇಳಿದೆ. ಇಲ್ಲಿ 'ವೀರಸೇಸೆ' ಎಂಬ ಶಬ್ದ ಕೊಡಗಿನ ಸಾಂಸ್ಕೃತಿ ಆಚರಣೆಯೊಂದಿಗೆ ಮೇಳೈಸಿಕೊಂಡ ಶಬ್ದವಾಗಿದೆ. ಈ ವೀರ ಅವಿವಾಹಿತ.

ಊರಿಗಾಗಿ ಕಾಯ್ದು ಕೀರ್ತಿ ತಂದವ. ಅಂತಾಗಿ ಕೊಡಗಿನ ಪದ್ಧತಿಯಂತೆ ಮದುವಣಿಗನ ವಸ್ತ್ರಗಳನ್ನು ಉಡಿಸಿ ಪೀಳ್ಯವನ್ನಿಟ್ಟು ಸೇಸೆ ಹಾಕುವ ಆಚರಣೆ ಅದಾಗಿದೆ. ಅದು ಬರೀ ವೀರ ಸನ್ಮಾನವಲ್ಲ. ಮಲೆಯಾಳದ ನಾಯಕ ಕರ್ಣೇಬಾಹುವಿನ ವಿರುದ್ಧ ಹೋರಾಡಿ ಜಯತಂದು ವೀರಮರಣವಪ್ಪಿದ ಕೊಡಗಿನ ಕಲ್ಯಾಣಜ್ಜಪ್ಪನಿಗೆ ವೀರಸೇಸೆ ಹಾಕಿ ಸಮಾಧಿ ಕೈಮಡ (ಕೈಮಠ) ನಿರ್ಮಿಸಲಾಗಿದೆ. ವೀರಸೇಸೆ ಕೊಡಗಿನಲ್ಲಿ ವಿಶಿಷ್ಟ ವೀರ ಸಾಂಸ್ಕೃತಿಕ ಪದ್ಧತಿ.

ಅದೇ ಮಂಡ್ಯ ಜಿಲ್ಲೆ ಕೆ.ಆರ್. ಪೇಟೆ ತಾಲ್ಲೂಕಿನ ಗೋವಿಂದನಹಳ್ಳಿಯ ಕ್ರಿಶ್.೧೨೩೬ರ ಶಾಸನದಲ್ಲಿ[೮] 'ವೀರಸೇಸೆ ಗದ್ಯಾಣ ನಾಲ್ಕು' ಎಂದು 'ತೆರಿಗೆ'ಯ ಸ್ವರೂಪವಾಗಿ ಹೇಳಿದೆ. ಅಂತಾಗಿ ಕೊಡಗಿನದು ಹೆಚ್ಚು ಸಾಂಸ್ಕೃತಿಕ ಅರ್ಥ ಸಂಚಲನವನ್ನು ನೀಡುತ್ತದೆ.

೧೦ನೇ ಶತಮಾನದ ಸೋಮವಾರಪೇಟೆ ತಾ ಹಾರೋಹಳ್ಳಿ ಶಾಸನದಲ್ಲಿ[೯], 'ತೆಯಲಯ್ಯ ಜೂಬು ಕಾಲಂಕಟ್ಟು' ಎಂಬ ಪದವಿದೆ. ನಿಘಂಟು, ಒಬ್ಬಾತನ ಹೆಸರು ಎಂದು ಈ ಶಾಸನದ ಪ್ರಯೋಗ ಲಕ್ಷ್ಯವನ್ನು ನೀಡಿದೆ. ಕೊಡಗಿನಲ್ಲಿ 'ತೆಯ ಹೊಡೆಯುವುದು' ಎಂದರೆ ಕೆಸರುಗದ್ದೆಯಲ್ಲಿ ಮರದ ಮಣೆಯನ್ನು ದನಗಳಿಗೆ ನೇಗಿಲಿನಂತೆ ಕಟ್ಟಿ ಸಮಹದವಾಗಿ ಮಣ್ಣನ್ನು ಹರಡುವುದಾಗಿದೆ. ಆ 'ತೆಯ' ಹೊಡೆಯುವವನು ತೆಯಲಯ್ಯ. ತೆಯಲಯ್ಯ ಜೂಬು ಅಂಥ ಒಬ್ಬ ವ್ಯಕ್ತಿ. ಆ ಕೆಸರುಗದ್ದೆ ಕಾಯಕ ಮಾಡುವವರು ಸಾಮಾನ್ಯವಾಗಿ ದಲಿತವರ್ಗದ ಕೆಂಬಟ್ಟಿಗಳು. ಮಲೆಕುಡಿಗಳು. 'ಜೂಬು' ಎಂಬ ಹೆಸರೂ ಆ ವರ್ಗದವರಲ್ಲಿಯೇ ಸಾಮಾನ್ಯವಾಗಿ ಕಾಣಬರುತ್ತದೆ. ಅವನು 'ಕಾಲಂಕಟ್ಟು ಎಱೆಯರಸಂಗೆ ಬಿಟ್ಟ ಗ್ರಹಾರ' ಎಂದಿರುವಲ್ಲಿ ಆ ವರ್ಗದಿಂದ ಬಂದ ನಾಯಕನಾಗಿ ಅಗ್ರಹಾರವೊಂದನ್ನು ನೇರ್ಪುಗೊಳಿಸಿದ ಎಂಬ ಅರ್ಥವನ್ನು ಗ್ರಹಿಸಬೇಕಾಗುತ್ತದೆ. ಅಂತಾಗಿ ಬ್ರಾಹ್ಮಣವರ್ಗದ ಅಸ್ತಿತ್ವ ಹಾಗೂ ೧೬ನೇ ಶತಮಾನದಲ್ಲಿಯೂ ಕೊಡಗಿನಲ್ಲಿ ಕಂಡು ಬರುವ ಆಳುವ ದಲಿತ ನಾಯಕರಂತೆ, ಆ ಮುನ್ನಡೆ ೧೦ನೇ ಶತಮಾನದಲ್ಲಿಯೇ ಇದ್ದರು ಎಂಬ ಸೂಚನೆಯೂ ಇಲ್ಲಿ ಸಂಚಲಿತವಾಗುತ್ತದೆ.

ಕ್ರಿ.ಶ. ೮೮೮ರ ಬಿಳಿಯೂರು ಶಾಸನದಲ್ಲಿ[೯] 'ಪೆಣ್ಣೆಗಡಜ್ಜಾಗದ ಸತ್ಯವಾಕ್ಯ ಜಿನಾಲಯಕ್ಕೆ ಪೆದ್ದೊಱೆಗರೆಯ', 'ಮಯ್ದಾರಿಗರುಂ ಇದಕ್ಕೆ ಕಾಪು' ಎಂಬ ಸಾಲುಗಳಿವೆ. ಕೊಡಗಿನಲ್ಲಿ 'ಕಡಂಗ' ಎಂದರೆ ಕೋಟೆಯಂಥ ಮಣ್ಣುದಿಬ್ಬದ ಬುಡದಲ್ಲಿ ಓಣಿಯಂಥ ರಚನೆಯದಾಗಿರುತ್ತದೆ. ಅದು ರಕ್ಷಣಾತ್ಮಕ ಗುಡ್ಡೋಣಿಯಂತಿದೆ. ಕಾಡು ಪ್ರದೇಶದ ಮನೆಗಳಿಗೂ ರಕ್ಷಣಾತ್ಮಕವಾಗಿ ಅಂಥ ಸಣ್ಣ ಕಡಂಗ (ಪೊಟ್ಟ್‌ಕಡಂಗ)ಗಳು ಇರುತ್ತಿದ್ದುವು. ಇದು ಪ್ರಾಚೀನದಿಂದಲೂ ಇದ್ದುದಕ್ಕೆ ಈ ಶಾಸನ ಸಾಕ್ಷಿಯಾಗಿದೆ. ಹಾಲೇರಿ ಅರಸರ ಕಾಲದಲ್ಲಿ ಈ ಕಡಂಗಗಳು ಹೆಚ್ಚು ವ್ಯವಸ್ಥಾಬದ್ಧವಾದುವು. ಇಲ್ಲಿ ವಿಶಾಲವಾದ ಕೃಷಿ ಭೂಮಿಗೆ 'ಪೆಣ್ಣೆ' (ಪನ್ಯ ಜಮೀನು– ಇಂದಿನ ರೂಪ) ಎಂಬ ಹೆಸರಿದೆ. ಅಂತಾಗಿ ಜಿನಾಲಯಕ್ಕೆ ಕಡಂಗದ ರಕ್ಷಣೆಯಿದ್ದ ವಿಶಾಲವಾದ ಪನ್ಯ ಜಮೀನುಗಿದ್ದುವು ಎಂಬ ಅರ್ಥ ಇಲ್ಲಿ ಕಾಣುತ್ತದೆ. 'ಪೆದ್ದೊಱೆ' ಎಂಬುದು ಅಲ್ಲಿ ಹರಿಯುವ ಲಕ್ಷ್ಮಣತೀರ್ಥಕ್ಕಿದ್ದ ಜನರೂಢಿಯ ಹೆಸರಾಗಿದೆ. ಅದರ ದಂಡೆಗೆ ಸಹಜವಾಗಿ ಜಮೀನುಳ್ಳ ಜಿನಾಲಯದ ಚಿತ್ರ ನಮಗೆ ಇಲ್ಲಿ ಸಿಗುತ್ತದೆ. ಇದರ ರಕ್ಷಣೆಗೆ 'ಮಯ್ದಾಮರಿಗರು' ಎಂದರೆ ಐದು ದಾಮದಿಗರು' ಇದ್ದರು ಎಂದು ಆಂಗ್ಲಾನುವಾದದಲ್ಲಿ ರೈಸ್ ಹೇಳಿದ್ದಾರೆ. ಕ.ಕ. ನಿಘಂಟು, 'ದಾಮರಿಗರು' ಎಂಬುದಕ್ಕೆ 'ಯೋಧ', 'ಭಟ' ಎಂಬ ಅರ್ಥವನ್ನು ಪ್ರಯೋಗ ಲಕ್ಷ್ಯದೊಡನೆ ನೀಡಿದೆ. ಅದು ಸೂಕ್ತವಿದೆ.

ಆದರೆ ಮಯ್(!), ದಾಮರಿಗ, ಎಂದು ರೂಪಿಸಿಕೊಳ್ಳುವುದಾದರೆ, ಜಿನಾಲಯದಲ್ಲಿದ್ದ ಜೈನಯತಿ ಸರ್ವಣನ್ದಿ ದೇವರ ಅಂಗರಕ್ಷಕ (!) ಭಟರೂ ಆಗಿರಬಹುದೇ? ಎಂದೂ ಗಮನಿಸಬೇಕಾಗುತ್ತದೆ. ಇದೇ ಶಾಸನದಲ್ಲಿ 'ಎಣ್ಣು ನೂರು ಬತ್ತಮುಂ ತೆಱುವೊಂ' ಎಂಬ ಪದವಿದೆ. ಈಗ ನೂರು ಭಟ್ಟಿ ಭೂಮಿ ಎಂದರೆ ಮೂರುವರೆ ಎಕರೆಗೆ ಸಮನಾದ ಭೂಮಿ, ಈ ಭಟ್ಟಿ ಪರಿಮಾಣವಾಚಕ ಶಬ್ದಕ್ಕೆ ಆಗ ಬಳಸುತ್ತಿದ್ದ ರೂಪವಾಗಿ 'ಎಣ್ಣುನೂರು ಬತ್ತಮುಂ' ಕಂಡು ಬರುತ್ತದೆ. 'ಪೆಣ್ಣೆಗಡಜ್ಜ' ಎಂಬುದು ಇಲ್ಲಿ ಒಂದು ಸ್ಥಳನಾಮವೂ ಆಗಿದೆ.

ಕ್ರಿ.ಶ. ೯ನೇ ಶತಮಾನದ ಕೋತೂರು ಶಾಸನದಲ್ಲಿ[೧೦], ಜಡಲ ಎಱೆಯಂಗ ಗಾವುಣ್ಡನ ಮಗಂಗೆ ಪೆರ್ಮ್ಮಡಿವಟ್ಟಂಗಟ್ಟಿ', 'ಬೆಟ್ಟೆಯ ಭತ್ತದೊಳ್ ನೂರು ಭತ್ತಮುಮಂ' ಕಲ್ನಾಡು ಹಾಕಿಕೊಟ್ಟ ವಿಷಯವಿದೆ. ಇಲ್ಲಿ 'ಜಡಲ್ ಎಱೆಯಂಗ' ಎಂಬುದು ಕೊಡಗಿನ ಮನೆಪೆದ (ಮನೆತನದ ಹೆಸರು) ಪದ್ಧತಿಗೆ ೯ನೇ ಶತಮಾನದ ಪ್ರಾಚೀನತೆ ತೋರಿಕೊಡುತ್ತದೆ. ಅದೊಂದು ಸ್ಥಳನಾಮವಾಗಿಯೂ ಮನೆಪೆದಕ್ಕೆ ಇಂಬು ಕೊಟ್ಟಿರಬಹುದು. ಕ್ರಿ.ಶ. ೮೯೦ರ ಬೇಗೂರು ಶಾಸನದಲ್ಲಿ ಇರುಗನಿಗೆ ನಾಗತ್ತರ ಪಟ್ಟಿ ಕಟ್ಟುವ ಅಧಿಕೃತ ವೀರಗೌರವಾಚಾರದಂತೆ ಈ ಕೋತೂರು ಶಾಸನದ ಪೆರ್ಮಡಿಪಟ್ಟ ಅಂದರೆ ಹಿರಿಮುಡಿ ಧರಿಸುವ ಅಧಿಕಾರ ಪಟ್ಟ(!)ವನ್ನು ಕಟ್ಟುವ ಸಾಂಸ್ಕೃತಿಕ ಆಚಾರ ಇಲ್ಲಿನ ವೀರರಿಗಿತ್ತು ಎಂಬ ಅರ್ಥ ಸೂಚನೆ ಕಾಣುತ್ತದೆ. ಕೊಡಗಿನ ವಿದೇಶ ಕಟ್ಟ್‌ಪಾಟ್‌ನಲ್ಲಿ (ಉತ್ತರ ಕೊಡಗು) 'ಪಾಜೊಳಿಯ ಮೇಂದಲೆ' ಅಂದರೆ ಬಿಳಿಭತ್ತ ಬೆಳೆಯುವ ಮೇಂಡಲೆ ನಾಡು, ಎಂಬ ನಾಣ್ಣುಡಿ ಅರ್ಥವಿದೆ. ದಕ್ಷಿಣ ಕೊಡಗಿನ ಕಿಗ್ಗಟ್ಟುನಾಡು ಕೆಂಪುಭತ್ತಕ್ಕೆ ಪ್ರಸಿದ್ಧಿ. ಕೋತೂರು ಕಿಗ್ಗಟ್ಟುನಾಡಿನ ನೆಲೆ ಅಲ್ಲಿಯೂ ಕೂಡ ಬಿಳಿಭತ್ತ ಬೆಳೆಯುತ್ತಿದ್ದರು ಎಂಬುದಾಗುತ್ತದೆ. ಅಥವಾ ಕಲ್ನಾಡಾಗಿ ಮೇಂದಲೆ ನಾಡಿನಲ್ಲಿ ಜಮೀನು ನೀಡಿರುವ ಸಾಧ್ಯತೆಯನ್ನು ಗಮನಿಸಬಹುದು. ಇನ್ನು ಮಕ್ಕಂದೂರು ಭದ್ರಕಾಳಿ ಗುಡಿ

ಬಳಿ ವಾರ್ಷಿಕ ಹಬ್ಬದಲ್ಲಿ ಬಳಸುವ ೧೮ ಮೊಳ ಉದ್ದದ ಶಿರದ ಮುಡಿಗೆಯ ಪೆರ್ಮುಡಿ ವಟ್ಟ! ಪೂರ್ವ ಪ್ರೇರಣಾ ಜನಪದ ಆಚಾರದಂತಿದೆ.

ಪೆಗ್ಗುರಿನ ಕ್ರಿ.ಶ. ೯೭೮ರ ಶಾಸನದಲ್ಲಿ[೧೧], "ಪೆಗ್ಗೂರಿನ ಬಸದಿಯ ನಿರ್ವಹಣೆಗೆ ಜೈನಯತಿ ಅನಂತವೀರ್ಯರಿಗೆ ಪೆಗ್ಗಡೂರು, ಪೊನಬಾಡಗ ಗ್ರಾಮಗಳನ್ನು ದಾನ ನೀಡಿದ ಸಂದರ್ಭ. ಈ ಸಂದರ್ಭದಲ್ಲಿ ಕಾವರ್ನ್ನಾರ್ಲ್ವರ್ಮಲೆಪರು... ಮಯ್ಯಾಮರಿಗರುಂ ಶ್ರೀ ಪುರುಷ ಮಹಾರಾಜರ ದತ್ತಿ, ಎಂದೂ ಹೇಳಿರುವಲ್ಲಿ, ಗಂಗ ಶ್ರೀ ಪುರುಷನ ಕಾಲದಲ್ಲಿ ನೀಡಿದ ದತ್ತಿಯನ ರಕ್ಷಿಸಬೇಕಾದವರ ಬಗ್ಗೆ ತಿಳಿಸಿದೆ. ಗಂಗಶ್ರೀ ಪುರುಷನ ೮ನೇ ಶತಮಾನದ ಆಡಳಿತಕ್ಕೆ ಈ ಪ್ರದೇಶ ಸೇರಿದ್ದ ಸೂಚನೆಯನ್ನು ಅದು ಕೊಡುತ್ತದೆ.

೧೯೯೮ರ ಸುಮಾರಿನಲ್ಲಿ ಹೈನೊಡ್ಲೂರಿನಲ್ಲಿ ನಾನು ಕಂಡುಹಿಡಿದ, ಶ್ರೀ ಪುರುಷನಿಗೂ ಮುನ್ನಿನ ೮ನೇ ಶತಮಾನದ ಕೊಡಗಿನ ಮೊದಲ ಕನ್ನಡ ಶಿಲಾಶಾಸನದ ಅಪೂರ್ಣ ತುಂಡು ಶಾಸನದಲ್ಲಿ 'ಪುದುಕ್ಕೆರಿ' ಎಂಬ ಸ್ಥಳನಾಮವನ್ನು ಸೂಚಿಸಿದೆ. 'ಪುದು' ಎಂದರೆ ಕೂಡಿಸು ಎಂದರ್ಥ. ಅಂದರೆ 'ಪುದುಕ್ಕೇರಿ' (ಇಂದಿನ ಹುಡಿಕೇರಿ) ಯ ಗ್ರಾಮಗಳನ್ನು ಕೂಡಿಸುವ ಪ್ರದೇಶವಾಗಿದ್ದಿರಬೇಕು. ಶಾಸನದಲ್ಲಿ 'ಧರ್ಮ'ವನ್ನು 'ಅಜಿತ್ತಡೆ' ಎಂಬ ಶಬ್ದಗಳಿರುವಲ್ಲಿ ಗ್ರಾಮಗಳಾದ ಹೈಸೊಡ್ಲೂರು-ಪುದುಕ್ಕೇರಿಗಳ ನಡುವೆ ಇದ್ದ ಜಿನ ಬಸದಿಯ ಗುರುವಿಗೆ ದಾನಕೊಟ್ಟ ಸೂಚನೆ ಕಾಣುತ್ತದೆ. ಜೈನಧರ್ಮದ ಪ್ರಭಾವ ಹರಡಿದ್ದುದರ ಸೂಚನೆಯೂ ಇಲ್ಲಿ ಕಾಣುತ್ತದೆ.

೧೧ನೇ ಶತಮಾನದ (ಕ್ರಿ.ಶ. ಸು.೧೦೦೪) ಮೂಲಂಬಿ ಶಾಸನದಲ್ಲಿ[೧೨] 'ಕವೇರ ಕನ್ಯಕಾ ಸಖೀಯಮಾನ ಚೋವಿ ಮಹಾಮಹೀಪತಿ ಶ್ರೀ ರಾಜಕೇಸರಿವರ್ಮ್ಮ ಸರ್ಮ್ಮನಡಿಗ್ಳ್‌ಮನಿಜಂಗೆ, ಪಞ್ಚವನ್ ಮಾರಾಯ... ಕ್ಷತ್ರಿಯ ಸಿಖಾಮಣಿ ಕೊಂಗಾಶ್ವನೆನ್ದು ಪಟ್ಟವಂಕಟ್ಟಿ ಮಾಲವ್ವಿಯ ನಿತ್ತದಿದಕ್ಕೆ ಗಾವುಣ್ಡ ರಾಚಮ್ಮನ ವಂಶಮೆ ಸಾಕ್ಷಿ...' ಇತ್ಯಾದಿ ಸಾಲುಗಳಿವೆ.

ಇವುಗಳಿಂದ 'ಕವೇರ ಕನ್ಯೆ' ಕಾವೇರಿ, ರಾಜರಾಜ ಚೋಳ ಅವನ ಮಗ ಪಂಚರ್ವ ಮಹಾರಾಯನೆನಿಸಿದ ರಾಜೇಂದ್ರ ಚೋಳರ ಪ್ರಸ್ತಾಪ ಕಾಣುತ್ತದೆ. ಅಲ್ಲಿ 'ಮನಿಸ್ತಾ' ವೀರನನ್ನು ಕ್ಷತ್ರಿಯ ಶಿಖಾಮಣಿ ಕೊಂಗಾಳ್ವವೆಂದು ಮೂಲವ್ವಿಯಲ್ಲಿ ಪಟ್ಟ ಕಟ್ಟಿದುದು, ಕೊಡಗಿನಲ್ಲಿ ಕೊಂಗಾಳ್ವರ ಆಳ್ವಿಕೆಗೆ ಹಾಕಿದ ಅಸ್ತಿಭಾರವಾಗಿ ಕಾಣುತ್ತದೆ. 'ಮಾಲವ್ವಿಯೆ' ಇಂದಿನ ಮಾಲಂಬಿ, ಹಾಗೂ ಮನಿಜನಿಗೆ ಪಟ್ಟವಾದ ಗುಡ್ಡದ ನೆಲೆ (ಮುದುಕಿ ಗುಡ್ಡ) ಇಂದಿಗೂ ಅವಶೇಷಗಳನ್ನು ಹೊತ್ತು ನಿಂತಿವೆ. ಈ ಪಂಚವನ್ ಮಹಾರಾಯನೇ ನಂಜರಾಯ ಪಟ್ಟಣದ ಕಾವೇರಿ ದಕ್ಷಿಣ ದಂಡೆಯಲ್ಲಿ ಚೋಳ ಪ್ರತಿಷ್ಠಾ ವೀರಭದ್ರಗುಡಿ ಕಟ್ಟಿದ. ಇಂದು ಅದರ ಅವಶೇಷವೂ ಕಾಣುವುದಿಲ್ಲ. ಆದರೆ ಅವನ ಹೆಸರಿನಲ್ಲಿ ದಂಡೆಯಿಂದ ೨ ಕಿ.ಮೀ. ದೂರದಲ್ಲಿ ಕಾಡಿನಲ್ಲಿ (ದುಬಾರೆ ಕಾಡು) ಕಟ್ಟಿದ ಪಂಚಲಿಂಗೇಶ್ವರ ಗುಡಿಯ ಅವಶೇಷಗಳು ಇಂದಿಗೂ ಉಳಿದಿವೆ.

ನಾನು ಸೋಮವಾರ ಪೇಟೆ ತಾ. ಬೇಳೂರು - ಗುಡಗೂರು ಜಗಟನ ಹಳ್ಳಿಯಲ್ಲಿ ೧೯೮೪ರ ಸುಮಾರಿನಲ್ಲಿ ಕಂಡು ಹಿಡಿದ ಕ್ರಿ.ಶ. ಸು. ೯೧೧ರ ಕೊಡಗಿನ ಪ್ರಥಮ ಅಗ್ನಿಪ್ರವೇಶದ ವೇಳವಾಳಿ ಶಾಸನದ ಶಿಲ್ಪ ಕೊಡಗಿನ ಸಾಂಸ್ಕೃತಿಕ ಆಚಾರಗಳ ಪ್ರಾಚೀನ ಸಾಕ್ಷಿಯೆಂಬಂತಿದೆ. ಆ ಶಾಸನದಲ್ಲಿ ಗಂಗರ ಎರೆಯಮ್ಮ ಪ್ರಸ್ತಾಪಗೊಂಡಿದ್ದಾನೆ; 'ಯಳೆಘರೆ' ಎಂಬ ಸ್ಥಳನಾಮವಿದ್ದು ಇಂದಿನ 'ಲುಲ್‌ಗುಲಿ' ಎನಿಸಿದೆ. ಶಿಲ್ಪದಲ್ಲಿ ವೇಳವಾಳಿಯು (ಮೇಲೇರಿಕೊಂಡಕ್ಕೆ) ಅಗ್ನಿಪ್ರವೇಶ ಮಾಡುವ ಚಿತ್ರವಿದೆ. ಇಲ್ಲಿ ತೋರಿರುವ ಅಗ್ನಿಕೊಂಡದ ಸ್ವರೂಪ ನೇರ ನಿಲ್ಲಿಸಿದ ಹುತ್ತದಂಥ ಆಕಾರ ಕೊಡಗಿನಲ್ಲಿ ಇಂದಿಗೂ ಪ್ರಚಲಿತವಿರುವ 'ಚಾವುಂಡಿ ಮೇಲೇರಿ' ಕೊಂಡದ ಪ್ರಾಚೀನ ಸಂಕೇತವಾಗಿ ಕಾಣುತ್ತದೆ.

ಕೊಡಗಿಗೆ ಒಂದು ಕಾಲಕ್ಕೆ ಸೇರಿದ್ದುದು ಕೇರಳದ ವೈನಾಡು. ಈ ವೈನಾಡಿನ ಎಡಕಲ್ಲು ಗುಡ್ಡದ ಗುಹೆಯ ಬಂಡೆಯ ಭಿತ್ತಿಯ ಮೇಲೆ ಸಂಸ್ಕೃತಶಾಸನವಿದೆ. ಡಾ.ಹುಲ್ಷ್ ಅವರು ಈ ಶಾಸನವನ್ನು 'ಶ್ರೀ ವಿಷ್ಣುವರ್ಮ ಕುಟುಮ್ಬಿಯ ಕುಲವರ್ಧಸ್ಸ ಲಿರಿತ' ಎಂದು ಓದಿದ್ದಾರೆ. ಕೇರಳದ ಕ್ರಿ.ಶ. ೩-೫ನೇ ಶತಮಾನದ ಪ್ರಾಚೀನ ತಮ ಶಾಸನವಿದೆನ್ನಲಾಗಿದೆ. ಕೊಡಗಿನ ಉರ್ಪು ರಾಮೇಶ್ವರ ದೇಗುಲದ ಬಳಿಯ ಲಕ್ಷ್ಮಣತೀರ್ಥದ ಜಲಪಾತದ ಮೇಲಿನ ಹಾದಿಯಿಂದ ಸಾಗಿದರೆ ಕೊಡಗು - ಕೇರಳದ ನಡುವೆ ೪-೫ ಮೈಲಿ ಮಧ್ಯದಲ್ಲಿ ಕಾನುವ ಎಡಕಲ್ ಗುಡ್ಡವನ್ನು ಕೊಡಗಿನವರು ಬ್ರಹ್ಮಗಿರಿಶ್ರೇಣಿಯ 'ಮುನಿಕಲ್ ಬೆಟ್ಟ' ಎಂದು ಕರೆಯುತ್ತಾರೆ. ಮೇಲ್ಯೂಚಿತ ಶಾಸಸೋಕ್ತ ವಿಷ್ಣುವರ್ಮ ಕದಂಬರ ವಿಷ್ಣುವರ್ಮನೆಂದು ಅಭಿಪ್ರಾಯ ಪಡಲಾಗಿದೆ. ಅಂದರೆ ಮೊದಲ ಕನ್ನಡರಾಜವೇಶವಾದ ಕದಂಬರ ಆಳ್ವಿಕೆಯು ಕೊಡಗಿನ ಪ್ರದೇಶದಲ್ಲಿ ನಡೆದಿದ್ದ ಬಗ್ಗೆ ಸೂಚನೆಯಾಗುತ್ತದೆ. ಹೀಗಾಗಿ ಈ ಶಾಸನದ ಪಾಠವನ್ನು ಮರುಪರಿಶೀಲಿಸಿ ಓದಬಹುದಾದರೆ, ಅದು 'ಶ್ರೀ ವಿಷ್ಣುವರ್ಮಕದಮ್ಬಯಾ ಕುಲವರ್ಧಸ್ಸ ಲಿಖಿತ' ಎಂದಾಗುತ್ತದೆ. ಆಗ ಅದು ಸ್ಪಷ್ಟವಾಗಿ ಕದಂಬರ ಈ ಪ್ರದೇಶದ ಆಳ್ವಿಕೆಯ ಸ್ಪಷ್ಟ ಕುರುಹನ್ನು ತಿಳಿಸಿದಂತಾಗುತ್ತದೆ.

ಕ್ರಿ.ಶ. ೧೧೭೮ರ ಪಿರಿಯಾಪಟ್ಟಣ ತಾ. ಕೆಂಪಲಾಪುರ ಕರಕಂಠೇಶ್ವರ ದೇಗುಲದ ಶಾಸನದಲ್ಲಿ 'ಶ್ರೀ ಮನು ಮಹಾಮಂಡಳೇಸ್ವರಂ ಚಂಗಾಳ್ವಪೆಂಮವೀರರ್ಯನೂ ಬಾಳಗಡ್ ನಂದಿದೇವ ಕುಜುಂಚೆಯರು ಡೆಯಾದಿತ್ಯದೇವ

ಮುಂತ್ತಾದ ಎಲ್ಲ ನಾಡ ಕೊಡಗರು ಕೂಡಿ ಪಾಲ್ಪರೆಗೆ ನಡೆದು ಬಂದು ಬೆಟ್ಟರ್ಸ ದಂಣಂಯಕರ ಕೂಡೆ.. ಕಾಡಿ.. ಸಂಗ್ರಾಮವಾದ ರಣದಲ್ಲಿ... ಮಾಂಡಳಿಕೆ ಗಂಡರಗೋವ ವೀರಘಂತೆ ಕೋಟೆಯ ಕುಪ್ಪೆಯ ಮಾದೆಯನಾಯ್ಕ.. ಬೀರ ಜಯ್‌ಶ್ರೀಯನೆಯ್ದಿ ದೇವಲೋಕವ ಪ್ರಾಪ್ತನಾಗಿ.. ಆ ಮಾದೆಯನಾಯ್ಕನ ಮಕ್ಕಳು.. ಮಲ್ಲಪ್ಪನೊಳಗಾದವರಿಗೆ ಪಾಲ್ಪರೆಯ ಮ..ಯನೂಬೆಟ್ಟರ್ಸ ದಂಣಾಯ್ಕರು.. ನೆತ್ತರು ಕೊಡಗಿಯಾಗಿ ಮಹಾಶ್ರೀ' ಎಂದಿದೆ.[೧೩]

ಈ ಶಾಸನದ ರೀತ್ಯಾ ಕೊಡಗಿನ ಪಾಲ್ಪರೆಯಲ್ಲಿದ್ದ ಚೆಂಗಾಳ್ವ ಕ್ಷೇಂಮವೀರಪ್ಪ ಬಾಡಗದ ನಂದಿದೇಪ, ಕುರ್ಚಿಯಲುದಾಯಾದಿತ್ಯ ಮತ್ತು ಕೊಡವಧು, ಗೌಡ ಇತ್ಯಾದಿ ಎಲ್ಲ ಜನಾಂಗಗಳ ವೀರಭಟರನ್ನೂ ಒಳಗೊಂಡಂತೆ 'ಎಲ್ಲಾ ನಾಡ ಕೊಡಗ'ರೆನಿಸಿ ಹೊಯ್ಸಳದಂಡನಾಯಕ ಬೆಟ್ಟರಸನೆದುರು ಯುದ್ಧ ಮಾಡಿದ ಸಂಗತಿ ಇದೆ. ಅಲ್ಲದೆ ಕೊಡಗಿನಾಚೆಯ ರೋಟಿಕಪ್ಪೆಯ ಮಾದೆಯನಾಯ್ಕ ಹೊಯ್ಸಳರ ಪರ ಯುದ್ಧ ಮಾಡಿ ಜಯ ತಂದುಕೊಟ್ಟು ವೀರಸ್ವರ್ಗವೇರಿದ ಅವನ ಮಕಾಳಿಗೆ ಬೆಟ್ಟರನ ದಂಡನಾಯಕ ನೆತ್ತರು ಕೊಡಿಗಿಯಾಗಿ ಪಾಲ್ಪರೆಯ ಬಳಿಯ ಬಹುಶಃ ಮಾಯಮುಡಿ(!) ಗ್ರಾಮವನ್ನು ನೀಡಿದಂತಿದೆ. ಯುದ್ಧ ನಡೆದದ್ದು ಪಾಲ್ಪರೆಯಲ್ಲಿ, ಶಾಸನವಿರುವುದು ಕಂಪಲಾಪುರದಲ್ಲಿ, ಹೀಗಾಗಿ ಮೂಟೆಯನಾಯ್ಕ ಕೊಡಗಿನ ಚೆಂಗಾಳ್ವರ ಪೈಕಿಯವನಲ್ಲದೆ ಕಂಪಲಾಪುರದ ಕಡೆಯನೆಂಬಂತೆ ತೋರುತ್ತದೆ.

ಶಾಸನಗಳ ಪೈಕಿ ಮೊದಲಬಾರಿಗೆ ಎಲ್ಲಾ ನಾಡ ಕೊಡಗರು' ಎಂಬ ಶಬ್ದ ಶಾಸನೋಕ್ತವಾಗಿರುವುದು ಗಮನಾರ್ಹ. ಮಂಗರಸನ ನಿಘಂಟಿನಲ್ಲಿ 'ಮ್ಲೇಚ್ಛರೆನೆ ಕೊಡವ ಕೊಡಗರು; ಎಂದು ಪ್ರತ್ಯೇಕ ಬಿಡಿಸಿ ಹೇಳಿರುವುದಿದೆ. ಹೀಗಾಗಿ ಕೊಡಗರು ಎನ್ನುವಲ್ಲಿ ಕೊಡವರಾದಿಯಾಗಿ ಕೊಡಗಿನವರೇ ಆದ ಉಳಿದ ಎಲ್ಲ ಜನಾಂಗಗಳಿಗೂ ಅನ್ವಯವಾಗುವ ಶಬ್ದವೆನಿಸುತ್ತದೆ. ಗಂಗರ ಕಾಲದಿಂದಲೂ ಕೊಡಗಿನಲ್ಲಿ ಜೈನ, ಗೌಡ, ಕದಂಬರ ಕಾಲದಿಂದ ಬ್ರಾಹ್ಮಣ, ದಲಿತ ಕೆಂಟಟ್ಟಿ, ಬುಡಕಟ್ಟು ಜನಾಂಗಗಳು, ಹಾನುಗಲ್ಲು ಕದಂಬರ ಕಾಲದಿಂದ ವೀರಶೈವ, ಪೆಗ್ಗಡೆ (ಹೆಗ್ಗಡೆ) ಜನಾಂಗಗಳು ಅಲ್ಲಿ ಅಸ್ತಿತ್ವಗೊಂಡಿರುವುದು ಶಾಸನಗಳಿಂದಲೂ ಸೂಚಿತವಾಗುತ್ತದೆ. ಇದಕ್ಕೆ ಪೋಷಕವಾಗಿ ಕ್ರಿ.ಶ. ೧೭೬೦-೬೦ರ ಸಮಯದಲ್ಲಿ ಹಾವೇರಿ ಅರಸ ಚಿಕ್ಕವೀರಪ್ಪನು ಶೃಂಗೇರಿ ಮಠಕ್ಕೆ ಅರಕಲಗೂಡು ಸನಿಹದ 'ಕೊಡಲಿ ಮಂದೆ'ಯ ವಿಂಗಡನೆ ಮಾಡಿ ಕೊಡುವಲ್ಲಿ ಅರ್ಧಭಾಗ ಮೈಸೂರು ಸೀಮೆಗೆ, 'ಕೊಡಗರ ಹವಾಲಿಗೆ' ಸೇರಿದ ಅರ್ಧಭಾಗವನ್ನು ಮಠಕ್ಕೆ ಕೊಟ್ಟಿರುವ ನಿರೂಪವಿದೆ.[೧೪] ಅಂದರೆ ಕೊಡಗು ದೇಶವಾಚಿಯಾಗಿ, 'ಕೊಡಗರು' 'ಕೊಡಗಿನವರು' ಎಂದು ಬಳಕೆಗೊಂಡ ಅರ್ಥ ಸಂಚಲನ ಇಲ್ಲಿ ಕಾಣುತ್ತದೆ. ಹೀಗಾಗಿ ಕೆಂಪ್ಲಾಪುರ ಶಾಸನವು ಕೊಡಗಿನ ಜನಾಂಗಗಳ ದೇಶವಾಚಿ ಸಂಯುಕ್ತತೆಯನ್ನು ಗುರುತಿಸುವ ಮುಖ್ಯ ಮೊದಲ ದಾಖಲೆಯಾಗಿದೆ. ಇನ್ನು ಶಾಸನದಲ್ಲಿ ಬರುವ 'ಗಂಡರ ಗೋವ' ಶಬ್ದವು ಮಾದೆಯ ನಾಯಕನ ಮುಖ್ಯಸ್ಥವಂತಿಕೆಯಿಂದ ಶತ್ರುಗಳೆದುರು ಹೋರಾಡುವ ಗುಣವನ್ನು ಸೂಚಿಸುವಂತಿದೆ. 'ವೀರಘಂಟೆ' ಎಂಬ ಅವನಿಗಿರುವ ವಿಶೇಷಣವು ಅವನೊಬ್ಬ ವೀರ ಭದ್ರ ಭಕ್ತರಾದ ವೀರಗಾಸಿಗಳ ವರ್ಗದಿಂದ ಬಂದ ವೀರ ಎಂಬ ಸೂಚನೆಯನ್ನು ಸಂಚಲಿಸಿದಂತಿದೆ. ಹೀಗೆಯೇ ಶುದ್ಧ ಶೈವಾರ್ಚಕರಾದ 'ತಮ್ಮಡಿ'ಗಳ ಪೈಕಿಯಿಂದಲೂ ವೀರರಿದ್ದುದೂ ಶಾಸನೋಕ್ತವಿದೆ. ಕ್ರಿ.ಶ.೧೧೩೧ರ ಮೂಡಲಹಿಪ್ಪೆ ಶಾಸನವು ವೀರದುದ್ದು ಕೊಂಗಾಳ್ವದೇವನ ಬೆಸದಿಂದ 'ಹರಷದಯುಗ ಭೃಂಗನೆನಿಪ ತಮ್ಮಡಿರುದ್ರ' ಹೊಯ್ಸಳರೆದುರು ಹೋರಾಡಿ ವೀರಸ್ವರ್ಗವೇರಿದ ವಿಷಯವಿದೆ.

ಕ್ರಿ.ಶ. ೧೮೧೭ರ ಮಡಿಕೇರಿ ಶಾಸನದಲ್ಲಿ[೧೫] ಹಾವೇರಿ ಅರಸರನ್ನು 'ಕ್ಷೀರನಗರ ಮಧ್ಯ ಪರಿಭ್ರಾಜ್ ಮಾನ ಮಣಿಗಣ ಖಚಿತ ಚಾರುಸಿಂಹಾಸನಾರೂಢ' ಎಂದು ವರ್ಣಿಸಿರುವಲ್ಲಿ ಹಾವೇರಿ ಗ್ರಾಮಕ್ಕೆ ಸಂಸ್ಕೃತಾನುಕರಣದಲ್ಲಿ 'ಕ್ಷೀರನಗಡೆ' ಪಟ್ಟಿ ನೀಡಿರುವುದು ಕಾಣುತ್ತದೆ. ಓಂಕಾರೇಶ್ವರ ದೇಗುಲದ ಮುಂದಿನ ಪುಷ್ಕರಣಿಯೊಳಗಣ ಮಂಟಪದ ರಚನೆಗೆ 'ಕುಶಲ ಮಂಟಪ'ವೆಂದು ಹೆಸರಿಸಿರುವುದು ಕಾವ್ಯಶ್ಲೇಷೆಯಲ್ಲಿದೆ.

ಕ್ರಿ.ಶ. ೧೮೨೨ರ ಮಡಿಕೇರಿ ಶಾಸನದಲ್ಲಿ[೧೬] ಕಾಡಾನೆಗಳ ಹಾವಳಿ ಬಗ್ಗೆ ದೂರು ಬಂದಾಗ, ಆಳುತ್ತಿದ್ದ ಹಾಲೇರಿ ವಂಶಿಕ ದೊರೆಯ ಕಾರ್ಯಾವಸರವನ್ನು ಚಿತ್ರಿಸಿರುವುದು; 'ಚಿತ್ತೈಸಿ ಕಂಠೀರವನ ವೋಲ್ ಪಡಿಗಟ್ಟಿ ಗಜಗಳೆಂಬ ಉಚ್ಚರಣೆಗೆ ನಾಣ್ನುಡಿ ಕಾಣೆವಂತೆ', ಎನ್ನುವಲ್ಲಿ ಗಜಗಳನ್ನು ಸಿಂಹ ಶೌರ್ಯದಿಂದ ಎದುರಿಸಿದ ಚಿತ್ರ ನಾಣ್ಣುಡಿಯಾಗಿ ಹೊರಬಂದುದು ತಿಳಿಯುತ್ತದೆ.

ಹೀಗೆಯೇ ಇದೇ ಶಾಸನದಲ್ಲಿ 'ವಿಪಿನಗಳಲ್ಲೂ ಅದ್ರಿಸಮಾನ್ವಿತರವಾದ ಕರಿ ಸಮೋಹಉ ದಿನಕರನನಂನು ಮೇಘಜಾಲ ಮುತ್ತುವ ತೆರದಂತ.. ಸ್ಥೂಲೋಂನತವಾಗಿರುವಂಥ ಮದಗಜಗಳನ್ನು ಮೂಶಿಕನಂತೆ ಭಾವಿಸಿ ಮನುಜರು ಪ್ರಾಣಸಮೇತವಾಗಿ ಪರಿಗ್ರಹಿಸಿರುವಂಥ ಅತ್ಯಾಶ್ಚರ್ಯ' ಎಂಬ ಸಾಲುಗಳಲ್ಲಿ, ಅರಣ್ಯ, ಗಿರಿಗಳಲ್ಲಿಯ ಆನೆಗಳು, ಸೂರ್ಯನನ್ನು ಕಾಮುರ್ಗಿಲು ಮುತ್ತಿ ಮರೆಸುವ ರೀತಿಯಲ್ಲಿ ಆರ್ಭಟಿಸಿ ಬಂದುವು. ಅವನ್ನು ಇಲಿಗಳಂತೆ ಭಾವಿಸಿ ಬೇಟೆಯಾಡಿ ಬೀಳಿಸಿದ್ದು ಅತ್ಯಾಶ್ಚರ್ಯ ಎಂಬ ಅಭಿಪ್ರಾಯವಿದೆ. ಇದು ಕೊಡಗಿನಲ್ಲಿಯ ಗಜಬಾಹುಳ್ಯ, ಕೊಡಗಿನವರ ಬೇಟೆಯ ಕೌಶಲ್ಯವನ್ನು, ಕೊಡಗಿನ ಬೆಡಗಿನ ಸೌಂದರ್ಯವನ್ನು ಕಾವ್ಯವಾಗಿಸಿ ಶಾಸನವು, ಮುದ ಕೊಡುತ್ತದೆ. ಗಂಭೀರ ವಿಷಮೆಗಳನ್ನು ಶಕ್ತಿಯುತವಾಗಿ ನೀಡಿದೆ. ಬೇಟೆಯ ವರ್ಣನೆಯನ್ನು ಅತ್ಯಂತ ಕಡಿಮೆ ಶಬ್ದಗಳಲ್ಲಿ, ಕನ್ನಡದ

ಗತ್ತಿನ ಶೈಲಿಯಿಂದ ಔಚಿತ್ಯಪೂರ್ಣವಾಗಿ ಮಂಡಿಸಿರುವ ಬಗೆ ಎದೆಮುಟ್ಟುತ್ತದೆ. ಕನ್ನಡದ ಶಬ್ದಗಳ ಸಂಚಲನ ನೀಲಾಜಾಲವಾಗಿ ಹರಡಿದೆ.

ಇದೇ ಶಾಸನದಲ್ಲಿ 'ಕೊಡಗು' 'ಶ್ರೀರಂಗಪಟ್ಟಣ'ದ ಪ್ರಸ್ತಾಪ ಹಾಗೂ ಅದರ ಪ್ರಾಣಿ ಪರಿಸರವನ್ನು ಹೇಳಿದೆ. ಕೊಡಗಿನ ಶಾಸನಗಳಲ್ಲಿ ಮೊಟ್ಟ ಮೊದಲಬಾರಿಗೆ ಈ ಸ್ಥಳನಾಮ ಉಕ್ತಗೊಂಡಿದೆ. ೧೧ನೇ ಶತಮಾನದಲ್ಲಿಯೇ ಅದು ಕೊಂಗೇಶ್ವರ ಕಾಲದಲ್ಲಿ ಚೋಳರ ಕಾರಣದಿಂದ ಇದು ಬೇರೆಯೇ 'ಶ್ರೀರಂಗಪಟ್ಟಣ'ವೆಂದು ಕೊಡಗು ವಿಶೇಷಣದಿಂದ ಮೊದಲ ಬಾರಿಗೆ ಸೂಚಿಸಿರುವಲ್ಲಿ ಚಾರಿತ್ರಿಕ ಸಂಚಲನವು ಕಾಣಬರುತ್ತದೆ.

೧೪೨೨ರ ಮಲೆಯೂರ ಬಸದಿಯ ತಾಮ್ರಶಾಸನದಲ್ಲಿ[೧೭], ವೀರಣ್ಣನ ವರ್ತ್ತನೆ ಗ ೧ ಅನ್ನು ತ್ರಿಯಂಬಕದೇವರ ಸನ್ನಿಧಿಯಲ್ಲಿ ಧಾರೆಯನೆರೆದು ಮುಕ್ಕೊಡೆಯ ಕಲ್ಲನು ನಟ್ಟಿ, ಕೊಟ್ಟ ದಾನಗಳಲ್ಲಿ ಒಂದಾಗಿದೆ. ಇದರಲ್ಲಿ 'ವೀರಣ್ಣನ ವರ್ತ್ತನೆ' ಎಂಬ ಶಬ್ದಕ್ಕೆ ಕ್ರೈಸ್ತರ ಆಂಗ್ಲಾವಾದದಲ್ಲಿ 'ರೆಗ್ಯೂಲರ್ ಸಪ್ಲೈ' ಅಂದರೆ, ಹಾಲು, ಮೊಸರು, ವರ್ತ್ನೆಗೆ ಹಾಕುವ ಪದ್ಧತಿಯಂತೆ ಇದೂ ಒಂದು 'ವರ್ತ್ನೆ' ಎಂಬ ಅಭಿಪ್ರಾಯಗದಲ್ಲಿ ನೀಡಲಾಗಿದೆ. ಜೈನ ಬಸದಿಯ ಸಂದರ್ಭದಲ್ಲಿ ತ್ರಿಯಂಬಕೇಶ್ವರ ಸನ್ನಿಧಿ 'ವೀರಣ್ಣನ ವರ್ತ್ತನೆ' ಶಬ್ದಗಳು ಏಕೆ ಬಂದವು? ಶಿವಸಂಬಂಧಿಯಾದ ಈ ಶಬ್ದಗಳು ಜೈನ ಬಸದಿಯ ಸಂದರ್ಭಕ್ಕೆ ಬಂದಿತ್ತೆಂದರೆ ಏಕ್ಕೋಟಿ ಜಿನಾಲಯದ ಪರಂಪರೆಗೆ ಮಲೆಯೂರು ಬಸದಿ ಸೇರಿತ್ತೆನ್ನಬೇಕಾಗುತ್ತದೆ. ಕಾರಣ ಶೈವ ವಸ್ತುಗಳೊಡನೆ ಕೆಲವು ಆಚಾರಗಳಿಗೆ, ಬಸದಿ ಹೊಂದಿಕೊಂಡ ಪರಿಂಪರೆ ಅದು. ಹೀಗಾಗಿ ಇಲ್ಲಿ 'ವೀರಣ್ಣನ ವರ್ತ್ತನೆ' ಎಂದರೆ ವೀರಗಾಸಿ ವಗಟುಗಳನ್ನು ಉಗ್ಗಡಿಸಿ ೧ ಗದ್ಯಾಣವನ್ನು ಪಡೆಯುತ್ತಿದ್ದ ಎಂಬ ಅರ್ಥ ಸೂಚಿತವಾಗುತ್ತದೆ. ಎರಡನೆಯದಾಗಿ ಇದೇ ಶಾಸನದಲ್ಲಿ 'ನಾಡು ದಲವಾರಿಕೆ ಗ ?' ಎಂದಿದೆ. ಆಂಗ್ಲಾನುವಾದದಲ್ಲಿ ಕನ್ನಡ ಶಬ್ದವನ್ನು ಆಂಗ್ಲ ಲಿಪಿಯಲ್ಲಿಟ್ಟು ಅರ್ಥಕ್ಕೆ ಪ್ರಶ್ನಾರ್ಥಕ ಚಿಹ್ನೆ '?' ಅನ್ನು ಹಾಕಿದೆ. ಕಾರಣ ಆ ಬಗ್ಗೆ ಸ್ಪಷ್ಟವಾಗಿ ಹೇಳಲಾಗಿಲ್ಲ ಎಂಬುದೇ ಅಲ್ಲಿನ ವಿಷಯವಾಗಿದೆ. ಇರಲಿ.

ಈ ಬಗ್ಗೆ ಹಾಸನ ಜಿಲ್ಲೆ ಅರಸೀಕರೆ ತಾಲ್ಲೂಕು ಬಾಣಾವರದ ಹೊಗಂಬತ್ತು ಗಡಿಮಠದಲ್ಲಿ 'ನಾಡು ದಲವಾರಿಕೆ' ಸೇರಿದಂತೆ ವಿವಿಧ ದಲವಾರಿಕೆಗಳಿವೆ. ಒಡೆಯರ ಪೈಕಿ ವೀರಶೈವ ಮಠದ ಸಂದರ್ಭದಲ್ಲಿ ಆ ಶಬ್ದವಿದ್ದು, ಹೊಣೆಗಾರಿಕೆಯ ಪಟ್ಟದ ಸಂಬಂಧವನ್ನು ಅದು ಹೊಂದಿದೆ. ಆ ಮಠದಿಂದ ಇಷ್ಟಲಿಂಗದೀಕ್ಷೆ ಪಡೆದ ಶಿಷ್ಯರಿಗೆ ವಿವಿಧ ಹೊಣೆಗಾರಿಕೆಯನ್ನು, ಅದಂದರೆ ದಳವಾಯಿಕೆ ಪಟ್ಟ, ಹಲಗೆ ದಳವಾಯಿಕೆ ಪಟ್ಟ, ಈರಗಾರಿಕೆ ಪಟ್ಟ, ಪೂಜಾರಿಕೆ ಪಟ್ಟ ಇತ್ಯಾದಿ ಪಟ್ಟಗಳನ್ನು ಗಡಿ ಅಧಿಕಾರದ ಸಂಕೇತವಾಗಿ ನೀಡುವ ರೂಢಿ ಈ ಮಠದಲ್ಲಿದೆ. ಈ ಹಿನ್ನೆಲೆಯಲ್ಲಿ ಗಮನಿಸಿದರೆ ಮಲೆಯೂರು ಬಸದಿಗೂ ಇಂಥ ನಿರ್ದೇಶನದ ಹೊಣೆಗಾರಿಕೆ ಇದ್ದು ತದನುಗುಣವಾಗಿ 'ನಾಡು ದಳವಾಯಿಕೆ' ಪಟ್ಟವನ್ನು ಹೇಳಿರುವಂತಿದೆ. ಹೀಗೆ ಸಾಂಸ್ಕೃತಿಕ ಆಚಾರಗಳೊಡನೆ ಹೊಂದಿಕೊಂಡ ಶಬ್ದಗಳ ಅರ್ಥ ಸಂಚಲನವನ್ನು ಗಮನಿಸಬೇಕಾಗುತ್ತದೆ.

ತಿ. ನರಸೀಪುರ ತಾ. ಬೆಟ್ಟಹಳ್ಳಿಯ ೧೬-೧೭ನೆಯ ಶತಮಾನದ ಶಾಸನದಲ್ಲಿ[೧೮] 'ವೀರಗಾಣಿಕೆಯನು ದೇವರಿಗೆ ಸುತ್ತುರ ಸಿಂಹ್ವಾಸನಜಿಕೆಯಾಗಿ ಮಾಡಿದ ಧರ್ಮಕ್ಕೆ ತಪ್ಪಿದ ಲಿಂಗವಿದನು..' ಎಂಬ ಸಾಲಿದೆ. ಇದು ವೀರಭದ್ರಾರಾಧನೆ ಲಿಂಗವೀರ ತಾನು ಹೇಳುವ ವೀರಭದ್ರ 'ಖಡ್ಗ' ಸಂಬಂಧ ಬರುವ 'ವೀರಗಾಣಿಕೆ'ಯನ್ನು ವೀರಭದ್ರ ದೇವರಿಗೆ ಅರ್ಪಿಸಿದ ಕಾಣಿಕೆಯಾಗಿದೆ. ಸುತ್ತೂರು ಸಿಂಹಾಸನ ಮಠದ ನಿರ್ವಹಣೆಯಲ್ಲಿರುವ ಸುತ್ತೂರು ಚಿಕ್ಕ ಬೆಳ್ಳುಂದದ ವೀರಭದ್ರ ಸೇವರಿಗೆ ಅರ್ಪಿಸುವ ಕಾಣಿಕೆ ಇದಾಗಿದೆ. ಈ ಸಾಂಸ್ಕೃತಿಕ ಚರ್ಯೆಯನ್ನು ಗಮನಿಸಿದರೆ ಇಲ್ಲಿ 'ವೀರಗಾಣಿಕೆ'ಯ ಅರ್ಥ ಸೂಕ್ತ ಸಂಚಲನವಾಗುತ್ತದೆ. ಅಂತಾಗಿ ಕೆ.ಕೆ. ನಿಘಂಟಿನಲ್ಲಿ 'ವೀರಗಾಣಿಕ' ಎಂದರೆ 'ಶೂರರಿಗೆ ಅರ್ಪಿಸಿದ ಕಾಣಿಕೆ' ಎಂಬ ಸಾರ್ವತ್ರೀಕರಣದ ಅರ್ಥ ಇದ್ದರೂ, ಈ ಸಂದರ್ಭದಲ್ಲಿ ಅದು ವೀರಭದ್ರಾನ್ವಯವಾಗಿದೆ. ಹೀಗೆಯೇ ಶಾಸನ ಸಂಪುಟವೊಂದರಲ್ಲಿ ಸುತ್ತೂರು ವೀರಸಿಂಹಾಸನಕ್ಕೆ 'Throne of Heros' ಎಂದಿರುವುದು ಸಾಂದರ್ಭಿಕವಾಗಿ ಸರಿಹೊಂದುವುದಿಲ್ಲ. ಪದಶಃ ಅನುವಾದವಾಗಿದೆ. ಆದರೆ ವೀರಶೈವ ಪೀಠವಾದ ಸುತ್ತೂರು 'ವೀರಸಿಂಹಾಸನ'ವನ್ನು ನಾಮವಾಚಕವಾಗಿಯೇ ಆಂಗ್ಲಲಿಪಿಯಲ್ಲಿ ಬರೆಯ ಬೇಕಾಗುತ್ತದೆ.

೧೦ನೆಯ ಶತಮಾನದ ನಂಜನಗೂಡ ತಾ. ನಗರ್ಲೆ ಶಾಸನದಲ್ಲಿ[೧೯], ನಗರಲ ನನ್ನಯ್ಯ ದೇಗುಲಕ್ಕೆ ಕೊಟ್ಟದಾನವನ್ನು ... ಕಿಯವಳ್ಗುನ್ನೂದುಂ ಸುತ್ತಿಯೂರುಂ ಸಿಂಗೂರು ನಗರಲ ಪನ್ನಿರ್ವ್ವರು ಮಹಾಪರಿಷೆಯು..' ಸೇರಿ ರಕ್ಷಿಸಬೇಕು ಎಂದಿದೆ. 'ಬಿಜಯ್ತ್ನ ನಟ್ಟ ಬೆಲ್ಲಪಾತ್ರದ ಮರಂಗಳ್' ಎಂಬ ಸಾಲೂ ಅಲ್ಲಿ ಅರ್ಥವಾತ್ತಾಗಿದೆ.

'ನ ಗರಲ' ಎಂಬ ಶಬ್ದದ ಅರ್ಥವನ್ನು, 'ಗರಲ' ವಿಷವನ್ನು, ನ-ಇಲ್ಲದಂತೆ ಮಾಡುವ ಪ್ರದೇಶ ಅಂದರೆ ವಿಷಪ್ರಹರಣ ಕ್ಷೇತ್ರವೆಂದು ಪರಿಭಾವಿಸಬೇಕಾಗಿದೆ. ಇದಕ್ಕೆ ಪೋಷಕವಾಗಿ 'ನಗರ್ಲೆ' ಗ್ರಾಮ ಪ್ರದೇಶವು ಹಾವಿನ ಕಡಿತಕ್ಕೆ ಔಷಧಿಯ ಮೂಲಿಕೆ, ಬೇರು ಸಸ್ಯಗಳನು ವಿಫುಲವಾಗಿ ಹೊಂದಿದೆ. ಆ ಸಂಬಂಧ ಪಾರಂಪರಿಕ ವೈದ್ಯಕೀಯವೂ ನಡೆದು ಬಂದಿರುವ ಬಗ್ಗೆ ಸ್ಥಳೀಯ ಹಿರಿಯರು ಹೇಳುತ್ತಾರೆ. ನಂಜನಗೂಡು, ನಗರ್ಲೆಗೆ ಸಮೀಪವೆ ಇದ್ದು,

ಪರಶುರಾಮನ ರೋಗ ವಾಸಿಯಾದ ಕಾರಣ ವಿಷಪ್ರಹರಣ ಕ್ಷೇತ್ರವೆಂದೇ ಹೆಸರಾಗಿದೆ. ಹೀಗಾಗಿ ೧೧ನೇ ಶತಮಾನದಲ್ಲಿ ನಗರ್ಲೆ ಪ್ರದೇಶದವರೆಗೂ ವಿಷಪ್ರಹರಣ ಕ್ಷೇತ್ರವೆಂದು ಪ್ರಸಿದ್ಧಿ ಇದ್ದು ನಂಜನಗೂಡಿನ ಭಾಗವೇ ಆಗಿತ್ತೆನ್ನಬೇಕು. ಇದರಿಂದ ಸಸ್ಯವಾಚಿ ನಿಷ್ಪತ್ತಿಯು 'ನಗರಲ' ಎಂಬ ಸ್ಥಳನಾಮಕ್ಕೆ ದೊರಕುತ್ತದೆ. 'ನನ್ನಯ್ಯ' ನಂಜುಂಡನಿಗಿರುವ ಜನಪದ ಹೆಸರೆನ್ನುವುದಿದೆ. ಅದಾಗಿ ನಗರ್ಲೆಯಲ್ಲಿರುವ ನನ್ನಯ್ಯ ದೇಗುಲ ಪ್ರಾಚೀನ ನಂಜುಂಡೇಶ್ವರನ ಒಂದು ರೂಪವೇ ಆಗಿರುವಂತಿದೆ. ಕ್ರಿ.ಶ. ೧೦೮೭ರ ಹೆಗ್ಗಡದೇವನಕೋಟೆ ತಾ. ಹಳೆಯೂರು ಗ್ರಾಮದ ಶಾಸನದಲ್ಲಿ 'ನಂಜುಂಡೇಸ್ವರ ಮೊಡೆಯರ್ಗೆ' (ನಂಜುಂಡೇಶ್ವರನ ಒಡೆಯರ್ ದೇವರು) ಭೂದಾನವಿತ್ತಿರುವಲ್ಲಿ ಆ ಹೊತ್ತಿಗೆ ಅವನ ಪ್ರಸಿದ್ಧಿ ಇದ್ದುದರ ಕುರುಹು ಕಾಣುತ್ತದೆ.

ನಗರ್ಲೆ ಶಾಸನದಲ್ಲಿ 'ಮಹಾಪರಿಷೆ' (ಮಹಾವರ್ಷೆ) ಎಂಬ ಶಬ್ದವಿದೆ. ಮತ್ತು ಅದೇಕಾಲದ ಅಲ್ಲಿಯ ಇನ್ನೊಂದು ಶಾಸನದಲ್ಲಿ (ನಂ.ಗೂ, ೨೪೦), ಸಿಂಘಪರಿಷೆ (ಸಿಂಹವರ್ಷೆ) ಯ ಮಠದ ಪ್ರಸ್ತಾಪವಿದೆ. ಇದೇ ನಂಜನಗೂಡು ತಾ. ದೊಡ್ಡ ಹೊಮ್ಮಗ್ರಾಮದ ಶಾಸನದಲ್ಲಿ[೨೦] 'ಶಕ್ತಿಪರಿಷೆಯ ಸ್ಥಾನಂ'ನ ಭಿಳರಿ ಮಹಾದೇವರ್ –ಭಗವತಿ ದೇವತೆಗೆ ದಾನ ಕೊಟ್ಟ ವಿಷಯವಿದೆ. ಇದರಿಂದ ನಂಜನಗೂಡು ತಾಲೂಕಿನ ಈ ಪ್ರದೇಶಗಳಲ್ಲಿ ಸಿಂಹವರ್ಷೆ, ಶಕ್ತಿವರ್ಷೆಗಳು ಮಹಾವರ್ಷೆಯ ಘಟಕಗಳಾಗಿ ಪ್ರಚಲಿತವಾಗಿದ್ದುವು. ಮುಂದೆ 'ಮಹಾಮಹತ್ತು' ರೂಪುಗೊಳ್ಳಲು ಕಾರಣವಾದುವೆನಿಸುತ್ತದೆ. ಅದಾಗಿ ಶಿವಸಮಯದ ಪ್ರಭಾವವೂ ಇಲ್ಲಿ ಗೋಚರವಾಗುತ್ತದೆ. ನಗರ್ಲೆ ಶಾಸನದಲ್ಲಿ ಬಿಲ್ವಪತ್ರೆಯ ಮರಗಳನ್ನು ನೆಟ್ಟು 'ಬಿಲ್ವವನ'ವನ್ನೂ ನಗರ್ಲೆಯಲ್ಲಿ ರೂಪಿಸಿದ್ದ ಬಗೆಯೂ ವಿದಿತವಾಗಿದೆ. ಗಮನಾರ್ಹವಾಗಿ ಆ ಶಾಸನದಲ್ಲಿ ಬರುವ 'ದೇವಾರಂ ಗೆಯ್ವ ಬ್ರತಿಗಳ್' ಅಂಟಿದ ತೇವಾರಂ ಶಿವಶರಣ ಗೀತೆಗಳನ್ನು ಹಾಡುವ ವ್ರತಿಯತಿಗಳಲ್ಲಿದ್ದರು ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ. ಅವರಿಗೆ ದಾಸೋಹಕ್ಕಾಗಿ ಧರ್ಮ ಕೊಟ್ಟ ಬಗ್ಗೆಯೂ ಶಾಸನವೂ ಸೂಚಿಸಿದೆ. ಅದು ದೇಗುಲ ನಿರ್ಮಿಸುವವರಿಗೆ, ಎಂದಿರುವ ಅಭಿಪ್ರಾಯಕ್ಕಿಂತ ಲೇಸಿನ ಅರ್ಥ ಸಂಚನವಾಗುತ್ತದೆ. ಇದಕ್ಕೆ ಪೋಷಕವಾಗಿ ಸುತ್ತೂರಿನ

ಕ್ರಿ.ಶ. ೧೦೧೫ – ೧೬ರ ರಾಜೇಂದ್ರಚೋಳನ ಶಾಸನದಲ್ಲಿ[೨೧], ಮುಞ್ಜಾಡಿ ಆರಿಯಂ ಚಿಮ್ಮನುಕ್ಕು' ಎಂಬ ಸಾಲು ಇದೆ. ಕೆ.ಎ. ನೀಲಕಂಠಶಾಸ್ತ್ರಿಯವರು ತಮ್ಮ ಕೃತಿ 'The cholas'ನಲ್ಲಿ ೨೨, ಆರಿಯಂ; ಅನ್ನು ಹಾಡುವವರಿಗೆ (ಅಹಮಾರ್ಗಂ ಸಂಗೀತ) ದಾನನೀಡಿದ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಹೀಗಾಗಿ ಸುತ್ತೂರಿನ ಮೂಲಸ್ಥಾನೇಶ್ವರ ಗುಡಿಯ ದುರ್ಗೆಗೂ ಸೇರಿದಂತೆ ಸಂಗೀತ ಸೇವೆಯನ್ನು ಆರಿಯಂಚಿಮ್ಮನಲ್ಲಿ ಸುತ್ತಿದ್ದರು ಎಂಬ ವಿಷಯ ಗಮನಕ್ಕೆ ಬರುತ್ತದೆ. ಇಲ್ಲಿ 'ಮುಞ್ಜಾಡಿ' ಎಂಬುದು ಗೋತ್ರದ ವಿಭಾಗದ ಹೆಸರಾಗಿದೆ. ಆ ಗೋತ್ರ ಸೇರಿದ ಚಿಮ್ಮನ ಸಂಗೀತ ಸೇವೆಗೆ ಕೊಟ್ಟ ದಾನವೆಂದಾಗುತ್ತದೆ.

ಇದೇ ಶಾಸನದಲ್ಲಿ 'ಚೋಲುಗಂಗದೇವರ್ಕು' ಎಂಬ ಬಿರುದು ರಾಜೇಂದ್ರ ಚೋಳನಿಗೆ ಅನ್ವಯವಾಗಿ ಬಂದಿದೆ. ಚೋಲರು ಮತ್ತು ಗಂಗರ ನಡುವಣ ವಿರಸವನ್ನು ತಪ್ಪಿಸಿ ನಂಟು ಬೆಳೆಯುವಂತೆ ಮಾಡಿದವರು ನಿತ್ಯ ಶಿವರಾತ್ರಿ ವ್ರತ ನಿಷ್ಠೆಯ ವೀರಗಪ್ಪಡಿಯಾದ ಆದಿಶಿವಾರಾತ್ರೀಶ್ವರರು, ಅದು ಕಾರಣ 'ಚೋಟಿಗಂಗದೇವ' ಎಂಬ ಬಿರುದು ರಾಜೇಂದ್ರ ಚೋಳನಿಗಾಯ್ತು. ಆ ಬಿರುದು ಗಂಗಾನದಿವರೆಗೆ ದಂಡೆತ್ತಿ ಹೋಗಿ ಗಂಗೆಯನ್ನು ತಂದು ತಂಜಾವೂರಿನ ಕೆರೆಗೆ ಹಾಕಿ ಕಟ್ಟಿಸಿದ್ದ ಬಂತು ಎಂಬ ಆಭಿಪ್ರಾಯವನ್ನು ಮುಂದಿಡಲಾಗಿದೆ. ಆದರೆ ಕ್ರಿ.ಶ. ೧೦೧೮ರ ನಂತರವೇ ಕೊಲ್ಲಿಪಾರ (ಆಂಧ್ರ), ಗಂಗಾನದಿ ಬಯಲಿಗೆ ರಾಜೇಂದ್ರಚೋಳ ದಂಡಯಾತ್ರೆಗೆ ಹೋಗಿ ಜಯಗಳಿಸಿದನೆನ್ನಲಾಗಿದೆ. ಬಹುಶಃ ಆಗ ತಂದ ಗಂಗೆಯನ್ನು ತಾನು ಕಟ್ಟಿಸಿದ್ದ ಕೆರೆಗೆ ಹಾಕಲಾಗಿ, ಅನ್ಯ ಐತಿಹ್ಯಬೆಳೆದಿರುವಂತಿದೆ. ವಾಸ್ತವವಾಗಿ ಕ್ರಿ.ಶ. ೧೦೧೫–೧೬ ರಲ್ಲಿಯೇ ಶಾಸನೋಕ್ತವಾಗಿ 'ಚೋಟಿಗಂಗ'ನೆಂಬ ಬಿರುದು ರಾಜೇಂದ್ರನಿಗಿರುವಲ್ಲಿ ಅದು ಸುತ್ತೂರಿನಲ್ಲಿ ಘಟಿಸಿದ ಗುರುಕೃಪೆಯ ಕಾರಣವಾಗಿದೆ. ಹೀಗೆ ಶಬ್ದಾರ್ಥ ಸಂಚಲನವು ಐತಿಹಾಸಿಕ ನೆಲೆಗಳಲ್ಲಿ ಸಾಗಿರುವುದೂ ಕಾಣಬರುತ್ತದೆ.

ಕ್ರಿ.ಶ. ೧೫೩೨ರ ತಮಿಳುನಾಡು ಗೋಪಿಚೆಟ್ಟೆ ತಾಲೂಕಿನ ಎರಗನಹಳ್ಳಿ ಶಾಸನದಲ್ಲಿ ನಂಜನಗೂಡು ದೇವರ ಸನ್ನಿಧಿಯಲ್ಲಿ ನಡೆವಂಥ ಜಂಗಮಛತ್ರ ಹಾಗೂ ಬ್ರಾಹ್ಮಣ ಛತ್ರಗಳಿಗೆ ಎರಗನಹಳ್ಳಿ ಗ್ರಾಮಗಳ ದತ್ತಿ ನೀಡಲಾಗಿದೆ; ಶ್ರೀ ನಂಜುಂಡೇಶ್ವರ ದೇವ ಸನ್ನಿಧಿಯಲ್ಲಿ ಬ್ರಾಹ್ಮಣ ಜಾತಿ ಜಂಗಮದೇವರಿಗೆ, ಆ ಹಳ್ಳಿಯ ಗ್ರಾಮಗಳನ್ನು ದತ್ತಿಯಾಗಿ ಕ್ರಿ.ಶ. ೧೫೪೯ರಲ್ಲಿ ನೀಡಿದ ಬಗ್ಗೆ ಶಾಸನೋಕ್ತವಿದೆ; ೨೩, ಕ್ರಿ.ಶ. ಗ೫೭೬ರ ಗುಂಡ್ಲುಪೇಟೆ ತಾ. ಸೋಮನಹಳ್ಳಿ ಶಾಸನವು[೨೭] ಮಹಾಮಹತ್ರಿನೊಳಗಾದ ನಂಜನಗೂಡು ಹಿರಿಯ ಮಠದ ಪಟ್ಟದ ಗಂಗಾಧರದೇವರು, ಸೋಮನಹಳ್ಳಿಯಲ್ಲಿ ತರಕಣಾಂಬಿಯ ಛತ್ರಕ್ಕೆ ಸಲುವ ಭೂಮಿಯ ಸ್ಥಳ ಜಂಗಮಛತ್ರ ಬ್ರಾಹ್ಮಣ ಚತ್ರ ಉಭಯಂ ಚತ್ರವನ್ನು ಸರ್ವಸಾಮಾನ್ಯವಾಗಿ... ಆಗು ಮಾಡಿಕೊಂಡು ಅನುಭವಿಸಿಕೊಂಡು ಬರುವುದು, ಎಂದಿರುವಲ್ಲಿ, ಶಾಸನವು ಧರ್ಮಸಮನ್ವಯ, ಜನಾಂಗೀಯ ಸಾಮರಸ್ಯವನ್ನು ತೋರಿರುವ ಬಗೆಯನ್ನು ಅರ್ಥೈಸಿಕೊಳ್ಳಬೇಕಿದೆ. ವಿಭಾಗೀಯ ಘಟನೆಗಳನ್ನಾಗಿ ನೋಡದೆ ಸಮರಸದ ನೆಲೆಯ ಪರಂಪರೆಯನ್ನು ಗಮನಿಸಬೇಕಾಗಿದೆ.

ಭಾರಶಿವರ ವಂಶಿಕರು, ವಾಕಾಟಕರು, ಕ್ರಿ.ಶ. ೪೨೮ರ ವಾಕಾಟಕ ೨ನೆಯ ಪ್ರವರಸೇನನ ಶಿಲಾಶಾಸನದ ರೀತ್ಯಾ 'ಅಂಶಭಾರ ಸನ್ನಿವೇಶಿತ ಶಿವಲಿಂಗೋದ್ವಹಸ ಶಿವ ಪರಿತುಷ್ಟ

ಸಮುದ್ಭಾವಿತ ರಾಜವಂಶಾನಾಂ' ಎಂದಿದೆ. ಅಂದರೆ ಶಿವಲಿಂಗವನ್ನು, ಸದಾ ಭುಜದಲ್ಲಿ ಧಾರಣ ಮಾಡಿದರೆ ಶಿವನ ಕೃಪೆ ಆಗಮಾನುಸಾರಿಗಳಾದ ಭವನಾಗವಂಶಿಕರಿಗೆ ಒದಗುತ್ತದೆ ಎಂಬ ಅರ್ಥವಿಲ್ಲಿದೆ. ಭಾರಶಿವದ ಪರಂಪರ ಹೀಗೆ ವಾಕಾಟಕರಲ್ಲಿ ಮುಂದುವರಿದ ಚಿತ್ರ ಕಾಣಬರುತ್ತದೆ.

ಶಿರದ ಮೇಲೆ, ಭುಜದ ಮೇಲೆ ಶಿವಲಿಂಗ ಹೊತ್ತ ಭಕ್ತರ ಹಾಗೂ ಶಿವನ ಶಿಲ್ಪಗಳು, ಕಾಶಿಯ ಜಂಗಮವಾಡಿ ಮಠದ ನಿರ್ವಹಣೆಯ ಸೂರ್ಯನ ಗುಡಿಯಲ್ಲಿ, ಸಿದ್ಧಗಂಗೆಯಲ್ಲಿ, ಆಂಧ್ರಪ್ರದೇಶದ ಮ್ಯೂಸಿಯಂನಲ್ಲಿ ಕಂಡು ಬರುತ್ತದೆ. ಇದರಿಂದ, ಶಾಸನಲಿಪಿಗಳೆಂದಷ್ಟೇ ಅಲ್ಲ, ಆ ಶಾಸನಗಳಲ್ಲಿರುವ ಶಿಲ್ಪಗಳಿಂದಲೂ ಅರ್ಥಗಳನ್ನು ಹುಡುಕಲು ಸಾಧ್ಯವಾಗುತ್ತದೆ. ಶಬ್ದಗಳ ಸಂಚಲನೆ ಅರ್ಥವಂತಿಕೆಗೆ ಸಹಾಯವಾಗುವಲ್ಲಿ, ಈವರೆಗೆ ಅರ್ಥೈಸಿಕೊಂಡಿರುವ ಎಷ್ಟೋ ಶಬ್ದಗಳ ಮರುಪರಿಶೀಲನೆಗೂ ಅವಕಾಶ ಮಾಡಿ ಕೊಡುತ್ತದೆ ಎಂಬುದನ್ನೂ ಮರೆಯುವಂತಿಲ್ಲ. ಇದು ನಮ್ಮಗಳ ಪರಿಶ್ರಮ, ಪ್ರತಿಭೆಗಳಿಗೆ ಆಹ್ವಾನವಾಗುತ್ತದೆ. ನಮ್ಮ ಸಾಂಸ್ಕೃತಿಕ ಆಯಾಮಗಳನ್ನು ವಿಸ್ತರಿಸಲು ಅವಕಾಶವಾಗುತ್ತದೆ. ಇಲ್ಲಿ ಸೂಚಿಸಿರುವುದು ಒಂದು ಸಂಕ್ಷಿಪ್ತ ಆಯಾಮ.

**ಅಡಿ ಟಿಪ್ಪಣಿ :**

೧. ಎ.ಕೆ.ನಂ ೧ (ಹೊ)

೨. ಅದೇ ಮಡಿಕೇರಿ ೧ (ಕ್ರಿ.ಶ. ೪೬೬೧)

೩. ಅದೇ, ಮಡಿಕೇರಿ ೨೦ (ಪಾಲೂರು)

೪. ಅದೇ, ಸೋಮವಾರ ಪೇಟೆ ೩೯ (ಹುಲಕೋಡು)

೫. ಎ.ಕೆ.ನಂ.೧ (ಹೊ) ಅದೇ ಸೊ.ಷೇ. ೬೨(ಯಡೂರು)

೬. ಎ.ಕೆ.ನಂ ೧೦ (ಹೊಸತು) ೧೯೯೭, ಹಾಸನಜಿಲ್ಲೆ, ಅರಸೀಕೆರೆ ೮೮, (ಕಣಕಟ್ಟೆ); ಅರಸೀ ಕೆರೆ ೫೯ (ಕುರುವಂಕೆ)

೭. ಎ.ಕೆ.ನಂ (ಹೊ) ಅದೇ ಸೊ. ಷೆ, ೮೦ (ಮುಳ್ಳೂರು); ಕೊಡಗಿನ ಕೊಡುವರಲ್ಲಿ ಮದುವೆ ಆಗದೆ ಸತ್ತ ತರುಣ ಅಥವಾ ತರುಣಿಯರ ಶರೀರಕ್ಕೆ ಮೂರು ಜನ ಮುತ್ತೈದೆಯರು ಲಗ್ನ ಕಾಲದಲ್ಲಿ ನಡೆಸುವಂತೆ ಕುಪ್ಪಸ, ದಟ್ಟಿ ಸಹಿತ, ತರುಣಿಗೆ ಮಧೂವಸ್ತ್ರಹಾಕಿ ಭುಜ ಹಾಗೂ ಶಿರಕ್ಕೆ ಅಕ್ಕಿ ಸೇಸೆ ಹಾಕುವ ಪದ್ಧತಿ ಇದೆ. ಹಾಗೆಯೇ ಅಲ್ಲಿಯ ಗೌಡಜನಾಂಗದವರಲ್ಲಿಯೂ ವೀರಸೇಸೆ ಹಾಕುವ ಪದ್ಧತಿ ಇದ್ದ ಬಗ್ಗೆ ಈ ಶಾಸನ ತಿಳಿಸುತ್ತದೆ. ವಿಶೇಷವೆಂದರೆ, ವೀರಬಿದ್ದ ಕಡೆಯೇ ಹೋಗಿ ವೀರ ಸೇಸೆ ಹಾಕಿದೆ. 'ಬಿದ್ದಲ್ಲಿಗೆ ಯಾತಂಗೆ ವೀರಸೇಸೆಯಾಗಿ ಮಾಸಾವಿ ಮುಖ್ಯವಾಗಿ ಊರ ಮುನ್ನೂರಾಳ, ನೆರದಿದು' ಎಂಬ ಮಾತಿನಲ್ಲಿ ಈ ಅಂಶ ವ್ಯಕ್ತವಾಗಿದೆ. ಅದೇ ಮಂಡ್ಯಜಿಲ್ಲೆ ಕೆ.ಆರ್.ಪೇಟೆ ತಾಲೂಕಿನ ಗೋವಿಂದನ ಹಳ್ಳಿಯ ಕ್ರಿ.ಶ. ೧೨೩೬ರ ಶಾಸನದಲ್ಲಿ ೮ ;ವೀರಸೇಸೆ ಗದ್ಯಾಣ ನಾಲ್ಕು' ಎಂದು 'ತೆರಿಗೆ'ಯ ಸ್ವರೂಪವಾಗಿ ಹೇಳಿದೆ ಆಂತಾಗಿ ಕೊಡಗಿನದು ಹೆಚ್ಚು ಸಾಂಸ್ಕೃತಿಕ ಅರ್ಥ ಸಂಚಲನವನ್ನು ನೀಡುತ್ತದೆ.

೮. ಎ.ಕೆ. ನಂ ೬(ಹೊ) ೧೯೩೩, ಮಂಡ್ಯ ಜಿಲ್ಲೆ, ಕೆ.ಆರ್. ಪೇಟೆ ತಾ. ೩೯ (ಗೋವಿಂದನ ಹಳ್ಳಿ; ಕ್ರಿ.ಶ. ೧೨೩೬)

೯. ಎ.ಕೆ.ನಂ ೧ (ಹೊ), ;ಅದೇ ವಿರಾಜಪೇಟೆ ತಾ. ೯೬ (ಬಿಳಿಯೂರು; ಕ್ರಿ.ಶ. ೮೮೮)

೧೧ನೇ ಶತಮಾನದ (ಕ್ರಿ.ಶ. ಸು ೧೦೦೪) ಮೂಲಂಟಿ ಶಾಸನದಲ್ಲಿ ೧೨, ಕವೇರಕನ್ಯಕಾ

೧೦. ಎ.ಕೆ. ನಂ ೧(ಹೊ) ಅದೇ, ವೇರಾಜಪೇಟೆ ತಾ. ೯೩ (ಕೋತೂರು; ೯ನೇ ಶತಮಾನ)

೧೧. ಅದೇ, ವಿ.ಷೇ. ೯೮ (ಪೆಗ್ಗೂರು; ಕ್ರಿ.ಶ. ೯೭೮)

೧೨. ಅದೇ, ಸೋ.ಷೇ. ೬೫ (ಮಾಲಂಬಿ; ೧೧ನೇ ಶತಮಾನ) ಸಖೀಯಮಾನ ಜೋಲು ಮಹಾಮಹೀಪತಿ ಶ್ರೀ ರಾಜ್‌ಕೇಸರಿವರ್ಮ ಪೆರ್ಮ್ಮನಡಿಗಧ್ಮನಿಜಂಗೆ', 'ಪುಙ್ಞವನ್ ಮಾರಾಯ... ಕ್ಷತ್ರಿಯ ಸಿಖಾಮಣಿಕೊಂಗಾಳ್ವನನ್ದು ಪಟ್ಟವಂ ಕಟ್ಟಿ ಮೂಲವ್ವಿಯ ನಿತ್ತರಿದಕ್ಕೆ ಗಾವುಣ್ದ ರಾಚಮ್ಮನ ವಂಶಮೆಸಾಕ್ಷಿ..' ಇತ್ಯಾದಿ ಸಾಲುಗಳಿವೆ.

೧೩. ಎ.ಕೆ. ನಂ ೪(ಹೊ), ೧೯೭೫, ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ೧೧೮ (ಕಂಪಲಾಪುರ; ಕ್ರಿ.ಶ. ೧೧೭೪)

೧೪. ಡಿ.ಎಸ್. ಕೃಷ್ಣಯ್ಯ, ೧೯೭೪, **ಕೊಡಗಿನ ಇತಿಹಾಸ**, ಮೈಸೂರು ವಿಶ್ವವಿದ್ಯಾಲಯ, ಪು. ೧೩೨-೩೩) ಇದ್ದುದೂ ಶಾಸನೋಕ್ತವಿದೆ; ಕ್ರಿ.ಶ. ೧೧೩೧ ರ ಮೂಡಲಹಿಪ್ಪೆ ಶಾಸನವು ವೀರದುದ್ದ ಕಂಗಾಳ್ವದೇವನ ಬೆಸದಿಂದ 'ಹರಫದಯುಗ ಭೃಂಗನೆನಿಪ ತಮ್ಮಡಿ ರುದ್ರ' ಒಯ್ಸಳರೆದುರು ಹೋರಾಡಿ ವೀರಸ್ವರ್ಗವೇರಿದ ವಿಷಯವಿದೆ.

೧೫. ಎ.ಕೆ. ನಂ ೧ (ಹೊ), ಅದೇ ಮಡಿಕೇರಿ, (ಕ್ರಿ.ಶ. ೧೮೮೧೭)

೧೬. ಅದೇ, ಮಡಿಕೇರಿ ೩ (ಕ್ರಿ.ಶ. ೧೮೭೨)

೧೭. ಎ.ಕೆ. ನಂ ೪ (ಹೊ), ಮೈಸೂರು ಜಿಲ್ಲಾ, ತಾ, ನ ೩೭೨ (ಮಲೆಯೂರು; ಕ್ರಿ.ಶ. ೧೪೨೨) ಒಂದು ವರ್ತ್ನೆ' ಎಂಬ ಅಭಿಪ್ರಾಯದಲ್ಲಿ ನೀಡಲಾಗಿದೆ. ಜೈನ ಬಸದಿಯ ಸಂದರ್ಭದಲ್ಲಿ ತ್ರಯಂಬಕೇಶ್ವರ ಸನ್ನಿಧಿ' 'ವೀರಣ್ಣನ ವರ್ತ್ತನೆ' ಶಬ್ದಗಳು ಏಕೆ ಬಂದುವು? ಶಿವನ ಸಂಬಂಧಿಯಾದ ಈ ಶಬ್ದಗಳು ಜೈನ ಬಸದಿಯ ಸಂದರ್ಭಕ್ಕೆ ಬಂದಿತ್ತೆಂದರೆ ಎಕ್ಕೋಟಿ ಜೀನಾಲಯದ ಪರಂಪರೆಗೆ ಮಲೆಯೂರು ಬಸದಿ ಸೇರಿತ್ತೇನ್ನಬೇಕಾಗುತ್ತದೆ. ಕಾರಣ ಶೈವ ವಸ್ತುಗಳೊಡನೆ ಕೆಲವು ಆಚಾರಗಳಿಗೆ, ಬಸದಿ ಹೊಂದಿಕೊಂಡ ಪರಂಪರೆ ಅದು. ಹೀಗಾಗಿ ಇಲ್ಲಿ 'ವೀರಣ್ಣನ ವರ್ತ್ತನೆ,' ಎಂದರೆ 'ವೀರಗಾಸಿ ವಡಟುಗಳನ್ನು ಉಗ್ಗಡಿಸಿ ೧ ಗದ್ಯಾಣವನ್ನು ಪಡೆಯುತ್ತಿದ್ದ ಎಂಬ ಅರ್ಥ ಸೂಚಿತವಾಗುತ್ತದೆ. ಎರಡನೆಯದಾಗಿ ಇದೇ ಶಾಸನದಲ್ಲಿ ನಾಡುದುವಾಡಿಕೆ ನ ೭' ಎಂದಿದೆ. ಆಂಗ್ಲಾನುವಾದದಲ್ಲಿ ಕನ್ನಡ ಶಬ್ದವನ್ನು ಆಂಗ್ಲಲಿಪಿಯಲ್ಲಿಟ್ಟು, ಅರ್ಥಕ್ಕೆ ಪ್ರಶ್ನಾರ್ಥಕ ಚಿಹ್ನೆ '?' ಅನ್ನು ಹಾಕಿದೆ. ಕಾರಣ ಆ ಬಗ್ಗೆ ಸ್ಪಷ್ಟವಾಗಿ ಹೇಳಲಾಗಲಿಲ್ಲ ಎಂಬುದೇ ಅಲ್ಲಿನ ವಿಷಯವಾಗಿದೆ. ಇರಲಿ, ಈ ಬಗ್ಗೆ ಹಾಸನ ಜಿಲ್ಲೆ ಅರಸೀಕೆರೆ ತಾಬಾಣಾ ವರದ ಹೊಗಂಬತ್ತು ಗಡಿ ಮಠದಲ್ಲಿ 'ನಾಡು ದಲವಾರಿಕೆ' ಸೇರಿದಂತೆ ವಿವಿಧ ದಲವಾರಿಕೆಗಳಿವೆ.

ಒಡೆಯರ ಪೈಕಿಯ ವೀರಶೈವ ಮಠದ ಸಂದರ್ಭದಲ್ಲಿ ಆ ಶಬ್ದವಿದ್ದು, ಹೊಣೆಗಾರಿಕೆಯ ಪಟ್ಟದ ಸಂಬಂಧವನ್ನು ಅದು ಹೊಂದಿದೆ. ಆ ಮಠದಿಂದ ಇಷ್ಟಲಿಂಗ ದೀಕ್ಷೆ ಪಡೆದ ಶಿಷ್ಯರಿಗೆ ವಿವಿಧ ಹೊಣೆಗಾರಿಕೆಯನ್ನು, ಅಂದರೆ ದಳವಾಯಿಕೆ ಪಟ್ಟ, ಹಲಗೆ ದಳವಾಯಿಕೆ ಪಟ್ಟ, ಈದಗಾರಿಕೆ ಪಟ್ಟ, ಪೂಜಾರಿಕೆ ಪಟ್ಟ ಇತ್ಯಾದಿ ೯ ಪಟ್ಟಗಳನ್ನು ಗಡಿ ಅಧಿಕಾರ ಸಂಕೇತವಾಗಿ ನೀಡುವ ರೂಢಿ ಈ ಮಠದಲ್ಲಿದೆ. ಈ ಹಿನ್ನೆಲೆಯನ್ನು ಗಮನಿಸಿದರೆ ಮಲೆಯೂರು ಬಸದಿಗೂ ಇಂಥ ನಿರ್ದೇಶನದ ಹೊಣೆಗಾರಿಕೆ ಇದ್ದು ತದನುಗುಣವಾಗಿ ನಾಡು ಬೆಳವಾಯಿಕೆ ಪಟ್ಟವನ್ನು ಹೇಳಿರುವಂತಿದೆ. ಹೀಗೆ ಸಾಂಸ್ಕೃತಿಕ ಆಚಾರಗಳೊಡನೆ ಹೊಂದಿಕೊಂಡ ಶಬ್ದಗಳ ಅರ್ಥ ಸಂಚಲವನ್ನು ಗಮನಿಸಬೇಕಾಗುತ್ತದೆ.

೧೮. ಎ.ಕ. ನಂ. ೫ (ಹೊ), ೧೯೭೬, ಮೈಸೂರು ಜಿಲ್ಲೆ ತಿ.ನ ೮೩ (ಬೆಟ್ಟಹಳ್ಳಿ)

೧೯. ಎ.ಕ. ನಂ. ೩ (ಹೊ), ೧೯೭೪, ಮೈಸೂರು ಜಿಲ್ಲೆ, ನಂ.ಗೂ ೨೩೯ (ನಗರ್ಲೆ)

೨೦. ಎ.ಕ. ನಂ. ೩ (ಹೊ), ಅದೇ, ನಂ.ಗೂ. ೨೯೪ (ದೊಡ್ಡ ಹೊಮ್ಮ; ಕ್ರಿ.ಶ. ೯೭೭)

೨೧. ಎ.ಕ. ನಂ. ೩ (ಹೊ), ಅದೇ, ನಂ.ಗೂ. ೨೧೩ (ಸುತ್ತೂರು; ೧೧೧೫-೧೬)

೨೨. K.A. Neelakanta sastri; 1995, The cholas, University of Madras, P.೬೫೭)

೨೩. I.S.I.I. No, ೫೪೫, ೫೯೭ i i. ಡಾ.ಪಿ.ವಿ. ಕೃಷ್ಣಮೂರ್ತಿ, ೨೦೦೪, ತಮಿಳುನಾಡಿನ ಕನ್ನಡ ಶಾಸನಗಳು, ಕ.ಸಾ.ವೆ, ಪು. ೧೧೦-೧೧೧)

೨೪. ಎ.ಕ. ನಂ. ೩ (ಹೊ), ಅದೇ, ಗುಂ.ಪೇ. ೭೫ (ಸೋಮನಹಳ್ಳಿ; ಕ್ರಿ.ಶ. ೧೫೭೬)

❑❑

# ಬೌದ್ಧ ಮಧ್ಯಮಮಾರ್ಗ

-ಎಸ್. ನಟರಾಜ ಬೂದಾಳು

ಬೌದ್ಧ ಧರ್ಮದಲ್ಲಿ ಹೀನಯಾನ ಮಹಾಯಾನಗಳೆಂಬ ವಿಂಗಡಣೆ ಶುರುವಾದದ್ದು ಬುದ್ಧನ ನಿರ್ವಾಣದ ಸುಮಾರು ೫೦೦ ವರ್ಷಗಳ ನಂತರ. ಬುದ್ಧಗುರುವಿನ ಉಪದೇಶದ ಸೂತ್ರರೂಪಿ ಮಾತುಗಳ ಸಂಗ್ರಹವನ್ನು ವ್ಯಾಖ್ಯಾನಿಸುವಾಗ ಉಂಟಾದ ಭಿನ್ನಾಭಿಪ್ರಾಯಗಳು ಇಂತಹ ಭಿನ್ನ ಮಾರ್ಗಗಳಿಗೆ ಕಾರಣವಾಗಿವೆ. ಈ ಭಿನ್ನತೆ ಪ್ರಮುಖವಾಗಿ ಲೋಕವ್ಯಾಖ್ಯಾನವನ್ನು ಕುರಿತದ್ದು. ಈ ಲೋಕ ವ್ಯಾಖ್ಯಾನಗಳನ್ನಾಧರಿಸಿಯೇ ಬೌದ್ಧ ತಾತ್ವಿಕತೆಯಲ್ಲಿ ನಾಲ್ಕು ಚಿಂತನಾಪ್ರಸ್ಥಾನಗಳನ್ನು ಗುರುತಿಸುತ್ತಾರೆ. ಸರ್ವಾಸ್ತಿವಾದ, ಸೌತ್ರಾಂತಿಕವಾದ, ವಿಜ್ಞಾನವಾದ ಅಥವಾ ಯೋಗಾಚಾರ ಮತ್ತು ಮಧ್ಯಮಮಾರ್ಗ. ಮೊದಲಿನ ಎರಡು ಪ್ರಸ್ಥಾನಗಳನ್ನು ಹೀನಯಾನ ಎಂದೂ ಕೊನೆಯ ಎರಡು ಪ್ರಸ್ಥಾನಗಳನ್ನು ಮಹಾಯಾನ ಎಂದೂ ಗುರುತಿಸುತ್ತಾರೆ. ಮಧ್ಯಮಮಾರ್ಗವು ಬೌದ್ಧ ಧರ್ಮದ ಕೇಂದ್ರ ತಾತ್ವಿಕತೆಯಾಗಿದೆ. ವಸ್ತು ಪ್ರಪಂಚವನ್ನು ಕುರಿತಾದ ಬೌದ್ಧ ವಿವರಣೆಯನ್ನು ಮಧ್ಯಮಮಾರ್ಗ, ಶೂನ್ಯತೆ, ಪ್ರತೀತ್ಯಸಮುತ್ಪಾದ, ನಿಃಸ್ವಭಾವವಾದ, ಅನಾತ್ಮವಾದ - ಮುಂತಾದುವುಗಳಿಂದ ಸೂಚಿಸುತ್ತಾರೆ. ತಾನು ಮತ್ತು ತನ್ನ ಎದುರಿನ ಎಲ್ಲವನ್ನೂ 'ಇದೆ' ಎಂದೋ ಅಥವಾ 'ಇದೆಲ್ಲ ನಿಜವಲ್ಲ, ಇದರ ಹಿಂದೆ ಇರುವುದು ಮತ್ತೊಂದು' ಎಂದು ಗ್ರಹಿಸಿ ವ್ಯವಹರಿಸುವ ನಮಗೆ, ಇದೆ-ಇಲ್ಲ ಎಂಬ ಎರಡು ತುದಿಗಳನ್ನು ಬಿಟ್ಟು ಲೋಕವನ್ನು ಚಲಿಸುತ್ತಿರುವ ಪ್ರವಾಹ ಎಂದು ನೋಡುವ ಮಧ್ಯಮಮಾರ್ಗವನ್ನು ಬುದ್ಧಗುರು ತೋರಿಸಿಕೊಟ್ಟನು. ಯಾವುದಕ್ಕೂ ಸ್ವತಂತ್ರವಾದ ಅಸ್ತಿತ್ವ (ಸ್ವ-ಭಾವ) ಇಲ್ಲದಿರುವುದನ್ನು ತೋರಿಸಿಕೊಟ್ಟುದುದರಿಂದ ಇದನ್ನು ನಿಃಸ್ವಭಾವವಾದವೆಂದೂ, ನಾವು ತಪ್ಪಾಗಿ ಗ್ರಹಿಸುವ ವಸ್ತುರೂಪದಲ್ಲಿ ಸ್ವತಂತ್ರ ವಸ್ತುವೇ ಇಲ್ಲದಿರುವುದರಿಂದ ಶೂನ್ಯತೆ ಎಂದೂ, ಯಾವ ವಸ್ತುವಿನಲ್ಲಿಯೂ ಅದರ ಸ್ವಂತದ್ದೇ ಆದ ಸಾರ, ಸತ್ವ ಅಥವಾ ಆತ್ಮವೆನ್ನುವುದು ಇಲ್ಲವೆಂದು ತೋರಿಸಿಕೊಟ್ಟುದುದರಿಂದ ಅನಾತ್ಮವಾದವೆಂದೂ, ಎಲ್ಲವೂ ಪ್ರತ್ಯಯಗಳ ಸಂಬಂಧದಿಂದ ಉಂಟಾಗಿರುವುದರಿಂದ ಪ್ರತೀತ್ಯಸಮುತ್ಪಾದವೆಂದೂ ಈ ಪ್ರಕ್ರಿಯೆಯನ್ನು ಸೂಚಿಸುತ್ತಾರೆ. ಬೌದ್ಧೇತರ ದರ್ಶನಗಳು ಲೋಕವನ್ನು 'ಇದೆ' (being) ಎಂದು ವಿವರಿಸಿದರೆ ಮಧ್ಯಮಮಾರ್ಗ ಮತ್ತು ವಿಜ್ಞಾನವು ಲೋಕವನ್ನು ಸದಾ 'ಆಗುತ್ತಲೇ ಇರುವ' (becoming) ಪ್ರಕ್ರಿಯೆ ಎಂದು ವಿವರಿಸುತ್ತವೆ.

ಬೌದ್ಧ ತಾತ್ವಿಕತೆಯಾದ ಮಧ್ಯಮಮಾರ್ಗವನ್ನು ಒಂದು ಚಿಂತನಾಪ್ರಸ್ಥಾನವನ್ನಾಗಿ ಮಂಡಿಸಿದವನು **ನಾಗಾರ್ಜುನ**. ಲೋಕವಸ್ತುಗಳನ್ನು ಇವೆ ಅಥವಾ ಇಲ್ಲ ಎಂದು ವಿವರಿಸುವುದನ್ನು ನಿರಾಕರಿಸಿ, ಅದೊಂದು ಪ್ರವಾಹ ಎಂದು ಮಾಧ್ಯಮಿಕರು ವಿವರಿಸುತ್ತಾರೆ. ಮಾಧ್ಯಮಿಕರ ಲೋಕ ವಿವರಣೆಗೆ ಎರಡು ಮುಖಗಳಿವೆ. ಒಂದು, ಅದರ ಸಂಯೋಜನೆಯ ಕ್ರಮವನ್ನು ವಿವರಿಸುವುದು. ಅಂದರೆ ಲೋಕದ ಎಲ್ಲ ವಸ್ತುಗಳನ್ನು ಅನೇಕ ಅಂಶಗಳಿಂದ ಆಗಿರುವ ಸಂಯೋಜನೆಗಳೆಂದು ತೋರಿಸಿಕೊಡುವುದು. ಇನ್ನೊಂದು ಶಾಶ್ವತ ಸಂಯೋಜನೆಯನ್ನು ನಿರಾಕರಿಸುವುದು. ಅಂದರೆ ಎಲ್ಲ ಸಂಯೋಜನೆಗಳೂ ಸದಾ ಬದಲಾಗುತ್ತಲೇ ಇರುವುದರಿಂದ ಯಾವುದೂ ಕ್ಷಣಮಾತ್ರವೂ ಸ್ಥಗಿತವಾಗಿ ಇರಲು ಸಾಧ್ಯವಿಲ್ಲ ಎಂದು ಸಾಧಿಸಿ ತೋರಿಸುವುದು. ಎಲ್ಲವೂ ಸಂಬಂಧದಲ್ಲಿ ಉಂಟಾಗುತ್ತವೆ ಮತ್ತು ಸಂಬಂಧ ತಪ್ಪಿದಾಗ ಭಂಗಗೊಳ್ಳುತ್ತವೆ.

'ಭಾರತೀಯ' ದರ್ಶನಗಳು ಈ ಲೋಕ ಸಮಸ್ತಕ್ಕೂ ಪ್ರಾರಂಭವೊಂದಿದೆ, ಅದೆಲ್ಲವೂ ಒಂದರಿಂದಲೇ ಉಂಟಾಗಿದೆ, ಅದೇ ಇದರ ನಡೆಯನ್ನು ನಿಯಂತ್ರಿಸುತ್ತಿದೆ ಮತ್ತು ಎಲ್ಲವೂ ಅದರಲ್ಲೇ ಲೀನವಾಗುತ್ತದೆ, ಎಂದು ಪ್ರತಿಪಾದಿಸುತ್ತವೆ. ಅಂತಹ ಒಂದು 'ಮೂಲ'ವನ್ನು ಬೌದ್ಧ ಧರ್ಮವು ಮಾನ್ಯ ಮಾಡುವುದಿಲ್ಲ. ಹಾಗೆ ಲೋಕವು ಯಾವುದೋ ಒಂದರಿಂದ ಉಂಟಾಗಿದೆ ಮತ್ತು ಅದಕ್ಕೆ ನಿಶ್ಚಿತವಾದ ಪ್ರಾರಂಭವೊಂದಿದೆ ಎನ್ನುವುದನ್ನು ಬೌದ್ಧ ತಾತ್ವಿಕತೆಯು ಒಪ್ಪುವುದಿಲ್ಲ. ಲೋಕವಿವರಣೆಯ ಈ ನಿಲುವು ಆಯಾ ಪಂಥಗಳ ಮುಂದಿನ ನಡೆಯನ್ನು ನಿಯಂತ್ರಿಸುವುದರಿಂದ ಇದು ಬಹಳ ಮುಖ್ಯವಾದುದು. ಈ ನಿಲುವು ಕೇವಲ ಕಲೆ ಕಾವ್ಯಗಳ ಅಭಿವ್ಯಕ್ತಿಯನ್ನು ಮಾತ್ರ ವ್ಯಾಖ್ಯಾನಿಸದೆ, ಜೀವನಕ್ರಮವನ್ನೂ

"ಗೌರಿ", ಸಪ್ತಗಿರಿ ಬಡಾವಣೆ, ನಳಂದ ಶಾಲೆ ಹಿಂಭಾಗ, ತುಮಕೂರು ೫೭೨ ೧೦೨

ನಿಯಂತ್ರಿಸುತ್ತದೆ. ಹಾಗಾಗಿ ನಮ್ಮ ಬದುಕು ಮತ್ತು ಅಭಿವ್ಯಕ್ತಿ ಒಂದೇ ಆಕರದಿಂದ ನಿರ್ದೇಶಿತವಾಗಿರುತ್ತದೆ. ಇಲ್ಲಿ ಒಬ್ಬ ಕಲಾವಿದನಾಗಲೀ, ಕವಿಯಾಗಲೀ, ಅನುಭಾವೀ ಸಾಧಕನಾಗಲೀ ತೆಗೆದುಕೊಳ್ಳುವ ನಿಲುವು ಬಹಳ ಮುಖ್ಯವಾಗುತ್ತದೆ. ಕಲಾವಿದನೊಬ್ಬ ತನ್ನ ಕಲೆಯ ಮೂಲಕ ಮಾಡಬಯಸುವ ಸಾಂಸ್ಕೃತಿಕ ರಾಜಕಾರಣವನ್ನು ಇದು ತೀರ್ಮಾನಿಸುತ್ತದೆ. ಲೋಕವನ್ನು ಸರಿಯಾಗಿ ವಿವರಿಸಿಕೊಡುವ ಮೂಲಕವೇ ಎದುರಾಗುವ ಎಲ್ಲ ಸಂದರ್ಭಗಳನ್ನು ಮಾನವೀಯವಾಗಿ ನಿರ್ವಹಿಸುವುದು ಹೇಗೆ ಎಂಬುದನ್ನು ಎಲ್ಲ ದರ್ಶನಗಳೂ ತಿಳಿಸಿಕೊಡಬೇಕು. ಲೋಕಸಂದರ್ಭವೊಂದನ್ನು ಸರಿಯಾಗಿ ನಿರ್ವಹಿಸುವ ಸಾಮರ್ಥ್ಯವನ್ನು ದೊರಕಿಸಿಕೊಡವುದು ದರ್ಶನವೊಂದಕ್ಕೆ ನಿಜವಾದ ಸವಾಲು. ಅದನ್ನು ಸರಿಯಾಗಿ ನಿರ್ವಹಿಸುವ ಸಾಮರ್ಥ್ಯ ಬರುವುದು ಲೋಕವನ್ನು ಸರಿಯಾಗಿ ಅರಿತುಕೊಂಡಾಗ. ಸರಿಯಾಗಿ ಅರಿತುಕೊಳ್ಳುವುದು ಅಂದರೆ ಏನು? ಎಲ್ಲ ಚಿಂತನಾಪ್ರಸ್ಥಾನಗಳೂ ತಮ್ಮ ಯಾನವನ್ನು ಇಲ್ಲಿಂದಲೇ ಆರಂಭಿಸುತ್ತವೆ. ಅನುಭಾವೀ ಸಾಧಕನೊಬ್ಬ ತನ್ನನ್ನು ಮತ್ತು ತನ್ನ ಸುತ್ತಲ ಈ ಲೋಕವನ್ನು ವಿವರಿಸಿಕೊಳ್ಳದೆ ತನ್ನ ಯಾನವನ್ನು ಪ್ರಾರಂಭಿಸಲು ಸಾಧ್ಯವಿಲ್ಲ. ಕಲಾವಿದನ ಬದುಕೂ ಇದಕ್ಕಿಂತ ಭಿನ್ನವೇನಲ್ಲ. ಅವನೂ ಕೂಡ ತನ್ನ ಸುತ್ತಲಿನ ಲೋಕದ ಬಗೆಗೆ ನಿಲುವೊಂದನ್ನು ತಾಳಬೇಕು. ಅನೇಕ ಧರ್ಮಗಳು, ಪಂಥಗಳು, ಚಿಂತನಾಪ್ರಸ್ಥಾನಗಳು ಮತ್ತು ವಿಜ್ಞಾನ ಲೋಕವನ್ನು ವಿವರಿಸಿಕೊಡುವ ಉದ್ಯೋಗವನ್ನು ಮಾಡುತ್ತವೆ. ಹಾಗಾದರೆ ಬೌದ್ಧಧರ್ಮ ಲೋಕವನ್ನು ಏನೆಂದು ವಿವರಿಸಿದೆ?

## ಬೌದ್ಧ ಧರ್ಮದ ಲೋಕವಿವರಣೆ

**ಮಂಗಳವೂ ಪ್ರಾಪಂಚಿಕತೆಯ ಉಪಶಮನವೂ ಆದ**
**ಪ್ರತೀತ್ಯಸಮುತ್ಪಾದವನ್ನು ಅನಿರೋಧ, ಅನುತ್ಪಾದ, ಅನುಚ್ಛೇದ,**
**ಅಶಾಶ್ವತ ಅನೇಕಾರ್ಥ, ಅನಾನಾರ್ಥ, ಅನಾಗಮ, ಅನಿರ್ಗಮ –**
**ಎಂದು ಉಪದೇಶಿಸಿದ ಸಂಬುದ್ಧನಿಗೆ ವಂದಿಸುತ್ತೇನೆ.**

(ನಾಗಾರ್ಜುನನ 'ಮೂಲಮಧ್ಯಮಕಾರಿಕಾ'ದ ಅರ್ಪಣೆಯ ವಚನ)

ಈ ವಸ್ತು ಪ್ರಪಂಚವನ್ನು ಬುದ್ಧಗುರು ಹೇಗೆ ವಿವರಿಸಿಕೊಟ್ಟಿದ್ದಾನೆಂಬುದನ್ನು ನಾಗಾರ್ಜುನ ತನ್ನ ಆಚಾರ್ಯಕೃತಿಯಾದ ಮೂಲಮಧ್ಯಮಕಾರಿಕಾದ ಅರ್ಪಣೆಯ ವಚನದಲ್ಲಿಯೇ ಪ್ರಸ್ತಾಪಿಸುತ್ತಾನೆ. ಸದಾ ಚಲನೆಯಲ್ಲಿಯೇ ಇರುವ ಈ ಲೋಕಪ್ರವಾಹವನ್ನು 'ಪ್ರತೀತ್ಯಸಮುತ್ಪಾದ'ವೆಂದು ಕರೆಯಲಾಗಿದೆ. ಸದಾ ಮುಂದಕ್ಕೆ ಚಲಿಸುತ್ತಿರುವ ಪ್ರವಾಹವೇ ವಸ್ತುಪ್ರಪಂಚದ 'ಧರ್ಮ'ವಾಗಿರುವುದರಂದ, ಲೋಕದ ಶುದ್ಧ 'ಚಿತ್ರ'ವೆಂದರೆ ಈ ಚಲನೆಯೇ. ಇದರ ವಿವರಣೆಯನ್ನು ಆಮೇಲೆ ಗಮನಿಸೋಣ. ಮೊದಲಿಗೆ ಇಲ್ಲಿ ಎಂಟು ನಿರಾಕರಣೆಗಳಿವೆ. ಇಲ್ಲೊಂದು ವಿಶೇಷವಿದೆ. ಮೇಲ್ನೋಟಕ್ಕೆ ಈ ನಿರಾಕರಣೆಗಳನ್ನು ನಾವು ಒಪ್ಪಿಕೊಂಡರೂ, ನಮ್ಮ ಬದುಕಿನ ಕ್ರಮದಲ್ಲಿ ಅದನ್ನು ಅನ್ವಯಿಸಿಕೊಳ್ಳುವುದಿಲ್ಲ. ಅವುಗಳನ್ನು ನಿರಾಕರಿಸಲಾಗದಷ್ಟು ಮೊಂಡು ಹಠಕ್ಕೆ ಬಿದ್ದಿದ್ದೇವೆ. ಜಾಡಿಗೆ ಬಿದ್ದಿರುವ ನಮ್ಮನ್ನು ಸರಿದಾರಿಗೆ ತರಲು ಈ ನಿರಾಕರಣೆಗಳು ಅತ್ಯಗತ್ಯ. ಈ ಲೋಕವನ್ನು ವಿವರಿಸಿಕೊಡುವಾಗ ಬೌದ್ಧಧರ್ಮ ಮತ್ತು ವಿಜ್ಞಾನ ಮಾತ್ರ ಇದು 'ಏನೇನಲ್ಲ' ಎಂದು ವಿವರಿಸುವ ಮೂಲಕ ತಪ್ಪು ವಿವರಣೆಗಳನ್ನು ಮೊದಲು ನಿವಾರಿಸುತ್ತವೆ. ಹಾಗೆಯೇ ಈ ಲೋಕ ಏನು ಎನ್ನುವ ಪ್ರಶ್ನೆಗೆ ತನ್ನ ಅರಿವಿಗೆ ಇದುವರೆಗೆ ಬಂದಿರುವ ಸಂಗತಿಯನ್ನು ತಿಳಿಸಿ ಹೊಸ ಅರಿವಿಗೆ ಬಾಗಿಲನ್ನು ಸದಾ ತೆರೆದಿಡುತ್ತವೆ. ಹಾಗಾಗಿ ಬೌದ್ಧ ಧರ್ಮದ ತಾತ್ವಿಕತೆಯೆನ್ನುವುದು ಈಗಾಗಲೇ ಹೇಳಿ ಮುಗಿಸಲಾಗಿರುವ, ತೀರ್ಮಾನವಾಗಿರುವ ಸಂಗತಿಯಲ್ಲ. ನಾಗಾರ್ಜುನ ಇದನ್ನು ತನ್ನ ಕಾರಿಕೆಯೊಂದರಲ್ಲಿ ಸ್ಪಷ್ಟಪಡಿಸುತ್ತಾನೆ.

**ಬುದ್ಧನಿಲ್ಲದಂದು, ಅವನ ಶಿಷ್ಯರಿಲ್ಲದಂದು**
**ಬುದ್ಧಪ್ರಜ್ಞೆ ಪ್ರವಹಿಸುತ್ತಿರುತ್ತದೆ, ಅದಕೆ ಸಂಸರ್ಗದ ಹಂಗಿಲ್ಲ.**

(ಕಾರಿಕೆ ೧೨ ಅಧ್ಯಾಯ ೧೮, ನಾಗಾರ್ಜುನನ ಮೂಲಮಧ್ಯಮಕಾರಿಕಾ)

ಬುದ್ಧ ತಿಳಿಸಿಕೊಟ್ಟಿರುವ ಈ ಅರಿವು ಬುದ್ಧನ ಮೂಲಕವೇ ಅಥವಾ ಅವನ ಶಿಷ್ಯರ ಮೂಲಕವೇ ಬರಬೇಕಿಲ್ಲ. ಏಕೆಂದರೆ ಅದು 'ಸರಿಯಾದ ತಿಳುವಳಿಕೆ'ಯಾಗಿರುವುದರಿಂದ, 'ಸತ್ವ'ವುಳ್ಳ ಯಾರಿಗಾದರೂ ಯಾವಾಗ ಬೇಕಾದರೂ ಬರಬಹುದು.

## ಎಂಟು ನಿರಾಕರಣೆಗಳು

೧. **ಅನಿರೋಧ:** ಈ ಲೋಕದ ಯಾವುದಕ್ಕೂ ಶಾಶ್ವತ ಅಂತ್ಯವೆಂಬುದಿಲ್ಲ. ಯಾವುದೂ ಶಾಶ್ವತವಾಗಿ 'ಸತ್ತು' ಹೋಗುವುದಿಲ್ಲ. ಎಲ್ಲದಕ್ಕೂ ರೂಪಾಂತರವಿದೆಯೇ ಹೊರತು ಕೊನೆಯೆಂಬುದಿಲ್ಲ. ಜೀವಿಗಳಿಗೂ ಅಷ್ಟೇ, ರೂಪಾಂತರವಿದೆಯೇ ಹೊರತು ಸಾವೆಂಬುದಿಲ್ಲ.

೨. **ಅನುತ್ಪಾದ:** ಯಾವುದೂ ಹೊಸದಾಗಿ ಉಂಟಾಗುವುದಿಲ್ಲ. ತನ್ನಷ್ಟಕ್ಕೆ ತಾನೇ ಯಾವುದೂ ಸೃಷ್ಟಿಸಲ್ಪಡುವುದಿಲ್ಲ. ಬೇರೊಂದರಿಂದಲೂ ಸೃಷ್ಟಿಸಲ್ಪಡುವುದಿಲ್ಲ ಮತ್ತು ಕಾರಣವೇ ಇಲ್ಲದೆ ಯಾವುದೂ ಉಂಟಾಗುವುದಿಲ್ಲ. ಯಾವುದಾದರೊಂದು 'ಜನಿಸಿತು' ಅಂದರೆ ಅದು ರೂಪಾಂತರ ಹೊಂದಿತು ಎಂದೇ ಹೊರತು ಹೊಸದಾಗಿ ಹುಟ್ಟಿತು ಎಂದಲ್ಲ. ಹುಟ್ಟು ಮತ್ತು ಸಾವುಗಳನ್ನು ಬೌದ್ಧಧರ್ಮ ವ್ಯಾಖ್ಯಾನಿಸಿದ ರೀತಿ ಭಿನ್ನವಾಗಿದೆ. ಸದಾ ಚಲಿಸುತ್ತಲೇ ಇರುವ ಈ ಲೋಕ ಪ್ರವಾಹದಲ್ಲಿ ಹುಟ್ಟು ಪ್ರಾರಂಭವೂ ಅಲ್ಲ, ಸಾವು ಕೊನೆಯೂ ಅಲ್ಲ. ಅವು ರೂಪಾಂತರದ ಹಂತಗಳಷ್ಟೇ.

೩. **ಅನುಚ್ಛೇದ:** ಯಾವುದೂ ಉಚ್ಛೇದಗೊಳ್ಳುವುದಿಲ್ಲ. ಯಾವುದನ್ನೂ ಛಿದ್ರಗೊಳಿಸಿ ನಾಶ ಮಾಡಲು ಬರುವುದಿಲ್ಲ.

೪. **ಅಶಾಶ್ವತ:** ಯಾವುದೂ ಒಂದು ಕ್ಷಣವೂ ಸ್ಥಗಿತ ಸ್ಥಿತಿಯಲ್ಲಿರುವುದಿಲ್ಲ. ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ. ಹಾಗಾಗಿ ಯಾವುದೂ ಸ್ವತಂತ್ರವಲ್ಲ ಮತ್ತು ಶಾಶ್ವತವಲ್ಲ.

೫. **ಅನೇಕಾರ್ಥ:** ಯಾವುದನ್ನೂ ಕಡಿಮೆಗೊಳಿಸಿ ಒಂದನ್ನಾಗಿಸಲು ಸಾಧ್ಯವಿಲ್ಲ.

೬. **ಅನಾನಾರ್ಥ:** ಯಾವುದನ್ನೂ ಭಿನ್ನಗೊಳಿಸಿ ಅನೇಕವನ್ನಾಗಿಸಲು ಸಾಧ್ಯವಿಲ್ಲ.

೭. **ಅನಾಗಮ:** ಹೊಸದೊಂದರ ಆಗಮನ ಸಾಧ್ಯವಿಲ್ಲ.

೮. **ಅನಿರ್ಗಮ:** ಈ ಲೋಕಪ್ರವಾಹದಿಂದ ಯಾವುದೂ ನಿರ್ಗಮಿಸದು.

ಇದು ಲೋಕಪ್ರವಾಹದ ನೇತ್ಯಾತ್ಮಕ ವಿವರಣೆಯಾದರೆ, ಅದರ ಇತ್ಯಾತ್ಮಕ ವಿವರಣೆಯೂ ಅದೇ ಕಾರಿಕೆಯಲ್ಲಿದೆ. ಮೂರು ಸಂಗತಿಗಳನ್ನು ಅಲ್ಲಿ ತಿಳಿಸಲಾಗಿದೆ. ಮೊದಲನೆಯದಾಗಿ ಈ ಲೋಕ ಸಮಸ್ತವೂ 'ಪ್ರತೀತ್ಯ ಸಮುತ್ಪನ್ನವಾದುದು', ಎರಡನೆಯದಾಗಿ ಈ ತಿಳುವಳಿಕೆಯಿಂದ ಪ್ರೇರಿತವಾದ ನಡವಳಿಕೆ ಲೋಕಕ್ಕೆ ಮಂಗಳವನ್ನು ತರುತ್ತದೆ, ಮತ್ತು ಮೂರನೆಯದಾಗಿ ಈ ಅರಿವು ನಮ್ಮನ್ನು ದು:ಖಮುಕ್ತರನ್ನಾಗಿ ಸುತ್ತದೆ(ಪ್ರಾಪಂಚಿಕತೆಯ ಉಪಶಮನ).

**ಪ್ರತೀತ್ಯಸಮುತ್ಪಾದ:** ಕಾರಣವಿಲ್ಲದೆ ಯಾವುದೂ ಉಂಟಾಗುವುದಿಲ್ಲ. ಉಂಟಾಗುವ ಎಲ್ಲವೂ ಕಾರಣ ಮತ್ತು ಪರಿಸ್ಥಿತಿಗಳ(ಪ್ರತ್ಯಯ) ಸಂಬಂಧದಲ್ಲಿ ಒದಗಿಬಂದ ಪರಿಣಾಮ ಮಾತ್ರ, ಹಾಗಾಗಿ ಇದು ಪ್ರತೀತ್ಯ ಸಮುತ್ಪಾದ (ಪ್ರತ್ಯಯಗಳಿಂದ ಉಂಟಾದುದು). ಅಂದರೆ:

೧. ಕಾರಣ – ಪರಿಸ್ಥಿತಿ – ಪರಿಣಾಮಗಳ ಈ ಲೋಕಪ್ರವಾಹವು 'ಸಂಬಂಧಗಳ ಜಾಲ' ಮಾತ್ರ

೨. ಈ ಸಂಬಂಧ ಜಾಲದಲ್ಲಿರುವ ಕಾರಣ, ಪರಿಸ್ಥಿತಿ ಮತ್ತು ಪರಿಣಾಮಗಳು ಸ್ವತಂತ್ರ ಘಟಕಗಳಲ್ಲ. ಸ್ವಲ್ಪ ವಿಸ್ತಾರವಾದ ಉದಾಹರಣೆಯೊಂದನ್ನು ಕೊಡಬಹುದು. ಹಣ್ಣು– ಬೀಜ–ಮೊಳಕೆ–ಸಸಿ–ಮರ–ಹೂ–ಹೀಚುಕಾಯಿ–ಹಣ್ಣು–ಬೀಜ–ಮೊಳಕೆ–ಸಸಿ ಇದೊಂದು ಪ್ರವಾಹ ಸರಣಿ. ಮೊದಲನೆಯದಾಗಿ ಈ ಸರಣಿಯಲ್ಲಿ ಪ್ರಾರಂಭದ ಹಂತವೆಂದಾಗಲೀ ಕೊನೆಯ ಹಂತವೆಂದಾಗಲೀ ಯಾವುದನ್ನೂ ಗುರುತಿಸಲಾಗದು. ಮೊಳಕೆ ಎನ್ನುವುದು ಬೀಜ ಎನ್ನುವ ಕಾರಣ ಮತ್ತು ಮೊಳೆಯಲು ಬೇಕಾದ ಪರಿಸ್ಥಿತಿಯ ಸಂಯೋಗದ ಪರಿಣಾಮವಾಗಿದೆ. ಹಾಗೆಯೇ ಸಸಿ ಎನ್ನುವುದು ಮೊಳಕೆ ಎನ್ನುವ ಕಾರಣ, ಅಗತ್ಯವಿರುವ ಮಣ್ಣು ಶಾಖ ಇತ್ಯಾದಿ ಪರಿಸ್ಥಿತಿಯ ಸಂಯೋಗದಿಂದ ಉಂಟಾದ ಪರಿಣಾಮವಾಗಿದೆ. ಈ ಸರಣಿಯಲ್ಲಿ ಯಾವುದೂ ಯಾವ ಹಂತದಲ್ಲಿಯೂ ಸ್ವತಂತ್ರವಲ್ಲ. ಸದಾ ಬದಲಾವಣೆಯಲ್ಲಿಯೇ ಇರುತ್ತವೆ.

೩. ನಾವು ಕಾಣುವ ಲೋಕ ದೃಶ್ಯಗಳೆಲ್ಲ ಅನೇಕಗಳ ಸಂಯೋಜನೆಗಳೇ ಆಗಿವೆ. ಈ ಅನೇಕಗಳ ನಡುವಿನ ಸಂಬಂಧವಾಗಿರುವ ಲೋಕವನ್ನು ಹಾಗೆಂದು ಅರಿತಾಗ ನಾವು ನಿಜವನ್ನು ಅರಿಯುತ್ತೇವೆ. ಈ ಸಂಯೋಜನೆಗಳ ಲಕ್ಷಣಗಳೆಂದರೆ: ೧) ಯಾವಾಗಲೂ ಬದಲಾವಣೆಯನ್ನು ಹೊಂದುತ್ತಿರುವುದು ೨) ಅದರದೇ ಆದ 'ಆತ್ಮ'ವೆನ್ನುವುದು ಇಲ್ಲದಿರುವುದು ಮತ್ತು ೩) ನಿರಂತರ 'ತಲ್ಲಣ'ದಿಂದಿರುವುದು. ಆದರೆ ಸಾಮಾನ್ಯ ಮಾನವಮತಿ ಲೋಕವನ್ನು ಸ್ವತಂತ್ರವಸ್ತುಗಳ ಒಂದು ಸಂಗ್ರಹವೆಂದು ಭಾವಿಸಿ ವ್ಯವಹರಿಸುತ್ತದೆ.

ಇನ್ನು ಮೇಲೆ ನಿರಸನದ ಕಾಲ. ಇದುವರೆಗೆ ನಾವು ಕಟ್ಟಿಕೊಂಡು ಬಂದ ರಚನೆಗಳು ಮತ್ತು ಅವುಗಳನ್ನಾಧರಿಸಿದ ಬದುಕಿನ ಕ್ರಮಗಳು ಇಂದು ತಮ್ಮ ಸೋಲನ್ನು ಒಪ್ಪಿಕೊಂಡು ಕೈ ಚೆಲ್ಲಿವೆ. ರಚನೆಗಳು ನಿಜವೆಂದು ನಂಬಿ ಹುಟ್ಟಿಕೊಂಡ ಮೀಮಾಂಸೆಗಳು ನಮ್ಮ ಬಾಳನ್ನು ಸಂಕಟಕ್ಕೆ ನೂಕಿವೆ. ಇದುವರೆಗೆ ಕಾರಣ ಮೀಮಾಂಸೆ ಮತ್ತು ಪರಿಣಾಮ ಮೀಮಾಂಸೆಗಳು ನಮ್ಮ ಲೋಕಗ್ರಹಿಕೆಯನ್ನು ನಿಯಂತ್ರಿಸಿದವು. ಇವುಗಳನ್ನು ಆಧರಿಸಿದ ಕಾವ್ಯ ಮೀಮಾಂಸೆಯು ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಯನ್ನು ನಿರ್ದೇಶಿಸಿತು. ಸಾಮಾನ್ಯವಾಗಿ ಸಮೂಹವೊಂದರ ಸಾಹಿತ್ಯ ಮೀಮಾಂಸೆ ಮತ್ತು ಜೀವನ ಮೀಮಾಂಸೆಯು ಒಂದೇ ತಾತ್ವಿಕ ಆಕರದಿಂದ ನಿರ್ದೇಶಿತವಾಗಿರುತ್ತವೆ. ಅಂದರೆ ಇವೆರಡನ್ನೂ ಒಂದೇ ದರ್ಶನವು ನಿಯಂತ್ರಿಸುತ್ತಿರುತ್ತದೆ. ಉದಾಹರಣೆಗೆ ವಚನಕಾರರ ಜೀವನ ಮೀಮಾಂಸೆ ಮತ್ತು ಕಾವ್ಯ ಮೀಮಾಂಸೆಯು ಒಂದೇ ತತ್ವದಿಂದ ರೂಪಿತವಾಗಿದೆ. ಅವರಲ್ಲಿ ನಡೆ ಮತ್ತು ನುಡಿಯ ನಡುವೆ ಭಿನ್ನತೆ ಇಲ್ಲ. ಆದರೆ ಇದೇ ನಿಲುವನ್ನು ಭಾರತೀಯವೆಂದು ನಾವು ಕರೆಯುತ್ತಿರುವ ನಮ್ಮ ಜೀವನ ಕ್ರಮಕ್ಕೆ ಅನ್ವಯಿಸಿ ನೋಡಿದಾಗ ಗೋಚರವಾಗುವ ಸಂಗತಿಯೆಂದರೆ ನಮ್ಮ ಜೀವನ ಮೀಮಾಂಸೆಯಲ್ಲಿ ಬಹಳ ದೊಡ್ಡ ಊನಗಳಿವೆ. ಅವು ನಮ್ಮ ಜೀವನಕ್ರಮವನ್ನು ವಿರೂಪಗೊಳಿಸಿವೆ. ನಮ್ಮ ಜೀವನಕ್ರಮದಲ್ಲಿನ ದೋಷಗಳು ನಮ್ಮ ಕಾವ್ಯ ಮೀಮಾಂಸೆಯಲ್ಲಿಯೂ ಇರಲೇಬೇಕು. ಇದುವರೆಗೆ ನಂಬಿದ ಕಾರಣ ಮತ್ತು ಪರಿಣಾಮ ಮೀಮಾಂಸೆಗಳನ್ನಾಧರಿಸಿದ ಲೋಕಸಂಬಂಧದ ನಿರ್ವಚನವು ಉಂಟು ಮಾಡಿರುವ ವಿಕಲ್ಪಗಳು ನಮ್ಮ ಬದುಕಿನ ಸಾಮರಸ್ಯವನ್ನು ನಾಶಮಾಡಿವೆ. ಜನಸಮೂಹಗಳು ಕಟ್ಟಿಕೊಂಡಿರುವ ಬದುಕಿನ ಕ್ರಮ; ಒಪ್ಪಿಕೊಂಡಿರುವ ಮೌಲ್ಯಗಳು ಇತ್ಯಾದಿಗಳನ್ನು ಇತ್ಯರ್ಥಗೊಳಿಸುವ ನಿರ್ಧಾರಕ ಶಕ್ತಿಗಳಾಗಿ ಈ

ಮೀಮಾಂಸೆಗಳು ಕೆಲಸ ಮಾಡಿರುವುದರಿಂದ ನಮ್ಮ ಲೋಕಸಂಬಂಧದ ನಿರ್ವಹಣೆಯಲ್ಲಿನ ತೊಡಕುಗಳೇನಿದ್ದರೂ ಅವುಗಳಿಗೆ ಕಾರಣಗಳನ್ನು ಇಲ್ಲಿಯೇ ಹುಡುಕಬೇಕಾಗಿದೆ. ಕಾರಣ ಮೀಮಾಂಸೆ, ಪರಿಣಾಮ ಮೀಮಾಸೆಗಳೆಂಬ ಪರಿಕಲ್ಪನೆಗಳ ಸದ್ಯದ ಬಳಕೆಯ ರೀತಿಯನ್ನು ಇಲ್ಲಿಯೇ ವಿವರಿಸಿ ನಂತರ ಮುಂದುವರಿಯಬಹುದು.

ಪದಾರ್ಥ ಪ್ರಪಂಚಕ್ಕೆ ಶಾಶ್ವತ ಸ್ವತಂತ್ರ ಆದಿಕಾರಣದ ಶೋಧನೆಗೆ ಸಂಬಂಧಿಸಿದುದು ಕಾರಣ ಮೀಮಾಂಸೆ. ಹಾಗೆಯೇ ಶಾಶ್ವತ ಅಂತ್ಯ, ಫಲ, ಪರಿಣಾಮಗಳನ್ನು ಶೋಧಿಸುವುದು ಪರಿಣಾಮ ಮೀಮಾಂಸೆ. ಆದಿ ಕಾರಣವೆಂಬುದು ಅಗ್ರಾಹ್ಯವೆಂಬ ಕಾರಣಕ್ಕೆ ಆ ಸಂಬಂಧದ ಪ್ರಶ್ನೆಗಳಿಗೆ ಬುದ್ಧ ಮೌನ ತಾಳಿದ. ಪ್ರಪಂಚದ ಆದಿಕಾರಣದ ಬಗೆಗಿನ ಊಹೆ ಎಂದೂ ಮುಗಿಯದ ಹಿಮ್ಮುಖ ಪಯಣ. ಹಾಗೆಯೇ ಶಾಶ್ವತ ಪರಿಣಾಮವೆಂಬುದು ಕೂಡಾ. ಈ ಪ್ರಪಂಚಕ್ಕೆ ಪ್ರಾರಂಭವೊಂದಿರಲೇಬೇಕು ಎಂಬ ನಿಲುವೇ ಅನಗತ್ಯವಾದುದು. ಆದರೆ ಪ್ರಪಂಚದ ಬಹುತೇಕ ದರ್ಶನಗಳು ಲೋಕಕ್ಕೆ ಪ್ರಾರಂಭವೊಂದನ್ನು ಆರೋಪಿಸುವುದರ ಜೊತೆಗೆ ಅಂತಹ ಪ್ರಾರಂಭಕ್ಕೆ ತಾವು ನಂಬಿಕೊಂಡಿರುವ ದೈವವೋ ಪುಸ್ತಕವೋ ಕಾರಣವೆಂದು ದೃಢವಾಗಿ ನಂಬುತ್ತವೆ. ಚರಿತ್ರೆಯಲ್ಲಿ ಇಂತಹ ನಂಬಿಕೆಗಳನ್ನು ಪ್ರಶ್ನಿಸಿದ್ದಕ್ಕೆ ಅನೇಕ ವಿಜ್ಞಾನಿಗಳ ತಲೆಗಳೇ ಉರುಳಿಹೋಗಿವೆ. ಈ ವಿಷಯದಲ್ಲಿ ಬಹುತೇಕ ಎಲ್ಲ ಧರ್ಮಗಳೂ ಹಠಮಾರಿಗಳೇ. ಈ ವಿಷಯದಲ್ಲಿ ಧರ್ಮಗಳು ಹೀಗೇಕೆ ವರ್ತಿಸುತ್ತವೆಂದರೆ ಅವುಗಳ ತಾತ್ವಿಕತೆಯ ಸ್ವರೂಪವನ್ನು ನಿರ್ಧರಿಸುವುದೇ ಅವು ಲೋಕವನ್ನು ಹೇಗೆ ವಿವರಿಸಿಕೊಳ್ಳುತ್ತವೆ ಎಂಬ ಸಂಗತಿ. ನಮ್ಮ ಸುತ್ತಲಿನ ಧರ್ಮಗಳು ಲೋಕವನ್ನು ಏನೆಂದು ವಿವರಿಸಿಕೊಂಡಿವೆ ಎಂಬ ಸಂಗತಿಯ ಬಗೆಗೆ ಒಮ್ಮೆ ಗಮನ ಹರಿಸಿದರೆ ಬಹುಪಾಲು ಅಪ್ಪಟ ಸುಳ್ಳಿನ ಕಟ್ಟುಕತೆಗಳ ಲೋಕವಿವರಣೆಗಳನ್ನು ನಮ್ಮ ಮುಂದಿಟ್ಟಿರುವುದನ್ನು ಕಾಣುತ್ತೇವೆ. ಈ ಕಟ್ಟುಕತೆಗಳು ಕೇವಲ ಧಾರ್ಮಿಕ ನಂಬಿಕೆಗಳಷ್ಟೇ ಆಗಿದ್ದರೆ ತೊಂದರೆಯಿರಲಿಲ್ಲ. ಆದರೆ ನಮ್ಮ ಸಾಮಾಜಿಕ ಜೀವನ ಮತ್ತು ರಾಜಕೀಯ ನಿರ್ಧಾರಗಳನ್ನೂ ಇವೇ ನಿರ್ಧರಿಸಿಬಿಡುತ್ತವೆ. ಇದರಿಂದಾಗಿ ರಾಜಕೀಯ ಶಕ್ತಿಕೇಂದ್ರಗಳು ತಮ್ಮ ಅಧಿಕಾರವನ್ನು ರೂಢಿಸಿಕೊಳ್ಳಲು ಪ್ರಜೆಗಳನ್ನು ಬಿಟ್ಟು ಧಾರ್ಮಿಕ ಕೇಂದ್ರಗಳನ್ನು ಅವಲಂಬಿಸುತ್ತವೆ. ಅಂತಹ ಬೆಳವಣಿಗೆಯನ್ನು ನಾವೀಗ ಕಾಣುತ್ತಿದ್ದೇವೆ.

ಇಂದು ಜಗತ್ತು ಬುದ್ಧನೆಡೆಗೆ ನೋಡಲು ಎರಡು ಪ್ರಮುಖ ಕಾರಣಗಳಿವೆ. ಒಂದು ಅವನು ಲೋಕವನ್ನು ಸರಿಯಾಗಿ ವಿವರಿಸಿಕೊಟ್ಟಿದ್ದಾನೆ ಮತ್ತು ಎಲ್ಲವನ್ನೂ ಅದು ಇರುವಂತೆ ನೋಡಲು ಕಲಿಸಿಕೊಟ್ಟಿದ್ದಾನೆ. ಎರಡನೆಯದಾಗಿ ಈ ವಿವರಣೆಯು ನಮ್ಮನ್ನು ಲೋಕದೊಡನೆ ಕರುಣೆ ಮೈತ್ರಿಯಿಂದ ವರ್ತಿಸುವಂತೆ ಪ್ರೇರೇಪಿಸುತ್ತದೆ. ಈ ಕರುಣಾಮೈತ್ರಿ ಮಾರ್ಗವು ಹೊರಗಿನಿಂದ ಆವಾಹಿಸಿಕೊಳ್ಳಬೇಕಾದ ಭಾವ ವಿಶೇಷವಾಗಿರದೆ ಲೋಕ ಸಂಬಂಧದ ಸರಿಯಾದ ಅರಿವಿನಿಂದ ಮೂಡುವ ಅಂತರ್ವಾಹಿನಿಯಾಗಿದೆ.

ಬುದ್ಧ ಗುರುವು ಅಸ್ತಿತ್ವವಾದ ಮತ್ತು ನಾಸ್ತಿತ್ವವಾದಗಳೆಂಬ ಎರಡೂ ತುದಿಗಳನ್ನು ನಿರಾಕರಿಸಿ, ಕಣ್ಣೆದುರಿಗಿನ ಈ ವಸ್ತು ಪ್ರಪಂಚವನ್ನು 'ಸ್ವೀಕರಿಸಿ' ಅದನ್ನು ನಿರಂತರ ಚಲನೆಯಲ್ಲಿರುವ, ಶಾಶ್ವತವಲ್ಲದ, ಸ್ವಭಾವವಿಲ್ಲದ ಕ್ರಿಯಾ ಸಾಮರ್ಥ್ಯವನ್ನಾಗಿ ವಿವರಿಸಿದನು. ಈ ಕ್ರಿಯಾ ಸಾಮರ್ಥ್ಯವನ್ನು ಚಲನೆಯಲ್ಲಿಯೇ ಇರುವ ಸಾಪೇಕ್ಷ ಕಾರಣ, ಸಾಪೇಕ್ಷ ಪ್ರತ್ಯಯ (ಪರಿಸ್ಥಿತಿ) ಮತ್ತು ಸಾಪೇಕ್ಷ ಫಲಗಳ ನೆರವಿನಿಂದ ವಿವರಿಸಿದನು. ಉದಾಹರಣೆಗೆ: ಬೀಜ–ಮೊಳಕೆ–ಸಸಿವೃಕ್ಷ – ಹೂವು–ಫಲ–ಬೀಜ–ಮೊಳಕೆ – ಸಸಿ... ಈ ಸರಣಿಯಲ್ಲಿ ಆದಿ ಅಂತ್ಯಗಳೆಂಬ ತುದಿಗಳು ನಿರಾಕರಣೆಗೊಂಡು ಪ್ರತಿಯೊಂದು ಮತ್ತೊಂದಕ್ಕೆ ಕಾರಣವಾಗುತ್ತ ಹಿಂದಿನ ಕಾರಣಕ್ಕೆ ಪರಿಣಾಮವಾಗುತ್ತ ಚಲನೆಯಲ್ಲಿವೆ. ಹೀಗೆ ತುದಿಗಳನ್ನು ವರ್ಜಿಸಿದ (ಶಾಶ್ವತ ಕಾರಣ ಮತ್ತು ಪರಿಣಾಮಗಳನ್ನು ನಿರಾಕರಿಸಿದ) ಮಧ್ಯಮ ಪ್ರತಿಪದವು ಬುದ್ಧನಿಂದ ಪ್ರತಿಪಾದಿಸಲ್ಪಟ್ಟಿತು. ಇದನ್ನೇ ಇಲ್ಲಿ 'ಪ್ರಕ್ರಿಯಾ ಮೀಮಾಂಸೆ' ಎಂದು ಸೂಚಿಸಲಾಗಿದೆ. ಬುದ್ಧ ಎದುರಿಗಿರುವ ವಸ್ತುವನ್ನು ವಸ್ತುವೆಂದು ವಿವರಿಸುವುದಿಲ್ಲ. ವಸ್ತುವೆನ್ನುವುದೊಂದು ನಮ್ಮ ಅನುಭವಕ್ಕೆ ಬರುವುದೊಂದು ಪ್ರಕ್ರಿಯೆಯಾಗಿದೆ. (ಫಾರ್ಮ್), ಸ್ಪರ್ಶ (ಕಾಂಟ್ಯಾಕ್ಟ್), ಸಂವೇದನೆ (ಫೀಲಿಂಗ್) ಮತ್ತು ಬೋಧೆ ಇವುಗಳಿಂದ ಉಂಟಾಗುವ ವಸ್ತುರೂಪವನ್ನು ಸಂಯೋಜನೆಯೆನ್ನಬಹುದೇ ಹೊರತು ಅದನ್ನು ಸಿದ್ಧವಾಗಿರುವ ವಸ್ತುವೆನ್ನಲಾಗದು. ಈಗಾಗಲೇ ಸಿದ್ಧವಾಗಿರುವ ವಸ್ತುವೆಂಬುದು ಯಾವುದೂ ಇಲ್ಲ. ಲೋಕದಲ್ಲಿರುವ ಎಲ್ಲವೂ ಸಾಪೇಕ್ಷ ಕಾರಣ ಮತ್ತು ಪ್ರತ್ಯಯಗಳಿಂದಾದ ಸಾಪೇಕ್ಷ ಪರಿಣಾಮಗಳು ಮತ್ತು ಎಲ್ಲವೂ ನಿರಂತರ ಬದಲಾವಣೆಗೊಳ್ಳುತ್ತ ಚಲನೆಯಲ್ಲಿವೆ. ಇದನ್ನು ಪ್ರತೀತ್ಯ ಸಮುತ್ಪಾದ ಎನ್ನುತ್ತಾರೆ.

ಬುದ್ಧಗುರುವು ಈ ಪ್ರತೀತ್ಯ ಸಮುತ್ಪಾದ ತತ್ವದ ತಿಳುವಳಿಕೆಯನ್ನು ದುಃಖದ ಬಿಡುಗಡೆಯ ಮಾರ್ಗವಾಗಿಸಿದನು. ದುಃಖವೆಂಬ ಪದಕ್ಕೆ ಇರುವ ಅರ್ಥವನ್ನು ವಿವರಿಸುವ ಅನೇಕ ಪ್ರಯತ್ನಗಳಿವೆ. ಪಾಲಿ ಭಾಷೆಯ 'ದುಃಖ'ಕ್ಕೆ ಕನ್ನಡದ 'ದುಃಖ' ಸಮಾನಾರ್ಥಕ ಪದ ಅಲ್ಲ. ದುಃಖವನ್ನು ಒಂದು ಲೋಕಲಕ್ಷಣವನ್ನಾಗಿಯೂ ಬುದ್ಧ ಗುರುತಿಸಿದ್ದಾನೆ. ಅವನು ತಿಳಿಸಿದ ಮೂರು ಲೋಕಲಕ್ಷಣಗಳಲ್ಲಿ 'ದುಃಖವೂ ಒಂದು. (೧) ಎಲ್ಲ ಸಂಯೋಜನೆಗಳೂ ಅನಿತ್ಯವಾದವು (೨) ಎಲ್ಲ ಸಂಯೋಜನೆಗಳೂ ದುಃಖದಿಂದ ಕೂಡಿವೆ (೩) ಎಲ್ಲ ಧರ್ಮಗಳೂ ಅನಾತ್ಮವಾಗಿವೆ – ಈ ತ್ರಿಲಕ್ಷಣಗಳಲ್ಲಿ ಮೊದಲಿನ ಎರಡು ಲಕ್ಷಣಗಳು ಎಲ್ಲ ಸಂಯೋಜನೆಗಳನ್ನು ಕುರಿತವುಗಳಾಗಿವೆ. ಲೋಕದ ಎಲ್ಲವೂ ಅಂದರೆ ವಸ್ತು ಮತ್ತು ಜೀವ ಸಮುಚ್ಚಯದ ಎಲ್ಲವೂ ಸಂಯೋಜನೆಗಳೇ ಆಗಿವೆ

ಮತ್ತು ಅವು ಸದಾ ಬದಲಾಗುತ್ತಲೇ ಇರುತ್ತವೆ. ಎರಡನೆಯದಾಗಿ ಈ ಸಂಯೋಜನೆಗಳು ದುಃಖದಿಂದ ಕೂಡಿವೆ. ವಸ್ತು ಪ್ರಪಂಚದ ಸಂಯೋಜನೆಗಳಿಗೆ ಅನ್ವಯವಾಗುವ ಈ 'ದುಃಖವು' ಜೀವ ಪ್ರಪಂಚಕ್ಕೆ ಅನ್ವಯವಾಗುವ ಭಾವ ವಿಶೇಷವಲ್ಲ, ಬದಲಿಗೆ ಸರ್ವವೂ 'ಆಗುವಿಕೆ'ಯಲ್ಲಿಯೇ ಇರುತ್ತದೆ. ಆಗಿ ಇರುವುದು ಯಾವುದೂ ಇಲ್ಲ. ಹೀಗೆ ಆಗುವ 'ತಲ್ಲಣ'ದಲ್ಲಿಯೇ ಎಲ್ಲ ಸಂಯೋಜನೆಗಳೂ ನಿರಂತರ ಬದಲಾವಣೆ ಮತ್ತು ಚಲನೆಯಲ್ಲಿಯೇ ಇರುತ್ತವೆ. ಈ ತಲ್ಲಣವನ್ನೇ ದುಃಖವೆಂಬ ಲಕ್ಷಣವನ್ನಾಗಿ ವಿವರಿಸಲಾಗಿದೆ. ಮನುಷ್ಯನಿಗೆ ಸಂಬಂಧಿಸಿದಂತೆ ಸಂತೋಷದ ಅನುಭವವೂ ದುಃಖವೇ. ಅದು ನಿರಂತರವಾಗದುದಕ್ಕೆ ದುಃಖ. ಸಂಕಟದ ಅನುಭವ ದೂರಾಗದುದಕ್ಕೆ ದುಃಖ ಇತ್ಯಾದಿ. ಅನಿತ್ಯವಾದ ಸಂಯೋಜನೆಗಳನ್ನು ನಿತ್ಯವಸ್ತುಗಳೆಂದು ಭಾವಿಸಿ ವ್ಯವಹರಿಸುವುದರಿಂದ; ಸದಾ ಆಗುವಿಕೆಯಲ್ಲಿಯೇ ಇರುವ ಸಂಯೋಜನೆಗಳನ್ನು ಆಗಿ ಇರುವ ವಸ್ತುಗಳೆಂದು ಭಾವಿಸುವುದರಿಂದ ಮತ್ತು ಈ ಲೋಕವನ್ನು ಪರಿಭಾವಿಸುತ್ತಿರುವ ನಾವೂ ಸೇರಿದಂತೆ ಲೋಕಸಮಸ್ತದಲ್ಲಿ ಸ್ವತಂತ್ರ ಅಸ್ತಿತ್ವವೊಂದನ್ನು ಗುರುತಿಸಿಕೊಂಡು ವ್ಯವಹರಿಸುವ ಮಿಥ್ಯಾ ನಿಲುವಿನಿಂದಾಗಿ ನಾವು 'ದುಃಖ'ಕ್ಕೆ ಒಳಗಾಗುತ್ತೇವೆ. ಲೋಕಲಕ್ಷಣಗಳನ್ನು ಅರಿತು ಆ ಅರಿವನ್ನು ಸ್ವಯವಾಗಿಸಿಕೊಂಡರೆ ಯಾವುದಕ್ಕೂ ಅಂಟಿಕೊಳ್ಳುವ ಸಂದರ್ಭವೇ ಉಂಟಾಗುವುದಿಲ್ಲ. ಲೋಕಸಂಬಂಧದ ಜಾಲದಲ್ಲಿ ನಾವು ಬೆರೆತುಹೋಗುವುದರಿಂದ ದುಃಖಪಡುವ ಸ್ವತಂತ್ರ 'ಭಾವ'ವುಳ್ಳ ಜೀವಿಯೊಂದು ಇರಲೂ ಸಾಧ್ಯವಿಲ್ಲ ಮತ್ತು ದುಃಖವೂ ಸಾಧ್ಯವಿಲ್ಲ. ಅದನ್ನೇ ಅಲ್ಲಮಪ್ರಭು ಹೀಗೆ ನುಡಿಯುತ್ತಿರಬಹುದು:

**ಸುಖವ ಬಲ್ಲಾತ ಸುಖಿಯಲ್ಲ**
**ದುಃಖವ ಬಲ್ಲಾತ ದುಃಖಿಯಲ್ಲ**
**ಸುಖ ದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ**
**ಹುಟ್ಟದ ಮುನ್ನ ಸತ್ತವರ ಕುರುಹಬಲ್ಲಡೆ ಬಲ್ಲ ಗುಹೇಶ್ವರ.**

ಆಧುನಿಕತೆಯು ಬಹು ಸಂಭ್ರಮದಿಂದ ಮುಂದಿಡುವ ವಸ್ತುವಾದಿ ದೃಷ್ಟಿಕೋನವೂ ವಿಕಲ್ಪಗಳ ಸೃಷ್ಟಿಯಲ್ಲಿಯೇ ತೊಡಗಿದೆ. ಲೋಕಸಮಸ್ತವನ್ನೂ ಭಿನ್ನ ಭಿನ್ನ ಘಟಕಗಳನ್ನಾಗಿ ನೋಡುವ ನಿಲುವಿಗೆ, 'ಸಂಬಂಧ' ಪಥ್ಯವಾಗದ ಸಂಗತಿ. ಲೋಕವನ್ನು ಸಂಬಂಧಗಳ ಸರಮಾಲೆಯೆಂದು ವಿವರಿಸುವ ಮೂಲಕ ಈ ವಿವರಣೆಯ ಉದ್ಯೋಗವನ್ನು ಲೋಕದ ಸಂಕಟ ಪರಿಹಾರಕ್ಕಾಗಿಯೇ ಮಾಡಿದವರು ಬುದ್ಧ, ನಾಗಾರ್ಜುನ, ಅಲ್ಲಮರು. ಅವರ ವಿಚಾರಗಳಿಗೆ ಮತ್ತೆ ಜೀವ ಬರಬೇಕು. ಅದರಿಂದಾಗಿ ನಾಗಾರ್ಜುನನನ್ನು ಎದುರಾಗಬೇಕು.

ಬುದ್ಧನ ನಂತರ ಹುಟ್ಟಿಕೊಂಡ ಅನೇಕ ಶಾಖೆಗಳು ಬೌದ್ಧತತ್ವದ ವ್ಯಾಖ್ಯಾನದಲ್ಲಿ ತೊಡಗಿದವು. ಅವುಗಳಲ್ಲಿ ಸರ್ವಾಸ್ತಿವಾದಿಗಳು ಮತ್ತು ಸೌತ್ರಾಂತಿಕರು ಬೌದ್ಧ ಧರ್ಮದೊಳಗೇ ಇದ್ದು ಅದರ ತಾತ್ವಿಕತೆಯನ್ನು ಬುಡಮೇಲು ಮಾಡಲು ಯತ್ನಿಸಿದರೆಂಬ ಆಪಾದನೆಯನ್ನು ಹೊತ್ತವರು. ಅವುಗಳ ಸ್ಥೂಲ ನಿಲುವು ಇದು :

**ಸರ್ವಾಸ್ತಿವಾದ :** ಬೌದ್ಧಥೇರಾವಾದ ಶಾಖೆಯಿಂದ ಪ್ರವರ್ತಿತವಾದದ್ದು. ಭಾರತೀಯ ದರ್ಶನಗಳಲ್ಲಿ ಒಂದಾದ ಸಾಂಖ್ಯಕ್ಕೆ ತೀರಾ ಸಮೀಪದ್ದು. ಇರುವುದೆಲ್ಲವೂ ಶಾಶ್ವತವಾಗಿ ಅಸ್ತಿತ್ವದಲ್ಲಿ ಇದೆ. ನಿರಂತರವಾಗಿ ಬದಲಾವಣೆಗೆ ಒಳಗಾಗುತ್ತಿದೆ. ಹೊಸದು ಪ್ರತ್ಯಕ್ಷವಾಗದು, ಏನೂ ವಿನಾಶಗೊಳ್ಳದು ; ಭೂತಕಾಲವು ಸತ್ಯ, ಭವಿಷ್ಯತ್ಕಾಲವೂ ಸತ್ಯ. ಏಕೆಂದರೆ ವರ್ತಮಾನ ಕಾಲವು ಸತ್ಯ. ವರ್ತಮಾನದ ಉಗಮ ಭೂತ-ಭವಿಷ್ಯತ್‌ಗಳಲ್ಲಿದೆ. ಇದನ್ನು ಕುಶ-ಪ್ರಸ್ಥಾನ ಎಂದು ಕೂಡಾ ಗುರುತಿಸುತ್ತಾರೆ. ಸರ್ವಾಸ್ತಿವಾದದ ತಾತ್ವಿಕತೆಯನ್ನು ಕಾತ್ಯಾಯಿನಿಪುತ್ರರ "ಜ್ಞಾನಪ್ರಸ್ಥಾನ"ದಲ್ಲಿ ವಿವರಿಸಲಾಗಿದೆ. ಸರ್ವಾಸ್ತಿವಾದವು ಮೂರು ರೀತಿಯ 'ಪರಮಾಣು'ಗಳ ಅಸ್ತಿತ್ವವನ್ನು ಒಪ್ಪುತ್ತದೆ (೧) ಪರಮಾಣು (೨) ಅಣು (೩) ರಜಸ್. ಪರಮಾಣು ಒಡೆಯಲಾಗದ್ದು, ಧ್ಯಾನದ ಮೂಲಕ ಮಾತ್ರ ಗ್ರಹಿಸಲು ಸಾಧ್ಯವಾಗುವಂಥದ್ದು ಇತ್ಯಾದಿ. ವಸುಬಂಧುವಿನ ಪ್ರಕಾರ ಸರ್ವಾಸ್ತಿವಾದದ ತಾತ್ವಿಕತೆಯು ಬುದ್ಧನ ಮೂಲ ಉಪದೇಶಗಳಲ್ಲಿ ಇಲ್ಲ. ನಂತರದ 'ವೈಭಾಷಿಕ' ಸಾಹಿತ್ಯದಲ್ಲಿ ಇದನ್ನು ರೂಪಿಸುವ ಪ್ರಯತ್ನಗಳು ನಡೆದವು. ಬೌದ್ಧ ತಾತ್ವಿಕತೆಯನ್ನು ದಿಕ್ಕು ತಪ್ಪಿಸುವ ವಿದ್ರೋಹಿ ಪ್ರಯತ್ನಗಳನ್ನು ನಾಗಾರ್ಜುನ ಮತ್ತು ಇತರ ಮಾಧ್ಯಮಿಕರು ಇಲ್ಲಿ ಗುರುತಿಸಿದ್ದಾರೆ.

**ಸೌತ್ರಾಂತಿಕವಾದ:** ಬೌದ್ಧರ ೧೮ ಶಾಖೆಗಳಲ್ಲಿ ಕೊನೆಯದು. ವ್ಯಕ್ತಿತ್ವ ಶೂನ್ಯತೆ (ಪುದ್ಗಲ ಶೂನ್ಯತೆ) ಮತ್ತು ಸರ್ವಧರ್ಮ ಶೂನ್ಯತೆ ಇದರ ತಾತ್ವಿಕತೆ. ಈ ಶಾಖೆಯ ಹರಿವರ್ಮನ ಪ್ರಕಾರ ಅಸ್ತಿತ್ವದಲ್ಲಿರುವ ಎಲ್ಲವೂ ವಿನಾಶಗೊಳ್ಳಲೇಬೇಕು. ಶೂನ್ಯವೇ ಆತ್ಯಂತಿಕ ಸತ್ಯ. ಆದರೆ ಈ ಶೂನ್ಯವನ್ನು ಅದು ಪಡೆಯುವ ಕ್ರಮವೆಂದರೆ ಅಸ್ತಿತ್ವದಲ್ಲಿರುವುದನ್ನು ಛಿದ್ರಗೊಳಿಸುತ್ತಾ ಹೋಗಿ ಕಡೆಗೆ ಶೂನ್ಯವನ್ನು ಪಡೆಯುವುದು. ಅದು ಅಸ್ತಿತ್ವದ ಆ ಇನ್ನೊಂದು ತುದಿ. ಅಂತಿಮವಾಗಿ ಗಮನಿಸಿದಾಗ ಬುದ್ಧನ ಮೂಲ ತತ್ವಗಳಲ್ಲಿ ಇದೂ ಇಲ್ಲದಿರುವುದನ್ನು ನಂತರದ ವ್ಯಾಖ್ಯಾನಕಾರರು ಗುರುತಿಸುತ್ತಾರೆ.

ಇತರ ಭಾರತೀಯ ದರ್ಶನಗಳ ಲೋಕ ವಿವರಣೆಯ ನಿಲುವುಗಳನ್ನು ಇಲ್ಲಿ ಸಂಕ್ಷೇಪವಾಗಿ ಪ್ರಸ್ತಾಪಿಸಲು ಕೂಡಾ ಸಾಧ್ಯವಾಗಿಲ್ಲ. ಅತ್ಯಂತ ವಿಸ್ತಾರವಾದ ದರ್ಶನಗಳನ್ನು ಹ್ರಸ್ವಗೊಳಿಸಿ ಮುಂದಿಡುವುದು ಅಸಾಧುವಾದದ್ದು ಕೂಡಾ. ಬುದ್ಧನ ಎದುರಿಗೆ ಇದ್ದ ಅಂತಹ ದರ್ಶನಗಳನ್ನು ನಿರ್ವಹಿಸಿದ ಬಗೆಯೇ ಒಂದು ಮಾದರಿ ಕ್ರಮ. ಬುದ್ಧನ ಉಪದೇಶವನ್ನು ಶ್ರಾವಕರು (ಉಪದೇಶವನ್ನು 'ಕೇಳಿಸಿಕೊಂಡ' ಶಿಷ್ಯರು) ತ್ರಿಪಿಟಕಗಳೆಂಬ ಗ್ರಂಥಗಳಲ್ಲಿ ಸಂಗ್ರಹಿಸಿಟ್ಟಿದ್ದಾರೆ. ವಿನಯಪಿಟಕ,

ಅಭಿಧಮ್ಮ ಪಿಟಕ, ಮತ್ತು ಸುತ್ತ ಪಿಟಕ– ಈ ಮೂರು ಗುಂಪುಗಳಾಗಿ ಬುದ್ಧನ ಉಪದೇಶವನ್ನು ವಿಂಗಡಿಸಲಾಗಿದೆ. ವಿನಯಪಿಟಕದಲ್ಲಿ ಸಂಘದ ಭಿಕ್ಕುಗಳಿಗೆ ನಡೆವಳಿಕೆಗಳನ್ನು ಸೂಚಿಸಲಾಗಿದೆ. ಅಭಿಧಮ್ಮಪಿಟಕದಲ್ಲಿ ಬೌದ್ಧ ತಾತ್ವಿಕತೆಯ ವಿಶ್ಲೇಷಣೆ ಇದೆ. ಕೊನೆಯದಾಗಿ ಸುತ್ತಪಿಟಕದಲ್ಲಿ ಬುದ್ಧನ ಉಪದೇಶಗಳ ಸೂತ್ರರೂಪದ ದಾಖಲೆ ಇದೆ. ಬುದ್ಧನ ಪರಿನಿರ್ವಾಣದ ನಂತರ ಬುದ್ಧನ ಶಿಷ್ಯರಿಂದ ಸಂಗ್ರಹಿಸಲ್ಪಟ್ಟ ಈ ತ್ರಿಪಿಟಕಗಳನ್ನು ಬೌದ್ಧಧರ್ಮದ ಎಲ್ಲ ಶಾಖೆಗಳೂ ಗೌರವಿಸುತ್ತವೆ. ಬುದ್ಧನ ಉಪದೇಶದ ಮುಖ್ಯಾಂಶಗಳಾದ ನಾಲ್ಕು ಶ್ರೇಷ್ಠ ಸತ್ಯಗಳು, ಅಷ್ಟಾಂಗ ಮಾರ್ಗ, ಪ್ರತೀತ್ಯ ಸಮುತ್ಪಾದ, ಶೂನ್ಯತೆ, ಅನಾತ್ಮವಾದ ಮುಂತಾದವುಳಿಗೆ ಈ ತ್ರಿಪಿಟಕಗಳೇ ಮೂಲ ಆಕರ.

### ಪ್ರಕ್ರಿಯಾ ಮೀಮಾಂಸೆ

ನಾಗಾರ್ಜುನನ ಮಧ್ಯಮಮಾರ್ಗವು ಲೋಕವನ್ನು ಮತ್ತು ಲೋಕದ ಭಾಗವಾಗಿರುವ ನಮ್ಮನ್ನು ಸರಿಯಾಗಿ ಅರಿತುಕೊಳ್ಳುವ ಕ್ರಮ. ಹಾಗಾದರೆ ಹಿಂದೂ ಧರ್ಮವಾಗಲೀ ಇತರೆ ಧರ್ಮಗಳಾಗಲೀ ಲೋಕವನ್ನು ಸರಿಯಾಗಿ ವಿವರಿಸಿಕೊಟ್ಟಿಲ್ಲವೆ? ಈ ಪ್ರಶ್ನೆಗೆ ವಿಜ್ಞಾನ ಮತ್ತು ಬೌದ್ಧ ಧರ್ಮ ಖಚಿತವಾಗಿ ಮತ್ತು ದೃಢವಾಗಿ ನೀಡುವ ಉತ್ತರವೆಂದರೆ "ಇಲ್ಲ. ಸರಿಯಾಗಿ ವಿವರಿಸಿಕೊಟ್ಟಿಲ್ಲ ಬದಲಿಗೆ ಸುಳ್ಳು ವಿವರಣೆಗಳನ್ನು ನೀಡಿವೆ. ಹಾಗೆ ಸುಳ್ಳು ವಿವರಣೆಗಳನ್ನು ನೀಡಿದ್ದೂ ಅಲ್ಲದೆ, ತಮ್ಮ ವಿವರಣೆಗಳೇ ಸತ್ಯವೆಂದು ಹಠ ಹಿಡಿದು ಸಾಧಿಸುತ್ತಿವೆ. ಸಾಮಾನ್ಯವಾಗಿ ಬೌದ್ಧೇತರ ಧರ್ಮಗಳು ಲೋಕವನ್ನು ಅಸ್ತಿತ್ವ ಅಥವಾ ನಾಸ್ತಿತ್ವದ ಮೂಲಕ ವಿವರಿಸುತ್ತವೆ. ಅಂದರೆ ಕಣ್ಣೆದುರಿನ ವಸ್ತು ಪ್ರಪಂಚವನ್ನು 'ಇದೆ' ಎಂದೋ 'ಇಲ್ಲ' ಎಂದೋ ವಿವರಿಸುತ್ತವೆ. ಆದರೆ ಬೌದ್ಧ ಧರ್ಮವು ಲೋಕವನ್ನು ಸದಾ ಚಲಿಸುತ್ತಿರುವ ಪ್ರವಾಹವೆಂದೂ, ಇದೆ ಎಂದು ಕರೆಯಬಹುದಾದ ಸ್ವತಂತ್ರ ವಸ್ತುರೂಪದ ಶಾಶ್ವತವಾದ ಯಾವುದೂ ಎಂದೂ ಎಲ್ಲಿಯೂ ಉಂಟಾಗುವುದಿಲ್ಲ ಎಂದು ವಿವರಿಸುತ್ತದೆ. ಹಾಗಾದರೆ ಕಣ್ಣೆದುರಿಗೆ ಕಾಣುವ ವಸ್ತು ಪ್ರಪಂಚವಾಗಲೀ ಈ ವಸ್ತುಪ್ರಪಂಚದ ಭಾಗವಾಗಿರುವ ನಾವಾಗಲೀ ಉಂಟಾಗುವುದು ಹೇಗೆ? ಎಂಬ ಪ್ರಶ್ನೆಗೆ ಬೌದ್ಧ ಧರ್ಮದ ಉತ್ತರ ಖಚಿತವೂ ಅತ್ಯಂತ ನಿಖರವೂ ಆಗಿದೆ. ಅದು ಲೋಕವನ್ನು ತ್ರಿಲಕ್ಷಣಗಳ ಮೂಲಕ ವಿವರಿಸುತ್ತದೆ. ಆ ತ್ರಿಲಕ್ಷಣಗಳನ್ನು ಅರಿತುಕೊಳ್ಳುವ ಮುನ್ನ ಅರಿತುಕೊಳ್ಳಬೇಕಾದ ಸಂಗತಿಯೊಂದಿದೆ. ಲೋಕದಲ್ಲಿ ನಾವು ಕಾಣುವ ಎಲ್ಲವೂ ಅನೇಕ ಸಂಗತಿಗಳಿಂದಾದ ಸಂಯೋಜನೆಗಳು. ಅವುಗಳನ್ನು ಪಾಲಿಯಲ್ಲಿ ಸಂಖಾರಗಳೆನ್ನುತ್ತಾರೆ. ಬೇರೆಯವರು ಲೋಕವನ್ನು ಇದೆ ಅಥವಾ ಇಲ್ಲ ಎಂದು ಕರೆಯಬಹುದಾದ ವಸ್ತುಗಳೆಂದರೆ ಬೌದ್ಧ ಧರ್ಮವು ಅದನ್ನು ಸದಾ ಪ್ರವಾಹದಲ್ಲಿರುವ ಸಂಯೋಜನೆಗಳೆನ್ನುತ್ತದೆ. ಇದನ್ನೇ ಪ್ರಕ್ರಿಯಾ ಮೀಮಾಂಸೆ ಎನ್ನುತ್ತಾರೆ. ಪ್ರಕ್ರಿಯಾ ಮೀಮಾಂಸೆಯ ವಿಸ್ತಾರವಾದ ವಿವರಣೆಯನ್ನು ಮುಂದೆ ನೀಡಲಾಗುವುದು.

### ತ್ರಿಲಕ್ಷಣಗಳು

ಸಂಯೋಜನೆಗಳ ರೂಪದ ಈ ಲೋಕ ಸಮಸ್ತವೂ ಮೂರು ಲಕ್ಷಣಗಳಿಂದ ಕೂಡಿದೆ.

೧. ಎಲ್ಲ ಸಂಖಾರಗಳೂ (ಸಂಯೋಜನೆಗಳೂ) ಸದಾ ಬದಲಾಗುತ್ತಲೇ ಹೋಗುತ್ತವೆ. (ಸಬ್ಬೇ ಸಂಖಾರ ಅನಿಚ್ಚ)

೨. ಎಲ್ಲ ಸಂಖಾರಗಳೂ ದುಃಖದಿಂದ ಕೂಡಿವೆ. (ಸಬ್ಬೇ ಸಂಖಾರ ದುಃಖ)

೩. ಎಲ್ಲದರ ಧರ್ಮವೂ ಅನಾತ್ಮವಾಗಿದೆ. (ಸಬ್ಬೇ ಧಮ್ಮ ಅನಾತ್ತ)

ಅನಾತ್ಮ, ಅಶಾಶ್ವತ ಮತ್ತು ದುಃಖ ಈ ಮೂರು ಲಕ್ಷಣಗಳ ವಿವರಣೆಯೇ 'ಶೂನ್ಯತೆ'. ಈ ತಾತ್ವಿಕತೆಯ ಒಂದು ಅಸಮಗ್ರ ವಿವರಣೆಯನ್ನು ಹೀಗೆ ನೀಡಬಹುದು. ನಿತ್ಯ ಬದಲಾವಣೆಯು ಗೋಚರವಾಗುತ್ತಿದ್ದರೂ ವಸ್ತುಗಳಲ್ಲಿ ಶಾಶ್ವತವಾದ ಅಂತಸ್ಸತ್ವವನ್ನು ಸಾಮಾನ್ಯ ಮಾನವಮತಿ ಹುಡುಕುತ್ತಿರುತ್ತದೆ. ಇದರ ಹಿಂದೆ ಸಾಮಾನ್ಯ ಲೋಕಕಾರಣವೊಂದನ್ನು ಹುಡುಕುವ ಪ್ರಯತ್ನವಿರುತ್ತದೆ. ಇಂತಹ ಹುಡುಕಾಟಗಳು ಬೇರೆ ಬೇರೆ ಉತ್ತರಗಳನ್ನು ಕಂಡುಕೊಳ್ಳುತ್ತವೆ. ದ್ವೈತ, ಅದ್ವೈತವಾದ ಇತ್ಯಾದಿಗಳಲ್ಲಿ ಅವು ವಿರಮಿಸುತ್ತವೆ. ಇಂತಹ ದೃಷ್ಟಿವಾದಗಳು ಪಾಂಥಿಕ ಶಠತ್ವವನ್ನು ಬೆಳೆಸಿಕೊಳ್ಳುತ್ತವೆ. ಈ ದೃಷ್ಟಿವಾದಗಳಿಂದ ಬೌದ್ಧ ಧರ್ಮವು ದೂರ ನಿಲ್ಲುತ್ತದೆ. ಲೋಕಸೃಷ್ಟಿಯ ಪ್ರಥಮಕಾರಣದ ಬಗೆಗೆ ಪ್ರಶ್ನಿಸಿದಾಗ ಬುದ್ಧ ಮೌನ ವಹಿಸಿದ. ಜೀವ ಜಗತ್ತಿನ ಬಗೆಗೆ ಆತ್ಮ ಇತ್ಯಾದಿ ಸಕಾರಣವನ್ನು ನಿರಾಕರಿಸಿದ. ವಸ್ತು ಪ್ರಪಂಚದ ಸತ್ಯವನ್ನರಿಯಲು 'ಅನೇಕ'ದಲ್ಲಿ 'ಏಕವನ್ನು ಗುರುತಿಸುವುದನ್ನಾಗಲೀ, 'ಅನೇಕ'ಕ್ಕೆ ಮುನ್ನ 'ಏಕ'ವನ್ನು ಕಂಡುಕೊಳ್ಳುವುದನ್ನಾಗಲೀ, ಭಿನ್ನತೆಯಲ್ಲಿ ಐಕ್ಯತೆಯನ್ನು ಹುಡುಕುವುದನ್ನಾಗಲೀ ಜಂಗಮದಲ್ಲಿ ಸ್ಥಾವರವೊಂದನ್ನು ಗುರುತಿಸುವುದನ್ನಾಗಲೀ, ಅವನು ಒಪ್ಪಲಿಲ್ಲ. ಬೌದ್ಧಧರ್ಮ ಯಾವುದೇ ವಿಶೇಷ ಆರೋಪವಿಲ್ಲದ, ಅದು ಹೇಗಿದೆಯೋ ಹಾಗೆ ಸ್ವೀಕರಿಸುವುದನ್ನೇ ಅಥವಾ ಅದು ಇರುವಂತೆಯೇ ಭಾವಿಸಿಕೊಳ್ಳುವುದನ್ನು ಸರಿಯೆನ್ನುತ್ತದೆ. ಶಾಶ್ವತ ಅಸ್ತಿತ್ವವಿಲ್ಲದಿರುವುದೇ ಅದರ ನೈಜ ಧರ್ಮ. ಅಂದರೆ ಸ್ವಭಾವವಿಲ್ಲದಿರುವುದೇ ತಥತೆಯ ಲಕ್ಷಣವಾಗಿದೆ.

ಬೌದ್ಧಧರ್ಮವು ಅ) ವಸ್ತುರೂಪ (ಆ) ಸ್ಪರ್ಶ (ಇ) ಸಂವೇದನೆ (ಈ) ಬೋಧೆ ಇವುಗಳಿಂದಾದ ಸಂಯೋಜನೆಗಳನ್ನು ವಸ್ತುಗಳೆಂದು ಗ್ರಹಿಸದೆ ಅದೊಂದು

ಪ್ರಕ್ರಿಯೆ ಎಂದು ವಿವರಿಸುತ್ತದೆ. ಈ ಪ್ರಕ್ರಿಯಾ ಸಿದ್ಧಾಂತ ಬೌದ್ಧ ಧರ್ಮದ ಲೋಕವಿವರಣೆಯ ವಿಧಾನವಾಗಿದ್ದು ಅದನ್ನೊಂದು ಉದಾಹರಣೆಯ ಮೂಲಕ ಹೇಳಬಹುದು. ಬುದ್ಧನ ಪರಿನಿರ್ವಾಣದ ಕೆಲವು ವರ್ಷಗಳ ನಂತರ ಅಥೆನ್ಸ್‌ನ ಹೆರಾಕ್ಲೀಟಸ್ ಕೂಡ ಇದೇ ಪ್ರಕ್ರಿಯಾ ಸಿದ್ಧಾಂತವನ್ನು ಮಂಡಿಸುತ್ತಾನೆ. 'ಸ್ಥಿತ' ವಸ್ತುವೆಂಬುದಿಲ್ಲ. ಬದಲಾಗದ ಅಂತಸ್ಸತ್ವವೆಂಬುದಿಲ್ಲ. ಚಲನೆ ಮತ್ತು ಬದಲಾವಣೆಯೇ ವಿಶ್ವದ ನಿಯತಿ. ಸರ್ವವೂ 'ಆಗುವಿಕೆ'ಯಲ್ಲಿಯೇ ಇರುತ್ತದೆ, ನಿರಂತರ ಪ್ರವಾಹವಾಗಿರುತ್ತದೆ (ಇದನ್ನು ಪಂತರ್ಹೀ ಎನ್ನುತ್ತಾರೆ) ಅವನು 'ಒಂದೇ ನದಿಗೆ ಎರಡು ಸಾರಿ ಕಾಲಿಡಲು ಸಾಧ್ಯವಿಲ್ಲ' ಎನ್ನುತ್ತಾನೆ. ಬೌದ್ಧಧರ್ಮವು, ಹರಿಯುವ ನದಿ, ನದಿಯೊಳಗೆ ಕಾಲಿಡುವ ಮನುಷ್ಯ – ಈ ಎರಡನ್ನೂ ಮೇಲಿನಂತೆಯೇ ವಿವರಿಸುತ್ತದೆ. ಎರಡನೇ ಸಾರಿ ನದಿಗೆ ಕಾಲಿಡುವ ಮನುಷ್ಯನೂ ಮೊದಲಿನವನೇ ಆಗಿರಲು ಸಾಧ್ಯವಿಲ್ಲ, ಹಾಗೆಯೇ ಬೇರೆ ಬೇರೆಯೂ ಅಲ್ಲ. ಬದಲಾವಣೆಯನ್ನು ನಾಗಾರ್ಜುನನೂ ಅತ್ಯಂತ ಎಚ್ಚರಿಕೆಯಿಂದ ವಿವರಿಸುತ್ತಾನೆ. 'ಒಂದರಿಂದ ಇನ್ನೊಂದು ಭಿನ್ನವೋ ಅಭಿನ್ನವೋ' ಎಂಬ ವಿಧಾನದಿಂದ ಬದಲಾವಣೆಯನ್ನು ವಿವರಿಸಲಾಗದು. ನಮ್ಮಲ್ಲಿ ಉಂಟಾಗುವ ಮಿಥ್ಯಾದೃಷ್ಟಿ ಒಂದು ಕಾರಣ. ಐಡೆಂಟಿಟಿ ಮತ್ತು ಡಿಫರೆನ್ಸ್‌ಗಳ ಮೂಲಕ ಗ್ರಹಿಸಲು ಹೋಗಿ ಎಡವಿಬಿಡುತ್ತೇವೆ. ಬದಲಾವಣೆಯನ್ನು ವಿವರಿಸಲು ನಾಗಾರ್ಜುನ ಎರಡು ಮಾನದಂಡಗಳನ್ನು ಮುಂದಿಡುತ್ತಾನೆ. ಬದಲಾವಣೆಯು ಪೂರ್ಣ ಮತ್ತು ಸತತವಾದದ್ದು. ಬದಲಾದ ವಸ್ತುಗಳು ಸಮಾನವಲ್ಲ, ಯುವಕನೊಬ್ಬ ವೃದ್ಧನಾದರೆ ಯುವಕ-ವೃದ್ಧ ಒಬ್ಬನೇ ಅಲ್ಲ. ಬೇರೆಬೇರೆಯೂ ಅಲ್ಲ. ಹಾಲು-ಮೊಸರು ಒಂದೇ ಅಲ್ಲ. ಬೇರೆ ಬೇರೆಯೂ ಅಲ್ಲ. ಅಂದರೆ ಅವುಗಳ ನಡುವಿನ ಕೊಂಡಿಯನ್ನು, ನಿರಂತರತೆಯನ್ನು ಕಳಚಲುಬಾರದು. ಈ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಿ ವಿವರಿಸಲು ಸಾಧ್ಯವಿಲ್ಲ. ಹಾಲು ಮೊಸರಾಗುವ ಕ್ಷಣವೊಂದನ್ನು ದಾಖಲಿಸಲು ಸಾಧ್ಯವಿಲ್ಲ. ಯುವಕ ವೃದ್ಧನಾಗುವ ಪ್ರಕ್ರಿಯೆ ಉಂಟೇ ಹೊರತು, ಯಾವಾಗ? ಎಂಬ ಅ ಪ್ರಶ್ನೆಗೆ ನಿಶ್ಚಿತ ಉತ್ತರವಿಲ್ಲ. ಯಾಕೆಂದರೆ ಈ ಪ್ರಶ್ನೆ ಕಾಲಸಂಬಂಧಿಯಾದದ್ದು.

ಎರಡನೆಯದಾಗಿ ಎಲ್ಲ ಸಂಯೋಜನೆಗಳೂ ದುಃಖದಿಂದ ಕೂಡಿವೆ ಎಂಬ ಲಕ್ಷಣಕ್ಕೆ ವಿಶೇಷ ಅರ್ಥವಿದೆ. ದುಃಖವೆಂಬ ಪಾಲಿಯ ಪದಕ್ಕೆ ಕನ್ನಡದ ದುಃಖ ಸಮಾನ ಪದವಲ್ಲ. ದುಃಖ ಪದಕ್ಕೆ ಮೂರು ವಿವರಣೆಗಳಿವೆ. ಸಾಮಾನ್ಯ ನೋವು ಸಂಕಟಗಳಿಗೆ ಸಂಬಂಧಿಸಿದ್ದು, ಎಲ್ಲ ಎಲ್ಲ ಸಂಖಾರಗಳಲ್ಲಿಯೂ ಇರುವ ಲಕ್ಷಣ ಮತ್ತು ಬದಲಾವಣೆಯಲ್ಲಿನ ದುಃಖ. ಸಾಮಾನ್ಯವಾಗಿ ಮೊದಲನೆಯದನ್ನು ಮಾತ್ರ ದುಃಖದ ಅರ್ಥವಾಗಿ ಗ್ರಹಿಸಿಬಿಡುತ್ತೇವೆ. ಎರಡನೆಯದಾದ ಸಂಖಾರ ದುಃಖವು ವಸ್ತುಲಕ್ಷಣಗಳಿಗೆ ಸಂಬಂಧಿಸಿದುದು. ಎಲ್ಲ ಸಂಯೋಜನೆಗಳೂ ಅಂದರೆ ನಾವು ವಸ್ತುಗಳೆಂದು ಗುರುತಿಸುವ ಎಲ್ಲವೂ ದುಃಖ ಲಕ್ಷಣವನ್ನು ಹೊಂದಿವೆ. ಏಕೆಂದರೆ ಯಾವ ಸಂಗತಿಗಳಿಂದ ನಾವು ಹಿತಕಾರೀ/ಅಹಿತಕಾರೀ ಅನುಭವಗಳನ್ನು ಪಡೆಯುತ್ತೇವೆಯೋ ಅವು ವಸ್ತುಗಳಾಗಿರದೆ ಕೇವಲ ಪ್ರಕ್ರಿಯೆಗಳಾಗಿರುತ್ತವೆ. ಹಾಗಾಗಿ ಸಂಯೋಜನೆಗಳುಂಟುಮಾಡುವ ಹಿತಕಾರೀ/ಅಹಿತಕಾರೀ ಅನುಭವಗಳೆರಡೂ ದುಃಖವೇ ಆಗುತ್ತದೆ. ಯಾವ ಸಂಯೋಜನೆಯೂ ವಸ್ತುವೆಂಬ ಸ್ವತಂತ್ರ ಅವಸ್ಥೆಯನ್ನು ತಾಳದಿರುವುದೂ ದುಃಖವೇ. ಮೂರನೆಯದು ಬದಲಾವಣೆ ಅಥವಾ ಅನ್ಯತಾಭಾವಕ್ಕೆ ಸಂಬಂಧಿಸಿದುದು. ನಿತ್ಯ ಚಲನಶೀಲವಾದ ಲೋಕಪ್ರವಾಹದಲ್ಲಿ ಸರ್ವವೂ ಗತಿಯಲ್ಲಿಯೇ ಇರುವುದರಿಂದ ಯಾವ ಸ್ಥಿತ ಭಾವನೆಗಳೂ ಇರಲು ಸಾಧ್ಯವಿಲ್ಲ. ಸ್ಥಿತಭಾವನೆಗಳಿಗೆ ಅಂಟಿಕೊಂಡರೆ ದುಃಖವುಂಟಾಗುತ್ತದೆ.

### ಮಧ್ಯಮಮಾರ್ಗವನ್ನಾಧರಿಸಿದ ಬೌದ್ಧ ಕಾವ್ಯಮೀಮಾಂಸೆ

ಬೌದ್ಧೇತರ ಭಾರತೀಯ ಮೀಮಾಂಸಾ ಪ್ರಸ್ಥಾನಗಳು, – ಕಾವ್ಯಮೀಮಾಂಸೆಯಾಗಲೀ, ಸೌಂದರ್ಯ ಮೀಮಾಂಸೆಯಾಗಲೀ– ನೇರವಾಗಿ ಸಿದ್ಧ ಸತ್ಯದ ಅನುಸಂಧಾನಕ್ಕೆ ತೊಡಗುತ್ತವೆ. ಅವರು ಸತ್ಯವನ್ನು ಕಟ್ಟಬೇಕಾಗಿಲ್ಲ, ಅವರಿಗೆ ಸತ್ಯ ಸಿದ್ಧವಿದೆ. ಅವರು ಎಲ್ಲವನ್ನೂ ವಾಸ್ತವ ಸಂಗತಿಗಳೆಂದೇ ತಿಳಿದು ಪ್ರಾರಂಭಿಸುತ್ತಾರೆ. ಸೃಷ್ಟಿ, ಮನುಷ್ಯ, ಭಾಷೆ ಇತ್ಯಾದಿಗಳೆಲ್ಲ ವಾಸ್ತವ ಎಂಬುದರಿಂದಲೇ ಪ್ರಾರಂಭಿಸಿ ಕಡೆಗೆ ಇವೆಲ್ಲ ಸ್ವಯಂಕೃತ ಎಂದೋ ಪರಕೃತ ಎಂದೋ ತೀರ್ಮಾನಿಸುತ್ತಾರೆ. ಕಾವ್ಯ, ಕಲೆ ಇತ್ಯಾದಿಗಳು ಈ ಅನುಸಂಧಾನದ ಹಾದಿಗಳಾಗಿದ್ದು, ಅವರವರು ತಲುಪಬೇಕಾದ ಗಂತವ್ಯಕ್ಕೆ ಅವರನ್ನು ಮುಟ್ಟಿಸಿ ಆನಂದವನ್ನೋ ಮುಕ್ತಿಯನ್ನೋ ಅಥವಾ ಎರಡನ್ನೂ ನೀಡಿ ವಿರಮಿಸುತ್ತವೆ. ಶಿಲ್ಪಿಯೊಬ್ಬ ತಾನು ಕಡೆಯಬೇಕಾಗಿರುವ ಶಿಲ್ಪವನ್ನು ಹೊಸದಾಗಿ ಸೃಜಿಸಬೇಕಾಗಿಲ್ಲ. ಅದು ಈಗಾಗಲೇ ಇದೆ. ಅದು ಇರುವ ಶಿಲೆಯಲ್ಲಿ ವ್ಯರ್ಥಭಾಗವನ್ನು ತೆಗೆದುಹಾಕಿದರೆ ಸಾಕು. ಅದು ಅನಾವರಣವಾಗುತ್ತದೆ. ಎಲ್ಲವೂ ಸಿದ್ಧವಾಗಿವೆ. ತೆರೆ ಸರಿಸುವುದಷ್ಟೇ ಕಲಾವಿದನ ಕೆಲಸ. ಹೀಗೆ ಶಬ್ದಾರ್ಥ ಸಂಬಂಧಗಳು ಅವರಿಗೆ ಪಾರ್ವತಿ– ಪರಮೇಶ್ವರರಾಗಿಯೂ, ಭಾಷೆ ಮುಕ್ತಿದಾಯಕವಾಗಿಯಾ ಗೋಚರಿಸಬಹುದು. ಇದು ತುಂಬಾ ಸ್ಥೂಲವಾದ ವಿವರಣೆ.

ಬೌದ್ಧ ಕಾವ್ಯಮೀಮಾಂಸೆಯ ಲಕ್ಷಣಗಳೆಂದು ಕೆಳಗಿನ ಸಂಗತಿಗಳನ್ನು ಗುರುತಿಸಿಕೊಳ್ಳಲಾಗಿದೆ.

೧. ದುಃಖದ ಅನುಸಂಧಾನವೇ ಕಾವ್ಯ ಮತ್ತು ಕಲೆಗಳ ಉದ್ಯೋಗವಾಗಿದೆ.

೨. ಈ ಮೀಮಾಂಸೆಯ ಲೋಕಾನುಸಂಧಾನದ ಕ್ರಮವೆಂದರೆ:

ಅ) ಈ ಲೋಕವೊಂದು ನಿರಂತರವಾಗಿ ಬದಲಾಗುತ್ತಿರುವ ಪ್ರವಾಹ

ಆ) ಇದಕ್ಕೆ ಪ್ರಾರಂಭವೆಂಬುದಾಗಲೀ ಕೊನೆ ಎಂಬುದಾಗಲೀ ಇಲ್ಲ

ಇ) ಇದನ್ನು 'ಇದೆ' ಅಥವಾ 'ಇಲ್ಲ' ಎಂಬ ಕ್ರಮದಲ್ಲಿ ಗ್ರಹಿಸಲಾಗದು.

ಈ) ಎದುರಿಗೆ ಕಾಣುವ ಎಲ್ಲವೂ ಕಾರಣ ಮತ್ತು ಪರಿಸ್ಥಿತಿಗಳ ಸಂಬಂಧದಿಂದ ಉಂಟಾದ ಪರಿಣಾಮವಾಗಿದ್ದು, ಯಾವುದರಲ್ಲೂ ಅದರ ಸ್ವಂತದ್ದು ಎಂದು ಗುರುತಿಸಬಹುದಾದ್ದು ಏನೂ ಇರುವುದಿಲ್ಲ

ಉ) ಬದಲಾವಣೆ ಪೂರ್ಣವಾದುದು ಮತ್ತು ನಿರಂತರವಾದುದು. ಈ ಪ್ರವಾಹವು ನಿರಂತರ 'ತಲ್ಲಣ'ದಲ್ಲಿಯೇ ಮುಂದುವರಿಯುವುದರಿಂದ ಯಾವ ಹಂತವೂ ಸ್ಥಗಿತವಲ್ಲ.

೩. ಒಂದು ಮೂಲಕೃತಿಯೆನ್ನುವುದು ಇರಲು ಸಾಧ್ಯವಿಲ್ಲ. ಕೃತಿ ಉಂಟಾಗಲು ನೋಡುವವನು ಮತ್ತು ನೋಡುವ ಪರಿಸ್ಥಿತಿಗಳ ಸಂಬಂಧ ಏರ್ಪಡಲೇಬೇಕು. ಏಕೆಂದರೆ ಯಾವ ಕೃತಿಯೂ 'ಸಿದ್ಧವಾಗಿ' ಇರುವುದಿಲ್ಲ. ಪ್ರತಿ ಸಾರಿ ಓದಿದಾಗ, ಪ್ರತಿಸಾರಿ ನೋಡಿದಾಗ ಕೃತಿ ಉಂಟಾಗುವುದರಿಂದ, ಒಂದು ಮೂಲಕೃತಿ ಇರಲು ಸಾಧ್ಯವಿಲ್ಲ. ನಾವು 'ಮೂಲ'ವೆಂದು ತಪ್ಪಾಗಿ ಭಾವಿಸುವ ಕೃತಿಯನ್ನು ಸಾಪೇಕ್ಷ ಕೃತಿಯೆನ್ನಬಹುದು. ತಿಳಿಯಬೇಕಾದ್ದು, ತಿಳಿಯುವ ಸಂದರ್ಭ ಮತ್ತು ತಿಳಿಯುವವನು – ಈ 'ತ್ರಿಕ'ವನ್ನು ಬೌದ್ಧಮೀಮಾಂಸೆಯು ವಿವರಿಸುವ ಕ್ರಮ ಭಿನ್ನವಾದುದು.

೪. ಸದಾ ಚಲಿಸುತ್ತಲೇ ಇರುವ ಈ ಲೋಕಪ್ರವಾಹವನ್ನು ಒಂದರಿಂದ ಇನ್ನೊಂದು ಭಿನ್ನವೆಂದಾಗಲೀ ಅಭಿನ್ನವೆಂದಾಗಲೀ ವಿವರಿಸಲು ಸಾಧ್ಯವಿಲ್ಲ. ಈ ಭಿನ್ನಾಭಿನ್ನ ನಿರಾಕರಣೆ ಬೌದ್ಧ ಮೀಮಾಂಸೆಯ ಅತ್ಯಂತ ಪ್ರಮುಖ ಉಪಕರಣ.

೫. ಬೌದ್ಧ ಮೀಮಾಂಸೆಯು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ – ಈ ಮೂರೂ ಪ್ರಮಾಣಗಳನ್ನು ಮಾನ್ಯ ಮಾಡುವುದಿಲ್ಲ.

೬. ಕಾಲ ಮತ್ತು ದೇಶಗಳನ್ನು ನಿರಾಕರಿಸುತ್ತದೆ.

೭. ಶ್ರಮವನ್ನಾಧರಿಸಿದ ಜೀವನಕ್ರಮವನ್ನು ಈ ಮೀಮಾಂಸೆ ಯುಕ್ತವೆಂದು ನಂಬುತ್ತದೆ.

೭. ಲೌಕಿಕ ಮತ್ತು ಪಾರಮಾರ್ಥಿಕಗಳ ಸಂಬಂಧವನ್ನು ಭಿನ್ನ ರೀತಿಯಲ್ಲಿ ವಿವರಿಸುತ್ತದೆ. ಲೌಕಿಕವನ್ನು ನಿರಾಕರಿಸಿದ ಪರಮಾರ್ಥವನ್ನು ಅದು ಮಾನ್ಯ ಮಾಡುವುದಿಲ್ಲ. ಸಾಮಾನ್ಯ ಲೋಕಜೀವನಕ್ಕೆ ಒದಗಿಬಾರದ ತಾತ್ವಿಕಚಿಂತನೆಯನ್ನು ಒಳಗೊಳ್ಳಲು ಬೌದ್ಧ ಮೀಮಾಂಸೆಯು ಬಯಸುವುದಿಲ್ಲ. ಅಂತಹ ಸಂದರ್ಭಗಳಲ್ಲೆಲ್ಲ ಬುದ್ಧ ಮೌನವಹಿಸಿದ.

೮. ಬೌದ್ಧಮೀಮಾಂಸೆಯು ಸಿದ್ಧ ಸತ್ಯದ ಅನುಸಂಧಾನಕ್ಕೆ ತೊಡಗುವುದಿಲ್ಲ. ಅದಕ್ಕೆ ಸತ್ಯ ಸಿದ್ಧವಿರುವುದಿಲ್ಲ. ಸತ್ಯವೆನ್ನುವುದು ಕಟ್ಟಬೇಕಾದದ್ದು.

## ಪ್ರಮಾಣ ನಿರಾಕರಣೆ

ಇಂದು ಭಾರತೀಯ ಸಮಾಜಕ್ಕೆ ತಗಲಿಕೊಂಡಿರುವ ದೊಡ್ಡ ರೋಗವೆಂದರೆ ಪ್ರಮಾಣಗಳದ್ದು. ಬೌದ್ಧ ಮೀಮಾಂಸೆಯು 'ಭಾರತೀಯ ಮೀಮಾಂಸೆ'ಗಿಂತ ಹೇಗೆ ಭಿನ್ನ ಮತ್ತು ಅದು ಯಾಕೆ ಸರಿಯಾದುದು ಎಂದು ಸಾಧಿಸಲು ಮುಂದಿಡುವ ಪರಿಕಲ್ಪನೆಗಳಲ್ಲಿ 'ಪ್ರಮಾಣ ನಿರಾಕರಣೆಯು' ಪ್ರಮುಖವಾದುದು. ಈ ಪರಿಕಲ್ಪನೆಯು ಬೌದ್ಧೇತರ ದರ್ಶನಗಳಲ್ಲಿ ಹೇಗೆ ಬಳಕೆಯಾಗಿದೆ, ಇದರಿಂದಾಗಿ ನಮ್ಮ ಲೋಕಗ್ರಹಿಕೆಯಲ್ಲಿ ಉಂಟಾದ ಊನಗಳೇನು ಮತ್ತು ಬೌದ್ಧ ದರ್ಶನವು ಅದನ್ನು ನಿರಾಕರಿಸುವ ಮೂಲಕ ಸಾಧಿಸಿದ ಪರಿಣಾಮಗಳೇನು – ಎಂಬ ಸಂಗತಿಗಳು ಕೇವಲ ವಿದ್ವಾಂಸರಿಗಷ್ಟೇ ಅಲ್ಲ ಸಾಮಾನ್ಯರಿಗೂ ಅಗತ್ಯವೇ. ಆದರೆ ಇಲ್ಲೊಂದು ತೊಡಕಿದೆ. ಅದನ್ನು ನಿವಾರಿಸಿಕೊಳ್ಳದೆ ಗತ್ಯಂತರವಿಲ್ಲ. ಅದೇನೆಂದರೆ ಪ್ರಮಾಣಗಳನ್ನು ಸ್ವೀಕರಿಸುವವರು ಮತ್ತು ಅವುಗಳನ್ನು ನಿರಾಕರಿಸುವವರು ಇಬ್ಬರೂ ಅತ್ಯಂತ ಹರಿತವಾದ ತರ್ಕವನ್ನು ಬಳಸುತ್ತಾರೆ. ಇಲ್ಲಿ ತರ್ಕದ ಹತಾರವನ್ನು ಮೊದಲು ಕೈಗೆತ್ತಿಕೊಂಡವರು ಪ್ರಮಾಣಗಳನ್ನು ಸ್ವೀಕರಿಸಿದವರು. ನಿರಾಕರಿಸುವವರೂ ವಿಧಿಯಿಲ್ಲದೆ ತಾವೂ ತಮ್ಮ ತರ್ಕದ ಹತಾರುಗಳನ್ನು ಮಸೆದುಕೊಳ್ಳಬೇಕಾಯಿತು. ಇದರಿಂದಾಗಿ ಅನಕ್ಷರತೆಯ ಕಾರಣದಿಂದಾಗಿ ಅಕ್ಷರದ ಗುತ್ತಿಗೆ ಹಿಡಿದಿದ್ದವರ ದಾಸ್ಯಕ್ಕೆ ಒಳಗಾದ ಮಂದಿಯ ತಲೆಯ ಮೇಲೆ ತರ್ಕದ ಮತ್ತೊಂದು ದೊಡ್ಡ ಹೊರೆಯನ್ನು ಹೊರಿಸಲಾಯಿತು. ತರ್ಕಹೀನತೆಯೂ ಅನಕ್ಷರತೆಯಂತೆ ಶೋಷಣೆಗೆ ದಾರಿ ಮಾಡಿಕೊಡುತ್ತದೆ. ದುರಂತವೆಂದರೆ ಇಂದಿನ ಬಹುಪಾಲು ಅಕ್ಷರಸ್ತರು ತರ್ಕವಿಹೀನರೇ ಆಗಿರುವುದು.

ತರ್ಕ ಮತ್ತು ಅಕ್ಷರಗಳೆರಡೂ ಭಾರತದ ಸಂದರ್ಭದಲ್ಲಿ ನೋವುಂಟು ಮಾಡುವ ಸಂಗತಿಗಳು. ದೊಡ್ಡ ಸಮೂಹಕ್ಕೆ ಅಕ್ಷರವನ್ನು ನಿರಾಕರಿಸುವುದರ ಮೂಲಕ ಮಾಡಿದ ಅನ್ಯಾಯ ತಕ್ಷಣ ಗೋಚರಿಸುತ್ತದೆ. ಕೆಳಸ್ತರಗಳು ಅಕ್ಷರವನ್ನು ವಶಪಡಿಸಿಕೊಳ್ಳಲು ಪಟ್ಟ ಪಾಡು ಸಣ್ಣದಲ್ಲ. ಅದು ಇನ್ನೂ ಮುಂದುವರಿದೇ ಇದೆ. ತರ್ಕವಂತು ಅವರಿಗಿನ್ನೂ ದೂರದ ಸಂಗತಿಯೇ ಆಗಿದೆ. ಅನಕ್ಷರತೆಯಂತೆಯೇ ತರ್ಕಹೀನತೆಯೂ ರೋಗಿಷ್ಠ ಅವಸ್ಥೆ.

ಬೌದ್ಧೇತರ ದರ್ಶನಗಳು ತಮ್ಮ ಲೋಕವಿವರಣೆಯನ್ನು

ಸಮರ್ಥಿಸಲು ಪ್ರಮಾಣಗಳನ್ನು ರೂಪಿಸಿ ಬಳಸಿಕೊಂಡಿವೆ. ಪ್ರಮಾಣಗಳನ್ನು ತರ್ಕದ ಮೂಲಕ ಮಂಡಿಸಿದ್ದಾರೆ. ಇದೊಂದು ಇಬ್ಬಾಯಿಯ ಕತ್ತಿ. ಮೊದಲೇ ಅಕ್ಷರಹೀನ ಸಮಾಜ. ಅದರ ಮೇಲೆ ಹರಿತವಾದ ತರ್ಕವನ್ನು ಬಳಸಿದರೆಂದರೆ ಪ್ರತಿರೋಧದ ಎಲ್ಲ ಸಾಧ್ಯತೆಗಳೂ ಮುಚ್ಚಿ ಹೋಗುತ್ತವೆ. ಇಂದಿಗೂ ತರ್ಕ ಮತ್ತು ಪ್ರಮಾಣಗಳನ್ನು ಬೌದ್ಧೇತರ ಧರ್ಮಗಳು ಬಳಸಿ ಮೋಸಮಾಡುತ್ತಲೇ ಇವೆ. ನಮ್ಮ ಬದುಕಿನ ಬಹಳ ಮುಖ್ಯ ನಿರ್ಧಾರಗಳನ್ನು ನಾವು ತೆಗೆದುಕೊಳ್ಳಲು ಸಾಧ್ಯವಾಗದ ಹಾಗೆ ಅವುಗಳನ್ನು ನಿರ್ವಹಿಸಲಾಗುತ್ತಿದೆ. ನಮ್ಮ ಸಮಾಜವನ್ನು ಈಗಂತೂ 'ಪ್ರಮಾಣ'ಗಳೇ ನಿಯಂತ್ರಿಸುತ್ತಿವೆ. ತಿನ್ನುವ ಅನ್ನ, ಕಟ್ಟುವ ಮನೆ, ಪೂಜಿಸುವ ದೇವರು, ತೊಡುವ ಬಟ್ಟೆ, ಮದುವೆಯಾಗುವ ಸಂಗಾತಿ ಎಲ್ಲವನ್ನೂ 'ಪ್ರಮಾಣ'ಗಳು ನಿರ್ಧರಿಸುತ್ತಿರುವುದನ್ನು ನಾವೀಗ ನೋಡುತ್ತಿದ್ದೇವೆ.

ಸಾಮಾನ್ಯರ ಬದುಕನ್ನು ತಮ್ಮ ಅಂಕೆಗೆ ತೆಗೆದುಕೊಳ್ಳಲು ಹೇಗೆ ಪ್ರಮಾಣಗಳನ್ನು ಬಳಸುತ್ತಾರೆಯೋ ಹಾಗೆಯೇ, ತಮ್ಮ ದೋಷಪೂರ್ಣ ಲೋಕವಿವರಣೆಯನ್ನು ಸಮರ್ಥಿಸಿಕೊಳ್ಳಲು, ತಾವು ಮುಂದಿಡುವ ತಾತ್ವಿಕತೆಯ ದೋಷಗಳನ್ನು ಮುಚ್ಚಿಹಾಕಲು ಪ್ರಮಾಣಗಳನ್ನು ಮತ್ತು ತರ್ಕವನ್ನು ಬೌದ್ಧೇತರ ದರ್ಶನಗಳು ಬಳಸುತ್ತವೆ. ಪ್ರಮಾಣ ಒಂದು ಸಮರ್ಥನೆ, ತರ್ಕ ಒಂದು ಹತಾರು. ಇವೆರಡನ್ನೂ ನಿರ್ವಹಿಸುವುದು ಸಾಮಾನ್ಯರಿಗೆ ಕಷ್ಟಸಾಧ್ಯ. ಪ್ರಮಾಣಗಳು ಮತ್ತು ಅವುಗಳ ತಾರ್ಕಿಕ ನಿರ್ವಹಣೆ ಕೇವಲ ಬೌದ್ಧಿಕ ಕಸರತ್ತಲ್ಲ. ಅವು ನಮ್ಮ ಸಮಾಜದ ಬದುಕಿನ ಕ್ರಮವನ್ನೇ ನಿಯಂತ್ರಿಸುತ್ತಿರುವುದರಿಂದ ಹಠ ಮಾಡಿಯಾದರೂ ಸರಿ ಪ್ರಮಾಣಗಳ ನಿರ್ವಹಣೆ ಮತ್ತು ಅದಕ್ಕೆ ಬಳಕೆಯಾಗುತ್ತಿರುವ ಹರಿತವಾದ ತರ್ಕ ಇವುಗಳನ್ನು ದಕ್ಕಿಸಿಕೊಳ್ಳಲೇಬೇಕು. 'ತರ್ಕವೆಂಬುದು ತಗರುಗಳ ಹೋರಾಟ'ವೆಂಬ ಅಲ್ಲಮಪ್ರಭುವಿನ ಮಾತು ಎರಡು ಬಲವಾದ ಟಗರುಗಳ ನಡುವಿನ ವ್ಯರ್ಥಹೋರಾಟವನ್ನು ಕುರಿತದ್ದೇ ಹೊರತು, ತರ್ಕವೆಂಬ ಬಲವಾದ ಎರಡು ಕೊಂಬುಳ್ಳ ಒಂದು ಟಗರು ಇಡೀ ಕುರಿಮಂದೆಯನ್ನೇ ನಿಯಂತ್ರಿಸುವ ಸಂಗತಿಯನ್ನು ನಿರಾಕರಿಸುವುದಿಲ್ಲ.

## ಪ್ರಮಾಣ ಎಂದರೇನು?

ಭಾರತೀಯ ಚಿಂತನಾ ಪ್ರಸ್ಥಾನಗಳು ಪ್ರಮಾಣಗಳನ್ನು ವಸ್ತು ಪ್ರಪಂಚದ ವಿವರಣೆಗೆ ಪ್ರಧಾನ ಸಾಕ್ಷಿಗಳನ್ನಾಗಿ ಬಳಸಿಕೊಂಡಿವೆ. ಅದರ ವಿಸ್ತಾರವಾದ ವಿಶ್ಲೇಷಣೆಯ ಅಗತ್ಯವಿದೆ. "ಸರಿಯಾದ ಆಧಾರವುಳ್ಳ ಜ್ಞಾನವನ್ನು – ಪ್ರಮಾ – ಪಡೆಯಲು ಮುಖ್ಯವಾದ ಸಾಧನ ಯಾವುದೋ ಅದೇ ಪ್ರಮಾಣ. ಹಾಗೆ ತಿಳಿದ ವಸ್ತುವು ಪ್ರಮೇಯ, ತಿಳಿಯುವವನು ಪ್ರಮಾತಾ" (ಎನ್. ಹಿರಿಯಣ್ಣ– ಭಾರತೀಯ ತತ್ವಶಾಸ್ತ್ರದ ರೂಪುರೇಖೆಗಳು) "ವಸ್ತು ಸ್ವಭಾವ ಅಥವಾ ಸತ್ಯವನ್ನು ತಿಳಿಯಲು ಇರುವ ಸಾಧನಗಳೇ ಪ್ರಮಾಣಗಳೆಂದು ಸ್ಥೂಲವಾಗಿ ಹೇಳಬಹುದು. ಪ್ರಮಾ ಎಂದರೆ ಯಥಾರ್ಥಜ್ಞಾನ. ಅದನ್ನುಂಟು ಮಾಡುವ ಕಾರಣ ಅಥವಾ ಸಾಧನವೇ ಪ್ರಮಾಣ." (ಎಂ.ಪ್ರಭಾಕರ ಜೋಶಿ, ಎಂ.ಎಂ. ಹೆಗಡೆ–ಕುಮಾರಿಲಭಟ್ಟ).

ಲೋಕದಲ್ಲಿ ನಾವು ಪಡೆವ ಅನುಭವಗಳು ಮತ್ತು ಆ ಅನುಭವಗಳಿಗೆ ಕಾರಣವಾಗುವ ಎದುರಿನ ವಸ್ತುಪ್ರಪಂಚದ ಸತ್ಯಾಸತ್ಯವನ್ನು ಅರಿಯಲು ಪ್ರಮಾಣಗಳನ್ನು ಸಾಧನಗಳೆಂದು ಪರಿಗಣಿಸಲಾಗಿದೆ. **ಪ್ರತ್ಯಕ್ಷ ಅನುಮಾನ ಮತ್ತು ಶಬ್ದ**– ಈ ಮೂರನ್ನು ಪ್ರಧಾನ ಪ್ರಮಾಣಗಳೆಂದು ಇವುಗಳ ಜೊತೆಗೆ ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ದವನ್ನು ಇತರ ಪ್ರಮಾಣಗಳೆಂದು ಗುರುತಿಸಲಾಗಿದೆ. ಇಂದ್ರಿಯಗೋಚರವಾದ ರೂಪ, ರಸ, ಗಂಧ ಮುಂತಾದವುಗಳಿಗೆ ಸಂಬಂಧಿಸಿದ್ದು ಅಂದರೆ ನೋಡಿದ್ದು, ಮುಟ್ಟಿದ್ದು, ಮೂಸಿದ್ದು, ಕೇಳಿಸಿಕೊಂಡದ್ದು, ರುಚಿ ನೋಡಿದ್ದು ಮುಂತಾಗಿ ಪಂಚೇಂದ್ರಿಯಗಳ ಮೂಲಕ ಪಡೆದ ಅನುಭವಗಳಿಗೆ ಕಾರಣವಾದದ್ದೆಲ್ಲ ಸತ್ಯವೆನ್ನುವುದು **ಪ್ರತ್ಯಕ್ಷ ಪ್ರಮಾಣ**. ತರ್ಕದ ಮೂಲಕ ಸಾಧಿತವಾಗುವುದನ್ನು ಅನುಮಾನ ಪ್ರಮಾಣವೆನ್ನುತ್ತಾರೆ. ಉದಾಹರಣೆಗೆ ಹೊಗೆಯಾಡುತ್ತಿರುವುದರಿಂದ ಬೆಂಕಿ ಇದೆ ಎಂದು ತೀರ್ಮಾನಿಸುವುದು. 'ಶಬ್ದ'ವೆಂದರೆ ವೇದಗಳೆನ್ನುವುದು ಸ್ಥೂಲಾರ್ಥ. ಪ್ರಶ್ನಾತೀತತೆಯ ಹಕ್ಕನ್ನು ಸಾಧಿಸ ಬಯಸುವ ಎಲ್ಲ ಸ್ಥಾಪಿತ ಜ್ಞಾನವನ್ನೂ ಶಬ್ದದ ವ್ಯಾಪ್ತಿಗೆ ಒಳಪಡಿಸಬಹುದು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನೇ ಹೇಳಿದ್ದಾನೆ, ವೇದದಲ್ಲಿ ಹೇಳಿದೆ, ಆದುದರಿಂದ ಅದೆಲ್ಲ ಸತ್ಯ. ಅಂದರೆ ಈ ಪುಸ್ತಕದಲ್ಲಿ ಹೇಳಿರುವುದರಿಂದ ಇದು ಸತ್ಯ, ಋಷಿಯೋ, ದೇವರೋ, ಅವತಾರಿಯೋ ಒಟ್ಟಿನಲ್ಲಿ ಪ್ರಶ್ನಿಸಬಾರದವರು ಹೇಳುವುದೆಲ್ಲ ಸತ್ಯವೆನ್ನುವುದೇ **'ಶಬ್ದಪ್ರಮಾಣ'**. ನಮ್ಮ ಸಮಾಜವನ್ನು ಮೌಢ್ಯದ ಕೂಪವನ್ನಾಗಿಸಿರುವುದು ಈ ಪ್ರಮಾಣವೇ. ಮೊದಲು ನೋಡಿದ ವಸ್ತುವಿಗೆ ಸದೃಶವಾದ ಬೇರೊಂದು ವಸ್ತುವನ್ನು ನೋಡಿದಾಗ ನೆನಪಾದ ವಸ್ತುವಿನ ಸಾದೃಶ್ಯ ಜ್ಞಾನವುಂಟಾಗುವುದು ಉಪಮಾನ. **ಅರ್ಥಾಪತ್ತಿ**ಯು ದೊರೆತ ಜ್ಞಾನಕ್ಕೆ ಅನುಭವವು ವಿರುದ್ಧವಾದಾಗ ಅದನ್ನು ಪರಿಹರಿಸಿಕೊಳ್ಳಲು ಮಾಡುವ ಊಹೆ. ಹಗಲು ಊಟ ಮಾಡದ ವ್ಯಕ್ತಿಯೊಬ್ಬ ದಪ್ಪಗಿದ್ದರೆ, ಅವನು ರಾತ್ರಿ ಚೆನ್ನಾಗಿ ತಿನ್ನುತ್ತಾನೆ ಎನ್ನುವ ತೀರ್ಮಾನ. **ಅನುಪಲಬ್ಧಿ**ಯೆಂಬುದು ಅಭಾವದ ಜ್ಞಾನ. ಅನುಪಸ್ಥಿತಿಯಿಂದ ಉಂಟಾಗುವ ಜ್ಞಾನ. ಮೇಜಿನ ಮೇಲೆ ಪೆನ್ನು ಕಾಣಿಸುತ್ತಿಲ್ಲ. ಯಾಕೆ ಕಾಣಿಸುತ್ತಿಲ್ಲವೆಂದರೆ ಅಲ್ಲಿ ಪೆನ್ನಿಲ್ಲ ಅದಕ್ಕೆ ಕಾಣಿಸುತ್ತಿಲ್ಲ. ಪ್ರತ್ಯಕ್ಷವೆಂದರೆ ಇದ್ದುದು ಕಾಣುವುದಾದರೆ ಅನುಪಲಬ್ಧವೆಂಬುದು ಇಲ್ಲದ್ದನ್ನು ತಿಳಿಯುವುದು.

ಪ್ರತಿಯೊಂದು ದರ್ಶನವೂ ತಾನು ನೀಡುವ

ಲೋಕವಿವರಣೆಗೆ ಅನುಗುಣವಾಗಿ ತನಗೆ ಒಪ್ಪಿಗೆಯಾಗುವ ಪ್ರಮಾಣಗಳನ್ನು ಮಾನ್ಯ ಮಾಡುತ್ತದೆ. ಚಾರ್ವಾಕರು ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ಒಪ್ಪುತ್ತಾರೆ. ಅಂದರೆ ಇಂದ್ರಿಯಗಳ ಮೂಲಕ 'ಕಂಡದ್ದೆಲ್ಲ' ಸತ್ಯವೆನ್ನುವುದು ಅವರ ನಿಲುವು. ಸಪ್ರಮಾಣವಾದ ಜ್ಞಾನಕ್ಕೆ ಪ್ರತ್ಯಕ್ಷವೊಂದೇ ಸಾಧನ ಎಂಬುದು ಚಾರ್ವಾಕ ದರ್ಶನದ ನಿಲುವು. ಅನುಮಾನವೂ ಸೇರಿದಂತೆ ಉಳಿದ ಎಲ್ಲ ಪ್ರಮಾಣಗಳನ್ನೂ ಅವರು ನಿರಾಕರಿಸುತ್ತಾರೆ. ಸಾಂಖ್ಯರಿಗೆ ಪ್ರತ್ಯಕ್ಷ ಅನುಮಾನ ಮತ್ತು ಶಬ್ದ ಪ್ರಮಾಣಗಳು ಮಾನ್ಯ. ನ್ಯಾಯವು ಪ್ರತ್ಯಕ್ಷ ಅನುಮಾನ, ಶಬ್ದ ಮತ್ತು ಉಪಮಾನವನ್ನೂ ಮಾನ್ಯಮಾಡುತ್ತದೆ. ವಸ್ತು ಪ್ರಪಂಚದ ವಿವರಣೆಗೆ ವಿಜ್ಞಾನ ಮಾನ್ಯ ಮಾಡುವ ಪ್ರಮಾಣಗಳು ಎರಡು ಪ್ರತ್ಯಕ್ಷ ಮತ್ತು ಅನುಮಾನ ಅಥವಾ ತರ್ಕ. ಬೌದ್ಧ ಮಧ್ಯಮಮಾರ್ಗವು ಪ್ರಮಾಣಗಳನ್ನು ನಿರಾಕರಿಸುತ್ತದೆ.

ಮಾಧ್ಯಮಿಕರ ಹೊರತಾಗಿ, ಇತರ ಬೌದ್ಧ ಚಿಂತನಾ ಪ್ರಸ್ಥಾನಗಳು ಪ್ರತ್ಯಕ್ಷ ಮತ್ತು ಅನುಮಾನವನ್ನು ಪ್ರಮಾಣಗಳನ್ನಾಗಿ ಸ್ವೀಕರಿಸಿದ್ದವೆಂದು ತೋರುತ್ತದೆ. ಇದನ್ನು ಗಮನಿಸಿದ ವಿದ್ವಾಂಸರು ಸಾಮಾನ್ಯವಾಗಿ ಬೌದ್ಧ ಧರ್ಮವು ಪ್ರತ್ಯಕ್ಷ ಮತ್ತು ಅನುಮಾನವನ್ನು ಪ್ರಮಾಣಗಳೆಂದು ಸ್ವೀಕರಿಸಿತ್ತೆಂದು – ಮಾಧ್ಯಮಿಕವಾದವನ್ನೂ ಸೇರಿಸಿದಂತೆ– ತೀರ್ಮಾನಿಸುತ್ತಾರೆ. ಆದರೆ ವಸ್ತುಸ್ಥಿತಿ ಬೇರೆಯೇ ಇದೆ.

ನಾಗಾರ್ಜುನ ತನ್ನ ವೈದಲ್ಯಪ್ರಕರಣ ಮತ್ತು ವಿಗ್ರಹವ್ಯಾವರ್ತಿನಿ ಕೃತಿಗಳಲ್ಲಿ ಪ್ರಮಾಣಗಳ ಬಗೆಗೆ ತನ್ನ ನಿಲುವನ್ನು ಪ್ರತಿಪಾದಿಸುತ್ತಾನೆ. ನಾಗಾರ್ಜುನನ ಎದುರಿಗೆ ಪೂರ್ವಪಕ್ಷವೊಂದಿದ್ದು ಬೌದ್ಧರ ಶೂನ್ಯತಾವಾದವನ್ನು ಪರೀಕ್ಷೆಗೆ ಒಡ್ಡುತ್ತಿದೆ. **"ಪ್ರಮಾಣಗಳೂ ಇಲ್ಲ, ಅವುಗಳಿಂದ ಗಮ್ಯವಾದದ್ದೂ ಇಲ್ಲ"** – ಇದು ನಾಗಾರ್ಜುನನ ನಿಲುವು. ಇದನ್ನು ಸಾಧಿಸಲು ತನ್ನ ಪ್ರತಿವಾದಿಗಳಾದ ವೈದಿಕರು ಬಳಸಿದ್ದ ತರ್ಕದ ಆಯುಧವನ್ನೇ ನಾಗಾರ್ಜುನ ಇನ್ನಷ್ಟು ಮಸೆದುಕೊಂಡು ಬಳಸಿದ್ದಾನೆ. ಅದು ಅತ್ಯಂತ ಸೂಕ್ಷ್ಮವಾದ ತರ್ಕದ ಸಮರ. ತುಂಬಾ ಸುದೀರ್ಘವಾದ ತರ್ಕದ ಈ ದಾರಿಯನ್ನು ನಾಗಾರ್ಜುನ ತನಗಾಗಿ ಸವೆಸಿಲ್ಲ. ಮಿಥ್ಯಾಮಾರ್ಗ(ಮಿಥ್ಯಾದೃಷ್ಟಿ)ವನ್ನು ಸೃಷ್ಟಿಸಿದ ಮತ್ತು ಅದನ್ನು ಸ್ವೀಕರಿಸಿದ ಸಾಮಾನ್ಯರಿಗಾಗಿ ಈ ಕೊಂಕಣ ಪ್ರವಾಸದ ಪ್ರಯಾಸಕ್ಕೆ ತೊಡಗುತ್ತಾನೆ. ಮಿಥ್ಯಾ ಮಾರ್ಗಗಳು ಹೇಗೆ ನಿರ್ಜೀವ ತುದಿಗೆ ಒಯ್ದು ನಿಲ್ಲಿಸುತ್ತವೆ ಎಂಬುದನ್ನು ಪ್ರತಿವಾದಿಗಳಿಗೆ ಪ್ರಿಯವಾದ ತರ್ಕದ ಮಾರ್ಗವನ್ನೇ ಆಧರಿಸಿ ತೋರಿಸುತ್ತಾನೆ. ನಾಗಾರ್ಜುನನ ಚಿಂತನೆಯ ವಿಧಾನ ಅವನ ಮೂಲ ಮಾಧ್ಯಮ ಕಾರಿಕಾದಲ್ಲಿ ವಿಸ್ತಾರವಾಗಿ ಪ್ರಸ್ತಾಪಿತವಾಗಿದೆ. ಅಲ್ಲಮನ ನುಡಿಯಲ್ಲಿಯಾದರೆ,

ನಾನೆಂಬುದು ಪ್ರಮಾಣ ನೀನೆಂಬುದು ಪ್ರಮಾಣ
ಸ್ವಯವೆಂಬುದು ಪ್ರಮಾಣ ಪರವೆಂಬುದು ಪ್ರಮಾಣ
ಪ್ರಮಾಣವೆಂಬುದು ಪ್ರಮಾಣ, ಗುಹೇಶ್ವರನೆಂಬುದು ಅಪ್ರಮಾಣ.

ಪ್ರತೀತ್ಯ ಸಮುತ್ಪಾದವೇ ಲೋಕವಿವರಣೆಗೆ ಸರಿಯಾದ ಮಾರ್ಗವೆಂದು ಗ್ರಹಿಸಿ ಆ ತಾತ್ವಿಕತೆಯನ್ನು ನಾಗಾರ್ಜುನ ತನ್ನ ಮೂಲಮಾಧ್ಯಮಕಾರಿಕಾದಲ್ಲಿ ವಿವರಿಸಿದ. ಕಾರಿಕಾದ ಅರ್ಪಣೆಯ ವಚನದಲ್ಲಿ ಮಂಗಳಕರವೂ, ಪ್ರಪಂಚೋಪಶಮೆಯೂ ಆಗಿರುವ ಬುದ್ಧನಿಂದುಪದೇಶಿತವಾಗಿರುವ 'ಪ್ರತೀತ್ಯಸಮುತ್ಪಾದ'ವನ್ನು ತನ್ನ ಕೃತಿಯಲ್ಲಿ ವಿವರಿಸುತ್ತಿರುವುದಾಗಿ ತಿಳಿಸುತ್ತಾನೆ. ಬೌದ್ಧ ಧರ್ಮದ ಪ್ರಾರಂಭದಿಂದಲೂ ಈ ತತ್ವವು ಒಂದಲ್ಲ ಒಂದು ರೀತಿಯಲ್ಲಿ ಪ್ರಸ್ತಾಪಿತವಾಗುತ್ತಲೇ ಇತ್ತು. ನಾಗಾರ್ಜುನ ಈ ತಾತ್ವಿಕತೆಯನ್ನು ಕಾರಣ ಮೀಮಾಂಸೆ ಮತ್ತು ಪರಿಣಾಮ ಮೀಮಾಂಸೆಗಳ ಹಂಗಿನಿಂದ ಮುಕ್ತಗೊಳಿಸಿ 'ಪ್ರಕ್ರಿಯಾ ಮೀಮಾಂಸೆಯನ್ನಾಗಿ ನಿರೂಪಿಸಿದ. ಹಾಗಾಗಿ ಪ್ರಕ್ರಿಯಾ ಮೀಮಾಂಸೆಯ ಪ್ರಧಾನ ಕೃತಿಯನ್ನಾಗಿ ಮೂಲಮಾಧ್ಯಮಕಾರಿಕಾವನ್ನು ಸ್ವೀಕರಿಸಬಹುದು.

ಇಪ್ಪತ್ತೊಂದನೆಯ ಶತಮಾನದ ಕನ್ನಡದ ಮನಸ್ಸು ನಾಗಾರ್ಜುನನ ಮಾಧ್ಯಮಿಕ ತತ್ವವನ್ನು ಎದುರುಗೊಳ್ಳಲು ಅನೇಕ ಒತ್ತಡಗಳಿವೆ. ಮೊದಲನೆಯದಾಗಿ ಇಂತಹ ಕೃತಿಗಳು ಕೇವಲ ಪ್ರಾಗ್ರೂಪಗಳೆಂಬ ಕಾರಣಕ್ಕಷ್ಟೇ ನಮ್ಮೆದುರು ಬರಲು ಬಯಸದೆ ಲೋಕಗ್ರಹಿಕೆಯ ಭಿನ್ನ ವಿಧಾನವಾಗಿಯೂ ನಮ್ಮ ಮುಂದೆ ಬರುತ್ತವೆ. ಲೋಕವಿನ್ಯಾಸ, ಅದನ್ನು ಪರಿಭಾವಿಸುವ ಕ್ರಮ ಮತ್ತು ಪರಿಭಾವಿಸುವ ವ್ಯಕ್ತಿ ವಿನ್ಯಾಸ ಇವುಗಳನ್ನು ವಿವರಿಸುವ ಅನೇಕ 'ದೃಷ್ಟಿ'ಗಳಿವೆ. ಇವುಗಳನ್ನು ಎದುರಾದ ಬುದ್ಧನಿಗೆ ಕಡೆಗೂ ಉಳಿದ ಪ್ರಶ್ನೆ ಅದೇ– ಹಾಗಾದರೆ ಸಮ್ಯಕ್ (ಸರಿಯಾದ) ದೃಷ್ಟಿ ಯಾವುದು? ಅದನ್ನು ವಿವರಿಸಲು ನಾಗಾರ್ಜುನ ಭಿನ್ನಾಭಿನ್ನ ನಿರಾಕರಣೆಯನ್ನು ಮುಂದಿಟ್ಟಿದ್ದಾನೆ. ದ್ವೈತಾದ್ವೈತಗಳನ್ನು ನಿರಾಕರಿಸುವ ಈ ದೃಷ್ಟಿಕೋನ ವಿಜ್ಞಾನವು ಮಾನ್ಯಮಾಡುವ ದೃಷ್ಟಿಕೋನವಾಗಿದೆ.

### ಬೌದ್ಧ ಮಧ್ಯಮಮಾರ್ಗ ಇನ್ನೊಂದು ವಿವರಣೆಯಲ್ಲ

ವಿಜ್ಞಾನವು ನೀಡುವ ವಿವರಣೆಗಳನ್ನು ನಮ್ಮ ಧಾರ್ಮಿಕ ವಿವರಣೆಗಳಿಗೆ ಪ್ರತಿಯಾದ ಕೇವಲ ಇನ್ನೊಂದು ವಿವರಣೆ ಎಂದು ನಾವು ಭಾವಿಸುವುದಿಲ್ಲ. ಯಾವುದೇ ಒಂದು ಸಂಗತಿಗೆ ಹಿಂದೂ ಧರ್ಮ ನೀಡುವ ವಿವರಣೆ, ಇಸ್ಲಾಂ ನೀಡುವ ವಿವರಣೆ, ಕ್ರೈಸ್ತ ಧರ್ಮ ನೀಡುವ ವಿವರಣೆ ಅವೆಲ್ಲ 'ಇನ್ನೊಂದು, ಮತ್ತೊಂದು ವಿವರಣೆ'ಗಳಾಗುತ್ತವೆ. ಆದರೆ ವಿಜ್ಞಾನ ನೀಡುವ ವಿವರಣೆ ಕೇವಲ ಇನ್ನೊಂದು ವಿವರಣೆಯಲ್ಲ. ಅಂತಹ ವಿವರಣೆ ಸಂವಾದೀ ವಿವರಣೆಯೂ ಅಲ್ಲ, ಪ್ರತಿವಾದೀ ವಿವರಣೆಯೂ ಅಲ್ಲ. ಬದಲಾಗಿ ಅದು ವಿವರಣೆ ಅಷ್ಟೆ. ಅದು ಹೇಗಿದೆಯೋ ಹಾಗೆ ಅದನ್ನು ವಿವರಿಸುವ ಕ್ರಮ. ಬೌದ್ಧ ಮಧ್ಯಮಮಾರ್ಗವು ಕೂಡ ಲೋಕವನ್ನು ಹೇಗಿದೆಯೋ ಹಾಗೆ ವಿವರಿಸುತ್ತದೆ. ಹಾಗಾಗಿ

ಬೌದ್ಧ ಮಧ್ಯಮಮಾರ್ಗವು ಪರ್ಯಾಯವಾದವೂ ಅಲ್ಲ, ಪ್ರತಿವಾದವೂ ಅಲ್ಲ. ಅದು ಅನೇಕ ವಾದಗಳಲ್ಲಿ ಒಂದಲ್ಲ ಮತ್ತು ಈಗಾಗಲೇ ಹೇಳಿ ಮುಕ್ತಾಯಗೊಂಡಿರುವುದೂ ಅಲ್ಲ. ಅದು ಮುಕ್ತ ಅಂತ್ಯವುಳ್ಳದ್ದು. ಈಗಿರುವ ತಿಳುವಳಿಕೆಗೆ ಹೊಸ ಸೇರ್ಪಡೆಗೆ ಅದಕ್ಕೆ ಯಾವ ತಕರಾರು ಇಲ್ಲ. ನಾಗಾರ್ಜುನ ಒಂದು ಕಾರಿಕೆಯಲ್ಲಿ ಅದನ್ನು ಹೀಗೆ ಹೇಳುತ್ತಾನೆ:

**ಬುದ್ಧನಿಲ್ಲದಂದು, ಬುದ್ಧನ ಶಿಷ್ಯರಿಲ್ಲದಂದು**
**ಬುದ್ಧಪ್ರಜ್ಞೆ ಪ್ರವಹಿಸುತ್ತಿರುತ್ತದೆ**
**ಅದು ಸಾಂಸರ್ಗಿಕವಲ್ಲ.**

ಅಂದರೆ ಬೌದ್ಧ ಧರ್ಮವನ್ನು ಬುದ್ಧನಿಂದಲೇ, ಬುದ್ಧನ ಶಿಷ್ಯರಿಂದಲೇ ಕೇಳಿ ತಿಳಿಯಬೇಕೆಂದಿಲ್ಲ. ಸರಿಯಾದ ಲೋಕವಿವರಣೆಯನ್ನು ಯಾವ ಮೂಲದಿಂದ ತಿಳಿದರೂ ಅದು ಬೌದ್ಧ ಧರ್ಮವೇ ಆಗಿರುತ್ತದೆ ಮತ್ತು ಅಂತಹ ವಿವರಣೆಯನ್ನಾಧರಿಸಿದ ಬದುಕನ್ನು ಬಾಳಿದರೆ ಅದು ನಿಶ್ಚಿತವಾಗಿ ಬೌದ್ಧ ಧರ್ಮದ ಬಾಳುವೆಯ ಕ್ರಮವೇ ಆಗಿರುತ್ತದೆ. ಬೌದ್ಧ ಮಧ್ಯಮಮಾರ್ಗವು ಲೋಕವನ್ನು ಸರಿಯಾಗಿ ಅರಿತು ಬಾಳುವ ಕ್ರಮವನ್ನು ಮುಂದಿಡುತ್ತದಾದ್ದರಿಂದಲೇ ಅಂಬೇಡ್ಕರ್ ಬೌದ್ಧ ಜೀವನಕ್ರಮ ಮಾತ್ರ ಪ್ರಜಾಸತ್ತಾತ್ಮಕ ಜೀವನ ಕ್ರಮ ಎಂಬ ತೀರ್ಮಾನಕ್ಕೆ ಬಂದದ್ದು ಸರಿಯಾಗಿಯೇ ಇದೆ.

**ಸರ್ವದೃಷ್ಟಿವಾದಗಳಿಂದ ಮುಕ್ತಮಾಡುವ**
**ಸದ್ಧರ್ಮವನ್ನು ಅನುಕಂಪದಿಂದ ಬೋಧಿಸಿದ**
**ಗೌತಮನಿಗೆ ವಂದಿಸುತ್ತೇನೆ.**

❑❑

# ಕೋಗಿಲೆ ಮತ್ತು ಸೋವಿಯಟ್ ರಷ್ಯಾ : ಒಂದು ಮರು ಓದು

– ವಿಷ್ಣು ನಾಯ್ಕ

ಕವಿ ಕುವೆಂಪು ಅವರನ್ನು ಕರಾರುವಕ್ಕಾಗಿ ಯಾವುದೇ ಒಂದು ಸಿದ್ಧಚೌಕಟ್ಟಿಗೆ ನಿಲ್ಲಿಸುವುದಕ್ಕೆ ನನ್ನ ಅಂತಃಸಾಕ್ಷಿ ಒಪ್ಪುತ್ತಿಲ್ಲ. ಬಹಳಷ್ಟು ಹಿಂದೆಯೇ ಅವರನ್ನು ತಮಗಿಷ್ಟವಾದ ಶಿಸ್ತಿನ ಒಳಗಡೆ ತಂದು ವಿಮರ್ಶಿಸುವ ಮೂಲಕ ಓದುಗರನ್ನು ದಾರಿತಪ್ಪಿಸಿದ್ದಿದೆ. ಈ ಮಹಾಕವಿಯನ್ನು ಶೂದ್ರಲೋಕದ ನಾಯಕನೆಂಬಂತೆ ಬಿಂಬಿಸಿದ ವರ್ಗ ಒಂದೆಡೆಯಾದರೆ, ತೀಕ್ಷ್ಣ ವಿಮರ್ಶೆಗೆ ಒಡ್ಡಿದ ವರ್ಗ ಇನ್ನೊಂದೆಡೆ. ಕುವೆಂಪು ಹೇಳಿದ್ದೆಲ್ಲವೂ ತ್ರಿಕಾಲಸತ್ಯದ ಮಾತುಗಳು ಅನ್ನುವುದನ್ನು ನಂಬಿಸುವಲ್ಲೇ ಆಯುಷ್ಯ ಕಳೆದ ಆರಾಧಕಪಡೆ ಕೂಡ ಇತ್ತು, ಇದೆ. ನಮಗೆ ಬೇಕಾಗಿದ್ದು ಈ ಯಾವ ಹಣೆಪಟ್ಟಿಗಳೂ ಅಲ್ಲ. ಈ ಎಲ್ಲ ಸಿದ್ಧಚೌಕಟ್ಟುಗಳಿಂದ ಅವರನ್ನು ಹೊರಗೆ ತಂದು ನೋಡಬೇಕಾಗಿದೆ. ಆಗ ಕೆಲವು ದ್ವಂದ್ವಗಳ ಮಧ್ಯೆಯೇ ನಮ್ಮ ನಿಜವಾದ ಕುವೆಂಪು ಸಿಗಬಹುದುದು.

ಕುವೆಂಪು ಅವರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃಷಿ ಮಾಡಿದವರು. ಹೀಗಿದ್ದೂ ಈ ನಾಡು ಮತ್ತು ಕನ್ನಡ ಜಗತ್ತು ಅವರನ್ನು ಮುಖ್ಯವಾಗಿ ಗುರುತಿಸುವುದು ಒಬ್ಬ ಕವಿಯಾಗಿಯೇ. ಇದು ಅತ್ಯಂತ ಸರಿಯಾದ ನಿರ್ಧಾರವಾಗಿ ನನಗೂ ಕಂಡಿದೆ. ಕುವೆಂಪು - 'ಕಾನೂರು ಹೆಗ್ಗಡತಿ', ಮಲೆಗಳಲ್ಲಿ ಮದುಮಗಳು' ಎಂಬ ಎರಡು ಬೃಹತ್ ಕಾದಂಬರಿಗಳನ್ನು ಬರೆದರು. ಈ ಎರಡು ಕಾದಂಬರಿಗಳು ನನ್ನ ದೃಷ್ಟಿಯಲ್ಲಿ ಪದ್ಯಗಂಧೀ ಗದ್ಯಕೃತಿಗಳಾಗಿವೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಂತೂ ಅವರ ಇನ್ನೊಂದು ಮಹಾಕಾವ್ಯ ಎಂದರೂ ತಪ್ಪಾಗಲಾರದು. ಕುವೆಂಪು ಹದಿನಾಲ್ಕು ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಎರಡು ಮಕ್ಕಳ ನಾಟಕಗಳೂ ಸೇರಿವೆ. 'ಜಲಗಾರ', 'ಶೂದ್ರತಪಸ್ವಿ', 'ಬೆರಳ್ಗೆ ಕೊರಳ್', 'ಮಹಾರಾತ್ರಿ', 'ರಕ್ತಾಕ್ಷಿ' ಸೇರಿದಂತೆ ಅವರ ಬಹುತೇಕ ನಾಟಕಗಳು ಕಾವ್ಯಮಯ ನಡಿಗೆಯಲ್ಲೇ ನಮ್ಮನ್ನು ತಟ್ಟುತ್ತವೆ.

ಇಪ್ಪಾತ್ನಾಲ್ಕು ಕವನಸಂಕಲನಗಳನ್ನು ಕೊಟ್ಟುಹೋಗಿರುವ ಕುವೆಂಪು ಒಟ್ಟಾರೆಯಾಗಿ ಸುಮಾರು ಒಂದು ಸಾವಿರದಷ್ಟು ಕವನಗಳನ್ನು ಬರೆದಂತಿದೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯವು ಎರಡು ಸಂಪುಟಗಳಲ್ಲಿ ಅವನ್ನೆಲ್ಲಾ ಪ್ರಕಟಿಸಿದ್ದೂ ಆಗಿದೆ. ಮುಖ್ಯವಾಗಿ ಕುವೆಂಪು ಅವರ ಕವಿತೆಗಳನ್ನು ಮೂರು ಕವಲಾಗಿ ನೋಡಬಹುದೇನೋ! ನಿಸರ್ಗ ಗೀತೆಗಳು, ಪ್ರೇಮ ಕವಿತೆಗಳು ಮತ್ತು ಸಮಾಜ ಜಾಗೃತಿ ಕುರಿತಾದ ಜನಪರ ನಿಲುವಿನ ಕವನಗಳು. ಅವರನ್ನು – ಅವರ ಕೃತಿಗಳನ್ನು ಮತ್ತೆ ಮತ್ತೆ ಓದಬೇಕೆನಿಸುತ್ತದೆ; ಅದೇ ಅವರ ಕೃತಿಗಳ ದೊಡ್ಡ ಶಕ್ತಿ ಎಂತಲೂ ತಿಳಿದಿದ್ದೇನೆ. ಪ್ರಸ್ತುತ ನನ್ನ ಮರು ಓದಿಗೆ ದಕ್ಕಿದ್ದು ಅವರ ಆರಂಭದ ಸಂಕಲನಗಳಲ್ಲಿ ಒಂದಾದ ಕೋಗಿಲೆ ಮತ್ತು ಸೋವಿಯಟ್ ರಷ್ಯಾ.

ಈ ಸಂಕಲವನ್ನು ನಾನು ಮೊಟ್ಟಮೊದಲು ಓದಿದ್ದು ಪ್ರೌಢಶಾಲೆಯ ಒಂಭತ್ತನೇ ತರಗತಿಯಲ್ಲಿದ್ದಾಗ. ಅಲ್ಲಿಂದ ಆರಂಭವಾದ ಅವರ ಕಾವ್ಯದ ಓದಿನ ದಾಹ ಇನ್ನೂ ನಿಂತಿಲ್ಲ. 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ ಸಂಕಲನದಲ್ಲಿ ಒಟ್ಟಿಗೆ ನಲವತ್ತೂಮ್ರು ಕವನಗಳಿವೆ. ಅವುಗಳಲ್ಲಿ ಅಷ್ಟೇನೂ ಮುಖ್ಯವೆಂದು ನನಗೆ ಅನಿಸದ ಕೆಲವನ್ನು ಬಿಟ್ಟು ಉಳಿದವುಗಳನ್ನು ಒಂದಷ್ಟು ರಸಾರ್ದ್ರ ವಿಶ್ಲೇಷಣೆಗೆ ಒಳಪಡಿಸಬಹುದೆನಿಸುತ್ತದೆ.

ಕುವೆಂಪು ಅವರನ್ನು ಕನ್ನಡ ಸಾರಸ್ವತ ಲೋಕ 'ಕನ್ನಡ ಸಾಹಿತ್ಯದ ವರ್ಡ್ಸ್‌ವರ್ಥ್' ಎಂದೇ ಗುರುತಿಸಿದೆ. ಅದು ನಿಜದ ಮಾತು ಕೂಡಾ. ಅನೇಕ ಕಡೆ ಕುವೆಂಪು ಅವರ ನಿಸರ್ಗಪ್ರಿಯತೆ, ತನ್ನ ಕೃತಿಗಳಲ್ಲಿ ನಿಸರ್ಗವನ್ನು ಭಟ್ಟಿ ಇಳಿಸಿದ ರೀತಿ ವರ್ಡ್ಸ್‌ವರ್ಥ್‌ನನ್ನೂ ಮೀರಿಸಿದ್ದಾಗಿದೆ ಎಂಬ ಅಭಿಪ್ರಾಯ ಕೂಡ ಇದೆ. ಅದರ ವಿವರಕ್ಕೆ ಇದು ಸಂದರ್ಭವಲ್ಲ. ಪ್ರಸ್ತುತ ಈ ಸಂಕಲನದ ವಿಶೇಷತೆ ಎಂದರೆ, ಇದರಲ್ಲಿ – ಇಲ್ಲವೇ ಇಲ್ಲ ಎಂಬುವಷ್ಟು – ನಿಸರ್ಗಗೀತೆಗಳ ಕೊರತೆ ಇರುವುದು. ಇಲ್ಲಿ ಏನಿದ್ದರೂ ಮನುಷ್ಯ ಮತ್ತು ಸಮಾಜ, ದೇಶ ಮತ್ತು ಕಾಲ ಸಂಬಂಧಿಯಾದ ವಿಚಾರಗಳನ್ನೊಳಗೊಂಡ ಕವಿತೆಗಳಿವೆ.

ಮೊದಲಿಗೆ ಸಂಕಲನದ ಶೀರ್ಷಿಕೆಯ ಕವನವನ್ನೇ ನೋಡೋಣ. ಕವಿ (ಕನಸಿನಲ್ಲಿ) ಸೋವಿಯಟ್ ರಷ್ಯಾಕ್ಕೆ ಹೊರಟಿದ್ದಾನೆ. ಇಂದಿನ ರಷ್ಯಾ ದೇಶವನ್ನು

'ಪರಿಮಳ', ಅಂಬಾರಕೊಡ್ಲ, ಅಂಕೋಲಾ – ೫೮೧ ೩೧೪, ಉತ್ತರ ಕನ್ನಡ ಜಿಲ್ಲೆ

ಕಣ್ಮುಂದಿಟ್ಟುಕೊಂಡು ಈ ಕವಿತೆಯ ವಿಶ್ಲೇಷಣೆ ಮಾಡಿದರೆ ಕವಿಯ ಮೇಲೆ ಬಹುದೊಡ್ಡ ಆರೋಪ ಬಂದೀತು. ಅಂದಿನ ಅಂದರೆ, ೧೯೫೦-೧೯೬೦ರ ದಶಕದ ಸೋವಿಯಟ್ ರಷ್ಯಾದ ಆಡಳಿತ ಕ್ರಮ, ಮನೋಧರ್ಮ ಬಲ್ಲವರಿಗೆ ಈ ಕವಿತೆ ಈಗಲೂ ತುಂಬಾ ಆಪ್ತವಾಗಿ ಕಾಣಬಹುದಾಗಿದೆ. ಕವಿ ಆ ದೇಶದ ಸ್ಥಿತಿಗತಿಯನ್ನು ಕುರಿತು – ತನ್ನ ಶೀರ್ಷಿಕೆ ಕವನದಲ್ಲಿ – ಮೊದಲಿಗೆ ಯೋಚನೆಗೆಳೆಯುವುದು ಹೀಗೆ:

**ಶ್ರೀಮಂತರಿರಲಿಲ್ಲ: ಶ್ರೀಮಂತರೇ ಎಲ್ಲ!**
**ಆಳ್ವರಸರಲ್ಲಿಲ್ಲ; ಅರಸರೇ ಆಳ್ಗಳೆಲ್ಲ!**
**ಹೆಚ್ಚು ಕಡಿಮೆಗಳಿಲ್ಲ; ಮೇಲು ಕೀಳುಗಳಿಲ್ಲ;**
**ಕೆಲಸವಿಲ್ಲದ ಅಲಸಗಾರನಿಗೆ ಅಲ್ಲಿ ಕೂಳಿಲ್ಲ;**
**ಕೆಲಸವೆಂದರೆ ಉಸಿರು! ಕೆಲಸವೇ ಬಾಳೆಲ್ಲ!**
**ಆಳು ತನಗಾಗಿ ತಾ ದುಡಿಯಬಾರದು ಅಲ್ಲಿ;**
**ದುಡಿಮೆಯನಿಬರಿಗಾಗಿ; ತಾನೊಬ್ಬನಿಬರಲ್ಲಿ!**
**ಸರ್ವ ಮನುಜರಿಗಾಗಿ ಸೃಷ್ಟಿ.**

ಎಂಬ ಸಮದೃಷ್ಟಿ! ಎಷ್ಟು ಸಹಜ ಮತ್ತು ಸರಳವಾಗಿ ಕವಿ ಇಲ್ಲಿ ಮಾತನಾಡಿದ್ದಾನೆಂದರೆ ಇದಕ್ಕೆ ಹೆಚ್ಚಿನ ವಿವರಣೆ ಬೇಕೆನಿಸುವದೇ ಇಲ್ಲ. ಆ ದೇಶದಲ್ಲಿ ಶ್ರೀಮಂತರಿರಲಿಲ್ಲ. ಆದರೆ ಎಲ್ಲರು ಶ್ರೀಮಂತರು! ಆಳುವ ಆರಸರಿರಲಿಲ್ಲ, ಆಳುಗಳೆಲ್ಲ ಅರಸರೇ! ಮೇಲು-ಕೀಳು, ಹೆಚ್ಚು ಕಡಿಮೆ ಇವ್ಯಾವುದಕ್ಕೂ ಅಲ್ಲಿ ತಾವಿಲ್ಲ. ಯಾರೂ ಅಲ್ಲಿ ತನಗಾಗಿ ದುಡಿಯುವುದಿಲ್ಲ. ಎಲ್ಲರ ದುಡಿಮೆ ಎಲ್ಲರಿಗಾಗಿ, ಎಲ್ಲರಲ್ಲಿ ತಾನೊಬ್ಬ. ಇದು ಅಲ್ಲಿಯ ದೃಷ್ಟಿ. ಮುಂದುವರೆದು ಕವಿ ಹೇಳುತ್ತಾನೆ: ಅಲ್ಲಿಯ ಜನರು ಕನಸುಗಾರರಲ್ಲ, ಆದರೂ ಮುಂದೊಂದು ದಿನ ಒಳ್ಳೆಯದು ಬಂದೇ ತೀರುತ್ತದೆ ಎಂಬ ಹಿರಿಗನಸಿನ ಅಡಿಯಲ್ಲಿ ದುಡಿಯುವುದು ಮಾತ್ರ ನಿಂತಿಲ್ಲ.

**'ನೋಡುವವರಿಗೆ ದೊಡ್ಡ ಜೈಲು;**
**ಮಾಡುವವರಿಗೊ ಬರಲಿರುವ ಸೊಗಕೆ ಸುಗ್ಗಿಕೊಯ್ಲು !**

ಇಂತಹ ಚಿತ್ರಗಳನ್ನು ನೋಡುತ್ತಾ, ಕವಿ ಮುಂದೆ ಸಾಗುತ್ತಾನೆ. ಅವನ ಜೊತೆ ಮಾರ್ಗದರ್ಶಿ ಕೂಡಾ ಇದ್ದಾನೆ. ನೋಡುತ್ತಾ ಸಾಗಿದಂತೆ ಕವಿಗೆ ಅನಿಸಿದ್ದು ಹೀಗೆ :

**ದೇಶವೆಲ್ಲವು ದೊಡ್ಡದೊಂದು ಕಾರ್ಖಾನೆ;**
**ಪ್ರತಿಯೊಬ್ಬ ಮಾನವನು ಯಂತ್ರದಂತಿದ್ದಾನೆ!**

ಅಲ್ಲಿ ಆಲಸ್ಯಕ್ಕೆ ಜಾಗವೇ ಇಲ್ಲ. ಕಾಲಕಾಲಕ್ಕೆ ಪ್ರಾಪ್ತವಾದ ಕೆಲಸ. ಹರಟೆಯಲ್ಲಿ ಕಾಲಕಳೆದರೆ ಗಲ್ಲುಶಿಕ್ಷೆ! ಕವಿಯ ಮಾತಿನಲ್ಲೇ ಹೇಳುವುದಾದರೆ, ಆದಿಯಿಂದ ಕೊನೆತನಕ ಬದುಕು ಉತ್ಪತ್ತಿಗೆ ಮೀಸಲು (ಉತ್ಪತ್ತಿ, ಉತ್ಪತ್ತಿ, ಉತ್ಪತ್ತಿ ಮತ್ತೆ ಉತ್ಪತ್ತಿ).

ರಷ್ಯಾ ದೇಶದಲ್ಲಿ ಸೋಮಾರಿಗಳಾದ ಮನುಷ್ಯರಿಗೆ ಮಾತ್ರವಲ್ಲ ಪ್ರಾಣಿಗಳಿಗೂ ಸುಖವಿಲ್ಲ. 'ಮಿಡಿಹಕ್ಕಿ'ಗೂ ಕಾಳಿಲ್ಲ. ಕವಿ ಅನ್ನುತ್ತಾನೆ: 'ದೇಶವೆಲ್ಲವೂ ದೊಡ್ಡದೊಂದು ಕಾರ್ಖಾನೆ; ಪ್ರತಿಯೊಬ್ಬ ಮಾನವನು ಯಂತ್ರದಂತಿದ್ದಾನೆ'; ಮುಂದುವರಿದ ಕವಿಯ ಉದ್ಗಾರ ಇನ್ನೂ ಮರ್ಮಭೇದಿಯಾಗಿದೆ; ಬಾಳೆಂಬುದೊಂದು ನಿಷ್ಕರುಣ ಮಿಲ್ಲು; ಆದರೆ ಅತಿರೇಕದ ಮುಖವನ್ನು ಕವಿ ಸಹಿಸದವನಾಗಿದ್ದಾನೆಂಬುದು ಈ ಕವನದ ಉದ್ದಕ್ಕೂ ವ್ಯಕ್ತವಾಗುತ್ತಲೇ ಇದೆ. ಉತ್ತಮ ನಿದರ್ಶನಕ್ಕಾಗಿ ಕೆಳಗಿನ ನುಡಿಯನ್ನು ನೋಡಬಹುದು;

**ಕತ್ತೆ ಹಿಂಡಿಗೆ ಒಂದು ಕಡೆಯಲ್ಲಿ ಸಾಮ್ಯವಾದದ ಬೋಧೆ ಭರದಿಂದ ಸಾಗುತ್ತಿತ್ತು;**
**ಮತ್ತೊಂದು ತಾಣದಲ್ಲಿ ಹಂದಿಯೊಂದಕೆ ಕಠಿಣ ಶಿಕ್ಷೆ; ಕಿರ್ರೆಂದು ಕೂಗುತ್ತಿತ್ತು!**
**ಸಾಮ್ಯವಾದದ ನೀತಿಯನ್ನು ಮೀರಿ ತಿಂದಿತಂತೆ;**
**ಆದರಿಂದ ಆ ಹಂದಿ ಕ್ಯಾಪಿಟಲಿಸ್ಟಂತೆ!**

(ಇಲ್ಲಿ ಬರುವ 'ಕತ್ತೆ' ಹಂದಿಗಳೆರಡೂ ಸಾಂಕೇತಿಕವಾಗಿವೆಯಾದರೂ, ಈ ನುಡಿ ಕಟ್ಟಿಕೊಡುವ ಆಶಯದಲ್ಲಿ ತುಸು 'ಅತಿ' ಯಿದೆಯೆನಿಸುತ್ತದೆ.)

ಪದ್ಯದ ಇನ್ನೂ ಸ್ವಾರಸ್ಯಕರವಾದ ಭಾಗ ಮುಂದಿದೆ. ಕವಿ ಮಾರ್ಗದರ್ಶಿಯ ಹೆಜ್ಜೆಯೊಂದಿಗೆ ಹೆಜ್ಜೆ ಇಡುತ್ತ ಸಾಗುತ್ತಾನೆ. ಕಾಲಿಗೆ ಕಾಲು ತಾಗಿ ಒಮ್ಮೆ ಎಡವಿ ಬೀಳುತ್ತಾನೆ. ಎದ್ದು ಮೈಕೊಡವಿಕೊಂಡು ಏಳುತ್ತಿರುವಾಗ ಒಂದು ಸಂದಣಿಯಲ್ಲಿ ಗಲಿಬಿಲಿಯ ಹೋರಟೆ (ಕಾಳಗ)! ಪಕ್ಕದಲ್ಲಿ ಹೊಗೆಯುಗುಳು ಯಂತ್ರಗಳು. ಇನ್ನೊಂದು ಕಡೆ ತಿರುಗುವ ಚಕ್ರದ ಧೂಳಿ, ಹಸುವಿನ ಮರೆವೆಂಬ ಹೆಸರೇ ಇರಲಿಲ್ಲ.

ಇಂಥ ತಾಣದಲ್ಲಿ ಬಟ್ಟಬಯಲಿನೊಳಗೆ ಕೋಗಿಲೆಯೊಂದು ಹುದುಗಿ ಕೂತಿರುವ ದೃಶ್ಯ ಕವಿಯ ಗಮನ ಸೆಳೆಯುತ್ತದೆ. ಪ್ರಪಂಚದ ಲಕ್ಷವೇ ತನಗಿಲ್ಲವೆಂಬಂತೆ ಅದು ಕಿರಿದಾಗಿ ನರಳುತ್ತಿತ್ತು! ಕಾವಿಗೆ ಕುಳಿತುಕೊಳ್ಳುವ ಹೇಂಟೆಕೋಳಿಯ ಕಿರಿದಾದ ನರಳುವಿಕೆ ಕೇಳಿಸಿಕೊಂಡ ಸೂಕ್ಷ್ಮ ಮನಸ್ಸುಗಳಿಗೆ ಈ 'ನರಳು'ವ ಚಿತ್ರಣ ಕವಿಯ ಸೂಕ್ಷ್ಮ ಗ್ರಹಿಕೆಯ ಸಾಮರ್ಥ್ಯದ ಬಗ್ಗೆ ಹೆಮ್ಮೆ ಮೂಡಿಸುತ್ತದೆ. ಕವಿಯ ಹೆಜ್ಜೆ ಅಲ್ಲಿಂದ ಮುಂದೆ ಸರಿಯುವುದಿಲ್ಲ. ಕಾರಣ ಕೋಗಿಲೆ ಕುರಿತ ಅದುವರೆಗಿನ ಅವನ ಕಲ್ಪನೆ ಇಲ್ಲಿ ತಲೆಕೆಳಗಾಗಿದೆ! ಆ 'ಚೈತ್ಯದೂತ'ನ ದುಸ್ಥಿತಿ' ಕಂಡು ಕವಿ ಬೆಕ್ಕಸ ಬೆರಗಾಗುತ್ತಾನೆ. ಕರಗಿದ ಈ ಹೃದಯವಂತ ನಿರೂಪಕನ ಮುಂದೆ ಕೋಕಿಲ ತನ್ನ ಕಷ್ಟವನ್ನು ಹೇಳಿಕೊಳ್ಳುತ್ತದೆ :

**ನೋವಿನಿಂದಲುಗಾಡದಾದೆ ಬೆಕ್ಕಸಗೊಂಡು**
**ಹೇಳಿತದು ಕಣ್ಣೀರು ಕರೆದು**
**ಯಂತ್ರಪಕ್ಷಿಯ ತೆರೆದಿನಿಂಚರವ ತೊರೆದು**
**ಕರ್ಕಶಧ್ವನಿಯಿಂದೆ ಮೊರೆದು.**
**ಕವಿವರ್ಯ, ಇದುವರೆಗೆ ಸಂಸಾರ ಕಷ್ಟಗಳನುಳಿದು,**
**ಸುಖಗಳಗೆ ಮಾತ್ರ ತಿಳಿದು,**
**ವನವನವ ಸಂಚರಿಸಿ, ಹಾರಾಡಿ, ಹಾಡಿ,**
**ಹಣ್ಣು ಹಂಪಲು ತಿಂದು, ಬೇಟದಲಿ ಜೊತೆಗೂಡಿ,**
**ಹೆತ್ತು ಸಲಹುವ ಹೊರೆಯ ಹೊಣೆಯನೀಡಾಡಿ**
**ಕಾಗೆಗಳ ಗೂಡಿನಲಿ ಮೋಸದಿಂ ಮೊಟ್ಟೆಯಿಟ್ಟು,**
**ಮರಿಗಳಾರಯಕೆಯನು ಅವುಗಳಿಗೆ ಬಿಟ್ಟು**
**ನಲಿದಿದ್ದೆ ಕವಿಸ್ತುತಿಯ ಸೂರೆಮಾಡಿ.**

ಇಂಥ ಸುಂದರ ದಿನಗಳೆಲ್ಲ ತನ್ನ ಪಾಲಿಗೆ ಸತ್ತಿವೆ. ಈ ವಿಪರೀತ ಕಾಲದಲ್ಲಿ, 'ನನ್ನ ಮೊಟ್ಟೆಯ ಮೇಲೆ ನಾನೇ ಕಾವಿಗೆ ಕೂತು ಮರಿಮಾಡಬೇಕೆಂದು ಸೋವಿಯತ್ ತಾಕೀತು!'

ಕೋಗಿಲೆ ಮೊತ್ತಮೊದಲನೆಯ ಹೊಚ್ಚಹೊಸ ಚೊಚ್ಚಲನುಭವಕ್ಕಾಗಿ ಕಾವು ಕೂತಿರುವುದನ್ನು ನಂಬಲಾಗದೇ, ಮೆಲ್ಲನೆ ಅದನ್ನು ಎತ್ತಿ ನೋಡುತ್ತಾನೆ. ಆ ಧೂಳದಲ್ಲಿ ಎರಡು ಕರಿತತ್ತಿಗಳು ಕಾಣುತ್ತವೆ. ಆಗ ಕೋಗಿಲೆ ನಿರೂಪಕ ಕವಿಯ ಬಳಿ ಬೇಡಿಕೊಂಡ ಮಾತೊಂದು ಹೃದಯಸ್ಪರ್ಶಿಯಾಗಿ ಈ ಪದ್ಯಕ್ಕೆ ಕಳೆಕಟ್ಟಿದೆ,

'ಒಂದು ಮೊಟ್ಟೆಯನಾದರೂ ಕದ್ದುಕೊಂಡೊಯ್ಯು ನಿನ್ನೂರಿಗೆ,
ಪರಪುಟ್ಟರಿಗೆ ತವರುಮನೆಯಾದ ಮೈಸೂರಿಗೆ'.

–ಇದನ್ನು ಕೇಳಿದ ಕವಿ ಕರಗಿಯೇ ಹೋಗುತ್ತಾನೆ. ತನ್ನ ಒಂದು ಮರಿಯಾದರೂ ಹಾಡಿ ನಲಿಯಲಿ ಎಂಬಾಸೆಯಿಂದ ಬಡಜೀವ ಬೇಡಿಕೊಂಡಿದೆ. ನಿರಾಕರಿಸುವುದು ಧರ್ಮವಲ್ಲ ಎಂದೆನಿಸಿ, ಒಂದು ಮೊಟ್ಟೆಯನೆತ್ತಿ ಜೇಜಿಗಿಳಿಬಿಡುತ್ತಾನೆ. (ಕವಿಕೋಗಿಲೆಗಳ ಬೀಡಾದ ಸಾಂಸ್ಕೃತಿಕ ನಗರಿ ಮೈಸೂರಿನ ಹೆಸರೆತ್ತಿ ಈ ಕೋಗಿಲೆ ಕೇಳಿಕೊಂಡಾಗ, ಕವಿ ಒಣಭಾವದಿಂದ ಮುಂದೆ ಹೆಜ್ಜೆಯಿಡಲು ಸಾಧ್ಯವಾದರೂ ಹೇಗೆ?). ಪದ್ಯದ ಕೊನೆಯ ಭಾಗ ಇನ್ನಷ್ಟು ವ್ಯಥೆಯದ್ದಾಗಿದೆ.

'ಜೇಬಿನಲ್ಲಿದ್ದ ಕೋಗಿಲೆ ಮೊಟ್ಟೆಯನು ಕೈಯೊಳಾಂತೆ ;
ನೋಡುತಿರಲದು ಚಿಮ್ಮಿ ನೆಗೆದಿಳೆಗೆ ಬಿತ್ತು;
ಬರಿದಯ್ಯೋ ಚೂರುಚೂರಾದತ್ತು!'

ಮುಂದಿನ ಅದ್ಭುತ ನೋಡಿ; ಕವಿ ಹೇಳುತ್ತಾನೆ 'ಕೈ ತಪ್ಪಿ ಬಿದ್ದ ಕೋಗಿಲೆಯ ಮೊಟ್ಟೆ ಒಡೆದಾಗ ಅಲ್ಲಿ ಇದ್ದುದು ಕೋಗಿಲೆಯ ಕಂದನಲ್ಲ, ಬದಲಿಗೆ ಸಾಮ್ಯವಾದದ ಮಹಿಮೆ ಮತ್ತು ಬೋಧೆ!' ಇದನ್ನು ಕಂಡು ಬೆರಗಾಗುತ್ತಾನೆ ಕವಿ. ಕೂಡಲೇ ಮೊಟ್ಟೆಯಿಂದ ಮೂಡಿಬಂದ ಗೂಢಾಚಾರನೊಬ್ಬ ಕವಿಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ. ಕವಿಯ ಮಾತಿನಲ್ಲೇ ಅದನ್ನು ಕೇಳುವುದೊಳಿತು:

'ಮೂಡಿಬಂದೆನ್ನ ಹಿಡಿದವನು ಸೋವಿಯಟೊಬ್ಬ ಗೂಢಾಚಾರ
ಕೋಗಿಲೆಯ ಮೊಟ್ಟೆಯೊಳಗೂ ಕೂಡಾ ಸಾಮ್ಯವಾದ ಪ್ರಚಾರ.

ಇಡೀ ಕವನ ತನ್ನ ಸರಳ ಮತ್ತು ನೇರ ನಡಿಗೆಯ ಮೂಲಕ ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಕಾವ್ಯದ ಮಾಂತ್ರಿಕ ಅಂಶಗಳಾವುವೂ ಇಲ್ಲಿ ಅಷ್ಟಾಗಿ ದುಡಿದಂತಿಲ್ಲ. ಆದರೆ ಇಡೀ ಕವಿತೆ ಕಟ್ಟಿಕೊಟ್ಟ ಸಂದೇಶವೊಂದಿದೆಯಲ್ಲ, ಅದು ಬದುಕಿಗೆ ನೂರ್ಕಾಲದ ಎಚ್ಚರವಾಗಿ, –ಆ ವಾದ ಈ ವಾದ – ಎಂಬ ಸೈದ್ಧಾಂತಿಕ ವಿಚಾರಗಳನ್ನು ಬಲವಂತವಾಗಿ ಹೇರುವುದರಿಂದ ಒಂದು ದೇಶವೇ ಹೇಗೆ – ಈ ವಾದಪ್ರಣೀತ ಯಂತ್ರದ ಸಂಕೋಲೆಯಲ್ಲಿ ಸಿಕ್ಕು ನರಳಬಹುದು ಎಂಬ ಸಂದೇಶ ಈ ಪದ್ಯದ ನಿಜವಾದ ಯಶಸ್ಸಾಗಿದೆ. 'ಅತೀ ಸರ್ವತ್ರ ವರ್ಜಯೇತ್' ಎಂಬ ಲೋಕೋಕ್ತಿಯನ್ನು ಮತ್ತೆ ಮತ್ತೆ ನೆನಪಿಸುವ ಸಾಲುಗಳು ಈ ಕನಸಿನ ಪದ್ಯದಲ್ಲಿ ಜೀವಪಡೆದು ಪರಿಣಾಮಕಾರಿಯೆನಿಸಿವೆ.

ಸಂಕಲನದ 'ಯಂತ್ರರ್ಷಿ' ಕವನವು ಯಂತ್ರಯುಗವು ಬದುಕಿನ ನೈಸರ್ಗಿಕ ವಿಧಾನವನ್ನು ಹೇಗೆ ಗಲಿಬಿಲಿಗೊಳಿಸುತ್ತದೆ ಎಂಬುದನ್ನು ಬಿಡಿಸಿಡುತ್ತದೆ. 'ಯಂತ್ರರ್ಷಿ ಮಾನವರೆ, ಮಂತ್ರರ್ಷಿಗಳು ನಮಗೆ!' ಎಂಬ ಒಂದೇ ಒಂದು ಉದ್ಗಾರ ಸಾಕು ಯಂತ್ರಜಗತ್ತಿನ ಕುರಿತಾದ ವಿಸ್ಮಯಕ್ಕೆ ಮತ್ತು ವ್ಯಂಗ್ಯಕ್ಕೆ!

ಪ್ರಪಂಚದಲ್ಲಿ ಈ ನಿಸರ್ಗಕ್ಕೆ ತನ್ನದೇ ಆದ ಒಂದು ಯಂತ್ರಕೌಶಲ್ಯ ಶಕ್ತಿ ಇದೆ ಅನ್ನುವುದನ್ನು ಕವಿ ಚೆನ್ನಾಗಿ ಬಲ್ಲ. ಅದಕ್ಕೇ ಹೇಳುತ್ತಾನೆ :

'ಯಾರೇ ಕಾಣಲಿ ಬಿಡಲಿ ಬೆಂಕಿಯುರಿಯಲೆ ಬೇಕು;
ಯಾರಿರಲಿ ಇರದಿರಲಿ ಗಾಳಿ ತೀಡಲೇಬೇಕು
... ... ... ... ... ... ... ... ... ... ... ...
ಇಲ್ಲಿ ಈ ಭೂಮಿಯಲಿ ಅಧಿಕಾರಬಲದರ್ಪ
ಐಶ್ವರ್ಯವಿನಿತಿರದ ಪಂಚಮನ ಗುಡಿಸಿಲಲಿ
ಬೆಂಕಿಯ ವಿಧೇಯತೆಯೊಳುರಿವಂತೆ, ಪ್ರಭುವಾಗಿ
ಲೋಕವನ್ನಾಳುವವನರಮನೆಯ ಒಲೆಯಲ್ಲಿ
ಹೆಚ್ಚೇನು ದಾಕ್ಷಿಣ್ಯವಿಲ್ಲದುರಿವಂದದಲಿ,
ಹೊಳೆವ ಭೀಮಾಕಾರ ತಾರೆಯೊಳು ಮಿಂದಂತೆ
ತನ್ನ ಕರ್ತವ್ಯದಲಿ ತೊಡಗಿಹುದು

ಹೀಗೆ ಇಡೀ ವಿಶ್ವವೇ, ತನ್ನ ಕಾರ್ಯವನ್ನು ಸಹಜಕ್ರಿಯೆ ಎಂಬಂತೆ ತಾನು ನಿರ್ವಹಿಸುತ್ತಾ ಇದೆ. ಕವಿ ಶಿಲಾಯುಗದಷ್ಟು ಹಿಂದಕ್ಕೆ ನಮ್ಮನ್ನು ಕರೆದುಕೊಂಡು ಹೋಗುವುದು ಹೀಗೆ :

ಸಿಡಿಲು ಮಿಂಚಿಗೆ ನಡುಗುತಂದು ಗುಹೆಗೋಡಿದನು;
ಅಂದು ಕೊಚ್ಚುವ ಹೊಳೆಯ ಕೈಮುಗಿದು ಬೇಡಿದನು
ಇಂದದನು ಕಟ್ಟಿ ಕಿಂಕರನಂತೆ ಮಾಡಿಹನು
ಅಂದು ಇಂದ್ರಾಗ್ನಿಯರು ದೇವರಾಗಿದ್ದವರು
ಇಂದು ಗದ್ದುಗೆಯಿಳಿದು ದಾಸರೆಮಗಾಗಿಹರು.

ಅಂದರೆ ನಾಗರಿಕತೆಯ ಎಷ್ಟು ಮುಂದುವರಿದಿದೆ ಅನ್ನುವುದನ್ನು ಸೂಚಿಸುವ ಈ ಕವಿತೆಯ ಮುಂದಿನ ನಡಿಗೆ ಮನುಷ್ಯನ ಅಗಾಧ ಶಕ್ತಿ(ಧೀರಮತಿ)ಯೇ ಇಂದು ನಮಗೆಲ್ಲವೂ ಅನ್ನುವಂತಾಗಿದೆ ಎನ್ನುವ ವಾಸ್ತವದ ಕಡೆಯೂ ಕವಿ ಗಮನ ಸೆಳೆಯುತ್ತಾನೆ. ಅಷ್ಟೇ ಅಲ್ಲ ಅಂದಿನ ಆ ಮೂಢನೆಲ್ಲಿ? ಈ ಯಂತ್ರರ್ಷಿ ಎಲ್ಲಿ? ಆ ಅನಾಗರನೆಲ್ಲಿ? ಈ ನಾಗರಿಕನೆಲ್ಲಿ? ಎಂಬ ಪ್ರಶ್ನೆಯನ್ನು ಮುಂದಿಡುತ್ತಾನೆ. ಕವಿಗೆ ಯಂತ್ರಯುಗದ ಅಪಾಯ ಗೊತ್ತಿಲ್ಲವೆಂದಲ್ಲ. ಅವನ ವಿಶೇಷ ಒತ್ತು ಈ ಪದ್ಯದಲ್ಲಿರುವುದು ಮಾನವನ ಮೆದುಳಿನ ವಿಸ್ಮಯಕಾರಕ ಶೋಧಗಳ ಕುರಿತು. ಅದನ್ನೇ 'ನೀನು ಮನುಜನ ಮಹಾಮತಿಗೆ ವಿಜಯಪತಾಕೆ!' ಎಂದು ಉದ್ಗರಿಸಿದ್ದು. ಅರಸನಿಗಿಂತ ಯಂತ್ರರ್ಷಿಯೇ ಮೇಲು ಎಂಬ ತೀರ್ಮಾನವನ್ನು ಕೊಡುತ್ತಾನೆ. ನಮ್ಮೆಲ್ಲರಿಗೆ ಕೃಪಾಸೃಷ್ಟಿಮಾತೆಯಾದ ನಿಸರ್ಗವು ತಾನೆ ತಾನಾಗಿ

ಅನೇಕ ವೈಜ್ಞಾನಿಕ ವಿಸ್ಮಯಗಳಿಗಿಂತ ಹೆಚ್ಚಿನ ಬೆಳವಣಿಗೆಗೆ ಕಾರಣವಾಗಿದ್ದನ್ನು ನೆನೆಯುತ್ತಲೇ, ಮನುಷ್ಯನ ನಿರ್ಮಾಣ – ಅದರಲ್ಲೂ ಅವನ ಮೇಧಾಶಕ್ತಿ ನಿಸರ್ಗದ ಅತ್ಯಂತ ದೊಡ್ಡ ಕೊಡುಗೆಯಾಗಿದೆ ಎಂಬುದನ್ನು ಈ ಕವಿತೆಯ ಮೂಲಕ ತಲುಪಿಸಬೇಕಾಗಿದ್ದು, ಕವಿ ಅದನ್ನು ಯಶಸ್ವಿಯಾಗಿಯೇ ಮಾಡಿದ್ದಾನೆ. ಯಂತ್ರಕ್ಕಿಂತ ಅದನ್ನು ಕಂಡುಹಿಡಿದ ಮನಸ್ಸಿನ ಬಗ್ಗೆ ಕವಿಗೆ ಅಪಾರವಾದ ಮೆಚ್ಚಿಗೆ ಇದೆ.

'ರೈತನ ದೃಷ್ಟಿ' ಅನ್ನುವ ಪದ್ಯ ನಮ್ಮನ್ನು ತಕ್ಷಣ ತಟ್ಟುತ್ತದೆ. ಅದಕ್ಕೆ ಕಾರಣವೂ ಇದೆ. ಮಣ್ಣಿನ ಮಗನ ಸಮಸ್ಯೆಯನ್ನು ಬಗೆಹರಿಸುತ್ತೇವೆಂದು ಸ್ವಾತಂತ್ರ್ಯಪೂರ್ವದಲ್ಲೂ ನಂತರವೂ ಸಾಲು ಸಾಲು ಘೋಷಣೆಗಳಾಗಿದ್ದರೂ ಅವನ ಬವಣೆ ಈಗಲೂ ಹೇಳತೀರದ್ದು. ಚರಿತ್ರೆಯನ್ನು ನೆನಪಿಸುತ್ತಾ ಕವಿ ಹೇಳುತ್ತಾರೆ :

**ಕರಿಯರದೋ ಬಿಳಿಯರದೋ ಯಾರದಾದರೆ ಏನು?**
**ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ!**
**ವಿಜಯನಗರವೋ ಮೊಘಲರಾಳ್ವಿಕೆಯೊ? ಇಂಗ್ಲೀಷರೊ?**
**ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ**
**ಕತ್ತಿ ಪರದೇಶಿಯಾದರೆ ಮಾತ್ರ ನೋವೆ?**
**ನಮ್ಮವರೆ ಹದಹಾಕಿ ತಿವಿದರದು ಹೂವೆ?**

–ಇದಕ್ಕಿಂತ ಮಾರ್ಮಿಕವಾದ ಪ್ರಶ್ನೆ ರೈತನ ಪರವಾಗಿ ಬೇರೆ ಬೇಕೆನಿಸುವುದಿಲ್ಲ. ಸ್ವತಃ ರೈತನೇ ತನ್ನ ಬನ್ನವನ್ನು ಬಿಚ್ಚಿಡುತ್ತಾ ಸಾಗುವ ಪದ್ಯವಾದುದರಿಂದ ಅವನ ಆತ್ಮನಿವೇದನೆ ಆಲಿಸಿದಷ್ಟೂ ಕಡಿಮೆ ಅನಿಸುತ್ತದೆ. ಮೃಗಳ್ಳರಿಗೆ, ಆಗರ್ಭ ಶ್ರೀಮಂತರಿಗೆ, ರಸಿಕರಿಗೆ, ಸಾಮ್ರಾಜ್ಯವೆನ್ನುವುದು ಕಾಮಧೇನು ಇದ್ದಂತೆ. 'ಅರಸ' ಎಂಬ ತುರಾಯಿ ಇರುವ ಕಳ್ಳರೊಡೆಯನನ್ನು ದೇವರೆಂದು ಗೌರವಿಸಬೇಕೆ ಎಂಬುದು ಅವನ ಪ್ರಶ್ನೆ. 'ಅವರು ತಿಂದುಂಡು ತೇಗುವ ಮೆರವಣಿಗೆಯನ್ನು ಬಾಯ್ಬಿಟ್ಟು ನೋಡುವ ಬೆಪ್ಪ ತಾನಾಗಿ ಇರಬೇಕೇನು?' ಅನ್ನುವ ರೈತ,

**'ಸಾಕೆನಗೆ, ಸಾಕಯ್ಯ, ಸಾಮ್ರಾಜ್ಯ ಪೂಜೆ:**
**ಸಿಡಿಮದ್ದಿನಕ್ಷತೆಗೆ ಗುಂಡು ಚರೆ ಲಾಜೆ'**

ಅನ್ನುತ್ತಾನೆ. ಜೊತೆಗೆ ತಾನು ಎಷ್ಟೇ ಯಾತನೆ ಅನುಭವಿಸಿದರೂ ಸಾಮ್ರಾಜ್ಯವೆಂಬ ಮಾಯಾಶೂರ್ಪನಖಿಯ ರೂಪಕ್ಕೆ ಮರುಳಾದಲ್ಲಿ ತನ್ನ ಜೀವದ ಭಾಗವೇ ಆಗಿರುವ, 'ನೇಗಿಲಿನ ಮೇಲಾಣೆ! ಬಸವಗಳ ಮೇಲಾಣೆ! ನೆತ್ತರಿಲ್ಲದೇ ಸುಕ್ಕಿಸೊರಗಿದೆನ್ನಾಣೆ' ಅನ್ನುವಲ್ಲಿಯ ಅವನ ಸ್ವಾಭಿಮಾನ ಸಂಕಷ್ಟಗಳೆರಡೂ ಗಂಭೀರ ಚಿಂತನೆಗೆ ಒಳಪಡಬೇಕೆನಿಸುತ್ತದೆ.

ಕುವೆಂಪು ಅವರ ಆರಂಭದ ದಶಕಗಳ ಶ್ರೇಷ್ಠ ಕವಿತೆಗಳಲ್ಲಿ 'ಗೊಬ್ಬರ'ವೂ ಒಂದು. ಈ ಪದ್ಯ ನಮ್ಮ ಯಾವ ಮೇಜರ್ ದಲಿತ–ಶೂದ್ರ ಪ್ರಜ್ಞೆಯ ಕವಿಗೂ ಕಡಿಮೆಯಲ್ಲದ ತೀಕ್ಷ್ಣತೆಯನ್ನು ಒಳಗೊಂಡಿದೆ. ಕವಿತೆಯ ಆರಂಭವೇ ಪ್ರಶ್ನೆಯನ್ನು ಮುಂದಿಟ್ಟುಕೊಂಡಿದೆ:

**ಗೊಬ್ಬರದ ಮೇಲೆ ಬರೆವುದೇ ಕಬ್ಬಮಂ? ಹಾ**
**ಕಡುಕಷ್ಟ ! ಕಲಿಕಾಲಕೇನೆನು ಬಂದಪುದೊ?**

ಈ ಆರಂಭವೇ, ತುಳಿತಕ್ಕೆ ಒಳಗಾಗುವ ವರ್ಗದ ಕುರಿತು ಮಾತನಾಡುವುದರ ವಿರುದ್ಧ ದನಿ ಎತ್ತುವವರಿಗೆ ಬಿಟ್ಟಬಾಣದಂತಿದೆ. ಇಲ್ಲಿಯ ಕೆಲಸಾಲುಗಳನ್ನು ನೋಡಿ:

**ನಿರ್ಮಲ ಸರಸ್ವತಿಯ**
**ವೀಣೆಯಂ ಶೂದ್ರಂ ಕಸಿದುಕೊಂಡು ಗೊಬ್ಬರದ**
**ಗುಂಡಿಯನ್ನಗೆಯೆ ಗುದ್ದಲಿಯ ಮಾಡಿಹನಲ್ಲ!**
**ಶಿವನೆ, ಭೈರವನಾಗಿ ಬಂದು ಹಣೆಗಣ್ಣಿನಿಂ**
**ಕಿಡಿಗೆದರಿ ಬೂದಿ ಮಾಡದೆ ಸುಮ್ಮನಿಹೆಯಲ್ಲ!**

–ಅನ್ನುವಲ್ಲಿ ದೇವರನ್ನೂ ಪ್ರಶ್ನಿಸುವಂಥ ಛಾತಿ ಇದೆ. ಗೊಬ್ಬರದ (ತುಳಿತಕ್ಕೊಳಗಾದವರ) ಬವಣೆಗಳಿಗೆ ಕಾರಣರಾದವರ ಕುರಿತು ದೇವರೂ ಏಕೆ ಕಣ್ಣು ಮುಚ್ಚಿ ಕುಳಿತಿದ್ದಾನೆ ಎಂಬ ಪ್ರಶ್ನೆ ಇಲ್ಲಿದೆ.

ಕವಿ ಕವಿತೆಯನ್ನು ಇಲ್ಲಿ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವುದು ವಿಶೇಷವಾಗಿದೆ. ಅರಮನೆಯಲ್ಲಿ ಅನಾಯಾಸವಾಗಿ ಮೊಸರನ್ನ ಉಣ್ಣುತ್ತ ದೊಡ್ಡ ದೊಡ್ಡ ವಿದ್ವಾಂಸರ ಜಿಹ್ವೆಗಳಲ್ಲಿ ನಲಿದಾಡುವ ನೀನು ಕೊಳೆತು ನಾರುವ ರೈತನ ಒಡಗೂಡಿ ಈಗ ಸೆಗಣಿಯ ವಾಸನೆಗೆ ಮೂಗನ್ನು ತೆರೆದುಕೊಳ್ಳುವಂತಾಯ್ತು. ಈ ಸಾಮಾಜಿಕ ಬದಲಾವಣೆ ಎಷ್ಟೊಂದು ಕಾಲದ ನಿರೀಕ್ಷೆ ಗೊತ್ತೆ? ಎಂಬೆಲ್ಲ ಧ್ವನಿ ಈ ಕವಿತೆಯ ಒಳಗಡೆಯೇ ಇದೆ. ಹೂವಿಗೂ ಕೂಡ ಕವಿ ತನ್ನದೇ ಆದ ಒಂದಷ್ಟು ಪ್ರಶ್ನೆಗಳನ್ನಿಡುತ್ತಾನೆ :

**ಗೊಬ್ಬರವನಲ್ಲಗಳೆಯುವೆ ಏಕೆ ಮರದ ತುದಿ**
**ನಲ್ಗಂಪುವೆತ್ತು ತಂಗಾಳಿಗೊಲೆಯುವ ಹೂವೆ?**
**ಬೇರುಗಳಿಲ್ಲದಿರೆ ಗೊಬ್ಬರವಂ, ಹೇಳೆನಗೆ**
**ವೃಕ್ಷಕೆಲ್ಲಿಹುದು ಹೂವಿನ ಹಬ್ಬ? ಗೊಬ್ಬರದ**
**ಜೀವವನೇ ಹೀರಿ ಕೊಬ್ಬಿಹ ಹೂವೆ, ಕಬ್ಬಕ್ಕೆ**
**ನೀ ಮಾತ್ರ ವಸ್ತುವೇಂ?**

ಹೀಗೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನಿಡುತ್ತಾ, ಉದ್ಗಾರಗಳನ್ನು ಹೊರಡಿಸುತ್ತಾ ಬೆಳೆಯುವ ಈ ಪದ್ಯ ತನ್ನ ಒಡಲಲ್ಲಿ ಬಂಡಾಯದ ಧ್ವನಿಯನ್ನೂ ಒಳಗೊಂಡಿರುವುದನ್ನು ವಿಮರ್ಶಾ ವಲಯ ಈಗಾಗಲೇ ಗುರುತಿಸಿದೆ. ಗೊಬ್ಬರ ಅನ್ನುವ ಪದವೇ ಅತ್ಯಂತ ಧ್ವನಿಪೂರ್ಣವಾದುದು. ನಿರ್ಲಕ್ಷಿತ ವಲಯಕ್ಕೆ ಉತ್ತಮ ಉದಾಹರಣೆ ಆಗಬಲ್ಲದ್ದು. ವಾಸ್ತವದಲ್ಲಿ ಅತ್ಯಂತ ಅನಿವಾರ್ಯ ಶಕ್ತಿಯಾಗಿ ಭವಿಷ್ಯವನ್ನು ಕಟ್ಟುವ ನಿಟ್ಟಿನಲ್ಲಿ ಮಹತ್ತರ ಪಾತ್ರ ಆಡುವಂಥದ್ದು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ–ಬಂಡಾಯವೆಂಬ ಪದಗಳ ಚಲಾವಣೆಯೇ ಇಲ್ಲದ ಕಾಲದಲ್ಲಿ ಕುವೆಂಪು ಅವರು ಬರೆದ ಕವಿತೆಯಿದು.

ನನ್ನನ್ನು ತಟ್ಟಿದ ಈ ಸಂಕಲನದ ಇನ್ನೊಂದು ಸರಳ ಕವಿತೆ 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು? ಮೊದಲ ನುಡಿ ಆರಂಭವಾಗುವುದೇ ಈ ಪ್ರಶ್ನೆಯಿಂದ:

**ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?**
**ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?**
**ಎಂದೋ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು?**
**ನಿನ್ನೆದೆಯ ದನಿಯೇ ಋಷಿ! ಮನು ನಿನಗೆ ನೀನು!**

ನೀನು ಯಾವ ಕಾಲದಲ್ಲಿ ಏನೇ ಹೇಳಿರು ; ನೀನು ಹೇಳಿದ ಜೀವನ ನಿಯಮಗಳು ನನಗೆ ಬಂಧನವಲ್ಲ (ಯಾಕೆಂದರೆ ನಿನ್ನದು ಜೀವವಿರೋಧಿ ನಿಲುವು!) ನೀನು ನಿನಗೆ ಮನು ನಿನ್ನ ದನಿ ನಿನ್ನೆದೆಗೆ ಮಾತ್ರ ಋಷಿ ದನಿ. ಅದಕ್ಕೂ ನಮಗೂ ಸಂಬಂಧವೇ ಇಲ್ಲ. ಬಾಯಾರಿಕೆಯ ಬೇಗೆಯಿಂದ ಬಳಲಿ ಮನೆಬಾಗಿಲಲಿ ನಿಂತ ಒಬ್ಬ ಸೋದರನಿಗೆ (ಆತ ಯಾವ ಕುಲಕ್ಕೆ ಸೇರಿದವನೇ ಇರಲಿ) ನೀರುಣಿಸಲು, ಮನವೇ, ನಿನ್ನ ಧರ್ಮಶಾಸ್ತ್ರ ನನಗೆ ಅಪ್ಪಣೆ ಕೊಡಬೇಕು ಎಂದು ನಾನೇಕೆ ಬಯಸಲಿ? ಅದರ ಹಂಗೇ ನನಗಿಲ್ಲ ಎಂಬ ಭಾವ ಮಾರ್ಮಿಕವಾಗಿದೆ. ('ಮನು ನಿನಗೆ ನೀನು' ಎಂಬುದರಲ್ಲಿ ತುಸು ವಿಚಾರಗೊಂದಲವಿದ್ದಂತೆ ತೋರುತ್ತದೆ. 'ಮನು' ಎಂಬ ಪದವನ್ನು ಮನುಷ್ಯನ 'ಮೂಲಪುರುಷ' ಶ್ರೇಷ್ಠ ಎಂಬೆಲ್ಲ ಅರ್ಥದಲ್ಲಿ ಬಳಕೆಯಾಗಿದ್ದರೆ ಅದೂ ಚರ್ಚಾರ್ಹವೇ.)

ಹೀಗೆ ಒಂದು ರೀತಿಯ ಪ್ರತಿಭಟನೆಯ ಧ್ವನಿಯೊಂದಿಗೆ ಸಾಗುವ ಈ ಕವಿತೆಯ ಮುಂದಿನ ಮಾತನ್ನು ಕೇಳಿಕೊಳ್ಳಬೇಕಾದದ್ದಿದೆ:

**ಪಂಚಮರ ಶಿಶುವೊಂದು ಕೆರೆಯಲ್ಲಿ ಮುಳುಗುತಿರೆ**
**ದಡದಲದಲಿ ಮೀಯುತ್ತ ನಿಂತಿರುವ ನಾನು**
**ಮುಟ್ಟಿದರೆ ಬ್ರಹ್ಮತ್ವ ಕೆಟ್ಟು ಹೋಗುವುದೆಂದು**
**ಸುಮ್ಮನಿದ್ದರೆ ಶಾಸ್ತ್ರ ಸಮ್ಮತವದೇನು?**

ಯಾವುದು ಶಾಸ್ತ್ರ?.. ಮನುಷ್ಯತ್ವದ ಕಿಂಚಿತ್ ಪ್ರಜ್ಞೆ ಇಲ್ಲದ ನಡವಳಿಕೆ ಶಾಸ್ತ್ರ ಸಮ್ಮತವಾಗುತ್ತದೆಯೇ? ದಲಿತ ಶಿಶುವೊಂದು ಕಣ್ಣೆದುರೇ ಕೆರೆಯಲ್ಲಿ ಮುಳುಗುತ್ತಿದ್ದರೂ ಆ ಕೆರೆಯ ದಡದಲ್ಲಿ ಜಪಮಣಿ ಹಿಡಿದು ಸ್ನಾನ ಮಾಡುವಾತ ಆ ಮಗುವನ್ನು ಮುಟ್ಟಿ ರಕ್ಷಿಸಿದರೆ ಅದು ಶಾಸ್ತ್ರದ್ರೋಹಿ ಕ್ರಿಯೆಯಾಗುವುದಾದಲ್ಲಿ ಅಂಥ ನಿಯಮಕ್ಕೆ ಧಿಕ್ಕಾರವಿರಲಿ ಅನ್ನುವುದೇ ಇಲ್ಲಿಯ ಆಶಯ.

ಈ ಎಲ್ಲ ಶಾಸ್ತ್ರಗಳನ್ನ ಕೊರೆದಿಟ್ಟವರು ಬರೆದಿಟ್ಟವರು ನಮಗೆ ಆದರ್ಶವಾಗಬೇಕಾಗಿಲ್ಲ. ಕಾಲ ಸಂದರ್ಭದ ಕರೆಗೆ ದನಿಕೊಡುವ ನಮ್ಮ ಪ್ರಾಮಾಣಿಕವಾದ ನಮ್ಮ ಹೃದಯದ ಉಲಿಯೇ ನಮಗೆ ಧರ್ಮಶಾಸ್ತ್ರ ಅನ್ನುತ್ತಾರೆ – ಕವಿ.

ಈ ಪದ್ಯದ ಮುಂದುವರಿಕೆಯಾಗಿಯೇ ನಮ್ಮ ತರುಣಪೀಳಿಗೆಯನ್ನು 'ಎದ್ದೇಳಿ' ಎಂದು ಎಚ್ಚರಿಸುವ ಇನ್ನೊಂದು ಕವಿತೆ 'ತರುಣರಿರ, ಎದ್ದೇಳಿ!'

**ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ**
**ಬರುತಲಿದೆ ಹೊಸದೃಷ್ಟಿ ಹೊಸ ಬಯಕೆಗಳಲಿ**
**ಹಳೆಮತದ ಕೊಳೆಯಲ್ಲ ಹೊಸಮತಿಯ ಹೊಳೆಯಲ್ಲಿ**
**ಕೊಚ್ಚಿ ಹೋಗಲಿ; ಬರಲಿ ವಿಜ್ಞಾನ ಬುದ್ಧಿ.**

ಇಷ್ಟು ನೇರವಾಗಿ ಮಾತನಾಡುವ ಇಲ್ಲಿಯ ಪದ ಪಂಕ್ತಿಗಳ ಬಗ್ಗೆ ವಿವರಣೆಯ ಅಗತ್ಯವಿದೆ ಎಂದೆನಿಸುವುದಿಲ್ಲ. ಈ ಕರೆಯ ಮುಂದುವರಿಕೆಯೇ 'ಓ, ಬನ್ನಿ ಸೋದರರೆ, ಬೇಗ ಬನ್ನಿ!" ಎಂಬ ಪದ್ಯದಲ್ಲಿದೆ.

**ಗುಡಿಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ,**
**ಬಡತನವ ಬುಡಮುಟ್ಟ ಕೀಳಬನ್ನಿ**
**ಮೌಢ್ಯತೆಯ ಮಾರಿಯನು ಹೊರದೂಡಲೈತನ್ನಿ**
**ವಿಜ್ಞಾನ ದೀವಿಗೆಯ ಹಿಡಿಯಬನ್ನಿ**
... ... ... ... ... ... ... ... ... ... ...
**ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ;**
**ಮತಿಯಿಂದ ದುಡಿಯಿರೈ ಲೋಕಹಿತಕೆ**
**ಆ ಮತದ ಈ ಮತದ ಹಳೆಮತದ ಸಹವಾಸ**
**ಸಾಕಿನ್ನು ಸೇರಿರೈ ಮನುಜಮತಕೆ.**

ಮಹಾಕವಿ ಕುವೆಂಪು ಅವರ ಸಾವಿರಾರು ಪದ್ಯಗಳ ಮಧ್ಯೆ ಈ ನುಡಿ ತಾನೇ ತಾನಾಗಿ ಎದ್ದುನಿಂತು, ಇಂದು ಕನ್ನಡ ಜಗತ್ತಿನ ನಾಲಿಗೆಯಲ್ಲಿ ಸ್ಥಿರವಾಗಿ ನಿಂತಿದೆ. ಈ ಮನುಜಮತದ ಪರಿಕಲ್ಪನೆಯ ಮುಂದಿನ ಭಾಗವಾಗಿಯೇ ಇವರ 'ಹೊಸಬಾಳಿನ ಗೀತೆ' ಮೂಡಿಬಂದಂತಿದೆ. ಇಲ್ಲಿ ಆರಂಭವಾಗುವ, 'ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು!' ಎಂಬ ಕರೆ ಕೂಡ ಲೋಕೋತ್ತರವಾದುದು. ಪಕ್ಷಪಾತಿಗಳನೇಕರು ಇಲ್ಲಸಲ್ಲದ ಕಟ್ಟಳೆಗಳನ್ನು ಅನಾವರಣಗೊಳಿಸುತ್ತ, ಸಮಾನತೆಯ ಪರಿಕಲ್ಪನೆಯನ್ನೇ ನೆಲಸಮ ಮಾಡುವ ಹುನ್ನಾರಿನಲ್ಲಿ ಇರುವಾಗ ಕವಿ ಹೇಳುವುದು. ಈ ಸಂದರ್ಭಸಾಧಕರ ಮಾತು ಹಾಗಿರಲಿ, ಸ್ವತಃ ದೇವರೇ ಮುಂದೆ ನಿಂತು ಅನ್ಯಾಯ ಮಾಡಿದರೂ ಅದನ್ನು ತಿದ್ದಬಲ್ಲ ಶಕ್ತಿ ಮನುಷ್ಯನಿಗೆ ಇದೆ ಎನ್ನುತ್ತಾರೆ ಕವಿ – ಈ ಕವಿತೆಯ ಮೂಲಕ.

* * *

ಕನ್ನಡ ಕಾವ್ಯ ಪರಂಪರೆಯನ್ನಾಗಲಿ, ಭಾರತದ ಯಾವುದೇ ಭಾಷೆಯ ಸಾಹಿತ್ಯ ಪರಂಪರೆಯನ್ನಾಗಲಿ ಸೂಕ್ಷ್ಮವಾಗಿ ಗಮನಿಸಿದವರಿಗೆ, ಇಪ್ಪತ್ತನೇ ಶತಮಾನದ ಪೂರ್ವಾರ್ಧವು ಅದರಲ್ಲೂ ಆರಂಭದ ನಾಲ್ಕು ದಶಕಗಳ ಕಾಲವು ಭಾರತವನ್ನು ಪರಕೀಯ ಆಡಳಿತದಿಂದ ಮುಕ್ತಗೊಳಿಸುವ ಮಾರ್ಗದ ಒಂದು ಭಾಗವಾಗಿ ಅಲ್ಲಿಯ ಲೇಖನಿಗಳು ಹರಿದಾಡಿದ್ದು ಸ್ಪಷ್ಟವಾಗುತ್ತದೆ. ಕುವೆಂಪು ಅವರ ಲೇಖನಿ ಕೂಡಾ ಈ ಮಾತಿಗೆ ಪೂರ್ತಿ ಹೊರತಲ್ಲ.

ಈ ಸಂಕಲನದಲ್ಲೂ ಅದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತವೆ. ಯುವಧಮನಿಗಳಲ್ಲಿ ದಾಸ್ಯದಿಂದ ಬಿಡುಗಡೆಗೊಳಿಸುವ ಬಿಸಿರಕ್ತ ಹರಿದಾಡುವಂತೆ ಮಾಡುವುದು. ಈ ದೇಶದ ಆಳರಸರ ಗತ್ಯೈಭವಗಳನ್ನು ಕೀರ್ತಿಸುವುದು ಆ ಕಾಲದಲ್ಲಿ ನಡೆದೇ ಇತ್ತು. 'ಸುಮೂಹೂರ್ತವೊ ಇಂದೆ!' ಅನ್ನುವ ಕುವೆಂಪು ಅವರ ಕಿರುಪದ್ಯವೊಂದರಲ್ಲಿ ಆ ರೀತಿಯ ಒಂದು ಉತ್‌ಸ್ಫೂರ್ತಿಯ ಕರೆ ನಿಚ್ಚಳವಾಗಿರುವುದಕ್ಕೆ ಇಲ್ಲಿದೆ ದಾಖಲೆ:

**ಬೀಳಲಿ ಮೈನೆತ್ತರು ಕಾರಿ ;**
**ಹೋದರೆ ಹೋಗಲಿ ತಲೆಹಾರಿ.**
**ತಾಯ್ನಾಡಿನ ಮೇಲ್ಮೆಗೆ ಹೋರಿ;**
**ಸ್ವಾತಂತ್ರ್ಯದ ಸ್ವರ್ಗಕೆ ಏರಿ!**

'ಭರತಭೂಮಿ ನನ್ನ ತಾಯಿ' ಅನ್ನುವ ಪದ್ಯ ಕೂಡಾ ಈ ದೇಶದ ಗತವೈಭವವನ್ನು ನೆನಪಿಸುವ ನೆಲ-ಜಲ-ನದಿ-ನದಿಗಳನ್ನು ಹೆಮ್ಮೆಯಿಂದ ಸ್ಮರಿಸುವ ಆಶಯದಿಂದ ಕೂಡಿದ್ದಾಗಿದೆ. ಒಂದೆರಡು ನುಡಿಗಳನ್ನು ನೋಡಿ:

**ತುಹಿನಗಿರಿಯ ಸಿರಿಯಮುಡಿಯ**
**ಹಿರಿಯ ಕಡಲು ತೊಳೆಯುವಡಿಯ**
**ಪೈರು ಪಚ್ಚೆ ಪಸುರಿನುಡಿಯ**
**ಭರತಭೂಮಿ ನನ್ನ ತಾಯಿ,**
**ನನ್ನ ಪೊರೆವ ತೊಟ್ಟಿಲು**
**ಜೀವನವನೆ ದೇವಿಗೆರೆವೆ**
**ಬಿಡುತೆ ಗುಡಿಯ ಕಟ್ಟಲು.**

**ಸಿಂಧು, ಯಮನೆ, ದೇವಗಂಗೆ,**
**ತಪತಿ, ಕೃಷ್ಣೆ, ಭದ್ರೆ, ತುಂಗೆ**
**ಭರತಭೂಮಿ ನನ್ನ ತಾಯಿ**
**ನನ್ನ ಪೊರೆವ ತೊಟ್ಟಿಲು.**
**ಜೀವನವನೆ ದೇವಿಗೆರೆವೆ**
**ಬಿಡುತೆ ಗುಡಿಯ ಕಟ್ಟಲು**

ಹೀಗೆ ಬಿಡುತೆ (ಸ್ವಾತಂತ್ರ್ಯ)ಯ ಗುಡಿಕಟ್ಟಲು ತವಕಿಸುವ ಕವಿ ಅದನ್ನು ಆಗು ಮಾಡುವುದಕ್ಕೆ ನಾವೇನು ಮಾಡಬೇಕು ಎಂಬುದನ್ನು ಈ ಪದ್ಯದಲ್ಲಿ ಹೇಳಿದ್ದಾನೆ. ಮತಧರ್ಮಗಳ ಬಿರುಕುಗಳನ್ನು ಮೊದಲು ತೊರೆಯಬೇಕು, ಭಾಷೆ-ಭಾಷೆಗಳ ನಡುವಿನ ಒಡಕನ್ನು ಮರೆಯಬೇಕು. ದಾಸ್ಯದ ತೊಡಕುಗಳನ್ನು ಮೆಟ್ಟಿ ನಿಲ್ಲಬೇಕು ಮತ್ತು ಆ ಮೂಲಕ ಸ್ವಾತಂತ್ರ್ಯವೆಂಬ ಸ್ವರ್ಗದ ದಾರಿಯಲ್ಲಿ ಪುಣ್ಯದ ಮೆಟ್ಟಿಲುಗಳನ್ನು ಕಂಡುಕೊಳ್ಳಬೇಕೆಂಬುದು ಈ ಪದ್ಯದಲ್ಲಿಯ ಪ್ರಧಾನ ಆಶಯವಾಗಿದೆ.

**'ಹಂಪೆಯ ಭೀಮ'** ಅನ್ನುವ ಪದ್ಯದ ಕೊನೆಯ ನುಡಿಯಲ್ಲಿ ಒಂದು ಮಾತು ಬರುತ್ತದೆ; 'ಅಣಕಿಸೆಮ್ಮನು, ವೀರ; ಹೆಂಬೇಡಿಗಳು ನಾವು!' ಎಂಬ ಆತಂಕದ ಪಂಕ್ತಿಯದು!

ಕುವೆಂಪು ಅವರ ನಾಡು-ನುಡಿಯ ಅಭಿಮಾನಕ್ಕೆ ಇನ್ನೊಂದು ಹೋಲಿಕೆ ಸರ್ವಥಾ ಸರಿಯಲ್ಲ. ಅದರಲ್ಲೂ ನವೋದಯ ಕಾಲದ ಕವಿಗಳ ಮಧ್ಯೆ ನಾಡು-ನುಡಿ ಅಭಿಮಾನದ ಕುರಿತು ಕುವೆಂಪು ಅವರಂತೆ ಮತ್ತೆ ಮತ್ತೆ ದನಿ ಎತ್ತಿದ, ಕೃತಿ ರಚನೆ ಮಾಡಿದ, ಇನ್ನೊಬ್ಬ ಕವಿ ಸಿಗುವುದಿಲ್ಲ. **'ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರಾ!'** ಅನ್ನುವ ಪದ್ಯ ಅವರ 'ಕನ್ನಡ ಪರ' ಗೀತಗಳಲ್ಲೇ ವಿಶಿಷ್ಟವಾದುದಾಗಿದೆ:

**ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ!**
**ರಾಜನುಡಿಯೆಂದೊಂದು, ರಾಷ್ಟ್ರನುಡಿ ಯೆಂದೊಂದು,**
**ದೇವನುಡಿಯೆಂದೊಂದು ಹತ್ತಿ ಜಗ್ಗಿ**
**ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ,**
**ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ!**
**ಕೂಗಿಕೊಳ್ಳಲು ಕೂಡ ಬಲವಿಲ್ಲ ; ಮಕ್ಕಳೇ**
**ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ!**

**ಮೊಲೆವಾಲಿನೊಡಗೂಡಿ ಬಂದ ನುಡಿ ತಾಯಿನುಡಿ;**
**ಕೊಲೆಗೈದರಮ್ಮನನೆ ಕೊಲಿಸಿದಂತೆ!**
**ತಾಯ್‌ಮುತ್ತು ಕೊಡುವಂದು ನಿಮ್ಮ ಕೆನ್ನೆಯ ಮೇಲೆ**
**ಮೆರೆಯಿತದು ಪೋಣಿಸಿದ ಮುತ್ತಿನಂತೆ:**
**ನುಡಿವಂದು ನಿಮ್ಮ ಮುದ್ದಿನ ಹಸುಳೆಗಳನೆತ್ತಿ**
**ಕನ್ನಡವೆ ನಿಮಗೀವುದೊಲದ ತಂದು.**

ಕನ್ನಡಕ್ಕೆ ಕುತ್ತು ವಿದೇಶದಿಂದ ಮಾತ್ರವೇ ಬಂದಿಲ್ಲ. 'ರಾಜನುಡಿಯೆಂದೊಂದು' ಎಂಬಲ್ಲಿ ವಿದೇಶೀ ಆಡಳಿತದ ಪ್ರಭಾವವೂ ಕಾಣುತ್ತದೆ. ನಮ್ಮ ದೇಶದಲ್ಲೇ ಒಂದು ನುಡಿಗೆ ಇನ್ನೊಂದು ಮುಳುವಾದಂತಿದೆ ಎಂಬುದೂ ಕೂಡ ಕವಿಯ ನಿಲುವು. 'ರಾಷ್ಟ್ರನುಡಿ' (ಹಿಂದಿ) ಎಂಬ ಹೆಸರಿನಲ್ಲಿ, 'ದೇವನುಡಿ' (ಸಂಸ್ಕೃತ) ಎಂಬ ಹೆಸರಿನಲ್ಲಿ, ಕರ್ನಾಟಕದ ಬಹುಸಂಖ್ಯಾತರ ನೆಲನುಡಿಯಾದ ಕನ್ನಡಕ್ಕೆ ಹಿನ್ನಡೆಯಾಗುವುದನ್ನು ಕವಿ ಸಹಿಸಲಾರ. ತ್ರಿಭಾಷಾಸೂತ್ರ (ಇಂಗ್ಲಿಷ್, ಹಿಂದಿ, ರಾಜ್ಯಭಾಷೆ ಹಾಗೂ ಸಂಸ್ಕೃತ ಇಲ್ಲವೆ ಅಲ್ಪಸಂಖ್ಯಾತರ ಭಾಷೆಗಳೊಳಗೆ ಯಾವುದಾದರೂ ಮೂರು) ದೇಶದ್ಯಂತ ಜಾರಿಗೆ ತರಬೇಕೆಂದು ಶಿಕ್ಷಣತಜ್ಞರನೇಕರು ಆಗ್ರಹಪಡಿಸುತ್ತಿದ್ದ ಸಂದರ್ಭದಲ್ಲಿ ಕರ್ನಾಟಕದ ಮಟ್ಟಿಗೆ ಆ ಪ್ರಸ್ತಾವನೆಯನ್ನು ಖಡಾಖಂಡಿತವಾಗಿ ವಿರೋಧಿಸಿದ ಇಬ್ಬರು ಕವಿಗಳಲ್ಲಿ ಒಬ್ಬರು ರಾಷ್ಟ್ರಕವಿ ಕುವೆಂಪು; ಇನ್ನೊಬ್ಬರು – ಸಂಸತ್ ಸದಸ್ಯರೂ ಆಗಿದ್ದ – ಕವಿ ದಿನಕರ ದೇಸಾಯಿ.

ಕುವೆಂಪು ಅವರು ಕನ್ನಡವನ್ನು ನಮ್ಮ ಭಾವಕೋಶದ ಭಾಗವಾಗಿಸಿಕೊಳ್ಳಬಹುದಾದ ಸಾಧ್ಯತೆಗಳ ಬಗೆಗೆ ಕೂಡಾ ಈ ಎರಡನೆಯ ನುಡಿಯಲ್ಲಿ ಹೇಳುತ್ತಾರೆ; ತಾಯಿಯ ಎದೆಹಾಲಿನಲ್ಲಿ, ಕೆನ್ನೆಗಿಡುವ ಮುತ್ತಿನಲ್ಲಿ, ಹೆಂಡತಿ ತುಟಿಗೆ ತುಟಿ ಮುಟ್ಟಿಸುವ ಸಂದರ್ಭದಲ್ಲಿ, ಮುದ್ದಿನ ಹಸುಳೆಗಳ ಬಾಲ್ಯದ ನುಡಿಗಳನ್ನು ಅನುಭವಿಸುವಲ್ಲಿ – ಕನ್ನಡದ ಒಲವನ್ನು, ಕನ್ನಡದ ಬಲವನ್ನು ಅನುಭವಿಸಬಹುದು ಅನ್ನುವ ಕವಿ, ಅದೇ ವೇಳೆಗೆ ಒಂದು ಎಚ್ಚರದ ಮಾತನ್ನೂ ಹೇಳುತ್ತಾರೆ:

ನಿಮ್ಮ ನುಡಿ ನಿಮ್ಮ ಗಂಡಸುತನಕ್ಕೆ ಹಿರಿಸಾಕ್ಷಿ;
ಗೆಲುವಿದ್ದರದಕೆ ನಿಮಗಿಹುದು ಶಕ್ತಿ.
... ... ... ... ... ... ... ... ... ... ...
ಉತ್ತರದ ಕಾಶಿಯಲಿ ಕತ್ತೆ ಮಿಂದೈತರಲು
ದಕ್ಷಿಣದ ದೇಶಕದು ಕುದುರೆಯಹುದೆ?

– ಇದಕ್ಕಿಂತ ನೇರವಾಗಿ ನಮ್ಮ ದೌರ್ಬಲ್ಯದ ಬಗ್ಗೆ ದಾಸ್ಯಮನೋಭಾವದ ಬಗ್ಗೆ ಕಟಕಿಯಾಡುವುದಾದರೂ ಹೇಗೆ?

**'ಮೆಟ್ಟುವ ನೆಲ ಕರ್ನಾಟಕ'** ಅನ್ನುವ ಪದ್ಯದ ಪಂಕ್ತಿಗಳು ಕೂಡಾ ಇಂದು ದೇಶವಿದೇಶಗಳಲ್ಲಿ ಕನ್ನಡಿಗರ ನಾಲಿಗೆಯಲ್ಲಿ ನಲಿದಾಡುತ್ತಿವೆ:

ಎಲ್ಲಾದರು ಇರು; ಎಂತಾದರು ಇರು;
ಎಂದೆದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನ ಕರು,
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು!

ನೀ ಮೆಟ್ಟುವ ನೆಲ – ಅದೆ ಕರ್ನಾಟಕ;
ನೀನೇರುವ ಮಲೆ–ಸಹ್ಯಾದ್ರಿ,
ನೀ ಮುಟ್ಟುವ ಮರ–ಶ್ರೀಗಂಧದ ಮರ;
ನೀ ಕುಡಿಯವ ನೀರ್ – ಕಾವೇರಿ.

ಹೀಗೆ ಸಾಗುವ ಈ ಕವಿತೆಯ ಮುಂದಿನ ಎಲ್ಲ ಪಂಕ್ತಿಗಳು ರಸರೋಮಾಂಚನವನ್ನುಂಟು ಮಾಡುವಂಥದ್ದೆ! 'ಪಂಪನನೋದುವ ನಿನ್ನಾ ನಾಲಗೆ ಕನ್ನಡವೇ ಸತ್ಯ' ಅನ್ನುವದುದಾಗಲಿ; 'ಕುಮಾರವ್ಯಾಸನನಾಲಿಪ ಕಿವಿಯದು ಕನ್ನಡವೇ ನಿತ್ಯ' ಅನ್ನುವುದಾಗಲಿ, ಹರಿಹರ ರಾಘವರನ್ನು ಗೌರವದಿಂದ ನೆನೆಯುವುದಾಗಲಿ, ಪಾಳುಬಿದ್ದ ಹಂಪೆಗಾಗಿ ಕೊರಗುವುದಾಗಲಿ, ಕರ್ನಾಟಕದ ಪ್ರಥಮ ರಾಜಧಾನಿ ಬನವಾಸಿಯ ಪೆಂಪನ್ನು ನೆನೆಯುವುದಾಗಲಿ, ಬೆಳಗೊಳ, ಬೇಲೂರು, ಜೋಗ ಮುಂತಾದ ನೆಲವೈಭವವನ್ನು ಕೊಂಡಾಡುವುದಾಗಲಿ, ಕಾಜಾಣ, ಗಿಳಿ, ಕೋಗಿಲೆ, ಮಲ್ಲಿಗೆ, ಸಂಪಿಗೆ, ಕೇದಿಗೆ, ಮಾವು ಮತ್ತಿತ್ಯಾದಿ ವನಸಂಪತ್ತುಗಳನ್ನು ನೆನೆಯುವುದಾಗಲಿ ವ್ಯರ್ಥವಲ್ಲ. ಅದೇ ಸತ್ಯ ಕನ್ನಡ, ಅದೇ ನಿತ್ಯ ಕನ್ನಡ ಎಂದು ಭಾವುಕರಾಗಿಬಿಡುತ್ತಾರೆ – ಈ ಕವಿ.

**ಕನ್ನಡಮ್ಮನ ಹರಕೆ** ನಾಡು–ನುಡಿ ಅಭಿಮಾನ ಕುರಿತ ಇನ್ನೊಂದು ಉತ್ತಮ ಹಾಡು. ಈ ಹಾಡು ನಾಡಿನ ಒಳಗೂ–ಹೊರಗೂ ಮಕ್ಕಳಿಂದ ಮುದುಕರವರೆಗೆ ಹರಿದಾಡುತ್ತಿದೆ. ಕವಿ ಕನ್ನಡದ ಹೋರಾಟದ ಸೊಲ್ಲನ್ನು ಜೋಗುಳದ ಹರಕೆ ಎಂದೇ ಭಾವಿಸಿದ್ದಾರೆ. ಕನ್ನಡ ಮರೆತರೆ ತನ್ನನ್ನೇ ಮರೆತಂತೆ ಎಂಬುದಾಗಿ ಕನ್ನಡ ತಾಯಿ ಕೋರಿಕೊಳ್ಳುವ ಮಾತುಗಳು ಇಲ್ಲಿ ಬರುತ್ತವೆ. ಕನ್ನಡವೆಂದರೆ ಕೇವಲ ಭಾಷೆಯಲ್ಲ, ತಾಯಿಯ ಎದೆಹಾಲಂತೆ ಬಾಯಿಗೆ ಸವಿಜೇನು; ಮಾತೆಯ ಮಮತೆಯ ಅಪ್ಪುಗೆಯಂತೆ ಮೈಗೆ ಬಲುಸೊಗಸು, ಗುರುವಿನ ಹಿತನುಡಿಯಂತೆ ಬಾಳಿಗೆ ಶ್ರೇಯಸ್ಸು ಅನ್ನುವ ಹಿತನುಡಿಗಳಂತೂ ಕವಿಗೆ ತಾಯ್ನುಡಿಯ ಬಗೆಗೆ ಇರುವ ಅಪಾರವಾದ ಕಾಳಜಿಯನ್ನು ಅನಾವರಣಗೊಳಿಸುತ್ತಿದೆ.

ಈ ಸಂಕಲನದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ನಾನು ಮಾಡಿಕೊಂಡ ಮೂರನೆಯ ಭಾಗ, ಕವಿ ಮನುಷ್ಯನ ಅಂತಃಸತ್ವವನ್ನೇ ಪ್ರಶ್ನಿಸುವ ಮೂಲಕ. "ಹೀಗೇಕೆ ಬದುಕುತ್ತಿದ್ದೀಯೆ, – ನಿನ್ನ ಒಳಗಿರುವ ಶಕ್ತಿ ಸರ್ವವ ಮರೆತು" ಎಂಬ ಆಶಯವನ್ನೊಳಗೊಂಡದ್ದಾಗಿದೆ. **'ಮೊದಲನೆಯ ದೇವರು ಈ ಹಣ್ಣುಮುಕಿ'** – ಕುವೆಂಪು ಅವರ ಮಾನವೀಯ ನೆಲೆಯ ಉತ್ಕೃಷ್ಟ ಕವನಗಳಲ್ಲಿ ಒಂದಾಗಿದೆ.

ಮೊದಲನೆಯ ದೇವರು ಈ ಹಣ್ಣುಮುಕಿ
ನೀಡಜ್ಜಿಗೆ ಭಿಕ್ಷೆ!
ಬಾಳೀಕೆಗೆ ಸಾಕಾಗಿದೆ ಬದುಕಿ;
ಜೀವಿಸುವುದೆ ಶಿಕ್ಷೆ!
ನೆತ್ತಿಯ ದೇವರಿಗೇನಂತಿರಲಿ;
ಮೊದಲಜ್ಜಿಯ ಮನಕಂಪ್ರೈತರಲಿ

ಎಂಬಂಥ ನುಡಿಗಳನ್ನು ಕೇಳಿ ಕರಗದ ಮನ ಇದ್ದರೇನು, ಇಲ್ಲದಿದ್ದರೇನು?...

ತಲೆಕೆದರಿದ ಹಣ್ಣೂದಲು ಬೆಳ್ಳಿ,
ಕಬ್ಬಿಣದೊಲು ಮೋರೆ;
ಕಣ್ಕಾಣದು, ಕಿವಿ ಕೇಳದು; ಕಾಣೆದೊ,
ಕೆನ್ನೆಯೊಳಿದೆ ಕೋರೆ!
... ... ... ... ... ...
ತಟ್ಟೆಯ ತೆಂಗಾಯನು ಒಡೆದಲ್ಲಿದು;
ಕೊಡು ಹಣ್ಗಳನಿಲ್ಲಿ!
ನಲ್ಮಾತರಡನು ನುಡಿ ಮುದಿಕಿವಿಗೆ;
ಮರುವನವಹುದಲ್ಲಿ!
ಅದಕಂಪಿರಿದೇನರ್ಚಕ ಮಂತ್ರ?
ಈ ಪೂಜೆಗೆ ಮಿಗಿಲಾವುದು ತಂತ್ರ?

ಕವಿ ಕುವೆಂಪು ಅವರ ಮಾನವೀಯ ಅಂತಃಕರಣದ ತುಡಿತ ಈ ಪದ್ಯದ ಉದ್ದಕ್ಕೂ ತಾನೇತಾನಾಗಿ ಹರಿದಾಡಿದ್ದನ್ನು ಕಾಣುತ್ತೇವೆ. ನೆರೆಮನೆಯಲ್ಲಿ ಹಸಿದವರು, ಅಸಹಾಯಕ ಮುದುಕರು, ಊನಾಶಕ್ತರು ಇರುವಾಗ ಆ ಕಡೆ ಗಮನಹರಿಸದೆ ಯಾವ ದೇವರ ಪೂಜೆ ಮಾಡಿದರೂ ಅದು ವ್ಯರ್ಥ ಎಂಬುದು ಕವಿಯ ಸ್ಪಷ್ಟ ನಿಲುವು. **'ದೇವರು ಸೆರೆಯಾಳ್'** ಅನ್ನುವ ಪದ್ಯದಲ್ಲಿ ದೇಗುಲವನ್ನು ಒಂದು ಸೆರೆಮನೆಗೆ ಹೋಲಿಸಿ ಅದರ ಕಾವಲುಗಾರ ಪೂಜಾರಿ ಎನ್ನುವ ಕಲ್ಪನೆ ಡಾಂಭಿಕ ಪಡೆಗೆ ಇತ್ತ ತೀವ್ರ ತಿವಿತದಂತಿದೆ. ದೇವರು – ಪೂಜಾರಿ ಭಾವನಿರ್ಭರತೆಯ ಜೊತೆಯಲ್ಲಿ ಛಂದಸ್ಸಿನ ವಿಭಿನ್ನ ನಡಿಗೆಯ ದೃಷ್ಟಿಯಿಂದಲೂ ಗಮನಾರ್ಹವಾದ ಪದ್ಯವಾಗಿದೆ. ಇಲ್ಲಿ ಪೂಜಾರಿಯನ್ನು ವಿಡಂಬಿಸಿದ ರೀತಿ ಅನನ್ಯ ಎಂಬಂತಿದೆ. "ಸ್ವಾತಂತ್ರ್ಯದ ಶವ–ಸಂಸ್ಕಾರದ ಪರದೆಯ ಮರೆಯಲ್ಲಿ/ಪೂಜೆಯ ನಕಲಿಯ

ಪರಿಹಾಸ್ಯ!" ಎನ್ನುವ ನುಡಿಯೊಂದೇ ಸಾಕು – ದೇವರನ್ನೂ, ಪೂಜಾರಿಯನ್ನೂ ಪ್ರಖರ ವಿಡಂಬನೆಗೆ ಒಳಪಡಿಸಿದ ಮಾದರಿಗೆ. ಧರ್ಮದ ಹೆಸರಿನಲ್ಲಿ, ಆಚಾರ – ಶಾಸ್ತ್ರಗಳ ಹೆಸರಿನಲ್ಲಿ 'ಮನುಷ್ಯನ ಗೋಣಿಗೆ ಹೇಗೆ ಕಬ್ಬಿಣದ ನೇಣನ್ನು' ಭಾರತೀಯ ಪರಂಪರೆ ತೊಡಿಸುತ್ತಿದೆ ಎಂಬುದರ ಬಗ್ಗೆ ಕೂಡಾ ಇಲ್ಲಿ ಪ್ರಸ್ತಾಪವಿದೆ.

**ಕಾವಿಯನುಟ್ಟ ತರುಣನೊಬ್ಬನಿಗೆ** ಅನ್ನುವ ಪದ್ಯದಲ್ಲಿ ಕವಿ ಎತ್ತುವ ಪ್ರಶ್ನೆಯೂ ಮತ್ತೆ ಮತ್ತೆ ಮುಟ್ಟಿ ನೋಡಿಕೊಳ್ಳುಂತಿದೆ.

**ಗೈರಿಕವಸನಧಾರಿಯಾದ ಮಾತ್ರಕೆ ಧರೆಯ**
**ಗೌರವಾರಾಧನೆಗಳಿಗೆ ಪಾತ್ರನೇನಯ್ಯ?**
**ಭ್ರಾಂತ ಸನ್ಯಾಸಿ, ಕಾವಿಯನುಟ್ಟ ಮಾತ್ರದಲಿ**
**ಶಾಂತಿ ಬಂದುದೇ ನಿನಗೆ? ಜ್ಞಾನಿಯಾದೆಯ ನೀನು?**
**ಕತ್ತೆ ಕೆಂಗಾವಿಯಲಿ ಎಷ್ಟು ಹೊತ್ತುರುಳಿದರೆ**
**ಉತ್ತಮೋತ್ತಮ ಅಶ್ವವಾಗುವುದು, ಹೇಳಯ್ಯ?**

– ಇಂಥ ಪ್ರಶ್ನೆಗಳು ಇಂದಿಗೂ– ಈ ಇಪ್ಪತ್ತೊಂದನೆಯ ಶತಮಾನದಲ್ಲೂ ಕೇಳಬೇಕಾದ ಕಾಲಾತೀತ ಪ್ರಸ್ತುತತೆಗಳನ್ನು ಒಳಗೊಂಡದ್ದಾಗಿದೆ. ಪ್ರತಿಯೊಂದು ಸಾಲು ಅರ್ಥವ್ಯಂಜನೆಗೆ ಅರ್ಹವಾಗಿರುವುದರಿಂದ ನನ್ನ ವಿವರಣೆ ಮತ್ತೆ ಇಲ್ಲಿ ಅಗತ್ಯವಿಲ್ಲ ಅಂದುಕೊಂಡಿದ್ದೇನೆ. ಮುಂದುವರಿದು ಕವಿ ಎಚ್ಚರಿಸುತ್ತಾನೆ:

**ಕಾವಿ ಬರಿ ಮಣ್ಣಲ್ಲ ಕಾಣಯ್ಯ; ಅದು ಬೆಂಕಿ!**
**ಅಧಿಕಾರಿ ಉಟ್ಟರದು ಉರಿಗಣ್ಣು; ನಿನ್ನಂಥ**
**ಮದಮೋಹಿ ಧರಿಸಿದರೆ ಕೆಮ್ಮಣ್ಣು! ಹಣ್ಣಾದ**
**ಮಿಡಿಗಾಯಿಯೆಲೆ ನೀ ಸನ್ಯಾಸಿಯಾಗಿರುವೆ.....**

ಇಷ್ಟಕ್ಕೆ ತೃಪ್ತಿ ಪಡದ ಕವಿ ದೇಸೀಯ ಎನ್ನಬಹುದಾದ ಒಂದು ಕಿವಿ ಮಾತನ್ನು ಹೇಳುತ್ತಾನೆ. 'ಹುಲಿಯ ಬಣ್ಣಕೆ ನರಿಯ ಮೈ ಸುಟ್ಟುಕೊಂಡಂತೆ, ಹುಲಿಯ ವೇಷದಿ ಕತ್ತೆ ಕಬ್ಬನುಣಹೋದಂತೆ.'

'ಇಂದ್ರಿಯ ಜಯ', 'ನಾಸ್ತಿಕನ ಪ್ರೇಮಭಿಕ್ಷೆ', 'ಕೀರ್ತನೆಯ ಮಹಿಮೆ'ಯಂಥ ಇನ್ನೂ ಅನೇಕ ಕವನಗಳು ಈ ಸಂಕಲನದಲ್ಲಿವೆ. ಇವೆಲ್ಲ ನಮ್ಮ ಒಳಗನ್ನು ನಾವು ನೋಡಿಕೊಳ್ಳುವ ಕೆಲಸಕ್ಕೆ ಹಚ್ಚುತ್ತವೆ. ಈ ನಡುವೆ ಸೇರಿಕೊಂಡ, 'ಶಿಲಾಭೇರಿ' ಎಂಬ ಕವನದ ಬಗ್ಗೆ ಒಂದೆರಡು ಮಾತು: ಬೇಕಾದುದಕ್ಕೆ ಕಣ್ತೆರೆಯದೆ ಬೇಡವಾದುದಕ್ಕೆ ಸಮಯ ಹರಣ ಮಾಡುವ ಮನುಷ್ಯನಿಗೆ ಇಲ್ಲಿ ತಿವಿತವಿದೆ.

**ಕೂಗುತಿವೆ ಕಲ್ಲು;**
**ಕಿವಿವೆತ್ತ ಕಿವುಡರಿರ, ಕೇಳಿ ಆ ಸೊಲ್ಲು!**
... ... ... ...
**ಸತ್ತವರು ನಾವಲ್ಲ, ನೀವೆಂದು ಸಾರುತಿವೆ.**

–ಅನ್ನುತ್ತಾ ದೇಶದ ಮೂಲೆಮೂಲೆಗಳಲ್ಲಿ ಇರುವ ನೆನಪಿನ ಕಲ್ಲುಗಳು ಕೇವಲ ಕಲ್ಲುಗಳಲ್ಲ, ಪ್ರತಿಯೊಂದರಲ್ಲೂ ಒಂದೊಂದು ಇತಿಹಾಸವಿದೆ. ಅವುಗಳತ್ತ ಗಮನಹರಿಸದೆ ವ್ಯರ್ಥಕಾಲಹರಣ ಮಾಡುವ ನಿನ್ನ ಜಿಜ್ಞಾಸು ಬುದ್ಧಿಗೆ ಧಿಕ್ಕಾರವಿರಲಿ – ಎಂಬ ಧ್ವನಿ ಈ ಕವನದಲ್ಲಿದೆ.

ಈ ಪ್ರಬಂಧದ ಕೊನೆಯ ಭಾಗವಾಗಿ 'ಕವಿ–ಕಾವ್ಯ'ದ ಕುರಿತಾಗಿ ಈ ಕವಿ ಹೇಳುವುದೇನನ್ನು? ನೋಡೋಣ; ಕುವೆಂಪುರವರ ದೃಷ್ಟಿಯಲ್ಲಿ 'ಕಲೆಗಾಗಿ ಕಲೆ' ಎಂಬ ವಾದವೇ ತಪ್ಪು. ಕಾವ್ಯಕ್ಕೆ ಮೂಲಸೆಲೆ 'ಬದುಕು' ಮತ್ತು 'ವಿಶ್ವಾತ್ಮ'. ಒಂದು ಇಹದ ಸೋಜಿಗ, ಇನ್ನೊಂದು ಕಲ್ಪನೆಯಾಚೆಯ ಅಂದರೆ, ಒಟ್ಟು ಪ್ರಪಂಚದ ಸೋಜಿಗ! ಕುವೆಂಪು ಅದನ್ನು 'ವಿಶ್ವಾತ್ಮ' ಎಂಬುದಾಗಿ ಒಂದು ರೀತಿಯ ಅಧ್ಯಾತ್ಮ ಪರಿಭಾಷೆಯಲ್ಲಿ ಗುರುತಿಸುತ್ತಾರೆ. 'ತಾನು ಕವಿಯಲ್ಲ'ವೆಂದೂ ಹೊಗಳಿಕೆಯೇ ತನ್ನ ಸಾವೆಂದೂ ಅದನ್ನು ತಾನು ಧಿಕ್ಕರಿಸಬಯುಸುತ್ತೇನೆಂದೂ, **'ನಾನು ಕವಿಯಲ್ಲ'** ಎಂಬ ಕಿರುಪದ್ಯದಲ್ಲಿ ಕುವೆಂಪು ಹೇಳಿಕೊಂಡಿದ್ದಾರೆ. **'ಕವಿಯ ಹೃದಯ ಒಂದು ವೀಣೆ'** ಅನ್ನುವ ದೃಢನಂಬಿಕೆಯ ಮಾತು ಅದೇ ಶೀರ್ಷಿಕೆಯ ಇನ್ನೊಂದು ಕಿರುಪದ್ಯದಲ್ಲಿ ಬರುತ್ತದೆ. ಈ ವೀಣೆಯನ್ನು ಮಿಡಿಯುವ ಕೈ ಲೋಕದ್ದು.

ಕುವೆಂಪುರವರ **'ಕೀರ್ತಿಶನಿ ತೊಲಗಾಚೆ'** ಎಂಬ ಮಾತೊಂದು ಇಂದು ರಾಜ್ಯಾದ್ಯಂತ ಸಾಂಸ್ಕೃತಿಕ ವಲಯದಲ್ಲಿ ಜನಜನಿತವಾಗಿದೆ. **'ವರಕವಿಯ ಪಂಥ'** ಅನ್ನುವ ಒಂದು ಪುಟ್ಟ ಕವನದಲ್ಲಿ ಅದೇ ಭಾವ ಬೇರೊಂದು ಬಗೆಯಲ್ಲಿ ದನಿ ಪಡೆದಿವೆ.

**ಕೋಗಿಲೆಯ ಕಂಠಕ್ಕೆ ಸ್ವರ್ಣಪದಕವ ತೊಡಿಸಿ**
**ನೇಣು ಬಿಗಿಯುವುದೇಕೆ, ಬಹುಮಾನವೆಂದು?**
**ಬಿರುದು ಬಾವಲಿ ಹೆಚ್ಚೆ? ಹೆಸರು ಹೊಗಳಿಕೆ ಹೆಚ್ಚೆ,**
**ಪಿಕವರಗೆ ಶಿವಕೊಟ್ಟ ಸವಿಗೊರಲಿಗಿಂತ?**

–ಈ ಪ್ರಶ್ನೆಯನ್ನು ಮುಂದಿಟ್ಟ ಕವಿ ತುಂಬಾ ಮಹತ್ವದ್ದೆಂದು ನಾವೆಲ್ಲ ಭಾವಿಸುವ ಒಂದು ಉದ್ಗಾರವನ್ನು ತೆಗೆಯುತ್ತಾನೆ. ಅದೇ – **'ಕೇಳಿ ಸವಿದೆಯಾ? ಸಾಕು, ಅದೇ ಪರಮ ಬಹುಮಾನ'**.

'ದಿವ್ಯ ನಿರ್ಲಕ್ಷತೆಯೆ ವರಕವಿಯ ಪಂಥ' ಕೇಳಿ ಅಥವಾ ಓದಿ ಸವೆಯುವದಕ್ಕಿಂತ ಪರಮ ಬಹುಮಾನ ಇನ್ನೊಂದಿಲ್ಲ ಎಂಬ ತ್ರಿಕಾಲ ಸತ್ಯದ ನಿಲುವನ್ನು ಇನ್ನಷ್ಟು ವಿಸ್ತೃತವಾಗಿ ನೆಲೆಗೊಳಿಸುವಂತೆ, **'ಕವಿಯ ಕೀರ್ತಿ'** ಎಂಬ ಶೀರ್ಷಿಕೆಯ ಒಂದು ದೀರ್ಘ ಕವನ ಇದೆ. **'ಕೋಗಿಲೆ ಮತ್ತು ಸೋವಿಯಟ್ ರಷ್ಯಾ'** ಸಂಕಲನದ ಮುಖ್ಯ ಕವನಗಳಲ್ಲೊಂದು ಅದು.

ಒಂದು ರೀತಿಯ ಕಥನ–ಕವನದ ನಡಿಗೆ ಇಲ್ಲಿದೆ. ಹಾಗೆ ನೋಡಿದರೆ ಇದೊಂದು ಪುಟ್ಟ ಕಥನ – ಕವನವೇ ಆಗಿದೆ ! ಈ ಕತೆಯಲ್ಲಿ ಸತ್ತ ಕವಿಯೊಬ್ಬ ತನ್ನ ಕೀರ್ತಿ ಭೂಲೋಕದಲ್ಲಿ ಈಗ ಹೇಗಿದೆ? ಎಂಬುದನ್ನು ಅರಿಯಲು ಬರುತ್ತಾನೆ. ಒಂದು ಕಡೆ ಅವನ ನೆನಪಿನ ಮಂದಿರವನ್ನು ಕಣ್ಣು

ಕೋರೈಸುವಂತೆ ಕಟ್ಟಿದ್ದಾರೆ. ಮತ್ತೊಂದು ಕಡೆ ಹಾಲುಗಲ್ಲಿನಲ್ಲಿ ಅವನ ಮೂರ್ತಿಯನ್ನು ಕೆತ್ತಿ ಮುಖ್ಯ ಬೀದಿಯ ಚೌಕದಲ್ಲಿ ಬಂಗಾರದ ಅಕ್ಷರದಿಂದ ಬರೆದು ನಿಲ್ಲಿಸಿದ್ದಾರೆ! ಇನ್ನೊಂದು ಕಡೆ ಇವನ ಭಾವಚಿತ್ರಕ್ಕೆ ಹೂ ಮುಡಿಸಿ ಪರಿಮಳ ಗಂಧ ಕರ್ಪೂರಗಳನ್ನಿಟ್ಟು ಪೂಜೆ ನಡೆದಿದೆ. ಮುಂದೆ ಹೋದಂತೆ ಒಬ್ಬ ಪಂಡಿತ ಈ ಕವಿಯ ಕಾವ್ಯದ ಕುರಿತು ರಸವತ್ತಾಗಿ ವಿಮರ್ಶೆ ಮಾಡುತ್ತಾ ವ್ಯಾಖ್ಯಾನದಲ್ಲಿ ತಲ್ಲೀನನಾಗಿದ್ದಾನೆ. ಚಪ್ಪಾಳೆ ಕಿವಿ ಕೆಪ್ಪಾಗುವಷ್ಟು ಜೋರಾಗಿ ಬೀಳುತ್ತಿವೆ. ಮತ್ತೊಂದು ಕಡೆ ಪತ್ರಿಕೆಯ ಮುಖಪುಟ ತುಂಬಾ ಕವಿಯ ಸಂಕೀರ್ತನೆ ಮಾಡಿದಂಥ ವಿವರಗಳಿವೆ.

ಸೂಕ್ಷ್ಮ ಕಾಯ ತೊಟ್ಟು ನೆಲಕಿಳಿದು ಬಂದ ಕವಿಗೆ ದುಃಖ ತುಂಬಿಕೊಳ್ಳುತ್ತದೆ. ನಿಟ್ಟುಸಿರುಬಿಟ್ಟು, 'ನನ್ನ ಕೀರ್ತಿ ಈ ಪ್ರಮಾಣದಲ್ಲಿ ಅಳಿದುಹೋಗಬೇಕೆ!' ಅಂದುಕೊಳ್ಳುತ್ತಾನೆ. ಖಿನ್ನವದನನಾಗಿ ಸ್ವರ್ಗಲೋಕ್ಕೆ ಕವಿ ಮರಳುತ್ತಿರುವಾಗ, ಅರಣ್ಯಮಧ್ಯದ ದಾರಿಯ ಪಕ್ಕದ ಹಳ್ಳಿಮನೆಯೊಂದರಿಂದ ಇವನ ಕಾವ್ಯ ಸಂಗೀತ ಕೇಳಿಬರುತ್ತದೆ. ಕುತೂಹಲಕ್ಕೊಳಗಾದ ಕವಿ ಸಂಗೀತ ಬರುವ ದಾರಿ ಹಿಡಿದು ಮುಂದೆ ಸಾಗುತ್ತಾನೆ. ಮುಂದಿನದನ್ನು ನಮ್ಮ ಓದುಗರು ಕವಿ ಮಾತಿನ ಮೂಲಕವೇ ಆಸ್ವಾದಿಸಿದರೆ ಹೆಚ್ಚು ಪರಿಣಾಮಕಾರಿಯಾದೀತೆಂದು ಕೊಂಡಿದ್ದೇನೆ:

**ತಾನೊಬ್ಬನಾ ಕವನವನ್ನೋದುತದೆಯುಕ್ಕಿ,**
**ಭಾವರಸದಾನಂದದಾವೇಶದಿಂ ಪೊಂಗಿ**
**ಕಂಬನಿಯ ಕರೆಯುತಿರೆ ಆತನಿಗೆ ಕಬ್ಬಿಗಂ**
**ಕೈಮುಗಿದನೊಡನೆ : ಯಾರೊಬ್ಬರಲ್ಲಿರಲಿಲ್ಲ;**
**ತನ್ನ ಕಲ್ಪಿಯ ತೋರ್ಕೆಗವನೋದುತಿರಲಿಲ್ಲ;**
**ಕವಿಯ ಪ್ರತಿಭೆಗೆ ಭಾವದಾರತಿಯನಿರದೆತ್ತಿ**
**ತನ್ಮಯಾನಂದ ಪೂಜೆಯೊಳಿರ್ದನಾ ಹೃದಯ!**
**ಅವನ ಕಣ್ಣಿನ ಹನಿಯ ಹೃದಯದಲ್ಲಿ ಕಾಣಿಸಿತು**
**ಕಬ್ಬಿಗಗೆ ತನ್ನ ಕೀರ್ತಿಯ ನಿತ್ಯ ಮಂದಿರಂ!**
**ಆ ರಸಸಲಿಲ ಗಂಗೆಯಲಿ ಮಿಂದು, ಶುಚಿಯಾಗಿ**
**ನಗೆಮುಗುಳ ಮಾಲೆಯಿಂದಿರದೆ ಸಿಂಗರಗೊಂಡು,**
**ಧನ್ಯನಾನೆಂದೆನುತ ಸಗ್ಗ ಕಡರಿದನು ಕವಿ,**
**ತನ್ನಾ ಯಶಃಸ್ಥಿರತೆಯುತ್ಸಾಹಲಿ ತೇಲಿ!**

'ಕೋಗಿಲೆ ಮತ್ತು ಸೋವಿಯಟ್ ರಷ್ಯಾ' ಸಂಕಲನದಲ್ಲಿ ನಾನು ಆಗಲೇ ಪ್ರಸ್ತಾಪಿಸಿರುವಂತೆ, ಈ 'ಕರ್ನಾಟಕದ ವರ್ಡ್ಸವರ್ಥ್'ನ – ನಿಸರ್ಗಗೀತೆಗಳಿಲ್ಲ. ಅದೇ ಒಂದು ವಿಶೇಷ. ಹಾಗೆ ನೋಡಿದರೆ ಅವರಂತೆ ಮತ್ತು ಅವರಷ್ಟು ನಿಸರ್ಗಕವನಗಳನ್ನು ಭಾವತನ್ಮತೆಯಿಂದ ಬರೆದ ಕವಿ ಇನ್ನೊಬ್ಬನಿಲ್ಲ! (ಸಮೀಪ ಸಮೀಪ ಬಂದು ನಿಲ್ಲಬಲ್ಲವರಿದ್ದರೆ ಅವರು ಪು.ತಿನ.). ಇಂಥ ಕವಿ ಆರಂಭದಲ್ಲಿ ಮನುಷ್ಯಜಗತ್ತನ್ನು ಮುಖ್ಯ ಕಾಳಜಿಯಾಗಿ ಅದರಲ್ಲೂ ಪ್ರತಿ, ಸಮಾನತೆ, ಶ್ರಮ-ಸಂಸ್ಕೃತಿ, ಶೋಷಿತ ಜನಾಂಗ ಇತ್ಯಾದಿ ನೆಲಮುಖಿ ಕಾವ್ಯವನ್ನು ಬರೆದ ಪರಿ ಒಂದು ಅದ್ಭುತ ಆರಂಭವೆಂದೇ ನನ್ನೆಣಿಕೆ.

ಮುಕ್ಕಾಲು ಶತಮಾನದಷ್ಟು ಹಿಂದೆ ಬಂದ ಕವನಗಳಿವು. 'ಅಂದಿಗಿಂತ ಇಂದೇ ಹೆಚ್ಚು ಪ್ರಸ್ತುತ' ಎಂಬಂತೆ ಪಚ್ಚಳಿಸುತಿವೆ. 50 ವರ್ಷಗಳಷ್ಟು ಹಿಂದೆ ಓದಿದಾಗ, ಭಾವನೆಯ ಸಲಿಲದಲ್ಲಿ ಅದ್ದಿ ತೆಗೆದಂತೆ ತೋರಿದ್ದ ಕವಿತೆಗಳು ಈ ಮರು ಓದಿನ ಸಂದರ್ಭದಲ್ಲಿ ವಿಚಾರಕ್ರಾಂತಿಗೆ ಪ್ರಚೋದಿಸುವ ತೀಕ್ಷ್ಣ ಕಿಡಿಗಳಂತೆ ಕಂಡುಬಂದಿರುವುದು ವಿಶೇಷವಾಗಿದೆ.

❑❑

# ಮಧುರಕವಿ ಮತ್ತು ಶ್ರವಣಬೆಳಗೊಳ

– ಎನ್.ಎಸ್. ತಾರಾನಾಥ್

ಹದಿನಾಲ್ಕನೆಯ ಶತಮಾನದ ಮಧ್ಯಭಾಗ ಹಾಗೂ ಹದಿನೈದನೆಯ ಶತಮಾನದ ಆರಂಭದ ದಶಕಗಳಲ್ಲಿ ಕೃತಿಗಳನ್ನು ರಚಿಸಿ ಪ್ರಸಿದ್ಧವಾದ ಕನ್ನಡ ಜೈನಕವಿ ಮಧುರ. ಈಗ ಅಸಮಗ್ರವಾಗಿ ದೊರೆತಿರುವ **ಧರ್ಮನಾಥ ಪುರಾಣ** ಎಂಬ ಚಂಪೂಕಾವ್ಯದ ಹಂಪೆಯ ಕೃಷ್ಣಸ್ವಾಮಿ ದೇವಾಲಯದ ಉತ್ತರ ಇಳಿಜಾರು ಬಂಡೆಯ ಮೇಲಣ (ಈಗ ಹೇಮಕೂಟದ ಪ್ರಸನ್ನ ವಿರೂಪಾಕ್ಷ ದೇವಾಲಯದ ಹಿಂದೆಯ ಬಂಡೆಯ ಮೇಲಣ) **ಲಕ್ಷ್ಮೀಧರಾಮಾತ್ಯನ ಶಾಸನದ** ಹಾಗೂ ಅಪೂರ್ಣವಾಗಿ ದೊರೆತಿರುವ ಗುಮ್ಮಟಸ್ತುತಿ ಎಂಬ ಅಷ್ಟಕದ ಕರ್ತೃವಾಗಿ ಈತ ಈಗ ತಿಳಿದು ಬಂದಿದ್ದಾನೆ. ಈತ ತನ್ನ ಆಶ್ರಯದಾತನನ್ನು ಕುರಿತು ಹೀಗೆ ಹೇಳಿದ್ದಾನೆ:

**ವಸುಧಾಚಕ್ರ ಪ್ರಸಿದ್ಧಂ ವಿಜಯನಗರಿಯೊಳ್ ಯಾವಪೋರ್ವೀಶ ಭಾಗ್ಯ**
**ವಸಥ ಶ್ರೀ ಬುಕ್ಕಭೂಪಾತ್ಮಜ ಹರಿಹರರಾಜ ಪ್ರಧಾನೋತ್ತಮಂ ನೀ**
**ತಿಸಮುದ್ರಂ ಮುದ್ದದಂಡೇಶ್ವರನ ಪೊರೆದ ಸೌಭಾಗ್ಯದಿಂ ಭಾರತೀ ಮಾ**
**ನಸಕೇಳೀರಾಜಹಂಸಂ ನೆಗಟ್ಟನವನಿಯೊಳ್ ವಾಜಿವಂಶಾವತಂಸಂ ॥**

**(ಧರ್ಮಪು;. ೧-೭೯)**

ಭೂಮಂಡಲದಲ್ಲಿ ಪ್ರಸಿದ್ಧವಾದ ವಿಜಯನಗರದ, ಯದುಕುಲವಂಶಿ ಬುಕ್ಕರಾಯನ ಮಗನಾದ ಹರಿಹರನ ಪ್ರಧಾನೋತ್ತಮ ಮುದ್ದದಂಡೇಶ ತನ್ನನ್ನು ಪೋಷಿಸಿ ಸಲಹಿದ ಎಂಬುದು ಈ ಪದ್ಯದ ಮುಖ್ಯ ಸಂಗತಿ. ಈ ಹರಿಹರನು ಪ್ರತಾಪಹರಿಹರರಾಯನೆಂದು ಹೆಸರಾಗಿ ೧೩೭೭-೧೪೦೪ರವರೆಗೆ ಆಳಿದ ಸಂಗಮವಂಶದ ಮೂರನೆಯ ದೊರೆ; ಆತನ ಅತಿ ನಂಬುಗೆಯ ಪ್ರಧಾನಿ ಮುದ್ದದಂಡಾಧೀಶ. ಈ ಅವಧಿಯಲ್ಲಿ ಮಧುರಕವಿ ಇದ್ದುದು ಸ್ಪಷ್ಟ. ಇದಲ್ಲದೆ ಲಕ್ಷ್ಮೀಧರ ಮಂತ್ರಿಯ ಶಾಸನವನ್ನು ರಚಿಸಿದ ಈತ ಆತನ ಅರಸನಾದ ಮೊದಲನೆಯ ದೇವರಾಯನ ಆಳ್ವಿಕೆಯ ಕಾಲವಾದ ೧೪೦೬-೧೪೨೨ರ ಅವಧಿಯಲ್ಲಿ ಕೂಡ ಇದ್ದ. ಏಕೆಂದರೆ ಲಕ್ಷ್ಮೀಧರನ ಶಾಸನದಲ್ಲಿ ಉಕ್ತವಾಗಿರುವ ಗಣಪತಿಯ ಪ್ರತಿಷ್ಠೆಯಾದದ್ದು ೨೦-೨-೧೪೧೧ರಂದು. ಈ ಶಾಸನ ರಚಿಸಿದ್ದಕ್ಕೆ ಮಧುರಕವಿಗೆ ಗದ್ದೆ, ಆನೆ, ಕುದುರೆ, ಆಭರಣಗಳು ಇನಾಮಾಗಿ ದೊರೆತಿವೆ. "ಭೂನಾಥಾಸ್ಥಾನ ಚೂಡಾಮಣಿ ಮಧುರಕವೀಂದ್ರಂ" ಎಂದು ಗುಮ್ಮಟ ಸ್ತುತಿಯಲ್ಲಿ ತನ್ನ ಬಗ್ಗೆ ಹೇಳಿಕೊಂಡಿರುವುದು ವಿಜಯನಗರದ ಅರಸರ, ಪ್ರಧಾನಿಗಳ ಪೋಷಣೆಯಲ್ಲಿ ಈತನಿದ್ದುದನ್ನು ಸಮರ್ಥಿಸುತ್ತದೆ. ಈತ ಉಲ್ಲೇಖಿಸುವ ಯತಿಗಳು, ಮುನಿಗಳು ಸು. ೧೩೫೦ರ ಕಾಲದವರಾದ್ದರಿಂದ ಈತ ಬುಕ್ಕರಾಯನ ಆಳ್ವಿಕೆಯ ಕಾಲವಾದ ೧೩೫೬ – ೧೩೭೭ರ ಕೊನೆಯ ಭಾಗದಲ್ಲೂ ಇದ್ದಿರಬೇಕು. ಸು. ೧೩೫೦ರಿಂದ ಸು. ೧೪೨೦ ಈತನ ಕಾಲವೆನ್ನಬಹುದು. ಶಾಸನವನ್ನುಳಿದು ಈತನ ಇತರ ಎರಡೂ ಕೃತಿಗಳು ಅಸಮಗ್ರವಾಗಿ ದೊರೆತಿರುವುದು ಒಂದು ನಷ್ಟವೇ ಸರಿ. ಮಧುರ ವಿಜಯನಗರದ ಅರಸರ ರಾಜಾಶ್ರಿತ ಕವಿ; ಪ್ರಾಯಃ ವಿಜಯನಗರದಲ್ಲೇ ಇದ್ದಿರಬೇಕು. ಆದರೆ ಅವನಿಗೆ ಶ್ರವಣಬೆಳುಗೊಳ, ಅಲ್ಲಿದ್ದ ಯತಿಗಳು, ಸಂಗತಿಗಳ ಬಗ್ಗೆ ನಿಕಟ ಸಂಪರ್ಕವಿತ್ತು ಎನ್ನಲು ಅನೇಕ ಆಧಾರಗಳಿವೆ.

## ಬೆಳ್ಗೊಳದ ಗುಮ್ಮಟಸ್ತುತಿ

ಮಧುರಕವಿ ಬರೆದಿರುವ ಗುಮ್ಮಟಸ್ತುತಿ ಆರ್. ನರಸಿಂಹಾಚಾರ್ಯರಿಗೆ ದೊರೆತಿತ್ತು; ನಮಗೆ ಸಿಕ್ಕಿಲ್ಲ (ಕಕಚ, ೧, ಬೆಂಗಳೂರು, ೧೯೭೨, ಪು. ೫೦೮) ಇದೊಂದು ಅಷ್ಟಕವೆಂದು ಹೇಳಿ ಇದರ ಮೂರು ಪದ್ಯಗಳನ್ನು ಅವರು ಉದ್ಧರಿಸಿದ್ದಾರೆ. ಇದರಲ್ಲಿ "ಬೆಳುಗುಳದ ನಗರೀ ನಾಯಕಂ ಗುಮ್ಮಟಾಧೀಶಂ" ಎಂಬ ಮಾತಿದೆ; ಪ್ರತಿಯೊಂದು ವೃತ್ತವೂ ಗುಮ್ಮಟೇಶಾ ಎಂದು ಅಂತ್ಯವಾಗುತ್ತದೆ. ಮೊದಲ ಪದ್ಯದಲ್ಲಿ ಗೊಮ್ಮಟನ ಪಾದ, ನಾಭಿ, ವದನಗಳನ್ನು ಕ್ರಮವಾಗಿ ದುಂಬಿ, ಎಳೆಮೀನು, ಚಕೋರಗಳಂತೆ ತನ್ನ ಕಣ್ಣು ಕಂಡು ತಣಿದು "ಇನ್ನೆಂತಪ್ಪ ಲಾವಣ್ಯದ ತವನಿಧಿಯೋ ನಿನ್ನ ಮೆಯ್" ಎಂದು ಕೊನೆಗೆ ಕವಿ ಉದ್ಗರಿಸಿದ್ದಾನೆ. ಎರಡನೆಯ ಸುಂದರ ಪದ್ಯ ಹೀಗಿದೆ :

**ಮಟಳಿಗೆಂದುಂ ಕೋಡದುಗ್ರಾತಪಕೆ ಸೆಡೆಯದುದ್ಯದ್ಧಿ ಮಕ್ಕಳ್ಕದೋರಂ**
**ತೊಲವಿಂ ಸಮ್ಯಕ್ತಪೋಮಾರ್ಗದೊಳೊದವಿದವಂಗಪಕ್ಷಯ ಶ್ರೀಕರಂ ಕೆ**
**ಯ್ಯೊಳಗಪ್ಪಳ್ ತಪ್ಪಲೆಂದುರ್ವರೆಗನುವಿಸುವಂತಾವಗಂ ತೋಱುವೀ ನಿ**
**ಶ್ಚಲಮೂರ್ತಿಶ್ರೀಯ ಸಾಮರ್ಥ್ಯಮನಱಿ ಮರುಳರ್ ಬಲ್ಲರೇ ಗುಮ್ಮಟೇಶಾ॥**

ಜಡಿಮಳೆಗೆ ನಡುಗದೆ, ಉಗ್ರಬಿಸಿಲಿಗೆ ಸೆಡೆಯದೆ,

೧೯, ರಾಮಲೀಲಾ, ೧ನೇ ಅಡ್ಡರಸ್ತೆ, ಗಂಗೋತ್ರಿ ಬಡಾವಣೆ ೨ನೇ ಹಂತ, ಮೈಸೂರು ೫೭೦ ೦೦೯

ಹಿಮಧಾರೆಗೆ ಅಳುಕದೆ ತಪೋಮಾರ್ಗದಲ್ಲಿ ನಿರತನಾಗಿ ಅಕ್ಷಯಶ್ರೀಯನ್ನು ಹೊಂದಿದ ನಿಶ್ಚಲಮೂರ್ತಿ ಗೊಮ್ಮಟನ ಕಣ್ತುಂಬುವ ಚಿತ್ರವಿದು. ಇಂಥ ಗೊಮ್ಮಟನ ಸತ್ವ, ಸಾಮರ್ಥ್ಯಗಳನ್ನು ಜ್ಞಾನಮೂಢರು ಬಲ್ಲರೇ ಎಂಬ ಕವಿಯ ಪ್ರಶ್ನೆ ತತ್ಕಾಲದ ಧಾರ್ಮಿಕ ಹಿನ್ನಲೆಯಿಂದ ಒಡಮೂಡಿದೆ. ಗೊಮ್ಮಟನ ಮೂರ್ತಿಯನ್ನು ಅಡಿಯಿಂದ ಮುಡಿಯವರೆಗೆ ಕಂಡ "ಎನ್ನ ನೇತ್ರಂ ಬಾಪ್ಪು" ಎನ್ನುತ್ತಾನೆ ಮಧುರ. ಸಜೀವವಾದ ಆತನ ವರ್ಣನೆಗಳು ಅವನು ಶ್ರವಣಬೆಳುಗೊಳಕ್ಕೆ ಬಂದು, ಮೂರ್ತಿಯನ್ನು ಕಂಡು ಬರೆದಿದ್ದಾನೆ ಎಂಬಂತಿವೆ. ಅವನು ತನ್ನ ಧರ್ಮಪುರಾಣದಲ್ಲಿ ಗೊಮ್ಮಟನ ಮಸ್ತಕಾಭಿಷೇಕ ಪ್ರಸ್ತಾಪಿಸುತ್ತಾನೆ (೧-೧೦೨,೧೦೩); ಅಂಥದೊಂದು ಸಂದರ್ಭದಲ್ಲಿ ಬಂದಾಗ ಇದನ್ನು ರಚಿಸಿರಬೇಕು. ಇದೇನು ಅಸಂಭವನೀಯ ಊಹೆಯಲ್ಲ.

### ಶ್ರವಣಬೆಳುಗೊಳದ ಚಾರುಕೀರ್ತಿ ಪಂಡಿತಾಚಾರ್ಯ

ಮಧುರ ಕವಿ ತನ್ನ ಧರ್ಮಪುರಾಣದ ರಚನೆಗೆ ಪ್ರೇರಣೆಯಿತ್ತ ಕೊಟ್ಟುಬಾಗೆಯ ಮಲ್ಲಿನಾಥವನ್ನು, ಆತನ ಗುರು ಪಂಡಿತಯತಿಯನ್ನು ಸ್ತುತಿಸಿದ್ದಾನೆ (೧-೮೨). ಇದೇ ಸಂದರ್ಭದಲ್ಲಿ "ಪಂಡಿತದೇವ ಪ್ರಥಿತಾನ್ವಯಂ ಪೊಗಟ್ಟೂಡೆ ಇನ್ನೇನ್ ಅನ್ಯ ಸಾಮಾನ್ಯಮೇ" (೧-೯೬) ಎಂದು ಉದ್ಗರಿಸಿದ್ದಾನೆ. ಮುಂದೆ ಆತನ ಅನ್ವಯವನ್ನು ಮೂರು ಪದ್ಯಗಳಲ್ಲಿ ನಿರೂಪಿಸಿದ್ದಾನೆ. ಶ್ರವಣಬೆಳುಗೊಳದ ಪಂಡಿತಯತಿ ಗುರುಪಂಕ್ತಿಗೆ ಮೂಲಸಂಘದ ಕುಂದಕುಂದಾನ್ವಯದ ದೇಳಿಗಣವ ಚಾರುಕೀರ್ತಿ ಮುನಿ ಪಂಡಿತರು ಆದಿ; ಅವರು ಯಶಃಪ್ರಸಾರಕರು; ವಿಹಿತ ಕ್ರಮದಿಂದ ಸಮಸ್ತ ವಿದ್ಯಾಗುರುಗಳು; ಇವರು ತಮ್ಮ ತಪಃ ಪ್ರಭಾವದಿಂದ ಮೀನಪತಾಕನನ್ನೇ ಓಡಿಸಿ ಶೌಚವ್ರತಾಧೀಶರೆನಿಸಿದರು. ಮುಂದೆ ಉತ್ಸಾಹಭರಿತವಾಗಿ ಚಾರುಕೀರ್ತಿಯನ್ನು ಮಧುರ ಸ್ತುತಿಸಿರುವುದು ಹೀಗೆ:

**ಪೇಳಲೇನೊ ಸಂದಿಗೊಂದಿಯಲ್ಲಿ ಪಠಿದ ಬಿರುದೆ ಬ**
**ಲ್ಲಾಳರಾಯ ಜೀವರಕ್ಷಪಾಲನೆಂಬ ಮೈಮೆಕೆಯ್**
**ತಾಳಮಾಗೆ ಕೂಡೆ ಲೋಕಮೆಯ್ದೆ ಪಾರುತಿರ್ಪುವಂ**
**ಕೇಳ ಚಾರುಕೀರ್ತಿ ಪಂಡಿತ ವ್ರತೀಂದ್ರ ಕೀರ್ತಿಯಂ ॥ (೧-೯೯)**

ಬಲ್ಲಾಳರಾಯಜೀವರಕ್ಷಾಪಾಲಕ ಎಂಬುದು ಮಹಿಮಾನ್ವಿತ ಬಿರುದು; ಅದನ್ನು ಸಂದಿಗೊಂದಿಯಲ್ಲಿ ಪಡೆದದ್ದಲ್ಲ; ಅದನ್ನು ವೈತಾಳವಾಗಿಸಿಕೊಂಡು ಲೋಕದಲ್ಲಿ ಎಲ್ಲರೂ ಹಾಡುತ್ತಿದ್ದಾರೆ - ಎಂದು ಮೇಲಿನ ಪದ್ಯದಲ್ಲಿ ಹೇಳಿದೆ. ಶ್ರವಣಬೆಳುಗೊಳದ ೧೪೪೮ರ ೩೬೦ನೆ ಶಾಸನದಲ್ಲಿ ಅಶ್ವಯುದ್ಧ ನಿಪುಣನೂ, ವೈರಿಬಲ ಮರ್ದನನೂ ಆದ ಬಲ್ಲಾಳ ತೀವ್ರರೋಗಕ್ಕೆ ತುತ್ತಾದಾಗ ಚಾರುಕೀರ್ತಿ ಪಂಡಿತ ಆತನನ್ನು ಗುಣಪಡಿಸಿದನೆಂದಿದೆ. (ಎಕ., II, ೧೯೭೩, ಪು.೨೧೮). ಇದನ್ನೇ ೧೪೩೨ರ ಶ್ರವಣಬೆಳುಗೊಳದ ೩೬೪ನೇಯ ಶಾಸನದಲ್ಲಿ ಹೀಗೆ ಹೇಳಿದೆ. "ಯೇಷಾಂ ಶರೀರಾಶ್ರಯತೋಪಿ ವಾತೋ ರುಜಃ ಪ್ರಶಾಂತಿಂ ವಿತತಾನ ತೇಷಾಂ ಬಲ್ಲಾಳ ರಾಜೋತ್ಥಿತ ರೋಗೇಶಾಂತಿಃ ಆಸೀತ್ಕಲ್ಯೈ ತತ್ಕಿಮು ಭೇಷಜೇನ" (ಎಕ, II, ೧೯೭೩, ಪು, ೨೨೮) ಬಲ್ಲಾಳರಾಜನನ್ನು ಭಯಂಕರವಾದ (ಪ್ರಾಯಃ ವಾತ) ರೋಗದಿಂದ ಚಾರುಕೀರ್ತಿಗಳು ಗುಣಪಡಿಸಿದರೆಂಬುದು ಇದರ ಮುಖ್ಯ ಆಶಯ. ಈ ಹೊಯ್ಸಳ ವಂಶೀಯ ಬಲ್ಲಾಳ ಹಾಗೂ, ಶ್ರವಣಬೆಳುಗೊಳದ ಮಠಾಧಿಪತಿ ಚಾರುಕೀರ್ತಿ ಪಂಡಿತರ ಕಾಲವನ್ನು ಪ್ರಶ್ನಾತೀತವಾಗಿ ಸೂಚಿಸುವುದು ಕಷ್ಟ; ಇತಿಹಾಸಜ್ಞರು ಈತ ಮೊದಲನೆಯ ಬಲ್ಲಾಳ, ಈತನ ಕಾಲದ ಯತಿಪತಿ ಚಾರುಕೀರ್ತಿ ಪಂಡಿತ, ಇವರ ಕಾಲ ಸು. ೧೧೦೦ ಎಂದು ಉಲ್ಲೇಖಿಸಿದ್ದಾರೆ. ಈ ಅಪೂರ್ವವಾದ ಬಿರುದನ್ನು ಶ್ರವಣಬೆಳುಗೊಳದ ಮಠದ ಮುಂದಿನ ಯತಿಗಳೂ ಧರಿಸಿದ್ದಾರೆ. ಇದನ್ನು ಪೋಷಿಸುವ ಒಂದು ನಿದರ್ಶನವಿದು. ಬಿ.ವಿ. ಶಿರೂರ ಅವರು ಶ್ರವಣಬೆಳುಗೊಳದ ಮಠಕ್ಕೆ ಸಂಬಂಧಿಸಿದ ವಿಜ್ಞಪ್ತಿ ಪತ್ರದ ಬಗ್ಗೆ ಪ್ರಸ್ತಾಪಿಸಿರುವ ಒಂದು ಭಾಗ ಹೀಗಿದೆ; "ಬಲ್ಲಾಳ ಕ್ಷಿತಿಪಾಲ ಜೀವವರ ರಕ್ಷಾ ಪಾಲಕಾದ್ಯಂ ಕಮಲಾವರ್ಣಾಂಕಿತ ಸರ್ವಾಪಾತಕಂ ಸಜಿಹ್ವಾ ಶಿಲಾಶಾಸನಃ; ಶ್ರಿಮದ್ರಾಯಸುರಾಜಮುಖ್ಯ ಗುರುವಾದ್ಭಿಃ ಮಂಡಲಾಚಾರ್ಯಕಃ ವಾಯಾತ್ಪಂಡಿತದೇವನಾಮವಿದ್ವತಃ ಶ್ರೀ ಚಾರುಕೀರ್ತಿ ವ್ರತೇಃ; (**ಶ್ರವಣಬೆಳ್ಗೊಳ**, ಧಾರವಾಡ, ೧೯೭೬. ಪು, ೧೬೪) ಸು.೧೬೦೦ರಲ್ಲಿದ್ದ ದೊಡ್ಡಯ್ಯನ **ಭುಜಬಲಿಶತಕದಲ್ಲಿ**, ಪಾಯಣವರ್ಣಿಯ **ಜ್ಞಾನಚಂದ್ರಚರಿತೆಯಲ್ಲಿ** ಈ ಪ್ರಸಂಗದ ಪ್ರಸ್ತಾಪ ಬಂದಿದೆ. ಹೇಮಚಂದ್ರನ **ರಾಜಾವಳಿ ಕಥೆಯಲ್ಲಿ** ಇದು ಸ್ವಲ್ಪ ಬೇರೆಯಾಗಿದೆ. ಧರ್ಮ ವಿಧ್ವಂಸದಿಂದ ಬಲ್ಲಾಳರಾಯನ ರಾಜ್ಯದಲ್ಲಿ ಉತ್ಪಾತಗಳಾಗಿ ಭೂಮಿ ಬಿರಿಯುತ್ತವೆ; ಹಾರುವ ಹಕ್ಕಿಯಿಂದ ಹಿಡಿದು ಹಲವಾರು ಜೀವಗಳು ಹತವಾಗುತ್ತವೆ; ಹನಸೋಗೆಯಿಂದ ಜೈನ ಯೋಗೀಶ್ವರರನ್ನು ರಾಜ ಬೇಡಿಕೊಂಡು ಕರೆಸುತ್ತಾನೆ. ಮಂತ್ರಾರಾಧನೆ, ಯಂತ್ರಾರಾಧನೆ ಹೋಮಾರಾಧನೆಗಳಿಂದ ಆ ಯೋಗೀಶ್ವರರು ಶಾಂತಿಕರ್ಮ ಮಾಡಿ ಸಿದ್ಧಚಕ್ರ, ಮಹಾಶಾಂತಿ ಚಕ್ರಗಳನ್ನು ಪೂಜಿಸಿ ಜೀವಹತಿ ತಡೆಯುತ್ತಾರೆ. ಕಮರಿಬಿದ್ದ ಭೂಮಿಯನ್ನು ಸಮತಲಗೊಳಿಸುತ್ತಾರೆ. ಆಗ ಆ ಯತೀಶ್ವರರಿಗೆ **ಚಾರುಕೀರ್ತಿ, ಬಲ್ಲಾಳರಾಯ ಜೀವರಕ್ಷಾಪಾಲಕ** ಎಂಬ ಬಿರುದಾವಳಿ ಉಂಟಾಗುತ್ತದೆ. (**ರಾಜಾವಳಿ ಕಥಾಸಾರ**, ಮೈಸೂರು ೧೯೮೮, ಪು. ೧೮೨)

ಈ ಕಥಾಪರಂಪರೆಯ ವ್ಯತ್ಯಾಸಗಳೇನೇ ಇರಲಿ, ಶ್ರವಣಬೆಳುಗೊಳದ ಯತಿಪರಂಪರೆಗೆ ಸೇರಿದ ಈ ಬಿರುದು ಹಾಗೂ ಯತಿಗಳನ್ನು ಅಭಿಮಾನದಿಂದಲೇ ಮಧುರಕವಿ ಸ್ಮರಿಸಿದ್ದಾನೆ. ಉಭಯ ನಯ ಪ್ರಮಾಣದಿಂದ

ಜಿನಮಾರ್ಗವನ್ನು ಸಭೆಯಲ್ಲಿ ಎತ್ತಿಹಿಡಿದು ಹರೆಹೊಯ್ಸಿದ ಅಭಿನವ ಚಾರುಕೀರ್ತಿ ಪಂಡಿತಾಚಾರ್ಯರ ಮಹಾಪ್ರಭವ "ವಿಭವದ ಮಾತಲ್ಲ" ಎಂಬುದು ಆವನ ಮುಂದಿನ ಪದ್ಯದ ಸಾರ (೧-೧೦೧). ಒಟ್ಟಿನಲ್ಲಿ ಶ್ರವಣಬೆಳುಗೊಳದ ಮಠದ ಯತಿಪರಂಪರೆಯ ಪ್ರಾಚೀನರು ಹಾಗೂ ಮುಖ್ಯ ಪ್ರಸಂಗಗಳು ಮಧುರಕವಿಗೆ ತಿಳಿದಿತ್ತು.

### ಆಶ್ರಯದಾತ ಮಲ್ಲಿನಾಥ – ಪಂಡಿತಯತಿ – ಗೊಮ್ಮಟನ ಮಸ್ತಕಾಭಿಷೇಕ

ಬಾಗೆವೊಳಲ್ ಅಥವಾ ಕೊಟ್ಟುಬಾಗೆಯಲ್ಲಿ ಭವ್ಯೋತ್ತಮರೂ ಸುಚರಿತರೂ ಆದ ಬೊಮ್ಮಿಸೆಟ್ಟಿ ಬೈಚಾಂಬಿಕೆಯೆಂಬ ಜೈನದಂಪತಿಗಳಿದ್ದರು. ಅವರಿಗೆ ಬ್ರಹ್ಮ, ನಾಗ ಮತ್ತು ಮಲ್ಲಿಕಾರ್ಜುನ ಎಂಬ ಮೂವರು ಪುತ್ರರು. ಈ ಮಲ್ಲಿಕಾರ್ಜುನನು ಮಲ್ಲಪ, ಮಲ್ಲಿನಾಥ ಎಂದೂ ಕರೆಯಲ್ಪಡುತ್ತಿದ್ದ. ಈತ ಕಲಾವಲ್ಲಭ, ಜಿನಮತ ಪ್ರಸಾರಕ, ದಾನಿ. ಕೊಟ್ಟು ಬಾಗೆಯ ಮಹಾವಿಭೂವೂ ಆಗಿದ್ದ. ಈತನ ಪ್ರೇರಣೆ, ಅಪೇಕ್ಷೆಗಳ ಮೇರೆಗೆ ಮಧುರಕವಿ ಧರ್ಮನಾಥ ಪುರಾಣವನ್ನು ರಚಿಸಿದ (೧-೯೭-೧೦೮). ಈ ಮಲ್ಲಿನಾಥನಿಗೆ ಜೈನಾಗಮ ಮಾರ್ಗವನ್ನು ತಿಳಿಸಿ ಸುವ್ರತಾಚರಣೆಯನ್ನು ಕೊಟ್ಟವನು ಶ್ರವಣಬೆಳುಗೊಳದ ಪಂಡಿತಯತಿಗಳು. ಮಲ್ಲಿನಾಥಂಗೆ ಮಾನಿತ ಜೈನಾಗಮ ಮಾರ್ಗಮಂ ತಿಳಿವ ಸಮ್ಯಗ್ದರ್ಶನಾವಾಪ್ತಿ ಶಾಶ್ವತಮಪ್ಪಂತಿರೆ ಸುವ್ರತಾಚರಣಮಂ ಕಾರುಣ್ಯದಿಂ ಕೊಟ್ಟ ಪಂಡಿತದೇವ" ಎಂಬುದು ಮಧುರನ ಪದ್ಯದ ವಾಕ್ಯ (ಧರ್ಮ ಪು., ೧-೯೬) ಚಾರುಕೀರ್ತಿ ಪಂಡಿತ ಹಾಗೂ ಅಭಿನವ ಚಾರುಕೀರ್ತಿ ಪಂಡಿತರ ಮುನಿ ಪರಂಪರೆಯಲ್ಲಿ ಬಂದ ಯತಿ ಚಕ್ರವರ್ತಿಗಳೇ ಪಂಡಿತದೇವ. ಇವರು ಭೂಮಂಡಲವೇ ಕೊಂಡಾಡುವಂತೆ ಅಂಬರ ಭೂಷಣನಾದ ಗೊಮ್ಮಟೇಶನಿಗೆ ಮಸ್ತಕಾಭಿಷೇಕ ಮಾಡಿಸಿದರು. ಒಮ್ಮೆ ಮಸ್ತಕಾಭಿಷೇಕ ಮಾಡಿಸುವುದೇ ಕಠಿಣವಾದ ಮಹಾಸಾಹಸ. ಒಮ್ಮೆಯಲ್ಲ, ಇಮ್ಮೆಯಲ್ಲ, ಮೂಮೆಯಲ್ಲ ಹಲವು ಬಾರಿ ಆ ಭುವನವಿಭುಗೆ ಮಸ್ತಕಾಭಿಷೇಕ ನಡೆಸಿದರು. ಇದಕ್ಕೆ ಚತುಃಸಂಘ ಬೆರಗಾಗಿ 'ಅಹೋ' ಎಂದು ಉದ್ಗಾರವೆತ್ತಿತ್ತು. ಎರಡು ಪದ್ಯಗಳಲ್ಲಿ ಇದನ್ನು ಮಧುರಕವಿ ವರ್ಣಿಸುವುದು ಹೀಗೆ :

ಚತುರಂಬೋನಿಧಿ ಮುದ್ರಿತಾವನಿತಳಂ ಕೊಂಡಾಡೆ ಲೋಕತ್ರಯೀ
ಪತಿಗಾಳಾಂಬರ ಭೂಷಣಂಗೆ ಮುದದಿಂ ಶ್ರೀ ಗೋಮಟೇಶಂಗೆ ವಿ
ಶ್ರುತಮಪ್ಪಂತಿರೆ ಮಸ್ತಕಾಭೀಷವಮಂ ಮುಂ ಮಾಡಿದೀ ಸೈಪು ಪಂ
ಡಿತ ದೇವವ್ರತಿ ಚಕ್ರವರ್ತಿಗೆ ಸಮಂತಕ್ಕುಂ ಪೆಱಂಗಕ್ಕುಮೇ ॥

ಒಂದೆರೆಡು ಮೂರು ಸೂಳ್ವರ
ಮೆಂದೊಡೆ ಪುಸಿ ಪಲವುಸೂಳ್ ಚತುಸ್ಸಂಘಮಾಹೋ
ಯೆಂದೆನೆ ಪಂಡಿತಮುನಿ ಮುದ
ದಿಂದೆಸಗಿದನೊಸೆದು ಭುವನವಿಭುಗಭಿಷವಮಂ ॥

(ಧರ್ಮಪು ; ೧-೧೦೨, ೧೦೩)

ಮಧುರಕವಿಯ ಕಾಲದಲ್ಲಿ ಶ್ರವಣಬೆಳುಗೊಳದ ಗೊಮ್ಮಟಮೂರ್ತಿಗೆ ಹಲವು ಬಾರಿ ಮಸ್ತಕಾಭಿಷೇಕವಾದುದು ಇದರಿಂದ ಸಿದ್ಧಗೊಳ್ಳುತ್ತದೆ.

ಇದನ್ನು ಪೋಷಿಸಲು ಶಾಸನಾಧಾರಗಳೂ ಇವೆ. ಶ್ರವಣಬೆಳುಗೊಳದ ಸಿದ್ಧರ ಬಸದಿಯ ಬಲಗಡೆ ಕಂಬದ ಮೇಲಿರುವ ಶಾಸನ ಪ್ರಸಿದ್ಧವಾದದ್ದು. ಕ್ರಿಸ್ತಶಕ ೧೩೨೦ರ ಈಶ್ವರ ಸಂವತ್ಸರದ ಮಾಘ ಶುದ್ಧ ಚತುರ್ದಶಿ ಶನಿವಾರ ಈ ಶಾಸನ ಹಾಕಿಸಿದೆ. ಇದು ೧೩೯೮ರ ಜನವರಿ ೩೧ಕ್ಕೆ ಸರಿಹೊಂದುತ್ತದೆ. ಇದನ್ನು ಬರೆದವನು ಅರ್ಹದ್ದಾಸ. ಇದರಲ್ಲಿ ಮೇಲೆ ಹೇಳಿದ ಪಂಡಿತಾರ್ಯ ಯತಿಯ ಗುರುಪರಂಪರೆಯಿದೆ. ಇದನ್ನು ಪಂಡಿತ ಮುನಿಯ ಶಿಷ್ಯನಾದ ಅಭಿನವ ಪಂಡಿತಾರ್ಯ ಹಾಕಿಸಿದ್ದಾನೆ. ಪಂಡಿತ ಮುನಿಗೆ ನಿಶಿಧಿಗೆ ಮಾಡಿಸಿದ್ದನ್ನು ಶಾಸನ ಉಲ್ಲೇಖಿಸುತ್ತದೆ. ಈ ಪಂಡಿತಯತಿ ಧರ್ಮಾಭಿವೃದ್ಧಿಗಾಗಿ ಬೆಳುಗುಳ ನಗರದಲ್ಲೇ ನಿಂತ; ಕರ್ಮಠರಿಂದ ಗೊಮ್ಮಟವಿಗ್ರಹ ರಕ್ಷಣೆಗೆ ಏರ್ಪಾಟು ಮಾಡಿದ, ಭವ್ಯಜನೋತ್ತಮರು ಗೊಮ್ಮಟನ ಸನ್ನಿಧಿಯನ್ನು ಸುಲಭವಾಗಿ ತಲುಪಲು ಮೆಟ್ಟಿಲುಗಳನ್ನು ಮಾಡಿಸಿದ. ಅಷ್ಟೇ ಅಲ್ಲದೆ ತನ್ನ ಜೀವಿತಕಾಲದಲ್ಲಿ ಏಳುಬಾರಿ ಬಾಹುಬಲಿ ವಿಗ್ರಹಕ್ಕೆ ಮಸ್ತಕಾಭಿಷೇಕ ಮಾಡಿದ. ಆತ ಮಾಡಿದ ಮಜ್ಜನ ಅಪೂರ್ವ, ಅಸದೃಶ. ಶಾಸನ ಅದನ್ನು ವರ್ಣಿಸುವುದು ಹೀಗೆ: "ಪಂಡಿತಯತಿಗಳ ಕ್ಷೀರಾಭಿಷೇಕದಿಂದ ಕೈಲಾಸ ಸ್ಫಟಿಕ ವರ್ಣ ಪಡೆಯಿತು, ದಿಗ್ಗಜಗಳು ಐರಾವತವಾದವು, ಸಪ್ತ ಸಿಂಧುಗಳು ಕ್ಷೀರಸಾಗರವಾದವು, ಮುಗಿಲುಗಳು ಶರತ್ಕಾಲದ ಮೇಘಗಳಾದುವು, ಅಮೃತಕುಂಭ ಒಡೆದು ಸ್ವರ್ಗಕ್ಕೆ ಹರಿಯಿತು, ಇಂದ್ರನು ಜಿನಶಿಶುವಿನ ಜನ್ಮಾಭಿಷೇಕವನ್ನು ಮೇರುಪರ್ವತದ ಮೇಲೆ ಮಾಡಿದಂತೆ, ಪಂಡಿತಯತಿಗಳು ಈ ಬೆಟ್ಟದ ಮೇಲೆ ಗೊಮ್ಮಟ ಮೂರ್ತಿಗೆ ಅಭಿಷೇಕ ಮಾಡಿ ಅದನ್ನು ಎಲ್ಲ ಜನರಿಗೂ ತೋರಿಸಿದರು. ಈ ಸಂಬಂಧದ ಶಾಸನ ಪದ್ಯಗಳಿವು :

ಯಸ್ಮಿಂಶ್ಚಾಮುಂಡರಾಜೋ ಭುಜಬಲಿ ನಮಿನಂ ಗುಂಮಟಂ ಕರ್ಮಟಾಜ್ಞಂ
ಭಕ್ತ್ಯಾ ಶಕ್ತ್ಯಾ ಚ ಮುಕ್ತ್ಯೈಜಿತಸುರನಗರೇ ಸ್ಥಾಪಯದ್ಭದ್ರಮದ್ರೌ
ತದ್ವತ್ಕಾಲ ತ್ರಯೋತ್ಥೋಜ್ವಲತನು ಜಿನಬಿಂಬಾನಿ ಮಾನ್ಯಾನಿಚಾನ್ಯ:
ಕೈಲಾಸೇ ಶೀಲಶಾಲೀ ತ್ರಿಭುವನ ವಿಲಸತ್ಕೀರ್ತಿಚಕ್ರೇವ ಚಕ್ರೇ ॥

ಸ್ಥಾನೇ ತತ್‌ಸ್ಥಾನ ಮಂತ್ರೋಜ್ವಲತರಮತುಲಂ ಪಂಡಿತೋಲಂಕರೋ ತು
ಶ್ರೀ ಮಾನೇಷೋರ್ಕ್ಕಕೀರ್ತಿನ್ನೃಪ ಇವ ವಿಲಸತ್ಸಾಲ ಸೋಪಾನಕಾದ್ಯೈ:
ಚಿತ್ರಂ ಶೀರ್ಷಭಿಷಿಚ್ಯ ತ್ರಿಭುವನತಿಲಕಂ ಚ ಪುನಸ್ಸಪ್ತ ವಾರಾನ್
ಪಂಕೋನ್ಮುಕ್ತಂ ವಿಧಾಯಾಖಿಲ ಜಗದುರು ಪುಣ್ಯೈಸ್ತಥಾಲಂಚಕಾರ ॥

ಕಿಂ ವಾ ಷೀರಾಭಿಷೇಕಾದುತ ನಿಜಯಶಸೋ ನಿರ್ಮಲಾಚ್ಛಂಕರಾದ್ರೀನ್
ಗೋತ್ರಾದ್ರೀನ್ ಸ್ಫಾಟಿಕೇಂ ಚ ಕ್ಷಿತಿನುಮರ ಗಜಾನ್ ದಿಗ್ಗಜಾನೇಷ ಧೀರ:

ಕ್ಷೀರೋದಾನ್ ಸಪ್ತ ಸಿಂಧೂನುದರಿಜಲಧರಾನ್ ಶಾರಾದಾ ನಾಗಲೋಕಂ
ಶೇಷಾಕೀರ್ಣಂ ವಿದೀರ್ಣಾಮೃತಕಲಶಮಪಿ ಸ್ವರ್ವಿತೇನೇನ ವಿದ್ಮಃ

ಮೇಕಾ ಜನ್ಮಾಭಿಷೇಕಂ ಸುರಪತಿರಿವ ತತ್ರಧೈವಾತ್ರ ಶೈಲೇ
ದೇವಸ್ಯಾ ದರ್ಶಯನ್ನೋಪರಮಖಿಲ ಜನಸ್ಯೈವ ಸೂರಿರ್ವಿದಾಯ
ಸನ್ಮಾರ್ಗಂ ಭೌಧುನ್ಯೆನಂ ವಿಹಿತ ಮಪಿ ಚಿರಂ ವಾಮದೃಗ್ವಾಕ, ಮೋಭಂ
ನಿಃಶೇಷಂ ತಾನಿ ಪೂರ್ವಂ ಪುರುದಿನ ಪುನರತ್ರಾಕಳಂಕಕೋಪನೀಯ

(ಎಕ. ೨. ಮೈಸೂರು, ೧೯೭೩. ಸಂಖ್ಯೆ ೩೬೦, ಪು. ೨೧೮-೧೯)

ಈ ವರ್ಣನಾಭಾಗಗಳಷ್ಟೇ ಪಂಡಿತಯತಿಗಳ ಮಸ್ತಕಾಭಿಷೇಕದ ವೈಭವ, ಸಕಲತೆ ಹಾಗೂ ಅದರಿಂತ ಆತ ಪಡೆದ ಕೀರ್ತಿಯನ್ನು ತಿಳಿಸುತ್ತವೆ. ಪರಂಪರೆಯಿಂದ ಬಂದ (ಪ್ರಾಯಃ ನಿಂತು ಹೋಗಿದ್ದ) ಗೊಮ್ಮಟನ ಅಭಿಷೇಕ ಉತ್ಸವಗಳನ್ನು ಪುನರುಜ್ಜೀವಿಸಿದ ಕೀರ್ತಿ ಪಂಡಿತಯತಿಗಳದು. ಅವರು ಬೆಳುಗುಳದಲ್ಲಿ ನೆಲೆಸಿದ್ದು, ಬೆಟ್ಟಕ್ಕೆ ಮೆಟ್ಟಿಲು ಮಾಡಿಸಿದ್ದು ಇದಕ್ಕಾಗಿಯೇ. ಈ ಪಂಡಿತ ಯತಿಗಳ ಉಲ್ಲೇಖ ಶ್ರವಣಬೆಳುಗೊಳದ ೧೪೮೧ರ ೩೬೧ನೆಯ ಶಾಸನದಲ್ಲೂ, ಮಸ್ತಕಾಭೀಷೇಕದ ಹಿನ್ನೆಲೆಯಲ್ಲಿ ೩೩೨ನೆಯ ಶಾಸನದಲ್ಲೂ ಉಕ್ತಗೊಂಡಿದೆ. ಮಧುರಕವಿ ಆ ಯತಿಗಳು ಜರುಗಿಸಿದ ಒಂದಾದರೂ ಮಸ್ತಕಾಭೀಷೇಕದಲ್ಲಿ ಪಾಲ್ಗೊಂಡಿದ್ದಿರಬೇಕು. ಗುಮ್ಮಟ ಸ್ತುತಿ ರಚಿಸಿರಬೇಕು. ತನ್ನ ಆಶ್ರಯದಾತನ ದೀಕ್ಷಾ ಗುರುವಾದ್ದರಿಂದ ಈ ಪಂಡಿತಯತಿಗಳ ಬಗೆಗಿನ ಮಧುರಕವಿಯ ಗೌರವ ಸ್ವಾಭಾವಿಕವೇ. ೧೩೯೮ರ ಜನವರಿ ೩೧ರಂದು ಈ ಪಂಡಿತಯತಿ ಸಮಾಧಿಸ್ಥರಾದರು.

## ಧರ್ಮಭೂಷಣ ಗುರುಗಳ ಪ್ರಭಾವಲಯ

ಧರ್ಮನಾಥ ಪುರಾಣದ ಆರಂಭದಲ್ಲಿ ಮಧುರಕವಿ ಜೈನಯತಿ ಪರಂಪರೆಯನ್ನು ಸ್ಮರಿಸಿರುವುದು ಮೇಲಿನ ಪರಿಶೀಲನೆಯಿಂದ ವಿದಿತವಾಗಿದೆ. ಭೂತಬಲಿ, ಪುಷ್ಪದಂತ, ಪೂಜ್ಯಪಾದ, ಗುಣಭದ್ರ, ಕುಂದಕುಂದಾಚಾರ್ಯ, ಕವಿಪರಮೇಷ್ಠಿಗಳ ಅನಂತರ ಧರ್ಮಭೂಷಣಯತಿ, ವರ್ಧಮಾನ ಮುನೀಂದ್ರರನ್ನು ಕವಿ ಸ್ತುತಿಸಿದ್ದಾನೆ. (೧-೨೫-೩೦) ಧರ್ಮಭೂಷಣ ಯತಿಗಳನ್ನು ಕುರಿತ ಅವನ ಎರಡು ಪದ್ಯಗಳು ಹೀಗಿವೆ;

ಪೋಷಿಸುಗೆಮ್ಮಂ ಸಲೆ ನಿ
ರ್ದೋಷಿ ಬಲತ್ಕಾರ ಗಣ ಗಲಿಷ್ವರ್ ಕರುಣಾ
ಭೂಷಣರ ಮಳಿನ ಜಿನಮತ
ಭೂ ಪರೆನೆ ನೆಗಳ್ದು ಧರ್ಮ ಭೂಷಣದೇವರ್ ॥

ಗುಣಗಣಮುಗ್ರ ಸಂಯಮ ವಿಭೂಷಣ ಮುಕ್ತಿ ವಾನಗ್ಧ ಕರ್ಣಭೂ
ಷಣಮುರುಕೀರ್ತಿ ದಿಗ್ವರವಿಭೂಷಣ ಮಾತ್ಮನುತಂ ದಯಾವಿಭೂ
ಷಣ ಮಮಲಾಘ್ರಿ ಭವ್ಯಜನಭಾಳ ವಿಭೂಷಣಮಾದ ಧರ್ಮಭೂ
ಷಣ ಯತಿ ಚಕ್ರವರ್ತಿಯ ಚರಿತ್ರಮ ಭೂಭುವನೈಕ ಭೂಷಣಂ ॥

(೧-೨೫, ೨೬)

ಧರ್ಮಭೂಷಣ ಯತಿಗಳ ಬಗ್ಗೆ ಮಧುರಕವಿಗಿದ್ದ ಅಪಾರ ಗೌರವ ಇದರಿಂದ ವೇದ್ಯ. ಬಲತ್ಕಾರ ಗಣಕ್ಕೆ ಸೇರಿದ ಅವರು ಭವ್ಯಜನಗೌರವ ಪಾತ್ರರು ; ಯತಿ ಚಕ್ರವರ್ತಿಯಾಗಿದ್ದ ಅವರ ಕೀರ್ತಿ ದಿಗ್ವ್ಯಾಪಕ. ಮುಂದುವರಿದು ಮಧುರ "ಸಕಲಾವನಿಪತಿ ಚೂಡಾಸೇವಿತ ಚರಣ ಧರ್ಮಭೂಷಣ ಗುರು" (ಧರ್ಮಪು, ೧-೨೭) ಎಂದು ಹೇಳುವಲ್ಲಿ ಅವರ ಪಾದಗಳಿಗೆ ರಾಜರು ತಲೆಯಿಟ್ಟು ನಮಸ್ಕರಿಸುತ್ತಿದ್ದುದು ವ್ಯಕ್ತವಾಗುತ್ತದೆ. ಇದು ಧರ್ಮಭೂಷಣರ ಪ್ರಭಾವ, ಚಾರಿತ್ರಗಳ ದ್ಯೋತಕ. ಇಂಥ ಯತಿವರೇಣ್ಯರಿಗೆ ವರ್ಧಮಾನ ಮುನೀಂದ್ರ "ಸಿಂಹಾಸನಮನೆಸಗಿದಂ" (೧-೨೭) ಎಂದು ಕವಿ ಹೇಳುತ್ತಾನೆ. ಮುಂದಿನ ಪದ್ಯ ವರ್ಧಮಾನ ಮುನೀಂದ್ರರನ್ನು ಕುರಿತದ್ದು;

ಜಿನಧರ್ಮಂ ವರ್ಧಮಾನಂ ಗುಣಗಣಮನಿತುಂ ವರ್ಧಮಾನಂ ತಪಸ್ಸಾ
ಧನಧೈರ್ಯಂ ವರ್ಧಮಾನಂ ನಿಯಮವಿಧಿ ಸದಾ ವರ್ಧಮಾನಂ ಸುವಿದ್ಯಾ
ಧನಮೆಂದುಂ ವರ್ಧಮಾನಂ ತ್ರಿಜಗದೊಳದಱಿಂ ವರ್ಧಮಾನಾಭಿಧಾನಂ
ತನಗೇಕಚ್ಛತ್ರ ಮಾದುನ್ನತಿಯೊಳೆ ನೆಗಳ್ದಾ ವರ್ಧಮಾನ ವ್ರತೀಂದ್ರಂ ॥

(೧-೨೮)

ಗುಣಸಮೂಹ, ತಪೋಗ್ರತೆ, ನಿಯಮಬದ್ಧ ಮುನಿಧರ್ಮಾಚರಣೆ, ವಿದ್ಯಾರ್ಜನೆಗಳ ವೃದ್ಧಿ, ವಿಕಾಸಗಳಿಂದ ವರ್ಧಮಾನ ವ್ರತಿಯ ಹೆಸರು ಅನ್ವರ್ಥವಾಯಿತು. ಅವರು ತಮ್ಮ ತಪೋಗ್ನಿಯಿಂದ ಕಾಮನನ್ನು ಸುಟ್ಟು ಅವನಿಗೆ ಮರುಹುಟ್ಟನ್ನೇ ತಪ್ಪಿಸಿದರು. (ಧರ್ಮಸು; ೧-೨೯) ಎಂಬುದು ಮಧುರನ ಸ್ತುತಿ. ಇದಾದ ಬಳಿಕ ತಿಂಗಳಿಗೊಮ್ಮೆ ಒಂದು ಕುಡಿತೆ ಹಾಲು ಮಾತ್ರ ಸ್ವೀಕರಿಸಿ, ಮಳೆಗಾಳಿ ಬಿಸಿಲುಗಳಿಗೆ ಅಳುಕದೆ ದೇಹವನ್ನು ಒಡ್ಡಿ ಮುಕ್ತಿಶ್ರೀಗೆ ನಿತ್ಯಾವಾಸಿಯಾದ ನಂದಿಮುನಿ (=ಸಿಂಹನಂದಿ ಮುನಿ) ಯೋಗೀಂದ್ರನನ್ನು ಕವಿ ಸ್ಮರಿಸಿದ್ದಾನೆ. ಒಟ್ಟಿನಲ್ಲಿ ಕುಂದಕುಂದಾಚಾರ್ಯ, ಧರ್ಮಭೂಷಣ, ವರ್ಧಮಾನ ಮುನೀಂದ್ರ, ಸಿಂಹನಂದಿಗಳ ಬಲಾತ್ಕಾರಗಣ ಯತಿ ಪರಂಪರೆಯನ್ನು ಪೂಜ್ಯಭಾವದಿಂದ ಮಧುರ ನೆನೆದಿದ್ದಾನೆ.

ಹಂಪೆಯ ಗಾಣಿಗಿತ್ತಿ ಬಸದಿಯ ಮುಂದಿನ ಮಾನಸ್ತಂಭದ ಮೇಲೊಂದು ಶಾಸನ ಬರೆಹವಿದೆ. (ಹಂಪಿ ಶಾಸನಗಳು, ಕವಿ.ವಿ. ಶಾಸನ ಸಂಪುಟ-೩, ಹಂಪಿ, ೨೦೦೦, ಸಂಖ್ಯೆ ೩೫೦, ಪು ೨೫೩-೫೫). ಈ ಶಾಸನದ ಕಾಲ ೧೩೮೫ರ ಫೆಬ್ರವರಿ ೨೬. ಇದರಲ್ಲಿ ಮಧುರನ ಧರ್ಮನಾಥ ಪುರಾಣದಲ್ಲಿ ಕಂಡುಬರುವ ಮೂಲಸಂಘದ ಬಲಾತ್ಕಾರ ಗಣದ ಯತಿಪರಂಪರೆಯಿದೆ. ಕುಂದಕುಂದ, ಗೃಧ್ರಪಿಂಛ, ಧರ್ಮಭೂಷಣ, ಅಮರಕೀರ್ತಿ, ವರ್ಧಮಾನ ಮುನೀಂದ್ರ, ಸಿಂಹನಂದಿ, ಎರಡನೆಯ ಧರ್ಮಭೂಷಣರೆಂದು ಯತಿ ಅನುಕ್ರಮಣಿಕೆಯಿದೆ. ಮೊದಲನೆಯ ಧರ್ಮಭೂಷಣರನ್ನು ಚಾರಿತ್ರರತ್ನ ರತ್ನಾಕರ, ಯೋಗೀಂದ್ರ ಭಟ್ಟಾರಕ, ಗುಣಭೂಷಣರೆಂದಿದೆ. ಇದು ಧರ್ಮಭೂಷಣರ ಬಗ್ಗೆ

ಮಧುರನ ಹೇಳುವ ಜಿನಮತ ಭೂಷಣ, ಗುಣಗಣಮುಗ್ರ ಸಂಯನ ವಿಭೂಷಣವೆಂಬುದನ್ನು ನೆನಪಿಸುತ್ತದೆ. ಸಿಂಹನಂದಿಯೋಗೀಂದ್ರ ಚರಣಾಂಬುಜ ಷಟ್ಪದ ಎಂದು ವರ್ಧಮಾನ ಮುನೀಂದ್ರರನ್ನು ಉಲ್ಲೇಖಿಸಿದೆ. ಎರಡನೆಯ ಧರ್ಮಭೂಷಣ ಭಟ್ಟಾರಕರನ್ನೂ ರಾಜಗೌರವ ಪಾತ್ರನೆಂದಿದೆ. ಮೊದಲನೆಯ ಧರ್ಮಭೂಷಣರು, ಎರಡನೆಯ ಧರ್ಮಭೂಷಣರಿಗಿಂತ ಹಿಂದೆ, ಅಂದರೆ ಮೊದಲನೆಯ ಬುಕ್ಕರಾಯನ ಕಾಲವಾದ ೧೩೫೬–೭೭ರ ಅವಧಿಯಲ್ಲಿ ಇದ್ದಿರಬೇಕು. ಇವರು ಆ ಕಾಲದ ಅತ್ಯಂತ ಪ್ರಭಾವೀ ಯತಿಗಳು, ಹಂಪೆಯ ಕೋಟಿಲಿಂಗನ ಬಳಿಯ ರಘುನಂದನ ತೀರ್ಥದ ಎದುರು ಕಲ್ಲಿನ ಮೇಲೆ "ಶ್ರೀ ಧರ್ಮ ಭೂಷಣ ಭಟ್ಟಾರಕ ದೇವರ ಪಾದ" ಎಂದಿದೆ. (ಹಂಪಿಶಾಸನಗಳು ಕವಿವಿ ಶಾಸನ ಸಂಪುಟ, ೩, ಪೂರ್ವೋಕ್ತ, ಸಂಖ್ಯೆ ೧೫೬, ಪು.೧೨೨) ಇದು ಮೊದಲನೆಯ ಧರ್ಮಭೂಷಣರನ್ನು ಕುರಿತದ್ದೇ.

ಶ್ರವಣಬೆಳುಗೊಳದ ಅಖಂಡಬಾಗಿಲಿನ ಬಳಿ ಹಲವಾರು ಶಾಸನಗಳಿವೆ. ಅಖಂಡ ಬಾಗಿಲಿನ ಬಲಗಡೆ ಗುಂಡಿನ ಮೇಲೆ ೩೮೦ನೆಯ ಸಂಖ್ಯೆಯ ಶಾಸನವಿದೆ. ಇದರ ಕಾಲ ೧೩೭೨ರ ಏಪ್ರಿಲ್ ೭ನೆಯ ತಾರೀಖು (ಎಕ, ೨, ಮೈಸೂರು, ೧೯೭೩, ಸಂಖ್ಯೆ ೩೮೦, ಪು ೨೪೩) ಇದು ಬುಕ್ಕರಾಯನ ಆಳ್ವಿಕೆಯ ಅವಧಿಯ ಕಾಲ. ಒಂದೆರೆಡು ಹೆಸರನ್ನುಳಿದರೆ ಈ ಶಾಸನದಲ್ಲಿ ಹಂಪಿಯ ಗಾಣಿಗಿತ್ತಿ ಶಾಸನದಲ್ಲಿ ಬರುವ ಯತಿಪರಂಪರೆ ಒಂದೇ. ಲಲಿತಕೀರ್ತಿ, ವಿಶಾಲಕೀರ್ತಿ, ಶುಭಕೀರ್ತಿ, ಧರ್ಮಭೂಷಣ, ಅಮರಕೀರ್ತಿಯರ ಅನುಕ್ರಮಣಿಕೆ ಇಲ್ಲಿದೆ. ಇವರ ಶಿಷ್ಯರನ್ನು ಉಲ್ಲೇಖಿಸಿರುವ ಭಾಗ ಪ್ರಕಟವಾಗಿದೆ. "ಮಾರ್ತಂಡ ಮಂಡಲಾನಾಂ ಭಟ್ಟಾರಕ ಧರ್ಮಭೂಷಣ ದೇವಾನಾಂ" ಎಂದು ಧರ್ಮಭೂಷಣರನ್ನು ಹಾಗೂ "ತತ್ತ್ವಾರ್ಥ ವಾರ್ಧಿವರ್ಧನ ಮಹಿಮಾಂಶುನಾ.. ವರ್ಧಮಾನ ಸ್ವಾಮಿನಾಂ" ಎಂದು ವರ್ಧಮಾನ ಸ್ವಾಮಿಯನ್ನು ಹೆಸರಿಸಿದೆ. ಧರ್ಮಭೂಷಣ – ಅಮರಕೀರ್ತಿ – ವರ್ಧಮಾನ ಮುನೀಂದ್ರರ ಹೆಸರು, ಆನುಪೂರ್ವಿಗಳಿಂದ ಇದು ಗಾಣಿಗಿತ್ತಿ ಶಾಸನದ ಯತಿಪರಂಪರೆಯೆಂಬುದು ಖಚಿತ. ಮಧುರಕವಿ ಉಲ್ಲೇಖಿಸುವ ಧರ್ಮಭೂಷಣರ ಕಾಲಕ್ಕೂ ಈ ಶಾಸನದ ಕಾಲಕ್ಕೂ ಹೊಂದಿಕೆಯಿದೆ. ಈ ಧರ್ಮಭೂಷಣರು ಪ್ರಾಯಃ ಶ್ರವಣಬೆಳುಗೊಳಕ್ಕೆ ಬಂದಿದ್ದ ಸಂದರ್ಭದಲ್ಲಿ ಇದನ್ನು ಹಾಕಿಸಿರಬೇಕು. ಈ ಸಂಪುಟದ ಸಂಪಾದಕರು ಇದು ವರ್ಧಮಾನ ಸ್ವಾಮಿ ಧರ್ಮಭೂಷಣರಿಗೆ ಮಾಡಿಸಿದ ನಿಸಿದಿಗೆಯನ್ನು ಕುರಿತಿದೆ ಎನ್ನುತ್ತಾರೆ. (ಎಕ, ೨, ೧೯೭೩, ಪೂರ್ವೋಕ್ತ, ಪು. ೨೪೩) ಶಾಸನದ ಮುಖ್ಯಭಾಗ ತ್ರುಟಿತವಾಗಿರುವುದರಿಂದ ಇದನ್ನು ನಿರ್ವಿವಾದವೆನ್ನಲಾಗದು. ಇದೇನಿದ್ದರೂ ಮಧುರಕವಿ ಉಲ್ಲೇಖಿಸುವ ಧರ್ಮಭೂಷಣರು ಶ್ರವಣಬೆಳುಗೊಳದ ಸಂಪರ್ಕ ಹೊಂದಿದ್ದರು ಎಂಬುದು, ಶ್ರವಣ ಬೆಳುಗೊಳಕ್ಕೆ ಬಂದಿದ್ದರೆಂಬುದು ಖಚಿತ. ಇದನ್ನು ಇನ್ನಷ್ಟು ದೃಢಗೊಳಿಸುವ ಸಂಗತಿಯೊಂದು ಹೀಗಿದೆ. ಸಾರತ್ರಯ ವೇದಿ ಎಂದು ಖ್ಯಾತನಾದ ಕೇಶವವರ್ಣಿಯು ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳ ಪ್ರಾಕೃತ ಕೃತಿಯಾದ **ಗೊಮ್ಮಟಸಾರ**ಕ್ಕೆ ಕನ್ನಡದಲ್ಲಿ ವ್ಯಾಖ್ಯಾನ ಬರೆದಿದ್ದಾನೆ. ಇದನ್ನು ಆತ ೧೩೫೯ರ ಮಾರ್ಚ್ ೪ರ ಸೋಮವಾರದಂದು ಸಮಾಪ್ತಿಗೊಳಿಸಿದ.

ಇದನ್ನು ಧೀಮಂತರೂ ವಿದ್ವಾಂಸರೂ ಆದ ಧರ್ಮಭೂಷಣ ಭಟ್ಟಾರಕರ ಆಣತಿಯಂತೆ ಬರೆದು ಮುಗಿಸಿದೆ ಎಂದು ಹೀಗೆ ಹೇಳಿದ್ದಾನೆ. "ಗೊಮ್ಮಟಸಾರ ವೃತ್ತಿಯನಿದಂ ಕರ್ನಾಟ ವಾಕ್ಯಂಗಳಿಂ.. ಬುಧರ್ ಧರ್ಮ ಭೂಷಣರ ಭಟ್ಟಾರಕರ ದೇವರಾಜ್ಞೆಯಿನಿದಂ ಸಂಪೂರ್ಣಮಂ ಮಾಡಿದೆಂ" (ಕಕಚ, ೧, ಬೆಂಗಳೂರು, ೧೯೭೨, ಪು. ೪೮೪). ಕೇಶವವರ್ಣಿ ಇದ್ದುದು ಶ್ರವಣಬೆಳುಗೊಳದಲ್ಲಿ; ಅವನ ಕೃತಿಯಾದರೂ ಗೊಮ್ಮಟಸಾರದ ಕನ್ನಡ ವೃತ್ತಿ. ಇದರ ಪ್ರೇರಕರು ಮಧುರನು ಉಲ್ಲೇಖಿಸುವ ಧರ್ಮಭೂಷಣರೇ. ಈ ಧರ್ಮ ಭೂಷಣರನ್ನು ಅಕಳಂಕ, ವಾದಿಭಂಜನ, ಸರ್ವಭಾಷಾಸಮರ್ಥನೆಂದು ವೃತ್ತವಿಳಾಸ ಸ್ಮರಿಸಿದರೆ (ಧರ್ಮಪ; ೧–೨೪), ಶ್ರವಣಬೆಳುಗೊಳಕ್ಕೆ ಸಮೀಪದ ಚಿಕ್ಕಮಗಳೂರಿನಲ್ಲಿದ್ದ ಮಂಗರಾಜ ಇವರನ್ನು ಕಾಮಮದೇಭ ಕೇಸರಿ ಜಿನಾಗಮವಾರ್ಧಿ ಸುಧಾಕರ, ಭೂಮಳಿಳಾಧಿನಾಥ ಮಹಿತನೆಂದಿದ್ದಾನೆ. ಧಮಭೂಷಣರನ್ನು ಕುರಿತ ಸ್ಥಿರ, ಮುನಿಸಂಘ ಸರೋಜ ಭಾಸ್ಕರನೆಂಬ ಅವನ ಮಾತುಗಳು ಯಥಾರ್ಥವಾದವು (ಖಗೇಂದ್ರ; ೧–೧೯). ಅಂತೂ ಮಧುರಕವಿ ಹೇಳುವ ಭೂಭುವನ್ಯೆಕ ಭೂಷಣನೆಂಬ ಉದ್ಗಾರಕ್ಕನುಗುಣವಾಗಿದೆ ಧರ್ಮಭೂಷಣರ ಪ್ರಭಾವ ವ್ಯಾಪ್ತಿ, ಮಹಿಮಾಸೀಮೆ.

## ಮುದ್ದದಂಡಾಧೀಶನಿಗೆ ಪೃಥ್ವೀಶೆಟ್ಟಿ ಬಿರುದು

ಈ ಹಿಂದೆಯೇ ನೋಡಿದಂತೆ ಮಧುರಕವಿಯ ಆಶ್ರಯದಾತ ಮುದ್ದದಂಡಾಧೀಶ. ಆತನೊಬ್ಬ ಪ್ರಬಲ ಸಚಿವೋತ್ತಮ. ಆತ ಸುಮಂತ್ರನಂತಿದ್ದು; ನೀತಿನಿಮಂತ್ರಿತನೂ ಸಚಿವಾಗ್ರೇಸರನೂ ಆಗಿದ್ದ. ಆತನಿಗೆ ರಾಜ್ಯದ ಆಡಳಿತದ ಬಹು ಭಾರವನ್ನು ರಾಜ ಒಪ್ಪಿಸಿದ್ದ. ಮುದ್ದದಂಡೇಶ ಅನೇಕ ಅಗ್ರಹಾರಗಳನ್ನು ನಿರ್ಮಾಪಿಸಿದ್ದ. ಉಚ್ಚಂಗಿಯ ಚಿಕ್ಕ ಹದಕವನ್ನು ಮುದ್ದದಂಡನಾಯಕಪುರವೆಂಬ ಅಗ್ರಹಾರವಾಗಿ ಪರಿವರ್ತಿಸಿದ್ದ. ಇದು ೧೩೭೯ರ ದಾವಣಗೆರೆಯ ಶಾಸನದಿಂದ ತಿಳಿಯುತ್ತದೆ. (ಎಕ, IX ೧೯೦೨, ದಾವಣ, ೩೪, ಪು. ೯೭–೧೦೧.)

೧೫ನೇ ಶತಮಾನದ ಅನಂತರದ ಶ್ರವಣಬೆಳುಗೊಳದ ಶಾಸನಗಳಲ್ಲಿ ಒಂದು ಮಹತ್ತ್ವಪೂರ್ಣ ಬದಲಾವಣೆ

ಕಾಣುತ್ತದೆ. ಆವರೆಗೆ ಇದ್ದ ಯತಿಗಳ, ಮುನಿಗಳ, ಸಂನ್ಯಾಸಿಗಳ, ಮಠಾಧಿಪತಿಗಳ ಪ್ರಾಬಲ್ಯ ಕ್ಷೀಣಿಸಿ, ವರ್ತಕರ ಅಧಿಪತ್ಯ ಗೋಚರಿಸುತ್ತದೆ. ಇದನ್ನು ಎಸ್. ಶೆಟ್ಟರ್ ಈಗಾಗಲೇ ಗುರುತಿಸಿದ್ದಾರೆ. (S. Settar : **Inviting Death,** Dharwar, 1986, pp.79-89.) ಶ್ರವಣಬೆಳುಗೊಳದ ೩೩೭ನೆಯ ಶಾಸನದ ಕಾಲ ಸು. ೧೨ನೇಯ ಶತಮಾನ. ಇದರಲ್ಲಿ ಚತುರ್ವಿಂಶತಿ ತೀರ್ಥಂಕರರ ಅಷ್ಟವಿಧಾರ್ಚನೆಗೆ ಅನೇಕ ಸೆಟ್ಟಿಗಳು ದಾನವಿತ್ತಿದ್ದಾರೆ; ಇದರ ಮುಂದಿನ ಶಾಸನದಲ್ಲಿ ಕೂಡ ಬಸವಿಸೆಟ್ಟಿ ಮಾಡಿಸಿದ ತೀರ್ಥಂಕರ ಪ್ರತಿಮೆಗೆ ದಾನವಿತ್ತಿದೆ. ೩೫೬ನೆಯ ಶಾಸನದಲ್ಲಿ ಇದು ಮತ್ತೆ ಕಾಣಿಸಿಕೊಂಡಿದೆ. ಕ್ಷೇತ್ರವನ್ನು, ಮಠವನ್ನು ಒತ್ತೆಯಿಟ್ಟುಕೊಂಡ ನಿದರ್ಶನಕ್ಕೆ ಅಲ್ಲಿ ಅನೇಕ ಶಾಸನಾಧಾರಗಳಿವೆ. ಜೈನ ವೈಷ್ಣವ ಘರ್ಷಣೆಯಲ್ಲಿ ಕಲ್ಲೆಹದ ಬಸವಿಸೆಟ್ಟಿ ಸಂಘನಾಯಕನಾಗಿ ಪ್ರಮುಖ ಪಾತ್ರ ವಹಿಸಿದ. ಇದನ್ನು ಹೇಳುವ ಶಾಸನದ ಕಾಲ ೧೩೬೮ (ಎಕ; ೨, ಮೈಸೂರು, ೧೯೭೩, ಸಂಖ್ಯೆ ೪೭೫.) ಆ ವ್ಯಾಜ್ಯ ನಿರ್ಣಯದಲ್ಲಿ ಸೆಟ್ಟಿಗಳು ಹೆಚ್ಚು ಓಡಾಡಿದ್ದಾರೆ. ರಾಜನಿಗೆ ಹತ್ತಿರವಿದ್ದ ಮಂತ್ರಿಗಳನ್ನು, ದಂಡನಾಯಕರನ್ನು ಅವರು ಇಂಥ ಸಂದರ್ಭದಲ್ಲಿ ಹೆಚ್ಚು ಅವಲಂಬಿಸಿದ್ದಿರಬೇಕು.

ಶ್ರವಣಬೆಳುಗೊಳಕ್ಕೆ ಬೇಲೂರು ತುಂಬ ಸಮೀಪ. ಮುದ್ದದಂಡನಾಯಕನಿಗೆ ಸಂಬಂಧಿಸಿದ ಒಂದು ತಾಮ್ರಶಾಸನ ಬೇಲೂರಿನ ಕೇಶವ ದೇವಸ್ಥಾನದಲ್ಲಿ ದೊರೆತಿದೆ. ಇದರ ಕಾಲ ೧೩೮೨ರ ನವೆಂಬರ್ ೧. ಇಲ್ಲಿ ಮುದ್ದದಂಡೇಶನನ್ನು ಸುಮಂತ್ರ, ಯೌಗಂಧರಾಯಣರಿಗೆ ಹೋಲಿಸಿದೆ; ಕಲಿಯುಗ ಧರ್ಮೋದ್ಧಾರಕ, ಧರ್ಮಪ್ರತಿಪಾಲಕ, ಸತ್ಯಕೀರ್ತಿ ಎಂದಿದೆ. ಸಾಲುಮೂಲೆ ಬಣಜಿಗರು ವಿರೂಪಾಕ್ಷನ ಸನ್ನಿಧಿಯಲ್ಲಿ ವಜ್ರಬೈಸಣಿಗೆ ಮೇಲೆ ಮುದ್ದದಂಡೇಶನನ್ನು ಕೂರಿಸಿ ಏಕಮತದಿಂದ "ಮುದ್ದಯ್ಯ ದಣ್ಣಾಯಕರು ನಮ್ಮ ಛಪ್ಪನ್ನ ದೇಶದ ಆಚಾರ ವಿಚಾರಕ್ಕೆ ಕರ್ತೃರಾದವರಾಗಿ ನಾವು ಅವರಿಗೆ ಪೃಥಿವೀಶೆಟ್ಟಿತನವ ಕೊಟ್ಟು ಒಂದು ಸ್ವಾಮ್ಯವನ್ನು ಕೊಟ್ಟೆವು" ಎಂದು ಹೇಳಿ ತಮ್ಮ ಆದಾಯದಲ್ಲಿ ಒಂದು ಭಾಗವನ್ನು ಆತನಿಗೆ ನೀಡಿದ್ದಾರೆ. (ಎಕ, IX, ಮೈಸೂರು, ೧೯೯೦, ಬೇಲೂರು ೧೭೧, ಪು. ೧೩೮ -೪೨). ಇದು ತತ್ಕಾಲದ ವರ್ತಕವರ್ಗದ ಮೇಲೆ ಮುದ್ದದಂಡೇಶ ಹೊಂದಿದ್ದ ಹಿಡಿತ, ಪ್ರಭಾವ ತೋರುತ್ತದೆ. ಇಲ್ಲಿ ವರ್ತಕರ ಹೆಸರಿಲ್ಲ; ಆದರೆ ಅವರ ಪ್ರದೇಶಗಳು ಉಕ್ತಗೊಂಡಿವೆ. ಕಂಚಿ, ಉದಯಗಿರಿ, ಚಂದ್ರಗಿರಿಗಳಲ್ಲದೆ ಮಂಗಳೂರು, ಬಾರಕೂರು, ಹೊನ್ನಾವರ, ಚಂದಾವರ, ಚಂದ್ರಗುಡಿಗಳು ಇಲ್ಲಿ ಸೇರಿವೆ. ದೂರದ ಅಣ್ಣಿಗೆರೆ, ಚಿತ್ರದುರ್ಗ, ತರೀಕೆರೆಗಳಿವೆ; ಹತ್ತಿರದ ದ್ವಾರಸಮುದ್ರ, ಶ್ರೀರಂಗಪಟ್ಟಣಗಳಿವೆ. ಸ್ವಾರಸ್ಯದ ಸಂಗತಿ ಎಂದರೆ ವಿಜಯನಗರ, ಆನೆಗೊಂದಿ (ಹಸ್ತಿನಾವತಿ), ಪೆನುಗೊಂಡ, ಕಲ್ಯಗಳ ನಕರಗಳೂ ಇಲ್ಲಿದ್ದಾರೆ. ಈ ನಾಲ್ಕು ಪ್ರದೇಶಗಳು ಶ್ರವಣಬೆಳುಗೊಳದ ಬುಕ್ಕರಾಯನ ಶಾಸನದಲ್ಲಿ ಉಕ್ತವಾದವು ಎಂಬುದು ಸ್ಪಷ್ಟವೇ ಇವೆ. ಅಂತೂ ಮಧುರಕವಿಯ ಆಶ್ರಯದಾತ ತತ್ಕಾಲದ ಮಂತ್ರಿ ಶ್ರೇಷ್ಠನೂ, ವರ್ತಕವರ್ಗದ ಮೇಲೆ ಅಧಿಕಾರ ಹೊಂದಿದ್ದು ಗೌರವಕ್ಕೆ ಪಾತ್ರನಾದವನೂ ಆಗಿದ್ದಾನೆ.

ಮಧುರಕವಿ ದೂರದ ವಿಜಯನಗರದಲ್ಲಿದ್ದರೂ ಶ್ರವಣಬೆಳುಗೊಳದ ಯತಿಗಳ ಸಂಪರ್ಕ ಹೊಂದಿದ್ದು, ಅಲ್ಲಿ ನಡೆದ ಘಟನೆಗಳನ್ನು ಬಲ್ಲವನಾಗಿದ್ದ; ಆ ಕ್ಷೇತ್ರಕ್ಕೆ ಭೇಟಿಯಿತ್ತಿದ್ದ. ಅವನ ಕಾಲ ಸು. ೧೩೮೫. ಶ್ರವಣಬೆಳುಗೊಳದ ಜೈನಧರ್ಮದ ಏರಿಳಿತಗಳನ್ನು ಅರಿಯಲು ಅವನ ಕೃತಿಯಲ್ಲಿ ಸುಳುಹುಗಳಿವೆ. ಆ ಸಂಬಂಧವಾದ ಪರಿಶೀಲನೆ ಪ್ರತ್ಯೇಕ ಪ್ರಬಂಧದ ವಿಷಯವೇ ಸರಿ.

❑❑

# ಕಂಪಣನ ಕಾಲದ ಮುಳಬಾಗಿಲು

– ಕೆ.ಆರ್. ನರಸಿಂಹನ್

ವಿಜಯನಗರದ ಅರಸರ ಆಳ್ವಿಕೆಯಲ್ಲಿ ಇಂದಿನ ಮುಳಬಾಗಿಲನ್ನು ಕೇಂದ್ರಸ್ಥಾನವಾಗಿ ಹೊಂದಿದ ಮುಳವಾಯಿ ರಾಜ್ಯವು ಸಾಕಷ್ಟು ವಿಶಾಲವಾಗಿದ್ದು ಪ್ರಸಿದ್ಧಿಯನ್ನು ಹೊಂದಿತ್ತು. ಇದನ್ನು ರಾಜನಿಂದ ನಿಯುಕ್ತವಾದ ಯುವರಾಜನು ಆಳುತ್ತಿದ್ದನು. ಮುಳವಾಯಿ ರಾಜ್ಯವು ಅವಿಭಜಿತ ಕೋಲಾರ ಜಿಲ್ಲೆಯ ಪ್ರಮುಖವಾದ ತಾಲೂಕುಗಳನ್ನು ಒಳಗೊಂಡಿತ್ತು. ಇದಲ್ಲದೆ ಬೆಂಗಳೂರು ಜಿಲ್ಲೆಯ ಪ್ರಮುಖ ಪ್ರದೇಶಗಳು, ತಮಿಳುನಾಡಿನ ಸೇಲಂ, ಧರ್ಮಪುರಿ– ಉತ್ತರ ಹಾಗೂ ದಕ್ಷಿಣ ಆರ್ಕಾಟ್ ಜಿಲ್ಲೆಗಳ ವ್ಯಾಪ್ತಿಯನ್ನು ಹೊಂದಿ ಸಾಕಷ್ಟು ಪ್ರಖ್ಯಾತವಾದದ್ದಾಗಿತ್ತು ವಿಜಯನಗರದ ಆರಂಭದ ಅರಸರಲ್ಲಿ ಹರಿಹರನ ತಮ್ಮನಾದ ಒಂದನೆಯ ಕಂಪಣನು, ಬುಕ್ಕನ ಮಗನಾದ ಎರಡನೆಯ ಕಂಪಣರಾಯನು ಮುಳವಾಯಿ ರಾಜ್ಯದ ಅಧಿಕಾರ ಹೊಂದಿದ್ದನ್ನು ಇತಿಹಾಸದ ಅಧ್ಯಾಯದಲ್ಲಿ ನೋಡುತ್ತೇವೆ. ಇವರಲ್ಲಿ ಇಮ್ಮಡಿ ಕಂಪಣರಾಯನ ಆಳ್ವಿಕೆಯ ಕಾಲದ ಅಂದರೆ ಕ್ರಿ.ಶ. ೧೩೫೬ ರಿಂದ ೧೩೬೫ ರವರೆಗಿನ ಕಾಲವು ಮುಖ್ಯ ಘಟ್ಟವಾಗಿತ್ತು. ಕಂಪಣನು ತನ್ನ ಮಧುರೆಯ ಸಾಹಸದ ಯಾತ್ರೆಯನ್ನು ಆರಂಭಿಸಿದ ಪ್ರಮುಖ ಚಾರಿತ್ರಿಕ ಮಹತ್ವ ಸ್ಥಳವಾಗಿ ಇಂದಿನ ಮುಳಬಾಗಿಲು ಐತಿಹಾಸಿಕ ಪರಂಪರೆಯನ್ನು ಗಳಿಸಿಕೊಂಡಿದೆ. ಕಂಪಣರಾಯನ ರಾಣಿಯಾದ ಗಂಗಾದೇವಿಯು ಈತನ ದಿಗ್ವಿಜಯವನ್ನು 'ಮಧುರಾವಿಜಯ' ವೆಂಬ ತನ್ನ ಸಂಸ್ಕೃತ ಕಾವ್ಯದಲ್ಲಿ ಉತ್ಕೃಷ್ಟವಾದ ರೀತಿಯಲ್ಲಿ ದಾಖಲಿಸಿದ್ದು ಚಾರಿತ್ರಿಕ ಅಧ್ಯಯನಾಸಕ್ತರಿಗೆ ಉಪಯುಕ್ತವಾದ ಕೃತಿಯೂ ಆಗಿದೆ.

ವಿಜಯನಗರದ ಅರಸರಿಗೆ ದಕ್ಷಿಣ ಭಾರತದ ಪ್ರಮುಖ ರಾಜವಂಶಗಳ ಮೇಲಿನ ಆಕ್ರಮಣಕ್ಕೆ ಮುಳವಾಯಿ ರಾಜ್ಯವು ಪ್ರಮುಖವಾದ ಹರಿದಾರಿಯಾಗಿತ್ತು. ಮುಳಬಾಗಿಲು, ಟೇಕಲ್, ಧರ್ಮಪುರಿ ಮೊದಲಾದ ಸ್ಥಳಗಳ ಮೂಲಕವಾಗಿ ದಕ್ಷಿಣದ ರಾಜರ ಮೇಲೆ ಆಕ್ರಮಣಗಳನ್ನು ಕೈಗೊಂಡು ಶತ್ರು ರಾಜರ ಪ್ರದೇಶಗಳನ್ನು ತಮ್ಮದನ್ನಾಗಿಸಿಕೊಂಡು ದೊಡ್ಡ ಸಾಮ್ರಾಜ್ಯವನ್ನಾಗಿ ಮಾಡಿಕೊಳ್ಳುವ ಅವರ ಹಂಬಲದ ಮೊದಲ ಯಶಸ್ವಿ ಪ್ರಯೋಗವಾಗಿ ಕಂಪಣರಾಯನ ಮಧುರೆಯ ಸುಲ್ತಾನರ ಮೇಲಿನ ಆಕ್ರಮಣವೇ ಇತಿಹಾಸದಲ್ಲಿ ಪ್ರಸಿದ್ಧಿಗಳಿಸಿದೆ. ಮುಳಬಾಗಿಲನ್ನು ತಮ್ಮ ಪೂರ್ವದಿಕ್ಕಿನ ರಾಜ್ಯದ ಪ್ರಮುಖ ಸ್ಥಳವಾಗಿ ಆಯ್ಕೆಮಾಡಿಕೊಂಡ ಹಿನ್ನೆಲೆಯೂ ಸದೃಢವಾದದ್ದೆನ್ನಬಹುದು. ಮೊದಲಿನಿಂದಲೂ ಕಂಚಿಯ ಪಲ್ಲವರು, ತಂಜಾವೂರಿನ ಚೋಳರು, ಇದಕ್ಕೆ ಮುಂಚಿನ ಬಾಣರಾಜರು ಕರ್ನಾಟಕದ ಪ್ರಮುಖ ಸಾಮ್ರಾಜ್ಯಗಳ ಮೇಲಿನ ಆಕ್ರಮಣಕ್ಕೆ ಮುಳಬಾಗಿಲು ಹೆದ್ದಾರಿಯಾಗಿತ್ತು. ಇದರಿಂದಾಗಿ ಮುಳಬಾಗಿಲಿನ ಪೂರ್ವದಕ್ಷಿಣ ಉತ್ತರ ದಿಕ್ಕುಗಳಲ್ಲಿ ಕಾಳಗದ ಗೋಡೆಯೊಂದು ನಿರ್ಮಾಣವಾಗಿತ್ತೆನ್ನಬಹುದು. ಈ ಕಾರಣಕ್ಕಾಗಿಯೇ ಮುಳಬಾಗಲಿನ ಉತ್ತರದ ಶ್ರೀನಿವಾಸಪುರ, ದಕ್ಷಿಣದ ಬಂಗಾರಪೇಟೆ, ಮಾಲೂರು ತಾಲ್ಲೂಕುಗಳಲ್ಲಿ ಅನೇಕ ಐತಿಹಾಸಿಕ ಸ್ಮಾರಕಗಳನ್ನು ಕಾಣಲು ಸಾಧ್ಯವಾಗಿದ್ದು ನೂರಾರು ವೀರಗಲ್ಲುಗಳು, ಸಂಗ್ರಾಮ ಶಿಲೆಗಳು, ಇಲ್ಲಿನ ಸಾಹಸದ ಕಥೆಯನ್ನು ಹೇಳುತ್ತಿವೆ. ಇಂತಹದೊಂದು ದಟ್ಟವಾದ ಚಾರಿತ್ರಿಕ ಹಿನ್ನೆಲೆಯಲ್ಲಿ ಮುಳುವಾಯಿ ರಾಜ್ಯದ ವೀರಪರಂಪರೆಯ ಪ್ರತಿನಿಧಿಯಾದ ವೀರಕಂಪಣರಾಯನು ಕಂಟಕಾನನದ ಕಂಟಕದ್ವಾರದಿಂದ ತನ್ನ ಸಾಹಸಯಾತ್ರೆಗಳನ್ನು ಕೈಗೊಂಡಿದ್ದಾನೆ.

ವಿಜಯನಗರ ಸಾಮ್ರಾಜ್ಯವನ್ನಾಳಿದ ನಾಲ್ಕು ರಾಜವಂಶಗಳಲ್ಲಿ ಮೊದಲನೆಯದು ಮತ್ತು ಹೆಚ್ಚು ಕಾಲಾವಧಿ, (ಕಾಲ ಕ್ರಿ.ಶ. ೧೩೩೬ ರಿಂದ ೧೪೮೫) ಬಾಳಿಹೋದದ್ದು ಸಂಗಮವಂಶ. ಸಾಮ್ರಾಜ್ಯ ಸ್ಥಾಪನೆಯ ಗೊಂದಲಗಳನ್ನು ನಿವಾರಿಸಿಕೊಂಡು ಸಂಗಮನ ಐವರು ಮಕ್ಕಳು ಈ ಸಾಮ್ರಾಜ್ಯವನ್ನು ಕಟ್ಟಲು ಸಾಕಷ್ಟು ಕಷ್ಟಗಳನ್ನು ಅನುಭವಿಸಿದರು. ಇವರ ಆಡಳಿತದ ಆರಂಭದ ದಿನಗಳಲ್ಲಿ ಉತ್ತರದಿಂದ ದಕ್ಷಿಣದವರೆಗೆ ತಮ್ಮ ನಿರಂತರ ಆಕ್ರಮಣಗಳಿಂದ ಜನಜೀವನವನ್ನು ಅಸ್ಥಿರಗೊಳಿಸಿದ್ದ ಮುಸಲ್ಮಾನ್ ದೊರೆಗಳನ್ನು ಹತ್ತಿಕ್ಕುವುದು ಇವರಿಗೆ ಪ್ರಯಾಸದಂತಾಯಿತು. ಇದರೊಂದಿಗೆ ಉತ್ತರದಲ್ಲಿ ಸಂಕಷ್ಟಕ್ಕೆ ಸಿಲುಕಿದ್ದ ಜ್ಞಾನಶಾಖೆಗಳ ಸಂರಕ್ಷಣೆಯನ್ನು ಮಾಡಬೇಕಾಗಿತ್ತು. ಇಂತಹ ಸಾಹಸಕಾರ್ಯಗಳಿಗೆ ಟೊಂಕಕಟ್ಟಿ ನಿಂತ ಸಂಗಮನ ಮಕ್ಕಳು ಅವರ ಮಕ್ಕಳು ವಿಜಯನಗರ ಇತಿಹಾಸದ

೨೦೩, 'ಸಿಂಚನ', ೧ನೇ ಮುಖ್ಯರಸ್ತೆ, ಮಾರುತಿನಗರ, ಯಲಹಂಕ, ಬೆಂಗಳೂರು – ೫೬೦ ೦೬೪

ಕ್ರಾಂತಿಪುರುಷರಾಗಿದ್ದಾರೆ. ಇವರಲ್ಲಿ ಬುಕ್ಕರಾಯನ ಕಾಲವು ಮಹತ್ತರ ಘಟನೆಗಳ ಸಾಕ್ಷಿಯಾಗಿ ಉಳಿದಿದೆ. ಈತನ ಕಾಲದಲ್ಲಿ ವೇದ ಭಾಷ್ಯಗಳ ರಚನೆಗೆ ಚಾಲನೆ ದೊರೆಯಿತು. ಈತನ ಮಗ ಕಂಪಣರಾಯನು ತಮಿಳುರಾಜ ಚಂಗಲರಾಯನನ್ನು ಸದೆಬಡಿದುದ್ದಲ್ಲದೆ, ದಕ್ಷಿಣ ಭಾಗಕ್ಕೆ ಕಂಟಕನಂತಿದ್ದ ಮಧುರೆಯ ಸುಲ್ತಾನನ್ನು ನಿಗ್ರಹಿಸಿದವನಾಗಿದ್ದಾನೆ.

ಕಂಪಣರಾಯನು ಕರ್ನಾಟಕದ ಅವಿಸ್ಮರಣೀಯವಾದ ವಿಜಯನಗರ ಸಾಮ್ರಾಜ್ಯದ ರಾಜಪ್ರತಿನಿಧಿಯಾಗಿ ಮುಳವಾಯಿ ರಾಜ್ಯವನ್ನು ಮುನ್ನಡೆಸಿದವನಾದರೂ, ಇವನ ಚಾರಿತ್ರಿಕ ಬದುಕು, ಕೌಟುಂಬಿಕ ಜೀವನವನ್ನು ಅರಿತುಕೊಳ್ಳಲು ಕನ್ನಡಕ್ಕಿಂತಲೂ ಇತರ ಭಾಷೆ ಸಾಹಿತ್ಯಗಳ ಸಾಮಗ್ರಿಗಳನ್ನೇ ನಾವಿಂದು ಆಶ್ರಯಿಸಬೇಕಾಗಿದೆ. ಈತನ ಬಹುಪಾಲು ಶಾಸನಗಳು ತಮಿಳುಭಾಷೆ ಗ್ರಂಥಲಿಪಿಗಳಲ್ಲಿವೆ. ಈತನ ಹೆಂಡತಿ ಗಂಗಾಂಬಿಕೆ ಬರೆದಿರುವ ಸಾಹಿತ್ಯಕ ಆಧಾರವಾದ ವೀರಕಂಪಣರಾಯ ಚರಿತವೂ ಸಹ ಸಂಸ್ಕೃತ ಭಾಷೆಯಲ್ಲಿರುವುದನ್ನು ನಾವು ಗಮನಿಸಬಹುದು.

ಕಂಪಣನ ಚಾರಿತ್ರಿಕ ವ್ಯಕ್ತಿತ್ವವನ್ನು ನಿರೂಪಿಸುವಲ್ಲಿ ಆತನ ಕಾಲದ ಶಾಸನಗಳು ಮುಖ್ಯ ಆಕರಗಳಾಗಿ ಪರಿಣಮಿಸಿವೆ. ಇಲ್ಲಿನ ಅಧ್ಯಯನವನ್ನು ಕೋಲಾರ ಜಿಲ್ಲೆಗಷ್ಟೇ ಸೀಮಿತಗೊಳಿಸಿದೆ. ಇವುಗಳ ಅಭ್ಯಾಸದಿಂದ ಆತನ ಆಡಳಿತಕ್ಕೊಳಪಟ್ಟ ಪ್ರದೇಶ, ಅಲ್ಲಿನ ಧಾರ್ಮಿಕ ಸಾಮಾಜಿಕ ಸ್ಥಿತಿಗತಿಗಳ ಅರಿವಾಗುತ್ತದೆ. ಇದಲ್ಲದೆ ಅಂದಿನ ಪ್ರಮುಖರಾದ ವ್ಯಕ್ತಿಗಳು ಅವರಿಗೆ ತಮ್ಮ ಅರಸನ ಬಗೆಗಿದ್ದ ಗೌರವ ಪ್ರೀತಿಗಳು ತಮ್ಮ ಆಳುವ ಪ್ರಭುವಿಗಾಗಿ ಅವರುಗಳು ಮಾಡಿರುವ ಉನ್ನತ ಕಾರ್ಯಗಳು ಗಮನಕ್ಕೆ ಬರುತ್ತವೆ. ಕಂಪಣನ ಆಳ್ವಿಕೆಯ ಕಾಲಕ್ಕೆ ಎಂದರೆ ಕ್ರಿಶ. ೧೩೫೬ ರಿಂದ ೧೩೬೬ ರವರೆಗಿನ ಕಾಲಕ್ಕೆ ಸೇರಿದ ಶಾಸನಗಳು ಮುಳವಾಯಿ ರಾಜ್ಯದ ನೇರ ಆಡಳಿತವನ್ನೂ, ತದನಂತರ ಎಂದರೆ ಕ್ರಿ.ಶ. ೧೩೭೫ರ ಕಾಲದವರೆಗಿನ ಶಾಸನಗಳು, ಆತ ಬೇರೆಡೆಯಿಂದ ತನ್ನ ಆಡಳಿತವನ್ನು ನಡೆಸಿದ್ದರೂ ಮುಳವಾಯಿ ರಾಜ್ಯದ ಮೇಲಿನ ಆತನ ಪ್ರಭಾವವನ್ನು ತಿಳಿಸಿಕೊಡುತ್ತವೆ. ಈ ಅವಧಿಗೆ ಸೇರಿದ ಆತನ ಕಾಲದ ೨೪ ಶಾಸನಗಳಲ್ಲಿ ಬಹಳಷ್ಟು ಮುಳಬಾಗಿಲು ಕೋಲಾರ ತಾಲ್ಲೂಕುಗಳ ವ್ಯಾಪ್ತಿಯಲ್ಲಿವೆ.

ಕಂಪಣರಾಯನ ಉಲ್ಲೇಖವಿರುವ ಏಳೆಂಟು ಶಾಸನಗಳು ಮುಳಬಾಗಿಲು, ಕೋಲಾರ, ಚಿಂತಾಮಣಿ ತಾಲೂಕುಗಳಲ್ಲಿ ಕಂಡುಬಂದಿವೆ. ಕೋಲಾರ ತಾಲೂಕಿನ ಸೋಮಸಂದ್ರ, ಬೇಚಿರಾಕ್ ಚಿಕ್ಕಾಪುರ ಗ್ರಾಮದ ಶಾಸನಗಳು ಮುಳಬಾಗಿಲನ್ನು ಹೆಸರಿಸುತ್ತವೆ. ಆವನಿ ಬೆಳ್ಳೂರಿನ ಶಾಸನಗಳು ಕಂಪಣನ ಅರಮನೆಯ ಪ್ರಸ್ತಾಪವನ್ನು ಮಾಡುತ್ತವೆ. ಇನ್ನುಳಿದಂತೆ ಕೈವಾರ, ಬುಸ್ಸೇನಹಳ್ಳಿ, ವಾನರಪಿಯಲ್ಲಿಯ ಶಾಸನಗಳು ಕಂಪಣನ ನಾಮೋಲ್ಲೇಖ ಮಾಡುತ್ತವೆ. ಸೋಮಸಂದ್ರ, ಚಿಕ್ಕಾಪುರ, ಬೆಳ್ಳೂರುಗಳಲ್ಲಿನ ಶಾಸನಗಳ ಭಾಷೆ ತಮಿಳಾಗಿದ್ದು ಇವು ಗ್ರಂಥಲಿಪಿಯಲ್ಲಿ ರಚಿತವಾಗಿವೆ. ಕೈವಾರದಲ್ಲಿರುವ ಶಾಸನದ ಭಾಷೆ ತೆಲುಗಾದರೆ, ಲಿಪಿ ಕನ್ನಡವಾಗಿದೆ. ಇನ್ನುಳಿದವು ಮಾತ್ರ ಕನ್ನಡದ ಲಿಪಿ ಭಾಷೆಗಳನ್ನೊಳಗೊಂಡಿವೆ. ಇವುಗಳಲ್ಲಿ ಸೋಮಸಂದ್ರದ ಶಾಸನದ ವಿಶಿಷ್ಟತೆಯನ್ನು ಪ್ರತ್ಯೇಕವಾಗಿ ಗುರುತಿಸುವುದು ಅವಶ್ಯಕವಾಗಿದೆ.

ಕಂಪಣನು ಮುಳಬಾಗಿಲಿನಲ್ಲಿ ನೆಲೆಸಿದ್ದ ಸಮಯದಲ್ಲಿ ಮುಳವಾಯಿ ರಾಜ್ಯದಲ್ಲುಂಟಾದ ಬೆಳವಣಿಗೆಗಳು ಗಮನಾರ್ಹವಾದದ್ದು. ಕಂಪಣನ ಅರಮನೆಯ ಪ್ರಧಾನಿ ಸೋಮಯ್ಯನು ನಿರ್ವಹಿಸಿದ ಗಣನೀಯ ಪಾತ್ರದ ನಿದರ್ಶನವಾಗಿ ಸೋಮಸಂದ್ರದ ಶಾಸನವನ್ನು ಗಮನಿಸಬಹುದು. ತನ್ನ ಒಡೆಯನ ಗುಣಾತಿಶಯಗಳನ್ನು ಮನಗಂಡಿದ್ದ ಈತನು ಅದನ್ನೆಲ್ಲ ಬರಹದಲ್ಲಿ ವ್ಯಕ್ತಪಡಿಸಿದ್ದಾನೆ. ಇದರಲ್ಲಿ ಸಂಸ್ಕೃತದ ಭಾಷೆಯನ್ನು ಬಳಸಿದೆ. '...ಅಮಿತ ಪ್ರತಾಪ ತರಣಿ, ಸಾಕ್ಷಾತ್ ಪ್ರಸಾದೇ ಶಶಿ, ಸಂಗೀತೈಕನಿಧಿ.... ಕಲ್ಪದ್ರುಮಾನ್ ಧರ್ಮಸ್ಥಾಪನಶಿಲುಬುದ್ಧಿ.. ರಿತಹ ಸಾಮ್ರಾಜ್ಯ ಲಕ್ಷ್ಮಿ.. ನಾಮ್ನಾ ವೀರಕುಮಾರ ಕಂಪಣ...' ಎಂಬ ಶಾಸನದಲ್ಲಿನ ನುಡಿಗಳು ಕಂಪಣನ ಅಪ್ರತಿಮ ಪರಾಕ್ರಮವನ್ನು, ಆತನಲ್ಲಿನ ಪ್ರಸಾದಿಕ ಗುಣವನ್ನು, ಅವನ ಸಂಗೀತ ಪ್ರೇಮವನ್ನು, ಅವನು ಹೊಂದಿದ್ದ ಕಲ್ಪವೃಕ್ಷ ಸಮಾನ ಗುಣಗಳನ್ನು ತಿಳಿಸುತ್ತವೆ. ಇದಲ್ಲದೆ ಈತನು ಧರ್ಮಸ್ಥಾಪನ ಬುದ್ಧಿಯಿಂದ ಕೂಡಿದ್ದು, ಅತಿಶ್ರೇಷ್ಠ ರಾಜರಲ್ಲಿ ಅದ್ವಿತೀಯನೂ ಆಗಿ ಸಾಮ್ರಾಜ್ಯ ಲಕ್ಷ್ಮಿಯನ್ನು ಪರಿಪಾಲನೆ ಮಾಡುತ್ತಿದ್ದನೆಂಬುದನ್ನು ಹೇಳಲಾಗಿದೆ. ಸೋಮಸಂದ್ರಕ್ಕೆ ಅನತಿ ದೂರದಲ್ಲಿರುವ, ಈಗಿನ ಬೇಚಿರಾಕ್‌ಚಿಕ್ಕಾಪುರ ಶಾಸನವು ಸೋಮಪ್ಪ ಒಡೆಯನ ನಿರೂಪದಿಂದ ನೀಡಿರುವ ದತ್ತಿಯ ವಿಚಾರವನ್ನು ತಿಳಿಸುತ್ತದೆ. ಇದರಲ್ಲಿ ಹಲವಾರು ಪ್ರಮುಖರ ಹೆಸರುಗಳಿವೆ. ಸೈನಿಕರಾಗಿದ್ದವರನ್ನು ಶಾಸನವು ಉಲ್ಲೇಖಿಸುತ್ತದೆ. ಆದರೆ ಇವೆಲ್ಲ ಕಾರ್ಯಗಳು ಮುಳಬಾಗಿಲಿನಿಂದ ಕಂಪಣರಾಜನು ರಾಜ್ಯಭಾರ ಮಾಡುತ್ತಿದ್ದಾಗ ನಡೆದಿದೆಯೆಂಬುದನ್ನು ಗಮನಿಸಿದರೆ ಮುಳಬಾಗಿಲಿಗೆ ಆ ರಾಜ್ಯದಲ್ಲಿ ದೊರೆತ ಪ್ರಾಶಸ್ತ್ಯವು ಅರಿವಿಗೆ ಬರುತ್ತದೆ. ವಿಜಯನಗರದ ಅರಸರು ಕಂಟಕಾನನ ಪಟ್ಟಣಕ್ಕೆ ನೀಡಿದ ಪ್ರಶಸ್ತಿಯನ್ನು ಕಾಣುವಂತಾಗಿದೆ.

ಕಂಪಣನಲ್ಲಿ ಕಂಡುಬರುವ ವೀರವೆಂಬ ಮೌಲ್ಯವು ಸಹಜವಾಗಿಯೇ ಇಲ್ಲಿನ ನೆಲದ ಗುಣಕ್ಕೆ ಹೊಂದಿರುವುದಾಗಿದೆ. ಮುಳಬಾಗಿಲಿನ ಸುತ್ತಲಿನ ಏಳೆಂಟು ಮೈಲಿಗಳ ಪರಿಸರವು ವೀರಾಗ್ರಣಿಗಳು ಕಾದಾಡಿದ ಶೌರ್ಯದ ಭೂಮಿಯಾಗಿದೆ. ಇಲ್ಲಿರುವ ವೀರಗಲ್ಲುಗಳೇ ಇದಕ್ಕೆ ಸಾಕ್ಷಿ. ಗಂಗರು, ಬಾಣರು, ನೊಳಂಬ – ಬಾಣರು, ಗಂಗ– ಪಲ್ಲವರು, ಚೋಳ – ಗಂಗರು, ಚೋಳ – ಹೊಯ್ಸಳರು ಹೀಗೆ

ಹಲವಾರು ರಾಜವಂಶಗಳು ನೆಲದ ಮೇಲಿನ ಹಕ್ಕಿಗಾಗಿ ಇಲ್ಲಿ ಹೋರಾಟ ನಡೆಸಿವೆ. ಚೋಳರಾಜರು ತಮ್ಮ ಸಾಹಸದ ಜನಪ್ರಿಯತೆಯನ್ನು ಜನಸಾಮಾನ್ಯರಲ್ಲಿ ಬೇರೂರಿಸಿಬಿಟ್ಟಿದ್ದಾರೆ. ಕರ್ನಾಟಕದ ಮೂಡಣದ ಭಾಗವು ಸಂಘರ್ಷಗಳ ಪ್ರದೇಶವೇ ಆಗಿತ್ತು. ವಿಜಯನಗರದ ಅರಸರು ಮೂಡಣದ ದಿಕ್ಕಿನಲ್ಲಿ ಬಲಿಷ್ಠವಾದ ರಾಜ್ಯವೊಂದನ್ನು ಕಟ್ಟಲು ಆಯ್ಕೆಮಾಡಿಕೊಂಡ ಪ್ರಶಸ್ತ ಸ್ಥಳವನ್ನಾಗಿ ಮುಳಬಾಗಿಲನ್ನು ಗುರುತಿಸಬಹುದಾಗಿದೆ. ಇತಿಹಾಸದಲ್ಲಿ ಶ್ರೇಷ್ಠರಾಜರೆಂದು ಮನ್ನಣೆ ಗಳಿಸಿದ ಬಾಣರ ಕಾಲದ ತಾಮ್ರಶಾಸನದಲ್ಲಿ (ಮುಡಿಯನೂರು ತಾಮ್ರಪಟ) ದಾನ ನೀಡಿದ ಗ್ರಾಮದ ಎಲ್ಲೆಗಳನ್ನು ಗುರುತಿಸುವಾಗ ಮುಳಬಾಗಿಲಿನ ಪ್ರದೇಶವನ್ನು ಕಣ್ವಕದ್ವಾರವೆಂದು ಕರೆಯಲಾಗಿದೆ. ಇದರಿಂದಾಗಿ ಏಳೆಂಟು ಶತಮಾನದ ವೇಳೆಗಾಗಲೇ ಇದು ಇತಿಹಾಸದ ಮೇಲೆ ಪ್ರಭಾವಬೀರಿದ ಭೌಗೋಳಿಕ ಭೂಮಿಯಾಗಿ ಪ್ರಸಿದ್ಧಿ ಪಡೆದಿತ್ತು.

ಕಂಪಣರಾಯನ ಒಡೆತನಕ್ಕೆ ಮುನ್ನಿನ ಮುಳಬಾಗಿಲನ್ನು ಹೊಯ್ಸಳರ ದೊರೆ ರಾಮನಾಥನ ಕಾಲದಿಂದಲೂ ತಮಿಳು ಪ್ರದೇಶವೆಂದೇ ಗುರುತಿಸಲಾಗಿದೆ. ಇದರಿಂದಾಗಿ ಮುಳಬಾಗಿಲಿನ ಆಚೀಚೆ ಬೇರಾವ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಾದ ಆವನಿ, ಉತ್ತನೂರು, ಕುರುಡುಮಲೆ, ಮುಡಿಯನೂರು, ಕಾತಾಂಡಹಳ್ಳಿ ನಂಗಲಿ ಮುಂತಾದ ಸ್ಥಳಗಳು ಅಪ್ಪಟ ಕನ್ನಡ ದೊರೆಗಳಾದ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದರೂ ತಮಿಳು ಭಾಷೆಯ ಶಾಸನಗಳನ್ನೇ ಹೊಂದಿರುವುದಾಗಿದೆ. ಆವನಿಯು ನೊಳಂಬರ ಪ್ರಸಿದ್ಧ ರಾಜಧಾನಿಯಾಗಿದ್ದು, ಇಲ್ಲಿಯೂ ಸಹ ನೊಳಂಬರಸರ ನಂತರದಲ್ಲಿ ಕಂಪಣನ ಆಳ್ವಿಕೆಯ ಕಾಲದವರೆಗೆ ತಮಿಳು ಭಾಷೆ, ಸಾಹಿತ್ಯಗಳ ಪ್ರಾಬಲ್ಯವೇ ಇದ್ದಿತೆಂಬುದನ್ನು ಇಲ್ಲಿನ ಬಹುಸಂಖ್ಯೆಯ ತಮಿಳು ಶಾಸನಗಳು ನಮಗಿಂದು ಸ್ಪಷ್ಟಮಾಡಿಕೊಡುತ್ತಿವೆ. ಕಂಪಣರಾಯನ ಆಳ್ವಿಕೆಯಲ್ಲಿ ಮುಳಬಾಗಿಲು ಮತ್ತಿತ್ತರ ಸುತ್ತಲಿನ ಪ್ರದೇಶಗಳಲ್ಲಿ ಕನ್ನಡವು ಚಿಗುರು ತಳೆದದ್ದನ್ನು ಭಾಷಿಕ ಅಧ್ಯಯನದಿಂದ ಗಮನಿಸುತ್ತೇವೆ. ಕಂಪಣನ ನಂತರದ ಕಾಲದ ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಅವರ ಮಾಂಡಲೀಕರು, ಮಂತ್ರಿಗಳು, ಗಣ್ಯವ್ಯಕ್ತಿಗಳ ನಿರಂತರ ಪ್ರಯತ್ನದಿಂದಾಗಿ ಈ ಪ್ರದೇಶದಲ್ಲಿ ಕನ್ನಡವು ತಲೆಯೆತ್ತಿ ನಿಂತಿತು.

ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾದ ಎರಡು ಮೂರು ದಶಕಗಳಲ್ಲಿಯೇ ಆ ರಾಜ್ಯಕ್ಕೆ ಸಂಬಧಿಸಿದ ಚಾರಿತ್ರಿಕ ಮಹತ್ವದಿಂದ ಕೂಡಿದ ಕೃತಿಯೊಂದನ್ನು ಕಾಣಲು ಸಾಧ್ಯವಾಗಿದೆ. ಅದು ಬುಕ್ಕರಾಯನ ಸೊಸೆಯೂ ಕಂಪಣರಾಯನ ರಾಣಿಯೂ ಆದ ಗಂಗಾದೇವಿಯು ಬರೆದ 'ಮಧುರಾವಿಜಯಂ' ಅಥವಾ 'ವೀರಕಂಪಣರಾಯ ಚರಿತ'ವೆಂಬ ಹೆಸರಿನ ಸಂಸ್ಕೃತ ಕಾವ್ಯ. ಕಂಪಣನು ತನ್ನ ತಂದೆಯ ಸಾಮ್ರಾಜ್ಯವಿಸ್ತರಣೆಯ ಅಪೇಕ್ಷೆಯನ್ನು ಆಜ್ಞಾಪಾಲಕನಾಗಿ ಧರಿಸಿ ದಕ್ಷಿಣಕ್ಕೆ ದಂಡೆತ್ತಿ ಹೋಗಿ ಮೊದಲು ತುಂಡಿರ ಮಂಡಲದ ಶಾಂಬವರಾಯ ಅಥವಾ ಚಂಗಲರಾಯನನ್ನು ನಿರ್ಮೂಲನೆ ಮಾಡಿದನು. ತದನಂತರ ಸುಮಾರು ಹತ್ತು ವರ್ಷಗಳ ಕಾಲ ಮರಕತನಗರ ಎಂದರೆ ಸುಪ್ರಸಿದ್ಧವಾದ ಕಾಂಚೀನಗರಿಯಿಂದ ಆಳ್ವಿಕೆ ನಡೆಸಿದನು. ಆನಂತದಲ್ಲಿ ಮಹಾಸೈನ್ಯ ಸಮೇತನಾಗಿ ಹೊರಟು ಮಧುರೆಗೆ ಮುತ್ತಿಗೆ ಹಾಕಿದನು. ದಕ್ಷಿಣ ರಾಜ್ಯದಲ್ಲಿ ಅದರಲ್ಲಿಯೂ ಶ್ರೀರಂಗ, ಮಧುರೆಗಳಲ್ಲಿ ಧರ್ಮಬಾಹಿರನಾಗಿದ್ದ ಮಧುರೆಯ ಸುಲ್ತಾನನ್ನು ಕಂಪಣನು ಸದೆಬಡಿದು ಶಾಂತಿಯಿಂದ ರಾಜ್ಯವನ್ನಾಳಿದನು. ಹಿಂದೂ ಧರ್ಮದ ಪುನರುತ್ಥಾನಕ್ಕೆ ಕಾರಣವಾದ ವಿಜಯ ಯಾತ್ರೆಯೇ 'ಮಧುರಾವಿಜಯ'ದ ಕಾವ್ಯ ವಸ್ತು. ಈ ಯಾತ್ರೆ ಮುಳಬಾಗಿಲಿನಿಂದ ಆರಂಭಗೊಂಡದ್ದೇ ಈ ಸ್ಥಳದ ಶ್ರೇಷ್ಠತೆಗೆ ನಿದರ್ಶನವೆನ್ನಬಹುದು.

'ಮಧುರಾವಿಜಯ'ವು ತಮಿಳು ದೇಶಕ್ಕೆ ವಿಜಯನಗರ ಪ್ರಭುತ್ವವು ವ್ಯಾಪಿಸಿದ ಕತೆಯನ್ನು ಮಾತ್ರ ಹೇಳುವ ಕೃತಿಯಲ್ಲ. ಇದು ಹದಿನೈದನೆ ಶತಮಾನಕ್ಕೆ ಮುಂಚಿನ ದಕ್ಷಿಣ ಭಾರತದ ಚರಿತ್ರೆಯ ಕುರಿತಾದ ಐತಿಹಾಸಿಕ ಗ್ರಂಥವೆಂಬ ಹೆಗ್ಗಳಿಕೆಯಿಂದ ಕೂಡಿದ್ದಾಗಿದೆ. ಇತಿಹಾಸವನ್ನು ಕಟ್ಟುವ ಕಾಯಕದಲ್ಲಿ ಒಂದು ಸಾಹಿತ್ಯ ಕೃತಿಯು ನಿರ್ಣಾಯಕ ಪಾತ್ರವನ್ನು ವಹಿಸಬಲ್ಲದ್ದೆಂಬುದನ್ನು ಈ ಕೃತಿಯು ಎತ್ತಿಹಿಡಿದಿದೆ. ಒಂಬತ್ತು ಸರ್ಗ ಇಲ್ಲವೆ ಅಧ್ಯಾಯಗಳಲ್ಲಿ ಬರೆದಿರುವ ಕೃತಿಯು ಉತ್ತಮಕಾವ್ಯದ ಎಲ್ಲ ಲಕ್ಷಣಗಳನ್ನು ಹೊಂದಿದೆ. ಶಕ್ತಿಶಾಲಿಯಾದ ಸಾಹಿತ್ಯಶೈಲಿಯಲ್ಲಿ ಕವಯಿತ್ರಿಯು ತನ್ನ ಕಾವ್ಯವನ್ನು ನಡೆಸಿಕೊಂಡು ಹೋಗಿರುತ್ತಾಳೆ. ಇಲ್ಲಿ ನಿರೂಪಣೆಯಾಗಿರುವ ಇತಿಹಾಸದ ಘಟನೆಗಳಲ್ಲಿ ಈಕೆಯೂ ಭಾಗಿಯಾಗಿರುವವಳೇನೋ ಎಂದೆನಿಸುವಂತಿದೆ. ಜಾಣ್ಮೆ, ಪಾಂಡಿತ್ಯಗಳು ಪರಂಪರಗತವಾಗಿ ಈಕೆಗೆ ಸಂದಿರಬೇಕೆಂಬ ಭಾವನೆಯು ಬಲಿಯುವಂತಿದೆ.

'ಮಧುರಾವಿಜಯ'ದಲ್ಲಿ ಐತಿಹಾಸಿಕ ಗುಣಗಳು ಅಡಕವಾಗಿರುವುದನ್ನು ಅನೇಕ ಪ್ರಸಂಗಗಳು ನಿರೂಪಿಸಿವೆ. ತನ್ನ ಮಾವ ಬುಕ್ಕರಾಯನ ಧರ್ಮಪರಿಪಾಲನೆ, ಆತನ ವೀರವ್ಯಕ್ತಿತ್ವ, ಆತನ ರಾಜಕೀಯ ವೈಭವ ಮತ್ತು ದೂರದೃಷ್ಟಿಗಳನ್ನು ಇದರಲ್ಲಿ ವರ್ಣಿಸಿದ್ದಾಳೆ. ಕಂಪಣನ ತಾಯಿ ದೇವಾಯಿಯೆಂಬ ಸಂಗತಿ ಈ ಕಾವ್ಯದಿಂದ ಮಾತ್ರವೇ ತಿಳಿಯುವಂತಿದೆ. ಕಂಪಣನು ವಿವಾಹವಾದ ಅನೇಕ ಕನ್ಯೆಯರಲ್ಲಿ ಗಂಗಾಂಬಿಕೆಯು ಪ್ರಧಾನರಾಣಿಯಾಗಿರುವುದು ಮಾತ್ರವಲ್ಲದೆ ನೆಚ್ಚಿನ ಮನದನ್ನೆಯೂ ಆಗಿದ್ದಾಳೆ. ಕಂಪಣನ ಮಧುರವ್ಯಕ್ತಿತ್ವನ್ನು ಸಹ ಗಂಗಾದೇವಿಯ ವರ್ಣನೆಯಲ್ಲಿ ಕಾಣಬಹುದಾಗಿದೆ. ಇನ್ನು ಅವನ ಸಾಹಸ ಪರಾಕ್ರಮಗಳನ್ನು ಯುದ್ಧ ಚಾತುರ್ಯವನ್ನು ವಿವರಿಸುವ ಸಂದರ್ಭವು ಸ್ವಾರಸ್ಯಕರವಾಗಿದೆ.

ಕಂಪಣರಾಯನ ವಿಜಯಗಳಿಗೆ ಅವನು ಮುನ್ನಡೆಸಿದ ಕುದುರೆಯೂ ಕಾರಣವೆನ್ನಬೇಕು. ಆತನ ವಾಜಿಯ ವಿವರಣೆಗಾಗಿಯೇ ನಾಲ್ಕನೆ ಸರ್ಗದಲ್ಲಿನ ಕೆಲವು ಪದ್ಯಗಳು ಮೀಸಲಾಗಿವೆ. ಇದನ್ನು 'ನವಭಿಃಕುಲಕಂ' ಅಥವಾ ಕನ್ನಡದಲ್ಲಿ 'ನವಕುಲಕ' ಎಂದು ಕರೆದಿದೆ. ಇಲ್ಲಿನ ಎರಡು ಪದ್ಯಗಳನ್ನು ಇದರ ಸ್ವಾರಸ್ಯಕ್ಕಾಗಿ ಗಮನಿಸಬಹುದು ;

**ಸಪಕ್ಷ ಇವ ತಾರ್ಕ್ಷ್ಯಸ್ಯ ಸಜಾತಿರಿವ ಚೇತಸಃ**
**ಸಖೇದ ಗಂಧವಾಹಸ್ಯ ಸಂಘಾತ ಇವ ರಂಹಸಃ –**
(ಇದು ಮೂಲದಲ್ಲಿರುವ ಪದ್ಯ)

**ಗರುಡನಿಗೆ ಸಮಜೋಡಿ ಮನಸಿನೊಡಹುಟ್ಟೆಂದು**
**ಗಂಧವಾಹನ ಸಖನೆ ಎಂದು ತೋರಿತ್ತು**
**ವೇಗವೇ ಮೂರ್ತಿಗೊಂಡಂತಿದ್ದ ತುರಗವದು**
**ತೋರಣದ ದ್ವಾರದಲ್ಲಿ ಶೋಭಿಸಿತ್ತು** – (ಇದು ಅನುವಾದಗೊಂಡ ಪದ್ಯ)

**ಮುಹಾಃ ಸ್ವಜ ವಸಂತರೋದನ ಮಿತೋನ್ನಿಮಿತಾನನಃ**
**ನಮಸ್ಕುರ್ವನ್ನಿವ ಮರೋವರ್ತಿನೀಂ ವಿಜಯಶ್ರಿಯಂ –**
(ಇದು ಮತ್ತೊಂದು ಮೂಲಪದ್ಯ)

**ತಲೆಯನಿರದೆತ್ತುತ್ತ ಮತ್ತೆ ಕೆಳಗಿಳಿಸುತ್ತ**
**ಅಡಿಗಡಿಗೆ ಚಟುಟಗತಿಯಿಂದಿರುವ ಹಯವು**
**ತನ್ನೆದಾರಿಗಿಹ ವಿಜಯಲಕ್ಷ್ಮಿಗಭಿವಂದಿಸುವು**
**ದೋ ಎಂಬ ರೀತಿಯದು ಹೋಲುತ್ತಿತ್ತು** – (ಇದು ಅನುವಾದಿತ ಪದ್ಯ)

**(ಆಧಾರ : ಗಂಗಾದೇವಿ ವಿರಚಿತ 'ಮಧುರಾವಿಜಯಂ' ಅಥವಾ 'ವೀರಕಂಪರಾಯ ಚರಿತಂ' ಅನು– ಕೆ. ಕುಶಾಲಪ್ಪಗೌಡ. ಜಯಗೌರಿ ಪ್ರಕಾಶನ, ಕೋಡಿ, ಪೆರಾಜೆ, ೧೯೯೦)**

ಕಂಪಣನು ತನ್ನ ಸೈನ್ಯವನ್ನು ನಡೆಸಿಕೊಂಡು ಅತಿಶೀಘ್ರದಲ್ಲಿ ಕರ್ನಾಟಕದ ಎಲ್ಲೆಯನ್ನು ದಾಟಿ ಕಂಟಕಾನನ ಪಟ್ಟಣವನ್ನು ತಲುಪಿದನೆಂದು ಗಂಗಾದೇವಿಯು ತನ್ನ ಕೃತಿಯಲ್ಲಿ ಹೇಳಿರುತ್ತಾಳೆ.

**ಅಥ ಲಂಘಿತ ಕರ್ಣಾಟಃ ಪಂಚಷ್ಷರೇವ ವಾಸರೈಃ**
**ಪ್ರಾಪತ್ ಕಂಪಮಹೀಪಾಲಃ ಕಂಟಕಾನನ ಪಟ್ಟಣಂ (ಸರ್ಗ ೦೪; ಪದ್ಯ ೪೭)**
**ಕಂಪಭೂಪಾಲ ಸೇನೆಯಕೂಡಿ ಪಯಣವನು**
**ಐದಾರು ದಿವಸ ಪರಿಯಂತರವು ನಡೆದು**
**ಕರ್ನಾಟ ರಾಜ್ಯ ಮೇರೆಯ ದಾಟಿ ತಲುಪಿದನು**
**ಮುಳಬಾಗಿಲೆಂಬೊಂದು ಪಟ್ಟಣವನು –**
(ಇದು ಅನುವಾದಗೊಂಡ ಪದ್ಯ)

ಇದರಿಂದ ಮುಳಬಾಗಿಲು ಅಂದಿನ ವಿಜಯನಗರ ಸಾಮ್ರಾಜ್ಯದ ಗಡಿಭಾಗದಲ್ಲಿ ಇದ್ದಿತೆಂಬುದು ಸ್ಪಷ್ಟವಾಗುತ್ತದೆ. ಕರ್ಣಾಟಕ ರಾಜ್ಯವು ವಿಸ್ತಾರವಾದ ಕಾರಣ 'ಲಂಘಿತ' ಎಂಬ ಪದ ಇಲ್ಲಿ ಬಳಕೆಯಾಗಿರಬಹುದು. ಅನುವಾದಕರು ಇದನ್ನು 'ಮೇರೆ ದಾಟಿ' ಎಂದು ಬಳಸಿರುವುದು ಸೂಕ್ತವಾದ ಪದವಲ್ಲದೇನೋ ಎಂದು ಅಭಿಪ್ರಾಯಪಡಬಹುದು. ಮುಳಬಾಗಿಲು ಅಷ್ಟು ಹೊತ್ತಿಗಾಗಲೇ ಪ್ರಾಮುಖ್ಯತೆಯನ್ನು ಗಳಿಸಿದ ಪ್ರದೇಶವಾಗಿತ್ತು. ವಿಜಯನಗರ ಸ್ಥಾಪನೆಗೆ ಕಾರಣರಾದ ವಿದ್ಯಾರಣ್ಯರಿಗೂ, ಮಾಧ್ವ ಸಂಪ್ರದಾಯದ ಅಕ್ಷೋಭ್ಯತೀರ್ಥರಿಗೂ ವೇದಾಂತದೇಶಿಕರ ಮಧ್ಯಸ್ಥಿಕೆಯಲ್ಲಿ ತಾತ್ವಿಕ ಚಿಂತನೆಯು ನಡೆದ ಪ್ರದೇಶವಾಗಿ ಮುಳಬಾಗಿಲು ಪ್ರಸಿದ್ಧವಾದದ್ದೆಂಬುದನ್ನು ವಿದ್ವಾಂಸರು ಪ್ರತಿಪಾದನೆ ಮಾಡಿಕೊಂಡು ಬಂದಿದ್ದಾರೆ. ಈ ವಾದದಲ್ಲಿ ವಿದ್ಯಾರಣ್ಯರು ಹಿನ್ನಡೆ ಸಾಧಿಸಿದರೆಂಬುದು ಪ್ರತೀತಿ. ಮುಳಬಾಗಿಲಿನ ಹಂಚುಕಲ್ಲು ಬೆಟ್ಟವೇ ತತ್ತ್ವಮಸಿ ವ್ಯಾಖ್ಯಾನಕ್ಕೆ ಪ್ರಶಸ್ತವಾದ ಸ್ಥಳವಾಗಿತ್ತೆನ್ನಲಾಗಿದೆ. ಇಲ್ಲಿರುವ ಒಂದು ಕಂಬವನ್ನು ಅಕ್ಷೋಭ್ಯತೀರ್ಥರ 'ವಿಜಯಸ್ತಂಭ'ವೆಂದೇ ಪರಿಚಯ ಮಾಡಿಕೊಡಲಾಗಿದೆ. ವಾದ ನಡೆದ ವಿಚಾರದಲ್ಲಿ ಸಾಕಷ್ಟು ಪರವಿರೋಧಗಳು, ವ್ಯಾಖ್ಯಾನಗಳು ನಡೆದಿವೆ, ಇದೇನೇ ಇದ್ದರೂ ಮುಳಬಾಗಿಲನ್ನು ಜ್ಞಾನಸಂಬಂಧವಾದ ವಾತಾವರಣವನ್ನು ಹೊಂದಿದ ಲೌಕಿಕವಾದ ನೆಲಗಟ್ಟನ್ನು ಹೊಂದಿದ ಪಾವನಸ್ಥಳವೆಂದು ಪರಿಭಾವಿಸಬಹುದು.

ವಿಜಯನಗರದ ಸ್ಥಾಪಕರಾದ ಹರಿಹರ – ಬುಕ್ಕರು ಕಾಳಾಮುಖ ಪಂಥದ ಅನುಯಾಯಿಗಳಾಗಿದ್ದರು. ಗಂಗಾದೇವಿ ಸಹ ತನ್ನ ಕೃತಿಯಲ್ಲಿ ಈ ವಿಚಾರಕ್ಕೆ ಇಂಬು ನೀಡಿದ್ದಾಳೆ. ಇವರ ಗುರುಗಳಾದ ಕ್ರಿಯಾಶಕ್ತಿಗಳು ಘನವಿದ್ವಾಂಸರಾಗಿದ್ದು ಅನೇಕ ಶಾಸನಗಳಲ್ಲಿ ಉಲ್ಲೇಖಿತರಾಗಿದ್ದಾರೆ. ವಿಶೇಷವಾಗಿ ಸಂಗಮಸೋದರರೆಲ್ಲರು ಇವರ ಶಿಷ್ಯರೇ ಆಗಿದ್ದರು. ಕ್ರಿಯಾಶಕ್ತಿಯನ್ನು ಕ್ರಿಯಾಕ್ತಿದೇವ, ಕ್ರಿಯಾಶಕ್ತಿ ಪಂಡಿತದೇವ, ಕ್ರಿಯಾಶ್ತಿ ಯತೀಶ್ವರ, ರಾಜಗುರುಕ್ರಿಯಾಶಕ್ತಿ ಹೀಗೆ ಇನ್ನೂ ಅನೇಕ ಹೆಸರುಗಳಿಂದ ಕರೆಯಲಾಗಿದೆ. ಕಾಶಿವಿಲಾಸ ಕ್ರಿಯಾಶಕ್ತಿ, ವಾಣಿವಿಲಾಸಕ್ರಿಯಾಶಕ್ತಿ ವಿದ್ಯಾಶಂಕರ ಕ್ರಿಯಾಶಕ್ತಿ, ತ್ರಿಯಂಬಕ ಕ್ರಿಯಾಶಕ್ತಿ ಮತ್ತು ಚಂದ್ರಭೂಷಣ ಕ್ರಿಯಾಶಕ್ತಿ ಎಂಬ ಐದು ಜನ ಕ್ರಿಯಾಶಕ್ತಿಯತಿಗಳನ್ನು ಕ್ರಿ.ಶ. ೧೩೪೭ ರಿಂದ ೧೪೩೭ರ ಅವಧಿ ಶಿಲಾಶಾಸನಗಳಲ್ಲಿ ಗುರುತಿಸಲಾಗಿದೆ. ಮುಳಬಾಗಿಲಿನ ಹೊರವಲಯದ ಶಂಕರತೀರ್ಥ ಪ್ರದೇಶದಲ್ಲಿ ವಿದ್ಯಾಶಂಕರ ಹೆಸರಿನ ದೇವಾಲಯವಿದೆ. ದೇವಾಲಯವಿರುವ ಪ್ರದೇಶವು ದ್ವಾರಕಾ ಸಂಸ್ಥಾನದವರಿಗೆ ಸೇರಿತ್ತೆಂದು ಹೇಳಲಾಗುತ್ತಿದ್ದು ಇಲ್ಲಿ ಹಲವಾರು ಯತಿಗಳ ಬೃಂದಾವನಗಳನ್ನು ಕಾಣುತ್ತೇವೆ. ದೇವಾಲಯವನ್ನು ಇತ್ತೀಚಿಗೆ ಪುನರುದ್ಧಾರಗೊಳಿಸಲಾಗಿದೆ. ವಿದ್ಯಾಶಂಕರ ದೇವಾಲಯದಲ್ಲಿ ಕ್ರಿ.ಶ. ೧೩೮೮ಕ್ಕೆ ಸೇರಿದ ಸಂಸ್ಕೃತ ಭಾಷೆಯಿಂದ ಮಿಶ್ರಿತವಾದ ಕನ್ನಡ ಶಾಸನವನ್ನು ಕಾಣುತ್ತೇವೆ. ಇದರಲ್ಲಿ ವಿದ್ಯಾಶಂಕರ ಕ್ರಿಯಾಶಕ್ತಿಯ ಪ್ರಸ್ತಾಪವಿದೆ. ಶಾಸನವಿರುವ ಸ್ಥಳದಲ್ಲಿ ಪ್ರವೇಶದ್ವಾರದ ಮೇಲೆ ಯತಿಯೊಬ್ಬರು ವ್ಯಾಸಪೀಠದೊಂದಿಗೆ ಕುಳಿತಿರುವ ಉಬ್ಬುಶಿಲ್ಪವನ್ನು ಕಾಣಬಹುದು. ಮುಳಬಾಗಿಲು ಸೇರಿದಂತೆ ಹಲವಾರು ಸ್ಥಳಗಳ ಶಾಸನಗಳಲ್ಲಿ ಉಕ್ತರಾದ ಕ್ರಿಯಾಶಕ್ತಿ ಎಂಬುದು ಒಬ್ಬರಿಗೇ ಸಂಬಂಧಿಸಿದ ಉಪನಾಮಗಳೋ ಅಥವಾ ಇವರೆಲ್ಲರೂ ಬೇರೆ ಬೇರೆಯೇ ಎಂಬ ವಿಚಾರದಲ್ಲಿ

ವಿದ್ವಾಂಸರ ಮಟ್ಟದಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಇದೆಲ್ಲ ಸಂಗತಿಗಳನ್ನು ಕಂಡಾಗ ವಿಜಯನಗರ ಅರಸರಿಗೆ ಮುಳಬಾಗಿಲು ವಿಜಯನಗರದ ರೀತಿಯಲ್ಲಿಯೇ ಅಭಿವೃದ್ಧಿಗೊಳ್ಳಬೇಕೆಂಬ ಹಂಬಲವಿದ್ದದ್ದು ವ್ಯಕ್ತಪಡುತ್ತದೆ.

'ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಸಂಸ್ಕೃತಿಯ ಸಮನ್ವಯದಂತಿರುವುದೆಂದೂ, ದಕ್ಷಿಣ ಭಾರತದ ಸಕಲ ಧರ್ಮಗಳಿಗೆ, ಪಂಥಗಳಿಗೆ ಪ್ರೋತ್ಸಾಹವನ್ನು, ಸಕಲ ಭಾಷೆಗಳ ಸಾಹಿತ್ಯಕ್ಕೆ ಬೆಂಬಲ ನೀಡಿದ ಸಾಮ್ರಾಜ್ಯವಾಗಿದೆ.' – ಎಂದು ಫಾದರ್ ಹೆರಾಸ್ ಈ ಹಿಂದೆಯೇ ಅಭಿಪ್ರಾಯಪಟ್ಟಿರುತ್ತಾರೆ. ಇವರ ಕಾಲದಲ್ಲಿ ಸಕಲ ಸಂಪ್ರದಾಯಗಳ ಮಠಗಳೂ ದೇವಾಲಯಗಳು, ದಾನದತ್ತಿಗಳನ್ನು ಪಡೆದವು. ಸಂನ್ಯಾಸಿಗಳು, ವಿದ್ವಾಂಸರು, ಸನ್ಮಾನ ಪಡೆದರು. ವಿಜಯನಗರದ ಅರಸರಿಂದಲೂ, ಅವರ ಅಧಿಕಾರಿಗಳಿಂದಲೂ ಕನ್ನಡ, ತೆಲುಗು, ತಮಿಳು ಭಾಷೆಗಳಿಗೆ ಪ್ರೋತ್ಸಾಹ ದೊರೆಯಿತು. ಭಾರತೀಯ ಸಂಸ್ಕೃತಿ ಮತ್ತೊಮ್ಮೆ ಅರಳಲು ತನ್ನ ಕಂಪು ಬೀರಲು, ತನ್ನ ವೈಭವದ ಒಂದು ಹಂತವನ್ನು ಕಾಣಲು ವಿಜಯನಗರದಿಂದ ಸಾಧ್ಯವಾಯಿತು. ಇದೆಲ್ಲದರ ಸಾರ್ಥಕತೆಯ ಸಾಫಲ್ಯತೆಯ ಮುಂಬೆಳಗನ್ನು ಕಂಪಣರಾಯನು ಆಳ್ವಿಕೆ ನಡೆಸಿದ ಮುಳಬಾಗಿಲಿನಲ್ಲಿ ಕಾಣಬಹುದಾಗಿದೆ.

❑❑

# ಭಾರತೀಯ ರಂಗ ಸಂಪ್ರದಾಯಗಳು

– ವಿಜಯಾ ಸುಬ್ಬರಾಜ್

ವಿಶಾಲವಾದ ಭಾರತೀಯ ಭೌಗೋಳಿಕ ಪರಿಸರದಲ್ಲಿ ನಾಟ್ಯ, ನೃತ್ಯ, ನಾಟಕ ಇತ್ಯಾದಿ ಪ್ರದರ್ಶನ ಕಲೆಗಳ ಸಂಖ್ಯೆ ಅಪಾರವಾಗಿರುವುದರ ಜೊತೆಗೆ ವಿಶಿಷ್ಟವೂ, ವಿಭಿನ್ನವೂ ಮತ್ತು ವೈವಿಧ್ಯಮಯವೂ ಆಗಿದ್ದು, ಭಾರತೀಯ ರಂಗ ಸಂಸ್ಕೃತಿಗೆ ಒಂದು ಅನನ್ಯತೆಯನ್ನು ಗಳಿಸಿಕೊಟ್ಟಿದೆ. ರಂಗ ಪ್ರದರ್ಶನ ಕಲೆಗಳು, ಸ್ಥಳೀಯ ಸಂಸ್ಕೃತಿ, ಸಾಹಿತ್ಯ, ಭಾಷೆ, ಧಾರ್ಮಿಕ ನಂಬಿಕೆ, ಆಚರಣೆ, ವಿಧಿ, ವಿಧಾನಗಳ ಪ್ರಭಾವಕ್ಕೆ ಒಳಗಾಗುತ್ತಾ, ಕಾಲಾಂತರದಲ್ಲಿ ಪಾಶ್ಚಿಮಾತ್ಯ ಪ್ರಭಾವ ಪ್ರೇರಣೆಗಳನ್ನೂ ಒಳಗೊಳ್ಳುತ್ತಾ ಇಲ್ಲಿಯವರೆಗೂ ಅವ್ಯಾಹತವಾಗಿ ಸಾಗಿಬಂದಿವೆ.

ಪ್ರಾದೇಶಿಕತೆಯ ನೆಲೆಯಲ್ಲಿ ಪ್ರಯೋಗ, ಪ್ರದರ್ಶನ ಶೈಲಿಯಲ್ಲಿ, ಸಂವಿಧಾನ ಸ್ವರೂಪದಲ್ಲಿ, ಸ್ವಲ್ಪ ಮಟ್ಟಿಗೆ ಭಿನ್ನತೆಯನ್ನು ತೋರಿದರೂ, ಅವೆಲ್ಲವುಗಳ ಹುಟ್ಟಿನ ಮೂಲ ಒಂದೇ ಆಗಿದೆ. ನೃತ್ಯ, ನಾಟಕ, ಸಂಗೀತ – ಯಾವುದೇ ಆದರೂ ಮನರಂಜನೆಯ ಆಶಯಕ್ಕೂ ಮೊದಲು ಧಾರ್ಮಿಕ ನಂಬಿಕೆ, ಆವರಣೆಯ ವಿಧಿ ವಿಧಾನಗಳ ಮೂಲಕವೇ ರೂಪ ಪಡೆದವುಗಳೆಂಬುದಂತೂ ಸತ್ಯ. ನೃತ್ಯ, ಸಂಗೀತಗಳು, ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮದೇ ಆದ ಅನನ್ಯತೆಯನ್ನು ರೂಢಿಸಿಕೊಳ್ಳುತ್ತಾ ಬೆಳೆದು ಬಂದವುಗಳಾಗಿವೆ. ಆದರೆ ನಾಟಕ ಇವೆಲ್ಲವನ್ನೂ ತನ್ನೊಳಗೆ ಮೈಗೂಡಿಸಿಕೊಂಡ ಒಂದು ಸಂಕೀರ್ಣ ರಂಗ ರೂಪವಾಗಿದೆ.

ನೃತ್ಯ, ನಾಟಕ, ಸಂಗೀತ, ಮೊದಲಾದವುಗಳೆಲ್ಲವೂ ಕಾಲದಿಂದ ಕಾಲಕ್ಕೆ, ತಮ್ಮ ಸಮಕಾಲೀನ ಸಾಹಿತ್ಯ, ಸಮಾಜ ರಾಜಕೀಯ ಸ್ಥಿತ್ಯಂತರಗಳಿಗೆ, ಪಲ್ಲಟಗಳಿಗೆ ಮುಕ್ತವಾಗಿ ಒಡ್ಡಿಕೊಳ್ಳುತ್ತಾ, ಸ್ಪಂದಿಸುತ್ತಾ, ಸ್ವರೂಪ ಶೈಲಿ, ಪ್ರಯೋಗ ತಂತ್ರಗಳನ್ನು ಬದಲಾಯಿಸಿಕೊಳ್ಳುತ್ತಾ ಅತ್ಯಂತ ಚೈತನ್ಯಶೀಲವಾಗಿ, ಕ್ರಿಯಾಶೀಲವಾಗಿ ವಿಕಾಸಗೊಳ್ಳುತ್ತಾ ಮುಂದುವರೆಯುತ್ತಿದೆ.

ವಿವಿಧತೆಗಳ ಸಂಕೀರ್ಣ ಭೂ ಪ್ರದೇಶವಾದ ಭಾರತದ ರಂಗಚರಿತ್ರೆ ಕ್ರಿಪೂ. ೩ರಿಂದ ೫ರವರೆಗಿನ ಅವಧಿಯಲ್ಲಿ ರಚಿತವಾಗಿರಬಹುದೆಂದು ಊಹಿಸಲಾದ ಭರತಮನಿಯ 'ನಾಟ್ಯಶಾಸ್ತ್ರ' ಗ್ರಂಥ ಭಾರತೀಯ ರಂಗಭೂಮಿಗೆ ತಾತ್ವಿಕ ತಳಹದಿಯನ್ನು ಹಾಕಿಕೊಡುವುದರೊಂದಿಗೆ ಪ್ರಾರಂಭವಾಗುತ್ತದೆ. ಇಡೀ ವಿಶ್ವಕ್ಕೆ ರಂಗಶಾಸ್ತ್ರಕ್ಕೆ ಮಾದರಿ ಗ್ರಂಥವಾದ ಈ 'ನಾಟ್ಯಶಾಸ್ತ್ರ' ರಂಗಭೂಮಿ ಸಂಬಂಧವಾದ ಸೂಕ್ಷ್ಮಾತಿಸೂಕ್ಷ್ಮವಾದ ಎಲ್ಲ ವಿವರಗಳನ್ನು ನೀಡುವುದರ ಮೂಲಕ ಇದೊಂದು ರಂಗ ವಿಶ್ವಕೋಶವೇ ಸರಿ! ರಂಗಭೂಮಿಯ ಉದಯ ಹೇಗಾಯಿತೆಂದು ವಿವರಿಸುವುದರೊಂದಿಗೆ ಈ ಕೃತಿ ಮೊದಲಾಗುತ್ತದೆ. ಕೃತಿ, ಕೃತಿಕಾರ ಐತಿಹಾಸಿಕ ಸತ್ಯಗಳೇ ಆದರೂ ಎಲ್ಲ ಕಲೆಗಳ ಹಾಗೆ ಇದಕ್ಕೂ ದೈವೀಮೂಲವನ್ನೇ ಹೇಳಲಾಗಿದೆ. ದೇವತೆಗಳ ಮನರಂಜನೆಯ ಉದ್ದೇಶದೊಂದಿಗೆ ಹುಟ್ಟುಹಾಕಿದ ರಂಗಭೂಮಿ, ಕಾರಣಾಂತರದಿಂದ ಭೂಲೋಕಕ್ಕೆ, ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ಸಾಧನೆಯ ಮಾಧ್ಯಮವಾಗಿಯೂ ಮತ್ತು ಶ್ರಮಾರ್ಥರಿಗೆ, ದುಃಖಾರ್ಥರಿಗೆ, ವಿಶ್ರಾಂತಿಕಾರವೂ ಆಗಿರಲೆಂದೂ, ವೇದಾಧ್ಯಯನ ಪ್ರವೇಶ ವಂಚಿತರಾದ ಶೂದ್ರ ಜಾತಿಗೆ ಮತ್ತು ಸರ್ವರಿಗೆ ಸುಲಭಸಾಧ್ಯವಾದ ವೇದರೂಪವೇ 'ನಾಟ್ಯ'ವೆನ್ನುವ ರೀತಿಯಲ್ಲಿ ಸೃಷ್ಟಿಸಿದನಲ್ಲದೆ ಅದನ್ನು ಪಂಚಮವೇದವೆಂದೂ ಕರೆದಿದ್ದಾನೆ. ಆದರೆ ಈ ವೇದ ಸೃಷ್ಟಿಯನ್ನು ಬ್ರಹ್ಮನಿಗೆ ಅಂಟಿಸಿ, ತಾನು ಕೇವಲ ಅದರ ಪ್ರಚಾರಕ ಎಂದಷ್ಟೇ, ಹೇಳಿಕೊಂಡಿದ್ದಾನೆ.

ಸಕಲ ಭುವನಗಳ ಅವಸ್ಥಾಂತಗಳನ್ನು ಅನುಕರಿಸಿ ಪ್ರದರ್ಶಿಸುವುದೇ ಇದರ ಉದ್ದೇಶ. ಮನರಂಜನೆಯ ಜೊತೆ ಜೊತೆಯಲ್ಲಿ ಆತ್ಮೋನ್ನತಿಯ ಗುರಿಯನ್ನೂ ಇದು ಒಳಗೊಂಡಿದೆ. ನಾಟ್ಯ ಲೋಕದ ಎಲ್ಲಾ ಕಲೆಗಳ, ಕ್ರೀಯೆಗಳ ಸಮಗ್ರ ಅಭಿವ್ಯಕ್ತಿರೂಪ ಇಷ್ಟೆಲ್ಲಾ ಉದಾತ್ತ ಆಶಯಗಳೊಂದಿಗೆ ಉದಿಯಿಸಿದ 'ನಾಟ್ಯ'ದ ಬಗ್ಗೆ ಧಾರ್ಮಿಕ ಶ್ರದ್ಧೆ ಮೂಡುವುದು ಸಹಜವೇ ಆಗಿದೆ. ಆದರೆ ಇದಕ್ಕೆ ಪೂರ್ವದಿಂದಲೂ ಅಸ್ತಿತ್ವದಲ್ಲಿದ್ದಿರಬಹುದಾದ ಜನಪದ ರಂಗಭೂಮಿಯ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲವೆಂಬುದಕ್ಕೆ 'ಕೌಟಿಲ್ಯ ಮತ್ತು ಮನು' ಸಂಗೀತ, ನೃತ್ಯ, ನಾಟ್ಯ ಮುಂತಾದವುಗಳನ್ನು ಶೂದ್ರರಿಗೇ ಮೀಸಲಾದ ಕಲೆಗಳೆಂದು ಘೋಷಿಸಿರುವುದಾಗಿದೆ.

'ಹಂಪಿ', ೧೧ 'ಎ' ಕ್ರಾಸ್, ೩೫ನೇ ಮೇನ್, ಬನಗಿರಿನಗರ, ಭವಾನಿ ಲೇಔಟ್, ಅತ್ತಿಮಬ್ಬೆ ರಸ್ತೆ, ಬನಶಂಕರಿ ೩ನೇ ಹಂತ, ಬೆಂಗಳೂರು – ೭೮

ಕೌಟಿಲ್ಯನ ದೃಷ್ಟಿಯಲ್ಲಂತೂ ಚಾರಣರು ಮತ್ತು ನಟರು ಅಸ್ಪೃಶ್ಯರಾಗಿದ್ದಾರೆ.

ಯಾವುದೇ ಕಲೆ ಹುಟ್ಟಿದಂದಿನಿಂದಲೇ ಸಮಾಜದಲ್ಲಿ ಎಲ್ಲರಿಂದಲೂ ಒಂದೇ ಭಾವನೆಯಿಂದ ಸ್ವೀಕೃತವಾಗುವುದಿಲ್ಲ. ಅದರಲ್ಲಿಯೂ ಸಂಗೀತ, ನೃತ್ಯಗಳು ಬಹಿರಂಗವಾಗಿ, ಜನಸಮೂಹದ ಎದುರು ಪ್ರದರ್ಶಿತವಾಗುವ ಕಲೆಗಳು. ಜೊತೆಗೆ ಕಲಾವಿದರ ಚಾರಿತ್ರ್ಯದ ಬಗ್ಗೆ ಶಂಕೆಯ ಮನೋಭಾವವಿದ್ದುದರಿಂದ, ಸಮಾಜದ ಉಚ್ಚ ವರ್ಗದ ಮನೆತನದವರು ಇಂತಹ ಕಲೆಗಳಿಗೆ ಕಲಾವಿದರಿಗೆ ಹೆಚ್ಚಿನ ಪುರಸ್ಕಾರವೀಯುತ್ತಿರಲಿಲ್ಲ. ಇದರಿಂದಾಗಿ ಇವು ಕೀಳುಜಾತಿಯವರಿಗೇ ಮೀಸಲಾದ ಕಲೆಗಳೆಂಬ ಅಭಿಪ್ರಾಯ ಪ್ರಚಲಿತವಾಗಿರಬೇಕು. ಮಹಾಭಾರತದಲ್ಲಿ ಉಕ್ತವಾಗುವ 'ಸೂತ' ಎನ್ನುವವನು ಎಲ್ಲ ಸಾಧ್ಯತೆಗಳಿಂದಲೂ ಕೆಳಜಾತಿ ವರ್ಗಕ್ಕೆ ಸೇರಿದವನೆಂಬುದು ಇಂದುಶೇಖರರ ಅಭಿಪ್ರಾಯ. ಅಂತೆಯೇ 'ಚಾರಣ'ರೆಂಬ ವರ್ಗವೂ ನಿಮ್ನ ಕುಲಕ್ಕೆ ಸೇರಿದವರಾಗಿದ್ದರು.

ಈ ಬಗೆಯ ಮನೋಭಾವವೇ ಪ್ರಚಲಿತವಿದ್ದ ಕಾರಣ ಭರತನು, ಅದನ್ನು ತೊಡೆದುಹಾಕಲೆಂದು, ನಾಟ್ಯವನ್ನು ದೈವೀ ಸೃಷ್ಟಿಯೆಂದು ವಿವರಿಸಿದ. ನಾಟ್ಯಶಾಸ್ತ್ರ ನಾಟ್ಯಕಲೆಯ ಸಮಗ್ರ ಸ್ವರೂಪದ ವಿಸ್ತಾರವಾದ ವಿವರಣೆಯನ್ನು ಒಳಗೊಂಡಿದ್ದು, ಪ್ರಮಾಣ ಗ್ರಂಥವೆಂದು ಪರಿಗಣಿತವಾಗಿ, ಭಾರತೀಯ ರಂಗಭೂಮಿಯ ಇತಿಹಾಸದ ನಿರ್ಮಾಣದಲ್ಲಿ ಮಹತ್ವಪೂರ್ಣವೆನಿಸಿದೆ.

ಇವನ ಕಾಲದಲ್ಲಿ 'ನಾಟ್ಯ'ವು ಪೂರ್ಣ ವಿಕಸಿತ ರೂಪವನ್ನು ಪಡೆದಿದ್ದು, ಅದಕ್ಕೂ ಮುನ್ನ ಪ್ರಸ್ತಾಪಿತವಾದ ನಾಟ್ಯ ಕಲೆಗೆ ಸಂಬಂಧಿಸಿದ ಅಂಶಗಳು, 'ನಾಟ್ಯ'ದ ಪ್ರಾರಂಭದ ಅವಸ್ಥೆಯನ್ನು ಮಾತ್ರ ಸೂಚಿಸುತ್ತದೆ. ಮಹಾಭಾರತ, ಮಹಾಭಾಷ್ಯ ಮತ್ತು ಅಥರ್ವವೇದ ಮುಂತಾದ ಎಡೆಗಳಲ್ಲಿ 'ನಟ' ಶಬ್ದ ಪ್ರಯೋಗವಿದ್ದರೂ ಅದಕ್ಕೆ ಈಗಿನ ಅರ್ಥ ಇರಲಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯ. ಮೊದಲಿಗೆ ಈ 'ನಟ' ಎಂಬುವವನು ನೃತ್ಯ ಅಥವಾ ಮೂಕಾಭಿನಯದ ಮೂಲಕ 'ಚಾರಣ'ನ ಹಿನ್ನೆಲೆಯ ಗಾಯನದ ಪಠ್ಯದ ಅರ್ಥವನ್ನು ರವಾನಿಸುತ್ತಿದ್ದಿರಬೇಕು. ಆದ್ಯರಂಗಾಚಾರ್ಯರು ತಮ್ಮ 'ಭಾರತೀಯ ರಂಗಭೂಮಿ ಗ್ರಂಥದಲ್ಲಿ, ಚಾರಣನು ಹಾಡುತ್ತಿದ್ದಂತೆ (ರಾಮಾಯಣವೋ ಮಹಾಭಾರತವೋ) ಅವಳು (ನಟಿ) ಹಾವಭಾವಗಳಿಂದ ಭಂಗಿಗಳಿಂದ, ಕ್ರಿಯೆಗಳನ್ನು ಮಾತ್ರವಲ್ಲ, ಪಾತ್ರಗಳ ಭಾವನೆಗಳನ್ನೂ ಅಭಿವ್ಯಕ್ತಿಸುತ್ತಾಳೆ. ಇದು ಹಾವಭಾವಗಳಿಂದ ಮಾಡುವ ಅನುಕರಣೆ ಮಾತ್ರವಲ್ಲ, ತನಗೆ ತಾನೇ ಸ್ವಯಂಪೂರ್ಣವಾದ ವ್ಯಾಖ್ಯಾನವಾಗಿರುತ್ತದೆ... ಮತ್ತು ಈ ಪರಂಪರೆಯಲ್ಲಿ ಜಾನಪದ ನಾಟಕಗಳ ಮೂಲಕ ಇಳಿದು ಆಧುನಿಕ ಪರಿಷ್ಕೃತ ಭರತನಾಟ್ಯದಲ್ಲಿಯೂ ಉಳಿದುಕೊಂಡು ಬಂದಿದೆ' ಎಂದು ವಿವರಿಸುತ್ತಾರೆ.

ನಾಟ್ಯ ರೂಪದಲ್ಲಿ ಹೆಚ್ಚಿಗೆ ಸಂಗೀತವೇ ಬಳಕೆಯಾಗುತ್ತಿದ್ದು ನಂತರವೇ ಸಂಭಾಷಣೆಯ ರೂಪದಲ್ಲಿ 'ಪಠ್ಯ'ದ ವಾಚನ ನಡೆದಿರಬೇಕು. ನೃತ್ಯ ಅತ್ಯಂತ ಪೂರ್ವದ್ದು. ಇದು ವ್ಯಕ್ತಿಗತ 'ಭಾವ'ವನ್ನು ಆಶ್ರಯಿಸಿ ವಿವಿಧ ಭಾವಗಳ ಅಭಿವ್ಯಕ್ತಿಗಾಗಿ ಕೇವಲ ಪದಗತಿ ಅಥವಾ ಹೆಜ್ಜೆಯ ಲಯಕ್ಕೇ ಸೀಮಿತವಾಗಿದೆ. ಆದರೆ ಮುಂದೆ ಇದೇ ನೃತ್ಯ ರಸಪ್ರಧಾನವಾದ ಪ್ರಸಿದ್ಧ ಕಥಾನಕವೊಂದನ್ನು ಹೊಂದಿಸಿಕೊಂಡು, ಸಂಗೀತ, ನೃತ್ಯ, ಅಭಿಯಯ, ಸಂಭಾಷಣೆಗಳನ್ನು ಒಳಗೊಂಡು ಹಂತಹಂತವಾಗಿ ಕಥೆಯ ಬೆಳವಣಿಗೆಯನ್ನು ನಿರೂಪಿಸುತ್ತಾ 'ನಾಟ್ಯ'ವೆಂದು ಕರೆಸಿಕೊಂಡಿತು. ಹೀಗೆ ಚಾಕ್ಷುಷ, ಶ್ರಾವಣ ಅಂಶಗಳನ್ನು ಕೂಡಿಸಿಕೊಂಡು ಸಂಕೀರ್ಣರೂಪದಲ್ಲಿ ನಾಟ್ಯ, ನಾಟಕ ಎಂದು ಗುರುತಿಸಿಕೊಂಡಿದ್ದೇ ಅಲ್ಲದೆ, ಭರತನಿಂದ ವಿಸ್ತೃತವಾದ ವಿವರಣೆಯನ್ನು ಪಡೆಯಿತು. ರಂಗಭೂಮಿಯ ಸಮಗ್ರ ಕಲ್ಪನೆ ಬರುವಂತಹ ರೀತಿಯಲ್ಲಿ, ಭರತ ನಾಟಕಗಳ ಪ್ರದರ್ಶನದ ಸ್ಥಳ (ನಾಟ್ಯ ಮಂಟಪ), ರಂಗ ವಿನ್ಯಾಸ ಮತ್ತು ರಂಗರೂಢಿಗಳು ಅಭಿನಯ ಪದ್ಧತಿ ಇತ್ಯಾದಿಗಳ ಬಗ್ಗೆ ವಿಸ್ತೃತ ವಿವರಣೆ ನೀಡಿದ್ದಾನೆ.

ರಂಗಮಂಟಪದ ಕಲ್ಪನೆಗೆ ಮೊದಲು ಸಾಮಾನ್ಯವಾಗಿ ನಾಟಕ ಪ್ರದರ್ಶನಗಳು ಅರಮನೆಗಳಲ್ಲಿ, ಶ್ರೀಮಂತರ ಮನೆಗಳಲ್ಲಿ, ದೇವಾಲಯ ಪ್ರಾಂಗಣದಲ್ಲಿ ಪ್ರದರ್ಶನ ಗೊಳ್ಳುತ್ತಿದ್ದಿರಬೇಕು. ಆದರೆ ಭರತನ ನಾಟ್ಯ ಸಿದ್ಧಾಂತಗಳ, ತತ್ವಗಳ, ನಿರ್ದೇಶನಗಳ ಹಂಗಿಲ್ಲದೆ, ಶಾಸ್ತ್ರೀಯ ರಂಗಭೂಮಿಗೂ ಮೊದಲಿನಿಂದ ಜನಮನ್ನಣೆಯಲ್ಲಿ, ಜಾತ್ರೆ, ಉತ್ಸವಗಳಲ್ಲಿ ಪ್ರದರ್ಶಿತವಾಗುತ್ತಿದ್ದ ನಾಟಕಗಳಿಗೆ ಬಯಲು ರಂಗಮಂದಿರಗಳೇ ಆಶ್ರಯವಾಗಿದ್ದವು. ಭರತನಾಟ್ಯ ಗೃಹ ನಾಟ್ಯಮಂಟಪಗಳ ಅಗತ್ಯವನ್ನು ಗುರುತಿಸಿ, ಒಂದು ಅಧ್ಯಾಯವನ್ನೇ ಅದಕ್ಕಾಗಿ ಮೀಸಲಿರಿಸಿ, ನಾಟ್ಯಮಂಟಪಗಳ ಆಕಾರ ವಿಸ್ತಾರಗಳ ಬಗ್ಗೆ ಚರ್ಚಿಸಿದ್ದಾನೆ. ಒಂದೊಂದು ರಂಗಮಂಟಪದಲ್ಲಿಯೂ ಇರಬೇಕಾದ ಪ್ರೇಕ್ಷಾಂಗಣ, ನೇಪಥ್ಯ, ರಂಗಪೀಠ, ರಂಗಶೀರ್ಷ ಇತ್ಯಾದಿಯಾಗಿ ಇನ್ನೂ ಅನೇಕ ಬಗೆಯ ಅಗತ್ಯಗಳನ್ನು ವಿವರಿಸುತ್ತಾನೆ.

ನಂತರ ರಂಗವಿನ್ಯಾಸ, ರಂಗ ರೂಢಿಗಳ ಬಗ್ಗೆಯೂ ಸಾಕಷ್ಟು ಸೂಚನೆ ಸಲಹೆಗಳನ್ನು ನೀಡಿದ್ದಾನೆ. ಪಾತ್ರಗಳ ಪ್ರವೇಶ, ನಿರ್ಗಮನ ಎಲ್ಲಿ ಹೇಗೆ, ಯಾವ ಯಾವ ಪಾತ್ರ ಯಾವ ರೀತಿಯಲ್ಲಿ, ಯಾವ ಯಾವ ಕಡೆಯಿಂದ, ಯಾವ ಸ್ತರಗಳಿಂದ ಪ್ರವೇಶಿಸಬೇಕು, ಯಾವ ಸನ್ನಿವೇಶದಲ್ಲಿ ಹೇಗೆ ನಡೆದುಕೊಳ್ಳಬೇಕು ಎನ್ನುವುದೆಲ್ಲವನ್ನೂ ವಿವರಿಸಿದ್ದಾನೆ. ತೆರೆಗಳ (ಯವನಿಕಾ –ತಿರಸ್ಕರಿಣಿ) ಬಗ್ಗೆಯೂ ಪ್ರಸ್ತಾಪಿಸುವುದರ

ಮೂಲಕ ತೆರೆಗಳ ಬಳಕೆಯಾಗುತ್ತಿದ್ದುವೆಂಬುದಕ್ಕೆ ಸಮರ್ಥನೆ ನೀಡಿದ್ದಾನೆ.

ನಾಟ್ಯಶಾಸ್ತ್ರದಲ್ಲಿ ಅತ್ಯಂತ ಪ್ರಮುಖವಾದ ಭಾಗವೆಂದರೆ 'ನಾಟ್ಯದ ಜೀವಾಳವಾದ ಅಭಿನಯ ಪದ್ಧತಿ.' ನಾಟ್ಯಶಾಸ್ತ್ರ ಗ್ರಂಥದ ಅರ್ಧಭಾಗ ಈ ಅಭಿನಯ ಪದ್ಧತಿಯ ಬಗ್ಗೆಯೇ ನೀಡಿದ ವಿವರಣೆಯಿಂದ ತುಂಬಿದೆ. ಪ್ರಮುಖವಾಗಿ ನಾಟ್ಯ ಶಾಸ್ತ್ರಕಾರ, ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಎಂದು ೪ ಬಗೆಯ ಅಭಿನಯ ಪದ್ಧತಿಗಳನ್ನು ವಿವರಿಸುತ್ತಾನೆ. ಈ ನಾಲ್ಕು ದೈಹಿಕ ಚಲನೆ (ಮುಖಭಾವವೂ ಸೇರಿದಂತೆ) ಮಾತು, ವೇಷ ಭೂಷಣ, ಮತ್ತು ನಟನೆ ಅಂತರಂಗ ಅನಾವರಣ ಸಾಧ್ಯವಾದ ಅಭಿವ್ಯಕ್ತಿಗಳನ್ನು ಒಳಗೊಳ್ಳುತ್ತವೆ. ಭರತ ಸೂಚಿಸುವ ಈ ಬಗೆಯ ಅಭಿನಯ ಪದ್ಧತಿ ನಾಟಕ ಪ್ರದರ್ಶನಗಳಲ್ಲಿ ಅನಿವಾರ್ಯವಾಗುತ್ತದೆ. ಇದರಿಂದ ನಾಟಕಗಳ, ನಾಟಕದಲ್ಲಿನ ಸನ್ನಿವೇಶಗಳ, ಹಾಗೂ ನಾಟಕದ ಪಾತ್ರಗಳ, ಆ ಪಾತ್ರಗಳ ಅವಸ್ಥೆಗಳ ವಿಂಗಡನೆಯ ಜೊತೆ ಜೊತೆಗೆ ನಾಟಕ ತಂತ್ರಗಳ ಅಂದರೆ ಅಭಿನಯದ ರೀತಿಗಳನ್ನು ಇಂಥಿಂಥ ಪಾತ್ರಕ್ಕೆ ಇಂತಿಂತ ಸನ್ನಿವೇಶಗಳಲ್ಲಿ ಹೀಗೆ ಹೀಗೆ ಇರಬೇಕೆಂದು ನಿರ್ದೇಶಿಸುವ ಕೆಲಸವೂ ನಡೆಯುತ್ತದೆ.

ಮುಂದೆ ಸುದೀರ್ಘವಾದ ರಸವಳ ವಿವರಣೆ, ಅವುಗಳ ಉತ್ಪತ್ತಿಗಾಗಿರುವ ಸ್ಥಾಯಿ, ಸಂಚಾರಿ ಭಾವಗಳನ್ನು, ಯಾವ ಯಾವ ಪಾತ್ರಗಳು ಯಾವ ಯಾವ ರಸಾಭಿವ್ಯಕ್ತಿಗೆ ಯೋಗ್ಯ ಎಂಬ ವಿಷಯಗಳನ್ನೂ ವಿವರಿಸುತ್ತಾನೆ. ನಾಟಕ ಪ್ರಯೋಗದಲ್ಲಿ ಇರಬೇಕಾದ, ಗಮನಿಸಬೇಕಾದ, ಅಂಶಗಳನ್ನು ಸುದೀರ್ಘವಾಗಿ ವಿವರಿಸುತ್ತಲೇ, ನಾಟಕದ ಪರಿಣಾಮಕಾರಿತೆಗೆ ಯಾವುದು ಎಷ್ಟು ಅನಿವಾರ್ಯ ಎಂಬುದನ್ನು ತಿಳಿಸುತ್ತಾನೆ.

ವಾಸ್ತವವಾಗಿ ಸಂಸ್ಕೃತ ರಂಗಭೂಮಿ ಅಂದರೆ ಶಾಸ್ತ್ರೀಯ ಅಥವಾ ಅಭಿಜಾತ ರಂಗಭೂಮಿ ನಾಟ್ಯಶಾಸ್ತ್ರಕಾರನ ನಾಟ್ಯ ನಿಯಮ ನಿರ್ದೇಶನಗಳಿಗೆ ಅನುಗುಣವಾಗಿಯೇ ಬೆಳೆದುಬಂದಿದೆ. ಭಾರತೀಯ ರಂಗಸಂಪ್ರದಾಯಗಳೆಂದು ಈ ಮೊದಲೇ ಪ್ರಸ್ತಾಪಿಸಿದಂತೆ, ಶಾಸ್ತ್ರೀಯ ರಂಗ ಸಂಪ್ರದಾಯದಲ್ಲಿ ಬೆಳೆದು ಬಂದ ನಾಟಕಗಳಲ್ಲಿ, ವಸ್ತು, ಶೈಲಿ, ಸಂವಿಧಾನರಸ ಇತ್ಯಾದಿಗಳ ಆಧಾರದ ಮೇಲೆ 'ದಶರೂಪಕ'ಗಳೆಂಬ ಹೆಸರಿನಲ್ಲಿ ಪ್ರಭೇದಗಳನ್ನು ಗುರುತಿಸಲಾಗಿದೆ. ಧನಂಜಯನೆಂಬ ಲಾಕ್ಷಣಿಕ ದಶರೂಪಕವೆಂಬ ಹೆಸರಿನ ಗ್ರಂಥವನ್ನೂ ಬರೆದಿದ್ದಾನೆ. ಇದರಲ್ಲಿ ಈ ಹತ್ತೂ ನಾಟಕ ಪ್ರಭೇದಗಳ ಸ್ವರೂಪ, ಲಕ್ಷಣಗಳನ್ನು ವಿವರಿಸುತ್ತಾ, ನಾಟಕ, ಪ್ರಕರಣ, ಅಂಕ, ವ್ಯಾಯೋಗ, ಭಾಣ, ಸಮವಕಾರ, ವೀಥಿ, ಪ್ರಹಸನ, ಡಿಮ, ಈಹಾಮೃಗ – ಎಂದು ಹತ್ತನ್ನು ಹೆಸರಿಸುತ್ತಾನೆ. ಆದರೆ ವೀರ, ಶೃಂಗಾರ ರಸ ಪ್ರಧಾನವಾದ ನಾಟಕಗಳೇ ಶ್ರೇಷ್ಠವೆಂಬ ಭಾವನೆಯಿದ್ದು, ಗಣ್ಯರು, ಆಸ್ಥಾನ ಕಲಾಪ್ರೇಮಿಗಳು, ಶ್ರೀಮಂತರು, ಮೊದಲಾದವರಿಂದ ಹೆಚ್ಚಿನ ಮನ್ನಣೆಗೆ ಪಾತ್ರವಾಗಿದ್ದವು. ಭಾಣ, ಪ್ರಹಸನಗಳು ಭಿನ್ನ ಲಕ್ಷಣಗಳಿಂದ ಕೂಡಿದ್ದುದೇ ಅಲ್ಲದೆ, ಕೀಳು ಚರಿತ್ರೆಯನ್ನು ಹೇಳುವಂತಹ, ಹಾಸ್ಯರಸ ಪ್ರಧಾನವಾಗಿದ್ದುದರಿಂದ ಅವುಗಳಿಗೆ ಅಷ್ಟಾಗಿ ವರಿಷ್ಠ ಸಮಾಜಗಳಲ್ಲಿ ಮಾನ್ಯತೆಯಿರಲಿಲ್ಲ. ಹಾಗಾಗಿ ಸಂಸ್ಕೃತ ಅಥವಾ ಶಾಸ್ತ್ರೀಯ ರಂಗ ಭೂಮಿಯನ್ನು ಸಂಪನ್ನಗೊಳಿಸಿದ ಕಾಳಿದಾಸ, ಶೂದ್ರಕ, ಭಾಸ, ಭವಭೂತಿ ಮುಂತಾದವರು, ಶಾಸ್ತ್ರೀಯ ರಂಘಸಂಪ್ರದಾಯದ ರಕ್ಷಕರಾದರು. ಆದರೆ ಅದೇ ಕಾಲಘಟ್ಟದಲ್ಲಿ ಮತ್ತು ಸಂಸ್ಕೃತ ನಾಟಕಗಳ ಸಮಾಂತರದಲ್ಲಿ, ಜನಪ್ರಿಯ ಜನರಂಜಕವಾಗಿ, ಧನಂಜಯ ಹೇಳುವ ಹದಿನೆಂಟು ಬಗೆಯ ಉಪರೂಪಕಗಳು ಬೆಳೆದು ಬಂದಿರುವ ಸಾಧ್ಯತೆಗಳಿವೆ.

ಈ ಶಾಸ್ತ್ರೀಯ ಅಥವಾ ಸಂಸ್ಕೃತ ರಂಗಭೂಮಿ ಅತ್ಯಂತ ವಿಕಾಸಶೀಲವಾಗಿ, ಶ್ರೀಮಂತವಾಗಿ ಬೆಳೆದುಬರಲು ಮಹತ್ವದ ಕೊಡುಗೆ ಕೊಟ್ಟ ನಾಟಕಕಾರರು ಮೊದಲಿಗೆ ಕಾಳಿದಾಸ ಮತ್ತು ಶೂದ್ರಕ ಎಂದು ಹೇಳಿದರೂ ಭಾಸ ಇವರಿಗೂ ಮೊದಲಿನ ನಾಟಕಕಾರನೆಂಬುದು ವಿದ್ವಾಂಸರ ಅಭಿಪ್ರಾಯ. ಭಾಸ ಹದಿಮೂರು ನಾಟಕಗಳನ್ನು ಬರೆದನೆಂಬುದರಲ್ಲಿ ಭಿನ್ನಾಭಿಪ್ರಾಯವಿದೆ ಮತ್ತು ಕೆಲವು ನಾಟಕಗಳು ಅವನಲ್ಲದವೆಂಬ ಅನುಮಾನವೂ ಪ್ರಚಲಿತವಿದೆ. ಮಹಾಭಾರತ ವಸ್ತುವನ್ನೇ ಆಧರಿಸಿದ ದೂತವಾಕ್ಯ, ದೂತಘಟೋತ್ಕಚ, ಮಧ್ಯಮವ್ಯಾಯೋಗ ಕರ್ಣಭಾರ, ಊರುಭಂಗ, ಪಂಚರಾತ್ರ – ಇವಿಷ್ಟೂ ಅವನ ಅತ್ಯಂತ ಪ್ರಸಿದ್ಧ ನಾಟಕಗಳಾಗಿವೆ. ಭಾಸ ಸಂಸ್ಕೃತ ನಾಟಕ ಪರಂಪರೆಯ ಒಬ್ಬ ಶ್ರೇಷ್ಠ ನಾಟಕಕಾರನೆಂದೂ ಅವನ ನಾಟಕಗಳಲ್ಲಿಯೇ ಸ್ವಪ್ನವಾಸವದತ್ತ ಅತ್ಯುತ್ಕೃಷ್ಟ ನಾಟಕವೆಂದೂ ವಿಮರ್ಶಕರ ಅಭಿಪ್ರಾಯ.

ಭಾಸ ಶ್ರೇಷ್ಠ ನಾಟಕಕಾರನೇ ಆದರೂ ಕಾಳಿದಾಸ, ಜಾಗತಿಕ ನೆಲೆಯಲ್ಲಿಯೂ, ಪ್ರಾತಿನಿಧಿಕ ಮತ್ತು ಶ್ರೇಷ್ಠನಾಟಕಕಾರನೆಂಬ ಹೊಗಳಿಕೆಗೆ ಪಾತ್ರನಾಗಿದ್ದಾನೆ. ಸುಸಂಸ್ಕೃತ, ಸದಭಿರುಚಿಯ ಕಲಾವಿದ, ಕವಿ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ. ಪುರಾಣ ಸಾಹಿತ್ಯ ಮಹಾಕಾವ್ಯಗಳಲ್ಲಿನ ಅಖ್ಯಾನಗಳು, ಕಥಾಕೋಶಗಳು ಇವನಿಗೆ ಆಕರಗಳಾಗಿವೆ. ವಿಕ್ರಮೋರ್ವಶೀಯ, ಮಾಲವಿಕಾಗ್ನಿಮಿತ್ರ, ಅಭಿಜ್ಞಾನ ಶಾಕುಂತಲ ಅವನ ಶಿಖರ ಪ್ರಾಯವಾದ ನಾಟ್ಯ ಪ್ರತಿಭೆಗೆ, ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ನಂತರದ ಮಹಾನ್ ನಾಟಕಕಾರ ಭವಭೂತಿ ಮಾಲತೀ ಮಾಧವ, ಮಹಾವೀರ ಚರಿತೆ, ಉತ್ತರರಾಮಚರಿತ್ರೆ ಎಂಬ ಮೂರು ನಾಟಕಗಳಲ್ಲಿ ಕಡೆಯ ಎರಡು ನಾಟಕಗಳಿಗೆ ರಾಮಾಯಣ ಮಹಾಕಾವ್ಯದ ವಸ್ತುವನ್ನು ಬಳಸಿಕೊಂಡಿದ್ದಾನೆ. ಈ ಎರಡೂ ನಾಟಕಗಳಲ್ಲಿ ರಾಮಾಯಣದ ಸಮಗ್ರ ಕಥಾವಸ್ತುವನ್ನು ಬಳಸಿಕೊಂಡಿದ್ದಾನೆ. ಆದರೆ ಈ

ನಾಟಕಕಾರನಿಗೆ ಕಾಳಿದಾಸ, ಶೂದ್ರಕರಿಗೆ ಸಿಕ್ಕಷ್ಟು ಮನ್ನಣೆ, ಮಾಲತಿಮಾಧವ ನಾಟಕಕ್ಕೆ ಸಿಗಲಿಲ್ಲ. 'ಉತ್ತರರಾಮಚರಿತೆ' ಅದರ ಕಾವ್ಯಾತ್ಮಕ ಗುಣದಿಂದ, ಹೆಚ್ಚು ಮೆಚ್ಚುಗೆಗೆ ಪಾತ್ರವಾಗಿದೆ. ಅವನ ದೃಷ್ಟಿಯಲ್ಲಿ ರಾಮಾಯಣ ಕಥಾಧಾರಿತ ಎರಡೂ ನಾಟಕಗಳು ಲೋಕೋತ್ತರವಾದವುಗಳೆಂಬ ಭಾವನೆಯಿದೆ. ಕೇವಲ ವಿದ್ವತ್ತಿದ್ದರೆ ಸಾಲದು. ವಿಧವಿಧವಾದ ಭಾವನೆಗಳನ್ನು ನಿರೂಪಿಸುವ ಶಕ್ತಿ, ನಟರು ಹಿತವಾಗುವಂತೆ ಪ್ರದರ್ಶಿಸುವ ಕ್ರಿಯೆಗಳನ್ನು ಕುರಿತು ಯೋಚಿಸುವ ಶಕ್ತಿ, ದಿಟ್ಟತನದ ಕೃತ್ಯಗಳಿಂದ ಮೂಡಿದಂತೆ ಭಾವೋದ್ರೇಕಗಳನ್ನು ವರ್ಣಿಸುವ ಸಾಮರ್ಥ್ಯ, ಲಲಿತವಾದ ಶೈಲಿಯಲ್ಲಿ ಜೀವಂತವಾದ ಸಂಭಾಷಣೆಗಳನ್ನು ಬರೆಯುವ ಶಕ್ತಿ. ಇವೆಲ್ಲವೂ ನಾಟಕಕ್ಕೆ ಬೇಕು ಎನ್ನುವುದು ಅವನ ಅಭಿಪ್ರಾಯ.

ಒಂದು ಹಂತದಲ್ಲಿ ಅವನ ನಾಟಕಗಳು ಜನರಿಗೆ ಇಷ್ಟವಾಗಲಿಲ್ಲವೆಂಬ ಕಾರಣಕ್ಕೆ ಸಿಟ್ಟಾಗಿ, ತನ್ನ ನಾಟಕವನ್ನು ಕಾಲಪ್ರಿಯನಾಥನ ದೇವಾಲಯದ ಪ್ರಾಂಗಣದಲ್ಲಿ, ಅಥವಾ ಯಾತ್ರಾ ಉತ್ಸವದ ಸಮಯದಲ್ಲಿ ಪ್ರದರ್ಶಿಸುವುದರ ಮೂಲಕ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾನೆ. ಜನರ ಮೆಚ್ಚುಗೆ ಗಳಿಸಲು, ಭವಭೂತಿ ಒಂದು ಕ್ರಾಂತಿಕಾರಕ ಬದಲಾವಣೆಯಾಗಿ ತನ್ನ ನಾಟಕಗಳಲ್ಲಿ ಕಥಾವಸ್ತುವಿಗೆ ಸಮಕಾಲೀನ ನೆಲೆಯನ್ನು ಒದಗಿಸಿದ.

ಮುಂದೆ ಇದೇ ರೀತಿಯಲ್ಲಿ ಸಮಕಾಲೀನತೆಯನ್ನು ಬಿಂಬಿಸುವ ಒಂದು ರಾಜಕೀಯ ನಾಟಕ 'ಮುದ್ರಾರಾಕ್ಷಸ'ವನ್ನು ವಿಶಾಖದತ್ತನು ಬರೆದಿದ್ದಾನೆ. ಚಾಣಕ್ಯನ ತಂತ್ರೋಪಾಯಗಳಿಂದ ಚಂದ್ರಗುಪ್ತ ಮಗಧ ರಾಜ್ಯವನ್ನು ಸ್ಥಾಪಿಸಿದ ಕಥೆಯೇ ಇದರ ವಸ್ತು. ಇವನ ನಂತರದಲ್ಲಿ, ಶೂದ್ರಕನೆಂಬ (ಕಲ್ಪಿತರಾಜ) ನಾಟಕಕಾರನು ಬರೆದ 'ಮೃಚ್ಛಕಟಿಕ' ಜಗತ್ತಿನ ಶ್ರೇಷ್ಠನಾಟಕಗಳಲ್ಲಿ ಒಂದೆನಿಸಿದೆ. ರಾಜಕೀಯ ಸಾಮಾಜಿಕವೆಂಬ ಎರಡೂ ಅಂಶಗಳನ್ನು ಒಳಗೊಂಡ ಒಂದು ಮಹತ್ವದ ನಾಟಕ ಇದಾಗಿದೆ. ಒಟ್ಟಾರೆಯಾಗಿ ಕಾಳಿದಾಸ ಶೂದ್ರಕ, ಭವಭೂತಿ, ವಿಶಾಖದತ್ತ – ಸಂಸ್ಕೃತ ನಾಟಕದ ಸುವರ್ಣಯುಗದ ಪ್ರತಿನಿಧಿ ನಾಟಕಕಾರರಾಗಿದ್ದಾರೆ. ಕ್ಲಾಸಿಕಲ್ ಅಥವಾ ಶಾಸ್ತ್ರೀಯ ಸಂಸ್ಕೃತ ರಂಗಭೂಮಿಯ ಮತ್ತು ನಾಟಕ ಸಾಹಿತ್ಯದ ವರ್ಚಸ್ಸು, ಭರಾಟೆಗಳು ಕ್ರಿ.ಶ. ೭ ರ ಹೊತ್ತಿಗೆ ಇಳಿಮುಖವಾಗತೊಡಗಿತ್ತು. ಹಾಗೂ ಹೀಗೂ ೮, ೯ನೇ ಶ.ಗಳ ವರೆಗೆ ಕುಂಟುತ್ತಲೇ ಮುಂದುವರೆಯಿತು. ಅಲ್ಲಿಂದ ಮುಂದೆ ಶಾಸ್ತ್ರೀಯ ಅಥವಾ ಸಂಸ್ಕೃತ ರಂಗಭೂಮಿಯ ನಾಟಕಗಳು ಪ್ರಾದೇಶಿಕ ಭಾರತೀಯ ಭಾಷೆಗಳಿಗೆ ಅನುವಾದಗೊಂಡು ಹೊಸ ಹೊಸ ರಂಗ ಪ್ರಯೋಗಗಳಾಗಿ ಕಾಣಿಸಿಕೊಳ್ಳತೊಡಗಿದ್ದವು. ತನ್ಮೂಲಕ ಸ್ವಲ್ಪ ಮಟ್ಟಿಗಾದರೂ ಉಸಿರಾಡುತ್ತ ಜೀವವುಳಿಸಿಕೊಂಡು ಮುಂದೆ ಬಂದ ರಂಗ ಪ್ರಕಾರಗಳ ಮೇಲೆ ಪ್ರತ್ಯಕ್ಷ ಅಥವಾ ಪರೋಕ್ಷ ಪ್ರಭಾವವನ್ನು ಬೀರುತ್ತಾ ಮುಂದುವರೆದಿತ್ತು.

ನಾಟ್ಯಶಾಸ್ತ್ರ ಕ್ಲಾಸಿಕಲ್ ರಂಗ ಪ್ರಯೋಗಗಳು ಹೇಗಿರಬೇಕು ಪ್ರಯೋಗದಲ್ಲಿ ಗಮನಿಸಬೇಕಾದ ಅಂಶಗಳು ಯಾವುದು ಎಂದೆಲ್ಲಾ ವಿವರಿಸಿದ್ದರೂ ವಾಸ್ತವವಾಗಿ ಸಂಸ್ಕೃತನಾಟಕಗಳು ಹೇಗೆ ಪ್ರಯೋಗವಾಗುತ್ತಿದ್ದವೆಂಬುದಕ್ಕೆ ಬರಹದ ದಾಖಲೆಗಳಿಲ್ಲ. ಲಭ್ಯವಾದ ಸಂಸ್ಕೃತನಾಟಕಗಳಲ್ಲಿ ಗಮನಿಸಿದಾಗ ಶುದ್ಧ ಗದ್ಯವೂ ಅಲ್ಲದ ಪದ್ಯವೂ ಅಲ್ಲದ, ಪದ್ಯ ಗದ್ಯ ಸಂಮಿಶ್ರ ರೂಪದ ರಚನೆಗಳಾಗಿರುವುದು ಕಣ್ಣಿಗೆ ಬೀಳುತ್ತದೆ, ಕೇವಲ ವೈವಿಧ್ಯಕ್ಕಾಗಿ ಮಾತ್ರ ಈ ರೀತಿ ಇರದೆ, ನಾಟಕಗಳ ಮಿಶ್ರರೂಪವು ನಿರ್ದಿಷ್ಟ ಉದ್ದೇಶಗಳನ್ನು ಹಿನ್ನೆಲೆಯಲ್ಲಿ ಹೊಂದಿರಬೇಕೆನಿಸುತ್ತದೆ.

ಭಟ್ಟ ನಾಯಕನಂತೂ ಕಾವ್ಯ ನಾಟ್ಯದ ಸ್ವರೂಪವನ್ನು,

**"ಅನುಭಾವ ವಿಭಾವಾನಾಂ ವರ್ಣನಾ ಕಾವ್ಯಮುಚ್ಯತೇ**
**ತೇಷಾಮೇವ ಪ್ರಯೋಗಸ್ತು ನಾಟ್ಯಂ ಗೀತಾದಿರಂಜಿತಂ"**

–ವಿವರಿಸಿ, ನಾಟ್ಯ ಗೀತಾದಿಗಳಿಂದ ಕೂಡಿದ್ದರೆ ರಂಜನೆ ಹೆಚ್ಚುವುದೆಂಬ ಅಂಶವನ್ನು ಸೂಚಿಸಿದ್ದಾನೆ.

ಗೀತ ನೃತ್ಯಾದಿಗಳು ನಾಟಕ ಪ್ರಯೋಗದಲ್ಲಿ ಸಮಾವೇಶಗೊಂಡಿರಬೇಕೆಂದು ಹೇಳಿದ್ದರೂ, ಅವುಗಳ ಪ್ರಯೋಗದಲ್ಲಿ ಮಿತಿ ಇರಬೇಕೆಂಬ ಸೂಚನೆಯನ್ನೂ ನೀಡಲಾಗಿದೆ. ನಾಟಕದಲ್ಲಿ ಸಂಗೀತ, ನೃತ್ಯಾದಿಗಳ ಪ್ರಮಾಣ ವ್ಯಾಪ್ತಿಗಳು ಎಷ್ಟು ಇರಬೇಕೆಂಬುದು ಚರ್ಚೆಯ ವಿಷಯವೇ ಆದರೂ ಇವುಗಳು ಸಾಂಪ್ರದಾಯಿಕ ಸಂಸ್ಕೃತ ರಂಗಭೂಮಿಯಿಂದ ಹಿಡಿದು ಜನಪದ ರಂಗಭೂಮಿಯವರೆಗೂ ಬಳಕೆಯಾಗುತ್ತಿದ್ದುವೆಂಬ ಮಾತಿಗೆ ಎರಡಿಲ್ಲ. ಶ್ರವ್ಯಭಾಗ ದೃಶ್ಯಭಾಗಗಳೆರಡರಲ್ಲಿಯೂ ರಂಜನೀಯಕತೆ ಇರಬೇಕೆಂಬುದು ಅನಿವಾರ್ಯ ನಿರೀಕ್ಷೆಯಾಗಿತ್ತು. ಎ.ಆರ್. ಕೃಷ್ಣಶಾಸ್ತ್ರಿಗಳು ಸಂಸ್ಕೃತ ನಾಟಕಗಳ ಪ್ರಯೋಗದ ವಿಷಯದಲ್ಲಿ ಇದ್ದ ಅನುಮಾನ ಸಂದೇಹಗಳಿಗೆ ತಮ್ಮದೇ ರೀತಿಯಲ್ಲಿ ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಸಂಸ್ಕೃತ ನಾಟಕಗಳೆಲ್ಲವೂ ಗದ್ಯಪದ್ಯಮಯವಾಗಿವೆ. ಇವುಗಳಲ್ಲಿ ಕೆಲವನ್ನಾದರೂ ನೃತ್ಯ, ಗೀತವಾದ್ಯಗಳಿಂ ಅಭಿನಯಿಸಿ ಪ್ರದರ್ಶಿಸುತ್ತಿದ್ದಿರಬೇಕು. ಇನ್ನು ಕೆಲವು ಪ್ರಯೋಗ ದೃಷ್ಟಿಯಿಂದ ಬರೆದವುಗಳಲ್ಲ. ಮಹಾಕಾವ್ಯದಂತೆ ಓದಲು ಅರ್ಹವಾದ ನಾಟಕರೂಪದ ಕೃತಿಗಳು. ಅವುಗಳನ್ನು ಆದ್ಯಂತವಾಗಿ ಅಭಿನಯಿಸುವುದು ಅಸಾಧ್ಯವೆಂದೇ ಹೇಳಬೇಕು. ಆದ್ದರಿಂದ ಬರಬರುತ್ತಾ ಕೆಲವು ಪದ್ಯಗಳನ್ನು ಹಾಡಿ ಅಭಿನಯಿಸುತ್ತಲೂ ಮಿಕ್ಕವನ್ನು ಸುಮ್ಮನೆ ಹಾಡುತ್ತಲೂ ಇದ್ದರೆಂದು ಊಹಿಸಬಹುದು." ಎನ್ನುವ ಮಾತುಗಳು, ಅವರಿಗೂ ಇದ್ದ ಖಚಿತತೆಯ ಕೊರತೆಯನ್ನು ಎತ್ತಿ ತೋರಿಸುತ್ತದೆ, ಈಗಿನಂತೆಯೇ ಆಗಲೂ ಆಡುವ ನಾಟಕಗಳು, ಓದುವ ನಾಟಕಗಳು ಇದ್ದಿರಬೇಕೆಂಬುದಕ್ಕೆ ಅವರ ಮಾತುಗಳೇ ಸಾಕ್ಷಿಯಾಗುತ್ತವೆ. ಮತ್ತೂ ಒಂದು ಸಂಗತಿಯೆಂದರೆ ಹಾಡುಗಳಿಲ್ಲದಿದ್ದರೂ, ಸಂಸ್ಕೃತ

ನಾಟಕಗಳಲ್ಲಿ ಪದ್ಯಗಳನ್ನೇ ರಾಗ ಸಂಯೋಜನೆಯೊಂದಿಗೆ ಹಾಡುವ ಸಂದರ್ಭಗಳು ಇದ್ದಿರಬೇಕೆಂಬುದಕ್ಕೆ ನಮ್ಮ ವೃತ್ತಿರಂಗ ನಾಟಕ ಪ್ರಯೋಗಗಳೇ ಸಾಕ್ಷಿಯಾಗಿವೆ. ವೃತ್ತ, ಪದ್ಯಗಳನ್ನೆಲ್ಲಾ ಹಾಡುವ ಪರಿಪಾಠ ಸರ್ವೇಸಾಮಾನ್ಯವಾಗಿತ್ತು. ಇದಕ್ಕೆ ಸಮರ್ಥನೆಯಾಗಿ ಭರತನು ಪ್ರಸ್ತಾಪಿಸುವ 'ಧ್ರುವ'ಗಳು ಧ್ರುವ ಗೀತೆಗಳೆಂದು ಕರೆಸಿಕೊಂಡ ಗಾನ ಪ್ರಬಂಧಗಳು ಹಾಡುವುದಕ್ಕೆಂದೇ ರಚಿತವಾಗಿದ್ದರೂ ಅವುಗಳೆಲ್ಲ ಅನುಷ್ಟುಪ್, ಮಾಲಾ, ವಕ್ತ್ರ, ಅಪರ, ಪುಟ, ಚೂಲಿಕಾ ವಿಮಲಾ, ರುಚಿರ, ಮದಕಲಿತಾ, ಭ್ರಮರ, ಭೂತಲತನ್ವಿಸಿ ಇತ್ಯಾದಿ ಛಂದಗಳಿಂದ ನಿಬದ್ಧವಾಗಿವೆ.

ಯಕ್ಷಗಾನ ಬಯಲಾಟಗಳಲ್ಲಿಯೂ ದೇಶಿ ಛಂದೋರೂಪಗಳಾದ ಷಟ್ಪದಿ, ಗೀತಿಕಾ, ಸೀಸ ಪದ್ಯ, ಸಾಂಗತ್ಯ ಲಾವಣಿ, ಯಾಲಪದ, ಕಂದ ಮುಂತಾದವುಗಳನ್ನು ಭಿನ್ನ ಭಿನ್ನ ರಾಗಗಳಲ್ಲಿ ಇಂದಿಗೂ ಹಾಡಲಾಗುತ್ತಿದೆ.

ಗ್ರೀಕ್ ನಾಟಕಗಳ ಮೂಲವೂ ಇದೇ ರೀತಿಯಲ್ಲಿ ಡಯೋನಿಸಸ್ ದೇವತೆಯ ಜಾತ್ರೆ ಸಂದರ್ಭದಲ್ಲಿ ಹಾಡುತ್ತಿದ್ದ ಅಜಗೀತೆ ಅಥವಾ ಡಿಥೈರೊಂಬಸ್ ಗೀತೆಗಳಲ್ಲಿದೆ. ಗ್ರೀಕ್ ಸಂಸ್ಕೃತಿಯಲ್ಲಿ ಸಂಗೀತಕ್ಕೆ ಮಹತ್ವಪೂರ್ಣ ಸ್ಥಾನವಿದೆ. ಭರತನಂತೂ ೨೮ನೇ ಅಧ್ಯಾಯದಲ್ಲಿ ನಾಟಕ ಸಂಗೀತದ ಬಗ್ಗೆಯೇ ಸುದೀರ್ಘವಾದ ವಿವರಣೆಯನ್ನು ನೀಡಿದ್ದಾನೆ. ಸಂಗೀತ ವಾದ್ಯಗಳನ್ನು 'ಕುತಪ' ಎಂದು ಹೆಸರಿಸಿ, ಅವುಗಳನ್ನು ತತ, ಅವನದ್ಧ, ಘನ, ಸುಷಿರ, ಹೆಸರುಗಳಲ್ಲಿ ತಂತಿವಾದ್ಯ, ಚರ್ಮವಾದ್ಯ, ಘನ ತಾಳವಾದ್ಯಗಳು ಮತ್ತು ಟೊಳ್ಳು (ಕೊಳಲು) ವಾದ್ಯಗಳ ಕಡೆ ನಿರ್ದೇಶಿಸುತ್ತಾನೆ. ಅಂದಮೇಲೆ ನಾಟಕಗಳಲ್ಲಿ ಸಂಗೀತವಿರಬೇಕೆಂಬುದು ಸ್ಪಷ್ಟವಾದ ಸಂಗತಿಯಾಗಿದೆ. ರಸ, ಭಾವ, ವಸ್ತುವಿಗನುಗುಣವಾಗಿ ನಿರ್ದೇಶಕನ ಉಚಿತಾನುಚಿತ ವಿವೇಕದ ಆಧಾರದ ಮೇಲೆ ಸಂಗೀತ ಶಾಸ್ತ್ರೀಯ ರಂಗ ಪ್ರಯೋಗದ ಅಂತರ್ಗತ ಭಾಗವಾಗಿ ಇತ್ತೆಂಬುದನ್ನು ಅಲ್ಲಗಳೆಯುವಂತಿಲ್ಲ. ಶಾಸ್ತ್ರೀಯ ನಾಟಕ ಸಂಪ್ರದಾಯದಲ್ಲಿನ ನಾಟಕಗಳ ಪ್ರಯೋಗದ ವಿಚಾರವಾಗಿ ಅನೇಕ ವಿದ್ವಾಂಸರು ಅಧ್ಯಯನ, ಊಹೆಗಳ ಮೂಲಕ ಭಿನ್ನ ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇಂದು ಕೇರಳದಲ್ಲಿ ಪ್ರಚಲಿತವಿರುವ ಕಥಕ್ಕಳಿ, ಆಂಧ್ರದ ಕೂಚುಪುಡಿ ಸಂಸ್ಕೃತ ನಾಟಕ ಸಂಪ್ರದಾಯದಲ್ಲಿ ಬೆಳೆದು ಬಂದವುಗಳಾದ್ದರಿಂದ ಅವುಗಳ ಪ್ರಯೋಗದ ಸ್ವರೂಪದ ಹಿನ್ನೆಲೆಯಲ್ಲಿ ಸಂಸ್ಕೃತನಾಟಕ ಪ್ರಯೋಗದ ಬಗ್ಗೆ ಕೆಲವು ಅಭಿಪ್ರಾಯಗಳನ್ನು ತಳೆಯುವ ಸಾಧ್ಯತೆಯಿದೆ. ನಾಟಕದ 'ಪಾಠ್ಯ' (ಗದ್ಯಪದ್ಯ ರೂಪದ ಸಾಹಿತ್ಯಭಾಗ)ವನ್ನು ಹಿನ್ನಲೆಯ ಭಾಗವತರು ಅಥವಾ ಭರತರು ಹಾಡುತ್ತಿದ್ದು ನಟರು ಸ್ಪಷ್ಟವಾಗಿಯೋ ಅಸ್ಪಷ್ಟವಾಗಿಯೋ ಅದನ್ನು ಜೊತೆಗೆ ಹಾಡುತ್ತಾ ಕುಣಿತ ಮತ್ತು ಅಭಿನಯದ ಮೂಲಕವಾಗಿಯೂ ಮತ್ತು ಪಾತ್ರ ಸ್ವಭಾವ ಗುಣಧರ್ಮಗಳಿಗನುಗುಣವಾಗಿ ತೊಟ್ಟ ವೇಷ ಭೂಷಣಗಳಿಂದಲೂ ಪ್ರೇಕ್ಷಕರಿಗೆ ಅರ್ಥವನ್ನು ವಿವರಿಸುತ್ತಿದ್ದಿರಬೇಕು. ಇದಕ್ಕೆ ಸಮರ್ಥನೆಯಾಗಿ ಎ.ಆರ್. ಕೃಷ್ಣಶಾಸ್ತ್ರಿಗಳು "ಸಂಸ್ಕೃತ ನಾಟಕಗಳು ಹೇಗೆ ಪ್ರಯೋಗವಾಗುತ್ತಿದ್ದವೋ ಏನೋ ಗೊತ್ತಾಗುವುದಿಲ್ಲ; ಆದರೆ ಸಂಸ್ಕೃತ ನಾಟ್ಯ (ನಾಟಕ) ಛಾಯೆಗಳಾಗಿ ಈಗ ಉಳಿದಿರುವ ಬಯಲಾಟ, ತೆರುಕ್ಕೂತ್ತು, ಬೀದಿ ನಾಟಕ ಮುಂತಾದವುಗಳಿಂದ ಊಹಿಸಿ ಹೀಗೆ ಹೇಳಬಹುದು. 'ನಾಟಕದ ಪ್ರದರ್ಶನದಲ್ಲಿ ಮುಖ್ಯವಾದವು ನೃತ್ಯ ಮತ್ತು ಅಭಿನಯ. ಈ ನೃತ್ಯಕ್ಕೆ ಒಡಗೂಡಿ ಸಂಗೀತವಿರುತ್ತಿತ್ತು, ಇದನ್ನು ನಟನು ಸ್ಪಷ್ಟವಾಗಿಯೋ ಅಸ್ಪಷ್ಟವಾಗಿಯೋ ಹೇಳುತ್ತಿದ್ದನು. ಹಿಂದೆ ಹಿಮ್ಮೇಳದಲ್ಲಿ ಪುಂಗಿ, ಜಾಲಿರಿ, ಮೃದಂಗಾದಿ ವಾದ್ಯಗಳ ಸಹಾಯದಿಂದ ಹಾಡನ್ನೋ, ಪಾಠ್ಯವನ್ನು, ಭಾಗವತರು ಅಥವಾ ಭರತರು ಅವಶ್ಯವಿದ್ದ ಹಾಗೆ ಹೇಳುತ್ತಿದ್ದರು. ನಟನು ತನ್ನ ಪಾತ್ರದ ಗುಣ ಸ್ವಭಾವಗಳನ್ನು ಲೆಕ್ಕ ವೇಷಭೂಷಣಗಳೊಂದಿಗೆ ಕುಣಿಯುತ್ತಾ ತನ್ನ ಅರ್ಥವನ್ನು ಹಸ್ತಾದಿ ಅಭಿನಯಗಳಿಂದ ವ್ಯಕ್ತಪಡಿಸುತ್ತಿದ್ದನು. ಅಭಿನಯ ಶಾಸ್ತ್ರ ಬೆಳೆಯುತ್ತ ಬೆಳೆಯುತ್ತ ಎಲ್ಲ ವಸ್ತುಗಳಿಗೂ ಸಂಜ್ಞೆಗಳ ಕಲ್ಪನೆಯಾದ ಮೇಲೆ ಒಂದು ಅಭಿನಯ ಭಾಷೆಯೇ ಏರ್ಪಟ್ಟು ಕೊನೆಗೆ ನಟರಿಗೆ ಅಭಿನಯಿಸುವುದೂ, ಪ್ರೇಕ್ಷಕರಿಗೆ ವಿಮರ್ಶಿಸುವುದು ಕಷ್ಟವಾಗುತ್ತಾ ಬಂತೆಂದು ತೋರುತ್ತದೆ. ಆದರೆ ಕಥೆ ಪ್ರಸಿದ್ಧವಾಗಿರುತ್ತಿದ್ದುದರಿಂದ ಅದನ್ನು ಸೋ... ತಿಳಿದು ಸಂತೋಷಪಟ್ಟು ಬೆಡಗಿನ ವೇಷಭೂಷಣಗಳನ್ನು ಹಾಡು ಕುಣಿತಗಳನ್ನೂ ನೋಡಿ ಬೆರಗುಪಟ್ಟು ಹೋಗುತ್ತಿದ್ದ ಸಾಮಾನ್ಯ ಜನ ಹಲವರು ಇರುತ್ತಿದ್ದರು.' ಎನ್ನುವ ಮಾತುಗಳು ಸಂಸ್ಕೃತ ನಾಟಕದ ಪ್ರದರ್ಶನ ಪ್ರಯೋಗಗಳ ಬಗ್ಗೆ ಕೇವಲ ಊಹೆಯ ಕಲ್ಪನೆ ಮಾತ್ರವೇ ಸಾಧ್ಯವಾಗುತ್ತದೆ. ಇಂತಹ ಪ್ರಯೋಗಗಳು ಪರಂಪರಾಗತವಾಗಿ ಮುಂದುವರೆದುಕೊಂಡು ಬಂದಿದ್ದರೆ ಒಂದು ಪೂರ್ಣ ನಿಲುವು ಸಾಧ್ಯವಾಗುತ್ತಿತ್ತು. ಮೂಲದಲ್ಲಿ ದೃಶ್ಯಕಾವ್ಯವೆಂದೇ ಪರಿಗಣಿತವಾಗಿದ್ದ ನಾಟಕವೂ ಶ್ರವ್ಯಕಾವ್ಯಗಳ ಮಾದರಿಯಲ್ಲಿಯೇ ವ್ಯಕ್ತಿಯೊಬ್ಬನಿಂದ (ಸೂತ) ಅಭಿನಯಾತ್ಮಕವಾಗಿ ಹಾಡಲ್ಪಡುತ್ತಿದ್ದಿರಬೇಕು. ರಾಮಾಯಣ, ಮಹಾಭಾರತವಲ್ಲದೆ ತಮ್ಮ ಪೋಷಕರಾಜರ ವಿಲಾಸ ವೈಭವಗಳನ್ನೂ ಭಾವಪೂರ್ಣವಾಗಿ ಹಾಡುತ್ತಾ, ಅಭಿನಯಿಸುತ್ತಾ, ಅಭಿಯನಯ ಮೂಲಕ ಅರ್ಥ ವಿವರಿಸುತ್ತಿದ್ದ ಈ ಸೂತ ಅಥವಾ ಚಾರಣವರ್ಗದವರೇ ಭಾರತೀಯ ರಂಗಪರಂಪರೆಯ ಸ್ಥಾಪಕರೆಂದರೆ ತಪ್ಪಾಗಲಾರದು.

ಸಂಸ್ಕೃತ ರಂಗಭೂಮಿ ಈ ರೀತಿಯಲ್ಲಿ ಆರಂಭವಾಗಿ ಮುಂದೆ ಬೆಳೆದು ಭಾಸ, ಕಾಳಿದಾಸ, ಶೂದ್ರಕ, ಭವಭೂತಿ ವಿಶಾಖದತ್ತ, ಹರ್ಷ ಮೊದಲಾದ ಶ್ರೇಷ್ಠನಾಟಕಕಾರರ ಉದಯಕ್ಕೆ ಕಾರಣವಾಯಿತಾದರೂ ಬಹುಬೇಗನೆ ಇವರ ನಂತರದ ಕಾಲಘಟ್ಟ ಬರಡಾಗಿಹೋಯಿತು. ಅಲ್ಲೋ ಇಲ್ಲೋ ಹಲ ಕೆಲವು ನಾಟಕಕಾರರಿದ್ದು ಅಪರೂಪಕ್ಕೆ

ನಾಟಕ ಪ್ರಯೋಗಗಳು ನಡೆದಿರಬಹುದೇನೋ ಆದರೆ ಸಂಸ್ಕೃತ ರಂಗಭೂಮಿಗೆ ಇಂದಿನವರೆಗೂ ಮುಂದುವರೆದು ಉಳಿದುಕೊಂಡು ಬರಲು ಸಾಧ್ಯವಾಗಲಿಲ್ಲ. ಹಾಗೇನಾದರೂ ಭಾರತೀಯ ರಂಗಸಂಪ್ರದಾಯ ಜೀವಂತವಾಗಿ ಉಳಿದಿದೆಯೆಂದರೆ ಅದು ಭರತನ ದೃಷ್ಟಿಯಲ್ಲಿ ಅಷ್ಟಾಗಿ ಮಹತ್ವದ್ದೆನಿಸದ ಉಪರೂಪಕಗಳಿಂದ ಮಾತ್ರ. ಸಂಸ್ಕೃತ ಮಾರ್ಗ ನಾಟಕ ಸಂಪ್ರದಾಯಕ್ಕಿಂತ ಭಿನ್ನವಾದ ಉಪರೂಪಕಗಳ ಬಗ್ಗೆ ಭಾಮಹ, ದಂಡಿ, ಕೋಹಲ, ಹೇಮಚಂದ್ರ, ವಿಶ್ವನಾಥ, ನಂದಿಕೇಶ್ವರ, ಭೋಜ ಮೊದಲಾದ ಲಾಕ್ಷಣಿಕರು ಸಾಕಷ್ಟು ಚರ್ಚೆ ಮಾಡಿದ್ದಾರೆ. ಈ ಉಪರೂಪಕಗಳೆಂದು ಕರೆಸಿಕೊಂಡಿರುವ ಡೊಂಬಿಕಾ, ಪ್ರಸ್ಥಾನ, ಶಿಲ್ಪಕ, ಶಿಷ್ಣಕ, ಭಾನಕ, ಭಾಣ, ರಾಗಶಾವ್ಯ ಕಾವ್ಯ, ಭಾಣಿಕಾ, ಪ್ರೇರಣಾ, ರಾಮಕ್ರೀಡಾ, ರಾಸಕ, ಹಲ್ಲೀಸಕಾ ಇತ್ಯಾದಿಗಳಲ್ಲದೆ ನರ್ತನಕ, ಪ್ರೋಕ್ಷಣಕ, ಗೋಷ್ಠಿ, ತೋಟಕ, ಸಟ್ಟಕ ಮುಂತಾಗಿ ಹೆಚ್ಚು ಕಡಿಮೆ ಹದಿನೆಂಟು ಉಪರೂಪಕಗಳಿದ್ದು, ಇವೇ ಮುಂದೆ ಅಂದರೆ ಇಂದಿಗೂ ಭಾರತಾದ್ಯಂತ ಪ್ರಾದೇಶಿಕ ಭಿನ್ನತೆ, ವೈವಿಧ್ಯತೆ, ವೈಶಿಷ್ಟ್ಯಗಳೊಂದಿಗೆ ಜಾನಪದ ನೃತ್ಯನಾಟಕ ಸಂಪ್ರದಾಯವಾಗಿ ಅತ್ಯಂತ ಚೈತನ್ಯಪೂರ್ಣವಾಗಿಯೂ ಜೀವಂತವಾಗಿಯೂ ಉಳಿದುಕೊಂಡು ಬಂದಿದೆ. ಧನಂಜಯನ ಪ್ರಕಾರ ಪ್ರಧಾನ ರೂಪಕಗಳು ರಸಾಶ್ರಯವಾದರೆ, ಈ ಉಪರೂಪಕಗಳು ಭಾವಾಶ್ರಯವಾದವುಗಳು. ಡಾ.ವಿ. ರಾಘವನ್ ವಿವರಿಸುವಂತೆ ಪ್ರಾಚೀನ ಭಾರತೀಯ ನಾಟಕ ಅಥವಾ ಸಂಸ್ಕೃತ ನಾಟಕಗಳಿಗಿಂತ, ಇವುಗಳಲ್ಲಿ ನೃತ್ಯ ಸಂಗೀತಗಳ ಪ್ರಾಧಾನ್ಯತೆ ಇದ್ದುದರಿಂದ ಇವು ಹೆಚ್ಚು ಆಕರ್ಷಕವೂ ರಂಜನೀಯವೂ ಆಗಿತ್ತು, ಇವೇ ಮುಂದೆ ನೃತ್ಯರೂಪಕಗಳಾಗಿ ಕವಲೊಡೆದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಜನಪ್ರೀಯವಾಗಿವೆ.

ಭರತನ ಕಾಲದಲ್ಲೂ ಮತ್ತು ನಂತರವೂ ಉಪರೂಪಕಗಳೆಂದು ಕರೆಸಿಕೊಂಡಿರುವ 'ಗರುಡ ವಿಜಯ, ಸುಗ್ರೀವಕೇಲನ, ರತ್ನಾವಳಿ, ಕರ್ಪೂರ ಮಂಜರಿ ಎಂಬ ಕಾವ್ಯಗಳು ಲಭ್ಯವಿವೆ. ಈ ಉಪರೂಪಕಗಳಲ್ಲಿಯೇ ಗೀತನಾಟಕ, ನೃತ್ಯನಾಟಕದ ಮೂಲವಿದೆಯಾದರೂ, ಅವುಗಳನ್ನು ಆ ಹೆಸರುಗಳಿಂದ ಕರೆದಿಲ್ಲ. 'ಗೀತಗೋವಿಂದ'ವೊಂದು ಮಾತ್ರವೇ ಗೀತನಾಟಕವೆಂದು ಕರೆಸಿಕೊಂಡು, ಮಿಕ್ಕ ನಾಟಕಗಳಾದ ೧೪ನೇ ಶ.ದ ನೇಪಾಲದಲ್ಲಿ ಮೈಥಿಲಿ ಭಾಷೆಯಲ್ಲಿ ದೊರೆತ ಎರಡು ಕೀರ್ತನೆಯ ನಾಟಕಗಳು, ವಿದ್ಯಾಪತಿಯ 'ಗೋರಕ್ಷ ವಿಜಯ ನಾಟಕ'. 'ಮಣಿಮಂಜರಿ ವಿಜಯ ನಾಟಕ; 'ರಾಮದಾಸ ಝಾರ' ಆನಂದ ವಿಜಯ ನಾಟಕ; ಗೋವಿಂದರ' 'ನಳಚರಿತ್ರೆ'; ಉಮಾಪತಿಯ 'ಪಾರಿಜಾತ ಹರಣ', 'ಜ್ಯೋತಿರೀಶ್ವರ ಕವಿಯ 'ಧೂರ್ತಸಮಾಗಮ', ಮೊದಲಾಗಿ ಹತ್ತಾರು ಉಪರೂಪಕಗಳ ರಚನೆ ಮತ್ತು ಪ್ರಯೋಗಗಳು ೧೫ನೇ ಶ.ದಷ್ಟು ಹೊತ್ತಿಗೆ ಸಾಕಷ್ಟು ಪ್ರಕರ್ಷ ಸ್ಥಿತಿಯನ್ನು ತಲುಪಿದ್ದವೆಂಬುದು ವಿಮರ್ಶಕರ, ವಿದ್ವಾಂಸರ ಖಚಿತ ಅಭಿಪ್ರಾಯಗಳಾಗಿವೆ. ಈ ಉಪರೂಪಕಗಳು ಎಷ್ಟೇ ರಂಜನೀಯವೆನಿಸಿದರೂ ಪ್ರಧಾನ ನಾಟಕಗಳಲ್ಲಿಯಂತೆ ಪ್ರೇಕ್ಷಕನ ಮನಸ್ಸಿನಲ್ಲಿ ರಸೋತ್ಪತ್ತಿ ಮಾಡುವ ಕ್ರಿಯೆಯಲ್ಲಿ ಸೋಲುತ್ತವೆ. ಇದೇ ಕಾರಣದಿಂದಾಗಿ ಭರತಾದಿಗಳಿಂದ, ಮತ್ತು ಸಂಸ್ಕೃತ ನಾಟಕದ ಮಾರ್ಗ ಪರಂಪರೆಯಲ್ಲಿ ಬಂದಂತಹವರಿಗೆ ಈ ಉಪರೂಪಕಗಳ ಬಗ್ಗೆ ಉದಾತ್ತ ಮನೋಭಾವ ಸಾಧ್ಯವಾಗಲಿಲ್ಲ. ಆದರೆ ರಸಪ್ರಧಾನವಾದ ಸಂಸ್ಕೃತ ನಾಟಕದ ಮಾರ್ಗ ಪರಂಪರೆ ಶ್ರೀಮಂತ, ವರಿಷ್ಠ, ಅಧಿಕಾರಿ ವರ್ಗದ, ಅರಸರ ಘೋಷಣೆ, ಪ್ರೋತ್ಸಾಹಗಳಲ್ಲಿ ಬೆಳೆದು ಬರುತ್ತಿದ್ದರೆ, ಉಪರೂಪಕಗಳು ದೇಶೀ ಮಾರ್ಗದಲ್ಲಿ ಜನಸಾಮಾನ್ಯರ ನಡುವೆ ಜಾತ್ರೆ, ಉತ್ಸವ ಹಬ್ಬಗಳಲ್ಲಿ ಪ್ರದರ್ಶನಗೊಳ್ಳುತ್ತ ಜೀವಂತವಾಗಿದ್ದವು.

ಸಂಸ್ಕೃತ ಮಾರ್ಗನಾಟಕ ಪರಂಪರೆ ಕ್ರಿ.ಶ. ೧೫ನೇ ಶದ ಸುಮಾರಿಗೆ ಸ್ಥಗಿತಗೊಂಡಿದ್ದರೂ, ಉಪರೂಪಕಗಳ ರೂಪಾಂತರಗಳಾದ ಜಾನಪದೀಯ ನೃತ್ಯನಾಟಕ, ಗೀತನಾಟಕಾದಿಗಳಲ್ಲಿ, ಕೆಲವು ಪ್ರಕಾರಗಳಲ್ಲಿಯಾದರೂ ಮಾರ್ಗಿಯ ಲಕ್ಷಣಗಳಲ್ಲಿ ಕೆಲವನ್ನು ಉಳಿಸಿಕೊಂಡು ಬಂದಿದೆ. ಶ್ರೀಮತಿ ಕಪಿಲಾವಾತ್ಸ್ಯಯನ್ ಕೇರಳದ ಕೂಡಿಯಾಟ್ಟಂ ಎಂಬ ರಂಗಕಲೆ ಸಂಸ್ಕೃತ ರಂಗಭೂಮಿಯ ಬೆಳವಣಿಗೆಯ ಜೊತೆಗೆ ನೇರ ಸಂಬಂಧ ಹೊಂದಿತ್ತೆಂದು ಅಭಿಪ್ರಾಯ ಪಡುತ್ತಾರೆ.

ಒಟ್ಟಾರೆಯಾಗಿ ಭಾರತೀಯ ರಂಗಸಂಪ್ರದಾಯಗಳ ಬೆಳವಣಿಗೆಯ ಮಜಲುಗಳನ್ನು, ರೀತಿಗಳನ್ನು, ಗಮನಿಸಿದಾಗ ಶಾಸ್ತ್ರೀಯ ಸಂಸ್ಕೃತ ರಂಗಭೂಮಿ ಒಂದು ಹಂತದಲ್ಲಿ ನಿಂತುಹೋದರೂ ಜನಮನ್ನಣೆ, ಪ್ರೋತ್ಸಾಹಗಳಿಂದ ಜೀವಂತವಾಗಿದ್ದ ಸಂಗೀತ, ನೃತ್ಯಗಳನ್ನು ಅಂತರ್ಗತ ಭಾಗವಾಗಿ ಅಳವಡಿಸಿಕೊಂಡಿದ್ದ ಉಪರೂಪಕಗಳು ಇಂದಿಗೂ ಭಾರತಾದ್ಯಂತ ಉತ್ತರ ದಕ್ಷಿಣ ಭಾಗಗಳಲ್ಲಿ ದೇಶೀಯ ನೆಲೆಯಲ್ಲಿ, ಆಯಾ ಪ್ರದೇಶಗಳ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡು, ಯಕ್ಷಗಾನ ಬಯಲಾಟ, ಕೂಚಿಪುಡಿ, ಕೂಡಿಯಾಟ್ಟಂ, ಕಥಕ್ಕಳಿ, ತೆರಕ್ಕೂತ್ತು, ಓಟ್ಟಂತುಳಲ್, ಜಾತ್ರಾ, ಅಂಕಿಯಾನಾಟ ಭವಾಯ್, ಚೌ, ತಮಾಷಾ ಇತ್ಯಾದಿ ಹೆಸರುಗಳಲ್ಲಿ ಪ್ರಚಲಿತವಾಗಿ, ಸಾಕಷ್ಟು ಪ್ರದರ್ಶನಗಳನ್ನು ಕಾಣುತ್ತಿವೆ. ಇವೆಲ್ಲವೂ ಉಪರೂಪಕಗಳ ರೂಪಾಂತರಗಳಾಗಿ ಗೀತನಾಟಕ, ಗೀತನೃತ್ಯನಾಟಕ, ನೃತ್ಯ ನಾಟಕ ಇತ್ಯಾದಿಯಾಗಿ ಗುರುತಿಸಿಕೊಂಡಿವೆ. ಇವುಗಳ ಸ್ಥೂಲ ಪರಿಚಯಕ್ಕಾಗಿ ಉತ್ತರ ಭಾರತ, ದಕ್ಷಿಣಭಾರತದ ರಂಗಸಂಪ್ರದಾಯಗಳೆಂದು ವಿಂಗಡಿಸಿಕೊಳ್ಳಬಹುದು.

ದಕ್ಷಿಣ ಭಾರತವೆಂದಾಗ, ತಮಿಳುನಾಡಿನ ತೆರುಕ್ಕೂತ್ತು, ಕೊರವಂಜಿ; ಕೇರಳದ ಕೂತ್ತು, ಕೂಡಿಯಾಟ್ಟಂ, ಓಟ್ಟಂ

ತುಳ್ಳಲ್, ಕಥಕ್ಕಳಿ; ಆಂಧ್ರದ ಕೂಚಿಪುಡಿ ಭಾಗವತ ಮೇಳ; ಕರ್ನಾಟಕದ ಯಕ್ಷಗಾನ ಬಯಲಾಟ ಇವೇ ಇಂದಿಗೂ ಪ್ರಚಲಿತ ರಂಗ ಸಂಪ್ರದಾಯಗಳೆನಿಸಿವೆ

ಕೇರಳದ ರಂಗಸಂಪ್ರದಾಯವಾದ ಚಾಕ್ಯರ್ ಮತ್ತು ಸಂಸ್ಕೃತ ನಾಟಕ ಸಂಪ್ರದಾಯವನ್ನು 'ಆರಾಧನ ಕರ್ಮ'ವಾಗಿ ಉಳಿಸಿಕೊಂಡು ಬಂದಿದೆ. ಅಂತೆಯೇ ಕೇರಳ ಕಥಕ್ಕಳಿ ಕೂಡಿಯಾಟ್ಟಂಗಳು ಸಂಸ್ಕೃತ ರಂಗ ಸಂಪ್ರದಾಯವನ್ನು ಸ್ವಲ್ಪ ಮಟ್ಟಿಗೆ ಉಳಿಸಿಕೊಂಡಿದೆ. ಅಲ್ಲದೆ ಜೊತೆಗೆ ಜಾನಪದೀಯ ಸಂಪ್ರದಾಯವನ್ನು ಮೇಳವಿಸಿಕೊಂಡಿದೆ. ಈ ಕೂತ್ತು, ಆಟ್ಟಂ ಪ್ರದರ್ಶನಗಳಲ್ಲಿ ಗೀತ, ಅಭಿನಯ ಭಾಗಗಳೇ ಹೆಚ್ಚಾಗಿವೆ. ಇವುಗಳ ರಚನೆಯಲ್ಲಿ ಛಂದೋವೃತ್ತಗಳು, ಸಂಗೀತ ರಚನೆಗಳು. ಮಧ್ಯೆ ಮಧ್ಯೆ ಗದ್ಯ ಭಾಗಗಳು ಕಾಣಿಸಿಕೊಂಡಿವೆ. ಹರಿಶ್ಚಂದ್ರ, ಕಟ್ಟಬೊಮ್ಮನ್ ಶ್ರೀವಳ್ಳಿ ಮೊದಲಾದವು ತೇರುಕ್ಕೂತ್ತು ರಚನೆಗಳಾಗಿವೆ. ಜಾನಪದ ನೃತ್ಯನಾಟಕ ಸಂಪ್ರದಾಯಗಳಾಗಿರುವ ಈ 'ಕೂತ್ತು' ರಚನೆಗಳ ವಸ್ತು ರಾಮಾಯಣ, ಮಹಾಭಾರತಗಳಿಂದ ತೆಗೆದುಕೊಂಡಿದ್ದೇ ಅದರೂ, ಅದನ್ನು ಸಮಕಾಲೀನ ವಿಚಾರಧಾರೆಗಳಿಗೆ ಹೊಂದಿಸಿಕೊಳ್ಳಲಾಗಿದೆ. ಈ ಪ್ರದರ್ಶನದಲ್ಲಿ ಹಿನ್ನೆಲೆ ವಾದ್ಯಗಳಿದ್ದು, ಭರತನು ವಿವರಿಸಿರುವ 'ಪೂರ್ವರಂಗದ' ವಿಧಿಗಳೆಲ್ಲವನ್ನೂ ಅಸುಸರಿಸಲಾಗುತ್ತದೆ. ಮುಖ್ಯಪಾತ್ರ 'ಚಾಕ್ಯರ್' ಇವನದೇ ಇಡೀ ಪ್ರದರ್ಶನದುದ್ದಕ್ಕೂ, ನಾಂವಿಯಾರ್ (ಸ್ತ್ರೀವೇಷದಲ್ಲಿನ ಪುರುಷ) ಕಂಠದ ಹಿನ್ನೆಲೆಯಲ್ಲಿ ಅಭಿನಯವಿದ್ದು, ಇದೊಂದು ಏಕಪಾತ್ರಾಭಿನಯ 'ನಾಟ್ಯ'ರೂಪದಂತಿರುತ್ತದೆ.

ಇದರದೇ ಮತ್ತೊಂದು ಕಲಾ ಪ್ರಭೇದ 'ಕೂಡಿಯಾಟ್ಟಂ' ಜಯದೇವನ ಗೀತಗೋವಿಂದದ ಅಷ್ಟಪದಿಗಳ ಆಧಾರದ ಮೇಲೆ 'ಕೃಷ್ಣಾಟ್ಟಂ' ಎಂದು ನೃತ್ಯ ಪ್ರಭೇದವನ್ನು ರೂಪಿಸಿಕೊಳ್ಳಲಾಗಿದೆ. 'ಕೂಡಿಯಾಟ್ಟಂ'ಗಳಲ್ಲಿ ವಾಚಿಕಾಭಿನಯಕ್ಕೆ ಹೆಚ್ಚಿನ ಮಹತ್ವ, ಭರತನ ನಾಟ್ಯಶಾಸ್ತ್ರ ನಿಯಮಗಳನ್ನು ಪಾಲಿಸುತ್ತಾ ನಾಟ್ಯ ಶುದ್ಧತೆಯನ್ನು ಕೂತ್ತು, ಕೂಡಿಯಾಟ್ಟಂಗಳಲ್ಲಿ ಕಾಯ್ದಿರಿಸಿಕೊಳ್ಳಲಾಗಿದೆ.

ಇದೇ ಪ್ರದೇಶದ ಓಟ್ಟಂ ತುಳ್ಳಲ್‌ಗೆ, ಕೂಡಿಯಾಟ್ಟಂ, ಕಥಕ್ಕಳಿ ನೃತ್ಯನಾಟಕಗಳಿಗೆ ಸಿಕ್ಕ ಪ್ರೋತ್ಸಾಹ ಸಿಗಲಿಲ್ಲ. ಮೊದಲಿನಿಂದಲೂ ಬ್ರಾಹ್ಮಣ ಪಕ್ಷಪಾತಿಗಳಾಗಿದ್ದ ಅರಸರು ಶ್ರೀಮಂತರು, ಪ್ರತಿಷ್ಠಿತರು ಪ್ರೋತ್ಸಾಹ ನೀಡುತ್ತಿರಲಿಲ್ಲವಾದ ಕಾರಣ ಓಟ್ಟಂ ತುಳ್ಳಲ್ ಪಾತ್ರನು ಸಮಕಾಲೀನ ರಾಜಕೀಯ ಮತ್ತು ರಾಜನನ್ನು ಗೇಲಿಮಾಡುವ ಸಾಹಸಕ್ಕೆ ಇಳಿದಿದ್ದ. ವ್ಯಂಗ್ಯ ವಿಡಂಬನೆಗಳೇ ಈ ಪ್ರದರ್ಶನದಲ್ಲಿನ ಮುಖ್ಯಲಕ್ಷಣ.

ಕಥಕ್ಕಳಿ ಇಂದಿಗೂ ಕೇರಳದ ಮುಖ್ಯ ಸಾಂಪ್ರದಾಯಿಕ ನೃತ್ಯನಾಟಕವಾಗಿದೆ. ಇದಕ್ಕೆ ಪೂರ್ವಭಾವಿಯಾಗಿ ಮತ್ತು ಸಮಕಾಲೀನವಾಗಿಯೂ ಪ್ರಚಲಿತವಿದ್ದ ಕೃಷ್ಣಾಟ್ಟಂ, ರಾಮನಾಟ್ಯಂ, ಕೂಡಿಯಾಟ್ಯಂ, ಮೋಹಿನಿ ಆಟ್ಯಂ, ತುಳ್ಳಲ್ ಮೊದಲಾದ ಜಾನಪದ ಸಾಂಪ್ರದಾಯಿಕ ನೃತ್ಯನಾಟಕ ರೂಪಗಳಿದ್ದರೂ ವಿಶ್ವವ್ಯಾಪಿ ಖ್ಯಾತಿಯನ್ನು ಪಡೆಯಲು ಸಾಧ್ಯವಾದದ್ದು ಕಥಕ್ಕಳಿಗೆ ಮಾತ್ರ. ಇದರ ನಾಟ್ಯಶಾಸ್ತ್ರ, ತಂತ್ರ ಪರಿಜ್ಞಾನ ಕಲಾತ್ಮಕ ಅಭಿವ್ಯಕ್ತಿ, ನಿರ್ಮಿಸುವ ಕಾಲ್ಪನಿಕ ಜಗತ್ತು ಅಲೌಕಿಕ ಪಾತ್ರಗಳು, ಅದ್ದೂರಿಯಾದ ವೇಷಭೂಷಣಗಳು ಅಭಿನಯದ ಗತ್ತುಗಳು ಇವೆಲ್ಲವೂ ಅದ್ಭುತ, ರಮ್ಯ ಪರಿಸರವನ್ನು, ಪರಿಣಾಮವನ್ನು ಉಂಟುಮಾಡುವಲ್ಲಿ ಅತ್ಯಂತ ಯಶಸ್ವಿ ಕಲಾರೂಪವಾಗಿದೆ.

ಕಥಕ್ಕಳಿ, ಮುಖ್ಯವಾಗಿ ಕೂಡಿಯಾಟ್ಟಂ, ಕೃಷ್ಣಾಟ್ಟಂ, ರಾಮನಾಟ್ಯಂ ಮತ್ತು ಚಾಕ್ಯಾರ್ ಕೂತ್ತುವಿನಲ್ಲಿನ ಅನೇಕ ಅಂಶಗಳನ್ನು ಮೇಳವಿಸಿಕೊಂಡು ಪರಿಷ್ಕೃತವಾಗಿ ಮೈದಳೆದದ್ದೇ ಅಲ್ಲದೆ, ಭರತನು ವಿವರಿಸುವ ಅನೇಕ ನಾಟ್ಯ ನಿಯಮಗಳನ್ನು ಕಾಪಾಡಿಕೊಂಡು ಸಾಂಪ್ರದಾಯಿಕತೆಯನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದೆ.

೧೭ನೇ ಶ.ದ ಪೂರ್ವದಲ್ಲಿದ್ದ ರಾಜಾಕೊಟ್ಟಾರ್‌ಕರ್, ರಾಮ ಕಥೆಯನ್ನು ಆಧರಿಸಿ, ಮಲಯಾಳಂನಲ್ಲಿ ರಂಗ ಪ್ರದರ್ಶನಕ್ಕೆಂದು ರಚಿಸಿದ 'ಅಟ್ಟಕಥಾ'ವೇ ಕಥಕ್ಕಳಿಗೆ ದಾರಿ ಮಾಡಿತು. ಮೊದಲಿನಿಂದಲೂ ಸಂಸ್ಕೃತದಲ್ಲಿಯೇ ಮಾರ್ಗೀಯ ಸಾಹಿತ್ಯ ರಚನೆಯಾಗುತ್ತಿದ್ದುದಕ್ಕೆ ಸವಲೆಂಬಂತೆ ಕೊಟ್ಟಾರಕರ್ ದೊರೆ ದೇಶೀ ಭಾಷೆಯಲ್ಲಿ ನೃತ್ಯನಾಟಕ ಪ್ರದರ್ಶನಕ್ಕೆ ಪಠ್ಯವನ್ನು ಬರೆಯತೊಡಗಿದ. ಅಲ್ಲದೆ ರಾಮಾಯಣ ಕಥಾವಸ್ತುವೊಂದೇ ಸಾಲದೆನಿಸಿದ್ದಕ್ಕೆ ಮಹಾಭಾರತದಿಂದಲೂ ಕಥಾವಸ್ತುವನ್ನು ತೆಗೆದುಕೊಂಡು 'ಅಟ್ಟಕಥೆ'ಗಳನ್ನು ರಚಿಸಿದ. ಸ್ವಾತಿ ತಿರುನಾಳರೂ 'ಕಥಕ್ಕಳಿ' ನಾಟಕಗಳನ್ನು ಬರೆದರು. ಕಥಕ್ಕಳಿಯಲ್ಲಿ ಸಂಗೀತವೇ ಪ್ರಧಾನ, ಶ್ಲೋಕಗಳು, ಪದವೃತ್ತಗಳು, ಜತಿಸ್ವರಗಳು ಮತ್ತು ನೃತ್ಯಕ್ಕೆ ಒದಗುವ ಅನೇಕ 'ಪದಂ'ಗಳನ್ನು ಬಳಸಲಾಗುತ್ತದೆ.

ಮತ್ತೊಂದು ಪ್ರಮುಖವಾದ ಅಂಶವೆಂದರೆ, ನಮ್ಮ ಯಕ್ಷಗಾನ, ಪ್ರದರ್ಶನಗಳಲ್ಲಿ ಕಾಣುವಂತೆ, ಅಭಿನಯಕ್ಕಿಂತ ನೃತ್ಯ, ವೃತ್ತಗಳಿಗೇ ಪ್ರಾಧಾನ್ಯ ಕಲಾವಿದರು ಹಿನ್ನೆಲೆಯ ಗಾಯನಕ್ಕೆ ಅನುಗುಣವಾಗಿ ಹಸ್ತಾಭಿನಯ ಭಾಷಾಭಿನಯ ಪ್ರದರ್ಶಿಸಬೇಕು. ಮೂಕಾಭಿನಯವೇ ಇದರ ಭಾಷೆ. ಆದರೆ ಕಲಾವಿದರ ಸಾಮರ್ಥ್ಯ ನೇತ್ರಾಭಿನಯದ ಮೇಲೆ ನಿಂತಿರುತ್ತದೆ, ಕಣ್ಣಾಲಿಗಳು, ಹುಬ್ಬುಗಳೇ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳನ್ನು ಅಭಿವ್ಯಕ್ತಿಸುವ ಮಾಧ್ಯಮಗಳು. ಒಟ್ಟಿನಲ್ಲಿ ಹೇಳಬೇಕೆಂದರೆ ನಾಟಕದ ವಸ್ತು, ಪಾತ್ರ ಸ್ವಭಾವ, ಸನ್ನಿವೇಶ, ಭಾಷೆ ಎಲ್ಲವೂ ಆಂಗಿಕ ಆಹಾರ್ಯಗಳ ಮೂಲಕವೇ ನಿರೂಪಿತವಾಗುತ್ತವೆ. ಅದಕ್ಕಾಗಿಯೇ 'ಕಥಕ್ಕಳಿ'ಯ ವೇಷಭೂಷಣ, ಮುಖವರ್ಣಗಳು ವಿಶೇಷ ರೀತಿಯಲ್ಲಿ ಸಿದ್ಧಗೊಳಿಸಲಾಗುತ್ತದೆ. ಸ್ತ್ರೀಪಾತ್ರಗಳಿಗೆ ಇದರಲ್ಲಿ ಪ್ರವೇಶವಿಲ್ಲ.

ಪುರುಷರಿಂದಲೇ ಸ್ತ್ರೀ ಪಾತ್ರಗಳ ನಿರ್ವಹಣೆ, ಬೇರೆ ಬೇರೆ ಸ್ತ್ರೀ ಪಾತ್ರಗಳು ಸಪ್ಪೆ ಎನ್ನಿಸಿದರೂ ರಾಕ್ಷಸಿ ಪಾತ್ರಗಳು ಮಾತ್ರ ಅತ್ಯಂತ ಭಯಂಕರವಾಗಿ ಕಾಣಿಸಿಕೊಂಡು ಅಬ್ಬರದ ನೃತ್ಯ ಪ್ರದರ್ಶನ ನೀಡುತ್ತಾರೆ. ಇತ್ತೀಚೆಗೆ ಅಲ್ಪ ಸ್ವಲ್ಪ ಬದಲಾವಣೆಗಳ ಮೂಲಕ ಆಧುನಿಕತೆಯ ಸ್ಪರ್ಶವನ್ನು ನೀಡುವ ಪ್ರಯತ್ನಗಳಾಗುತ್ತಿವೆ.

ಇದರಂತೆಯೇ ಆಂಧ್ರದ 'ಕೂಚಿಪುಡಿ' ಭಾಗವತ ಮೇಳ ಭಾರತದಾದ್ಯಂತ ವ್ಯಾಪಿಸಿದ್ದ ವೈಷ್ಣವ ಧರ್ಮದ ಪ್ರಭಾವದಿಂದ ರೂಪತಳೆದ ನೃತ್ಯ ನಾಟಕ ಸಂಪ್ರದಾಯಗಳಾಗಿವೆ. ಆದ್ದರಿಂದ ಈ ಕಲಾಪ್ರದರ್ಶನಗಳಲ್ಲಿನ ವಸ್ತು ವಿಷ್ಣು, ಕೃಷ್ಣಪರವಾದ ವೃತ್ತಾಂತಗಳಾಗಿವೆ.

ತೀರ್ಥನಾರಾಯಣರಿಂದ ಪ್ರಾರಂಭವಾದ 'ಕೂಚಿಪುಡಿ' ನಾಟಕ ಸಂಪ್ರದಾಯ, ಅವರ ಅನುಯಾಯಿಗಳಾದ ವೆಂಕಟರಾಮ ಶಾಸ್ತ್ರಿಗಳಿಂದ ಮುಂದುವರೆಯಿತು. ಇವರು ಪ್ರಹ್ಲಾದ ಚರಿತಮ್, ರುಕ್ಮಾಂಗದ, ಗೊಲ್ಲಭಾಮ, ಸೀತಾಕಲ್ಯಾಣ ಇತ್ಯಾದಿಯಾಗಿ ಸುಮಾರು ೧೨ ನಾಟಕಗಳನ್ನು ರಚಿಸಿ, 'ಕೂಚಿಪುಡಿ' ನಾಟ್ಯ ಸಂಪ್ರದಾಯವನ್ನು ಶ್ರೀಮಂತಗೊಳಿಸಿದರು. ಸಂಗೀತ, ನೃತ್ಯ, ಅಭಿನಯದಲ್ಲಿ ಸಮೃದ್ಧವಾದ ಈ ನಾಟಕ ಸಂಪ್ರದಾಯಗಳು ಪುರಾಣ, ಇತಿಹಾಸ, ಕಾವ್ಯಗಳಿಂದ ಆಯ್ದುಕೊಂಡ ವಸ್ತುವನ್ನು ಗದ್ಯ, ಪದ್ಯ, ಗೀತ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿದರು. ಚಂಪು, ಶತಕ, ದ್ವಿಪದಿ ಮತ್ತು ಅಂದಿನ ಕಾಲದಲ್ಲಿ ಪ್ರಚಲಿತವಿದ್ದ ಸಂಗೀತ ಶೈಲಿಗಳನ್ನೂ ಬಳಸಿಕೊಳ್ಳಲಾಗಿತ್ತು. ಗೋಲ್ಕೊಂಡದ ನವಾಬ ಅಮಲ್ ಹಸನ್ ತಾನೇಷಾ'ನಿಂದ ಉಂಬಳಿಯಾಗಿ ದೊರೆತ ಕೂಚಿಪುಡಿ ಗ್ರಾಮವೇ ಕೂಚಿಪುಡಿ ಕಲಾವಿದರ ನೆಲೆಯಾಗಿದೆ.

ಮೊದಲಿಗೆ ಕೂಚಿಪುಡಿ ಅಥವಾ ಭಾಗವತಮೇಳದಲ್ಲಿ ಶಿವಲೀಲೆಗಳೇ ಕಥಾನಕಗಳಾಗಿರುತ್ತಿದ್ದವು. ಆದರೆ ವೈಷ್ಣವ ಧರ್ಮದ ಪ್ರಭಾವದಿಂದ ಕೃಷ್ಣ, ವಿಷ್ಣುಪರ ಕಥಾನಕಗಳು ಪ್ರಾಮುಖ್ಯತೆ ಪಡೆದವು. ಇದರಿಂದಾಗಿ ಇದಕ್ಕೆ ಭಾಗವತ ಮೇಳವೆಂದು ಹೆಸರಾಯಿತು. ಕೃಷ್ಣ ಸತ್ಯಭಾಮೆಯರ ಪ್ರಣಯ ನಿರೂಪಣೆ, ಸತ್ಯಭಾಮೆ ಪಾತ್ರಕ್ಕೆ ಸಂದ ಪ್ರಾಧಾನ್ಯತೆಗಳಿಂದ ಇದಕ್ಕೆ 'ಭಾಮಾಕಲಾಪಂ' ಎಂದೂ ಹೆಸರಾಯಿತು. ಇದೇ ರೀತಿ ಗೊಲ್ಲತಿಗೆ ದೊರೆತ ಪ್ರಾಧಾನ್ಯತೆ 'ಗೊಲ್ಲ ಕಲಾಪಂ'ಗೆ ದಾರಿ ಮಾಡಿತು. ಈ ಎರಡೂ ಕಲಾಪಂಗಳು ಏಕಪಾತ್ರಾಭಿನಯ ಪ್ರಧಾನವಾದವುಗಳು. ಭಾಮಾಕಲಾಪಂ ನಲ್ಲಿ ಸತ್ಯಭಾಮೆಯೊಬ್ಬಳೇ ಸೂತ್ರಧಾರ, ವಿದೂಷಕ, ಸಖಿ, ಕಥೆಗಾರ ಪಾತ್ರಗಳನ್ನು ಸಂದರ್ಭಾನುಸಾರವಾಗಿ ನಿರ್ವಹಿಸುತ್ತಾಳೆ. ಸಂಭಾಷಣೆ ಪ್ರಶ್ನೋತ್ತರ ರೂಪದಲ್ಲಿ ಇರುತ್ತದೆ. 'ಭಾಮಾಕಲಾಪಂ' ಆಧ್ಯಾತ್ಮಿಕ ಧ್ವನಿಯುಳ್ಳದ್ದು ಸತ್ಯಭಾಮೆ ಜೀವಾತ್ಮವನ್ನು ಕೃಷ್ಣ 'ಪರಮಾತ್ಮ'ನನ್ನು ಸಂಕೇತಿಸುತ್ತಾರೆ. ಸತ್ಯಭಾಮೆಯ ವಿರಹವೇದನೆ, ಜೀವಾತ್ಮ ಪರಮಾತ್ಮನನ್ನು ಸೇರಲು ತವಕಿಸುವ ಸ್ಥಿತಿಯೆಂದು ಭಾವಿಸಲಾಗಿದೆ. ಅದರಲ್ಲಿಯೂ ಈ ಪ್ರದರ್ಶನದಲ್ಲಿ ಸತ್ಯ ಸತ್ಯಭಾಮೆಯ 'ಜಡೆಗೆ' ಹೆಚ್ಚಿನ ಪ್ರಾಶಸ್ತ್ಯ. ಪರದೆಯ ಹಿಂದಿನಿಂದ ಪ್ರೇಕ್ಷಕರಿಗೆ ಕಾಣುವಂತೆ ಜಡೆಯನ್ನು ಪರದೆಯ ಮುಂಭಾಗದಲ್ಲಿ ಇಳಿಬಿಡಲಾಗುತ್ತದೆ. ಜಡೆಯ ವರ್ಣನೆ, ಜಡೆಯನ್ನೇ ಪಣವಾಗಿ ಒಡ್ಡುವ ಸನ್ನಿವೇಶವೇ ಅತ್ಯಂತ ಮಹತ್ವದ್ದು. ಜಡೆಯ ಒಂದೊಂದು ಮಜಲನ್ನು ಅಧಿಭೌತಿಕ ನೆಲೆಯಲ್ಲಿ, ತಾತ್ವಿಕ ಪರಿಭಾಷೆಯಲ್ಲಿ ವಿವರಿಸಲಾಗುತ್ತದೆ. ಮೊದಲಿಗೆ ಇದು ನೃತ್ಯನಾಟಕವಾಗಿದ್ದು, ಈಗ ಅದರ ಶೈಲಿಯಲ್ಲಿ ಏಕವ್ಯಕ್ತಿ ನೃತ್ಯ ಪ್ರದರ್ಶನಗಳನ್ನು ನೀಡಲಾಗುತ್ತಿದೆ.

ಇವುಗಳ ಜೊತೆಗೆ ಆಂಧ್ರದಲ್ಲಿ, ಪ್ರಾದೇಶಿಕ ಜಾನಪದ ರೂಪಗಳಾದ 'ವೀಧಿನಾಟಕಂ' ಪಗಟಿವೇಷಾಲು, ಬಹುರೂಪಮುಲು, ಬುರ್ರಕಥಲು, ಅಲ್ಲದೆ ಕರ್ನಾಟಕದಲ್ಲಿನ ಯಕ್ಷಗಾನಗಳಂತೆ, 'ಯಕ್ಷಗಾನಮುಲು' ಎಂಬೆಲ್ಲಾ ಪ್ರದರ್ಶನಗಳೂ ರಾಜಾಪ್ರಜಾಭೇದವಿಲ್ಲದೆ ಎಲ್ಲರಿಗೂ ಮನರಂಜನೆಯನ್ನು ಒದಗಿಸುತ್ತಿವೆ. ಯಕ್ಷಗಾನಗಳಂತೂ, ಕರ್ನಾಟಕದ ಯಕ್ಷಗಾನಗಳನ್ನೇ ಸಂಪೂರ್ಣವಾಗಿ ಹೋಲುತ್ತವೆ.

ಕರ್ನಾಟಕದ ನೃತ್ಯನಾಟಕ ಸಂಪ್ರದಾಯಗಳ ಸಂದರ್ಭದಲ್ಲಿ ಯಕ್ಷಗಾನ ಬಯಲಾಟಗಳು ಬಹುಮುಖ್ಯವೂ ಮತ್ತು ಅತ್ಯಂತ ಪ್ರಚಲಿತ ಜನಪ್ರೀಯ ಕಲಾಪ್ರದರ್ಶನ ರೂಪಗಳಾಗಿವೆ.

ಕೂಚಿಪುಡಿ, ಕಥಕ್ಕಳಿ, ಕೂತ್ತು ಪ್ರದರ್ಶನಗಳಂತೆಯೇ ಇದೂ ಬಯಲುರಂಗ ಪ್ರದರ್ಶನ ಕಲೆಯೇ ಆಗಿವೆ. ಪ್ರದರ್ಶನ ಪೂರ್ವದಲ್ಲಿ, ಬಣ್ಣದ ಚೌಕಿಯಲ್ಲಿ ಪೂರ್ವರಂಗದ ವಿಧಿಗಳನ್ನು ಆಚರಿಸಲಾಗುತ್ತದೆ. ವಿನಾಯಕ ಪೂಜೆ, ಭಾಗವತರ, ಹನುಮನಾಯಕರ ರಂಗ ಪ್ರವೇಶ – ಸಭಾಸ್ತುತಿ ಪ್ರಾರ್ಥನೆ, ಕೋಡಂಗಿ ಭಾಗವತರ ನಡುವೆ ಅಸಂಬದ್ಧ ಮಾತುಕತೆ ಬಾಲಗೋಪಾಲ ಪ್ರವೇಶ, ಸ್ತ್ರೀವೇಷಧಾರಿಗಳ ನರ್ತನ ಇತ್ಯಾದಿಗಳೆಲ್ಲ ವಿಧಿವತ್ತಾಗಿ ನಡೆದ ಮೇಲೆ ಕಥಾರಂಭ– ಪಾತ್ರಗಳು, ಕಥೆಗೆ ಸಂಬಂಧಿಸಿದಂತೆ ಪ್ರವೇಶಿಸಿ, ಹಿನ್ನೆಲೆಗೆ ಹಾಡುತ್ತಿರುವ ಭಾಗವತನ ಹಾಡುಗಳನ್ನೂ ಅರ್ಥೈಸಿ, ಮಾತಾಡಿ ಹಾವಭಾವಗಳ ಮೂಲಕವಾಗಿ ವಿವರಿಸುತ್ತಾರೆ. 'ಯಕ್ಷಗಾನ'ಗಳನ್ನು ಯಕ್ಷಗಾನ ಪ್ರಸಂಗಗಳೆಂದು ಕರೆಯಲಾಗುತ್ತದೆ. ಇವುಗಳಲ್ಲಿ ವೀರ, ಶೃಂಗಾರ, ಕರುಣ ರಸಗಳ ಪ್ರತಿಪಾದನೆಯಿದ್ದರೂ, ವೀರರಸಕ್ಕೆ ಹೆಚ್ಚಿನ ಮಾನ್ಯತೆ, ಕಥಾನಕ ಯಾವುದೇ ಇದ್ದರೂ 'ಕಾಳಗ'ಕ್ಕೆ ಅವಕಾಶ ಅನಿವಾರ್ಯ. ಸಾಮಾನ್ಯವಾಗಿ ಕಥಾನಕಗಳು, ಪರಿಣಯಗಳು, ಸ್ವಯಂವರಗಳು, ಕಲ್ಯಾಣಗಳು, ಕಾಳಗಗಳು – ಹೀಗಿದ್ದು, ರಾಮಾಯಣ, ಮಹಾಭಾರತ ಮತ್ತು ಪುರಾಣಗಳಿಂದ ಸನ್ನಿವೇಶಗಳ ಆಯ್ಕೆಯಾಗಿರುತ್ತೆ ಪ್ರಮುಖವಾದ

ಕಾಳಗಗಳೆಂದರೆ ಅಭಿಮನ್ಯುಕಾಳಗ, ಕೃಷ್ಣಾರ್ಜುನ ಕಾಳಗ, ಶಂಬರಾಸುರ ಕಾಳಗ, ಬಾಣಾಸುರ ಕಾಳಗ, ಇಲ್ಲವೆ ರುಕ್ಮಿಣಿ ಸ್ವಯಂವರ, ಸೀತಾ ಸ್ವಯಂವರ– ಎಂದೆಲ್ಲಾ ಹೆಸರುಗಳಲ್ಲಿ ಪ್ರಸಂಗಗಳು ಪ್ರದರ್ಶನಗೊಳ್ಳುತ್ತವೆ.

ಯಕ್ಷಗಾನಗಳ ಮೂಲದಿಂದಲೇ ಹೊರಟ ಬಯಲಾಟಗಳು ಪ್ರಾದೇಶಿಕ ವೈಶಿಷ್ಟ್ಯಗಳಿಂದ, ವೈಲಕ್ಷಣಗಳಿಂದ ಮೂಡಲಪಾಯ, ಪಡುವಲಪಾಯವೆಂದು ಎರಡು ಪ್ರಕಾರಗಳಿವೆ. ಮೂಡಲಪಾಯವನ್ನು ದೊಡ್ಡಾಟವೆಂದು ಗುರುತಿಸಿದರೆ ಪಡುವಲಪಾಯವನ್ನು ಯಕ್ಷಗಾನವೆಂದು ಕರೆಯುತ್ತಾರೆ. ಇವುಗಳ ಜೊತೆಗೆ ಸಣ್ಣಾಟಗಳೆಂದು ಒಂದು ಪ್ರಕಾರವಿದ್ದು, ರಾಧಾನಟ, ದಾಸರಾಟ, ಶರಣರಾಟ – ಎಂಬುವುಗಳ ಹೆಸರಿನಲ್ಲಿ ಜನಪ್ರೀಯವಾಗಿವೆ. 'ಯಕ್ಷಗಾನ' ಜಾತಿಗೆ ಸೇರಿದ ತಾಳಮದ್ದಲೆ, ಮತ್ತೊಂದು ವಿಶಿಷ್ಟ ರಂಗಕಲೆಯೇ ಆದರೂ ಯಕ್ಷಗಾನದಂತೆ ದೃಶ್ಯರೂಪದ ಪ್ರದರ್ಶನವಲ್ಲ. ಇದೊಂದು ಶ್ರಾವ್ಯರೂಪದ ಪ್ರಸ್ತುತಿ. ತೀರ ಸರಳವ್ಯವಸ್ಥೆಯೊಂದಿಗೆ ಪಾತ್ರಧಾರಿಗಳು ಮಾತಿನ ಶೈಲಿ, ಕೌಕು, ಸ್ವಭಾವಗಳನ್ನುಪಾತ್ರಸ್ವಭಾವಾನುಗುಣವಾಗಿ ಹೊಂದಿಸಿಕೊಂಡು ಮಾತಾಡುತ್ತಾ ದೃಶ್ಯರೂಪಗಳಿಗಿಂತ ಅದ್ಭುತವಾದ ರೀತಿಯಲ್ಲಿ ವಾಚಿಕಾಭಿನಯದ ಮೂಲಕವಾಗಿಯೇ ಪ್ರದರ್ಶಿಸುತ್ತಾ ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತಾರೆ. ನಾಟಕದ ರೋಚಕತೆ, ಯಶಸ್ಸು, ಪರಿಣಾಮಕಾರಿತೆಗಳು ಸಮರ್ಥ ಅರ್ಥದಾರಿಗಳನ್ನು ಅವಲಂಬಿಸಿರುತ್ತವೆ. ಇದೊಂದು ರೀತಿಯಲ್ಲಿ ಆಶುನಾಟಕ. ಸಮಯಸ್ಫೂರ್ತಿ ಎಂಬುದೇ ನಿಜವಾದ ಬಂಡವಾಳ. ಯಾವ ಪೂರ್ವಸಿದ್ಧತೆಯೂ ಇಲ್ಲದೆ ದೇವಾಲಯ ಪ್ರಾಂಗಣ, ಶ್ರೀಮಂತರ ಮನೆಯ ಅಂಗಳವೇ ರಂಗವೇದಿಕೆ.

ಮೇಲೆ ಕಾಣಿಸಿದ ನೃತ್ಯ, ನಾಟಕ ಸಂಪ್ರದಾಯದ ಹಲವು ಪ್ರಾದೇಶಿಕ ಪ್ರಕಾರಗಳಲ್ಲಿ ಸ್ಥಳೀಯ ಜಾನಪದ ಅಂಶಗಳ ಜೊತೆ ಜೊತೆಗೆ ಶಾಸ್ತ್ರೀಯ ಸಂಸ್ಕೃತರಂಗ ಸಂಪ್ರದಾಯದ ಅಂಶಗಳೂ ಮಿಳಿತಗೊಂಡಿವೆ. ಕೆಲವು ಪ್ರಕಾರಗಳಲ್ಲಿ ಸಾಂಪ್ರದಾಯಿಕ ನಿಷ್ಠೆ ಹೆಚ್ಚಿದ್ದರೆ ಮತ್ತೆ ಕೆಲವದರಲ್ಲಿ ಅಲ್ಪ ಸ್ವಲ್ಪವಾಗಿ ಅಲ್ಲಲ್ಲಿ ಪೂರ್ವ ರಂಗದ ಎಡೆಯಲ್ಲಿ, ಪಾತ್ರಗಳಲ್ಲಿ ಕಾಣಿಸಿಕೊಂಡಿರುವುದಂತೂ ವಾಸ್ತವ ಸತ್ಯ.

ಇದೇ ರೀತಿಯಲ್ಲಿ ಉತ್ತರ ಭಾರತ, ಪೂರ್ವಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಸ್ಥಳೀಯ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಪ್ರಭಾವಗಳಿಂದಾಗಿ, ಭರತನ ಕಾಲದ ಉಪರೂಪಕಗಳೇ, ವಿಭಿನ್ನ ಹೆಸರುಗಳಲ್ಲಿ ಪ್ರಚಲಿತವಾಗಿವೆ. ಬಂಗಾಲ, ಒರಿಸ್ಸಾ, ಬಿಹಾರಗಳಲ್ಲಿ ಯಾತ್ರಾ, ಲೀಲಾ, ಸ್ವಾಂಗ ಹೆಸರುಗಳಲ್ಲಿ ಪ್ರಚಲಿತವಿರುವ ನೃತ್ಯನಾಟಕ ಸಂಪ್ರದಾಯವನ್ನು 'ಉತ್ಸವ ರಂಗಭೂಮಿ' ಎಂದು ಕರೆಯಲಾಗಿದೆ. ಕೆಲವು ವಿದ್ವಾಂಸರ ಅಭಿಪ್ರಾಯದ ಪ್ರಕಾರ ಇದು ನಾಟ್ಯಶಾಸ್ತ್ರ ಕಾಲಕ್ಕೇ ಅಸ್ತಿತ್ವದಲ್ಲಿತ್ತು. ಜಯದೇವನ ಗೀತಗೋವಿಂದ ಸಮಕಾಲೀನ ಯಾತ್ರಾ ಪರಂಪರೆಯಿಂದ ಪ್ರಭಾವಿತವಾಗಿದ್ದುದರಿಂದಲೇ ಅದನ್ನು ಪರಿಷ್ಕೃತ 'ಯಾತ್ರ' ಎಂದು ಕರೆಯಲಾಗಿದೆ. ಪ್ರಾರಂಭದಲ್ಲಿ ಸಂಸ್ಕೃತ ರಂಗಭೂಮಿಯ ದಟ್ಟ ಪ್ರಭಾವದಲ್ಲಿದ್ದು ನಂತರ ಪ್ರಾದೇಶಿಕ ವೈಲಕ್ಷಣ್ಯಗಳನ್ನು ಒಗ್ಗೂಡಿಸಿಕೊಂಡು ಬಂಗಾಲಕ್ಕೇ ವಿಶೇಷವಾದ ಪ್ರಾದೇಶಿಕ ನೃತ್ಯನಾಟಕ ಸಂಪ್ರದಾಯವಾಗಿ ಪರಿಣಮಿಸಿರಬೇಕು.

ಬಂಗಾಲದಲ್ಲಿ ನಡೆಯುತ್ತಿದ್ದ ವೈಷ್ಣವ ಧರ್ಮ ಪ್ರಸಾರ, ಚಂಡೀದಾಸ, ಚೈತನ್ಯರ ಧಾರ್ಮಿಕ ಚಟುವಟಿಕೆಗಳು ಇವುಗಳ ಪ್ರಭಾವ ಸುತ್ತಮುತ್ತಲಿನ ಪ್ರದೇಶಗಳ ಮೇಲೆ ಬಿದ್ದುದರ ಪರಿಣಾಮವಾಗಿ ಕೃಷ್ಣ, ವಿಷ್ಣು ಪರವಾದ ಕಥಾನಕಗಳು 'ಯಾತ್ರಾ' ನಾಟಕಗಳ ವಸ್ತುವಾಗಿದ್ದರೂ ಕೂಡ ಸಮಕಾಲೀನ ಜನಾಭಿರುಚಿ, ನಿರೀಕ್ಷೆ ಕಾಲದ ಬದಲಾವಣೆ, ಇವುಗಳಿಗೆ ಪೂರಕವಾಗುವಂತೆ ನೈಜಬದುಕಿಗೆ ಸಂಬಂಧಿಸಿದ ಪ್ರೀತಿ, ಪ್ರೇಮ, ಪ್ರಣಯ, ದ್ವೇಷ, ಅಸೂಯೆ, ಸಂಘರ್ಷ ಇತ್ಯಾದಿ ಮಾನವ ಮೂಲಭೂತ ಸ್ವಭಾವ ಪ್ರವೃತ್ತಿಗಳ ಜೊತೆ ಜೊತೆಗೆ, ರಾಷ್ಟ್ರಭೀಮಾನ, ತ್ಯಾಗ, ಔದಾರ್ಯ, ಆದರ್ಶ ಇತ್ಯಾದಿ ಮೌಲ್ಯಗಳ ಮೇಳವಿಕೆಯನ್ನೂ ಹೊಂದಿಸಿಕೊಳ್ಳಲಾಯಿತು. 'ಯಾತ್ರಾ' ನಾಟಕ ಸಂಗ್ರಹದಲ್ಲಿ, ನೀಲದರ್ಪಣ, 'ರಾಮಯಾತ್ರಾ' ದುರ್ಗಾಯಾತ್ರಾ, ವಿದ್ಯಾಸುಂದರ್', ಪದ್ಮಾವತಿ ಹರಣ, ಕಂಚಿಕಾವೇರಿ ಮೊದಲಾದವುಗಳು ಕೆಲವು ಮುಖ್ಯ ಯಾತ್ರಾ ನಾಟಕಗಳಾಗಿವೆ.

ಇದರ ಪ್ರದರ್ಶನಕ್ಕೆ ಉಳಿದ ನೃತ್ಯ–ನಾಟಕಗಳಿಗೆ ಬೇಕಾಗುವಂತೆ, ಬಯಲು ರಂಗಮಂದಿರಗಳು ಅನಿವಾರ್ಯವೇನಿಲ್ಲ. ಎಲ್ಲೆಂದರಲ್ಲಿ ಇವುಗಳ ಪ್ರದರ್ಶನಗಳ ಸಾಧ್ಯತೆಯಿದೆ. ಹೆಸರೇ ಸೂಚಿಸುವಂತೆ ಇವು 'ಯಾತ್ರಾ'ಗಳು. ಅಂದರೆ 'ಪ್ರೋಸೆಷನ್ ರಂಗಭೂಮಿ' ಅಥವಾ ಚಲಿಸುವ ಅಥವಾ ಉತ್ಸಹ ರಂಗಭೂಮಿ. ಇಲ್ಲಿ ಸಂಗೀತವೇ ಅತಿ ಮುಖ್ಯವಾದ ಅಂಶವಾಗಿರುವುದರಿಂದ ಎಷ್ಟೋ ಸಲ ಪಾತ್ರಧಾರಿಗಳು ಹಾಡುಗಾರರಾಗಿ ಬಿಡುತ್ತಾರೆ. ಆದ್ದರಿಂದ ಈ ಯಾತ್ರಾಗಳು ಪಾಶ್ಚಿಮಾತ್ಯ ಅಪೆರಾಗಳಿಗೆ ಹತ್ತಿರವೆನಿಸುತ್ತವೆ.'

ಪ್ರದರ್ಶನದಲ್ಲಿ ವಾದ್ಯಮೇಳವಿರುತ್ತದೆ. ವಸ್ತು ಎಂತಹುದೇ ಆಗಿದ್ದರೂ, ಅಬ್ಬರ, ಆವೇಶ, ಉದ್ರೇಕದ ದನಿಯಲ್ಲಿ ಮಾತು, ಪಾತ್ರಗಳು ತಮ್ಮ ತಮ್ಮ ಭಗಗಳನ್ನು ತಾವೇ ಹಾಡಿ ಅಭಿನಯಿಸುತ್ತಾರೆ. 'ಮುಖವರ್ಣಿಕ, ವೇಷಭೂಷಣಗಳಲ್ಲಿ ಅಷ್ಟಾಗಿ ಕಲಾತ್ಮಕತೆ ಇರುವುದಿಲ್ಲ. ನೋಡಿದರೆ ಅಸಹಜವಾಗಿ ಕಾಣುಸುತ್ತವೆ.ಜಾತ್ರಾ ಅಥವಾ ಯಾತ್ರಾ ಪ್ರದರ್ಶನಗಳು ೩–೪ ಶತಮಾನಗಳ ಅವಧಿಯಲ್ಲಿ ಜನಾಭಿರುಚಿಗೆ ತಕ್ಕಂತೆ ಅನೇಕ ಬದಲಾವಣೆಗಳನ್ನು ಆಳವಡಿಸಿಕೊಂಡ ವಸ್ತು, ತಂತ್ರ, ಶೈಲಿಗಳಲ್ಲಿ ನವೀನ ಅಂಶಗಳನ್ನು ಸಮಾವೇಶಗೊಳಿಸಿಕೊಂಡು ಇಂದಿಗೂ ಬಂಗಾಲ, ಒರಿಸ್ಸಾ, ಬಿಹಾರಗಳಲ್ಲಿ ಪ್ರಮುಖ ರಂಗಚಟುವಟಿಕೆಗಳಲ್ಲಿ ಒಂದಾಗಿದೆ.

ಬಂಗಾಲದ 'ಯಾತ್ರಾ' ದಷ್ಟೇ, ಅತ್ಯಂತ ಜನಪ್ರೀಯವಾದ ರಂಗಕಲೆ ಮಹಾರಾಷ್ಟ್ರದ 'ತಮಾಷಾ.' ಪ್ರಾರಂಭದ ದಿನಗಳಿಂದ ಇಂದಿನವರೆವಿಗೂ ತಮಾಷಾ ತನ್ನ ಜನಪ್ರೀಯತೆಯನ್ನು ಕಳೆದುಕೊಂಡಿಲ್ಲ. ಮಹಾರಾಷ್ಟ್ರದಲ್ಲಿ ಪ್ರಚಲಿತವಿದ್ದ ಲಾವಣಿ, ಗೋಂದ, ಗ್ವಾಮಿನ್ ಮೊದಲಾದ ಜಾನಪದ ಕಲೆಗಳಲ್ಲಿ ಅಡಗಿದ್ದ ನಾಟಕೀಯ ಸತ್ವವನ್ನು ಗುರುತಿಸಿ ೧೮ನೇ ಶ.ದಲ್ಲಿ ರಾಮಜೋಷಿ ಎಂಬುವನು ಹೊಸ ರಂಗ ರೂಪವಾದ 'ತಮಾಷಾ'ವನ್ನು ಕಟ್ಟಿಕೊಟ್ಟ, ಕರ್ಣಾಟಕ ದಶಾವತಾರದ ಆಟ, ಭಾಗವತ ಮೇಳ, ಆಂಧ್ರದ ಗೊಲ್ಲಕಲಾಪಂ ಮತ್ತು ಕೃಷ್ಣಕಥೆಗೆ ಸಂಬಂಧಿಸಿದ ಇನ್ನೂ ಅನೇಕ ಕಲಾರೂಪಗಳಿಗೆ ಸಂವಾದಿಯಾಗಿದ್ದ 'ಗ್ವಾಮಿನ್' ಗೋಪೀ ಕೃಷ್ಣ ಸಂಬಂಧದ ಕತೆಗಳನ್ನು ಒಳಗೊಂಡಿತ್ತು. ಮೊದಮೊದಲಿಗೆ ಧಾರ್ಮಿಕ ಅಥವಾ ಭಕ್ತಿಪರವಾದ ಕಥಾನಕಗಳನ್ನು ಒಳಗೊಂಡಿದ್ದ ಪ್ರದರ್ಶನಗಳು ಬರಬರುತ್ತಾ ಅಶ್ಲೀಲವೆನಿಸುವ ಪ್ರಣಯ, ಅಗ್ಗದ ಸಿನೇಮಾ ಸಂಗೀತವನ್ನು ಸೇರಿಸಿಕೊಳ್ಳುತ್ತಾ ತೀರಾ ಕೆಳಮಟ್ಟಕ್ಕಿಳಿಯಿತು.

ಧಾರ್ಮಿಕ, ಸಾಮಾಜಿಕ ಹೀಗೆ ವಸ್ತು ಯಾವುದೇ ಇರಲಿ, ವ್ಯಂಗ್ಯ-ವಿನೋದ, ಅಸಭ್ಯ ಹಾಸ್ಯಗಳು ಸೇರಿಕೊಂಡು ಜಿಗುಪ್ಸೆ ಬೇಸರಗಳಿಗೆ ದಾರಿಮಾಡಿಕೊಂಡಿತು.

ಈ 'ತಮಾಷಾ'ದಲ್ಲಿ ವಾದ್ಯಗಾರರು, ಗಾಯಕರು, ಪಾತ್ರಧಾರಿಗಳು ಸೇರಿ ಒಂದು ವೃಂದವಾಗುತ್ತದೆ. ಡೋಲಕ್, ಚಪ್ರ ಮುಖ್ಯವಾದ್ಯಗಳು. ಲಾವಣಿಗಳ ಮೂಲಕ ಕಥಾಪರಿಚಯದ ಪಾತ್ರ ಪರಿಚಯ. ಇಡೀ ಪ್ರದರ್ಶನ ಗೊಲ್ಲ ಕಲಾಪಂನಂತಿರುತ್ತದೆ. ಸಂಭಾಷಣೆ ಸವಾಲ್ –ಜವಾಬ್ ರೀತಿಯದಾಗಿರುತ್ತದೆ. ವಿದೂಷಕ, ಸೂತ್ರಧಾರ, ಸಂಸ್ಕೃತರಂಗಭೂಮಿಯ ಲಕ್ಷಣದ ಉಳಿಕೆಯಾಗಿ ಇಲ್ಲಿ ಕಾಣಿಸಿಕೊಳ್ಳುತ್ತವೆ. ತಮಾಷಾ ಎಷ್ಟು ಲಘುವಾದರೂ, ಲೌಕಿಕ ಕಲಾರೂಪವಾದರೂ ಅನೇಕ ಅಂಶಗಳಲ್ಲಿ ಸಂಸ್ಕೃತ ನಾಟಕ, ಉಪರೂಪಕ, ಸಂಗೀತಕ ಮತ್ತು ಭಾರತದ ಅನ್ಯ ಪ್ರಾದೇಶಿಕ ರಂಗಸಂಪ್ರದಾಯಗಳನ್ನು ಹೋಲುತ್ತದೆ. 'ಪೂರ್ವರಂಗದ ವಿಧಿಗಳು ಭರತನು ಸೂಚಿಸಿದ ರೀತಿಯಲ್ಲಿಯೇ ಇವೆ.

ಮಹಾರಾಷ್ಟ್ರದಲ್ಲಿ 'ತಮಾಷಾ' ಇದ್ದಂತೆ, ಅಸ್ಸಾಮಿನಲ್ಲಿ ವೈಷ್ಣವ ಸಂತಕವಿ ಶಂಕರದೇವನಿಂದ ರೂಪಿತವಾದ ಜನಪ್ರಿಯ ನೃತ್ಯಗೀತ ನಾಟಕ ಸಂಪ್ರದಾಯ ಅಂಕೆಯಾ ನಾಟಕವೆಂದು ಪ್ರಚಲಿತವಿದೆ. ಶಂಕರದೇವನಿಗಿದ್ದ ಸಂಸ್ಕೃತ ಪರಂಪರೆಯ ಜ್ಞಾನ ವೈಷ್ಣವ ಧರ್ಮ ಪ್ರಸಾರದ ಛಲಗಳು ಈ ಒಂದು ಪ್ರಕಾರದ ಹುಟ್ಟಿಗೆ ಕಾರಣವಾಯಿತು. ಭಾಗವತವೇ ಈ ನೃತ್ಯನಾಟಕಗಳಿಗೆ ಪ್ರೇರಣೆ. ಆದ್ದರಿಂದ ಭಾಗವತ ಮೂಲಕ ಕಥಾನಕಗಳನ್ನು ಒಳಗೊಂಡ ಪಾರಿಜಾತಹರಣನಾಟ, ಕಾಲೀಯ ದಮನೆ, ಅಮೃತ ಮಂಥನ, ಪ್ರಹ್ಲಾದ ಚರಿತೆ, ವಿಪ್ರಪತ್ನಿಪ್ರಸಾದ, ಗಜೇಂದ್ರ ಮೋಕ್ಷ ಮೊದಲಾದವು ಜನಪ್ರಿಯ ಅಂಕೆಯಾನಾಟ ಪ್ರದರ್ಶನಗಳಾಗಿವೆ.

ಇಲ್ಲಿ ನೃತ್ಯ ಸಂಗೀತಗಳೆರಡಲ್ಲಿಯೂ ಮಾರ್ಗ, ಜಾನಪದ ಶೈಲಿಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದೂ ಕೂಡ ಪೂರ್ವರಂಗವಿಧಿ, ನಾಂದಿ, ಪ್ರವೇಶ ಸೂತ್ರಧಾರ, ಪಾತ್ರ ಪರಿಚಯಗಳಿಗೆ ಸಂಬಂಧಿಸಿದಂತ ಸಂಸ್ಕೃತ ರಂಗ ಸಂಪ್ರದಾಯದ ಅಂಶಗಳನ್ನೇ ಒಳಗೊಂಡಿದೆ. ವೇಷಭೂಷಣ, ಮುಖವರ್ಣಿಕೆಗಳಲ್ಲಿ ಸ್ಥಳೀಯ ವೈಶಿಷ್ಟ್ಯಗಳನ್ನು ಉಳಿಸಿಕೊಳ್ಳಲಾಗಿದೆ. ಅಸ್ಸಾಂನಲ್ಲಿ ಅಂಕೆಯಾನಾಟವಾದರೆ, ಒರಿಸ್ಸಾ, ಬಿಹಾರದಲ್ಲಿ, ಪ್ರಾದೇಶಿಕ ಭೇದಗಳಿಂದಾಗಿ, ಚೌ ನೃತ್ಯ ನಾಟಕಗಳು ಸೆರಾಯಿಕಲ್ ಮಯೋಕ ಭಂಜ್, ಪುರೋಲಿಯಾ ಚೌ ಹೆಸರುಗಳಲ್ಲಿ ಪ್ರಚಲಿತವಾಗಿವೆ. ಎಲ್ಲ ನೃತ್ಯನಾಟಕಗಳಂತೆ ಇವೂ ಕೂಡಾ ಧಾರ್ಮಿಕ ಆಚರಣೆಗಳ ಅಂಗವಾಗಿ ಹುಟ್ಟಿಕೊಂಡವುಗಳಾಗಿವೆ.

ಸೆರಾಯಿಕಲಾ 'ಚೌ'ನಲ್ಲಿ ಪೂರ್ವರಂಗ ವಿಧಿಗಳಾಗಿ ಸಾಂಕೇತಿಕ ಶಿವಪೂಜೆ, ಮೆರವಣಿಗೆ, ಬೃಂದಾವನ ವಿಧಿಗಳಿದ್ದರೆ ಮಯೂಈರಭರಿಜ್ 'ಚೌ'ನಲ್ಲಿ 'ರಂಗಜ್ಞಾಜ್' ಎಂಬ ಪೂರ್ವರಂಗಿ ವಿಧಿಯಿರುತ್ತದೆ. ಇವುಗಳ ನಂತರವೇ ಕಥಾನಕದ ಪ್ರದರ್ಶನ.

ಚೌ ಪ್ರದರ್ಶನಗಳಿಗೆ, ಮಹಾಕಾವ್ಯ, ಪುರಾಣಗಳಿಂದಲೇ ವಸ್ತು, ಸಾಹಿತ್ಯಭಾಗ ತೀರಾ ತೇಳು, ನೃತ್ಯವೇ ಪ್ರಧಾನ, ಅಭಿನಯವೂ ಕಡಿಮೆಯೇ. ಮಾರ್ಗೀಯ, ಸ್ಥಳೀಯ ನೃತ್ಯಶೈಲಿಗಳ ಬಳಕೆ, ಹಿಂದೂಸ್ಥಾನಿ ಮತ್ತು ಜಾನಪದೀಯ ಸಂಗೀತ ಪದ್ಧತಿಗಳ ಅಳವಡಿಕೆ. ಆದ್ದರಿಂದಲೇ ಈ ಚೌ ಪ್ರದರ್ಶನಗಳಲ್ಲಿ ಮಾರ್ಗ ದೇಶಿ ನೃತ್ಯ ಶೈಲಿಗಳ ಸುಂದರ ಸಮನ್ವಯವನ್ನು ಕಾಣಬಹುದಾಗಿದೆ. ಇಂದಿಗೂ ಕೂಡಾ ಇವು ಧಾರ್ಮಿಕ ಚಟುವಟಿಕೆಗಳ ಹೆಸರಿನಲ್ಲಿ ಶ್ರೀಮಂತವಾಗಿ, ಜೀವಂತವಾಗಿ, ಅಪಾರ ಜನ ಮನ್ನಣೆಯೊಂದಿಗೆ ಉಳಿದುಕೊಂಡು ಬಂದಿದೆ.

ಇನ್ನುಳಿದ ಪ್ರದೇಶಗಳಾದ ಉತ್ತರ ಪ್ರದೇಶ ಮಧ್ಯ ಪ್ರದೇಶ, ರಾಜಸ್ಥಾನ, ಪಂಜಾಬ್, ಓರಿಸ್ಸಾ ಮೊದಲಾದ ಎಡೆಗಳಲ್ಲಿ ಈ ಮೊದಲು ಪ್ರಸ್ತಾಪಿಸಿದ ರಂಗಸಂಪ್ರದಾಯಗಳ ಪ್ರಭಾವವನ್ನು ಹೀರಿಕೊಂಡು ಸ್ಥಳೀಯ ಜಾನಪದ ಮನರಂಜನಾ ರೂಪಗಳ ಸಾರವನ್ನೂ ಮೇಳವಿಸಿಕೊಂಡು ದೇಶೀ ಮಾರ್ಗೀ ಶೈಲಿಗಳನ್ನು ಹೊಂದಿಸಿಕೊಂಡು, ಓರಿಸ್ಸಾ, ಪಂಜಾಬ್, ಹರಿಯಾಣ ಪ್ರದೇಶಗಳಲ್ಲಿ 'ಸ್ವಾಂಗ್' ಉತ್ತರ ಪ್ರದೇಶದಲ್ಲಿ 'ನೌಟಂಕಿ' ರಾಜಸ್ಥಾನದಲ್ಲಿ 'ಖ್ಯಾಲ್' ಹೆಸರಿನಲ್ಲಿ ರಂಗಸಂಪ್ರದಾಯಗಳು ಅಸ್ತಿತ್ವಕ್ಕೆ ಬಂದವು. ಕೆಲವು ವಿದ್ವಾಂಸರ ಪ್ರಕಾರ ಈ ಕಲಾರೂಪಗಳಿಗೆ ಹಿಂದೆ ಪ್ರಚಲಿತವಿದ್ದ ಚಾರಣ, ಭಾಟ, ಪುರಾಣಿಕ ಕಥಾಕಾರ, ಕಾವ್ಯವಾಚನ ಪರಂಪರೆಯಿಂದ ಉಂಟಾದ ಪ್ರಭಾವ, ನಾಟ್ಯಶಾಸ್ತ್ರ ಕಾಲದಲ್ಲಿ ಪ್ರಚಲಿತವಿದ್ದ ಉಪರೂಪಕ, ಸಂಗೀತಕಗಳ ಪ್ರಭಾವವೇ ಕಾರಣವಾಗಿವೆ. ಖ್ಯಾಲ, ಸೌಟರಿಕೆಗಳಲ್ಲಿ ನಾಟಕೀಯ ಅಂಶಗಳು ಕಡಿಮೆ.

ಕಥಾನಕಗಳು ಐತಿಹಾಸಿಕ, ಸಾಮಾಜಿಕ ಸನ್ನಿವೇಶ, ಸಂದರ್ಭಗಳಿಗೆ ಸಂಬಂಧಿಸಿದ್ದಾಗಿರುತ್ತವೆ. ಈ ಮೂರು ಪ್ರಕಾರಗಳಲ್ಲಿ ರಾಜಸ್ಥಾನದ 'ಖ್ಯಾಲ್' ಸಾಕಷ್ಟು ವಿಕಸಿತ ರೂಪದಲ್ಲಿದೆ. ಈ ನೃತ್ಯ ಪ್ರದರ್ಶನಗಳ ವಸ್ತು ಮತ್ತೆ ಪುರಾಣ, ಇತಿಹಾಸ ಅಲ್ಲದೆ ಸಮಕಾಲೀನ ಬದುಕಿನ ಸನ್ನಿವೇಶಗಳಿಂದ ಆಯ್ದುಕೊಂಡಿದ್ದಾಗಿದೆ. ಸರಳವಾದ ಉಡುಗೆ, ತೊಡುಗೆ, ಸಂಗೀತ, ಹಿಂದೂಸ್ಥಾನಿ ಮಾರ್ಗ ಪದ್ಧತಿಯದು. ಆಗೊಮ್ಮೆ ಈಗೊಮ್ಮೆ ಜಾನಪದ ಧಾಟಿಗಳ ಬಳಕೆಯೂ ಇದೆ. ಪ್ರಮುಖ ನಾಟಕಗಳೆಂದರೆ ರುಕ್ಮಿಣಿ ಮಂಗಳ, ಹರಿಶ್ಚಂದ್ರ ನಳದಮಯಂತಿ, ಪೃಥ್ವಿರಾಜ್ ಚೌಹಾನ್; ಅಮರ್‌ಸಿಂಗ್ ರಾಠೋಡ್; ಲೈಲಾ ಮಜ್ನು; ಘೋಲಾಮಾರು; ಪಠಾಣಿ –ಶಹಜಾದಿ – ಮುಂತಾದವುಗಳಾಗಿವೆ.

ಸೌಟಂಕೆಯೂ ಎಲ್ಲಾ ವಿಧದಲ್ಲಿ 'ಖ್ಯಾಲ್'ಗಳನ್ನೇ ಹೋಲುತ್ತದೆ. ಇವುಗಳ ಜತೆಗೆ ಗುಜರಾತಿನ 'ಭವಾಯ್' ಭವಾಯ್ ಜಾತಿಯ ಜನವರ್ಗಕ್ಕೆ ಮೀಸಲಾದ ನೃತ್ಯನಾಟಕ, ನವರಾತ್ರಿ ಸಂದರ್ಭದಲ್ಲಿ ೯ ದಿನಗಳ ಧಾರ್ಮಿಕ ಆಚರಣೆಗಳ ಅಂಗವಾಗಿ ನಡೆಯುವ ಶಕ್ತಿ ಅತವಾ 'ಅಂಬಿಕಾ' ಆರಾಧನೆಯ ರೂಪವಾಗಿ ನಡೆಯುವ 'ಗರ್ಭಾ' ನೃತ್ಯದಿಂದ ಪ್ರೇರಣೆಗೊಂಡ ನಾಟಕವೇ ಭವಾಯ್. ಸೂತ್ರಧಾರ, ವಿದೂಷಕ ಪಾತ್ರಗಳನ್ನು ಹೋಲುವ 'ರಾಂಗ್ಲೋ' ಪಾತ್ರವೇ ನಾಟ್ಯ ಕ್ರಿಯೆಯ ಮುನ್ನಡೆಗೆ ನಾಟಕದ ಏಕಸೂತ್ರತೆಗೆ ಕಾರಣ. ನಾಟಕದ ಹೊರಗೇ ನಿಂತು 'ಮೇಳ'ದ ಪಾತ್ರದಂತೆ ಭೂತ, ಭವಿಷ್ಯತ್, ವರ್ತಮಾನಗಳನ್ನು, ಪಾತ್ರಗಳ ಅಂತಃ ಪ್ರಜ್ಞೆಯನ್ನು ಪ್ರತಿನಿಧಿಸುವ ಅತ್ಯಂತ ಪ್ರಮುಖ ಜವಾಬ್ದಾರಿಯನ್ನು 'ರಾಂಗ್ಲೋ' ಪಾತ್ರವಹಿಸುತ್ತದೆ. ಭವಾಯ್ ಕೂಡ ದೋಹಾ, ಚೌಪದಿ ಛಂದೋರೂಪಗಳನ್ನು ನೃತ್ಯಕ್ಕೆ ಒದಗುವ ಜತಿಗಳನ್ನು, ಅನೇಕ ಜಾನಪದ ನೃತ್ಯ ಶೈಲಿಗಳನ್ನು ಸಂಗೀತಕ್ಕಾಗಿಯೂ ಹಿಂದೂಸ್ಥಾನಿ ಮಾರ್ಗಿಯ ಮತ್ತು ಜಾನಪದೀಯ ಶೈಲಿಗಳನ್ನು ಬಳಸಿಕೊಳ್ಳುತ್ತದೆ.

ಇವೆಲ್ಲದರ ಜತೆಗೆ ರಾಮಲೀಲಾ – ರಾಸಲೀಲಾ ಅಥವಾ ರಾಸ ಎಂಬ ಹೆಸರಿನಲ್ಲಿ ನೃತ್ಯ – ಗೀತನಾಟಕಗಳು ಅತ್ಯಂತ ಜನಪ್ರಿಯ ರೂಪಗಳಾಗಿವೆ. ಇವುಗಳಲ್ಲಿ ಭಕ್ತಿ ಪ್ರಾಧಾನ್ಯತೆಯಿದ್ದು ಪ್ರೇಕ್ಷಕರನ್ನು ಅಲೌಕಿಕ, ಕಾಲ್ಪನಿಕ, ಭಾವನಾಲೋಕಕ್ಕೆ ಒಯ್ಯುವುದರಿಂದ ಅಲ್ಲಿನ ಅಸಂಬದ್ಧತೆ, ಅಸಹಜತೆಗಳು ಮನಸ್ಸಿಗೆ ಬರುವುದೇ ಇಲ್ಲ.

ರಾಧಾ ಕೃಷ್ಣ ಪಾತ್ರ ಪ್ರಧಾನವಾದ ರಾಸ ಲೀಲಾ ಅದರ ರಚನೆಯ ದೃಷ್ಟಿಯಿಂದ ನೃತ್ಯ ಪ್ರಭೇದವಾಗಿ ಕಾಣುತ್ತದೆಯೇ ಹೊರತಾಗಿ ನೃತ್ಯ ನಾಟಕವಾಗಿ ಅಲ್ಲ. ಕೃಷ್ಣಾವತಾರಗಳ ವರ್ಣನೆ ಆಧ್ಯಾತ್ಮದ ವಿಚಾರಗಳೇ ಇಲ್ಲಿ ಮುಖ್ಯವಾಗುತ್ತದೆ. ಕಡೆಯದಾಗಿ ಹಿಂದಿನ ಎಲ್ಲ ವಿವರಗಳಿಂದ ಒಂದಂಶ ಸ್ಪಷ್ಟವಾಗುತ್ತದೆ. ಭರತನ ನಾಟ್ಯಶಾಸ್ತ್ರಕಾಲದಿಂದಲೂ ಮಾರ್ಗ ಮತ್ತು ದೇಶೀ ನಾಟಕ ಸಂಪ್ರದಾಯಗಳು ಪ್ರಚಲಿತವಿದ್ದಿರಬೇಕು. ಆದರೆ ಭರತ ಮಾರ್ಗನಾಟಕ ಸಂಪ್ರದಾಯಕ್ಕೆ ಹೆಚ್ಚು ಒತ್ತುಕೊಟ್ಟು ಅದನ್ನು ಬೆಳೆಸಿ ಪ್ರೋತ್ಸಾಹಿಸಿದಂತೆ ದೇಶೀರೂಪಗಳನ್ನು ಪ್ರೋತ್ಸಾಹಿಸಿರಲಾರ. ನಾಟಕದಲ್ಲಿ ಸಂಗೀತ, ನೃತ್ಯಗಳು ಅದರ ಅಂಗವಾಗಿ ಬಂದಿದ್ದರೂ ಅವುಗಳೇ ಪ್ರಧಾನವಾಗಿ, ಪ್ರಧಾನ ರಸಾಶ್ರಿತವಾದ ಕಥಾನಕದ ನಾಟಕೀಯ ನಿರೂಪಣೆಗೆ ಅವು ಮಾಧ್ಯಮವಾಗಿ ಬಳಕೆಯಾಗುವ ಯೋಗ್ಯತೆಯನ್ನು ಹೊಂದಿರುವಂತೆ ಕಾಣಿಸಿರಲಾರದು. ಅದಕ್ಕೆಂದೇ ಗೀತ, ಸಂಗೀತ, ನೃತ್ಯ ಮಾಧ್ಯಮವನ್ನುಳ್ಳ ಉಪರೂಪಕಗಳನ್ನು ಎರಡನೆ ದರ್ಜೆಗೆ ಸೇರಿಸಿರಬೇಕು.

ಆದರೆ ಮಾರ್ಗನಾಟಕ ಸಂಪ್ರದಾಯ ಉಚ್ಛ್ರಾಯ ಸ್ಥಿತಿ ಮುಗಿದ ಮೇಲೆ ಉಪರೂಪಕಗಳೇ ಹೆಚ್ಚು ಪ್ರಚಾರಕ್ಕೆ ಬಂದು ಜನಸಾಮಾನ್ಯರ ಆಶ್ರಯ, ಪೋಷಣೆಗಳಲ್ಲಿ ಬೆಳೆದುಬರುತ್ತಾ ಕ್ರಮೇಣ ಪ್ರಾದೇಶಿಕವಾಗಿ ಬೇರೆ ಬೇರೆಯಾಗಿ, ಭಿನ್ನ ಭಿನ್ನ ನೃತ್ಯನಾಟಕ ಸಂಪ್ರದಾಯಗಳಾಗಿ ಪರಿಣಮಿಸಿರಬೇಕು. ಇಂದಿಗೂ ಇವು ಆಯಾ ಪ್ರದೇಶಗಳಲ್ಲಿ, ಪ್ರಾದೇಶಿಕ ವೈಲಕ್ಷಣ್ಯಗಳನ್ನು ಉಳಿಸಿಕೊಂಡು, ಜೊತೆಗೆ ಸುತ್ತಲ ಪ್ರದೇಶಗಳಲ್ಲಿನ ಕಲಾರೂಪಗಳ ಪರಸ್ಪರ ಪ್ರಭಾವಗಳನ್ನೂ ಹೊಂದಿಸಿಕೊಂಡು ಕ್ರಿಯಾಶೀಲವಾಗಿ, ಜೀವಂತವಾಗಿ ಉಳಿದುಕೊಂಡು ಬಂದಿದೆ.

ಸಂಸ್ಕೃತಮಾರ್ಗನಾಟಕಸಂಪ್ರದಾಯದಿಂದಬೇರೆಯಾದ ಸಂಪ್ರದಾಯದ ಪ್ರಭಾವದಿಂದ ಬಿಡಿಸಿಕೊಳ್ಳಲಾರದೆ, ಅದನ್ನು ತಿರಸ್ಕರಿಸಲೂ ಆಗದೆ, ಈ ನೃತ್ಯನಾಟಕ ಸಂಪ್ರದಾಯಗಳು ಸ್ಥಳೀಯವಾಗಿ ಪ್ರಚಾರದಲ್ಲಿರುವ ಕಾವ್ಯ, ನಾಟಕ, ಜಾನಪದ ಕಲಾ ಸಂಪ್ರದಾಯಗಳ ಜೊತೆಗೆ ಸಂಸ್ಕೃತರಂಗ ಸಂಪ್ರದಾಯದ ಮುಖ್ಯ ಅಂಶಗಳನ್ನು ಮೇಳವಿಸಿಕೊಂಡೂ, ಉಪರೂಪಕಗಳ ದಟ್ಟ ಪ್ರಭಾವವನ್ನು ಅರಗಿಸಿಕೊಂಡೂ ಹೊಸದಾದ ಪ್ರಾದೇಶಿಕ ರಂಗ ಸಂಪ್ರದಾಯಗಳಾಗಿ ಕವಲೊಡೆದು ಬದುಕುಳಿದಿವೆ. ಕೂಡಿಯಾಟ್ಟಂ; ಕಥಕ್ಕಳಿ; ಕೂಚಿಪುಡಿ; ಭಾಗವತ ಮೇಳ, ಸೆರಾಯಿಕಲಾ ಮೊದಲಾದ ನೃತ್ಯನಾಟಕಗಳು ಮೊದಲಿನ ರಾಜಾಶ್ರಯ ತಪ್ಪಿದರೂ ಶ್ರೀಮಂತರ ಪೋಷಣೆಯಲ್ಲಿ ಉಳಿದಿವೆ. ಮಿಕ್ಕ ನೃತ್ಯ ನಾಟಕ ಸಂಪ್ರದಾಯಗಳು ಜನಸಾಮಾನ್ಯರ ಪ್ರೋತ್ಸಾಹದೊಂದಿಗೆ ನಿರಾತಂಕವಾಗಿ ಮುಂದುವರೆಯುತ್ತಿವೆ.

ಈ ಎಲ್ಲಾ ನೃತ್ಯನಾಟಕ ಸಂಪ್ರದಾಯಗಳು ಗೀತ, ಸಂಗೀತ, ನೃತ್ಯ ಅಭಿನಯಗಳ ಸಂಕೀರ್ಣ ರೂಪಗಳು. ಇವುಗಳ ಅಭಿವ್ಯಕ್ತಿ ಮಾಧ್ಯಮ ಶಾಸ್ತ್ರೀಯ ರಂಗಸಂಪ್ರದಾಯಕ್ಕಿಂತ ಭಿನ್ನವಾಗಿ, ನೃತ್ಯವಾಗಿವೆ. ನಾಟ್ಯಶಾಸ್ತ್ರದಲ್ಲಿ ಹೇಳಿರುವ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಅಭಿನಯ ಶೈಲಿಗಳಲ್ಲಿ, ಅನೇಕ ರಂಗ ಸಂಪ್ರದಾಯಗಳಲ್ಲಿ ಆಂಗಿಕ ಮತ್ತು ಆಹಾರ್ಯವೇ

ಪ್ರಧಾನ. ವಾಚಿಕಾಭಿನಯ, ಸಾತ್ವಿಕಾಭಿನಯಗಳಿಗೆ ಅವಕಾಶ ಕಡಿಮೆ. ಪ್ರತಿಯೊಂದು ನೃತ್ಯ ನಾಟಕ ಸಂಪ್ರದಾಯವೂ ಭರತನು ನಾಟ್ಯಶಾಸ್ತ್ರದಲ್ಲಿ ಹೇಳಿರುವ ನಾಟ್ಯತತ್ವಗಳಲ್ಲಿ, ರಂಗವಿಧಿಗಳಲ್ಲಿ ಕೆಲವನ್ನಾದರೂ ಬಳಸಿಕೊಂಡಿದೆ. ನೃತ್ಯ ಶೈಲಿಗಳು ಭರತನು ವಿವರಿಸಿರುವ ಅಂಗಗಳು, ಕರಣಗಳು ಇವುಗಳನುನ ಅಳವಡಿಸಿಕೊಂಡಿವೆ. ಕಥಾನಕದ ಸನ್ನಿವೇಶ, ಸಂದರ್ಭಗಳಿಗನುಗುಣವಾಗಿ ಲಾಸ್ಯ, ತಾಂಡವ ಶೈಲಿಗಳನ್ನೂ ಜೊತೆಗೆ ದೊಂಬರಾಟದ ಪಟ್ಟುಗಳನ್ನು ಬಳಸಿಕೊಳ್ಳುತ್ತವೆ.

ಭಾರತೀಯ ರಂಗಸಂಪ್ರದಾಯಗಳು, ಶಾಸ್ತ್ರೀಯ ಸಂಸ್ಕೃತ ರಂಗಧಾರೆಯಾಗಿಯೂ ದೇಶೀಯ ಅಥವಾ ಜಾನಪದೀಯ ರಂಗಧಾರೆಯಾಗಿಯೂ ಕವಲೊಡೆದು ಹರಿದುಬಂದಿದ್ದರೂ, ಶಾಸ್ತ್ರೀಯ ಸಂಸ್ಕೃತ ರಂಗ ಸಂಪ್ರದಾಯ ಸ್ಥಗಿತಗೊಂಡಿದ್ದರೂ, ಪ್ರಾದೇಶಿಕ ನೃತ್ಯ ನಾಟಕ ಪ್ರಕಾರಗಳಲ್ಲಿ ಸಮಾವೇಶಗೊಂಡು ಮುಂದುವರೆದಿದೆ.

❑❑

# ಇಂದಿನ ಕಾವ್ಯದ ಮುಂದಿರುವ ಸವಾಲುಗಳು

– ಚಿಂತಾಮಣಿ ಕೊಡ್ಲೆಕೆರೆ

ಈ ತಲೆಬರಹದಿಂದ ತಕ್ಷಣ ನಾವು ಗ್ರಹಿಸಬಹುದಾದ ಕೆಲವಿಚಾರಗಳು ಹೀಗಿವೆ: ಇಂದಿನ ಕಾವ್ಯ ಎಂಬುದು ಹಿಂದಿನ ಕಾವ್ಯಕ್ಕಿಂತ ಬೇರೆ. ಕಾವ್ಯದ ಮುಂದಿರುವ ಸವಾಲುಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಿರುತ್ತವೆ. ಕಾವ್ಯವು ಈ ಹಿಂದೆಯೂ ಸವಾಲುಗಳನ್ನು ಎದುರಿಸಿತ್ತು ಮತ್ತು ಮುಂದೆಯೂ ಅದು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಕಾವ್ಯದ ಇಂದಿನ ಸ್ವರೂಪಕ್ಕೂ, ಅದು ಇಂದು ಇದಿರಿಸಬೇಕಾದ ಸವಾಲಿಗೂ ಏನೋ ಸಂಬಂಧ ಇರಬೇಕು. ಮುಖ್ಯವಾದ ಮಾತೆಂದರೆ ಕಾವ್ಯಸ್ವರೂಪದ ಕುರಿತು ನಮಗಿರುವ ಪರಿಕಲ್ಪನೆಗಳೇ ನಮ್ಮ ಬರವಣಿಗೆಯನ್ನೂ, ಅದು ಎದುರಿಸಬೇಕಾದ ಸವಾಲುಗಳನ್ನೂ ರೂಪಿಸತೊಡಗುತ್ತವೆ. ಇನ್ನು ಈ ಪರಿಕಲ್ಪನೆಗಳಾದರೂ ಜನಿವಾರವೋ, ಶಿವದಾರವೋ, ಕರಿಮಣಿಯೋ ಅಲ್ಲ. ಕವಿಯ ಹತಾರಗಳಾದ ಮನಸು, ಭಾಷೆ, ಬದುಕು ಎಲ್ಲವೂ ಚಲನಶೀಲ ಸಂಗತಿಗಳೇ. ಆದ್ದರಿಂದ ಕವಿಯ ಒಲವು, ನಿಲುವುಗಳು ಬದಲಾಗಬೇಕಾಗಿ ಬರಬಹುದು, ಅವನ ಆದ್ಯತೆಗಳು ಬದಲಾಗಬಹುದು. ಇನ್ನು ಅವನ ಮುಂದಿರುವ ಸವಾಲುಗಳ ಕುರಿತೂ ಇನ್ನೊಂದು ಮುಖ್ಯ ಮಾತೆಂದರೆ ಆ ಸವಾಲುಗಳು ಕವಿಯೊಬ್ಬ ವೈಯಕ್ತಿಕವಾಗಿ ಎದುರಿಸಬೇಕಾದ ಸಾರ್ವಜನಿಕ ಸಂಗತಿಗಳಾಗಿರಬಹುದು ಅಥವಾ ಕವಿಗಳೆಲ್ಲರೂ ಸಾಮಾನ್ಯವಾಗಿ ಎದುರ್ಗೊಳ್ಳುವ ಕೆಲ ತತ್ಕಾಲೀನ ಪ್ರಾಶಸ್ತ್ಯದ ಸಂಗತಿಗಳಿರಬಹುದು. ಒಂದು ಕಾಲಘಟ್ಟದಲ್ಲಿ ಬದುಕಿದ ಮಾತ್ರಕ್ಕೆ ಕವಿಗಳೆಲ್ಲರೂ ಒಂದೇ ಯಾದಿಯಲ್ಲಿಡಬಹುದಾದ ಸವಾಲುಗಳ ಮೊತ್ತವೊಂದನ್ನು ಎದುರಿಸುತ್ತಾರೆ ಎಂದು ಹೇಳಲಾಗುವುದಿಲ್ಲ. ಅಷ್ಟೇ ಏಕೆ, ಕವಿಯೊಬ್ಬನ ಕಾವ್ಯಜೀವನದಲ್ಲೇ ವಿವಿಧ ಹಂತಗಳಲ್ಲಿ ಅವನು ಎದುರಿಸುವ ಸವಾಲುಗಳು ಬೇರೆಯಾಗಿರಬಹುದು. ಪ್ರತಿ ಕವಿಯದೂ ಕಾವ್ಯಯಾತ್ರೆಯಲ್ಲಿ ಅವನವೇ ಹೊಸ ಹೆಜ್ಜೆಗಳು. ಹಾಗಿರುವಾಗ ಒಂದು ಕಲೆಯಾಗಿ ಕೂಡ ಪ್ರತಿ ಕವಿಯೂ ಸೃಜನಾತ್ಮಕ ಸವಾಲುಗಳನ್ನು ಹೊಸದಾಗಿಯೇ ಎದುರುಗೊಳ್ಳಬೇಕಾಗುತ್ತದೆ. ಆದುದರಿಂದ ಸಂಗ್ರಹವಾಗಿ ಹೇಳಬೇಕೆಂದರೆ "ಇಂದಿನ ಕಾವ್ಯದ ಮುಂದಿರುವ ಸವಾಲುಗಳು" – ಇಂದಿನ ನಾವು ಇವತ್ತು ಈ ಸಂದರ್ಭದಲ್ಲಿ ಎದುರಿಸಬೇಕಾದ ವಿಶಿಷ್ಟ ಸವಾಲುಗಳಾಗಿರುವಂತೆಯೇ ಸಾರ್ವಕಾಲಿಕವಾದ, ಸಾರ್ವದೇಶಿಕವಾದ ಸವಾಲುಗಳನ್ನೂ ಒಳಗೊಂಡಿರುತ್ತವೆ. ಕಾವ್ಯ ಎಂದಾಗ ಸಾಹಿತ್ಯದ ಇತರ ಪ್ರಕಾರಗಳು ಮಾತ್ರವಲ್ಲ, ಕಲೆಯ ಇನ್ನಿತರ ಪ್ರಕಾರಗಳೂ ಸಾಮಾನ್ಯ ನೆಲೆಯಲ್ಲಿ ಸೂಚಿತವಾಗುತ್ತಲೇ ಇರುತ್ತವೆ.

ಇಂದಿನ, ಸದ್ಯದ, ವರ್ತಮಾನದ ಸವಾಲುಗಳು ಎಂಥವು ಎಂಬ ಕುರಿತು ಬರವಣಿಗೆಯಲ್ಲಿ ತೊಡಗಿರುವ ನಾವೆಲ್ಲರೂ ಸ್ಥೂಲವಾಗಿ ಬಲ್ಲೆವು ಎಂದು ಗ್ರಹೀತದಲ್ಲಿಟ್ಟುಕೊಂಡೇ ಮುಂದಿನ ಮಾತುಗಳನ್ನಾಡಲು ಬಯಸುತ್ತೇನೆ. ಸಾಹಿತ್ಯ ಮತ್ತು ವಾಸ್ತವ, ಸಾಹಿತ್ಯ ಮತ್ತು ಕಲ್ಪನೆ ಈ ಎರಡೂ ಸಂಬಂಧಗಳು ವಿಶಿಷ್ಟವಾದವು. ಸಾಹಿತ್ಯವು ಬರಿಯ ವಾಸ್ತವಕ್ಕೆ ಸಂಬಂಧಿಸಿದ್ದೋ, ಬರಿಯ ಕಲ್ಪನೆಗೆ ಸಂಬಂಧಿಸಿದ್ದೋ? – ಹಾಗೆ ಅದು ಒಮ್ಮುಖದ ಹಾದಿಯ ಪಯಣಿಗನಲ್ಲ ಎಂದು ಎಲ್ಲರೂ ಒಪ್ಪುತ್ತಾರೆ. ಸಾಹಿತ್ಯ ಮತ್ತು ವಾಸ್ತವದ ಸಂಬಂಧ ಎಷ್ಟು ನೇರವಾದುದೋ, ಅಷ್ಟೇ ಸಂಕೀರ್ಣವಾದುದೂ ಆಗಿದೆ. ಸಾಹಿತ್ಯ ವಾಸ್ತವಕ್ಕೆ ಸಂಬಂಧಿಸಿದ್ದೇ ಆದರೂ, ವಾಸ್ತವದಲ್ಲೇ ಬದುಕುವುದು ಹೌದಾದರೂ ಅದು ವ್ಯವಹರಿಸುವ ನೆಲೆ ಬೇರೆಯದೇ ಆಗಿರುತ್ತದೆ. "ಖಡ್ಗವಾಗಲಿ ಕಾವ್ಯ; ಜನರ ನೋವಿಗೆ ಮಿಡಿವ ಪ್ರಾಣಮಿತ್ರ" ಎಂಬ ಸುಪ್ರಸಿದ್ಧ ಘೋಷವಾಕ್ಯವನ್ನೇ ಒಮ್ಮೆ ನೆನೆಯಿರಿ. ಕಾವ್ಯ ಖಡ್ಗವಾಗುವುದು ಎಂದರೇನು? ಜನರ ನೋವಿಗೆ ಮಿಡಿವ ಪ್ರಾಣಮಿತ್ರನು ಅದನ್ನು ಹಿಡಿಯುವುದು ಎಂದರೇನು? ಈ ಮಾತುಗಳನ್ನು ಅಕ್ಷರಶ: ವಾಸ್ತವದ ನುಡಿಗಳಾಗಿ ನಾವು ಗ್ರಹಿಸುತ್ತೇವೋ? ಖಂಡಿತವಾಗಿಯೂ ಇಲ್ಲ. ಈ ಮಾತುಗಳ ಧ್ವನ್ಯರ್ಥವೇ ನಾವು ಸ್ವೀಕರಿಸಬೇಕಾದ ಪದಾರ್ಥ. ಕವಿಯು ಲೋಕದ ಪ್ರಾಣಮಿತ್ರ ಎಂಬ ಇಲ್ಲಿಯ ತಿಳಿವಳಿಕೆ ಮಹತ್ವದ್ದಾಗಿದೆ. ಜನರು ಎಲ್ಲಿ ಸಂಕಟದಿಂದ ಕುದಿಯುತ್ತಿದ್ದಾರೋ, ಅಲ್ಲಿ ಕವಿ ಇದ್ದಾನೆ. ಅವನು ಬದುಕಿಗೆ ಪುನಃ ನೆಮ್ಮದಿಯನ್ನು ತಂದುಕೊಡಲು ಬಯಸುತ್ತಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಬರಹಗಾರರ ಸಾಮಾಜಿಕ ಕಳಕಳಿ, ಬದ್ಧತೆ, ಕ್ರಿಯಾಶೀಲತೆಗಳಿಗೆ ಮಹತ್ವ ನೀಡಿದ ಪ್ರತಿಭಟನಾ ಸಾಹಿತ್ಯ

೩೯೬, ಶ್ರೀ ಗುರುಕೃಪಾ, ೧೧ನೇ ಅಡ್ಡ ರಸ್ತೆ, ಜೆ.ಪಿ. ನಗರ ಎರಡನೇ ಹಂತ, ಬೆಂಗಳೂರು–೫೬೦ ೦೭೮

ಕವಿಯಿಂದ ಹೆಚ್ಚಿನ ಕಾರ್ಯವನ್ನು ನಿರೀಕ್ಷಿಸಿತು: ಅದೆಂದರೆ "ಕವಿ ಪ್ರತಿಭಟನಕಾರನಾಗಬೇಕು, ಬಂಡಾಯಗಾರನಾಗಬೇಕು, ಅವನ ಕಾವ್ಯ ಬಡಬಗ್ಗರ ಬೇನೆ, ಬೇಗುದಿಗಳನ್ನು ದಾಖಲಿಸಬೇಕು. ಸಮಾಜದ ಕೆಳಸ್ತರಗಳಿಂದ, ಅವಮಾನಿತ ಜಾತಿ ಪಂಗಡಗಳಿಂದ ಬಂದ ನವ ಅಕ್ಷರಸ್ಥರು ತಮ್ಮ ಅನುಭವಗಳ ಕುರಿತು ಬರೆವ ಸಾಹಿತ್ಯವೇ ವಾಸ್ತವಿಕವಾಗಿ ಹೆಚ್ಚು ಮೌಲಿಕವಾದುದು, ಏಕೆಂದರೆ, ಅಲ್ಲಿ ನಾವು ಅರಿಯದ ಬದುಕಿನ ಪಾರ್ಶ್ವಗಳ ಗಾಢ ಸಂಕಟಗಳು ದಾಖಲಾಗಿವೆ. ಸಾಹಿತ್ಯ ಕೃತಿಯ ಕಲಾತ್ಮಕ ಸೌಂದರ್ಯಕ್ಕಿಂತಲೂ ಈ ಅನುಭವಗಳ ಆಂತರಂಗಿಕ ಹಸಿತನವೇ ಸಾಹಿತ್ಯದ ಮೌಲಿಕತೆಯ ದೃಷ್ಟಿಯಿಂದ ಮುಖ್ಯವಾದುದು. "ಮುಂತಾಗಿ. ಕನ್ನಡ ಸಾಹಿತ್ಯದಲ್ಲಿ ಕಳೆದ ಮೂವತ್ತು ವರ್ಷಗಳಲ್ಲಿ ಸಾಹಿತ್ಯ ಮತ್ತು ಸಮಾಜಗಳ ಸಂಬಂಧದ ಕುರಿತು ನಡೆದ ಸುದೀರ್ಘವಾದ ಸಂವಾದ ಕನ್ನಡ ನವ್ಯೋತ್ತರ ಸಾಹಿತ್ಯದ ದೃಷ್ಟಿ, ಧೋರಣೆಗಳನ್ನು ಅನನ್ಯವಾಗಿ ಪ್ರಭಾವಿಸಿದೆ. ಇತ್ತೀಚೆಗೆ ಹಿರಿಯ ಕವಿ ಎಚ್.ಎಸ್.ವೆಂಕಟೇಶಮೂರ್ತಿಯವರು ತಮ್ಮ ಸಂದರ್ಶನದಲ್ಲಿ ಕಲಾವಿದನ ಜೀವನದ ಯಾತಾಯಾತಗಳ ಬಗೆಗೆ ಮಾತನಾಡಿದರು. ಅಂತರ್ಮುಖಿನಾಗುತ್ತಲೂ, ಬಹಿರ್ಮುಖಿನಾಗುತ್ತಲೂ ಬರಹಗಾರ ಮತ್ತೆ ಮತ್ತೆ ಅನುಭವಗಳನ್ನು ತನ್ನೊಳಗೆ, ಹೊರಗೆ ಶೋಧಿಸಿಕೊಳ್ಳುತ್ತಾ ನಡೆಯುತ್ತಾನೆ. ಈ ಪ್ರಕ್ರಿಯೆ ಪ್ರಾಯಶಃ ಒಬ್ಬ ಸೃಜನಶೀಲನ ನಿತ್ಯಕರ್ಮ. ಅವನ ಸೃಜನಶೀಲತೆಯ ಈ ಸ್ವಾಭಿಮುಖಿ, ಲೋಕಾಭಿಮುಖಿ ಚಲನೆಗಳು ಭೂಮಿ ಸೂರ್ಯನ ಸುತ್ತಲೂ ಮತ್ತು ತನ್ನ ಅಕ್ಷದ ಸುತ್ತಲೂ ಸುತ್ತುವ ರೂಪಕದಿಂದ ವಿವರಿಸಬಹುದಾಗಿದೆ ಎಂದೂ ಎಚ್ಚೆಸ್ವಿ ಸಂದರ್ಶನದಲ್ಲಿ ಹೇಳಿದರು. ನಾನೀಗ ಹೇಳಹೊರಟಿದ್ದೆಂದರೆ ಅದು ಅಷ್ಟು ಹಳೆಯದೂ ಕೂಡ ಹೌದೆಂಬುದು. ಅದು ಎಷ್ಟು ಪ್ರಾಚೀನವೋ, ಅಷ್ಟೇ ಸದ್ಯದ್ದು, ನಿತ್ಯವಾದ್ದು.

* * *

ಕೆಲವು ವರ್ಷಗಳ ಹಿಂದೆ ಉತ್ತರಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದಾಗ ನಾನು 'ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಸವಾಲು' ಎಂಬ ವಿಷಯದ ಕುರಿತು ಮಾತನಾಡಿದ್ದೆ. ಅಂದು ಆಡಿದ ಕೆಲವು ಮಾತುಗಳನ್ನು ಈ ಪ್ರಬಂಧದ ಜೊತೆಗೆ ಜೋಡಿಸಿ ಓದಬಹುದಾಗಿದೆ ಅನಿಸಿತು. ಅದು ಹೀಗೆ:

"ನಮ್ಮ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೇಳುವುದಾದರೆ ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆ ಮುಂಚೂಣಿಗೆ ಬಂದು ಆಗಲೇ ಮೂರು ದಶಕಗಳಾಗಿವೆ. ಬಂಡಾಯ ಸಾಹಿತ್ಯ ಚಳುವಳಿಯ ಆರಂಭವನ್ನು ಲಕ್ಷ್ಯದಲ್ಲಿರಿಸಿಕೊಂಡು ಈ ಮಾತು ಹೇಳುತ್ತಿದ್ದೇನೆ. 'ಮಾನವಕುಲವೆಲ್ಲ ಒಂದೇ' ಎಂದು ಸಾರಿದ ಪಂಪನ ಕಾಲದಲ್ಲಿಯೂ ಸಾಮಾಜಿಕ ಕಳಕಳಿ ಇಲ್ಲದೇ ಇರಲಿಲ್ಲ. 'ಒಂದೇ' ಎಂದು ಗಟ್ಟಿಯಾಗಿ ಹೇಳುವಾಗ 'ಒಂದಾಗಿಲ್ಲ' ಎಂಬ ಒಳಗುದಿಯೂ ವೇದ್ಯವಾಗುವಂತಿದೆ. ಇಂದಿನ ಕಾರ್ಯಕ್ರಮದ ಆಶಯ ಭಾಷಣಕಾರರ ವಿಚಾರಗಳಲ್ಲೂ, ಕವಿಗೋಷ್ಠಿಯಲ್ಲಿ ಕವಿಗಳು ವಾಚಿಸಿದ ಅನೇಕ ಕವಿತೆಗಳಲ್ಲೂ ಮತ್ತೆ ಮತ್ತೆ ಪ್ರಕಟಗೊಂಡ ಸಂಗತಿಯೆಂದರೆ ಕಾವ್ಯದ ಸಾಮಾಜಿಕ ಕಳಕಳಿಯ ಕುರಿತ ಅಪೇಕ್ಷೆ ಮತ್ತು ನಿರೀಕ್ಷೆ. ಅದು ನಮ್ಮ ಕಾಲದ ಬಹುಮುಖ್ಯ ಒತ್ತಡಗಳಲ್ಲೊಂದು. ಕವಿಯನ್ನು, ಲೇಖಕನನ್ನು ಇಂದಿನ ಸಾಮಾಜಿಕ ಸಂದರ್ಭದ ಕುರಿತು ಹೊಣೆಗಾರಿಕೆಯಿಂದ ಬರೆಯಬೇಕೆಂದು ಒತ್ತಾಯಿಸಲಾಗುತ್ತಿದೆ. ಅವನು ಸಾಮಾಜಿಕ ವೈಷಮ್ಯಗಳ ಕುರಿತು ಅರಿವು ಹೊಂದಿರುವುದು, ಸ್ಪಷ್ಟ ಆರೋಗ್ಯಪೂರ್ಣ ನಿಲುವು ತಳೆಯುವುದು ಮಾತ್ರವಲ್ಲ, ಆತ ಅದನ್ನು ಕುರಿತು ಬರೆಯಲೂಬೇಕೆಂದು ಬಯಸಲಾಗುತ್ತಿದೆ. ಅದೇನೂ ಆಕ್ಷೇಪಕಾರಕ ಧೋರಣೆಯಲ್ಲ. ಆದರೆ ತಕರಾರಿರುವುದೆಲ್ಲ 'ಅದನ್ನೇ ಕುರಿತು ಬರೆಯಬೇಕು' ಎಂಬ ಒತ್ತಡ ಉಂಟಾದಾಗ. ಇಂಥ ಹಕ್ಕೊತ್ತಾಯಗಳು ವಿಚಿತ್ರ ಇಕ್ಕಟ್ಟಿನ ಸನ್ನಿವೇಶವನ್ನು ನಿರ್ಮಿಸುತ್ತವೆ. ಪ್ರಣಾಳಿಕೆಗಳನ್ನು ಆಧರಿಸಿ ಬರೆದ ಸಾಧಾರಣ ಬರಹವೊಂದನ್ನು ಅದರ ಸಾಮಾಜಿಕ ಸಮ್ಮುಖತೆಗಾಗಿ ಶ್ರೇಷ್ಠವೆಂದು ಹೇಳಲು ಸಾಧ್ಯವೇ? ಜೀವನದ ಇನ್ನಾವುದೋ ಮಹತ್ವದ ಸಂಗತಿಗೆ ತೆರೆದುಕೊಂಡ ಕಾವ್ಯವನ್ನು ಅದರಲ್ಲಿ ಸಾಮಾಜಿಕ ಕಳಕಳಿ ಇಲ್ಲವೆಂದು ತಿರಸ್ಕರಿಸುವುದು ಸಾಧುವೇ? ನಮ್ಮ ಸೈದ್ಧಾಂತಿಕ ಒಲವುಗಳು ಕೆಲವೊಮ್ಮೆ ಇಂಥ ನಿರ್ಧಾರ ಕೈಗೊಳ್ಳಲು ಪ್ರೇರೇಪಿಸುತ್ತವೆ. ಶತಮಾನಗಳಿಂದ ಹತ್ತಿಕ್ಕಲಾದ ಧ್ವನಿಗಳ ಹಿಂದಿನ ನೋವಿನ, ಅವಮಾನದ, ಆಕ್ರೋಶದ ಭಾವನೆಗಳೂ ಮನ ಕಲಕುವಂಥದ್ದು. ಅಂಥ ಮಾತುಗಳೆಲ್ಲವೂ ಮಾನವನ ಚರಿತ್ರೆಯ ಪುಟಗಳಲ್ಲಿ ಸವಿಸ್ತಾರವಾಗಿ ದಾಖಲುಗೊಳ್ಳಬೇಕು. ಮತ್ತೆ ಮತ್ತೆ ಎಡವುವುದೇ, ಎದ್ದು ಮುನ್ನಡೆಯುವುದೇ ಗತಿಯಾಗಿರುವ ಮಾನವನ ಜೀವಿತದಲ್ಲಿ, ನಾಗರಿಕತೆಯ ಮುಂದುವರಿಯುತ್ತಿರುವ ಪ್ರಯಾಣದಲ್ಲಿ ಅಸ್ಪ್ರಶ್ಯತೆ, ದಾರಿದ್ರ್ಯ, ಹಸಿವು ಹುಟ್ಟಿಸಿದ ದಾರುಣ ಅನುಭವಗಳು ಎಚ್ಚರಿಕೆಯ ಪಾಠಗಳಾಗಬೇಕು."

"ನಮ್ಮ ಹಿರಿಯ ಕಾವ್ಯಮೀಮಾಂಸಕರಲ್ಲಿ ಒಬ್ಬರಾದ ಡಿ.ವಿ.ಜಿ.ಯವರು "ಸಾಹಿತ್ಯವೆಂದರೆ ಎದೆಯನ್ನು ಅಲುಗಿಸುವ ಮಾತು. ಅದು ಕವಿಗೂ, ಜಗತ್ತಿಗೂ ನಡೆಯುವ ಸಂಭಾಷಣೆ" ಎಂದು ವರ್ಣಿಸಿದರು. ಆದರೆ ಈ ಸಂಭಾಷಣೆಯ ಸ್ವರೂಪ ಭಿನ್ನವಾದುದು. ನಾನೀಗ ನಿಮ್ಮ ಜೊತೆ ಮಾತನಾಡುತ್ತಿರುವಂತೆಯೇ ಬರೆದುಬಿಟ್ಟರೆ ಕಾವ್ಯವಾದೀತೆ? ಮುಳ್ಳು ಚುಚ್ಚಿದಾಗ 'ಹಾ' ಎಂದೊರಲಿದರೆ ಅದರಷ್ಟಕ್ಕೇ ಅದು ಕಾವ್ಯವಾಗುವುದೆ? ಲೋಕೋಪಯೋಗಿಯಾದ ಈ ಭಾಷೆಯನ್ನೇ ಭಿನ್ನಸ್ತರಕ್ಕೊಯ್ದು ಕವಿ ತನ್ನ ಕಾವ್ಯ ಭಾಷೆಯನ್ನು ಸೃಷ್ಟಿಸಿಕೊಳ್ಳುತ್ತಾನೆ. ಒಬ್ಬ ಅಕ್ಷರಕಲಾವಿದನಾಗಿ

ತನ್ನ ಮಾಧ್ಯಮಕ್ಕೆ ಆತ ಸಲ್ಲಿಸಬೇಕಾದ ಲಕ್ಷ್ಯ, ಶ್ರಮಗಳನ್ನು ಅವಜ್ಞೆಯಿಂದ ಕಾಣಬಹುದೆ? ಒಂದು ಕವಿತೆ ತಾನೊಂದು ಒಳ್ಳೆಯ, ಸಮರ್ಪಕ ಕವಿತೆಯಾಗುವುದರ ಮೂಲಕವೇ, ಹೃದಯದಿಂದ ಹೃದಯಕ್ಕೆ ತಲುಪುವ ಅನುಭವವಾಗುವುದರ ಮೂಲಕವೇ ಸಮಾಜದಲ್ಲಿ ಸಮರಸತೆಗಾಗಿ ಸ್ಪಂದಿಸುತ್ತಿರುವ ಸಾಧ್ಯತೆಯಿದೆ. ಇಂಥ ಉತ್ತಮ ಕಾವ್ಯದ ಹುಡುಕಾಟ ಕೇವಲ ಉತ್ತಮ ಕಲಾಭಿರುಚಿಯನ್ನು ಮಾತ್ರವಲ್ಲ, ಉತ್ತಮ ಬಾಳಿನ ಅಭೀಪ್ಸೆಯನ್ನೂ ತೋರ್ಪಡಿಸುತ್ತದೆ. ವಿಮರ್ಶೆಯೆಂಬುದು ಇಂಥ ಶೋಧನೆ. 'ಇದು ಆರೋಗ್ಯಕರ ಸಾಹಿತ್ಯ', 'ಇದು ಕಳಪೆ' ಎಂಬ ವ್ಯತ್ಯಾಸವನ್ನೂ, ವ್ಯತ್ಯಾಸಕ್ಕೆ ಕಾರಣಗಳನ್ನೂ ಅದು ನಿರ್ಭಯವಾಗಿ ಮಂಡಿಸುತ್ತದೆ. ಇಂಥ ಎಚ್ಚರವನ್ನು ಕನ್ನಡದ ಪ್ರಬುದ್ಧ ವಿಮರ್ಶನಾ ಪ್ರಜ್ಞೆ ಯಾವತ್ತೂ ಕಾಪಾಡಿಕೊಂಡು ಬಂದಿದೆ. ಮೂಲತಃ ಒಬ್ಬಾತ ಕ್ಷುದ್ರನಾಗಿದ್ದರೆ, ಜಾತಿಹುಳುವಾಗಿದ್ದರೆ ಅವನ ಹುಸಿ ವಾಗಾಡಂಬರವನ್ನು ಸೂಜಿಮೊನೆಯಿಂದ ಚುಚ್ಚಿ ಅವನ ನಿಜಸ್ವರೂಪವನ್ನು ಬಿಚ್ಚಿಡುವಷ್ಟು ಅದು ಶಕ್ತಿಸಂಪನ್ನವಾಗಿದೆ.'

"ತೀವ್ರಗತಿಯಿಂದ ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶದಲ್ಲಿ ನಾವಿದ್ದೇವೆ. ಹಿಂದುಳಿದ ವರ್ಗಗಳವರು ತಮಗಾಗಿ ಮಂದಿರಗಳನ್ನು, ಮಠಗಳನ್ನು, ಪೂಜಾರಿಗಳನ್ನು, ಗುರುಗಳನ್ನು ರೂಪಿಸಿಕೊಳ್ಳುವ ಮೂಲಕ ಬ್ರಾಹ್ಮಣೀಕರಣದತ್ತ ಸಾಗುತ್ತಿದ್ದಾರೆ. ಸತ್ಯನಾರಾಯಣ ಪೂಜೆ, ಸಂಕಷ್ಟಿ ವ್ರತ ಮುಂತಾದವು ಇದೇ ಪ್ರಯತ್ನದ ಇನ್ನಷ್ಟು ಮುಖಗಳು. ಇತ್ತ ಬ್ರಾಹ್ಮಣರು ಪಾಶ್ಚಾತ್ಯೀಕರಣದ ಹಲವು ಹೆಜ್ಜೆಗಳನ್ನಿಡುತ್ತಿದ್ದಾರೆ. ಅಂದರೆ ಅಂತಿಮವಾಗಿ ಇದು ಪಶ್ಚಿಮದತ್ತ ದಾಪುಗಾಲಲ್ಲಿ ಜನಾಂಗಕ್ಕೆ ಜನಾಂಗವೇ ಸಾಗುತ್ತಿರುವ ಚಿತ್ರ. ಸಮಾಜದಿಂದ ಏನನ್ನೋ ಪಡೆಯಬೇಕಾದ, ಸಮಾಜಕ್ಕೆ ಇನ್ನೇನನ್ನೋ ಕೊಡಬೇಕಾದ ಸಾಹಿತಿ 'ಪ್ರಗತಿ'ಯ ಈ ವಾಸ್ತವವನ್ನು ಅರ್ಥಮಾಡಿಕೊಳ್ಳಲೇಬೇಕು. ನಾನು ಬರೆಯುತ್ತಿರುವುದು ಸ್ಥಗಿತ ಸಮಾಜದ ಕುರಿತಲ್ಲ. ನನ್ನ ಕಣ್ಣೆದುರಿನ ಸಮಾಜ ನಾನು ಬರೆಯುತ್ತಿರುವ ಸಾಹಿತ್ಯವನ್ನೂ ತಿರಸ್ಕರಿಸಿ ಮುಂದೆ ಹೊರಟಿದೆ. ಅನ್ನದ ಹಸಿವೆಯನ್ನೇ ಒಂದು ಸಮಾಜವಾಗಿ ನಾವಿನ್ನೂ ಬಗೆಹರಿಸಿಕೊಂಡಿಲ್ಲವಾದರೂ, ಅಂತಸ್ತಿನ ಹಸಿವೆ ಅಷ್ಟೇ ವಿಕೃತವಾಗಿ ನಮ್ಮನ್ನು ಕಾಡತೊಡಗಿದೆ. ಅಭಿವೃದ್ಧಿಯ ಅಪವ್ಯಾಖ್ಯೆಯಿಂದುಂಟಾದ ಇಂಥ ಕೃತಕ ಹಸಿವು ನೈಸರ್ಗಿಕ ಆಹಾರದಿಂದ ತೀರುವ ಸಾಧ್ಯತೆಯಿಲ್ಲ. ಒಬ್ಬ ಲೇಖಕನಾಗಿ ನಾನು ಈ ಸಮಾಜದ ಈ ಎಲ್ಲ ಪಾತ್ರಧಾರಿಗಳ ಕುರಿತು ತೀವ್ರ ಅನುಕಂಪ ತಳೆದವನಾಗಿದ್ದೇನೆ. ನಿಜಕ್ಕೂ ಅನೇಕರಿಗೆ ತಾವೇನು ಮಾಡುತ್ತಿದ್ದೇವೆ ಎಂದು ತಿಳಿದಿಲ್ಲ. ಚಿನ್ನದ ಜಿಂಕೆಯ ಮಾಯಾದರ್ಶನಕ್ಕೊಳಗಾದ ಅವರು ಅದನ್ನು ಹಿಡಿದೇ ತೀರುವೆವೆಂಬ ಭಾರೀ ತರಾತುರಿಯಲ್ಲಿದ್ದಾರೆ. ಜಾಗತೀಕರಣವೆಂಬ ಬೃಹತ್ ಬಲೆಯನ್ನು ಬೀಸಿರುವ ದೊಡ್ಡಣ್ಣ (ಅಮೆರಿಕಾ) ದಡದ ಮೇಲೆ ನಗುತ್ತಾ ಕುಳಿತಿದ್ದಾನೆ. ನಾವು ಸಣ್ಣಪುಟ್ಟ ಮೀನುಗಳು, ಗಾಳದ ಹುಳದ ಆಸೆಗಾಗಿ ಸಾಯಬೇಕೇ ಅಥವಾ ಆ ಆಕರ್ಷಣೆ ಮೀರಿ ನಾವು ಇತಿಹಾಸವನ್ನು ಬದಲಿಸಬಲ್ಲೆವೇ? ಹಾಗೆ ಬದಲಿಸಬೇಕೆಂದರೆ ನಮ್ಮ ಜೀವನದ ಕುರಿತೂ, ನಮ್ಮೂರ ನದಿಗಳ ಮೇಲೂ, ಕಾಡುಗಳ ಮೇಲೂ, ಹಕ್ಕಿಗಳ ಮೇಲೂ, ವನಸ್ಪತಿಗಳ ಮೇಲೂ ಹೆಚ್ಚಿನ ನಿರೀಕ್ಷಣೆ ಅಗತ್ಯ. ಪರಿಸರವಾದ ಹೊಸ ಕಾಲದ ಅಧ್ಯಾತ್ಮವಾಗುವುದು ಈ ಅರ್ಥದಲ್ಲಿಯೇ. "

"ಗೆಳೆಯರೆ, ಸಾಹಿತ್ಯ ಮತ್ತು ಸಮಾಜದ ಸಂಬಂಧದ ಸಂಕೀರ್ಣ ಸ್ವರೂಪದ ಕುರಿತು ಪುಟ್ಟದೊಂದು ವೈಚಾರಿಕ ಆಕೃತಿ ನಿರ್ಮಿಸಲು ಸಾಧ್ಯವಾಗಿದ್ದರೆ, ಕಿಂಚಿತ್ತಾದರೂ ಚಿಂತನೆಯ ಕಿಡಿಗಳನ್ನು ಹೊತ್ತಿಸಲು ಸಾಧ್ಯವಾಗಿದ್ದರೆ ಈ ಬಿಸಿಲಲ್ಲಿ ಬೆವರುತ್ತ ನಾನು ಮಾತನಾಡಿದ್ದು, ನೀವು ಕೇಳಿದ್ದು ಸಾರ್ಥಕವಾಯಿತು ಎಂದು ತಿಳಿಯುತ್ತೇನೆ. ಕೊನೆಯದಾಗಿ ವಾಲ್ಮೀಕಿ ಮಹರ್ಷಿಗಳಿಗೆ ಬ್ರಹ್ಮ ಕೊಟ್ಟ ಮೂರು ವರಗಳ ಕಥೆಯನ್ನು ನನ್ನ ಕವಿ ಮಿತ್ರರಿಗೆ, ನಿಮಗೆ ಹೇಳಿ ವಿರಮಿಸಲು ಬಯಸುತ್ತೇನೆ. 'ರಾಮಾಯಣ' ಬರೆಯುವ ಜವಾಬ್ದಾರಿ ಬಂದಾಗ ವಾಲ್ಮೀಕಿ ಮಹರ್ಷಿಗಳು ಅಳುಕಿದರಂತೆ. ಆಗ ಬ್ರಹ್ಮ ಮಹರ್ಷಿಗಳಿಗೆ ಮೂರು ವರಗಳನ್ನು ಕೊಟ್ಟನಂತೆ. ಮೊದಲನೆ ವರ: "ನೀನು ಬರೆಯುವ ಕಾವ್ಯದ ಪಾತ್ರಗಳ ಪಿಸುಮಾತುಗಳು ನಿನಗೆ ಕೇಳಿಸಲಿ". ಮುಂದಿನ ವರ "ಒಂದು ಪಾತ್ರ ತನ್ನ ಮನಸಿನಲ್ಲೇ ಏನಾದರೂ ಅಂದುಕೊಂಡರೆ ಅದೂ ನಿನಗೆ ಕೇಳಿಸಲಿ". ಬರೆಯುವವರಾಗಿ ಈ ವರಗಳ ಮಹತ್ವ ನಾವು ಬಲ್ಲೆವಷ್ಟೆ? ಮುಂದಿನ ಅಂದರೆ ಮೂರನೆಯ ವರ: "ನೀನು ಬರೆದಿದ್ದು ಕೇಳಿದವರಿಗೆ ನಿಜ ಎನ್ನಿಸಲಿ". ಪ್ರಾಯಶಃ ಈ ವಾಕ್ಯಕ್ಕೆ ವಿವರಣೆಯೇ ಬೇಡವೆಂದು ಕಾಣುತ್ತದೆ. ನಾವು ಬರೆದುದು ಬರವಣಿಗೆಯಲ್ಲೇ ಆಗಲಿ, ಅನುಭವದ ಮೂಲಕವೇ ಆಗಲಿ. ನಿಜ, ಪ್ರಾಮಾಣಿಕ ಎನಿಸಿತಾದರೆ ಅದಕ್ಕಿಂತ ದೊಡ್ಡ ಭಾಗ್ಯ ಯಾವುದು? ಅಂಥ ಭಾಗ್ಯ ನಿಮಗೂ, ನನಗೂ ಸಿಗಲಿ ಎಂದು ಹಾರೈಸುತ್ತೇನೆ."

* * *

ಪರಿಸರವಾದ ಹೊಸಕಾಲದ ಅಧ್ಯಾತ್ಮ ಎಂದೆ. ಹಾಗೆ ಹೇಳುತ್ತಿದ್ದಂತೆ ಕೆಲವು ವರ್ಷಗಳ ಹಿಂದೆ "ಪರಿಸರ, ಅಭಿವೃದ್ಧಿ ಮತ್ತು ಆಧುನಿಕ ಕವಿಸಮಯ" ಎಂಬ ವಿಷಯದ ಕುರಿತು ಮಾತನಾಡಿದ್ದು ನೆನಪಿಗೆ ಬಂತು. ಅದರ ಆಯ್ದ ಭಾಗಗಳು ನನ್ನ ಮೇಲಿನ ಮಾತನ್ನು ಅನುಮೋದಿಸುವಂತಿವೆ:

"ಪಶ್ಚಿಮಘಟ್ಟಗಳ ನೆರಳಿನಲ್ಲಿ ಕರಾವಳಿ ತೀರದಲ್ಲಿ ಹುಟ್ಟಿದ ನಾನು ಉದ್ಯೋಗದ ಕಾರಣಕ್ಕಾಗಿ ಬಯಲು ಸೀಮೆಯಲ್ಲಿರುವುದು ಕೂಡ ಆಧುನಿಕ ಕಾಲ ನನಗೆ ಕೊಟ್ಟ ಅವಕಾಶ ಮತ್ತು ನನ್ನಲ್ಲಿ ಹುಟ್ಟುಹಾಕಿದ ಸಮಸ್ಯೆ ಎಂಬುದನ್ನಿಲ್ಲಿ ಪ್ರಪ್ರಥಮವಾಗಿ ಗುರುತಿಸಿಕೊಳ್ಳಬೇಕು. ನಮ್ಮದೇ ಸಂದರ್ಭಗಳಿಗೆ ಹೀಗೆ ಅನ್ಯರಾಗುತ್ತಾ ಹೋಗುವ

ಇಂಥ ಕೋಟ್ಯಂತರ ಮಧ್ಯಮವರ್ಗದ ಆಧುನಿಕರನ್ನು ಈ ಅನೇಕ ವರ್ಷಗಳಿಂದ ಉತ್ಪಾದಿಸಿ ಹಳ್ಳಿಗಳಿಂದ ಹೊರಗೆಳೆಯುತ್ತಾ ಬಂದಿದ್ದೇವೆ. ಇದು ನಮ್ಮಂಥವರ ಪಾಲಿಗೆ ಬಿಡುಗಡೆಯೋ, ಅಭಿವೃದ್ಧಿಯೋ? ಒಂದು ಸಮಾಜವಾಗಿ ನಾವು ಇದರಿಂದ ಪಡೆದುಕೊಂಡಿದ್ದೆಷ್ಟು, ಕಳೆದುಕೊಂಡಿದೆಷ್ಟು? ನಮ್ಮ ಗ್ರಾಮಗಳಿಂದ, ಕಾಡುಗಳಿಂದ ನೈಸರ್ಗಿಕ ಸಂಪನ್ಮೂಲಗಳನ್ನು ಮಾತ್ರವಲ್ಲ ಮಾನವ ಸಂಪನ್ಮೂಲಗಳನ್ನೂ ಬರಿದಾಗಿಸುತ್ತಿದ್ದೇವೆ. ಬಹುತೇಕ ಚಿಕ್ಕ ಊರುಗಳಲ್ಲಿ ಈಗ ಉಳಿದಿರುವವರೆಂದರೆ ನಾನಾ ಕಾರಣಗಳಿಗಾಗಿ ಅಲ್ಲಿ ಉಳಿಯಲೇಬೇಕಾಗಿ ಬಂದಿರುವವರು. ನಗರಗಳ ರಸ್ತೆಗಳು ಏಕಮುಖಿ ರಸ್ತೆಗಳಾಗುತ್ತಿವೆ – ಒಳ ಹೋಗಲು ಮಾತ್ರ ಹಾದಿಗಳಿವೆ. ಉತ್ತರ ಕನ್ನಡದ ಮಟ್ಟಿಗೆ ಹೇಳುವುದಾದರೆ ಈ ಪ್ರಕ್ರಿಯೆಗೆ ಕಳೆದ ಒಂದೆರಡು ದಶಕಗಳಲ್ಲಿ ವಿಪರೀತ ಚಾಲನೆ ದೊರೆತಿದೆ. ನಮ್ಮ ಹಳ್ಳಿಗಳು, ಅಕ್ಷರಶಃ ನಿರ್ಗತಿಕವಾಗತೊಡಗಿವೆ. ಇದೇ ಪರಿಸ್ಥಿತಿ ಕನ್ನಡನಾಡಿನ ಇತರ ಪ್ರದೇಶಗಳಲ್ಲೂ ಇದೆ, ಭಾರತದ ಇನ್ನಿತರ ರಾಜ್ಯಗಳಲ್ಲೂ ಇದೆ. ಇಷ್ಟು ವೇಗವಾಗಿ ನಡೆಯುತ್ತಿರುವ ಈ ವಲಸೆ ಹೋಗುವಿಕೆಯನ್ನು ನಿಯಂತ್ರಿಸುವ, ನಿಯಮಿಸುವ ಅಥವಾ ವಲಸೆಹೋದವರ ಜೀವನ ವಿಧಾನವನ್ನು ರೂಪಿಸುವ ಯಾವುದೇ ವಿಧಾನಗಳು ವ್ಯಕ್ತಿಗಳ ಮಟ್ಟದಲ್ಲಾಗಲೀ, ಸಮಾಜದ ಮಟ್ಟದಲ್ಲಾಗಲೀ ಇಲ್ಲವೆಂಬುದು ನಮ್ಮ ಕುರಿತು ನಮಗೇ ನಾಚಿಕೆ ಹುಟ್ಟಿಸುವ ಸಂಗತಿಯಾಗಿದೆ."

"ಏಕೆಂದರೆ, ಬಹುದೊಡ್ಡ ಸಮಾಜವಾಗಿ ಬಾಳಿದವರು ನಾವು, ಊರಿನಲ್ಲಿ ಒಂದು ಮನೆಯಲ್ಲಿ ಮದುವೆ, ಮುಂಜಿ ಎಂದರೆ ಇಡೀ ಊರಿನ ಎಲ್ಲರೂ ಎಲ್ಲ ಜಾತಿಗಳವರೂ, ಒಂದಲ್ಲ ಒಂದು ಕಾರಣಕ್ಕೆ ಆ ಮದುವೆಯಲ್ಲಿ ಪಾಲುಗೊಳ್ಳುವಂತೆ ಕಾರ್ಯಕ್ರಮವಿರುತ್ತಿತ್ತು. ಇಂಥ ಸಮೂಹಿಕ ಆಚರಣೆಗಳು ಅನೇಕ ಕಾರಣಗಳಿಗಾಗಿ ಇಂದು ಅಸಾಧ್ಯವಾಗತೊಡಗಿವೆ. ಎಲ್ಲೆಲ್ಲೋ ಉದ್ಯೋಗದ ಕಾರಣಗಳಿಗಾಗಿ ವಾಸವಿರುವವರು ಊರಿಗೆ ಕೆಲದಿನಗಳ ಮಟ್ಟಿಗೆ ಬಂದು ಹಠಾತ್ತನೆ ಹಳೆಯ ಸಂಬಂಧಗಳನ್ನು ನವೀಕರಿಸಿ ಹಿರಿಯರ ದಿನವನ್ನೋ, ಕಿರಿಯರ ಮದುವೆಯನ್ನೋ ಮುಗಿಸಿ ಬಂದುದಕ್ಕಿಂತ ವೇಗವಾಗಿ ವಾಪಸು ಓಡುತ್ತಿರುತ್ತಾರೆ. ಇನ್ನು ಇರುವ ಜಾಗದಲ್ಲಾದರೂ ಇವರು ಸುಖವಾಗಿದ್ದಾರೋ ಎಂದರೆ ಅದೂ ಇಲ್ಲ. ಹೊತ್ತಿಗೆ ಸರಿಯಾಗಿ ನೀರು ಬಾರದ, ಬಸ್ಸು ಬಾರದ, ಗಾಳಿ ಬೆಳಕುಗಳಿಗೆ ಯಥೇಚ್ಛ ಅವಕಾಶವಿಲ್ಲದ ಅನೇಕ ದುಸ್ವಪ್ನಗಳ ನಡುವೆ ಅವರ ದೈನಿಕ ನಡೆಯುತ್ತಿದೆ. ಹೇಗಾದರೂ ಮಾಡಿ ಅದೇ ನಗರದಲ್ಲಿ ಒಂದು ಸೈಟುಕೊಳ್ಳುವುದು, ಒಂದು ಮನೆ ಕಟ್ಟುವುದರೊಂದಿಗೆ ಅವರ ಜೀವನದ ಪುರುಷಾರ್ಥ ಮುಗಿಯುತ್ತದೆ. ಮುಂದೇನು? ಗೊತ್ತಿಲ್ಲ. ಇಲ್ಲ. ಇವರದೇ ಮಕ್ಕಳು ಓದಿದ್ದಾರೆ. ಮದುವೆಯಾಗಿದೆ, ಮಕ್ಕಳಾಗಿವೆ – ಆ ಕುಟುಂಬಕ್ಕೆ ಇವರೇ ಆಗಂತುಕರೋ, ಅನಪೇಕ್ಷಿತರೋ ಅನ್ನಿಸತೊಡಗಿದ್ದಾರೆ ಅಥವಾ ಹಾಗಲ್ಲದಿದ್ದರೆ ಹೀಗೆ: ಇವರ ಮಕ್ಕಳು ವಿದೇಶಗಳಿಗೆ ಹೋಗಿ ನೆಲೆಸಿದ್ದಾರೆ, ವಾಪಸು ಬರುವ ಸಂಭವ ಕಡಿಮೆ. ಅತ್ತ ಹುಟ್ಟಿದೂರು ಕೈ ಬಿಟ್ಟಿದೆ, ಇತ್ತ ನೆಲೆಸಿದೂರಿನಲ್ಲಿ ಬಂಧುಬಳಗವಿಲ್ಲ, ಸಾಧಿಸಬೇಕಾದ ಗುರಿಗಳು ಇಲ್ಲ. ಇಂಥ ಅನೇಕ ವೃದ್ಧರನ್ನು ನಿರ್ಮಿಸಿದ ನಮ್ಮ ಅಭಿವೃದ್ಧಿಶೀಲತೆ ಇದೀಗ ಅವರ ಯೋಗಕ್ಷೇಮಕ್ಕಾಗಿ ವೃದ್ಧಾಶ್ರಮಗಳನ್ನು ಕಟ್ಟಿ ಅರ್ಜಿಗಳನ್ನು ಅಹ್ವಾನಿಸತೊಡಗಿದೆ. ಅಂಶತಃ ವಿವರಗಳಲ್ಲಿ ಅಷ್ಟಿಷ್ಟು ವ್ಯತ್ಯಾಸಗಳಿರಬಹುದಾದರೂ ಹೆಚ್ಚು ಕಡಿಮೆ ಇಡೀ ಸಮಾಜದಲ್ಲಿ ಕಾಣುತ್ತಿರುವ ವಾಸ್ತವದ ಈ ಕಹಿಯನ್ನು ಒಪ್ಪಲು ಧೈರ್ಯಬೇಕು. ಉದ್ಯೋಗಸ್ಥ ದಂಪತಿಗಳ ಮಕ್ಕಳು ಬೆಳೆಯುತ್ತಿರುವುದು ಮನೆಗಳಲ್ಲಲ್ಲ, ಶಿಶುಪಾಲನಾಕೇಂದ್ರಗಳಲ್ಲಿ, ಇಡಿಯ ಮನೆಯ ಮೌನವನ್ನು ಒಂದು ಬೃಹತ್ ಬೀಗ ಹೊರಗಿನಿಂದ ಕಾಯುತ್ತಿದೆ. ಮನೆಯಲ್ಲಿ ಮಕ್ಕಳಿಲ್ಲ, ದೊಡ್ಡವರಿಲ್ಲ, ಯುವದಂಪತಿಗಳಿಗೂ ಅಲ್ಲಿ ಹೆಚ್ಚುಕಾಲ ಕಳೆಯುವ ಅವಕಾಶವಿಲ್ಲ. ಆದರೂ ಈ ಬಾಡಿಗೆ ಮನೆಗಳು ನಮ್ಮ ತರುಣರಿಗೆ ದೊಡ್ಡ ಬಿಡುಗಡೆಯನ್ನು ತಂದುಕೊಟ್ಟಂತೆ ಕಾಣುತ್ತದೆ. ಹಾಗಲ್ಲವಾದರೆ ನಮ್ಮ ಹೆಣ್ಣು ಮಕ್ಕಳೇಕೆ ಕಡಿಮೆ ಸಂಬಳವಾದರೂ ಚಿಂತೆಯಿಲ್ಲ. ನಗರದಲ್ಲಿರುವ ಗಂಡನೇ ಬೇಕೆಂದು ಹಠ ಹಿಡಿಯುತ್ತಿದ್ದರು? ನಾನು ಹುಟ್ಟಿ ಬೆಳೆದ ಹವ್ಯಕ ಸಮಾಜ ಬಹುತೇಕ ಕೃಷಿಯನ್ನವಲಂಬಿಸಿದ ಸಮೂಹ. ಇಂದು ಈ ಸಮಾಜದ ಜನ ಈ ಜಿಲ್ಲೆಯ ಬೇರಾವುದೇ ಊರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ರಾಜಧಾನಿಯಲ್ಲಿ ನೆಲೆಸಿದ್ದಾರೆ. ಇದು ಅಭಿವೃದ್ಧಿಯ ಹೆಗ್ಗುರುತೇ? ಅಭಿಮಾನದ ಸಂಗತಿಯೇ? ಹಿಂದುಳಿದ ಜಾತಿಗಳಲ್ಲೂ ಈ ವಲಸೆಯ ಪರಿಣಾಮಗಳು ಕಾಣಿಸಿಕೊಳ್ಳುವ ದಿನಗಳು ದೂರವಿಲ್ಲ."

* * *

"ಭೋಗಿಸುವ, ಬಳಸಿ ಎಸೆಯುವ, ಹಾಸ್ಕುಂಡು ಬೀಸಿ ಒಗೆಯುವ ಪ್ರವೃತ್ತಿಯನ್ನು ಪೋಷಿಸುವಂತೆ ನವಜೀವನ ವಿಧಾನ ರೂಪುಗೊಳ್ಳತೊಡಗಿದೆ. ಇಂಥ ತ್ಯಾಜ್ಯ ವಸ್ತುಗಳ ವಿಲೇವಾರಿ, ನಿರ್ವಹಣೆಗಳೇ ಒಂದು ಪ್ರತ್ಯೇಕ ಉದ್ದಿಮೆಯಾಗಿ ಬೆಳೆಯಹತ್ತಿದೆ. ನನ್ನ ಈವರೆಗಿನ ಮಾತುಗಳಿಂದ ಆಧುನಿಕವಾದುದೆಲ್ಲವನ್ನೂ ನಾನು ವಿರೋಧಿಸುತ್ತಿದ್ದೇನೆಂಬ ಭಾವನೆ ಮೂಡಿದ್ದರೆ ದಯಮಾಡಿ ಕ್ಷಮಿಸಬೇಕು. 'ಅಧುನಾ' ಎಂದರೇ ಈಗಿನದು. ಈ ಕ್ಷಣಕ್ಕೆ ಈ ಕ್ಷಣದ ಬದುಕಿಗೆ ಸ್ಪಂದಿಸದೇ ಕಾಲದ ನಿರಂತರತೆಯನ್ನು ಕಾಪಾಡಿಕೊಳ್ಳುವುದಾದರೂ ಹೇಗೆ? ಸಮಸ್ಯೆಗಳನ್ನು ತಾನೇ ನಿರ್ಮಿಸಿಕೊಂಡು ಆ ಸಮಸ್ಯೆಗಳ ವಿಷಗಾಳಿಯ ವರ್ತುಲದೊಳಗೇ ಬಾಳಿ ಪರಿಹಾರಕ್ಕೆಳಸುವ ಪ್ರವೃತ್ತಿಗಳನ್ನು ಮಾತ್ರ ನಾನು ಪ್ರಶ್ನಿಸುತ್ತಿದ್ದೇನೆ."

"ಅಭಿವೃದ್ಧಿ ಮತ್ತು ವಿಜ್ಞಾನವನ್ನು ನಾವು ಒಟ್ಟಿಗಿಟ್ಟು

ನೋಡುತ್ತ ಬಂದಿದ್ದೇವೆ. ವಿಜ್ಞಾನ, ತಂತ್ರಜ್ಞಾನಗಳು ನಮಗೆ ಒದಗಿಸಿದ ಬಹು ಉತ್ಪಾದನಾ ಸಾಮರ್ಥ್ಯ ಮತ್ತು ಬಹುಜನರನ್ನು ಬಳಸಿಕೊಂಡು ಸಾಧಿಸುವ ಉತ್ಪಾದನೆಗಳ ಸಾಮರ್ಥ್ಯ ಇವುಗಳ ಅಂತರದಲ್ಲಿ ಒಂದು ಬೃಹತ್ ಜನಾಂಗದ ಜೀವನಕ್ರಮವನ್ನೇ ಪಲ್ಲಟಗೊಳಿಸುವ ಧಾತುಗಳಿವೆ ಎಂಬುದನ್ನು ನಾವು ಅರಿಯಲಿಲ್ಲ. ಹಳ್ಳಿಗರೇ ನಿರ್ಮಿಸುತ್ತಿದ್ದ ಚಪ್ಪಲಿ, ಬಟ್ಟೆ, ಗಡಿಗೆ, ಬುಟ್ಟಿಗಳು ನಮಗಿಂದು ಬೇಡವಾಗಿವೆ. ದೊಡ್ಡ ಉದ್ದಿಮೆಗಳಾಗಿ ಇಂಥ ತಯಾರಿಕೆಗಳು ಎಲ್ಲೆಲ್ಲೂ ಸುಲಭ ಬೆಲೆಯಲ್ಲಿ ಸುಲಭವಾಗಿ ಸಿಕ್ಕತೊಡಗಿದ ದಿನಗಳಲ್ಲಿ ಇವು ಸೃಷ್ಟಿಸಿದ ನಿರುದ್ಯೋಗಿಗಳ ಸಮಸ್ಯೆಯನ್ನು ನಾವು ಊಹಿಸಲಿಲ್ಲ. ಮೀನುಗಾರರನ್ನು ನೀವು ನೀರಿನಿಂದ ಪ್ರತ್ಯೇಕಿಸಿದರೆ ಅವನೂ ಸಹ ಮೀನಿನಂತೆ ಚಡಪಡಿಸತೊಡಗುತ್ತಾನೆ. ಒಂದು ನದಿ ಕಲುಷಿತಗೊಂಡರೆ ಆ ಜಲ ಮಾತ್ರವಲ್ಲ, ಜಲಚರಗಳು, ಸುತ್ತಲಿನ ವನ್ಯಸಂಪತ್ತು, ನದಿಯನ್ನವಲಂಬಿಸಿದ ಸಾವಿರಾರು ಕುಟುಂಬಗಳೂ ಅಸ್ಥಿರಗೊಳ್ಳತೊಡಗುತ್ತವೆ. 'ಪರಿಸರ ನಾಶ ಮತ್ತು ಅಭಿವೃದ್ಧಿ' ಪೂರಕ ಸಂಗತಿಗಳೆಂದು ವಾದಿಸುವವರು ಒಂದು ಜನಸಮುದಾಯಕ್ಕೆ ಸಾವಿರಾರು ವರ್ಷಗಳಿಂದ ಬದುಕಲು ಲಭ್ಯವಿದ್ದ ನೈಸರ್ಗಿಕ ವಿಧಾನವನ್ನು ಬಲಿ ತೆಗೆದುಕೊಳ್ಳುತ್ತಿದ್ದೇವೆ ಎಂಬ ಅರಿವಿಲ್ಲ. ಲಕ್ಷಾಂತರ ನತದೃಷ್ಟರನ್ನು ನಿರ್ಮಿಸುವುದು ಅಭಿವೃದ್ಧಿಯೇ? ನಗರಗಳ ಸುತ್ತಮುತ್ತಲಿನ ಕೃಷಿ ಭೂಮಿಯನ್ನು ವಿಶೇಷ ಆರ್ಥಿಕವಲಯ ಎಂದು ಗುರುತಿಸಿ ಉದ್ದಿಮೆಗಳಿಗಾಗಿ ಕಾದಿರಿಸುವ ಕಾರಣಕೊಟ್ಟು ರೈತರಿಂದ ಖರೀದಿಸಲಾಗುತ್ತದೆ. ಆ ರೈತರಿಗೆ ಪರಿಹಾರಧನ ಕೊಡಬಹುದು, ಆದರೆ ಪರಿಹಾರ ಜೀವನ ಕ್ರಮವನ್ನು ಕೊಡಲು ಸಾಧ್ಯವೇ? ಇಂಥ ಪ್ರಶ್ನೆಗಳನ್ನು ಕೇಳುವವರು ಪ್ರಗತಿ ವಿರೋಧಿಗಳಾಗಿ ಕಾಣುವ ವ್ಯಂಗ್ಯ ನಮ್ಮೆದುರಿಗಿದೆ. ನಮ್ಮ ಅಭಿವೃದ್ಧಿಗೆ ಸರ್ವೋದಯದ, ಇಡೀ ಸಮಾಜದ ಅಭ್ಯುದಯದ ಕನಸುಗಳಿಲ್ಲವಾದುದರಿಂದ ಚಿಕ್ಕ ಭೂಹಿಡುವಳಿದಾರನಾಗಿದ್ದ ರೈತ ತನ್ನದೇ ಜಮೀನಿನಲ್ಲಿ ಎದ್ದುನಿಂತ ಮಹಲಿನಲ್ಲಿ ಒಬ್ಬ ಕೂಲಿಯಾಳಾಗುತ್ತಾನೆ ಮತ್ತು ಈ ದುರಂತದ ಸ್ಪಷ್ಟ ಅರಿವನ್ನು ತಂದುಕೊಳ್ಳುವಲ್ಲಿಯೂ ನಾವು ವಿಫಲರಾಗಿದ್ದೇವೆ."

* * *

"ಗೆಳೆಯರೆ, ಆಧುನಿಕ ಕವಿ ಸಮಯದ ಕುರಿತು ಮಾತನಾಡಬೇಕಾದ ನಾನು, ನನ್ನನ್ನು ಕಾಡುತ್ತಿರುವ ಈ ಎಲ್ಲ ಸಂಗತಿಗಳ ಕುರಿತು ಇಷ್ಟಾದರೂ ವಿವರವಾಗಿ ಮಾತನಾಡದೆ ಮುಂದಿನ ವಿಚಾರಗಳನ್ನು ಮಂಡಿಸುವುದು ಕಷ್ಟ. ನನ್ನೀ ಆಧುನಿಕ ಕಾಲದಲ್ಲಿ ಕಾವ್ಯವು ಸಮಾಜದ ಕೇಂದ್ರದಲ್ಲಿ ಉಳಿದಿಲ್ಲ. ಅದೊಂದು ವರ್ತುಲದ ಪರಿಘದ ಯಾವುದೋ ಮೂಲೆಯಲ್ಲಿ ನಡೆಯುತ್ತಿರುವ ಚಟುವಟಿಕೆ. ನಾವಾದರೂ ಎಂಥ ಅಲ್ಪತೃಪ್ತರೆಂದರೆ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳು ಪ್ರಕಟವಾಗಿಬಿಟ್ಟರೆ ನಮ್ಮಂಥ ಸುಖಿಗಳು ಯಾರೂ ಇಲ್ಲ, ದೇಶದಲ್ಲಿ ಮತ್ತಿನ್ನಾವ ಸಮಸ್ಯೆಗಳೂ ಇಲ್ಲ ಎಂದು ತಿಳಿದಿದ್ದೇವೆ."

"ಕವಿ ತನ್ನ ಕನಸುಗಳನ್ನು ಸಮಾಜ ಬಾಂಧವರ ಜೊತೆ ಹಂಚಿಕೊಳ್ಳುವುದು ಅನಿವಾರ್ಯವಾಗಿದೆ. ಭ್ರಮೆಗಳಲ್ಲದ ಕನಸುಗಳನ್ನು ಕಾಣುವುದನ್ನು ಅವನು ಸಮಾಜಕ್ಕೆ ಮತ್ತೆ ಕಲಿಸಬೇಕಾಗಿದೆ. ನಮ್ಮೆದುರಿಗಿರುವ ಸಮಸ್ಯೆಗಳು ತುಂಬ ಸಂಕೀರ್ಣ ಸ್ವರೂಪದವು. ಕುವೆಂಪು, ಬೇಂದ್ರೆ ಅಷ್ಟೇಕೆ ಅಡಿಗರು ಕಂಡ ಸಮಾಜದ ಸ್ವರೂಪಕ್ಕಿಂತ ನಾವು ಕಾಣುತ್ತಿರುವ ಸಮಾಜ, ಅದರ ಸಮಸ್ಯೆಗಳು ಘೋರವಾದವು ಎಂದು ನಾನು ತಿಳಿದಿದ್ದೇನೆ. ಇಂದು ನಾವು ಕಾಣುತ್ತಿರುವ ವಿಘಟನೆ, ವಿಪ್ಲವಗಳ ಬೀಜ ಅಂದೇ ಬಿದ್ದಿರುವುದಾದರೂ ಈ ಪರಿಣಾಮಗಳ ಬಗ್ಗೆ ಆಗ ಸ್ಪಷ್ಟ ಕಲ್ಪನೆ ಇತ್ತೆಂದು ನನಗೆ ಅನಿಸುವುದಿಲ್ಲ. ತುಲನಾತ್ಮಕವಾಗಿ ಅವರು ಕಂಡ ಸಮಾಜ ಸ್ಥಿರವಾದುದೆಂದೇ ತಿಳಿಯಬೇಕು. ಇತ್ತೀಚಿನ ವರ್ಷಗಳಲ್ಲಿ ನಮ್ಮ ಸಮಾಜದಲ್ಲಿ ಕೆಲವರಿಗೆ ಸಿಕ್ಕ ಆರ್ಥಿಕ ಲಂಘನ ವಿಸ್ಮಯ ಹುಟ್ಟಿಸುವಂಥದು. ತಿಂಗಳಿಗೆ ಲಕ್ಷಾಂತರ ದುಡಿಯುವವರೂ, ಎರಡು ಸಾವಿರದ ಸಂಬಳ ಪಡೆಯುವವರೂ ಅದೇ ರಾಜಧಾನಿ ಬೆಂಗಳೂರಿನಲ್ಲಿ ಬದುಕುತ್ತಿರುವುದು ನಮ್ಮ ಅಭಿವೃದ್ಧಿ ಸೃಷ್ಟಿಸುತ್ತಿರುವ ಅಂತರಕ್ಕೆ ಸಾಕ್ಷಿಯಲ್ಲವೆ? ಅಷ್ಟು ಕಡಿಮೆ ವೇತನದಲ್ಲಾದರೂ ಯುವ ಪೀಳಿಗೆ ನಗರ ಜೀವನವನ್ನೇ ಬಯಸುತ್ತಿರುವುದರ ಹಿಂದಿನ ಪ್ರಲೋಭನೆಯಾದರೂ ಎಂಥದು? ಅರ್ಥ, ಕಾಮಗಳಿಗೆ ಧರ್ಮದ ನಿಗ್ರಹವನ್ನು ನಮ್ಮ ಹಿರಿಯರು ಬಯಸಿದರು. ನಮ್ಮ ಕಾಲದ ಧರ್ಮದ ಸ್ವರೂಪವೇನು? ಈ ಕುರಿತು ಯಾರು ಚಿಂತಿಸಬೇಕು?"

"ಅಂಥದೊಂದು ಧರ್ಮಿಕ ಪರಿಕಲ್ಪನೆಯನ್ನು ಬೆಳೆಸುವುದಾದರೆ ಅದಕ್ಕೆ ಪರಿಸರ ಸ್ನೇಹಿಯಾದ ಅಭಿವೃದ್ಧಿಯ ಆಶಯ, ಸಂಕಲ್ಪಗಳು ಬೇಕಾಗುತ್ತವೆ ಎಂದು ನಾನು ತಿಳಿದಿದ್ದೇನೆ. ವಿಜ್ಞಾನ ನನಗೆ ಒದಗಿಸುವ ಅನುಕೂಲಗಳನ್ನು ಹದವರಿತು ಒಳಗು ಮಾಡಿಕೊಳ್ಳಬಲ್ಲ ಸಾಮಾಜಿಕ ಸಂರಚನೆಯನ್ನು ನಾನು ನಿರೀಕ್ಷಿಸುತ್ತಿದ್ದೇನೆ. ಕವಿ ಆಧುನಿಕನಾಗುವುದೆಂದರೆ ತನ್ನೆದುರಿನ ಕ್ಷಣಕ್ಕೆ ಸಂವೇದಿಸುವುದು, ಆ ಕ್ಷಣದ ಅನಂತ ಸ್ವರೂಪವನ್ನು, ಅವ್ಯಾಹತ ಸಾಗುವಿಕೆಯನ್ನೂ ಅರಿಯುವುದು. ಬಣ್ಣದ ಅಂಗಿಗಳನ್ನು ತೊಟ್ಟ ಚಿಣ್ಣರೆದುರು ತನ್ನ ಕನಸುಗಳನ್ನು ಕಟ್ಟಿಕೊಳ್ಳಬೇಕಾದ ಜೂದ ಕೆಲಸಗಾರ ಬಾಬುವಿನಲ್ಲೂ, ಅಂಗಡಿ ಎದುರು ಕರಡಿವೇಷ ಧರಿಸಿ ತನ್ನ ಸ್ವ-ರೂಪವನ್ನು ಕಳಚಿಕೊಂಡ ಭಯದಲ್ಲಿ ಕಂಗಾಲಾಗಿರುವ ಗಣೇಶನಲ್ಲೂ, ಬೆಂಗಳೂರಿನಿಂದ ಆಚೆ ಹಾರಿ ನಡೆದ ಗುಬ್ಬಿಗಳಲ್ಲೂ, ಕನಸಿನಲ್ಲಿ ತಿಂದ ವಿಷ ತನ್ನನ್ನು ಕೊಲ್ಲುತ್ತಿರುವ ವಿಹ್ವಲತೆಯಲ್ಲೂ, ಕಾಡು ಕಡಿಯುವ ಸುದ್ದಿಯನ್ನು ಮರಕ್ಕೆ ಅರುಹುವ ಹಕ್ಕಿಯ ಹಾಡಿನ ಒಡಕಿನಲ್ಲೂ ನನ್ನ ಬರಹಗಳು ನನ್ನ ಕಾಲದ ಸಮಸ್ಯೆಗಳನ್ನು ಅರಿಯುವ, ಮಿತಿಗಳನ್ನು ಮೀರುವ ಯತ್ನ ನಡೆಸಿವೆ. ಅದೇ

ಕಾಲಕ್ಕೆ ನನ್ನಂಥವನು ಆತಂಕಗೊಳ್ಳುತ್ತಿರುವುದು ನಮ್ಮ ದೇಶಭಾಷೆಗಳು ನಗಣ್ಯಗೊಳ್ಳುತ್ತಿರುವ ಪರಿಯನ್ನು ಕುರಿತು. ಇತ್ತೀಚೆಗೆ ಒಂದು ಪತ್ರಿಕಾವರದಿ ನಮ್ಮ ಉದ್ಯಮಿಯೊಬ್ಬರ ವೇತನವನ್ನು ಡಾಲರ್ ರೂಪದಲ್ಲಿ ಹೇಳಿತ್ತು. ನಿಜಕ್ಕೂ ನನಗೊಮ್ಮೆ ಕಸಿವಿಸಿಯಾಯಿತು. ನಮ್ಮ ರೂಪಾಯಿಗಳೆಲ್ಲ ಡಾಲರುಗಳಾಗಿ, ನಮ್ಮೆಲ್ಲ ಭಾಷೆಗಳೂ ಇಂಗ್ಲಿಷಾಗಿ, ನಾವು ಕುಡಿಯುವ ನೀರೆಲ್ಲ ಅಮೆರಿಕದ ಕಣಿವೆಯ ನೀರಾಗಿ, ನಾವೆಲ್ಲ ವಿಭಿನ್ನ ವೇಷ ತೊಟ್ಟ ಅಮೆರಿಕನರಾಗಿ ಓಡಾಡುತ್ತೇವೆಂದು ಗೊತ್ತಿದ್ದರೆ ಪಂಪ ಇಲ್ಲಿ ಮತ್ತೆ ಹುಟ್ಟಬಯಸುತ್ತಿದ್ದನೇ? ಕಾವ್ಯವು ವ್ಯಕ್ತಿತ್ವಗಳ, ಸಮಾಜಗಳ ಅನನ್ಯತೆಯನ್ನು ಗುರುತಿಸುವಂಥದು, ಮನ್ನಿಸುವಂಥದು. ಕಾರ್ಖಾನೆಯ ಸೈರನ್ನುಗಳ ಮಧ್ಯೆ, ಅದರ ಕೊಳವೆಬಾವಿಗಳು ಉಗುಳುವ ಕಪ್ಪು ಹೊಗೆಯ ಮಧ್ಯೆ ಕವಿಯೊಬ್ಬ ತನ್ನ ಕಾಲಕ್ಕೆ ಪದ್ಯ ಓದಿ ಹೇಳಬೇಕಾಗಿದೆ. ಆದರೆ ಈ ಗದ್ದಲದ ಮಧ್ಯೆ ನಾನು ನನ್ನ ಧ್ವನಿ ಕೇಳುವಂತೆ ಹೇಗೆ ಓದಬೇಕು ಎಂಬುದೇ ದೊಡ್ಡ ಸವಾಲಾಗಿದೆ."

* * *

ಯು.ಆರ್. ಅನಂತಮೂರ್ತಿಯವರು ಒಂದು ಸಂದರ್ಭದಲ್ಲಿ ಒಟ್ಟಾರೆಯಾಗಿ ಕನ್ನಡ ಚೈತನ್ಯದ ಹಿಂದಿರುವ ಮೂರು ಹಸಿವುಗಳನ್ನು ಗುರುತಿಸಿದರು. ಅವು ಸಮಾನತೆಯ ಹಸಿವು, ಆಧ್ಯಾತ್ಮಿಕ ಹಸಿವು ಮತ್ತು ಆಧುನಿಕತೆಯ ಹಸಿವು. ಅವರದೇ ಮಾತುಗಳಲ್ಲಿ ಈ ಮೂರು ಹಸಿವುಗಳ ಕುರಿತು ಸಂಗ್ರಹವಾಗಿ ಕೆಲ ಮಾತುಗಳನ್ನು ನೀಡಬಯಸುತ್ತೇನೆ.

೧. **ಸಮಾನತೆಯ ಹಸಿವು:** "ನಮ್ಮ ದೇಶ ಉಳಿದ ದೇಶಗಳಿಗೆ ಸಮಾನವಾಗಿ ತಲೆಯೆತ್ತಿ ಬದುಕಬೇಕೆಂಬ ಹಸಿವು ಮಾತ್ರವಲ್ಲದೆ, ನಮ್ಮ ಜನಪದದಲ್ಲಿ ಹಿಂದುಳಿದವರು ನಾಗರಿಕತೆಯ ಸವಲತ್ತುಗಳನ್ನು ಗಳಿಸಿಕೊಳ್ಳಬೇಕೆಂಬ ಹಸಿವು; ದಲಿತರಲ್ಲೂ, ಸ್ತ್ರೀಯರಲ್ಲೂ ಹುಟ್ಟಿರುವ ಸ್ವಾಭಿಮಾನದ ಹಸಿವು. ಇದೇ ಬಂಡಾಯ, ದಲಿತ ಇತ್ಯಾದಿ ಈಚಿನ ಸಾಹಿತ್ಯ ಚಳುವಳಿಗಳಲ್ಲಿ ಕಾಣಿಸುವ ಹಸಿವು ಕೂಡ".

೨. **ಆಧ್ಯಾತ್ಮಿಕ ಹಸಿವು:** "ವಚನಕಾರರಲ್ಲೂ, ಬೇಂದ್ರೆ, ಕುವೆಂಪು, ಪುತಿನರಂತಹ ಕವಿಗಳಲ್ಲೂ ಎದ್ದು ಕಾಣಿಸುವ ಹಸಿವು ಇದು. ಇದು ಮತೀಯವಲ್ಲ; ಕೋಮುವಾದಿಗಳಲ್ಲಿ ಖಂಡಿತ ಹುಟ್ಟುವ ಹಸಿವು ಇದಲ್ಲ. ಆಧುನಿಕತೆಯ ಹಸಿವಿನ ಜೊತೆಗೇ ಈ ಹಸಿವು ಹುಟ್ಟಿಕೊಂಡಾಗ, ಸರ್ವೋದಯದ ಬಯಕೆ ಇದರಲ್ಲಿ ಅಡಗಿದಾಗ ಮತೀಯತೆಯ ಮಿತಿಗಳಿಂದ ಆಧ್ಯಾತ್ಮಿಕತೆ ಮೀರಿ ನಿಲ್ಲುತ್ತದೆ. ಶಿಶುನಾಳ ಶರೀಫರಿಂದ ಹಿಡಿದು ಬೇಂದ್ರೆವರೆಗೆ, ಎಡಪಂಥೀಯ ನಿಲುವಿನ ಹಲವು ಯುವಕವಿಗಳಲ್ಲಿಯೂ ಕನ್ನಡದ ದೇಸಿಶಕ್ತಿಯನ್ನು ವಿಶ್ವಾತ್ಮಕ ದರ್ಶನದಲ್ಲಿ ತೊಡಗಿಸುವ ಶೋಧವಾಗಿದೆ ಇದು.

೩. **ಆಧುನಿಕವಾಗಬೇಕೆಂಬ ಹಸಿವು:** "ಬಿ.ಎಂ.ಶ್ರೀ. ಯವರಲ್ಲಿ ಪ್ರತ್ಯಕ್ಷಗೊಂಡು, ನವ್ಯರಲ್ಲಿ ಅಧಿಕವೆನ್ನುವಷ್ಟು ಬೆಳೆದು, ಬೇಂದ್ರೆ, ಕಂಬಾರರಂಥವರಲ್ಲಿ ಸಂಕೀರ್ಣರೂಪ ತಾಳಿ ಎಲ್ಲರಲ್ಲೂ – ನಮ್ಮ ರಾಜಕಾರಣಿಗಳಲ್ಲೂ, ಸುಧಾರಕರಲ್ಲೂ "ತೇಲಿ ಬರುವ ಜಾಸ್‌ಗಾನ ನಮ್ಮ ಕುಣಿತರಲ್ಲವೇನ' ಎಂದುಕೊಳ್ಳುವ, ಹೊಸಕಾಲದ ಯುವಕ ಯುವತಿಯರಲ್ಲೂ – ಪ್ರೇರಕ ಶಕ್ತಿಯಾಗಿ ಕೆಲಸ ಮಾಡುವ ಹಸಿವು ಇದು."

'ಅಧುನಾ' ಎಂಬ ಶಬ್ದದ ಅರ್ಥವೇ "ಈಗ, ಈ ಸಮಯದಲ್ಲಿ' ಎಂದು. ಕವಿರಾಜಮಾರ್ಗಕಾರನ ಕಾಲದಿಂದಲೂ ಕನ್ನಡ ಬೆಳೆದದ್ದು ಹಲವು ಬಗೆಯ ಅನುಸಂಧಾನಗಳಿಂದ. ಇಂಥ ಅನುಸಂಧಾನಗಳ ಫಲವಾಗಿಯೇ ಕನ್ನಡ ಶಬ್ದಕೋಶ ಬೆಳೆದಿದೆ. ಪೋಲೀಸ್, ಬಸ್, ಕಂಪ್ಯೂಟರ್ ಮುಂತಾದ ಶಬ್ದಗಳೂ ಒಂದು ಕನ್ನಡದ ಕೊಂಬಿನ ಮೂಲಕ ನಮ್ಮದಾಗಿವೆ. ಇದು ಕೇವಲ ಶಬ್ದದ ಇತಿಹಾಸ ಮಾತ್ರವಲ್ಲ. ಅಲ್ಲೆಲ್ಲಿಂದಲೋ ಬಂದ ಚಹಾಸೊಪ್ಪಿಗೆ ನಮ್ಮ ನಾಡಿನ ನೆಲ ಆಶ್ರಯವಾದುದು ಮಾತ್ರವಲ್ಲ, ಅದಕ್ಕೆ ಸಂಬಂಧಪಟ್ಟ ತಮಾಷೆಯ ಕಥೆಗಳೂ (ಶ್ರೀಕೃಷ್ಣ ಉವಾಚ, ಸಂಜೀವಿನಿಯ ಚರಟ) ಜನಮಾನಸದಲ್ಲಿ ಅರಳಿಕೊಂಡವು. "ಚಹಾಪಾನ ಮಾಡದವನ ಜನ್ಮ ವ್ಯರ್ಥ" ಎಂಬಂಥ ಹಾಡುಗಳು ಹುಟ್ಟಿದವು. ಪುನಃ ಅನಂತಮೂರ್ತಿಯವರನ್ನೇ ಅವಲಂಬಿಸಿ ಹೇಳುವುದಾದರೆ "ಸಾತತ್ಯ ಕೆಡದಂತೆ ಆಧುನಿಕವಾಗುವ ಪ್ರೇರಣೆ" ಹತ್ತೊಂಬತ್ತು, ಇಪ್ಪತ್ತನೇ ಶತಮಾನದ ಮುಖ್ಯ ಲಕ್ಷಣಗಳಲ್ಲಿ ಒಂದಾಗಿದೆ.

ಇತ್ತೀಚಿನ ವರ್ಷಗಳಲ್ಲಿ ಕಾವ್ಯ ಅಥವಾ ನಮ್ಮ ಸೃಷ್ಟಿಶೀಲ ಕ್ಷಣಗಳು ಎದುರಿಸಬೇಕಾದ ಸವಾಲುಗಳನ್ನು ಮೇಲೆ ಹೇಳಿದ ಮೂರು ಹಸಿವುಗಳ ಹಿನ್ನೆಲೆಯನ್ನೇ ಇಟ್ಟುಕೊಂಡು ಯೋಚಿಸುವುದಾದರೆ ನಮಗೆ ಹಲವು ಆಘಾತಗಳು ಕಾದಿವೆ. "ಆಧುನಿಕವಾಗುವ ಹಸಿವು" ಇಂದು ವಿಕಾರಗೊಂಡು ಸಮಾನತೆ ಮತ್ತು ಅಧ್ಯಾತ್ಮದ ಹಸಿವುಗಳನ್ನು ತೆವಲಾಗಿಸಿರುವ ವಿಪರ್ಯಾಸ ಕಾಣುತ್ತಿದ್ದೇವೆ. ಅನ್ಯದೇಶೀಯ ಪ್ರಭಾವ ಅಥವಾ ಅನ್ಯಸಂಸ್ಕೃತಿಯ ಪ್ರಭಾವ ಎಂದಾಗ ಇಂದು ಅದು ಸೂಚಿಸುವುದು ಅಮೆರಿಕದ ಪ್ರಭಾವವನ್ನೇ. ಉದಾರೀಕರಣ, ಗೋಳೀಕರಣ (ಗ್ಲೋಬಲೈಸೇಶನ್) ಮುಂತಾದ ಎಲ್ಲ ಹೊಸ ವ್ಯಾಕರಣಗಳು ಸೂಚಿಸುವುದು ಅಮೆರಿಕೀಕರಣವನ್ನೇ. ಇಡೀ ಜಗತ್ತಿಗೇ ದೊಡ್ಡಣ್ಣನಂತೆ ವರ್ತಿಸುತ್ತಿರುವ ಅಮೆರಿಕದ ವ್ಯಾಪಾರೀಶಕ್ತಿಗಳು ನಮ್ಮ ಬದುಕಿನ ಅತ್ಯಂತ ಖಾಸಗಿ ಎನ್ನಬಹುದಾದ ಸಂಗತಿಗಳನ್ನೂ ನಿರ್ದೇಶಿಸತೊಡಗಿರುವುದು. ಭಯಾನಕವಾಗಿದೆ. ಪಾಶ್ಚಾತ್ಯ ಪ್ರಭಾವದ ಮೊದಲ ಘಟ್ಟಗಳೆಂಗು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಸಾಕಷ್ಟು ದೀರ್ಘಕಾಲವನ್ನು ಒಂದೆಡೆಗೂ, ಇತ್ತೀಚಿನ ಎರಡೂವರೆ ದಶಕಗಳಿಂದ ಅಮೆರಿಕನ್ ಎಂದೇ ಸ್ಪಷ್ಟವಾಗಿ

[illegible] ಅವಧಿಯನ್ನು ಇನ್ನೊಂದೆಡೆಗೂ ಇಟ್ಟು ನೋಡಿದಾಗ ನಾವು ಈ ದಶಕಗಳಲ್ಲಿ ಎದುರಿಸಿರುವ ಸವಾಲುಗಳ ಸರಿಯಾದ ಸ್ವರೂಪವನ್ನು ಸಾಹಿತ್ಯವಾಗಿಯಾಗಲೀ, ಸಮಾಜವಾಗಿಯಾಗಲೀ ಸಮರ್ಥವಾಗಿ ಗ್ರಹಿಸಿದ್ದೇವೆಯೇ ಎಂದು ಸಂದೇಹ ಉಂಟಾಗುತ್ತದೆ. ನಮ್ಮ ನಾಲಿಗೆಯ ಸ್ವಾದಗ್ರಂಥಿಗಳ ಮೇಲೂ ವಿದೇಶೀ ತಿನಿಸುಗಳು ಬೀರಿರುವ ಪ್ರಭಾವ ಸಾಮಾನ್ಯವಾದುದಲ್ಲ, ಇದು ಚಹಾ ನಮ್ಮ ಪಾನೀಯಗಳ ಜೊತೆ ಒಂದಾದಷ್ಟು ಸಹಜವಾಗಿಯೂ ಇಲ್ಲ. ನಮ್ಮ ರುಚಿಗಳ ಮೇಲೆ, ನಿತ್ಯದ ಆಹಾರಕ್ರಮದ ಮೇಲೆ ಆಕ್ರಮಣಶೀಲತೆಯಿಂದ ಎರಗುತ್ತಿರುವ ವ್ಯಾಪಾರೀ ತಿಂಡಿ ತಿನಿಸುಗಳು, ನಮ್ಮೂರ ಬಾವಿಯ ನೀರಿನ ಕುರಿತೇ ನಮಗೆ ಹುಟ್ಟಿರುವ ಅನುಮಾನ ಇವೆಲ್ಲ ನಾವು ಚಲಿಸುತ್ತಿರುವ ಹಾದಿಯ ಕುರಿತು ಬಹಳಷ್ಟು ಹೇಳಬಲ್ಲವಾಗಿವೆ. ಪುಟ್ಟ ಪೆಟ್ಟಿಗೆ ಅಂಗಡಿಗಳನ್ನೂ, ಶೆಟ್ಟರಂಗಡಿಗಳನ್ನೂ ನುಂಗುತ್ತೇವೆಂಬಂತೆ ತಲೆಯೆತ್ತಿ ನಿಂತಿರುವ ಮಾಲ್‌ಗಳಲ್ಲಿ ಕೊತ್ತಂಬರಿಸೊಪ್ಪಿನಿಂದ ಹಿಡಿದು ವಿಸ್ಕಿ, ವೈನ್‌ಗಳವರೆಗೆ ಎಲ್ಲ ಬಗೆಯ ವಸ್ತುಗಳೂ ಒಂದೆಡೆಗೆ ಲಭ್ಯ. ಭಾರತದ ರಸ್ತೆ, ರಸ್ತೆಗಳಲ್ಲಿ ಕಾಣುವ ಸಹಸ್ರಾರು ಪುಟ್ಟ ಅಂಗಡಿಗಳು ಈ ದೇಶದ ಅಷ್ಟೊಂದು ಬಡಸಂಸಾರಗಳ ಹೊಟ್ಟೆ ಹೊರೆದಿವೆ. ಮಾಲ್‌ಗಳು ಈ ದೇಶದ ಸಾಮಾನ್ಯ ಮನುಷ್ಯನ ಜೀವನದ ಮೇಲೆ ಮಾತ್ರವಲ್ಲ, ಮಧ್ಯಮವರ್ಗದವರ ಮೇಲೂ ಅಪಾಯಕಾರಿ ಪ್ರಭಾವ ಬೀರುತ್ತಿವೆ. ಅವು ಸಾಕಿ ಸಲಹುತ್ತಿರುವ ಕೊಳ್ಳುಬಾಕತನ, ಲಕ್ಷ್ಯವಿಟ್ಟಿರುವ ಲಾಭ, ಅದಕ್ಕಾಗಿ ಎಂಥ ಮಾರ್ಗವೂ ಯೋಗ್ಯವೇ ಎಂಬ ಬುಲ್‌ಡೋಜರ್ ಮನೋಭಾವ ಇವುಗಳಿಂದಾಗಿ ನಮ್ಮಲ್ಲಿ ಹುಟ್ಟಿರುವ ನೈತಿಕ ಸಂಕಟಗಳನ್ನೂ ನಾವು ಸರಿಯಾಗಿ ಅರಿತುಕೊಂಡಿಲ್ಲ. ಮನುಷ್ಯನ ಐಹಿಕ ಅಪೇಕ್ಷೆಗಳನ್ನೆಲ್ಲ ನಿಯಂತ್ರಿಸಬಲ್ಲ ಸಂಯಮದ ಧಾರ್ಮಿಕತೆ ಇಂದು ಪ್ರಬಲಶಕ್ತಿಯಾಗಿ ಉಳಿದಿಲ್ಲ. ಅದೊಂದು ಕೋಮುವಾದಿ ರೋಗವಾಗಿರುವುದು ಇನ್ನೊಂದೇ ವಿಷಯ.

ವಿಶ್ವದೆಲ್ಲೆಡೆ ಕಾಣುತ್ತಿರುವ ಜನಾಂಗೀಯ ದ್ವೇಷ ಮತ್ತು ಭಯೋತ್ಪಾದಕ ಚಟುವಟಿಕೆಗಳು ಎಲ್ಲ ಲೇಖಕರೂ ಪರಿಭಾವಿಸಲೇಬೇಕಾದಷ್ಟು ಆತಂಕಕಾರಿಯಾಗಿವೆ. ಸಂಪ್ರದಾಯಸ್ಥವಾಗಿಯೇ ತಾಳಿಕೊಳ್ಳುವ, ಸಹನಶೀಲವಾದ ಭಾರತೀಯ ಸಮಾಜ ಇಂದು ಹಲವು ಅನುಮಾನಗಳ ಬೀಡಾಗಿದೆ. ಮತೀಯ ವಿಧ್ವಂಸಕ ಮನೋಭಾವದ ಭಯೋತ್ಪಾದಕರು ಇಂಥ ಶಾಂತಿ, ಸಹನೆಯ ಊರುಗಳಲ್ಲೂ ಹುಟ್ಟಿಕೊಳ್ಳುತ್ತಿದ್ದಾರೆ. ಲೇಖಕನಾಗಿ ನಾನು ಇದಕ್ಕೆ ಹೇಗೆ ಸ್ಪಂದಿಸದೇ ಉಳಿಯಬಲ್ಲೆ? ಈ ಕಾಲದ ಬಹುದೊಡ್ಡ ಅನಾಹುತವೆಂದರೆ ಎಲ್ಲ ಬಗೆಯ ಬಹುತ್ವಗಳನ್ನು ನುಂಗಬಯಸುವ ಬಕಾಸುರ ಪ್ರವೃತ್ತಿ. ಇದನ್ನು ಎಲ್ಲ ನೆಲೆಗಳಲ್ಲೂ ನೋಡಬಹುದು. ದೇಶ ಭಾಷೆಗಳನ್ನು ಪಕ್ಕಕ್ಕೆ ತಳ್ಳಿ ಇಡೀ ವಿಶ್ವಕ್ಕೆ ತಾನೊಂದೇ ಎಂಬಂತೆ ಬೆಳೆಯಬಯಸುತ್ತಿರುವ ಇಂಗ್ಲಿಷ್, ವಿಶ್ವವಾಣಿಜ್ಯವನ್ನೇ ತನ್ನ ಕೈಹಿಡಿತದಲ್ಲಿರಿಸಿಕೊಳ್ಳಬಯಸುವ ಅಭಿವೃದ್ಧಿಹೊಂದಿದ ರಾಷ್ಟ್ರಗಳ ಬೃಹತ್ ವ್ಯಾಪಾರೀಜಾಲ, ಎಲ್ಲ ಸಾಂಸ್ಕೃತಿಕ ವೈವಿಧ್ಯಗಳನ್ನು ಅನಾಗರಿಕವೆಂಬಂತೆ ಬಿಂಬಿಸುತ್ತಾ ತಾನೇ ತಾನಾಗಿ ಎಲ್ಲೆಡೆ ಬೇರುಬಿಡಲು ಬಯಸುತ್ತಿರುವ ಅಮೆರಿಕನ್ ಜೀವನಶೈಲಿ, ಇದಕ್ಕೆ ಮಾರುಹೋಗಿರುವ ಈ ದೇಶದ ಕೋಟಿಗಟ್ಟಲೆ ವಿದ್ಯಾವಂತ ಯುವಕ,ಯುವತಿಯರು ಈ ಕ್ಷಣ ಇಲ್ಲಿಂದ ಅಲ್ಲಿಗೆ ನೆಗೆದು ಹಾರುವ ಸನ್ನಾಹದಲ್ಲಿದ್ದಾರೆ. ನಮ್ಮ ಭಾಷೆ, ಮನಸು ಮತ್ತು ಬದುಕನ್ನು ಹೀಗೆ ಬುಡದಿಂದ ಅಲುಗಾಡಿಸಲು ತೊಡಗಿರುವ ಅನ್ಯಪ್ರಭಾವಗಳಿಂದ ನಮ್ಮನ್ನು ಕಾಪಾಡಿಕೊಳ್ಳುವುದೇ ಇಂದಿನ ಕಾವ್ಯದ ಮುಖ್ಯ ಸವಾಲು. ತನ್ನತನವೆಂಬುದು ಮರೆವೆಗೆ ಜಾರಿ ತನ್ನನ್ನು ತಾನೇ ಹೀಯಾಳಿಸಿಕೊಳ್ಳುವ ಹೀನ ಮನೋಭಾವಕ್ಕೆ ಜನಾಂಗ ತುತ್ತಾದಾಗ ತನ್ನ ಸ್ವರೂಪದರ್ಶನಕ್ಕೆ ಅದನ್ನು ಸಜ್ಜುಗೊಳಿಸಲು ಸಾಹಿತ್ಯ ಬೇಕು. ತನ್ನೊಳಗಿನ ಬಾಳಿನ ಶಕ್ತಿ, ಸಾರಗಳನ್ನು ಅದು ವ್ರತವೆಂಬಂತೆ ರಕ್ಷಿಸಿಕೊಳ್ಳಬೇಕು. "ಸಾತತ್ಯ ಕೆಡದಂತೆ" ಆಧುನಿಕವಾಗುವ ಹೋರಾಟದಲ್ಲಿ ತನ್ನನ್ನು ಉಳಿಸಿಕೊಳ್ಳುವಂತೆಯೇ ಬೆಳೆಸಿಕೊಳ್ಳುವ ಸಾಧ್ಯತೆಗಳೂ ಬೆಳಗುತ್ತಲಿರುತ್ತವೆ. ತನ್ನ ಕಾಲದ ಅಪೇಕ್ಷೆಗಳನ್ನು, ಆದ್ಯತೆಗಳನ್ನು ಅರಿತಾಗಲೂ ಅದರಿಂದ ಭಿನ್ನವಾಗಿಯೂ ನಿಂತು ಅದರ ಒಳಿತು,ಕೆಡಕುಗಳನ್ನು ಹೇಳಲು ಕವಿಗೆ ಸಾಧ್ಯವಾಗಬೇಕು. ಅದಕ್ಕೆ ಬೇಕಾದುದು ಪ್ರತಿಭೆ, ವಿವೇಕ ಮಾತ್ರವಲ್ಲ, ಕೆಚ್ಚೂ ಕೂಡ. ಸಮಾಜಕ್ಕೆ ಅಪ್ರಿಯ ಅನ್ನಿಸಬಹುದಾದ ಮಾತುಗಳನ್ನೂ, ವಿಚಾರಗಳನ್ನೂ ಕೂಡ ಹೇಳಬೇಕಾದುದು ಕವಿಯ ಜವಾಬ್ದಾರಿ. ಅದನ್ನು ಹೇಳಿದ್ದು ಕಾವ್ಯವಾಯಿತೇ ಎಂಬ ಪರೀಕ್ಷೆಯಲ್ಲೂ ಗೆದ್ದಾಗ ಮಾತ್ರವೇ ಅವನ ಕಾವ್ಯಕ್ಕೆ ಮಹತ್ವ ಸಲ್ಲಲು ಸಾಧ್ಯ.

ಕನ್ನಡದ ಕವಿಗಳ ಬಗ್ಗೆ ಹೇಳಬೇಕಾದ ಮಾತುಗಳಲ್ಲಿ ಕೆಲವು ಎಲ್ಲ ಭಾರತೀಯ,ಮಾತ್ರವಲ್ಲ ಎಲ್ಲ ಏಶಿಯನ್ ಕವಿಗಳಿಗೂ ಪ್ರಸ್ತುತವಾದಂಥವು. ನಮ್ಮ ಓದುಗವರ್ಗ ದಿನದಿಂದ ದಿನಕ್ಕೆ ಸಂಕುಚಿತಗೊಳ್ಳುತ್ತಿದೆ. ನಮ್ಮ ಭಾಷೆಗಳು ಜನಜೀವನದ ಉಸಿರಾಟದಿಂದ ದಿನಬಳಕೆಯಿಂದ ಪುಷ್ಟಿ ಪಡೆಯದೆ ಕಾಂತಿಯುಕ್ತವಾಗಲಾರವು. ಹಾಗೆಯೇ ನಮ್ಮ ವಿದ್ಯಾಲಯಗಳು ಅತ್ಯುತ್ತಮ ಕನ್ನಡ ಮಾಧ್ಯಮದ ಕಲಿಕೆಯ ಕೇಂದ್ರಗಳಾಗಬೇಕು. ಇವು ಅವಾಸ್ತವ ಅಥವಾ ಅಸಾಧ್ಯ ಅಪೇಕ್ಷೆಗಳು ಎಂದು ನಾನು ತಿಳಿದಿಲ್ಲ, ಬದಲಾಗಿ ಆದ್ಯತೆಯ ಮೇಲೆ ನಾವು ಕೈಗೆತ್ತಿಕೊಳ್ಳಲೇಬೇಕಾದ ಚಟುವಟಿಕೆಗಳಲ್ಲಿ ಇದು ಮೊದಲಿನದು. ಈ ನಾಡಿನ ಎಲ್ಲ ವರ್ಗದ ಜನರು ಒಟ್ಟಿಗೇ ಕಲಿಯುವ ವಿದ್ಯಾಲಯಗಳು, ಒಟ್ಟಿಗೇ ಬೆರೆಯುವ ಬಂಡಿಹಬ್ಬ, ಜಾತ್ರೆ, ಉತ್ಸವಗಳು, ಈ ದೇಶದ ಎಲ್ಲರೂ ಸಮಾನವಾಗಿ ಹೆಚ್ಚು ವೆಚ್ಚವಿಲ್ಲದೆ ವೈದ್ಯಕೀಯ ಸಲಹೆ,

ಚಿಕಿತ್ಸೆ ಪಡೆಯಬಲ್ಲ ವ್ಯವಸ್ಥೆ ಇವೆಲ್ಲವೂ ನಮ್ಮ ನಾಡಿನಲ್ಲಿ ಅತ್ಯುತ್ತಮ ದೇಶೀಯ ರುಚಿ, ವಾಸನೆ, ಒಗರಿನ ವ್ಯಕ್ತಿತ್ವ ಮನಸುಗಳು ಅರಳಲು ಅತ್ಯಗತ್ಯ. ಒಂದು ಒಳ್ಳೆಯ ಕವಿತೆ ತಾನೊಂದು ಒಳ್ಳೆಯ ಕವಿತೆಯಾಗುವುದರ ಮೂಲಕವೇ ಪ್ರಪಂಚದ ಬಾಳನ್ನು ಅಕ್ಷರಮಟ್ಟಿಗೆ ಚೆಲುವಾಗಿಸುತ್ತದೆ. ನಮ್ಮ ಇಂದಿನ ಕನ್ನಡ ಕಾವ್ಯ ಎಷ್ಟು ಗಾಢ, ಎಷ್ಟು ಗಂಭೀರ, ಎಷ್ಟು ಮಹತ್ವದ್ದೆನಿಸಬೇಕು ಎಂದರೆ ಭಾಷೆವಿಕ್ ಸಿಂಗರ್‌ನಿಂದಾಗಿ ಅವನ ಯಿದ್ದಿಶ್ ಭಾಷೆಗೆ ಜೀವಬಂದಂತೆ ನಮ್ಮ ಅತ್ಯುತ್ತಮ ಕವಿ, ಅವನ ಕವಿತೆಗಾಗಿ ನಮ್ಮ ಭಾಷೆ, ನಮ್ಮ ಸಂಸ್ಕೃತಿಗಳು ಬದುಕಲು ಯೋಗ್ಯ ಅನ್ನಿಸಬೇಕು.

* * *

ಈ ಹಂತದಲ್ಲಿ 'ಸಾಹಿತ್ಯದ ಪಾರವಿರದ ಶಕ್ತಿವಿಲಾಸ'ದ ಕುರಿತು ಹಿಂದೊಮ್ಮೆ ಬರೆದ ಟಿಪ್ಪಣಿಯ ಮಾತುಗಳನ್ನು ಜೋಡಿಸಬಯಸುವೆ.

"ಸಾಹಿತ್ಯದಿಂದ ಏನು ಪ್ರಯೋಜನವೆಂಬ ಪ್ರಶ್ನೆಯನ್ನು ಕಾಲಕಾಲಕ್ಕೆ ಕೇಳಿಕೊಳ್ಳುತ್ತ ಬರಲಾಗಿದೆ. ಎಲ್ಲವನ್ನೂ ಪ್ರಯೋಜನದ ದೃಷ್ಟಿಯಿಂದ ನೋಡಲಾಗುವ ಭೋಗವಾದಿ ಯುಗದಲ್ಲಿ ಈ ಪ್ರಶ್ನೆ ಇನ್ನಷ್ಟು ಪ್ರಸ್ತುತವಾಗಿದೆ. ಈ ಪ್ರಶ್ನೆಯನ್ನು ಎಲ್ಲ ಕಲೆಗಳ ಕುರಿತೂ ಕೇಳಬಹುದು. ಆದರೂ ಸಾಹಿತ್ಯದ ಕುರಿತು ಅದನ್ನು ಹೆಚ್ಚು ಹಕ್ಕಿನಿಂದ ಕೇಳಲಾಗುತ್ತದೆ. ಸಾಹಿತ್ಯದಿಂದ ಇಂಥಿಂಥ ಪ್ರಯೋಜನಗಳಾಗಬೇಕು ಎಂಬ ನಿರೀಕ್ಷೆ ಹೊತ್ತ ಅನೇಕ ಗುಂಪುಗಳು ಇವೆ. ಸಾಹಿತ್ಯದಿಂದ ಸಮಾಜದಲ್ಲಿ ಬಡತನ ನೀಗಬೇಕು, ನಿರಕ್ಷರತೆ ತೊಲಗಬೇಕು, ಜಾತಿ ಪದ್ಧತಿ ಅಳಿಯಬೇಕು, ಅಸಮಾನತೆ ನಿವಾರಣೆಯಾಗಬೇಕು, ಭಾಷಾಪ್ರೀತಿ, ರಾಷ್ಟ್ರಭಕ್ತಿ ಉಂಟಾಗಬೇಕು.... ಮುಂತಾದ ಅನೇಕ ಒತ್ತಾಯಗಳನ್ನು ತರಲಾಗಿದೆ. ಸಾಹಿತ್ಯ ಮತ್ತು ಸಮಾಜದ ಸಂಬಂಧದ ಪ್ರಶ್ನೆಯನ್ನು ಕನ್ನಡ ಸಾಹಿತ್ಯವು ಕಳೆದ ಅನೇಕ ದಶಕಗಳಿಂದ ಕೇಂದ್ರದಲ್ಲಿಟ್ಟುಕೊಂಡು ಎಲ್ಲವನ್ನೂ ಸಮೀಕ್ಷಿಸುತ್ತಿದೆ. ಇಂಥ ನಿರೀಕ್ಷೆಗಳಲ್ಲಿ ಯಾವ ತಪ್ಪೂ ಇಲ್ಲ ಎಂದು ನಾನು ಭಾವಿಸುತ್ತೇನೆ. ಏಕೆಂದರೆ ಇವರೆಲ್ಲರೂ ಸಾಹಿತ್ಯ ಒಂದು ಪರಿಣಾಮಕಾರಿ ಮಾಧ್ಯಮ ಎಂದು ತಿಳಿದಿದ್ದಾರೆ. ಅದರಿಂದಲೇ ತಮ್ಮ ಕಾರ್ಯಯೋಜನೆಯ ಪಟ್ಟಿಯಲ್ಲಿರುವ ಅಂಶಗಳನ್ನು ಸಾಹಿತ್ಯವು ಒಳಗೊಳ್ಳಬೇಕೆಂದು ಒತ್ತಡ ತರುತ್ತಿದ್ದಾರೆ. ಕುಸಿಯುತ್ತಿರುವ ಮಾನವೀಯ ಮೌಲ್ಯಗಳನ್ನು, ಸಂಪ್ರದಾಯದ ಉತ್ತಮ ಅಂಶಗಳನ್ನು ಕುರಿತು ನಾನು ಬರೆಯಬೇಕೆಂದೂ (ಅದೂ ಹೆಚ್ಚು ಗದ್ಯದಲ್ಲಿ), ಅರಿವಿಗೆ ಬಾರದಷ್ಟು ಅಸ್ಪಷ್ಟವಾಗಿರುವ ಸಂಗತಿಗಳ ಕುರಿತು ಅಷ್ಟೇ ಅತಾರ್ಕಿಕವಾಗಿ ನಾನು ಬರೆಯುತ್ತಿರುವ ಕವಿತೆಗಳಿಂದ ವಿಶೇಷ ಪ್ರಯೋಜನ ಇಲ್ಲವೆಂದೂ ನನ್ನ ಮಡದಿಯೂ ನನಗೆ ಅನೇಕ ಸಲ ಹೇಳಿದ್ದಾಳೆ. ಅವಳ ಕಳಕಳಿಯ ಕುರಿತು ನನಗೆ ಗೌರವವಿದೆ. ಆದರೂ ಅಂಥ ಅಜೆಂಡಾಗಳನ್ನು ಹೊತ್ತು ಸಾಹಿತ್ಯ ಯಾಕೆ ಬರೆಯಲಾಗುವುದಿಲ್ಲ ಎಂಬ ಪ್ರಶ್ನೆಯನ್ನು ನನ್ನ ಬಗೆಗೇ ಕೇಳಿಕೊಂಡು ಪ್ರಯೋಜನದ ಪ್ರಶ್ನೆಯ ಹತ್ತಿರ ಬರುತ್ತೇನೆ.'

"ಬಾರೆ ಸಖೀ ಚಂದ್ರಮುಖೀ ಮಾತನಾಡುವಾ" ಎಂದು ಆರಂಭವಾಗುವ ನನ್ನದೊಂದು ಪದ್ಯವಿದೆ. ಆ ಪದ್ಯ ಮಾನವೀಯ ಸಂಬಂಧಗಳ ಕುರಿತೇ ಹೇಳುತ್ತದೆ, ಆದರೆ ಅದಕ್ಕಾಗಿ ನಾನು ಆ ಪದ್ಯ ಬರೆಯಲಿಲ್ಲ. ನಾನು ಬೆಳೆದ ಹಳ್ಳಿಯ ಹುಟ್ಟುಕುರುಡನೊಬ್ಬನ ಕುರಿತು ಕಥೆ ಬರೆದಿದ್ದೇನೆ. ಅದನ್ನು ಸಮಾಜದ ನಿಮ್ನ ವರ್ಗದಿಂದ ಬಂದ ಅಂಗವಿಕಲನೊಬ್ಬನ ಅಸಹಾಯಕತೆಯ ಕುರಿತು ಬರೆಯುತ್ತೇನೆಂದು ನಿರ್ಧರಿಸಿ ಬರೆಯಲಿಲ್ಲ. ಆದರೆ ಅವು ಹಾಗೆ ಆದವು. ಸಾಹಿತ್ಯದ ಎಲ್ಲ ಸಾಲುಗಳೂ ನನ್ನನ್ನು ಒಳಗೊಂಡು ನನ್ನ ಸುತ್ತಲೂ ಇರುವ ಬಂಧುಗಳನ್ನು ಮನಸಿನಲ್ಲಿಟ್ಟುಕೊಂಡೇ ಬರೆದುದು. ಮನುಷ್ಯ ಮನುಷ್ಯನಿಗಾಗಿಯೇ ಬರೆಯುತ್ತಾನೆ, ಮನುಷ್ಯನನ್ನು ಮುಟ್ಟಲೆಂದೇ ಬರೆಯುತ್ತಾನೆ. ಅದು ಮಾತುಕತೆಯಲ್ಲೇ ಮುಗಿಯಬಹುದಾಗಿದ್ದ ಸಂಗತಿಯಾಗಿದ್ದರೆ ಕಥೆ, ಕವಿತೆ ಹುಟ್ಟುತ್ತಿರಲಿಲ್ಲ. ಈ ಕೃತಿಗಳಲ್ಲಿ ಭಾವನೆಯ, ಚಿಂತನೆಯ, ಆಹ್ಲಾದದ ಅನೇಕ ಅನುಭವಗಳನ್ನು ಮುಟ್ಟಿಸುವ ಕಾತರವೇ ತುಂಬಿದೆ. ಸಾಹಿತ್ಯ ಒಂದು ವಿಶಿಷ್ಟ ಬಗೆಯ ಅನುಭವ. ಒಳ್ಳೆಯ ಸಂಗೀತ ಕೇಳಿದಾಗ, ಹಕ್ಕಿ ಹಾಡು ಆಲಿಸಿದಾಗ, ಯಕ್ಷಗಾನ ನೋಡಿದಾಗ, ಸಮುದ್ರದ ಮೊರೆತ ಕೇಳಿದಾಗ, ದಟ್ಟ ಅರಣ್ಯದ ಏರು ಹಾದಿಯಲ್ಲಿ ಉಸಿರು ಬಿಡುತ್ತಾ ನಡೆವ ಹೊತ್ತಲ್ಲಿ ಥಟ್ಟನೆ ದೂರದಿಂದೊಂದು ನದಿಯ ಜುಳುಜುಳು ನಾದ ಕೇಳಿಸಿದಾಗ – ಸಿಗುವಂಥ ಅನುಭವದ ಹೆಸರೇನು? ಅಂಥದೊಂದು ಬಿಡುಗಡೆಯನ್ನೇ ಸಾಹಿತ್ಯವೂ ನೀಡುತ್ತದೆ. ಆ ಕ್ಷಣಗಳ ಮಟ್ಟಿಗಾದರೂ ಒಂದಷ್ಟು ಎತ್ತರಕ್ಕೆ ಓದುವವ ಬೆಳೆದಿರುತ್ತಾನೆ, ಕ್ಷುಲ್ಲಕತೆಯಿಂದ ಹೊರ ಬಂದಿರುತ್ತಾನೆ, ರಸ ಸಮೃದ್ಧಿಯ ಬದುಕಿಗೆ ಪ್ರಚೋದನೆಗೊಳಗಾಗುತ್ತಾನೆ. ಸಾಹಿತ್ಯಕ್ಕೆ ಅಂಥ ಶಕ್ತಿ ಇದೆ. ಸಾಹಿತ್ಯದ ಈ ಶಕ್ತಿಯೇ ಅನೇಕ ಸಲ ಪ್ರಭುತ್ವಗಳನ್ನು ಅಲುಗಾಡಿಸಿದೆ ಹಾಗೂ ಈ ಶಕ್ತಿಯ ಕಾರಣಕ್ಕಾಗಿಯೇ ಅನೇಕ ಜನರು ಸಾಹಿತಿಗಳಿಗೆ ಬದ್ಧತೆ ಇರಬೇಕೆಂದು ಕಣ್ಣು ಕೆಂಪಗೆ ಮಾಡಿ ಹೇಳುತ್ತಾರೆ. ಆದರೆ ಗಂಗಾವತರಣ ಬರೆದರೆ ನೀರು ಬರುವುದಿಲ್ಲ ಎಂದು ಇವರಿಗೆ ಹೇಗೆ ಹೇಳುವುದು? ಅದಕ್ಕೆ ಬೇಕಾದುದು ಭಗೀರಥ ಪ್ರಯತ್ನವಷ್ಟೆ?"

"ಸಾಹಿತ್ಯದ ಪ್ರಯೋಜನವೇನು ಎಂಬ ಪ್ರಶ್ನೆಯನ್ನು ನಮ್ಮ ನವೋದಯದ ಲೇಖಕರೂ ಕೇಳಿಕೊಂಡಿದ್ದರು. ಅದಕ್ಕೂ ಹಿಂದೆ ಕಾವ್ಯ ಮೀಮಾಂಸಕರೂ 'ಕಾವ್ಯ ಪ್ರಯೋಜನ'ದ ಚರ್ಚೆ ಮಾಡಿದ್ದಾರೆ. ಕಾವ್ಯದಿಂದ ಯಶಸ್ಸು, ಅರ್ಥ, ವ್ಯವಹಾರ ಜ್ಞಾನ ಮುಂತಾದ ಪ್ರಯೋಜನಗಳನ್ನು ಹೇಳಿ ಅದರಿಂದ 'ಶಿವೇತರ ಕ್ಷತಿ' ಅಂದರೆ ಅಮಂಗಳಕರವಾದುದರ

ನಾಶ ಆಗುವುದೆಂದೂ ಹೇಳಿದ್ದಾರೆ. ಕಾವ್ಯದಿಂದ ಸಿಗುವುದು, ಸಿಗಬೇಕಾದುದು 'ಆನಂದ' ಎಂಬುದು ಅಲ್ಲಿಯ ಅಂತಿಮ ತೀರ್ಮಾನ. ಆದರೆ ಆನಂದದ ಕುರಿತು ವಿಶ್ಲೇಷಣೆ ಮಾಡುತ್ತಾ ಹೋದ ಹಾಗೆ ವಿಷಯ ಸಂಕೀರ್ಣವಾಗುತ್ತದೆ. ಆನಂದದ ಸ್ವರೂಪ ಲೋಕವನ್ನು ತೊರೆಯದೇ ಲೋಕೋತ್ತರವಾಗುವುದು! ಕಾವ್ಯದ ಮೇಲೆ ಸಮಾಜ ತರುವ ಹಕ್ಕೊತ್ತಾಯದ ಕುರಿತು ಪುತಿನರಿಗೆ ಅಸಮಾಧಾನವಿತ್ತು. ಇದು ಸಾಹಿತ್ಯಕಲೆ ಬಳಸುತ್ತಿರುವ 'ಭಾಷೆ'ಯಿಂದಾಗಿ ಹುಟ್ಟುವ ಒಂದು ತೊಡಕು ಎಂದು ಅವರು ಒಂದೆಡೆ ಬರೆಯುತ್ತಾರೆ. "ಸಂಗೀತದಲ್ಲಿ ಸಾ ಪಾ ಎಂದು ಸ್ವರಗಳನ್ನೆತ್ತಿದೊಡನೆಯೇ ಇದೊಂದು ಬೇರೆ ಲೋಕದ ಬೇರೆ ವ್ಯವಹಾರದ ಪರಿಭಾಷೆ ಎಂದು ನಮಗೆ ಥಟ್ಟನೆ ಎನಿಸುತ್ತದೆ. ಕವಿತೆಯಲ್ಲಿ ಹಾಗಲ್ಲ. ಮನುಷ್ಯನ ಸಕಲ ಲೌಕಿಕ ವ್ಯವಹಾರಗಳಿಗೂ ಒದಗಿಬರುವ ಮಾತೇ ಕವಿಯ ಅಲೌಕಿಕ ವ್ಯವಹಾರಗಳಿಗೂ ಒದಗಿ ಬರಬೇಕಾಗಿದೆ" (ಪುತಿನರ " ಕಾವ್ಯದ ಚರಿಗೆ" – ಲೇಖನ, 'ಕಾವ್ಯ ಕುತೂಹಲ'). ತುಂಬ ಕುತೂಹಲದ ಸಂಗತಿ ಎಂದರೆ ಡಿವಿಜಿಯವರು "ಸಾಹಿತ್ಯವನ್ನು ಪಂಡಿತ ಗೋಷ್ಠಿಯಿಂದ ಪೇಟೆಯ ಚೌಕಕ್ಕೆ ತರಬೇಕಾದದ್ದು ನಮ್ಮ ಈಗಿನ ಕರ್ತವ್ಯವಾಗಿದೆ" ಎಂದು ಬರೆದುದು. (ಡಿವಿಜಿ, 'ನವ್ಯತೆಯೇ ಜೀವನ'– ಸಾಹಿತ್ಯ ಶಕ್ತಿ). "ಜನಜೀವನದ ನದಿ ಹರಿದ ಮೇಲೆ ಸಿದ್ಧವಾಗುವ ನದೀಪಾತ್ರಮಾತ್ರದಂತಲ್ಲ ಸಾಹಿತ್ಯ, ನದಿಯ ನೀರನ್ನೂ ಸೃಜಿಸಿ ಅದು ಹರಿಯುವ ದಿಕ್ಕನ್ನೂ ಹರಿಯಬೇಕಾದ ದಾರಿಯನ್ನೂ ನಿರ್ಣಯಿಸುವ ಚೇತನಶಕ್ತಿಯೂ ಹೌದು" ಎನ್ನುತ್ತಾರೆ ಕುವೆಂಪು. ಅನಂತಮೂರ್ತಿಯವರು ಕನ್ನಡ ಚೈತನ್ಯದ ಮೂರು ಹಸಿವುಗಳ ಕುರಿತು ಬರೆದಿರುವುದನ್ನೂ ನೆನೆಯಬಹುದು. (ಈಗಾಗಲೇ ಹೇಳಿದೆ)."

"ಸಾಹಿತ್ಯದಿಂದ ಎಲ್ಲರಿಗೂ ಪ್ರಯೋಜನವಿದೆ. ಆದರೆ ಪ್ರಯೋಜನವಾಗಲೆಂದೇ ಬರೆಯ ಹೊರಟರೆ ಸಮಸ್ಯೆಗಳು ಹುಟ್ಟುತ್ತವೆ! ತೃಪ್ತಿ, ಆನಂದ, ದುಃಖದ ಆಳ, ಹಸಿವಿನ ಕಿಚ್ಚು ಇವನ್ನೆಲ್ಲ ಹೇಗೆ ಅಳೆಯಲಾಗುವುದಿಲ್ಲವೋ ಹಾಗೆ ಸಾಹಿತ್ಯದ ಪ್ರಯೋಜನವನ್ನೂ ಅಳತೆ ಮಾಡಿ ಹೇಳಲಾಗುವುದಿಲ್ಲ. ಹಾಗೆ ಅಮೂರ್ತವಾಗುತ್ತಲೂ, ಕಾಲದೇಶಗಳ ವಿವರಗಳಿಗೆ ಬದ್ಧವಾಗುತ್ತಲೂ, ಮೀರುತ್ತಲೂ ಸಾಹಿತ್ಯ ತನ್ನ ಶಕ್ತಿ ವೃದ್ಧಿಸಿಕೊಳ್ಳುತ್ತಾ ಸಾಗುತ್ತದೆ."

* * *

ಮುಂದೇನು?

ಭವಿಷ್ಯದ ಕಾವ್ಯವು ಕಾವ್ಯದ ಭವಿಷ್ಯವನ್ನು ಅವಲಂಬಿಸಿದೆ. ಸಾಹಿತ್ಯ ವಿಪತ್ತಿನಲ್ಲಿದೆ ಎಂದು ಹೇಳುವುದು ವಾಡಿಕೆಯ ಮಾತಾಗಿದೆ. ಆದರೆ ಅದು ವಾಸ್ತವವೂ ಆಗಿದೆ! ಅಮಾನುಷವಾಗಿ ಬೆಳೆಯುತ್ತಿರುವ ರಾಜಕೀಯ, ಕಲ್ಪನೆಗೆ ನಿಲುಕದಷ್ಟು ವೇಗವಾಗಿ ಪಲ್ಲಟಗೊಳ್ಳುತ್ತಿರುವ ಸಾಮಾಜಿಕ ಜೀವನ, ಕುಟುಂಬ ವ್ಯವಸ್ಥೆ ಇವೆಲ್ಲ ಸಾವಿರ ಪ್ರಶ್ನೆಗಳನ್ನು ಹುಟ್ಟುಹಾಕಿವೆ. ಬರಿದಾದ ಗಣಿಗಳು, ಬೋಳುಬೆಟ್ಟಗಳು, ಹೊಟ್ಟೆಬಾಕನಂತೆ ಸಾಮಾನ್ಯ, ಮಧ್ಯಮ ವರ್ಗದ ಜನರನ್ನು ಹೊಟ್ಟೆಯೊಳಗೆ ತುಂಬಿಕೊಳ್ಳುತ್ತಿರುವ ಬೃಹನ್ನ(ಳೆ)ಗರಗಳು, ನಗರಗಳ ಮೂಲೆಗಳಲ್ಲಿ ಸೃಷ್ಟಿಯಾಗುತ್ತಿರುವ ಕೊಳೆಗೇರಿಗಳು, ಬತ್ತಿದ ಕೆರೆಗಳು...... ಪಂಪ, ರನ್ನರಿಗಿಂತ ನಾವು ಹೆಚ್ಚು ಕಷ್ಟದ ಕಾಲದಲ್ಲಿದ್ದೇವೆ. ಇದು ನಮ್ಮನ್ನು ಬೇಯಿಸುವ ನೈತಿಕ ಸಂಕಟಗಳ ಕಾಲ.

ಇನ್ನು ಹತ್ತು ವರ್ಷಗಳಲ್ಲಿ ಇವೆಲ್ಲ ಇನ್ನಷ್ಟು ಸ್ಪಷ್ಟವಾಗಲಿವೆ, ರೂಕ್ಷವೂ ಆಗಲಿವೆ. ಸಮಾಜವನ್ನು ಸಲಹುತ್ತಿದ್ದ ಸೂತ್ರಗಳೆಲ್ಲ ಬದಲಾಗುತ್ತಿವೆ. ನಮ್ಮ ಕರಣಗಳನ್ನು ಭ್ರಷ್ಟಗೊಳಿಸಿರುವ ಉದಾರೀಕರಣ, ಗೋಳೀಕರಣ, ಅಮೆರಿಕೀಕರಣಗಳ ಪ್ರಭಾವವನ್ನು ನಾವಿನ್ನೂ ಸರಿಯಾಗಿ ಅರಿತುಕೊಂಡಿಲ್ಲ. ಹಳ್ಳಿಯಲ್ಲಿ ಸ್ವಯಂಪೂರ್ಣವಾಗಿ ಕಾಣುತ್ತಿದ್ದ ಸಾಮಾಜಿಕ ಘಟಕಗಳು ನಗರಗಳಲ್ಲಿ ಲಕ್ಷಾಂತರ ಒಡೆದ ಚೂರುಗಳಾಗಿವೆ. ಸಹಸ್ರಾರು ವರ್ಷಗಳಿಂದ ಪೂಜೆಗೊಳ್ಳುತ್ತಿದ್ದ ಹಳ್ಳಿಯ ದೇವರು ಈಗ ಸರಳುಗಳ ಹಿಂದೆ ಮೌನವಾಗಿ ಕುಳಿತಿದ್ದಾನೆ. ಕೆಂಪು ಮಡಿಯುಟ್ಟು ಗುನಗರು ಮಡಿಯಲ್ಲಿ ಕೊಡ ಪಾನಗಳಿಂದ ನೀರೆತ್ತುತ್ತಿದ್ದ ಬಾವಿಗಳಲ್ಲೀಗ ಪಾಚಿ ಬೆಳೆದಿದೆ. 'ವಿಭ್ರಾಂತ ಶಾಂತ' ಪರಿಸರದಲ್ಲಿ ಒಂಟಿ ಹಕ್ಕಿ ರೆಕ್ಕೆ ಬಡಿದ ಸದ್ದು. ಎಷ್ಟೋ ಮನೆತನಗಳ ದೇವರು ತನ್ನ ಭಕ್ತರೊಡನೆ ಅವನೂ ನಗರಕ್ಕೆ ಪಯಣ ಬೆಳೆಸಿಬಿಟ್ಟಿದ್ದಾನೆ. ಎಂಟು ಸ್ಕ್ವೇರಿನ ಮನೆಯಲ್ಲಿ ಅವನಿಗೂ ಒಂದು ಪುಟ್ಟ ಜಾಗ ಕಲ್ಪಿಸಲಾಗಿದೆ. ದೇವ, ಮಾನವರ ಇಂಥ ವಲಸೆಗಳು ಮುಂದಿನ ವರ್ಷಗಳಲ್ಲಿ ಮತ್ತಷ್ಟು ನಡೆಯಲಿವೆ. ಕನ್ನಡವಿಲ್ಲದ ಕನ್ನಡನಾಡಿನಲ್ಲಿ, ನೆನಪುಗಳು ಭೂಗತವಾದ ಹೊಸ ಬಡಾವಣೆಗಳಲ್ಲಿ, ನಂಬಿಕಗಳನ್ನು ಕಳೆದುಕೊಂಡ ಮಧ್ಯಮ ವರ್ಗದ ಸಮಾಜಗಳಲ್ಲಿ ಬದುಕುತ್ತಿರುವುದೇ ನಮ್ಮ ವಿಳಾಸ ಮತ್ತು ವಿಧಿವಿಲಾಸ! ಸತ್ತ ಮೇಲೆ ಘೋರನರಕಗಳಲ್ಲಿ ಶಿಕ್ಷೆಗೊಳಗಾಗಲಿರುವ ಮಹಾಪಾಪಿ ರಾಜಕಾರಣಿಗಳ ಇಹಲೋಕದ ಭಂಡಾಟಗಳನ್ನು ಸಹಿಸಿಕೊಳ್ಳುತ್ತಿರುವ ರಣಹೇಡಿಗಳಾದ ನಾವು ಈ ಭೂಮಿಯಲ್ಲೇ ಅಂಥ ಶಿಕ್ಷೆಗೆ ಒಳಗಾಗಿದ್ದೇವೆ. ಮಕ್ಕಳನ್ನು ತಾಯ ಎದೆ ಹಾಲಿನಿಂದಲೇ (ಕನ್ನಡನುಡಿ) ದೂರ ಮಾಡಿ ಬೆಳೆಸುತ್ತಿರುವ ನಾವು ಇದಕ್ಕಾಗಿ ಪರಿತಪಿಸುವುದು ಘೋರ ಅಸಂಗತ ನಾಟಕವೇ ಸರಿ. ಇವನ್ನೆಲ್ಲ ಅರಿಯಲಾರದ, ಎದುರಿಸಲಾರದ ಕಾವ್ಯವು ತುಂಬ ಘನವಾದುದೇನನ್ನೂ ಸಾಧಿಸಲಾರದು.

ಆಗಲೆ ಹೇಳಿದಂತೆ ಕವಿಯ ಹತ್ಯಾರಗಳಾದ ಮನಸು, ಭಾಷೆ, ಬದುಕು ಎಲ್ಲವೂ ಚಲನಶೀಲ ಸಂಗತಿಗಳೇ. ಬರೆಯುವ ಕಾಲ, ಸಮಾಜದ ಸ್ವರೂಪ ಮತ್ತು ಕಾವ್ಯಕ್ಕೆ ಒಂದು ಸಂಬಂಧವಿದೆ. ಕಾವ್ಯಕ್ಕೆ ಸರ್ವಕಾಲಿಕ ಕಾಳಜಿಗಳಿರುವಂತೆಯೇ ಅದರಲ್ಲಿ ತತ್ಕಾಲೀನವಾದ ಸಂಗತಿಗಳೂ ಇರುತ್ತವೆ. ಹಾಗೆಯೇ

ಅದು ಬರೇ ವಾಸ್ತವವನ್ನೇ ನೆಚ್ಚಿದ ಸಂಗತಿಯೂ ಅಲ್ಲ! ಅಂತರ್ಮುಖತೆ ಮತ್ತು ಹೊರಜಗತ್ತಿನ ಎರಡು ಅಂಚುಗಳ ನಡುವೆ ಕವಿಯ ಜೀಕುವಿಕೆ ನಡೆದೇ ಇರುತ್ತದೆ.

ಭಯೋತ್ಪಾದನೆ, ಜನಾಂಗದ್ವೇಷ, ಕೊಳ್ಳುಬಾಕತನ ಮುಂತಾದ ಹೊಸಬಗೆಯ ರೋಗಾಣುಗಳಿಂದ ಕೂಡಿದ ಕಾಯಿಲೆಗಳು ಸಮಾಜವನ್ನು ವಿಕೃತಗೊಳಿಸಹೊರಟಿವೆ. ಇಂಥ ಸಂದರ್ಭದಲ್ಲಿ ನಮ್ಮ ಬಾಳಿನ, ಸಂಸ್ಕೃತಿಯ ಅತ್ಯುನ್ನತ ಮೌಲ್ಯಗಳನ್ನು ಹೊಸ ಕಾಲಕ್ಕೆ ಪ್ರಸ್ತುತಗೊಳಿಸುವ ಜವಾಬ್ದಾರಿಯನ್ನು ಕವಿಗಳು ಹೊರಬೇಕಾಗಿದೆ. ಇದು ಅಜ್ಜಿಯ ಚಿನ್ನದಿಂದ ಮೊಮ್ಮಗಳ ಮದುವೆಗೆ ಹೊಸ ಒಡವೆ ಮಾಡಿಸಿದಂತೆ! ಸಮಾಜದ ಸ್ವಾಸ್ಥ್ಯ ಕೆಟ್ಟ ಕಾಲಕ್ಕೆ ಅದರ ಅಂತರಂಗವನ್ನು ಆರೋಗ್ಯಪೂರ್ಣವಾಗಿರಿಸಿದ್ದ ಸಂಗತಿಗಳ ಅನುಸಂಧಾನ ನಡೆಯಬೇಕು. ಬರಲಿರುವುದು ನಿಜಕ್ಕೂ ಕವಿಗಳ ದೃಷ್ಟಿಯಿಂದ ಹೊಸ ಪಂಥಾಹ್ವಾನಗಳ ಕಾಲ. ಚರ ಸಂಗತಿಗಳಿಂದ ಚಿರಸಂಗತಿಗಳನ್ನು ಶೋಧಿಸ ಹೊರಡುವ ನವ ಅಧ್ಯಾತ್ಮದ ಹೊಸ ಪರ್ವ ಆರಂಭವಾಗುವ ದಶಕ ಅದಾಗಬಹುದೆಂದು ಊಹಿಸುತ್ತಿದ್ದೇನೆ.

ಹೊಸ ಕಾಲದ ಈ ಕವಿ ನಾನು ಊಹಿಸುವಂತೆ – ಕೋಮುವಾದಿಯಾಗಿರಲಾರ, ಆದರೆ ದೇವರನ್ನು ಬಯಸಿಯಾನು; ಅವನು ನಾಸ್ತಿಕನಾಗಿದ್ದರೂ ಏನಂತೆ, ದೇವರಿಲ್ಲದ "ಧರ್ಮ"ಕ್ಕೆ ಹಾತೊರೆದಾನು. ಹೊಸಕಾಲದ ಈ ಕವಿಗೆ ತನ್ನ ಸುತ್ತಲಿನ ಪರಿಸರದ, ಸಂಪ್ರದಾಯಗಳ, ಭಾಷೆಗಳ, ಆಚರಣೆಗಳ ಪಾವಿತ್ರ್ಯದ ಕುರಿತು ಕಂದಾಚಾರಿಯಾಗದ ಮಮತ್ವ ಇರುತ್ತದೆ. ವೈವಿಧ್ಯಮಯವಾದ ಬಾಳಿನ ಪಥಗಳ ಕುರಿತು ಅವನಲ್ಲಿ ವಿಸ್ಮಯಪೂರ್ವಕವಾದ ಗೌರವ, ವಿಕೃತಿಯಾಗದ ಆಧುನಿಕ ಮನೋಭಾವ, ತನ್ನೊಳಗಿನ ಸಂಸ್ಕೃತಿಯನ್ನು ಸದಾ ಹತ್ತಾರು ಬಗೆಯ ಅನುಸಂಧಾನಗಳಲ್ಲಿ ತೇಯುತ್ತಾ, ತಿಕ್ಕಾಡುತ್ತಾ ಬೆಳೆಯುವ ತುಡಿತ... ಇವೆಲ್ಲ ಇರುತ್ತವೆ. ಸ್ಥಳೀಯ ಬಹುತ್ವಗಳನ್ನು ಕಾಪಾಡಿಕೊಳ್ಳಲು ನಮ್ಮ ಸಮಾಜಕ್ಕೆ ಮೂಡಿಸಬೇಕಾದ ಹೊಸ ಎಚ್ಚರ, ವಾಣಿಜ್ಯ ಪ್ರಧಾನ ಸಂಸ್ಕೃತಿ ಒಡ್ಡುವ ಅಪಾಯಕಾರಿ ಪ್ರಭಾವಗಳ ಕುರಿತು ಸದಾಸರ್ವದಾ ಎಚ್ಚರಿಕೆ – ಇವೇ ಆತ ನಿರ್ವಹಿಸಬೇಕಾಗಿರುವ ಸವಾಲುಗಳಲ್ಲಿ ಪ್ರಮುಖವಾದವುಗಳು. ಹೊಸ ಕವಿಯ ನೈತಿಕತೆ ಮತ್ತು ಧೀಶಕ್ತಿ ಹಿಂದಿನ ತಲೆಮಾರುಗಳ ಭ್ರಷ್ಟ ಡಾಂಭಿಕತೆಯನ್ನು ಧಿಕ್ಕರಿಸುವುದೆಂಬ ಹಾರೈಕೆ ನನ್ನದು. ಇದೆಲ್ಲ ಸಾಧ್ಯವಾಗದೇ ಹೋದರೆ ಒಂದೋ – ಅಂಥ ಕವಿಗಳು ನಾಶವಾಗುತ್ತಾರೆ, ಇಲ್ಲಾ – ಕಾವ್ಯವೇ ನಾಶವಾಗುತ್ತದೆ. ಕನ್ನಡದ ಭಾಗ್ಯ ದೊಡ್ಡದಿದೆ. ಹಾಗೆಲ್ಲ ಆಗುವುದಿಲ್ಲ..

❑❑

# ಕರ್ನಾಟಕದ ನಿಷಧಿ ಶಾಸನಗಳು

– ಬಿ.ವ್ಹಿ. ಶಿರೂರ

ಸನ್ಯಸನ, ಸಲ್ಲೇಖನ, ಸಮಾಧಿಮರಣ, ನಿಷಧಿಗಳು ಜೈನಶ್ರಾವಕರ ಮರಣಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದಗಳು. ಮೊದಲ ಎರಡು ಮರಣಕ್ಕೆ ಸಂಬಂಧಿಸಿ ಆಚರಿಸುವ ವ್ರತಗಳಾದರೆ, ಮೂರನೆಯದು ಮರಣದ ರೀತಿಯನ್ನು ಹೇಳುತ್ತದೆ. ನಿಷಧಿಯು ಮರಣವಪ್ಪಿದ ವ್ಯಕ್ತಿಗಳಿಗಾಗಿ ನಿಲ್ಲಿಸಿದ ಸ್ಮಾರಕ.

'ಗೊಮ್ಮಟಸಾರ'ದಲ್ಲಿ ಮರಣವನ್ನು ಚ್ಯುತ, ಚ್ಯಾವಿತ ತ್ಯಕ್ತ ಎಂದು ವಿಭಾಗಿಸಲಾಗಿದೆ. ಆಯುಷ್ಯ ರೀತಿ ಅವಸಾನ ಹೊಂದುವುದು ಚ್ಯುತ ಅಥವಾ ಸಹಜಮರಣ. ರಾಗ–ದ್ವೇಷ–ಕ್ರೋಧಾದಿ ಕಷಾಯಗಳಿಂದ ಯುಕ್ತನಾಗಿ ಇಚ್ಛಿತ ಕಾರ್ಯಗಳು ಸಿದ್ಧಿಯಾಗದೆ, ಜೀವನದಲ್ಲಿ ಅಪಯಶ, ನಿರಾಸೆ ಹೊಂದಿ, ದುಃಖದ ಆವೇಶದಲ್ಲಿ ಆತ್ಮನನ್ನು ಘಾತಿಸಿಕೊಳ್ಳುವುದು ಆತ್ಮಹತ್ಯೆ. ಇದನ್ನು ಚ್ಯಾವಿತ ಅಥವಾ ಮಿಥ್ಯಾದೃಷ್ಟಿಯ ಮರಣ ಎಂದು ಕರೆಯುವರು. ಇದಕ್ಕೆ ವ್ಯತಿರಿಕ್ತವಾಗಿ, ಕಷಾಯಗಳನ್ನು ಇಲ್ಲವಾಗಿಸಿ, ಪಂಚಪರಮೇಷ್ಠಿಗಳನ್ನು ಸ್ಮರಿಸುತ್ತ, ಧರ್ಮಧ್ಯಾನದಿಂದ, ಸಲ್ಲೇಖನ ವ್ರತದಿಂದ ದೇಹತ್ಯಾಗ ಮಾಡುವುದು ತ್ಯಕ್ತ ಅಥವಾ ಸಮಾಧಿಮರಣ. ಇದರ ಮೂಲ ಉದ್ದೇಶ ಚಿತ್ತನಿರೋಧದಿಂದ ಆತ್ಮಜ್ಞಾನಿಯಾಗುವುದು. ಉತ್ತರ ಪರಿಣಾಮಗಳಲ್ಲಿ ಮನಸ್ಸನ್ನು ದೃಢಪಡಿಸುವುದು ಮತ್ತು ಪಂಚಪರಮೇಷ್ಠಿಗಳ ಸ್ಮರಣೆ ಮಾಡುವುದು. ಸಮಾಧಿಮರಣೋನ್ಮುಖನಾದ ಶ್ರಾವಕನು ಕ್ರಮದಿಂದ ಆಹಾರವನ್ನು ಬಿಡುತ್ತ, ಹಾಲು, ಮಜ್ಜಿಗೆ ಮೊದಲಾದ ಸ್ನಿಗ್ಧ, ಜಿಡ್ಡುಳ್ಳ ಪಾನದ್ರವ್ಯಗಳನ್ನು ಸೇವಿಸಬೇಕು. ಕ್ರಮದಿಂದ ಅವನ್ನು ತ್ಯಜಿಸಿ, ಗಂಜಿ, ಬಿಸಿನೀರು ಮೊದಲಾದ ಉಷ್ಣವಾದ ಪಾನದ್ರವ್ಯಗಳನ್ನು ಉಪಯೋಗಿಸಬೇಕು. ಅದನ್ನೂ ಕ್ರಮವಾಗಿ ಬಿಡುತ್ತ ಸಮಸ್ತ ಆಹಾರ ತ್ಯಜಿಸಿ ಉಪವಾಸ ಮಾಡಬೇಕು. ಆಮೇಲೆ ಪಂಚ ನಮಸ್ಕಾರ ಮಂತ್ರವನ್ನು ಮನಸ್ಸಲ್ಲಿ ಸ್ಮರಿಸುತ್ತ ದೇಹತ್ಯಾಗವನ್ನು ಮಾಡಬೇಕು.

'ಸಮಧಿಮರಣ' ಶಬ್ದದ ವ್ಯುತ್ಪತ್ತಿ ಕುರಿತು – ಸಮ್+ಆದಿ+ಮರಣ – ಎಂದರೆ ಸಹಜವಾಗಿ ಮರಣ ಬರುವದಕ್ಕಿಂತ ಪೂರ್ವದಲ್ಲಿ ಸ್ವಇಚ್ಛೆಯಿಂದ ಮರಣವನ್ನು ಸ್ವೀಕರಿಸುವುದು ಎಂದು ಕೆಲವರು ಹೇಳಿದರೆ, ಇನ್ನು ಕೆಲವರು ಸಮ್–ಸಮೀಚಿನ ರೂಪೇನ ಅಧಿಸತಿ–ಎಂದರೆ ಆತ್ಮನ ನಿಕಟದಲ್ಲಿರುವುದು ಎಂದು ವಿವರಿಸುವುದುಂಟು. ಇದನ್ನು ಜೈನರು ದುಃಖದಾಯಕವೆಂದು ತಿಳಿಯದೆ ಮಹೋತ್ಸವವೆಂದು ತಿಳಿಯುವರು. ಅದಕ್ಕಾಗಿಯೇ ಪಂಪ ಭರತನ ಮೂಲಕ ಆದಿತೀರ್ಥಂಕರರನ್ನು 'ಕ್ಷಣಿಗಳಾದ ಅಮರೇಂದ್ರೋನ್ನತಿ, ಖೇಚರೇಂದ್ರವಿಭವಗಳು ತನಗೆ ಬೇಕಿಲ್ಲವೆಂದೂ, ಸಮಾಧಿಮರಣ, ಕರ್ಮಕ್ಷಯಗಳು ಲಭಿಸಲೆಂದೂ' ಪ್ರಾರ್ಥಿಸಿದ್ದಾನೆ.

ಇದರಲ್ಲಿ ಸಂಪ್ರಜ್ಞಾತ ಸಮಾಧಿ (ಸಮಸ್ತ ಚಿತ್ತನಿರೋಧ ಇಲ್ಲದಿರುವುದು, ಅಸಂಪ್ರಜ್ಞಾತ ಸಮಾಧಿ (ಸಮಸ್ತ ಚಿತ್ತನಿರೋಧ ಹೊಂದಿರುವುದು) ಎಂದು ಎರಡು ಪ್ರಕಾರ. ಇವುಗಳನ್ನು ಅವಲಂಬಿಸಿ ಭಗವತಿ ಆರಾಧನೆಯಲ್ಲಿ ಶಿವಜ್ಞನು ಬಾಲಮರಣ, ಪಂಡಿತಮರಣ, ಅವಧಿಮರಣ, ಇಂಗಿಣಿ ಮರಣ ಮುಂತಾದ 16 ವಿಧದ ಮರಣಗಳನ್ನು ಹೇಳಿದ್ದಾನೆ. ಇವುಗಳಲ್ಲಿ ಭಕ್ತಪ್ರತ್ಯಾಖ್ಯಾನ, ಇಂಗಿಣಿ ಮತ್ತು ಪ್ರಾಯೋಪಗಮನಗಳು ಸಮಾಧಿಮರಣಕ್ಕೆ ತಕ್ಕವುಗಳು ಎನ್ನಲಾಗಿದೆ.

ಈ ಮರಣವನ್ನು ಹೊಂದಲು ಶಾಸನಗಳಲ್ಲಿ ಈ ಕಾರಣಗಳು ದೊರೆಯುತ್ತವೆ– ತನ್ನವಸಾನಕಾಲವನ ಱಿದು (SII. Vi. 216, EC. II,75 ಮೊ.) ನಾನೀ ಧರಣಿಯೊಳಿರವಾನೆನ್ದು (EC. II.98). ಪಾಪಕ್ಕಂಜುವವೆಲ್ (EC. III Ng. 387) ಮುಕ್ತಿಯಂ ಪಡೆವೆನೆನ್ದು (EC. I Ni 100), ಈ ಪ್ರಪಂಚವನ್ನು ಮಂಜಿನ ಹನಿ ಎಂದು (EC.II. 98) ಜರೆಯಂ ಪೊಲಮೆಯೆಂದು (EC. VIII. Sr. 107) ಬೇನೆ ಎತ್ತಿ ಮೋನಮಜ್ಜಮಿಸುವಲ್ಲಿ (EC. II. 38), ಜ್ವರದಿಂದ ಬಳಲಾರದೇ (EC. II. 108), ಆಯುಷ್ಯ ಸ್ವಲ್ಪವಿದೆಯೆಂದು (EC. II. 108), ಹಾವು ಕಡಿಯಲು (EC.II.2A), ಮಗಳು (ಶಾಂತಲೆ) ಸಾಯಲು ಇರವಾಗೆಗೆಂದು (EC. II. 176) ತನ್ನ ಗುರುವಿನ ನಿಷಧಿ ಅಗಲಬಾರದೆಂದು (EC Iv. Ki. 92), ಪೂಜೆಗೆ ಸಂಪಿಗೆ ಮರನ ಬಲಿ ಸಮರ್ಪಿಸಿದ ಫಲದಿಂದ (EC. II. 353), ಗಂಡ (ಹೇಡಿಯಾಲದ ರಾಮನಾಯಕ) ಲಿಂಗೈಕ್ಯನಾದಾಗ

ವಿಶ್ರಾಂತ ಪ್ರಾಧ್ಯಾಪಕರು, ನಂ.೧೩, ಮಂಜುನಾಥನಗರ, ಹುಬ್ಬಳ್ಳಿ

ಆತನ ಹೆಂಡತಿ (ಮಾಳದೇವಿ) ಸಮಾಧಿಮರಣ ಹೊಂದಿದುದು (ಧಾ.ಜಿ.ಶಾ.ಸೂ). ಗಂಡ (ಸತ್ಯವೆಗ್ಗಡೆ ಎಂಬುವನು) ಯುದ್ಧದಲ್ಲಿ ಮಡಿಯಲು ಅವನ ಹೆಂಡಂದಿರು ಸನ್ಯಸನವಿಧಿಯಿಂದ ಪ್ರಾಣಬಿಟ್ಟುದು (ತೋರಕುಮಾರ) ತಾಯ ವಚನಮನತಿಕ್ರಮಿಸಲಾರದೆ ಆಚಾಮ್ಲವರ್ಧನೆಂಬ ನೋಂಪಿಯಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದ ಮಡಿದುದು (ವಡ್ಡಾರಾಧಾನೆ. ಪು 66) (ಕೊಲ್ಲಾಪುರದ ನಿಂಬಸಾಮಂತನು) ವೀರಮರಣ ವ್ರತಕ್ಕೆ ಪರ್ಯಾಯವಾಗಿ ಸಲ್ಲೇಖನ ಮರಣವ್ರತ ಹಿಡಿದು ರಣಭೂಮಿ ಪ್ರವೇಶಿಸಿ ಹೋರಾಡಿದುದು.

ಅವರು ಆಚರಿಸಿದ ಆಚರಣೆಗಳ ವಿವರವೂ ಶಾಸನಗಳಲ್ಲಿದೆ. ಚರಿತಶ್ರೀ ಎಂಬುವನು 'ಪಾಪವೆಂಬ ಮರವನ್ನು ಕತ್ತರಿಸಿ, ಅಜ್ಞಾನವೆಂಬ ಪರ್ವತವನ್ನು ಕಡಿದು ಹಾಕಿ, ಸುಳ್ಳುವಾದಗಳನ್ನು ಹೊಡೆದೋಡಿಸಿ ಪಂಚೇಂದ್ರಿಯಂಗಳೆಂಬ ಐದು ಆನೆಗಳನ್ನು ನಿಗ್ರಹಿಸಿ', ಸೌಖ್ಯಸ್ಥನಾದನು. 'ತನುವಂ ಜಿನಪತಿನುತಿಯಿಂ, ಧನಮಂ ಮುನಿಜನದ ತೃಪ್ತಿಯಿಂ ಪೊಲಿತಾಂಬಿಕೆ ಸಫಳ ಮಿಂದೆನಗೆಂಬೀ ನಂಬುಗೆಯೊಲನಮಂ ನಿಲಿಸಿ ಸಲ್ಲೇಖನಸಂಪದಿಂದ ಸುರಪದಲೀಲೆಯನ್ನು ಸೂರೆಗೊಂಡಳು' (EC. II. 136) ಪೆರ್ಗೊರವ ಕತ್ತಿಯ ಅಲಗಿನ ಮೇಲೆ, ಅಗ್ನಿಯ ಮೇಲೆ, ಸರ್ಪದ ಹಲ್ಲುಗಳ ಮಧ್ಯೆ ಬದುಕುವಂತೆ ಉಗ್ರವಾದ ತಪಸ್ಸನ್ನಾಚರಿಸಿ 108 ವರ್ಷಕಾಲ ಜೀವಿಸಿದ್ದು ಸಮಾಧಿಮರಣವನ್ನಪೇಕ್ಷಿಸಿ ಸಿದ್ಧಿಯನ್ನು ಪಡೆದ (EC. II. 25) 'ಮಳಧಾರಿದೇವ' ಮರೆದುಮದೊಮ್ಮೆ ಲೌಕಿಕದ ವಾರ್ತೆಯನಾಡದ, ಕೆತ್ತ ಬಾಗಿಲಂ ತೆರೆಯದ, ಭಾನುವಸ್ತಮಿಮಾಗಿಕೆ ಪೋಗದ, ಮೈಯ್ಯನೊಮ್ಮೆಯಂ ತುರಿಸದ, ಕುಕ್ಕುಟಾಸನಕೆ ಸೋಲದ, ಗಂಡವಿಮುಕ್ತವೃತ್ತಯಂ ಮರೆಯದ ಘೋರ ದುಷ್ಕರ ತಪಶ್ಚರಿತಂ' ಎಂದು ಬಣ್ಣಿಸಲಾಗಿದೆ.

ಸಮಾಧಿಮರಣವನ್ನು ಸಾಮಾನ್ಯವಾಗಿ ಗುರುವಿನ ಸನ್ನಿಧಿಯಲ್ಲಿ ಹೊಂದುತ್ತಿದ್ದರು. ಗುರುವಾದವನು ವ್ರತಧಾರಿಗೆ ವ್ರತವಿಧಾನದಲ್ಲಿ ಮಾರ್ಗದರ್ಶನ ನೀಡುವ, ಧರ್ಮಸಂಕೀರ್ತನ ನಡೆಸುವ ಕಾರ್ಯ ಕೈಕೊಳ್ಳುತ್ತಾನೆ. ಅಲ್ಲದೆ ವ್ರತಧಾರಿಯ ಧೈರ್ಯ ಕುಸಿಯದಂತೆ ಆ ಮೊದಲು ವ್ರತ ಹಿಡಿದು ಸರ್ವಸಂಕಟಗಳನ್ನು ಸಹಿಸಿದವರ ಕಥೆಗಳನ್ನು ಹೇಳುವುದುಂಟು. ವಡ್ಡಾರಾಧನೆಯ ಕಥೆಗಳೆಲ್ಲ ಇಂಥವು. ಹೀಗೆ ಗುರುವಿನ ಸನ್ನಿಧಿಯಲ್ಲಿ ಸಮಾಧಿ ಹೊಂದಿದವರನ್ನು ಕೃತಿಗಳು, ಶಾಸನಗಳು ಹೀಗೆ ಪ್ರಸ್ತಾವಿಸುತ್ತವೆ: ತನ್ಮುನಿಯ ಪಾದದೊಳ್ (ಚಾ.ರಾ.ಪು.ಪು.25) ಗುರುವಿನ ಪಕ್ಕದೆ (ಚಾ.ರಾ.ಪು. ಪು. 19) ಚಂದ್ರತೀರ್ಥ ಸೇನಾಚಾರ್ಯರ ಸನ್ನಿಧಿಯಲ್ಲಿ (ಆ.ಪು.ಪು. 150) 2ನೆಯ ಮಾರಸಿಂಹ ಅಜಿತಸೇನಚಾರ್ಯರ ಸನ್ನಿಧಿಯಲ್ಲಿ (EC. II 64), ಪಿಟ್ಟನು ಗುರುಚರಣ ಮೂಲದೊಳ್ (EC.II. 165), ಜಿನೇಂದ್ರಚಂದ್ರ ಸನ್ನಿಧಿಯೊಳ್ ಪದಪಂಚಂಗಳಂ ಮಱೆಯದೆ ಭೋರೆನುತುಚ್ಚರಿಸುತ (EC. XII.93), ಶಾಂತಲೆಯ ತಾಯಿ ಮಾಚಿಕಬ್ಬೆ ಗುರುಗಳ ಸನ್ನಿಧಿಯಲ್ಲಿ ಮಾತ್ರವಲ್ಲ ಸಮಸ್ತ ಭವ್ಯಜನಂಗಳ ಸನ್ನಿಧಿಯಲ್ಲಿ (EC.II.176). ಇನ್ನು ಹಲವರು ತೀರ್ಥಂಕರರ ಯಕ್ಷಿಯರ ಸನ್ನಿಧಿಯಲ್ಲಿ ಸಮಾಧಿ ಹೊಂದಿದ ಉದಾಹರಣೆಗಳೂ ಇವೆ. ಜೈನಪಾದಾಬ್ಜದೊಳ್ ಸದ್ಭಾವಂ ಕಯ್ಗಣೆ (EC. VIII. Ar. 137), ವಿಭು ಬಲದೇವದೇವಗುರು ಸನ್ನಿಧಾನದಲ್ಲಿ (EC. II. 174), ಮಲ್ಲಿಷೇಣ ತೀರ್ಥಂಕರ ವಿಗ್ರಹದ ಸನ್ನಿಧಿಯಲ್ಲಿ (EC.II.88) ಯಶೋಧರ ಕೇವಲಿಪದ್ಮಾವತಿಯ ಸನ್ನಿಧಿಯಲ್ಲಿ (ವಡ್ಡಾರಾಧನೆ ಪು. 49)

ಶ್ರವಣಬೆಳ್ಗೊಳದ ಒಟ್ಟು 573 ಶಾಸನಗಳಲ್ಲಿ ಸುಮಾರು 108 ಶಾಸನಗಳು ಮರಣ ವಿಷಯಗಳನ್ನೊಳಗೊಂಡಿವೆ. ಅವುಗಳಲ್ಲಿ ಸುಮಾರು 22 ಶಾಸನಗಳು ಸ್ತ್ರೀಯರಿಗೆ, ಉಳಿದವು ಪುರುಷರಿಗೆ ಸಂಬಂಧಿಸಿದವು. ಅದರಲ್ಲಿ 60 ಶಾಸನಗಳು ಮುನಿಗಳ, ಗುರುಗಳ ಮರಣವನ್ನು, ಸುಮಾರು 10 ಶಾಸನಗಳು ಅರಸರ ಮಂತ್ರಿಗಳ ಮರಣವನ್ನು, ಸುಮಾರು 9 ಶಾಸನಗಳು ಸಾಮಾನ್ಯರ ಮರಣವನ್ನು ಅರುಹುತ್ತವೆ. ಸ್ತ್ರೀಯರಿಗೆ ಸಂಬಂಧಿಸಿದ ಶಾಸನಗಳಲ್ಲಿ ಸು. 13 ಶಾಸನಗಳು ಕನ್ತಿಯರ, ಅವ್ವೆಗಳ ಮರಣವನ್ನರುಹಿದರೆ, 8 ಶಾಸನಗಳು ಅರಮನೆಗೆ ಸಂಬಂಧಿಸಿದವು. ಇನ್ನುಳಿದ 5 ಶಾಸನಗಳು ಸಾಮಾನ್ಯ ಸ್ತ್ರೀಯರ ಮರಣವನ್ನು ಹೇಳುತ್ತವೆ. ಈ ಶಾಸನಗಳಲ್ಲಿ ಬಹಳಷ್ಟು ಅಂದರೆ ಸುಮಾರು 56 ಶಾಸನಗಳು ಕ್ರಿ.ಶ. 7ನೆಯ ಶತಮಾನಕ್ಕೆ ಸಂಬಂಧಿಸಿದವು. 8ನೆಯ ಶತಮಾನದಲ್ಲಿ 3, 9ನೆಯ ಶತಮಾನದಲ್ಲಿ 1, 10ನೆಯ ಶತಮಾನದಲ್ಲಿ 7, 11ನೆಯ ಶತಮನದಲ್ಲಿ 4, 12ನೆಯ ಶತಮಾನದಲ್ಲಿ 21, 13ನೆಯ ಶತಮಾನದಲ್ಲಿ 3, 14ನೆಯ ಶತಮಾನದಲ್ಲಿ 6, ಅನಂತರದ ಶತಮಾನಗಳಲ್ಲಿ 4 ಶಾಸನಗಳು ಈ ವಿಷಯ ನಿರೂಪಿಸುತ್ತವೆ. ಇದರಿಂದ ಕ್ರಿ.ಶ. 6-7ನೆಯ ಶತಮಾನದಲ್ಲಿ ಸಮಾಧಿಮರಣವನ್ನಪ್ಪುವ ಪದ್ಧತಿ ಅಧಿಕವಾಗಿದ್ದಿತು ಎಂಬುದು ಸ್ಪಷ್ಟವಾಗುತ್ತದೆ. ಈ ಮಾತು ಇಡೀ ಕರ್ನಾಟಕದ ಎಲ್ಲ ನಿಷಧಿ ಶಾಸನಗಳಿಗೂ ಅನ್ವಯಿಸುತ್ತದೆ.

ಹೀಗೆ ಸಮಾಧಿಮರಣ ಹೊಂದಬೇಕಾದರೆ ಸನ್ಯಸನ, ಸಲ್ಲೇಖನ, ಆರಾಧನ ವಿಧಿ ಮೊದಲಾದವುಗಳನ್ನು ಆಚರಿಸಬೇಕಿದ್ದಿತು. ಸನ್ಯಸನ ವಿಧಿಯಿಂ ಸಮಾಧಿವೊಡೆದು ಸ್ವರ್ಗಾಪವರ್ಗಪ್ರಾಪ್ತರಾದರು (EC.XII.chi.2 3.I.163), ಸನ್ಯಸಂಗೈದು ಸಮಾಧಿವೆರಸಿ ಮುಡುಪಿ ದೇವಲೋಕಕ್ಕೆ ಸಂದರು (EC.XI.128.1122), ಸನ್ಯಸನವನ್ನಾಚಾರಿಸಿ, ಸಲ್ಲೇಖವನ್ನನ್ನುಸರಿಸಿ, ಸಮಾಧಿಯಲ್ಲಿ ಅಂತ್ಯಸಾಧಿಸಿ ಕೊಂಡರು (EC.XI No.77.1129) ಎಂದು ಮುಂತಾಗಿ ಶಾಸನಗಳು ಹೇಳಿವೆ. ಇನ್ನು ಕೆಲವೆಡೆ ಸನ್ಯಸನ ಮರಣ ಎಂಬ ಪ್ರಸ್ತಾಪ ಮಾತ್ರ ಬಂದಿದೆ. ಇದರ ವ್ಯುತ್ಪತ್ತಿ ಕುರಿತು

ಸಮ್+ನ್ಯಸನ ಎಂದು ಹೇಳಿ, Renunciation of worldly concernns ಎಂಬರ್ಥ ಹೇಳಲಾಗಿದೆ. ಕಷಾಯಗಳನ್ನು, ಆಹಾರಾದಿಗಳನ್ನು ಕಡಿಮೆ ಮಾಡಿ, ಪಂಚಪರಮೇಷ್ಠಿಗಳ ಧ್ಯಾನದಲ್ಲಿ ತತ್ಪರನಾಗಿ ಪ್ರಾಣತ್ಯಾಗ ಮಾಡುವುದು ಸನ್ಯಸನ.

ಕೆಲವು ಶಾಸನಗಳಲಿ 'ಸನ್ಯಸನವಿಧಿ'ಯ ಆಚರಣೆಯ ವಿವರ ದೊರೆಯುತ್ತದೆ. 'ಸನ್ಯಸನಶಾಸ್ತ್ರಕ್ರಮಾತ್' ಧ್ಯಾನ ಮಾಡಿ, 'ಕರ್ಮವೆಂಬ ಇಂಧನವನ್ನು ಉರುಹಿ, ಮೋಕ್ಷವನ್ನೈದಿದ' ಒಬ್ಬ ಮುನಿಯನ್ನು ಶ್ರವಣಬೆಳ್ಗೊಳದ ಕ್ರಿ.ಶ. 450ರ ಶಾಸನ ಹೇಳುತ್ತದೆ. (EC.II.85) ಇನ್ನೂ ಹಲವಾರು ಶಾಸನಗಳು 'ಸನ್ಯಸನ ವಿಧಿ'ಯನ್ನು ಪ್ರಸ್ತಾವಿಸುತ್ತವೆ. (EC.II.34, 141, 129, 351, 398, 384, SII.XV.530, SII.VII.216, EC.IV.Ch.61, EC.XII.ch.23) 'ಸಕಲ ಸನ್ಯಸನ ವಿಧಿ' ಎಂಬ ಒಂದು ಶಾಸನ (SI.I.VII.216) ಶ್ರವಣಬೆಳ್ಗೊಳದ ಒಂದು ಶಾಸನ 'ಸನ್ಯಸನ ಯೋಗ' ಎಂದು ಕರೆದಿದೆ (EC.II.112). ಆದಿಪುರಾಣದಲ್ಲಿ ಶತಬಲನು "ಉಪವಾಸವ್ರತಗಳನ್ನಪ್ಪಿ, ಅನಶನ ಅವಮೋದಾಯಣ ಮುಂತಾದ ವ್ರತಗಳಲ್ಲಿ ಸಿದ್ಧಹಸ್ತನಾಗಿ, ಉಚಿತ ವಿಧಾನಗಳಿಂದ ಆಯುಷ್ಯನಂತ್ಯದಲ್ಲಿ ಸಂಸಾರವನ್ನು ಕ್ಷೀಣಗೊಳಿಸುತ್ತ ಸಮಾಹಿತ ಮನಸ್ಕನಾಗಿ ಸನ್ಯಸನ ವಿಧಾನದಿಂದ ಜೀವದೊರೆದನು" ಎಂದಿದೆ. 'ಸನ್ಯಾಸಿಗಳಾದವರು ಉಪವಾಸವ್ರತ ಮೊದಲಾದವುಗಳಿಂದ ಅಷ್ಟಕರ್ಮಗಳನ್ನೂ ಮಾಡಬೇಕು' ಎಂದು ಒಂದು ಶಾಸನ ಹೇಳಿದೆ. (EC.VII.Hn.4).

ತಂದೆಯ ಸಾವಿನ ವಿಷಯ ಕೇಳಿ ಮಗಳು (EC.IX.Bn94) ಗಂಡನ ಮರಣದ ವಿಷಯ ಕೇಳಿ ಅವನ ಇಬ್ಬರು ಹೆಂಡಂದಿರು (MAR.1943) ಸನ್ಯಸನ ವಿಧಾನದಿಂದ ಮಡಿದ ಪ್ರಸ್ತಾಪ ಶಾಸನಗಳಲ್ಲಿದೆ. ಈ ಸನ್ಯಸನವ್ರತವನ್ನು ಬಸದಿಯಲ್ಲೋ (ಅತ್ತಿಮಬ್ಬೆ ಕಟ್ಟಿಸಿದ ಬಸದಿಗಳಲ್ಲೆಲ್ಲ ಲಕ್ಕುಂಡಿಯ ಬಸದಿಯೇ ಶ್ರೇಷ್ಠ. ಏಕೆಂದರೆ ಅಲ್ಲಿ ಸನ್ಯಾಸದನಾರಾಧನೆಯ ಜಪದಿ ಸಂದ ನಿಶೀದಿಗೆಗಳಿವೆ (BKS.I.152) ಬೆಟ್ಟದ ಮೇಲೋ, ಊರ ಹೊರಗೋ (EC.IX.ch.461) ಆಚರಿಸಬಹುದಾಗಿದ್ದಿತು.

'ಸಲ್ಲೇಖನ' ಎಂಬುದು 'ಸಮಾಧಿಮರಣ' ಹೊಂದಲು ಮಾಡುವ ಮತ್ತೊಂದು ವ್ರತ. ಇದನ್ನು ಶಾಸನಗಳು 'ಸಲ್ಲೇಖನ ಸಮಾಧಿಮರಣದಿಂ ಮುಡಿಪಿ ಸ್ವರ್ಗಕ್ಕೆ ಸಂದರು (EC.VIII.Hn.15.1177) ಸಲ್ಲೇಖನ ವಿಧಿಯಿಂ ಸಮಾಧಿಯ ಪಡೆದು ಸ್ವರ್ಗಪ್ರಾಪ್ತಿಯಾದಲು (EC.II.389.12.13) ಎಂದಿವೆ. ಇದನ್ನು ಜೈನರು ಜೀವನದ ಅಂತಿಮವೇಳೆಯಲ್ಲಿ ಮಾಡಲಾಗುವ ಉತ್ಕೃಷ್ಟ ಸಾಧನ, ವ್ರತರಾಜ ಎಂದು ತಿಳಿಯುವರು. ಒಂದು ಶಾಸನ ಇದನ್ನು ಜೈನಾಗಮ ಪ್ರಸಿದ್ಧ ಸಲ್ಲೇಖನವಿಧಿ ಎಂದೇ ಕರೆದಿದೆ. (EC.II.67.1179) ಇದರ ವ್ಯುತ್ಪತ್ತಿಯನ್ನು ಕುರಿತು ಸತ್+ಲೇಖನ=ಪ್ರಶಂಸನೀಯ+ಕೃಷೀಕರಣ=ದೇಹಬಂಧನದ ಮೂಲಕಾರಣಗಳಾದ ಕಾಯ ಹಾಗೂ ಕಷಾಯಗಳನ್ನು ಕೃಶ ಅಥವಾ ಕ್ಷೀಣಗೊಳಿಸುವುದು, ಮರಣಕ್ಕೆ ಮುಂಚೆ ಉಪವಾಸ ಮಾಡುವುದು ಎಂದರ್ಥ ಹೇಳಲಾಗುತ್ತದೆ. ಮಹಾಸಂಕಟ, ದುರ್ಭಿಕ್ಷೆ, ವ್ಯಾಧಿ, ವಾರ್ಧಕ್ಯ ಈ ಅವಸ್ಥೆಗಳಲ್ಲಿ ಸಾಧಕನಾದವನು ಸಂಕಟದಿಂದ ಸವೆದು ವ್ಯಾಕುಲದಿಂದ ಸಾಯುವದಕ್ಕಿಂತ ಕ್ರಮಕ್ರಮವಾಗಿ ಆಹಾರಾದಿಗಳನ್ನು ವಿಧಿಗನುಸಾರವಾಗಿ ಕಡಿಮೆ ಮಾಡುತ್ತಾ ಕಡೆಗೆ ಪೂರ್ತಿ ಉಪವಾಸವಿದ್ದು ಮನಶ್ಶಾಂತಿಯಿಂದ ಶರೀರವನ್ನು ತ್ಯಜಿಸುವುದು. ಇದರಲ್ಲಿ ಎರಡು ವಿಧ- ಅನಶನ ಮೊದಲಾದ ಬಾಹ್ಯತಪಗಳಿಂದ ಶರೀರವನ್ನು ಸೊರಗುವಂತೆ ಮಾಡುವುದು ಶರೀರ ಸಲ್ಲೇಖನ. ಪರಿಣಾಮ ಉತ್ಪತ್ತಿನಿಮಿತ್ತಗಳಾದ ಸಮಸ್ತ ವಸ್ತುಗಳನ್ನು ತೊರೆಯುವುದು ಕಷಾಯ ಸಲ್ಲೇಖನ. ಆಶಾಧರರು ತಮ್ಮ ಧರ್ಮಾಮೃತ ಗ್ರಂಥದಲ್ಲಿ ಶುದ್ಧಸಮ್ಯಕ್ತ್ವ ಅಣುವ್ರತ- ಗುಣವ್ರತ- ಶಿಕ್ಷಾವ್ರತಗಳ ಪಾಲನೆ ಮತ್ತು ಸಲ್ಲೇಖನ ಮರಣ ಹೊಂದುವುದು ಇದೇ ಗೃಹಸ್ಥರ ಸಂಪೂರ್ಣಧರ್ಮ ಎಂದಿದ್ದಾರೆ. ಇದು ಆತ್ಮವನ್ನು ಶುದ್ಧಮಾಡುವ ಅಂತಿಮ ಕ್ರಿಯೆ. ಇದು ವ್ರತವಲ್ಲ. ವ್ರತಾಂತ್ಯ. ಸಾವಲ್ಲ ಸಿದ್ಧಿ.

ಆರಾಧಕನು ಸಲ್ಲೇಖನವನ್ನು ಮಾಡುವಾಗ ಐದು ದೋಷ(ಅತಿಚಾರ)ಗಳನ್ನು ದೂರಗೊಳಿಸಬೇಕು. ಅವು: ಜೀವಿತಶಂಸೆ (ಬಾಳಬೇಕೆಂಬ ಇಚ್ಛೆ), ಮರಣಶಂಸೆ (ಸಾಯಬೇಕೆಂಬ ಇಚ್ಛೆ), ಅಲ್ಲದೆ ಅಧೃವ, ಅಶ ಕರಣ, ಏಕತ್ವ, ಅನ್ಯತ್ವ, ಸಂಸಾರ, ಲೋಕ, ಅಶುಚಿತ್ವ, ಆಸ್ರವ, ಸಂವರ, ನಿರ್ಜರ, ಧರ್ಮ, ಬೋಧಿದುರ್ಲಭ ಎಂಬ ದ್ವಾದಶ ಅನುಪ್ರೇಕ್ಷಗಳನ್ನು ಭಾವಿಸುತ್ತ ಇಚ್ಛಾಮರಣಿಯಾಗಿ ಸ್ವರ್ಗಮೋಕ್ಷಾದಿಗಳನ್ನು ಸಂಪಾದಿಸಬೇಕು. ಹೀಗೆ ಸಲ್ಲೇಖನ ವಿಧಿಗನುಸಾರವಾಗಿ ಶರೀರ ತ್ಯಾಗಮಾಡಿದ ಮಹಾಬಲನ ವಿವರ ಮಹಾಪುರಾಣ(ಸಂ.1.ಪು. 189-190) ದಲ್ಲಿ ಸವಿಸ್ತಾರವಾಗಿ ಬಂದಿವೆ. ಅದೇರೀತಿ ಕ್ರಿ.ಶ. 1429ರ ಹಾಡುವಳ್ಳಿ ಶಾಸನದಲ್ಲಿಯೂ ಇದರ ವಿವರವಿದೆ. (ಶಾಸನ ಸಾಹಿತ್ಯ ಸಂಚಯ ಪು.166-9)

ಸನ್ಯಸನ, ಸಲ್ಲೇಖನಗಳಲ್ಲದೆ, ಎಲ್ಲರೂ ಸಾಧಿಸಲಾರದ, ಮುಖಕುಕ್ಕುಟ, ಕೂರ್ಮ, ಸರೋಜ, ವಜ್ರ, ಕುಂಡಲಿಕ, ಮಯೂರ, ವೀರ, ಮಕರ, ಉತ್ಕಟಿಕ ಮೊದಲಾದ ಆಸನಗಳೂ, ಅಲ್ಪಶಕ್ತಿಯುಳ್ಳವರೂ ಆಚರಿಸಬಲ್ಲ ಪರಿಯಂಕಾಸನ, ಏಕಪಾರ್ಶ್ವನಿಯಮ, ಶುಕ್ಲಧ್ಯಾನ, ಮುಕ್ತಾವಳಿ, ಸಿಂಹನಿಷ್ಕ್ರಿದಿತ, ಆರಾಧನ, ಪಂಚನಮಸ್ಕಾರ ಮೊದಲಾದ ವ್ರತಗಳೂ ಜೈನರು ಸಮಾಧಿ ಮರಣ ಹೊಂದಲು ನಡೆಸುತ್ತಿದ್ದ ಆಚರಣೆಗಳಾಗಿದ್ದವು. ಇವನ್ನೆಲ್ಲ ಶಾಸನಗಳು ಹೆಚ್ಚಾಗಿ 'ನೋನ್ತು' ಎಂದೇ ಉಲ್ಲೇಖಿಸುತ್ತವೆ.

ಈ ವ್ರತವನ್ನು ಕೈಗೊಳ್ಳುವ ಪೂರ್ವದಲ್ಲಿ ತಮ್ಮ ಆಪ್ತೇಷ್ಟರನ್ನು ಬಂಧು-ಬಳಗವನ್ನೂ ಕರೆಸಿ, ಅವರ ಒಪ್ಪಿಗೆ ಪಡೆಯುವ, ಅವರ ಸಮಕ್ಷಮ ಮರಣವಪ್ಪುವ ರೂಢಿ

ಇದ್ದಿತು. ಜಯಸೇನನ ಮಗನಾದ ಮಾಣಿಕಸೇನನು ಎಲ್ಲ ಮುನಿಗಳನ್ನೂ ಜೈನ ಪ್ರಮುಖರನ್ನೂ, ಸಂಗಭೂಪಾಲನನ್ನೂ, ಹೈವರಸನನ್ನೂ ಕರೆಸಿಕೊಂಡು ಸಲ್ಲೇಖನ ಕೈಗೊಳ್ಳುವ ವಿಷಯ ತಿಳಿಸುತ್ತಾನೆ. ಆ ಕಾರ್ಯದಲ್ಲಿ ಅವರ ನೆರವನ್ನೂ ಕೋರುತ್ತಾನೆ. ಆದರೆ ಆ ಜನ ಒಪ್ಪದಾಗಲು ಅವನು ಧರ್ಮೋಪದೇಶದಿಂದ ಅವರನ್ನು ಒಡಮಿಡಿಸುತ್ತಾನೆ. ಕೊನೆಗೆ ಸಂಗರಾಜನು ಮುನಿಯ ಸಲ್ಲೇಖನ ವ್ರತಕ್ಕೆ ತಕ್ಕ ಏರ್ಪಾಡು ಮಾಡುತ್ತಾನೆ. ಅಲ್ಲದೆ ಆತನ ಅಂಗಪೂಜೆಯನ್ನೂ ವಿರಚಿಸುತ್ತಾನೆ. ಹೊಂಬುಜದ ಮೂಲ ಮಾಚಗಾವುಂಡನು ತನ್ನವಸಾನ ಕಾಲ ಸಮೀಪಿಸಿದುದನ್ನು ತಿಳಿದು, ಎಲ್ಲ ಬಂಧುಗಳನ್ನು ಸೇರಿಸಿ ಸಮಾಧಿ ಹೊಂದಿದ (EC.VIII.Nr4) ಶಾಂತಲೆಯ ತಾಯಿ ಮಾಚಿಕಬ್ಬೆಯು ಗುರುಗಳ ಸನ್ನಿಧಿಯಲ್ಲಿ ಮಾತ್ರವಲ್ಲ, ಭವ್ಯಜನಂಗಳ ಸನ್ನಿಧಿಯಲ್ಲೂ ಸನ್ಯಸನ ಕೈಗೊಂಡು ಮರಣವಪ್ಪಿದಳು. (EC.II.176.1131) ಅರಿಷ್ಟನೇಮಿ ಆಚಾರ್ಯನು ಅನೇಕ ಶಿಷ್ಯರ ಮುಂದೆ ಸಮಾಧಿಮರಣ ಹೊಂದುವಾಗ ದಿಡ್ಡಕ ರಾಜನೂ ಸಾಕ್ಷಿಯಾಗಿದ್ದನು. (EC. II.176.1131)

ಹೀಗೆ ಅವರು ಮರಣವನ್ನುಪ್ಪುವಾಗ 'ಕೇ ಕಾನಾರ್ಥಿಕೋ' ಎಂದು ದಾನ ಮಾಡುತ್ತಿದ್ದರು. ಅಲ್ಲದೆ ತುಂಬ ಕಠೋರವಾಗಿದ್ದ ಆ ವ್ರತಗಳನ್ನು ಅವರು ನಗುನಗುತ್ತಲೇ ಆಚರಿಸುತ್ತಿದ್ದರು. ಮಲ್ಲಿಷೇಣನು ಸಲ್ಲೇಖನವ್ರತ ಅಂಗೀಕರಿಸಿ ತನ್ನ ದೇಹ ಪರಿತ್ಯಾಗ ನೋಡಲು ಬಂದಿದ್ದ ಸಕಲ ಸಂಘದ ಎದುರು ಸಂತೋಷದಿಂದ 'ಸಾವು ಸಮೀಪಿಸಿದ್ದರೂ ಅಂತರಂಗ ಕಳೆಗುಂದಿಲ್ಲ. ಅದು ಹೆಚ್ಚು ಪರಿಪಕ್ವತೆಯಿಂದ ಕೂಡಿದೆ' ಎಂಬುದನ್ನು ತೋರಿಸಲು ಆಶುಕವಿತೆಯೊಂದನ್ನು ರಚಿಸಿ ಹೇಳಿದನಂತೆ. (EC.11.67.1179) ಹಾಗೆಯೇ ಕ್ರಿ.ಶ. ಸು 250ರ ಶಾಸನವೊಂದು 'ಸುನ್ದರಪೆಮ್ಪು ದುಗ್ರತಸ ಅನುರಾಗವಿನ್ದು ಬಲಗೊಣ್ಡು ಮಹೋತ್ಸವ ದೇಟಿ ಶೈಲಮಾನ್' – ಸನ್ಯಸನವನ್ನು ಹೊಂದಲು ಇಚ್ಛಿಸಿ, ತಪಸ್ಸನ್ನಾಚರಿಸಲು ಶೈಲವನ್ನೇರುತ್ತಿದ್ದರೂ ಅವನಲ್ಲಿ ಮಹಾ ಉತ್ಸಾಹ ಉಕ್ಕುತ್ತಿತ್ತು ಎಂದಿದೆ (EC.11.39). ಶ್ರವಣಬೆಳ್ಗೊಳದ ಇನ್ನೊಂದು ಶಾಸನವೂ 'ಪ್ರಾಸಾದಾನ್ತರಮಾನ್ ವಿಚಿತ್ರ ಕನಕಪ್ರಜ್ವಲ್ಯದಿನ್ಮಿಕ್ಕುದಾನ್ ಸಾಸಿರ್ವರ್ ಪೂಜೆದನ್ದುಯೆ ಅವರ್ ಸ್ವರ್ಗಾಗ್ರಮನೇರಿದಾರ್' (EC.11.27) ಎಂದಿದೆ.

ಹೀಗೆ ಇವರು ಹಲವಾರು ದಿನಗಳವರೆಗೆ ವ್ರತವನ್ನು ಹಿಡಿದು ಮರಣವನ್ನಪ್ಪಿದ ಉಲ್ಲೇಖಗಳೂ ಶಾಸನಗಳಲ್ಲಿವೆ. ಗಂಗ ಮಾರಸಿಂಹ ಮೂರು ದಿವಸ, ದೇವಿಯಬ್ಬೆಕನ್ತಿ ಐದು ದಿವಸ, ಹೈವಣರಸನ ಹೆಂಡತಿ ಶಾಂತಲದೇವಿ ಹತ್ತು ದಿವಸ, ಹುಬ್ಬಳ್ಳಿಯ ಚಿಕ್ಕಮಲ್ಲಣ ಇಪ್ಪತ್ತೊಂದು ದಿವಸ, ಶಾಂತಲೆಯ ತಾಯಿ ಮಾಚಿಕಬ್ಬೆ ಒಂದು ತಿಂಗಳು, ನಾಗಮತಿ ಕಂತಿ ಮೂರು ತಿಂಗಳು, 82 ವಯಸ್ಸಿನ ಜಪಾನಿನ ಸನ್ಯಾಸಿ ಬದರಿಪ್ರಸಾದ ಮುನಿಮಹಾರಾಜರು 72 ದಿವಸ (ಗೊಮ್ಮಟವಾಣಿ ಅಕ್ಟೋ–ನವೆಂ. 1987) 12–1–68ರಂದು ಸಮಾಧಿಮರಣ ಹೊಂದಿದ ಮುನಿಶ್ರೀ ಧರ್ಮಸೇನ ಮಹಾರಾಜರು 14 ತಿಂಗಳು ವ್ರತಾಚರಣೆ ಮಾಡಿ ಮರಣವಪ್ಪಿದ ವಿವರ ದೊರೆಯುತ್ತದೆ. ಇವರು ಈ ರೀತಿ ಮರಣವಪ್ಪಿದುದನ್ನು ಸ್ವರ್ಗಾಗ್ರಮನೇಱಿದಾರ್ (EC.11.1) ಸ್ವರ್ಗಾಲಯಕೇಱಿದಾರ್ (EC.11.76) ಸ್ವರ್ಗಕ್ಕೆ ಸಂದರು (ಬಹಳಮು. ಶಾಸನ) ಸುರಲೋಕ ವಿಭೂತಿಯೆಯ್ದಿದ (EC.11.26) ದೇವನಿವಾಸ ವಿಭೂತಿಗೆಯ್ದಿದಳ್ (EC.11.351). ದೇವಲೋಕಕ್ಕೆ ಸನ್ದಾನ್ (EC.11.88) ಶಿವನಿಲೆ ಪೆಡದಾನ್ ಮುಕ್ತಕಾಲ ಮಂಪಡೆದು (EC.11.14), ಮುಕ್ತಿವಲ್ಲಭರಾದರು (EC.11.134 IV-11, 125)) ಇಂದ್ರಲೋಕಕ್ಕೊಗೆದರು (EC.11.79), ಸ್ವರ್ಗವಧೂಮನಃ ಪ್ರಿಯತಮ (EC.11.63) ರಮ್ಯಸುರಲೋಕಕ್ಕೆ ಭಾಗಿ ಆ (EC.11.21) ದಿವಂಪೊಕ್ಕಂ (EC.11.80), ನಾಕ ಶ್ರೀಮನಸ್ಸರೋಜ ನಿರಾಜಮರಾಳರಾದರು (EC.11.269) ಅಮರಗತಿಯಂ ಪಡೆದು (EC.11.174) ಎಂದು ಶಾಸನಗಳು ಮನದುಂಬಿ ಬಣ್ಣಿಸಿವೆ.

ಇವರು ಈ ರೀತಿ ಮರಣವಪ್ಪಿದುದರಿಂದ 'ಧರೆ ಲಘುವಾಯ್ತು' ಎಂದು ಮುಂತಾಗಿ ದುಃಖಿಸಿದವರು ಹಲವು ಜನ. ಕನಕನ (1245) ನಾಗವ್ವೆ (1259) ಎಂಬಿಬ್ಬರು ಸಮಾಧಿವಾದಿಯಿಂದ ಮರಣವಪ್ಪಿದಾಗ "ತಮತನುಗಳ್ಕಿ ಬನ್ಧುಗಳು ಬಾಯ್ವಿಡೆ ತನ್ನವರೆಲ್ಲ ಮಾನಗಂ ಸಮತೆಯನೊಕ್ಕು ಗೋಳಿಡೆ ನಿಜಾನ್ವಯನ್ತರಕ್ಕಟಗಾತ್ರೆಯೆಂದು ದುಃಖಮನೊಳಕೊಂಡು ಶೋಕಿಸಿ"ದುದನ್ನು ಹಾನಗಲ್ಲ ತಾಲೂಕು ಹೇರೂರ ಶಾಸನ ಹೇಳುತ್ತಿದೆ. ಗಂಡಂದಿರು ಈ ರೀತಿ ಮರಣವನ್ನಪ್ಪಿದಾಗ ಅವರ ಹೆಂಡಂದಿರೂ ಅವರನ್ನು ಅನುಸರಿಸಿದ ಉಲ್ಲೇಖಗಳಿವೆ. ಮಲ್ಲಪನು ಸಮಾಧಿಯಿಂದ ಮರಣವಪ್ಪುತ್ತಲೇ ಅವನ ನಾಲ್ಕು ಜನ ಹೆಂಡಂದಿರೂ ಅದೇ ರೀತಿ ಮರಣವಪ್ಪಿದರು. (SII. XVIII 27 A.1394). ಇದಕ್ಕೆ ವ್ಯತಿರಿಕ್ತವಾಗಿ ಹಲವರು ಸಹಗಮನ ಮಾಡಿದ ಉದಾಹರಣೆಗಳೂ ಇವೆ. ಬೀಚಿಗೌಂಡನು ಪಂಚನಮಸ್ಕಾರದಿಂದ ಮಡಿಸಿ ಸ್ವರ್ಗಸ್ಥನಾಗಲು ಅವನ ಕಿರಿಯ ಹೆಂಡತಿ ಮುದ್ದಿಗೌಂಡಿ ಸಹಗಮನ ಮಾಡಿದಳು. (ಹಿರೇ ಆವಲಿ ಶಾಸನ, 1376, EC. VII.Sh. 106). ಬಾಳೂರಿನ ಮುದ್ದುಗೌಡ ಸಮೋಖನ ವಿಧಿಯಿಂದ ಸಮಾಧಿ ಮರಣಿ ಹೊಂದಲು ಆತನ ಸತಿಯಾ ಸಹಗಮನ ಹೊಂದಿದಳು. (ಬಾಳೂರು ಶಾಸನ, 1197). ಅದೇ ರೀತಿ ಸುರನಿಮಿದೇವರ ಗುಡ್ಡ ಪಟ್ಟಿ ಸಮಾಧಿ ಹೊಂದಲು ಅವನ ಹೆಂಡಂದಿರು ಸೋಮವ್ವೆ ಲಿಂಗಪ್ಪೆಯರು ಸತಿ ಹೋದರು. (EC. VII.Sr.7).

ಹೀಗೆ ಮಡಿಯುವುದಕ್ಕಾಗಿ ಅವರು ಪವಿತ್ರ ಸ್ಥಳಗಳನ್ನೇ ಆಯ್ದುಕೊಳ್ಳುತ್ತಿದ್ದರು. ಇಂಥ ಸ್ಥಳಗಳನ್ನು 'ಸಮಾಧಿ ಗುಡ್ಡ'ವೆಂದೇ ಕರೆಯುತ್ತಿದ್ದರು. ಅವುಗಳಲ್ಲಿ

ಕರ್ನಾಟಕ ಜೈನಧರ್ಮದ ಪ್ರಸಿದ್ಧ ಕೇಂದ್ರ ಶ್ರವಣಬೆಳ್ಗೊಳ ಪ್ರಮುಖವಾದುದು. ಅದಕ್ಕೆ ಪೂರ್ವದಲ್ಲಿದ್ದ ಕಟ್ಬಪ್ಪು, ಕಟವಪ್ರ ಎಂಬ ಹೆಸರುಗಳ 'ಸಮಾಧಿ ಮರಣವನ್ನು ಹೊಂದಲು ಯೋಗ್ಯವಾದ ಗುಡ್ಡ' ಎಂಬರ್ಥವನ್ನೇ ಹೊಂದಿವೆ. ಶ್ರವಣಬೆಳ್ಗೊಳದಲ್ಲಿ ದೊರೆತ ಮೊದಲನೆಯ ಶಾಸನವೇ ಭದ್ರಬಾಹು ಮುನಿಯಿಂದ ಪವಿತ್ರಗೊಳಿಸಲ್ಪಟ್ಟ ಈ ಚಿಕ್ಕಬೆಟ್ಟವು "ಜೈನರ ಸಮಾಧಿ ಮರಣಕ್ಕೆ ಅರ್ಹವಾದ ಸ್ಥಳ ಎಂದು ಪ್ರಸಿದ್ಧಿ ಪಡೆಯಿತು." ಎಂದಿದೆ. ಇಲ್ಲಿಗೆ ಉಳ್ಳಿಕಲ್, ಪೆಱುಮಾಳು, ಆಗಟಿ, ವೇಗೂರು, ಆಬೆಯೆಱೆನಾಡು, ಚಿತ್ತೂರು, ತಟಿಕಾಡು, ಕಳನೂರು, ಕಿತ್ತೂರು, ಮಾಲನೂರು, ಇನುಜ್ಞೂಗು, ನವಿಲೂರು, ಚಿಕುಲಪರವಿ, ತಿಟ್ಟಿಗಸಾನ, ಕೊಂಗನಾಡು ಮೊದಲಾದ ಸ್ಥಳಗಳಿಂದ ಬಂದು ಮರಣನಪ್ಪಿದುದನ್ನು ಶಾಸನಗಳು ಹೇಳುತ್ತಿವೆ. ಇಲ್ಲಿಯ ಒಟ್ಟು 573 ಶಾಸನಗಳಲ್ಲಿ 123 ಶಾಸನಗಳು ಸಮಾಧಿಮರಣಕ್ಕೇ ಸಂಬಂಧಿಸಿದವುಗಳಾಗಿವೆ. ಹಾಗೆಯೇ ಉತ್ತರ ಕರ್ನಾಟಕದಲ್ಲಿ ಇನ್ನೊಂದು ಪ್ರಸಿದ್ಧ ಜೈನಕೇಂದ್ರ ಕೊಪ್ಪಳ. ಅದನ್ನು ಆದಿತೀರ್ಥ, ಮಹಾತೀರ್ಥ ಎಂದು ಶ್ರವಣ ಬೆಳ್ಗೊಳದ ಶಾಸನಗಳೇ ಕರೆದಿವೆ. ಇಲ್ಲಿಗೆ ಮುಳಗುಂದ ಮೊದಲಾದ ನಾಡುಗಳಿಂದ ಬಂದು ಮರಣವಪ್ಪಿದವರ ಉಲ್ಲೇಖಗಳು ದೊರೆಯುತ್ತಿವೆ. ಇಲ್ಲಿಯ ಸುಮಾರು 100–120 ಶಾಸನಗಳಲ್ಲಿ ಸಮಾಧಿ ಮರಣ ಶಾಸನಗಳು 23. ಹಾಗೆಯೇ ಹಿರೇ ಆವಲಿ ಹುಂಚದಲ್ಲಿ 52 ಶಾಸನಗಳು ಸಮಾಧಿ ಮರಣವನ್ನು ಹೇಳುತ್ತಿವೆ. ಇವಲ್ಲದೆ ಗೊಮ್ಮಟಗಿರಿ, ಹೂವಿನಬಾಗೆ, ಆಡೂರು, ಶಿವಗಂಗೆ, ಪುರಿಕರ ನಗರಗಳೂ ಜೈನರಿಗೆ ಸಮಾಧಿ ಮರಣ ಹೊಂದಲು ಪವಿತ್ರ ಸ್ಥಳಗಳಾಗಿದ್ದವು.

ಹೀಗೆ ಸಾವನ್ನಪ್ಪಿದವರ ಸ್ಮಾರಕವಾಗಿ ನಿಲ್ಲಿಸಿದವುಗಳೇ ನಿಷಧಿಗಳು. ಇವನ್ನು ಶಾಸನಗಳಲ್ಲಿ ನಿಸಿದಿ (SII.XV. 659, 14th c), ನಿಸಿದಿಗೆ, (EC. 11.29), 700; 62–900), ನಿಷಿಧಿಗೆ (EC.V. My. 129), ನಿಸಿದ್ಧಿ (EC.11. 273, 14 th c). ನಿಶಿದಿ (EC.11.64, 1163), ನಿಶಿಧಿಗೆ (S. II. XVII. 395), ನಿಶಿದಿಗೆ (EC. 11.117, 1123), ನಿಶಿದಿಗೆ (EC. VI Kp. 3.1190) ನಿಸಿದಿಗೆ (EC. 11.117, 1123) ನಿಸಿದಿಗೆ (K.I.I. 39, 1408), ನಿಶಿದ್ದಾಲಯ, ನಿಶಿದಿ, (SII. XV. 63, 1163) ನಿಸಿದಿಗೆ (Ec.VII, Ni, 27, 12th c) ನಿಸಿದ್ಯಾ (EC 11. 63.1163) ನಿಸಿದ್ಧಿ, ನಿಷದ್ಧಿಕಾ, ನಿಸ್ತಿಗೆ (SII. XV. 1420) ಮುಂತಾಗಿ ಪ್ರಸ್ತಾಪಿಸಲಾಗಿದೆ. ಸಂಸ್ಕೃತದಲ್ಲಿ ಇದನ್ನು ನಿಶದ್ಯಾ, ನಿಷೀದಿಕಾ ಎಂದು ಕರೆಯಲಾಗಿದೆ. ಸಂಸ್ಕೃತದ 'ನಿಷೀದಿಕಾ'ಕ್ಕೆ ಪ್ರಾಕೃತದ 'ನಿಸೀಹಿಯಾ' ಸಮಾನ. ಸಾಮಾನ್ಯವಾಗಿ ಪ್ರಾಕೃತದ 'ಹ' ಸಂಸ್ಕೃತದ 'ಧ' ಕ್ಕೆ ಸಮಾನ. ಪ್ರಾಕೃತವನ್ನು ಚೆನ್ನಾಗಿ ಅಭ್ಯಸಿಸಿದ್ದ ಕನ್ನಡ ಕವಿಗಳಿಗೆ 'ನಿಸೀಹಿಯಾ' ಎಂಬ ರೂಪವೇ ಮನಸ್ಸಿನಲ್ಲುಳಿದು ಅದನ್ನು ಸಂಸ್ಕೃತಕ್ಕೆ ತಿರುಗಿಸುವಾಗ 'ನಿಷೀದಿಕಾ' ಮಾಡಿಬಿಟ್ಟರು. (ಡಾ. ಎನ್. ಉಪಾಧ್ಯೆ ಉಲ್ಲೇಖ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. 109)

ಇದರ ರೂಪ ನಿಷ್ಪತ್ತಿ ಕುರಿತು ಪಂಡಿತರಲ್ಲಿ ಚರ್ಚೆ ನಡೆದಿವೆ. ಕೆಲವರು 'ನಿಷಧಿ' ಎಂಬುದು 'ನಿಷೇಧ' ಎಂಬುದರಿಂದ ಬಂದಿರಬೇಕು. ಬಹುಶಃ ಆಹಾರ, ವ್ಯವಹಾರ, ಮೊದಲಾದವುಗಳ ನಿಷೇಧ ಮಾಡಿ ವ್ರತಾಚರಿಸುವದಿರಬೇಕು ಎಂದಿದ್ದಾರೆ. ಇನ್ನು ಕೆಲವರು 'ಸಧ್' ಧಾತುವಿಗೆ 'ನಿ' ಪೂರ್ವಪ್ರತ್ಯಯ ಸೇರಿ ನಿಸಿದ್ಧಿ ಎಂಬ ಪದ ಸಿದ್ಧಿಯನ್ನು ಪಡೆದವರ ಸ್ಥಳ ಎಂಬುದನ್ನು ಸಂಕೇತಿಸುತ್ತಿರಬೇಕು" ಎಂದಿದ್ದಾರೆ. ಆದರೆ ಡಾ. ಎಂ. ಚಿದಾನಂದಮೂರ್ತಿ ಅವರು 'ನಿಕ್ಷೇದಿತಾ' ಎಂಬ ಮಾತನ್ನು ಕೇಳಿದೊಡನೆಯೇ ಸಹಜವಾಗಿ 'ಉಪನಿಷತ್' ಎಂಬ ಮಾತು ನೆನಪಿಗೆ ಬರುತ್ತದೆ. 'ಉಪನಿಷತ್' ಎಂದರೆ (ಗುರುವಿನ) ಸಮೀಪದಲ್ಲಿ ಕುಳಿತುಕೊಳ್ಳುವುದು ಎಂದರ್ಥ. ನಿಸಿದಿಗಲ್ಲುಗಳ ಮೇಲೆ ಜಿನಸ್ತೋತ್ರವನ್ನು ಹೇಳುತ್ತಿರುವ ಗುರು, ಗುರುವಿನಿಂದ ಮುಂದೆ ಪುಸ್ತಕವಿರುವ ವ್ಯಾಸಪೀಠ, ವ್ಯಾಸಪೀಠದ ಇನ್ನೊಂದು ಕಡೆ ವ್ರತಧಾರಿಯಾಗಿ ಜಿನಸ್ತೋತ್ರವನ್ನು ಕೇಳುತ್ತಿರುವ ವ್ಯಕ್ತಿ ಈ ಚಿತ್ರಗಳಿರುತ್ತವೆ. ಗುರುವಿನ ಹತ್ತಿರ ಕುಳಿತು ಪ್ರಾಣ ತ್ಯಜಿಸಿದ ಸ್ಥಳಕ್ಕೆ, ಆ ಸ್ಥಳವನ್ನು ಮುಂದಿನವರ ನೆನಪಿನಲ್ಲಿ ಉಳಿಸುವುದಕ್ಕಾಗಿ ಕೆತ್ತಿದ ಬರಹಕ್ಕೆ 'ನಿಷೀದಿಕಾ' ಎಂದು ಹೆಸರು. 'ಸದ್' ಎಂಬ ಧಾತುವಿನಿಂದ ಹೊರಡ 'ನಿಷತ್ತಿ' ಎಂಬ ಪದಕ್ಕೆ Sitting, resting ಎಂದೂ, 'ನಿಷಾದಿನ್' ಎಂಬ ಪದಕ್ಕೆ Sitting down, or lying ಎಂದೂ ಅರ್ಥಗಳಿವೆ. (ಕ.ಶಾ.ಸಾ.ಅ.ಪು. 109) ಎಂದಿದ್ದಾರೆ. ಆದರೆ ನಿಷಿಧಿಯಂ ನಿಱಿಸಿ, ನಿಷೀದಿಯಂ ಮಾಡಿಸಿ ಇತ್ಯಾದಿ ಹೇಳಿಕೆಗಳಿಂದ ದಹನ ಸ್ಥಳದಲ್ಲಿ ನಿಲ್ಲಿಸಿದ ಸ್ಮಾರಕ ಎಂಬರ್ಥವನ್ನು ಹೇಳುವುದುಂಟು. ಶ್ರವಣಬೆಳಗೊಳದ 389 ನೆಯ ಶಾಸನವು 'ಮರಣವನ್ನಪ್ಪಿದ ಕೂಡಲೇ ಅವನ ದೇಹವನ್ನು ಸುಟ್ಟು ಸ್ಥಳದಲ್ಲಿಯೇ ಬೈರೋಜ ನಿಷಧಿಗೆ ನಿಲ್ಲಿಸಲು ತಿಳಿಸಿದ' ಎಂದಿದೆ. ಜಿನನಾಥಪುರದ ಶಾಸನವೊಂದು ಬಾಲಚಂದ್ರದೇವನ ಮಗನೊಬ್ಬ ತೀರಿದಾಗ ದಹನ ಸ್ಥಾನದಲ್ಲಿ ನಿರ್ಮಿಸಿದ ಮಂಟಪವನ್ನು ಹೇಳುತ್ತಿದೆ.

ಮೈಸೂರಿಗೆ 20 ಕಿಲೋಮೀಟರ್ ದೂರದಲ್ಲಿರುವ ಗೊಮ್ಮಟಗಿರಿಯ ಬಂಡೆಯ ಮೇಲಿರುವ ಹಲವಾರು ಮಂಟಪಗಳು ಇದನ್ನೇ ಸೂಚಿಸುತ್ತದೆ. ಒಮ್ಮೊಮ್ಮೆ ಇವೆರಡನ್ನೂ ಬಿಟ್ಟು ಬೇರೊಂದು ಸ್ಥಳದಲ್ಲಿ ಸ್ಮಾರಕ ನಿಲ್ಲಿಸಿದ ಉದಾಹರಣೆಗಳೂ ಇವೆ. ಗಂಗಮಾರಸಿಂಹನು ಬಂಕಾಪುರದಲ್ಲಿ (EC.11.59) ಭಾನುಕೀರ್ತಿ ದೇವರು ಹೂವಿನಬಾಗೆಯಲ್ಲಿ (EC.11.71), ಮಡಿದರೂ ಅವರ ನಿಷಧಿಗಳನ್ನು ಬೆಳ್ಗೊಳದಲ್ಲಿ ನಿಲ್ಲಿಸಿದುದಕ್ಕೆ ಸ್ಥಳದ ಪಾವಿತ್ರ್ಯವೇ ಕಾರಣವಾಗಿರಬೇಕು.

ಹೀಗೆ ಮರಣನಪ್ಪಿದವರ ಸ್ಮಾರಕವಾಗಿ ಪಾದ, ಪ್ರತುಮೆ, ಕಂಬ, ಮಂಟಪ, ಬಸದಿ ಚೈತ್ಯಾಲಯ ಪಟ್ಟಸಾಲೆ

ನಿಲ್ಲಿಸಿದ ಉದಾಹರಣೆಗಳು. ಪಾದಗಳನ್ನು ಸಾಮಾನ್ಯವಾಗಿ ಬಂಡೆಗಲ್ಲುಗಳ ಮೇಲೆ ಕೆತ್ತಿದ್ದಾರೆ. (EC.IV.ch. 37A, EC. 11. 74, 146, 169 ಮೊದಲಾದವು) ಇವುಗಳಲ್ಲಿ ಅತ್ಯಂತ ಪ್ರಾಚೀನವಾದುಲು ಶ್ರವಣಬೆಳ್ಗೊಳದ ಚಿಕ್ಕಬೆಟ್ಟದ ಮೇಲಿರುವ ಭದ್ರಬಾಹು ಸ್ವಾಮಿ. ಪಾದುಕೆ ಕೆಲವೆಡೆ ಪ್ರತುಮೆ ನಿಲ್ಲಿಸಿದುದಾಗಿಯೂ ತಿಳಿಯುತ್ತಿದೆ. ಕನಕಗಿರಿಯಲ್ಲಿ ಮಾಡಿಸಿ ವಿಜಯದೇವರ ಪ್ರತಿಮೆ (EC.IV. ch. 365), ಹಿರಿಯ ಸೋಮಾಯಿಯ ಮರಣ ಶಾಸನದ ಮೇಲೆ ಬೊಂಬೆಗಳಿದ್ದೂ ಅವುಗಳ ಕೆಳಗೆ ಪ್ರಭೇಂದುದೇವರುಗಳು, ಪ್ರಭಾಚಂದ್ರ ದೇವರುಗಳು, ಚಂದಪ್ಪಗಳು ಗುರಾಮಾಯಿಗಳು ದೇವರಸರು, ಹಿರಿಯ ಸೋಮಾಯಿ ಎಂಬ ಹೆಸರಿವೆ. ಶ್ರವಣ ಬೆರ್ಳಗೊಳದ ಸಿದ್ಧರ ಗುಂಡಿನ ಮೇಲಿನ ಉಬ್ಬು ಶಿಲ್ಪಗಳನ್ನು ಇಲ್ಲಿ ಹೆಸರಿಸಬಹುದು.

ಕಂಬಗಳ ಮೇಲೆ ನಿಲ್ಲಿಸುವ ಪದ್ಧತಿ ರೂಢಿಯಲ್ಲಿ ಬಂದಿತು. ಇವನ್ನು ಕಲ್ಲು (EC.IV.Ch.101) ಕಂಬ, (EC.11.73), ಶಿಲಾಸ್ತಂಬ, (EC.11.126), ಶಿಲಾಯಾಸ್ತಂ, (ಇಅ.11. 129), ಶಿಲಾಕೂಟ, (EC.11.389) ನಿಷಿದಿ ಕಲ್ಲು, (EC.IV.Ch.389), ನಿಸಿಧಿಯ ಸ್ತಂಬ, (SII. XVII.382), ನಿಸ್ತಿಕೆಯ ಕಲ್ಲು, (SII. XV. 660), ಕೀರ್ತಿ ಸ್ತಂಭ, ಮೂಲಸ್ಥಂಭ (EC. VIII.Ar. 139) ಮುಂತಾಗಿ ಕರೆಯಲಾಗಿದೆ. ಇವುಗಳನ್ನು ಸಾಮಾನ್ಯವಾಗಿ ಬಯಲಿನಲ್ಲಿ ನಿಲ್ಲಿಸುತ್ತಿದ್ದರು. ಇಮ್ಮಡಿ ಮಾರಸಿಂಹನ ಸ್ಮಾರಕವಾದ ಕೂಗೆ ಬ್ರಹ್ಮದೇವರ ಕಂಬ, ಗಂಧವಾರಣ ಬಸದಿ ಎದುರು ಇರುವ ರಾಷ್ಟ್ರಕೂಟ ನಾಲ್ವಡಿ ಇಂದ್ರನ ಪ್ರಶಸ್ತಿ ಶಾಸನ ಇದಕ್ಕೆ ನಿದರ್ಶನ. ಇದಲ್ಲದೆ ಇವನ್ನು ಸುಂದರವಾದ ಮಂಟಪಯುಕ್ತವಾದ ವೇದಿಕೆಯಲ್ಲು ನಿಲ್ಲಿಸಿದ ಉದಾಹರಣೆಗಳಿವೆ. ಶ್ರವಣ ಬೆಳ್ಗೊಲದ ದೇವಕೀರ್ತಿ ಪಂಡಿತ, ಶುಭ ಚಂದ್ರಯತಿಗಳ ಮಂಟಪ, ಮಲ್ಲಿಪೋಣನ ಸ್ಮಾರಕ ಮಂಟಪಗಳನ್ನು ಇಲ್ಲೂ ನೆನೆಯಬಹುದು. ಹಾಗೆಯೇ ಗೊಮ್ಮಟ ಗಿರಿಯಲ್ಲಿ ಬಂಡೆಯ ಮೇಲೆ ಕಟ್ಟಿರುವ ಹಲವಾರು ಸಮಾಧಿ ಮಮಟಪಗಳೂ, ಸ್ವಾದಿಯ ಕಲ್ಲಗುಡಿಯ ಬೇಣದಲ್ಲಿ ಭಟ್ಟಾಕಲಂಕನ ಗುರು ಅಕುಲಂಕನ ನಿಷಧಿ ಮಂಟಪದ ಜೊತೆಗೆ ಒಂದು ಸಾಲಿನಲ್ಲಿ ಎಂಟು, ಇನ್ನೊಂದು ಸಾಲಿನಲ್ಲಿ 12 ಮಂಟಪಗಳೂ ಇವೆ. ಅಲ್ಲದೆ ನಿಷಿಧ್ಯಾಲಯ (EC.11.66), ಬಸದಿ (EC.V. My. 207, ಕುಮಾರ ಬೀಡು)ಗಳನ್ನೂ ಶಾಸನಗಳು ಪ್ರಸ್ತಾಪಿಸುತ್ತಿವೆ. ಸ್ವಾಮಿ ಕಾರ್ತಿಕ ಋಷಿಯರ್ ಮುಡಿಪಿದೆಡೆಯ ಅವರ ತಂಗೆಯರಪ್ಪ, ವೀರಶ್ರೀ ಬಸದಿಯಂ ಮಾಡಿ ಎಂಬ ಮಾತು ವಡ್ಡಾರಾಧನೆಯಲ್ಲಿ ಬಂದಿದೆ. ಅದೇ ರೀತಿ ಚೈತ್ಯಾಲಯ ಅಭಿಯಣನ್ದಿ ಮಾಘಣಗಳು ಸಿಂಹಣಂದ್ಯಾಚಾರ್ಯರು ಮುಡಿಪಿದೆಡೆಯಲ್ಲಿ ಚೈತ್ಯಾಲಯ ನಿರ್ಮಿಸಿದರು. (**ಶಾಸನ ಸಾಹಿತ್ಯ ಸಂಚಯ ಪು. 31**), ಪಟ್ಟಸಾಲೆ (ಮೋಜಿಂಗೆರೆಯಲ್ಲಿ ಮಡಿದ ಬಲದೇವನಿಗಾಗಿ ತಾಯಿ ನಾಗಿಯಕ್ಕ ತಂಗಿ ಏಚಿಯಕ್ಕ ಒಮ್ಮಾಳಿಗೆಯಲ್ಲಿ ಪಟ್ಟಸಾಲೆಯ ಕಟ್ಟಿಸಿದರು. (EC.11.174) ಮೊದಲಾವುಗಳ ವಿವರವೂ ಶಾಸನದಲ್ಲಿ ದೊರೆಯುತ್ತಿದೆ.

ಇವುಗಳನ್ನು ನಿಲ್ಲಿಸಲು ಕಾರಣ ಪರೋಕ್ಷ ವಿನಯ (EC.11.64, 66, 118, 127, 128, 159, 163; (EC.V.Kr. 36; EC.VIII. Ar. 136; EC.XII. Gu. 57, EC.IV. Hr. 43 ಮೊದಲಾದವುಗಳು) ಗುರುಪಾದ ಸ್ಮರಣೆ ಭವ್ಯರ ಚಿತ್ತದಲ್ಲಿರಬೇಕೆಂದು (SII.VII. 216), ಭಕ್ತಿಯಿಂದ (SII.VII. 216), ನಾಮಂ ನಿಲಲೆಂದು (EC.VIII. Ar. 139), ಪ್ರಖ್ಯಾತಿವೃದ್ಧಿ ಪ್ರೀತಿಯಿಂದ (EC.11. 126), ವಿಜಯ ಸ್ತಂಬವೇನೋ (EC.11.129).

ಈ ಶಾಸನಗಳನ್ನು ಯಾರು ಯಾರಿಗೆ ನಿಲ್ಲಿಸಿದರು.. ಎಂಬುದರ ವಿವರ ಶ್ರವಣ ಬೆಳ್ಗೊಳ ಶಾಸನಗಳಲ್ಲಿದೆ. ಗುರುವಿಗೆ (63, 64, 65, 66, 117, 240, 254, 274, 335, 351), ತಾಯಿಗೆ (118, 163), ತಂದೆಗೆ (163), ಹೆಂಡತಿಗೆ (128), ಗಂಡನಿಗೆ (142, 159) ಮಗನಿಗೆ (159) ಅಣ್ಣನಿಗೆ (384) ತಮ್ಮನಿಗೆ (126, 129) ಇವುಗಳಲ್ಲಿ ಸ್ತ್ರೀಯರೇ ನಿಲ್ಲಿಸಿದ ಶಾಸನಗಳು ನಾಲ್ಕು (126ಎ. 129, 142, 159).

ಈ ನಿಷಿಧಿಗಳನ್ನು ಚಿತ್ರವುಳ್ಳವು, ಬರವಣಿಗೆಯುಳ್ಳವು, ಚಿತ್ರ ಮತ್ತು ಬರವಣಿಗೆಯುಳ್ಳವು ಎಂದು ವರ್ಗೀಕರಿಸಲಾಗುತ್ತಿದೆ. ಮೇಲಗಡೆ ಮುಕ್ಕೊಡೆ ಇರುವ ಜಿನಮೂರ್ತಿ, ಕೆಳಗಡೆ ಬೋಧಿಸುವ ಗುರು, ಆಲಿಸುವ ಶಿಷ್ಯ, ಮಧ್ಯೆ ಪುಸ್ತಕ ಹೊತ್ತ ಪೀಠ ಇದು ಸಾಮನ್ಯವಾದ ನಿಷಧಿ ಶಿಲ್ಪ (IISI. No- 26 ಉಲ್ಲೇಖ, **ಕ.ಶಾ.ಸಾ.ಅ.ಪು**, 108) ಶ್ರವಣ ಬೆಳ್ಗೊಳದ ಅನೇಕ ಶಾಸನಗಳಲ್ಲಿ ಚಾಮರವನ್ನು ಚಿತ್ರಿಸಿರುತ್ತಾರೆ. ಚಾಮರವು ಅವರು ನಿಸಿಧಿ ಹೋಗಿ ಪಡೆದ ಉನ್ನತ ಸ್ಥಾನದ ಸಂಕೇತವಾಗಿ ಬರುತ್ತದೆ. ಈ ರೀತಿಯ ಶಿಲ್ಪಗಳು ಶ್ರವಣಬೆಳ್ಗೊಳದ ಕತ್ತಲೆ ಬಸದಿ, ಚಾವುಂಡರಾಯ ಬಸದಿ, ಸವತಿಗಂದವಾರಣೆ ಬಸದಿ ಬಳಿಯಲ್ಲಿ ಹುಂಚ, ತವನಿಧಿಯ ಶಾಸನಗಳಲ್ಲಿ ಕಂಡು ಬರುತ್ತದೆ. (**ಕನ್ನಡ ಶಾಸನ ಶಿಲ್ಪ** ಪು. 270) ಹಾಗೆಯೇ ಸ್ತ್ರೀಯರಿಬ್ಬರು ಮಡಿದ ವಿಷಯವನ್ನು ತಿಳಿಸುವ ಶಾಸವೊಂದರಲ್ಲಿ ಕೆಳಗಿನ ಅಂತಸ್ತಿನಲ್ಲಿ ಆ ಇಬ್ಬರು ಸ್ತ್ರೀಯರ ಚಿತ್ರ ಮಧ್ಯದ ಹಂತದಲ್ಲಿ ಅವರನ್ನು ವಿಮಾನದಲ್ಲಿ ಕರೆದೊಯ್ಯುವ ಚಿತ್ರ, ಮೇಲಿನ ಹಂತದಲ್ಲಿ ಜಿನಸಾನಿಧ್ಯದಲ್ಲಿ ಅವರಿಬ್ಬರು ನಿಂತಿರುವ ಚಿತ್ರ ಇದೆ. (MRA. 1943, P-7) ಉಲ್ಲೇಖ **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಪು. 98). ಗೇರುಸೊಪ್ಪೆಯ ನಗರ ಬಸ್ತೀಕೇರಿಯ ಪಾರ್ಶ್ವನಾಥನ ಬಸದಿಯ ಎದುರು ಸುಮಾರು 10–12 ಅಡಿ ಎತ್ತರದ ಸುಂದರವಾದ ನಿಸಧಿ ಸ್ತಂಭವಿದೆ. ಸ್ತಂಬವು ಚೌಕಾಕಾರವಾಗಿದ್ದು ಅದರ ಮೇಲ್ಬೈ ಮೇಲೆ ನಾಲ್ಕೂ ದಿಕ್ಕಿನಲ್ಲಿ ನಾಲ್ವರು ಮುನಿಗಳು ಜಿನನ ಸನ್ನಿಧಿಯಲ್ಲಿ ಸಲ್ಲೇಖನ ವ್ರತ ಸ್ವೀಕರಿಸುತ್ತಿದ್ದುದನ್ನು, ಅವರು ಧ್ಯಾನಸ್ಥಭಂಗಿಯಲ್ಲಿ ಕುಳಿತಿರುವುದನ್ನು ತೋರಿಸಲಾಗಿದೆ. ಅದರ ಕೆಳಗಡೆಯ ಕೋಷ್ಠದಲ್ಲಿ ಖಡ್ಗಾಸನ ಭಂಗಿಯ ಜಿನನ

ಉಬ್ಬುಚಿತ್ರವಿದೆ. ಚೌಕ ಮುಖದ ಒಂದೆಡೆ ಶಾಸನವಿದ್ದು ಆ ಮುನಿಗಳ ಹೆಸರನ್ನು ವಿಮಲಕೀರ್ತಿ, ಶ್ರುತಕೀರ್ತಿ, ಲಲಿತ ಕೀರ್ತಿಗಳೆಂದು ಹೆಸರಿಸಲಾಗಿದೆ. (ಅರಮಂಟಿಗೆ ಸಂ. 1. ಸಂ.1. ಪು. 8) ಕ್ರಿಶ. 1197 ರ ಒಂದು ಶಾಸನವು ಬಾಳೂರಿನ ಮುದ್ದುಗೌಡ ಸಲ್ಲೇಖನ ವ್ರತದಿಂದ ಮಡಿಯಲು ಆತನ ಸತಿ ಸಹಗಮನ ಕೈಗೊಂಡ ವಿಷಯ ತಿಳಿಸುತ್ತದೆ. ಶಾಸನ ಶಿಲ್ಪಿದಲ್ಲಿ ವ್ಯಾಸಪೀಠದ ಮುಂದೆ ಕುಳಿತ ಮುದ್ದುಗೌಡನನ್ನು ಅವನ ಬಳಿ ಸತಿ ಹೋದ ಅವನ ಹೆಂಡತಿಯನ್ನೂ ಚಿತ್ರಿಸಲಾಗಿದೆ. (ಕನ್ನಡ ಶಾಸನ ಶಿಲ್ಪ. ಪು. 270). ಹಾಗೆಯೇ ಶ್ರವಣಬೆಳ್ಗೊಳದ ಶ್ರೀ ನಯಕೀರ್ತಿ ದೇವರ ನಿಷಧಿ ಸ್ತಂಬ, ಪ್ರಭಾಚಂದ್ರ ದೇವನ ನಿಷಧಿ ಸ್ತಂಬ, ಗೋಪಣನ್ದಿಯ ನಿಷಧಿ ಸ್ತಂಭ ಮೊದಲದವುಗಳು ಚಿತ್ರವುಳ್ಳ ನಿಷಧಿಗಳಿಗೆ ಒಳ್ಳೆಯ ಮಾದರಿಗಳಾಗಿವೆ.

ಈ ಶಾಸನಗಳನ್ನು ನಿಲ್ಲಿಸುವಾದ ದಾನಪೂಜಾಭೀಷೇಕ ಮಾಡಿದ ಉದಾಹರಣೆ ಇದೆ. (EC.11.64). ಆ ನಿಶಿದಿಗೆಯಂ ನಿಲ್ಲಿಸಿ ಮಹಾಪೂಜೆಯ ಮಾಡಿ ಮಹದಾನ ಗೈದುದನ್ನು ಒಂದು ಶಾಸನ ಹೇಳಿದೆ (EC.11.118), ಅಲ್ಲದೆ ಅವುಗಳ ಅರ್ಚನೆಗೆ ಬಿಟ್ಟಂಥ ಕ್ಷೇತ್ರ (EC.V. My-185), ದಾನ(EC.V.My. 117)ಗಳನ್ನೂ ಶಾಸನಗಳು ಹೇಳುತ್ತಿವೆ. ಹೀಗಾಗಿ ಇವು ತೀರ್ಥಸ್ಥಾನಗಳೆಂದು ಪರಿಗಣಿಸಲ್ಪಟ್ಟವು. ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಮೇಘಚಂದ್ರನೆಂಬ ಮುನಿ ವೇರಂಬದಲ್ಲಿ ಮಡಿದ ಸ್ಥಳದ ಮಣ್ಣು ಔಷಧಿಯಾಗಿ ಸರ್ಪರುಜಾದಿ ಅತ್ಯುಗ್ರ ಪೀಡೆಗಳನ್ನೂ ಗುಣಮುಖ ಮಾಡುತ್ತಿತ್ತೆಂದು ಹೇಳಿದೆ. 'ವಾಸುಪೂಜ್ಯ ಬಟಾರರು ನಿಸಿದ್ಧಿಗೆ ಸಂದ ತೀರ್ಥಸ್ತಾನ ಮನಾದಮಾನುಂ ಶುದ್ದ ಪರಿಣಾಮದಿಂ ವಂದಿಸುತ್ತಿರ್ದ; 'ಚಂದ್ರಗುಪ್ತ ಮುನಿಯು ಭಟ್ಟಾರರ ನಿಸಿದಿಗೆಯ್ದು ಬಂದಿಸುತ್ತ' ಎಂಬ ವಡ್ಡಾರಾಧನೆಯ ಹೇಳಿಕೆಗಳು (ಪು. 90) ನಿಶಧಿಸ್ಥಾನಗಳು ತೀರ್ಥಸ್ಥಾನಗಳಾಗಿದ್ದುದ್ದನ್ನು ಸೂಚಿಸುತ್ತಿವೆ. ಇಂದಿಗೂ ಈ ನಿಷಧಿಗಳನ್ನು ಪೂಜಿಸುವುದುಂಟು. ಡಾ. ಎ.ಎನ್. ಉಪಾಧ್ಯೆಯವರ ಊರಾದ ಸದಲಗಾದಲ್ಲಿ ಚೈತ್ರಮಾಸದ ಮೊದಲ ದಿನ ಜೈನರು, ಜೈನರಲ್ಲದವರೂ ನಿಷಧಿ ಮಂಟಪಕ್ಕೆ ಹೋಗಿ ಪೂಜಿಸುವ ಸಂಪ್ರದಾಯ ಬಹಳ ದಿನದಿಂದ ಇದೆಯಂತೆ.

ಸಾಮಾನ್ಯವಾಗಿ ನಿಷಧಿ ಶಾಸನಗಳು ಘಟನೆಗಳನ್ನು ನಿರೂಪಿಸುವ ಚಿತ್ರ ಬರವಣಿಗೆಯನ್ನೊಳಗೊಂಡಿದ್ದರೂ ಕೆಲವು ಸುದೀರ್ಘವೂ ಕಾವ್ಯಮಯವೂ ಆಗಿವೆ. ಕ್ರಿ.ಶ. 974ರ ಅರಸು ನೊಳಂಬಾಂತಕನ ಶಾಸನ (EC. 11.5.974) ನಿಷಧಿಯ ಮೊದಲ ದೊಡ್ಡ ಶಾಸನ. ಹಾಗೆಯೇ ಗಂಗಾಚಾರಿ ಬರೆದ ಮಲ್ಲಿಷೇಣನ ನಿಷಧಿ ಶಾಸನ (EC.11.67.1129) 223 ಸಾಲುಗಳನ್ನೊಳಗೊಂಡಿದ್ದರೆ, ಕಾಮಾಚಾರಿ ಬರೆದ ಮಾಚಿಕಬ್ಬೆಯ ಶಾಸನ 224 ಸಾಲುಗಳನ್ನೊಳಗೊಂಡಿದೆ. ಇನ್ನೂ ಹಲವು ಶಾಸನಗಳು ಸೊಗಸಾದ ಕಾವ್ಯಾಂಶಗಳನ್ನೂ ಒಳಗೊಂಡಿವೆ. ಜೀನಧರ್ಮಾವಾಸಮಾ ದತ್ತು... ಚಾರು ಕರ್ಣಾಟದೇಶಂ' ಎಂಬ ಸುಪ್ರಸಿದ್ಧ ಪದ್ಯ ಹೊಂದಿದ ಗೋಪಗೌಡನ ನಿಷದಿ ಸಾಸನ (EC.VIII. Sr. 261, ಕುಪ್ಪಟೂರು 408). ಜಕ್ಕಲೆಯ ಸಮಾಧಿ ವಿಧಾನ ಬಣ್ಣಿಸುವ ಸಲೆ ಮೋಹಧ್ವಾಂತ..." (EC.VII. SK. 196) ಎಂಬ ಶಾಸನದ ಪದ್ಯಗಳಲ್ಲಿ ಕಾವ್ಯಧರ್ಮ, ಧರ್ಮಗಳು ಮೇಳೈಸಿವೆ. ಹಾಗೆಯೇ ಶ್ರವಣಬೆಳೊಳದ (EC.1159) ಇಂದ್ರ, ಹುಳ್ಳನಗುರು ದೇವಕೀರ್ತಿ ಪಂಡಿತ (EC.1164, 1163), ಸಾಧ್ವಿ ಹರ್ಯಲದೇವಿ, (EC. XII. 261) ಮೊದಲಾದವರ ಶಾಸನಗಳು ಕಾವ್ಯಮಯವಾಗಿದೆ. ಶಾಂತಲೆ ಮರಣವಪ್ಪಿದುದನ್ನು ಕೇಳಿ, ತಾಯಿ ಮಾಚಿಕಬ್ಬೆ ವೀರಸನ್ಯಾಸವನ್ನ ನೊಂತು ಪಂಡಿತ ಮರಣವಪ್ಪಿದುದನ್ನೂ ಶಾಸನಕಾರ (EC.11.143.1131) ಈ ರೀತಿ ಚಿತ್ರಿಸಿದ್ದಾನೆ.

ಅರೆಮಗಳ್ದಿರ್ದ್ದ ಕಣ್ಮಲರ್ಗ್ಗಳೋದುವ ಪಂಚಪರಮಜಿನೇಂದ್ರನಂ
ಸ್ಮರಿಯಿಸುಪೋಜೆ ಬನ್ದುಜನಮಂ ಬಿಡಿಪುನ್ನತಿ ಸನ್ಯಸಕ್ಕೆ ವಂ
ದಿರಲೊಸೆದೊಂದು ತಿಂಗಳುಪವಾಸದೊಳಿಂಬಿನೆ ಮಾಚಿಕಬ್ಬೆ ತಾಂ
ಸುರಗತಿಗೆಯ್ದಿದಲ್ ಸಕಲ ಭವ್ಯದ ಸನ್ನಿಧಿಯೊಳು ಸಮಾಧಿಯಿಂ'

ಕೊನೆಗೆ ಶಬ್ದಗಳು ಸಾಲದಾಗಿ 'ಇನ್ನೇನೆಂಬುದೊ ಮಾಚಿ ಕಬ್ಬೆಯೊಂದುನ್ನತಿಯಂ' ಎಂದು ಉದ್ಗಾರ ತೆಗೆದಿದ್ದಾನೆ. ಹಾಗೆಯೇ ಅಣ್ಣಾವರದ 'ಸಮ್ಯಕ್ತ್ವ ಕೌಮುದಿ'ಯ ಕರ್ತೃ– ಹುಬ್ಬಳ್ಳಿಯ ಚಿಕ್ಕಮಲ್ಲ ಶೆಟ್ಟಿಯ ಸಮಾಧಿ ಮರಣವನ್ನು ರಗಳೆಯಲ್ಲಿ ಬಣ್ಣಿಸಿದಾನೆ.

ಒಟ್ಟಾರೆ ಮಾನವನ ಬದುಕಿನ ಕೊನೆಯ ಘಟ್ಟ ಮರಣ. ಇದನ್ನು ಹೊಂದಲು ಜೈನರು ಕಂಡುಕೊಂಡ ಮಾರ್ಗ ಮಾತ್ರ ಅಭೂತಪೂರ್ವವಾದದು. ಅವರಲ್ಲಿ ಸಹಜ ಮರಣಹೊಂದುವುದಕ್ಕಿಂತ ಆಹ್ವಾನಿತ ಮರಣಕ್ಕೇ ಹೆಚ್ಚಿನ ಪ್ರಾಧಾನ್ಯತೆ. ಆದರೆ ಅದು ಮನೋದೌರ್ಬಲ್ಯದಿಂದ ಬರುವಂಥದ್ದಲ್ಲ, ಮನಸ್ಸಿನ ಸ್ಥಿರತೆಯಿಂದ ಬರುವಂಥದ್ದು. ಶರೀರದ ಮೇಲಿನ ಮೋಹವನ್ನು ಕಡಿಮೆಮಾಡುವುದು, ಧರ್ಮದ ಮೇಲಿನ ಮೋಹವನ್ನು ವೃದ್ಧಿಗೊಳಿಸುವುದು ಅವರ ಜೀವನದ ಗುರಿ. ಹೀಗೆ ಧರ್ಮಮಾರ್ಗದಲ್ಲಿ ನಡೆಯುತ್ತ ದೇಹವನ್ನು ಕೃಶಮಾಡಿ, ಧರ್ಮಧ್ಯಾನದಿಂದ ದೇಹತ್ಯಾಗ ಮಾಡುವುದೇ ಜೈನರ ಬದುಕಿನ ಆದರ್ಶ. ಇದನ್ನು ಅವರು ಹಲವಾರು ಶಾಸನಗಳ ಮೂಲಕ ಸಾರಿ ಹೇಳಿರುವರಲ್ಲದೆ ಸಾಧಿಸಿಯೂ ತೋರಿಸಿದ್ದಾರೆ. ಆದ್ದರಿಂದ ಅವರ ಈ ಶಾಸನಗಳಿಗೆ ಭಾರತೀಯ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನವಿದೆ.

❑❑

# ಕನ್ನಡ ಚಾರಿತ್ರಿಕ ಕಾಲಘಟ್ಟ ಮತ್ತು ಸಾಹಿತ್ಯ ಸಮ್ಮೇಳನ

- ವೀರಣ್ಣ ರಾಜೂರ

ಕನ್ನಡ-ಕನ್ನಡಿಗ-ಕರ್ನಾಟಕದ ಸಂರಕ್ಷಣೆ ಹಾಗೂ ಸಂವರ್ಧನೆಗೆ ನಿರಂತರ ನಿಷ್ಠೆಯಿಂದ ಶ್ರಮಿಸುತ್ತ, ಕರ್ನಾಟಕತ್ವದ ಅರಿವು, ಅಸ್ಮಿತೆಗಳನ್ನು ಕನ್ನಡಿಗರಲ್ಲಿ ನಿತ್ಯ ಜಾಗೃತಗೊಳಿಸುತ್ತ ಬಂದ ಮಹಾನ್ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ಅದರ ಸ್ಥಾಪನೆಯ ಸಂದರ್ಭ - ಅದೊಂದು ಅವಿಸ್ಮರಣೀಯ ಚಾರಿತ್ರಿಕ ಕಾಲಘಟ್ಟ, ಅದು ಕನ್ನಡ ನಾಡು-ನುಡಿ-ಸಾಹಿತ್ಯ-ಸಮಾಜ-ಸಂಸ್ಕೃತಿಗಳು ವಿಸ್ಮೃತಿಯ ಕೂಪದಲ್ಲಿ ಮುಳುಗಿ ತಮ್ಮತನದ ಅರಿವಿಲ್ಲದೆ ತೊಳಲಿ ಬಳಲುತ್ತಿದ್ದ ಬಂದಳಿಕೆಯ ವಿಷಮ ಸಮಯ. ಅದರಿಂದ ಮುಕ್ತಗೊಳ್ಳಲು ಕನ್ನಡಿಗರು ಆಗ ನಡೆಸಿದ ಬೌದ್ಧಿಕ-ಸಾಂಘಿಕ-ಹೋರಾಟ ರಮ್ಯ-ರೋಚಕ-ವಿಸ್ಮಯಕಾರಕ.

ಆ ಕಾಲಘಟ್ಟದ ಕನ್ನಡದ ಸ್ಥಿತಿಗತಿಗಳ ಸಿಂಹಾವಲೋಕನ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಅನಿವಾರ್ಯತೆಯ ಚಿಂತನ, ನನ್ನ ಈ ಪ್ರಬಂಧದ ಸಂಕಥನ.

"ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂಬ ಕವಿರಾಜಮಾರ್ಗಕಾರನ ಹೇಳಿಕೆ, ಕನ್ನಡ ನಾಡು-ನುಡಿ-ಸಾಹಿತ್ಯ-ಸಂಸ್ಕೃತಿಗಳ ಪ್ರಾಚೀನತೆ ಮತ್ತು ವ್ಯಾಪ್ತಿಯ ಬಗೆಗಿನ ತುಂಬ ಮಹತ್ವದ ಮಾತು; ಅಪರೂಪದ ಐತಿಹಾಸಿಕ ದಾಖಲೆ.

ಸಾವಿರದ ಇನ್ನೂರು ವರುಷಗಳಿಗೂ ಮೀರಿದ ಪ್ರಾಚೀನ ಇತಿಹಾಸವನ್ನು ಹೊಂದಿದ ಕನ್ನಡಭಾಷೆ-ಹಲ್ಮಿಡಿ ಶಾಸನದಲ್ಲಿ ಕಣ್ತೆರೆದು, ಕವಿರಾಜಮಾರ್ಗದಲ್ಲಿ ಉಸಿರಾಡಿ, ಪಂಪಾದಿ ಕವಿಗಳ ಕಾವ್ಯಗಳಲ್ಲಿ ನಲಿದಾಡಿ-ಇಂದಿನವರೆಗೆ ಅನೇಕ ಅವಸ್ಥಾಂತರ-ಅವಿಷ್ಕಾರಗಳಿಗೆ ಒಳಗಾಗುತ್ತ, ಶ್ರೀಮಂತ ಸಾಹಿತ್ಯ ಸೃಷ್ಟಿಗೆ ಸಮರ್ಥ ಮಾಧ್ಯಮವಾಗುತ್ತ ನಡೆದು ಬಂದಿದೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಅದರ ಭಾಷಾ ಅವಸ್ಥೆಗಳು, ಚಂಪು, ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಕೀರ್ತನ, ಶತಕ, ಅಷ್ಟಕ, ತಾರಾವಳಿ, ಗದ್ಯ ಎಂಬಂಥ ಅದರ ಸಾಹಿತ್ಯ ರೂಪಗಳು, ಆಗಮಿಕ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಕಾಲ್ಪನಿಕವೆಂಬ ವೈವಿಧ್ಯಮಯ ವಸ್ತು-ತಂತ್ರ-ದೃಷ್ಟಿ-ಧೋರಣೆಗಳು- ಈ ಭಾಷೆಯ ಹಿರಿಮೆ-ಗರಿಮೆಗಳನ್ನು ಸಾರುತ್ತ ನಿಂತಿವೆ. ಪಂಪ-ರನ್ನ, ಹರಿಹರ-ರಾಘವಾಂಕ, ಕುಮಾರವ್ಯಾಸ-ಚಾಮರಸ, ಲಕ್ಷ್ಮೀಶ-ರತ್ನಾಕರ, ಷಡಕ್ಷರಿಯಂಥ ಮಹಾಕವಿಗಳು, ಬಸವ-ಅಲ್ಲಮ-ಅಕ್ಕಮಹಾದೇವಿಯರಂಥ ಮಹಾ ಅನುಭಾವಿಗಳು, ಪುರಂದರ-ಕನಕರಂಥ ಹರಿದಾಸ ಶ್ರೇಷ್ಠರು ಪ್ರಾಚೀನ ಕನ್ನಡ ಸಾಹಿತ್ಯದ ಸಮೃದ್ಧಿಗೆ ಕಾರಣರಾಗಿದ್ದಾರೆ. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮೈಸೂರು ಮೊದಲಾದ ಕನ್ನಡ ಅರಸುಮನೆತನಗಳು ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಪೋಷಿಸುತ್ತ, ಬೆಳೆಸುತ್ತ ಬಂದಿವೆ. ಕನ್ನಡಕ್ಕೆ ಇಂದು ಶಾಸ್ತ್ರೀಯ ಸ್ಥಾನಮಾನ ದೊರೆಯಲಿಕ್ಕೆ ಇವೆಲ್ಲ ಮುಖ್ಯ ಕಾರಣವಾಗಿವೆ.

ಇಂಥ ಪ್ರಾಚೀನ ಶ್ರೀಮಂತ ಪರಂಪರೆ, ಸಮೃದ್ಧ ಸಾಹಿತ್ಯ ಸಂಪತ್ತನ್ನು ಹೊಂದಿದ್ದ ಕನ್ನಡಭಾಷೆ ೧೭, ೧೮ ನೆಯ ಶತಮಾನಗಳಲ್ಲಿ ತೀವ್ರವಾದ ಸಂಕಷ್ಟಕ್ಕೆ ಗುರಿಯಾಯಿತು.

ವಿಜಯನಗರ ಅರಸರ ಆಳ್ವಿಕೆಯ ನಂತರ ಕನ್ನಡನಾಡು ಅನೇಕ ಅನ್ಯಭಾಷಿಕ ಆಳರಸರ ಆಧೀನಕ್ಕೆ ಒಳಗಾಗಿ ಹರಿದು ಹಂಚಿಹೋಯಿತು. ತತ್ಕಾರಣವಾಗಿ ಆಯಾ ಅರಸರ ಭಾಷೆ ಆಡಳಿತದಲ್ಲಿ ಜಾರಿಗೊಂಡಿತು. ಅನಿವಾರ್ಯವಾಗಿ ಕನ್ನಡಿಗರು ತಮ್ಮ ಭಾಷೆಯ ಬಗೆಗೆ ಅವಜ್ಞೆ ತಾಳುವಂತಾಯಿತು. ಹೀಗಾಗಿ ಅವರ ಭಾಷೆ ಸಾಹಿತ್ಯಗಳ ಬೆಳವಣಿಗೆಗೆ ಸ್ಥಗಿತ ಸ್ಥಿತಿ ಉಂಟಾಯಿತು.

ಬ್ರಿಟಿಷ್ ಆಡಳಿತದಲ್ಲಿ, ಕನ್ನಡ ಭಾಷಿಕರು ಅಧಿಕವಾಗಿದ್ದ ಪ್ರಾಂತ್ಯಗಳು ೨೦ ಘಟಕಗಳಲ್ಲಿ ಹಂಚಿಹೋಗಿದ್ದವು.

ಮೈಸೂರು ಸಂಸ್ಥಾನ, ಮದರಾಸ್ ಪ್ರಾಂತ್ಯ, ಮುಂಬಯಿ ಪ್ರಾಂತ್ಯ, ಹೈದರಾಬಾದ್ ಸಂಸ್ಥಾನ, ಕೊಡಗು ಜಿಲ್ಲೆ, ಕೊಲ್ಲಾಪುರ ಸಂಸ್ಥಾನ, ಸಾಂಗಲಿ ಸಂಸ್ಥಾನ, ಮೀರಜ್ ಸಂಸ್ಥಾನ, ಕಿರಿ ಮೀರಜ್ ಸಂಸ್ಥಾನ, ಹಿರಿ ಕುಂದರವಾಡ ಸಂಸ್ಥಾನ, ಕಿರಿ ಕುಂದರವಾಡ ಸಂಸ್ಥಾನ, ಜಮಖಂಡಿ ಸಂಸ್ಥಾನ, ಮುಧೋಳ ಸಂಸ್ಥಾನ, ಜತ್ ಸಂಸ್ಥಾನ, ಅಕ್ಕಲಕೋಟೆ ಸಂಸ್ಥಾನ, ಔಂಧ ಸಂಸ್ಥಾನ, ರಾಮದುರ್ಗ ಸಂಸ್ಥಾನ, ಸೊಂಡೂರ ಸಂಸ್ಥಾನ, ಸವಣೂರ ಸಂಸ್ಥಾನ,

ಸಂಯೋಜಕರು, ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಬೆಂಗಳೂರು, ಬೆಳಗಾವಿ ಮತ್ತು ಬಳ್ಳಾರಿ ದಂಡು ಪ್ರದೇಶಗಳು.

ಅವುಗಳಲ್ಲಿ ಪ್ರಮುಖವಾದವು ಮೈಸೂರು, ಮದರಾಸ್, ಹೈದರಾಬಾದ್ ಮತ್ತು ಮುಂಬಯಿ ಪ್ರಾಂತಗಳು,

ಮೈಸೂರು ಸಂಸ್ಥಾನದ ಅಡಿಯಲ್ಲಿ ಮೈಸೂರು, ಚಿಕ್ಕಮಗಳೂರು, ಕಡೂರು, ಬೆಂಗಳೂರು, ತುಮಕೂರು, ಶಿವಮೊಗ್ಗ, ಚಿತ್ರದುರ್ಗ, ಹಾಸನ, ಕೋಲಾರ ಜಿಲ್ಲೆಗಳು ಸೇರಿದ್ದರೆ, ಮದರಾಸ್ ಪ್ರಾಂತ್ಯದ ಅಡಿಯಲ್ಲಿ ಬಳ್ಳಾರಿ, ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳು; ಹೈದರಾಬಾದ್ ಸಂಸ್ಥಾನದಡಿಯಲ್ಲಿ ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಜಿಲ್ಲೆಗಳು; ಮುಂಬೈ ಪ್ರಾಂತ್ಯದ ಅಡಿಯಲ್ಲಿ ಧಾರವಾಡ, ಬಿಜಾಪುರ, ಬೆಳಗಾವಿ ಮತ್ತು ಉತ್ತರಕನ್ನಡ ಜಿಲ್ಲೆಗಳು ಸೇರ್ಪಡೆಯಾಗಿದ್ದವು.

ಮೈಸೂರು ಸಂಸ್ಥಾನ ನೇರವಾಗಿ ಮಹಾರಾಜರ ಆಡಳಿತದಲ್ಲಿ ಇದ್ದ ಕಾರಣ ಅಲ್ಲಿಯ ಕನ್ನಡಿಗರು ನೆಮ್ಮದಿಯಿಂದ ಇರಲು ಸಾಧ್ಯವಾಯಿತು. ಜನಸಮುದಾಯದ ಅಭಿವೃದ್ಧಿಗೆ ಅವರು ಅನೇಕ ಯೋಜನೆಗಳನ್ನು ಹಾಕಿದ್ದರು. ಜನರ ಜೀವನಮಟ್ಟ ಸುಧಾರಿಸಲು ಶಿಕ್ಷಣವೇ ಮುಖ್ಯವೆಂದು ಅರಿತಿದ್ದ ಅವರು ಅನೇಕ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದರು. ೧೯೧೪ ರಲ್ಲಿ ಒಂದೇ ವರ್ಷದಲ್ಲಿ ಒಂದು ಸಾವಿರ ಪ್ರಾಥಮಿಕ ಶಾಲೆಗಳನ್ನು ಆರಂಭಿಸಲು ಅನುಮತಿ ನೀಡಿದ್ದು ಅವರ ಶಿಕ್ಷಣಪ್ರೇಮಕ್ಕೆ ಸಾಕ್ಷಿಯಾಗಿದೆ. (ಕನಿಷ್ಠ ೧೦ ಮಕ್ಕಳು ಹಾಜರಾಗುವ ಕಡೆಯಲ್ಲಿ ಒಂದು ಶಾಲೆ ಆರಂಭಿಸಲು ಆದೇಶ ನೀಡಿದರಂತೆ). ಹೀಗಾಗಿ ಜನಸಾಮಾನ್ಯರ ಮಟ್ಟದಲ್ಲಿ ಕನ್ನಡ ಬಳಕೆ ಅಲ್ಲಿ ಯಶಸ್ವಿಯಾಯಿತು. ಅನೇಕ ಕನ್ನಡ ಕೃತಿಗಳು ರಚನೆಯಾದವು. ಸಾಹಿತ್ಯ-ಸಂಸ್ಕೃತಿಗಳು ಪುರೋಭಿವೃದ್ಧಿ ಹೊಂದಿದವು.

ಮದ್ರಾಸ್ ಸಂಸ್ಥಾನದ ಆಡಳಿತಕ್ಕೆ ಒಳಗಾಗಿದ್ದ ಬಳ್ಳಾರಿ ಜಿಲ್ಲೆಯಲ್ಲಿ ತೆಲುಗು ತನ್ನ ಪ್ರಾಬಲ್ಯವನ್ನು ಸ್ಥಾಪಿಸಲು ಪ್ರಯತ್ನಿಸಿತಾದರೂ ಸ್ಥಳೀಯ ಪ್ರಜ್ಞಾವಂತ ಕನ್ನಡಿಗರ ಹೋರಾಟ ಕಾರಣವಾಗಿ ಅದು ಸಾಧ್ಯವಾಗಲಿಲ್ಲ. ಕನ್ನಡಿಗರು ಇಲ್ಲಿ ತಮ್ಮ ಭಾಷೆ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಸಫಲರಾದರು. ದಕ್ಷಿಣ ಕನ್ನಡ ಜಿಲ್ಲೆಯ ಜನರ ಮನೆಮಾತು ತುಳುವಾದರೂ ಕನ್ನಡವನ್ನು ಅವರು ತಮ್ಮ ವ್ಯಾವಹಾರಿಕ ಭಾಷೆಯಾಗಿ ಬಳಸಿ-ಉಳಿಸಿಕೊಂಡು ನಡೆದರು.

ಹೈದ್ರಾಬಾದ್ ಸಂಸ್ಥಾನ ನಿಜಾಮರ ಆಧಿಪತ್ಯಕ್ಕೆ ಒಳಗಾಗಿದ್ದ ಕಾರಣ ಇದರ ಅಡಿಯಲ್ಲಿದ್ದ ಬೀದರ್, ಗುಲಬರ್ಗಾ, ರಾಯಚೂರು ಕೊಪ್ಪಳ ಜಿಲ್ಲೆಗಳಲ್ಲಿ ಉರ್ದು ಭಾಷೆ ಪ್ರಾಬಲ್ಯ ಪಡೆದಿತ್ತು. ಆಡಳಿತ ಮತ್ತು ಶಿಕ್ಷಣ ಮಾಧ್ಯಮದಲ್ಲಿ ಅದು ಜಾರಿಗೊಂಡು, ಕನ್ನಡ ಭಾಷೆ ಇಲ್ಲಿ ಮೂಲೆಗುಂಪಾಗಿತ್ತು.

ಮುಂಬೈ ಪ್ರಾಂತ್ಯದ ಕನ್ನಡ ಭಾಷೆಗಳೆನಿಸಿದ್ದ ಧಾರವಾಡ, ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಪೇಶ್ವೆಯವರ ಆಡಳಿತದಿಂದಾಗಿ ಮರಾಠಿ ಭಾಷೆ ಆಧಿಪತ್ಯ ಸಾಧಿಸಿತ್ತು. ಹೀಗಾಗಿ ಈ ಭಾಗವನ್ನು 'ದಕ್ಷಿಣ ಮರಾಠಾ ಸಂಸ್ಥಾನ'ವೆಂದು ಕರೆಯಲಾಗುತ್ತಿತ್ತು. ಮರಾಠಿ ಇಲ್ಲಿ ಸಾರ್ವತ್ರಿಕವಾದ ವ್ಯವಹಾರ ಮತ್ತು ಬರಹದ ಭಾಷೆಯಾಗಿ ಸಾರ್ವಭೌಮತ್ವ ಪಡೆದು, ಕನ್ನಡ ಕೇವಲ ಸಂತೆ-ಪೇಟೆ, ಹಳ್ಳಿಯ ಮನೆಮಾರುಗಳಲ್ಲಿ ಮಾತ್ರ ಮಾತನಾಡುವ ಭಾಷೆಯಾಗಿ ಸಂಕುಚಿತಗೊಂಡಿತ್ತು. ಕನ್ನಡದ ಅಕ್ಷರಭ್ಯಾಸ ಇಲ್ಲದಂತಾಗಿತ್ತು.

ಇಂಥ ವಿಷಮ ಮತ್ತು ಅರಕ್ಷಿತ ಹಾಗೂ ಅನಾಥ ಪರಿಸ್ಥಿತಿಯಲ್ಲಿ ಸಿಕ್ಕಿ ನೋವನ್ನೇ ಉಂಡುಟ್ಟು ಬದುಕುತ್ತಿದ್ದ ಕನ್ನಡಿಗರು ಒಂದಾಗಲು ಮತ್ತು ತಮ್ಮದೇ ಆದ ಆಡಳಿತ ಪ್ರದೇಶವನ್ನು ಪಡೆಯಲು ಹೋರಾಡಬೇಕಾದ ಅನಿವಾರ್ಯತೆ ೧೯ನೇ ಶತಮಾನದ ಕೊನೆಯ ಅವಧಿಯಲ್ಲಿ ಸೃಷ್ಟಿಯಾಗಿತ್ತು.

ಅದು ಮೊದಲು ಆರಂಭವಾದದ್ದು-ಕನ್ನಡಕ್ಕೆ ಅನಾಥ ಸ್ಥಿತಿ ಬಂದೊದಗಿದ್ದ ಮುಂಬಯಿ ಕರ್ನಾಟಕದಲ್ಲಿ. ಅದಕ್ಕೆ ಚಾಲನೆ ನೀಡಿದವನು ಇಂಗ್ಲಿಷ್ ಶಿಕ್ಷಣ ಅಧಿಕಾರಿ ಡಬ್ಲ್ಯೂ.ಎ. ರಸೆಲ್. ಧಾರವಾಡ ಪ್ರದೇಶವನ್ನು 'ಇದು ಕನ್ನಡ ನೆಲ' ಎಂದು ಹೇಳಿದ ಆತ ಕನ್ನಡ ಶಾಲೆಗಳ ಸ್ಥಾಪನೆಗೆ ಅನುವು ಮಾಡಿಕೊಟ್ಟನು. ಡೆಪ್ಯೂಟಿ ಚೆನ್ನಬಸಪ್ಪ ಇದಕ್ಕೆ ಕಂಕಣ ಕಟ್ಟಿ ನಿಂತರು. ಕನ್ನಡ ಪಠ್ಯಪುಸ್ತಕಗಳ ರಚನೆಯಾದವು. ಶಿಕ್ಷಕರ ತರಬೇತಿಗಾಗಿ ಟ್ರೇನಿಂಗ್ ಕಾಲೇಜು ಸ್ಥಾಪನೆಯಾಯಿತು. 'ಮಠ ಪತ್ರಿಕೆ' ಪ್ರಕಟವಾಗತೊಡಗಿತು. ಕ್ರಮೇಣ ಕನ್ನಡ ಪ್ರಜ್ಞೆ ಮೂಡತೊಡಗಿತು.

ಇದಾದ ನಂತರ ನಡೆದ ಈ ಭಾಗದ ಮತ್ತೊಂದು ಅಚ್ಚಳಿಯದ ಮಹತ್ವದ ಘಟನೆ, ಧಾರವಾಡದಲ್ಲಿ 'ಕರ್ನಾಟಕ ವಿದ್ಯಾವರ್ಧಕ ಸಂಘ' ಸ್ಥಾಪನೆ. ೧೮೯೦ರಲ್ಲಿ. ರಾ.ಹ. ದೇಶಪಾಂಡೆಯವರ ಕನಸಿನ ಕೂಸಾಗಿ ಹುಟ್ಟಿದ ಇದು ಉನ್ನತ ಧ್ಯೇಯೋದ್ದೇಶಗಳನ್ನು ಇಟ್ಟುಕೊಂಡು ಕನ್ನಡದ ಕೈಂಕರ್ಯಕ್ಕೆ ತೊಡಗಿತು. ಆರಂಭದಲ್ಲಿ-ಸೃಜನಾತ್ಮಕ ಕನ್ನಡ ಕೃತಿಗಳ ರಚನೆ, ಗ್ರಂಥಕರ್ತರಿಗೆ ಇನಾಮು ಕೊಡುವುದು, ಗ್ರಂಥಾಲಯ ಸ್ಥಾಪಿಸುವುದು, ನಿಯತಕಾಲಿಕೆ ಹೊರಡಿಸುವುದು, ಲೇಖನ, ಭಾಷಣ ಸ್ಪರ್ಧೆ ಏರ್ಪಡಿಸುವುದು ಹಾಗೂ ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸುವುದು-ಆ ಮೂಲಕ ಕನ್ನಡಿಗರಲ್ಲಿ ಕನ್ನಡದ ಅರಿವು ಮೂಡಿಸುವುದು ಇದರ ಮೂಲ ಉದ್ದೇಶವಾಗಿದ್ದರೆ, ಮುಂದೆ ಅದು ಕನ್ನಡದ ಎಲ್ಲ ಸಮಸ್ಯೆಗಳಿಗೆ ಸ್ಪಂದಿಸುವ, ಕನ್ನಡಪರ ಎಲ್ಲ ಹೋರಾಟಗಳಿಗೆ ತೊಡಗುವ ಮುಖ್ಯ ವೇದಿಕೆಯಾಗಿ ಮಾರ್ಪಟ್ಟಿತು. ಭಾರತ ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣ ಚಳುವಳಿ, ಗೋಕಾಕ್ ವರದಿ ಜಾರಿ ಭಾಷಾ ಚಳುವಳಿ, ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆ-ಇತ್ಯಾದಿಗಳಿಗೆ ಪ್ರೇರಕಶಕ್ತಿಯಾಗಿ ನಿಂತಿತು. ಹೀಗೆ ಕನ್ನಡ ನಾಡಿನ ಅರುಣೋದಯ ಕಾಲದಲ್ಲಿ ಕನ್ನಡದ ಧ್ವಜವನ್ನು ಮೊದಲು ಬಲವಾಗಿ ಎತ್ತಿ ಹಿಡಿದ

ಈ ಸಂಸ್ಥೆಗೆ ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ಅತ್ಯುನ್ನತ ಸ್ಥಾನ ಮೀಸಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ವರೂಪ, ಕಾರ್ಯವ್ಯಾಪ್ತಿಗಳ ನಿರ್ಧಾರಕ್ಕೆ, ಸಂಘಟನೆಯ ರೀತಿ ನೀತಿಗಳಿಗೆ ಈ ಕರ್ನಾಟಕ ವಿದ್ಯಾವರ್ಧಕ ಸಂಘ ಒಂದು ಉತ್ತಮ ಮಾದರಿಯಾಗಿ ನಿಂತುದು ಹೆಮ್ಮೆಯ ಸಂಗತಿ.

ಹೀಗೆಯೇ ಕನ್ನಡ ಭಾಷೆ-ಸಾಹಿತ್ಯಗಳ ಏಳಿಗೆಯನ್ನು ಉದ್ದೇಶವಾಗಿಟ್ಟುಕೊಂಡು ಚಾಮರಾಜೇಂದ್ರ ಒಡೆಯರ್‌ರವರ ಪ್ರೇರಣೆಯಿಂದ ಮೈಸೂರಿನಲ್ಲಿ ಸ್ಥಾಪಿತವಾದ 'ಕರ್ನಾಟಕ ಭಾಷೋಜ್ಜೀವಿನಿ ಸಭಾ'; ಕನ್ನಡಿಗರ ಐಕ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡ ಮುಂಬೈ ಕನ್ನಡಿಗರಿಂದ ಆರಂಭವಾದ 'ಬೊಂಬಾಯಿ ಕರ್ನಾಟಕ ಸಭೆ', ಕರ್ನಾಟಕ ಏಕೀಕರಣವನ್ನು ಪ್ರಧಾನ ವಿಷಯವಾಗಿ ಇಟ್ಟುಕೊಂಡು ಧಾರವಾಡದಲ್ಲಿ ಆರಂಭವಾದ 'ಕರ್ನಾಟಕ ಸಭೆ'- ಮೊದಲಾದವು ಕನ್ನಡ ಸಾಹಿತ್ಯ ಪರಿಷತ್ತು ಆರಂಭವಾಗುವ ಮುನ್ನ ಕನ್ನಡದ ಜಾಗೃತಿಯ ಗಂಟೆಯನ್ನು ಮೊಳಗಿಸಿ, ಕನ್ನಡತ್ವದ ಎಚ್ಚರವನ್ನು ಮೂಡಿಸಿದ ಸಾಂಸ್ಕೃತಿಕ ಸಂಸ್ಥೆಗಳು.

ಕನ್ನಡ ಸಾಹಿತ್ಯ ಪರಿಷತ್ತು ಸಮಗ್ರ ಕರ್ನಾಟಕದ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹುಟ್ಟಿದ ಸಮಸ್ತ ಕನ್ನಡಿಗರ ಸ್ವತಂತ್ರ ಸಂಸ್ಥೆ. ಇದರ ಜನನದ ಕಥೆ ಕುತೂಹಲಕಾರಿಯಾಗಿದೆ. ೧೯೦೯ರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನಕ್ಕೆ ಚೀಫ್ ಇಂಜನೀಯರಾದರು. ಅವರ ಸಲಹೆಯ ಮೇರೆಗೆ 'ಎಕನಾಮಿಕ್ ಕಾನ್‌ಫರೆನ್ಸ್' ಎಂಬ ಸಂಪದಭಿವೃದ್ಧಿ ವಿಚಾರ ಸಂಸ್ಥೆಯೊಂದು ಸ್ಥಾಪಿತವಾಯಿತು. ಅದರ ಅಂಗವಾಗಿ ಮೂರು ಸಮಿತಿಗಳು ರಚನೆಗೊಳ್ಳುತ್ತವೆ. ಅದರಲ್ಲಿ 'ವಿದ್ಯಾ ಸಮಿತಿ'ಯೂ ಒಂದು. ಆ ಸಮಿತಿಯಲ್ಲಿ – ಮೈಸೂರಿನಲ್ಲಿ ಒಂದು ವಿಶ್ವವಿದ್ಯಾನಿಲಯ ಸ್ಥಾಪಿಸಬೇಕು ಮತ್ತು 'ಕನ್ನಡ ಅಕಾಡೆಮಿ' ಒಂದನ್ನು ಅಸ್ತಿತ್ವಕ್ಕೆ ತರಬೇಕು ಎರಡು ವಿಷಯಗಳು ಚರ್ಚೆಗೆ ಬಂದವು. ಕನ್ನಡ ಅಕಾಡೆಮಿ ರಚನೆಗೆ ಸಂಬಂಧಿಸಿ ನಾಡಿನ ವಿದ್ವಜ್ಜನರ ಅಭಿಪ್ರಾಯ ಪಡೆಯಲು ನಿರ್ಧರಿಸಲಾಯಿತು. ೧೯೧೨-೧೩ ರಲ್ಲಿ ಆ ಕುರಿತು ಚರ್ಚಿಸಲು ಒಂದು ಉಪನ್ಯಾಸ ಏರ್ಪಡಿಸಲಾಯಿತು. ೧೯೧೪ ರಲ್ಲಿ ನಡೆದ 'ದಿ ಮೈಸೂರ್ ಎಕನಾಮಿಕ್ ಕಾನ್‌ಫರೆನ್ಸ್' ಸಭೆಯಲ್ಲಿ 'ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಒಂದು ಸಂಸ್ಥೆ ಸ್ಥಾಪನೆಯಾಗಬೇಕು' ಎಂಬ ವಿಷಯ ಮಂಡಿತವಾಗಿ, ಸರ್ವಾನುಮತದಿಂದ ಸ್ವೀಕೃತವಾಯಿತು. ಆ ಕುರಿತು ರೂಪರೇಷೆ ಸಿದ್ಧಪಡಿಸಲು ಮೂರು ಜನ ವಿದ್ವಾಂಸರ ಒಂದು ಉಪಸಮಿತಿ ರಚನೆಗೊಂಡಿತು. (ರಾವ್ ಬಹಾದ್ದೂರ್ ಎಂ. ಶಾಮರಾವ್, ಕರ್ಪೂರ ಶ್ರೀನಿವಾಸರಾವ್, ಪಿ.ಎಸ್. ಅಚ್ಯುತರಾವ್) ಆ ಸಮಿತಿ ಮೂರು ಸಲ ಸಭೆ ಸೇರಿ (ಜನವರಿ ೭, ಮಾರ್ಚ್ ೨ ಮತ್ತು ೨೨) ಚರ್ಚಿಸಿ ಮೇ ೩ ರಿಂದ ೬ ರವರೆಗೆ ನಾಲ್ಕು ದಿವಸ ಸಮ್ಮೇಳನ ಒಂದನ್ನು ಏರ್ಪಡಿಸುವುದು, ಅದರಲ್ಲಿ ಕರ್ನಾಟಕ ಎಲ್ಲ ಭಾಗಗಳಿಂದ ಪ್ರತಿನಿಧಿಗಳನ್ನು ಆಹ್ವಾನಿಸುವುದು, ಐದು ವಿಷಯಗಳ ಬಗ್ಗೆ ಲೇಖನಗಳನ್ನು ತರಿಸುವುದು, ಅವುಗಳನ್ನು ಸಮ್ಮೇಳನದಲ್ಲಿ ಮಂಡಿಸಿ ಚರ್ಚಿಸುವುದು ಎಂದು ನಿರ್ಣಯ ಕೈಗೊಂಡಿತು.

ಬೆಂಗಳೂರು ಗವರ್ನಮೆಂಟ್ ಹೈಸ್ಕೂಲಿನ ವಿಶಾಲವಾದ ಹಜಾರದಲ್ಲಿ ಮೇ ೩ ರಂದು ಸಮ್ಮೇಳನ ಆರಂಭವಾಯಿತು. ಧಾರವಾಡ, ವಿಜಾಪುರ, ಬೆಳಗಾವಿ, ಕಾರವಾರ, ಬೊಂಬಾಯಿ ನಗರ, ಬೊಂಬಾಯಿ ಅಧಿಪತ್ಯದ ದೇಶಿಯ ಸಂಸ್ಥಾನಗಳು, ಮದರಾಸು ನಗರ, ಬಳ್ಳಾರಿ, ದಕ್ಷಿಣ ಕನ್ನಡ, ಮೈಸೂರು ಸಂಸ್ಥಾನದ-ಅನೇಕ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದ್ದರು. ಪ್ರಥಮದಲ್ಲಿ ಎಚ್.ವಿ. ನಂಜುಂಡಯ್ಯ ಅವರನ್ನು ಅಧ್ಯಕ್ಷರನ್ನಾಗಿ ಒಮ್ಮತದಿಂದ ಆಯ್ಕೆ ಮಾಡಲಾಯಿತು. ಪಿ.ಜಿ. ಹಳಕಟ್ಟಿಯವರ ಸ್ವರಚಿತ ದೇವತಾ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ನಂತರ ಗಣ್ಯರು ಕಳಿಸಿದ ಶುಭಾಶಯ ಪತ್ರ ಓದಲಾಯಿತು. ಆಮೇಲೆ ನಂಜುಂಡಯ್ಯನವರು ಅಧ್ಯಕ್ಷೀಯ ಭಾಷಣ ಮಾಡುತ್ತ-

"ಈ ಸಂಸ್ಥಾನದಲ್ಲಿ ಕನ್ನಡವೇ ಪ್ರಮುಖವಾದ ಭಾಷೆಯಾಗಿದೆ... ಕನ್ನಡ ಭಾಷೆಯು ಮೈಸೂರು ಸಂಸ್ಥಾನಕ್ಕೆ ಮಾತ್ರವೇ ಸೇರಿರುವುದಿಲ್ಲ. ಕನ್ನಡವನ್ನು ಮಾತನಾಡುವರಲ್ಲಿ ಅರ್ಧಪಾಲಿಗಿಂತಲೂ ಹೆಚ್ಚುಮಂದಿ ಸಂಸ್ಥಾನದ ಸುತ್ತಮುತ್ತಲೂ ಇರುವ ಬ್ರಿಟಿಷ್ ಇಂಡಿಯಾದಲ್ಲಿಯೂ, ಹೈದರಾಬಾದ್ ಸಂಸ್ಥಾನದಲ್ಲಿಯೂ ವಾಸಿಸುತ್ತಿರುವರು... ಭಾಷಾಭಿವೃದ್ಧಿ, ಗ್ರಂಥರಚನೆ ಇವುಗಳ ವಿಷಯದಲ್ಲಿ ಕನ್ನಡಿಗರೆಲ್ಲರನ್ನೂ ಒಟ್ಟುಗೂಡಿಸಿದರೆ ವಿಶೇಷ ಪ್ರಯೋಜನ ಉಂಟು. ಈ ಉದ್ದೇಶದಿಂದಲ್ಲೇ ಕನ್ನಡ ಭಾಷಾಭಿವೃದ್ಧಿಯಲ್ಲಿ ಆಸಕ್ತರಾಗಿಯೂ, ಸಮರ್ಥರಾಗಿಯೂ, ಕಾರ್ಯಭಾರವನ್ನು ವಹಿಸಲು ತಕ್ಕವರಾಗಿಯೂ ಇರುವ ಜನಗಳು ಸೇರಿ ಅನ್ಯೋನ್ಯ ಸಹಾಯದಿಂದ ಒಟ್ಟುಗೂಡಿ ಕೆಲಸ ಮಾಡತಕ್ಕ ಒಂದು ಸಭೆಯನ್ನು ಸರ್ಕಾರದ ಸಂಬಂಧವಿಲ್ಲದೆ ನಿರ್ಮಿಸಬೇಕೆಂದು ಈ ಸಮ್ಮೇಲನವನ್ನು ಏರ್ಪಾಟು ಮಾಡಲಾಗಿದೆ." ಎಂದು ತಿಳಿಸಿದರು. (ಅಧ್ಯಕ್ಷರ ಭಾಷಣ ಇಂಗ್ಲಿಷಿನಲ್ಲಿದ್ದರೂ ಅದರ ಹೂರಣವೆಲ್ಲ ಕನ್ನಡ ಭಾಷೆ, ಸಾಹಿತ್ಯ, ಜನರ ಐಕ್ಯತೆ ಇತ್ಯಾದಿಯೇ ಆಗಿತ್ತು.)

ಆಮೇಲೆ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ನಾಲ್ಕು ಜನರಿಂದ ಪ್ರಬಂಧ ಮಂಡನೆಯಾಯಿತು. ಅನಂತರ ಮುಂದಿನ ದಿನಗಳ ಕಾರ್ಯಕ್ರಮಗಳನ್ನು ಗೊತ್ತುಪಡಿಸಿ ವಿಷಯ ನಿರ್ಧರಿಸಲು ವಿಷಯ ನಿರ್ಧಾರಕ ಮಂಡಳಿ ರಚಿತವಾಯಿತು. ಅದರಲ್ಲಿ ಬೇರೆ ಬೇರೆ ಪ್ರಾಂತದ ಒಟ್ಟು ೨೦ ಜನ ಸದಸ್ಯರಿದ್ದರು.

ಎರಡನೆಯ ದಿನದ ಕಾರ್ಯಕ್ರಮ ಕೆ.ಪಿ. ಪುಟ್ಟಣ್ಣಶೆಟ್ಟಿ ಅವರ ಅಧ್ಯಕ್ಷತೆಯಲ್ಲಿ ನಡೆಯುತ್ತವೆ. ಅದರಲ್ಲಿ ಕೆಳಗಿನ

ಮೂರು ಅಂಶಗಳು ತೀರ್ಮಾನಗೊಳ್ಳುತ್ತವೆ.

೧. ಕರ್ನಾಟಕ ಸಾಹಿತ್ಯ ಪರಿಷತ್ತು ಅಥವಾ ಕನ್ನಡ ಅಕಾಡೆಮಿಯನ್ನು ಬೆಂಗಳೂರಿನಲ್ಲಿ ಸ್ಥಾಪಿಸುವುದು.

೨. ಬೊಂಬಾಯಿ, ಮದರಾಸು, ಹೈದರಾಬಾದು ಮತ್ತು ಕೊಡಗು ಪ್ರಾಂತಗಳಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಶಾಖೆಗಳಿರಬೇಕು.

೩. ಎಂ. ವೆಂಕಟಕೃಷ್ಣಯ್ಯ, ಆರ್. ಎಚ್. ದೇಶಪಾಂಡೆ ಮೊದಲಾದ ೭ ಜನ ಸೇರಿ ಪರಿಷತ್ತಿನ ರಚನಾಕ್ರಮ ಮತ್ತು ನಿಯಮಗಳ ಮಸೂದೆಯನ್ನು ರಚನೆಮಾಡಿ ಮಾರನೆಯ ದಿನವೇ ಒಪ್ಪಿಸಬೇಕು.

ಸಮ್ಮೇಲನದ ೩ ಮತ್ತು ೪ ನೆಯ ದಿನದ ಅಧ್ಯಕ್ಷತೆಯನ್ನು ಕರ್ಪೂರ ಶ್ರೀನಿವಾಸರಾವ್ ವಹಿಸಿದ್ದರು. ೯ ನಿರ್ಣಯಗಳನ್ನು ಮಂಡಿಸಲಾಯಿತು. ಈ ನಿರ್ಣಯಗಳು ಐತಿಹಾಸಿಕ ಮಹತ್ವ ಪಡೆದಿದ್ದು, ಶಿಕ್ಷಣ ಮತ್ತು ವ್ಯವಹಾರದಲ್ಲಿ ಕನ್ನಡ ಬಳಕೆಯಾದಂತೆ ತಾನೇ ತಾನಾಗಿ ಭಾಷೆಯ ಬಗೆಗೆ ಅಭಿಮಾನ ಮೂಡಿ ವ್ಯಾಪಕವಾಗಿ ಹರಡಲು ಕನ್ನಡಿಗನೇ ಮುಂದಾಗುತ್ತಾನೆಂಬ ದೂರದೃಷ್ಟಿಯಿಂದ ಕೂಡಿದವಾಗಿವೆ. ಸಮ್ಮೇಳನದ ಮೂರನೆಯ ದಿನ ಪರಿಷತ್ತಿನ ರಚನಾಕ್ರಮವೂ, ನಿಬಂಧನೆಗಳೂ ಚರ್ಚಿತವಾಗಿ ಒಪ್ಪಿಗೆ ಪಡೆದವು. ನಾಲ್ಕನೆಯ ದಿನ ಕಾರ್ಯಕಾರಿ ಮಂಡಳಿ ಚುನಾವಣೆ ನಡೆಯಿತು. ಆಯ್ಕೆಯಾದ ಕಾರ್ಯಕಾರಿ ಮಂಡಳಿಯ ಹೆಸರುಗಳನ್ನು ಪ್ರಕಟಿಸಲಾಯಿತು. ಬೇರೆ ಬೇರೆ ಭಾಗದ ಒಟ್ಟು ೩೦ ಜನ ಸಮಿತಿ ಸದಸ್ಯರಾದರು.

ಹೀಗೆ ಕನ್ನಡ ಸಾಹಿತ್ಯ ಪರಿಷತ್ತು ೪ ದಿವಸ ಸಮ್ಮೇಳನ ನಡೆಸುವುದರೊಂದಿಗೆ ೧೯೧೫ ಮೇ ೫ ರಂದು ಅಸ್ತಿತ್ವಕ್ಕೆ ಬರುತ್ತದೆ. ಆ ಪೂರ್ವದಲ್ಲಿ ನಡೆದ ಸಭೆಗಳು, ಹಿರಿಯರ ಚಿಂತನೆಗಳು ಸಮ್ಮೇಲನದಲ್ಲಿ ಮೂರ್ತಗೊಂಡು ಸಾಹಿತ್ಯ ಪರಿಷತ್ತು ರೂಪ ಪಡೆಯಿತು. ಮುಂದೆ ಅದು ವರ್ಷದಿಂದ ವರ್ಷಕ್ಕೆ ತನ್ನ ಮೈಯನ್ನು ಹಿಗ್ಗಿಸಿಕೊಳ್ಳುತ್ತ, ಇಡಿ ಕರ್ನಾಟಕವನ್ನು ವ್ಯಾಪಿಸಿತು. ಎಲ್ಲ ಕನ್ನಡ ಮನಸ್ಸುಗಳನ್ನು ತನ್ನತ್ತ ಸೆಳೆದುಕೊಂಡಿತು. ಕನ್ನಡದ–ಕರ್ನಾಟಕದ ಎಲ್ಲ ಸಮಸ್ಯೆಗಳಿಗೆ ಎದೆಯೊಡ್ಡಿ ನಿಂತು ಹೋರಾಟ ನಡೆಸಿತು.

ಕನ್ನಡ ಸಾಹಿತ್ಯ ಪರಿಷತ್ತಿಗೆ ಈಗ ೯೬ ವರ್ಷದ ತುಂಬು ಜೀವನ. ಇದುವರೆಗೆ ಬೇರೆಬೇರೆ ದೃಷ್ಟಿ–ಧೋರಣೆ, ಶಕ್ತಿ–ಸಾಮರ್ಥ್ಯ ಹೊಂದಿದ ೨೩ ಜನ ಅಧ್ಯಕ್ಷರು ಈ ಸಂಸ್ಥೆಯನ್ನು ವಿಭಿನ್ನ ಆಯಾಮಗಳಲ್ಲಿ ಬೆಳೆಸಿದ್ದಾರೆ. ೭೬ ಜನ ಘನ ವಿದ್ವಾಂಸರ ಅಧ್ಯಕ್ಷತೆಯಲ್ಲಿ ೭೮ ಕನ್ನಡ ಸಾಹಿತ್ಯ ಕನ್ನಡ ಸಾಹಿತ್ಯ ಸಮ್ಮೇಳನಗಳು ಯಶಸ್ವಿಯಾಗಿ ಜರುಗಿವೆ. (೧೯೧೫ ರಿಂದ ೧೯೭೬ರವರೆಗೆ ರಾಜ್ಯಮಟ್ಟದ ಸಮ್ಮೇಳನ – ೧೯೭೬ರಿಂದ ಅಖಿಲ ಭಾರತ ಮಟ್ಟದ ಸಮ್ಮೇಳನಗಳು). ಈ ಸಮ್ಮೇಳನಗಳಲ್ಲಿ ಚರ್ಚಿತವಾದ ವಿಷಯಗಳು, ಕೈಕೊಂಡ ನಿರ್ಣಯಗಳು, ಕಾರ್ಯರೂಪಕ್ಕೆ ತಂದ ಯೋಜನೆಗಳು ಸಮಗ್ರ ಕರ್ನಾಟಕದ ನೆಲ–ಜಲ, ನಾಡು–ನುಡಿ–ಗಡಿ–ಸಾಹಿತ್ಯ–ಸಂಸ್ಕೃತಿಗಳ ಪುರೋಭಿವೃದ್ಧಿಗೆ ಪೂರಕವಾಗಿವೆ.

೧೯೧೫ರಿಂದ ೧೯೪೭ ರ ವರೆಗಿನ ಸ್ವಾತಂತ್ರ್ಯಪೂರ್ವದ ಅವಧಿಯಲ್ಲಿ "ಕನ್ನಡಿಗರನ್ನು ಒಗ್ಗೂಡಿಸುವುದು, ವಿವಿಧ ವಸ್ತುವನ್ನಾಧರಿಸಿ ಸ್ವತಂತ್ರಕೃತಿ ರಚಿಸುವುದು, ಪಾರಿಭಾಷಿಕ ಪದಕೋಶ ಸಿದ್ಧಪಡಿಸುವುದು, ಕೃತಿಕಾರ ಸಹೃದಯರ ನಡುವೆ ಸಂವಾದ ನಡೆಸಲು ನಿಯತಕಾಲಿಕೆಗಳನ್ನು ಪ್ರಕಟಿಸುವುದು, ಪ್ರಾಚೀನ ಕಾವ್ಯಗಳನ್ನು ಶೋಧಿಸಿ ಪರಿಷ್ಕರಿಸಿ ಪ್ರಕಟಿಸುವುದು– ಇವೇ ಮೊದಲಾದ ಸಾಹಿತ್ಯಿಕ ವಿಷಯಗಳಿಗೆ ವಿಶೇಷ ಒತ್ತು ಕೊಡಲಾಯಿತು. ಜೊತೆಗೆ ಸ್ಕೂಲು, ಪಾಠಶಾಲೆಗಳಲ್ಲಿ ಶಿಕ್ಷಣ ಕನ್ನಡಭಾಷೆಯ ಮೂಲಕವೇ ನಡೆದು ದೇಶೀಯ ಶಿಕ್ಷಣ ಪದ್ಧತಿ ಪ್ರಚಾರಕ್ಕೆ ಬರಬೇಕು. ಅದಕ್ಕೆ ತಕ್ಕ ಪಠ್ಯಗಳನ್ನು ತಜ್ಞರಿಂದ ಬರೆಯಿಸಬೇಕು, ಕನ್ನಡ ಶಾಲೆಗಳಿಲ್ಲದ ಕನ್ನಡ ಪ್ರದೇಶಗಳಲ್ಲಿ ಕನ್ನಡ ಶಾಲೆ ಆರಂಭಿಸಬೇಕು. ಅಂಚೆ ಇಲಾಖೆ, ರೇಲ್ವೆ ಇಲಾಖೆ, ಸರ್ಕಾರಿ ಕೋರ್ಟು – ಕಚೇರಿಗಳಲ್ಲಿ ಕನ್ನಡ ಬಳಸುವಂತೆ ಒತ್ತಾಯಿಸಬೇಕು. ನಿಜಾಮ ಕರ್ನಾಟಕದಲ್ಲಿ ಕಚೇರಿ ಭಾಷೆ ಕನ್ನಡವಿರಬೇಕು, ಬೆಳಗಾವಿ ಜಿಲ್ಲೆಯ ಹಳ್ಳಿಗಳಲ್ಲಿ ಲೆಕ್ಕಪತ್ರ ಕನ್ನಡದಲ್ಲಿ ಇಡುವಂತೆ ಸರ್ಕಾರವನ್ನು ಒತ್ತಾಯಿಸಬೇಕು. ವಿದ್ಯಾ ಇಲಾಖೆಯ ಇನ್ಸ್‌ಸ್ಪೆಕ್ಟರ್ ಮೊದಲಾದವರು ಕನ್ನಡಿಗರಾಗಿರಬೇಕು. 'ನಾವು ಇಂಗ್ಲಿಷೇ ಅಧಿದೇವತೆಯೆಂದು ತಿಳಿಯಕೂಡದು' (ದಿವಾಕರ); ತ್ರಿಭಾಷಾಸೂತ್ರ ಜಾರಿಗೊಳಿಸಬೇಕು. ನಮ್ಮ ಎಲ್ಲ ವ್ಯವಹಾರಗಳು ಕನ್ನಡದಲ್ಲಿಯೇ ನಡೆಯಬೇಕು, ಹಂಚಿಹೋದ ಕರ್ನಾಟಕವನ್ನು ಒಂದು ಮಾಡಬೇಕು. 'ಕನ್ನಡಮನೆಯಲ್ಲಿ ಕನ್ನಡತಿ ಯಜಮಾನತಿ' (ಬೇಂದ್ರೆ)ಯಾಗಿರಬೇಕು. ಜನಗಣತಿಯಲ್ಲಿ ಕನ್ನಡಿಗ ಎಂದು ಬರೆಸಬೇಕು – ಎಂಬಂಥ ನಿರ್ಣಯಗಳ ಮೂಲಕ ಕನ್ನಡ ಭಾಷೆಯ ಪ್ರಸಾರ, ಕನ್ನಡಿಗರಲ್ಲಿ ಕನ್ನಡತ್ವ ತುಂಬುವ ಕಾರ್ಯವನ್ನು ಮಾಡುತ್ತ ಬರಲಾಯಿತು.

೧೯೪೭ ರಿಂದ ೧೯೫೭ರ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಪರಿಷತ್ತು ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಮುಖ್ಯ ಪಾತ್ರವಹಿಸಿತು. 'ಕರ್ನಾಟಕ ಏಕೀಕರಣವು ಕನ್ನಡಿಗರ ಜನ್ಮಸಿದ್ಧ ಹಕ್ಕು. ಏಕತಂತ್ರ ಅಖಂಡ ಕರ್ನಾಟಕವು ನಿರ್ಮಾಣವಾಗಬೇಕು ನಿರ್ಮಾಣವಾಗುವುದು' ಎಂದು ಉತ್ತಂಗಿ ಚೆನ್ನಪ್ಪ ಕರೆಕೊಟ್ಟರು. ಅದರ ಜೊತೆಗೆ ಆಡಳಿತ ಭಾಷಾ ಚಳುವಳಿ, ಇಂಗ್ಲಿಷ್–ಹಿಂದಿ ವಿರೋಧ ಚಳುವಳಿ, ಕರ್ನಾಟಕ ನಾಮಕರಣ ಚಳುವಳಿ, ಬೆಂಗಳೂರು ದೂರದರ್ಶನ ಉರ್ದುವಾರ್ತೆ ನಿಷೇಧ ಚಳುವಳಿ, ನದೀ ನೀರಿನ ಬಳಕೆ ಚಳುವಳಿ, ಗೋಕಾಕ್ ಚಳುವಳಿ, ನಾಗರಿಕ ಸೇವಾ ಪರೀಕ್ಷೆಗಳಲ್ಲಿ ಕನ್ನಡ ಚಳುವಳಿ, ಸಾಕ್ಷರತಾ ಆಂದೋಲನ, ಮಹಾಜನ್ ವರದಿ ಜಾರಿ, ಶಾಸನ ಸಭೆಯಲ್ಲಿ ಪರಿಷತ್ತಿನ

ಪ್ರತಿನಿಧಿ-ಬರಹಗಾರರಿಗೆ ಅವಕಾಶ -ಹೀಗೆ ಕಾಲಕಾಲಕ್ಕೆ ಅನೇಕ ಚಳುವಳಿಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಸಮಸ್ತ ಕನ್ನಡಿಗರ ಧ್ವನಿಯಾಗಿ ಕಾರ್ಯ ಮಾಡುತ್ತ ಬಂದಿದೆ. ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತೋರಿದ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ-ಎಲ್ಲ ಧೋರಣೆಗಳ ಸಾಹಿತ್ಯ ಕುರಿತ ಚರ್ಚೆಗೆ ಅವಕಾಶ, ಮಹಿಳಾ ಸಾಹಿತ್ಯ, ಜನಪದ ಸಾಹಿತ್ಯ, ಮಕ್ಕಳ ಸಾಹಿತ್ಯ, ಕಾನೂನು ಸಾಹಿತ್ಯ, ವಿಜ್ಞಾನ ಸಾಹಿತ್ಯ- ಇತ್ಯಾದಿ ಎಲ್ಲ ಸಾಹಿತ್ಯ ಶಾಖೆಗಳಿಗೆ ಪ್ರಾತಿನಿಧ್ಯ, ಉದಯೋನ್ಮುಖ ಲೇಖಕರಿಗೆ ಪ್ರೋತ್ಸಾಹ, ನಾಟಕ, ಗಮಕ, ಸಂಶೋಧನೆ, ಕನ್ನಡ ಬೆರಳಚ್ಚು ತರಬೇತಿ, ಕಾವ-ಜಾಣ-ಗಮಕ ಪರೀಕ್ಷೆಗಳನ್ನು ನಡೆಸುವುದು, ಶಾಸನಶಾಸ್ತ್ರದ ತರಗತಿಗಳು ಇವೇ ಮೊದಲಾದ ಚಟುವಟಿಕೆಗಳ ಮೂಲಕ ಸಾಹಿತ್ಯ ಪರಿಷತ್ತು ಭಾಷಿಕ-ಸಾಹಿತ್ಯಿಕ-ಸಾಮಾಜಿಕ-ಶೈಕ್ಷಣಿಕ-ಸಾಂಸ್ಕೃತಿಕ ಹೀಗೆ ಕನ್ನಡದ ಎಲ್ಲ ನೆಲೆಗಳ ಕಾರ್ಯಗಳಿಗೆ ತನ್ನನ್ನು ಅಣಿಗೊಳಿಸಿಕೊಳ್ಳುತ್ತ ಬಂದಿದೆ. ಕನ್ನಡದ ಹೆಮ್ಮರವಾಗಿ ಬೆಳೆದು ನಿಂತಿದೆ.

ಕೊನೆಯಲ್ಲಿ ಅದರ ಒಟ್ಟು ಸಾಧನೆಯನ್ನು ಹೀಗೆ ಗುರುತಿಸಬಹುದು:

೧. ಕನ್ನಡಿಗರಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರೇರೇಪಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಪ್ರಚೋದಿಸಿದ್ದು.

೨. ಕರ್ನಾಟಕದ ಏಕೀಕರಣ ಚಳುವಳಿಯಲ್ಲಿ ಉತ್ಕಟವಾಗಿ ತೊಡಗಿಕೊಂಡು ಅದು ಸಾಕಾರಗೊಳ್ಳುವಲ್ಲಿ ನಿರ್ಣಾಯಕ ಪಾತ್ರವಹಿಸಿದ್ದು.

೩. ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಲು ಒತ್ತಾಯಿಸಿದ್ದು.

೪. ರಾಜ್ಯ ಮಟ್ಟದಲ್ಲಿ ಕನ್ನಡ ಆಡಳಿತ ಭಾಷೆಯಾಗುವಂತೆ ಹೋರಾಟ ನಡೆಸಿದ್ದು.

೫. ಕನ್ನಡ ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಕಾವ-ಜಾಣ-ರತ್ನ ಪರೀಕ್ಷೆ, ಗಮಕ ಪ್ರವೇಶ ಮತ್ತು ಪ್ರೌಢ ಪರೀಕ್ಷೆಗಳನ್ನು, ಜಾನಪದ ಹಾಗೂ ಶಾಸನಶಾಸ್ತ್ರ ಪರೀಕ್ಷೆಗಳನ್ನು ವ್ಯವಸ್ಥೆಗೊಳಿಸಿ ನಡೆಸಿದ್ದು.

೬. ಕನ್ನಡ ಬೆರಳಚ್ಚು ತರಬೇತಿ ತರಗತಿಗಳನ್ನು ನಡೆಸಿ ಆಡಳಿತಗಾರರಿಗೆ ಪರಿಣತ ಕೆಲಸಗಾರರನ್ನು ದೊರಕಿಸಿಕೊಟ್ಟದ್ದು. ಆ ಮೂಲಕ ಕನ್ನಡ ಆಡಳಿತ ಭಾಷೆಯಾಗಲು ರಚನಾತ್ಮಕ ರೀತಿಯಲ್ಲಿ ನೆರವು ನೀಡಿದ್ದು.

೭. ಮಹಾಜನ ವರದಿ ಜಾರಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಮೇಲೆ ಒತ್ತಡ ಹೇರಿದ್ದು

೮. ರಾಜ್ಯದ ನೆಲ-ಜಲಗಳ, ಕನ್ನಡ ನುಡಿಯ ಪ್ರಶ್ನೆಯ ಬಂದಾಗಲೆಲ್ಲ ರಾಜ್ಯದ ಸಮಷ್ಟಿ ಪರವಾಗಿ ನಿಂತು ಹೋರಾಡಿದ್ದು. ರಾಜ್ಯಕ್ಕೆ ಹಿತವಾಗುವಂಥ ನಿರ್ಧಾರ ಕೈಕೊಳ್ಳುವಂತೆ ಸರ್ಕಾರಗಳನ್ನು ಒತ್ತಾಯಿಸಿದ್ದು.

೯. ವಿಶಾಲ ವ್ಯಾಪ್ತಿಯ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ೭೮ ಬಾರಿ ನಡೆಸಿ ಕನ್ನಡಿಗರಲ್ಲಿ ನಾಡು-ನುಡಿ-ಸಂಸ್ಕೃತಿ-ಪ್ರೀತಿ-ಅಭಿಮಾನಗಳನ್ನು ವೃದ್ಧಿಸಿದ್ದು.

೧೦. ಗ್ರಂಥ ಪ್ರಕಟಣೆ, ವಿಚಾರಸಂಕಿರಣ, ವಿಶೇಷ ಉಪನ್ಯಾಸ, ಸಮ್ಮೇಲನಗಳ ಮೂಲಕ ನೂರಾರು ಕನ್ನಡ ಬರಹಗಾರರ ದಂಡು ಬೆಳೆಯುವಂತೆ ಮಾಡಿದ್ದು.

೧೧. ಸಾವಿರಾರು ಗ್ರಂಥಗಳನ್ನು ಪ್ರಕಟಿಸಿದ್ದು (ಸಂಶೋಧನೆ, ಜಾನಪದ, ಪ್ರಾಚೀನಕಾವ್ಯ, ಆಧುನಿಕ ಕಾವ್ಯ, ಕತೆ-ಕಾದಂಬರಿ, ಮಕ್ಕಳಸಾಹಿತ್ಯ ಇತ್ಯಾದಿ) ಆ ಮೂಲಕ ಉದಯೋನ್ಮುಖ ಲೇಖಕರನ್ನು ಪ್ರೋತ್ಸಾಹಿಸಿದ್ದು, ಜ್ಞಾನಪ್ರಸಾರ ಕಾರ್ಯ ಮಾಡಿದ್ದು.

೧೨. ಬೃಹತ್ ಕನ್ನಡ-ಕನ್ನಡ ನಿಘಂಟು ಯೋಜನೆಯನ್ನು ಯಶಸ್ವಿಯಾಗಿ ಪೂರೈಸಿದ್ದು.

೧೩. ಕನ್ನಡಕ್ಕೆ ಮೌಲಿಕ ಕೊಡುಗೆ ನೀಡಿದ ಸಾಹಿತಿಗಳಿಗೆ ಗೌರವ ಫೆಲೋಶಿಪ್ ನೀಡಿ ಗೌರವಿಸಿದ್ದು.

೧೪. ವಿವಿಧ ಉತ್ತಮ ಕೃತಿಗಳಿಗೆ ದತ್ತಿನಿಧಿ ಬಹುಮಾನಗಳನ್ನು ಸ್ಥಾಪಿಸಿ ಗ್ರಂಥಕರ್ತರನ್ನು ಪುರಸ್ಕರಿಸಿದ್ದು.

೧೫. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿ ಬೇರು ಮಟ್ಟದ ಪ್ರತಿಭೆಗಳಿಗೆ ಪ್ರೋತ್ಸಾಹ ಕಲ್ಪಿಸಿದ್ದು.

೧೬.ಕರ್ನಾಟಕದ ಒಳಗೆ ಮತ್ತು ಹೊರಗೆ ತಾನೊಂದು ಕನ್ನಡ ಸಂಸ್ಕೃತಿಯ, ಕನ್ನಡ ಜನರ ಅಧಿಕೃತ ರಾಯಭಾರಿ ಎಂಬ ಭಾವನೆಯನ್ನು ಎಲ್ಲರಲ್ಲೂ ಉಂಟುಮಾಡಿದ್ದು.

– ಇಂಥ ಹಲವಾರು ಪ್ರಮುಖ ಹಾಗೂ ಗಮನಾರ್ಹ ಸಾಧನೆಗಳ ಮೂಲಕ ಪರಿಷತ್ತು ಕರ್ನಾಟಕದ ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿ ಬದುಕಿಗೆ ನೀಡಿದ ಅಂತಃಸತ್ವ ಖಂಡಿತವಾಗಿಯೂ ಮೆಚ್ಚುಗೆಗೆ ಅರ್ಹವಾದುದು.

– ಇಂಥ ಸಂಸ್ಥೆಯನ್ನು ಕಟ್ಟಿ ಬೆಳೆಸಿದ ಹಿರಿಯ ಚೇತನಗಳಿಗೆ ಕನ್ನಡ ಕುಲಕೋಟಿಯೆಲ್ಲ ಚಿರಋಣಿಯಾಗಿದೆ.

**ಆಧಾರ ಗ್ರಂಥಗಳು:**

೧ ಕನ್ನಡ ಸಾಹಿತ್ಯ ಪರಿಷತ್ತು : ಜಗನ್ನಾಥ ಹೇಮಾದ್ರಿ – ೨೦೦೬

೨. ಕನ್ನಡ ಸಾಹಿತ್ಯ ಪರಿಷತ್ತು – ಒಂದು ಸಮಾಜೋ ಸಾಂಸ್ಕೃತಿಯ ಅಧ್ಯಯನ : ಡಾ.ಎಂ.ಎಲ್. ಶಂಕರಲಿಂಗಪ್ಪ–೨೦೦೮

೩. ಸಾಹಿತ್ಯ ಸಮ್ಮೇಳನ ಅಧ್ಯಕ್ಷರ ಭಾಷಣ ಸಂಪುಟಗಳು.

❑❑

# ಪಂಪ ಹಾಗೂ ರಾಜತ್ವ

– ಪಿ.ವಿ. ನಾರಾಯಣ

ನಮ್ಮ ಚಂಪೂ ಕವಿಗಳೆಲ್ಲರೂ ಬರೆದ ಕಾವ್ಯಗಳು ರಾಜಸಂಬಂಧಿಯಾದ ಕತೆಗಳನ್ನೊಳಗೊಂಡವೇ ಆಗಿವೆ. ಇದಕ್ಕೆ ಕಾರಣ ಅವರಲ್ಲಿ ಬಹುತೇಕ ಮಂದಿ ರಾಜಾಶ್ರಯದಲ್ಲಿದ್ದವರು ಎಂಬುದು ಮಾತ್ರವೇ ಆಗಿರದೆ ಅವರ ಕಾಲವು 'ರಾಜಾ ಪ್ರತ್ಯಕ್ಷ ದೇವತಾ' ಅಥವಾ 'ನಾ ವಿಷ್ಣುಃ ಪೃಥಿವೀಪತಿಃ' ಎಂಬ ಅಚಲ ನಂಬಿಕೆ ಹೊತ್ತಂತಹುದು. ಜನಸಾಮಾನ್ಯರಲ್ಲಿ ಮಾತ್ರವಲ್ಲದೆ ಬುದ್ಧಿಜೀವಿ ವರ್ಗದಲ್ಲಿಯೂ ಈ ನಂಬಿಕೆಯಿತ್ತು. ಹಾಗೆ ನೋಡಿದರೆ ಈ ನಂಬಿಕೆಯನ್ನು ಬಿತ್ತಿ ಬೆಳೆದವರು ಬುದ್ಧಿಜೀವಿವರ್ಗದವರೇ. ಕನ್ನಡದ ಎಲ್ಲ ಚಂಪೂ ಕವಿಗಳಿಗೂ, ಅದರಲ್ಲೂ ಮೊದಲ ಧಾರೆಯಾದ ಜೈನ ಕವಿಗಳಿಗೆ ಪಂಪನೇ 'ಆಶ್ರಯದಾತ–ಕಥಾನಾಯಕ ಸಮೀಕರಣ'ದ ಕಾವ್ಯಾದರ್ಶವನ್ನು ಒದಗಿಸಿದವನು.

ತನ್ನ ಕಾಲದ ರಾಜದೈವತ್ವದ ನಂಬಿಕೆ ವೈಯಕ್ತಿಕವಾಗಿ ಪಂಪನಲ್ಲಿಯೂ ತುಂಬಿಕೊಂಡಿತ್ತು. ವೈಯಕ್ತಿಕವಾಗಿ ಎಂದರೆ ವ್ಯಕ್ತಿಯಾಗಿ ಅವನನ್ನು ರೂಪಿಸಿದ್ದ ಗುಣಗಳಲ್ಲಿ ಈ ನಂಬಿಕೆಯೂ ಸೇರಿತ್ತು ಎಂದರ್ಥ. ಅರಿಕೇಸರಿಯ ಬಗ್ಗೆ ಅವನಿಗೆ ಸಂಪರ್ಕ ಯಾವ ರೀತಿಯಿಂದಲೇ ಬಂದಿರಲಿ ತನಗೆ ಗೌರವಾರ್ಹನಾಗಲು ಪ್ರಮುಖ ಕಾರಣ ಅವನು ರಾಜನಾಗಿದ್ದುದು ಎಂಬುದು. ಒಂದೆಡೆ ಜೈನಧರ್ಮದ ಪರಂಪರೆಯಲ್ಲಿಯೇ ಇದ್ದ ರಾಜತ್ವದ ಬಗೆಗಿನ ಅನನ್ಯ ಗೌರವ, ಮತ್ತೊಂದೆಡೆ ತನ್ನ ಕಾಲದ ಗಾಳಿಯಲ್ಲಿದ್ದ ರಾಜಭಕ್ತಿ ಇವುಗಳು ಪಂಪನ ವ್ಯಕ್ತಿತ್ವದ ಭಾಗವಾಗಿ ತನ್ನ ಕಾವ್ಯದಲ್ಲವನು ರಾಜತ್ವಕ್ಕೆ ಅಪಾರ ಗೌರವವನ್ನು ತೋರಿಸಲು ಕಾರಣವಾಗಿವೆ. ಅಂದರೆ ಅವನು ಬೆಳಗಿದ 'ಜಿನಾಗಮ' ಹಾಗೂ 'ಲೌಕಿಕ'ಗಳೆರಡಲ್ಲಿಯೂ ರಾಜತ್ವವು ವಿಜೃಂಭಿಸುವಂತೆ ಮಾಡುವುದು ಅವನ ಧ್ಯೇಯವೇ ಆಯಿತೋ ಏನೋ.

ಹೀಗಾಗಿ ಪಂಪನಿಗೂ ರಾಜತ್ವಕ್ಕೂ ಎಲ್ಲಿಲ್ಲದ ನಂಟು. ಪಂಪನ ಎರಡೂ ಕಾವ್ಯಗಳು ರಾಜರನ್ನು ಕುರಿತವು. ಪಂಪನ ಮೊದಲ ಕಾವ್ಯವಾದ 'ಆದಿಪುರಾಣ'ವು ಮೊದಲನೆಯ ತೀರ್ಥಂಕರನ ಚರಿತೆ. ಜೈನಪರಂಪರೆಯ ಪ್ರಕಾರ ಎಲ್ಲ ತೀರ್ಥಂಕರರೂ ರಾಜರುಗಳೇ, ಮೊದಲನೆಯ ತೀರ್ಥಂಕರನೂ ಇದಕ್ಕೆ ಹೊರತಲ್ಲ. ಜೊತೆಗೆ 'ಭವಾವಳಿ'ಯಲ್ಲಿ ಚಿತ್ರಿತವಾಗಿರುವ ಹಿಂದಿನ ಜನ್ಮಗಳೆಲ್ಲದರಲ್ಲಿಯೂ ಅವನು ರಾಜನಾಗಿದ್ದವನು. ಇನ್ನು ಎರಡನೆಯ ಕಾವ್ಯದಲ್ಲಿ – 'ವಿಕ್ರಮಾರ್ಜುನ ವಿಜಯಂ' – ತನ್ನ ಆಶ್ರಯದಾತ ರಾಜನನ್ನು ಕಥಾನಾಯಕನಾದ ಅರ್ಜುನನೊಡನೆ ಸಮೀಕರಿಸಿ ಅವನಿಗೆ ಅರೆದೈವತ್ವವನ್ನು ಒದಗಿಸಿದವನು. ಇದರಿಂದ ಉಭಯತ್ರರಿಗೂ ಲಾಭವಾಯಿತು.

ಮೊದಲು 'ಆದಿಪುರಾಣ'ದ ಕಡೆ ಗಮನ ಹರಿಸೋಣ. ಆದಿ ತೀರ್ಥಂಕರನ ಕಾಲಕ್ಕೆ ಇದ್ದುದು ಮೂರೇ ವರ್ಣಗಳು: ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ. ಈ ಅನುಕ್ರಮದಲ್ಲಿ ಕ್ಷತ್ರಿಯನೇ ಅತ್ಯಂತ ಶ್ರೇಷ್ಠ; ಹಾಗಾಗಿಯೇ ತೀರ್ಥಂಕರರೆಲ್ಲ ಕ್ಷತ್ರಿಯರು ಅರ್ಥಾತ್ ರಾಜರು. ಅವನಿಗಿಂತ ಮುಂಚೆ ಈ ತ್ರಿವರ್ಣಗಳಲ್ಲಿನ ಕರ್ತವ್ಯಗಳ ಹಾಗೂ ಕೊಳುಕೊಡುಗೆಗಳ ವಿಷಯದಲ್ಲಿ ಗೊಂದಲವಿತ್ತೆಂದು ಕಾಣುತ್ತದೆ; ಹೀಗಾಗಿ ಪುರುದೇವನು ಈ ಮೂರೂ ವರ್ಣಗಳವರಿಗೆ ನಿರ್ದಿಷ್ಟ ಕೆಲಸಗಳನ್ನು ನಿಯಮಿಸಿದ. ಅಲ್ಲದೆ "ವರ್ಣಸಂಕರಮಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ"ದನಂತೆ. ಇದರಿಂದ ವರ್ಣಗಳು ತಮ್ಮ ಶುದ್ಧತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಗಲಿ ಎಂಬುದು ಅವನ ಉದ್ದೇಶವಾಗಿದ್ದಿರಬೇಕು. ಆನಂತರದಲ್ಲಿ "ಫಳಕುಸುಮ ಪ್ರವಾಳಹರಿತಾಂಕುರ ರಾಜಿಯೊಳಲ್ಲಿ ಜೀವಸಂಕುಳಮಳವಲ್ಲದುಂಟು" ಎಂಬ ಪ್ರಜ್ಞೆಯನ್ನು ತೋರಿಸಿದ ಜನರನ್ನು ಬ್ರಾಹ್ಮಣ ಎಂಬ ಹೊಸ ವರ್ಣದಿಂದ ಗುರುತಿಸಿದವನು ಭರತ ಚಕ್ರವರ್ತಿ. ಆದರೆ ಈ ಬ್ರಾಹ್ಮಣ ವರ್ಣದವರು

> ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗಳ್ದೇ ವಿಪ್ರಸಂತಾನದೊಂದಾ
> ಚರಣಂ ನೀನೆಂದ ಪಾಂಗಿಂ ಕೃತಯುಗದೊಳೆ ದಲ್ ಸಲ್ಗುಮಿನ್ನತ್ತ ನಷ್ಟಾ
> ಚರಣಂ ಸನ್ಮಾರ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾ
> ತುರರುನ್ಮಾರ್ಗೋಪದೇಶೋದ್ಯತ ಮತಿಗಳತಿ ಕ್ರೂರರಪ್ಪರ್ ದ್ವಿಜನ್ಮರ್

ಎಂದು ಆದಿತೀರ್ಥಂಕರನು ಭವಿಷ್ಯ ನುಡಿದ. ಹೀಗಾಗಿ ವರ್ಣಗಳಲ್ಲೆಲ್ಲ ಕ್ಷತ್ರಿಯವೇ ಶ್ರೇಷ್ಠ, ಅದೆಂದೂ

'ತಂಗಾಳಿ', ನಂ. ೩೦, ಆರ್‌ಬಿಐ ಕಾಲೋನಿ, ಜಯನಗರ, ಮೂರನೇ ಬ್ಲಾಕ್ ಪೂರ್ವ, ಬೆಂಗಳೂರು – ೫೬೦ ೦೧೧

ಕೆಡದು ಎಂಬ ವಿಶ್ವಾಸವಿದೆ. ಜೈನರು ಮೂಲತಃ ದೇವರಲ್ಲಿ ನಂಬಿಕೆಯಿಲ್ಲದವರು; ಹಾಗಾಗಿ ರಾಜರ ದೈವತ್ವದ ಪರಿಕಲ್ಪನೆ ಅವರಲ್ಲಿಲ್ಲ. ಆದರೆ ತೀರ್ಥಂಕರರೆಲ್ಲ ರಾಜ(ಕ್ಷತ್ರಿಯ)ರು; ಹೀಗಾಗಿ ರಾಜರಲ್ಲಿ ತೀರ್ಥಂಕರಾಂಶವಿದೆಯೆಂಬ ಭಾವನೆ ಜೈನರಲ್ಲಿದ್ದಿರಬಹುದು.[೧]

ಆದಿತೀರ್ಥಂಕರ ಚರಿತೆಯಲ್ಲಿ ವೈರಾಗ್ಯಭರದಿಂದ ರಾಜರು ತಮ್ಮ ಸ್ಥಾನವನ್ನು ತೆರವುಗೊಳಿಸುವ ಪ್ರಸಂಗಗಳಿವೆ. ಆದರೆ ಬಾಲ್ಯದಿಂದಲೇ ರಾಜತ್ವದ ಬಗೆಗಿನ ನಿರಸನ ಎಲ್ಲಿಯೂ ಕಾಣಿಸುವುದಿಲ್ಲ. ಪುರುದೇವನು "ಅಱುವತ್ತುಮೂಱು ಲಕ್ಕೆ ಪುಬ್ಬಂ ರಾಜ್ಯಕಾಲಂ ಸಲೆ" ರಾಜ್ಯಭಾರ ಮಾಡಿದನಂತೆ. ತಾನು ರಾಜ್ಯತ್ಯಾಗ ಮಾಡಿ ಜೈನದೀಕ್ಷೆಯನ್ನು ಪಡೆಯುವ ಸಂದರ್ಭದಲ್ಲಿ "ವೃಷಭನಾಥಂ ಭರತ ರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು ಬಾಹುಬಲಿಗಂ ಯುವರಾಜ ಪದವಿಯಂ ದಯೆಗೆಯ್ದಯೋಧ್ಯಾ ಪೌದನಪುರಾಧಿಪತ್ಯ ದೊಳಿರ್ವರುಮಂ ನಿಜೆಸಿ ಉಟಿದಪತ್ಯವರ್ಗಕ್ಕೆಲ್ಲಮಿಳಾತಳ ವಿಭಾಗಮಮಂ ಪಚ್ಚುಕೊಟ್ಟು" ಹೋದನಂತೆ. ಅಂದರೆ ವೈರಾಗ್ಯ ವೈಯಕ್ತಿಕವಾದದ್ದು; ಅದನ್ನು ಮಿಕ್ಕವರಲ್ಲಿ ನಿರೀಕ್ಷಿಸದೆ ತನ್ನ ದೀಕ್ಷಾಸಮಯದಲ್ಲಿಯೂ ಆಸ್ತಿಯನ್ನು ಎಚ್ಚರಿಕೆಯಿಂದ ವಿಭಾಗ ಮಾಡಿಕೊಡುವ ವ್ಯಾವಹಾರಿಕತೆಯನ್ನಿಲ್ಲಿ ಪ್ರದರ್ಶಿಸುತ್ತಾನೆ. ಹೀಗಾಗಿ ರಾಜತ್ವ ತನ್ನಲ್ಲಿಯೇ ತ್ಯಾಜ್ಯವೇನಲ್ಲ, ವೈರಾಗ್ಯವಿಲ್ಲದೆ ಅದನ್ನು ಬಿಡಬೇಕಾದ್ದಿಲ್ಲ ಎಂಬುದು ವ್ಯಾಪಕವಾದ ಜೈನ ನಂಬಿಕೆ..

ಪಂಪನಿಗೆ ತನ್ನ ಆಶ್ರಯದಾತನ ಜೊತೆಗಿದ್ದ ಸಂಬಂಧ ಅನನ್ಯವಾದುದು; ಜೊತೆಗೆ ಅವನ ಮೇಲೆ ಪ್ರಭಾವ ಬೀರುವಂತಹುದು. ಎಷ್ಟೆಂದರೆ, ರಾಜ ತನಗೆ ಬಿರುದು ನೀಡುವ ಬದಲು ತಾನೇ ತನ್ನ ಬಿರುದನ್ನು ರಾಜನಿಗೆ ಅಳವಡುವಂತೆ ಮಾಡುವಷ್ಟು ಅವನು ಪ್ರಭಾವಶಾಲಿಯಾಗಿದ್ದ. 'ಆದಿಪುರಾಣ'ದ ರಚನೆಯ ಕಾಲಕ್ಕೆ ಪಂಪ ರಾಜಾಶ್ರಯದಿಲ್ಲಿರಲಿಲ್ಲವೆನಿಸುತ್ತದೆ. ಇದ್ದಿದ್ದರೆ ಅದರ ಪ್ರಸ್ತಾಪ ಆ ಕಾವ್ಯದಲ್ಲಿರುತ್ತಿತ್ತು. 'ಆದಿಪುರಾಣ'ದ ಮೊದಲ ಆಶ್ವಾಸದ ಇಪ್ಪತ್ತೇಳನೆಯ ಪದ್ಯವನ್ನು ನೋಡಿ:

**ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ**
**ಕ್ಕದಱಿಂದಂ ಕವಿತಾಗುಣಾರ್ಣವನಿಳಾಲೋಕೈಕವಿಖ್ಯಾತನ**
**ಭ್ಯುದಯಪ್ರಾಪ್ತಿಮಿತ್ರಮುತ್ತಮಯಶಂ ಸಂಸಾರದೊಳ್ಸಾರಮ**
**ಪ್ಪುದಱಿಂ ಧರ್ಮಮಂ ನಿಮಿರ್ಚುವುದಱಿಂ ಸಂಸಾರ ಸಾರೋದಯಂ**

ತನ್ನ ಕವಿತ್ವವು ಅರ್ಣವದಂತೆ 'ನಿಚ್ಚಂ ಪೊಸತಾ'ದುದುರಿಂದ ತಾನು 'ಕವಿತಾಗುಣಾರ್ಣವ' ಎಂದು ಕವಿ ಹೇಳಿಕೊಳ್ಳುತ್ತಾನೆ ಪಂಪ. ಅಂದರೆ ರಾಜಾಶ್ರಯಕ್ಕೆ ಬರುವ ಮುಂಚೆಯೇ ಅವನಿಗೆ ಈ ಬಿರುದು ಇತ್ತು. ಇದು ಬೇರೆ ಯಾರಾದರೂ ಕೊಟ್ಟ ಬಿರುದಾಗಿರದೆ ತನ್ನನ್ನು ತಾನು ವಿಶೇಷಿಸಿಕೊಂಡ ರೀತಿಯಾಗಿದ್ದಂತೆ ಕಾಣುತ್ತದೆ. ಏಕೆಂದರೆ ಅವನು ಆಗ ರಾಜಾಶ್ರಯದಲ್ಲಿ, ಅಥವಾ ಇನ್ನಾವುದೇ ಆಶ್ರಯದಲ್ಲಿ ಇರಲಿಲ್ಲ; ಹಾಗೂ ಅವನಿನ್ನೂ ಏನನ್ನೂ ಬರೆದೇ ಇರಲಿಲ್ಲ. ಹೀಗಾಗಿ ಇದು ಸ್ವಯಂವರ್ಣನೆ ಎಂದು ಭಾವಿಸಬಹುದು.

ಈಗ 'ವಿಕ್ರಮಾರ್ಜುನ ವಿಜಯಂ'ನಲ್ಲಿ ಕಾಣಬರುವ ರಾಜತ್ವ ಸಂಬಂಧೀ ಅಂಶಗಳನ್ನು ಗಮನಿಸಬಹುದು. ಮೊದಲ ಆಶ್ವಾಸದ ಹತ್ತನೆಯ ಪದ್ಯವನ್ನು ನೋಡೋಣ:

**ಕವಿಗಳ ನಾಮಧಾರಕ ನರಾಧಿಪರೋಳಿಯೊಳೀತನೊಳ್ಪಿದಂ**
**ಕವಿ ನೃಪನೀತನೊಳ್ಪದನೆನಲ್ ದೊರೆಯಲ್ತು ನೆಗಟ್ತೆವೆತ್ತ ಸ**
**ತ್ಕವಿಗಳ ಪೊಡಶಾವನಿಪರೋಳಿಯೊಳಂ ಕವಿತಾ ಗುಣಾರ್ಣವಂ**
**ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮೀ ಗುಣಾರ್ಣವಂ**

ತಾನು ಕವಿಗಳ ಹೆಸರುಮಾತ್ರದವನಲ್ಲ, ಅರಿಕೇಸರಿ ನರಾಧಿಪ ಎಂಬ ಹೆಸರು ಮಾತ್ರ ಪಡೆದವನಲ್ಲ; ತಾನು 'ಕವಿತಾಗುಣಾರ್ಣವ' ಈತ 'ಗುಣಾರ್ಣವ'. ಅಂದರೆ ರಾಜಾಶ್ರಯಕ್ಕೆ ಬರುವ ಮುಂಚೆ ತನ್ನನ್ನು ಬಣ್ಣಿಸಿಕೊಂಡಿದ್ದಂತೆಯೇ ತನ್ನ ಆಶ್ರಯದಾತನನ್ನೂ ಕರೆದ. ಅಂದರೆ ಅರಿಕೇಸರಿಯ ಈ ವಿಶೇಷಣ ಕವಿ ಇತ್ತುದು; ಅದೂ ತನ್ನದರಂತೆಯೇ ಇರುವಂಥದು. ಎಂದರೆ ತನ್ನ ಗುಣಕ್ಕನುಗುಣನಾದವನು ಅರಿಕೇಸರಿ ಎಂಬ ಭಾವವಿಲ್ಲಿದೆ.

ಅಲ್ಲದೆ, ಅದೇ ಕಾವ್ಯದ ಹದಿನಾಲ್ಕನೆಯ ಆಶ್ವಾಸದ ಐವತ್ತನಾಲ್ಕನೇ ಪದ್ಯವು ಮತ್ತೊಂದು ಕಾರಣದಿಂದ ಉಲ್ಲೇಖನೀಯ. ಆ ಪದ್ಯ ಹೀಗಿದೆ:

**ಎನೆ ಸಕಲಾವನೀತಳ ಜನಂ ಪಿರಿದುಂ ದಯೆಗೆಯ್ದು ಸಾರ್ಚೆ ಮೆ**
**ಲ್ಲನೆ ಪಿರಿದಪ್ಪ ಗೌರವದ ಮೈಮೆಯ ಮನ್ನಣೆಯೋಳಿಗಳ್ ಕರಂ**
**ಮನಮನಲರ್ಚೆ ಕೀರ್ತಿ ಜಗದೊಳ್ ನಿಲೆ ಪೇಟಿಸಿದಂ ಜಗಕ್ಕೆ ನ**
**ಚ್ಚಿನ ಕವಿತಾಗುಣಾರ್ಣವನಿನೀ ಕೃತಿ ಬಂಧನಮಂ ಗುಣಾರ್ಣವಂ**

ತಾನು ಈ ಕಾವ್ಯವನ್ನು ಈ ಬಗೆಯಲ್ಲಿ ರಚಿಸುವ ಮೂಲಕ ತನ್ನ ಆಶ್ರಯದಾತನ ಕೀರ್ತಿಯನ್ನು ಚಿರಸ್ಥಾಯಿಯಾಗಿ ಮಾಡುತ್ತಿದ್ದೇನೆ ಎಂಬ ಪ್ರಜ್ಞೆ ಪಂಪನಿಗಿತ್ತೆಂಬುದು ಇಲ್ಲಿ ವಿದಿತವಾಗುತ್ತದೆ. ಎಂದರೆ ರಾಜನಿಂದ ತನಗಾದ ಉಪಯೋಗಕ್ಕಿಂತಲೂ ತಾನು ಅವನಿಗೆ ಸಲ್ಲಿಸುತ್ತಿರುವ ಸೇವೆ ಹೆಚ್ಚು ಮೌಲಿಕವಾದುದೆಂಬ ಅರಿವು ಅವನಲ್ಲಿತ್ತು. (ತಮ್ಮಿಬ್ಬರ ಪ್ರಸ್ತಾಪ ಒಟ್ಟಿಗೆ ಬಂದಾಗ ಪಂಪ ತನ್ನ ವಿಶೇಷಣವನ್ನು ಮೊದಲು ಹೇಳಿಕೊಂಡು ಆನಂತರ ಅರಿಕೇಸರಿಯದನ್ನು ಉಲ್ಲೇಖಿಸುತ್ತಾನೆ ಎಂಬ ಅಂಶವೂ ಗಮನಾರ್ಹ).

ಇಡೀ 'ವಿಕ್ರಮಾರ್ಜುನ ವಿಜಯ'ವು ಪ್ರಜ್ಞಾಪೂರ್ವಕ ನೆಲೆಯಲ್ಲಿ ರಾಜತ್ವದ ವೈಭವೀಕರಣಕ್ಕೆ ಮತ್ತು 'ವೀರ ಭೋಜ್ಯಾ ವಸುಂಧರಾ' ಎಂಬ ರಾಜರ ಆದರ್ಶನಿರೂಪಣೆಗೆ ಮೀಸಲಾಗಿದೆ. ಆ ಕಾಲವು 'ವೀರಯುಗ' ಎನ್ನಿಸಿಕೊಳ್ಳಲು ಆಗಿನ ಸಾಮ್ರಾಜ್ಯಶಾಹಿ ಆಕಾಂಕ್ಷೆಗೆ ಸಾಧನವಾದ ಯುದ್ಧದ ಬಗೆಗಿನ ಮನೋಭಾವ. ಸಾಮಾನ್ಯ ಜನಕ್ಕೆ ಇದು ಬೇಕಿತ್ತೋ ಇಲ್ಲವೋ

(ಪ್ರಾಯಶಃ ಇಲ್ಲ), ರಾಜರಿಗಂತೂ ಇದು ಆವಶ್ಯಕವಾಗಿತ್ತು. ರಾಜರಿಗೆ ಪ್ರಿಯವಾದುದು ಲೌಕಿಕ ದೃಷ್ಟಿಕೋನದಿಂದಾಗಿ, ಅಂದರೆ ಹಣ ಮತ್ತು ಮಾನ್ಯತೆಗಳ ಕಾರಣದಿಂದ, ಜನರಿಗೂ ಬೇಕಾಗಿದ್ದಿತು. ಈ ಕಾರಣದಿಂದ ರಾಜತ್ವಪೂರಕ ಮೌಲ್ಯಗಳಿಗೆ ಬಹು ಬೆಲೆ ಬಂತು. "ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ। ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ" ಎಂಬ ಮನೋಭಾವವನ್ನು ಈ ಕಾರಣದಿಂದಲೇ ಜನರಲ್ಲಿ ಬಿತ್ತಲಾಯಿತು. ಕವಿಗಳೂ ತಮ್ಮ ಕಾವ್ಯಗಳಲ್ಲಿ ಇದನ್ನು ವೈಭವೀಕರಿಸಿದರು.

ಪಂಪ ಇದಕ್ಕೆ ಹೊರತಲ್ಲ. ತನ್ನ 'ವಿಕ್ರಮಾರ್ಜುನವಿಜಯ'ದಲ್ಲಿ ಅವನು ಉದ್ದಕ್ಕೂ ಮಾಡಿಕೊಂಡು ಬಂದಿರುವುದು ಇದನ್ನೇ. ಕಾವ್ಯದ ಹೆಸರೇ ಇದನ್ನು ಸೂಚಿಸುತ್ತದೆ; ಅದು ಭಾರತವಲ್ಲ, ವಿಕ್ರಮಾರ್ಜುನವಿಜಯ. ಅಲ್ಲಿನ ಮೊದಲ ಪದ್ಯದಿಂದ ಕೊನೆಯದರವರೆಗೆ ಕವಿ ಇದನ್ನು ಮಾಡಿದ್ದಾನೆ. ಕಾವ್ಯಗಾತ್ರದಲ್ಲಿ ಸುಮಾರು ಶೇಕಡ ನಲವತ್ತೈದರಷ್ಟು ಯುದ್ಧವರ್ಣನೆಗೆ ಮೀಸಲಾಗಿದೆ. ಮೊದಲ ಆಶ್ವಾಸದ ಮೂವತ್ತೇಳು ಪದ್ಯಗಳು (೧೪ ರಿಂದ ೫೧) ಕವಿಯು ತನ್ನ ಆಶ್ರಯದಾತನ ವಂಶಜರು ನಡೆಸಿದ ವೀರಕೃತ್ಯಗಳ ವರ್ಣನೆಗೆ ಮೀಸಲಾಗಿವೆ. ಹದಿನಾಲ್ಕನೆಯ ಆಶ್ವಾಸದ ಇಪ್ಪತ್ತಾರರಿಂದ ಮೂವತ್ತನೇ ಪದ್ಯದವರೆಗಿನ ಸಂಸ್ಕೃತ ವೃತ್ತಗಳಲ್ಲಿ ವೈತಾಳಿಕನ ಮಾತುಗಳ ಮೂಲಕವೂ, ಮುಂದಿನ ಏಳು ಕನ್ನಡ ಪದ್ಯಗಳಲ್ಲಿ ಮಂಗಳಪಾಠಕರ ಮೂಲಕವೂ ಅರಿಕೇಸರಿಯ ಶೌರ್ಯವನ್ನು ವೈಭವೀಕರಿಸಿ ವರ್ಣಿಸುತ್ತಾನೆ. ಅಲ್ಲದೆ ಅರ್ಜುನ ನಡೆಸಿದ ದಾಳಿಗಳೆಲ್ಲ ಅರಿಕೇಸರಿಯವೇ ಎಂಬಂತಿದೆ ಇಡೀ ಕಾವ್ಯದ ಚಿತ್ರಣ.

ಕಾವ್ಯದ ಮೊದಲ ಪದ್ಯದಿಂದ ಕೊನೆಯವರೆಗೂ ಕವಿ ವೀರತ್ವದ ವೈಭವೀಕರಣ ಮಾಡಿದ್ದಾನೆಂಬ ಪ್ರಸ್ತಾಪ ಹಿಂದೆಯೇ ಬಂದಿದೆ. ಈಗ 'ವಿಕ್ರಮಾರ್ಜುನ ವಿಜಯ'ದ ಪ್ರಾರ್ಥನಾ ಪದ್ಯಗಳನ್ನು ನೋಡೋಣ. ಮೊದಲ ಆಶ್ವಾಸದ ಮೊದಲ ನಾಲ್ಕು ಪದ್ಯಗಳಲ್ಲಿ ಕವಿಯು ಕ್ರಮವಾಗಿ ನಾರಾಯಣ, ಮಹೇಶ್ವರ, ಮಾರ್ತಾಂಡ ಹಾಗೂ ಮನೋಜರನ್ನು ಸ್ತುತಿಸಿದಂತೆ ಮೇಲುನೋಟಕ್ಕೆ ಕಾಣುತ್ತದೆ. ಆ ಪದ್ಯಗಳ ಪೂರ್ಣ ಪಾಠ ಹೀಗಿದೆ:

**ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ**
**ಜೀಯನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಮಾ**
**ತ್ಮೀಯ ಸುಪುಷ್ಪಪಟ್ಟಮನೊಡಂಬಡೆ ತಾಳ್ದಿಯುಮಿಂತುದಾತ್ತನಾ**
**ರಾಯಣನಾದ ದೇಮನೆಮಗೀಗರಿಕೇಸರಿ ಸೌಖ್ಯಕೋಟಿಯಂ**

**ಮುಳಿಸು ಲಲಾಟ ನೇತ್ರಶಿಖಿ ಮೆಚ್ಚೆ ವಿನೂತರಸಪ್ರಸಾದಮು**
**ಜ್ವಳ ಜಸಮಂಗಸಂಗತ ಲಸದ್ಭಸಿತಂ ಪ್ರಭುಶಕ್ತಿ ಶಕ್ತಿ ನಿ**
**ರ್ಮಳಮಣಿಭೂಷಣಂ ಫಣಿಭೂಷಣಮಾಗೆ ನೆಗಟ್ತೆಯಂ ಪುದುಂ**
**ಗೊಳಿಸಿದನೀಶ್ವರಂ ನೆಗಟ್ದುದಾರ ಮಹೇಶ್ವರನೀಗೆ ಭೋಗಮಂ**

**ಚಂಡವಿರೋಧಿ ಸಾಧನ ತಮಸ್ತಮಮೋಡೆ ವಿಶಿಷ್ಟ ಪದ್ಮಿನೀ**
**ಷಂಡಮರಲ್ದು ರಾಗದಿನೊಱಲ್ದಿರೆ ಯಾಚಕ ಭೃಂಗಕೋಟಿ ಕೈ**
**ಕೊಂಡು ನಿರಂತರಂ ತಗುಳ್ದು ಕೀರ್ತಿಸೆ ಮಿಕ್ಕಿಸೆವ ಪ್ರಚಂಡ ಮಾ**
**ರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜ ವಾಙ್ಮರೀಚಿಯಿಂ**

**ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಯೊಳ್ ಪೊದಳ್ದು ಸ**
**ನ್ನಿಹಿತವೆನಿಪ್ಪಪೂರ್ವ ಶುಭಲಕ್ಷಣ ದೇಹದೊಳೊಳ್ಪನಾಳ್ದು ಸಂ**
**ದಹಿಕಟಕ ಪ್ರಸಾದದೆ ಮನೋಜನುಮಂ ಗೆಲೆವಂದನಾಗಳುಂ**
**ಸಹಜಮನೋಜನೋಜನೆಮಗೀಗೆ ವಿಚಿತ್ರ ರತೋತ್ಸವಂಗಳಂ**

ಆದರೆ ಅಲ್ಲಿ ನಡೆದಿರುವುದು ಈ ದೇವತೆಗಳ ಸ್ತುತಿಯಲ್ಲ, ಬದಲಿಗೆ ಅವರಿಗಿಂತ ಮಿಗಿಲಾದ ತನ್ನ ಆಶ್ರಯದಾತ ಅರಿಕೇಸರಿಯ ಸ್ತುತಿ. (ಹೋಲಿಕೆಯಿಂದಾಗಿ ದೇವತೆಗಳ ಗೇಲಿ!) ಮೊದಲ ಪದ್ಯದಲ್ಲಿ ನಾರಾಯಣನಿಗಿಂತ ಮಿಗಿಲಾದ "ಉದಾತ್ತ ನಾರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ" ಎಂದೂ; ಎರಡನೆಯದರಲ್ಲಿ "ಉದಾರ ಮಹೇಶ್ವರನೀಗೆ ಭೋಗಮಂ" ಎಂದೂ; ಮೂರನೆಯ ಪದ್ಯದಲ್ಲಿ "ಪ್ರಚಂಡ ಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜ ವಾಙ್ಮರೀಚಿಯಿಂ" ಎಂದೂ; ಹಾಗೂ ನಾಲ್ಕನೆಯದರಲ್ಲಿ "ಸಹಜಮನೋಜನೋಜನೆಮಗೀಗೆ ವಿಚಿತ್ರ ರತೋತ್ಸವಂಗಳಂ" ಎಂದೂ ಕವಿ ಪ್ರಾರ್ಥಿಸುತ್ತಾನೆ. ವೈದಿಕ ದೇವರು ನಾರಾಯಣನಾದರೆ ತನ್ನ ಆಶ್ರಯದಾತ 'ಉದಾತ್ತ ನಾರಾಯಣ'; ಅವನು ಮಹೇಶ್ವರನಾದರೆ, ತನ್ನ ಪ್ರಭು 'ಉದಾರ ಮಹೇಶ್ವರ'; ಆತ ಚಂಡವಿರೋಧಿಯಾದರೆ ತನ್ನ ಯಜಮಾನ 'ಪ್ರಚಂಡ ಮಾರ್ತಾಂಡ'; ಹಾಗೆಯೇ ಮೂಲದವನು ಮನೋಜನಾದರೆ, ತನ್ನೊಡೆಯ 'ಸಹಜಮನೋಜನೋಜ'.[೨]

ಇನ್ನು ಕಾವ್ಯದ ಕೊನೆಯ ಕಡೆ ಗಮನ ಹರಿಸೋಣ. ಹದಿನಾಲ್ಕನೆಯ ಆಶ್ವಾಸದ ಅರವತ್ತನಾಲ್ಕನೆಯ ಪದ್ಯವನ್ನು (ಅಂದರೆ ಇಡೀ ಕಾವ್ಯದ ಕೊನೆಯ ಪದ್ಯದ ಹಿಂದಿನದು) ನೆನಪಿಸಿಕೊಳ್ಳೋಣ:

**ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ**
**ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪ ವಿದ್ಯಾ**
**ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ**
**ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ**

ಭಾರತವನ್ನು ಲೋಕಪೂಜ್ಯವಾಗಿ ಮಾಡಿರುವ ಪಾತ್ರಗಳಿವು: ದುರ್ಯೋಧನ, ಇನತನಯ, ಭೀಮಸೇನ, ಮದ್ರೇಶ, ಅಮರಸಿಂಧೂದ್ಭವ, ಕುಂಭೋದ್ಭವ, ಫಲ್ಗುಣ ಹಾಗೂ ಧರ್ಮಪುತ್ರ. ಕವಿ ಇಲ್ಲಿ (ಪಾಂಡವ-ಕೌರವ) ಉಭಯಪಕ್ಷಗಳ ಪಾತ್ರಗಳನ್ನೂ ಒಂದೆಡೆ ಉಲ್ಲೇಖಿಸಿ ಇವರು ಭಾರತದ 'ಪೂಜ್ಯತೆ'ಗೆ ಕಾರಣ ಎನ್ನುತ್ತಿದ್ದಾನೆ. ಅಲ್ಲದೆ, ಈ ಒಂದೊಂದು ಪಾತ್ರವೂ ಒಂದೊಂದು ಗುಣದ ಪ್ರತೀಕವೆಂದಿಲ್ಲಿ ವರ್ಣಿತವಾಗಿದೆ. ಆ ಗುಣಗಳು ಚಲ, ನನ್ನಿ, ಗಂಡು, ಬಲ, ಅತ್ಯುನ್ನತಿ, ಚಾಪವಿದ್ಯಾಬಲ, ಸಾಹಸ, ನಿರ್ಮಲಚಿತ್ತ –

ಇವುಗಳು. ಈ ಗುಣಗಳ ಸ್ವರೂಪವೆಂತಹುದು? ಪಾತ್ರಗಳೂ ಮತ್ತವು ಸಂಕೇತಿಸುವ ಗುಣಗಳು – ಇವುಗಳನ್ನು ಒಟ್ಟು ಕತೆಯ ಹಿನ್ನೆಲೆಯಲ್ಲಿ ಪರಿಕಿಸಿದರೆ ಅವುಗಳ ಸ್ವರೂಪ ಕಣ್ಮುಂದೆ ನಿಲ್ಲುತ್ತದೆ. ಚಲವನ್ನು ತೆಗೆದುಕೊಳ್ಳಿ; ಇದು ದುರ್ಯೋಧನನ ವಿಶಿಷ್ಟ ಲಕ್ಷಣ. ಎಲ್ಲವನ್ನೂ ಎಲ್ಲರನ್ನೂ ಕಳೆದುಕೊಂಡಾಗಲೂ ಅವನು ಆಡುವ ಮಾತು "ಚಲಮನೆ ಬಲ್ವಿಡಿವಿಡಿದೆಂ" ಎಂಬುದು. ಅವನು ಚಕ್ರವರ್ತಿ; ಅವನ ಚಲ ಎಂತಹುದೆಂದರೆ ಏಕಾಂಗಿಯಾದರೂ ನಿಸ್ಸಹಾಯಕನಾದರೂ ಇರುವಂಥದು. ಅವನು ಸಾಯುವಾಗಲೂ ಅದು ತುಂಬಿತ್ತು. ರಾಜನ ಗುಣ ಇಂತಹುದಾಗಿರಬೇಕು. ಮುಂದೆ, ಕರ್ಣನ ನನ್ನಿ. ಅವನ ನನ್ನಿ ಎಂತಹುದು? ತನ್ನ ಯಜಮಾನನಿಗಾಗಿ "ಎನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್" ಎಂಬಂತಹುದು. ಒಡೆದ ಮನಸ್ಸಿನಿಂದ ಶತ್ರುಗಳನ್ನು ಎದುರಿಸುವಾಗ ಅವನ ಸ್ವಾಮಿನಿಷ್ಠೆ ಮಾತ್ರ ಒಡೆಯದೆ ಉಳಿದಿತ್ತು; ಇದು ಅವನ ನನ್ನಿಯ ಸ್ವರೂಪ. ಹಾಗೆಯೇ ಪರಾಕ್ರಮ, ದೇಹಬಲ, ಅತ್ಯುನ್ನತಿ, ಚಾಪವಿದ್ಯೆ, ಸಾಹಸ ಮತ್ತು ನಿರ್ಮಲಚಿತ್ತ – ಇವುಗಳನ್ನು ಪ್ರತಿನಿಧಿಸುವ ಪಾತ್ರಗಳೂ ಕೊನೆಯವರೆಗೂ (ಅಂದರೆ ಮಹಾಭಾರತ ಯುದ್ಧದ ಕೊನೆಯವರೆಗೆ) ಆ ಮೌಲ್ಯಗಳಿಗಾಗಿ ಬದುಕಿದವು. ಈ ಎಲ್ಲ ಪಾತ್ರಗಳೂ ತಮ್ಮ ವಿಶಿಷ್ಟ ಗುಣಗಳನ್ನು ಮೆರೆದದ್ದು ಯುದ್ಧಭೂಮಿಯಲ್ಲಿ, ತಮ್ಮ ಪ್ರಾಣಗಳನ್ನು ಒತ್ತೆಯಿಟ್ಟು (ಬೇರೊಂದು ಸಂದರ್ಭದಲ್ಲಿ ಈ ಕಾವ್ಯದಲ್ಲಿಯೇ 'ಭಾರತಂ ಕಲಹಂ' ಎಂಬ ಮಾತಿದೆ). ಅಂದರೆ ಈ ಎಲ್ಲ ಪಾತ್ರಗಳ ಒರೆಗಲ್ಲು ಯುದ್ಧ, ಉಳಿದಂತೆ ಬದುಕಿನ ಬಗೆಯಲ್ಲ. ಯುದ್ಧ ರಾಜರ ಸುತ್ತ ತಾನೆ ಹೆಣೆದುಕೊಳ್ಳುವುದು? ಅಂದರೆ ಭಾರತವನ್ನು 'ಲೋಕಪೂಜ್ಯವಾಗಿಸುವ' ಈ ಗುಣಗಳೂ ಪೂಜ್ಯವಾದವು. ಅವೆಲ್ಲ ಯುದ್ಧಸಂಬಂಧಿ ಗುಣಗಳು, ರಾಜಪರವಾದ ಮೌಲ್ಯಗಳು. ಅಂದರೆ ಪಂಪ ಈ ಮೌಲ್ಯಗಳಿಂದಾಗಿ ಬದುಕು ಮೌಲಿಕವಾಗುತ್ತದೆ, ಅಂಥ ಬದುಕು ಲೋಕಪೂಜಿತವಾಗುತ್ತದೆ ಎಂಬ ಧ್ವನಿಯನ್ನು ಸೂಸುತ್ತಿದ್ದಾನೆ. ಪ್ರಾಯಃ ಒಬ್ಬ ವ್ಯಕ್ತಿಯ ಲೌಕಿಕ ಬದುಕು ಸಾರ್ಥಕವಾಗುವುದು ಈ ಮೌಲ್ಯಗಳಿಂದ, ಯುದ್ಧಸಂಬಂಧೀ ಮೌಲ್ಯಗಳಿಂದ. ಅಂದರೆ ತಾನು ಬೆಳಗುತ್ತಿರುವ ಲೌಕಿಕ ಇದೇ ಆಗಿರಬಹುದು. ಇಂತಹ ಗುಣಗಳನ್ನು ಮೆರೆಯುವುದರ ಮೂಲಕವೇ ಲೌಕಿಕ ಬದುಕು ಸಾರ್ಥಕಗೊಳ್ಳುವುದು. ಈ ಪದ್ಯದಲ್ಲಿ ಕೃಷ್ಣನ ಪ್ರಸ್ತಾಪವಿಲ್ಲದ ಬಗ್ಗೆ ಅನೇಕ ವಿದ್ವಾಂಸರು ನಾನಾ ಬಗೆಯ ಊಹೆಗಳನ್ನು ಮಾಡಿದ್ದಾರೆ: ಕೃಷ್ಣ ದೇವರಾದುದರಿಂದ ಅವನು ಎಲ್ಲಡೆಯೂ ಇದ್ದಾನೆ ಎಂಬ ಭಾವನೆಯಿಂದ ಅವನ ಹೆಸರನ್ನಿಲ್ಲಿ ಹೇಳಿಲ್ಲ ಎಂಬುದರಿಂದ ಹಿಡಿದು, ಪಂಪ ಜೈನನಾದುದರಿಂದ ವೈದಿಕ ದೇವರಾದ ಕೃಷ್ಣನನ್ನು ಹೆಸರಿಸಿಲ್ಲ ಎಂಬುವವರೆಗೆ. ಆದರೆ ಈಗ ನಾವೀಗ ಮಾಡಿದ ವಿಶ್ಲೇಷಣೆಗನುಗುಣವಾಗಿ ಕೃಷ್ಣನ ಹೆಸರನ್ನನಿಲ್ಲಿ ಸೇರಿಸದಿರುವುದು ಅವನು ಇಲ್ಲಿ ಹೆಸರುಗೊಂಡವರಂತೆ ಯಾವುದೇ ಮೌಲ್ಯದ ಸಂಕೇತವಲ್ಲ ಎಂಬುದರಿಂದ. ಅವನು, ಪಂಪನ ದೃಷ್ಟಿಯಲ್ಲಿ 'ಶ್ವೇತಕೃಷ್ಣಕಾರಕ'ನಾದ ಮೆಕೈವಿಲ್ಲಿಯನ್ ತಂತ್ರಗಾರ, ಅಷ್ಟೆ.

ಕಾವ್ಯದ ಒಡಲಲ್ಲಿಯೂ ಅಲ್ಲಲ್ಲಿ ಇಂತಹ ಗುಣಗಳ ಹೊಗಳಿಕೆ ಬರುತ್ತದೆ. ತನ್ನನ್ನು ಮಗನೆಂದು ಕುಂತಿ ಒಪ್ಪಿಕೊಂಡುದರಿಂದ ತನಗೆ ಕುಲ(ಕ್ಷತ್ರಿಯತ್ವ)ವೂ ಬಂತು, ಜೊತೆಗೆ ಶ್ರೇಷ್ಠ ಲೌಕಿಕ ಗುಣಗಳು ಪ್ರಾಪ್ತವಾದವು ಎಂದು ಕರ್ಣ ಹೇಳುತ್ತಾನೆ (ಆಶ್ವಾಸ ೯, ಪದ್ಯ ೮೦):

**ಚಲಮುಂ ಚಾಗಮುಮಳವುಂ**
**ಕಲಿತನಮುಂ ಕುಲಮುಮೀಗಳೆನ್ನಯ ಮೆಯ್ಯೊಳ್**
**ನೆಲಸಿದುವು ನಿಮ್ಮ ಕರುಣಾ**
**ಬಲದಿಂ ನೀವೆನ್ನನಿಂದು ಮಗನೆಂದುದಱಿಂ**

ಭೀಷ್ಮನಿಗೆ ಸೇನಾಧಿಪತಿಯ ಪಟ್ಟವನ್ನು ಕಟ್ಟುವ ಪ್ರಸಂಗದಲ್ಲಿಯೂ ಕರ್ಣನು "ಚಲಂ ಗುಣಂ ಗುಣಂ ಕುಲಂ ಅಭಿಮಾನಮೊಂದೆ ಕುಲಂ ಅಣ್ಮು ಕುಲಂ" ಎಂದು ಘೋಷಿಸುತ್ತಾನೆ. ಕರ್ಣನ ಸಾವಿನ ಸಂದರ್ಭದಲ್ಲಿ "ಚಾಗದ ನನ್ನಿಯ ಕಲಿತನದಾಗರಮೆನೆ ನೆಗೞ್ದ" ದೇಹ ಕರ್ಣನದ್ದು ಎಂದು ಕವಿ ವರ್ಣಿಸುವುದಲ್ಲದೆ, (ಹನ್ನೆರಡನೆಯ ಆಶ್ವಾಸ, ಪದ್ಯ ಇನ್ನೂರ ಹದಿನೇಳು)

**ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ**
**ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ**
**ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ**
**ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ**

ಎಂದು ಕರ್ಣನ ಗುಣಗಾನ ಮಾಡುತ್ತಾನೆ. ಕವಿಗೆ ಕರ್ಣ ಇಷ್ಟು ಆಪ್ತನಾಗಿರುವ ಕಾರಣ ಅವನ ಗುಣಗಳು; ಅವೆಂದರೆ ಹದಿನಾಲ್ಕನೆಯ ಆಶ್ವಾಸದ ಅರವತ್ತನಾಲ್ಕನೆಯ ಪದ್ಯದಲ್ಲಿ ಉಕ್ತವಾದ ಗುಣಗಳೇ; ಅಂದರೆ ಚಲ, ಚಾಗ, ಅಳವು, ಕಲಿತನ, ನನ್ನಿ – ಇವುಗಳೇ. ಹಲವಾರು ಶ್ರೇಷ್ಠ ಗುಣಗಳ ಆಗರವಾಗಿದ್ದ ಕರ್ಣ ಒಂದು ರೀತಿಯಲ್ಲಿ ಪಂಪನ ವೀರಮಾದರಿ.

ಪಂಪನಂತಹ ಕವಿ ತನ್ನ ಕಾಲದ ಆಗುಹೋಗುಗಳಿಗೆ ಕನ್ನಡಿ ಹಿಡಿಯುವ ರೀತಿ ಇದು. ಆದರೆ ಕವಿಯ ಪ್ರತಿಭೆ (ಅಂದರೆ ಸನ್ನಿವೇಶವನ್ನು ವ್ಯಕ್ತ್ಯತೀತ ನೆಲೆಯಲ್ಲಿ ಪರಿಭಾವಿಸುವ ಸಾಮರ್ಥ್ಯ; ಇದೇ ಸಾಧಾರಣೀಕರಣ ಎನ್ನಬಹುದೇ?) ಇಂತಹ ಪೂರ್ವಸಿದ್ಧ ಮೌಲ್ಯಗಳಿಗೆ ಬಲಿಬೀಳದೆ ನಿರ್ಭಾವುಕವಾಗಿ ಚಿಂತಿಸಬಲ್ಲದು; ಎಲ್ಲ ಕಾಲದ ಮಾನವ ಬದುಕಿಗೆ ಅನ್ವಯಿಸಬಹುದಾದುದನ್ನು ಗುರುತಿಸಬಲ್ಲುದು. ಹೀಗಾಗಿಯೇ ತನ್ನ ದಟ್ಟ ರಾಜತ್ವಪರವಾದ ಜಾಗ್ರತಪ್ರಜ್ಞೆಯ ನಿಲವಿನ ಹಿನ್ನೆಲೆಯಲ್ಲಿಯೂ ಪಂಪ ಅದನ್ನೂ ಮೀರಿದ ಮಾತುಗಳನ್ನಾಡಬಲ್ಲ. 'ವಿಕ್ರಮಾರ್ಜುನ ವಿಜಯಂ'ನಲ್ಲಿ ಕರ್ಣನಿಗೆ ಸಾರಥಿಯಾಗೆಂದು ದುರ್ಯೋಧನನು ಶಲ್ಯನನ್ನು

ಕೇಳಿಕೊಳ್ಳುವ ಪ್ರಸಂಗವನ್ನಿಲ್ಲಿ ನೆನಪಿಸಿಕೊಳ್ಳಬಹುದು. ಕೆಳಜಾತಿಯವನಿಗೆ ತಾನು ಸಾರಥಿಯಾಗಬೇಕೆಂಬ ಅವನ ಪ್ರಾರ್ಥನೆಯನ್ನು ಕೇಳಿದಾಗ ಶಲ್ಯ ಕೆರಳಿ ಹೇಳುವ ಮಾತುಗಳು ಹನ್ನೆರಡನೇ ಆಶ್ವಾಸದ ತೊಂಬತ್ತೆರಡು ಹಾಗೂ ತೊಂಬತ್ತಮೂರನೇ ಪದ್ಯಗಳಲ್ಲಿವೆ.

ಕಲಿಯನೆ ಪಂದೆ ಮಾಟ್ಪ ಕಡುವಂದೆಯನೊಳ್ಗಲಿ ಮಾಟ್ಪ ತಕ್ಕನಂ
ಪೊಲೆಯನೆ ಮಾಟ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾಟ್ಪ ತಮ್ಮೊಳ
ಗ್ಗಲಿಸಿ ಪೊದಳ್ದ ಪರ್ವಿದವಿವೇಕತೆಯಿಂ ನೃಪ ಚಿತ್ತವೃತ್ತಿ ಸಂ
ಚಲಮದಱಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ

ಅನುಪಮ ವಿಕ್ರಮಕ್ರಮಮುದಾರಗುಣಂ ಋತವಾಕ್ಯಮೆಂಬ ಪೆಂ
ಪೆನಲಿವು ಮೂಱೆ ನಾಲ್ಕೆ ಗುಣಮತ್ತ ಮದಾನ್ವಿತ ರಾಜಬೀಜಸಂ
ಜನಿತಗುಣಂ ಮದಂ ಮದಮನಾಳ್ದವಿವೇಕತೆಯಿಂದಮಲ್ತೆ ತೊ
ಟ್ಟೆನ ಮೊಲೆವಾಲನುಂಡ ಗುಣಮಿಂತಿದನಾರ್ ಕಿಡಿಪರ್ ನರೇಂದ್ರರೊಳ್

ಇಲ್ಲಿ ಅವನು ವ್ಯಕ್ತಪಡಿಸುತ್ತಿರುವ ಅಭಿಪ್ರಾಯವೆಂದರೆ, "ತಮ್ಮೊಳಗ್ಗಲಿಸಿ ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಂ" ಹಾಗೂ "ಮತ್ತ ಮದಾನ್ವಿತ ರಾಜಬೀಜಸಂಜನಿತ ಗುಣಂ ಮದಂ, ಮದಮನಾಳ್ದವಿವೇಕತೆ" ಎಂಬುದು. ದೊಡ್ಡ ಕವಿ ತನ್ನ ಕಾಲದ ವಾಸ್ತವತೆಗಳನ್ನು ಚಿತ್ರಿಸುತ್ತಲೇ ಸಾರ್ವತ್ರಿಕವಾಗಿ ಮೌಲಿಕವಾದುದನ್ನು ಎತ್ತಿಹಿಡಿಯುತ್ತಾನೆ. ದಟ್ಟ ನಂಬಿಕೆಯ ನೆಲದಲ್ಲಿಯೇ ಮೊಳೆಯುವ ಸತ್ಯಸಸ್ಯಗಳಿವು. ರಾಜನಿಷ್ಠೆಯ ವಾದ್ಯಗಳ ನಡುವೆಯೇ ಕೇಳಿಬರುವ ರಾಜವಿರೋಧಿ ಧ್ವನಿಯಿದು. ಹತ್ತನೆ ಶತಮಾನದ ಕನ್ನಡನಾಡು ಯುದ್ಧ ಮತ್ತು ಜಾತಿ ಸಂಕಟಗಳಿಂದ ತಲ್ಲಣಗೊಂಡಿತ್ತು. ಒಟ್ಟ ಸಮಾಜ ಇವೆರಡನ್ನೂ ಮೀರಲಾರದವೆಂದು ಭಾವಿಸಿದಂತಿದ್ದರೂ ಸೂಕ್ಷ್ಮದಲ್ಲಿ ಅವೆರಡರ ವಿರುದ್ಧವಾದ ಭಾವನೆ ಜನಮನದಲ್ಲಿ ನೆಲೆಗೊಂಡಿತ್ತೆನಿಸುತ್ತದೆ. ಇದಾದ ಒಂದೂವರೆ ಶತಮಾನಾನಂತರ ನಡೆದ ವಚನ ಚಳವಳಿ ಈ ಎರಡರ ವಿರುದ್ಧವೂ ದಿಟ್ಟ ನಿಲವನ್ನು ತೆಗೆದುಕೊಂಡದ್ದನ್ನು ನೆನಪಿಸಿಕೊಂಡರೆ, ಪಂಪ ತನಗರಿವಿಲ್ಲದೆಯೇ ಪ್ರಾತಿಭ ನೆಲೆಯಲ್ಲಿ ಜನರ ನೈಜ ಭಾವನೆಗಳನ್ನು ಧ್ವನಿಸುತ್ತಿರುವ ಹಾಗೆ ತೋರುತ್ತದೆ. ಈ ಎರಡನ್ನೂ ಚಿತ್ರಿಸುವುದರಲ್ಲಿ ಕಾವ್ಯದ ದ್ವಂದ್ವವಿದೆಯೆಂದೇನೂ ಭಾವಿಸಬೇಕಾದ್ದಿಲ್ಲ. ಶ್ರೇಷ್ಠ ಕಾವ್ಯ ಸಮಕಾಲೀನತೆಯನ್ನು ಮೇಲ್ಪದರದಲ್ಲಿ ಮಾತ್ರವಲ್ಲದೆ ಅದರ ಅಂತರಾಳದ ನೆಲೆಯಲ್ಲಿಯೂ ಒಳಗೊಳ್ಳುತ್ತದೆ.

**ಅಡಿ ಟಿಪ್ಪಣಿ:**

೧. ಇದನ್ನು ಬ್ರಹ್ಮಶಿವ ತನ್ನ 'ಸಮಯ ಪರೀಕ್ಷೆ'ಯಲ್ಲಿ ನೇರವಾಗಿಯೇ ಹೇಳುತ್ತಾನೆ:

ಕ್ಷತ್ರಿಯನೆ ಧಾತ್ರಿಗೊಡೆಯಂ
ಕ್ಷತ್ರಿಯನಾರ್ಗೇನನಿತ್ತನದು ದೆಯ್ವಕೃತಂ।
ಕ್ಷತ್ರಿಯನೆ ತೀರ್ಥಕರನಾ
ಕ್ಷತ್ರಿಯನದಱಿಂದೆ ಪರಿಯನೆಲ್ಲದಂದೊಳಂ॥

(ಸಮಯ ಪರೀಕ್ಷೆ, ೨.೨೩)

೨. ಪಂಪನು ನಿರೀಶ್ವರನಾದ ನವಜೈನನಾದುದರಿಂದ ವೈದಿಕ ದೇವರುಗಳ ಬಗ್ಗೆ ಅಂಥ ಭಕ್ತಿಯಿರಲಿಲ್ಲವೇ, ಅಥವಾ ದೈವಭಕ್ತಿಯನ್ನೂ ಮೀರಿಸಿದ ಅವನ ಸ್ವಾಮಿಭಕ್ತಿ ಕಾರಣವೇ, ಅಂತೂ ತನಗೆ ಸೌಖ್ಯಕೋಟಿ, ಭೋಗ, ಹೃದಯಾಂಬುಜದ ಅಲರ್ಚುಗೆ ಹಾಗೂ ವಿಚಿತ್ರ ರತೋತ್ಸವಗಳನ್ನು ನೀಡುವವನು ಅರಿಕೇಸರಿ ಎಂಬ ಭಾವನೆ ಪಂಪನಲ್ಲಿದ್ದಂತಿದೆ. ವೈದಿಕ ದೇವರೊಡನೆ ಹೋಲಿಸಿ ತನ್ನ ಆಶ್ರಯದಾತನೇ ಅವರಿಗಿಂತ ಮಿಗಿಲು ಎಂಬ ರೀತಿಯ ವರ್ಣನೆ ಮಾಡಲು ಪಂಪನಿಗೆ ಕವಿರಾಜಮಾರ್ಗಕಾರ ಮಾದರಿಯಾಗಿರುವಂತಿದೆ. 'ಕವಿರಾಜಮಾರ್ಗ'ದ ಮಂಗಳಾಚರಣೆಯ ಎರಡು ಪದ್ಯಗಳಲ್ಲಿ ಕವಿ ನಾರಾಯಣನಿಗೂ ನೃಪತುಂಗನಿಗೂ ಹೋಲಿಕೆಯನ್ನು ಮಾಡುತ್ತಿದ್ದಾನೆ.

ಶ್ರೀತಳ್ತುರದೊಳ್ ಕೌಸ್ತುಭ
ಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂ
ಪ್ರೀತಿಯಿನಾವನನಗಲಳ್
ನೀತಿನಿರತರನುದಾರನಾ ನೃಪತುಂಗಂ

ಕೃತಕೃತ್ಯಮಲ್ಲನಪ್ರತಿ
ಹತವಿಕ್ರಮನೊಸೆದು ವೀರನಾರಾಯಣನ
ಪ್ಪತಿಶಯಧವಳಂ ನಮಗೀ
ಗತರ್ಕಿತೋಪಸ್ಥಿತ ಪ್ರತಾಪೋದಯಮಂ

ಎರಡನೆಯ ಪದ್ಯದ ಕೊನೆಗೆ "ವೀರನಾರಾಯಣನಪ್ಪತಿಶಯಧವಳಂ ನಮಗೀಗತರ್ಕಿತೋಪಸ್ಥಿತ ಪ್ರತಾಪೋದಯಮಂ" ಎಂದು ಪ್ರಾರ್ಥಿಸುತ್ತಾನೆ. ಅಂದರೆ ತನಗೆ ಪ್ರತಾಪೋದಯವನ್ನು ಮಾಡುವವನು 'ಅತಿಶಯಧವಳ' ಎಂಬ ನಂಬಿಕೆಯಿಲ್ಲಿ ನಿಚ್ಚಳವಾಗಿದೆ. ಈ ಸ್ತುತಿಯು ಪಂಪನ ಪದ್ಯಗಳಿಗೆ ಮಾದರಿಯಾಗಿವೆ.

❑❑

# ಅಂತಃಪುರಗೀತೆ – ಒಂದು ಅಂತರವಲೋಕನ

– ಕಬ್ಬಿನಾಲೆ ವಸಂತ ಭಾರದ್ವಾಜ್

ಡಿವಿಜಿಯವರು ರಚಿಸಿದ 'ಅಂತಃಪುರಗೀತೆ' ಸೌಂದರ್ಯತತ್ತ್ವ ಪ್ರತಿಪಾದನೆಯ ರಸಕಾವ್ಯ. ಅದರ ಹೆಸರೇ ಹೇಳುವಂತೆ, ಅದು ಶ್ರೀ ಕೇಶವನ ಅಂತಃಪುರಗೀತೆ. ಭಗವಂತನ ವಿಶ್ವದ್ಯುತಿಶಕ್ತಿಯೇ ಶ್ರುತಿಸೌಖ್ಯವಾಗಿ ಮಾನುಷ್ಯನರ್ತನದ ಆನಂದಲಹರಿಯಾದ ಕಾವ್ಯರೂಪ. ಬೇಲೂರಿನ ದೇಗುಲದ ಶಿಲ್ಪಸೌಂದರ್ಯವನ್ನು ದೃಷ್ಟಿಯಲ್ಲಿರಿಸಿಕೊಂಡು ಅವರು ಕಟ್ಟಿದ ಕಾವ್ಯ ರಸಲೋಕ ನಿರ್ಮಾಣದಲ್ಲಿ ಸಾರ್ಥಕಗೊಂಡಿರುವುದು ವಿಶೇಷವಾಗಿದೆ. ಶಿಲಾಬಾಲೆಯರನ್ನು 'ಶಾಲಾಪಗೆಯಾ ಶೂಲಂಬೊಲ್', ಎಂದು ಕರೆದುದರಲ್ಲಿಯೇ ಅಧ್ಯಾತ್ಮನಿಷ್ಠೆಯಿದೆ; ಕಾಲವೆಂಬ ನದಿಯ ದಡದ ಹಾಗಿರುವ ಆ ಶಿಲಾಬಾಲಿಕೆಯರು ಅಲೌಕಿಕವಾದ ಆನಂದಾಮೃತವನ್ನು ಮನುಷ್ಯರಿಗೆ ಉಣಬಡಿಸಲು ಬಂದರೆಂಬ ಕಲ್ಪನೆಯೇ ಉದಾತ್ತವಾದುದು.

**ಅದಿತಿಯ ಸುತರಿಂಗಮೃತವನಚ್ಯುತ–**
**ನೊದವಿಸಿ ನರರಿಗಮದನುಣಿಸಲ್**
**ವಿಧಿಸಿದ ಮೋಹಿನಿಯಂಶಭವೆಯರೀ**
**ಮದನಿಶೆಯರ್ ವಿಧುವದನಿಕೆಯರ್**

ಈ ಮದನಿಕೆಯರು ದೇಶವಿದೇಶಗಳಿಂದ ಬಂದ ಬಹುಭಾಷಾ ವಿಲಾಸಿನಿಯರು. ಹಾಗಾಗಿ ಶ್ರೀ ಕೇಶವನ ಅಂತಃಪುರವು 'ವಾಸವನೋಲಗಕಿದು ಮಿಗಿಲಂತೆ' ಎಂದು ಕಂಗೊಳಿಸುತ್ತದೆ. ಶೃಂಗಾರನರ್ತನದಿಂದ ಕೇಶವನ ಮನಸ್ಸನ್ನು ಮುದಗೊಳಿಸಲು ಬಂದ ಈ ಮದನಿಕೆಯರ ಹೆಸರುಗಳೂ ಮನೋಹರ. ಮುರಜಾಮೋದೆ ಮೃದಂಗ ಬಾರಿಸುವವಳಾದರೆ, ಮುರಳೀಧರೆ ಕೊಳಲನ್ನು ಊದುವವಳು. ನಾಗವೈಣಿಕೆಯ ಕೈಯಲ್ಲಿ, ನಾಗವೀಣೆ ಕಂಗೊಳಿಸಿದರೆ ನಾಟ್ಯಸುಂದರಿ ನೃತ್ಯಕಲಾ ಸರಸ್ವತಿಯಾಗಿ ಕಂಡುಬರುತ್ತಾಳೆ. ಮುಕುರಮುಗ್ಧೆ ಕನ್ನಡಿ ಹಿಡಿದು ನಿಂತಿದ್ದರೆ ತಾಂಡವೇಶ್ವರಿ ತಾಂಡವನಾಟ್ಯವನ್ನು ನರ್ತಿಸುತ್ತಿದ್ದಾಳೆ; ಮಂಜುಳೆ, ಕಬರಿ, ಕುಟಿಲಕುಂತಳೆಯರ ಕೇಶವಿನ್ಯಾಸ ಮನೋಹರವಾಗಿದೆ: ವೀಟೀಧರೆ ವೀಳ್ಯಹಿಡಿದು ನಿಂತರೆ, ಪಾಟೀರ ಸಂಸಿಕ್ತಚಮರೆ ಸುಗಂಧಯುಕ್ತ ಬೀಸಣಿಗೆಯನ್ನು ಬೀಸುತ್ತಿದ್ದಾಳೆ. ಪ್ರಣಯವಂಚಿತೆ, ಕಲಹಾಂತರಿತೆ, ಪ್ರಣಯಕುಪಿತೆ, ವಿಲಾಸಿಕೆಯರು ಶೃಂಗಾರರಸದ ವಿಭಿನ್ನಾವಸ್ಥೆಗಳಿಗೆ ಪ್ರತಿಮೆಗಳಾಗಿದ್ದಾರೆ:

### ಪದ, ಗಾನ, ಅಭಿನಯ

ಡಿವಿಜಿಯವರ ಕಾವ್ಯ ಕೇವಲ ಸಾಹಿತ್ಯದ ಸೊಗಸಲ್ಲ. ಅಲ್ಲಿ ಸಾಹಿತ್ಯದೊಂದಿಗೆ ಸಂಗೀತವೂ, ಅದನ್ನಾಧರಿಸಿ ನೃತ್ಯವೂ ಮೇಳೈಸಿದೆ. ಉದಾತ್ತವಾದ ಭಾವವೊಂದು ಉತ್ತಮ ಸಂವಹನ ಸಾಮರ್ಥ್ಯವನ್ನು ಪಡೆಯಬೇಕಾದರೆ ಪದ, ಗಾನ ಮತ್ತು ಅಭಿನಯಗಳ ತ್ರಿವೇಣಿಸಂಗಮವಿರಬೇಕೆಂದು ಅವರೇ ಒಂದೆಡೆ ಹೇಳುತ್ತಾರೆ.

**ಹೃದಯದ ಭಾಷಿಕೆ ಸಂಪೂರ್ಣಂಗೊಳೆ**
**ಪದಗಾನಾಭಿನಯ ತ್ರಯಮಂ**
**ಹದದಿಂದೊಂದಿರವೇಳ್ಕುಮೆನುವರೀ**
**ಮದನಿಕೆಯರ್ ರಸಭಣನಿಕೆಯರ್**

ಸಾಹಿತ್ಯವು ಹಾಡಿನ ಮೂಲಕ ಹೊರಹೊಮ್ಮಿ, ಅದುವೇ ನಾಟ್ಯಾಭಿನಯದಿಂದ ಪ್ರಕಟವಾದಾಗ ಹೃದಯದ ಮಾತು ಸಂಪೂರ್ಣವೆನಿಸುತ್ತದೆ ಎಂಬ ಈ ಪದ್ಯದ ಭಾವ ಗಮನಾರ್ಹವಾದುದು. ಪದ, ಗಾನ, ಅಭಿನಯಗಳು ಏಕತ್ರಗೊಂಡು ಇತೋಪ್ಯತಿಶಯವಾದ ಸುಖವನ್ನು ನೀಡುವಂತಾದರೆ ಹೃದಯದ ಭಾಷಿಕೆ ಸಾರ್ಥಕವಾಗುವುದು. ಇದೇ ಭಾವವನ್ನು ಇನ್ನೊಂದೆಡೆ ಇನ್ನಷ್ಟು ಸ್ಪಷ್ಟವಾಗಿ ನೋಡಬಹುದು.

**ಪದಮಾತ್ರ ತಾನೆಂತು ಹೃದಯೇಂಗಿತಂಗಳ**
**ವಿದತವಾಗಿಪುದರ್ಥಚ್ಯುತಿಯಾಗದಂತೆ**
**ಒದವಿಕೂಡಿರೆ ರಾಗ ಹದದಿಂದಾಂಗಿಕ ಸಂಜ್ಞೆ**
**ಯುದಿಪುದಾಗಳೆ ಪೂರ್ಣವಿಧದಿಂದಾತ್ಮವಿಲಾಸ**

ಕೇವಲ ಪದ್ಯಸಾಹಿತ್ಯವು ಹೃದಯಾಂತರಾಳದ ಭಾವನೆಗಳನ್ನು ಪೂರ್ಣವಾಗಿ ಅಭಿವ್ಯಕ್ತಿಸಲಾರದು. ಅದರೊಂದಿಗೆ ರಾಗಾಲಾಪನೆ ಮತ್ತು ಯುಕ್ತ ಆಂಗಿಕಾಭಿನಯ ಸೇರಿಕೊಂಡರೆ, ಆಗ ಆತ್ಮವಿಲಾಸ ಉದಿಸುತ್ತದೆ ಎಂಬ ಈ ಪದ್ಯಾರ್ಥ ಉಜ್ವಲವಾಗಿದೆ. ಇಂತಹ ಸಂಗೀತ ನಾಟ್ಯ ಸ್ವಾಭಾವಿಕವಾಗಿ ಸಹೃದಯನಲ್ಲಿ ಪ್ರತಿಭಾಷಿತವನ್ನು ಉಂಟು ಮಾಡುವಲ್ಲಿ ಯಶಸ್ವಿಯಾಗುತ್ತದೆ:

**ಮೂಕಭಾಷೆಯೊ ನಾಕಭಾಷೆಯೊ**
**ಕಣ್ಣಂಳಿಂದೆದೆವೊಕ್ಕು ತಾಂ**

# ೯, ೨ನೇ ಮಹಡಿ, ಮಾರುತಿ ದೇವಸ್ಥಾನದ ರಸ್ತೆ, ಕುವೆಂಪು ನಗರ, ಮೈಸೂರು – ೫೭೦ ೦೦೯

ಸುಕುಮಾರ್ಯದಿನತ್ತಣಿಂ ಪ್ರತಿ-
ಭಾಷಿತಂಗಳನೇಳಿಕುಂ

ನಾಟ್ಯಶಿಲ್ಪಗಳ ಭಾಷೆಯೆನ್ನುವುದು ನಮ್ಮ ಕಣ್ಣುಗಳ ಮೂಲಕಹೃದಯವನ್ನುಪ್ರವೇಶಿಸಿಪ್ರತಿಕ್ರಿಯಾತ್ಮಕಉತ್ತರಗಳನ್ನು ಉತ್ಪತ್ತಿಮಾಡುತ್ತದೆ ಎಂಬ ಸೌಂದರ್ಯಮೀಮಾಂಸೆ ಇಲ್ಲಿದೆ; ಇಂತಹ ಸ್ಥಿತಿಯೇ ರಸಸಮಾಧಿ. ಅಲ್ಲಿ ದೇಹ, ಮನಸ್ಸುಗಳೆಂಬ ದ್ವಂದ್ವಗಳಿರುವುದಿಲ್ಲ. ಅದನ್ನೇ ಡಿವಿಜಿ ಹೀಗೆ ಹೇಳುತ್ತಾರೆ:

ತನು ಬೇರೆಯೆಂಬರು ಮನ ಬೇರೆಯೆಂಬರು
ತನು ಮನಗಳಿನಾತ್ಮ ಬೇರೆಯೆನ್ನುವರು
ತನು ಮನಸಾತ್ಮಗಳನ್ಯೋನ್ಯಯುಕ್ತಿಯ
ನನುಭವಿಸುವ ತಾಣ ಚೆನ್ನಿಗನಾಸ್ಥಾನ

ಬೇಲೂರಿನ ಚೆನ್ನಕೇಶವನ ಸನ್ನಿಧಿ ಎನ್ನುವುದು ದೇಹ- ಮನಸ್ಸು- ಆತ್ಮಗಳ ಅನ್ಯೋನ್ಯತೆಯನ್ನು ಅನುಭವಿಸುವ ಆಸ್ಥಾನ. ಇಂದ್ರಿಯಗಳ ಮೂಲಕ ಅತೀಂದ್ರಿಯ ಸುಖಕ್ಕೇರುವ ಆನಂದಾನುಭೂತಿಯನ್ನು ಇಲ್ಲಿ ಅನುಭವಿಸಬಹುದಾಗಿದೆ.

## ಶೃಂಗಾರ ಶೀಲ

ಸೃಷ್ಟಿಯ ಮೂಲಶಕ್ತಿಯೆನಿಸಿದ ಶೃಂಗಾರ ರಸದ ವೈವಿಧ್ಯವನ್ನು ನಾವು ಈ ಕಾವ್ಯದಲ್ಲಿ ಅನುಭವಿಸಬಹುದಾಗಿದೆ. ಸ್ಥಾಯೀಭಾವದ ರತಿಯು ಪ್ರಹರ್ಷಗೊಳ್ಳುವ ರಸಲೋಕನಿರ್ಮಿತಿ ಇಲ್ಲಿಯ ಅನುಸಂಧಾನದ ಫಲ. ಅಂತಹ ಶೃಂಗಾರದ ಉಜ್ವಲ ನಿದರ್ಶನಗಳನ್ನು ಇಲ್ಲಿ ನೋಡೋಣ.

ಏನೀ ಭಯ ಭ್ರಾಂತಿಯೋ – ನೀಲಾಂಬರೆ
ಏನಂಗ ವಿಭ್ರಾಂತಿಯೋ- ಅಶಾಂತಿಯೇ
ನೀಲಾಂಬರದ ನಿರಿಯಾಲಯ ತನಗೆಂದು
ಚೇಳಿಗಾರರುಹಿದರೇ – ಮನೋಹರೆ॥

ಬೆಚ್ಚಿಸಿ ನಿನ್ನನ್ನು ನಿಶ್ಚೇಲಗೈದು ತ-
ನ್ನಕ್ಷಿಗೆ ಸಿಂಗಾರದೂಟವನುಣಿಸೆ
ವೃಶ್ಚಿಕಮಂತ್ರವನುಚ್ಚರಿಸಿದನೇನೆ
ಅಚ್ಚುಮೆಚ್ಚಿನ ನಿನ್ನ ಮಾಯಾವಿ ಕೇಶವ॥

ನೀಲಾಂಬರೆಯ ಸೀರೆಯ ನೆರಿಯೊಳಗೆ ಚೇಳು ಸೇರಿಕೊಳ್ಳುವುದು, ಭಯಗ್ರಸ್ತಳಾದ ಆಕೆ ಬೆಚ್ಚಿಬೀಳುವುದು, ಬಟ್ಟೆಯನ್ನು ಬಿಚ್ಚಿಬಿಸಾಡುವುದು ಇಲ್ಲಿಯ ವಿಭಾವಾನುಭಾವಗಳು. ಆಕೆಯನ್ನು ವಿವಸ್ತ್ರಳನ್ನಾಗಿಸಿ, ತನ್ನ ಕಣ್ಣಿಗೆ ಶೃಂಗಾರದೂಟವನ್ನು ಉಣ್ಣಿಸಲು ಶ್ರೀ ಕೇಶವನು ಬೇಕೆಂದೇ ವೃಶ್ಚಿಕಮಂತ್ರವನ್ನು ಉಚ್ಚರಿಸಿ ಆ ಚೇಳನ್ನು ಸೃಷ್ಟಿಸಿರಬಹುದೆಂಬುದು ಕವಿಯ ಕಲ್ಪನೆ. ಎಷ್ಟು ಸೊಗಸಾದ ಶೃಂಗಾರಭಾವ!

ಕುಂಚಿತಚರಣ ಹೃದಂಚಿತಕರಚಿಹ್ನ
ಚಂಚಲನಯನ ಪ್ರಪಂಚಿತ ಹಸನ
ಕಾಂಚೀಸ್ವನಮೆಂಬೀ ಪಂಚಶರದೆ ನೀಂ
ವಂಚಿಸಬಂದೆಯ ಚೆನ್ನಕೇಶವನ॥

ಇಲ್ಲೊಬ್ಬಳು ಉಲ್ಲಾಸಿನಿ ಎಂಬ ಶಿಲಾಸುಂದರಿ ಐದು ಬಾಣಗಳಿಂದ ಕೇಶವನನ್ನು ವಂಚಿಸುವ ಹುನ್ನಾರ ಮಾಡಿದ್ದಾಳೆ. ಬಾಗಿದ ಪಾದ, ಹೊಳೆಯುವ ಕರ, ಚಂಚಲವಾದ ಕಣ್ಣು, ಮಂದಹಾಸ ಮತ್ತು ಸೊಂಟದ ಡಾಬಿನ ಸದ್ದುಗಳೇ ಆ ಐದು ಬಾಣಗಳು!

ವೇಣೀ ಸಂಹಾರೇ – ಏಣಾಂಕಗೌರೇ
ಶೋಣಬಿಂಬಾಧರೆ – ಕಾಲೀಯ ಚಿಕುರೇ

ಈ ಸುಂದರಿಯಂತೂ ಬಣ್ಣಗಾತಿಯೇ! ಚಂದ್ರನ ಬಿಳುಪು ಮೈಯಲ್ಲಿ; ತುಟಿಯಲ್ಲಿ ಕೆಂಪು, ಮುಂಗುರಳಲ್ಲಿ ಕಪ್ಪು! ಹಾಗಿರುವ ವೇಣೀ ಸಂಹಾರೆಯನ್ನು ಕಂಡು ಕೇಶವ ಮೈದೋರದೇ ಹೋದಾನೆಯೇ? ಶ್ರೀ ಚೆನ್ನಕೇಶವನಲ್ಲಿ ಜಗಳವಾಡಿದ ಇನ್ನೊಬ್ಬಳು ಆ ಬಳಿಕೆ ವಿರಹದಿಂದ ಬಳಲುವ ದೃಶ್ಯ ಇನ್ನಷ್ಟು ಸಂದರ.

ಮುಳಿದರೆ ಮುಳಿಯಲಿ ಇಳೆಯೊಳಗಿನ್ನೇನು
ಬೆಳಗಾಗದಿರ್ಪುದೆ ಸುಳಿಯದೆ ಗಾಳಿ
ಇಳಿಯದೆ ಬಿಸಿ ಮತ್ತೆ ಕೆರಳದೆ ಹಸಿವಿನ್ನು
ಒಳಿತಾಗದಿರ್ಪುದೆ ಮಲರಂಬು ಕೆಳೆಯಿರೆ॥

ಈ ಕಲಹಾಂತರಿತೆಯ ವಿರಹದಲ್ಲಿ ಆಶಾಭಾವನೆಯಿದೆ: ರಾತ್ರಿ ಕಳೆದು ಹಗಲಾದ ಮೇಲಾದರೂ ಗಾಳಿ ಬೀಸೀತು, ತಂಪು ಆವರಿಸೀತು! ಹಸಿವು ಉಂಟಾದೀತು, ಒಳಿತು ಆದೀತು!

## ಪದ-ಪ್ರಾಸ

ಡಿವಿಜಿಯವರ ಪದಪ್ರಯೋಗವೂ ಅಧ್ಯಯನ ಯೋಗ್ಯವಾದುದು. ಅಪೂರ್ವ ಪದಗಳು ಅವರ ಕವಿತೆಗಳಲ್ಲಿ ಇಣುಕುತ್ತವೆ. ಶುಕಭಾಷಿಣಿ ಎಂಬ ಕವಿತೆಯಲ್ಲಿ 'ಕೀರಾಲಿಗುಸಿರುವೆ ಮಾರಾಂತರಂಗವ' ಎಂದು ಕೇಳುತ್ತಾರೆ. ಇಲ್ಲಿಯ 'ಕೀರಾಲಿ' ಎಂಬುದು 'ಗಿಳಿಯೆಂಬ ಸಖಿ' ಯ ಕುರಿತಾದುದು. ಈಗ 'ಆಲಿ' ಎಂಬುದು ಗೆಳತಿಯೆಂಬ ಅರ್ಥದಲ್ಲಿ ಪ್ರಯುಕ್ತವಾಗುವುದು ಕಡಿಮೆ. ಬಾಲಕಪಿಯನ್ನು ಅವರು 'ಮಂಗಮಾಣಿ' ಎಂದು ಕರೆದಿದ್ದಾರೆ! ಶ್ರೀ ಕೇಶವನನ್ನು 'ಭುಜಂಗ' ಎಂದು ಹೆಸರಿಸಿದ್ದಾರೆ. ಇಲ್ಲಿ 'ಭುಜಂಗ' ಎನ್ನುವುದಕ್ಕೆ ವಿಟ ಎಂಬರ್ಥವಿದೆ! ಹಾಗೆಯೇ 'ಧೂರ್ತಕೇಶವ ಕಾಮಿನೀ' ಎಂಬಲ್ಲಿ ಧೂರ್ತನೆಂಬುದಕ್ಕೆ ಪ್ರಣಯಪಟು ಎಂದರ್ಥ!

ಕಾಳಿರುಳಿನ ಕಪ್ಪು ಕುರುಳುಗುಂಗುರಿನೊಪ್ಪು
ನೀಳಾಗಿ ಹೆಣೆಲಿಟ್ಟು ಸುತ್ತಿದ ಕೊಪ್ಪು
ನೋಳ್ಪರ ಕಣ್ಮನದಕಹುದು ಮೋಹದ ಹೆಪ್ಪು
ಮೌಳಿಯಿಂ ಕೇಶವನಡಿಗಳ ನೀನಪ್ಪು॥

ಇಲ್ಲಿಯ ಪ್ರಾಸಗಳ ಚೆಲವು ಗಮನಾರ್ಹವಾದುದು. ಕತ್ತಲರಾತ್ರಿಯ ಕಪ್ಪು ಕುರುಳಿಗೆ ಗುಂಗುರು ಒಪ್ಪಗೊಂಡಿದೆ. ಅವಳ ಮುಡಿಗೆ 'ಕೊಪ್ಪು' ಎಂಬ ಆಭರಣ ಚೆಲವು ತಂದಿತ್ತಿದೆ;

ಇದರಿಂದ ನೋಡುಗರ ಮನಸ್ಸಿಗೆ ಮೋಹವೇ ಹೆಪ್ಪು ಹಾಕಿದೆ. ಭಗವಂತನ ಚರಣವನ್ನೇ ನೀನು 'ಶಿರದಿಂದ ಅಪ್ಪಿಕೊಳ್ಳು' ಎನ್ನುವುದಂತೂ ಸಾರ್ಥಕ ಕಾವ್ಯಾಲಂಕಾರವಾಗಿದೆ:

**ತದ್ದಿಮ್ಮಿ ತಕದಿಮ್ಮಿ ದಿಮ್ಮಿ – ಈ**
**ಗದ್ದಲವೇ ನಿನ್ನ ಹಬ್ಬವೇನಮ್ಮಿ**
**ನಿದ್ದೆಯ ಕೆಡಿದೊಡಮ್ಮಿ – ನಿನ್ನ**
**ನೊದ್ದು ಬೀಳಿಸಿಯಾನು ಕೇಶವನಮ್ಮಿ॥**

ಇಲ್ಲಿಯ ಅಂತ್ಯಪ್ರಾಸಗಳು ಕೇವಲ ಶಬ್ದಗುಂಫನವಲ್ಲ. 'ಅಮ್ಮಿ' ಎಂಬುದು ಹಳ್ಳಿಯ ಹೆಮ್ಮಕ್ಕಳ ಕುರಿತಾದ ಪದಪ್ರಯೋಗ. 'ನಿದ್ದೆಯನ್ನು ಕೆಡಿಸಿದರೆ ನಿನ್ನನ್ನು ಒದ್ದು ಬೀಳಿಸಿಯಾನು' ಎಂಬುದೂ ದೇಸಿಯ ಚೆಲುವು. 'ಕೇಶವನಮ್ಮಿ' ಎಂಬಲ್ಲಿ ನಮ್ಮ ಈ ಕೇಶವ ಎಂದು, ಕೇಶವನ ಅಮ್ಮಿ ಎಂದೂ ಧ್ವನಿಸುವುದರೊಂದಿಗೆ ಕೇಶವನನ್ನು ನಮ್ಮು (ನಂಬು, ನೆಚ್ಚು) ಎಂಬ ಅರ್ಥವನ್ನು ಹೊಳೆಯಿಸುತ್ತದೆ!

## ಕಾವ್ಯಾನುಭೂತಿ

ಡಿವಿಜಿಯವರ 'ಅಂತಃಪುರಗೀತೆ' ಕೇವಲ ನಾಟ್ಯಾನುಕೂಲಿ ಗೀತೆಯೊಂದು ಭಾವಿಸಬೇಕಾಗಿಲ್ಲ. ಎಷ್ಟೋ ಕವಿತೆಗಳಲ್ಲಿ ಓದಿ ಅರ್ಥವಿಸುವ ಕಾವ್ಯಾಂಶಗಳೂ ಘನೀಹರಿಸಿವೆ. ಮುಕುರ ಮುಗ್ಧೆ, ಶಕುನಶಾರದೆ, ಭೂಷಣ ಪ್ರಿಯೆ, ವಿಲಾಸಿಕೆ ಮುಂತಾದ ಕವಿತೆಗಳಲ್ಲಿರುವ ಕಾವ್ಯಾನುಭೂತಿಯ ಕುರಿತು ನಾಲ್ಕು ಮಾತು.

**ಮುಗುದೆಯಾದೆಯ ಕನ್ನೆ ಮುಕುರದ ಚೆನ್ನೆ**
**ನಿನ್ನ ಮೈ ಸೊಬಗಿಗೆ ನೀನೆ ಮನವಸೋತು**

**ಹರಹಿದ ಪೆರೆಯಂತೆ ಮೆರೆವ ಲಲಾಟದಿ**
**ಧರಿಸೆ ಕುಂಕುಮವ ನೀಂ ಬೆರಲೆತ್ತಿದಂತೆ**
**ಸ್ಥಿರದಿ ನಿಂದಿಹುದದು ಬೆರಗಿನ ಸೆರೆಯಲಿ**
**ಪರವಶೆಯಾದೆ ನೀಂ ಪರವಶಗೈವಳೆ!!**

ಈ ಮುಕುರ ಮುಗ್ಧೆ ಕನ್ನಡಿ ನೋಡುತ್ತಾ ಸ್ಥಿರವಾಗಿಬಿಡುತ್ತಾಳೆ; ಅವಳ ದೇಹಕಾಂತಿಗೆ ಅವಳೇ ಮಾರುಹೋಗುತ್ತಾಳೆ! ಬೇರೆಯವರನ್ನು ವಶೀಕರಿಸಬೇಕಾದ ಆಕೆ ಪರವಶೆಯಾಗಿಬಿಡುತ್ತಾಳೆ! ಇಲ್ಲಿಯ ಅಧ್ಯಾತ್ಮಿಕ ಅರ್ಥ ಮುಖ್ಯವಾದುದು 'ಪರವಶ' ಎಂದರೆ ಇಹವಲ್ಲದ ಪರಕ್ಕೆ ಸಂಬಂಧಿಸಿದುದು. ಅರ್ಥಾತ್ ಭಗವಂತನಿಗೆ ವಶಳಾಗಿಬಿಟ್ಟಳು. ಭಗವಂತನನ್ನು ಒಲಿಸಬೇಕಾದ ಆಕೆ ಭಗವಂತನಿಗೆ ಕೈವಶಗೊಂಡಿದ್ದು ಸೋಜಿಗವೇ ಸರಿ.

**ಪ್ರಸ್ತುತ ಲೋಕದ ಮಸ್ತಕಲೇಖ್ಯದ**
**ಪುಸ್ತಕದರ್ಥವ ವಿಸ್ತರಿಸುವೆಯೇನೆ?**

ಎಂದು ಶಕುನಶಾರದೆಯನ್ನು ಪ್ರಶ್ನಿಸಲಾಗುತ್ತದೆ. ಅವಳಾದರೋ ಸೌಮ್ಯಕೇಶವ ರಾಜ್ಯದ ದೈವಜ್ಞಮೌಳಿಕೆ! ಜೋತಿಷ್ಯ ಹೇಳುವವರಲ್ಲಿ ಕಿರೀಟಪ್ರಾಯಳು. ಆದರೆ ಅಂತಹವಳು ಲೋಕದ ಹಣೆಬರೆಹವನ್ನು ಹೇಳಬಲ್ಲಳೆ?

**ತರಣಿಗೆ ದೀಪೋತ್ಸವಮೇಂ**
**ತರುಣೀ ನಿನ್ನಂಗರುಚಿಗೆ ಮಣಿ ಭೂಷಣಮೇಂ**
**ಕರಕರೆಯೇತಕೆ? ಬೇಡದ**
**ಕರವಲಯವ ಬಿಸುಟು ತಾಳು ಹರುಷವ ಮುಖದೊಳ್॥**

ಈ ಕಂದ್ಯಪದ್ಯದಲ್ಲಿ ಭೂಷಣಪ್ರಿಯೆಯ ಆಭರಣ ಮೋಹವನ್ನು ಪ್ರಶ್ನಿಸಲಾಗಿದೆ. ಸೂರ್ಯನಿಗೆ ಲಕ್ಷದೀಪೋತ್ಸವದಿಂದ ಏನು ಪ್ರಯೋಜನ? ಹಾಗೆಯೇ ಸ್ವಾಭಾವಿಕ ಸೌಂದರ್ಯದ ತರುಣಿಗೆ ಆಭರಣ ವಿಶೇಷಗಳೇಕೆ? ಕೈಬಳೆಯ ಕರಕರೆ ಸಾಕು. ಅದನ್ನು ಬಿಸುಟು ಹರುಷಾನ್ವಿತೆಯಾಗಬಾರದೆ? ಈ ಪ್ರಶ್ನೆಗಳಿಂದಲೇ ಸೌಂದರ್ಯಮೀಮಾಂಸೆ ಅನಾವರಣಗೊಳ್ಳುತ್ತದೆ:

**ಎಷ್ಟು ನೀಂ ಕಾದೊಡಮಿಷ್ಟೇ ನಿನ್ನಯ ಪಾಡು**
**ಇಷ್ಟ ಚೆನ್ನಿಗ ತಾನ್ ಅದೃಷ್ಟರೂಪಿಯಲೇ**
**ಶ್ರೇಷ್ಠಕಲಾರಸ ವೃಷ್ಟಿಯಿಂ ಲೋಕ ಸಂ–**
**ತುಷ್ಟಿಗೈವುದೆ ನಿನ್ನ ಸೃಷ್ಟಿಗೆ ಫಲವಲ್ತೆ॥**

ವಿಲಾಸಿಕೆಯೋರ್ವಳನ್ನು ಸಂತೈಸುವ ಭಾವವಿದು. ನೀನು ಎಷ್ಟೇ ಕಾದರೂ ಭಗವಂತ ಬರಲಾರ. ಏಕೆಂದರೆ ಅವನು ಅದೃಷ್ಟರೂಪಿ! ಇಲ್ಲಿಯ 'ಅದೃಷ್ಟರೂಪಿ' ಪದಪ್ರಯೋಗಕ್ಕೆ ಎರಡರ್ಥ. ಒಂದು ದೇವರು ಭಾಗ್ಯಶಾಲಿಗಳಿಗೆ ಮಾತ್ರ ಒಲಿಯುತ್ತಾನೆ ಎಂಬುದು. ಮತ್ತೊಂದು ದೇವರು ಅದೃಶ್ಯನಾಗಿಯೇ ಇರುವವನು ಎಂಬುದು! ರಸನಿರ್ಮಿತಿಯೆಂಬ ಕಲಾಪೂಜೆಯಿಂದ ಲೋಕವನ್ನು ಸಂತೃಪ್ತಿಗೊಳಿಸುವುದೇ ನಿನ್ನ ಕರ್ತವ್ಯವೆಂದು ಸಾರುವ ನಿಷ್ಕಾಮಕರ್ಮಯೋಗ ಇಲ್ಲಿ ಮನೆಮಾಡಿದೆ.

ಹೀಗೆ ಆಂತರ್ಯದಲ್ಲಿ ಆಧ್ಯಾತ್ಮಿಕತೆಯನ್ನು ಹಿಡಿದಿಟ್ಟುಕೊಂಡು ಅಂತಃಪುರಗೀತೆ ಸೌಂದರ್ಯದ ಅನ್ವೇಷಣೆಯನ್ನೇ ಮುಖ್ಯ ಕಾಯಕವನ್ನಾಗಿಸಿ ಕೊಂಡ ಕಾವ್ಯಕುಸುಮ. ಸೌಂದರ್ಯತತ್ತ್ವದ ಉದ್ಘಾಟನೆಯೇ ಅದರ ಗುರಿ. ಕವಿಯೇ ಕೊನೆಗೆ ಹೇಳುವಂತೆ 'ವಾಂಛಾಬಂಧಂ ವಾಂಛಾಶರಂ ವಾಂಛಕನಿವು ಕರಗಲ್ ಮೂರನೈಕ್ಯಂಗೊಳಿಪ್ಪಾ ಸೌಂದರ್ಯಾದ್ವೈತಯೋಗಂ ಜಯಿಸುಗೆ' ಅಪೇಕ್ಷೆ, ಅಪೇಕ್ಷಕ ಮತ್ತು ಅಪೇಕ್ಷಿತ ವಸ್ತು ಈ ಮೂರು ಒಂದುಗುಡಿದಾಗ ಉಂಟಾಗುವುದೇ 'ಕೇಶವಾಮ್ನಾಯ ರಾಗ' ಈ ಆನಂದಾದ್ವೈತಸಿದ್ಧಿಯೇ ಸಕಲ ಕಲೆಗಳ ಗುರಿಯಾಗಬೇಕು. ಅಂತಃಪುರಗೀತೆಯ ಅನುಸಂಧಾನದಿಂದ ಲಭಿಸುವುದು ಇಂತಹ ಆನಂದಾನುಭೂತಿಯೇ. ರಸಋಷಿ ಕುವೆಂಪು ಹೇಳಿದಂತೆ ಕಲಾಸುಂದರಿ ಬಹಿರಂಗದಲ್ಲಿ ತೇಜಸ್ವಿನಿ, ಅಂತರಂಗದಲ್ಲಿ ತಪಸ್ವಿನಿ. ಪದಗಾನಾಭಿನಯಗಳು ಮುಪ್ಪುರಿಗೊಂಡು ಸಹೃದಯನ ಅಂತರಂಗವೇ ಅಂತಃಪುರವಾಗಿ ಪರಿವರ್ತನೆಗೊಳ್ಳುತ್ತದೆ. ಅಲ್ಲಿಯೇ ಶ್ರೀ ಕೇಶವನ ಅನುಸಂಧಾನವುಂಟಾಗಿ ಆನಂದಾನುಭೂತಿ ಸಾಧ್ಯವಾಗುತ್ತದೆ.

❑❑

# ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೋಟೆಯ ನಿರ್ಮಾಣದ ಪರಿಭಾಷೆ : ಒಂದು ಅವಲೋಕನ

– ಸುಂಕಂ ಗೋವರ್ಧನ್

ಭಾರತೀಯ ಬದುಕಿನ ಸಾಮಾಜಿಕ. ಆರ್ಥಿಕ, ರಾಜಕೀಯ ಜೀವನವನ್ನು ಅರ್ಥ ಮಾಡಿಕೊಳ್ಳಲು ನಮಗೆ ಉಳಿದಿರುವ ಅತ್ಯಂತ ಪ್ರಚೀನ ಕೃತಿಗಳಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ ಪ್ರಮುಖವಾದುದು. ಅರ್ಥಶಾಸ್ತ್ರದಲ್ಲಿ ಅನೇಕ ಜ್ಞಾನ ಶಿಸ್ತುಗಳು ತಮ್ಮ ಬೇರುಗಳನ್ನೇ ಹೊಂದಿವೆ. ರಾಮಾಯಣ, ಮಹಾಭಾರತಗಳನ್ನು ಬಿಟ್ಟರೆ ದಟ್ಟವಾದ ಸಾಮಾಜಿಕ ಜೀವನದ ವಿವರಗಳಿಗೆ ಅರ್ಥಶಾಸ್ತ್ರವೇ ಅಧಿಕೃತ ಪ್ರಾಚೀನ ಗ್ರಂಥವಾಗಿದೆ. ಇದರಲ್ಲಿ ರಾಜ್ಯ ಸ್ಥಾಪನೆ, ರಚನಾತ್ಮಕತೆ, ಆರ್ಥಿಕ, ರಾಜಕೀಯ ಸಂಗತಿಗಳು ದಟ್ಟವಾಗಿವೆ. ಬಹುಮುಖ್ಯವಾಗಿ ನಾಗರಿಕತೆಯ ಸಮಗ್ರ ಸಂಗತಿಗಳಿಗೆ ಅರ್ಥಶಾಸ್ತ್ರವೇ ಅಧಿಕೃತ ಆಕರವಾಗಿದೆ. ಮೂಲ ಕಂದಾಯ ವ್ಯವಸ್ಥೆ, ನ್ಯಾಯ ವ್ಯವಸ್ಥೆ ಆಡಳಿತ ವ್ಯವಸ್ಥೆ, ಸೇನ ವ್ಯವಸ್ಥೆ ವಿದ್ಯಾ ವ್ಯವಸ್ಥೆ, ಮುಂತಾದ ಸಂಗತಿಗಳು ಇದರಲ್ಲಿ ಮೇಳೈಸಿವೆ.

ಅರ್ಥಶಾಸ್ತ್ರದ ಕರ್ತೃ ಕೌಟಿಲ್ಯ ಹೌದೋ ಅಲ್ಲವೋ ಎಂದು ಸ್ವದೇಶಿ–ವಿದೇಶಿ ವಿದ್ವಾಂಸರು ವ್ಯಾಪಕವಾಗಿ ಚರ್ಚಿಸಿದ್ದಾರಾದರೂ ಅತ್ಯಂತ ವ್ಯಾಪಕವಾಗಿ ಬಹುಜನರಿಂದ ಅಂಗೀಕಾರ ಪಡದಿರುವಂತೆ ಕೌಟಿಲ್ಯನೇ ಇದರ ಕರ್ತೃವಾಗಿದ್ದಾನೆ. ವಿಷ್ಣುಗುಪ್ತ, ಚಾಣಕ್ಯ ಎಂಬ ಹೆಸರಿನಿಂದ ಪ್ರಸಿದ್ಧನಾದ ವ್ಯಕ್ತಿ ಹಗೂ ಮೌರ್ಯವಂಶದ ಚಂದ್ರಗುಪ್ತನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದ ವ್ಯಕ್ತಿ ಇಬ್ಬರೂ ಒಬ್ಬರೇ ಎಂದು ಕೂಡ ತಿಳಿಯಬಹುದಾಗಿದೆ. ಚಂದ್ರಗುಪ್ತ ಮೌರ್ಯನು ಕ್ರಿಸ್ತಪೂರ್ವ ೩೨೧ರಲ್ಲಿ ಸಿಂಹಾಸನವನ್ನು ಏರಿದ್ದು ಐತಿಹಾಸಿಕ ದಾಖಲೆಗಳಿಂದ ದೃಡವಾಗಿರುವುದರಿಂದ ಕೌಟಿಲ್ಯನ ಕಾಲವನ್ನು ಕ್ರಿ. ಪೂ. ೪ನೆಯ ಶತಮಾನವೆಂದು ಇದೇ ಶತಮಾನದ ಕೊನೆಯ ಹೊತ್ತಿಗೆ ಅರ್ಥಶಾಸ್ತ್ರವನ್ನು ಕೌಟಿಲ್ಯನು ರಚಿಸಿರಬಹುದೆಂದು ತಿಳಿಯಬಹುದಾಗಿದೆ.

೧೯೦೫ರಲ್ಲಿ ಆರ್. ಶಾಮಾಶಾಸ್ತ್ರಿಗಳಿಂದ ಶೋಧಿಸಲ್ಪಟ್ಟು ಇಂಡಿಯನ್ ಆಂಟಿಕ್ವೆರಿ ಇಂಗ್ಲಿಷ್ ಅನುವಾದದೊಡನೆ ಪ್ರಕಟಿಸಿ, ೧೯೧೯ರಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯ ಸಂಸ್ಕೃತ ಗ್ರಂಥಮಾಲೆಯ ಮೂಲಕ ಪ್ರಕಟಿಸಿದ ನಂತರ ಇಡೀ ವಿಶ್ವದ ಗಮನ ಈ ಕೃತಿಯ ಮೇಲೆ ಬಿದ್ದು ವಿಶ್ವದಾದ್ಯಾಂತ ಇರುವ ವಿದ್ವಾಂಸರು ಈ ಕೃತಿಯನ್ನು ಮೆಚ್ಚಿಕೊಂಡು ಅತ್ಯಂತ ಆರೋಗ್ಯಪೂರ್ಣ ಚರ್ಚೆಯನ್ನು ಹುಟ್ಟುಹಾಕಿದ್ದು ಸರ್ವರಿಗೂ ತಿಳಿದಿರುವ ಸಂಗತಿಯೇ ಆಗಿದೆ. ಆ ಬಂತರ ಇದುವರೆಗೂ ಈ ಗ್ರಂಥವನ್ನು ಆಧರಿಸಿ ಅದೆಷ್ಟು ಭಾಷೆಗಳಲ್ಲಿ ಅದೆಷ್ಟು ಲೇಖನಗಳಿವೆಯೋ ಲೆಕ್ಕವಿಲ್ಲ. ಅರ್ಥಶಾಸ್ತ್ರದಲ್ಲಿ ೧೫ ಅಧಿಕರಣಗಳಿವೆ.

ಇದರಲ್ಲಿ ೨ನೆಯ ಅಧಿಕರಣವು ಅಧ್ಯಕ್ಷರ ನಡುವಳಿಕೆಗಳಿಗೆ ಸಂಬಂಧಿಸಿದ್ದು ಇದರಲ್ಲಿ ಕೋಟೆ ಕಟ್ಟುವ ಕ್ರಮ ಹಾಗೂ ಕೋಟೆಯನ್ನು ನೆಲೆಗೊಳಿಸುವ ಬಗ್ಗೆ ವಿಸ್ತಾರವಾಗಿ ಬರೆಯಲಾಗಿದೆ. ರಾಜ್ಯವನ್ನು ಆಳಬೇಕಾದರೆ ರಾಜ್ಯವು ಹೇಗಿರಬೇಕು ಎಂಬುದನ್ನು ತಿಳಿಯಲು ಶತ್ರುಗಳ ಬಗ್ಗೆ ತಿಳಿಯಲು, ಸರ್ಕಾರದ ವಿವಿಧ ಶಾಖೆಗಳು ಯಾವ ರೀತಿಯಲ್ಲಿ ಕೆಲಸ ಮಾಡಬೇಕು, ರಾಜ್ಯಾದಾಯವನ್ನು ಹೆಚ್ಚಿಸಲು ಯಾವ ಯಾವ ಮೂಲದಿಂದ ಹಣ ಸಂಗ್ರಹಿಸಬೇಕು, ಸೇನೆಯ ಯಾವ ಯಾವ ಸಂದರ್ಭದಲ್ಲಿ ಯಾವ್ಯಾವ ರೀತಿಯಲ್ಲಿ ನಡೆದುಕೊಳ್ಳಬೇಕು ಶತ್ರುವಿನಾಶಕ್ಕಾಗಿ ಯಾವ ಕ್ರಮಗಳನ್ನು ಕೈಗೊಳ್ಳಬೆಕೆಂದು ಇದೇ ಅರ್ಥಶಾಸ್ತ್ರದಲ್ಲಿ ವಿವರಿಸುವಾಗ ಕೌಟಿಲ್ಯನು ಈ ಶತ್ರುಗಳಿಂದ ರಕ್ಷಣೆ ಪಡೆಯಲು ರಾಜ್ಯದಲ್ಲಿ ಕೋಟೆಯನ್ನು ಹೇಗೆ ನಿರ್ಮಾಣ ಮಾಡಬೇಕು? ಹೇಗೆ ಬಲಪಡಿಸಬೇಕೆಂದು ತಿಳಿಸಿದ್ದಾನೆ. ಪ್ರಸ್ತುತ ಈ ಲೇಖನದ ಉದ್ದೇಶವು ಕೌಟಿಲ್ಯನು ಕೋಟೆಯ ಬಗೆಗಿನ ಸಂಗತಿಗಳನ್ನು ತಿಳಿಸುವಾಗ ಉಪಯೋಗಿಸಿರುವ ಪಾರಿಭಾಷಿಕ ಶಬ್ದಗಳನ್ನು ಕ್ರೋಢೀಕರಿಸುತ್ತಾ ಅವುಗಳ ಮೂಲಕವೇ ಕೋಟೆಯ ನಿರ್ಮಾಣ ಹಾಗೂ ನೆಲೆಗೊಳಿಸುವ ಬಗೆಗಿನ ಸಂಗತಿಗಳನ್ನು ತಿಳಿಸುವುದಾಗಿದೆ.

ಕೋಟೆಯನ್ನು ನೆಲೆಗೊಳಿಸುವುದಕ್ಕೆ ಮುಂಚೆ ಮುಖ್ಯವಾಗಿ ಗ್ರಾಮಗಳನ್ನು ಕಟ್ಟುವ ಬಗ್ಗೆ ಕೌಟಿಲ್ಯನು ತಿಳಿಸುತ್ತಾನೆ. ಈ ಗ್ರಾಮಗಳ ಬಗ್ಗೆ ಹೇಳುತ್ತಾ ಈ ಗ್ರಾಮಗಳಲ್ಲಿ ೧೦೦ಕ್ಕಿಂತ ಕಡಿಮೆ ೨೮೦೦ಕ್ಕಿಂತ ಹೆಚ್ಚು ಮನೆಗಳು ಇರಬಾರದು ಎಂದು ತಿಳಿಸುತ್ತಾ ಈ ಮನೆಗಳು

# ೬೭, ೧ನೇ ಮಹಡಿ, ಕೋದಂಡರಾಮಪುರಂ ೫ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು – ೫೬೦ ೦೦೩

ಶೂದ್ರರಿಂದಲೂ ವ್ಯವಸಾಯಗಾರರಿಂದಲೂ ತುಂಬಿರಬೇಕು ಎಂದು ತಿಳಿಸುತ್ತಾನೆ. ಒಂದು ಊರಿನಿಂದ ಇನ್ನೊಂದು ಊರಿಗೆ ಒಂದು ಕ್ರೋಶ ಅಥವಾ ಎರಡು ಕ್ರೋಶದಷ್ಟು ಅಂತರವಿರಬೇಕು ಎಂದು ತಿಳಿಸಿದ್ದಾನೆ. ಆ ಊರುಗಳ ಗಡಿ ಚಿಹ್ನೆಯಾಗಿ ನದಿ, ಬೆಟ್ಟ, ಕಾಡುಗಳು ಇರಬೇಕೆಂದು ತಿಳಿಸುವ ಕೌಟಿಲ್ಯನು ಇವುಗಳು ಇಲ್ಲದಿದ್ದಾಗ ಬದರ ವೃಕ್ಷ, ಅಗಳು, ಗುಹೆ, ಸೇತುವೆ ಬೂರುಗದ ಮರ, ಆಲದ ಮರಗಳಿರಬಹುದೆಂದು ತಿಳಿಸುತ್ತಾನೆ.

ಜನರ ವ್ಯವಹಾರಗಳಿಗೆ ಅನುಕೂಲವಾಗುವಂತೆ ಎಂಟುನೂರು ಗ್ರಾಮಗಳ ನಡುವೆ 'ಸ್ಥಾನೀಯ' ಎಂಬ ಮಹಾಗ್ರಾಮವನ್ನು ಕಟ್ಟಬೇಕು. ನಾಲ್ಕುನೂರು ಗ್ರಾಮಗಳ ನಡುವೆ 'ದ್ರೋಣಮುಖ'ವೆಂಬ ಗ್ರಾಮವನ್ನು ಹಾಗೂ ಎರಡುನೂರು ಗ್ರಾಮಗಳ ನಡುವೆ 'ಖಾರ್ವಾಟಿಕ' ಎಂಬ ಗ್ರಾಮವನ್ನು ಕಟ್ಟಬೇಕು. ಹತ್ತು ಗ್ರಾಮಗಳ ನಡುವೆ ಕಟ್ಟುವ ಗ್ರಾಮವನ್ನು 'ಸಂಗ್ರಹಣ'ವೆಂದು ಕರೆಯಲಾಗುತ್ತದೆ. ದೇಶದ ಗಡಿಗಳಲ್ಲಿ ಬಾಗಿಲುಗಳು ಹಾಗೂ ರಕ್ಷಕರಿರುವ ಅಂತಪಾಲ ದುರ್ಗಗಳಿರಬೇಕು. ಈ ರೀತಿ ಮೊದಲು ದೇಶವನ್ನು ನೆಲೆಗೊಳಿಸಿದ ನಂತರ ಕೃಷಿ ಮತ್ತು ವಾಸಗಳಿಗೆ ಯೋಗ್ಯವಲ್ಲದ ಭೂಮಿಯನ್ನು ಯಾವ್ಯಾವ ರೀತಿ ವಿನಿಯೋಗಿಸಬೇಕೆಂದು ತಿಳಿಸುತ್ತಾನೆ.

ದೇಶವನ್ನು ನೆಲೆಗೊಳಿಸಿದ ನಂತರ ಮುಖ್ಯವಾಗಿ ಮಾಡಬೇಕಾದ ಕೆಲಸವೆಂದರೆ ದೇಶದ ಭದ್ರತೆಗಾಗಿ ಕೋಟೆಯನ್ನು ನಿರ್ಮಿಸಬೇಕು. ದೇಶದ ನಾಲ್ಕೂ ದಿಕ್ಕುಗಳಲ್ಲಿನ ಗಡಿ ಪ್ರದೇಶದಲ್ಲಿ ಯುದ್ಧಕ್ಕೆ ಮೊದಲು ಅನುಕೂಲಕರವಾದ ಜಾಗದಲ್ಲಿ ಸಹಜವಾದ ಪ್ರಕೃತಿಕ ಅವಶ್ಯಕತೆಗನುಸಾರವಾಗಿ ದುರ್ಗಗಳನ್ನು ನಿರ್ಮಿಸಬೇಕಾಗುತ್ತದೆ. ಇಂತಹ ಪ್ರಾಕೃತಿಕ ಅನುಕೂಲಗಳು ಇರದೇ ಇದ್ದ ಪಕ್ಷದಲ್ಲಿ ಕೋಟೆಯನ್ನು ನಿರ್ಮಿಸಬೇಕಾಗುತ್ತದೆ.

## ನಾಲ್ಕು ರೀತಿಯ ಕೋಟೆಗಳು

೧ **ಔದಕ** : ಉದಕವೆಂದರೆ ನೀರು, ನೀರಿನಿಂದ ಆವರಿಸಲ್ಪಟ್ಟ ದುರ್ಗವು ಔದಕ ಆಳವಾದ ನದಿ ಅಥವಾ ಸಮುದ್ರ ತೀರ, ನೀರಿನಿಂದ ಆವೃತವಾದ ಕಟ್ಟು ಕೋಟೆಯನ್ನು ಔದಕವೆಂದು ಕರೆಯಲಾಗಿದೆ.

೨ **ಪರ್ವತ:** ಕಲ್ಲು ಬಂಡೆಗಳಿಂದ ಕೂಡಿರುವ ಬೆಟ್ಟ / ಪರ್ವತದ ಮೇಲೆ ನಿರ್ಮಿಸಬಹುದಾದ ಕೋಟೆಯನ್ನು 'ಪರ್ವತ' ಎನ್ನಲಾಗುತ್ತದೆ, ಇಲ್ಲಿ ಗುಹೆಗಳಿರಬೇಕಾದುದು ಮುಖ್ಯವಾದದ್ದು.

೩ **ಧಾನ್ವನ:** ಧನ್ವ ಎಂದರೆ ಮರುಭೂಮಿ. ಅಲ್ಲಿ ನಿರ್ಮಿಸುವ ಕೋಟೆಯನ್ನು 'ಧಾನ್ವನ' ಎಂದು ಕರೆಯಲಾಗುತ್ತದೆ.

೪ **ವನದುರ್ಗ** : ವನ ಪ್ರದೇಶದಲ್ಲಿ ಅಂದರೆ ಕಾಡುಗಳಲ್ಲಿ ನಿರ್ಮಿಸುವ ಕೋಟೆಗಳನ್ನು ವನದುರ್ಗಗಳೆನ್ನಬಹುದು.

## ಸ್ಥಾನೀಯ

ಎಂಟನೂರು ಗ್ರಾಮಗಳ ನಡುವೆ ಕಟ್ಟುವ ಗ್ರಾಮವನ್ನು ಸ್ಥಾನೀಯವೆನ್ನುತ್ತಾರೆ ಎಂದು ಈಗಾಗಲೇ ತಿಳಿಸಲಾಗಿದೆ. ಇದು ದೇಶದ ಮಧ್ಯಭಾಗದಲ್ಲಿದ್ದು ದೇಶದ ಕೋಶಾಗಾರ ಇರಬೇಕು. ಸದಾ ಇದರ ಸುತ್ತಲೂ ನೀರು ಹರಿಯುತ್ತಿರಬೇಕು. ನದೀ ಸರೋವರಗಳಾವುದೂ ಇಲ್ಲದೇ ಇದ್ದರೆ ಕೃತಕವಾದ ಕಂದಕವನ್ನು ನಿರ್ಮಾಣ ಮಾಡಬೇಕು. ಈ ಗ್ರಾಮವು ಗುಂಡಾಗಿಯೋ, ಚಚ್ಚೌಕವಾಗಿಯೋ, ಆಯತಾಕಾರದಲ್ಲಿಯೋ ವಾಸ್ತುನಿಪುಣರ ಆದೇಶದಂತೆ ನಿರ್ಮಿಸಬೇಕು. ಇದು ಮಾರುಕಟ್ಟೆಯ ನಗರವಾಗಿದ್ದು ಭೂ ಹಾಗೂ ಜಲಸಾರಿಗೆಯನ್ನು ಹೊಂದಿರಬೇಕು.

## ಕಂದಕ

ಕಂದಕವೆಂದರೆ ಕೋಟೆಯ ಸುತ್ತಲೂ ಆಳವಾದ ನೀರು ತುಂಬಿದ ಹಳ್ಳ. ಸ್ಥಾನೀಯದ ಸುತ್ತಲೂ ಅಳತೆಗನುಸಾರವಾಗಿ ೩ ಕಂದಕಗಳಿರಬೇಕು. ಈ ಕಂದಕಗಳು ಪರಸ್ಪರ ಒಂದೊಂದು ದಂಡದಷ್ಟು ಅಂತರವಿರಬೇಕು. (೧ ದಂಡ = ೧೬೮ ಅಂಗುಲ = ೧೪ ಅಡಿ)[೧] ಈ ಕಂದಕಗಳು ಹದಿನಾಲ್ಕು, ಹನ್ನೆರಡು ಅಥವಾ ಹತ್ತು ದಂಡಗಳಷ್ಟು ಅಗಲವಿರುವಂತೆಯೂ ಇರಬೇಕು. ಈ ಅಗಳಿನ ಅಗಲದ ಪರಿಮಾಣಕ್ಕಿಂತ ಕಾಲು ಅಥವಾ ಅರ್ಧ ಇದರ ಆಳವಿರಬೇಕು.

ಈ ಕಂದಕದ ಆಳವು ಅಗಲದ ಲೆಕ್ಕಚಾರದಲ್ಲಿ ಅಗಲಕ್ಕಿಂತ ಮೂರನೇ ಒಂದು ಭಾಗದಷ್ಟಾದರೂ ಇರಬೇಕು. ಈ ಕಂದಕವು ಬುಡದಿಂದ ಮೇಲಿನವರೆಗೆ ಒಂದೇ ಸಮಪ್ರಮಾಣವಿರಬೇಕು. ಬುಡದಲ್ಲಿ ಕಲ್ಲುಗಳನ್ನು ಹಾಸಿರಬೇಕು. ಗೋಡೆಯು ಕಲ್ಲು ಅಥವಾ ಇಟ್ಟಿಗೆಯಿಂದ ಕಟ್ಟಬೇಕು. ಆಳದಲ್ಲಿ ನೀರು ಬರುವವರೆಗೆ ತೋಡಿಸಿದರೆ ಉತ್ತಮ. ಇದರಿಂದ ಅಗುವ ಪ್ರಯೋಜನವೆಂದರೆ ಕಂದಕಕ್ಕೂ ನೀರಿನ ಒರತೆಯುಂಟಾಗುತ್ತದೆ. ಇಲ್ಲದೇ ಹೊದಲ್ಲಿ ಬೇರೆಡೆಯಿಂದ ನೀರನ್ನು ಹರಿಸಬೇಕು. ಈ ಕಂದಕಕ್ಕೆ ನೀರಿನ ಒಳಹರವಿಗೂ ಹಾಗೂ ಹೊರ ಹರವಿಗೂ ನಿಶ್ಚಿತವಾದ ಜಾಗಗಳಿರಬೇಕು. ಇವುಗಳಲ್ಲಿ ಮೊಸಳೆಗಳನ್ನು ಬಿಡಬೇಕು. ತಾವರೆಗಳನ್ನು ಬಳಸಬೇಕು ಎಂದರೆ ಕೆಸರಿರಬೇಕು.

## ವಪ್ರದ ನಿರ್ಮಾಣ

ವಪ್ರವೆಂದರೆ ಮಣ್ಣಿನ ದಿಣ್ಣೆ, ಕೋಟೆಯ ಸುತ್ತಲೂ ಕಂದಕವನ್ನು ತೋಡಿದಾಗ ಸಿಗುವ ಮಣ್ಣನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂದು ಕೌಟಿಲ್ಯನು ತಿಳಿಸುತ್ತಾನೆ.

ಕಂದಕವನ್ನು ತೋಡಿದಾಗ ಸಿಗುವ ಮಣ್ಣನ್ನು ಕೋಟೆಯ ಪ್ರಾಕಾರಕ್ಕೆ ಅಧಾರವಾಗುವಂತೆ ಮಣ್ಣಿನ ದಿಣ್ಣೆಯನ್ನು ಕಟ್ಟಬೇಕು. ಈ ವಪ್ರವು ಒಳಗಿನ ಕಂದಕಕ್ಕಿಂತ ನಾಲ್ಕು ದಂಡಗಳಷ್ಟು ದೂರದಲ್ಲಿರಬೇಕು. ಈ ಮಣ್ಣಿನ ದಿಣ್ಣೆಯ ಎತ್ತರ ಐದು ದಂಡಗಳಿರಬೇಕು. ಅಗಲ ಹನ್ನೆರಡು ದಂಡಗಳಷ್ಟಿರಬೇಕು. ಮಣ್ಣು ಉದುರುವುದನ್ನು ತಪ್ಪಿಸಲು ಅನೆ ಮತ್ತು ಎತ್ತುಗಳಿಂದ ಈ ಮಣ್ಣನ್ನು ಚೆನ್ನಾಗಿ ತುಳಿಸಿ ನಂತರ ಹರವಾದ ಮಣ್ಣನ್ನು ನಿರ್ಮಾಣಕ್ಕೆ ಬಳಸಬೇಕು. ಈ ವಪ್ರವನ್ನು ೩ ರೀತಿಯಲ್ಲಿ ನಿರ್ಮಿಸಬಹುದು.

೧ **ಊರ್ಧ್ವಜಯ:** ಮಣ್ಣನ್ನು ಕೆಳಗೆ ವಿಸ್ತಾರವಾಗಿ ಹರಡಿ ಬರಬರತ್ತಾ ಮೆಲೆ ಸಣ್ಣದಾಗುತ್ತಾ ಬರುವ ಹಾಗೆ ನಿರ್ಮಿಸುವ ವಪ್ರವನ್ನು ಊರ್ಧ್ವಜಯವೆನ್ನುತ್ತಾರೆ. ಉದಹರಣೆಗೆ ಪಿರಮಿಡ್ಡಿನಂತೆ.

೨ **ಮಂಚಪುಷ್ಪ:** ಕೆಳಗಿನಿಂದ ಮೇಲಕ್ಕೆ ವಪ್ರವು ಒಂದೇ ಸಮವಾದ ಗೋಡೆಯಿರಬೇಕು.

೩ **ಕುಂಜಕುಕ್ಷಿ:** ಕೆಳಗಿನ ಭಾಗವನ್ನು ಸಣ್ಣದಾಗಿ ಮಾಡಿ ಮಧ್ಯದ ಭಾಗವನ್ನು ಸ್ವಲ್ಪ ದಪ್ಪವಾಗಿ ಮಾಡಿ ಮತ್ತೆ ಮೇಲಿನ ಭಾಗವನ್ನು ಮತ್ತೆ ಸಣ್ಣದಾಗಿ ಮಾಡುವ ಕ್ರಮ.

ಈ ರೀತಿ ಯಾವುದಾದರೂ ಒಂದು ರೀತಿಯಲ್ಲಿ ಮಣ್ಣಿನ ದಿಣ್ಣೆಯನ್ನು ಕಟ್ಟಿ ಇದರ ಮೇಲುಗಡೆಗೆ ಮುಳ್ಳುಗಿಡಗಳನ್ನು, ವಿಷಬಳ್ಳಿಗಳನ್ನು, ಪೊದರುಗಳನ್ನು ಹಬ್ಬಿಸಬೇಕು. ಉಳಿದ ಮಣ್ಣನ್ನು ಅರಮನೆಯ ನೆಲದ ಗುಂಡಿಗಳಲ್ಲಿ ಮಾತ್ರ ತುಂಬಬೇಕು.

ಇಂಥ ವಪ್ರವನ್ನು ನಾವು ಬನವಾಸಿಯ ಕೋಟೆಯ ರಚನೆಯಲ್ಲಿ ಗಮನಿಸಬಹುದು. ಬನವಾಸಿಯ ಮಣ್ಣಿನ ಕೋಟೆಯ ಮೇಲೆ ಇಂತಹುದೇ ರೀತಿಯ ಮರಗಳಿವೆ. ಇದನ್ನು ಹೋಲುವಂತಹ ಅನೇಕ ಜಾಗಗಳಲ್ಲಿ ವಪ್ರಗಳಿದ್ದುದು ನಮ್ಮ ಗಮನಕ್ಕೆ ಬಂದಿದೆ.

## ಪ್ರಾಕಾರ

ವಪ್ರದ ಮೇಲೆ ಅದರ ವಿಸ್ತಾರಕ್ಕೆ ಎರಡರಷ್ಟು ಎತ್ತರವಿರುವಂತೆ ಇಟ್ಟಿಗೆಗಳಿಂದ ೧೨ ಹಸ್ತ ಪ್ರಮಾಣದಿಂದ ಹಿಡಿದು ೨೪ ಹಸ್ತ ಪ್ರಮಾಣಗಳವರೆಗೆ [೧ಹಸ್ತ=೧ಮೊಳ=೨ಗೇಣು=೧೮ಅಂಗುಲ= ಒಂದೂವರೆ ಅಡಿ] ಸಮಸಂಖ್ಯೆಯಲ್ಲಾಗಲೀ, ಅಥವಾ ವಿಷಮ ಸಂಖ್ಯೆಯಲ್ಲಾಗಲೀ, ಕೋಟೆಯ ಗೋಡೆಯನ್ನು ಕಟ್ಟಿಸಬೇಕು. ಇದರಲ್ಲಿ ರಥಗಳು ಓಡಾಡಲು ರಸ್ತೆಗಳಿರಬೇಕು. ಪ್ರಾಕಾರದ ಅಂಚಿನಲ್ಲಿ ತಾಳೆಯ ಗಿಡದ ಬುಡದಂತೆ, ಮದ್ದಳೆಯಂತೆ, ಕಪಿಯ ತಲೆಯಂತೆ ಯಾವುದಾದರೂ ಒಂದು ಬಗೆಯಲ್ಲಿ ಇಟ್ಟಿಗೆಯಿಂದಾಗಲೀ, ಕಲ್ಲಿನಿಂದಾಗಲೀ, ಪ್ರತಿಮೆಗಳನ್ನು ಮಾಡಬೇಕು. ಒಂದು ವೇಳೆ ಪ್ರತಿಮೆಗಳು ಇಲ್ಲವಾದರೆ ಕಲ್ಲುಗಳನ್ನಾದರೂ ಸುಮ್ಮನೇ ಇಡಬೇಕು.

ಎಂದೆಂದಿಗೂ ಪ್ರಾಕಾರಗಳನ್ನು ಮರದಲ್ಲಿ ಮಾಡಬಾರದೆಂದು ಚಾಣಕ್ಯನು ಎಚ್ಚರಿಸುತ್ತಾನೆ. ಮರದಲ್ಲಿ ಯಾವಾಗಲೂ ಅಗ್ನಿದೇವನು ವಾಸವಿರುತ್ತಾನೆ ಎಂದು ಸೂಕ್ಷ್ಮವಾಗಿ ತಿಳಿಸುತ್ತಾನೆ. ಗೂಡಾರ್ಥವೆಂದರೆ ಪ್ರಾಕಾರವು ಮರದಲ್ಲಿದ್ದರೆ ಯಾರು ಬೇಕಾದರೂ ಹೊರಗಿನಿಂದ ಸುಲಭವಾಗಿ ಸುಟ್ಟುಹಾಕಬಹುದು ಎಂಬುದಾಗಿದೆ.

## ಅಟ್ಟಾಲಕ

ಅಟ್ಟಾಲಕವೆಂದರೆ ಕೋಟೆಯ ಕೊತ್ತಳ. ಕೋಟೆಯನ್ನು ಕಾಯುವ ಕಾವಲುಗಾರನು ನಿಂತುಕೊಳ್ಳಬೇಕಾದ ಜಾಗ. ಈ ಅಟ್ಟಾಲಕಗಳನ್ನು ಪ್ರಾಕಾರದಲ್ಲಿ ಚಚೌಕವಾಗಿ ನಿರ್ಮಿಸಬೇಕು. ಅದರ ಎತ್ತರಕ್ಕೆ ತಕ್ಕಂತೆ ಬೇಕಾದಾಗ ಮಾತ್ರ ಇಟ್ಟುಕೊಂಡು ಆಮೇಲೆ ತೆಗೆದಿಡಬಹುದಾದ ಏಣಿಯನ್ನು ಉಪಯೋಗಿಸಿ ಹತ್ತಬೇಕು. ಇಳಿಯಬೇಕು. ಇದಕ್ಕೆ ಸೋಪನಗಳನ್ನು ನಿರ್ಮಿಸಬೇಕು. ೩೦ ದಂಡಗಳ ಅಂತರದಲ್ಲಿ ಇವುಗಳನ್ನು ನಿರ್ಮಿಸಬೇಕು.

ಎರಡು ಅಟ್ಟಾಲಕಗಳ ನಡುವೆ ಎರಡು ಅಂತಸ್ತಿನ ಇಟ್ಟಿಗೆಯ ಮನೆಯನ್ನು ಕಟ್ಟಬೇಕು. ಅಗಲಕ್ಕಿಂತ ಎರಡೂವರೆಯಷ್ಟು ಉದ್ದವಿರುವ ಪ್ರತೋಲಿ ಎಂಬ ಮನೆಯನ್ನು ಮಾಡಬೇಕು.

## ಇಂದ್ರಕೋಶ

ಅಟ್ಟಾಲಕ ಮತ್ತು ಪತ್ರೋಲಿಗಳ ನಡುವೆ ಮೂರುಜನ ಬಿಲ್ಲುಗಾರರು. ನಿಂತುಕೊಳ್ಳಲು ಯೋಗ್ಯವಾದ ರಂಧ್ರಯಕ್ತವಾದ ಹಲಗೆಯಿಂದ ಕೂಡಿರುವ ರಕ್ಷಣಾ ಗೃಹವನ್ನು ಕಟ್ಟಬೇಕು. ಇದನ್ನು ಇಂದ್ರಕೋಶವೆನ್ನುತ್ತಾರೆ. ಈ ಇಂದ್ರಕೋಶಕ್ಕೆ ಮೇಲ್ಛಾವಣಿಯಿರಬೇಕು. ಬಾಣಪ್ರಯೋಗ ಮಾಡಲು ಅನುಕೂಲವಾಗುವಂತಹ ರಂಧ್ರಗಳಿರಬೇಕು.

## ದೇವಪಥ

ಅಟ್ಟಾಲ ಪ್ರತೋಲಿ, ಇಂದ್ರಕೋಶಗಳ ಮಧ್ಯದಲ್ಲಿ ಎರಡು ಮೊಳ ಅಗಲವೂ ಎಂಟು ಮೊಳ ಉದ್ದವೂ ಇರುವಂತೆ ಕೋಟೆಗೆ ಹೊಂದಿಕೊಂಡಂತೆ ರಹಸ್ಯಮಾರ್ಗದ ನಿರ್ಮಾಣ ಕೋಟೆಯಲ್ಲಿ ಅತ್ಯವಶ್ಯಕ. ಇದನ್ನು ದೇವಪಥವೆನ್ನುವರು.

## ಚಾರ್ಯ

ಕೋಟೆಯ ಪ್ರಾಕಾರದ ಬಳಿ ಒಂದು ಅಥವಾ ಎರಡು

ದಂಡಗಳಷ್ಟು ವಿಸ್ತಾರವಾಗಿ ಹತ್ತಲಿಕ್ಕೂ, ಇಳಿಯಲಿಕ್ಕೂ, ಅನುಕೂಲವಾಗಿರುವಂತೆ ಎಂಟು ಮೊಳದಳತೆಯ ಮಾರ್ಗವನ್ನು ನಿರ್ಮಿಸಬೇಕು. ಇದನ್ನು ಚಾರ್ಯ ಎನ್ನಲಾಗುತ್ತದೆ.

## ಪ್ರಧಾವಿತಿಕೆ

ಚಾರ್ಯ ಎಂಬ ಜಾಗದ ಬಳಿ ಶತ್ರುಗಳು ಬರದಂತಹ ಜಾಗಗಳಲ್ಲಿ ನಿಂತುಕೊಂಡು ಶತ್ರುಗಳು ಸುಲಭವಾಗಿ ಕಾಣುವಂತಹ ಜಾಗದಲ್ಲಿ ಶತ್ರುಗಳ ವಿರುದ್ಧ ಬಾಣಪ್ರಯೋಗ ಮಾಡಲು ಅನುಕೂಲವಾಗುವಂತಹ ಜಾಗವನ್ನು ಪ್ರಧಾವಿತಿಕೆ ಎನ್ನಲಾಗುತ್ತದೆ. ಈ ಆವರಣದ ಸುತ್ತಲೂ ಶತ್ರುಗಳ ಚಲನವಲನಗಳನ್ನು ಗಮನಿಸಲು ನಿಷ್ಕುಹದ್ವಾರ (ಸಣ್ಣ ಸಣ್ಣ ರಂಧ್ರಗಳನ್ನು) ನಿರ್ಮಿಸಬೇಕು.

ಕೋಟೆಯ ಕೆಳಭಾಗದಲ್ಲಿ ಶತ್ರುಗಳಿಗೆ ಸುಲಭವಾಗಿ ಗೊತ್ತಾಗದಂತೆ ೧೫ ರೀತಿಯ ದಾರಿಗಳ ನಿರ್ಣಯವನ್ನು ಕುರಿತು ಚಾಣಕ್ಯನು ತಿಳಿಸುತ್ತಾನೆ.

೧. **ಜಾನು ಭಂಜನೀ:** ಜಾನುವೆಂದರೆ ಮೊಳಕಾಲು ಭಂಜನೆಯೆಂದರೆ ಮುರಿಯುವುದು. ಈ ದಾರಿಯ ಬಗ್ಗೆ ಸರಿಯದ ಎಚ್ಚರವಿಲ್ಲದೆ ನುಗ್ಗುವವರ ತೊಡೆ ಮುರಿಯುವಂತಹ ದಾರಿಯಿದು.

೨. **ತ್ರಿಶೂಲಪ್ರಕರ:** ತ್ರಿಶೂಲಗಳೆಂದರೆ ಲೋಹದಿಂದ ತಯಾರಿಸಿದ ಮೂರು ಮೊನೆಯ ಆಯುಧ, ಇದನ್ನು ಮರದಲ್ಲೂ ನಿರ್ಮಿಸುತ್ತಾರೆ. ಪ್ರಕರವೆಂದರೆ ಗುಂಪು, ಬಹುಶಾಃ ಈ ದಾರಿಯಲ್ಲಿ ಗುಂಪು ಗುಂಪಾಗಿ ತ್ರಿಶೂಲಗಳನ್ನು ನೆಡುತ್ತಿದ್ದರು ಎಂದಿಟ್ಟುಕೊಳ್ಳಬಹುದು.

೩. **ಕೂಪ:** ಭಾವಿ.

೪. **ಕೂಟ:** ಕಬ್ಬಿಣದ ಸಲಾಕೆ.

೫. **ಅವಪಾತ:** ಹುಲ್ಲು ಮುಂತಾದವುಗಳಿಂದ ಮುಚ್ಚಿದ ಗುಂಡಿ.

೬. **ಕಂಟಕ ಪ್ರತಿಸರ:** ಕಂಟಕವೆಂದರೆ ಮುಳ್ಳು, ಪ್ರತಿಸರವೆಂದರೆ ಕಂಬಿ, ಮುಳ್ಳುಕಂಬಿಗಳನ್ನು ನಿರ್ಮಿಸುತ್ತಿರಬೇಕು.

೭. **ಅಹಿಪುಷ್ಠ:** ಕಬ್ಬಿಣದಿಂದಾದ ಯಂತ್ರ; ಹಾವಿನ ಮೂಳೆಯಂತಿರುವ ಕಬ್ಬಿಣದ ಕಂಬಿ.

೮. **ತಾಲಪತ್ರ:** ಕಬ್ಬಿಣದಿಂದಲೋ, ಮರದಿಂದಲೋ ಮಾಡಿದ ವಿಲಕ್ಷಣ ಯಂತ್ರ, ತಾಳೆಗರಿಯಂತಹ ಚೂಪಾದ ಮುಳ್ಳಿನ ಆಯುಧ.

೯. **ಶೃಂಗಾಟಕ:** ಇದೂ ಅಷ್ಟೇ ಕಬ್ಬಿಣದ ವಿಲಕ್ಷಣ ಯಂತ್ರ, ಮೂರು ಮೂಲೆಗಳಿರುವ ಲೋಹಯಂತ್ರ,

೧೦.**ಶ್ವದಂಷ್ಟ್ರಾ:** ಆನೆಗಳಿಗೆ ಹಾನಿಕಾರಕ ಸಸ್ಯ ಇದು ನಾಯಿಯ ಹಲ್ಲಿನಂತೆ ಇರುವ ಲೋಹಯಂತ್ರ,

೧೧.**ಅರ್ಗಲ:** ಅಗುಳಿ ಬಾಗಿಲನ್ನುಮುಚ್ಚಿ ಬಲಪಡಿಸಲು ಅಡ್ಡವಾಗಿ ಹಾಕುವ ಮರದ ಪಟ್ಟಿಯನ್ನು ಅರ್ಗಲವೆನ್ನುತ್ತಾರೆ.

೧೨.**ಉಪಸ್ಕಂದನ:** ಜಾರಿಕೆಯನ್ನು ಉಂಟು ಮಾಡುವ ಮರವಿದು.

೧೩.**ಪಾದುಕಾ:** ಒಂದು ಕಾಲು ಮಾತ್ರ ಹಿಡಿಯುವಷ್ಟು ಕೆಸರಿನ ಗುಂಡಿಯಿದು. ಇದನ್ನು ಮೇಲುಗಡೆ ಗೊತ್ತಾಗದ ಹಾಗೆ ತರಗೆಲೆಗಳಿಂದ ಮುಚ್ಚಲಾಗಿರುತ್ತದೆ.

೧೪.**ಅಂಬರೀಷ :** ಕಾದ ಕಬ್ಬಿಣದ ಬಾಣಲೆಯನ್ನು ಅಂಬರೀಷ ಎನ್ನುತ್ತಾರೆ.

೧೫.**ಉದಪಾನಕ:** ಉಪಯೋಗಿಸಲು ನಿರರ್ಥಕವಾದ ಕೆಟ್ಟ ಸರೋವರ.

ಈ ೧೫ ರೀತಿಯ ದಾರಿಗಳು ಅಸ್ಪಷ್ಟವಾಗಿವೆ. ಇವುಗಳನ್ನು ಸಂಪೂರ್ಣವಾಗಿ ಯಾವ ರೀತಿಯಲ್ಲಿ ನಿರ್ಮಿಸುತ್ತಿದ್ದರು ಎಂದು ತಿಳಿದು ಬಂದಿಲ್ಲ. ಹಾಗೂ ಇವುಗಳು ಆಯುಧಗಳೆಂದು ಸ್ಪಷ್ಟವಾಗಿ ಗೊತ್ತಾಗುವುದರಿಂದ ಇದು ಗುಪ್ತಮಾರ್ಗಕ್ಕೆ ಯಾವ ರೀತಿಯಲ್ಲಿ ಪೂರಕವಾಗಿದೆಯೆಂದು ವಿಭಿನ್ನವಾದ ಲೇಖನವೊಂದನ್ನು ಬರೆಯಬೇಕಾದ ಅಗತ್ಯವಿದೆ.

## ಮೇಂಡಕಮ್

ಕೆಲವು ವಿದ್ವಾಂಸರ ಪ್ರಕಾರ ಈ ಶಬ್ದವನ್ನು ಓದಿರುವದೇ ತಪ್ಪು. ಉದಾಹರಣೆಗೆ ಆರ್.ಪಿ. ಕಾಂಗ್ಲೆಯವರು ಈ ಪದದ ಮೂಲ ಓದಿನ ಬಗ್ಗಯೇ ಸಂಶಯ ವ್ಯಕ್ತಪಡಿಸಿದ್ದಾರೆ. ಅದರೆ ಇದನ್ನು ಸಚ್ಚಿದಾನಂದ ಭಾರತೀ ಸ್ವಾಮಿಗಳು ತಮ್ಮ ಅನುವಾದ ಕೃತಿಯಲ್ಲಿ ಮಂಟಪವೆಂದು ತಿಳಿಸುತ್ತಾರೆ.

ಈ ಮಂಟಪವನ್ನು ಕೋಟೆಯ ಪ್ರಾಕಾರ ಗೋಡೆಗಳ ಎರಡೂ ಕಡೆಗಳಲ್ಲಿ ಒಂದೂವರೆ ದಂಡಗಳಷ್ಟು ಜಾಗದಲ್ಲಿ ಕಟ್ಟಬೇಕೆಂದು ಕೌಟಿಲ್ಯನು ಹೇಳುತ್ತಾನೆ. ಈ ಮಂಟಪದಲ್ಲಿ ಮಹಾದ್ವಾರವನ್ನು ನಿರ್ಮಿಸಬೇಕು. ರಸ್ತೆಯ ಅಗಲದಲ್ಲಿ ಆರನೆಯ ಒಂದು ಅಥವಾ ಎಂಟನೆಯ ಒಂದು ಭಾಗಗಳಷ್ಟು ಮಹಾದ್ವಾರವು ಅಗಲವಾಗಿರಬೇಕು.

ಮಹಾದ್ವಾರದ ನಾಲ್ಕು ಚೌಕಟ್ಟುಗಳು ಕ್ರಮೇಣ ಐದು, ಅರು, ಏಳು, ಎಂಟು ದಂಡಗಳವರಗೆ ಚೌಕಾಕಾರವಾಗಿರಬೇಕು. ಎರಡೆರಡು ದಂಡ ವಿಸ್ತಾರವೂ ಇರಬಹುದು. ಅರನೆಯ ಒಂದು ಭಾಗ ಅಥವಾ ಎಂಟನೆಯ ಒಂದು ಭಾಗದಷ್ಟು ಅಗಲವಿರಬೇಕು. ಈ ಮಂಟಪದಲ್ಲಿ ಮಹಾದ್ವಾರವಿರಬೇಕು.

### ತುಲೋತ್ಸೇಧ

ಈ ಮಂಟಪದ ತೊಲೆಯವರೆಗಿನ ಎತ್ತರವನ್ನು ತುಲೋತ್ಸೇಧ ಎಂದು ಕರೆಯಲಾಗುತ್ತದೆ. ಈ ಎತ್ತರವು ಹದಿನೈದು ಹಸ್ತದಿಂದ ಮೊದಲ್ಗೊಂಡು ಹದಿನೆಂಟು ಹಸ್ತದವರಗೆ ಒಂದಕ್ಕಿಂತ ಒಂದರಂತೆ ಒಂದೊಂದು ಹಸ್ತ ಏರಿಕೊಂಡು ಹೋಗುತ್ತದೆ.

ಈ ಕಂಭದ ಎತ್ತರದ ಆರನೆಯ ಒಂದು ಭಾಗವು ಆ ಕಂಭದ ಸುತ್ತಳತೆಯಾಗಿರಬೇಕು. ಅ ಸುತ್ತಳತೆಯನ್ನು ಪರಿಧಿ ಎನ್ನಲಾಗುತ್ತದೆ. ಈ ಪರಿಧಿಯ ಎರಡರಷ್ಟು ಭಾಗವು ಭೂಮಿಯ ಒಳಗಿರಬೇಕು. ಕಂಬದ ಅಗ್ರಭಾಗವು ಪರಿದಿಯ ನಾಲ್ಕನೆಯ ಒಂದು ಭಾಗವಾಗಿರಬೇಕು.

**ಅಂತಸ್ತುಗಳುಳ್ಳ ಮುಖ್ಯದ್ವಾರ:** ಕೋಟೆಯ ಮುಖ್ಯದ್ವಾರದಲ್ಲಿ ಮೊದಲನೇ ಅಂತಸ್ತಿನಲ್ಲಿ ಐದು ಭಾಗಗಳಲ್ಲಿ ಹಜಾರ, ಭಾವಿ, ಸೇವಾ ಗೃಹಗಳನ್ನು ನಿರ್ಮಿಸಬೇಕು. ಹಜಾರದ ಹತ್ತನೆಯ ಒಂದು ಭಾಗದಲ್ಲಿ ವಿಸ್ತಾರವಾಗಿ ಮಂಚಾಕೃತಿಯಲ್ಲಿ ಎರಡು ವೇದಿಕೆಗಳನ್ನು ಎದಿರು ಬದಿರಾಗಿ ನಿರ್ಮಿಸಬೇಕು. ಮತ್ತು ಸೇವಾ ಗೃಹಗಳ ಮಧ್ಯದಲ್ಲಿ ಚಿಕ್ಕದಾದ ಬಾಗಿಲನ್ನು ನಿರ್ಮಿಸಬೇಕು.

ಎರಡನೆಯ ಅಂತಸ್ತು ಮೊದಲನೆಯ ಅಂತಸ್ತು ಎಷ್ಟು ಎತ್ತರವಿರುತ್ತದೆಯೋ ಅದರ ಅರ್ಧದಷ್ಟು ಎತ್ತರವನ್ನು ಮಾತ್ರ ಹೊಂದಿರಬೇಕು. ಇಲ್ಲಿ ಆಧಾರಕ್ಕಾಗಿ ಪುಟ್ಟ ಪುಟ್ಟ ಕಂಬಗಳನ್ನು ನಿರ್ಮಿಸಬೇಕು.

ಮೊದಲನೇ ಅಂತಸ್ತು ಒಂದೂವರೆ ದಂಡಗಳಷ್ಟಿರಬೇಕು. ಅಂದರೆ ಅದರ ದ್ವಾರವು ಐದು ದಂಡ ಚಚೌಕವಾಗಿರಬೇಕು. ಮೊದಲನೆಯ ಒಂದರಷ್ಟು ಅಂತರವನ್ನು ಹೊಂದಿರಬೇಕು. ಎರಡೂ ಪಾರ್ಶ್ವಗಳನ್ನು ಇಟ್ಟಿಗೆಯಿಂದ ಕಟ್ಟಬೇಕು. ಪ್ರದಕ್ಷಿಣೆ ಬರುವ ಹಾಗೆ ದುಂಡಗೆ ಮೆಟ್ಟಿಲುಗಳನ್ನು ಇದರ ಎಡಗಡೆಯಲ್ಲಿ ನಿರ್ಮಿಸಬೇಕು. ಗುಪ್ತವಾದ ಸೋಪಾನಗಳನ್ನು ಗೋಡೆಯ ಒಳಗೆ ಅಳವಡಿಸಿರಬೇಕು.

**ತೋರಣ ಶಿರ :** ಎರಡು ಹಸ್ತ ಪ್ರಮಾಣದಲ್ಲಿರುವ ಹೊರಬಾಗಿಲಿನ ತಲೆಭಾಗವನ್ನು ತೋರಣ ಶಿರವೆನ್ನುತ್ತಾರೆ. ಐದನೆಯ ಮೂರು ಭಾಗದಷ್ಟು ಸ್ಥಳದಲ್ಲಿ ಇದಕ್ಕೆ ಎರಡು ಹಲಗೆಯ ಬಾಗಿಲುಗಳಿರಬೇಕು. ಇದಕ್ಕೆ ಎರಡೆರಡು ಅಗುಳಿಗಳು ಇರಬೇಕು.

**ಇಂದ್ರ ಕೀಲ :** ಇಂದ್ರಕೀಲವೆಂದರೆ ಕಬ್ಬಿಣದ ಗೂಟ. ಇದು ೧ ಅರತ್ನಿಯಷ್ಟು [೧ ಮೊಳ] ಉದ್ದವಿರಬೇಕು.

**ಅಣಿದ್ವಾರಂ :** ಮಹಾದ್ವರದ ಮುಖ್ಯ ಬಾಗಿಲಿನಲ್ಲಿ ಐದು ಹಸ್ತ ಪ್ರಮಾಣದಲ್ಲಿ ಒಂದು ಚಿಕ್ಕ ಬಾಗಿಲಿರಬೇಕು. ಇದನ್ನು ಅಣಿದ್ವಾರವೆನ್ನುವರು.

ಇಲ್ಲಿ ಆನೆಗಳ ಒತ್ತಡವನ್ನು ತಡೆಯಲು ಸಮರ್ಥವಾದ ಪರಿಘಗಳನ್ನು [ತಡೆಯೊಡ್ಡು] ನಿರ್ಮಿಸಬೇಕು. ಪರಿಘವೆಂದರೆ ಕಬ್ಬಿಣದ ಗೆರೆಯಂತಹ ಒಂದು ಆಯುಧವೆಂಬ ಅರ್ಥವೂ ಇದೆ.

ಕೋಟೆಯಿಂದ ಇಳಿಯಲು ಇಳಿಜಾರಾದ ಮಣ್ಣಿನ ಗುಡ್ಡವನ್ನು ತಯಾರಿಸಬಹುದು. ಮುಖ್ಯ ಇದನ್ನು ಹಸ್ತಿನಖವ ಎಂದು ಕರೆಯಲಾಗಿದೆ. ಇದು ದ್ವಾರದ ಅರ್ಧದಷ್ಟು ಎತ್ತರವಿರುವಂತೆ ದ್ವಾರಕ್ಕೆ ಸಮನಾಗಿ ವಿಸ್ತೀರ್ಣವಾಗಿ ಇರಬೇಕು. ಕೋಟೆಯ ಕಂದಕಕ್ಕೆ ಮರದ ಅಥವಾ ಕಲ್ಲಿನ ಸೇತುವೆಯನ್ನು ಬೇಕಾದಾಗ ಮಾತ್ರ ಬಳಸುವಂತೆ ಅಳವಡಿಸಿರಬೇಕು.

### ಗೋಪುರ

ಪ್ರಾಕಾರಕ್ಕೆ ಸಮನಾಗಿರವಂತೆ ನಿಸ್ಸರಣವನ್ನು ಏರ್ಪಡಿಸಿ ವಿಸ್ತಾರವಾದ ಮೂರನೆಯ ಒಂದು ಭಾಗದಷ್ಟು ಗೋಧಾಮುಖ(ಮೊಸಳೆಯ ಆಕೃತಿಯಲ್ಲಿರುವ ಗೋಪುರ) ವನ್ನು ನಿರ್ಮಿಸಬೇಕು. ಪ್ರಾಕಾರದ ಮಧ್ಯದಲ್ಲಿ ಭಾವಿಯನ್ನು ತೋಡಿಸಿ ಇದಕ್ಕೆ ಪ್ರವೇಶಿಸಲು ಬಾಗಿಲಿಡಬೇಕು. ಇದರಲ್ಲಿಯೇ ನಾಲ್ಕು ಕೊಠಡಿಗಳನ್ನು ಕಟ್ಟಿಸಬೇಕು. ಇದರ ಬಾಗಿಲನ್ನು 'ಕುಮಾರಿಪುರ' ಎನ್ನಲಾಗುತ್ತದೆ. ಇಲ್ಲಿ ಶಿಖರಗಳಿಲ್ಲದ ಪ್ರಾಕಾರವನ್ನು ಕಮಾನಿನಾಕಾರದಲ್ಲಿ ರಚಿಸಬೇಕು.

ಅರ್ಥಶಾಸ್ತ್ರದಲ್ಲಿ ಕೋಟೆಯ ಒಳಗೆ ಆಯುಧಗಳನ್ನು ಎಲ್ಲಿಡಬೇಕು ಎಂಬುದರ ಬಗ್ಗೆ ಸೂಕ್ಷ್ಮವಾದ ಮನಸ್ಸಿನ ಕೌಟಿಲ್ಯನು ಹೀಗೆ ಹೇಳುತ್ತಾನೆ. ಯುದ್ಧಕ್ಕೆ ಬೇಕಾದ ಆಯುಧಗಳನ್ನು ಇಡಲು ಅಗಲಕ್ಕೆ ಮೂರನೆಯ ಒಂದು ಭಾಗದಷ್ಟು ಉದ್ದವಿರುವ ಕಾಲುವೆಗಳನ್ನು ತೋಡಿ ಅದರಲ್ಲಿ ಕಲ್ಲು, ಗುದ್ದಲಿ, ಕೊಡಲಿ, ಬಾಣ, ಆನೆಯ ಉಪಕರಣಗಳು, ಆಯುಧಗಳು, ಶೂಲದಂತೆ ಇರಿಯುವ ತುದಿಯುಳ್ಳ ಬಿದಿರುಗಳು, ಒಂಟೆಯ ಕೆತ್ತನೆಯಿರುವ ಆಯುಧಗಳು ಅಗ್ನಿಯನ್ನು ಉಂಟುಮಾಡುವ ವಸ್ತುಗಳು ಮುಂತಾದ ಆಯುಧಗಳನ್ನು ಈ ಕಾಲುವೆಯಲ್ಲಿ ಬಚ್ಚಿಡಬೇಕು.

ಕೋಟೆಯ ರಚನೆಯ ಬಗೆಗೆ ಇಷ್ಟು ಮಾಹಿತಿಯನ್ನು ಒದಗಿಸುವ ಕೌಟಿಲ್ಯನು ಮುಂದಿನ ಅಧ್ಯಾಯದಲ್ಲಿ ಕೋಟೆಯ ಒಳಗಿನ ರಚನೆಗಳನ್ನು ಕುರಿತು ತಿಳಿಸುತ್ತಾನೆ. ವಾಸ್ತು ವಿಭಾಗ, ಬೀದಿಗಳ ವಿಭಾಗಗಳು ಮತ್ತು ಅಳತೆಗಳು, ರಾಜಭವನ ಮತ್ತು ಅದರ ಒಂಬತ್ತು ವಿಭಾಗಗಳು, ಊರನಡುವೆ ಮತ್ತು ಹೊರಗೆ ಇರಬೇಕಾದ ದೇವಾಲಯಗಳು, ಸ್ಮಶಾನಪ್ರದೇಶ, ರೈತರು ಮತ್ತು ಜಮೀನುಗಳ ಯೋಗ್ಯತೆಯನ್ನು ಅನುಸರಿಸಿ ಜಮೀನುಗಳ ಗಡಿ ನಿರ್ಮಾಣ ಮತ್ತು ಸಂಗ್ರಹಿಸಬೇಕಾದ ವಸ್ತುಗಳು ಚತುರಂಗ ಸೈನ್ಯಕ್ಕೆ ಇರಬೇಕಾದ

ಮುಖ್ಯಾಧಿಕಾರಿಗಳು, ದೇಶದ್ರೋಹಿಗಳ ನಿವಾಸಸ್ಥಾನದ ವಿಷಯಗಳನ್ನು ಕುರಿತು ಮಾಹಿತಿಯೊದಗಿಸುತ್ತಾನೆ. ಇದರಲ್ಲಿ ಕೋಟೆಯ ವಿಷಯಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಮಾತ್ರ ಗಮನಿಸಬಹುದು.

### ರಾಜಮಾರ್ಗಗಳು

ಕೋಟೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಮೂರು ದಾರಿಗಳು ಹಾಗೂ ಉತ್ತರ ದಕ್ಷಿಣವಾಗಿ ಮೂರು ಮಾರ್ಗಗಳು ಇರಬೇಕು. ಪ್ರತಿಯೊಂದಿ ದಿಕ್ಕಿನಲ್ಲಿಯೂ ಮೂರು ಮೂರರಂತೆ ಒಟ್ಟು ಕೋಟೆಯಲ್ಲಿ ಹನ್ನೆರಡು ಬಾಗಿಲುಗಳು ಇರಬೇಕು. ಜೊತೆಗೆ ಈ ಕೆಳಗೆ ಭೂಮಾರ್ಗ, ಜಲಮಾರ್ಗ ಹಾಗೂ ಸುರಂಗಮಾರ್ಗಗಳು ಕೂಡ ಇರಬೇಕು.

### ರಸ್ತೆಗಳು

**೪ ದಂಡ** : ಸಣ್ಣ ಬೀದಿಗಳು ೪ ದಂಡವಿರಬೇಕು.

**೮ ದಂಡ** : ರಾಜಮಾರ್ಗ, ದ್ರೋಣಮಾರ್ಗ, ಸ್ಥಾನೀಯಮಾರ್ಗ, ರಾಷ್ಟ್ರಮಾರ್ಗ, ಸೇನಾಮಾರ್ಗ, ಪಟ್ಟಣಮಾರ್ಗ, ಸ್ಮಶಾನಮಾರ್ಗಗಳು ೮ ದಂಡವಿರಬೇಕು.

**೪ ದಂಡ** : ಸೇತುವೆಗಳಿಗೆ. ಕಾಡುಗಳಿಗೆ, ಹೋಗುವ ಮಾರ್ಗವು ೪ ದಂಡವಿರಬೇಕು.

**೨ ದಂಡ** : ಹೊಲಗದ್ದೆಗಳಿಗೆ ಹೋಗುವ ಮಾರ್ಗ ೨ ದಂಡವಿದ್ದರೆ ಸಾಕು.

**೫ ಅರತ್ನಿ** : ರಥಮಾರ್ಗವು ಐದು ಅರತ್ನಿಗಳಿರಬೇಕು.

**೪ ಅರತ್ನಿ** : ಹಸು ಮುಂತಾದ ಪ್ರಾಣಿಗಳ ಮಾರ್ಗವು ೪ ಅರತ್ನಿಗಳಿರಬೇಕು.

**೨ ಅರತ್ನಿ** : ಮನುಷ್ಯ ನಡೆಯುವ ಮಾರ್ಗ ಹಗು ಮೇಕೆ, ಕುರಿ ಮುಂತಾದ ಸಣ್ಣ ಪ್ರಾಣಿಗಳ ಮಾರ್ಗವು ೨ ಅರತ್ನಿಯಿರಬೇಕು.

ಇದರ ಜೊತೆಗೆ ಈ ಕೋಟೆಯ ಒಳಗೆ ನಗರ ಚಿತ್ರಣ ಹೇಗಿರಬೇಕು? ಯಾವ್ಯಾವ ಸಮುದಾಯದವರು ಎಲ್ಲೆಲ್ಲಿರಬೇಕು ಎಂದು ತಿಳಿಸುವ ಕೌಟಿಲ್ಯನು ಇದೇ ಗ್ರಂಥದ ಆರನೆಯ ಅಧಿಕರಣದಲ್ಲಿ ಸಾಮ್ರಾಜ್ಯದ ಮೂಲಸ್ಥಾನವನ್ನು ಕುರಿತು ಹೇಳುತ್ತಾನೆ. ಈ ಅಧಿಕರಣದ ತೊಂಬತ್ತಾರನೆಯ ಪ್ರಕರಣದಲ್ಲಿ ಸಾಮ್ರಾಜ್ಯದ ಸಪ್ತಾಂಗಗಳನ್ನು ಕುರಿತು ಹೇಳುತ್ತಾನೆ. ಇದರಲ್ಲಿ ದುರ್ಗ(ಕೋಟೆ)ಯೂ ಕೂಡ ಒಂದು ಪ್ರಮುಖವಾದ ಅಂಗ [ಇನ್ನುಳಿದವು ಸ್ವಾಮಿ, ಮಂತ್ರಿ, ದೇಶಭಂಡಾರ, ಚತುರಂಗ ಸೇನೆ ಮತ್ತು ಸ್ನೇಹಿತ] ಕೋಟೆಯ ಮಹತ್ವದ ಬಗ್ಗೆ ಕೌಟಿಲ್ಯನಿಗೆ ಕ್ರಿ.ಪೂ. ಕಾಲಘಟ್ಟದಲ್ಲಿಯೇ ಸಂಪೂರ್ಣವಾದ ಎಚ್ಚರವಿದ್ದುದು ಪರಂಪರೆಯಲ್ಲಿ ಹಲವರು ರೀತಿಯ ಬಲಿಷ್ಠವಾದ ದುರ್ಗಗಳನ್ನು ರಚಿಸಲು ನಾಂದಿಯಾಯಿತು.

ಅರ್ಥಶಾಸ್ತ್ರವು ಕ್ರಿಸ್ತಪೂರ್ವ ಕಾಲಘಟ್ಟದಲ್ಲಿ ರಚನೆಯಾದುದರಿಂದ ನಾವು ಈಗ ಈ ಗ್ರಂಥದ ರಚನೆಯಾಗಿ ೨೪೦೦ ವರ್ಷಗಳಷ್ಟು ಮುಂದೆ ಇರುವುದರಿಂದ ಇದರಲ್ಲಿ ಉಪಯೋಗಿಸಿರುವ ಅಳತೆಯ ಮಾನಗಳಲ್ಲಿ ಸಾಕಷ್ಟು ಗೊಂದಲಗಳಿವೆ. ನಮ್ಮಲ್ಲಿರುವ ಶಬ್ದಕೋಶಗಳಲ್ಲಿಯೂ ಈ ಎಲ್ಲಾ ಶಬ್ದಗಳ ಅರ್ಥದಲ್ಲಿ ಏಕಮತವಿಲ್ಲ. ಪ್ರಾದೇಶಿಕವಾಗಿ ಭಿನ್ನ ಅರ್ಥಗಳನ್ನು ತಿಳಿಸುವ ಈ ಸಾಮಾಜಿಕ ಶಬ್ದಗಳನ್ನು ಸರಿಯಾಗಿ ಕಂಡುಕೊಳ್ಳಬೇಕಾದ ಅವಶ್ಯಕತೆಯಿದೆ. ಇದರಲ್ಲಿ ಕೆಲವನ್ನು ಗಮನಿಸುವುದಾದರೆ,

### ದಂಡದ ಬಗೆಗಿನ ಗೊಂದಲ

ದಂಡ ಎಂದರೆ ಕನ್ನಡ ನಿಘಂಟುಗಳು ಕೋಲು, ಕಂಬ ಎಂಬ ಅರ್ಥಗಳನ್ನು ತಿಳಿಸುತ್ತವೆ. ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ನಾಲ್ಕು ಮೊಳದ ಅಳತೆಯನ್ನು ದಂಡವೆನ್ನುತ್ತಾರೆ ಎಂದು ತಿಳಿಸಲಾಗಿದೆ. ಸಂಸ್ಕೃತ ನಿಘಂಟಿನಲ್ಲಿ ಒಂದು ಭೂಮಿಯ ಒಂದು ಅಳತೆಯೆಂದೇ ತಿಳಿಸಿ ಕೈ ತೊಳೆದುಕೊಂಡುಬಿಟ್ಟಿದ್ದಾರೆ. ಬಿ. ಶಾಮಾಶಾಸ್ತ್ರಿಗಳು ತಮ್ಮ ಇಂಗ್ಲೀಷ್ ಅನುವಾದದಲ್ಲಿ ದಂಡ ಎಂದರೆ ೬ ಅಡಿ ಎಂದು ತಿಳಿಸಿರುವುದನ್ನು ಆರ್.ಪಿ. ಕಾಂಗ್ಲೆ ಮುಂತಾದ ಇತರ ಅನುವಾದಕರು ಅನುಮೋದಿಸಿದ್ದಾರೆ. ಅನೇಕರು ಶಾಮಾಶಾಸ್ತ್ರಿಗಳು ಕಂಸದಲ್ಲಿ ಕೊಟ್ಟಿದ್ದನ್ನು ತೆಗೆದುಕೊಂಡಿದ್ದಾರೆ. ಅರ್ಥಶಾಸ್ತ್ರವನ್ನು ಕನ್ನಡಕ್ಕೆ ಅಚ್ಚುಕಟ್ಟಾಗಿ ಅನುವಾದಿಸಿರುವ ಶ್ರೀ ಸಚ್ಚಿದಾನಂದ ಶಂಕರ ಭಾರತೀಸ್ವಾಮಿಗಳು ಒಂದು ದಂಡವೆಂದರೆ ೧೬೮ ಅಂಗುಲವೆಂದು ಕಂಸದಲ್ಲಿ ಕೊಟ್ಟಿರುತ್ತಾರೆ. ೧೨ ಅಂಗುಲಗಳಿಗೆ ೧ ಅಡಿಯಾಗಿರುವುದರಿಂದ ೧೬೮ ಅಂಗುಲಕ್ಕೆ ೧೪ ಅಡಿಗಳಾಗುತ್ತವೆ. ಶ್ರೀಗಳು ತಮ್ಮ ಗ್ರಂಥದುದ್ದಕ್ಕೂ ಯಾವುದೇ ಆಕರಗಳನ್ನು ನೀಡದೇ ಇರುವುದರಿಂದ ಖಚಿತವಾದ ಆಧಾರ ದೊರಕುತ್ತಿಲ್ಲ. ಕೆ. ಕೃಷ್ಣಭಟ್ಟರು ಅನುವಾದಿಸಿರುವ 'ಕೌಟಿಲ್ಯನ ಅರ್ಥಶಾಸ್ತ್ರ' ಕೃತಿಯಲ್ಲಿ ದಂಡಕ್ಕೆ ವಿವರಣೆಯಾಗಿ 'ನಲವತ್ತೆರಡು ಅಂಗುಲಕ್ಕೆ ಒಂದು ಹಸ್ತವೆಂದೂ, ನಾಲ್ಕು ಹಸ್ತಕ್ಕೆ ಒಂದು ದಂಡವೆಂದೂ ಹೆಸರು' ಎಂದು ತಿಳಿಸಿರುತ್ತಾರೆ. ಹಾಗಾದರೆ ಒಂದು ದಂಡವೆಂದರೆ ೪ ಹಸ್ತ ಅಂದರೆ ೧೬೮ ಅಂಗುಲವೇ ಆಗುತ್ತದೆ. ಇದು ಶ್ರೀಗಳು ಹೇಳಿರುವುದಕ್ಕೆ ಸರಿಯಾಗಿದೆ. ಬಹುತೇಕ ಇಂಗ್ಲೀಷ್ ಅನುವಾದ ಕೃತಿಗಳು ಹೇಳಿರುವಂತೆ ಒಂದು ದಂಡವೆಂದರೆ ೬ ಅಡಿಯಲ್ಲ ಬದಲಿಗೆ ೧೪ ಅಡಿಯೆಂದಾಗುತ್ತದೆ. ಹಾಗಾದರೆ ಶಾಮಾಶಾಸ್ತ್ರಿಗಳು ೬ ಅಡಿ ಎಂದು ಪರಿಗ್ರಹಿಸಲು ಕಾರಣವಾದರೂ ಏನೆಂದು ತಿಳಿಯದು.

ಹಾಗಾದರೆ ಕೌಟಿಲ್ಯನು ಹೇಳಿದಂತೆ ಒಂದೊಂದು ಕಂದಕವು ಒಂದೊಂದು ದಂಡವಿರಬೇಕೆಂದರೆ ೧೪ ಅಡಿಗಳಷ್ಟಿರಬೇಕು ಎಂದಾಗುತ್ತದೆ, ರಸ್ತೆಗಳ ವಿಷಯದಲ್ಲಿ ತಿಳಿಸುವಂತೆ ಸಣ್ಣ ಬೀದಿಗಳು ೪ ದಂಡ (೫೬ ಅಡಿ) ರಾಜಮಾರ್ಗಗಳು ೮ ದಂಡ(೧೧೨ ಅಡಿ)ಗಳಿರುವುದನ್ನು ನೋಡಿದರೆ ಆ ಕಾಲದ ರಸ್ತೆಗಳ ಅಗಲವು ಅಷ್ಟು ವಿಸ್ತಾರವಾಗಿರುತ್ತಿತ್ತೇ? ಎಂಬ ಆಶ್ಚರ್ಯವುಂಟಾಗುತ್ತದೆ.

**ಅರತ್ನಿ**

ಅರತ್ನಿಯ ವಿಷಯದಲ್ಲಿಯೂ ಸ್ವಲ್ಪ ಗೊಂದಲವಿದೆ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಅರತ್ನಿಯೆಂದರೆ ಮೊಳಕೈ, ಮೊಳ ಎಂದು ತಿಳಿಸಿದ್ದಾರೆ. ಹಸ್ತವೆಂದರೆ ಮೊಳಕೈಯಿಂದ ನಡುಬೆರಳ ತುದಿಯವರೆಗಿನ ಅಳತೆ ಅಥವಾ ಮೊಳ ಎಂದು ತಿಳಿಸಿದ್ದಾರೆ. ಹಾಗಾದರೆ ಅರತ್ನಿಯೆಂದರೆ ಒಂದು ಹಸ್ತ ಅಂದರೆ ಮೊಳ (ಅರತ್ನಿ=ಹಸ್ತ=ಮೊಳ)

ಆದರೆ ಒಂದು ಅರತ್ನಿಯೆಂದರೆ ಶಾಮಾಶಾಸ್ತ್ರಿಗಳು ಹೇಳುವ ಪ್ರಕಾರ ಒಂದುವರೆ ಅಡಿಯಾಗುತ್ತದೆ, ಸಚ್ಚಿದಾನಂದ ಶಂಕರಭಾರತಿಯವರು ಒಂದು ಅರತ್ನಿಯೆಂದರೆ ೨೪ ಅಂಗುಲ ಎನ್ನುತ್ತಾರೆ. ಕೆ. ಕೃಷ್ಣಭಟ್ಟರು ಒಂದು ಅರತ್ನಿಯೆಂದರೆ ಕಿರುಬೆರಳನ್ನು ಬಿಟ್ಟ ಮುಷ್ಟಿಯುಳ್ಳ ಮೊಳದ ಹೆಸರು ಎನ್ನುತ್ತಾರೆ.

ಒಂದು ಅರತ್ನಿಗೆ ೨೪ ಅಂಗುಲವಾದರೆ ಕೌಟಿಲ್ಯನು ಮಾರ್ಗಗಳನ್ನು ತಿಳಿಸುತ್ತಾ ರಥವು ಹೋಗುವ ಮಾರ್ಗವು ೫ ಅರತ್ನಿಗಳಷ್ಟಿರಬೇಕು ಎನ್ನುತ್ತಾರೆ. ಅಂದರೆ ಶಾಮಾಶಾಸ್ತ್ರಿಗಳವರ ಪ್ರಕಾರ ೭ ಅಡಿ ಹಾಗೂ ಸ್ವಾಮಿಗಳ ಪ್ರಕಾರ ೧೨೦ ಅಂಗುಲ ಅಥವಾ ೧೦ ಅಡಿಯಂದಾಗುತ್ತದೆ. ಸಣ್ಣ ಬೀದಿಗಳು ೪ ದಂಡ(೫೬ ಅಡಿ)ಗಳಷ್ಟಿರಬೇಕು ಎನ್ನುವ ಕೌಟಿಲ್ಯನು ರಥಬೀದಿಯು ಏಳುವರೆಯಾಗಲಿ, ಹತ್ತಾಗಲಿ ಎಂದು ತಿಳಿಸುವುದು ಆಶ್ಚಯಾವೆನಿಸುತ್ತದೆ. ಹಸು ಮುಂತಾದ ಪ್ರಾಣಿಗಳು ಹೋಗಲು ೪ ಅರತ್ನಿಯಷ್ಟು ಜಾಗ ಬೇಕೆನ್ನುವ ಕಾಲಲ್ಲಿ ರಥ ಹೋಗಲು ೪ ಅರತ್ನಿ ಎಂದು ಹೇಳುವುದು ವಿಚಿತ್ರವಲ್ಲವೇ? ನಿಜವಾದ ಅರ್ಥವೇನು?

**ಕ್ರೋಶ**

ಕ್ರೋಶವೆಂದರೆ ದೂರವನ್ನು ಅಳೆಯುವ ಒಂದು ಪ್ರಮಾಣವೆನ್ನುವ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಇದನ್ನೇ ಒಂದು ಹರಿದಾರಿಯೆನ್ನುತ್ತೇವೆ. ಕೂಗಳತೆ ಎಂದು ಕೂಡ ಕರೆಯಲಾಗುತ್ತದೆ. ಹರದಾರಿಗೆ ಅರ್ಥ ಹೇಳುತ್ತಾ ಮೂರು ಮೈಲುಗಳ ದೂರದ ಅಳತೆಯನ್ನಲಾಗಿದೆ. ಮೂರು ಮೈಲಿಗೆ ಕೇಳಿಸುವಷ್ಟು ಕೂಗಲು ಸಾಧ್ಯವೇ? ಅಥವಾ ಆ ಕಾಲದಲ್ಲಿ ಕೂಗಿದರೆ ಕೇಳಿಸುತ್ತಿತ್ತೇ? ಒಂದೂರಿನಿಂದ ಇನ್ನೊಂದೂರಿಗೆ ಒಂದು ಅಥವವ ಎರಡು ಕ್ರೋಶದಷ್ಟು ದೂರವಿರಬೇಕು ಎಂದು ಕೌಟಿಲ್ಯ ತಿಳಿಸುತ್ತಾನೆ. ಸಚ್ಚಿದಾನಂದ ಭಾರತೀ ಶ್ರೀಗಳು ಇದನ್ನು ೨೨೫೦ ಗಜಗಳೆನ್ನುತ್ತಾರೆ. ಕೆ. ಕೃಷ್ಣಭಟ್ಟರು ಒಂದು ಅಥವಾ ಎರಡು ಮೈಲು ಎಂದು ಅನುವಾದಿಸಿದ್ದಾರೆ. ಸಂಸ್ಕೃತ ನಿಘಂಟೂ ಸಹ ಕ್ರೋಶವೆಂದರೆ ಯೋಜನದ ನಾಲ್ಕನೆಯ ಒಂದು ಭಾಗ ಅಥವಾ ೩ ಮೈಲಿ ಅಥವಾ ೧ ಹರದಾರಿ ಎಂದು ದಾಖಲಾಗಿದೆ. ಯೋಜನವೆಂದರೆ ಸುಮಾರು ೧೨ ಮೈಲಿ ಆಗಿರುವುದರಿಂದ ನಾಲ್ಕನೆಯ ಒಂದು ಭಾಗ ೩ ಮೈಲಿಯನ್ನು ಕ್ರೋಶವೆಂದು ಕರೆಯಲಾಗುವುದು.

ಇದು ಕೇವಲ ಉದಾಹರಣೆಯಷ್ಟೇ, ಅದೂ ಕೇವಲ ಕೆಲವು ನಿಘಂಟುಗಳಲ್ಲಿರುವುದನ್ನು ದಾಖಲಿಸಿರುವುದೇ ಇನ್ನೂ ಹೆಚ್ಚಿನ ಶಬ್ದಕೋಶಗಳನ್ನು ನೋಡಿದರೆ ಅರ್ಥ ಸ್ಪಷ್ಟತೆಯ ಬದಲಿಗೆ ಗೊಂದಲಗಳು ಹೆಚ್ಚಾಗುತ್ತಲೇ ಹೋಗುತ್ತವೆ. ಕಾರಣವಿಷ್ಟೆ ಯಾವುದೇ ಒಂದು ಪದದ ನಿರ್ದಿಷ್ಟ ನೂತನ ಕಾಲಕಾಲಕ್ಕೆ ಹಾಗೂ ಪ್ರದೇಶ ಪ್ರದೇಶಕ್ಕೆ ಭಿನ್ನತೆಯನ್ನು ಒದಗಿಸುತ್ತದೆ. ಒಟ್ಟಿನಲ್ಲಿ ಈ ರೀತಿಯ ಅಧ್ಯಯನಗಳಿಂದ ಒಂದು ಪದವು ಪಡೆದುಕೊಳ್ಳುವ ಅವಸ್ಥಾಂತರಗಳನ್ನು ಗಮನಿಸಬಹುದು. ಕೌಟಿಲ್ಯನ ಅರ್ಥಶಾಸ್ತ್ರದ ಮೂಲಕ ಒಂದರೆಡು ಪದಗಳನ್ನು ಈ ರೀತಿಯ ವಿಶ್ಲೇಷಣೆಗೆ ಒಳಪಡಿಸಿರುವುದು ಇದನ್ನು ವ್ಯಾಪಕವಾಗಿ ಮಾಡಬೇಕಾಗಿರುವ ಅಗತ್ಯತೆಯನ್ನು ಒತ್ತಿ ಹೇಳುತ್ತದೆ.

**ಗ್ರಂಥ ಋಣ:**


೧. R. Shyama Shastry; **Kautaliya Arthashatra;** 1909; Mysore.

೨. R.P. Kangle; **The Kautaliya Arthashastra - 3 volumes**; 1972; New Delhi.

೩. ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು; **ಕೌಟಲೀಯ ಅರ್ಥಶಾಸ್ತ್ರ** (ಕನ್ನಡ ಅನುವಾದ) ಮೈಸೂರು; ೧೯೬೩.

೪. ಕೆ. ಕೃಷ್ಣಭಟ್ಟ; **ಕೌಟಿಲ್ಯನ ಅರ್ಥಶಾಸ್ತ್ರ** [ಸಮಗ್ರ ಕನ್ನಡಾನುವಾದ] ಧಾರವಾಡ; ೨೦೦೦ (ತೃ. ಮು.) ೧೯೬೨ (ಪ್ರ. ಮು.)

೫. ಕನ್ನಡ ಸಾಹಿತ್ಯ ಪರಿಷತ್ತಿನ **ಕನ್ನಡ-ಕನ್ನಡ ನಿಘಂಟು**

೬. ಜಿ.ಎನ್. ಚಕ್ರವರ್ತಿ; **ಸಂಸ್ಕೃತ-ಕನ್ನಡ ನಿಘಂಟು, ಕನ್ನಡ ನಿಘಂಟು,** ಮೈಸೂರು-೨೦೦೬


❑❑

# ದುಂದುಮೆಬಂಧ

–ಕೆ.ಜಿ. ನಾರಾಯಣ ಪ್ರಸಾದ್

ಕನ್ನಡ ಛಂದಸ್ಸಿನ ಇತಿಹಾಸದಲ್ಲಿ ಕಳೆದುಹೋಗಿರುವ ಕೊಂಡಿಗಳು ಇನ್ನೂ ಎಷ್ಟೋ ಉಳಿದುಕೊಂಡಿವೆ. ಇದಕ್ಕೆ ಕಾರಣವೆಂದರೆ, ನಮ್ಮ ಪ್ರಾಚೀನ ಛಂದಶ್ಶಾಸ್ತ್ರಕಾರರು, ತಮಗಿದ್ದ ಇತಿಮಿತಿಗಳಿಂದಾಗಿ ಎಷ್ಟೋ ಬಂಧಗಳ ಬಗ್ಗೆ ಮೌನ ತಾಳಿರುವುದು. ಅಂತಹ ಬಂಧಗಳ ಲಕ್ಷಣವಿವರಣೆ ಮತ್ತು ಇತಿಹಾಸ ನಿರೂಪಣೆಯ ಪ್ರಯತ್ನಗಳು ಹೊಸಗನ್ನಡ ಯುಗದಲ್ಲಷ್ಟೇ ಕಸುವನ್ನು ಪಡೆದುಕೊಂಡವು. ಸೊಬಗಿನಸೋನೆಯ ಮಟ್ಟು, ಸಾಂಗತ್ಯ, ಗೋವಿನಹಾಡಿನ ಮಟ್ಟು ಮುಂತಾದ ಹಲವು ಬಂಧಗಳು ಹಿಂದಿಂದಿನಿಂದಲೂ ಬಳಕೆಯಾಗುತ್ತ ಬಂದಿದ್ದರೂ ಅವುಗಳ ಸ್ವರೂಪಾದಿಗಳ ಬಗೆಗಿನ ಸ್ಪಷ್ಟಚಿತ್ರ ಲಭಿಸಿದುದು ಹೊಸಗನ್ನಡಯುಗದಲ್ಲಿಯೇ. ಕಳೆದುಹೋಗಿರುವ ಇತಿಹಾಸದ ಕೊಂಡಿಗಳನ್ನು ಕಂಡುಕೊಳ್ಳಲು ಸಾಧ್ಯವಾಗುವುದು ಇಂತಹ ಪ್ರಯತ್ನಗಳು ಸಾಧಾರವಾಗಿ, ವ್ಯಾಪಕವಾಗಿ, ನಡೆದಾಗ ಮಾತ್ರ. ಈ ನಿಟ್ಟಿನಲ್ಲಿ ನಡೆದಿರುವ ಅಂತಹ ಒಂದು ಪ್ರಯತ್ನ ಇದು. ಸಾಕಷ್ಟು ಬಳಕೆಯಲ್ಲಿದ್ದರೂ ಈವರೆಗೆ ವರ್ಣಿತವಾಗದೆ ಇರುವ ದುಂದುಮೆ ಬಂಧದ ಸ್ವರೂಪದ ಬಗ್ಗೆ ವಿಚಾರ ಮಾಡುವುದು ಪ್ರಕೃತದ ಉದ್ದೇಶ.

ಆದರೆ, ಛಂದೋಬಂಧಗಳ ಲಕ್ಷಣಗಳನ್ನು ಗುರುತಿಸುವುದು ಮತ್ತು ವಿವರಿಸುವುದು ಒಂದು ವ್ಯರ್ಥಪ್ರಯತ್ನ ಎಂಬುದು ಛಂದಸ್ಸಿನ ಕ್ಷೇತ್ರದಲ್ಲಿ ಇತ್ತೀಚೆಗೆ ಕೇಳಿಬರುತ್ತಿರುವ ಒಂದು ಪ್ರಧಾನವಾದ ಆಕ್ಷೇಪ. ಈ ವಾದವನ್ನು ಮಂಡಿಸುವವರ ಪ್ರಕಾರ, ಛಂದಸ್ಸು ಮತ್ತು ಭಾವಗಳ ನಡುವಿನ ಸಂಬಂಧದ ವಿಶ್ಲೇಷಣೆಯೇ ಮುಖ್ಯವಾದುದು; ಅದೇ ನಿಜವಾದ ಛಂದಸ್ಸಿನ ಅಧ್ಯಯನ; ಆದ್ದರಿಂದ ಛಂದಸ್ಸಿನ ಅಧ್ಯಯನ ಈ ನಿಟ್ಟಿನಲ್ಲಿ ಮಾತ್ರ ನಡೆಯಬೇಕು ಎಂಬುದು ಅವರ ನಿರ್ಧಾರ. ಈ ಬಗ್ಗೆ ಸ್ವಲ್ಪ ವಿವರಣೆಯು ಇಲ್ಲಿ ಅತ್ಯಗತ್ಯವಾಗಿದೆ.

ಪದ್ಯದಲ್ಲಿ ಭಾವಾಭಿವ್ಯಕ್ತಿಯೇ ಪ್ರಧಾನವಾದುದು ಎಂಬುದರಲ್ಲಿ ಎರಡು ಮಾತಿಲ್ಲ. ಅದೇ ರೀತಿ, ಛಂದಸ್ಸು, ಭಾವಾಭಿವ್ಯಕ್ತಿಗೆ ಪೋಷಕವಾದುದೇ ಹೊರತು ಪದ್ಯದಲ್ಲಿ ತಾನೇ ಪ್ರಧಾನವಾದುದಲ್ಲ ಎಂಬುದರಲ್ಲಿ ಕೂಡ. ಛಂದಸ್ಸು ಏನಿದ್ದರೂ ಒಂದು ಸಾಧನವಷ್ಟೇ. ಆದರೆ ಒಂದು ಅಧ್ಯಯನವು ಪರಿಪೂರ್ಣವಾಗಬೇಕಾದರೆ ಮಾತ್ರ, ಸಾಧನದ ಬಳಕೆಯ ಬಗೆಗಿನ ಪರಿಜ್ಞಾನವು ಎಷ್ಟು ಪ್ರಧಾನವಾಗುತ್ತದೆಯೋ ಆ ಸಾಧನದ ಪರಿಜ್ಞಾನವೂ ಅಷ್ಟೇ ಪ್ರಧಾನವಾಗುತ್ತದೆ. ಒಂದು ಬಂಧದ ಲಕ್ಷಣದ ಅರಿವೇ ಇಲ್ಲದೆ, ಆ ಬಂಧದ ಜೀವಾಳವನ್ನು ಕಂಡುಕೊಳ್ಳುವುದು ಎಷ್ಟರಮಟ್ಟಿಗೆ ಗಟ್ಟಿ ಪ್ರಯತ್ನವಾಗುತ್ತದೆ?

ಕವಿಯು ಅಭಿವ್ಯಕ್ತಿಸಬೇಕೆಂದುಕೊಂಡ ಭಾವವು ಛಂದಶ್ಶರೀರಿಯಾಗಿ, ಸಾಲಂಕೃತಭಾಷೆಯ ಮೂಲಕ, ಅಭಿವ್ಯಕ್ತಗೊಳ್ಳುವುದೇ ಪದ್ಯ. ಈ ಅಭಿವ್ಯಕ್ತಿಯು ಸಮರ್ಥರೀತಿಯಲ್ಲಿ ಸಂವಹನಗೊಂಡಾಗಲೇ ಪದ್ಯದ ಉದ್ದೇಶವು ಸಾರ್ಥಕವಾಗುವುದು. ಈ ಒಂದು ಪ್ರಕ್ರಿಯೆಯಲ್ಲಿ ಭಾಷೆ, ಅಲಂಕಾರಗಳು ಮತ್ತು ಛಂದಸ್ಸು ಇವು ಪ್ರಧಾನಸಾಧನಗಳಾಗಿ ಕೆಲಸಮಾಡುತ್ತವೆ. ಇವನ್ನು ಸಮರ್ಥರೀತಿಯಲ್ಲಿ ಬಳಸಿಕೊಂಡು ಮೂಡಿದ ಅಭಿವ್ಯಕ್ತಿಯು, ಸಂವಹನಗೊಳ್ಳುವಲ್ಲಿ ಸಫಲವಾಗುತ್ತದೆ. ಆದ್ದರಿಂದ ಪದ್ಯದ ಪರಿಪೂರ್ಣವಾದ ಮೀಮಾಂಸೆ ಎಂಬುದು ಈ ಎಲ್ಲದರ ಪಾತ್ರವನ್ನೂ ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಇಂತಹ ಒಂದು ಪರಿಪೂರ್ಣ ಅಧ್ಯಯನಕ್ಕೆ ಭಾಷೆ, ಅಲಂಕಾರ, ಛಂದಸ್ಸು ಈ ಒಂದೊಂದರ ಸ್ವರೂಪ ಹಾಗೂ ಗುಣಲಕ್ಷಣಗಳ ಅರಿವು ಅತ್ಯಗತ್ಯ. ವ್ಯಾಕರಣಶಾಸ್ತ್ರ, ಅಲಂಕಾರಶಾಸ್ತ್ರ ಮತ್ತು ಛಂದಶ್ಶಾಸ್ತ್ರಗಳು ರಚಿತವಾಗುವುದು ಈ ಉದ್ದೇಶ ಸಾಧನೆಗಾಗಿಯೇ. ಶಾಸ್ತ್ರವೆಂದಮೇಲೆ ನಿಯಮನಿಬಂಧನೆಗಳನ್ನು ವಿಧಿಸುವುದು ಸಹಜ. ಆದರೆ ಅಂತಹ ನಿಯಮನಿಬಂಧನೆಗಳನ್ನು ಕವಿಯು ಕಟ್ಟುನಿಟ್ಟಾಗಿ ಪಾಲಿಸಲೇಬೇಕು ಎಂದೇನೂ ಇಲ್ಲ. ಒಂದು ಕಟ್ಟುಪಾಡಿಗೆ ಒಗ್ಗಿಕೊಂಡ ಪಂಡಿತರಿಗೆ ನಿಯಮೋಲ್ಲಂಘನೆಯು ಅಕ್ಷಮ್ಯವಾಗಿ ತೋರುವುದು ಸಹಜ. ಆದರೆ ಶ್ರೇಷ್ಠಕವಿಗಳು ಎಂದೂ ಸಂಪೂರ್ಣಕಟ್ಟುಪಾಡಿಗೆ ತಲೆಬಾಗಿಲ್ಲ. ತಮ್ಮ ಅಗತ್ಯಕ್ಕೆ ತಕ್ಕಂತೆ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಲೇ ಬಂದಿದ್ದಾರೆ; ಆ ಮೂಲಕ ಕಟ್ಟುಪಾಡುಗಳನ್ನು ಉಲ್ಲಂಘಿಸುತ್ತಲೇ ಬಂದಿದ್ದಾರೆ. ಹಾಗೆಂದು ಅವರು ಛಂದಸ್ಸು ವ್ಯಾಕರಣ

ಮುಖ್ಯಸ್ಥರು, ಕನ್ನಡ ವಿಭಾಗ, ಉಸ್ಮಾನಿಯಾ ವಿಶ್ವವಿದ್ಯಾನಿಲಯ, ಹೈದರಾಬಾದ್, ಆಂಧ್ರಪ್ರದೇಶ

ಅಲಂಕಾರಗಳ ಪರಿಜ್ಞಾನದ ನೆಲಗಟ್ಟನ್ನು ಮಾತ್ರ ಎಂದೂ ತಿರಸ್ಕರಿಸಿಲ್ಲ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಪದ್ಯದ ಒಂದು ಪರಿಪೂರ್ಣ ಅಧ್ಯಯನದಲ್ಲಿ ಮೂರು ಪ್ರಧಾನ ಅಂಗಗಳನ್ನು ಗುರುತಿಸಬಹುದು. ಅವೆಂದರೆ,

೧. ಅದರ ವ್ಯಾಕರಣದ ಅಧ್ಯಯನ

೨. ಅದರ ಅಲಂಕಾರದ ಅಧ್ಯಯನ ಮತ್ತು

೩. ಅದರ ಛಂದಸ್ಸಿನ ಅಧ್ಯಯನ

ಒಂದು ಪದ್ಯದ ಸಾರ್ಥಕತೆಯಲ್ಲಿ ವ್ಯಾಕರಣದ ಪಾತ್ರವೇನು ಎಂಬುದನ್ನು ಕುರಿತು ಮೊದಲನೆಯದೂ, ಅಲಂಕಾರದ ಪಾತ್ರವೇನು ಎಂಬುದನ್ನು ಕುರಿತು ಎರಡನೆಯದೂ, ಛಂದಸ್ಸಿನ ಪಾತ್ರವೇನು ಎಂಬುದನ್ನು ಕುರಿತು ಮೂರನೆಯದೂ ವಿಚಾರಮಾಡುತ್ತವೆ. ಈ ಒಂದೊಂದಕ್ಕೂ ಆಯಾ ಶಾಸ್ತ್ರದ ಪ್ರಾಥಮಿಕ ಪರಿಜ್ಞಾನವು ಅತ್ಯಗತ್ಯ. ವ್ಯಾಕರಣಾತ್ಮಕ ಅಧ್ಯಯನಕ್ಕೆ ವ್ಯಾಕರಣಶಾಸ್ತ್ರದ ಅರಿವು, ಆಲಂಕಾರಿಕ ಅಧ್ಯಯನಕ್ಕೆ ಅಲಂಕಾರಶಾಸ್ತ್ರದ ಅರಿವು, ಛಾಂದಸಿಕ ಅಧ್ಯಯನಕ್ಕೆ ಛಂದಶ್ಶಾಸ್ತ್ರದ ಅರಿವು ಅನಿವಾರ್ಯ. ವ್ಯಾಕರಣವು ಶಬ್ದದ ರಚನೆ ಹಾಗೂ ಗುಣಲಕ್ಷಣಗಳನ್ನೂ, ಅಲಂಕಾರಶಾಸ್ತ್ರವು ಅಲಂಕಾರಾದಿಗಳ ರಚನೆ ಹಾಗೂ ಗುಣಲಕ್ಷಣಗಳನ್ನೂ, ಛಂದಶ್ಶಾಸ್ತ್ರವು ಛಂದೋಬಂಧಗಳ ರಚನೆ ಹಾಗೂ ಗುಣಲಕ್ಷಣಗಳನ್ನೂ ತಿಳಿಸುವುದು ಸಹಜ. ಇಂತಹ ಲಕ್ಷಣವಿವರಣೆಯೇ ಈ ಶಾಸ್ತ್ರಗಳ ತಳಹದಿ. ಒಟ್ಟಾರೆ ಇವೆಲ್ಲವೂ ಕಾವ್ಯರಚನೆಯ ಸಂದರ್ಭದಲ್ಲಿ ಬಳಸಬಹುದಾದ ಸಾಧನಗಳ ಬಗ್ಗೆ ವಿವರಣೆ ನೀಡುವ ಉದ್ದೇಶವನ್ನಷ್ಟೇ ಹೊಂದಿರುತ್ತವೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಇವನ್ನು ಶಾಸ್ತ್ರಗಳೇ ಅಲ್ಲ ಎನ್ನುವುದಾಗಲೀ, ಇವುಗಳಿಂದ ಉಪಯೋಗವೇ ಇಲ್ಲ, ಇವುಗಳ ಅಧ್ಯಯನ ವ್ಯರ್ಥ ಎಂದಾಗಲೀ ಹೇಳುವುದು ಸರ್ವಥಾ ಒಪ್ಪುವಂತಹ ವಾದವಲ್ಲ. ಛಂದಸ್ಸು ಭಾವಸಂವಹನೆಗೆ ಎಷ್ಟರ ಮಟ್ಟಿಗೆ ಸಹಕಾರಿಯಾಗಿ ಕೆಲಸ ಮಾಡಿದೆ ಎಂಬುದರ ಅಧ್ಯಯನವು ಎಷ್ಟು ಪ್ರಧಾನವಾದುದೋ, ಒಂದು ಛಂದೋಬಂಧದ ಲಕ್ಷಣಗಳನ್ನು ಗುರುತಿಸಿ ವಿವರಿಸುವುದು ಕೂಡ ಅಷ್ಟೇ ಪ್ರಧಾನವಾದುದು. ಎರಡೂ ಎರಡು ವಿಭಿನ್ನ ಮುಖಗಳು. ಮೊದಲನೆಯದಕ್ಕೆ ಎರಡನೆಯದರ ನೆರವು ಅತ್ಯಗತ್ಯ, ಅನಿವಾರ್ಯ. ಆದ್ದರಿಂದ ಛಂದೋಬಂಧಗಳ ಲಕ್ಷಣವಿವರಣೆಯು ಮೊದಲ ಹಂತದಲ್ಲಿ ನಡೆಯಲೇ ಬೇಕಾದ ಕೆಲಸ. ಅದರಿಂದ ಒಂದು ಬಂಧದ ಸ್ವರೂಪವು ಸ್ಪಷ್ಟವಾಗುತ್ತದೆ; ಅನಂತರದಲ್ಲಿ ಅದರ ಬಳಕೆಯ ಬಗ್ಗೆ ವಿಶ್ಲೇಷಣೆ ನಡೆಸುವುದು ಸಾರ್ಥಕವಾಗುತ್ತದೆ. ಪದ್ಯ ಕಟ್ಟುವ ಕವಿಗೆ ಕೂಡ ಅದು ತುಂಬ ನೆರವಿಗೆ ಬರುತ್ತದೆ. ಆದ್ದರಿಂದ ಇದೊಂದು ವ್ಯರ್ಥಕಾರ್ಯವಲ್ಲ; ಅತ್ಯಗತ್ಯ ಕಾರ್ಯ; ಆಗಲೇಬೇಕಾದ ಕಾರ್ಯ ಎಂಬುದನ್ನು ಮೊದಲಿಗೆ ಸ್ಪಷ್ಟಪಡಿಸಿ ಮುಂದಕ್ಕೆ ಸಾಗಬೇಕಾಗಿದೆ.

ಇನ್ನು ಹಿಂದಿನವರು ಕೆಲವು ಬಂಧಗಳನ್ನು ವಿವರಿಸದೆ ಏಕೆ ಬಿಟ್ಟರು ಎಂಬುದರ ಬಗ್ಗೆ ನೋಡಬಹುದು. ಕವಿಗಳು, ತಾವು ಉಸಿರಾಡುತ್ತಿರುವ ಜಾನಪದಪರಿಸರದಿಂದ ಸಂಪೂರ್ಣವಾಗಿ ಹೊರನಿಂತು ಕೃತಿರಚನೆ ಮಾಡುವುದು ಕಷ್ಟ; ಪರಿಸರವು ಒಂದಲ್ಲ ಒಂದು ರೀತಿಯಲ್ಲಿ ಅವರ ಮೇಲೆ, ತನ್ನ ಪ್ರಭಾವವನ್ನು ಬೀರಿಯೇ ಬೀರುತ್ತದೆ. ಇದರಿಂದಾಗಿ, ಶಿಷ್ಟಸಾಹಿತ್ಯ ಮತ್ತು ಜನಪದಸಾಹಿತ್ಯಗಳನ್ನು ಒಂದುಗೂಡಿಸುವ, ಅಥವಾ ಶಿಷ್ಟಸಾಹಿತ್ಯಕ್ಕೆ ಜನಪದಕಸುವನ್ನು ತುಂಬುವ, ಪ್ರಯತ್ನವನ್ನು ಕವಿಗಳು ಹಿಂದಿನಿಂದಲೂ ಅಲ್ಲಲ್ಲಿ ಮಾಡುತ್ತಲೇ ಬಂದಿದ್ದಾರೆ. ಇಂತಹ ಪ್ರಯತ್ನವು ಉದ್ದೇಶಪೂರ್ವಕವಾದುದಾಗಿರಬಹುದು ಅಥವಾ ಅನಿವಾರ್ಯವಾದಂತಹದೂ ಆಗಿರಬಹುದು. ಆದರೆ, ಅರಿವಿದ್ದೋ ಅರಿವಿಲ್ಲದೆಯೋ ನಿಯಮಗಳನ್ನು ಮೀರಿ ಸಾಗುವ ಜನಪದ ಸಾಹಿತ್ಯದ ಸ್ವಚ್ಛಂದವಿಹಾರವು, ಬಿಗಿಯಾದ ಶಿಸ್ತನ್ನು ಮಾನ್ಯಮಾಡುವ ಹಾಗೂ, ಕಟ್ಟುನಿಟ್ಟಾಗಿ ಅದನ್ನು ಪಾಲಿಸಬೇಕೆನ್ನುವ, ಶಿಷ್ಟಸಾಹಿತ್ಯಕ್ಕೆ ಮಾತ್ರ ಸುಲಭವಾಗಿ ಸಹ್ಯವಾಗದು. ಇದರಿಂದಾಗಿ ಜನಪದ ಛಂದೋರೂಪಗಳು ಶಿಷ್ಟ ಸಾಹಿತ್ಯದೊಳಕ್ಕೆ ಪ್ರವೇಶಿಸುವುದು ಅಷ್ಟು ಸುಲಭಸಾಧ್ಯವಾಗಿರಲಿಲ್ಲ. ಒಂದು ವೇಳೆ ಪ್ರವೇಶಿಸಿದರೂ ಶಾಸ್ತ್ರಕಾರರ ಮನ್ನಣೆಗೆ ಪಾತ್ರವಾಗುವುದು ಮಾತ್ರ ಅತಿ ದುಸ್ತರವೇ ಆಗಿತ್ತು. ಇದರಿಂದಾಗಿಯೇ ಹಿಂದಿನ ಛಂದಶ್ಶಾಸ್ತ್ರಜ್ಞರು ಅಂತಹ ಬಂಧಗಳನ್ನು ವಿವರಿಸಲು ಹೋಗಲಿಲ್ಲ. ಆದರೆ ಕಾಲ ಕಳೆದಂತೆ ಈ ಬಿಗುವು ಸಡಿಲವಾಗುತ್ತಾ ಬಂತು; ಜನಪದಬಂಧಗಳು ಶಿಷ್ಟಸಾಹಿತ್ಯಕ್ಷೇತ್ರಕ್ಕೆ ಸೇರ್ಪಡೆಯಾಗುತ್ತಾ ಬಂದವು. ಹೊಸಗನ್ನಡ ಯುಗದಲ್ಲಂತೂ ಇದರ ದ್ವಾರವನ್ನು ಸಂಪೂರ್ಣವಾಗಿ ತೆರೆಯಲಾಯಿತು. ಹಲವಾರು ಜನಪದಬಂಧಗಳು ಶಿಷ್ಟಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದವು. ಸ್ಥೂಲನೋಟಕ್ಕೆ ಜನಪದ ಛಂದೋಬಂಧಗಳು ಸಾಂಪ್ರದಾಯಿಕ ಛಂದಸ್ಸಿನ ಹಿಡಿತಕ್ಕೆ ಸಿಕ್ಕದಂತೆ ಕಾಣುವುದು ಸಹಜ. ಆದರೆ, ಸೂಕ್ಷ್ಮವಾಗಿ ಗಮನಿಸಿದಾಗ ಮಾತ್ರ ಅಲ್ಲಿಯ ಹಲವಾರು ಛಂದೋಬಂಧಗಳು ಹಿಡಿತಕ್ಕೆ ಸಿಕ್ಕುವಂತಹವಾಗಿಯೇ ಕಂಡುಬರುತ್ತವೆ. ಅವನ್ನು ವಿವರಿಸುವ ಕೆಲಸ ಆಗಲೇಬೇಕಾಗಿದೆ. ಆಧುನಿಕಶಾಸ್ತ್ರವಿದರು ಈ ನಿಟ್ಟಿನಲ್ಲಿ ಸಾಕಷ್ಟು ಪ್ರಯತ್ನಗಳನ್ನು ನಡೆಸುತ್ತ ಬಂದಿದ್ದಾರೆ. ಇದರ ಫಲವಾಗಿಯೇ ಇಂದು ಸೊಬಗಿನಸೋನೆಯ ಮಟ್ಟು, ಸಾಂಗತ್ಯ, ಗೋವಿನ ಹಾಡಿನ ಮಟ್ಟು ಮುಂತಾದ ಹಲವು ಬಂಧಗಳ ಲಕ್ಷಣವಿವರಣೆಯು ಲಭ್ಯವಾಗಿರುವುದು. ಇಷ್ಟಾದರೂ, ಜಾನಪದ ಛಂದಸ್ಸಿನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇನ್ನೂ ವ್ಯಾಪಕವಾದ ವಿಶ್ಲೇಷಣಾತ್ಮಕ ಅಧ್ಯಯನ ನಡೆಯಬೇಕಾದ ಅಗತ್ಯವಿದ್ದೇ ಇದೆ. ಯಕ್ಷಗಾನಛಂದಸ್ಸಿಗೆ ಸಂಬಂಧಿಸಿದಂತೆಯೇನೋ ಗಣನೀಯ ಪ್ರಮಾಣದ ಕೆಲಸ ನಡೆದಿದೆಯೆಂದು ಹೇಳಬಹುದು. ಈ ಕೆಲಸ ಮಾಡಿದವರಲ್ಲಿ ಸೀತಾರಾಮ ಕೆದಿಲಾಯರು, ಡಾ. ಶಿಮಂತೂರು

ನಾರಾಯಣಶೆಟ್ಟರು, ಡಾ.ಕಬ್ಬಿನಾಲೆ ವಸಂತ ಭಾರದ್ವಾಜರು ಉಲ್ಲೇಖಾರ್ಹರು. ಆದರೆ, ಜಾನಪದಛಂದಸ್ಸಿನ ಅಧ್ಯಯನ ಮಾತ್ರ ಇಷ್ಟು ದೊಡ್ಡ ಪ್ರಮಾಣದಲ್ಲಿ ಇನ್ನೂ ನಡೆದಿಲ್ಲ. ಕೇವಲ ಸಣ್ಣಪುಟ್ಟ ಪ್ರಯತ್ನಗಳಿಗಷ್ಟೇ ಸೀಮಿತವಾಗಿದೆ. ಇಂತಹ ಸಣ್ಣ ಪ್ರಯತ್ನಗಳ ಪೈಕಿ ಪ್ರಕೃತದ ಪ್ರಯತ್ನವೂ ಒಂದು.

### ಹೆಸರು

ಪ್ರಕೃತದಲ್ಲಿ ವಿಚಾರ ಮಾಡಲಿರುವುದು ದುಂದುಮೆಬಂಧದ ಬಗ್ಗೆ. ದುಂದುಮೆಗಳಲ್ಲಿ ಬಳಕೆಯಾಗಿರುವ ಬಂಧವಾದುದದರಿಂದ ಈ ಬಂಧವನ್ನು ಅವುಗಳ ಹೆಸರನ್ನೇ ಆಧರಿಸಿ ದುಂದುಮೆಬಂಧವೆಂದು ಕರೆಯಬಹುದು. ಆದರೆ ಈ ಬಂಧವು ಕೇವಲ ದುಂದುಮೆಗಳಿಗಷ್ಟೇ ಸೀಮಿತವಾಗಿದೆಯೆನ್ನುವಂತಿಲ್ಲ; ಹೋಳಿಯ ಹಾಡುಗಳಲ್ಲಿಯೂ ಬಳಕೆಯಾಗಿದೆ. ಆದರೆ ಹೋಳಿಯ ಹಾಡುಗಳನ್ನೆಲ್ಲ ದುಂದುಮೆಗಳೆಂದು ಕರೆದಿಲ್ಲ. ಮೇಲಾಗಿ, ಹೋಳಿಹಾಡುಗಳೆಲ್ಲವೂ ಇದೊಂದೇ ಬಂಧದಲ್ಲಿ ರಚಿತವಾಗಿವೆಯೆನ್ನುವಂತಿಲ್ಲ. ಉದಾಹರಣೆಗೆ ಹೋಳಿಹಾಡುಗಳ ಸಂಗ್ರಹದಲ್ಲಿರುವ 'ಕಾಮದಹನ'[೧]ವನ್ನು ಗಮನಿಸಬಹುದು. ಅದು ಆದ್ಯಂತಪ್ರಾಸಬದ್ಧವಾಗಿದ್ದು

ವಿ.ವಿ.ವಿ.ಬ್ರ.
ವಿ.ವಿ.ವಿ.ಬ್ರ.
ವಿ.ವಿ.ವಿ.ಬ್ರ.
ವಿ.ವಿ.ವಿ.ಬ್ರ.

ರಚನೆಯನ್ನು ಹೊಂದಿರುವ ೨೧ ಅಂಶಚೌಪದಿ [ಛಂದೋವತಂಸ]ಗಳಿಂದಾಗಿದೆ. ಮಾದರಿಗೆ ಅದರ,

| | |
|---|---|
| ಸ್ವಾಮಿಗೆ. ಬಡದಿತು. ಬಾಣಿನ. ಪೆಟ್ಟು. | ವಿ.ವಿ.ವಿ.ಬ್ರ. |
| ತಾಮಸ. ಬಂದಾಗ. ತೆರೆದನು. ನೋಟ. | ವಿ.ವಿ.ವಿ.ಬ್ರ. |
| ಕಾಮನ. ಕಾಣುತ. ಬಂದಿತು. ಸಿಟ್ಟ | ವಿ.ವಿ.ವಿ.ಬ್ರ. |
| ಸೋಮಶೇ. ಖರ ತನ್ನ. ಉರಿಗಣ್ಣ. ಬಿಟ್ಟ ॥೭॥ | ವಿ.ವಿ.ವಿ.ಬ್ರ. |

[ಪು. ೧೯]

ಎಂಬ ನುಡಿಯನ್ನು ನೋಡಬಹುದು.[೨] ಇದು ಮುಂದೆ ಗಮನಿಸಲಿರುವ ದುಂದುಮೆ ಬಂಧಕ್ಕಿಂತ ತೀರ ಭಿನ್ನವಾದುದು. ದುಂದುಮೆಗಳಾದರೋ ಪ್ರಧಾನವಾಗಿ ದುಂದುಮೆಬಂಧದಲ್ಲಿಯೇ ರಚಿತವಾಗಿವೆ. ಎಂದರೆ ದುಂದುಮೆಗಳ ಛಂದೋಮಾಧ್ಯಮ ಈ ದುಂದುಮೆಬಂಧವೇ; ಹೋಳಿಹಾಡುಗಳಲ್ಲಿಯಾದರೋ ಇತರ ಬಂಧಗಳ ಜೊತೆಗೆ ಇದೂ ಬಳಕೆಯಾಗಿದೆ ಅಷ್ಟೆ. ಆದ್ದರಿಂದ ಈ ಬಂಧವನ್ನು ದುಂದುಮೆಬಂಧವೆಂಬ ಹೆಸರಿನಿಂದ ಕರೆಯುವುದೇ ಉಚಿತವೆನಿಸುತ್ತದೆ. ಹಾಗಾಗಿ ಪ್ರಕೃತ ಪ್ರಬಂಧದಲ್ಲಿ ಇದನ್ನು ಆ ಹೆಸರಿನಿಂದಲೇ ಕರೆಯಲಾಗಿದೆ.

### ಲಕ್ಷಣ

ದುಂದುಮೆ ಎಂಬುದು ಒಂದು ಪ್ರಸಿದ್ಧ ಜನಪದಬಂಧ. ಆ ಹೆಸರಿನ ರಚನೆಗಳು ಜನಪದ ಸಾಹಿತ್ಯದಲ್ಲಿ ಸಾಕಷ್ಟು ಸಿಕ್ಕುತ್ತವೆ. ಉದಾಹರಣೆಗೆ, ಕುಮಾರರಾಮನ ದುಂದುಮೆ ಮುಂತಾದುವನ್ನು ಗಮನಿಸಬಹುದು. ಹಿಂದಿನ ಶಿಷ್ಟಸಾಹಿತ್ಯದಲ್ಲಿ ಮಾತ್ರ, ಇಂತಹ ಒಂದು ಬಂಧವು ಬಳಕೆಯಾದಂತೆ ಎಲ್ಲಿಯೂ ಕಂಡುಬರುವುದಿಲ್ಲ. ಇದರಿಂದಾಗಿಯೇ, ಹಿಂದೆಯೇ ಹೇಳಿದಂತೆ, ನಾಗವರ್ಮ, ಜಯಕೀರ್ತಿ ಮೊದಲಾದ ಹಿಂದಿನ ಯಾವ ಛಂದಶ್ಶಾಸ್ತ್ರಜ್ಞರೂ ಇದನ್ನು ಲಕ್ಷಣಿಸಿಲ್ಲ, ವಿವರಿಸಿಲ್ಲ. ಇದೊಂದು ಅಪ್ಪಟ ಕನ್ನಡ ಜನಪದಬಂಧ. ಷಟ್ಪದರೂಪದ ಇದರಲ್ಲಿ ಎಲ್ಲ ಪಾದಗಳೂ ನಾಲ್ಕು ನಾಲ್ಕು ಗಣಗಳಿಂದಾಗಿರುತ್ತವೆ. ಆದರೆ, ಗಣಗಳ ಸ್ವರೂಪದ ವ್ಯತ್ಯಾಸದಿಂದಾಗಿ ಅಲ್ಲಿ ಮೂರು ವಿಭಿನ್ನ ಪ್ರಕಾರದ ಪಾದರಚನೆಗಳು ಕಂಡುಬರುತ್ತವೆ. ಅವೆಂದರೆ,

| | |
|---|---|
| ೧. ವಿ.ವಿ.ವಿ.ವಿ. | [ಪೂರ್ಣಪಾದ] |
| ೨. ವಿ.ವಿ.ವಿ.ಬ್ರ. | [ಊನಪಾದ] |
| ೩. ವಿ.ವಿ.ರು. [ಪ್ರ | [ಪ್ರತ್ಯೇಕಗಣಸಹಿತವಾದ ಪಾದ] |

ಈ ಮೂರನ್ನು ವಿಶಿಷ್ಟರೀತಿಯಲ್ಲಿ ಹೊಂದಿಸುವುದು ಇಲ್ಲಿಯ ರಚನಾವೈಶಿಷ್ಟ್ಯ. ಎರಡು ಪೂರ್ಣಪಾದಗಳ ನಡುವೆ ಒಂದೇ ರಚನೆಯ ಪ್ರತ್ಯೇಕಗಣಸಹಿತವಾದ ಪಾದಗಳು ಮೂರನ್ನು ತಂದು, ಮುಕ್ತಾಯಸಾಧನೆಗಾಗಿ, ಆರನೆಯ ಪಾದವಾಗಿ ಒಂದು ಊನಪಾದವನ್ನು ತರುವುದು ಇಲ್ಲಿಯ ರಚನಾತಂತ್ರ. 'ಕುಮಾರರಾಮನ ದುಂದುಮೆ'[೩]ಯ ಈ ಒಂದು ಉದಾಹರಣೆಯ ಮೂಲಕ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು:

| | |
|---|---|
| ಪರಿಪರಿ. ನಾರೇರ. ತರತರ. ಸೇವೆಗೆ. | ವಿ.ವಿ.ವಿ.ವಿ. |
| ಹರುಷವಾ. ಗುತ ತನ್ನ. ಮನದೊಳಗೆ. – [ನಾರಿ | ವಿ.ವಿ.ರು.[ಪ್ರ |
| ಸರಸ ಮ. ಗನ ಕಂಡು. ಕರದೊಳಗೆ. – [ಕೂಸ | ವಿ.ವಿ.ರು.[ಪ್ರ |
| ಅರಳೆಲೆ. ಇರಿಸುತ. ಸಿರದೊಳಗೆ. – [ಹೇಮ | ವಿ.ವಿ.ರು.[ಪ್ರ |
| ಕೊರಳೊಳು. ಅಸಲಿ ತಾ. ಯಿತ ಮುತ್ತು. ರನ್ನದ. | ವಿ.ವಿ.ವಿ.ವಿ. |
| ಕರದೊಳು. ಬಿಂದುಲಿ. ಪರಿಗಳೇ. ನೆಂಬೆ. | ವಿ.ವಿ.ವಿ.ಬ್ರ. |

ಅಂಶಷಟ್ಪದಿಯಿಂದ ರೂಪಿತವಾದ ಒಂದು ಚೌಪದಿ; ಅದರಲ್ಲಿ, ಕೊನೆಯ ಪಾದದಲ್ಲಿ ಕೊನೆಯ ರುದ್ರಕ್ಕೆ ಬದಲಾಗಿ ಒಂದು ವಿಷ್ಣು + ಒಂದು ಬ್ರಹ್ಮ; ಈ ಚೌಪದಿಯ ನಡುವೆ ಅದರ ಎರಡನೆಯ ಪಾದಕ್ಕೆ ಸಮನಾದಂತಹ ಎರಡು ಪಾದಗಳನ್ನು ಪ್ರತ್ಯೇಕಗಣದ ಕೊಂಡಿಯಿಂದ ಬಂಧಿಸಿರುವುದು – ಇದು ಇಲ್ಲಿಯ ರಚನಾತತ್ತ್ವ.

### ಗತಿವಿನ್ಯಾಸ

ಅಂಶಷಟ್ಪದಿಯ ಧಾಟಿಯಲ್ಲಿ ಪ್ರಾರಂಭವಾಗುವ ಇದು ಅದರ ಅರ್ಧವನ್ನು ಮುಟ್ಟಿದನಂತರ ಪ್ರತ್ಯೇಕಗಣದ

ಕೊಂಡಿಯೊಂದಿಗೆ ಕೊನೆಯ ಪಾದದ ಮುಮ್ಮಡಿ ಪುನರಾವರ್ತನೆಗೆ ಒಳಗಾಗಿ ಮತ್ತೆ ಮೊದಲಿನ ಧಾಟಿಗೆ ಹಿಂತಿರುಗುತ್ತದೆ. ಆದರೆ ಕೊನೆಯ ಗಣಕ್ಕೆ ಬರುವ ಹೊತ್ತಿಗೆ ರುದ್ರಕ್ಕೆ ಬದಲು ವಿಷ್ಣು+ಬ್ರಹ್ಮ ಬರುವುದರಿಂದ ಮತ್ತಷ್ಟು ವಿಸ್ತಾರವನ್ನು ಹೊಂದಿ ಮುಕ್ತಾಯಗೊಳ್ಳುತ್ತದೆ. ಹೀಗೆ ಅಂಶಷಟ್ಪದಿಯ ಧಾಟಿಯ ತಳಹದಿಯ ಮೇಲೆ ನಿಂತು ಇದು ಅದಕ್ಕಿಂತ ಸಾಕಷ್ಟು ದೂರ ಸಾಗಿ ಅದಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ.

ಈ ಹಿಂದೆಯೇ ಹೇಳಿದಂತೆ ಈ ಬಂಧದ ರಚನಾವಿನ್ಯಾಸವು ಆಧರಿಸಿರುವುದು ಪ್ರತ್ಯೇಕಗಣಗಳ ಬಳಕೆ ಮತ್ತು ಆ ಮೂಲಕ ಮಾಡುವ ಪಾದಸಂಖ್ಯಾವರ್ಧನೆ ಇವನ್ನು. ಹೀಗೆ ಪ್ರತ್ಯೇಕಗಣಗಳನ್ನು ಬಳಸಿ ಪಾದಗಳ ಸಂಖ್ಯೆಯನ್ನು ಹೆಚ್ಚಿಸುವ ತಂತ್ರದ ಮೂಲವನ್ನು ಪ್ರಾಚೀನ ಜನಪದಬಂಧವಾದ ತ್ರಿಪದಿಯ ರಚನೆಯಲ್ಲೇ ಗುರುತಿಸಬಹುದು. ಅದರ ಎಂಟನೆಯ ಗಣವು, ಎಂದರೆ, ಎರಡನೆಯ ಪಾದದ ನಾಲ್ಕನೆಯ ಗಣವು ಒಂದು ರೀತಿಯಲ್ಲಿ ಪ್ರತ್ಯೇಕಗಣದ ಛಾಯೆಯನ್ನೇ ಹೊಂದಿದೆ. ಸಹಜವಾಗಿ ನೋಡಿದರೆ, ಏಳೆಯ ಎರಡನೆಯ ಪಾದವನ್ನು ಈ ತಂತ್ರದ ಮೂಲಕ ಪುನರಾವರ್ತಿಸಿದಾಗ ತ್ರಿಪದಿಯ ರಚನೆ ಮೂಡುತ್ತದೆಯೆಂಬುದು ಸ್ಪಷ್ಟವಾಗುತ್ತದೆ. ಕೋಲಾಟದ ಹಾಡುಗಳಲ್ಲಿ ಕೂಡ ಈ ತಂತ್ರದ ಬಳಕೆಯು ಅಲ್ಲಲ್ಲಿ ಕಂಡುಬರುತ್ತದೆ. ಉದಾಹರಣೆಗೆ,

ಎಳ್ಳುಂಡೆ. ಜೇನ್‌ತುಪ್ಪ. ಗಣನಾಯ್ಕ. [ನಮಗೆ    ವಿ.ವಿ.ವಿ. [ಪ್ರ
ವಿದ್ಯಾವ. ಕಲಿಸಯ್ಯ. ಗಣನಾಯ್ಕ.    ವಿ.ವಿ.ವಿ.
ಉದ್ದುಹೋ. ಳಿಗೆ ತುಪ್ಪ. ಗಣನಾಯ್ಕ. [ನಿಮ್ಗೆ    ವಿ.ವಿ.ವಿ. [ಪ್ರ
ತಪ್ಪದೆ. ಒಪ್ಪಿಸುವೆ. ಗಣನಾಯ್ಕ.[೪]    ವಿ.ವಿ.ವಿ.

ಇಲ್ಲಿ ತ್ರಿವಿಷ್ಣುಗಣಪಾದಗಳನ್ನು ತಳುಕುಹಾಕುವಲ್ಲಿ ಇದನ್ನು ಬಳಸಲಾಗಿದೆ. ಇದರಿಂದ ರಗಳೆಯಲ್ಲಿಯಂತಹ ಏಕತಾನತೆ ತಲೆದೋರುವುದನ್ನು ತಪ್ಪಿಸಿ ಗತಿಗೆ ಹೊಸ ಬಳುಕನ್ನು ತಂದುಕೊಡಲು ಸಾಧ್ಯವಾಗಿದೆ. ಇದೇ ರೀತಿ ವಿಷ್ಣುರುದ್ರರಚನೆಯ ಪಾದಗಳನ್ನು ತಳುಕುಹಾಕುವಲ್ಲಿ ಇದನ್ನು ಬಳಸಿರುವುದನ್ನು ಈ ಕೆಳಗಿನ ಉದಾಹರಣೆಯಲ್ಲಿ ಗಮನಿಸಬಹುದು:

ಐದ್‌ಜನ. ಮಕ್ಕಳನು. [ಕೊಂತ್ಯಮ್ಮ    ವಿ.ರು. [ಪ್ರ
ಸಾಲಾಗಿ. ಕುಂಡರಸಿ.    ವಿ.ರು.
ಗಂಜೀನೆ. ತಾಕೊಟ್ಟಳು. [ಕೊಂತ್ಯಮ್ಮ    ವಿ.ರು. [ಪ್ರ
ತನ್ನನೆ. ಹೊಟ್ಟೆಗೀಗ.    ವಿ.ರು.
ಉರಿಯನೆ. ತಾಳಲಾರ್ದೆ. [ಕೊಂತ್ಯಮ್ಮ    ವಿ.ರು. [ಪ್ರ
ತಣ್ಣನೆ. ಪಾವಡೆಳ್ದು.    ವಿ.ರು.
ದುಃಖವ. ಮಾಡುತಾಳೆ. [ಕೊಂತ್ಯಮ್ಮ    ವಿ.ರು. [ಪ್ರ
ಶೋಕವ. ಮಾಡುತಾಳೆ.    ವಿ.ರು.
ಎಂತವ್ರಿ. ಗೆಂತಕಾಲ. [ಮಾರಾಯ್ರಿಗೆ    ವಿ.ರು. [ಪ್ರ
ಏನ್ ಬಡ. ಸ್ತನವಯ್ಯ.[೫]    ವಿ.ರು.

ಒಂದು ಪಾದದ ಸಾಹಿತ್ಯವನ್ನು ಪುನರಾವರ್ತಿಸುವಲ್ಲಿ ಈ ತಂತ್ರವನ್ನು ಸಮರ್ಥವಾಗಿ ಬಳಸಿಕೊಂಡಿರುವುದನ್ನು ಈ ಕೆಳಗಿನ ಉದಾಹರಣೆಯಲ್ಲಿ ಗಮನಿಸಬಹುದು:

ಕನಸಿನ. ಪರಿ ಧನ. ವನಿತೆಯ. ರೆಂಬುದು.    ೪.೪.೪.೪.
ಮನಸಿನ. ಭ್ರಾಂತಿಯಿದು. [ಶಿವಶಿವ    ೪.೪. [ಪ್ರ
ಮನಸಿನ. ಭ್ರಾಂತಿಯಿದು.    ೪.೪.
ಅನುದಿನ. ಕಷ್ಟವ. ನನುಭವಿ ಸುವರಿದು.    ೪.೪.೪.೪.
ಘನಸುಖ. ವೆಂತಹುದೊ. [ಶಿವಶಿವ    ೪.೪. [ಪ್ರ
ಘನಸುಖ. ವೆಂತಹುದೊ.[೬]    ೪.೪.

ಮಾತ್ರಾಲಯದಲ್ಲಿ ಕೂಡ ಇಂತಹ ತಂತ್ರವನ್ನು ಬಳಸಿ, ಒತ್ತುಕೊಡಬೇಕಾಗಿರುವ ವಿಷಯಕ್ಕೆ ಹೆಚ್ಚಿನ ಒತ್ತು ಬರುವಂತೆ ಮಾಡಿರುವುದು ಇಲ್ಲಿಯ ಪುನರಾವರ್ತನೆಯ ಸಾಧನೆ.

ಅಂತೂ ಪ್ರತ್ಯೇಕಗಣಗಳ ಬಳಕೆಯಿಂದ, ಪಾದಗಳನ್ನು ತಳುಕುಹಾಕುತ್ತಾ ಹೋಗುವುದು, ಗತಿಗೆ ವಿಶಿಷ್ಟ ಬಳುಕನ್ನು ತರುವುದು ಈ ಎರಡೂ ಸಾಧ್ಯವಾಗುತ್ತದೆಯೆಂಬುದೂ ಇದನ್ನು ನಮ್ಮ ಕವಿಗಳು ಅರಿತಿದ್ದರು ಎಂಬುದೂ ಇದರಿಂದ ಸ್ಪಷ್ಟವಾಗುತ್ತದೆ. ದುಂದುಮೆಯಲ್ಲಿ ಬಳಸಿರುವುದೂ ಈ ಒಂದು ತಂತ್ರವೇ.

## ಇತಿಹಾಸ

ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ, ದುಂದುಮೆಗಳನ್ನು ಬಿಟ್ಟರೆ ಹೋಳಿಯ ಹಾಡುಗಳಲ್ಲಿ ಇದನ್ನು ವಿಶೇಷವಾಗಿ ಕಾಣಬಹುದು. ಡಾ. ಮ.ಗು. ಬಿರಾದಾರ ಅವರು ಸಂಪಾದಿಸಿರುವ 'ಹೋಳಿಯ ಹಾಡುಗಳು' ಎಂಬುದರಲ್ಲಿಯ 'ಕೃಷ್ಣನ ಹೋಳೀಪದ'[೭] ಎಂಬುದರಲ್ಲಿ ಇಂತಹ ೨೫ ನುಡಿಗಳಿವೆ. ಮಾದರಿಗೆ,

ತಾವರಿ. ದಳನೇತ್ರೆ. ದೇವಕಿ. ವರವಸು.    ವಿ.ವಿ.ವಿ.ವಿ.
ದೇವರ. ಗರ್ಭದಿ. ಜನಿಸುತಲಿ. [ಸರ್ವ    ವಿ.ವಿ.ರು. [ಪ್ರ
ದೇವತೆ. ಗಳು ನಲಿ. ದಾಡುತಲಿ. [ಮೊಲೆ    ವಿ.ವಿ.ರು. [ಪ್ರ
ಸೇವಿಸಿ. ಪೂತನಿ. ನೀಗುತಲಿ. [ಗೋವು    ವಿ.ವಿ.ರು. [ಪ್ರ
ಕಾವಲ. ನಾಗಿ ಗೋ. ಕುಲದೊಳು. ನೆರೆ ಗೊಲ್ಲ.    ವಿ.ವಿ.ವಿ.ವಿ.
ರಾವಳಿ. ಯೊಳು ನಲಿ. ದಾಡಿ ಪಾ. ಡಿದನು. ॥೨॥[೮]    ವಿ.ವಿ.ವಿ.ಬ್ರ.

ಇಲ್ಲಿ ಬಳಕೆಯಾಗಿರುವ ಛಂದೋರೂಪವು ಹೀಗಿದೆ:

ವಿ.ವಿ.ವಿ.ವಿ.
ವಿ.ವಿ.ರು. [ಪ್ರ
ವಿ.ವಿ.ರು. [ಪ್ರ
ವಿ.ವಿ.ರು. [ಪ್ರ
ವಿ.ವಿ.ವಿ.ವಿ.
ವಿ.ವಿ.ವಿ.ಬ್ರ.

ಆರೂ ಪಾದಗಳಿಗೆ ಆದಿಪ್ರಾಸವನ್ನೂ ಪ್ರತ್ಯೇಕಗಣಗಳ ಹಿಂದಿನ ಸ್ಥಾನದಲ್ಲಿ ಅಂತ್ಯಪ್ರಾಸವನ್ನೂ ಇಲ್ಲಿ ನಿಯತವಾಗಿ ತರಲಾಗಿದೆ.

ಇದೇ ಸಂಗ್ರಹದಲ್ಲಿಯ ‘ಮುಚಖಂಡಿಯ ದುಂದುಮೆಪದಗಳು’[೯] ಇದೇ ರಚನೆಯ ೨೦ ನುಡಿಗಳಿಂದಾಗಿದೆ. ಉದಾಹರಣೆಗೆ,

ಎಲ್ಲಾ ಕ್ಷೇ. ತ್ರಗಳೊಳು. ಬಲ್ಲಿದ. ಮುಚಖಂಡಿ. ವಿ.ವಿ.ವಿ.ವಿ.
ಅಲ್ಲೆ ಕಾ. ಮಿನಿಯರ. ಥಾಟವನು. [ತಮ್ಮ ವಿ.ವಿ.ರು. [ಪ್ರ
ನಲ್ಲರ. ಕರಸುವ. ಬ್ಯಾಟವನು. [ಅವ ವಿ.ವಿ.ರು. [ಪ್ರ
ರಲ್ಲಿ ಮಾ. ಡಿದ ಮೋಹ. ದಾಟವನು. [ಹೇಮ ವಿ.ವಿ.ರು. [ಪ್ರ
ಗಲ್ಲೊಳು. ಗುರುನಂಜ. ನೊಲ್ಮಿಯಿಂ. ದಿರುವಂಥ. ವಿ.ವಿ.ವಿ.ವಿ.
ಅಲ್ಲಮ. ಕಂಡಿದ. ನೆಲ್ಲ ಪೇ.ಳುವನು. ॥೨೦॥[೧೦] ವಿ.ವಿ.ವಿ.ಬ್ರ

ನಿಯತವಾಗಿ ಬಂದಿರುವ ಆದಿಪ್ರಾಸವು ಇಲ್ಲಿ ಆರೂ ಪಾದಗಳನ್ನು ಒಟ್ಟಿಗೆ ಬಂಧಿಸುವಲ್ಲಿ ಸಫಲವಾಗುತ್ತದೆ. ೨, ೩, ೪ನೆಯ ಪಾದಗಳಲ್ಲಿ ಮೂರನೆಯ ಗಣದಲ್ಲಿ ನಿಯತವಾಗಿ ಅಂತ್ಯಪ್ರಾಸವು ಬರುತ್ತದೆ; ಜೊತೆಗೆ, ಪ್ರತ್ಯೇಕಗಣದ ಹಿಂದಿನ ಗಣವಾದುದರಿಂದ ಇದರ ಅಂತ್ಯದಲ್ಲಿ ನಿಯತವಾಗಿ ಯತಿಯು ಕೂಡ ಬರುತ್ತಿದ್ದು, ಆ ಅಂತ್ಯಪ್ರಾಸವನ್ನು ಮತ್ತಷ್ಟು ತೀವ್ರಗೊಳಿಸುತ್ತದೆ. ಆರನೆಯ ಪಾದದ ಅಂತ್ಯದಲ್ಲಿ ಮತ್ತೆ ಇದೇ ಅಂತ್ಯಪ್ರಾಸ ಬರುತ್ತಿದ್ದು ಅದು ನುಡಿಗೆ ಸಮರ್ಥವಾದ ಮುಕ್ತಾಯವನ್ನು ಒದಗಿಸುತ್ತದೆ. ಇದರ ಜೊತೆಗೆ, ‘ಲ್ಲ’ ಎಂಬುದು ಉದ್ದಕ್ಕೂ ‘ಲ್ಲs’ ಎಂದು ಎಳೆತಕ್ಕೆ ಒಳಗಾಗುತ್ತಿದ್ದು ಗತಿಗೆ ವಿಶಿಷ್ಟವಾದ ಬಳುಕನ್ನು ತಂದುಕೊಡುತ್ತದೆ.

ಇವುಗಳ ಜೊತೆಗೆ ಸ್ವರವಚನಸಾಹಿತ್ಯದಲ್ಲಿ ಕೂಡ ಅಲ್ಲಲ್ಲಿ ಈ ಬಂಧದ ಬಳಕೆಯನ್ನು ಕಾಣಬಹುದು. ೧೯ನೆಯ ಶತಮಾನದ ಅಂತ್ಯಭಾಗದ ಕುಂದಗೋಳದ ಬಸವಲಿಂಗನ ‘ಕೃಷ್ಣಗೊಲ್ಲತಿ’, ‘ವೀರಅಭಿಮನ್ಯು’, ‘ಕೃಷ್ಣಾರ್ಜುನರ ಕಾಳಗ’ಗಳಲ್ಲಿ ಈ ದುಂದುಮೆಬಂಧವು ಬಳಕೆಯಾಗಿದೆ. ಅಲ್ಲಿಯ ಕೆಲವು ಉದಾಹರಣೆಗಳು:

ವಾಣಿಯ. ವರದಕ. ಲ್ಯಾಣಿಯ. ಘನತರ. ವಿ.ವಿ.ವಿ.ವಿ.
ವೀಣೆಯ. ಕಡುಚೆಲ್ವ ಪಾಣಿಯಳs. [ಸುಖ ವಿ.ವಿ.ರು. [ಪ್ರ
ಶ್ರೇಣಿಯ. ಅತಿಮೃದು. ವಾಣಿಯಳs. [ಫಣಿ ವಿ.ವಿ.ರು. [ಪ್ರ
ವೇಣಿಯ. ಕರಚೆಲ್ವ ಜಾಣಿಯಳs. [ಸುಪ್ರ ವಿ.ವಿ.ರು. [ಪ್ರ
ವೀಣೆಯ. ಬ್ರಹ್ಮನ. ರಾಣಿಯ. ಅತಿವಿದ್ಯ ವಿ.ವಿ.ವಿ.ವಿ.
ತ್ರಾಣಿಯ. ಬಿಡದಿಂಥ. ಜೂಣಿಯ. ಪೊಗಳ್ವೆ ವಿ.ವಿ.ವಿ.ಬ್ರ

[ಕೃಷ್ಣಗೊಲ್ಲತಿ] [೧೧]

‘ವೀರಅಭಿಮನ್ಯು’ವಿನ ಈ ನುಡಿ:

ವರ ಅಶ್ವ ತ್ಥಾಮನ. ಸಾರಥಿ. ಕೆಡಹಿದ. ವಿ.ವಿ.ವಿ.ವಿ.
ಗುರುವಿನ. ರಥ ಹುಡಿ. ಮಾಡಿದನು. [ಮದ್ರ ವಿ.ವಿ.ರು. [ಪ್ರ
ದರಸನ. ತುರಗವ. ನೂಕಿದನು. [ಶಲ್ಯ ವಿ.ವಿ.ರು. [ಪ್ರ
ನಿರದೆ ಬೇ. ಗದಿ ನಡೆ. ಗೆಡಿಸಿದನು. [ಒಳ್ಳೆ ವಿ.ವಿ.ರು. [ಪ್ರ
ದೊರೆ ದೊರೆ. ನಾಯಕ. ರುಳಿಯದೆ. ಮಡಿದರು. ವಿ.ವಿ.ವಿ.ವಿ.
ಮರಳಿ ಕ. ಡಿದ ಕರ್ಣ. ಕಂದನ. ಗದೆಯ.[೧೨] ವಿ.ವಿ.ವಿ.ಬ್ರ

‘ಕೃಷ್ಣಾರ್ಜುನರ ಕಾಳಗ’ದ ಈ ನುಡಿ:

ಭುವನದೊ. ಳಗೆ ಕಾಮ. ನಂಥವ. ರೀರ್ವರು ವಿ.ವಿ.ವಿ.ವಿ.
ಸವನಿಲ್ಲ. ಕಲಿಯಲ್ಲಿ. ತಿಳಿದೆನಿಂದು. [ತಾವು ವಿ.ವಿ.ರು. [ಪ್ರ
ವಿವರಿಸಿ. ನೋಡ್ವುದು. ಮನಕೆ ತಂದು. [ಮತ್ತೆ ವಿ.ವಿ.ರು. [ಪ್ರ
ಕವಿ ಬಸ. ಲಿಂಗಯ್ಯ ನಿಲ್ಲೆ ಬಂದು. [ಬಹಳ ವಿ.ವಿ.ರು. [ಪ್ರ
ದಿವಸವಾ. ದಿತು ನಿಮ್ಮ. ಸನ್ನಿಧಾ. ನದಿ ನಿರೂ. ವಿ.ವಿ.ವಿ.ವಿ.
ಪವ ಕೊಟ್ಟು ಮನ್ನಿಸಿ. ಕಳುಹಬೇ. ಕೆನಲು.[೧೩] ವಿ.ವಿ.ವಿ.ಬ್ರ

ಕಾಲ ತಿಳಿಯದ ಉಜ್ಜಯಿನಿ ಮರುಳಸಿದ್ಧನ ಬಾಲಕನ ‘ಕಾಮಿನೀಶೃಂಗಾರ’, ‘ಬಾಣಾಸುರ’ ಇವುಗಳಲ್ಲಿ ಕೂಡ ಈ ಬಂಧವು ಬಳಕೆಯಾಗಿದೆ. ಅಲ್ಲಿಯ ರಚನೆಗೆ ಈ ಉದಾಹರಣೆಗಳನ್ನು ಗಮನಿಸಬಹುದು:

ಹುಡುಗತ. ನದ ಬುದ್ಧಿ. ಬಿಡು ಪರ. ಮಡದೇರ.
ನಡುಪ್ಯಾಟಿ. ಯೊಳು ಬಂದು. ತರುಬುವರೆ. [ಇಂಥ
ಬೆಡಗಿನ. ಬುದ್ಧಿಯ. ಕಲಿಯುವರೆ. [ಎನ್ನ
ಒಡಹುಟ್ಟಿ ದಣ್ಣಗಳ್. ಕೇಳಿದರೆ. [ನಿನ್ನ
ಕಡಿದುಹಾ. ಕುವರೆನ್ನ. ಗೊಡವೆಯ. ಬಿಡು ನಿನ್ನ.
ಮಡದಿಯೊ. ಳಗೆ ಸುಖ. ಬಡು ಹೋಗೊ. ಮೂಢಾ.

[ಕಾಮಿನೀಶೃಂಗಾರ][೧೪]

**ಹೋಳಿಯ. ಪದದಿಂದೆ.** ಬಾಣಾಸು. ರನ ಕಥೆ.
ಹೇಳಿದ. ಉಜ್ಜೈನಿ. ಪಟ್ಟಣವನು [ಬಿಡ
ದಾಳುವ. ಮರುಳಸಿ. ದ್ಧೇಶ್ವರನು. [ಪದ
ಬಾಲಕ. ಹೇಳಿದ. ಕವಿತೆಯನು. [ಕೇಳಿ
ಸಂತೋಷ. ದಿಂದಲಿ. ವರ್ಣಿಸಿ. ಪೇಳಲು.
ವ್ಯಾಳಕಂ. ಕಣಧರ. ಒಲಿವನು. ನಿಮಗೆ.

[ಬಾಣಾಸುರ, ಪು.೩೩][೧೫]

ಇಲ್ಲಿ ಈ ಛಂದೋರೂಪವನ್ನು ‘ಹೋಳಿಯಪದ’ ಎಂದು ಕರೆದಿರುವುದನ್ನು ಗಮನಿಸಬೇಕು.

ಗೋಕಾವಿ ಸಿದ್ಧಸೇವಕನ ‘ಧೀರಕುಮಾರರಾಮ’[೧೬]ದಲ್ಲಿ ಕೂಡ ಈ ಬಂಧವು ಬಳಕೆಯಾಗಿದೆ. ಆದರೆ ಅಲ್ಲಿ ಹ್ರಸ್ವೀಕರಣ ದೀರ್ಘೀಕರಣ ಗಣಪರ್ಯಾಯಗಳಂತಹ ಹೊಂದಿಕೆಗಳು ಬಹುವಾಗಿ ಬರುತ್ತವೆ.

ಹೀಗೆ ಜನಪದ ಸಾಹಿತ್ಯದಲ್ಲಿ ಸ್ವರವಚನ ಸಾಹಿತ್ಯದಲ್ಲಿ ಬಹಳಷ್ಟು ಬಳಕೆಯಾಗಿದ್ದರೂ ಹಿಂದಿನ ಶಿಷ್ಟಸಾಹಿತ್ಯದಲ್ಲಿ ಮಾತ್ರ ಈ ಬಂಧವು ಬಳಕೆಯಾಗಲಿಲ್ಲ; ಹೊಸಗನ್ನಡಕವಿಗಳಷ್ಟೇ ಇದನ್ನು ಜನಪದಸಾಹಿತ್ಯ ಕ್ಷೇತ್ರದಿಂದ ಶಿಷ್ಟಸಾಹಿತ್ಯಕ್ಷೇತ್ರಕ್ಕೆ ಬರಮಾಡಿಕೊಂಡರು. ಇಂತಹವರ ಪೈಕಿ ಪ್ರಾಚೀನರಾದವರಲ್ಲಿ ಹೆಸರಿಸಬಹುದಾದವರೆಂದರೆ ಶಾಂತಕವಿಗಳು. ಅವರ, ‘ವೇಶ್ಯಾರಹಸ್ಯದುಂದುಮೆ’, ‘ಕೃಷ್ಣಮೋಹಿನೀ ದುಂದುಮೆ’[೧೭] ಇವು ಈ ಬಂಧದಲ್ಲಿಯೇ ರಚಿತವಾಗಿವೆ. ಇವುಗಳಲ್ಲಿಯ ರಚನೆಗೆ ಮಾದರಿಯಾಗಿ ಇದನ್ನು ನೋಡಬಹುದು:

ಸಾಲಕೆ. ಗುರಿಯೊಬ್ಬ. ಸಾಲ ಮಾ. ಡುವನೊಬ್ಬ. ವಿ.ವಿ.ವಿ.ವಿ.
ಹಾಲ ತ. ರುವನೊಬ್ಬ. ಕುಡಿವನೊಬ್ಬ. – [ಚಂದ್ರ ವಿ.ವಿ.ರು. [ಪ್ರ
ಕಾಳಿಕು. ಪ್ಪಸಕೊಬ್ಬ. ಸಂತಿಗೊಬ್ಬ. – [ಹೊಸ ವಿ.ವಿ.ರು. [ಪ್ರ
ಶಾಲೆ ತ. ರುವನೊಬ್ಬ. ಹರಿವನೊಬ್ಬ. – [ರಾತ್ರಿ ವಿ.ವಿ.ರು. [ಪ್ರ
ಲೋಲಾಕ್ಷಿ. ಬಾರೆಂದು. ಕರೆದು ಮು. ದ್ದಿಪನೊಬ್ಬ. ವಿ.ವಿ.ವಿ.ವಿ.
ಹಾಳಾಗಿ. ಹೊಲಮನೆ. ಮಾರುವ. ನೊಬ್ಬ. ವಿ.ವಿ.ವಿ.ಬ್ರ
[ವೇಶ್ಯಾರಹಸ್ಯ ದುಂದುಮೆ]

ನಿಯತವಾಗಿ ಪಾಲಿತವಾಗಿರುವ ಆದಿಪ್ರಾಸ ಅಂತ್ಯಪ್ರಾಸಗಳ ವಿಲಾಸ ಇಲ್ಲಿ ಗಮನಾರ್ಹ.

ಶಾಂತಕವಿಗಳ ನಂತರ ಬೇಂದ್ರೆಯವರು ತಮ್ಮ 'ಚಂದುಮಾಮಾ'[೧೮] ಕವನದ ಒಂದು ನುಡಿಯಲ್ಲಿ ಅಲ್ಪ ವ್ಯತ್ಯಾಸದೊಡನೆ ಇದೇ ಬಂಧವನ್ನು ಬಳಸಿದ್ದಾರೆ.

ಸಂಸ್ಕೃತಿ. ಛಂದsದ. ಅಂದನ್ನ. ಬಂಧsದ. ವಿ.ವಿ.ವಿ.ವಿ.
ಮುಂದsದ. ಚೆಂದನ್ನ. ನಂದsನವೋ. [ಅದ ವಿ.ವಿ.ರು. [ಪ್ರ
ರಲ್ಲಿಗೆ. ಕುಂದsದ. ತಂತನವೋ. [ಮುದ ವಿ.ರು. [ಪ್ರ
ದಿಂದಲೆ. ತಂತಾನೆ. ಶಾಂತನವೋ. [ಉದ ವಿ.ವಿ.ರು. [ಪ್ರ
ಕಂಗಳ. ಮಂಗಳ. ಗಂಗಾಪ್ರ. ವಾಹಜ. ವಿ.ವಿ.ವಿ.ವಿ.
ಗಂಗಳ. ತೊಳೆಯುತ. ಇಳಿಯಲಿ. ಧರೆಗೆ. ವಿ.ವಿ.ವಿ.ಬ್ರ.
ಮಂಗಲಂ. ನಿತ್ಯ. ಮಂಗಲಂ. ವಿ.ಬ್ರ.ವಿ.

ಅನುಸ್ವಾರದ ಬಳಕೆಯಿಂದ ರೂಪಿತವಾಗಿರುವ ಅನುಪ್ರಾಸದ ವಿನ್ಯಾಸವಿಲಾಸವು ಇಲ್ಲಿ ಈ ರಚನೆಯ ಗೇಯಗುಣಕ್ಕೆ ತುಂಬ ಇಂಬು ಕೊಟ್ಟಿದೆ. ಬೇಂದ್ರೆಯವರ ಸ್ವರನರ್ತನಗಾರುಡಿ ಇಲ್ಲಿ ತುಂಬ ಮನೋಹರವಾಗಿ ಒಡಮೂಡಿದೆ. ಈ ನುಡಿಯಲ್ಲಿ ಬೇಂದ್ರೆಯವರು ಮಾಡಿಕೊಂಡಿರುವ ಬದಲಾವಣೆ ಎಂದರೆ, ಕೊನೆಯ ಒಂದು ಪಾದವನ್ನು ಅಧಿಕವಾಗಿ ತಂದಿರುವುದು ಮಾತ್ರ. ಒಟ್ಟಿನಲ್ಲಿ, ಅಂಶಷಟ್ಪದಿಯ ಧಾಟಿಯಲ್ಲಿ ಪ್ರಾರಂಭವಾಗುವ ಇದು ಅದರ ಅರ್ಧವನ್ನು ಮುಟ್ಟಿದನಂತರ ಪ್ರತ್ಯೇಕಗಣದ ಕೊಂಡಿಯೊಂದಿಗೆ ಕೊನೆಯ ಪಾದದ ಮುಮ್ಮಡಿ ಪುನರಾವರ್ತನೆಗೆ ಒಳಗಾಗಿ ಮತ್ತೆ ಮೊದಲನೆಯ ಧಾಟಿಗೆ ಹಿಂತಿರುಗುತ್ತದೆ. ಆದರೆ ಕೊನೆಯ ಗಣಕ್ಕೆ ಬರುವ ಹೊತ್ತಿಗೆ ರುದ್ರಕ್ಕೆ ಬದಲು ವಿಷ್ಣು+ಬ್ರಹ್ಮ ಬರುವುದರಿಂದ ಮತ್ತಷ್ಟು ವಿಸ್ತಾರವನ್ನು ಹೊಂದಿ, ಅನಂತರದಲ್ಲಿ ಏಳೆಯ ದ್ವಿತೀಯ ಪಾದವೊಂದು ಬಂದು ಏಳೆಯ ರೀತಿಯಲ್ಲಿ ಮುಕ್ತಾಯಗೊಳ್ಳುತ್ತದೆ. ಹೀಗೆ ಅಂಶಷಟ್ಪದಿಯ ಧಾಟಿಯ ತಳಹದಿಯ ಮೇಲೆ ನಿಂತು ಇದು ಅದಕ್ಕಿಂತ ಸಾಕಷ್ಟು ದೂರ ಸಾಗಿ ಅದಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ.

## ಬಂಧವಿಕಾಸ, ವೈವಿಧ್ಯ

ಹೀಗೆ ದುಂದುಮೆ ಬಂಧವನ್ನು ಅದರ ಶುದ್ಧರೂಪದಲ್ಲಿ ಹಲವರು ಬಳಸಿದ್ದರೆ ಕೆಲವರು ಅದರಲ್ಲೇ ಸ್ವಲ್ಪ ಮಾರ್ಪಾಡುಗಳನ್ನು ತಂದಿರುವುದೂ ಉಂಟು. ಉದಾಹರಣೆಗೆ, ಕಾಲ ತಿಳಿಯದ ತುರವಿಗಿರೀಶಶಿಷ್ಯ ಎಂಬವನ 'ಮಲುಹಣ' ಎಂಬುದನ್ನು ನೋಡಬಹುದು. ಅದರ ಮೂಲ ತಳಹದಿ ದುಂದುಮೆಬಂಧವೇ. ಆದರೆ ಅದನ್ನು ಸ್ವಲ್ಪ ವರ್ಧಿಸಿ ಅದರಲ್ಲೇ ಒಂದು ಹೊಸ ಮಾದರಿಯನ್ನು ರೂಪಿಸಿಕೊಳ್ಳಲಾಗಿದೆ. ಮಾದರಿಗೆ,

ಮಕರಾಂಕ. ರೂಪ ಸ. ತ್ಕುಲದೀಪ. ಕೇಳ್‌ಪಂಚ. ವಿ.ವಿ.ವಿ.ವಿ.
ಮುಖನ ಶ್ರೀ. ಚರಣವ. ನೋಡೆಂದಳು. [ಸರ್ವ ವಿ.ವಿ.ರು. [ಪ್ರ
ಮುಕ್ತಿದಾ. ಯಕನ ಕೊಂ. ಡಾಡೆಂದಳು. [ಬೇಗ ವಿ.ವಿ.ರು. [ಪ್ರ
ನಕ್ಕರ. ವರವ ನೀ. ಬೇಡೆಂದಳು. [ಕೇಳು ವಿ.ವಿ.ರು. [ಪ್ರ
ಸಖಿಯಳೆ. [ಚಂದ್ರ ವಿ. [ಪ್ರ
ಮುಖಿಯಳೆ. [ಮೀನಾಂ ವಿ. [ಪ್ರ
ಬಕಿಯಳೆ. ವಿ.
ಅಕಳಂಕ. ನಭವನ. ಸ್ತುತಿಯ ಮಾ. ಳ್ಪರೆ ನಿನ್ನ. ವಿ.ವಿ.ವಿ.ವಿ.
ಮುಖವ ನೋ. ಡುತ ನಾನು. ಭಜಿಸುವೆ. ನೆಂದ.[೧೯] ವಿ.ವಿ.ವಿ.ಬ್ರ.

ಅಧಿಕವಾಗಿ ಮೂರು ವಿಷ್ಣುಗಣಗಳನ್ನು ಮೂರು ಪಾದಗಳಾಗಿ ಹೊಂದಿಸಿರುವುದು, ಅವನ್ನು ಪ್ರತ್ಯೇಕಗಣಗಳ ಕೊಂಡಿಯಿಂದ ಬೆಸೆದಿರುವುದು ಇಲ್ಲಿ ಗಮನಿಸಬೇಕಾದ ಅಂಶ. ಪ್ರತ್ಯೇಕಗಣವು ಬರುವಲ್ಲೆಲ್ಲ ನಿಯತವಾಗಿ ಅಂತ್ಯಪ್ರಾಸವನ್ನು ತರುವುದು, ಉಳಿದಂತೆ ಎಲ್ಲ ಕಡೆಗಳಲ್ಲೂ ಆದಿಪ್ರಾಸವನ್ನು ನಿಯತವಾಗಿ ತರುವುದು ಇಲ್ಲಿ ಗಮನಿಸಬೇಕಾದ ಅಂಶಗಳು. ಮೇಲಿಂದ ಮೇಲೆ, ಬೇಗ ಬೇಗ ಅಂತ್ಯಪ್ರಾಸವು ಪುನರಾವರ್ತನೆಯಾಗುವುದನ್ನು ೪, ೫ ಮತ್ತು ೬ನೆಯ ಪಾದಗಳಲ್ಲಿ ಕಾಣಬಹುದು. ಅದರ ಹೊಂದಾಣಿಕೆಯಿಂದಾಗಿ ಅಲ್ಲಿ ಕ್ಷಿಪ್ರಗತಿಯುಂಟಾಗಿ ಗತಿವೈವಿಧ್ಯವು ಸಾಧಿತವಾಗುತ್ತದೆ. ಒಟ್ಟಾರೆ ಇಂತಹ ವರ್ಧನೆಯಿಂದಾಗಿ ಇಲ್ಲಿ ೨೪ಕ್ಕೆ ಬದಲು ೨೯ ಗಣಗಳು ಬಂದಿವೆ.

ಈತನು ಇದರಲ್ಲೇ ಸಾಧಿಸಿರುವ ಮತ್ತೊಂದು ವೈವಿಧ್ಯವು ಹೀಗಿದೆ:

ವಾಣಿಯ. ಜಗಕತಿ. ಜಾಣೆಯ. ಬ್ರಹ್ಮನ. ವಿ.ವಿ.ವಿ.ವಿ.
ರಾಣಿಯ. ವಿದ್ಯಕೆ. ಚೂಣಿಯನು. [ಬಹು ವಿ.ವಿ.ರು. [ಪ್ರ
ತ್ರಾಣಿಯ. ಲಲಿತಸು. ಪ್ಪಾಣಿಯನು [ಗುಣ ವಿ.ವಿ.ರು. [ಪ್ರ
ಶ್ರೇಣಿಯ [ವೀಣಾ ವಿ. [ಪ್ರ
ಪಾಣಿಯ [ಗೀ ವಿ. [ಪ್ರ
ರ್ವಾಣಿಯ [ಶ ವಿ. [ಪ್ರ
ರ್ವಾಣಿಯ ವಿ.
ಮಾಣದೆ. ನೆನೆವೆನಿ. ವಿ.ವಿ.
ರ್ವಾಣಿಯ. [ವಿಮಲಕ ವಿ. [ಪ್ರ
ಟ್ಟಾಣಿಯ. ಬೇಗ.[೨೦] ವಿ.ಬ್ರ

ಹಿಂದಿನ ಬಂಧದಲ್ಲಿ ಬಳಸಿದ ತಂತ್ರವನ್ನೇ ಇದರಲ್ಲಿ ಮತ್ತಷ್ಟು ಮುಂದುವರಿಸಿದ್ದಾನೆ. ಆದರೆ ಗಣಗಳ ಸಂಖ್ಯೆ ಮಾತ್ರ ಅಲ್ಲಿಗಿಂತ ಕಡಿಮೆಯಿದೆ; ದುಂದುಮೆಗಿಂತ ಒಂದು ಹೆಚ್ಚಾಗಿದೆ. [೨೪ಕ್ಕೆ ಬದಲು ೨೫ ಗಣಗಳಿವೆ]

'ಹೋಳಿಯ ಹಾಡುಗಳು' ಸಂಗ್ರಹದಲ್ಲಿಯ 'ಹುಬ್ಬಳ್ಳಿಯ

ಹಾಡು'[೨೧] ೨೦ ನುಡಿಗಳಿಂದಾದ ಇನ್ನೊಂದು ದುಂದುಮೆ. ಮಾದರಿಗೆ ಅದರ ಈ ನುಡಿಯನ್ನು ನೋಡಬಹುದು:

| | |
|---|---|
| ತರಳೇರು. ಮನ್ಮಥ. ಸರಳೇರು. ಉರಗನ. | ವಿ.ವಿ.ವಿ.ವಿ. |
| ಹೆರಳೇರು. ಮರಿದುಂಬಿ. **ಗುರುಳೇರು.** [ಕರಿ | ವಿ.ವಿ.ವಿ. [ಪ್ರ |
| ಕರದೊಳ್ಮೆ. ರೆವ ವಜ್ರ. ದ್ದರಳೇರು. [ಇಟ್ಟ | ವಿ.ವಿ.ವಿ. [ಪ್ರ |
| ಬೆರಳಿನುಂ. ಗುರ ಶಂಖ. **ಗೊರಳೇರು.** [ಬಂದು | ವಿ.ವಿ.ವಿ. [ಪ್ರ |
| ಭರದಿಂದ. ವಿಟರೆದೆ. ಗ್ದರಳನೊ. ಗೆದು ನಕ್ಕು. | ವಿ.ವಿ.ವಿ.ವಿ. |
| ಪುರುಷರ. ಮರುಳ್ಮಾಡಿ. ಸರಸದಿಂ. ದಿಹರು. ॥೬॥ | ವಿ.ವಿ.ವಿ.ಬ್ರ. |

ಇಲ್ಲಿ, ೨, ೩, ೪ನೆಯ ಪಾದಗಳ ಮೂರನೆಯ ಗಣದ ಸ್ಥಾನದಲ್ಲಿ ರುದ್ರಕ್ಕೆ ಬದಲು ವಿಷ್ಣು ಬಂದಿರುವುದನ್ನು ಗಮನಿಸಬೇಕು. ಇದರಿಂದ ಮತ್ತು ಇದರಲ್ಲಿ ಅಳವಡಿಸಿರುವ ಆಂತರಿಕ ಪ್ರಾಸವಿನ್ಯಾಸದಿಂದ ಇದರ ಗತಿಯು ವಿಶಿಷ್ಟವಾಗಿ ತೋರುತ್ತದೆ. ಆದಿಪ್ರಾಸವನ್ನು ಹಿಡಿದು ವಿಭಜಿಸಿದರೆ ಇದೇ ನುಡಿಯು ಒಂದು ನವಪದಿಯಾಗಿ ಹೀಗೆ ಮಾರ್ಪಡುತ್ತದೆ:

| | |
|---|---|
| ತರಳೇರು. ಮನ್ಮಥ. | ವಿ.ವಿ. |
| ಸರಳೇರು. ಉರಗನ. | ವಿ.ವಿ. |
| ಹೆರಳೇರು. ಮರಿದುಂಬಿ. **ಗುರುಳೇರು.** [ಕರಿ | ವಿ.ವಿ.ವಿ. [ಪ್ರ |
| ಕರದೊಳ್ಮೆ. ರೆವ ವಜ್ರ. ದ್ದರಳೇರು. [ಇಟ್ಟ | ವಿ.ವಿ.ವಿ. [ಪ್ರ |
| ಬೆರಳಿನುಂ. ಗುರ ಶಂಖ. **ಗೊರಳೇರು.** [ಬಂದು | ವಿ.ವಿ.ವಿ. [ಪ್ರ |
| ಭರದಿಂದ. ವಿಟರೆದೆ. | ವಿ.ವಿ. |
| ಗ್ದರಳನೊ. ಗೆದು ನಕ್ಕು. | ವಿ.ವಿ. |
| ಪುರುಷರ. ಮರುಳ್ಮಾಡಿ. | ವಿ.ವಿ. |
| ಸರಸದಿಂ. ದಿಹರು. | ವಿ.ಬ್ರ. |

ಒಟ್ಟಾರೆ, ಸೊಬಗಿನಸೋನೆಯ ಮಟ್ಟಿನ ಧಾಟಿಯಲ್ಲಿ ಪ್ರಾರಂಭವಾಗುವ ಇದು ಅದರ ಅರ್ಧವನ್ನು ಮುಟ್ಟಿದನಂತರ ಪ್ರತ್ಯೇಕಗಣದ ಕೊಂಡಿಯೊಂದಿಗೆ ಕೊನೆಯ ಪಾದದ ಮುಮ್ಮಡಿ ಪುನರಾವರ್ತನೆಗೆ ಒಳಗಾಗಿ ಮತ್ತೆ ಮೊದಲನೆಯ ಧಾಟಿಗೆ ಹಿಂತಿರುಗುತ್ತದೆ. ಆದರೆ ಕೊನೆಯ ಗಣದ ನಂತರ ಒಂದು ಅಧಿಕ ಬ್ರಹ್ಮ ಬರುವುದರಿಂದ ಮತ್ತಷ್ಟು ವಿಸ್ತಾರವನ್ನು ಹೊಂದಿ ಮುಕ್ತಾಯಗೊಳ್ಳುತ್ತದೆ. ಹೀಗೆ ಸೊಬಗಿನಸೋನೆಯ ಮಟ್ಟಿನ ಧಾಟಿಯ ತಳಹದಿಯ ಮೇಲೆ ನಿಂತು ಅದಕ್ಕಿಂತ ಸಾಕಷ್ಟು ದೂರ ಸಾಗಿ ಇದು ಅದಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ.

ಇವುಗಳ ಜೊತೆಗೆ ಬೇಂದ್ರೆಯವರು ಮಾಡಿಕೊಂಡಿರುವ ಮಾರ್ಪಾಡನ್ನೂ ಇಲ್ಲಿ ಸೇರಿಸಬಹುದು. [ಅದರ ಬಗ್ಗೆ ಈ ಮೊದಲೇ ನೋಡಿರುವುದರಿಂದ ಇಲ್ಲಿ ಮತ್ತೆ ವಿವರಿಸಬೇಕಾದ ಅಗತ್ಯವಿಲ್ಲ.] ಅದೇ ಕವನದಲಿ ಅವರು ಈ ಬಂಧವನ್ನು ಮತ್ತಷ್ಟು ವರ್ಧಿಸಿರುವುದನ್ನೂ ಕಾಣಬಹುದು. ಮಾದರಿಗೆ:

| | |
|---|---|
| ಘನಮಠದ. ಘಂಟೆಯು. ಘಣಘಣ. ಬಾರಿಸೆ. | ರು.ವಿ.ವಿ.ವಿ. |
| ಕರೆವುದು. ನಾದದ. ಜಿನುಗುಮಳೆ. [ಆಗ | ವಿ.ವಿ.ರು. [ಪ್ರ |
| ಹರಿವುದು ಬೆಟ್ಟದ. ತಿಟ್ಟೀನ. ತೆವರಿನ. | ವಿ.ವಿ.ವಿ.ವಿ. |
| ಬಣ್ಣದ. ಬಣ್ಣದ. ಬೆಳಕುಹೊಳೆ. [ಸೋಗ | ವಿ.ವಿ.ರು. [ಪ್ರ |
| ಲಾಡಿಯರ. ಕಾಡಿನ. ಗಾಡೀಯ. ನಡಿಗೆಯ. | ರು.ವಿ.ವಿ.ವಿ. |
| ನವಿಲೋಡಿ. ತರುವವು. ನವಿರುಬೆಳೆ. [ಬೇಗ | ವಿ.ವಿ.ರು. [ಪ್ರ |
| ಬೇಗದಿ. ಗತಿಸದೆ. ಗುಂಭಾಗಿ. ಮಡುವಾಗಿ. | ವಿ.ವಿ.ವಿ.ವಿ. |
| ನಡುವೇನೆ. ನಿಲ್ಲುವುದು. ಸ್ತಂಭಿತ. ಭಾವಾ. | ವಿ.ವಿ.ವಿ.ಬ್ರ. |
| ಚಂದುಮಾಮಾ. | ರು. |

ಚತುರ್ವಿಷ್ಣುವಿನ [ಅಂಶಛಂದಸ್ಸಿನಲ್ಲಿ, ವಿಷ್ಣುವಿನ ಸ್ಥಾನದಲ್ಲಿ ರುದ್ರವು ಪರ್ಯಾಯವಾಗಿ ಬರುವುದು ತಿಳಿದ ವಿಷಯ. ಇಲ್ಲಿಯೂ ಅದು ಎರಡುಕಡೆ ಬಂದಿರುವುದನ್ನು ಗಮನಿಸಬಹುದು.] ಮತ್ತೆರಡು ಪೂರ್ಣಪಾದಗಳನ್ನು ತಂದು ಕೊನೆಗೊಂದು ಅಧಿಕರುದ್ರವನ್ನು ತಂದಿರುವುದು ಇಲ್ಲಿಯ ವಿನ್ಯಾಸ. ಅಂತಹ ಪೂರ್ಣಪಾದಗಳನ್ನು ಪ್ರತಿಯೊಂದು ಪ್ರತ್ಯೇಕಗಣಸಹಿತ ಪಾದಗಳ ನಂತರದಲ್ಲೂ ಒಂದೊಂದು ಬರುವಂತೆ ಜೋಡಿಸಲಾಗಿದೆ. ಇದರಿಂದ ದುಂದುಮೆಯ ಮೂಲಗತಿಯು ತುಂಬ ಬದಲಾಗಿ ಅದಕ್ಕಿಂತ ಸಾಕಷ್ಟು ಭಿನ್ನವಾದ ಹೊಸಗತಿಯೊಂದು ಮೂಡಿದೆ.

### ಒಟ್ಟುನೋಟ

ಈವರೆಗೆ ಗಮನಿಸಿದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು:

* ದುಂದುಮೆಗಳಲ್ಲಿ ಬಳಕೆಯಾಗುವ ಬಂಧವನ್ನು ದುಂದುಮೆಬಂಧವೆಂದು ಕರೆಯಲಾಗಿದೆ
* ಇದೊಂದು ಜನಪದಛಂದೋಬಂಧ ಹೊಸಗನ್ನಡಯುಗದಲ್ಲಿ ಶಿಷ್ಟಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದೆ
* ಇದರ ಲಕ್ಷಣ:

  ವಿ.ವಿ.ವಿ.ವಿ.  
  ವಿ.ವಿ.ರು. [ಪ್ರ  
  ವಿ.ವಿ.ರು. [ಪ್ರ  
  ವಿ.ವಿ.ರು. [ಪ್ರ  
  ವಿ.ವಿ.ವಿ.ವಿ.  
  ವಿ.ವಿ.ವಿ.ಬ್ರ.
* ಇದೊಂದು ಷಟ್ಪದಿಬಂಧ
* ಅಂಶಷಟ್ಪದಿಯ ತಳಹದಿಯುಳ್ಳದ್ದು
* ಪ್ರತ್ಯೇಕಗಣವೂ ಸೇರಿ ಒಟ್ಟಾರೆ ೨೪ ಗಣಗಳಿರುತ್ತವೆ
* ಆರೂ ಪಾದಗಳಿಗೆ ಆದಿಪ್ರಾಸವಿರುತ್ತದೆ
* ಜೊತೆಗೆ ೨, ೩, ೪ನೆಯ ಪಾದಗಳಲ್ಲಿ ಪ್ರತ್ಯೇಕಗಣದ ಹಿಂದಿನ ಸ್ಥಾನದಲ್ಲಿ ಮೂರೂ ಪಾದಗಳಿಗೆ ಒಂದೇ ಅಂತ್ಯಪ್ರಾಸವಿರುತ್ತದೆ
* ಈ ಮೂರು ರೀತಿಯ ಪಾದಗಳು ಇದರಲ್ಲಿ ಬಳಕೆಯಾಗುತ್ತವೆ:

ವಿ.ವಿ.ವಿ.ವಿ.
ವಿ.ವಿ.ರು. [ಪ್ರ
ವಿ.ವಿ.ವಿ.ಬ್ರ

* * *

**ಟಿಪ್ಪಣಿಗಳು**

೧. **ಹೋಳಿಯಹಾಡುಗಳು,** (ಸಂ) ಡಾ. ಮ.ಗು.ಬಿರಾದಾರ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು, ೨೦೦೦, ಪು. ೧೮– ೨೧

೨. ಅಂತ್ಯಪ್ರಾಸವನ್ನೂ, ಪ್ರಾದೇಶಿಕ ಸೊಗಡನ್ನೂ ಗಮನದಲ್ಲಿಟ್ಟುಕೊಂಡು ನೋಡಿದಾಗ, ಮೊದಲನೆಯ ಪಾದದ ಅಂತ್ಯದಲ್ಲಿ 'ಪೆಟ್ಟು' ಎಂಬುದಕ್ಕೆ ಬದಲು 'ಪೆಟ್ಟ' ಎಂಬ ಪಾಠವು ಹೆಚ್ಚು ಉಚಿತವಾಗಿ ತೋರುತ್ತದೆ.

೩. 'ಕುಮಾರರಾಮನ ದುಂದುಮೆ, ಬಿ.ಎಸ್.ಗದ್ದಗಿಮಠ, **ಪ್ರಬುದ್ಧಕರ್ಣಾಟಕ,** ಸಂಪುಟ ೪೧, ಸಂಚಿಕೆ ೨, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೯, ಪು. ೧೩–೧೪

೪. **ಜನಪದ ಗೀತಾಂಜಲಿ** (ಕನ್ನಡ ಜಾನಪದ ಗೀತೆಗಳ ಸಂಕಲನ), (ಸಂ) ದೇ.ಜವರೇಗೌಡ, ಸಾಹಿತ್ಯ ಅಕಾದೆಮಿ, ನವದೆಹಲಿ, ೧೯೭೮, ಪು. ೩೬

೫. ಅದೇ, ಪು. ೧೨೯

೬. **ಗುರುಬಸವಾರ್ಯನ ಕೈವಲ್ಯಪದ್ಧತಿ,** ಸ್ವರವಚನ ಸಂಪುಟ ೯, (ಸಂ) ಡಾ.ವೀರಣ್ಣ ರಾಜೂರ, ಜಗದ್ಗುರು ಶ್ರೀಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೯೭, ಪು. ೩೦

೭. ಹೋಳಿಯಹಾಡುಗಳು, ಪೂರ್ವೋಕ್ತ, ಪು. ೨೫ – ೩೦

೮. ಅದೇ, ಪು. ೨೫

೯. ಅದೇ, ಪು. ೧೯೬–೨೦೦

೧೦. ಅದೇ, ಪು. ೨೦೦

೧೧. **ಜೀವನಜೋಕಾಲಿ:** ಭಾಗ ೪: ಹೋಳೀಹಾಡು, (ಸಂ) ಡಾ. ಎಂ.ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪, ಪು. ೧೫

೧೨. ಅದೇ, ಪು. ೫೭

೧೩. ಅದೇ, ಪು. ೧೦೮

೧೪. ಅದೇ, ಪು. ೮

೧೫. ಅದೇ, ಪು. ೩೩

೧೬. ಅದೇ, ಪು. ೧೪೫

೧೭. ನೋಡಿ: ರಾ.ಯ.ಧಾರವಾಡಕರ: **ಹೊಸಗನ್ನಡ ಸಾಹಿತ್ಯದ ಉದಯಕಾಲ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫, ಪು. ೩೨೨–೩೨೫

೧೮. **ಮರ್ಯಾದೆ,** ಸಮಾಜಪುಸ್ತಕಾಲಯ, ಧಾರವಾಡ, ೧೯೬೬, ಪು.

೧೯. **ಜೀವನಜೋಕಾಲಿ:** ಭಾಗ ೪: ಹೋಳಿಹಾಡು, (ಸಂ) ಡಾ. ಎಂ.ಎಸ್. ಸುಂಕಾಪುರ, ಪೂರ್ವೋಕ್ತ, ಪು. ೧೬೫

೨೦. ಅದೇ, ಪು. ೧೪೯

೨೧. **ಹೋಳಿಯಹಾಡುಗಳು,** (ಸಂ) ಡಾ. ಮ.ಗು.ಬಿರಾದಾರ, ಪೂರ್ವೋಕ್ತ, ಪು. ೨೦೧–೨೦೫

❑❑

# ರನ್ನಕವಿ ವಿರಚಿತ ರನ್ನ ನಿಘಂಟು : ಒಂದು ಸಮೀಕ್ಷೆ

– ಎಸ್. ಕಾರ್ತಿಕ್

ರನ್ನಕವಿಯು 'ರನ್ನ ನಿಘಂಟು' ಎಂಬ ಹೆಸರಿನ ಪಟ್ಟ ನಿಘಂಟನ್ನು ರಚಿಸಿದ್ದಾನೆ. ಈ ನಿಘಂಟು ಈಚೆಗೆ ಸಮಗ್ರವಾಗಿ ದೊರೆತು ಪ್ರಕಟವಾಗಿದೆ. ಆದರೆ ಸಮರ್ಪಕವಾದ ಮಾಹಿತಿಯ ಕೊರತೆ ಎದ್ದು ಕಾಣುತ್ತಿದೆ. ಪ್ರಕೃತ ಲೇಖನದಲ್ಲಿ ಈ ನಿಘಂಟಿನ ಬಗೆಗಿನ ಕೆಲವು ಸಮಸ್ಯೆಗಳು ಮತ್ತು ನಿಘಂಟಿನ ಗ್ರಂಥಸಂಪಾದನೆಯ ವಿಧಿಗಳು ಮುಂತಾದುವನ್ನು ಕುರಿತು ವಿಶ್ಲೇಷಿಸಲಾಗಿದೆ ಹಾಗೂ ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಗುವಂತೆ ಈ ನಿಘಂಟಿನ ಬಗೆಗೆ ಪ್ರಕಟವಾಗಿರುವ ಬರಹಗಳು, ಪರಿಷ್ಕರಣಗಳು ಮತ್ತು ಹಸ್ತಪ್ರತಿಗಳ ಸೂಚಿ ಇವುಗಳನ್ನು ಮೂಲ ಆಕರಗಳನ್ನೇ ಪರಿಶೀಲಿಸಿ ಪ್ರಕೃತ ಲೇಖನದ ಕೊನೆಗೆ ನೀಡಲಾಗಿದೆ.

ರನ್ನ ನಿಘಂಟಿನ ಬಗೆಗೆ ಎರಡು ಪೂರ್ಣಪ್ರಮಾಣದ ಲೇಖನಗಳು ಮಾತ್ರ ಪ್ರಕಟವಾಗಿವೆ. ಎನ್. ಎಸ್. ತಾರಾನಾಥ ಅವರು ತಮ್ಮ ಲೇಖನ[೧] ಪ್ರಕಟವಾದಾಗ ಈ ನಿಘಂಟಿನ ಪೂರ್ಣ ಪರಿಷ್ಕರಣ ಹಸ್ತಪ್ರತಿಗಳ ಅಲಭ್ಯತೆಯಿಂದ ಪ್ರಕಟವಾಗಿರದ ಕಾರಣ, ತ.ಸು. ಶಾಮರಾಯರ ಪರಿಷ್ಕರಣವನ್ನೇ ಆಧಾರವಾಗಿಟ್ಟುಕೊಂಡು ವಿಶ್ಲೇಷಣೆ ನಡೆಸಿದ್ದಾರೆ. ಆದ ಕಾರಣ ಈ ಲೇಖನದಲ್ಲಿ ಹೆಚ್ಚಿನ ವಿಮರ್ಶೆ ಮುಂತಾದುವನ್ನು ಮಾಡಲು ಸಾಧ್ಯ ವಾಗಿಲ್ಲ. ಪಿ.ವಿ. ನಾರಾಯಣ ಅವರ ಲೇಖನವು[೨] ಪ್ರಕಟವಾಗುವ ಕಾಲಕ್ಕೆ ನಿಘಂಟಿನ ಸಮಗ್ರ ಪರಿಷ್ಕರಣ ಪ್ರಕಟವಾಗಿದ್ದ ಕಾರಣ, ಈ ನಿಘಂಟಿನ ಸಮಸ್ಯೆಗಳು ಮತ್ತು ಇವುಗಳ ಪರಿಷ್ಕರಣ ಮುಂತಾದ ಅಂಶಗಳನ್ನು ಅಲ್ಲಿ ಸಮರ್ಥವಾಗಿ ವಿವೇಚಿಸಲಾಗಿದೆ. ಆದರೂ ಕೆಲವೆಡೆ ಅಚ್ಚಾಗಿರುವ ಅಶುದ್ಧ ಪಾಠಗಳನ್ನೇ ಅವಲಂಬಿಸಿ ವಿಶ್ಲೇಷಣೆಯನ್ನು ಮಾಡಿರುವ ಕಾರಣ ಅಲ್ಲಲ್ಲಿ ಗೊಂದಲಗಳಿವೆ. ಆದ ಕಾರಣ ಪ್ರಕೃತ ಲೇಖನದಲ್ಲಿ ಮೇಲ್ಕಂಡ ಲೇಖನಗಳಲ್ಲಿ ವಿಮರ್ಶೆಯಾಗದ ಅಂಶಗಳನ್ನು ಮತ್ತು ಇತರ ವಿವರಗಳನ್ನು ಮಾತ್ರ ವಿಶ್ಲೇಷಣೆಗೆ ತೆಗೆದುಕೊಳ್ಳಲಾಗಿದೆ.

ರನ್ನ ಕವಿಯ ಜನ್ಮ ವರ್ಷ ಕ್ರಿ.ಶ. ೯೪೯. ಇಂದಿನ ಕರ್ನಾಟಕ ರಾಜ್ಯದ ಬಾಗಲಕೋಟೆ ಜಿಲ್ಲೆಯ ಮುದವೊಳಲು {ಇಂದಿನ ಮುಧೋಳ} ಜನ್ಮಸ್ಥಳ. ತಂದೆ ಜಿನವಲ್ಲಭೇಂದ್ರ, ತಾಯಿ ಅಬ್ಬಲಬ್ಬೆ. ಒಡಹುಟ್ಟಿದ ಅಣ್ಣಂದಿರು ದೃಢಬಾಹು, ರೇಚಣ, ಮಾರಮಯ್ಯ. ಶಾಂತಿ, ಜಕ್ಕಿ ಎಂಬ ಇಬ್ಬರು ಪತ್ನಿಯರು, ಅತ್ತಿಮಬ್ಬೆ, ರಾಯ ಎಂಬ ಹೆಸರಿನ ಇಬ್ಬರು ಮಕ್ಕಳು ಎಂಬುದಾಗಿ ತನ್ನ ವೈಯಕ್ತಿಕ ವಿವರಗಳನ್ನು ರನ್ನನೇ ಹೇಳಿಕೊಂಡಿದ್ದಾನೆ. ಈತ ತಲಕಾಡು ಗಂಗರ ರಾಚಮಲ್ಲ ಮತ್ತು ಇಮ್ಮಡಿ ಮಾರಸಿಂಹರ ಮಹಾಮಂತ್ರಿ ಹಾಗೂ ಸೇನಾಧಿಪತಿಯಾಗಿದ್ದ ಚಾವುಂಡರಾಯನ ಆಶ್ರಯದಲ್ಲಿದ್ದು ನಂತರ ಕಲ್ಯಾಣದ ಚಾಲುಕ್ಯರ ಚಕ್ರವರ್ತಿ ಇಮ್ಮಡಿ ತೈಲಪ ಮತ್ತು ಇರಿವಬೆಡಂಗ ಸತ್ಯಾಶ್ರಯರ ಆಶ್ರಯವನ್ನು ಹೊಂದಿ ಕೃತಿ ರಚನೆ ಮಾಡಿದ್ದಾನೆ. ಅಜಿತ ಪುರಾಣವನ್ನು ದಾನಚಿಂತಾಮಣಿ ಅತ್ತಿಮಬ್ಬೆಯ ಪ್ರೋತ್ಸಾಹದಿಂದ ರಚಿಸಿದ್ದಾನೆ. ಗದಾಯುದ್ಧದ ರಚನೆಯ ಕಾಲ ಈಚಿನ ಸಂಶೋಧನೆಗಳಿಂದ ತಿಳಿದು ಬಂದಿರುವಂತೆ ಕ್ರಿ.ಶ. ಸುಮಾರು ೧೦೦೦-೧೦೦೭ ರೊಳಗೆ ಎಂಬುದು ಖಚಿತ. ಅಜಿತ ಪುರಾಣದ ರಚನೆಯ ಕಾಲ ಅನೇಕ ಸಂದೇಹಗಳನ್ನು ಒಳಕೊಂಡೂ ಕ್ರಿ.ಶ. ೯೯೩ ಎನ್ನಲಾಗಿದೆ. ರನ್ನ ನಿಘಂಟಿನ ರಚನೆಯ ಕಾಲ ತಿಳಿದುಬಂದಿಲ್ಲ. ಆದರೂ ಕ್ರಿ.ಶ. ಸುಮಾರು ಹತ್ತನೆಯ ಶತಮಾನದ ಉತ್ತರಾರ್ಧ, ಹನ್ನೊಂದನೆಯ ಶತಮಾನದ ಆದಿಭಾಗದಲ್ಲಿ ರಚನೆಯಾಗಿರಬಹುದು ಎಂದು ಹೇಳಬಹುದೇನೋ. ಇದಕ್ಕಿಂತ ಹೆಚ್ಚಿನ ವಿವರಗಳಿಗೆ ಮಾಹಿತಿಗಳ ಕೊರತೆಯಿದೆ[೩].

ರನ್ನ ನಿಘಂಟು ಎಂಬುದೇ ಈ ನಿಘಂಟಿನ ಹೆಸರು ಎಂಬುದು ಕೂಡ ಖಚಿತವಾಗಿಲ್ಲ. ಕರ್ತೃ ಯಾವ ಹೆಸರನ್ನು ಕೊಟ್ಟಿದ್ದನೋ ಎಂಬುದು ತಿಳಿಯುವಂತಿಲ್ಲ. ಇದನ್ನು **ರನ್ನ ಕಂದ**ವೆಂಬ ಹೆಸರಿನಿಂದ ಮೊದಲು ಕರೆದವರು ಬಹುಶಃ ಕರ್ಣಾಟಕ ಕವಿಚರಿತೆಕಾರರು. ಅಸಮಗ್ರವಾದ ಈ ನಿಘಂಟನ್ನು ಪ್ರಕಟಿಸುವಾಗ ಇದರ ಮೊದಲ ಪರಿಷ್ಕರಣದ ಸಂಪಾದಕರು ಇದಕ್ಕೆ ರನ್ನ ಕಂದ ಎಂಬ ಶೀರ್ಷಿಕೆಯನ್ನೇ ನೀಡಿ ಪ್ರಕಟಿಸಿರುತ್ತಾರೆ. ಈಚೆಗೆ ಇದು ಸಮಗ್ರವಾಗಿ ಪ್ರಕಟವಾಗಿದ್ದು ಇದರಲ್ಲಿ ಕಂದಪದ್ಯಗಳ ಜೊತೆಗೆ ವೃತ್ತಗಳು ಕೂಡ ಇರುವುದರಿಂದ ರನ್ನ ಕಂದ ಎಂಬ ಶೀರ್ಷಿಕೆ ಸರಿಹೊಂದದೆ ಹಸ್ತಪ್ರತಿಗಳಲ್ಲಿ ಇರುವಂತೆ 'ರನ್ನ ನಿಘಂಟು' ಎಂಬ ಹೆಸರನ್ನೇ ಅಂಗೀಕರಿಸಲಾಗಿದೆ. ಈಗ ದೊರೆತಿರುವ

# ೬೫, ೧ ನೆಯ ಮಹಡಿ, ೩ ನೆಯ ಅಡ್ಡರಸ್ತೆ, ಶಿಕ್ಷಕರ ಬಡಾವಣೆ, ೧ ನೆಯ ಹಂತ, ಜೆ.ಪಿ. ನಗರ ಅಂಚೆ, ಬೆಂಗಳೂರು-೭೮

ಎಲ್ಲಾ ಹಸ್ತಪ್ರತಿಗಳಲ್ಲೂ ಇದನ್ನು 'ರನ್ನ ನಿಘಂಟು' ಎಂದೇ ಕರೆಯಲಾಗಿದೆ.

ಈ ನಿಘಂಟಿನ ಬಗೆಗೆ ಮೊದಲು ಮಾಹಿತಿಯನ್ನು ನೀಡಿದವರು ಆರ್. ನರಸಿಂಹಾಚಾರ್ಯರು ಮತ್ತು ಎಸ್.ಜಿ. ನರಸಿಂಹಾಚಾರ್ಯರು. ೧೯೦೭ ರಲ್ಲಿ ಪ್ರಕಟವಾದ ಕರ್ಣಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿ ಇದರ ಬಗೆಗೆ ತಮಗೆ ದೊರೆತ ೧೨ ಪದ್ಯಗಳನ್ನು ಮಾತ್ರ ಉಳ್ಳ ಅಸಮಗ್ರ ಪ್ರತಿಯನ್ನು ಅವಲಂಬಿಸಿ ಪರಿಚಯಾತ್ಮಕ ಮಾಹಿತಿಯನ್ನಷ್ಟೇ ನೀಡಿದ್ದಾರೆ[೪]. ಇದರ ಜೊತೆಗೆ ೨ ಪದ್ಯಗಳನ್ನು ಕೂಡ ಉದಾಹರಿಸಿದ್ದಾರೆ. ಇದೇ ಮಾಹಿತಿಯೇ ಆರ್. ನರಸಿಂಹಾಚಾರ್ಯರಿಂದ ಪರಿಷ್ಕರಿಸಲ್ಪಟ್ಟು ೧೯೨೪ರಲ್ಲಿ ಪ್ರಕಟವಾದ ಕರ್ಣಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿದೆ[೫]. ಈ ಮಾಹಿತಿಯ ನಂತರ ಕವಿಚರಿತೆಯಲ್ಲಿನ ಮಾಹಿತಿಯನ್ನೇ ಸಂಶೋಧಕರು ತಮ್ಮ ಬರಹಗಳಲ್ಲಿ ಉದಾಹರಿಸುತ್ತಾ ಬಂದಿದ್ದಾರೆಯೇ ಹೊರತು[೬] ಹೆಚ್ಚಿನ ಮಾಹಿತಿ ಮತ್ತು ವಿಶ್ಲೇಷಣೆಗಳನ್ನೇನೂ ಮಾಡಿರುವುದಿಲ್ಲ. ಇದನ್ನು ರನ್ನ ಕವಿಯೇ ಬರೆದಿದ್ದಾನೆನ್ನಲು ಬಲವಾದ ಆಧಾರಗಳೇನೂ ಕಂಡು ಬರುತ್ತಿಲ್ಲ.

ಹಸ್ತಪ್ರತಿಗಳಲ್ಲಿ ರನ್ನ ನಿಘಂಟು ಎಂದಿರುವುದು ಮತ್ತು ಈ ನಿಘಂಟಿನ ಕೆಲವು ಪದ್ಯಗಳು ಕವಿರತ್ನಾ ಎಂದು ಅಂತ್ಯಗೊಳ್ಳುತ್ತಿರುವುದು ಈ ಕಾರಣಗಳಿಂದ ಇದನ್ನು ರನ್ನನ ಕೃತಿಯೆಂದು ಹೇಳಲಾಗುತ್ತಿದೆ. ಸೀತಾರಾಮ ಜಾಗೀರದಾರರು ಈ ನಿಘಂಟು ರನ್ನ ಕೃತವೇ ಎಂದು ಸಂದೇಹಿಸಿ ಕೆಲವು ಪದ್ಯಗಳಲ್ಲಿ ಬೆಳ್ವೆಸರಾಂತವನೇ, ಬೆಳ್ವೆಸರ್ಗೆ ತಕ್ಕನೇ ಎಂದಿರುವುದರಿಂದ ಇದನ್ನು ಬರೆದವನು ಬೆಳ್ವಿ ಎಂಬ ವ್ಯಕ್ತಿ ಎಂದು ಹೇಳಿರುತ್ತಾರೆ[೭]. ಆದರೆ ತಮ್ಮ ಸಂದೇಹಗಳಿಗೆ ಮತ್ತು ವಿಶ್ಲೇಷಣೆಗೆ ಯಾವುದೇ ಸರಿಯಾದ ಕಾರಣಗಳನ್ನೂ ನೀಡಿಲ್ಲವಾಗಿ ಬೇರೆ ಬಲವಾದ ಆಧಾರಗಳು ಲಭಿಸುವವರೆಗೂ ರನ್ನಕೃತವಾದುದು ಎಂದು ಸ್ವೀಕರಿಸಲಡ್ಡಿಯಿಲ್ಲ. ಮೊದಲು ರನ್ನ ನಿಘಂಟಿನ ಪರಿಷ್ಕರಣಗಳನ್ನು ವಿಮರ್ಶಿಸಲಾಗಿದೆ. ಆಯಾ ಪರಿಷ್ಕರಣದ ಪ್ರಕಟಣೆಯ ವಿವರಗಳನ್ನು ಪ್ರಕೃತ ಲೇಖನದ ಕೊನೆಗೆ ನೀಡಲಾಗಿರುವುದರಿಂದ ಅವುಗಳ ವಿವರಗಳನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಪ್ರಕಟಿತ ವರ್ಷವನ್ನು ಮತ್ತು ಸಂಪಾದಕರ ಹೆಸರನ್ನು ಮಾತ್ರ ಸೂಚಿಸಲಾಗಿದೆ.

ರನ್ನ ನಿಘಂಟು ರನ್ನ ಕಂದ ಎಂಬ ಶೀರ್ಷಿಕೆಯಲ್ಲಿ ಮೊದಲು ಪ್ರಕಟವಾದದ್ದು ೧೯೪೬ರಲ್ಲಿ. ಇದರ ಸಂಪಾದಕರಾದ ತ.ಸು. ಶಾಮರಾಯರು ಎರಡು ಪುಟಗಳ ಪೀಠಿಕೆಯನ್ನು ಬರೆದಿದ್ದಾರೆ. ಈ ನಿಘಂಟಿನ ಸಂಪಾದನೆಗಾಗಿ ಮೈಸೂರು ಓರಿಯೆಂಟಲ್ ಲೈಬ್ರರಿಯ ಹಸ್ತಪ್ರತಿಯನ್ನು ಬಳಸಿಕೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆಯೇ ಹೊರತು ಮತ್ತೇನೂ ಮಾಹಿತಿ ನೀಡಿರುವುದಿಲ್ಲ. ಹಸ್ತಪ್ರತಿ ಓಲೆಗರಿಯೇ ಅಥವಾ ಕಾಗದದ ಪ್ರತಿಯೇ ಎಂಬುದು ತಿಳಿದುಬರುವುದಿಲ್ಲ. ಈ ಪ್ರತಿಯಲ್ಲಿ ೧೧ ಪದ್ಯಗಳು ಮಾತ್ರವಿದೆ ಎಂದು ಬರೆದಿರುತ್ತಾರೆ. ಆದರೆ ಅವರೇ ೧೧ ಸಂಪೂರ್ಣ ಪದ್ಯಗಳು ಮತ್ತು ಒಂದು ಅಸಮಗ್ರ ಪದ್ಯವನ್ನು ಪಠ್ಯವಾಗಿ ನೀಡಿದ್ದಾರೆ. ತ.ಸು. ಶಾಮರಾಯರು ಅಡಿಟಿಪ್ಪಣಿಗಳಲ್ಲಿ ಸೂಚಿಸಿರುವ ಹಸ್ತಪ್ರತಿಯಲ್ಲಿನ ಮೂಲ ಪಾಠಗಳು ಎನ್. ಬಸವಾರಾಧ್ಯರ ಪರಿಷ್ಕರಣದಲ್ಲಿ ಮೈಸೂರು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೨೫೩ನೆಯ ಸಂಖ್ಯೆಯ ಕಾಗದದ ಪ್ರತಿಯವೆಂದು ಪಾಠಾಂತರಗಳಾಗಿ ಉದಾಹರಿಸಲ್ಪಟ್ಟಿವೆ. ಆದ ಕಾರಣ ತ.ಸು. ಶಾಮರಾಯರು ತಮ್ಮ ಪರಿಷ್ಕರಣಕ್ಕಾಗಿ ಬಳಸಿಕೊಂಡಿರುವ ಪ್ರತಿ ಬಲುಮಟ್ಟಿಗೆ ಮೈಸೂರು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೨೫೩ನೆಯ ಸಂಖ್ಯೆಯ ಕಾಗದದ ಪ್ರತಿಯೇ ಆಗಿದೆ. ಪೀಠಿಕೆಯಲ್ಲಿ ರನ್ನ ಕಂದದ ಸಂಪಾದನೆಯಲ್ಲಿನ ಸಮಸ್ಯೆಗಳನ್ನು ಪ್ರಸ್ತಾಪಿಸಿದ್ದಾರೆ. ನಂತರ ರನ್ನ ಕಂದದ ಶಬ್ದಸೂಚಿ ಮತ್ತು ಅವುಗಳ ಅರ್ಥಗಳನ್ನು ಅನೇಕ ಪ್ರಶ್ನಾರ್ಥಕ ಚಿಹ್ನೆಗಳೊಡನೆ ನೀಡಿದ್ದಾರೆ. ಒಟ್ಟಿನಲ್ಲಿ ಗ್ರಂಥಸಂಪಾದನೆಗೆ ಬಳಸಲಾಗಿರುವ ಸಾಮಗ್ರಿಯನ್ನು ಮತ್ತು ಇತರ ವಿವರಗಳನ್ನು ಖಚಿತವಾಗಿ ನೀಡಿರುವುದಿಲ್ಲ.

ರನ್ನ ನಿಘಂಟಿನ ಎರಡನೆಯ ಪರಿಷ್ಕರಣವು ೧೯೭೬ ರಲ್ಲಿ ಎನ್. ಬಸವಾರಾಧ್ಯರ ಸಂಪಾದಕತ್ವದ 'ಹಳಗನ್ನಡ ನಿಘಂಟು' ಸಂಪುಟದಲ್ಲಿ ಪ್ರಕಟವಾಗಿದೆ. ಇದರಲ್ಲಿಯೂ ೧೧ ಸಂಪೂರ್ಣ ಪದ್ಯಗಳು, ಒಂದು ಅಸಮಗ್ರ ಪದ್ಯವು ಇದೆ. ಈ ಪರಿಷ್ಕರಣಕ್ಕೆ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೨೫೩ ನೆಯ ಸಂಖ್ಯೆಯ ಕಾಗದದ ಪ್ರತಿ ಮತ್ತು ತ.ಸು.ಶಾಮರಾಯರ ಪರಿಷ್ಕರಣಗಳೇ ಆಧಾರ ಎಂದು ತಿಳಿಸಿ ತ.ಸು. ಶಾಮರಾಯರ ಪರಿಷ್ಕರಣದ ಪಾಠಗಳನ್ನೇ ಉಳಿಸಿಕೊಳ್ಳಲಾಗಿದೆ ಎಂದು ಗ್ರಂಥಸಂಪಾದನೆಯ ರೀತಿಯನ್ನು ಹೇಳಿರುತ್ತಾರೆ[೮]. ಆದರೆ ಈ ಪರಿಷ್ಕರಣವನ್ನೂ ತ.ಸು. ಶಾಮರಾಯರ ಪರಿಷ್ಕರಣವನ್ನೂ ಪರಸ್ಪರ ಹೋಲಿಸಿದಾಗ ಅಲ್ಲಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತಿವೆ. ಕೆಲವು ಉದಾಹರಣೆಗಳ ಮೂಲಕ ಇದನ್ನು ಈ ಕೆಳಗೆ ಸ್ಪಷ್ಟಪಡಿಸಲಾಗಿದೆ (ಪಕ್ಕದ ಪುಟದಲ್ಲಿ).

ತ.ಸು. ಶಾಮರಾಯರ ಪರಿಷ್ಕರಣದಲ್ಲಿ ಸೂಚಿಸಿರುವ ಪ್ರಶ್ನಾರ್ಥಕ ಚಿಹ್ನೆಗಳು ಈ ಪರಿಷ್ಕರಣದಲ್ಲಿ ಲೋಪವಾಗಿವೆ, ಒಂದೆರಡನ್ನು ಹೊರತುಪಡಿಸಿ. ತ.ಸು. ಶಾಮರಾಯರ ಪರಿಷ್ಕರಣದಲ್ಲಿನ ಸಂಪಾದಕ ನಿಯೋಜಿತ ಚೌಕಕಂಸಗಳು ಬಸವಾರಾಧ್ಯರ ಪರಿಷ್ಕರಣದಲ್ಲಿ ಇಲ್ಲ. ತ.ಸು. ಶಾಮ ರಾಯರು ಪಾಠಾಂತರಗಳನ್ನು ಸೂಚಿಸುವಾಗ ಒಂದೆಡೆ ಮಾತ್ರ ಕವಿಚರಿತೆಯ ಪಾಠಗಳನ್ನು ಕೂಡ ಗಮನಿಸಿ ಅವುಗಳನ್ನು ಪಾಠಾಂತರವಾಗಿ ನೀಡಿದ್ದಾರೆ. ಬಸವಾರಾಧ್ಯರ ಪರಿಷ್ಕರಣದಲ್ಲಿ ಕವಿಚರಿತೆಯ ಪಾಠಗಳು ದಾಖಲಾಗಿಲ್ಲ ಮತ್ತು ಅವುಗಳ ಬಗೆಗೆ ಉಲ್ಲೇಖವೇ ಇಲ್ಲ. ತ.ಸು. ಶಾಮ ರಾಯರ ಪರಿಷ್ಕರಣದ ಪಾಠಗಳನ್ನೇ ಉಳಿಸಿಕೊಳ್ಳಲಾಗಿದೆ

| ಪದ್ಯ ಸಂಖ್ಯೆ | ತ. ಸು. ಶಾಮರಾಯರ ಪರಿಷ್ಕರಣ | ಎನ್. ಬಸವಾರಾಧ್ಯರ ಪರಿಷ್ಕರಣ |
|---|---|---|
| ೨ | ಬರೆಯೆನಲತ್ರ್ಯರ್ಥಂ [ಮು<br>ಮ್ಮು]ರಿಯೆನೆ ಕಾಸಿದ ಮಟೆ[ಲ್ಕಿ]ಬಂಗೆನೆ ಗೆಬಸು[ಂ] | ಬರೆಯೆನಲತ್ರ್ಯರ್ಥಂ [ಮು<br>ಮ್ಮು]ರಿಯೆನೆ ಕಾಸಿದಮಳಲ್ಕಿಬಂಗೆನೆ ಗೆಬಸು[ಂ] |
| ೩ | ಹಕ್ಕಿಯೆನಲ್ವಿಹಗಂ ನೆರಲ್<br>[ವ]ಕ್ಕೆಯೆನಲ್ಪಾಸು ಕುಂಟೆಯೆಂದೆನೆ ಮೊಬಿಕಾಲ್<br>. . . . . . . . . . . . . . . . .<br>ಕುಕ್ಕೆನೆ ದಿಂಡುವಿಡಿದು ಬಪ್ಪುದು[ಮ]ಕ್ಕುಂ | ಹಕ್ಕಿಯೆನಲ್ ವಿಹಗಂ ನೆರಲ್<br>[ವ]ಕ್ಕೆಯೆನಲ್ ಪಾಸು ಕುಂಟೆಯೆಂದೆನೆ ಮೊಬಿಕಾಲ್<br>ಕುಕ್ಕೆನೆ ದಿಂಡುವಿಡಿದು ಬ<br>. . . . . ಪ್ಪುದುದಕ್ಕುಂ |
| ೧೦ | ಕೈವಟ್ಟಲೆಟ್ಟುಗೆ ಮುಡಿ ಪೂ<br>ಯಿ[ೀ] ವೆಕ್ಕಲ್ ಪೊಯಿನಿಲಂ ಮಡಂದಲೆ ಜೋಳಂ<br>ಕೈವಲೆ ಕಣ್ಣಗೆ ಜರಿಸುಳಿ<br>ಕೈವಿಡಿಯೆಂಬುದನೆ ತಿಳಿಯೆ ಕಬ್ಬಿಗರರಸಾ | ಕೈವಟ್ಟಲೆಟ್ಟುಗೆ ಮುಡಿ ಪೂ<br>ಯಿ ವೆಕ್ಕಲ್ ಪೊಯಿನಿಲಂ ಮಡಂದಲೆ ಜೋಳಂ<br>ಕೈವಲೆ ಕಣ್ಬಲೆ ಬರಿ ಸುಳಿ<br>ಕೈವಿಡಿಯೆಂಬುದನೆ ತಿಳಿಯೆ ಕಬ್ಬಿಗರರಸಾ |
| ೧೧ | ಬ[ಲ]ಯಂಮೆನೆ ತಲೆವಾಗಿಲು<br>ಕಲಗಲಮೆನೆ ಕೂಡೆ ಬೆರಸಿದ್ದಕ್ಕುಂ<br>ನೈಲಂಗಲಮೆನೆ ಚೆಲ್ವಿಕೆ<br>ಸಲೆ ಸೈಗಲ ಪುಣ್ಯಶಕ್ತಿಯೆಲೆ ಕವಿರತ್ನಾ | ಬ[ಲ]ಯಂಮೆನೆ ತಲೆವಾಗಿಲು<br>ಕಲಗಲಮೆನೆ ಕೂಡೆ ಬೆರಸಿದ್ದಕ್ಕುಂ ನೈಲಂ<br>ಗಲಮೆನೆ ಚೆಲ್ವಿಕೆ ಸಲೆ ಸೈ<br>ಗಲಮೆನೆ ತಾಂ ಪುಣ್ಯಶಕ್ತಿಯೆಲೆ ಕವಿರತ್ನಾ |

ಎಂದು ಹೇಳಿ ಯಾವ ಆಧಾರಗಳನ್ನೂ ನೀಡದೆ ಬೇರೆ ಪಾಠಗಳನ್ನು ನೀಡಿರುವ ಔಚಿತ್ಯವೇನೋ ತಿಳಿಯದು. ಹೆಚ್ಚಿನ ಪರಿಷ್ಕರಣವನ್ನು ಮಾಡಿದೆ ಎಂಬ ಸೂಚನೆಯನ್ನಾದರೂ ನೀಡಬಹುದಿತ್ತು. ಇಂತಹ ಹಲವು ಕಾರಣಗಳಿಂದ ಈ ಪರಿಷ್ಕರಣವು ಅನೇಕ ಗೊಂದಲಗಳಿಂದ ಕೂಡಿದೆ.

ಮೇಲ್ಕಂಡ ಎರಡೂ ಪರಿಷ್ಕರಣಗಳ ಬಳಿಕ ೧೯೭೬ರಲ್ಲಿ ಎಂ.ಎಂ. ಕಲಬುರ್ಗಿಯವರು ತಮಗೆ ಇಂದಿನ ಮಹಾರಾಷ್ಟ್ರದಲ್ಲಿನ ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದಲ್ಲಿ ಲಭಿಸಿದ ಎರಡು ತಾಳೆಗರಿ ಪ್ರತಿಗಳ ಸಹಾಯದಿಂದ ಈ ನಿಘಂಟಿನ ಪೂರ್ಣ ಪರಿಷ್ಕರಣವನ್ನು ಪ್ರಕಟಿಸಿದ್ದಾರೆ (ಪ್ರಕೃತ ಲೇಖನದಲ್ಲಿ ವಿವೇಚನೆಗಾಗಿ ಕಲಬುರ್ಗಿಯವರ ಬರಹಗಳ ಸಂಕಲನವಾದ ಮಾರ್ಗ-೧ ರಲ್ಲಿ ಪುನರ್‌ಮುದ್ರಣವಾಗಿರುವ ಪರಿಷ್ಕರಣವನ್ನು ಬಳಸಿ ಕೊಳ್ಳಲಾಗಿದೆ. ಈ ಮುದ್ರಣಕ್ಕೂ ಕರ್ನಾಟಕ ಭಾರತಿ ಪತ್ರಿಕೆಯಲ್ಲಿ ಪ್ರಕಟವಾಗಿರುವ ಮೊದಲ ಮುದ್ರಣಕ್ಕೂ ಯಾವುದೇ ವ್ಯತ್ಯಾಸವಿಲ್ಲ). ಈ ಪರಿಷ್ಕರಣದಲ್ಲಿ ೪೫ ಪದ್ಯಗಳಿಂದ ಕೂಡಿರುವ ರನ್ನ ನಿಘಂಟಿನ ಸಮಗ್ರ ಸ್ವರೂಪ ಪ್ರಕಟವಾಗಿದೆ. ಆದರೆ ಕಲಬುರ್ಗಿಯವರು ಈ ಹಸ್ತಪ್ರತಿಗಳ ಬಗೆಗೆ ಸಮಗ್ರವಾಗಿ, ಸರಿಯಾಗಿ ವಿವರಗಳೇನನ್ನೂ ನೀಡಿರುವುದಿಲ್ಲ. ಎಷ್ಟು ಪತ್ರಗಳನ್ನು ಒಳಕೊಂಡಿದೆ, ಇದರಲ್ಲಿರುವ ಪಂಕ್ತಿಗಳೆಷ್ಟು, ಶಕಟರೇಫದ ಬಳಕೆಯಿದೆಯೇ? ಹಸ್ತಪ್ರತಿಗಳ ಲಿಪಿ ಸ್ವರೂಪ, ಇದರ ಆಧಾರದ ಮೇಲೆ ತಕ್ಕಮಟ್ಟಿಗೆ ಮಾಡಲು ಸಾಧ್ಯವಾಗುವ ಹಸ್ತಪ್ರತಿಯ ಗ್ರಥನ ಕಾಲ ಮುಂತಾದ ಯಾವ ವಿವರಗಳನ್ನೂ ನೀಡಿರದ ಕಾರಣ ಹಸ್ತಪ್ರತಿಗಳ ಬಗೆಗೆ ಯಾವ ವಿಚಾರಗಳೂ ಸರಿಯಾಗಿ ತಿಳಿಯದಂತೆ ಆಗಿದೆ. ತ.ಸು. ಶಾಮರಾಯರು ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿ ದೊರೆತ ತಾಳೆಗರಿ ಪ್ರತಿಯನ್ನಾಧರಿಸಿ ತಮ್ಮ ಪರಿಷ್ಕರಣವನ್ನು ಹೊರತಂದಿದ್ದಾರೆ ಎಂದು ಬರೆದಿರುವುದಕ್ಕೆ ಏನು ಆಧಾರ? ಶಾಮರಾಯರು ತಾವು ಅವಲಂಬಿಸಿದ ಪ್ರತಿ ತಾಳೆಗರಿಯೇ ಅಥವಾ ಕಾಗದವೇ ಎಂಬುದನ್ನು ಹೇಳಿಯೇ ಇಲ್ಲ. ಕವಿ ಚರಿತೆಕಾರರು ನೋಡಿರುವ ಪ್ರತಿ ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿನದೇ ಬಹುಶಃ ಆಗಿರಬೇಕು ಎಂದು ಕಲಬುರ್ಗಿಯವರು ಹೇಳಿರುವುದಕ್ಕೆ ಯಾವ ಆಧಾರವೂ ಇಲ್ಲ. ಏಕೆಂದರೆ ಕವಿಚರಿತೆಕಾರರು ತಾವು ನೋಡಿದ ಅಸಮಗ್ರ ಪ್ರತಿಯಲ್ಲಿ ೧೨ ಪದ್ಯಗಳಿವೆ ಎಂದು ಸ್ಪಷ್ಟವಾಗಿ ಬರೆದಿದ್ದಾರೆ. ಒಟ್ಟಿನಲ್ಲಿ ಈ ಪರಿಷ್ಕರಣದಲ್ಲಿಯೂ ಗ್ರಂಥಸಂಪಾದನೆಯ ಸಾಮಗ್ರಿಯನ್ನು ಸರಿಯಾಗಿ ನೀಡಿಲ್ಲದಿರುವುದು ದೊಡ್ಡ ಕೊರತೆಯಾಗಿದೆ.

ಕಲಬುರ್ಗಿಯವರು ತಮ್ಮ ಸಂಪಾದನೆಯ ಕ್ರಮವನ್ನು ಕುರಿತು "ಎರಡು ಪ್ರತಿಗಳು ಸಿಕ್ಕರೂ ಈ ಕೃತಿಯ ಶುದ್ಧಪಾಠವನ್ನು ಪ್ರಕಟಿಸುವುದು ಸಾಧ್ಯವಾಗುವುದಿಲ್ಲ. ಇದಕ್ಕೆ ಕಾರಣ ಇಲ್ಲಿ ಹತ್ತನೆಯ ಶತಮಾನದ ಹೊತ್ತಿಗೆ ಬಳಕೆ ತಪ್ಪಿರಬಹುದಾದ ಮತ್ತು ಕನ್ನಡ ಕಾವ್ಯಗಳಲ್ಲಿ ಅಷ್ಟಾಗಿ ಬಳಕೆಯಾಗದ ಅಪರೂಪ ಪದಗಳಿರುವುದು. ಹೀಗಾಗಿ ಈಗ ಎರಡೂ ಹಸ್ತಪ್ರತಿಗಳ ಸರ್ವಪಾಠಗಳನ್ನು ಕೊಡಲಾಗಿದೆಯೇ ಹೊರತು ಪರಿಷ್ಕರಣ ಸಾಹಸಕ್ಕೆ ಕೈಹಾಕಿಲ್ಲ. ತಮಿಳು ಮತ್ತು

ಹಳಗನ್ನಡಗಳ ವಿಶೇಷ ಹಿನ್ನೆಲೆಯಿರುವ ವಿದ್ವಾಂಸರು ಈ ಭಿನ್ನಪಾಠಗಳ ಬಲದಿಂದ ಶುದ್ಧಪಾಠವನ್ನು ನಿರ್ಣಯಿಸುವ ಕಾರ್ಯವನ್ನು ಮಾಡುವರೆಂದು ನಂಬಿದ್ದೇನೆ" ಎಂದು ಹೇಳಿರುತ್ತಾರೆ.

ಆದರೆ ಅವರು ನೀಡಿರುವ ಪದ್ಯವನ್ನು ಪರಿಶೀಲಿಸಿದರೆ ಅವರು ಅಲ್ಲಲ್ಲಿ ಪಾಠಪರಿಷ್ಕರಣಕ್ಕೆ ಕೈಹಾಕಿದ್ದಾರೆಂಬುದು ತಿಳಿಯುತ್ತದೆ. ಅಲ್ಲಲ್ಲಿ ಚೌಕಕಂಸದೊಳಗಿರುವ ಪಾಠಗಳು ಊಹಾಪಾಠಗಳಾಗಿವೆ. ಇದನ್ನು ಕೂಡ ಸ್ಪಷ್ಟವಾಗಿ ಸೂಚಿಸಿಲ್ಲ. ಕಲಬುರ್ಗಿಯವರು ಒಂದು ಪ್ರತಿಯನ್ನು ಆಧಾರಪ್ರತಿಯನ್ನಾಗಿ ಇಟ್ಟುಕೊಂಡು ಮತ್ತೊಂದು ಪ್ರತಿಯ ಪಾಠಗಳನ್ನು ಪಾಠಾಂತರವಾಗಿ ನೀಡಿದ್ದರೆ ಯಾವುದೇ ಗೊಂದಲಗಳಿಗೂ ಅವಕಾಶವಿರುತ್ತಿರಲಿಲ್ಲ. ಈಗ ಅವರು ನೀಡಿರುವ ಪಾಠ ಎರಡೂ ಪ್ರತಿಗಳ ಮಿಶ್ರಪಾಠಗಳಿಂದ ಕೂಡಿದೆ. ಜೊತೆಗೆ ಪಾಠಾಂತರಗಳನ್ನು ದಾಖಲಿಸಿರುವ ರೀತಿ ಗೊಂದಲಕಾರಿಯಾಗಿದೆ. ಈ ವಿಧಾನದಿಂದ ಪಾಠಾಂತರಗಳ ಪರಿಶೀಲನೆಗೆ ತುಂಬಾ ತೊಡಕಾಗುತ್ತದೆ. ಜೊತೆಗೆ ಈ ಪಾಠಾಂತರಗಳು ಯಾವ ರೀತಿಯಿಂದಲೂ ಪ್ರಯೋಜನಕ್ಕೆ ಬಾರದಂತಹವುಗಳಾಗಿವೆ. ಅಚ್ಚಿನ ದೋಷಗಳೂ ಸಾಕಷ್ಟಿವೆ. ಇದೇ ರೀತಿ ಕೆಲವು ಕಡೆ ಅರ್ಥವಾಗದ, ಸಂದಿಗ್ಧವಾದ, ಪ್ರಾಸ ಮತ್ತು ಛಂದೋದೋಷವುಳ್ಳ ಪದ್ಯಗಳ ತೊಡಕುಗಳನ್ನೂ ಟಿಪ್ಪಣಿಗಳಲ್ಲಿ ಸೂಚಿಸಬೇಕಿತ್ತು. ಒಟ್ಟಿನಲ್ಲಿ ಈ ಪರಿಷ್ಕರಣದಿಂದಲೂ ಕೂಡ ಹೆಚ್ಚಿನ ಪ್ರಯೋಜನ ಪಡೆಯಲು ಸಾಧ್ಯವಾಗುವುದಿಲ್ಲ.

ಕಲಬುರ್ಗಿಯವರ ಪರಿಷ್ಕರಣವನ್ನೇ ಆಧಾರವಾಗಿ ಇಟ್ಟುಕೊಂಡು ೨೦೦೭ರಲ್ಲಿ ಮತ್ತೊಂದು ಪರಿಷ್ಕರಣ ಪ್ರಕಟವಾಗಿದೆ. ಇದರ ಸಂಪಾದಕರು ಹಂ.ಪ. ನಾಗರಾಜಯ್ಯನವರು. ಇದರಲ್ಲಿಯೂ ಯಾವುದೇ ಪರಿಷ್ಕರಣ ನಡೆದಿರುವುದಿಲ್ಲ. ಪ್ರಸ್ತಾವನೆಯಲ್ಲಿ ಈ ನಿಘಂಟಿನ ಬಗೆಗೆ ಕಿರು ಮಾಹಿತಿಯಿದೆ ಮತ್ತು ಎರಡು ಪದ್ಯಗಳ ಒಂದೊಂದು ಸಾಲುಗಳಿಗೆ ತಿದ್ದುಪಡಿ ಸೂಚಿಸಿರುವುದನ್ನು ಬಿಟ್ಟರೆ ಮತ್ತೇನೂ ಮಾಹಿತಿಯಿಲ್ಲ. ಹಸ್ತಪ್ರತಿಗಳ ಬಗೆಗೆ ಬರೆಯುತ್ತಾ "ಕವಿಚರಿತೆಕಾರರಿಗೆ ದೊರೆತ ಓಲೆಗರಿ ಪ್ರತಿಯಲ್ಲದೆ ಕೊಲ್ಲಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದಲ್ಲಿನ ಎರಡು ತಾಳೆಗರಿ ಪ್ರತಿಗಳೂ ಅಸಮಗ್ರವಾಗಿವೆ" ಎಂದು ಹೇಳಿರುವುದು[೧೦] ಸಮರ್ಥನೀಯವಲ್ಲ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿನ ಪ್ರತಿಯೇ ಕವಿಚರಿತೆಕಾರರು ನೋಡಿರುವ ಪ್ರತಿ ಎಂಬುದು ಸರಿಯಲ್ಲ. ಕೊಲ್ಲಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದಲ್ಲಿನ ಎರಡು ತಾಳೆಗರಿ ಪ್ರತಿಗಳೂ ಅಸಮಗ್ರ ಎಂದು ಹೇಳಿರುವುದಕ್ಕೆ ೪೫ನೆಯ ಪದ್ಯ ಎರಡು ಪಾದಗಳನ್ನು ಮಾತ್ರ ಉಳ್ಳ ಚಂಪಕಮಾಲೆಯಾಗಿರುವುದೇ ಆಗಿದೆ. ಇದು ಕೂಡ ಸರಿಯೆಂದು ಹೇಳುವ ಹಾಗಿಲ್ಲ. ಈ ಪರಿಷ್ಕರಣದಲ್ಲಿಯೂ ಅಚ್ಚಿನ ದೋಷಗಳೂ, ಪದಚ್ಛೇದ ದೋಷಗಳೂ ಹೇರಳವಾಗಿವೆ. ಕಲಬುರ್ಗಿಯವರ ಪರಿಷ್ಕರಣದಲ್ಲಿನ ಅಚ್ಚಿನ ದೋಷಗಳು ಇಲ್ಲಿಯೂ ಪುನರಾವೃತ್ತಿಯಾಗಿವೆ, ಒಂದೆರಡು ಕಡೆ ಹೊರತುಪಡಿಸಿ. ಕಲಬುರ್ಗಿಯವರ ಪರಿಷ್ಕರಣದಲ್ಲಿನ ಊಹಾಪಾಠಕ್ಕೆ ನಿಯೋಜಿತವಾದ ಚೌಕಕಂಸಗಳನ್ನು ಇಲ್ಲಿ ಬಿಟ್ಟುಬಿಡಲಾಗಿದೆ. ಉದಾಹರಣೆಗೆ ಒಂದು ಪದ್ಯವನ್ನು (ಪದ್ಯ-೯) ಕೆಳಗೆ ನೀಡಲಾಗಿದೆ.

| **ಕಲಬುರ್ಗಿಯವರ ಪರಿಷ್ಕರಣ** |
|---|
| ಅಜಿಲೆನೆ ತಾರಗೆ ತಿಟ್ಟಂ<br>ದು [ಜ಼ ಬಲ್ ಬೈಗುಳಿನಿಸು ನನಸೆಂ]ದೆನೆ ದಿಟಮುಂ<br>ಗಜಿವೂವೆನೆ ಕೇದಗೆ ಪಡಿ<br>ಯಜಿವಕ್ಕಿಯೆನೆಯೆನಲ್ಕೆ ಕೋಕಿಲನಕ್ಕುಂ |
| **ಹಂ.ಪ.ನಾ ಅವರ ಪರಿಷ್ಕರಣ** |
| ಅಜಿಲೆನೆ ತಾರಗೆ ತಿಟ್ಟಂ<br>ದುಜ಼ ಬಲ್‌ಬೈಗುಳಿನಿಸು ನನಸೆಂದೆನೆ ದಿಟಮುಂ<br>ಗಜಿವೂವೆನೆ ಕೇದಗೆ ಪಡಿ<br>ಯಜಿವಕ್ಕಿಯೆನೆಯೆನಲ್ಕೆ ಕೋಕಿಲನಕ್ಕುಂ |

ಕಲಬುರ್ಗಿಯವರ ಪರಿಷ್ಕರಣದ ದೋಷಗಳೇ ಇಲ್ಲಿಯೂ ಇರುವುದರಿಂದ ಈ ಪರಿಷ್ಕರಣವೂ ಹೆಚ್ಚಿನ ಪ್ರಯೋಜನಕಾರಿಯಾಗದು.

ಮೇಲ್ಕಂಡ ನಾಲ್ಕೂ ಪರಿಷ್ಕರಣಗಳ ಸಂಪಾದಕರು ಹಸ್ತಪ್ರತಿಗಳನ್ನು ಸಮರ್ಪಕವಾಗಿ ಬಳಸಿಕೊಂಡಿರುವುದಿಲ್ಲ ಮತ್ತು ಅವುಗಳ ಬಗೆಗೆ ಸರಿಯಾದ ಮಾಹಿತಿಯನ್ನೂ ನೀಡಿರುವುದಿಲ್ಲ. ಛಂದೋದೋಷಗಳು, ಅಚ್ಚಿನ ತಪ್ಪುಗಳು ಹಾಗೆಯೇ ಉಳಿದುಕೊಂಡಿವೆ. ಜೊತೆಗೆ ಸಂಪಾದಕೀಯ ವಿಚಕ್ಷಣೆಯ ಕೊರತೆಯೂ ಕಂಡುಬರುತ್ತಿದೆ. ಕವಿಚರಿತ್ರೆಯನ್ನು ಕೂಡ ಸರಿಯಾಗಿ ನಿರೂಪಿಸಿರುವುದಿಲ್ಲ. ಒಟ್ಟಿನಲ್ಲಿ ಅಶುದ್ಧ, ಅಸಮರ್ಪಕ ಹಸ್ತಪ್ರತಿಗಳ ದೆಸೆಯಿಂದ ನಾಲ್ಕೂ ಪರಿಷ್ಕರಣಗಳು ಅನೇಕ ಲೋಪದೋಷಗಳಿಂದ ಕೂಡಿವೆ.

ರನ್ನ ನಿಘಂಟಿನ ಬಗೆಗೆ ಜಿ. ವೆಂಕಟಸುಬ್ಬಯ್ಯನವರು ತಮ್ಮ 'ಕನ್ನಡ ನಿಘಂಟು ಪರಿವಾರ' ಎಂಬ ಕೃತಿಯಲ್ಲಿ ಹಳೆಯ ಕನ್ನಡ ನಿಘಂಟುಗಳ ಕಿರು ಚರಿತ್ರೆ ಎಂಬ ಅಧ್ಯಾಯದಲ್ಲಿ[೧೧] ನೀಡಿರುವ ಮಾಹಿತಿಗಳು ಮತ್ತು ಇತರ ವಿವರಗಳನ್ನು ಇಲ್ಲಿ ವಿಮರ್ಶಿಸಲಾಗಿದೆ.

೧. ತ.ಸು. ಶಾಮರಾಯರು ರನ್ನ ನಿಘಂಟನ್ನು ೧೯೬೪ಳ ರಲ್ಲಿ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ ಎಂದು ಬರೆದಿರುವುದು ಬಹುಶಃ ಮುದ್ರಣ ದೋಷವಿರಬೇಕು.

ತ.ಸು. ಶಾಮರಾಯರ ಸಂಪಾದಕತ್ವದ ರನ್ನ ನಿಘಂಟು

ಮೊದಲು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದದ್ದು ೧೯೪೬ ರಲ್ಲಿ.

೨. ಈ ನಿಘಂಟಿನ ಪ್ರಕಟನೆಯ ವಿವರಗಳನ್ನು ನೀಡಿಯೇ ಇರುವುದಿಲ್ಲ.

೩. ರನ್ನ ಕವಿ ಈ ನಿಘಂಟನ್ನು ಬರೆದಿದ್ದಾನೆ ಎಂದು ಸೂಚಿಸಲಾಗಿದೆಯೇ ಹೊರತು ಕವಿಚರಿತ್ರೆಯನ್ನು ಸರಿಯಾಗಿ ಕೊಟ್ಟಿರುವುದಿಲ್ಲ.

೪. ಈ ನಿಘಂಟಿನ ಹೆಸರನ್ನು ರನ್ನಕಂದ ಎಂದೇ ಉದ್ದಕ್ಕೂ ಬಳಸಲಾಗಿದೆ. ರನ್ನ ನಿಘಂಟು ಎಂದು ಇದ್ದರೆ ಸೂಕ್ತವಾಗಿರುತ್ತಿತ್ತು.

೫. ಅಲ್ಲಲ್ಲಿ ಬಳಸಿಕೊಂಡಿರುವ ಇತರ ಆಕರಗಳನ್ನು ಹೇಳಿರುವುದಿಲ್ಲ.

೬. ಈ ನಿಘಂಟಿನ ಒಂದು ಪದ್ಯವನ್ನು ಪರಿಷ್ಕರಿಸಿ ಕೊಟ್ಟಿದ್ದಾರೆ. ಅದರ ಪರಿಷ್ಕರಣದ ಬಗೆಗೆ ಇಲ್ಲಿ ವಿಶ್ಲೇಷಿಸಬಹುದಾಗಿದೆ.

**ಬದ್ದರನೆನೆ ಬದುಕಿದಪಂ**
**ಕದ್ದರನೆನೆ ಕಳ್ಳನೆದ್ದರೆನಲೋಡಿದಪಂ**
**ಬಿದ್ದಿಗನೆನೆ ನಂಟು ಕೈ**
**ಗುದ್ದಿಗನೆನೆ ಮಲ್ಲರೆಂಬುದೆಲೆ ಕವಿರತ್ನಾ ॥ ೨೮ ॥**

ಈ ಪದ್ಯವನ್ನು ಜಿ. ವೆಂಕಟಸುಬ್ಬಯ್ಯನವರು ಪರಿಷ್ಕರಿಸಿ ಅದರ ಪಾಠವನ್ನು ಕೆಳಗೆ ನೀಡಿರುವಂತೆ ದಾಖಲಿಸಿದ್ದಾರೆ. ನಂತರ ತಮ್ಮ ಪರಿಷ್ಕರಣದ ಸಮರ್ಥನೆಗೆ ವಿವರಣೆಯನ್ನು ನೀಡಿದ್ದಾರೆ. ಅದನ್ನೂ ಕೆಳಗೆ ನೀಡಲಾಗಿದೆ.

**ಬಟ್ಟವನೆನೆ ಬದುಕಿದಪಂ**
**ಕಳ್ಳವನೆನೆ ಕಳ್ಳನೆದ್ದವನೆನೆಲೋಡಿದಪಂ**
**ಬಿದ್ದಿಗನೆನೆ ನೆಂಟಂ ಕೈ**
**ಗುದ್ದಿಗನೆನೆ ಮಲ್ಲನೆಂಬುದೆಲೆ ಕವಿರತ್ನಾ**

ಈ ಪದ್ಯದಲ್ಲಿ ಕೆಳಗೀರು ಎಳೆದಿರುವ ಶಬ್ದ ಬಟ್ಟಿ. ಇದು ಬಾಟ್ ಧಾತುವಿನ ಕೃದಂತ ರೂಪ. ಬಳಿಕ ನಾಮಪದವಾಗಿ ಬಟ್ಟವನೆಂದಾಗಬೇಕು. ಆದರೆ ದಕಾರ ಪ್ರಾಸವಿರುವ ಕಡೆ ಬದ್ದವನೆನೆ ಎಂದು ಇದ್ದರೂ, ಅದು ಬಟ್ಟಿ >ಬರ್ದ>ಬದ್ದ ಎಂದಾಗಿರಬೇಕು. ಶಬ್ದಗಳನ್ನು ನಿರೂಪಿಸುವಾಗ ಬಹುವಚನವನ್ನು ಸಾಮಾನ್ಯವಾಗಿ ನಿರೂಪಿಸಿರುವುದಿಲ್ಲ. ಆದುದರಿಂದ ಏಕವಚನದ ರೂಪಗಳನ್ನು ಆರಿಸಲಾಗಿದೆ. ಹೀಗಿರುವುದರಿಂದ ಈ ಪದ್ಯದ ಪೂರ್ಣಪಾಠ ಸರಿಯಾಗಿ ಕೈಗೆ ದೊರಕಿದಂತಾಗುತ್ತದೆ. ಕೈಗುದ್ದಿಗ ಎಂಬ ಹೊಸದಾದ ಪ್ರಾಚೀನ ಶಬ್ದ ನಮಗೆ ಸಿಕ್ಕಿದಂತಾಗುತ್ತದೆ.

ವೆಂಕಟಸುಬ್ಬಯ್ಯನವರ ಈ ಪರಿಷ್ಕರಣ ಸಮಾಧಾನಕರವಾಗಿ ತೋರುವುದಿಲ್ಲ. ಬಟ್ಟಿ ಶಬ್ದಕ್ಕೆ ಅವರು ಕೊಟ್ಟಿರುವ ವಿವರಣೆ ಸಮರ್ಪಕವಾಗಿಲ್ಲ. ಶಬ್ದಗಳನ್ನು ನಿರೂಪಿಸುವಾಗ ಬಹುವಚನವನ್ನು ಸಾಮಾನ್ಯವಾಗಿ ನಿರೂಪಿಸಿರುವುದಿಲ್ಲ ಆದುದರಿಂದ ಏಕವಚನದ ರೂಪಗಳನ್ನು ಆರಿಸಲಾಗಿದೆ ಎಂಬ ವಿವರಣೆ ಸಮರ್ಥನೀಯವಲ್ಲ. ಇದಕ್ಕೆ ಎಲ್ಲಿಯೂ ಆಧಾರಗಳಿಲ್ಲ. ಇದರಂತೆಯೇ ನಿಘಂಟು ರಚನೆಯಾಗಬೇಕೆಂಬ ನಿಯಮವೇನೂ ಇಲ್ಲ. ಬದುಕಿದಪಂ, ಕಳ್ಳನೆದ್ದವನೆನೆಲೋಡಿದವಂ ಇವು ನಡುಗನ್ನಡದ ಕಾಲದ ಶಬ್ದರೂಪಗಳು. ಬಿದ್ದಿಗ, ಕೈಗುದ್ದಿಗ ಈ ಶಬ್ದಗಳ ಅಸ್ತಿತ್ವವೇ ಕನ್ನಡ ಭಾಷೆಯಲ್ಲಿ ಮತ್ತು ೧೦ನೆಯ ಶತಮಾನದ ಕನ್ನಡ ಭಾಷೆಯಲ್ಲಿ ಸಂದೇಹಾಸ್ಪದ. ಇಲ್ಲಿ ಮೊದಲ ಪಾದದಲ್ಲಿ ಬರ್ದುಕು ಎಂದು ಪಾಠವಿರಬೇಕು. ಬರ್ದುಕು ಶಿಥಿಲದ್ವಿತ್ವ ಬಿದ್ದಿಗ ಶಬ್ದವು ಬಿರ್ದಿನ ಶಬ್ದದ ಅಪಲಿಖಿತವಾಗಿದೆ. ಬಿರ್ದಿನ ಶಬ್ದವು ಪಂಪಕವಿಯ ಪಂಪಭಾರತದಲ್ಲಿಯೇ ಪ್ರಯೋಗವಾಗಿದೆ ಹಾಗೂ ಈ ಶಬ್ದಕ್ಕೆ ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಯೋಗಗಳಿವೆ[೧೨]. ಗುರ್ದು ಶಬ್ದವು ಕನ್ನಡದ ಪ್ರಾಚೀನ ಲಭ್ಯ ಗದ್ಯಕೃತಿಯಾದ ವಡ್ಡಾರಾಧನೆಯಲ್ಲಿಯೂ ಇದೆ[೧೩]. ಗುರ್ದು–ಮುಷ್ಟಿತಾಡನೇ ಎಂದು ಶಬ್ದಮಣಿದರ್ಪಣದ ಧಾತುಪಾಠದಲ್ಲಿದೆ[೧೪]. ಆದ ಕಾರಣ ಕೈಗುರ್ದುಗ ಎಂಬ ಶಬ್ದವೇ ಸಮರ್ಥನೀಯ. ಈ ಎಲ್ಲಾ ಅಂಶಗಳ ವಿವೇಚನೆಯಿಂದ ಹಾಗೂ ಹತ್ತು, ಹನ್ನೊಂದನೆಯ ಶತಮಾನದ ಭಾಷಾಸ್ವರೂಪದಂತೆ ಈ ಪದ್ಯದ ಪರಿಷ್ಕೃತ ಪಾಠವು ಕೆಳಗೆ ಕಾಣಿಸಿರುವಂತೆ ಇರಬೇಕೆಂದು ತೋರುವುದು.

**ಬಟ್ಟವನೆನೆ ಬರ್ದುಕಿದಪಂ**
**ಕಳ್ದವನೆನೆ ಕಳ್ಳನೆಟ್ಟನೆನಲೋಡಿದವಂ**
**ಬಿರ್ದಿನನೆನೆ ನೆಂಟಂ ಕೈ**
**ಗುರ್ದುಗನೆನೆ ಮಲ್ಲನೆಂಬುದೆಲೇ ಕವಿರತ್ನಾ**

೭. ಕೈವಟ್ಟಲ್ ಸಟ್ಟುಗೆ–ಈ ಶಬ್ದಕ್ಕೆ ಮಂಗರಾಜನ ಅಭಿನವಾಭಿಧಾನಂ ನಿಘಂಟಿನಲ್ಲಿ ಕರಪಾತ್ರೆ ಕೈವಟ್ಟಲಕ್ಕು ಎಂದಿರುವುದು ತಪ್ಪು. ಆದರೆ ಕಿಟ್ಟೆಲ್ ಅವರ ನಿಘಂಟಿನಲ್ಲಿ ಕೈವಟ್ಟಲ್ ಎಂದರೆ ಸೌಟು ಎಂಬ ಅರ್ಥ ದಾಖಲಾಗಿದೆ ಇದೇ ಸರಿಯಾದದ್ದು ಎಂದು ವೆಂಕಟಸುಬ್ಬಯ್ಯನವರು ಬರೆದಿದ್ದಾರೆ. ಕಿಟ್ಟೆಲ್ಲರು ಕೆಯ್ ಶಬ್ದವನ್ನು ದಾಖಲಿಸಿ ಅದರ ಕೆಳಗೆ ಈ ಶಬ್ದದ ತತ್ಸಂಬಂಧಿ ಶಬ್ದಗಳು ಮುಂತಾದ ಅಂಶಗಳನ್ನು ಪ್ರಯೋಗ ಸಹಿತವಾಗಿ ದಾಖಲಿಸಿದ್ದಾರೆ. ಇಲ್ಲಿ ಕೆಯ್ವಟ್ಟಲ್. ಬಟ್ಟಲ್=ಕೆಯ್ಬಟ್ಟು. (ಕರಪಾತ್ರೆ, ಮಂಗರಾಜ ನಿಘಂಟು ೨೦೭) ಎಂದು ದಾಖಲಾಗಿದೆ[೧೫]. ಅಂದರೆ ಕೆಯ್ವಟ್ಟಲ್ ಶಬ್ದ ಕಿಟ್ಟೆಲ್ ನಿಘಂಟುವಿನಲ್ಲಿದೆಯೇ ಹೊರತು ಕೈವಟ್ಟಲ್ ಅಲ್ಲ. ಸಟ್ಟುಗ ಶಬ್ದಕ್ಕೆ ರನ್ನ ನಿಘಂಟಿನಲ್ಲಿನ ದಾಖಲಾತಿಗಿಂತ ಪ್ರಾಚೀನ ಪ್ರಯೋಗ ಲಭ್ಯವಿದೆ.[೧೬]

ರನ್ನನಿಘಂಟಿಗೂ ಶಬ್ದಮಣಿದರ್ಪಣದ ಪ್ರಯೋಗ ಸಾರಕ್ಕೂ ಹೆಚ್ಚಿನ ಸಾಮ್ಯವಿದೆ. ಕೆಲವನ್ನು ಮಾತ್ರ ಇಲ್ಲಿ ತೋರಿಸಲಾಗಿದೆ.

| ರನ್ನ ನಿಘಂಟು | | ಶಬ್ದಮಣಿದರ್ಪಣ[೧೭] |
|---|---|---|
| ಮುಮ್ಮುರಿಯೆನೆ ಕಾಸಿದ ಮಳಲ್ | ॥ ೨ ॥ | ಮುಮ್ಮುರಿಯೆಂದು ಕಾಸಿದ ಮಳಲ್ |
| ಸಿರಿವಂತಿಕೆಯೆಂದೆನಲ್ಕೆ ಪುರಿಯೋಡಕ್ಕುಂ | ॥ ೨ ॥ | ಸಿರಿವಂತಿಗೆಯೆಂದು ಹುರಿಯೋಡು |
| ಬಲಮರ್ದನೆ ಅಂಕದೌಷದಂ | ॥ ೪ ॥ | ಬಳಮರ್ದೆಂದಂಕದೌಷಧಂ |
| ಗಜಿವೂವೆನೆ ಕೇದಗೆ | ॥ ೯ ॥ | ಗಜಿವೂವೆಂದು ಕೇದಗೆ |
| ಪಡಿಯಜಿವಕ್ಕಿಯೆನಲ್ಕೆ ಕೋಕಿಲನಕ್ಕು | ॥ ೯ ॥ | ಪಡಿಯಜಿವಕ್ಕಿಯೆಂದು ಕೋಕಿಲಂ |
| ಭಂಡಣಮೆನೆ ಪುಯ್ಯಲ್ | | ಬಂಡಣಮೆಂದು ಕಾಳಗಂ |
| ಗುಂಡೆನೆ ನೆರವಿ ತುಟಿಲ್ಪರಿ | | ಗುಂಡೆಂದು ನೆರವಿ |
| ಗೊಂಡನೆನಲ್ ವೀರರತನೆಲೇ ಕವಿರತ್ನಾ | ॥ ೧೪ ॥ | ತುಟಿಲೆಂದು ವೀರಮುಂ ಪೊಡವಡಿಕೆಯುಮಕ್ಕುಂ |
| ಬಾಗುಳಮೆಂದೆನೆ ದುಃಖ | ॥ ೨೭ ॥ | ಬಾಗುಳೆಂದು ವ್ಯಾಕುಳಂ |

ಮೇಲಿನ ಹೋಲಿಕೆಯನ್ನು ಗಮನಿಸಿದಾಗ ಕೇಶಿರಾಜ ಈ ನಿಘಂಟನ್ನು ಬಳಸಿಕೊಂಡಿರುವ ಸಾಧ್ಯತೆಯನ್ನು ಊಹಿಸಬಹುದಾಗಿದೆ. ಜೊತೆಗೆ 'ೞ' ಘಟಿತ ಶಬ್ದಗಳ ಪಟ್ಟಿ, ಧಾತುಪಾಠಗಳಲ್ಲಿಯೂ ರನ್ನ ನಿಘಂಟಿನ ಅನುಸರಣೆಯನ್ನು ಕಾಣಬಹುದು. ಇದರ ನೆರವಿನಿಂದ ರನ್ನ ನಿಘಂಟಿನ ಪರಿಷ್ಕರಣ ಮತ್ತು ಅರ್ಥವಿಶದತೆ ಸಾಧ್ಯವಾಗುತ್ತದೆ. ಱ ಮತ್ತು ೞ ಗಳ ಗೊಂದಲವನ್ನು ಪರಿಹರಿಸಬಹುದು. ರನ್ನ ನಿಘಂಟಿನ ಪಾಠಪರಿಷ್ಕರಣಕ್ಕೆ ಶಬ್ದಮಣಿದರ್ಪಣವು ಹೆಚ್ಚಿನ ನೆರವು ನೀಡುತ್ತದೆ. ಇದು ಅತ್ಯಂತ ಗಮನಾರ್ಹ ಅಂಶವಾಗಿದೆ. ರನ್ನ ನಿಘಂಟಿನ ಕೆಲವೆಡೆ ಸಣ್ಣಪುಟ್ಟ ಪರಿಷ್ಕರಣ ವನ್ನು ಮಾಡಲು ಧಾರಾಳವಾದ ಅವಕಾಶಗಳಿವೆ ಮತ್ತು ಅವಕಾಶವಿಲ್ಲದೆಡೆ ಟಿಪ್ಪಣಿಗಳ ಅಗತ್ಯವಿದೆ. ಇವುಗಳಲ್ಲಿ ಕೆಲವನ್ನು ಮಾತ್ರ ಮುಂದೆ ಸೂಚಿಸಲಾಗಿದೆ.

೧. ಕೆಲವು 'ೞ' ಘಟಿತ ಶಬ್ದಗಳ ಸಂದಿಗ್ಧತೆಯನ್ನು ಪರಿಹರಿಸಬಹುದು. ಉದಾಹರಣೆಗೆ : ಮಳೆಗಾಲಂ ಎಂಬುದನ್ನು ಮೞೆಗಾಲಂ (ಪದ್ಯ- ೧೩) ಎಂದು, ಪೇಳ್ದ ಎಂಬುದನ್ನು ಪೇೞ್ದ (ಪದ್ಯ–೨೩) ಎಂದೂ ನೆಗಳ್ದ ಎಂಬುದನ್ನು ನೆಗೞ್ದ (ಪದ್ಯ–೨೫, ೩೭) ಎಂದೂ ತಿದ್ದಬಹುದು. ೪೪ನೆಯ ಪದ್ಯದ ಎರಡನೆಯ ಪಾದದಲ್ಲಿ **ಕೂಡೆ ಬಾಳ್ದಪರ್** ಎಂಬುದು **ಕೂಡೆ ಬಾೞ್ದಪರ್** ಎಂದು ಇರಬೇಕು. ಬಾೞ್ = ಜೀವನ. ೨ ನೆಯ ಪದ್ಯದಲ್ಲಿ ಗೆಳಸುಂ ಎಂದು ಕಲಬುರ್ಗಿಯವರ ಮತ್ತು ಹಂ.ಪ. ನಾಗರಾಜಯ್ಯ ಅವರ ಪರಿಷ್ಕರಣಗಳಲ್ಲಿದೆ. ತ.ಸು. ಶಾಮರಾಯ ಮತ್ತು ಎನ್. ಬಸವಾರಾಧ್ಯರ ಪರಿಷ್ಕರಣಗಳಲ್ಲಿ ಗೆೞಸುಂ ಎಂದಿದೆ. ಕೇಶಿರಾಜನ ಶಬ್ದಮಣಿದರ್ಪಣದ 'ೞ' ಯುಕ್ತ ಶಬ್ದಗಳ ಪಟ್ಟಿಯಲ್ಲಿ 'ಗೆೞಸೆಂದು ಗೆಡ್ಡೆ' ಎಂದು ಹೇಳಿರುವುದರಿಂದ[೧೮] ರನ್ನ ನಿಘಂಟಿನಲ್ಲಿಯೂ ಗೆೞಸು ಎಂಬುದಾಗಿ ಶಬ್ದವಿರಬೇಕು. ೨ ನೆಯ ಪದ್ಯದಲ್ಲಿ ಮೊಳಕಾಲ್ ಎಂದಿರುವುದು ತ.ಸು. ಶಾಮರಾಯ ಮತ್ತು ಎನ್. ಬಸವಾರಾಧ್ಯರ ಪರಿಷ್ಕರಣಗಳಲ್ಲಿ ಮೊೞಕಾಲ್ ಎಂದಿದೆ. ಕೇಶಿರಾಜನ ಶಬ್ದಮಣಿದರ್ಪಣದ 'ೞ' ಶಬ್ದಗಳ ಪಟ್ಟಿಯಲ್ಲಿ 'ಮೊೞಕಾಲೆಂದು ಒಳ್ತೊಡೆಯ ಸಂದು' ಎಂದಿರುವುದರಿಂದ ರನ್ನ ನಿಘಂಟಿನಲ್ಲಿಯೂ ಮೊೞಕಾಲ್ ಎಂದೇ ಪಾಠವಿರಬೇಕು. ೬ನೆಯ ಪದ್ಯದ **ಬಳಿ** ಎಂಬುದು **ಬೞಿ** ಎಂದೂ ೧೪ನೆಯ ಪದ್ಯದ **ತುಳಿಲ್** ಎಂಬುದು **ತುೞಿಲ್** ಎಂದೂ ೨೧ನೆಯ ಪದ್ಯದ **ತಣ್ಬುಳಿಲ್** ಎಂಬುದು **ತಣ್ಬುೞಿಲ್** ಎಂದೂ ಇರಬೇಕು. **ಪಳಗೆಂದೆನೆ** ಎಂಬುದು **ಪೞಗೆಂದೆನೆ** ಎಂದೂ (ಪದ್ಯ–೨೭) **ಮಳಗನೆ** ಎಂಬುದು **ಮೊೞಗೆನೆ** (ಪದ್ಯ–೨೭) ಎಂದೂ ಇರಬೇಕು.

೨. ೩೧ನೆಯ ಪದ್ಯದ ಮೂರನೆಯ ಪಾದದಲ್ಲಿ ಶಕಟರೇಫ ಪ್ರಾಸವಿದ್ದು ಮಿಕ್ಕ ಪಾದಗಳಲ್ಲಿ ರೇಫ ಪ್ರಾಸವಿದೆ. ಇದನ್ನು ಸರಿಪಡಿಸಲು ಸದ್ಯದಲ್ಲಿ ಸಾಧ್ಯವಾಗುತ್ತಿಲ್ಲ. ೨೧ ನೆಯ ಪದ್ಯದ ಮೂರನೆಯ ಪಾದದ ಗರಕೆ ಎಂಬುದನ್ನು ಗಱಕೆ ಎಂದು ತಿದ್ದಿಕೊಂಡರೆ ಪ್ರಾಸ ಸರಿಹೊಂದುತ್ತದೆ.

೩. ಕೆಲವು ಪದ್ಯಗಳಲ್ಲಿ (ಪದ್ಯ–೨೦, ೨೩, ೨೭, ೨೯) ಪ್ರಾಸ ಸಂಪೂರ್ಣವಾಗಿ ಕೆಟ್ಟಿದೆ. ಇವುಗಳ ಪರಿಷ್ಕರಣ ಸಾಧ್ಯವಾಗುತ್ತಿಲ್ಲ.

೪. ೭, ೨೦ ಮತ್ತು ೨೧ ನೆಯ ಪದ್ಯಗಳಲ್ಲಿನ ಸಾಸವ ಎಂಬುದು ಸೌಸವ ಎಂದಿರಬೇಕು. ಸೌಸವ=ಕಂಪು. ೭ ನೆಯ ಪದ್ಯದ ಪಾಠ ಹಂ.ಪ. ನಾಗರಾಜಯ್ಯ ಅವರ ಪರಿಷ್ಕರಣದಲ್ಲಿ ಸೌಸಾಸವಮೆನೆ ಎಂದು ತಪ್ಪಾಗಿ ಅಚ್ಚಾಗಿದೆ. ತ.ಸು. ಶಾಮರಾಯ ಮತ್ತು ಎನ್. ಬಸವಾರಾಧ್ಯರ ಪರಿಷ್ಕರಣಗಳಲ್ಲಿ ಸೌಸವ ಪಾಠವನ್ನು ಸಂಪಾದಕರ ಪಾಠವಾಗಿ ಚೌಕ ಕಂಸದೊಳಗೆ ಸೂಚಿಸಲಾಗಿದೆ.

೫. ಹಲವು ಪದ್ಯಗಳಲ್ಲಿ (ಉದಾಹರಣೆಗೆ ಪದ್ಯ – ೫, ೮, ೯, ೧೧, ೧೪, ೨೩, ೪೨) ಛಂದೋದೋಷವಿದ್ದು ೧೪ ನೆಯ ಪದ್ಯದ್ದನ್ನು ಮಾತ್ರ ಕಲಬುರ್ಗಿಯವರು ಗುರುತಿಸಿ ಸೂಚಿಸಿದ್ದಾರೆ. ೫ ನೆಯ ಪದ್ಯದ ಪಾಠವಿಂತಿದೆ.

**ಅಂಚಮೆನಲ್ಕಂಜಿಕೆಯುತಿ**
**ಬಂಚನೆಯೆನೆ ಮರಸಿಡಕ್ಕು ಬೆಳಕೆನೆ ದೀಪಂ**
**ಪೊಂಚೆನೆ ಪೊರ್ದಿದ ಬಗೆ ವಾ**
**ನೆಂಚಲೆನಲ್ಕೆಂಜಕಲಪ್ಪುದೆಲೆ ಕವಿರತ್ನಾ**

ಈ ಪದ್ಯದ ಮೊದಲ ಮೂರು ಪಾದಗಳಲ್ಲಿಯೂ ಛಂದಸ್ಸಿನ ಮಟ್ಟಿಗೆ ಯಾವುದೇ ಕ್ಲೇಶವಿಲ್ಲ. ನಾಲ್ಕನೆಯ ಪಾದದಲ್ಲಿ ಛಂದಸ್ಸು ಕೆಟ್ಟಿದೆ. ಇದನ್ನು **'ವಾ। ನೆಂಚಲೆನಲ್ಕೆಂಜಲಪ್ಪುದೆಲೆ ಕವಿರತ್ನಾ'** ಎಂದು ತಿದ್ದಿಕೊಂಡರೆ ಛಂದಸ್ಸು ಸರಿಹೊಂದುತ್ತದೆ. ೮ ನೆಯ ಪದ್ಯದ ಪಾಠವಿಂತಿದೆ

**ಸುಗಿಪಪುಮೆನೆ ಸುಲಿಹಂ ತಾ**
**ತೆಗಳೆನೆ ಪೆಗಳುಳ್ಮಿತೆಂದೆನಲ್ಪುದುಮಂ ತಾಂ**
**ಬಗಸೆನೆ ಮನವಿಟ್ಟುದು ಮುಂ**
**ನ್ನೆಗಮದೆನಲ್ ದೊಡ್ಡಿತಪ್ಪುದೆಲೆ ಕವಿರತ್ನಾ**

ಈ ಪದ್ಯದ ಮೊದಲೆರಡು ಸಾಲುಗಳ ಪಾಠ ಲಿಪಿಕಾರ ಸ್ಖಾಲಿತ್ಯಗಳ ದೆಸೆಯಿಂದ ಯಾವುದೇ ರೀತಿಯಿಂದಲೂ ಅರ್ಥವಾಗುವುದಿಲ್ಲ. ಶಬ್ದಮಣಿದರ್ಪಣ ಮತ್ತು ಇತರ ಆಧಾರಗಳಿಂದ ಇದನ್ನು ಪರಿಷ್ಕರಿಸಬಹುದು. ಉಗಿಪಟಮೆಂದು ಸುಲಿಹಂ ಎಂದು ಶಬ್ದಮಣಿದರ್ಪಣದ ಪ್ರಯೋಗ ಸಾರದಲ್ಲಿದೆ[೧೯]. ಕೇಶಿರಾಜ ರನ್ನ ನಿಘಂಟನ್ನು ಅನುಸರಿಸಿರುವ ಸಾಧ್ಯತೆಗಳು ನಿಚ್ಚಳವಾಗಿ ಇರುವ ಕಾರಣ ರನ್ನ ನಿಘಂಟಿನಲ್ಲಿ **ಉಗಿಪಟಮೆನೆ ಸುಲಿಹಂ** ಎಂದೇ ಮೂಲಪಾಠವಿದ್ದಿರಲೂಬಹುದು. ಸುಗಿಪು ಎಂದರೆ ಸುಲಿಗೆ, ಕಿತ್ತುಕೊಳ್ಳು ಎಂದರ್ಥ. ತೆಗಲೆಯೆಂದು ಪೆಗಲ್ ಎಂದು ಶಬ್ದಮಣಿದರ್ಪಣದ ಪ್ರಯೋಗಸಾರದಲ್ಲಿದೆಯಾದ[೨೦] ಕಾರಣ ರನ್ನ ನಿಘಂಟಿನಲ್ಲಿನ ಪಾಠವೂ ಇದಕ್ಕನುಗುಣವಾಗಿಯೇ ಇರಬಹುದಾದ ಸಾಧ್ಯತೆಯಿದೆ. ತೆಗಲು ಎಂದರೆ ಹೆಗಲು ಎಂದರ್ಥ. ಉಳ್ಮಿತೆಂದನಲ್ ಪುದುಮಂ ಎಂಬುದು ಸರಿಯಲ್ಲ. ಉಣ್ಮು ಎಂಬುದು ಳ > ಣ ಅಥವಾ ಣ > ಳ ವ್ಯತ್ಯಯದ ಕಾರಣದಿಂದ ಉಳ್ಮು ಎಂದಾಗಿದೆ. ಉಣ್ಮು – ಉದ್ಗತೌ ಎಂದು ಶಬ್ದಮಣಿದರ್ಪಣದ ಧಾತುಪಾಠದಲ್ಲಿದೆ[೨೧]. ಉದ್ಗತೌ ಎಂದರೆ ಹರಡು, ವ್ಯಾಪಿಸು ಎಂದರ್ಥವಿದೆ. ಪುದುಮಂ ಎಂದಿರುವುದು ಪುದಿಗುಂ ಎಂದಿರಬೇಕೆಂದು ತೋರುವುದು. ಆಗ ಪುದಿಗು–ಆವರಿಸು, ವ್ಯಾಪಿಸು ಎಂದು ಅರ್ಥ ಸಮರ್ಪಕವಾಗಿ ಹೊರಡುತ್ತದೆ. ಬಗಸು ಎಂದರೆ ಆಸೆ ಎಂದರ್ಥ. ಮುನ್ನೆಗ ಶಬ್ದಕ್ಕೆ ದೊಡ್ಡಿತ ಎಂದು ಅರ್ಥ ನೀಡಲಾಗಿದೆ. ದೊಡ್ಡಿತು ಎಂದರೆ ದೊಡ್ಡದಾದ, ಹಿರಿದಾದ ಎಂಬುದಾಗಿ ಅರ್ಥವಿದೆ. ಆದರೆ ಮುನ್ನೆಗ ಶಬ್ದಕ್ಕೆ ದೊಡ್ಡದು ಎಂಬ ಅರ್ಥವಿದೆಯೇ ವಿಚಾರಣೀಯ. ಇದರ ಬಗೆಗೆ ಅಧ್ಯಯನ ಅತ್ಯಗತ್ಯ. ಈ ಎಲ್ಲಾ ಅಂಶಗಳ ವಿವೇಚನೆಯಿಂದ ಈ ಪದ್ಯದ ಪರಿಷ್ಕೃತ ಪಾಠವನ್ನು ಕೆಳಗೆ ನೀಡಲಾಗಿದೆ.

**ಸುಗಿಪುದುವೆನೆ ಸುಲಿಹಂ ತಾಂ**
**ತೆಗಲೆನೆ ಪೆಗಲುಣ್ಮಿತೆಂದೆನಲ್ಪುದಿಗುಂ ತಾಂ**
**ಬಗಸೆನೆ ಮನವಿಟ್ಟುದು ಮು**
**ನ್ನೆಗಮದೆನಲ್ ದೊಡ್ಡಿತಪ್ಪುದೆಲೆ ಕವಿರತ್ನಾ**

ಈಗ ೯ ನೆಯ ಪದ್ಯವನ್ನು ಗಮನಿಸಬಹುದು

**ಅಜಿಲೆನೆ ತಾರಗೆ ತಿಟ್ಟೆಂ**
**ದು [ಜಿ ಬಲ್ ಬೈಗುಳಿನಿಸು ನನಸೆಂ]ದೆನೆ ದಿಟಮುಂ**
**ಗಜೆವೂವೆನೆ ಕೇದಗೆ ಪಡಿ**
**ಯಱವಕ್ಕಿಯೆನೆಯೆನಲ್ಕೆ ಕೋಕಿಲನಕ್ಕುಂ**

ಈ ಪದ್ಯದ ದ್ವಿತೀಯ ಪಾದದ ಚೌಕ ಕಂಸದೊಳಗಿನ ಪಾಠ ಕಲಬುರ್ಗಿ ಅವರ ಊಹಾತ್ಮಕ ತಿದ್ದುಪಡಿಯಾಗಿದೆ. ಈ ತಿದ್ದುಪಡಿಯಾಗಿರುವ ಪಾಠದಲ್ಲಿ ಛಂದಸ್ಸು ಸರಿಯಾಗಿದ್ದರೂ ಆರನೆಯ ಗಣವು ನಿಯಮದಂತೆ ಸರ್ವಲಘುವಾಗಿದ್ದರೂ ಮೊದಲನೆಯ ಲಘುವಿನ ನಂತರ ಯತಿ ಇರಬೇಕಿತ್ತು. ಈ ಪದ್ಯದ ೪ನೆಯ ಪಾದದ ಛಂದಸ್ಸು ಕೆಟ್ಟಿದೆ. ಹಂ.ಪ. ನಾಗರಾಜಯ್ಯ ಅವರು 'ಪಡಿಯಱವಕ್ಕಿಯೆ ಕೋಕಿಲನಕ್ಕೆಲೆ ಕವಿರತ್ನಾ' ಎಂದು ತಿದ್ದುಪಡಿ ಸೂಚಿಸಿದ್ದಾರೆ. ಆದರೆ ಇಲ್ಲಿಯೂ ಆರನೆಯ ಗಣ ಸರ್ವಲಘು ಅಥವಾ ಜಗಣವಾಗಬೇಕಿತ್ತು. ಆದ ಕಾರಣ ಕಲಬುರ್ಗಿಯವರ ಮತ್ತು ಹಂ.ಪ. ನಾಗರಾಜಯ್ಯನವರ ಸೂಚಿತ ಪಾಠ ಮತ್ತು ಪರಿಷ್ಕರಣಗಳು ಸಮರ್ಥನೀಯವಲ್ಲವೆಂದು ಹೇಳಬೇಕಾಗಿದೆ. ತ.ಸು. ಶಾಮರಾಯ, ಎನ್. ಬಸವಾರಾಧ್ಯರ ಪರಿಷ್ಕರಣಗಳಲ್ಲಿ ನಾಲ್ಕನೆಯ ಪಾದದ ಪಾಠ 'ಪಡಿಯಱವಕ್ಕಿಯೆನಲ್ಕೆ ಕೋಕಿಲನಕ್ಕುಂ' ಎಂಬುದಾಗಿ ಅಚ್ಚಾಗಿದೆ. ಆದರೆ ಇಲ್ಲಿಯೂ ಛಂದಸ್ಸು ಕೆಟ್ಟಿದೆ. ಈ ಪದ್ಯದ ಪರಿಷ್ಕರಣ ಸಾಧ್ಯವಾಗುತ್ತಿಲ್ಲ.

ಹದಿನಾಲ್ಕನೆಯ ಪದ್ಯವನ್ನು ಮುಂದೆ ಗಮನಿಸಬಹುದಾಗಿದೆ.

**ಭಂಡಣಮೆನೆ ಪುಯ್ಯಲ್ಪಲ**
**ಬಂಡೆನೆ ಜೇನ್ ಪೆರಬಳಿಯನೆಂದೆನೆ ಪಾಣ್ಬಂ**
**ಗುಂಡೆನೆ ನೆರವಿ ತುಳಿಲ್ಪಜೆ**
**ಗೊಂಡೆನೆನಲ್ವೀರರಸನೆಲೇ ಕವಿರತ್ನಾ**

ಈ ಪದ್ಯದ ಪಾಠ ಬಹುವಾಗಿ ಕೆಟ್ಟಿದೆ. ಪುಯ್ಯಲ್ಪಲ ಎಂದರೆ ಏನೆಂದು ತಿಳಿಯುವುದಿಲ್ಲ. ಮೊದಲನೆಯ ಪಾದದ ಪಾಠ **ಬಂಡಣಮೆನೆ ಪುಯ್ಯಲ್** ಎಂದಿರಬೇಕು. ಪುಯ್ಯಲ್ ಎಂದರೆ ಕಾಳಗ, 'ಬಂಡಣಮೆಂದು ಕಾಳೆಗಂ' ಎಂದು ಕೇಶಿರಾಜನ ಶಬ್ದಮಣಿದರ್ಪಣದಲ್ಲಿದೆ[೨೨]. ಈ ಶಬ್ದ ಬಂಡಣ ಎಂದಿರಬೇಕೇ ಅಥವಾ ಭಂಡಣ ಎಂದಿರಬೇಕೇ ಎಂಬುದನ್ನು ನಿರ್ಣಯಿಸುವುದು ಕಷ್ಟಸಾಧ್ಯ. ಎರಡು ರೂಪಗಳಿಗೂ ಪ್ರಯೋಗಗಳುಂಟು ಮತ್ತು ಸಂಸ್ಕೃತದಲ್ಲಿ ಭಂಡನ ಎಂಬ ರೂಪ ಕಂಡುಬರುತ್ತದೆ[೨೩]. ಪಂಪಕವಿಯ ಪಂಪಭಾರತದಲ್ಲಿ ಬಂಡಣ ರೂಪವೇ ಇದೆ[೨೪]. ಆದ ಕಾರಣ ಬಂಡಣ ಎಂಬ ರೂಪವನ್ನೇ ಅಂಗೀಕರಿಸುವುದು ಉತ್ತಮ. ಎರಡನೆಯ ಪಾದದಲ್ಲಿ ಛಂದೋದೋಷವಿದೆ. ಪೆರಬಳಿಯನೆಂದೆನೆ ಪಾಣ್ಬಂ ಎಂಬಲ್ಲಿ ಪೆರಬಳಿ ಶಬ್ದವು ಪಾಣ್ಬ [=ಜಾರ, ವಿಟ] ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಪೆರಬಳಿ ಶಬ್ದಕ್ಕೆ ಅನ್ಯ ಪ್ರಯೋಗಗಳಾವುವೂ ನಮ್ಮ ಗಮನಕ್ಕೆ

ಬಂದಿರುವುದಿಲ್ಲ. ಇದು ಅಪಲಿಖಿತವಿರಬಹುದೇ ಎಂದು ಸಂದೇಹ ಬರುತ್ತದೆ. ಪರಳಿಗ ಎಂಬ ಶಬ್ದವು ಪಾಣ್ಬ ಎಂಬ ಅರ್ಥವನ್ನು ಹೊಂದಿದೆ. ಆದ ಕಾರಣ ಎರಡನೆಯ ಪಾದದ ಪಾಠವನ್ನು ಛಂದಸ್ಸಿಗೆ ಮತ್ತು ಅರ್ಥಕ್ಕೆ ಭಂಗಬಾರದಂತೆ ಹಾಗೂ ಬೇರೆ ಪಾಠ ಲಭಿಸುವ ವರೆಗೂ ತಾತ್ಕಾಲಿಕವಾಗಿ ತಿದ್ದಬಹುದು. ಅಲರ್ವಂಡು ಎಂದರೆ ಹೂವಿನ ರಸ, ಜೇನು ಎಂದರ್ಥ. ಗುಂಡು ಎಂದರೆ ಗುಂಪು ಸಮೂಹ. ನೆರವಿ ಎಂದರೂ ಗುಂಪು, ಸಮೂಹ. ತುಳಿಲ್ಪಜೆ ಎಂಬುದು 'ತುಟಿಲ್ಪರಿ' ಎಂದಿರಬೇಕು. ತುಟಿಲ್ ಎಂದರೆ ಸಾಹಸ, ಪರಾಕ್ರಮ ಎಂದರ್ಥ. ಪರಿಗೊಂಡು ಎಂದರೆ ಪ್ರವಹಿಸು, ಹರಿ ಎಂದರ್ಥ. ಸಾಹಸ, ಪರಾಕ್ರಮ ಇವುಗಳಲ್ಲಿ ಆಸಕ್ತನಾದವನು ವೀರರತ ಎಂದು ಅರ್ಥ ಮಾಡಬಹುದು. ವೀರರಸ ಎಂಬ ಪಾಠದಿಂದ ಸಮರ್ಪಕ ಅರ್ಥ ಹೊರಡುವುದಿಲ್ಲ. ಒಟ್ಟಿನಲ್ಲಿ ಈ ಪದ್ಯದ ಪರಿಷ್ಕೃತ ಪಾಠ ಕೆಳಗಿನಂತಿರಬೇಕು.

**ಬಂಡಣಮೆನೆ ಪುಯ್ಯಲಲ**
**ರ್ವಂಡೆನೆ ಜೇನ್ಪರಳಿಗನವನೆಂದೆನೆ ಪಾಣ್ಬಂ**
**ಗುಂಡೆನೆ ನೆರವಿ ತುಟಿಲ್ಪರಿ**
**ಗೊಂಡನೆನಲ್ವೀರರತನೆಲೇ ಕವಿರತ್ನಾ**

೨೩ನೆಯ ಪದ್ಯದ ೨ನೆಯ ಪಾದದಲ್ಲಿ ಛಂದೋದೋಷವಿದೆ. ಮುದ್ರಣದೋಷದ ಕಾರಣ ೩ನೆಯ ಪಾದದಲ್ಲಿ ಪ್ರಾಸಾಕ್ಷರದ ಸ್ಥಾನ ತಪ್ಪಾಗಿದೆ. ಪದ್ಯದ ಪಾಠವಿಂತಿದೆ.

**ನವಿಲರಗಾರ್ತಿಯ ನಡೆದೊಳೆ**
**ಸವಿಯುಳಿಮ್ಮೆಗೊಡುವಕ್ಕಿ ಮೆಲ್ಲದಿ ಬೆಳ್ಗಂಚ**
**ವಲುವೆಸು ಸರೆನ ಇಲ್ಪಳಸುವ**
**ಗಿಳಿ ಎನಲಂಚೆ ಬೆಳ್ಳಿವೆಸರಾಂತವನೇ**

ಈ ಪದ್ಯವನ್ನು ಅರ್ಥೈಸಲು ಮತ್ತು ಪರಿಷ್ಕರಿಸಲು ಸಾಧ್ಯವಾಗುತ್ತಿಲ್ಲ. ೪೨ನೆಯ ಪದ್ಯವು ಪಂಚಪಾದಿಯಾದ ಚಂಪಕಮಾಲಾವೃತ್ತವಾಗಿದ್ದು ಎರಡನೆಯ ಪಾದದ ಐದನೆಯ ಗಣವು ಜಗಣವಾಗಿರದೆ ನಗಣವಾಗಿದೆ[೨೫]. ಇಡೀ ಪದ್ಯದಲ್ಲಿ ಪಾಠದೋಷಗಳೂ ಅಪಾರವಾಗಿವೆ. ಇದನ್ನು ಕೂಡ ಪರಿಷ್ಕರಿಸಲು ಸದ್ಯದಲ್ಲಿ ಸಾಧ್ಯವಾಗುತ್ತಿಲ್ಲ.

೬. ಕೆಲವೆಡೆ ಮಾತ್ರ ಶಕಟರೇಫಯುಕ್ತ ಶಬ್ದಗಳ ಸಂದಿಗ್ಧತೆಯನ್ನು ಮತ್ತು ಇತರ ಪಾಠದೋಷಗಳನ್ನು ಹಾಗೂ ಶಬ್ದಗಳ ಅರ್ಥಸಂದಿಗ್ಧತೆಯನ್ನು ಪರಿಹರಿಸಬಹುದು. ಉದಾಹರಣೆಗೆ :

**ಕುಳಿರೆನೆ ಶೈತ್ಯಂ ಮಿಳಿರೆನೆ**
**ಪೊಳೆದುದು ಬಿಲ್ಲೆಂದೆನಲ್ಕೆ ಮಾರಂಬರ್ಥಂ**
**ಬಳೆದುನೆನಲ್ಕೆಱಗಿದುದುಂ**
**ಕಿಳಿರೆನೆ ವಾಜಿಯ ನಿನಾದಮೆಲೆ ಕವಿರತ್ನಾ ॥ ೧ ॥**

ಶಬ್ದಮಣಿದರ್ಪಣದ ಧಾತುಪಾಠದಲ್ಲಿ ಕುಳಿರ್- ಹೈಮೇ, ಬಿಲ್-ವಿಕ್ರಯೇ, ಮಾಱು-ವಿಕ್ರಯೇ, ಎಱಗು- ಪ್ರಣತೇ, ಕಿಳಿಱ್- ಹಯಘೋಷೇ ಎಂದು ಇದೆ. ಪಿ.ವಿ. ನಾರಾಯಣ ಅವರು ದ್ವಿತೀಯ ಪಾದದಲ್ಲಿ 'ಬಿಲ್ಲೆಂದೆನಲ್ಕೆ ಮಾಱೆಂಬರ್ಥಂ' ಎಂದು ತೃತೀಯ ಪಾದದಲ್ಲಿ 'ಬಳೆದುದೆನಲ್ಕೆ ಎಱಗಿದುದುಂ' ಎಂದೂ ತಮ್ಮ ಲೇಖನದಲ್ಲಿ ತಿದ್ದುಪಡಿ ಸೂಚಿಸಿದ್ದಾರೆ. ಆದರೆ ಕಿಳಿರು-ಹಯಧ್ವನೌ ಎಂದು ಕೂಡ ಶಬ್ದಮಣಿದರ್ಪಣದ ಧಾತುಪಾಠದಲ್ಲಿದೆ. ಶಬ್ದಮಣಿದರ್ಪಣದ ಸಂಜ್ಞಾಪ್ರಕರಣದಲ್ಲಿನ ಸೂತ್ರ-೧೫ರ ಪ್ರಯೋಗ 'ಕಿಳಿಱೆ ಹಯಂಗಳ್ ಗರ್ಜಿಸೆ' ಎಂದಿದೆ. ನಾಗವರ್ಮನ ಕಾವ್ಯಾವಲೋಕನದಲ್ಲಿ 'ತೊಳಗೆ ಪೊನ್ನರಥಂ ರಥವಾಜಿಗಳ್ ಕಿಳಿಱೆ' ಎಂದು ಪ್ರಯೋಗವಿದೆ {(ಸಂ) ರಾ. ನರಸಿಂಹಾಚಾರ್ಯ, ಮೈಸೂರ್ ಗವರ್ನಮೆಂಟ್ ಸೆಂಟ್ರಲ್ ಪ್ರೆಸ್, ಬೆಂಗಳೂರು-೧೯೦೩, ಪದ್ಯ ಸಂಖ್ಯೆ-೪೮೯, ಪುಟ ೮೦} ಇದನ್ನು ಗಮನಿಸಿದರೆ ಕಿಳಿರ್ ಎಂದು ರೇಫಾಂತವಾಗುವ ಶಬ್ದಕ್ಕೆ ಕುದುರೆ ಹೊರಡಿಸುವ ಸಾಮಾನ್ಯಧ್ವನಿ ಎಂದೂ ಕಿಳಿಱ್ ಎಂದು ಶಕಟರೇಫಾಂತವಾಗುವ ಶಬ್ದಕ್ಕೆ ಕುದುರೆ ಕೆನೆಯುವಾಗ, ಹೇಷಾರವ ಮಾಡುವಾಗ ಹೊರಡಿಸುವ ಧ್ವನಿಯೆಂದೂ ಅರ್ಥೈಸಬಹುದೇ ಎಂಬುದು ವಿಚಾರಣೀಯ ಅಂಶಗಳಾಗಿವೆ. ಈ ಅಂಶವನ್ನು ಗಮನಕ್ಕೆ ತಂದುಕೊಂಡರೆ ಮೇಲಿನ ಪದ್ಯದಲ್ಲಿ ಕಿಳಿರ್ ಶಬ್ದವೇ ಇದ್ದಿರಬಹುದೆಂಬ ಊಹೆಯನ್ನು ಮಾಡಬಹುದು. ಆದರೂ ತಾತ್ಕಾಲಿಕವಾಗಿ ಕಿಳಿಱ್ ಶಬ್ದವನ್ನೇ ಅಂಗೀಕರಿಸಿದೆ. ಮಿಳಿರ್ ಶಬ್ದಕ್ಕೆ ನೀಡಲಾಗಿರುವ ಅರ್ಥ ಪೊಳೆ (=ಹೊಳೆ). ಇದಕ್ಕೆ ಬೇರೆ ಅರ್ಥಗಳು ಇವೆಯಾದರೂ ಪೊಳೆ ಎಂಬ ಅರ್ಥ ಈ ನಿಘಂಟಿನಲ್ಲಿ ಬಿಟ್ಟರೆ ಬೇರೆಡೆ ದೊರಕುತ್ತಿಲ್ಲ. ಇವುಗಳ ಬಗೆಗೆ ಹೆಚ್ಚಿನ ವಿಶ್ಲೇಷಣೆಯ ಅಗತ್ಯವಿದೆ. ಈ ವಿಶ್ಲೇಷಣೆಯ ಆಧಾರದಿಂದ ಈ ಪದ್ಯವನ್ನು ಕೆಳಗೆ ನೀಡಿರುವಂತೆ ಪರಿಷ್ಕರಿಸಲಾಗಿದೆ.

**ಕುಳಿರೆನೆ ಶೈತ್ಯಂ ಮಿಳಿರೆನೆ ।**
**ಪೊಳೆದುದು ಬಿಲ್ಲೆಂದೆನಲ್ಕೆ ಮಾಱೆಂಬರ್ಥಂ ।**
**ಬಳೆದುದೆನಲ್ಕೆಱಗಿದುದುಂ**
**ಕಿಳಿಱೆನೆ ವಾಜಿಯ ನಿನಾದಮೆಲೆ ಕವಿರತ್ನಾ**

೭. ಕರ್ಣಾಟಕ ಕವಿಚರಿತೆಯಲ್ಲಿ ಈ ನಿಘಂಟಿನ ಎರಡು ಪದ್ಯಗಳನ್ನು (ಸಂಖ್ಯೆ- ೬, ೭) ಮಾತ್ರ ಉದಾಹರಿಸಲಾಗಿದೆ. ಈಗ ಪ್ರಕಟವಾಗಿರುವ ನಾಲ್ಕೂ ಪರಿಷ್ಕರಣಗಳಲ್ಲಿಯೂ ಕವಿಚರಿತೆಯ ಪಾಠಗಳನ್ನು ನಿರ್ಲಕ್ಷಿಸಲಾಗಿದೆ. ಕವಿಚರಿತೆಕಾರರು ನೋಡಿರುವ ಪ್ರತಿ ಯಾವುದೋ ತಿಳಿಯದು ಮತ್ತು ಅದು ಈಗ ಎಲ್ಲಿದೆ ಎಂಬ ಮಾಹಿತಿಯೂ ಲಭ್ಯವಿಲ್ಲ. ಆದರೆ ಕವಿಚರಿತೆಕಾರರು ಉದಾಹರಿಸಿರುವ ಎರಡೂ ಪದ್ಯಗಳ ಪಾಠ ಶುದ್ಧವಾಗಿದೆ. ಈ ಕಾರಣದಿಂದ ರನ್ನ ನಿಘಂಟಿನ ಪರಿಷ್ಕೃತ ಆವೃತ್ತಿಯಲ್ಲಿ ಕವಿಚರಿತೆಯ ಪಾಠಗಳನ್ನೇ ಅಂಗೀಕರಿಸಬೇಕಾದುದು ಅನಿವಾರ್ಯವಾಗಿದೆ. ಕವಿಚರಿತೆಯಲ್ಲಿನ ಎರಡೂ ಪದ್ಯಗಳ ಪಾಠ ಈ ರೀತಿಯಾಗಿದೆ[೨೬]

| | |
|---|---|
| ಸಣ್ಣದೆನಲ್ ಕಿಱಿದಕ್ಕುಂ<br>ಪಣ್ಣೆನೆ ಮಾಡೆಂಬ ವಾಚಿ ಬಟಿಯೆನೆ ವಂಶಂ<br>ಎಣ್ಣೆನೆ ಲೆಕ್ಕಿಪುದುಂ ಬಿಸು<br>ಗಣ್ಣನೆನಲ್ ಗೊರವನಪ್ಪುದೆಲೆ ಕವಿರತ್ನಾ | ಕೋಸಿತೆನಲ್ ಪೋಣಿಸಿದುದು<br>ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ<br>ವಾಸಿತಮೆನೆ ಕಂಪುಂ ಮಿಗೆ<br>ಸೌಸವಮೆನೆ ಸಮ್ಮದಾರ್ಥಮೆಲೆ ಕವಿರತ್ನಾ |

ಈ ಮೇಲಿನ ಎರಡು ಪದ್ಯಗಳೂ ರನ್ನ ನಿಘಂಟಿನ ನಾಲ್ಕೂ ಪರಿಷ್ಕರಣಗಳಲ್ಲಿ ಕೆಳಗೆ ನೀಡಿರುವಂತೆ ಅಚ್ಚಾಗಿವೆ.

| | | |
|---|---|---|
| **ತ.ಸು. ಶಾಮರಾಯರ ಪರಿಷ್ಕರಣ** | ಸಣ್ಣದೆನಲ್ಕಿಱಿದಕ್ಕುಂ<br>ಪಣ್ಣೆನೆ ಮಾಡೆಂಬ ವಾಚಿ ಬಟಿಯೆನೆ ವಂಶಂ<br>ಎಣ್ಣೆನೆ ಲೆಕ್ಕಿಪುದುಂ ಬಿಸು<br>ಗಣ್ಣೆನೆ ನಲ್ಗೊರವನಪ್ಪು[ದೆ]ಲೆ ಕವಿರತ್ನಾ | ಕೋಸಿತೆನಲ್ಪೋಣಿಸಿದುದು<br>ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ<br>[ಬಾಸಿತ]ಮೆನೆ ಕಂಪುಂ ಮಿಗೆ<br>[ಸೌ]ಸವಮೆನೆ ಸಂಮದಾರ್ಥಮೆಲೆ ಕವಿರತ್ನಾ |
| **ಎನ್. ಬಸವಾರಾಧ್ಯರ ಪರಿಷ್ಕರಣ** | ಸಣ್ಣದೆನಲ್ಕಿಱಿದಕ್ಕುಂ<br>ಪಣ್ಣೆನೆ ಮಾಡೆಂಬ ವಾಚಿ ಬಟಿಯೆನೆ ವಂಶಂ<br>ಎಣ್ಣೆನೆ ಲೆಕ್ಕಿಪುದುಂ ಬಿಸು<br>ಗಣ್ಣೆನೆ ನಲ್ಗೊರವನಪ್ಪು[ದೆ]ಲೆ ಕವಿರತ್ನಾ | ಕೋಸಿತೆನಲ್ಪೋಣಿಸಿದುದು<br>ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ<br>[ಬಾಸಿತ]ಮೆನೆ ಕಂಪುಂ ಮಿಗೆ<br>[ಸೌ]ಸವಮೆನೆ ಸಂಮದಾರ್ಥಮೆಲೆ ಕವಿರತ್ನಾ |
| **ಎಂ.ಎಂ. ಕಲಬುರ್ಗಿ ಅವರ ಪರಿಷ್ಕರಣ** | [ಸ]ಣ್ಣದೆನದಲ್ಕಿಱಿದಕ್ಕುಂ<br>ಪಣ್ಣೆನೆ ಮಾಡೆಂಬ ವಾಚಿ ಬಳಿಯೆನೆ ವಂಶಂ<br>ಎಣ್ಣೆನೆ ಲೆಕ್ಕಿಪುದುಂ ಬಿಸು<br>ಗಣ್ಣೆನೆ ನಲ್ಗೊರವನಪ್ಪನೆಲೆ ಕವಿರತ್ನಾ | ಕೋಸಿತೆನಲ್ಪೋಣಿಸಿದುದು<br>ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ<br>ಬಾಸತಮೆನೆ ಕಂಪುಂ ಮಿಗೆ<br>ಸಾಸವಮೆನೆ ಸಮ್ಮದರ್ಥಮೆಲೆ ಕವಿರತ್ನಾ |
| **ಹಂ.ಪ. ನಾಗರಾಜಯ್ಯ ಅವರ ಪರಿಷ್ಕರಣ** | ಸಣ್ಣದೆನದಲ್ಕಿಱಿದಕ್ಕುಂ<br>ಪಣ್ಣೆನೆ ಮಾಡೆಂಬ ವಾಚಿ ಬಳಿಯೆನೆ ವಂಶಂ<br>ಎಣ್ಣೆನೆ ಲೆಕ್ಕಿಪುದುಂ ಬಿಸು<br>ಗಣ್ಣನೆನಲ್ಗೊರವನಪ್ಪನೆಲೆ ಕವಿರತ್ನಾ | ಕೋಸಿ ತೆನಲ್ಪೋಣಿಸಿದುದು<br>ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ<br>ಬಾಸತಮೆನೆ ಕಂಪುಂ ಮಿಗೆ<br>ಸೌಸಾಸವಮೆನೆ ಸಮ್ಮದರ್ಥಮೆಲೆ ಕವಿರತ್ನಾ |

೮. ಎರಡನೆಯ ಪದ್ಯದಲ್ಲಿನ ಸಿರಿವಂತಿಕೆಯೆನೆ ಹುರಿಯೋಡಕ್ಕುಂ, ಮೂರನೆಯ ಪದ್ಯದಲ್ಲಿನ ಹಕ್ಕಿಯೆನಲ್ ವಿಹಗಂ ಈ ಪಾಠಗಳಲ್ಲಿನ ಹ ಕಾರವನ್ನು ಒಪ್ಪಲು ಸಾಧ್ಯವಿಲ್ಲ. ಇದು ಬಹುಶಃ ಸಿರಿವಂತಿಕೆಯೆನೆ ಪುರಿಯೋಡಕ್ಕುಂ, ಪಕ್ಕಿಯೆನಲ್ ವಿಹಗಂ ಎಂದು ಇರುವ ಸಾಧ್ಯತೆಯಿದೆ. ಹ ಕಾರ ಘಟಿತ ರೂಪಗಳು ಪ್ರತಿಕಾರನಿಂದಾದ ಪ್ರಮಾದಗಳಾಗಿರಬಹುದು.

೯. ಈ ನಿಘಂಟು ೧೦ನೆಯ ಶತಮಾನದ ರಚನೆಯಾಗಿರುವುದರಿಂದ ಇದರ ಪರಿಷ್ಕರಣ ಮಾಡುವಾಗ ಕೆಳಗಿನ ಅಂಶಗಳನ್ನು ಗಮನದಲ್ಲಿಡಬೇಕು.

(ಅ) ಶಕಟರೇಫದ ಬಳಕೆ ಮತ್ತು ಶಕಟರೇಫ ಪ್ರಾಸದ ಬಳಕೆ

(ಆ) ೞ ದ ಬಳಕೆ ಮತ್ತು ೞ ಪ್ರಾಸದ ಬಳಕೆ

(ಇ) ಇಲ್ಲಿರುವ ಶಬ್ದಗಳ ಬಳಕೆ ಇತರತ್ರ ಇದ್ದು ಅವುಗಳ ಗಮನಿಸುವಿಕೆ

(ಈ) ಪ್ರಾಸ ಮತ್ತು ಇತರ ವಿವರಗಳಲ್ಲಿ ಪಂಪಾದಿ ಕವಿಗಳಲ್ಲಿ ಕಂಡುಬರುವಂತೆ ಕ್ವಚಿತ್ ಆಗಿ ನಿಯಮ ಉಲ್ಲಂಘನೆ ಇರಬಹುದು. ಆದರೆ ಸಂಪೂರ್ಣವಾಗಿ ಅಲ್ಲ.

(ಉ) ಪ್ರತಿಕಾರರ ಪ್ರಮಾದಗಳಿಗೆ ಕವಿಯನ್ನೇ ಹೊಣೆ ಮಾಡುವುದು ಸಮರ್ಥನೀಯವಲ್ಲ.

(ಊ) ಪ ಕಾರ ಮತ್ತು ಹ ಕಾರ ಘಟಿತ ಶಬ್ದಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕು.

(ಋ) ಕವಿಯ ಕಾಲ, ಆ ಕಾಲದ ಭಾಷೆ ಇತ್ಯಾದಿಗಳನ್ನು ಗಮನದಲ್ಲಿ ಇಟ್ಟುಕೊಂಡು ಪರಿಷ್ಕರಣವನ್ನು ಮಾಡಬೇಕು.

(ಎ) ವಡ್ಡಾರಾಧನೆ ಮತ್ತು ಪಂಪಾದಿ ಕವಿಗಳ ಪ್ರಯೋಗಗಳನ್ನು ಗಮನಿಸಿ ಶಬ್ದರೂಪವನ್ನು ನಿಷ್ಕರ್ಷಿಸಬೇಕು.

(ಏ) ಇತರ ದ್ರಾವಿಡ ಭಾಷೆಗಳಲ್ಲಿ ದೊರಕುವ ಜ್ಞಾತಿ ಶಬ್ದಗಳನ್ನು ಗಮನಿಸಬೇಕು.

ಪ್ರಕೃತ ಲೇಖನದಲ್ಲಿ ಈ ನಿಘಂಟಿನ ಸಂಪಾದಕರು ಗ್ರಂಥಸಂಪಾದನೆಯಲ್ಲಿ ಅನುಸರಿಸಿರುವ ವಿಧಾನಗಳನ್ನು ಮತ್ತು ಇವುಗಳಲ್ಲಿನ ಸಮಸ್ಯೆ ಗಳನ್ನು ಕುರಿತು ವಿಮರ್ಶೆ ಮಾಡಲಾಗಿದೆ. ಗ್ರಂಥ ಸಂಪಾದಕರು ತಮ್ಮ ಸಂಪಾದನೆಯ ವಿಧಾನಗಳನ್ನು ಸರಿಯಾಗಿ ಹೇಳುವುದು ಉಚಿತ. ರನ್ನ ನಿಘಂಟಿನಲ್ಲಿನ ಬಹುತೇಕ ಶಬ್ದಗಳು ಬಳಕೆ ತಪ್ಪಿರುವುದರಿಂದ, ಲಿಪಿಕಾರ ಸ್ಖಾಲಿತ್ಯಗಳು, ಛಂದೋದೋಷಗಳು ಅಪಾರ ಪ್ರಮಾಣದಲ್ಲಿರುವುದರಿಂದ ಇದರ ಪರಿಷ್ಕರಣ ಕಷ್ಟ ಸಾಧ್ಯವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ೧೧ ಸಂಪೂರ್ಣ ಪದ್ಯಗಳೂ ೧ ಅಸಮಗ್ರ ಪದ್ಯವೂ ಉಳ್ಳ ಅಸಮಗ್ರ ಓಲೆಗರಿ ಪ್ರತಿಯಿದೆ. ಇದನ್ನು ಯಾವ ಪರಿಷ್ಕರಣದಲ್ಲಿಯೂ ಬಳಸಿಕೊಂಡಿರುವಂತೆ ತೋರದು. ಇದನ್ನು ಗಮನಿಸಿರುವಂತೆಯೂ ಸೂಚನೆಗಳಿಲ್ಲ. ಇದನ್ನು ಅವಶ್ಯವಾಗಿ ಬಳಸಿಕೊಳ್ಳಬೇಕು. ಈಗ ಪ್ರಕಟವಾಗಿರುವ ನಾಲ್ಕೂ ಪರಿಷ್ಕರಣಗಳನ್ನು ಮತ್ತು ಇತರ ಬಾಹ್ಯಾಧಾರಗಳನ್ನು, ಶಬ್ದಮಣಿದರ್ಪಣವನ್ನು, ಶಬ್ದಾರ್ಥ ಚರ್ಚೆಗಳನ್ನು ಬಳಸಿಕೊಂಡು ಸಾಧ್ಯವಾದ ಮಟ್ಟಿಗೂ ಒಂದು ಉತ್ತಮ ಪರಿಷ್ಕರಣವನ್ನು ಪಾಠಾಂತರ ಸಹಿತವಾಗಿ ವಾಚನೀಯವಾಗಿ ಇರುವಂತೆ ತಾತ್ಕಾಲಿಕವಾಗಿ ಸಿದ್ಧಪಡಿಸಿದರೆ ಅಧ್ಯಯನಕ್ಕೆ ಹೆಚ್ಚು ಅನುಕೂಲವಾಗುತ್ತದೆ. ದೊರಕುವ ಸಾಮಗ್ರಿಗಳನ್ನೇ ಬಳಸಿಕೊಂಡು ಇರುವುದರಲ್ಲಿ ತೃಪ್ತಿಕರವಾದ ಪರಿಷ್ಕರಣವನ್ನು ಹೊರತರಲು ಸಾಧ್ಯವಿದೆ. ಇದರ ಸಾಧ್ಯತೆಗಳನ್ನು ಪ್ರಕೃತ ಲೇಖನದಲ್ಲಿ ತೋರಿಸಲಾಗಿದೆ. ಶಬ್ದಮಣಿದರ್ಪಣವನ್ನು ಕನ್ನಡ ಕವಿಗಳು, ನಿಘಂಟುಕಾರರು ಒಂದು ಆಕರವನ್ನಾಗಿ ಬಳಸಿಕೊಂಡಿರುತ್ತಾರೆ. ಇದನ್ನು ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ತಮ್ಮ ಬರಹಗಳಲ್ಲಿ ವಿಸ್ತಾರವಾಗಿ ವಿಮರ್ಶಾತ್ಮಕವಾಗಿ ವಿವೇಚಿಸಿರುತ್ತಾರೆ[೨೭]. ಆದರೆ ಕೇಶಿರಾಜನು ರನ್ನ ನಿಘಂಟನ್ನು ಅನುಸರಿಸಿರುವ ವಿಷಯ ಪ್ರಕೃತ ಲೇಖನದ ಮೂಲಕ ಬೆಳಕಿಗೆ ಬಂದಿದೆ.

ಶಬ್ದಮಣಿದರ್ಪಣದ ಪ್ರಯೋಗಸಾರದ ರಚನೆಗೆ ಕೇಶಿರಾಜನು ಈ ನಿಘಂಟನ್ನು ಗಮನಿಸಿರಬಹುದು ಎಂಬುದಾಗಿ ಎನ್.ಎಸ್. ತಾರಾನಾಥ ಅವರು ಈ ಮೊದಲೇ ಅಭಿಪ್ರಾಯಪಟ್ಟಿರುತ್ತಾರೆ. ಈ ಅಭಿಪ್ರಾಯಕ್ಕೆ ಈಗ ಹೆಚ್ಚು ಪುಷ್ಟಿ ದೊರೆತಿದೆ. ರನ್ನ ನಿಘಂಟು ಮತ್ತು ಶಬ್ದಮಣಿದರ್ಪಣದ ನಡುವಿನ ಸಾಮ್ಯ ಹಾಗೂ ವ್ಯತ್ಯಾಸಗಳನ್ನು ತೌಲನಿಕವಾಗಿ ಅಧ್ಯಯ ನಕ್ಕೆ ಒಳಪಡಿಸಿದಾಗ ಹೆಚ್ಚಿನ ಮಾಹಿತಿ ದೊರೆಯುವುದರಲ್ಲಿ ಸಂಶಯವಿಲ್ಲ. ಜೊತೆಗೆ ರನ್ನ ನಿಘಂಟಿನ ಪರಿಷ್ಕರಣಕ್ಕೂ ಹೆಚ್ಚಿನ ಸಹಾಯ ದೊರಕಿದಂತಾಗುತ್ತದೆ. ಇದರೊಂದಿಗೆ ಹೆಚ್ಚಿನ ಹಸ್ತಪ್ರತಿಗಳು ಮತ್ತು ಬಾಹ್ಯಾಧಾರಗಳು ಸಮರ್ಪಕವಾಗಿ ದೊರೆತಲ್ಲಿ ಮತ್ತಷ್ಟು ಪರಿಷ್ಕರಣವನ್ನು ಮಾಡಬಹುದು. ಈ ನಿಘಂಟಿನ ಶುದ್ಧ ಪಾಠ ದೊರೆತಾಗ ಮಾತ್ರ ರನ್ನ ನಿಘಂಟಿನ ಸಮಗ್ರ ಅಧ್ಯಯನ ಸಾಧ್ಯವಾಗುತ್ತದೆ. ಇದು ಭವಿಷ್ಯತ್ಕಾಲದ ಭಾಗ್ಯದ ಮೇಲೆ ಅವಲಂಬಿತವಾಗಿದೆ[೨೮].

## ರನ್ನ ನಿಘಂಟಿನ ಮುದ್ರಿತ ಪರಿಷ್ಕರಣಗಳು

(ಅ) {ಸಂ} ತ.ಸು.ಶಾಮರಾಯ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ-೩೧, ಸಂಚಿಕೆ-೩,೪, ಸೆಪ್ಟೆಂಬರ್-ಡಿಸೆಂಬರ್ ೧೯೪೬, ಪುಟ ೧೭-೨೩

(ಆ) {ಸಂ} ಎನ್. ಬಸವಾರಾಧ್ಯ, ಹಳಗನ್ನಡ ನಿಘಂಟು, ಡಿ.ವಿ.ಕೆ.ಮೂರ್ತಿ, ಮೈಸೂರು-೧೯೭೬; ಮರುಮುದ್ರಣ-೨೦೦೯, ಪುಟ ೧-೪

(ಇ) {ಸಂ} ಎಂ.ಎಂ. ಕಲಬುರ್ಗಿ, ಕರ್ನಾಟಕ ಭಾರತಿ, ಸಂಪುಟ-೮, ಸಂಚಿಕೆ-೪, ಮೇ ೧೯೭೬, ಪುಟ ೨೫-೩೬; ಮಾರ್ಗ-೧, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯೮೮, ಪುಟ ೪೬೯-೪೮೦

(ಈ) {ಸಂ} ಹಂ.ಪ.ನಾಗರಾಜಯ್ಯ, ರನ್ನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೭, ಪುಟ ೨೯೩-೨೯೯

## ರನ್ನ ನಿಘಂಟಿನ ಬಗೆಗೆ ಪ್ರಕಟವಾಗಿರುವ/ ಮಾಹಿತಿ ಲಭಿಸುವ ಬರಹಗಳು

(ಅ) ರನ್ನಕಂದ -ಎನ್.ಎಸ್. ತಾರಾನಾಥ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ [(ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ] ಸಂಪುಟ-೩, ೧೯೭೬, ಪುಟ ೬೫೧-೬೫೨

(ಆ) ರನ್ನನ ನಿಘಂಟು (ರನ್ನಕಂದ)- ಪಿ.ವಿ. ನಾರಾಯಣ, ರನ್ನ-ಕವಿ ಕಾವ್ಯವಿಮರ್ಶೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೦, ಪ್ರಥಮ ಮುದ್ರಣ, ಪುಟ ೧೪೫-೧೫೨: ದ್ವಿತೀಯ ಮುದ್ರಣ-೧೯೯೯, ಪುಟ ೧೩೮-೧೪೪; ಒಳಹರಿವು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೪, ಪುಟ ೨೬-೩೨

(ಇ) ರನ್ನನ ನಿಘಂಟು-ಸೀತಾರಾಮ ಜಾಗೀರದಾರ್,

ರನ್ನ–ಕವಿ ಕಾವ್ಯವಿಮರ್ಶೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೯೯, ದ್ವಿತೀಯ ಮುದ್ರಣ, ಪುಟ ೧೨೬–೧೨೭ (ರನ್ನನ ಕಾವ್ಯಗಳು, ಛಂದಸ್ಸಿನ ದೃಷ್ಟಿಯಿಂದ ಲೇಖನದ ಅಂತ್ಯಭಾಗದ ಬರಹ)

## ರನ್ನ ನಿಘಂಟಿನ ಹಸ್ತಪ್ರತಿಗಳ ಸೂಚಿ

| ಕ್ರಮ ಸಂಖ್ಯೆ | ಹಸ್ತಪ್ರತಿ ಸಂಖ್ಯೆ | ಓಲೆ/ ಕಾಗದ | ಸಮಗ್ರ/ ಅಸಮಗ್ರ | ಲಿಪಿ | ಗರಿ/ ಹಾಳೆ | ಇತರ ವಿವರಗಳು | ಈಗ ಇರುವ ಸ್ಥಳ |
|---|---|---|---|---|---|---|---|
| ೧ | ೬೭/೨ | ಓಲೆ | ಸಮಗ್ರ | ಕನ್ನಡ | ೧–೫ (?) | ೪೫ ಪದ್ಯಗಳಿವೆ. ಕಲಬುರ್ಗಿಯವರ ಪರಿಷ್ಕರಣದ 'ಅ' ಪ್ರತಿ | ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿ, ಮಹಾರಾಷ್ಟ್ರ |
| ೨ | ೧೧೯/೫ | ಓಲೆ | ಸಮಗ್ರ | ಕನ್ನಡ | ೧೩೭–೧೪೦ | ೪೫ ಪದ್ಯಗಳಿವೆ. ಕಲಬುರ್ಗಿಯವರ ಪರಿಷ್ಕರಣದ 'ಆ' ಪ್ರತಿ | ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿ, ಮಹಾರಾಷ್ಟ್ರ |
| ೩ | ಕೆ.ಎ. ೨೫೩/೩ | ಕಾಗದ | ಅಸಮಗ್ರ | ಕನ್ನಡ | ೧–೨ | ೧೧ ಸಮಗ್ರ ಪದ್ಯಗಳೂ ಒಂದು ಅಸಮಗ್ರ ಪದ್ಯವೂ ಇದೆ. | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೪ | ಕೆ. ೧೪೭೬ | ಓಲೆ | ಅಸಮಗ್ರ | ಕನ್ನಡ | ೧ ಪತ್ರ | ೧೧ ಸಮಗ್ರ ಪದ್ಯಗಳೂ ಒಂದು ಅಸಮಗ್ರ ಪದ್ಯವೂ ಇದೆ. | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೫ | ಎನ್. ೨೨೫೮ | ಓಲೆ | ಸಮಗ್ರ | ಕನ್ನಡ | ೧–೫ | ೪೫ ಪದ್ಯಗಳಿವೆ. ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿ, ಮಹಾರಾಷ್ಟ್ರ ಪ್ರತಿಯ ಮೈಕ್ರೋಫಿಲಂ | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೬ | ಎನ್. ೨೨೬೮ | ಓಲೆ | ಸಮಗ್ರ | ಕನ್ನಡ | ೧೩೭–೧೪೦ | ೪೫ ಪದ್ಯಗಳಿವೆ. ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿ, ಮಹಾರಾಷ್ಟ್ರ ಪ್ರತಿಯ ಮೈಕ್ರೋಫಿಲಂ | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |

**ಟಿಪ್ಪಣಿಗಳು :**

೧. ರನ್ನಕಂದ – ಎನ್.ಎಸ್. ತಾರಾನಾಥ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ [(ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ] ಸಂಪುಟ–೩, ೧೯೭೬, ಪುಟ ೬೫೧–೬೫೨

೨. ರನ್ನನ ನಿಘಂಟು (ರನ್ನಕಂದ)–ಪಿ.ವಿ. ನಾರಾಯಣ, ರನ್ನ–ಕವಿ ಕಾವ್ಯವಿಮರ್ಶೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೮೦, ಪ್ರಥಮ ಮುದ್ರಣ, ಪುಟ ೧೪೫–೧೫೨: ದ್ವಿತೀಯ ಮುದ್ರಣ–೧೯೯೯, ಪುಟ ೧೩೮–೧೪೪ ; ಒಳಹರಿವು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೪, ಪುಟ ೨೬–೩೨

೩. ರನ್ನ ಕವಿಯ ವೈಯಕ್ತಿಕ ವಿವರಗಳು ಮತ್ತು ಕೃತಿಗಳು ಇವುಗಳ ಮಾಹಿತಿಗೆ ಪ್ರಧಾನವಾಗಿ ಕೆಳಕಂಡ ಆಕರಗಳನ್ನು ಗಮನಿಸಬಹುದು.

(ಅ) ಗೋವಿಂದ ಪೈ ಸಂಶೋಧನ ಸಂಪುಟ [(ಸಂ) ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ ಹಿರಿಯಡಕ], ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ–೧೯೯೫ {ಈ ಸಂಪುಟದಲ್ಲಿ ಗೋವಿಂದ ಪೈ ಅವರ ೫ ಲೇಖನಗಳಿವೆ]

(ಆ) ದಾನಚಿಂತಾಮಣಿ ಅತ್ತಿಮಬ್ಬೆ–ತೀ.ನಂ. ಶ್ರೀಕಂಠಯ್ಯ , ತೀ. ನಂ.ಶ್ರೀ. ಸಮಗ್ರ ಗದ್ಯ, ಕನ್ನಡ ಪುಸ್ತಕ ಪ್ರಾಧಿಕಾರ–೨೦೦೬, ಪುಟ ೧೫೪–೧೬೭

(ಇ) [ರನ್ನ ಕವಿಯ ಇತಿವೃತ್ತ ಮತ್ತು ಕೃತಿಗಳು ]– ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ [(ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ] ಸಂಪುಟ–೩, ೧೯೭೬, ಪುಟ ೫೭೦–೬೫೨

೪. ಕರ್ಣಾಟಕ ಕವಿಚರಿತೆ, ಸಂಪುಟ–೧, ಪರಿಶಿಷ್ಟ–೩, ಪುಟ ೩೭೫–೩೭೬ {೧೯೦೭ ರ ಪ್ರಥಮ ಮುದ್ರಣ}

೫. ಕರ್ಣಾಟಕ ಕವಿಚರಿತೆ, ಸಂಪುಟ–೧, ಪುಟ ೭೧ {೧೯೨೪ ರ ಪರಿಷ್ಕೃತ ಮುದ್ರಣ}

೬. ಉದಾಹರಣೆಗೆ ನೋಡಿ: (ಅ) ಕನ್ನಡದಲ್ಲಿ ನಿಘಂಟುಶಾಸ್ತ್ರ–ಎನ್. ಬಸವಾರಾಧ್ಯ, ಚಿನ್ನದ ಬೆಳಸು [ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸವಿನೆನಪಿನ ಸಂಪುಟ (ಸಂ) ಎಂ. ವಿ. ಸೀತಾರಾಮಯ್ಯ, ಭಾಗ–೩, ಹೊಂದೆನೆ–೩] ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೭೦, ಪುಟ ೪೩

(ಆ) ಕನ್ನಡ ಸಾಹಿತ್ಯದಲ್ಲಿ ನಿಘಂಟುಗಳು–ಶಾಂತಯ್ಯ ಕೆಂಪಯ್ಯ ಮಠ, ಪ್ರಬುದ್ಧ ಕರ್ಣಾಟಕ ೪೫–೩, ೧೯೬೩, ಪುಟ ೩೯

(ಇ) ಕನ್ನಡ ನಿಘಂಟುಗಳು {ಮುಖ್ಯವಾಗಿ ೨೦ ನೆಯ ಶತಮಾನದ ನಿಘಂಟುಗಳನ್ನು ಕುರಿತು}–ಎನ್.ಬಸವಾರಾಧ್ಯ, ಕನ್ನಡನುಡಿ ೨೦–೧೧, ಅಕ್ಟೋಬರ್ ೧೯೫೭, ಪುಟ ೨೭೦–೨೭೪

೭. ರನ್ನನ ನಿಘಂಟು–ಸೀತಾರಾಮ ಜಾಗೀರದಾರ್, ರನ್ನ–ಕವಿ ಕಾವ್ಯವಿಮರ್ಶೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೯೯, ದ್ವಿತೀಯ ಮುದ್ರಣ, ಪುಟ ೧೨೬–೧೨೭ (ರನ್ನನ ಕಾವ್ಯಗಳು, ಛಂದಸ್ಸಿನ ದೃಷ್ಟಿಯಿಂದ ಲೇಖನದ ಅಂತ್ಯಭಾಗದ ಬರಹ)

೮. ಪೀಠಿಕೆ, ಹಳಗನ್ನಡ ನಿಘಂಟು-(ಸಂ)ಎನ್. ಬಸವಾರಾಧ್ಯ, ಪುಟ xxxiv-xxxv

೯. ಮಾರ್ಗ-೧, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯೮೮, ಪುಟ ೪೭೦-೪೭೧

೧೦. ಪ್ರಸ್ತಾವನೆ, ರನ್ನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೭, ಪುಟ xix-xx

೧೧. ಕನ್ನಡ ನಿಘಂಟು ಪರಿವಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೨, ಪುಟ ೫೩-೫೫

೧೨. (ಅ) **ಈತಂ ಬಿರ್ದಿನನೀತಂ** [ಪಂಪಕವಿಯ ಪಂಪಭಾರತಂ-(ಸಂ) ಟಿ.ವಿ. ವೆಂಕಟಾಚಲಶಾಸ್ತ್ರೀ, ಪಂಪ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೬, ಆಶ್ವಾಸ-೪, ಪದ್ಯ-೪೪, ಪುಟ ೪೪೬]

(ಆ) **ಅತಿಥಿಯಾಗಂತು ಪ್ರಾಘುಣಕನೆನೆ ಬಿರ್ದಿನಂ** [ಅಭಿನವ ಮಂಗರಾಜನ ಅಭಿನವಾಭಿಧಾನಂ-(ಸಂ) ಎಂ. ಮರಿಯಪ್ಪ ಭಟ್ಟ, ಮದ್ರಾಸ್ ವಿಶ್ವವಿದ್ಯಾನಿಲಯ, ಮದ್ರಾಸ್-೧೯೫೨, ಭೂಮಿ ಕಾಂಡಂ, ಮನುಷ್ಯ ವರ್ಗಂ, ಪದ್ಯ-೧೭, ಸಾಲು-೧, ಪುಟ ೭೦]

(ಇ) **ನಂದಕನುಮೆಂಬರಿಂದೆಮಗೆ ಬಿರ್ದಿನರಪ್ಪುದು** [ಬಂಧುವರ್ಮನ ಹರಿವಂಶಾಭ್ಯುದಯಂ-(ಸಂ) ಬಿ.ಎಸ್. ಸಣ್ಣಯ್ಯ, ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೧೯೭೪, ಆಶ್ವಾಸ-೨-೨೯ ವಚನ]

(ಈ) **ಬಿದ್ದಿನರೆನೆ ಬೀಗರ್** [ಅಜ್ಞಾತ ಕರ್ತೃಕ ಕರ್ಣಾಟ ಭಾರತ ನಿಘಂಟು-(ಸಂ) ಎಸ್.ಎನ್. ಕೃಷ್ಣಜೋಯಿಸ್, ಕುಮಾರವ್ಯಾಸನ ಉದ್ಯೋಗಪರ್ವ ಕೃತಿಯ ೨ ನೆಯ ಪರಿಶಿಷ್ಟ, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ - ೧೯೫೫, ಪದ್ಯ-೮, ಪುಟ ೨೩೦]

(ಉ) ಬಿರ್ದಿನ ಶಬ್ದದ ಬಗೆಗಿನ ವಿಶ್ಲೇಷಣೆಗೆ ನೋಡಿ: ಕನ್ನಡದಲ್ಲಿ ವರ್ಣಪಲ್ಲಟದ ಕೆಲವಂಶಗಳು- ಟಿ. ವಿ. ವೆಂಕಟಾಚಲ ಶಾಸ್ತ್ರೀ, ಶಾಸ್ತ್ರೀಯ-೧, ಸಪ್ನ ಬುಕ್ ಹೌಸ್, ಬೆಂಗಳೂರು-೧೯೯೯, ಪುಟ ೩೧೯

೧೩. ವಡ್ಡಾರಾಧನೆ-(ಸಂ) ಡಿ.ಎಲ್. ನರಸಿಂಹಾಚಾರ್, ಶಾರದಾ ಮಂದಿರ, ಮೈಸೂರು-೧೯೭೦, ನಾಲ್ಕನೆಯ ಮುದ್ರಣ, ಪುಟ ೧೪೩, ಸಾಲು-೧೫

೧೪. ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ-(ಸಂ) ಟಿ. ವಿ. ವೆಂಕಟಾಚಲ ಶಾಸ್ತ್ರೀ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು-೨೦೦೮ {ಪ್ರಕೃತ ಲೇಖನದಲ್ಲಿ ಈ ಪರಿಷ್ಕರಣವನ್ನೇ ವಿವೇಚನೆಗೆ ಬಳಸಿಕೊಳ್ಳಲಾಗಿದೆ}, ಧಾತು ಪ್ರಕರಣ, ಪುಟ ೨೪೬

೧೫. A Kannada-English Dictionary-F.Kittel, Asian Educational Services, New Delhi-Madras, Reprint-1994, page 471

೧೬. **ಪದಿನೇೞ್ಕಙ್ಖ ಒನ್ದು ಸಟ್ಟುಗ ಒತ್ತನೊಳು** - ತುಳುನಾಡಿನ ಶಾಸನಗಳು {ಸಂಪುಟ-೧}- (ಸಂ) ಕೆ. ವಿ. ರಮೇಶ, ಎಂ.ಜೆ. ಶರ್ಮ, ಗೀತಾ ಬುಕ್ ಹೌಸ್, ಮೈಸೂರು-೧೯೭೮, ವಡ್ಡರ್ಸೆ ಶಾಸನ, ಸಂಖ್ಯೆ-೧, ಸಾಲು-೬, ಪುಟ ೧೦, ಕಾಲ-ಕ್ರಿ.ಶ. ೭ ನೆಯ ಶತಮಾನದ ಮಧ್ಯಭಾಗ

೧೭. ಶಬ್ದಮಣಿದರ್ಪಣಂ, ಪ್ರಯೋಗಸಾರಮೆಂಬ ಶಬ್ದಾರ್ಥ ನಿರ್ಣಯಂ, ಪುಟ ೩೦೧-೩೦೪

೧೮. ಶಬ್ದಮಣಿದರ್ಪಣಂ, ಪುಟ ೧೭

೧೯. ಶಬ್ದಮಣಿದರ್ಪಣಂ, ಪ್ರಯೋಗಸಾರಮೆಂಬ ಶಬ್ದಾರ್ಥ ನಿರ್ಣಯಂ, ಪುಟ ೩೦೧

೨೦. ಶಬ್ದಮಣಿದರ್ಪಣಂ, ಪ್ರಯೋಗಸಾರಮೆಂಬ ಶಬ್ದಾರ್ಥ ನಿರ್ಣಯಂ, ಪುಟ ೩೦೨

೨೧. ಶಬ್ದಮಣಿದರ್ಪಣಂ, ಧಾತು ಪ್ರಕರಣ, ಪುಟ ೨೪೮

೨೨. ಶಬ್ದಮಣಿದರ್ಪಣಂ, ಪ್ರಯೋಗಸಾರಮೆಂಬ ಶಬ್ದಾರ್ಥನಿರ್ಣಯಂ, ಪುಟ ೩೦೩

೨೩. (ಅ) ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟು, ಸಂಪುಟ-೬, ಪುಟ ೬೧೬೭

(ಆ) ಶಬ್ದಾರ್ಥ ಕೌಸ್ತುಭ, ಸಂಪುಟ-೫ {ಸಂಸ್ಕೃತ ಕನ್ನಡ ಶಬ್ದಕೋಶ}-ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ, ಬಾಪ್ಕೊ ಪ್ರಕಾಶನ, ಬೆಂಗಳೂರು-೨೦೦೩ ರ ಮರುಮುದ್ರಣ, ಪುಟ ೨೦೪೭

(ಇ) The Practical Sanskrit English Dictionary-Vaman Shivram Apte, Motilal Banarsidass Publishers Pvt Limited, Delhi-2006, page 711

೨೪. **ಬಂಡಣದೊಳೆನ್ನನೋಡಿಸಿ** [ಪಂಪಕವಿಯ ಪಂಪ ಭಾರತಂ-(ಸಂ) ಟಿ.ವಿ. ವೆಂಕಟಾಚಲಶಾಸ್ತ್ರೀ, ಪಂಪ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೬, ಆಶ್ವಾಸ-೧, ಪದ್ಯ-೭೬, ಪುಟ ೩೬೮]

೨೫. ಈ ಅಂಶವನ್ನು ಎನ್.ಎಸ್. ತಾರಾನಾಥ ಅವರು ತಮ್ಮ ಲೇಖನವೊಂದರಲ್ಲಿ (ನೋಡಿ: ಪಂಚಪದಿ : ಕೆಲವು ವಿಚಾರಗಳು, ಪರಿಶೋಧನ, ಭಾರತೀ ಪ್ರಕಾಶನ, ಮೈಸೂರು-೧೯೮೧, ಪುಟ ೧೪೨) ಮೊದಲೇ ಗುರುತಿಸಿರುತ್ತಾರೆ.

೨೬. ಕರ್ಣಾಟಕ ಕವಿಚರಿತೆ, ಸಂಪುಟ-೧, ಪುಟ ೭೧ {೧೯೨೪ ರ ಪರಿಷ್ಕೃತ ಮುದ್ರಣ}

೨೭. (ಅ) ಶಬ್ದಮಣಿದರ್ಪಣ ಮತ್ತು ಉತ್ತರಕಾಲೀನ ಸಾಹಿತ್ಯ, ಶಾಸ್ತ್ರೀಯ-೧, ಸಪ್ನ ಬುಕ್ ಹೌಸ್, ಬೆಂಗಳೂರು-೧೯೯೯, ಪುಟ ೪೦೦-೪೦೭

(ಆ) ಕರ್ಣಾಟಕ ನಿಘಂಟು, ಶಾಸ್ತ್ರೀಯ-೧, ಪುಟ ೪೫೫-೪೫

(ಇ) ಕರ್ಣಾಟಕ ಶಬ್ದಸಾರ, ಶಾಸ್ತ್ರೀಯ-೧, ಪುಟ ೪೫೮-೪೬೦

೨೮. ಈ ಲೇಖನವನ್ನು ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ಆಮೂಲಾಗ್ರವಾಗಿ ಪರಿಶೀಲಿಸಿ, ಅನೇಕ ಸಲಹೆ, ಸೂಚನೆಗಳನ್ನು ನೀಡಿ, ತಿದ್ದಿಕೊಟ್ಟಿರುತ್ತಾರೆ. ಅವರ ಮಾರ್ಗದರ್ಶನ ಮತ್ತು ಸಹಾಯಕ್ಕಾಗಿ ಕೃತಜ್ಞತೆಗಳು.

❑❑

# ಕನ್ನಡದ ಚಂಪೂ ಪರಂಪರೆ ಮತ್ತು ರುದ್ರಭಟ್ಟನ ಜಗನ್ನಾಥ ವಿಜಯ

– ಆರ್. ಲಕ್ಷ್ಮೀನಾರಾಯಣ

ಕನ್ನಡದ ಪ್ರೌಢ ಚಂಪೂಕಾವ್ಯ ಪರಂಪರೆಯ ಒಬ್ಬ ಗಣ್ಯಕವಿಯಾದ ರುದ್ರಭಟ್ಟ ಕಾವ್ಯರಚನೆಗೆ ತೊಡಗಿದ್ದು ಹಲವು ದೃಷ್ಟಿಗಳಿಂದ ಕನ್ನಡ ಸಾಹಿತ್ಯದ ಒಂದು ಸಂಧಿಕಾಲದಲ್ಲಿ. ಧಾರ್ಮಿಕವಾಗಿ ನೋಡಿದರೆ ಅದು ಜೈನಧರ್ಮದ ಪ್ರಾಬಲ್ಯ ಕಳೆದು ವೀರಶೈವಧರ್ಮ ಪ್ರವರ್ಧಮಾನಕ್ಕೆ ಬರುತ್ತಿದ್ದ ಕಾಲ.ಸಾಹಿತ್ಯಿಕವಾಗಿ ಚಂಪೂವಿನ ಮಾರ್ಗಪರಂಪರೆ ಮುಗಿದು ವಚನ ಮತ್ತು ಷಟ್ಪದಿಗಳ ದೇಸಿ ಸಾಹಿತ್ಯವಾಹಿನಿ ಭೋರ್ಗರೆದು ಹರಿಯತೊಡಗಿದ್ದ ಕಾಲ. ಭಾಷಿಕದೃಷ್ಟಿಯಿಂದ ನೋಡಿದರೆ ಹಳೆಗನ್ನಡದ ಕಾಲ ಕಳೆದು ನಡುಗನ್ನಡ ತಲೆಯೆತ್ತುತ್ತಿದ್ದ ಕಾಲ. ಇಂಥ ಸಂಧಿಕಾಲದಲ್ಲಿ ಬಂದ ಕವಿ ಸಹಜವಾಗಿಯೇ ಕೆಲವು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಅದರಲ್ಲೂ ರುದ್ರಭಟ್ಟನ ವೈಶಿಷ್ಟ್ಯವೆಂದರೆ, ವೈದಿಕಪುರಾಣವೊಂದನ್ನು ಕಾವ್ಯವಾಗಿಸಿದ ಮೊತ್ತಮೊದಲ ಬ್ರಾಹ್ಮಣಕವಿ ಎಂದು ಹಾಗೂ ಚಂಪೂ ಕಾವ್ಯಪ್ರಕಾರವನ್ನು ಪುನರುಜ್ಜೀವಿಸಿದ ಕವಿ ಎಂದು. ರುದ್ರಭಟ್ಟನಿಗಿಂತ ಹಿಂದಿದ್ದ ಬ್ರಾಹ್ಮಣಕವಿಯಾದ ನಾಗವರ್ಮನದು ಸಂಸ್ಕೃತದ ಬಾಣಕವಿಯ ಕಾದಂಬರಿಯ ನೇರ ಅನುವಾದ. ಚಂದ್ರರಾಜನ ಮದನತಿಲಕ ಒಂದು ಶಾಸ್ತ್ರಗ್ರಂಥ. ಚಾವುಂಡರಾಯನ 'ಲೋಕೋಪಕಾರ' ವಿವಿಧ ವಿಷಯ ಗ್ರಂಥ. ದುರ್ಗಸಿಂಹನದು ಸಂಸ್ಕೃತ ಪಂಚತಂತ್ರದ ಅನುವಾದ. ಅದ್ವೈತಿ ನಾಗವರ್ಮಾಚಾರ್ಯನದು ಒಂದು ಶತಕ. ಧಾರ್ಮಿಕ ವಸ್ತುವೊಂದನ್ನು ಕನ್ನಡದಲ್ಲಿ ಕಾವ್ಯಕ್ಕೆ ವಸ್ತುವಾಗಿ ಆರಿಸಿಕೊಳ್ಳುವ ವಿಚಾರದಲ್ಲಿ ಬ್ರಾಹ್ಮಣಕವಿಗಳು ಇನ್ನೂ ಮೀನ–ಮೇಷ ಎಣಿಸುತ್ತಿದ್ದ ಕಾಲದಲ್ಲಿ ವಿಷ್ಣುಭಕ್ತಿ (ಕೃಷ್ಣಭಕ್ತಿ) ಪಾರಮ್ಯದ ಅತ್ಯಂತ ಪ್ರೌಢವಾದ ಚಂಪೂ ಕಾವ್ಯವನ್ನು ರಚಿಸಿದ ಮೊತ್ತಮೊದಲ ಬ್ರಾಹ್ಮಣಕವಿ ರುದ್ರಭಟ್ಟ, ಅದೂ ಅಲ್ಲದೆ ಈ ಆಯ್ಕೆ, ಮುಗಳಿಯವರು ಈಗಾಗಲೇ ಗುರುತಿಸಿರುವಂತೆ ಒಂದು ಸಾಹಸವೇ ಸರಿ.

ರುದ್ರಭಟ್ಟ ಬದುಕಿದ್ದದ್ದು ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ. ಆ ಕಾಲ ಯುದ್ಧಗಳಿಲ್ಲದೆ ಹೆಚ್ಚು ನೆಮ್ಮದಿಯಿಂದ ಕೂಡಿದ್ದ ಕಾಲ. ಕೃಷ್ಣೆಯಿಂದ ರಾಮೇಶ್ವರದವರೆಗೂ ನಾಡು ಹಬ್ಬಿತ್ತು. ಹೊಯ್ಸಳರ ಕಾಲದಲ್ಲೇ ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ ಇವುಗಳು ಬಹಳ ಪ್ರವರ್ಧಮಾನಕ್ಕೆ ಬಂದವೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಅದಕ್ಕೆ ತಕ್ಕಂತೆ ಶೃಂಗಾರ, ಭಕ್ತಿಗಳ ಪ್ರಾಧಾನ್ಯದ ಜಗನ್ನಾಥ ವಿಜಯ ಹಾಗು ಶೃಂಗಾರ ಮತ್ತು ಧಾರ್ಮಿಕ ವಸ್ತು ಪ್ರಾಧಾನ್ಯದ ಲೀಲಾವತಿ ಮತ್ತು ಅರ್ಧನೇಮಿ ಪುರಾಣಗಳ ರಚನೆಯಾದದ್ದು ಅರ್ಥಪೂರ್ಣವಾಗಿಯೇ ಇದೆ. ಇನ್ನು ರುದ್ರಭಟ್ಟನ ಕಾವ್ಯಮಾರ್ಗದ ಬಗ್ಗೆ ಇರುವ ಒಂದು ದೊಡ್ಡ ಆಕ್ಷೇಪವೆಂದರೆ, ಅವನದು ಸಂಸ್ಕೃತಭೂಯಿಷ್ಠವಾದ ಪ್ರೌಢ ಚಂಪೂಶೈಲಿ ಎಂಬುದು. ಇದು ನಿಜವೇ. ಕನ್ನಡದಲ್ಲಿ ಅದುವರೆಗಾಗಲೇ ಸಿದ್ಧವಾಗಿದ್ದ ಚಂಪೂಕಾವ್ಯ ಪರಂಪರೆಯ ಮಹಾಕಾವ್ಯದ ಚೌಕಟ್ಟು ಅವನಿಗೆ ಆದರ್ಶ. ಕವಿಯ ಉದ್ದಿಷ್ಟ ಶ್ರೋತೃವೃಂದವೂ ಪಂಡಿತ ಸಮುದಾಯವೇ. ಅವನೇ ಹೇಳಿಕೊಂಡಿರುವಂತೆ ಅವನ ಕಾವ್ಯವು "ಅನವದ್ಯಂ ರೀತಿಚೋದ್ಯಂ ಸಕಲ ವಿಬುಧಹೃದ್ಯಂ" ತನ್ನ ಕಾವ್ಯವು,

**ಇನಿಯಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ**
**ದನ ರಸದಣ್ಪಿನಂತೆ ನನೆಯೇಜಿದ ಮಲ್ಲಿಗೆಯಂತೆ ಪೂರ್ಣಚಂ**
**ದ್ರನ ಸಿರಿಯಂತೆ ಬಂದೆಸಪ ತೆಂಕಣತಂಬೆಲರಂತೆ ರುದ್ರಭ**
**ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ**

"ಈ ತೆಱದಿಂ ಬುಧರ್ ಪೊಗೞ್ದ ಮತ್ಕೃತಿಯಂ....." ಎಂದು ಹೇಳಿಕೊಳ್ಳುವಾಗಲೂ ಅವನ ವಿದ್ವತ್ಪಕ್ಷಪಾತ ಸ್ವಯಂಸ್ಪಷ್ಟ. ಈ ಕಾರಣಕ್ಕೇ ಇರಬೇಕು ಅವನು ಅವರನ್ನು ಮೆಚ್ಚಿಸಲು ಕಾವ್ಯಪರಂಪರೆಯಲ್ಲಿ ಅದುವರೆಗಾಗಲೇ ಅಂಗೀಕೃತವಾಗಿದ್ದ ಅಷ್ಟಾದಶ ವರ್ಣನೆಗಳು, ಶಬ್ದಾಲಂಕಾರಗಳು, ಅರ್ಥಾಲಂಕಾರಗಳು, ಕವಿಸಮಯಗಳು ಇವೆಲ್ಲವುಗಳಿಂದ ನಿಬಿಡವಾಗಿರುವ ಕಾವ್ಯ ರಚಿಸಬೇಕೆಂದು ತರ್ಕಿಸಿ ಅದರಂತೆ ಕಾವ್ಯ ರಚಿಸಿದಂತೆ ಕಾಣುತ್ತದೆ. ಈ ಅಂಗೀಕೃತ ಕಾವ್ಯದ ಆಕೃತಿಯೊಂದಿಗೆ ಅವನು ರಾಜಿಮಾಡಿಕೊಳ್ಳುವ ಪ್ರಶ್ನೆಯೇ ಇಲ್ಲ. ಒಟ್ಟಾರೆ ಆ ಕಾಲದ ಕಾವ್ಯಪರಂಪರೆ ಅವನ ಕಾವ್ಯದ ನಡೆಯನ್ನು ಹೆಜ್ಜೆಹೆಜ್ಜೆಗೆ ನಿಯಂತ್ರಿಸಿದೆ.

ಇದನ್ನು ಒಪ್ಪಿಕೊಂಡೂ, ನಾವು ಮರೆಯಬಾರದ ಅಂಶವೆಂದರೆ ರುದ್ರಭಟ್ಟ ಕೇವಲ ಶುಷ್ಕಪಂಡಿತನಲ್ಲ ಎಂಬುದು. ಪಾಂಡಿತ್ಯದ ಕೈ ಸ್ವಲ್ಪ ಮೇಲೇ ಅನ್ನಿಸಿದರೂ ಪ್ರತಿಭಾವಂತ

# ೧೨, ಶ್ರೀನಿಕೇತನ, ೨ನೇಕ್ರಾಸ್, ಶಿವಾನಂದನಗರ, ಮೂಡಲಪಾಳ್ಯ, ಬೆಂಗಳೂರು_೫೬೦೦೭೨

ಕವಿಯಾದ್ದರಿಂದ ಕಥಾವಸ್ತು, ಅದರ ನಿರ್ವಹಣೆ, ಸನ್ನಿವೇಶ ನಿರ್ಮಾಣ, ಪಾತ್ರಚಿತ್ರಣ ವರ್ಣನೆಗಳು ಈ ಎಲ್ಲ ಹಂತಗಳಲ್ಲೂ ಅವನ ಪ್ರತಿಭೆಯ ಮಾಂತ್ರಿಕ ಸ್ಪರ್ಶವನ್ನು ಮನಗಾಣಬಹುದಾಗಿದೆ. ಅವನು ಮನಸ್ಸುಮಾಡಿದರೆ ಕನ್ನಡ ದೇಸಿಯಲ್ಲೂ ತನ್ನ ಕೈವಾಡ ತೋರಿಸಬಲ್ಲ. ಹಾಗಾಗಿ ಸಂಪ್ರದಾಯದ ಸಂಕೋಲೆಯೊಳಗಿದ್ದುಕೊಂಡೂ ಕಾವ್ಯ ಎಷ್ಟು ಸುಂದರವಾಗಬಲ್ಲುದು ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ರುದ್ರಭಟ್ಟ ಖಂಡಿತವಾಗಿಯೂ ನಮಗೆ ನಿರಾಶೆ ಉಂಟುಮಾಡುವುದಿಲ್ಲ. ಕಾವ್ಯಕ್ಕೆ ಹೆಸರಿಡುವಷ್ಟಕ್ಕೆ ಪಂಪ ರನ್ನರನ್ನು ಅನುಸರಿಸಿ 'ಜಗನ್ನಾಥವಿಜಯ' ಎಂದು ನಾಮಕರಣ ಮಾಡಿದ್ದರೂ ಅವನ ವಸ್ತುನಿರ್ವಹಣಾರೀತಿ ಅವರಿಗಿಂತ ತೀರ ಭಿನ್ನ. ತನ್ನ ಆಶ್ರಯದಾತರೊಂದಿಗೆ ಅಭೇದಕಲ್ಪನೆ ಮಾಡಿ ಕಾವ್ಯ ಬರೆಯುವ ಸಂಪ್ರದಾಯವನ್ನು ಪ್ರಾರಂಭದ ಒಂದೆರಡು ಪದ್ಯಗಳಲ್ಲಿ ಬರುವ ಕೆಲವೊಂದು ವಿಶೇಷಣಗಳಿಗಷ್ಟೇ ಸೀಮಿತಗೊಳಿಸಿದ್ದಾನೆ. ಉದಾ: ಅರಿಕಾಮಧ್ವಂಸಿ, ಉಮಾಕಾಮಿನೀ ಜೀವಿತೇಶಂ, ರಾಜರಾಜ ಪ್ರತಿಷ್ಠಾನಿರತಂ, ಪದ್ಮಾನುಷಂಗಿತ್ವಂ ಇತ್ಯಾದಿ. ಕಾವ್ಯದ ಒಡಲಿಗೆ ಅದು ಇಳಿದಿಲ್ಲ. ಅಷ್ಟರಮಟ್ಟಿಗೆ ಅವನಲ್ಲಿ ಔಚಿತ್ಯಪ್ರಜ್ಞೆ ಇದೆ ಎನ್ನಬೇಕು.

ಅವನ ಕಾವ್ಯದ ವಸ್ತು ಈಗಾಗಲೇ ತಿಳಿದಿರುವಂತೆ ವಿಷ್ಣುಪುರಾಣದ ೫-೬ನೇ ಸ್ಕಂಧಗಳಲ್ಲಿ ಬರುವ ಕೃಷ್ಣಕಥೆ. ವಿಷ್ಣುಪಾರಮ್ಯ(ಕೃಷ್ಣಪಾರಮ್ಯ)ವನ್ನು ಬಿತ್ತರಿಸುವ ಪುರಾಣ. ಆದರೆ ಅದನ್ನು ಪುರಾಣವಾಗದಂತೆ ನೋಡಿಕೊಂಡು ಜಗನ್ನಾಥವಿಜಯ ಕಾವ್ಯವಾಗಿಸಿರುವುದೇ ಅವನ ಅಗ್ಗಳಿಕೆ. ಶ್ರೀಕೃಷ್ಣಪರಮಾತ್ಮನ ಏಕೋತ್ತರಶತ ಕೃತ್ಯಗಳಲ್ಲಿ ಕಂಡುಬರುವ ಅಲೌಕಿಕ ಮಹಿಮೆಗಳನ್ನು ಮನದಣಿಯೆ ವರ್ಣಿಸಿ ತನ್ನ ಕೃಷ್ಣಭಕ್ತಿಗೆ ಸಾರ್ಥಕ ಅಭಿವ್ಯಕ್ತಿ ನೀಡುವುದರ ಮೂಲಕ ವಿಷ್ಣು(ಕೃಷ್ಣ) ಸರ್ವೋತ್ತಮ ತತ್ತ್ವವನ್ನು ಸದೃಢವಾಗಿ ಸ್ಥಾಪಿಸುವುದು ಅವನ ಕಾವ್ಯದ ಉದ್ದೇಶ.

ನಮ್ಮ ಕವಿಗಳೆಲ್ಲ ಪರಮಾತ್ಮನ ದಿವ್ಯಶಕ್ತಿಯ ಮಾಧ್ಯಮ ತಾವು ಎಂದು ಭಾವಿಸಿಯೇ ಕಾವ್ಯರಚನೆಗೆ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. 'ವೀರನಾರಾಯಣನೆ ಕವಿ, ಲಿಪಿಕಾರ ಕುವರವ್ಯಾಸ' ಎಂದು ಕುಮಾರವ್ಯಾಸನು ಅರಿಕೆ ಮಾಡಿಕೊಂಡಂತೆ ರುದ್ರಭಟ್ಟನಾದರೂ 'ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ವಬೋಧಮುದ್ಯೋತಿ ಪುದೆಂಬುದಂ ಬಯಸಿ' ಕಾವ್ಯರಚನೆಗೆ ತೊಡಗಿಕೊಂಡಿದ್ದಾಗಿ ಹೇಳಿಕೊಂಡಿದ್ದಾನೆ. ಶ್ರೀಕೃಷ್ಣ ಜನನದಿಂದ ಸಾಲ್ವವಧೆಯವರೆಗಿನ ಕಥಾಭಾಗದಲ್ಲಿ ಬಹಳ ಮುಖ್ಯವಾದ ವಸುದೇವ ದೇವಕಿಯರ ಮದುವೆಯ ಮೆರವಣಿಗೆ, ಶ್ರೀಕೃಷ್ಣಜನನ, ಪೂತನಿ, ಶಕಟ, ಧೇನುಕರೇ ಮೊದಲಾದ ರಾಕ್ಷಸರ ವಧೆ ಗೋವರ್ಧನೋದ್ಧರಣ, ಶ್ರೀಕೃಷ್ಣನ ರಾಸಲೀಲೆ, ಕಾಳಿಂಗಮರ್ದನ, ಅಕ್ರೂರಾಗಮನ, ಕುವಲಯಾಪೀಡ ಸಂಹಾರ, ಚಾಣೂರಮುಷ್ಟಿಕರ ವಧೆ, ಕಂಸವಧೆ, ಕೃಷ್ಣರುಕ್ಮಿಣೀ ವಿವಾಹ, ಪಾರಿಜಾತಾಪಹರಣ, ನರಕಾಸುರವಧೆ ಶಿಶುಪಾಲವಧೆ, ಉಷಾ-ಅನಿರುದ್ಧರ ವಿವಾಹ, ಬಾಣಾಸುರವಧೆ ಇವೆಲ್ಲವನ್ನೂ ಬಿಡದೆ, ಆದರೆ ಸಂಕ್ಷೇಪವಾಗಿ ಚಿತ್ರಿಸಿದ್ದಾನೆ. ಅಲ್ಲದೆ ಇದಿಷ್ಟು ಕಥಾಭಿತ್ತಿಯಲ್ಲಿ ಅನೇಕ ಬದಲಾವಣೆಗಳನ್ನು ಮಾಡಿಕೊಂಡು, ಹೊಸಹೊಸ ಕಲ್ಪನೆಗಳನ್ನು ಸೇರಿಸಿ, ತನ್ನ ಕಾಲದಲ್ಲಿ ಸ್ಥಾಪಿತವಾಗಿದ್ದ ಕಾವ್ಯಸಂಪ್ರದಾಯದ ಚೌಕಟ್ಟಿನಲ್ಲಿ ಕಾವ್ಯರಚನೆ ಮಾಡಿದ್ದಾನೆ. ಈಗಾಗಲೇ ತಿಳಿಸಿದಂತೆ ಕಾವ್ಯಸಂಪ್ರದಾಯಕ್ಕೆ ಚಾಚೂ ತಪ್ಪದಂತೆ ತಂದಿರುವ ಅಷ್ಟಾದಶ ವರ್ಣನೆಗಳಾದ ಸಮುದ್ರ ವರ್ಣನೆ, ಋತುವರ್ಣನೆ, ಪುರವರ್ಣನೆ, ಸೂಳೆಗೇರಿ ವರ್ಣನೆ ಇತ್ಯಾದಿಗಳೆಲ್ಲವೂ ಬಹುಮಟ್ಟಿಗೆ ಯಾಂತ್ರಿಕವೂ, ಜಡವೂ ಆಗಿವೆ. ಆದರೆ ಇವುಗಳ ಹೊರತಾಗಿ ಬಂದಿರುವ ಬೇರೆ ಕೆಲವು ವರ್ಣನೆಗಳು, ಮನುಷ್ಯಸ್ವಭಾವದ ವಿವಿಧ ಮುಖಗಳನ್ನು ಬಿಂಬಿಸುವ ವರ್ಣನೆಗಳು, ಸನ್ನಿವೇಶಗಳು, ತನಗೆ ಪ್ರಿಯವಾದ ಶ್ರೀಕೃಷ್ಣನ ಬಾಲಲೀಲೆಯ ವರ್ಣನೆಗಳು, ವೀರ, ವಾತ್ಸಲ್ಯ, ಭಕ್ತಿ, ಶೃಂಗಾರದ ಸಂದರ್ಭಗಳು ಇವೆಲ್ಲ ಅತ್ಯಂತ ಸಹಜವೂ, ಹೃದ್ಯವೂ, ಸುಂದರವೂ ಆಗಿವೆ. ಅಷ್ಟೇ ಅಲ್ಲ, ಇಂಥಲ್ಲೆಲ್ಲ ಕನ್ನಡದ ದೇಸಿಯ ಚೆಲುವು ತಾನೇತಾನಾಗಿ ವಿಜೃಂಭಿಸಿದೆ. ಅಂಥ ಕೆಲವನ್ನು ನೋಡಬಹುದು.

ಕಂಸನ ಸೆರೆಮನೆಯಲ್ಲಿದ್ದ ದೇವಕಿ, ಆರು ಶಿಶುಗಳನ್ನು ಅವು ಹುಟ್ಟುತ್ತಿದ್ದಂತೆಯೇ ಕಂಸನು ವಧ್ಯಶಿಲೆಗೆ ಅಪ್ಪಳಿಸಿದ ದುಃಖವನ್ನು ನುಂಗಿಕೊಂಡು ಏಳನೆಯದಕ್ಕೆ ಗರ್ಭಿಣಿಯಾಗಿದ್ದಾಗ ಗರ್ಭಸ್ಥ ಶಿಶು ಬಲರಾಮನನ್ನು ಮಾಯಾದೇವಿ ಗೋಕುಲಕ್ಕೆ ಒಯ್ದು ರೋಹಿಣಿಯ ಗರ್ಭದಲ್ಲಿ ಯೋಜಿಸಿದ್ದಾಳೆ. ಅದನ್ನರಿಯದ ದೇವಕಿ ತನ್ನ ಗರ್ಭ ಕರಗಿಹೋಯಿತೆಂದು ಮರುಗುವ ಸಂದರ್ಭದ ಚಿತ್ರಣ. ಸಖಿಯೊಂದಿಗೆ ತನ್ನ ದುಃಖವನ್ನು ತೋಡಿಕೊಳ್ಳುತ್ತ ಪುತ್ರಬಯಕೆಯಿಂದ ಹೇಳುವ ಈ ಪದ್ಯದ ಭಾವ ಎಂಥವರ ಮನಸ್ಸನ್ನೂ ಕರಗಿಸುವಂತಿದೆ. ಅಚ್ಚಗನ್ನಡ ಶಬ್ದಗಳು ಪದ್ಯದ ಸೌಂದರ್ಯಕ್ಕೆ ಕಳೆಗಟ್ಟಿವೆ.

**ಮೊಗಮಂ ನೋಡುವಲಲ್ಲೆಗೆಯ್ವ ಮೊಲೆಯುಂಬಬ್ಬಬ್ಬಜಾಬೆಂಬ ಕೆ**
**ಮ್ಮಗೆ ಕಾಲ್ಪತ್ತುವ ದೂರದಿಂದ ಪರಿತಂದಪ್ಪಪ್ಪೆನುತ್ತಪ್ಪುವೊ**
**ಯ್ಯಗೆ ಚೆಯ್ಯಾಡುವ ಮೇಲುದಂ ಮುಸುಕಿದುತ್ತೋಯೆಂಬ ದಾಯೆಂಬ ಮು**
**ದ್ದುಗಳಂ ಬೀರುವ ಕಂದನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ**

**( ಜ.ವಿ.೨-೬೭)**

ಪೂತನಿಯ ನಂಜಿನ ಮೊಲೆಯನ್ನುಂಡ ಬಾಲಕೃಷ್ಣನು ಆಕೆಯ ಪ್ರಾಣವನ್ನೇ ಹೀರಿದಾಗ, ಆ ರಾಕ್ಷಸಿ "ಅಟ್ಟಾಸುರಮಾಗಿ ಬೆಟ್ಟು ಕೆಡೆವಂತೆ ಭೂತಲದೊಳ್ ಕೆಡೆದ ಪೂತನಿಯ ಮೇಲೆ ಮೊಲೆಯಂ ಕಡೆವಾಯೊಳಿಟ್ಟು ಪಟ್ಟಿರ್ದ ಶಿಶುವಂ" ಯಶೋದೆ ಬಂದು ಕಂಡು

ಮೊತನೆಯ ಕೆಡೆದ ವಿಕೃತಿಗೆ
ಭೀತಿಯನೊಳಕೊಳ್ಳದೆತ್ತಿಕೊಂಡಳ್ ಮಗನಂ
ಕೌತುಕಮೇಂ ಪೆಂಡಿರೊಳಂ
ಭೀತಿರಸಂ ಮೋಹನ ರಸಮನೊತ್ತರಿಸುಗುಮೇ

(ಜ.ವಿ-೩-೨೫)

ಇಲ್ಲಿ ಕವಿ ತಾಯಿಯ ಆ ವಾತ್ಸಲ್ಯವನ್ನು, ಮಗುವಿನ ವಿಷಯಕ್ಕೆ ಅವಳ ಕಾಳಜಿಯನ್ನು, ಆತಂಕವನ್ನು ಒಂದು ಅಲಂಕಾರದ ಮೂಲಕ ಸಮರ್ಥಿಸುತ್ತಿದ್ದರೂ ಅದು ಅತ್ಯಂತ ಹೃದ್ಯವಾಗಿದೆ. ತಾಯಿಯ ಮೋಹರಸವನ್ನು ಭೀತಿರಸ ಎಂದೂ ಹತ್ತಿಕ್ಕಲಾರದು ಎಂದು ಹೇಳಿರುವ ರೀತಿ ಸೊಗಸಾಗಿದೆ.

ಅಂಬೆಗಾಲಿಕ್ಕುವ ಅವರಿಗೆ ಶ್ರೀಕೃಷ್ಣನು ಸಿಂಹದ ಮರಿಯಂತೆ ಕಾಣಿಸುತ್ತಿದ್ದನಂತೆ_

ವಿವಿಧ ಸಟಾವಳಿ ಕಿರುಜಡೆ
ನವಕೇಸರಕಾಂತಿ ಕೊರಲರಕ್ಕೆಯ ರತ್ನ
ಚ್ಛವಿಯಾಗಲಂಬೆಗಾಲಿ
ಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ

(ಜ.ವಿ-೩-೩೬)

ಶ್ರೀಕೃಷ್ಣನ ಬಾಲಲೀಲೆಗಳ ವರ್ಣನೆಯಂತೂ ಜಗನ್ನಾಥವಿಜಯದಲ್ಲಿ ಅತ್ಯದ್ಭುತವಾಗಿ ಮೂಡಿಬಂದಿದೆ. ಇದು ಈ ಕಾವ್ಯದ ರಸಘಟ್ಟ.

ಮನೆಯ ಅಂಗಳವನ್ನು ದಾಟಿಹೋಗುತ್ತಿರುವ ಮಗುವನ್ನು ಗೋಪಿ ಅದರ ಬೆನ್ನಹಿಂದೆಯೇ ಹೋಗಿ ಹಿಡಿದುತಂದು

ಎನಸುಂ ಜಡಿದೊರ್ಮೆ ಗೋಪಿ ದಾ
ವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲಿ ಕಟ್ಟೆ ಪೋ
ಗಿನ್ನೆಲೆ ಪೋಗಲಾರ್ಪೊಡೆ ಚಂಚಲಚೇಷ್ಟಿತ ನೋಟ್ಪೆನೆಂಬುದಂ

ಮತ್ತಿಯ ಮರಕ್ಕೆ (ಯಮಾರ್ಜುನ ತರು) ಸಿಕ್ಕಿದ ಒರಲನ್ನು ಕೀಳಲು ಹೋದಾಗ ಆ ಮರ ಬೇರು ಸಹಿತ ಉರುಳಿಬಿದ್ದು, ಅದರ ನಡುವೆ ಅಚ್ಯುತ ಇರುವ ಕೌತುಕವನ್ನು ಕಂಡು ಯಶೋದೆಯ ಹೃದಯಕ್ಕಾದ ಸಂತೋಷ ಅವರ್ಣನೀಯ. ಕೃಷ್ಣನನ್ನು ಯಶೋದೆ ಮುದ್ದಿಸುವ ಮಾತುಗಳು ವಾತ್ಸಲ್ಯರಸದಲ್ಲಿ ಅದ್ದಿ ತೆಗೆದಂತಿವೆ.

ಪರಮಸುಖಾರ್ದ್ರ ಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕವಿದಾರ ನಿಧಾನವಿದಾರ ಮುದ್ದಿದಾ
ರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹವೆಂ
ದಿರದಮರ್ದಪ್ಪಿದಳ್ ಪದೆಪಿನಿಂ ಮೊಲೆವಾಲ್ ತೊರೆದೆಚ್ಚುಪಾಯ್ವಿನಂ

(ಜ.ವಿ_೩_೪೦)

ಕಣ್ಣಿಗೆ ಕಟ್ಟುವಂತೆ ಸುಂದರವಾದ ಚಿತ್ರಗಳನ್ನು ನೀಡುವುದರಲ್ಲೂ ರುದ್ರಭಟ್ಟ ಸಿದ್ಧಹಸ್ತ. ನವನೀತ ತಸ್ಕರನ ಒಂದು ಸುಂದರವಾದ ಚಿತ್ರ ಹೀಗಿದೆ_

ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾಟತ್ತಿಗೆ ಪೋಗೆ ಗೆಜ್ಜೆಯಿಂ
ದನಿ ನಸು ಪೊಣ್ಮದಂತು ಪರಿತಂದೆಡಗೈಯೊಳ್ ತೋಡಿ ಬೆಣ್ಣೆಯಂ
ತಿನುತಿರೆ ಗೋಪಿ ಕಂಡೆಲೆಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ

(ಜ.ವಿ_೩_೫೧)

ಅದೇ ರೀತಿ ಯಶೋದೆ ಕೃಷ್ಣನಿಗೆ ಹಾಲು ಕುಡಿಸುವಾಗಿನ ಸನ್ನಿವೇಶವನ್ನು ರುದ್ರಭಟ್ಟ ಚಿತ್ರಿಸಿರುವ ರೀತಿ ಇಡೀ ಕನ್ನಡ ಸಾಹಿತ್ಯದಲ್ಲಿಯೇ ಅತ್ಯಪೂರ್ವ. ಹಾಲುಬೇಡ ಎಂದು ಹಠ ಹಿಡಿದು ಅಳುವ ಬಾಲಕೃಷ್ಣನಿಗೆ ಯಶೋದೆ ಒಲಿಸಿ ಹಾಲುಕುಡಿಸುವ ಪ್ರಯತ್ನ ಮತ್ತು ಮಗುವಿನ ಮುಗ್ಧಮಾತುಗಳು ಹೀಗಿವೆ_

ಶಕಟವಿಮರ್ದನಾ ಮುಸಲಿ ಬಾರದ ಮುನ್ನಮೆ ನಮ್ಮಹೇಮಘಂ
ಟಿಕೆ ಘಣಿಲೆಂಬ ನಂದಿನಿಯ ಪಾಲಿದೆ ನೀಂಕುಡಿಯಲ್ಕೆ ನಿನ್ನ ಚಂ
ಡಿಕೆ ಬಳೆದಪ್ಪುದೆಂದಬಲೆ ನಂಬಿಸೆ ಪಾಲ್ಗುಡಿದೀಗಳಬ್ಬೆ ಚಂ
ಡಿಕೆಯೆನಿತುದ್ದವಾದುದೆನುತುಂ ಬೆಸಗೊಳ್ವ ಮುಕುಂದನೊಪ್ಪುಗುಂ

ಮಗುವಿಗೆ ನಿದ್ದೆ ಮಾಡಿಸುವುದು ಹೇಗೆಂಬುದು ಎಲ್ಲ ತಾಯಂದಿರ ಸಮಸ್ಯೆ. ಅದಕ್ಕೆ ಉಪಾಯವೆಂಬಂತೆ ತಾಯಿ ಕಥೆ ಹೇಳುತ್ತಿದ್ದಾಳೆ. ಮಗು ಕಥೆ ಕೇಳುತ್ತ ಕೇಳುತ್ತ ಹೂಂಗುಟ್ಟುತ್ತ ತಾನೂ ಪಾತ್ರವಾಗಿಬಿಡುವ ವಿಸ್ಮಯವನ್ನು ಕವಿ ಈ ಪದ್ಯದಲ್ಲಿ ನೀಡಿದ್ದಾನೆ.

ಕತೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ
ಸ್ಥಿತನಾದಂ ಗುರುಪೇಟಿ ಹುಂ ದಶಶಿರಂ ಕೊಂಡುಯ್ದನಾ ರಾಮನಾ
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂಕೊಳ್ಳದುತ್ಕೋಪಹುಂ
ಕೃತಿಯಂ ಮಾಡುತುಮೌಂಡುಗರ್ಚಿ ಕಿಸುಗಣ್ಬಟ್ಟಚ್ಯುತಂ ರಂಜಿಕುಂ

(ಜ.ವಿ-೩-೬೧)

ಹಿಂದಿನ ಜನ್ಮದ ನೆನಪುಂಟಾಗಿ ಕತೆಗೆ ಹೂಂಗುಡದೆ ಉಗ್ರಕೋಪ ತೋರಿ ಹುಂಕಾರ ಮಾಡಿ ಔಡುಗಚ್ಚಿ ಕಿಡಿಗಣ್ಣು ಬಿಡುತ್ತಿರುವ ಮಗು ಕೃಷ್ಣನ ಈ ಚಿತ್ರ ತನ್ನ ಕನ್ನಡದೇಸಿಯ ಸೌಂದರ್ಯದಿಂದ ಸಹೃದಯರ ಮನಸ್ಸನ್ನು ವಿಶೇಷವಾಗಿ ಸೆಳೆಯುತ್ತದೆ.

ಎಳೆಯ ಮಕ್ಕಳು ನಿದ್ದೆಯಲ್ಲಿ ಕನವರಿಸುವುದು ಸಾಮಾನ್ಯ. ಕೃಷ್ಣನು ನಿದ್ರೆಯಲ್ಲಿ ತನ್ನ ಹಿಂದಿನ ವಿಷ್ಣು ಅವಸ್ಥೆಯಲ್ಲಿ ಬ್ರಹ್ಮ, ಮಹೇಶ್ವರ, ದೇವೇಂದ್ರರನ್ನು ಓಲಗದಲ್ಲಿ ಮಾತಾಡಿಸುವಂತೆ ಮಾತಾಡುವುದನ್ನು ಕೇಳಿ ಗೋಪಿಗೆ ಆಶ್ಚರ್ಯವಾಯಿತಂತೆ. ಕವಿಯ ಈ ಕಲ್ಪನೆ ಅತ್ಯಂತ ವಿನೂತನವಾದುದು.

ವನಜಜ ಬನ್ನಿಮಿತ್ತಹರ ಕುಳ್ಳಿರಿಮುನ್ನತಪೀಠದೊಳ್ ಪದಾ
ವನತಿಯನೇಟ್ ಮಹೇಂದ್ರ ದಿವಿಜರ್ ಪುಗೆ ಬಾರಿಸವೇಡೆನುತ್ತೆ ಮು
ನ್ನಿನ ನಿಜಲೀಲೆಯೋಲಗದ ಪೆರ್ಮೆಯ ಮಾತನದೊರ್ಮೆ ಸುಪ್ತಿಯೊಳ್
ಕನವರಿಸುತ್ತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಟ್ಚಿದಂ

ಕೃಷ್ಣನು ಮಣ್ಣು ತಿಂದನೆಂದು ಬಲರಾಮನು ಯಶೋದೆಗೆ ಚಾಡಿಹೇಳಿದಾಗ ಕೃಷ್ಣನ ಬಾಯಿತೆರೆಸಿ ನೋಡಿದಾಗ ಅದರಲ್ಲಿ ಸಮಸ್ತ ಬ್ರಹ್ಮಾಂಡವೇ ಅಡಗಿರುವುದನ್ನು ಕಂಡು ವಿಸ್ಮಿತಳಾದ ಯಶೋದೆ– ಕೃಷ್ಣರ ಸಂವಾದದ ಅತ್ಯಂತ ಸುಂದರ ಚಿತ್ರವನ್ನು

ರುದ್ರಭಟ್ಟ ನೀಡಿದ್ದಾನೆ. ವ್ಯಾಸರಾಯರ ಪ್ರಸಿದ್ಧ ಕೀರ್ತನೆಗೆ ಇದೇ ಪ್ರೇರಣೆ ನೀಡಿರಬೇಕು.

ಹರಿ ನೀಂ ಮಣ್ದಿಂದೆ, ತಿನ್ನೆಂ ಜನನಿ; ಪುಸಿದನೆಮ್ಮಗ್ರಜಂ ತೋಱು ವಕ್ತ್ರಾಂ
ತರಮಂ ನೋಡೆಂದು ಬಾಯಂ ತೆಱೆವುದುಮದಱೊಳ್ ವಾರ್ಧಿಯೇೞುಂ
ಕುಲೋರ್ವೀ
ಧರವೇೞುಂ ದ್ವೀಪವೇೞುಂ ಬೆರಸು ಜಗಮನೀರೇೞುಮಂ ಕೂಡೆ ಕಂಡ
ಚ್ಚರಿವಟ್ಟಂ ಮುಚ್ಚು ಮುಚ್ಚಾನನಮನೆನುತುಮಾಕಾಂತೆ ವಿಭ್ರಾಂತೆಯಾದಳ್

(ಜ.ವಿ.೩_೬೩)

ಕವಿ ಲೀಲಾಶುಕನ ಶ್ರೀಕೃಷ್ಣಕರ್ಣಾಮೃತ ಕಾವ್ಯದಿಂದ ಅನುವಾದಿಸಿದ ಪದ್ಯಗಳಿವಾದರೂ ರುದ್ರಭಟ್ಟನ ಔಚಿತ್ಯಪ್ರಜ್ಞೆ, ಕಾವ್ಯಪ್ರಜ್ಞೆ ಹಾಗೂ ಅಚ್ಚಗನ್ನಡದ ದೇಸಿಯ ಒಲವು ಈ ಪದ್ಯಗಳಲ್ಲಿ ತಾನೇತಾನಾಗಿ ವಿಜೃಂಭಿಸುತ್ತಿರುವುದು ಸ್ಪಷ್ಟ.

ರುದ್ರಭಟ್ಟನು, ಶ್ರೀಕೃಷ್ಣನು ಮಾನವ ಬಾಲಕನೇ ಎಂದು ಭಾವಿಸಿ ಬಾಲಲೀಲೆಗಳನ್ನು ವರ್ಣಿಸಿದರೂ ಅವನ ದೈವೀಸ್ವರೂಪವನ್ನು ಕವಿ ಯಾವತ್ತೂ ಮರೆತಿಲ್ಲ. ಈ ಮಾನವ ಮತ್ತು ದೈವೀವ್ಯಕ್ತಿತ್ವದ ನಡುವಿನ ಗೆರೆ ಅತ್ಯಂತ ತೆಳುವಾದ್ದು. ದೈವೀ ವ್ಯಕ್ತಿತ್ವದ ಅಡಿಪಾಯದ ಮೇಲೆ ಅವನ ಮನವಸಹಜ ವರ್ತನೆಯನ್ನು ಚಿತ್ರಿಸುವುದು ಕವಿಯ ಉದ್ದೇಶ. ಹಾಗಿರುವ ಕಾರಣದಿಂದಲೇ 'ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ತ್ವಬೋಧಮು ದ್ದ್ಯೋತಿಪುದು' ಎಂಬ ಮಾತು ಸಾರ್ಥಕವಾಗಿರುವುದು. ಕೃಷ್ಣನ ದೈವೀ ವ್ಯಕ್ತಿತ್ವ ಮರೆಯದ, ಮಾನುಷದ ವಿಜೃಂಭಣೆ ಇದಾಗಿದೆ.

ಕೈಚಪ್ಪಾಳೆ ತಟ್ಟುತ್ತ ತನ್ನ ಲೀಲಾವಿನೋದವನ್ನು ಮೆರೆಯುತ್ತಿರುವ ಬಾಲಕೃಷ್ಣನ ಚಿತ್ರವನ್ನು ಅತ್ಯಂತ ತನ್ಮಯತೆಯಿಂದ ವರ್ಣಿಸುವಲ್ಲಿ ಅದನ್ನು ಮನಗಾಣಬಹುದು–

ನೀರದೋತ್ಪಲವರ್ಣ ನಾಡಿದನಾಡಿದಂ ಕಮಲೇಕ್ಷಣಂ
ಚಾರುಹಾಸನಿವಾಸನಾಡಿದನಾಡಿದಂ ಸುಭಗಂ ಶುಭಾ
ಕಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈವಱೆಗಾಡಿದಂ

(ಜ.ವಿ–೩–೫೪)

ಕ್ಷೀರಲಂಪಟನಾಡಿದಂ ನವನೀತಚೋರಕನಾಡಿದಂ
ದಾರಕವ್ರಜಮಲ್ಲನಾಡಿದನಾಡಿದಂ ಹರಿ ಗೋಕುಲಾ
ಧಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ
ಸಾರನಾಟಕ ಸೂತ್ರಧಾರಿ ಮುರಾರಿ ಕೈವಱೆಗಾಡಿದಂ

(ಜ.ವಿ_೩–೫೫)

ರಾಗತಾಳ ಲಯಬದ್ಧವಾದ, ಕೃಷ್ಣನ ಬಾಲಲೀಲೆಗಳನ್ನು ಭಕ್ತಿಯಿಂದ, ಮುಕ್ತಕಂಠದಿಂದ ಕೊಂಡಾಡಿರುವ ಈ ಪದ್ಯಗಳು ಕನ್ನಡಕಾವ್ಯದಲ್ಲಿಯೇ ಅತ್ಯಪೂರ್ವ ರಚನೆಗಳಾಗಿವೆ.

ಹದಿನೆಂಟು ಆಶ್ವಾಸಗಳ ಜಗನ್ನಾಥವಿಜಯದಲ್ಲಿ ಅಷ್ಟಾದಶ ವರ್ಣನೆಗಳು ಕಾವ್ಯದ ತುಂಬ ಇಡಿಕಿರಿದಿವೆ. ಯುದ್ಧವರ್ಣನೆಗಳು, ಶೃಂಗಾರಸನ್ನಿವೇಶಗಳು ಹೇರಳವಾಗಿ ಬರುತ್ತವೆ. ಅತ್ಯಂತ ಸಹಜವಾದ ಪ್ರಕೃತಿವರ್ಣನೆಗಳೂ ಬರುತ್ತವೆ. ಬಹುಪಾಲು ವರ್ಣನೆಗಳು ಸಾಂಪ್ರದಾಯಿಕವಾದರೂ ಕೆಲವೊಂದು ಕಡೆಗಳಲ್ಲಾದರೂ ಜೀವಂತಿಕೆಯಿರುವುದು ಕಂಡುಬರುತ್ತದೆ. ಕುವಲಯಾಪೀಡದೊಂದಿಗೆ ಕೃಷ್ಣನು ಸೆಣಸಿದ್ದು ತುಂಬ ರೋಚಕವಾಗಿ ಮೂಡಿಬಂದಿದೆ.

ಅಱೆಯಟ್ಟಿತ್ತಟ್ಟ ಮುಟ್ಟಿತ್ತಡಿಸಿಪಿಡಿದುದಿಕ್ಕಿತ್ತು ಮೆಟ್ಟಿತ್ತದೌಂಕಿ
ತ್ತೆಱಗಿತ್ತೆತ್ತಿತ್ತಿಭಂ ಕೃಷ್ಣನನೆನುತಮರರ್ ಬೆರ್ಚೆ ಗೋಪಾಲಕರ್ ಬೆ
ಳ್ಕುಱೆ ದೈತ್ಯರ್ ಪೊಂಗೆ ಕೃಷ್ಣಂ ರಿಪುಕರಿಗಿನಿಸಂಗೆಲ್ಲವೀವಂತೆ ಪೋರ್ದಂ
ಕಿಱಿದಾನುಂ ಬೇಗದಿಂದಚ್ಯುತನ ತೆಱದಿನಾವಂವಿನೋದೈಕಶೀಲಂ

(ಜ.ವಿ–೬–೫೨)

ಕಂಸವಧೆಯ ಸನ್ನಿವೇಶವೂ ಅಷ್ಟೇ ಚೇತೋಹಾರಿಯಾಗಿದೆ. ರುದ್ರಭಟ್ಟನ ಅದ್ಭುತ ಕಲ್ಪನಾಶಕ್ತಿಗೆ ಹಾಗೂ ಕಾವ್ಯಸಾಮರ್ಥ್ಯಕ್ಕೆ ಶ್ರೇಷ್ಠ ನಿದರ್ಶನವೆಂಬಂತಿದೆ.

ಪ್ರಕಟಂ ಸಿಂಹಸ್ಫುರಲ್ಲಂಘನಮೆಸೆಯೆ ತವಂಗಕ್ಕೆ ಧೀಂಕಿಟ್ಟು ಕೃಷ್ಣಂ
ಮಕುಟಾಸ್ಫಾಲನಂ ಗೆಯ್ದಲೆಲೆ ರವಿಯನಾ ರಾಹುವೀಂಟಿತ್ತೆನಲ್ ಕೌ
ತುಕಮಾಯ್ತೆಂದಭ್ರದೊಳ್ ಬೊಬ್ಬಿಱೆಯೆ ದಿವಿಜರಾ ಮಾಡದಿಂ ಕಂಸನಂ ಮ
ಲ್ಲಕಳಕ್ಕೆತ್ತಿಕ್ಕಿ ತಾಂ ಮೇಲೆಱಗಿದನೆಱಗಲ್ ಸ್ವರ್ಗದಿಂ ಪುಷ್ಪವರ್ಷಂ

(ಜ.ವಿ_೬–೭೬)

ರಾಸಕ್ರೀಡೆಯ ಪ್ರಸಂಗ ಮತ್ತು ಪಾರಿಜಾತಾಪಹರಣ ಪ್ರಸಂಗಗಳು ಜಗನ್ನಾಥವಿಜಯದ ಬಹಳ ಪ್ರಮುಖ ರಸಸ್ಥಾನಗಳು. ರಾಸಕ್ರೀಡೆಯಲ್ಲಿ ಶೃಂಗಾರವೇ ಮುಖ್ಯವಾದರೆ, ಪಾರಿಜಾತಾಪಹರಣ ಶೃಂಗಾರ, ವೀರಹಾಸ್ಯ ಮೊದಲಾದುವುಗಳ ಹೃದ್ಯ ಮೇಳವಾಗಿದೆ. ಇದರಲ್ಲಿ ನಾರದನ ಪ್ರವೇಶ ರುದ್ರಭಟ್ಟನ ಸ್ವಂತಸೃಷ್ಟಿ. ಅವನ ಮೂಲಕ ಸತ್ಯಭಾಮೆಯಲ್ಲಿ ಸವತಿಮಾತ್ಸರ್ಯದ ಹೊಗೆ ಹೊತ್ತಿಸುತ್ತಾನೆ. ನಾರದನ ಕಲಹಪ್ರಿಯತೆ ಮುಂದಿನ ಎಲ್ಲ ಹಗರಣಗಳಿಗೆ ಪೀಠಿಕೆ ಹಾಕುತ್ತದೆ. ಪತಿ–ಪತ್ನಿಯರ ಪ್ರಣಯಕಲಹ, ಚಾಡಿಮಾತುಗಳ ಪ್ರಸಂಗದ ಸೃಷ್ಟಿ–ಹೀಗೆ ಕೌಟುಂಬಿಕ ಚಿತ್ರ ಪೂರ್ಣವಾಗಿದೆ.

ಇಂದ್ರ–ನಾರದರ ಸಂವಾದ,ದೇವೇಂದ್ರ–ಉಪೇಂದ್ರರ ಸಂವಾದ, ದ್ವಂದ್ವಯುದ್ಧ, ಶಚೀ–ಸತ್ಯಭಾಮೆಯರ ಪರಸ್ಪರ ವಾಗ್ವಾದ ಇವೆಲ್ಲ ಅತ್ಯಂತ ನಾಟಕೀಯ ಸನ್ನಿವೇಶಗಳನ್ನು ಸೃಷ್ಟಿಸಿದೆ.

ಇದು ಮುಂದೆ ಹರಿಕಥೆ ದಾಸರಿಗೆ,ನಾಟಕ, ಯಕ್ಷಗಾನಗಳಿಗೆ ಅತ್ಯಂತ ರೋಚಕವಸ್ತುವಾಯಿತು. ಉತ್ತರ ಕರ್ನಾಟಕದಲ್ಲಂತೂ 'ಶ್ರೀಕೃಷ್ಣಪಾರಿಜಾತ' ಎಂಬ ದೊಡ್ಡಾಟದ ಪ್ರಕಾರವೇ ಪ್ರಾರಂಭವಾಯಿತು. ಇದು ವಿಷ್ಣುಪುರಾಣದ ನೇರ ಪರಿಣಾಮವಂತೂ ಅಲ್ಲ. ರುದ್ರಭಟ್ಟನ ಕಾವ್ಯದ ಪ್ರೇರಣೆಯೂ ಇದರ ಹಿಂದೆ ಇದ್ದಿರಬೇಕು. ಈ ಎರಡೂ ಪ್ರಸಂಗಗಳನ್ನು ಅವನು ನಿರ್ವಹಿಸಿರುವ ರೀತಿಯಿಂದ ಕಾವ್ಯಸೌಂದರ್ಯಕ್ಕೆ ಎಲ್ಲಿಲ್ಲದ ಮೆರುಗು ಪ್ರಾಪ್ತವಾಗಿದೆ.

ರಾಸಕ್ರೀಡಾ ಪ್ರಸಂಗದಲ್ಲಿ ಗೋಪಿಯರೊಡನೆ ಸರಸ-ಸಲ್ಲಾಪದಿಂದಿದ್ದ ಕೃಷ್ಣ ಸ್ವಲ್ಪಕಾಲ ಗೋಪಿಕೆಯರಿಂದ ದೂರ ಸರಿದು ಅನ್ಯಪ್ರದೇಶಕ್ಕೆ ಹೋಗುತ್ತಾನೆ. ಗೋಪಿಕೆಯರು ಶ್ರೀಕೃಷ್ಣಚೇಷ್ಟಿತ ಸ್ವಾಯತ್ತ ರೂಪೆಯರಾಗಿ ಕೃಷ್ಣನ ವಿವಿಧ ಭಾವಭಂಗಿಗಳನ್ನು ಅಭಿನಯಿಸಿ ಪ್ರಣಯಕೋಪವನ್ನು ತಾಳುತ್ತಾರೆ. ಅವರ ಪ್ರಣಯಕೋಪದ ರೀತಿ ಹೀಗಿದೆ_

ಪ್ರಿಯೆಯೊರ್ಬಳ್ ಏನಿಗೂಢ ಸಂಭ್ರಮೆಯುಮೊರ್ಬಳ್ ಪಾಟಲೀಲೋಲನೇ
ತ್ರೆಯುಮೊರ್ವಳ್ ವಿತತ ಸ್ಮಿತಾನ್ವಿತೆಯುಮೊರ್ಬಳ್ ದಂತದಪ್ಪಾರುಗೋ
ಷ್ಠೆಯುಮೊರ್ಬಳ್ ವಿಮುಖೀಕೃತಾಕೃತಿಯು ಮೊರ್ಬಳ್ ಕುಂಚಿತಭ್ರೂಶಲಾ
ಕೆಯುಮಾಗಿರ್ದ ಬೆಡಂಗದೇಂ ಪಡೆದುದೋ ಕೃಷ್ಣಂಗತಿಪ್ರೀತಿಯಂ

(ಜ.ವಿ.೫_೩೨)

ರಾಸಕ್ರೀಡಾ ಪ್ರಸಂಗದಲ್ಲಿ ಗೋಪಿಯರ ವಿರಹಭಾವ ಚಿತ್ರಿತವಾಗಿರುವುದು ಹೀಗೆ_

ಪೊಡೆಯಲರಾತಕ್ಷಿಗಮಗೋಚರಮಾಗಿರೆ ನಿಳ್ಕಿ ನೋಡಿಧೀಂ
ಕಿಡುವ ರಥಧ್ವಜಾಗ್ರಮನದುಂ ಮಸುಳುತ್ತಿರೆ ತೇರಧೂಳಿಯಂ
ಬಿಡೆ ನಡೆ ನೋಡಿ ಧೂಳಿಯುಮಡಂಗಿರೆ ಕೃಷ್ಣನ ತೇರಧೂಳಿಯ
ಪ್ಪೊಡಮಿರದಾಯ್ತೆನುತ್ತಬಳೆ ಧೂಳಿವಿಡುತ್ತಿರೆ ಬಾಯ್ಬಲುಂಬಿದಳ್

(ಜ.ವಿ.೫_೧೦೦)

ಶಿಶುಪಾಲವಧ ಪ್ರಸಂಗದಲ್ಲಿ ಅವನ ಕಾವ್ಯಕೌಶಲ ಉನ್ನತಸ್ತರಕ್ಕೇರಿದೆ. ವಿಷ್ಣುವಿನ ಅವತಾರಗಳನ್ನು ವಿಡಂಬಿಸುವಲ್ಲಿ ಪಂಪನನ್ನು ನೆನಪಿಗೆ ತರುತ್ತಾನಾದರೂ ರುದ್ರಭಟ್ಟನ ಸ್ವೋಪಜ್ಞತೆ ಎದ್ದು ಕಾಣುತ್ತದೆ.

ಉದಾಹರಣೆಗೆ ಈ ಪದ್ಯಗಳನ್ನು ನೋಡಬಹುದು_

ನೀನಾದಿಕೂರ್ಮನಾದಂ
ದಾನಜಿದೊಡೆ ಪಿಡಿದು ತಂದದಂ ಮತ್ತೀಡೋ
ದ್ಯಾನಸರೋವರ ಸಲಿಲ
ಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ

ನೀಂ ಪೆಸರ ಪಂದಿಯಾದಂ
ದಾಂ ಪುಟ್ಟಿದೆನಪ್ಪೊಡಂದೆ ಬೇಂಟೆಯ ನೆವದಿಂ
ದಂ ಪಿಡಿದು ತಂದು ಪಂದಿಗ
ಲಂಪಿಂ ಸಂಬರಮನಜಿಯಿಸದೆ ಮಾಣ್ದಪೆನೇ

(ಜ.ವಿ.೧೭_೩೫, ೩೬)

ಪಾರಿಜಾತಾಪಹರಣ ಪ್ರಸಂಗವಂತೂ ಈ ಕಾವ್ಯದ ಒಂದು ರಸಸ್ಥಾನ. ಇಂದ್ರನ ನಂದನವನದಿಂದ ಶ್ರೀಕೃಷ್ಣನು ಪ್ರಿಯಸತಿ ಸತ್ಯಭಾಮೆಗಾಗಿ ಪಾರಿಜಾತವೃಕ್ಷವನ್ನು ತರುವ ಈ ಪ್ರಸಂಗದಲ್ಲಿ ಜಿಷ್ಣು ಮತ್ತು ವಿಷ್ಣುಗಳಲ್ಲಿ ಕದನವಾದ ಸಂದರ್ಭದಲ್ಲಿ ಸತ್ಯಭಾಮೆಗೂ ಶಚಿಗೂ ವಾಗ್ವಾದ ವೇರ್ಪಡಿಸಿರುವ ರೀತಿ ಅತ್ಯಂತ ಸ್ವಾರಸ್ಯವಾಗಿದೆ,ಇಂದ್ರನಿಗೆ ಸೋಲಾಯಿತು ಎಂದು ಶಚಿಯನ್ನು ಸತ್ಯಭಾಮೆ ಚುಚ್ಚಿನುಡಿದಾಗ ಶಚಿ ಕೋಪಗೊಂಡು_

ಪಿಡಿಲೆನ್ನೋಪಂಗೆ ಶಸ್ತ್ರಂ ಮರದ ಗದೆ ಗಡಂ ನಿನ್ನ ಕಾಂತಂಗೆ ಕಾಯ್ಪಿಂ
ಗೆಡೆಗೊಂಡೈರಾವತೇಭಂ ಮದಧಿಪತಿಗೆ ವಾಹಂ ತ್ವದೀಶಂಗೆ ಗೃಧ್ರಂ
ಗಡ ದೇವೇಂದ್ರತ್ವವೀ ಮತ್ಪತಿಗೆ ಪದವಿ ಗೋಪಾಲಕತ್ವಂ ಗಡಂ ನಿ
ನ್ನೊಡೆಯಂಗಿನ್ನೇತಜಿಕೊಳ್ ಮತ್ಪತಿಗೆ ದೊರೆ ಭವದ್ವಲ್ಲಭಂ ಸತ್ಯಭಾಮೇ

(ಜ.ವಿ.೧೩_೮೪)

ಎಂದು ಮೂದಲಿಸಿದಾಗ ಸತ್ಯಭಾಮೆಯು

ಅಸುರಯಮದಂಡವೆನಲು
ರ್ವಿಸುವ ಮಹಾಗದೆಯನಿಟ್ಟೆಸಿ ವಜ್ರಮನಭವ
ರ್ಣಿಸಿದಪೆ ಕೇವಣದೊಳ್ ಕೀ
ಲಿಸಲಲ್ಲದೆ ವಜ್ರದಂತದೇನಾಯುಧಮೇ

ನಾಗಾಂತಕನೀ ಗರುಡಂ
ನಾಗನದೈರಾವತಂ ಪರಾಜಿತವಂತಾ
ನಾಗೇಂದ್ರನದಂ ಬಣ್ಣಿಸಿ
ನಾಗಾರಿಯನಕಟ ಗೃಧ್ರನೆಂದೇಟೆಪುದೇ

(ಜ.ವಿ.೧೩_೮೫,೮೬)

ಎಂದು ತಕ್ಕ ಉತ್ತರ ನೀಡುತ್ತಾಳೆ. ಶಚಿಯು ಕೋಪಗೊಂಡು

ಒಂದು ನಿಟಲಾಕ್ಷಿ ಮಿಗಿಲುಂ
ಟೆಂದು ಹರಂ ತಾಳ್ದಿದಂ ಸ್ವಯಂಪ್ರಭುತೆಯನೆಂ
ದಂದು ಸಹಸ್ರವಿಲೋಚನ
ದಿಂದೆಸೆವಿಂದ್ರಂ ಹರಿಪ್ರಸಾದಸ್ಪಹನೇ

ತನ್ನ ಗಂಡನು ಸಹಸ್ರಾಕ್ಷನೆನಿಸಿರುವುದೊಂದು ದೊಡ್ಡ ವಿಚಾರ ಎಂದು ಕೊಚ್ಚಿಕೊಂಡಾಗ ಸತ್ಯಭಾಮೆಯು ಅದನ್ನು ಹೀಗೆ ಗೇಲಿ ಮಾಡುತ್ತಾಳೆ_

ಉಸಿರಲ್ವೇಡಿನ್ನಕ್ಕ ಕೇಳ್ದಜಿವೆನಿಂದ್ರಂಗೆಮ್ಮ ಭಾವಂಗೆ ನೇ
ತ್ರಸಹಸ್ರಂ ದೊರೆಕೊಂಡದುಃಸ್ಥಿತಿಯನಾ ಹಾಸ್ಯೋಕ್ತಿಯಂತಿರ್ಕೆ ರಂ
ಜಿಸುಗುಂ ಕಣ್ ಪಲವೆಂಬೊಡೀಯವಯವಂ ಹೀನಾಧಿಕಂ ಲೇಸೆ ಮಾ
ಣ ಸದಾಳಾಪಮನಣ್ಮೆ ಕಾದುಗೆ ಸಹಸ್ರಾಕ್ಷಂ ಸರೋಜಾಕ್ಷನೊಳ್

(ಜ.ವಿ.೧೩_೮೮, ೮೯)

ಮುಖ್ಯವಾಗಿ ಇದು ಕೃಷ್ಣಭಕ್ತಿಕಾವ್ಯ. ಹೆಜ್ಜೆಹೆಜ್ಜೆಗೆ ಕವಿ ಕೃಷ್ಣಭಕ್ತಿಯಲ್ಲಿ ಮೈಮರೆಯುತ್ತಾನೆ. ಸಂದರ್ಭ ಒದಗಿದಾಗಲೆಲ್ಲ ಬೇರೆ ಬೇರೆ ಪಾತ್ರಗಳ ಬಾಯಿಂದ ಕೃಷ್ಣನನ್ನು ಸ್ತುತಿಸುವ ರೀತಿಯಲ್ಲೆ ಕೃಷ್ಣಭಕ್ತಿಪಾರಮ್ಯವನ್ನು ಮೆರೆಯುತ್ತಾನೆ. ಬ್ರಹ್ಮ, ಬೃಹಸ್ಪತಿ,ಇಂದ್ರ, ಭೂದೇವಿ, ನಾರದ, ಅಕ್ರೂರ, ವಸುದೇವ_ದೇವಕಿಯರು, ಕಾಳಿಂಗವಧುಗಳು, ಗೋಪಿಕಾಸ್ತ್ರೀಯರು ಇವರೆಲ್ಲ ಮಾಡುವ ಸ್ತುತಿಯಲ್ಲಿ ಅದು ಅಭಿವ್ಯಕ್ತಗೊಂಡಿದೆ.

ನಾರದನ ಈ ಕೃಷ್ಣಸ್ತುತಿಯಲ್ಲಿ ಅವನ ವಿರಾಟ್ ದರ್ಶನ ಮೂಡಿಬಂದಿದೆ_

ಜಗಮಂ ನುಂಗುವ ಶೂಲಿ ನೀನೆ ಜಗಮಂ ಮಾಟ್ಪಬ್ಜಜಂ ನೀನೆ ತ
ಜ್ಜಗಮಂ ರಕ್ಷಿಪ ವಿಷ್ಣು ನೀನೆ ಜಗಮುಂ ಪೋ ನೀನೆ ಸರ್ವೇಶ ಸ
ರ್ವಗ ಸರ್ವಾತ್ಮಕಸರ್ವಭೂತಮಯ ನಿನ್ನಿಂ ಭಿನ್ನವಾಗಿರ್ಪ ವ
ಸ್ತುಗಳಿಲ್ಲೀ ರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ

(ಜ.ವಿ.೫-೮೯)

ದಂತವಕ್ರನ ಬಾಯಿಂದ ಮಾಡಿಸಿರುವ ಕೃಷ್ಣಸ್ತುತಿ ಕೂಡ ಅವನ ಮಹಿಮೆಯನ್ನು ಮನಸ್ಸಿಗೆ ನಾಟುವಂತೆ ಚಿತ್ರಿಸುತ್ತದೆ_

ನೆನೆದಾತಂ ನೆನೆಯಂ ಭವಾದಿ ಸುಖಮಂ ತನ್ನಂದಮಂ ಕಂಡ ಮ
ರ್ತ್ಯನಣಂ ಕಾಣನವಿದ್ಯೆಯಂ ನಿಜಪಯಸಂಸ್ಸೇವೆಯಂ ಮಾಡಿದಂ
ಜನನೀಸ್ತನ್ಯದ ಸೇವೆಯೊಳ್ ತೊಡರನೆಂಬಾ ಜಾಹ್ನವೀ ಸಿಂಧುವೀ
ತನ ಕಾಲ್ಗರ್ಚಿನ ನೀರೆನಲ್ ಹರಿಯ ಪೆಂಪಂ ನೀನದೇಂ ಬಣ್ಣಿಪೈ

(ಜ.ವಿ.೮–೯೪)

ರುದ್ರಭಟ್ಟನ ಸಾಮರ್ಥ್ಯ ಮತ್ತು ದೌರ್ಬಲ್ಯಗಳೆರಡೂ ಅವನ ವರ್ಣನಾಪ್ರಧಾನವಾದ ಭಾಷಾಶೈಲಿಯೇ ಆಗಿದೆ. ಸಂಸ್ಕೃತಭೂಯಿಷ್ಠವಾದ ಮಾರ್ಗಶೈಲಿಯಲ್ಲಿ ಎಷ್ಟು ಲೀಲಾಜಾಲವಾಗಿ ತನ್ನ ಲೇಖನಿ ಹರಿಸಬಲ್ಲನೋ ತನಗೆ ಬೇಕೆನಿಸಿದರೆ ಅಚ್ಚಗನ್ನಡದ ದೇಸಿಯಲ್ಲೂ ಹಾಗೆಯೇ ಓಡಿಸಬಲ್ಲ. ಜನಬಳಕೆಯಲ್ಲಿರುವ ನುಡಿಗಟ್ಟುಗಳು ಮತ್ತು ಗಾದೆಮಾತುಗಳನ್ನು ಬೇಕಾದಹಾಗೆ ಬಳಸಬಲ್ಲ. ತನ್ನ ಕಾವ್ಯದಲ್ಲಿ

'ಪೊಸತೆನೆ ಪೇೞ್ವೆ' ಬಯಕೆಯಂತೂ ಇದೆ.ಅವನ ಈ ಕೆಲವು ಪದ್ಯಗಳು ಅವನ ವರ್ಣನಾ ಕೌಶಲಕ್ಕೂ ಚಿತ್ರ ನಿರ್ಮಾಣ ಸಾಮರ್ಥ್ಯಕ್ಕೂ ಉತ್ತಮ ನಿದರ್ಶನಗಳಾಗಿರುವಂತೆಯೇ ಅಚ್ಚಗನ್ನಡ ಶೈಲಿಗೂ ಶ್ರೇಷ್ಠಉದಾಹರಣೆಗಳಾಗಿವೆ. ಸಂಧ್ಯಾ ಕಾಲದ ವರ್ಣನೆಗೆ:

ಒಂದದ ಪಗಲಿರುಳೆರಡಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲ್ದವೊಲೆಸೆದುದು
ಮಂದೈಸಿದ ಸಂಜೆಗೆಂಪು ಪಡುವಣದೆಸೆಯೊಳ್

(ಜ.ವಿ.೧೬–೯೫)

ಆಕಾಶದ ನಕ್ಷತ್ರಗಳು ಕವಿಗೆ ಕಂಡ ರೀತಿಯೂ ವಿನೂತನ ಹಾಗೂ ವಿಶಿಷ್ಟ–

ಇಳೆಗೆ ಪಳಗಾಲದಂಬರ
ಮೊಳಸಾರ್ಗುಂ ಬೀೞ್ಗುಮೆಂದು ಧಾತ್ರಂ ಬಲ್ಪಿಂ
ದಳವಡೆ ಬೆಟ್ಟದ ಬೆಳ್ಳಿಯ
ಮೊಳೆಗಳೆನಲ್ ತೊಳಗಿ ಬೆಳಗಿದವು ತಾರಗೆಗಳ್

(ಜ.ವಿ.೧೬–೯೯)

ಬೇಟೆಯ ವರ್ಣನೆಯ ಸಂದರ್ಭದಲ್ಲಿ ಹೆಣ್ಣು ಗಂಡು ಜಿಂಕೆಗಳು ಪರಸ್ಪರ ಕೂಡುವ ಸಮಯದಲ್ಲಿ ತಾಯಿ ಜಿಂಕೆ ಬೇಟೆಗಾರನ ಭಲ್ಲೆಗೆ ತುತ್ತಾದರೂ ಹಾಲುಕುಡಿಯಲು ಹಾತೊರೆಯುತ್ತಿರುವ ತನ್ನ ಮರಿಗೆ ಹಾಲೂಡಿದ್ದೇ ಅಲ್ಲದೆ ತನ್ನ ಪ್ರಿಯನೊಡನೆ ನೆರೆತು ಅನಂತರ ಪ್ರಾಣಬಿಟ್ಟಿತು.

ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗಮಂ ಕುರಂಗಿ ಸಾ
ರ್ದರಲೆಡೆಗೊಂಡು ಭಲ್ಲದಿನೆರಟ್ಕೆಡಿಯಾಗೆ ಕಿರಾತನೆಚ್ಚೊಡಂ
ತರಿಸದೆ ಪುಲ್ಲೆ ಸಾರ್ಚಿ ಮಱಿಯಂ ಮೊಲೆಯಂ ನೆರೆದೇಣನಂ ಬೞಿ
ಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ

(ಜ.ವಿ.೧೬–೨೨)

ವಾಸ್ತವವಾಗಿ ನೋಡಿದರೆ ಜಗನ್ನಾಥವಿಜಯದ ಅರ್ಧಕ್ಕಿಂತಲೂ ಹೆಚ್ಚುಭಾಗ ಇಂಥ ಅಚ್ಚಗನ್ನಡದ ಹಾಗೂ ಹಿತವಾದ ಕನ್ನಡ ಸಂಸ್ಕೃತದ ಸಮ್ಮಿಶ್ರ ಪದಗಳಿಂದ ತುಂಬಿದೆ. ಇನ್ನುಳಿದ ಸ್ವಲ್ಪಭಾಗ ಸಂಸ್ಕೃತ ಭೂಯಿಷ್ಠ ಪದಗಳಿಂದ ತುಂಬಿದೆ. ಅದರಲ್ಲೂ ಭಾವಾನುಸಾರಿಯಾದ ಭಾಷಾಪ್ರಯೋಗ ಕಂಡುಬರುತ್ತದೆ. ಅನೇಕ ಕಡೆಗಳಲ್ಲಿ ಚೆಲುವಾದ ಸರಗವಾಗಿ ಸಾಗುವ ಸ್ವಭಾವೋಕ್ತಿಗಳಿಂದ ಕೂಡಿದ ಪದ್ಯಗಳೂ ಗದ್ಯದ ಸಾಲುಗಳೂ ಇರುವ ಹಾಗೆಯೇ ಕೆಲವೆಡೆ ಕಬ್ಬಿಣದ ಕಡಲೆಯಂಥ ಶಬ್ದಪ್ರಯೋಗಗಳೂ ಯಮಕ, ಅನುಪ್ರಾಸ, ಮುಕ್ತಪದಗ್ರಹಣವೇ ಮೊದಲಾದ ಶಬ್ದಾಲಂಕಾರಗಳೂ, ಪರಿಸಂಖ್ಯೆ, ವಿರೋಧಾಭಾಸ, ಶ್ಲೇಷೆ ಮೊದಲಾದ ಅರ್ಥಾಲಂಕಾರಗಳೂ ಇಡಿಕಿರಿದಿವೆ. ಹತ್ತನೇ ಆಶ್ವಾಸದಲ್ಲಿ ಹತ್ತೊಂಬತ್ತನೇ ಪದ್ಯದಿಂದ ನಲವತ್ತೆಂಟನೇ ಪದ್ಯದವರೆಗೆ ನಿರಂತರವಾಗಿ ಯಮಕಗಳನ್ನು ಪ್ರಯೋಗಿಸಿದ್ದಾನೆ.

ಒಟ್ಟಾರೆ ಹೇಳಬೇಕೆಂದರೆ ಉನ್ನತ ಕಲ್ಪನಾವಿಲಾಸ, ವಸ್ತುಪ್ರಜ್ಞೆ, ಭಾಷಾಪ್ರೌಢಿಮೆ ವರ್ಣನಾನೈಪುಣ್ಯ ಇವೆಲ್ಲ ಇದ್ದೂ ಪ್ರತಿಭೆಗೆ ಔಚಿತ್ಯದ ಕಡಿವಾಣವಿಲ್ಲದ್ದರಿಂದ ಹಾಗೂ ಹಾಳತವಾದ ಕಲಾಪ್ರಜ್ಞೆ ಇಲ್ಲದ್ದರಿಂದ ಅವನ ಕೃತಿ ಮಹಾಕೃತಿಯೆನಿಸದೆ ಒಂದು ಶ್ರೇಷ್ಠಕೃತಿಯಾಗಿದೆ.

❑❑

# ಸಂವೇದನೆ– ಸಂಸ್ಕೃತಿ – ಸೃಜನಶೀಲತೆ:

## (ಕನ್ನಡ ಕಾವ್ಯ ಸಂದರ್ಭ: ಟಿಪ್ಪಣಿಗಳು)

---

–ಸತ್ಯನಾರಾಯಣರಾವ್ ಅಣತಿ

ಸೃಜನಶೀಲತೆ ಒಂದು ಸಾಂಸ್ಕೃತಿಕ ಸಂದರ್ಭದ ವ್ಯಕ್ತಿ ಪ್ರತಿಭೆಯ ಚಟುವಟಿಕೆ. ಪರಂಪರೆಯನ್ನು ಆಲೋಡನೆ ಮಾಡುತ್ತಾ ವರ್ತಮಾನಕ್ಕೆ ಪ್ರತಿಕ್ರಿಯೆಯಾಗಿ ಮುಂದಕ್ಕೂ ಚಾಚಿಕೊಳ್ಳುವ ಪ್ರಕ್ರಿಯೆ ಎಂಬುದು ನಮಗೆಲ್ಲಾ ತಿಳಿದಿರುವ ವಿಷಯವೇ ಆಗಿದೆ. ಈ ಪ್ರಕ್ರಿಯೆಯಲ್ಲಿ ಲೇಖಕನ 'ಸಂವೇದನೆ' ಕ್ರಿಯೇಟಿವಿಟಿಯ ಮೂಲ ಧಾತು: 'ಸಂವೇದನೆ' ಎಂಬುದು ವಸ್ತುವಿಗೆ ಸಂಬಂಧಿಸಿದ್ದಾಗಿರುತ್ತದೆ. ಇದು ಪ್ರಜ್ಞೆಯ ಪಾತಳಿಯಲ್ಲಿ, ಒಳ ಮನಸ್ಸಿಗೆ ಸಂಬಂಧಪಟ್ಟದ್ದಾಗಿರುತ್ತದೆ. ಅನುಭವವನ್ನು ಪರಿಭಾವಿಸುವ ಪ್ರಕ್ರಿಯೆಯಲ್ಲಿ: ಗ್ರಹಿಕೆ, ಪ್ರಜ್ಞೆ, ಅರಿವು (ಜ್ಞಾನ), ತಿಳುವಳಿಕೆಗಳಂಥ ಅಮೂರ್ತ ದ್ರವ್ಯಗಳ ಸಂಯೋಜನೆಯಲ್ಲಿ ಕೃತಿರಚನೆಯಾಗುತ್ತದೆ. ಸೃಜನಶೀಲ ಮನಸ್ಸು ಅನುಭವಗಳಿಗೆ ಮೂರ್ತರೂಪವನ್ನು ಕೊಡುವ ಪ್ರಕ್ರಿಯೆಯಲ್ಲಿ ಒಂದು ಕೃತಿ ಭಾಷಾಮಾಧ್ಯಮದಲ್ಲಿ ಆಕೃತಿಯಾಗಿ ರೂಪತಳೆಯುವುದು. ಅಂಥ ರೂಪಗಳು ಸೃಜನಶೀಲ ವ್ಯಕ್ತಿಯ ಬದುಕಿನ ಕಾಲ ಘಟ್ಟದ ಸಂಸ್ಕೃತಿ ಚರಿತ್ರೆಯಾಗಿ ಒದಗಿಬರುತ್ತವೆ. ಕವಿ – ಲೇಖಕ ಸಂಸ್ಕೃತಿಯ ನೇತಾರನಾಗಿರುತ್ತಾನೆ. ಈ ಜವಾಬ್ದಾರಿ ಅತ್ಯಂತ ಹೊಣೆಗಾರಿಕೆಯ ಕಾರ್ಯವಾಗಿರುತ್ತದೆ. ಈ ಹೊಣೆಗಾರಿಕೆಯನ್ನು ನಿರ್ವಹಿಸುವ ಸಂದರ್ಭದ ರಾಜಕೀಯ, ಬದುಕಿನ ಆಗುಹೋಗುಗಳು, ನಂಬಿಕೆಗಳು, ಶ್ರದ್ಧೆ, ಜೀವನಕ್ರಮ, ಸಂಭ್ರಮಾಚರಣೆಗಳು, ಕನಸು – ಕಾಣ್ಕೆ, ಎಲ್ಲವುಗಳೊಡನೆ ಅನುಸಂಧಾನದಲ್ಲಿ ತೊಡಗಿರುವ ಲೇಖಕ, ತನ್ನ ವಿಚಾರ ವಿವೇಕಗಳಿಂದ ಪರಿಶೀಲಿಸುತ್ತಾ, ಮೂರ್ತರೂಪದಲ್ಲಿ ಕಲಾಕೃತಿಯಾಗಿ ಕಟ್ಟಿಕೊಡುತ್ತಾನೆ 'ರೂಪಕ' ಭಾಷೆಯಲ್ಲಿ. ಅಂಥವು ಓದುಗನನ್ನು ಮುಟ್ಟಿ ತಟ್ಟಿ ಆರ್ದ್ರಗೊಳಿಸುತ್ತಾ ವಿಚಲಿತರನ್ನೂ ಆಗಿಸುವ ರೀತಿ ನೀತಿಗಳನ್ನು ಕಂಡಿದ್ದೇವೆ. ಕಾಲ ಕಾಲಕ್ಕೆ, ಸಂದರ್ಭಕ್ಕೆ ಅನುಗುಣವಾಗಿ ಅಂಥ ಕಲಾಕೃತಿಗಳು ಸೃಷ್ಟಿಯಾಗುತ್ತಿರುತ್ತವೆ.

* * * *

ಒಂದು ಸಂಸ್ಕೃತಿ ಸಂದರ್ಭದ ನಾವೆಲ್ಲರೂ (ಸಹೃದಯರು) ಚರಿತ್ರೆಯ ವಾರಸುದಾರರೇ. ಸೃಜನಶೀಲ ವ್ಯಕ್ತಿ ತನ್ನ ಪೂರ್ವಿಕರೊಂದಿಗೆ ಆಲೋಡನೆ ಮಾಡುತ್ತಾ, ತನ್ನ ಕಾಲದ ಗ್ರಹಿಕೆಗಳೊಂದಿಗೆ ಸಂವೇದನಾಶೀಲನಾಗಿ ಚರಿತ್ರೆ ಮತ್ತು ವರ್ತಮಾನವನ್ನು ಮುಖಾಮುಖಿಯಾಗಿಸಿ ಚಲನಶೀಲ ಆಲೋಚನೆಗಳನ್ನು ಕೃತಿಯಾಗಿಸುತ್ತಾ ಇರುತ್ತಾನೆ. ಹಾಗೆಯೇ ಪಾರಂಪರಿಕ ಪ್ರಜ್ಞಾಪ್ರವಾಹವನ್ನೂ, ತನ್ನ ಕಾಲದ ಸಂವೇದನೆಯೊಂದಿಗೆ ಪರಿಶೋಧಿಸುತ್ತಾ ತನ್ನ ಕಾಣ್ಕೆಯೊಂದಿಗೆ ಮುಂದಿನ ಪೀಳಿಗೆಯ ಲೇಖಕರಿಗೆ ದಾಟಿಸುತ್ತಿರುತ್ತಾನೆ. ವ್ಯಾಸ ವಾಲ್ಮೀಕಿ; ಪಂಪ ಕುಮಾರವ್ಯಾಸ; ವಚನಕಾರರು ಹರಿಹರ ರಾಘವಾಂಕರಿಗೆ ವಾರಸುದಾರರಾಗಿದ್ದರು ಕುವೆಂಪು, ಬೇಂದ್ರೆ, ಅಡಿಗರು. ಇವರೆಲ್ಲರೂ ತಾವು ಪಡಕೊಂಡ ವಾರಸುದಾರಿಕೆಯನ್ನು ಮುಂದಿನವರಿಗೆ ದಾಟಿಸಿದವರು. ಇಂಥ ಪ್ರಕ್ರಿಯೆಯಲ್ಲಿ ಕಳೆದ ಶತಮಾನದ ಕನ್ನಡದ ಬಹು ಮುಖ್ಯ ಕವಿಗಳೆಲ್ಲರೂ ತಮ್ಮ ಕಾಲಘಟ್ಟದ ಸಂವೇದನೆಯನ್ನು ಪರಿಶ್ರಮದಿಂದ ಕೃತಿಯಾಗಿಸುವ ಮೂಲಕ ತಮ್ಮ ತಮ್ಮ ವ್ಯಕ್ತಿ ಪ್ರತಿಭೆಯನ್ನು ಕಾಣಿಸಿದ್ದಾರೆ.

* * * *

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಕುವೆಂಪು, ಬೇಂದ್ರೆ, ಅಡಿಗರು ಪ್ರಖರ ಪ್ರತಿಭೆಯ ಶಿಖರ ಕವಿಗಳಾಗಿದ್ದರು: ಇವರುಗಳು ತಮ್ಮ ಸಮಕಾಲೀನ ಸಂವೇದನೆಯನ್ನು ಅನನ್ಯ ರೀತಿಯಲ್ಲಿ ಅಭಿವ್ಯಕ್ತಮಾಡಿದವರು. ಭಿನ್ನ ಭಿನ್ನ ಸವಾಲುಗಳನ್ನು ಎದುರಿಸುತ್ತಾ ಭಾಷೆ ಬಂಧ ದರ್ಶನಗಳಲ್ಲಿ ಅನನ್ಯತೆಯನ್ನು ಕಾಣಿಸಿದ್ದಾರೆ.

ಕುವೆಂಪು ಹುಟ್ಟಿ ಬೆಳೆದದ್ದು ಮಲೆಸೀಮೆಯ ಒಂದು ಹಳ್ಳಿಯಲ್ಲಿ. ಉನ್ನತ ವಿದ್ಯಾಭ್ಯಾಸದಿಂದ ನಗರ ಪ್ರಜೆಯಾಗಿ ದೊಡ್ಡ ಹುದ್ದೆಗಳನ್ನು ಅಲಂಕರಿಸಿದವರು. ಜಾತೀಯತೆಯ ಕೀಳರಿಮೆಯನ್ನು ಉನ್ನತ ಜ್ಞಾನ ವಿದ್ಯೆ ಬುದ್ಧಿ ಭಾವನೆಗಳ ಪರಿವೇಷದಿಂದ ಮೆಟ್ಟಿ ನಿಂತವರು. ವೇದ ಉಪನಿಷತ್, ಪುರಾಣಗಳ ಸಮಷ್ಠಿ ಪ್ರಜ್ಞೆಯ ಉನ್ನತ ಮೌಲ್ಯಗಳ ಬೆಳಕಿನಲ್ಲಿ ತಮ್ಮ ಸಂವೇದನೆಯನ್ನು ಹರಿತಗೊಳಿಸಿಕೊಂಡರು. ಪ್ರಜಾಪ್ರಭುತ್ವದ ಸ್ವಾತಂತ್ರ್ಯ ಸಮಾನತೆಯನ್ನು ಸೋದರತ್ವವನ್ನು ಮೈಗೂಡಿಸಿಕೊಂಡು ವ್ಯಕ್ತಿ ಪ್ರತಿಭೆಯ ಶಿಖರವನ್ನು ಏರುತ್ತಾ ಸಾಗಿದವರು. ವೈಚಾರಿಕ ಮನಸ್ಸಿನ ವೈಜ್ಞಾನಿಕ

---

'ರಚನ', ೨ನೇ ತಿರುವು, ಬಾಲಯೇಸು ಚರ್ಚ್ ಪಕ್ಕ, ಶರಾವತಿನಗರ, ಶಿವಮೊಗ್ಗ ೫೭೭ ೨೦೧

ತಿಳುವಳಿಕೆಯನ್ನು ಅಭಿವ್ಯಕ್ತಿಯ ಸಾಧನಗಳಾಗಿಸಿಕೊಂಡ ಕುವೆಂಪು ಅವರಿಗೆ ತಮ್ಮ ಸಮಕಾಲೀನ ಲೇಖಕರಿಗಿಂತ ಭಿನ್ನವಾದ ಸವಾಲುಗಳನ್ನು ಎದುರಿಸಬೇಕಾಗಿತ್ತು. ಸ್ವಾತಂತ್ರ್ಯ ಸಮಾನತೆಗಾಗಿ, ವೈದಿಕ ಪ್ರಣೀತ ಹಲವು ಅವೈಚಾರಿಕ ನಂಬಿಕೆಗಳು, ಜಾತೀಯತೆ, ನಡವಳಿಕೆ ಮತ್ತು ಮೌಢ್ಯದ ವಿರುದ್ಧ ಹೋರಾಡಬೇಕಾಗಿತ್ತು. ಆ ಸವಾಲುಗಳನ್ನು ಕವಿತೆ, ಮಹಾಕಾವ್ಯ, ಕಾದಂಬರಿಗಳು ಮತ್ತು ಲೇಖನಗಳಲ್ಲಿ ನಿರ್ವಹಿಸಿದ ರೀತಿ ಅನನ್ಯವಾದುದಾಗಿದೆ.

ಕುವೆಂಪು ಅವರು ತಮ್ಮ ನೆನೆಪಿನ ದೋಣಿಯಲ್ಲಿ: **ಅಲೌಕಿಕ ಸಾನಿಧ್ಯಾನುಭವದ ಅಮಲು ನನ್ನ ಚೇತನವನ್ನೆಲ್ಲಾ ಆಕ್ರಮಿಸಿದಂತಿತ್ತು'** (ಪುಟ ೮೨೮) ಮತ್ತು **'ಆತ್ಮದ ಅಮೃತತ್ವದ ಶ್ರದ್ಧೆ ನನಗೆ ದಿಟ ವಸ್ತುವಾಗಿತ್ತು'** (ಪುಟ ೮೨೯) ಎಂದು ಹೇಳಿಕೊಂಡಿದ್ದಾರೆ. ಇಂಥ ಆವೇಶದಲ್ಲಿದ್ದ ಕುವೆಂಪು ಅವರಿಗೆ **ಆಧ್ಯಾತ್ಮಿಕ ಅನುಭವ ಆಧ್ಯಾತ್ಮಿಕ ರಂಗಕ್ಕೆ ಸೀಮಿತವಾಗಿರಬೇಕು ದೈನಂದಿನ ಸಾಮಾನ್ಯ ಭೂಮಿಕೆಗೂ ಇಳಿದು ಕ್ರಿಯೆಯಾಗಿ ವರ್ತಿಸಿದರೆ ಕೆಲಸ ಕೆಡುತ್ತದೆ'** ( ನೆ.ದೋ ಪುಟ ೮೯೦) ಎಂಬ ಎಚ್ಚರವಿತ್ತು. ಕವಿಯಾಗಿ ಆಧ್ಯಾತ್ಮವನ್ನು ರೂಪಕವಾಗಿಸಿದರು ತಮ್ಮ ಕಾವ್ಯ ನಾಟಕಗಳಲ್ಲಿ. **'ಹಿಂದು ಮತದಲ್ಲಿ ಬೆಳಕು ಎಷ್ಟಿದೆಯೋ ಅದಕ್ಕೆ ಇಮ್ಮಡಿಯಾಗಿ ಕೊಳಕೂ ಇದೆ, ಅಯ್ಯೋ ನಾವೆಲ್ಲರೂ ಹೇಗೆ ಪದ್ಧತಿಗೆ ಗುಲಾಮರಾಗಿಬಿಟ್ಟಿದ್ದೇವೆ'** ಎಂಬುದನ್ನು ಕಾವ್ಯ ನಾಟಕಗಳಲ್ಲಿ ತೋರಿಸುತ್ತಾ ಅವುಗಳ ಬಿಡುಗಡೆಗಾಗಿ ಪರ್ಯಾಯ ಮಾರ್ಗವನ್ನು ಸಾಹಿತ್ಯ ರೂಪಕಗಳಲ್ಲಿ ನಿರ್ಮಿಸಿದರು. ಉದಾಹರಣೆಗೆ ಪುರಾಣ ಕೃತಿಗಳಾದ **'ಬೆರಳ್ಗೆ ಕೊರಳ್'** ಮತ್ತು **'ಶಂಭೂಕ'**; ಜಲಗಾರ, ನಾಟಕಗಳು, ಮತ್ತು ಕೆಲವು ಕವಿತೆಗಳಲ್ಲಿ. ಹೀಗೆ ಮಾಡುವಾಗ ಪುರಾಣ ಪ್ರಸಂಗಗಳನ್ನ ತಮ್ಮ ವೈಚಾರಿಕ ಸಂವೇದನೆಗೆ ಅನುಗುಣವಾಗಿ ಮಾರ್ಪಡಿಸಿಕೊಂಡಿದ್ದಾರೆ ಎಂಬುದನ್ನು ನಮ್ಮ ಸಹೃದಯ ವಿಮರ್ಶಕರಾಗಲೇ ತೋರಿಸಿಕೊಟ್ಟಿದ್ದಾರೆ. ಮತ್ತು ಅವರಿಗೆ 'ಪ್ರಕೃತಿ' ಉಪಭೋಗ ಸಂಸ್ಕೃತಿಯ ವಸ್ತುವಲ್ಲ. 'ಪ್ರಕೃತಿ ಆರಾಧನೆ ಪರಮನಾರಾಧನೆ' ಎಂಬ ಋಷಿ ಸಂಸ್ಕೃತಿಯ ಭಾವದ್ದು. ರಸಸಿದ್ಧಿಯ ಶಿಖರವನ್ನು ಏರಬಹುದಾದ ಸಾಧನ.

ಕುವೆಂಪು ಅವರು ತಮ್ಮ 'ಸಪ್ತ ಸೂತ್ರಗಳಲ್ಲಿ: 'ಜಾತಿಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ವಿನಾಶಗೊಳಿಸಬೇಕು'; 'ಮತ ತೊಲಗಿ ಆಧ್ಯಾತ್ಮ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು – ಮತ ಗುಂಪುಕಟ್ಟುವ ವಿಷಯವಾಗಬಾರದು –ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ ಗುಂಪು ಕಟ್ಟುವಂತಾಗಬಾರದು' ಎಂದು ಹೇಳುತ್ತಾರೆ. ಇಂಥ ವೈಚಾರಿಕತೆ, ವೈಜ್ಞಾನಿಕ ಮನೋಭಾವ ಮತ್ತು ಅಧ್ಯಾತ್ಮಿಕ ನಿಲುವುಗಳೇ ಸೃಜನಶೀಲತೆಯ ಸಾಧನ ಸಾಮಗ್ರಿಗಳಾದವು. ಅವರ ಸಂವೇದನೆ ಪರಂಪರೆ ಮತ್ತು ವರ್ತಮಾನ ಪ್ರಜ್ಞೆಯ ಸಂಘರ್ಷದಲ್ಲಿ ಅಭಿವ್ಯಕಿಯನ್ನು ಪಡೆಯಿತು. ಸೃಜನಶೀಲತೆ ಶಿಖರಪ್ರಾಯವಾಯಿತು.

* * * *

ಬೇಂದ್ರೆ ಕಾವ್ಯ 'ಒಲವಿನ ಕಾವ್ಯ" ಒಲವು ಅವರ ಜೀವನ ದರ್ಶನದ ಮೂಲಧಾತು:

**ಪೂರ್ವಾನುರಾಗವೇ ಪರ್ವಕೆ ಸಂದಿತು**
**'ಉತ್ತರೋತ್ತರವಿರಲಿ ಉತ್ತರಕೆ!**
**ಕಲ್ಯಾಣ –ಶಕ್ತಿಯ ಕೈಯ್ಯ ಕುಶಲತೆಯಿಂದ**
**ಪಾಕವಾಗಲಿ ಪ್ರೇಮ!' ಎನ್ನುವೆನೇ**

ಎಂದು ಹೇಳುವ ಕವಿಯ ಒಲವಿನಾಧ್ಯಾತ್ಮ ಅವರ ಕಾವ್ಯ ಸಂವೇದನೆಯ ಮೂಲ ಧಾತುವಾಗಿ ಅಭಿವ್ಯಕ್ತಿ ಪಡೆದಿದೆ. ಆದ್ದರಿಂದಲೇ ಪತಿ–ಪತ್ನಿಯರು ಜೀವನ ಸಂಕಟಗಳ ಬೆಂಕಿಯಲ್ಲಿ ಬೆಂದು 'ಸಖ–ಸಖಿ'ಯರಾಗುವ ಪ್ರಕ್ರಿಯೆಯಲ್ಲಿ ಬೇಂದ್ರೆಯವರ ಹಾಡುಗಳು ಪರಮಾರ್ಥವಾಗುತ್ತದೆ: ಅವರೇ ಹೇಳಿದಂತೆ: **'ಸಾಹಿತ್ಯ ಯಾವಾಗಲೂ ಐಹಿಕದ ಮಾತುಗಳನ್ನೇ ತೆಗೆದುಕೊಂಡು ಅದಕ್ಕೆ ಪರಮಾರ್ಥದ ಬಣ್ಣ ಹಾಕುತ್ತದೆ.'**

ಕಾವ್ಯ 'ದೈವತ್ವದ ಶಿಖರದ ಪಾವಟಿಗಿ' ಎನ್ನುವ ಬೇಂದ್ರೆಯವರಿಗೆ: **'ಕಾವ್ಯ, ಒಂದು ಅಲೆಯ ಶಿಖರ ಮತ್ತು ಪಾತ್ರಗಳನ್ನು ಅಳತೀಮಾಡ್ಲಿಕ್ಕೆ ಸಹಾಯ ಆಗು ಸಮಪಾತಾಳಿ ರೇಖಿ ಇದ್ದಂಗ ಇರಬೇಕು. ಒಬ್ಬ ಮನಶಾನ ಹಂತೇಕ ಪಾಶವೀ ಮತ್ತು ದೈವಿಕ ಅಂಶಗಳೆರಡೂ ಇರತಾವು. ಕಾವ್ಯಾಭ್ಯಾಸದಿಂದ ಒಬ್ಬ ಮನಶಾ ತನ್ನಲ್ಲಿರುವ ಪಾಶವೀ ಮನೋವೃತ್ತಿಗಳನ್ನು ತಿಳಕೊಂಡು ಅವುಗಳನ್ನು ಒಂದೊಂದಾಗಿ ನಿವಾರಿಸಿಕೊಂಡು ದೈವತ್ವದ ಶಿಖರದ ಪಾವಟಗೀ ಹತ್ತಲಿಕ್ಕೆ ಸಹಾಯ ಆತೂ ಅಂದರ ಆಗ ಆ ಕಾವ್ಯದ ಉದ್ದೇಶದ ಸಾಧನೆ ಆದಂಗ. ಬೆಳಕಿನತ್ತ ಹೋಗೋ ಮನಶಾ ಕತ್ತಲದಾಗ ತಡಕಾಡಿ ಬೀಳದ್ಹಾಂಗ ಕೈ ಹಿಡಿದು ನಡಸೂದೇ ಕಾವ್ಯದ ಗುರಿ ಆಗಬೇಕಂತ ನನಗ ಅನಸತೈತಿ...'** (ಸಂದರ್ಶನ ಒಂದರಲ್ಲಿ).

ಇಂಥ ಉದಾತ್ತ ಗುರಿ ಹೊಂದಿದ್ದ ಕಾವ್ಯ ಬೇಂದ್ರೆಯವರದು. ಸಹಜವಾದ ಲೋಕಜ್ಞಾನದ್ರವ್ಯದ ಅಂತಃಸ್ಫೂರ್ತಿಯ ಕವಿ ಬೇಂದ್ರೆಯವರು. 'ದೇಸಿ'ಯಿಂದ ಅರಳಿದ ಪ್ರತಿಭೆ ಅವರದು. ಅವರ ಕಾವ್ಯ ಜನಪದ ವಾಣಿಯಲ್ಲಿ ಹೊನಲಿನಂತೆ ಹರಿಯುತ್ತದೆ. ಒಂದು ಮಾತಿನಲ್ಲಿ ಅನೇಕ ಅರ್ಥಗಳನ್ನು ಸ್ಫುರಿಸುವಂತೆ ಮಾಡುವ ಗಾರುಡಿಗರು ಬೇಂದ್ರೆಯವರು. ಲೋಕವ್ಯವಹಾರವನ್ನೆಲ್ಲಾ ಅನುಭಾವದ ನೆಲೆಗೂ ಕೊಂಡೊಯ್ದು ಮನಸ್ಸನ್ನು ಆರ್ದ್ರಗೊಳಿಸುವ ಅವರ ಕಾವ್ಯ ಅರವಿಂದರ ತತ್ವ ಸಿದ್ಧಾಂತಗಳಿಂದ ಪ್ರೇರೇಪಿತವಾದುದು. ಲೋಕ ಕಲ್ಯಾಣಕ್ಕೆ ತುಡಿಯುವಂತಹುದು:

**ಎನ್ನ ಪಾಡೆನಗಿರಲಿ**
**ನನ್ನ ಹಾಡನ್ನಷ್ಟೆ ಹೇಳುವೆನು ರಸಿಕ**
**ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ**
**ಆ ಸವಿಯ ಹಣಿಸು ನನಗೆ**

ಎಂಬ ಕಾವ್ಯಧರ್ಮವನ್ನು ಪಾಲಿಸಿಕೊಂಡು ಬಂದವರು. ಈ ಲೋಕವ್ಯವ್ಯಹಾರವೆಲ್ಲಾ ಅವರಿಗೆ ಒಂದು 'ಕುಣಿತ'. ತಾವು ಕುಣಿದು ತಮ್ಮ ನುಡಿ ನಾದದಿಂದ ಬದುಕಿನ ಸಹಜ

ತಾಳ ಗತಿಗೆ ತಕ್ಕಂತೆ ಲೋಕವನ್ನು ಕುಣಿಯುವಂತೆ ಮಾಡಿದ ಕವಿಯ ಸಹಜವಾದ ಪ್ರತಿಭೆ ಅನನ್ಯವಾದುದು.

**ಹದಿನಾಲ್ಕು ಲೋಕಕ್ಕ**
**ಚಿಮ್ಮಲಿ ಈ ಸುಖ**
**ಹಿಗ್ಗಲಿ ಸಿರಿಮುಖ**
**ಕುಣಿಯೋಣು ಬಾರ**
**ಕುಣಿಯೋಣು ಬಾರ**

ಎಂದು ಹಾಡಿದ ಕವಿ ಬೇಂದ್ರೆಯವರು 'ಒಲವೆಂಬ ಹೊತ್ತಿಗೆ' ಯನ್ನು ಕೊಡಮಾಡಿ ಒಲವಿನ ಬಗ್ಗೆ ಅರಿವನ್ನು ವಿಸ್ತರಿಸಿದವರು. ದೈವೀಕ ಅರಿವಿನತ್ತ ತುಡಿಯುವ ಅವರ ಒಲವಿನ ಮೀಮಾಂಸೆ ಕನ್ನಡ ಕಾವ್ಯ ಸಂದರ್ಭದ ವಿಶಿಷ್ಟ ವಾಣಿಯಾಗಿದೆ. ಭಾವ ಭೃಂಗಲೋಕ ವಿಸ್ತಾರದಲ್ಲಿ ವಿಹರಿಸಿದ ರೀತಿ ನೀತಿ ಬೆರಗು ಹುಟ್ಟಿಸುವಂತಿದೆ.

ಜನವಾಣಿಯ ಅಂತಃಸತ್ವವನ್ನು ಕವಿವಾಣಿಯನ್ನಾಗಿಸುವ ಪ್ರಕ್ರಿಯೆಯಲ್ಲಿ ಮೌಖಿಕ ಪರಂಪರೆಯನ್ನು ಆಧುನಿಕ ಕಾವ್ಯ ರೀತಿಯಲ್ಲಿ ಬೆಳಸಿದವರು. ಜೀವನ, ತಾತ್ವಿಕತೆ, ದರ್ಶನಗಳನ್ನು ಹಿಗ್ಗಿಸಿದರು. ಲೋಕದಾಟವನ್ನು ಕಲ್ಪನಾಲೋಕದೊಂದಿಗೆ ಬೆಸೆದು, ಬೇಂದ್ರೆಯವರು 'ಮಾತೆಲ್ಲಾ ಜ್ಯೋತಿ' ಯಾಗುವಂತೆ ಆವೇಶಭರಿತರಾಗಿ ಹಾಡಿದವರು. ಉತ್ಸಾಹ ಉದ್ರೇಕಗಳ ಸಂಭ್ರಮದ ಅಭಿನಯ ಅವರ ಹಾಡಾಗಿತ್ತ. ಬಡತನ – ದುಃಖ – ದುರಂತಗಳನ್ನು, ನೋವು ನಲಿವುಗಳನ್ನು, ಚಿಂತನೆ ಚಿದಾನಂದವನ್ನು ರಸದ ಹಾಡಾಗಿಸುವ ಅವರ ಪ್ರತಿಭೆ, ಪರಂಪರೆಯ ತತ್ವ ಬೋಧನೆಯನ್ನು ಹಾಡಾಗಿ ಹಿಗ್ಗಿಸುವುದೇ ಆಗಿತ್ತು. ಅಡಿಗರು ಹೇಳುವಂತೆ 'ನಿಜ ಜೀವನದ ಬಿಸಿ ಕಸುವು' ತುಂಬಿದ ಕಾವ್ಯ ಬೇಂದ್ರೆಯವರದ್ದು. 'ಸ್ಮರಣಕ್ಕೆ ಮರಣವಿಲ್ಲ' ಎಂಬುದು ಬೇಂದ್ರೆಯವರ ಬದುಕಿನ ಸಿದ್ಧಾಂತ. ಅವರು ತಮ್ಮ ಸ್ಮೃತಿಕೋಶದಿಂದ ಮೊಗೆದು ಮೊಗೆದು ಹಾಡುತ್ತಾ ಸಂಭ್ರಮಿಸಿದರು. ಅವರ ಸೃಜನಶೀಲ ಕುಣಿತದ ಸಂಭ್ರಮದಲ್ಲಿ ಪಾಲ್ಗೊಳ್ಳುತ್ತಿರುವ ಕನ್ನಡಿಗರೆಲ್ಲರೂ ಧನ್ಯರು.

* * * *

ಬದುಕು ಹೇಗೆ ಚಲನಶೀಲವಾದುದೋ ಹಾಗೆಯೇ ಸಂಸ್ಕೃತಿ ಸಾಹಿತ್ಯ ಅಭಿವ್ಯಕ್ತಿಯ ಮಾರ್ಗಗಳೂ ಕೂಡ. ಕಳೆದ ಶತಮಾನದಲ್ಲಿ ಆದಷ್ಟು ಪಲ್ಲಟಗಳು ಬೇರ್‍ಯಾವ ಶತಮಾನದಲ್ಲೂ ಕಂಡುಬರುವುದಿಲ್ಲ. ಭಾವ– ಭಾಷೆ–ತಂತ್ರಗಾರಿಕೆಯಲ್ಲಿ ೨೫– ೩೦ ವರ್ಷಗಳ ಅಂತರದಲ್ಲಿ ಹೊಸ ಹೊಸ ಅಭಿವ್ಯಕ್ತಿ ಕ್ರಮಗಳು ಕನ್ನಡದಲ್ಲಿ ಕಾಣಿಸಿಕೊಂಡಿವೆ. ಹೊಸತನವನ್ನು ವಿವಿಧತೆಯನ್ನು; ನವೋದಯ– ನವ್ಯ– ಬಂಡಾಯ – ದಲಿತ ಸಂವೇದನೆ ಎಂಬುದಾಗಿ ಪ್ರಕಟಿಸಿದ ರೀತಿ ವಿಶೇಷವಾದು ದಾಗಿದೆ. ಸ್ವಾತಂತ್ರ್ಯ ಬಂದಮೇಲೆ ಬದುಕು ತೀವ್ರ ಗತಿಯಲ್ಲಿ ಚಲಿಸತೊಡಗಿತು. ವಿದ್ಯಾಭ್ಯಾಸ, ವ್ಯವಸಾಯ, ಹಣಕಾಸಿನ ವಹಿವಾಟು, ಆಡಳಿತ ವ್ಯವಸ್ಥೆ ಇತ್ಯಾದಿಗಳಲ್ಲಿ ಜೀವನ ಕ್ರಮ ಬದಲಾಗತೊಡಗಿತು. ಜನಸಾಮಾನ್ಯರಲ್ಲಿ ಕನಸಿನ ಇಂಡಿಯಾ ಒಂದು ಕುಡಿಯೊಡೆದು ಬದುಕಿನಲ್ಲಿ ತೀವ್ರತರ ಸ್ಥಿತ್ಯಂತರಗಳು ಕಾಣಿಸಿಕೊಳ್ಳತೊಡಗಿತು. ಪ್ರಜಾರಾಜ್ಯದ ಬಣ್ಣಬಣ್ಣದ ಕನಸು, ನನಸಾಗುವ ದಾರಿ ಕಾಣಲಿಲ್ಲ.

ಕಳೆದುಹೋಗುತ್ತಿರುವ ದೇಶೀಜ್ಞಾನದ ಹಳಹಳಿಕೆಯಲ್ಲಿ ಹತಾಶೆಯ ಪರಿಸ್ಥಿತಿಯೊಂದು ನಿರ್ಮಾಣವಾಗಿತ್ತು. ಪ್ರಾಚೀನವಾದುದನ್ನೆಲ್ಲಾ ಕಡೆಗಣಿಸಿ ಪಶ್ಚಿಮ ಬುದ್ಧಿಯಲ್ಲಿ, ಪರಂಪರೆ ಸರಳ ಸಜ್ಜನಿಕೆಯ ಪಳೆಯುಳಿಕೆಗಳಾಗಿ ಗೋಚರಿಸತೊಡಗಿತ್ತು. ಅಂಥ ಸಂದರ್ಭದಲ್ಲಿ ಅಡಿಗರ ಪ್ರಜ್ಞೆ, ಸಂವೇದನೆಯನ್ನು ಆಧುನಿಕವಾಗಿ ಅಭಿವ್ಯಕ್ತಿಸುವ ಮಾರ್ಗವನ್ನು ಕಂಡುಕೊಂಡಿತು. ರೂಪ ನಿರ್ಮಿತಿ, ಹರಿತ ಭಾಷೆ, ನಾಟಕೀಯ ತಂತ್ರಗಾರಿಕೆಯ ಮೂಲಕ ಧ್ವನ್ಯಾರ್ಥದಲ್ಲಿ ಸಂಸ್ಕೃತಿಯ ಪುನಶ್ಚೇತನಕ್ಕೆ ದುಡಿಯಬೇಕಾದ ಕಾಲ ಒದಗಿಬಂದಿತು. ಸುಮಾರು ಅರವತ್ತು ದಶಕಗಳ ಹಿಂದೆ ಅಂತದೊಂದು ಸೃಜನಶೀಲ ಕಾಯಕದ ನೇತಾರರಾಗಿ ಮುಂಚೂಣಿಯಲ್ಲಿ ನಿಂತವರು ಗೋಪಾಲಕೃಷ್ಣ ಅಡಿಗರು. ಹೊಸಪೀಳಿಗೆಯೊಂದು ಅಡಿಗರ ಕಾವ್ಯವನ್ನು ಬಿಟ್ಟ ಕಣ್ಣಿನಿಂದ ನೋಡುತ್ತಾ ತಮ್ಮನ್ನೂ ಅಂಥ ಕ್ರಿಯಾಶೀಲತೆಗೆ ತೊಡಗಿಸಿಕೊಂಡ ಕಾಲ. ಸಂವೇದನೆ, ಭಾವ– ಭಾಷೆಯ ವಿನೂತನತೆಗೆ ತೆರೆದುಕೊಂಡ ಅಡಿಗರು ನವೀನವಾದ ಪ್ರತಿಮೆ ರೂಪಕಗಳಾಗಿ ಪ್ರಜ್ಞೆ ಚಿಂತನೆಗಳನ್ನು ರೂಪಾಂತರಿಸಿಕೊಡದ್ದು, ನಮ್ಮ ಸಂಸ್ಕೃತಿ ಸಂದರ್ಭದ ಒಂದು ಮಹತ್ವದ ಘಟ್ಟವಾಗಿದೆ.

ಅಡಿಗರು, ಹೈಸ್ಕೂಲಿನಲ್ಲಿದ್ದಾಗ ರಚಿಸಿದ ಕವಿತೆಗಳ 'ಆರೂಡಿ' ಸಂಕಲನ ನಂತರದ ದಿನಗಳಲ್ಲಿ ಅಚ್ಚಾಗಿದೆ. ಸಂಕಲನದ ಹೆಸರೇ ಸೂಚಿಸುವಂತೆ ಕಾವ್ಯ ಕೃಷಿಯ ಆರಂಭವನ್ನು ಮತ್ತು ಅದರ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಅಗೆದು ಉತ್ತಿ ಬಿತ್ತಿ ಬೆಳೆ ತೆಗೆಯುವ ಕೃಷಿ ಕಾಯಕದ ಪ್ರಕ್ರಿಯೆಯ ಪರಿಭಾಷೆ ಅವರ ಕಾವ್ಯದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ:

**ಅಗೆದುತ್ತ ಗದ್ದೆಗಳ ಕರ್ಮಭೂಮಿಯ ವರಣ;**
**ಭತ್ತಗೋಧುವೆ ಹಣ್ಣು ಬಿಟ್ಟ ವೃಂದಾವನ,**
**ಗುಡಿಗೋಪುರಗಳ ಬಂಗಾರ ಶಿಖರ**

ಎನ್ನುವ ಅಡಿಗರ ಉಜ್ವಲವಾದ ಪ್ರತಿಮೆ ಅವರ ಅನೇಕ ಕವನಗಳಲ್ಲಿ ಮತ್ತೆ ಮತ್ತೆ ರೂಪಾಂತರಗೊಂಡು ಕಾಣಿಸಿಕೊಳ್ಳುತ್ತದೆ. ಈ ಪ್ರತಿಮೆ ಅವರ ಕಾವ್ಯ ಕೃಷಿಯ ರೂಪಕವೂ ಹೌದು.

ನವೋದಯದ ಕನಸುಗಾರರಾಗಿದ್ದ ಗೋಕಾಕರು ಕೇವಲ ಕಾವ್ಯವಿನ್ಯಾಸಕ್ಕೆ 'ನವ್ಯ' ಅಂದರು. ಅಡಿಗರು ಜೀವನ ದೃಷ್ಟಿಯನ್ನೇ 'ನವ್ಯ'ವೆಂದು ಪರಿಭಾವಿಸಿದರು. ಕೆಲವು ವಿಮರ್ಶಕರು ಪಶ್ಚಿಮದ ಅಮದು ಸರಕು ಎಂದೆಲ್ಲಾ ಕೂಗಾಡಿದರು. ಆದರೆ ಅಡಿಗರಿಗೆ ನವ್ಯ ಮಾರ್ಗ:

'ಮಾನವಾನುಭವಗಳ ಸಾಮಾನ್ಯ ಸ್ವರೂಪ, ಮಾನವ ಸಂಸ್ಕೃತಿಯ ಸಂಬದ್ಧತೆ ಇವು ಆಧುನಿಕತೆಯ ಮುಖ್ಯ ಲಕ್ಷಣಗಳು. ವಿಜ್ಞಾನ ಆಧುನಿಕತೆಯ ಮುಖ್ಯ ವೈಶಿಷ್ಟ್ಯವಾದರೆ ಹಿಂದಿನ ಪುರಾಣ ಸಂಸ್ಕೃತಿಯ ವೈಶಿಷ್ಟ್ಯ ಆಧ್ಯಾತ್ಮಿಕತೆ. ಈ ಎರಡರ ವಾಸ್ತವಿಕ, ಅನುಭವಜನ್ಯ ಸಾಮರಸ್ಯ, ಸಮನ್ವಯದ ಮೂಲಕವೇ ಪ್ರಯತ್ನಿಸಬೇಕು – ಅನುಭವದ ಯಾವ ಮುಖವನ್ನು ತಿರಸ್ಕರಿಸಿ ಯೋಚಿಸಿದರೆ ಸಿದ್ಧಾಂತವನ್ನು ರೂಪಿಸುವುದು ಸುಲುಭವಾಗಬಹುದು ಆದರೆ ಸತ್ಯದ ಕಡೆಗೆ ಅದು ನಡೆ ಅಲ್ಲ. ಆಧ್ಯಾತ್ಮಿಕತೆ ಪುರಾತನವೂ ಹೌದು, ಹಾಗೆ ಆಧುನಿಕವೂ ಹೌದು' (ಕವಿ ಎಲಿಯಟ್ ಕಲಿಸಿದ ಪಾಠ). ಎಂಬ ಸತ್ಯಾನ್ವೇಷಣೆಯ ಪರಿಜ್ಞಾನದಿಂದ ಅವರ ಸಂವೇದನೆ ಪಾಕಗೊಂಡಿತ್ತು. ಅಡಿಗರ ವೈಶಿಷ್ಟ್ಯವೇನೆಂದರೆ, ವೇದ– ಉಪನಿಷತ್ ಪುರಾಣ ಸಂಸ್ಕೃತಿಯ ಜೀವ ಪರವಾದ ಆಧ್ಯಾತ್ಮಿಕತೆಯನ್ನೆಲ್ಲಾ ವರ್ತಮಾನದೊಂದಿಗೆ ಅನುಸಂಧಾನಮಾಡುವುದಾಗಿತ್ತು. ಋಷಿ ಸಂಸ್ಕೃತಿ, ಮತ್ತು ಪುರಾಣ ಸಂಸ್ಕೃತಿಯ ಜೀವ ಪರ ಉತ್ತಮಾಂಶಗಳನ್ನು ಆಧುನಿಕ ಮಾನವನ ಒಳಿತಿಗಾಗಿ ಆಲೋಡಿಸಿದರು. ಜಗತ್ತಿನ ಪುರಾತನ ಪ್ರತಿಮೆ, ರೂಪಕಗಳ ಮೂಲಕ ತಮ್ಮ ಸಂಕೀರ್ಣ ಸಂವೇದನೆಗೆ ರೂಪಕೊಟ್ಟರು (ನೋಡಿ: 'ಶಬ್ದಮಾರ್ಗ' ಶ್ರೀರಾಮ ಭಟ್ಟ). ಸ್ಮೃತಿ ಪಾತಳಿಯಿಂದ ಹೆಕ್ಕಿ ತಂದ ರೂಪಕಗಳು ಅನುಭವಜನ್ಯ ಪ್ರಜ್ಞೆಯ ಅಭಿವ್ಯಕ್ತಿಯಲ್ಲಿ ಸಂವಹನವಾಗುವ ರೀತಿ 'ಅಡಿಗತ್ವ' ದ ದೇಶೀಯ ಮೂಲವಾಗಿರುವುದು ವಿಶೇಷವಾಗಿದೆ.

ಅವರ ಅಭಿವ್ಯಕ್ತಿ ಸರಳರೇಖೆಯಂತೆ ಏಕಮುಖವಾದುದಲ್ಲ. ಅನುಭವಗಳ ಎದುರು ಬದುರು ಸಂಘರ್ಷದಲ್ಲಿ; ಸತ್ಯಾನ್ವೇಷಣೆಯ ಸೂಕ್ಷ್ಮ ಮನಸ್ಸಿನ ಒಳ ಪದರಗಳಲ್ಲಿ ಉಂಟಾಗುವ ತಾಕಲಾಟದಲ್ಲಿ ಅವರ ಕಾಣ್ಕೆ ರೂಪಪಡೆಯುತ್ತದೆ. ಸತ್ಯ–ಅಸತ್ಯ, ಭೂತ–ವರ್ತಮಾನ, ಒಳ್ಳೆಯದು ಕೆಟ್ಟದು, ಪೂರ್ವ–ಪಶ್ಚಿಮ, ಇದು ಬೇಕು– ಅದು ಬೇಡ, ಇತ್ಯಾದಿ ಸಂಘರ್ಷಗಳೇ ಅವರ ಅಭಿವ್ಯಕ್ತಿ ಮಾರ್ಗದ ಗುಟ್ಟು. ಇಂಥ ಸ್ಥಿತಿಯ ಸೃಜನಶೀಲ ಕ್ರಿಯೆಯೇ ದ್ವಂದ್ವಾತ್ಮಕವಾಗಿ ಗೋಚರಿಸುತ್ತದೆ. ಇದನ್ನೇ ದ್ವಂದ್ವ ಅಡಿಗರು ಎಂದು ಕರೆಯುವಂತಾಯಿತು. ಅದಕ್ಕೆ ಅವರು ಉತ್ತರವನ್ನು ಕೊಟ್ಟಿರುವುದು ಹೀಗೆ:

ನೆಲಮುಗಿಲು, ಹಗಲಿರುಳು,
ಒಡಲು ಅದರೊಳಗೆ ಗಾಢಾಂಧಕಾರ,
ಹೇಮಂತದಂತ್ಯದಲ್ಲೇ ಬಂದು ಚಿಗುರುವ ವಸಂತ;
ಗ್ರೀಷ್ಮದ ಮಹಾ ತಾಪವನ್ನೇ ನುಂಗಿ ಹನಿಹನಿಯಾಗಿ
ಮಂದಯಿಸಿ ಭೋರ್ಗರೆವ ಸುರಿವ ಮಳೆಯ ಧಾರೆ;
ಒಂದೊಂದೇ ಈ ರೀತಿ ಬಂದು ರಂಗಸ್ಥಳಕ್ಕೆ
ಕುಣಿವಂಥ ಈ ದ್ವಂದ್ವಗಳೇ ಈ ಜಗದ
ಮೂಲ ಸ್ವರೂಪ

ಮುಂದುವರಿದು–

ನಮ್ಮೀ ಜಗತ್ತು ದ್ವಂದ್ವಾವಳಿಯ ಛಂದ;
ಸತ್ತಮೇಲೆ ಬಹುಶಃ ತೊಲಗುವುದು
ಈ ದ್ವಂದ್ವ ನಿರ್ಬಂಧ;

ಎಂದು ಹೇಳಿದ ಕವಿಯ ದ್ವಂದ್ವಾತ್ಮಕತೆ ಸೃಜನಶೀಲತೆಯ ಶಕ್ತಿಯೂ ಆಗಿತ್ತು ಎಂಬುದನ್ನು ಗಮನಿಸಬೇಕು. ಹೊಸ ಸೃಷ್ಟಿಕ್ರಿಯೆಗೆ ಯಾವಾಗಲೂ ಪರಂಪರೆಯನ್ನು ಬೆನ್ನಲ್ಲಿ ಹೊತ್ತೇ ಮುನ್ನಡೆಯಬೇಕು. ಮುನ್ನಡೆಯುತ್ತದೆ. ಭೂತ ವರ್ತಮಾನ ಭವಿಷ್ಯತ್ ಯಾವಾಗಲೂ ಒಂದರೊಳಗೊಂದು ಹೆಣೆದುಕೊಂಡೇ ಮುಂದುವರೆಯುತ್ತಿರುತ್ತದೆ. ಹೊಸ ಹೊಸ ದಾರಿಯನ್ನು ಹುಡುಕಿಕೊಂಡು, ಸಾಧ್ಯತೆಗಳನ್ನು ಶೋಧಿಸುತ್ತಾ, ಆಯಾಮಗಳನ್ನು ಕಂಡುಕೊಳ್ಳುವುದೇ ವ್ಯಕ್ತಿ ಪ್ರತಿಭೆಯ ಶಕ್ತಿ ಮತ್ತು ಗುಣಸ್ವಭಾವವಾಗಿರುತ್ತದೆ. ಅನಂತವಾದ ಕಾಲ ಸದಾ ವರ್ತಮಾನದಲ್ಲಿ ಮುಂಗಾಣ್ಕೆಯನ್ನು ಕಾಣಿಸುತ್ತಿರುತ್ತದೆ. ಅದಕ್ಕೆ ಸಲ್ಲುವಂತೆ ಐತಿಹಾಸಿಕ ಪ್ರಜ್ಞೆ ಜಾಗ್ರತವಾಗಿ ಕಾವ್ಯ ಕರ್ಮದಲ್ಲಿ ಕ್ರಿಯಾಶೀಲವಾಗಿರಬೇಕು. ಹೀಗಿರುವುದೇ ಮಾನವಾನುಭವದ ಸತತವಾದ ಅರಿವು; ಸಂಸ್ಕೃತಿಯ ಹರಿವು; ಎಲ್ಲ ಕಾಲಘಟ್ಟಗಳಲ್ಲು ಕಾವ್ಯ ಕರ್ಮದಲ್ಲಿ ಇರುವಂಥದೇ: 'ನವೋದಯದ ಆತ್ಮನಿಷ್ಠೆಯಲ್ಲಿ ಮಾನವ ಚೈತನ್ಯದ ಅನನ್ಯತೆ, ಅಸೀಮತೆಯನ್ನು ಮತ್ತು ರಾಷ್ಟ್ರೀಯತೆಯನ್ನು ಪ್ರಕಟಗೊಳಿಸಿತು'. ಹಾಗೆಯೇ ನವ್ಯವು ಅಡಿಗರಲ್ಲಿ 'ಆತ್ಮನಿಷ್ಠ ಅಲೌಕಿಕತೆ, ಸಮೂಹನಿಷ್ಠ ಲೌಕಿಕತೆ'ಯಲ್ಲಿ ಒಟ್ಟೊಟ್ಟಿಗೆ ದುಡಿಯುತ್ತಾ ಬಂದಿರುವುದನ್ನು ಕಾಣಬಹುದು. ದಾಮೋದರರಾವ್ ಅವರು ಹೇಳುವಂತೆ: ಪ್ರಖರ ವಾಸ್ತವವಾದಿಯಾದ ಅಡಿಗರ ಸಂವೇದನೆಯಲ್ಲಿ ಜಿಗುಪ್ಸೆ ನಿರಾಶ್ರಿತ ಭಾವ ಸ್ಥಾಯಿಯಾಗಿದ್ದು, ವೈಯಕ್ತಿಕ ಹತಾಶೆ ಸಾರ್ವಜನಿಕ ಒತ್ತಡಗಳೊಡನೆ ಮುಖಾಮುಖಿಯಾಗಿ ಮೇಲೇರುತ್ತಾ ಹೋಗುವ ಕ್ರಮವನ್ನು ಕಾಣಬಹುದು'. ಸ್ವಾನುಭವದಲ್ಲಿ ಪ್ರೇರಿತವಾಗುವ ಅಡಿಗರ ಸೃಜನಶೀಲತೆ ಸಂಕೀರ್ಣವಾದ ಸ್ಥಿತಿಯಲ್ಲಿ ಸಮಾಜಮುಖಿಯಾಗಿ ಪ್ರಕಟಗೊಳ್ಳುತ್ತದೆ.

ಅಡಿಗರ ಮನಸ್ಸು ಹಳೆಯದನ್ನೆಲ್ಲಾ ಸುಂದರವಾಗಿತ್ತು ಚೆನ್ನಾಗಿತ್ತು, ಅಮೋಘವಾಗಿತ್ತು ಎಂದು ನಂಬುವ ಸರಳ ಮನಸ್ಸಲ್ಲ. ವರ್ತಮಾನ ಮನಸ್ಸಿಗೆ ಎಷ್ಟೇ ಕಿರಿಕಿರಿ ಉಂಟುಮಾಡಿದರೂ ಭೂತದಲ್ಲೇ ಇದ್ದುಬಿಡುವಂಥದ್ದೂ ಅಲ್ಲ. ಅವರ ಪದ ಪ್ರಯೋಗಗಳಲ್ಲಿ ಧ್ವನ್ಯಾರ್ಥದ ಸ್ಥಿತಿಯಲ್ಲಿ ಒಪ್ಪಿಕ್ಕೊಳ್ಳಲೂ ಆಗದ ಬಿಡಲೂ ಆಗದ ಸ್ಥಿತಿಯಲ್ಲಿ ದುಡಿಯುವ ಅವರ ಮನಸ್ಸನ್ನು ಕಾಣಬಹುದು. 'ಬತ್ತಲಾರದ ಗಂಗೆ' ಪದ ಪ್ರಯೋಗದಲ್ಲೇ 'ಯಾಕಾದರೂ ಬತ್ತುವದಿಲ್ಲ ಅನ್ನಿಸಿದರೂ ಎಂದಿಗು ಬತ್ತುವುದಿಲ್ಲ' ಎಂಬ ಧ್ವನ್ಯಾರ್ಥದಲ್ಲಿ ಅವರು ಅನುಭವಿಸುವ ಸಂದಿಗ್ಧ ನೋವನ್ನು ಕಾಣಬಹುದು. ಆದರೆ ಅಡಿಗರನ್ನು ಕಣ್ಣಗಲಿಸಿ ನೋಡುತ್ತಿದ್ದ ಸ್ವಲ್ಪ ಕಿರಿಯರಿಗೆ, ನಂತರದಲ್ಲಿ ಕೆಲವರಿಗೆ ಅಡಿಗರು ಕಾಣಿಸಿದ ದರ್ಶನ

'ಶೋಷಕ ಸಂಸ್ಕೃತಿಯಾಗಿ' ಕಂಡದ್ದು ಮಾತ್ರ ವಿಪರ್ಯಾಸ. ಆದರೆ ಅಡಿಗರ ಮನಸ್ಸು ಹೇಗಿತ್ತೆಂದರೆ: 'ಆಗಬೋಟ'ಯಲ್ಲಿ, 'ಲಂಗರೇ ಮುಖ್ಯವೆಂದು ತಿಳಿದದ್ದು ನಮ್ಮ ವಿಶೇಷ, ಆದರೆ ಹಾಗಲ್ಲಾ':

**ಹಳೆ ಹಲಗೆಗಳ ಹಿಡಿದು ಮಿಡಿದು ನೋಡುವಗತ್ಯ**
**ಮತ್ತೆ ಬಂದಿದೆ. ಪುರಾತನ ಹಡಗು ವಿದ್ಯೆಗಳನ್ನು ಇಂದಿನ ಪರಿಗೆ**
**ಜೋಡಿಸುವ ಕೆಲಸ: ಹೊಸ ಮರ ಹೊಸ ಕಬ್ಬಿಣ, ಹೊಸ ತಂತ್ರಯಂತ್ರಗಳ**
**ಬೆಸೆವಾಧುನಿಕ ಬೋಟ, ಹೊಸ ಲಂಗರು.**

ಮುಂದುವರಿದು,

**ಯಾನ ನಡೆಯಲಿ ತಂಗಿ ತಂಗಿ ಬಂದರಿನಲ್ಲಿ**
**ನವ ಖಂಡಗಳ ಸೋಸಿ ಪಾತಾಳದೆಡೆಗೆ**
**ಶಿಖರಗಳನಾಕ್ರಮಿಸಿ ಆಕಾಶದೆಡೆಗೆ**

ಹೀಗೆ ನವೀನವಾಗಿ ಚಲಿಸಬೇಕಾದ ಪ್ರಕ್ರಿಯೆಯನ್ನು ಅಡಿಗರು ಹೇಳ ಹೊರಟರು. ಅವರಿಗೆ 'ದೇಶೀ'ಯ ಜ್ಞಾನವನ್ನು ಅದರ ಉತ್ತಮಿಕೆಗಳನ್ನು ಆಧುನಿಕ ಜ್ಞಾನ ವಿಜ್ಞಾನ, ತಂತ್ರಜ್ಞಾನದೊಂದಿಗೆ ಬೆಸೆದು ಮುನ್ನಡೆಸಬೇಕೆಂಬುದು ಮುಖ್ಯವಾಗಿತ್ತು.

ಆತ್ಮನಿಷ್ಠ ಕವಿಯಾದ ಅಡಿಗರ ಸಂವೇದನೆ ಸರ್ವಗ್ರಾಹಿಯಾದುದಕ್ಕೆ ಸದಾ ತುಡಿಯುತಿತ್ತು. ಅವರ ಕಾವ್ಯದ ಬೀಸು ಮಾನವತ್ವವನ್ನೇ ಒಳಗೊಂಡು ಬಿಂಬಿತವಾಗಿದೆ. 'ಸ್ವಾತಂತ್ರ್ಯ – ೧೯೮೭' ಅವರ ಕಾವ್ಯ ಕೃಷಿಯ ಸಂದರ್ಭದ ಸರ್ವಗ್ರಾಹಿತ್ವದ ಮುಖ್ಯ ಕವಿತೆಗಳಲ್ಲಿ ಒಂದೆಂದು ನಾನು ಭಾವಿಸುತ್ತೇನೆ. ಇದುವರೆಗಿನ ಅವರ ಕಾವ್ಯ ಕೃಷಿಯ ಸಾಂಸ್ಕೃತಿಕ ಕಾಳಜಿ ಎಲ್ಲವನ್ನೂ ಭಟ್ಟಿ ಇಳಿಸಿದಂತೆ ಇದೆ. ಕವಿತೆಯ ಆರಂಭವೇ ಅವರ ಬಹು ಮುಖ್ಯ ರೂಪಕವಾದ **'ನೆಲದೊಳಗೆ ಅದಿರಾಗಿ ಹೊದ್ದು ಮಲಗಿದ್ದ ಹೊನ್ನನ್ನು...'** ಶೋಧಿಸಿ ಪರಿಶುದ್ಧಗೊಳಿಸುವ ಕ್ರಿಯೆಯಿಂದಲೆ ಆರಂಭವಾಗಿ,

**ದೇಹದದುರಲ್ಲಿ ಮಲಗಿರಲಿ ಜೀವ**
**ಬಾಳಿನುದ್ದವೂ ಅಪರಂಜಿಯೊಡನೆ ತಾಮ್ರ**
**ಬೆರೆಯುವುದು ಅಗತ್ಯ, ಅಪರಂಜಿ ಕರ್ಮಸನ್ಯಾಸ.**

ಎಂದು ಕೊನೆಗೊಳ್ಳುವಲ್ಲಿ ಅವರ ಕಾವ್ಯ ನಿಷ್ಠೆಯನ್ನು ಕಾವ್ಯೋದ್ದೇಶ್ಯವನ್ನು ಮನಗಾಣಬಹುದು.

ಹೀಗೆ ಪ್ರಖರ ವೈಚಾರಿಕತೆಯಲ್ಲಿ ಬರೆಯುತ್ತಿದ್ದ ಅಡಿಗರು 'ಸುವರ್ಣ ಪುತ್ಥಳಿ' ಮತ್ತು ನಂತರ ಸಂಕಲನದಲ್ಲಿ ಹೊಸ ರೀತಿಯ ಭಾವಗೀತಾತ್ಮಕ ಕವಿಯಾಗಿ ಕಾಣಿಸಿಕೊಂಡಿದ್ದು ಅವರ ಸೃಜನಶೀಲತೆಯ ಚಲನಶೀಲತೆಯನ್ನು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಅವರ ಮಾಗಿದ ಮನಸ್ಸಿನಲ್ಲೂ, ಬದಲಾವಣೆಯನ್ನು ಯಾವಾಗಲೂ ಸ್ವಾಗತಿಸುವ ಕವಿ ಮನಸ್ಸನ್ನು ಕಾಣಬಹುದು.

* * * *

ಕುವೆಂಪು, ಬೇಂದ್ರೆ, ಅಡಿಗರು, ನಂತರದ ಕವಲೊಡೆದ ಸೃಜನಶೀಲತೆ, 'ಕಪ್ಪು – ಬಿಳುಪು' ಸಂವೇದನೆಗೆ ಬದ್ಧವಾಗಿ ಸಾಹಿತ್ಯ ಕೃಷಿಯನ್ನು ಸಂಕುಚಿತಗೊಳಿಸಿತು ಎಂಬ ವಾದವನ್ನು ನಾವು ಮನಗಂಡಿದ್ದೇವೆ. ಅವರಲ್ಲಿ ಕೆಲವರಾದರೂ ವಿಶಾಲ ಮನೋಭಾವವನ್ನು ಪ್ರಕಟಗೊಳಿಸುವುದರ ಮೂಲಕ ಕನ್ನಡ ಸಂಸ್ಕೃತಿಯ ಸೌಹಾರ್ದ ವಾತಾವರಣವನ್ನು ವಿಶಾಲಗೊಳಿಸುತ್ತಿದ್ದಾರೆ ಎಂಬುದು ಗಮನಾರ್ಹವಾದುದಾಗಿದೆ. ಅದರಲ್ಲೂ ಉತ್ತರೋತ್ತರ ಇವತ್ತಿನ ದಿನಮಾನಗಳಲ್ಲಿ ಜಾಗತೀಕರಣದ ಅಭಿವೃದ್ಧಿ ಎಂಬ ಭೂತ ಮೆಟ್ಟಿಕೊಂಡು 'ಅಸ್ಮಿತೆ' ಯನ್ನು ಕಳೆದುಕೊಳ್ಳುತ್ತಿದ್ದೇವೆ. ಬಹು ರಾಷ್ಟ್ರೀಯತೆ ಈ ಹಿಂದಿನ ವಸಾಹತುಶಾಹಿಗಿಂತ ನಮ್ಮ ಸಂಸ್ಕೃತಿಯನ್ನು ಹೆಚ್ಚು ವಿರೂಪಗೊಳಿಸುತ್ತಿದೆ. 'ದೇಸೀ' ಜ್ಞಾನ ಸಂಪತ್ತು ನಶಿಸಿಹೋಗುತ್ತಿದೆ. ಮಾಧ್ಯಮಗಳು ಬಿತ್ತರಿಸುತ್ತಿರುವ ಕೆಳಮಟ್ಟದ ಅಭಿರುಚಿ ನಮ್ಮ ಹೊಸ ತಲೆಮಾರಿನ ಸಂವೇದನೆಯನ್ನು ಕಲುಷಿತಗೊಳಿಸುತ್ತಿದೆ, ಚರಿತ್ರೆಯ ತಿಳುವಳಿಕೆ ಕಮ್ಮಿಯಾಗುತ್ತಿದೆ ಎಂಬ ಮಾತು ಕೇಳಿಬರುತ್ತಿದೆ. ಪರಂಪರೆಯ ಪರಿಜ್ಞಾನ ಕ್ಷೀಣಿಸುತ್ತಿದೆಯೇನೋ ಎಂಬ ಆತಂಕದಲ್ಲಿದ್ದೇವೆ. ಪ್ರೀತಿ, ಸೌಹಾರ್ದ ಸೋದರತ್ವ; ಅಂತಃಕರಣದ ಜಾಗದಲ್ಲಿ ಸ್ವಾರ್ಥ, ದುರಾಸೆ; ಸಂಕುಚಿತ ವಿಘಟನೆಯ ಮನೋಭಾವ ಮೆರೆದಾಡುತ್ತಿವೆ. ಧರ್ಮ–ಮತ – ಜಾತಿ– ಇವುಗಳ ಮೇಲಾಟಗಳಿಂದಾಗಿ ಮನುಷ್ಯ ಸಂಬಂಧಗಳು ಕುಸಿಯುತ್ತಿದೆ. ಉಪಭೋಗ ಸಂಸ್ಕೃತಿ ನಡವಳಿಕೆಯಿಂದಾಗಿ 'ಮನುಷ್ಯ' ಕಳೆದುಹೋಗುತ್ತಿದ್ದಾನೆ. ನಿಸರ್ಗ ಮತ್ತು ಮನುಷ್ಯನ ನಡುವಣ ಸಂಬಂಧ ಸ್ವಾರ್ಥ ಮತ್ತು ಉಪಭೋಗದ ದುರಾಸೆಯ ಮನೋಭೂಮಿಕೆಯಲ್ಲಿ ವ್ಯಾವಹಾರಿಕವಾಗಿರುವುದು ಇನ್ನಷ್ಟು ಆತಂಕವನ್ನು ಹುಟ್ಟುಹಾಕಿದೆ. ನವ್ಯದ ಉತ್ತರೋತ್ತರ ಸಂದರ್ಭ ರುಚಿ–ಅಭಿರುಚಿಯನ್ನು ಕೆಡಿಸಿ ಸಂವೇದನೆಯನ್ನು ಕಲುಷಿತಗೊಳಿಸುತ್ತಿದೆ.

ಇಂಥ ಆತಂಕಕಾರಿ ಸನ್ನಿವೇಶದಲ್ಲಿ ದೇಶೀಯ ಪರಿಜ್ಞಾನ, ಪರಂಪರೆಯ ಆಲೋಡನೆ, ಚರಿತ್ರೆಯ ತಿಳುವಳಿಕೆಯಿಂದ ನಮ್ಮ ವರ್ತಮಾನದ ಅವಶ್ಯಕತೆಯಾದ ನಿರ್ಮಲ ಅಂಥಃಕರಣ, ಸಮಾನತೆ ಸೋದರತ್ವ; ಮತ್ತು ಸ್ನೇಹ ಸೌಹಾರ್ದ; ದಂತಹ 'ಸಂಬಂಜ'ದ ಹೊಸ ಕಾಣ್ಕೆಗಾಗಿ ದುಡಿಯುವ ದಿನಮಾನಗಳಿಗಾಗಿ ಎದುರುನೋಡುವಂತಾಗಿದೆ. ಇವತ್ತಿನ ಸೃಜನಶೀಲತೆ ನಮ್ಮ ಸಂಸ್ಕೃತಿಯ ಚಲನಶೀಲತೆಯನ್ನು, ಹೊಸ ಸಂದರ್ಭದ ಪ್ರಜ್ಞೆ ಸಂವೇದನೆ; ಪರಂಪರೆಯೊಂದಿಗೆ ಅನುಸಂಧಾನಮಾಡುತ್ತಾ ಕನ್ನಡದ ಅಸ್ಮಿತೆಯನ್ನು ಉಳಿಸಿಕೊಳ್ಳುವ ಮುನ್ನಡೆಯಾಗಬೇಕಿದೆ.

❑❑

# ವಿಪ್ರಕವಿ ನಂಜುಂಡ ಭಾಗವತನ 'ವೃಷಭೇಂದ್ರ ವಿಲಾಸಂ'

–ಬಿ. ನಂಜುಂಡಸ್ವಾಮಿ

ಪ್ರಪಂಚದ ಸಾಹಿತ್ಯ ಚರಿತ್ರೆಯಲ್ಲಿ ಕೆಲವು ಅಪರೂಪದ ಗ್ರಂಥಗಳು ರಚನೆಗೊಂಡು ಪ್ರಕಟವಾಗಿವೆ. ಅಂತಹ ಅಪರೂಪದ ಗ್ರಂಥದಲ್ಲಿ ನಂಜುಂಡ ಭಾಗವತನ 'ವೃಷಭೇಂದ್ರ ವಿಲಾಸ'ಕ್ಕೇ ವಿಶೇಷವಾದ ಸ್ಥಾನ. ಸಾಹಿತ್ಯ – ಚಿತ್ರ ಎರಡೂ ಇರುವಂತಹ ಅಪರೂಪದ ಗ್ರಂಥ ಕನ್ನಡ ನಾಡಿನ ಸಾಹಿತ್ಯ ಇತಿಹಾಸಕ್ಕೂ, ಚಿತ್ರಕಲಾ ಇತಿಹಾಸಕ್ಕೂ ವಿಶೇಷವಾದ ಕಾಣಿಕೆ ಈ ಪುಸ್ತಕ. ಇಂತಹ ಮಹತ್ವ ಗ್ರಂಥವನ್ನು ರಚಿಸಿದ ಬ್ರಾಹ್ಮಣ ಸಂಪ್ರದಾಯದ ನಂಜುಂಡ ಭಾಗವತನ ಜೀವನಸಾಧನೆ ಜೊತೆಗೆ ಆತನ ವಿಸ್ತಾರವಾದ ಸಾಹಿತ್ಯ ಸೇವೆಯನ್ನು ಅಧ್ಯಯನ ಮಾಡುವುದೇ ಈ ಲೇಖನದ ಉದ್ದೇಶ.

ಅದ್ವೈತ ಸಂಪ್ರದಾಯದ ಮನೆತನದಲ್ಲಿ ಜನಿಸಿ 'ಮಹಾಮಾನವತಾವಾದಿ ಜಗಜ್ಯೋತಿ ಬಸವೇಶ್ವರರ' ಚರಿತ್ರೆಯನ್ನು ಹೃದಯ ತುಂಬಿ ಬರೆದ ನಂಜುಂಡ ಭಾಗವತನ ಬಗ್ಗೆ ತಿಳಿದಿರುವ ಇತಿವೃತ್ತ ಬಹಳ ಕಡಿಮೆ. ಕರ್ನಾಟಕ ಕವಿಚರಿತೆ ತೃತೀಯ ಸಂಪುಟದಲ್ಲಿ ಕವಿ ಚರಿತೆಗಾರರು ಭಾಗವತ ನಂಜುಂಡನ ಬಗ್ಗೆ ಈ ಮಾಹಿತಿಯನ್ನು ನೀಡಿದ್ದಾರೆ.[೧]

### ನಂಜಪ್ಪ (ಸು. ೧೮೬೦)

ಈತನು ತ್ರಿಪುರದಹನ – ರಾಧಾವಿಲಾಸ – ಸೋಮಶೇಖರ ಚಿತ್ರಶೇಖರ ಕಥೆ ಮೋಹನವಿವೇಕ ಕಾಳಗ– ಹರಿಚ್ಛಂದ್ರೋಪಾಖ್ಯಾನ– ಬಲಿಚಕ್ರವರ್ತಿ ಚರಿತ್ರೆ– ಸಾರಂಗಧರನ ಕಥೆ – ಚಂದ್ರಹಾಸನ ಕಥೆ ಇವುಗಳನ್ನು ಬರೆದಿರುವಂತೆ ತೋರುತ್ತದೆ. ಇತನು ಘಟ್ಟದ ಕೆಳಗಣಿಂದ ಬಂದು ಅಳಿಯ ಲಿಂಗರಾಜನ (೧೮೨೩ – ೧೮೭೪) ಆಶ್ರಿತನಾಗಿದ್ದಂತೆ ತಿಳಿಯುತ್ತದೆ. ಇತನ ಗ್ರಂಥಗಳಲ್ಲಿ ಇತನ ಹೆಸರು ಕಂಠೋಕ್ತವಾಗಿ ಹೇಳಿಲ್ಲ. ಆದರೂ ಮಂಜುನಾಥ ಎಂಬ ಅಂಕಿತದಿಂದ ಏಕಕೃತವೆಂದು ಊಹಿಸಬಹುದಾಗಿದೆ. ಪೂರ್ವಿಕರು ಹೇಳುತ್ತಾರೆ ಈತನ ಗ್ರಂಥಗಳೆಲ್ಲಾ ಯಕ್ಷಗಾನ ರೂಪವಾಗಿದೆ. ತ್ರಿಪುರದಹನದ ಆರಂಭದಲ್ಲಿ ಈ ಕಂದವಿದೆ.

**ಸ್ಮರಹರಲೀಲಾಚರಿತೆಯ**
**ಧರೆಯೊಳ್ ವಿಸ್ತರಿಪೆನೆಂಬ ಕೌತುಕದಿಂದಂ**
**ವಿರಚಿಸುವೆ ಯಕ್ಷಗಾನದಿ**
**ದುರಿತಾತಹನುಪ್ಪ ತ್ರಿಪುರವಿಜಯದ ಕಥೆಯಂ॥**

ಸೋಮಶೇಖರನ ಚಿತ್ರಶೇಖರ ಕಥೆಯಲ್ಲಿ ಲಿಂಗರಾಜನ ಕೃಪೆಯಿಂದ ಅ ಗ್ರಂಥವನ್ನು ಬರೆದಂತೆ

**ಕವಿತಾಸತಿಯಂ ನಟಿಸುತ**
**ದಿವಿಜೇಂದ್ರನ ಪೋಲ್ವ ಲಿಂಗಭೂಪನ ಪದಪಲ್ಲ**
**ಕರುಣಾದಿನುಸರ್ವೆಂ**
... .....

ಎಂಬ ಪದ್ಯ ಭಾಗದಲ್ಲಿ ಹೇಳಿದ್ದಾನೆ. ಈ ಗ್ರಂಥದ ಆದಿಯಲ್ಲಿ ಈ ಪದ್ಯವಿದೆ.

**ಶ್ರೀರಮಣಪ್ರಿಯಮಿತ್ರಂ**
**ವಾರಣವರಚರ್ಮವಸ್ತ್ರಂ ಸಂವೃತಗಾತ್ರಂ**
**ಭೂರಿಸುರಸ್ತುತಿಪಾತ್ರಂ**
**ಕೋರಿದನೊಲಿದೀಗೆ ಮಂಜುನಾಥಂ ದಯದಿಂ॥**

ಕವಿಚರಿತೆಗಾರರ ಮಾಹಿತಿಯಿಂದ ಕವಿಗೆ ನಂಜಪ್ಪ ಎಂದು ಕರೆಯುತ್ತಾ ಇದ್ದು ಮಾಹಿತಿ ಸಂಗ್ರಹ ಕಾಲದಲ್ಲಿ ಕವಿಯ ಸಮಕಾಲೀನರು ಅಥವಾ ಕವಿಯ ವಂಶಸ್ಥರನ್ನೂ ಭೇಟಿ ಮಾಡಿ ವಿಷಯ ಸಂಗ್ರಹ ಮಾಡಿದ್ದಾರೆ. ಕವಿಯ ಕೆಲವು ಹಸ್ತಪ್ರತಿಗಳನ್ನು ಪರಿಶೀಲಿಸಿದ್ದಾರೆ. ಆ ದಿನಗಳಲ್ಲಿ ಇನ್ನಷ್ಟು ಮಾಹಿತಿ ಸಂಗ್ರಹ ಮಾಡಬಹುದಿತ್ತು. ಅಪರೂಪ ಮಾಹಿತಿ ಸಂಗ್ರಹದಲ್ಲಿ ರಾ. ನರಸಿಂಹಾಚಾರ್ಯರಿಗೆ ಹೆಚ್ಚಿನ ಬರವಣಿಗೆಗೆ ಅವಕಾಶವಾಗಲ್ಲಿಲ್ಲ. ಕವಿ ತನ್ನ ಕೃತಿಗಳಲ್ಲಿ ನಂಜುಂಡಭಾಗವತ ಎಂದು ಕರೆದು ಕೊಂಡಿರುವುದಲ್ಲದೆ, ಹಲವು ಹಸ್ತಪ್ರತಿಗಳಲ್ಲಿ ನಂಜುಂಡ ಭಾಗವತ ಎಂದಿದೆ. ಮುಂದಿನ ಕವಿಚರಿತೆಯ ಮುದ್ರಣ ಸಮಯದಲ್ಲಿ ನಂಜಪ್ಪ ಅರ್ಥಾತ್ ನಂಜುಂಡ ಭಾಗವತ ಎಂದು ಮುದ್ರಿಸಬೇಕು. ಇಲ್ಲದೆ ಹೋದರೆ ಮುಂದಿನ ಜನಾಂಗಕ್ಕೆ ಈ ಬಗ್ಗೆ ಗೊಂದಲ ಉಂಟಾಗುತ್ತದೆ.

ನಂಜುಂಡ ಭಾಗವತನ ಪೂರ್ವಜರು ಘಟ್ಟದ

ಪಂಡಿತ್ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಮಾರುಕಟ್ಟೆ ಸಂಕೀರ್ಣ, ಬಿ.ಹೆಚ್. ರಸ್ತೆ, ತುಮಕೂರು – ೫೭೨೧೦೨

ಕೆಳಗಿನಿಂದ ಮೈಸೂರು ನಗರಕ್ಕೆ ಸುಮಾರು ೧೮೨೦ರಲ್ಲಿ ಬಂದಿರಬೇಕು. ತನ್ನ ತಾತನ ಬಗ್ಗೆ ಸ್ಪಷ್ಟವಾಗಿ ವೃಷಭೇಂದ್ರ ವಿಲಾಸದ ಪ್ರಥಮ ಸಂಧಿಯಲ್ಲಿ ಹೇಳಿದ್ದಾನೆ.

**ಭಾಗವತ ಶಿಖಾಮಣಿಯಹದಾಸಪ್ಪ**
**ಭಾಗವತ ಪೌತ್ರ ನಂಜುಂಡ**
**ನಾಗಮೋಕ್ತ ವೃಷಭೇಂದ್ರ ವಿಲಾಸನ**
**ನೀಗ ರಚನೆ ಗುರು ಬಲಗೊಂಡ** (೧-೨೪)

ಭಾಗವತ ಶಿಖಾಮಣಿಯಾಗಿದ್ದ 'ದಾಸಪ್ಪ ಭಾಗವತ'ನ ಪೌತ್ರನಾದ ನಂಜುಂಡ ಭಾಗವತ ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂರಕ್ಷಿಸಿರುವ ಶ್ರೀಕೃಷ್ಣಕಥಾ ಸಾರಸಂಗ್ರಹ (ಭಾಗ-೨) ಹಸ್ತಪ್ರತಿ ಕೆ.೨೨೭/೨ ಮುಮ್ಮಡಿ ಕೃಷ್ಣರಾಜ ವಿರಚಿತ ಈ ಹಸ್ತಪ್ರತಿಯ ಅಂತ್ಯದಲ್ಲಿ ಈ ಪುಷ್ಪಿಕೆ ಇದೆ.[೨]

> .. .. .. ಕೃಷ್ಣ ಕಥಾಸಾರ ಸಂಗ್ರಹವೆಂಬ ಗ್ರಂಥದೊಳ್ ಅವತಾರ್ ಕಾಂಡದಲ್ಲಿ ಶ್ರೀಕೃಷ್ಣನ ಅವತಾರ ಭೇದ ನಿರೂಪಣ ಕಥಾಶ್ರವಣ ಫಲಕಥನವೆಂಬ ನೂರನೇ ಅಧ್ಯಾಯಕ್ಕೆ ಮಂಗಳ ಮಹಾಶ್ರೀ ಅವತಾರಕಂಡ ಸ್ಸಮಾಪ್ತಃ 'ಶ್ರೀ' ಆಳಿದ ಮಹಾಸ್ವಾಮಿಯವರ ಅಪ್ಪಣೆಮೇರೆಗೆ ಚಂದ್ರವಿಲಾಸ ಸನ್ನಿಧಾನಕ್ಕೆ ಸನ್ನಿಧಾನದ **ರಾಯಸದ ಭಾಗವತ ಕೃಷ್ಣಪ್ಪನು ಬರೆದು** ಅರ್ಪಿಸಿದ ಶ್ರೀಕೃಷ್ಣಕಥಾಸಾರ ಸಂಗ್ರಹ ಗ್ರಂಥದ ಸಂತಾನ ಕಾಂಡ ಅವತಾರ ಕಾಂಡಗಳ ವಹಿಗೆ ಶ್ರೀರಸ್ತು!! ***** (೯೫ಖಾತಿಯ ಪತ್ರ) ಅಂತು ಐದು ಕಾಂಡಗಳಿಂದ ಯರಡು ವಹಿಗಳನ್ನು ಒಪ್ಪಿಸಿರುವುದಕ್ಕೆ ಶ್ರೀರಸ್ತು !!
>
> ಮಂಗಳಾನಿ ಭವಂತು.

ಈ ಮೇಲಿನ ಪುಷ್ಪಿಕೆಯಿಂದ ಮುಮ್ಮಡಿಯವರ ಕಾಲದಲ್ಲಿ ರಾಯಸದ ಭಾಗವತ ಕೃಷ್ಣಪ್ಪನು ಲಿಪಿಕಾರನಾಗಿ ನೇಮಕಗೊಂಡಿದ್ದ. ಈತನೇ ನಂಜುಂಡ ಭಾಗವತನ ತಂದೆ ಇರಬೇಕು, ಬೇರೆ ಆಕರಗಳಿಂದ ಸಂಶೋಧನೆ ಮಾಡಿ ಸ್ಪಷ್ಟ ಮಾಡಬೇಕು. ತಂದೆಯ ಜೊತೆ ಅರಮನೆಯಲ್ಲಿ ಚಿಕ್ಕ ವಯಸ್ಸಿನಲ್ಲಿ ಓಡಾಡಿಕೊಂಡು ಇದ್ದ ನಂಜುಂಡ ಭಾಗವತನಿಗೆ ಅರಮನೆಯಲ್ಲಿಯೇ ವೀರಶೈವ ಸಾಹಿತ್ಯ ಸಂಸ್ಕೃತಿ ಆಚಾರ ವಿಚಾರಗಳ ನಿಕಟಪರಿಚಯ ಉಂಟಾಗಿರಬೇಕು.

ಹಿರಿಯ ವಿದ್ವಾಂಸರು ಜೇಷ್ಠ ಸಂಶೋಧಕರು ಆದ ಲಿಂ। ಎಸ್. ಶಿವಣ್ಣನವರು ಮೈಸೂರು ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿಯಾಗಿದ್ದಾಗ ಸಂಕಲಿಸಿದ 'ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ ೧೯೬೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡ[೩] ಈ ಕೃತಿಯಲ್ಲಿ ೨೧ ಕೃತಿಗಳ ಪಟ್ಟಿ ಇದೆ. ಲಿಂ। ಎಸ್. ಶಿವಣ್ಣನವರಿಗೆ ಸಾಕಷ್ಟು ಮಾಹಿತಿ ಲಭ್ಯವಾಗಿದ್ದು ೧೯೧೩ರಲ್ಲಿ ಪ್ರಕಟಗೊಂಡ 'ಹರಿಶ್ಚಂದ್ರನ ಕಥೆ'ಯ ಪೀಠಿಕೆಯಿಂದ ಈ ಕೃತಿಯಿಂದ ಸಂಪಾದಕರು ಎನ್. ಸುಬ್ಬಯ್ಯ ಭಾಗವತ, ಈತ ನಂಜುಂಡ ಭಾಗವತ ಪುತ್ರನಿರಬೇಕು. ಈತ ೧೯೪೦-೫೦ರತನಕ ಬದುಕಿರುವ ಸಾಧ್ಯತೆ ಇದೆ. ಇಂದು ನಾವು ಮೈಸೂರಿನಲ್ಲಿ 'ಭಾಗವತ' ಮನೆತನದವರಲ್ಲಿ ಭೇಟಿ ಮಾಡಿದರೆ ಖಂಡಿತ ಇನ್ನಷ್ಟು ಹೊಸ ಮಾಹಿತಿ ಲಭ್ಯವಾಗುತ್ತದೆ. ಮುದ್ರಿತ 'ಹರಿಶ್ಚಂದ್ರನ ಕಥೆ' ಪುಸ್ತಕವನ್ನು ಹುಡುಕಬೇಕು.

**ಕರ್ಣಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ**

ಎಸ್. ಶಿವಣ್ಣ (೧೯೬೭)

| ಸೂಚಿ ಪುಟ | ಕೃತಿ ಸೂಚಿ |
|---|---|
| ಪುಟ ೧ | ೧. ಅಂಬರೀಶ ಚರಿತ್ರೆ ಹಾಡು |
| ೪ | ೨. ಅಶ್ವಮೇಧೋಪಕ್ರಮ |
| ೯ | ೩. ಓಹಿಲೇಶ್ವರ ಕಥೆ |
| ೧೨ | ೪. ಕರಿಬಂಟನ ಕಥೆ ಯಕ್ಷಗಾನ |
| ೧೦ | ೫. ಕರಿಬಟನಕಥೆ (ಕನ್ನಡ ನಾಟಕ ತ.ಸು. ಶಾಮರಾಯರು ೧೯೬೨) |
| ೧೭ | ೬. ಕೃಷ್ಣಜನರು ಯಕ್ಷಗಾನ |
| ೨೦ | ೭. ಗುರು ದಶಪದಿ ಕೀರ್ತನೆಗಳು ಹಾಡು |
| ೨೭ | ೮. ತತ್ವಾಭಿನಯ ನಿಘಂಟು |
| ೨೭ | ೯. ಕಂದ ಕ-೪೧೭/೧ |
| ೨೮ | ೧೦. ತಾಮ್ರಧ್ವಜನ ಕಳಗ |
| ೩೨ | ೧೧. ಧೃವ ಚರಿತ್ರೆ |
| ೩೬ | ೧೨. ಪರುಶುರಾಮ ಚರಿತ್ರೆ |
| ೩೭ | ೧೩. ಪೂರುರವ ಚರಿತ್ರೆ |
| ೪೦ | ೧೪. ಪ್ರಹ್ಲಾದ ಚರಿತ್ರೆ |
| ೪೦ | ೧೫. ಪ್ರಹ್ಲಾದ ಚರಿತ್ರೆ K.B. ೪೪/೧ |
| ೪೬ | ೧೬. ಮಂದಾರವಲ್ಲಿ ಚರಿತ್ರೆ |
| ೫೬ | ೧೭. ರುಕ್ಮಾಂಗದ ಚರಿತ್ರೆ |
| ೬೦ | ೧೮. ವೀರವರ್ಮನ ಚರಿತ್ರೆ |
| ೬೧ | ೧೯. ವೃಷಭೇಂದ್ರ ವಿಲಾಸ |
| ೩೪ | ೨೦. ಶನಿ ಮಹಾತ್ಮೆ |
| ೩೩ | ೨೧. ಶ್ವೇತ ಕಥೆ |
| ೩೭ | ೨೨. ಶೂನ್ಯ ಸಿಂಹಾಸನ ನಿರ್ಮಾಣ ಗದ್ಯ |
| ೩೭ | ೨೨. ಸೌಂದರ್ಯ ಮೋಹನ ನಾಟಕ |
| ೨೦ | ೨೩. ಸಮುದ್ರ ಮಥನ |
| ೨೨ | ೨೫. ಸಿರಿಯಾಳನ ಕಥೆ |

ಇಲ್ಲಿ ಒಂದು ವಿಷಯ ಸ್ಪಷ್ಟ ಮಾಡಬೇಕು. ಕವಿ ಚರಿತೆಗಾರರು ಉಲ್ಲೇಖಿಸಿರುವ 'ಹರಿಶ್ಚಂದ್ರೋಪಾಖ್ಯಾನ'

ಮತ್ತು ಪ್ರಕಟಿತ 'ಹರಿಶ್ಚಂದ್ರ ಕಥೆ' ಒಂದೇ ಕೃತಿ ಅಥವಾ ಬೇರೆ ಬೇರೆಯೇ ಈ ಬಗ್ಗೆ ಹಸ್ತಪ್ರತಿಯನ್ನು ಪರಿಶೀಲಿಸುವ ತನಕ ಹೇಳಲು ಸಾಧ್ಯವಿಲ್ಲ.

ಸುತ್ತೂರು ಮಠದಲ್ಲಿ ಸಂರಕ್ಷಿಸಿರುವ ಚಿತ್ರಸಹಿತ ಇರುವ ಕಾಗದದ ಹಸ್ತಪ್ರತಿಯಲ್ಲಿ[೪],

ಪುಟ ೧೦ – ೩೬೧ – ವೃಷಭೇಂದ್ರ ವಿಲಾಸ ಪಠ್ಯ

ಪುಟ ೩೬೨ – ಸಿವಲಿಂಗಪೂಜೆಯ ಚಿತ್ರ

೩೬೩ – ೪೦೬ – ಓಹಿಲಯ್ಯನ ಕಥಾಪಠ್ಯ

೪೦೭ – ೪೩೨ – ಶ್ವೇತನ ಕಥಾ ಪಠ್ಯ

೪೩೩ – ೪೪೮ – ಸಿರಿಯಾಳನ ಚರಿತ್ರೆಯ ಪಠ್ಯ

(ಇದರಲ್ಲಿ ಚಿತ್ರಗಳಿಲ್ಲ)

೪೪೯ – ೫೧೧ – ತಿರುನೀಲಕಂಠರು ಇತ್ಯಾದಿ ೬೩ ಜನ ಪುರಾತನರ ಚಿತ್ರಗಳು

೫೧೧ – ೫೧೩ – ಕೂಡಗೂಸು, ಉರಿಲಿಂಗ ಪೆದ್ದಯ್ಯ, ಬಲದೇವರ ಚಿತ್ರಗಳು

೫೧೫ – ಯತಿ ಮತ್ತು ಆರತಿ ಬೆಳಗುವ ಚಿತ್ರಗಳು

ವೃಷಭೇಂದ್ರ ವಿಲಾಸ ಕೃತಿಯ ಉಲ್ಲೇಖ ಪ್ರಥಮಬಾರಿ ಉಲ್ಲೇಖಿಸಲಾಗಿದ್ದು ಎನ್. ಸುಬ್ಬಪ್ಪ ಭಾಗವತರ ಸಂಪಾದಿತ 'ಹರಿಶ್ಚಂದ್ರನ ಕಥೆ' ಪೀಠಿಕೆಯಲ್ಲಿ. ಅನಂತರ ಈ ಕೃತಿಯನ್ನು ಮೂಲ ಹಸ್ತಪ್ರತಿಯಲ್ಲಿಯೇ ಅಧ್ಯಯನ ಮಾಡಿದವರು ಡಾ। ಎಚ್. ತಿಪ್ಪೇರುದ್ರಸ್ವಾಮಿಯವರು ೧೯೬೮ರಲ್ಲಿ ಪ್ರಕಟವಾದ **'ಕರ್ನಾಟಕ ಸಂಸ್ಕೃತಿ ಸಮೀಕ್ಷೆ– ೫'**ರ ಕೃತಿಯಲ್ಲಿ ತಮ್ಮ ಈ ಅಭಿಪ್ರಾಯವನ್ನು ನೀಡಿದ್ದಾರೆ.[೫]

ಈ ಸಂದರ್ಭದಲ್ಲಿ ಹೊಸದಾಗಿ ದೊರೆತ ಇನ್ನೊಂದು ಕೃತಿಯ ಉಲ್ಲೇಖನ ಅಪ್ರಸ್ತುತವಾಗಲಾರದು. ವೃಷಭೇಂದ್ರವಿಲಾಸ ಎಂಬ ಯಕ್ಷಗಾನ ಗ್ರಂಥ ಅದು. ಇದನ್ನು ಬರೆದವನು ನಂಜುಂಡಕವಿ ಎಂಬುದು ಗ್ರಂಥದ ಪ್ರಾರಂಭದ ಮತ್ತು ಕೊನೆಯ ಪದ್ಯಗಳಿಂದ ತಿಳಿದು ಬರುತ್ತದೆ. ಬಸವಣ್ಣನವರ ಕಥೆಯನ್ನು ಯಕ್ಷಗಾನ ರೂಪದಲ್ಲಿ ಹೇಳಿಕೊಂಡು ಹೋಗಿದ್ದಾನೆ. ಇಲ್ಲಿ ಗಮನಾರ್ಹವಾದ ಅಂಶವೆಂದರೆ ಶ್ರೀತತ್ವನಿಧಿಯಲ್ಲಿರುವಂತೆ ಪುಟಪುಟಗಳಲ್ಲಿಯೂ ಮೈವೆತ್ತು ನಿಂತಿರುವ ಅಸಂಖ್ಯಾತ ವರ್ಣಚಿತ್ರಗಳು. ದಪ್ಪನಾದ ಹಳೆಯ ಕಾಗದದಲ್ಲಿ ರಚಿತವಾದ ಈ ಗ್ರಂಥ ಆಕಾರದಲ್ಲಿ ಸುಮಾರು ಒಂದಡಿಗಿಂತಲೂ ಸ್ವಲ್ಪ ಹೆಚ್ಚು ಉದ್ದವಾಗಿಯೂ ಮತ್ತು ಅರ್ಧಅಡಿಗಿಂತಲೂ ಸ್ವಲ್ಪ ಹೆಚ್ಚು ಅಗಲವಾಗಿಯೂ ಇದೆ. ಒಂದೊಂದು ಪುಟದ ಸುತ್ತಲೂ ಹಳದಿಯ ಬಣ್ಣದ ಅಂಚನ್ನು ಕಟ್ಟಲಾಗಿದೆ.

ಪ್ರತಿ ಪುಟದಲ್ಲಿಯೂ ಕಥಾನಿರೂಪಣೆಯ ಒಂದೋ-ಎರಡೋ ಪದ್ಯಗಳಿದ್ದು ಅದಕ್ಕೆ ಸಂಬಂಧಪಟ್ಟ ಚಿತ್ರಗಳೇ ನಿಧಾನವಾಗಿ ಕಂಗೊಳಿಸುತ್ತವೆ. *'... ... .. ಒಂದು ಕುತೂಹಲಕರವಾದ ಅನುಭವ ಯಥಾವತ್ತಾದ ಪ್ರತಿಕೃತಿಯ ವಿಧಾನವಲ್ಲ. ಈ ಚಿತ್ರಗಳು ಸನ್ನಿವೇಶಗಳ ಪ್ರಭಾವವನ್ನು ಸಾಂಕೇತಿಕವಾಗಿ ಚಿತ್ರಿಸುವುದರಲ್ಲಿ ಅವು ಯಶಸ್ವಿಯಾಗಿದೆ. ಮೊದಲಿನಿಂದ ಕೊನೆಯವರೆಗೂ ಅಂದರೆ ಬಸವಣ್ಣ ಮರ್ತ್ಯದ ಮಣಿಹವನ್ನು ಮುಗಿಸಿ ಕೂಡಲಸಂಗಮದಲ್ಲಿ ಐಕ್ಯವಾಗಿ ಕೈಲಾಸಕ್ಕೆ ಬರುವವರೆಗೂ ಏಕಪ್ರಕಾರವಾಗಿ ಬೆಳೆದಿರುವ ಈ ಚಿತ್ರಗಳ ವೈಶಿಷ್ಟ್ಯವನ್ನು ವರ್ಣಿಸುವುದು ಅಸಾಧ್ಯ. ಗ್ರಂಥವನ್ನು ನೋಡಿಯೇ ಅದನ್ನು ತಿಳಿಯಬೇಕು. ಬಸವಣ್ಣನವರ ಕಥೆ ಮುಗಿದಮೇಲೆ ಓಹಿಲಪ್ಪ ಮೊದಲಾದ ಇತರ ಕೆಲವು ಶರಣರ ಕಥೆಗಳು ಬರುತ್ತವೆ. ಅಲ್ಲಿಯೂ ಹೀಗೆಯೇ ಚಿತ್ರಗಳಿವೆ. ಕಾವ್ಯವನ್ನು ಬರೆದ ಕವಿಯೇ ಈ ಚಿತ್ರಗಳನ್ನು ಬರೆದನೋ ಅಥವಾ ನಂಜುಂಡನ ಕಾವ್ಯಕ್ಕೆ ಇನ್ನೊಬ್ಬ ಕಲಾವಿದನ ಕುಶಲಕುಂಚ ಈ ಶೋಭೆಯನ್ನಿತ್ತಿತ್ತೋ ತಿಳಿಯದು. ನೂರಾರು ಚಿತ್ರಗಳನ್ನುಳ್ಳ ಈ ಗ್ರಂಥ ಚಿತ್ರಕಲಾ ಪರಂಪರೆಯಲ್ಲಿ ಸ್ಮರಣೀಯವಾದುದು'* ಎಂದಿದ್ದಾರೆ. ಅಡಿಟಿಪ್ಪಣಿಯಲ್ಲಿ 'ಈ ಕೃತಿಯನ್ನು ನನಗೆ ದೊರಕಿಸಿಕೊಟ್ಟವರು ಪೂಜ್ಯ ಶ್ರೀಶ್ರೀಶ್ರೀ ಸುತ್ತೂರು ಜಗದ್ಗುರುಗಳವರು. ಈ ಗ್ರಂಥದ ಪ್ರತಿ (ಚಿತ್ರಸಹಿತವಾದುದು) ಇನ್ನೆಲ್ಲಿಯಾದರೂ ಇದೆಯೇ ಎಂಬುದು ತಿಳಿಯದು' ಎಂದಿದ್ದಾರೆ. ಹೀಗೆ 'ವೃಷಭೇಂದ್ರ ವಿಲಾಸ'ದ ಚಿತ್ರಸಹಿತ ಹಸ್ತಪ್ರತಿ ಬಗ್ಗೆ ಬರೆದವರು ಲಿಂ. ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು.

'ವೃಷಭೇಂದ್ರ ವಿಲಾಸ'ದ ಹಸ್ತಪ್ರತಿ ಕವಿಮನೆಯಲ್ಲಿ ಇತ್ತು ಎಂದು ಕಾಣುತ್ತದೆ. ಈ ಕೃತಿಯ ಉಲ್ಲೇಖವನ್ನು ಎನ್. ಸುಬ್ಬರಾಯ ಭಾಗವತ ಮಾಡಿರುವುದನ್ನು ಎಸ್. ಶಿವಣ್ಣನವರು ದಾಖಲಿಸಿರುವುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಸುದೈವವಶಾತ್ ಇನ್ನೊಂದು ಕಾಗದ ಹಸ್ತಪ್ರತಿ ಲಭ್ಯವಿದ್ದು ಅದರ ವಿವರ ಇಂತಿದೆ, 'ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನ ಧರ್ಮಸ್ಥಳ ಈ ಸಂಸ್ಥೆಯಿಂದ ೧೯೯೩ರಲ್ಲಿ ಪ್ರಕಟಗೊಂಡ 'ಕನ್ನಡ ಹಸ್ತಪ್ರತಿಗಳ ವಿವರಣಾಸೂಚಿ (ಯಕ್ಷಗಾನಗಳು) ಸಂಪುಟ ೧ ಸಂಪಾದಕರು ಗೌ.ಮ. ಉಮಾಪತಿ ಶಾಸ್ತ್ರೀಯವರು ಈ ಸೂಚಿಯ ೪೩೨ ಪುಟದಲ್ಲಿ ಸಂಖ್ಯೆ ೧೬೯ರಲ್ಲಿ 'ವೃಷಭೇಂದ್ರ ವಿಲಾಸ'ದ ಹಸ್ತಪ್ರತಿ ವಿವರ ಬಂದಿದೆ. ಈ ಹಸ್ತಪ್ರತಿಯನ್ನು ಮೈಸೂರಿನ ಶ್ರೀಎಂ. ಎನ್. ಮಹದೇವಪ್ರಭು ಇವರು ಧರ್ಮಸ್ಥಳದ 'ಮಂಜೂಷ ಹಸ್ತಪ್ರತಿ ಭಂಡಾರ'ಕ್ಕೆ ದಾನ ಮಾಡಿದ್ದಾರೆ.

ಈ ಕಾಗದದ ಹಸ್ತಪ್ರತಿ ೧೯ ಸೆಂ.ಮೀ ಉದ್ದ, ೧೨ ಸೆಂ.ಮೀ. ಅಗಲ ೩ನೇ ಪುಟದಿಂದ ೧೩೪ನೇ ಪುಟದವರೆಗೆ ಇದೆ. ಹಸ್ತಪ್ರತಿ ಬೇಕಾದವರು ಬೇಕಾದ ಪುಟಗಳನ್ನು ಹರಿದು ತೆಗೆದಿರುವುದರಿಂದ ೧, ೨, ೪೧ ರಿಂದ ೫೨, ೬೩

ರಿಂದ ೭೯, ೮೭ ರಿಂದ ೧೧೦ ಹಾಗೂ ೧೧೩ ರಿಂದ ೧೩೦ರವರೆಗಿನ ಪುಟಗಳ ಲುಪ್ತವಾಗಿವೆ.

ಈ ಅಸಮಗ್ರ ಕೃತಿ ನೀಲಿ ಮತ್ತು ಹಳದಿ ಮಿಲ್ಲು ಕಾಗದದ ಮೇಲೆ ಮುತ್ತಿನಂಥ ಅಕ್ಷರಗಳಲ್ಲಿ ಬರೆದುದು. ಹಿಂದಿನ ಕವಿಗಳು ಕನ್ನಡ – ಸಂಸ್ಕೃತ ಭಾಷೆಗಳಲ್ಲಿ ಬರೆದ ಬಸವಾವತಾರದ ಕಥೆಯನ್ನು ಭಾಗವತ ಕವಿ ನಂಜುಂಡ ಯಕ್ಷಗಾನದಲ್ಲಿ ಬರೆದಿರುವನು.

ನಂಜುಂಡ ಭಾಗವತನ 'ವೃಷಭೇಂದ್ರ ವಿಲಾಸ' ಚಿತ್ರ ರಹಿತವಾಗಿ ಮೊದಲು ರಚನೆಗೊಂಡು ಪ್ರಚಾರಗೊಂಡಿದೆ. ಆ ನಂತರ ಕಥೆಗೆ ತಕ್ಕಂತೆ ಚಿತ್ರಗಳು ಮತ್ತು ಕೃತಿ ಒಟ್ಟಾರೆ ಲಿಖಿತಗೊಂಡ ಹಸ್ತಪ್ರತಿ ಸಿದ್ಧಗೊಂಡಿದೆ.

### ಪ್ರಕಟಿತ ಸಚಿತ್ರ ವೃಷಭೇಂದ್ರ ವಿಲಾಸ

ಪ್ರಕಟಿತ ಪುಸ್ತಕದಲ್ಲಿ ಮೊದಲನೇ ಪುಟದಲ್ಲಿ ಸುಖಾಸೀನ ಸ್ಥಿತಿಯಲ್ಲಿ ಕುಳಿತ ದಪ್ಪಮೀಸೆಯ ಬೃಹತ್ತಾದ ಬೆಲೆಬಾಳುವ ಜರೀಪೇಟವನ್ನು ಧರಿಸಿರುವ, ಹಣೆಯಲ್ಲಿ ವಿಭೂತಿ, ಬೃಹತ್ ಗಂಧದಬಟ್ಟು, ಭ್ರೂಮಧ್ಯದಲ್ಲಿ ಕುಂಕುಮ, ಕಿವಿಯಲ್ಲಿ ವಜ್ರದೋಲೆ, ಕೊರಳಲ್ಲಿ ರುದ್ರಾಕ್ಷಿಸರ ಚಿನ್ನದ ಕಟ್ಟು ಹಾಕಿರುವಂತಹದು ಮಧ್ಯದಲ್ಲಿ ಚಿನ್ನದ ಕರಂಡ ಅದರಲ್ಲಿ ಪೀಠಸ್ಥ ಲಿಂಗ ಸಹ ಇದೆ. ಎದೆಯ ಮೇಲೆ ಕಾಣುವಂತಹ ಬೆಲೆಬಾಳುವ ಬೃಹತ್ ಮರಕತದ ಹಾರ, ಜೇಬಿನಲ್ಲಿ ಬಂಗಾರದ ಸರಪಣಿಯುಳ್ಳ ಗಡಿಯಾರದ ಸಂಪುಟವಿರುವಂತೆ ಕಾಣುತ್ತದೆ.

ಬಲತೋಳಿಗೆ ಚಿನ್ನದ ತೋಳುಬಂದಿ, ಬಲಗೈಯಲ್ಲಿ ಮೂರು ಉಂಗುರ ಪ್ರಧಾನವಾಗಿ ಮುದ್ರೆಉಂಗುರ ಕಾಣುತ್ತದೆ. ಬಲಗೈಯಲ್ಲಿ ಎರಡು ಬೆರಳುಗಳಲ್ಲಿ ಎರಡು ಉಂಗುರ, ತೊಡೆಯ ಮೇಲೆ ಕೆಂಪು ರೇಷ್ಮೆ ಅಂಗವಸ್ತ್ರ, ಬಲಗಾಲಲ್ಲಿ ಬೃಹತ್ತಾದ ಚಿನ್ನದ ಕಾಲಂದಿಗೆ, ಬಲಗಾಲಿನ ಹೆಬ್ಬೆರಳಿನಲ್ಲಿ ತೊಡಿಸಿರುವ ಕಾಲುಂಗುರ, ಬಹಳ ಮೋಟಾದ ಕಸೆಅಂಗಿ ಧರಿಸಿರುವ ಮುಮ್ಮಡಿಯವರು ಕೆಂಪು ಒರಗುದಿಂಬು ಒರಗಿಕೊಂಡು ಕುಳಿತಿದ್ದಾರೆ. ಇವರ ಮುಂದೆ ಬಿಳಿಯ ಕಸೆಅಂಗಿ ಧರಿಸಿರುವ, ಸೊಂಟಕ್ಕೆ ಅಂಗವಸ್ತ್ರವನ್ನು ಸುತ್ತಿರುವ ಅದಕ್ಕೆ ಚಿನ್ನದ ಕರಂಡವನ್ನು ಅಳವಡಿಸಿರುವರು, ಕೆಂಪು ಶರಾಯಿ ತೊಟ್ಟಿರುವ ತಲೆಯ ಮೇಲೆ ಕೆಂಪು ಚೌಕಲಿಬುಟ್ಟಾ ಇರುವ ಜರೀಪೇಟವನ್ನು ಸುತ್ತಿರುವ, ಎದೆಯ ಮೇಲೆ ರುದ್ರಾಕ್ಷಿಸರವನ್ನು (೩೨ ರುದ್ರಾಕ್ಷಿಗಳಿರುವ) ಧರಿಸಿರುವ, ಚಿನ್ನದ ಉಂಗುರದಿಂದ ಬಂಧಿಸಿರುವ ಇಷ್ಟಲಿಂಗವನ್ನು ಕೆಂಪುವಸ್ತ್ರದಲ್ಲಿ ಸುತ್ತಿ ಕೊರಳಿಗೆ ಕಟ್ಟಿಕೊಂಡಿದ್ದಾರೆ. ಕಾಲಲ್ಲಿ ಬೆಳ್ಳಿ ಚೈನು ಕಾಣುತ್ತದೆ, ಹಣೆ, ಕೊರಳು, ಕಿವಿಯಲ್ಲಿ, ಕಣ್ಣಿನಮೇಲೆ ಧರಿಸಿರುವ ವಿಭೂತಿ, ಭ್ರೂಮಧ್ಯದಲ್ಲಿ ಕುಂಕುಮ ಧರಿಸಿರುವ ಈ ವ್ಯಕ್ತಿ ಸಣ್ಣದಾದ ಮೀಸೆಯನ್ನು ಬಿಟ್ಟಿದ್ದಾರೆ. ಮಹಾಸ್ವಾಮಿಗಳಿಗೆ ಕರಂಡದಿಂದ ತೆಗೆದು ಸಿದ್ಧಪಡಿಸಿದ ವೀಳ್ಯವನ್ನು ಅರ್ಪಿಸುತ್ತಾ ಇದ್ದಾರೆ. ಆ ಕೋಣೆಯಲ್ಲಿ ತೇಲಿಸಿರುವ ಬೆಳಗಿನ ಬುಟ್ಟಿಯನ್ನು ಗಮನಿಸಬಹುದು. ಅಂದಿನ ದಿನದಲ್ಲಿ ಭಹು ಸುಲಭವಾಗಿ ಈ ಅರಮನೆ ಅಧಿಕಾರಿಯನ್ನು ಗುರುತಿಸಬಹುದಾಗಿತ್ತು. ಇಂದಿನ ದಿನ ನಮಗೆ ಆ ಅಧಿಕಾರಿ ಹೆಸರು ಗೊತ್ತಿಲ್ಲ. ಮಹಾಸ್ವಾಮಿ ಮುಮ್ಮಡಿಯವರನ್ನು ಗುರುತಿಸಬಹುದು. ಈ ಅಧಿಕಾರಿಯೇ "ವೃಷಭೇಂದ್ರ ವಿಲಾಸ"ದ ಚಿತ್ರವನ್ನು ಬರೆಸಿರಬೇಕು, ಆಶ್ರಯದಾತನನ್ನು ಚಿತ್ರಗಾರ ಈ ರೀತಿ ಚಿತ್ರವನ್ನು ರಚಿಸಿ ತನ್ನ ಗೌರವವನ್ನು ಸಲ್ಲಿಸಿದ್ದಾನೆ.

ಅರಮನೆಯ ನಾನಾವಿಧವಾದ ಬೆಲೆಬಾಳುವ ಅಭರಣಗಳನ್ನು ಧರಿಸಿ, ಅಲಂಕರಿಸಿಗೂಂಡಿರುವ ಸುಖಾಧೀನ ಗಣಪತಿ ಆತನ ಕೆಳಗೆ ರೇಷ್ಮೇವಸ್ತ್ರವನ್ನು ಧರಿಸಿರುವ ಆತನ ವಾಹನ ಅಲಂಕೃತ ಮೂಷಿಕ, ಮಹಿಷಾಸುರಮರ್ಧಿನಿ, ಚಾಮುಂಡೇಶ್ವರಿ, ಸರಸ್ವತಿ, ಲಕ್ಷ್ಮೀ, ರಾಜರಾಜೇಶ್ವರೀ, ಮುಂದಿನ ಚಿತ್ರ ಅಲ್ಲಮಪ್ರಭುಗಳದು ಇರಬಹುದು, ಪದ್ಮಾಸೀನ ಭಂಗಿಯಲ್ಲಿ ಶಿವಪೂಜೆಗೆ ಕುಳಿತ ನೆತ್ತಿಯಿಂದ ಪಾದದವರೆಗೂ ತ್ರಿಪುಂಡವನ್ನು ಧರಿಸಿದ್ದಾನೆ. ತಲೆಗೆ ರುದ್ರಾಕ್ಷಿ ಕರೀಟವನ್ನು ಅಂಗೈ–ಮುಂಗೈಗಳಲ್ಲಿ, ಎದೆಮೇಲೆ ರುದ್ರಾಕ್ಷಿಸರ ಧರಿಸಿದ್ದಾನೆ. ಚೂಪಾದ ಗಡ್ಡಮೀಸೆ ಬಿಟ್ಟಿದ್ದಾನೆ, ಕಿವಿಯಲ್ಲಿ ರುದ್ರಾಕ್ಷಿ ಕರ್ಣಕುಂಡಲ ಭ್ರೂಮಧ್ಯದಲ್ಲಿ ಶ್ರೀಗಂಧದ ಬಟ್ಟು ಕಾಲಲ್ಲಿ ಕಾಲಂದಿಗೆ ಅದರ ಜೊತೆ ಒಂದೇ ಜಂಗು, ನೀಳಾಗಿ ಬಿಟ್ಟಿರುವ ಜಟೆ, ಎಡಗೈಯಲ್ಲಿರುವ ಪೀಠಸ್ಥ ಲಿಂಗ ಮುಂದೆ ಮಹಾಪುಜೆಗೆ ಅಣಿಗೂಳಿಸಲಾಗಿರುವ ಶಿವಪೂಜಾ ಪರಿಕರಗಳಾದ ವಿಭೂತಿ ಕರಂಡ, ಪುಷ್ಪಕರಂಡ, ಫಲಕರಂಡ, ಹಾಗೂ ಧೂಪಾರತಿ, ಪಂಚಾರತಿ, ಉದ್ಧರಣೆ, ಪಂಚಪಾತ್ರೆ, ಮಂಗಳಾರತಿ ತಟ್ಟೆ, ಗಂಟೆಗಳನ್ನು ಕಾಣಬಹುದಾಗಿದೆ.

ಸ್ನಾನದ ಮನೆಯಿಂದ ಶಿವಾಪೂಜಾ ಮಂಟಪಕ್ಕೆ ಬರುವಾಗ ಧರಿಸುವ ಚಿನ್ನದ ಹಾವುಗೆ ಕಾಣಬಹುದು. ಅಲ್ಲಮಪ್ರಭುಗಳು ಕುಳಿತಿರುವುದು ಚಿನ್ನದ ಶಿವಪೂಜಾ ಮಂಟಪದಲ್ಲಿ, ಕಟ್ಟಾಮಡಿಯಲ್ಲಿ ಕುಳಿತಿರುವ ಮಹಾವಿರಕ್ತಮೂರ್ತಿ ಅಲ್ಲಮಪ್ರಭು ಕೌಪೀನವನ್ನು ಧರಿಸಿದ್ದಾರೆ.

ಇಲ್ಲಿ ಇನ್ನೊಂದು ವಿಶೇಷ ದೃಶ್ಯ ನೋಡಬೇಕು, ಮುಮ್ಮಡಿಯವರ ಕಾಲದಲ್ಲಿ ವಿರಕ್ತ ಮೂರ್ತಿಗಳು ಇದೇ ರೀತಿ ಅಲಂಕರಿಸಿಕೊಳ್ಳುತ್ತಾ ಇದ್ದರಾ! ಅ ಬಗ್ಗೆ ನಮಗೆ ಹೆಚ್ಚಿನ ವಿವರ ಗೊತ್ತಿಲ್ಲ. ಎಡಗೈಯಲ್ಲಿರುವ ಪಾಣಿಪೀಠ ಸಮೇತ ಇರುವ ಲಿಂಗಕ್ಕೆ ಬಲಗೈಯಲ್ಲಿ ಲಿಂಗಕ್ಕೆ ಧರಿಸಲು ಬಿಲ್ವದಳವನ್ನು ಹಿಡಿದಿರುವುದು ಗಮನಿಸಬಹುದು.

ನಂಜುಂಡ ಭಾಗವತನ ಕಾಲದ ಸಮಕಾಲೀನ ವೀರಶೈವ

ವಿರಕ್ತಸ್ವಾಮಿ ಪದ್ಮಾಸನಾ ಭಂಗಿಯಲ್ಲಿ ಕುಳಿತ ವಿರಕ್ತಮೂರ್ತಿ. ನೀಳವಾದ ಕಾವಿ ಕೌಪೀನವನ್ನು ಧರಿಸಿಕೊಂಡು, ತಲೆಗೆ ಕೆಂಪು ಮಂಡೆವಸ್ತ್ರವನ್ನು ಸುತ್ತಲಾಗಿದೆ. ಬೃಹತ್ ಅಂಗವಸ್ತ್ರವನ್ನು ಹೊದ್ದುಕೊಂಡಿದ್ದಾರೆ, ಕೊರಳಲ್ಲಿ ಚಿನ್ನದ ಕಟ್ಟಿನ ರುದ್ರಾಕ್ಷಿ ಧರಿಸಿದ್ದಾರೆ. ವಸ್ತ್ರದಲ್ಲಿ ಇಷ್ಟಲಿಂಗವನ್ನು ಸುತ್ತಿ ಕಟ್ಟಲಾಗಿದೆ. ಬಲಗೈಯಲ್ಲಿ ಉಂಗುರವಿದೆ. ಬಲಗಾಲಲ್ಲಿ ಕಾಲಂದಿಗೆ ಸಮೇತ ಒಂದು ಜಂಗನ್ನು ನೋಡಬಹುದು. ಸ್ವಾಮಿಗಳ ಪಕ್ಕದಲ್ಲಿ ನಂದಿಧ್ವಜ ಸಣ್ಣದು ಅದರಲ್ಲಿ ಲಿಂಗಮುದ್ರೆ (ಲಿಂಗ-ಬಸವ) ಚಿತ್ರವನ್ನು ಗುರುತಿಸಬಹುದು. ಸ್ವಾಮಿಗಳ ಮುಂದಿನ ಪೀಠದ ಮೇಲೆ ಇರಿಸಲಾದ 'ವೃಷಭೇಂದ್ರ ವಿಲಾಸ' ಸಿದ್ಧವಾದ ಹಸ್ತಪ್ರತಿಗೆ ಸ್ವಾಮಿಗಳೇ ತಮ್ಮ ಸ್ವಹಸ್ತದಿಂದ ಪೂಜೆ ಸಲ್ಲಿಸುತ್ತಿದ್ದಾರೆ. ಸ್ವಾಮಿಗಳ ಮುಂದೆ ಪುಷ್ಪಕರಂಡ, ತಟ್ಟೆಯಲ್ಲಿ ಒಡೆದ ತೆಂಗಿನಕಾಯಿ, ಒಂದು ಚಿಪ್ಪು ಬಾಳೆಹಣ್ಣು, ಉರಿಯುತ್ತಿರುವ ಕರ್ಪೂರದ ತಟ್ಟೆ ಮೂಟೂರ ಧೂಪಾರತಿ, ಜೋಡಿಗಂಟೆ, ಏಕಗಂಟೆ, ಹಾಗೂ ಘಮಘಮಿಸುವ ಸಾಂಬ್ರಾಣಿ ಧೂಪದ ಕರಂಡಕ ಕಾಣಬಹುದು. ಸ್ವಾಮಿಗಳ ಸನಿಹದಲ್ಲಿ ಶಿವಪೂಜಾ ಮರಿ ನಿಂತಿದ್ದಾನೆ. ಬಿಳಿಯ ಪಂಚೆಯನ್ನು ಕಚ್ಚೆಯಾಗಿ ಉಟ್ಟಿದ್ದಾನೆ, ಸೊಂಟಕ್ಕೆ ಕಟಿವಸ್ತ್ರವನ್ನು ಸುತ್ತಲಾಗಿದೆ ದೇಹದ ತುಂಬಾ ಮತ್ತು ಹಣೆಯಲ್ಲಿ, ಕಿವಿ, ಕಣ್ಣಿನ ಮೇಲೆ, ವಿಭೂತಿಯನ್ನು ಧರಿಸಲಾಗಿದೆ, ಹಣೆಯ ಭ್ರೂ ಮಧ್ಯದಲ್ಲಿ ಕುಂಕುಮವನ್ನು ಇಟ್ಟಿದ್ದಾನೆ. ಕೊರಳಲ್ಲಿ ರುದ್ರಾಕ್ಷಿಸರ, ವಸ್ತ್ರದಲ್ಲಿ ಇಷ್ಟಲಿಂಗವನ್ನು ಸುತ್ತ ಕಟ್ಟಲಾಗಿದೆ. ತಲೆಯ ಕೂದಲನ್ನು ತೆಗೆಸಿ ಸ್ವಲ್ಪ ಶಿಖೆ ಬಿಟ್ಟಿರುವುದನ್ನು ಕಾಣಬಹುದು.

ಅರಮನೆಯಲ್ಲಿ ಪೀಠದ ಮೇಲೆ ಕೆಂಪು ಒರಗುದಿಂಬು ಇಟ್ಟುಕೊಂಡು ಸುಖಾಸೀನ ಭಂಗಿಯಲ್ಲಿ ಕುಳಿತಿರುವ ಅಳಿಯ ಲಿಂಗರಾಜರು ತಲೆಗೆ ಹಸಿರು ಚೌಕುಳಿಯ ಬಹಳ ಕುಸುರಿ ಮಾಡಿರುವ ಜರೀಪೇಟವನ್ನು ಸುತ್ತಿ ಕೊಂಡಿದ್ದಾನೆ. ಕಿವಿಯಲ್ಲಿ ವಜ್ರದೋಲೆ, ಹಣೆಯ ಮೇಲೆ ತ್ರಿಪುಂಡ್ರ ಹಣೆಮಧ್ಯದಲ್ಲಿ ಸಿಂಧೂರ, ಭ್ರೂಮಧ್ಯದಲ್ಲಿ ಕುಂಕುಮ, ಕೊರಳಲ್ಲಿ ರುದ್ರಾಕ್ಷಿ ಸರ-ಮಧ್ಯದ ರುದ್ರಾಕ್ಷಿಯನ್ನು ಚಿನ್ನದ ಕಟ್ಟಿನಿಂದ ಅಲಂಕರಿಸಲಾಗಿದೆ, ಬಹಳ ಸುಂದರವಾದ ಪಚ್ಚೆ, ಮುತ್ತುಸರದಿಂದ ಕೊರಳು ಅಲಂಕರಿಸಲಾಗಿದೆ. ಕಸೆ ಅಂಗಿಯ ಜೇಬಿನಲ್ಲಿ ಸರಪಳಿಯಿಂದ ಇಳಿಬಿಟ್ಟ ಗಡಿಯಾರ ಅಲಂಕರಿಸಿದೆ. ಸಣ್ಣದಾದ ತೋಳ್‌ಬಂದಿಯನ್ನು ಧರಿಸಿದ್ದಾರೆ. ಮಣಿಕಟ್ಟಿನಲ್ಲಿ ರತ್ನಖಚಿತ ಮಣಿಕಟ್ಟಿನ ಪಟ್ಟಿ, ಬೆರಳುಗಳಲ್ಲಿ ಉಂಗುರ, ಜಪಮಾಲೆ, ಎಡಗೈಯಲ್ಲಿಯೂ ಉಂಗುರ, ತೊಡೆಮೇಲೆ ಅಂಗವಸ್ತ್ರ, ಕಾಲಲ್ಲಿ ಚಿನ್ನದ ಕಾಲಂದಿಗೆ, ಮುಮ್ಮಡಿ ಕೃಷ್ಣರಾಜ ಒಡೆಯರ್ ಮತ್ತು ಅಳಿಯ ಲಿಂಗರಾಜರು ಒಂದೇ ವಿಧವಾದ ಕಸೆ ಅಂಗಿ ಧರಿಸಿದ್ದಾರೆ. ಚಿನ್ನದ ಜರಿಯಿಂದ ರೇಷ್ಮೆವಸ್ತ್ರವನ್ನು ಕುಸುರಿ ಮಾಡಿರುವುದನ್ನು ಚಿತ್ರಗಾರ ಚಿತ್ರಿಸಿದ್ದಾನೆ. ಅಳಿಯ ಲಿಂಗರಾಜರ ಮುಂದೆ ನಂಜುಂಡ ಭಾಗವತ ಕುಳಿತಿದ್ದಾನೆ. ಬಿಳಿಯ ಕಸೆಅಂಗಿ ಧರಿಸಿರುವ, ಸೊಂಟದಲ್ಲಿ ಕೆಂಪು ಕಟೀವಸ್ತ್ರ, ಕೊರಳಲ್ಲಿ ರುದ್ರಾಕ್ಷಿಸರಮಧ್ಯದಲ್ಲಿನ ರುದ್ರಾಕ್ಷಿಗೆ ಚಿನ್ನದ ಕಟ್ಟನ್ನು ಹಾಕಿರುವಂತಹ, ರುದ್ರಾಕ್ಷಿ, ಕಿವಿಯಲ್ಲಿ ಓಲೆ, ತಲೆಯ ಮೇಲೆ ಕೆಂಪು ರೇಷ್ಮೆ ರುಮಾಲು, ಹಣೆಯಮೇಲೆ ವಿಭೂತಿ, ಹಣೆಮಧ್ಯೆ ಅಗಲವಾದ ಕುಂಕುಮ, ಭ್ರೂಮಧ್ಯದಲ್ಲಿ ಕೆಂಪು ಬೊಟ್ಟನ್ನು ಇಡಲಾಗಿದೆ. ಮುಂಗೈಯಲ್ಲಿ ಚಿನ್ನದ ಕಡಗವನ್ನು, ಬೆರಳಿನಲ್ಲಿ ರತ್ನಖಚಿತ ಉಂಗುರವನ್ನು, ಕಾಲಲ್ಲಿ ಬೆಳ್ಳಿಯ ಕಾಲಂದಿಗೆಯನ್ನು ನೊಡಬಹುದು.

ಕೈಯಲ್ಲಿ ಹಿಡಿದಿರುವ ಪುಸ್ತಕದ ಮೇಲೆ 'ಶ್ರೀವೃಷಭೇಂದ್ರ ವಿಲಾಸ' 'ಶ್ರೀ ಶ್ರೀಗುರುಸಂಗನ ಬಸವಲಿಂಗಾಯ ನಮಃ' ಎಂದು ಬರೆಯಲಾಗಿದೆ.

ಇದರಿಂದ ತಿಳಿದು ಬರುವುದೇನೆಂದರೆ ಕವಿ ನಂಜುಂಡ ಭಾಗವತ ತಾನು ರಚಿಸಿರುವ 'ವೃಷಭೇಂದ್ರವಿಲಾಸ'ವನ್ನು ಓದಿ ಹೇಳುತ್ತಾ ಇರುವಂತಹ ದೃಶ್ಯ. ಅಳಿಯ ಲಿಂಗರಾಜರ ಕಾಲ (೧೮೨೩-೧೮೭೪) ಮುಮ್ಮಡಿಯವರ ಕಾಲ (೧೭೯೪-೧೮೬೮). ಈ ಕೃತಿ ಸುಮಾರು ೧೮೬೦ರಲ್ಲಿ ನಂಜುಂಡ ಭಾಗವತ ರಚನೆಯಿರಬಹುದು.

ಸುತ್ತೂರು ಶ್ರೀಮಠದ ಹಸ್ತಪ್ರತಿಯಿಂದ ಆದಿಯಲ್ಲಿ ಶ್ರೀಗುರುಬಸವಲಿಂಗಾಯ ನಮಃ, ಶ್ರೀ ವೀರೇಶ ಪ್ರಸೀದ ವೃಷಭೇಂದ್ರ ವಿಲಾಸವೆಂಬ ಯಕ್ಷಗಾನ ಮಹಾನಾಟಕವಂ ಬರೆವುದಕ್ಕೆ ಶುಭಮಸ್ತು ನಿರ್ವಘ್ನಮಕ್ಕೆ ಎಂದಿದೆ. ಅಳಿಯ ಲಿಂಗರಾಜನ ಮನೆದೈವ ವೀರಭದ್ರಸ್ವಾಮಿ. ಆ ಮನೆತನದ ಹತ್ತಿರದ ಬಂಧು ಚಿತ್ರಸಹಿತ ಪ್ರತಿಯನ್ನು ಸಿದ್ಧಪಡಿಸಿರುವುದರಿಂದ, ಶ್ರೀವೀರೇಶ ಪ್ರಸೀದ ಎಂದು ಬರೆದಿರಬಹುದು. ನಂಜುಂಡ ಭಾಗವತ ತನ್ನ ಎಲ್ಲಾ ಕೃತಿಯನ್ನು ಧರ್ಮಸ್ಥಳದ ಮಂಜುನಾಥನನ್ನು ಸ್ತೋತ್ರ ಮಾಡುತ್ತಾನೆ. ಅದರಂತೆ ಈ ಕೃತಿಯಲ್ಲಿ ಮೊದಲ ಪದ್ಯದಲ್ಲೇ ಸ್ತೋತ್ರ ಮಾಡಿದ್ದಾನೆ. ಆತನಿಗೆ ಸಂಗಮನಾಥ ಬೇರೆಯಲ್ಲ ಮಂಜುನಾಥ ಬೇರೆಯಲ್ಲ.

**ಶ್ರೀಶರ್ವಾಣೀಕಾಂತಂ ।**
**ಭಾಸುರ ಸೋರ್ಯೇಂದು ತಾವಕಾಕ್ಷಂ ದಯದೀಂ**
**ಬೇಸರಿಸದೆ ರಕ್ಷಿಸಲೀ**
**ಶ್ರೀಸುಗಮನಾಥ ಮಂಜುನಾಥಂ ನಮ್ಮಂ (೧-೧)**

**ಗುರುಹಿರಿಯರನಂ ಮನದೊ**
**ಳಸ್ಮರಿಸುತ ಕುಲದೈವವನ್ನು ಭಜಿಸುತ ಭಕ್ತ್ಯಾ**
**ದರದಿಂ ಲಿಂಗೇಂದ್ರನ ನೆನೆ**
**ದಿರದುಪುರುವೆ ವೃಷಭರಾಜ ಪೌರಾಣವನು (೧-೧೫)**

ಗುರುಹಿರಿಯರನು ಮನದೊಳಗೆ ಸ್ಮರಣೆ ಮಾಡಿ ಕುಲದೇವರನ್ನು ಭಜಿಸಿ ಭಕ್ತ್ಯಾದರದಿಂ ಲಿಂಗೇಂದ್ರನ ಅಂದರೆ ಅಳಿಯ ಲಿಂಗರಾಜನ ನೆನೆಯುತ ಬಸವೇಶ್ವರನ ಪುರಾಣವನ್ನು ರಚಿಸುತ್ತೇನೆ ಎಂದಿದ್ದಾನೆ.

ಸೋಮಾರಾಧ್ಯರು ಸಿಂಗರಾಜಕವಿ
ಭೀಮಕವಿ ಷಡಕ್ಷರಿದೇವ
ನಾಮ ಶಂಕರಾರಾಧ್ಯ ಬಸವಲಿಂಗ
ನಾಮ ಕವಿಕೃತ ವೃಷಕಥನವ (೧-೨೩)

ಬಸವೇಶ್ವರನ ಚರಿತ್ರೆ ಬರೆದವರು ಪಾಲ್ಕುರಿಕೆ ಸೋಮನಾಥರು, ಸಿಂಗರಾಜಕವಿ, ಭೀಮಕವಿ, ಷಡಕ್ಷರಿದೇವ, ಕಂಚಿ ಶಂಕರಾರಾಧ್ಯ, ಗರಣಿ ಬಸವಲಿಂಗ ಕವಿಗಳು ಇವರೆಲ್ಲರನ್ನೂ ಭಾಗವತ ನಂಜುಂಡಕವಿ ತನ್ನ ಕೃತಿಯ ಪ್ರಾರಂಭದಲ್ಲಿ ನೆನೆದಿದ್ದಾನೆ. ನಂಜುಂಡ ಭಾಗವತನ ಗುರು ರೇಚಾರ್ಯ ತನ್ನ ಕೃತಿಯಲ್ಲಿ ಹಲವಾರು ಸಾರಿ ನೆನೆದಿದ್ದಾನೆ.

ಅದಿದೈವಗಳಿಗನಾದಿ ಜಂಗಮರಾಗಿ
ಸಾಧಿಸುತಾ ಮೋಕ್ಷದಾ
ಹಾದಿಗೆ ತನುವಾಗಿರುತಿರ್ಪ ಪ್ರಮಥರ
ಪಾದಕೆ ನಂಜುಂಡವರದ ರೇಚಾರ್ಯಗೆ (೧-೩೩-೨)

ಅದಿದೈವಗಳಗೂಡಿ ಜಂಗಮರಾಗಿ ಸಾಧಿಸುವ ಮೋಕ್ಷದಾ ಹಾದಿಗೆ ತನುವಾಗಿರುತಿರ್ಪ ಪ್ರಮಥರ ಸಾಲಿನಲ್ಲಿ ನಿಲ್ಲುವ ನಂಜನಗೂಡು ಶ್ರೀನಂಜುಂಡೇಶ್ವರ ಕೃಪಾಕಟಾಕ್ಷ ಪಡೆದ ರೇಚಾರ್ಯ.

ಬಸವಾದಿ ಪ್ರಮಥರಿಗೊಂದಿಪೆ ಯೋ
ಗಸಮಾಧಿಯೊಳಿಹ ರೇಚಾರ್ಯ
ಗಸವಸದಿಂ ಭಜಿಸುತ ಕೋಡುಮೇಶನ
ಹಸನಾಗುತ ನೆನೆಯುತಿಹಯ್ಯಾ। (೨-೧)

ಬಸವಾದಿಪ್ರಮಥರಿಗೆ ವಂದಿಸಿ ಯೋಗ ಸಮಾಧಿಯೊಳಿಹ ರೇಚಾರ್ಯನ್ನು ಭಜಸುತ ಕೂಡುಮೇಶನ ಅರ್ಥಾತ್ ಮಂಜುನಾಥನ ನೆನೆಯುತ್ತೇನೆ ಎಂದಿದ್ದಾನೆ

ನಿರವಯ ನಿರ್ಮಾಯ ನಿರವೇದ್ಯ ಪರಮನೆ
ಗುರು ಪ್ರಭುವಾಗಿ ಶೂನ್ಯಾಸನದಿ
ಸ್ಥಿರಗೊಂಡು ಶರಣ ರೇಚಾರ್ಯಯ ಕೃಪೆಯಿಂಕು
ವರ ನಂಜುಂಡನಿಗುಳುಮೆಯ ತೋರ್ದಗೆ (೨-೨೫೬)

ನಿರಮಯ, ನಿರ್ಮಾಯ, ನಿರವೇದ್ಯ, ಪರಮನೆ ಗುರುಪ್ರಭುವಾಗಿ ಶೂನ್ಯಾಸನದಿ ಅರ್ಥಾತ್ ಶೂನ್ಯಸಿಂಹಾಸನದ ಮೇಲೆ ಕುಳಿತ ಶರಣ ರೇಚಾರ್ಯ ಕೃಪೆಯಿಂದ ನಾನು ಉಳವಿಯನ್ನು ದರ್ಶನ ಮಾಡಲು ಸಾಧ್ಯವಾಯಿತು ಎಂದು ಸ್ಪಷ್ಟವಾಗಿ ಭಾಗವತ ನಂಜುಂಡ ಹೇಳಿದ್ದಾನೆ.

ಕರಿಯಲಿಗೋಸುಗ ಶರಣ ರೇಚಣ್ಣಗೆ।
ಮರೆಮಾಚಿಸುತ ಬರೆಯುತ ಮುಂದಕೆ
ಬರುವೆವೆಳ್ನೂರು ಎಪ್ಪತ್ತು ವರುಷಕ್ಕೆಂದು
ಗುರುತಿತ್ತ ನಂಜುಂಡ ವರದನಿಗೆ (೩-೩೦೫)

ಆ ಪರಮೇಶ್ವರನ ಸನ್ನಿಧಿಗೆ ಹೋಗುವುದನ್ನು ತಪ್ಪಿಸಲು ರೇಚಣ್ಣಗೆ ಮರೆಮಾಚಿಸುತ ಬರೆಯುವ ಮುಂದಕೆ ೭೭೦ ವರ್ಷಕ್ಕೆ ಬರಲು ಗುರುತಿತ್ತ ನಂಜುಂಡ ವರದನಿಗೆ,

ಗುರ ರೇಚಾರ್ಯ ಪ್ರಭುವಿನ ಪದ ತಾ
ಮರಸನ ನೆನೆಯುತೆನೆಗೆ ನಿರತಂ
ಪೊರೆಯಲಿ ಕುಡುಮಪುರೇಶ ನಿರತಂ ಪ್ರಮಥಾ
ಮದರೀಗೆ ಶುಭಫಲಮ ಸತತಂ

ಗುರುರೇಚಾರ್ಯ ಪ್ರಭುವಿನ ಪಾದವನ್ನು ನೆನೆಯುತ ನಿರಂತರ ನನ್ನನ್ನು ಪೊರೆಯಲಿ ಕುಡುಮ ಪುರೇಶ ಅರ್ಥಾತ್ ಧರ್ಮಸ್ಥಳದ ಮಂಜುನಾಥನ ಶುಭ ಫಲವನ್ನು ಸದಾ ನೀಡುತಾ ಇರಲಿ ಎಂದಿದ್ದಾನೆ.

ಖಂಡಪರಶು ಚೇತನಾತ್ಮ ಖಂಡನಾಕಾರವನ್ನು
ಕಂಡುಳುಮೆಯ ಸೇರಿ ನಂ ಜುಂಡಗೊಲಿದ ರೇಚಪ್ರಭುಗೆ (೪-೮೨)

ಆ ಪರಮೇಶ್ವರನ ಚೇತನಾತ್ಮ ಖಂಡನಾಕಾರವನ್ನು ಕಾಣಲು ಉಳುಮೆಯನ್ನು ಸೇರಿದ ನಂಜುಂಡಗೊಲಿದ ರೇಚಪ್ರಭುಗೆ ಭಕ್ತಿ ಸಲ್ಲಿಸಿದ್ದಾನೆ.

ಈ ಮೇಲಿನ ರೇಚಾರ್ಯ ಶರಣ ಬಸವಣ್ಣ ಸೋದರಳಿಯ ಚೆನ್ನಬಸವಣ್ಣನ ಸಮಕಾಲೀನ ಆತ ಶರಣರ ಜೊತೆ ಕೈಲಾಸಕ್ಕೆ ಹೋಗದೆ ಇಳೆಯಲ್ಲೇ ಉಳಿದರು ಎಂದು ಆ ರೇಚಾರ್ಯನನ್ನೇ ಭಾಗವತ ನಂಜುಂಡ ಸ್ತೋತ್ರ ಮಾಡಿರುವುದು. ರೇಚಣ್ಣನ ಮೇಲೆ ಭಾಗವತ ನಂಜುಂಡನಿಗೆ ಅಪರಿಮಿತವಾದ ಶ್ರದ್ಧೆ. ಕೃತಿಯ ಆದಿಯಲ್ಲಿ,

ಕರ್ತೃಕರ್ಮಕ್ರಿಯಾಪದಗಳೆಂಬುದನರಿಯೆ
ಕರ್ತೃ ನೀನಾಗೆನ್ನ ಸಲಹೊ ರೇಚಣ್ಣ (೧-೧೮)

ಭಾಗವತ ನಂಜುಂಡ ತನ್ನ ವಿನೀತಭಾವವನ್ನು ಇಲ್ಲಿ ವ್ಯಕ್ತಪಡಿಸಿದ್ದಾನೆ.

## ವಾರ್ಧಕ

ಗುರು ಸಂಗಮೇಶದ್ವಿತೀಯಪ್ರಮಾಣವಾ
ಗಿರೆ ವೃಷಭಗಂ ದ್ವಿತೀಯ ಶಂಭುವೆಂಬುಕ್ತಿಯಿಂ
ತರಳ ಷಣ್ಮುಖ ವೀರಭದ್ರ ನಾರದ ಗಂಗೆ ಗಿರಿಜೆಯಾಪ್ರಮಥ ಗಣವಂ।

ಪರಮ ಕೈಲಾಸದೊಳ್ ದ್ವಾರಪಾಲಕರನ್ನು
ತೆರಳೆಂದು ಭೂಲೋಕಕವರ ಕಳುಹಿದ ಶಿವನೆ
ಸೆರಗೊಡ್ಡಿ ಬೇಡುವೆನು ನಿನ್ನ ಕರುಣಾಮೃತವನೆರೆಯೆಂದು ವಂದಿಸುವೆನು
(೧-೨೦)

ಭಾಗವತ ನಂಜುಂಡ ಕವಿ ಸಂಗಮೇಶನನ್ನು ಗುರು ಎಂದು ಕರೆದಿದ್ದಾನೆ. ಪರಂಪರೆಯ ನಂಬಿಕೆಂತೆ ಸಂಗಮೇಶರೆ ಗುರುಸ್ವರೂಪದಲ್ಲಿ ಬಸವಣ್ಣನಿಗೆ ಇಷ್ಟಲಿಂಗಧಾರಣೆ ಮಾಡಿದ್ದು ಎಂದು ಆ ಅರ್ಥದಲ್ಲಿ ಕವಿ ಇಲ್ಲಿ 'ಗುರು' ಶಬ್ದಪ್ರಯೋಗ ಮಾಡಿದ್ದಾನೆ. ಬಸವಣ್ಣನನ್ನು ಈ ಹಿಂದಿನ ಭಕ್ತಜನತೆ 'ದ್ವಿತೀಯಶಂಭು' ಎಂದು ಕರೆದಿದ್ದು ದಾಖಲಿಸಿದ್ದಾನೆ. ಈ ಕೃತಿ ರಚಿಸಿದ ಷಣ್ಮುಖ, ವೀರಭದ್ರ, ನಾರದ, ಗಂಗೆ, ಗಿರಿಜೆ ಪ್ರಮಥ ಗಣಂಗಳು, ದ್ವಾರಪಾಲಕರು ಎಲ್ಲರೂ ಭೂಲೋಕಕ್ಕೆ ಹೋಗಿ ಎಂದು ಹೇಳಿದ ಪ್ರಸಂಗವನ್ನು ಕವಿ ಇಲ್ಲಿ ದಾಖಲಿಸಿದ್ದಾನೆ.

ನಂಜುಂಡ ಭಾಗವತ ಮೊದಲನೇ ಸಂಧಿ ೨೫ನೇ ೨೬ನೇ ೨೭ನೇ ವಾರ್ಧಕ ಷಟ್ಪದಿಯಲ್ಲಿ ಕಿನ್ನರಿಯ ಬ್ರಹ್ಮಯ್ಯ, ಶೂಲದಾ ಬ್ರಹ್ಮಯ್ಯ, ಕನ್ನದಾ ಬ್ರಹ್ಮಯ್ಯ, ಹರಳಯ್ಯ, ಗಾಣದಾ ಕನ್ನಪ್ಪಯ್ಯ, ಮೋಳಿಗೆಯ ಮಾರಯ್ಯ, ಜಗದೇವ ಮಲ್ಲೆಯ್ಯ- ಬೊಮ್ಮಯ್ಯ ಬಿಬ್ಬಿ ಬಾವಯ್ಯ, ಸುರಗಿ ಚೌಡಯ್ಯ, ಅಗ್ಗವಣಿ ಹೊನ್ನಯ್ಯ, ಮುಸುಡಿಯ ಚೌಡಯ್ಯ, ಧೂಪದ ಮಾಚಯ್ಯ, ಹಡಪದ ರೆಚಿದೇವಯ್ಯ, ಕಲಕ್ಯಾದ ಬ್ರಹ್ಮಯ್ಯ, ಅಮರಗೊಂಡದ ಮಲ್ಲಿಕಾರ್ಜುನಯ್ಯ, ಆದಕ್ಕಿ ಮಾರುವಯ್ಯ, ಸಿದ್ಧರಾಮಯ್ಯ, ಹಡಪದಪಣ್ಣ, ಮಧುವರಸಯ್ಯ, ಹೊಡೆಹುಲ್ಲ ಬಂಕಯ್ಯ, ಸೊಡ್ಡಳ ಬಾಚ್‌ರಸ್, ಏಕಾಂತದ ರಾಮಯ್ಯ, ಎಚ್ಚರಿಕೆಯ ಮುಕ್ತಾಯಣ್ಣಗಳು, ಶಂಕರ ಶೆಟ್ಟಿ, ಮುಗ್ಧ ಸಂಗಯ್ಯ, ಹಾಮಿಳ ಕಲ್ಲಯ್ಯ, ಸಕಲೇಶ ಮಾದರಸ, ನೀಲಲೋಚನೆ, ಅಕ್ಕನಾಗಮ್ಮ, ಗಂಗಮ್ಮ (ಗಂಗಾಬಿಕೆ) ಸೂಳೆ ಚೋಳಲದೇವಿ, ರೇಚವ್ವೆ, ರೇಕವ್ವೆ, ಸೂಳೆ ಬೊಮ್ಮಲದೇವಿ, ಅಮ್ಮವ್ವೆ, ಆದವ್ವೆ, ರೆಮ್ಮವ್ವೆ, ವೀರಮ್ಮವ್ವೆ, ಸೂಳೇರನಂಬೆಕ್ಕ, ಉಡುತಡಿಯ ಮಹಾದೇವಿ, ಕಾಳವ್ವೆ, ಬಿಜ್ಜಮಹಾದೇವಿ, ವೈಜಕ್ಕವ್ವೆ, ಕೊಲ್ಲವ್ವೆ, ಜೋಕವ್ವೆ, ಅರಸವ್ವೆ ರಾಮಳವ್ವೆಯರೆ.

ಮೇಲೆ ಉಲ್ಲೇಖ ಶರಣ ಶರಣೆಯರಲ್ಲಿ ಬಸವಣ್ಣನ ಸಮಕಾಲೀನರಲ್ಲದೆ ಹಿರಿಯರು ಮತ್ತು ಕಿರಿಯ ವಯಸ್ಸಿನವರ ಉಲ್ಲೇಖವು ಬಂದಿದೆ.

ಬಸವಣ್ಣನ ಜೀವನ ಚರಿತ್ರೆಯನ್ನು ಚಿತ್ರರೂಪದಲ್ಲಿ ತೋರಿಸಲು ಕಲಾಕಾರ ಸಂಪೂರ್ಣವಾಗಿ ಕೃತಿಯನ್ನು ಅಭ್ಯಾಸ ಮಾಡಿ ಚಿತ್ರಗಳನ್ನೇ ಬರೆದಿರುವಂತಹದು ಆ ನಿಟ್ಟಿನಲ್ಲಿ ಅಲ್ಲಮಪ್ರಭು ಬಸವಣ್ಣನ ಮಹಾಮನೆಯಲ್ಲಿ ಅಖಂಡ ಪ್ರಸಾದವನ್ನು ಸಲ್ಲಿಸುವುದರಿಂದ ಹಿಡಿದು ಎಲ್ಲಾ ಪ್ರಮುಖ ಘಟನೆಗಳನ್ನು ಚಿತ್ರರೂಪದಲ್ಲಿ ನಾವು ನೋಡಬಹುದು. ಈ ಪುಸ್ತಕದ ಬಗ್ಗೆ ಕಲಾ ಇತಿಹಾಸವನ್ನು ತಿಳಿದ ಯುವ ವಿದ್ವಾಂಸರು ಹೆಚ್ಚಿನ ಅಧ್ಯಯನಪೂರ್ಣ ಲೇಖನಗಳನ್ನು ಬರೆಯಬೇಕು.

'ಶೂನ್ಯಸಿಂಹಾಸನ ನಿರ್ಮಾಣ' ಈ ಲಘು ಕೃತಿಯ ಹಸ್ತಪ್ರತಿ ಮೈಸೂರು ವಿಶ್ವವಿದ್ಯಾಲಯದ ಸರಸ್ವತಿ ಭಂಡಾರದಲ್ಲಿ ಉಳಿದುಬಂದಿದೆ (ಕೆ.ಬಿ.೪೧೦/೩). ಈ ಕೃತಿಯನ್ನು ತಮಗೆ ದೊರೆತ ಹಸ್ತಪ್ರತಿಯಿಂದ ಲಿಂ. ಚೆನ್ನಮಲ್ಲಿಕಾರ್ಜುನರು ತಮ್ಮ ಸದ್ಧರ್ಮದೀಪಿಕೆಯ ೧೫೬ನೇ ಸಂಚಿಕೆಯಲ್ಲಿ (೧-೧೭) ೧೫೮ನೇ ಸಂಚಿಕೆಯಲ್ಲಿ (೧೩-೨೬) ೧೯೫೯-೧೯೬೦ರಲ್ಲಿ ಮೈಸೂರಿನಿಂದ ಪ್ರಕಟಿಸಿದರು. ಇದೇ ಮುದ್ರಿತ ಸಂಚಿಕೆಯನ್ನು ಉಪಯೋಗಿಸಿಕೊಂಡು ಶರಣಯ್ಯಾ ಕಲ್ಯಾಣ ಎಂಬುವರು ಮರುಮುದ್ರಣ ಮಾಡಿ ಅಭಿಚಿಂತನ ಪ್ರಕಾಶನ ಇವರು, ಶ್ರೀನೀಲಕಂಠಸ್ವಾಮಿ ಮಠ, ಹರಿಶ್ಚಂದ್ರ ರಸ್ತೆ, ಮೈಸೂರು ಇಲ್ಲಿಂದ ಪ್ರಕಟಿಸಿದ್ದಾರೆ. (ಕೆ.ಬಿ.೪೨೦/೩) ಕಾಗದದ ಹಸ್ತಪ್ರತಿಯ ಆದಿಯಲ್ಲಿ,

ಶ್ರೀಸಾಯಿಸದಾಶಿವ ಪ್ರಸನ್ನ!
ಶೂಂನ್ಯಸಿಮ್ಹಾಸನ ನಿರ್ಮಾಣವೆಂಬ ಗ್ರಂಥ ಬರಿಯುವುದಕ್ಕೆ ಶುಭಮಸ್ತು
ಶ್ರೀಮತ್ಸಚ್ಚಿದಾನಂದ ಸ್ವರೂಪನಾದ ಶ್ರೀಗುರುಸಂಗಮನಾಥನ ಕರುಣಪ್ರಸಾದಮಂ
ಪಡೆದ ಶಿವಚೇತನಕಳಾತ್ಮಕ ಸ್ವರೂಪನಾದ ಶ್ರೀಮನ್ಮಹಾಸಿದ್ಧನಾದ ಬಸವೇಶ್ವರನು
ಭೂಕೈಲಾಸ ಕಲ್ಯಾಣನಗರದೊಳ್....

ಕೃತಿಯ ಅಂತ್ಯದಲ್ಲಿ,

ಇಂತೀ ವಚನೋಪರಚಿತಮಾದ ಶೂನ್ಯಸಿಂಹಾಸನ ನಿರ್ಮಾಣವೆಂಬ ಗ್ರಂಥವಂ
ಶ್ರದ್ಧೆಯಿಂ ಬರೆದೋದಿ ಕೇಳಿದವರ್ಗ ಕಪ್ಪಡಿಯ ಕೂಡಲಸಂಗನ ಬಸವನು
ತತ್ಶೂನ್ಯಗತಿಯಂ ಕೊಡುವನೆಂದು ಎಲ್ಲರೊಳಿರುವ ಅಲ್ಲಮಪ್ರಭು ನಿರೂಪಿಸಿದರಿಂ
ರೇಚಾರ್‍ಯಪ್ರಭುವರ್‍ಯ ಚರಣಭಕ್ತಿ ರಸ್ವಾದಕಂ ಸಹಜಾನಂದ ತತ್ವಭೋದಕ
ಸ್ವರೂಪನ್ನಾದ ಬಾಳಾರ್‍ಯದೇಶಿಕೇಂದ್ರರ ಹಸ್ತಮಸ್ತಕ ಪ್ರಶಸ್ತನಾದ ಕುಡುಮಪುರೀಶನ
ನಿಜಭಕ್ತ ಭಾಗವತ ನಂಜುಂಡ ನಾಮಧೇಯಕಂ.
ಕಲಿಸಂವತ್ಸರ ಸಾವಿರದ ವಂಭೈನೂರು ಯಂಭತ್ತನಾಲ್ಕನೆ ಸ್ವಭಾನು ಸಂವತ್ಸರದ
ಮಾಘ ಬಹುಳ ಪಾಡ್ಯ ಕುಜವಾರದೊಳ್ ಲೋಕೋಪಕಾರರ್ಥವಾಗಿ
ರಚನೆಯಂಗೈದನೆಂಬಲ್ಲಿಗೆ ಮಂಗಳಮಹಾ ಶ್ರೀಶ್ರೀಶ್ರೀಶ್ರೀಶ್ರೀ.

ಈ ಕೃತಿ ರಚನೆಕಾಲ ಕ್ರಿಶ. ಸುಮಾರು ೧೮೮೩. ಈ ಸಮಯಕ್ಕೆ ಮಹಾರಾಜ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಹಾಗೂ ಅಳಿಯ ಶ್ರೀಲಿಂಗರಾಜರು ಶಿವೈಕ್ಯರಾಗಿದ್ದರು. ಈ ಕೃತಿಯ ಅಂತ್ಯದಲ್ಲಿ 'ಬಾಳಾರ್‍ಯ ದೇಶಿಕೇಂದ್ರರ ಹಸ್ತಮಸ್ತಕ ಪ್ರಶಸ್ತನಾದ' ಎಂಬ ಸಾಲು ಕವಿ ನಂಜುಂಡ ಭಾಗವತ ತನ್ನ ಜೀವನದ ಮಧ್ಯಭಾಗದ ನಂತರ 'ಇಷ್ಟಲಿಂಗ ದೀಕ್ಷೆ' ಸ್ವೀಕರಿಸಿದನೇ? ಏಕೆಂದರೆ ಇಷ್ಟಲಿಂಗ ದೀಕ್ಷೆ ಸಂದರ್ಭಗಳಲ್ಲಿ ಹಸ್ತಮಸ್ತಕ ಸಂಯೋಗ ಬರುವಂತಹುದು.

ಸುತ್ತೂರು ಶ್ರೀಮಠದಿಂದ ಪ್ರಕಟವಾಗಿರುವ 'ವೃಷಭೇಂದ್ರ ವಿಲಾಸ' ಪುಸ್ತಕದ ಮುದ್ರಣ ಪ್ರತಿಯಲ್ಲಿ ಕೃತಿಕಾಲದ ಬಗ್ಗೆ ಮಾಹಿತಿ ಇದೆ.

ಕಲ್ಯಬ್ದಂ ನಾಲ್ಸಾಸಿರ
ದಲ್ಲೊಂಭೈನೂರು ಎಪ್ಪತೆಂಟಕೆ ಧಾತು
ವಲ್ಯಾ ಜೇಷ್ಠ ಬಹುಳ ದಶ
ವಲ್ಯಾ ಸ್ಥಿರವಾದಲ್ಲೆ ಕಲ್ಪಿತಮಾಯ್ತು (೪-೮೫)

ಧಾತು ಸಂವತ್ಸರ ಜೇಷ್ಟಮಾಸ ಬಹುಳ ದಶಮಿ ಸ್ಥಿರವಾರ ಅಂದರೆ ಭಾನುವಾರ ಕೃತಿ ರಚನೆಯಾಗಿದೆ.

ಸಂವತ್ಸರದ ಹೆಸರು ಧಾತ್ರ ಎಂದು ಇರಬೇಕು. ಈ ಕೃತಿ ರಚನೆಕಾಲ ೧೮೭೬ ಆಗುತ್ತದೆ. ಚಿತ್ರಸಹಿತ ಲಿಖಿತವಾದ 'ವೃಷಭೇಂದ್ರ ವಿಲಾಸದ' ಹಸ್ತಪ್ರತಿ ಸಿದ್ಧವಾದ ಕಾಲ ಇದಾಗಿರಬಹುದು. 'ವೃಷಭೇಂದ್ರ ವಿಲಾಸ' ಮೂಲಗ್ರಂಥ ಸುಮಾರು ೧೮೬೦ರಲ್ಲಿ ರಚನೆಯಾಗಿದೆ.

ವೃಷಭೇಂದ್ರ ವಿಳಾಸವು ಮೇ
ಲ್ಶಶಿಧರನ ಪುರಕ್ಕು ಮಿಗಿಲೆನಿಪ ಕಲ್ಯಾಣದ ।
ಬಸವೇಶಾದಿ ಪ್ರಮಥರ
ಜಸವಾಂತೀ ಭಾವಚಿತ್ರಮೆಸೆದುದುಳುವೆಯೊಳ್ (೪-೮೬)

'ವೃಷಭೇಂದ್ರ ವಿಳಾಸದ' ಕಥೆ ಶಶಿಧರನ ಪುರ ಅರ್ಥಾತ್

ಕೈಲಾಸಕ್ಕಿಂತ ಮಿಗಿಲೆನಿಸುವ ಕಲ್ಯಾಣದ ಬಸವೇಶಾದಿ ಪ್ರಮಥರ ಕಥೆ 'ಜಸೂಂತೀ ಭಾವಚಿತ್ರ ಮೆಸೆದುದುಳುವೆಯೊಳ್' ಈ ಎಲ್ಲಾ ಪ್ರಮಥರ ಭಾವಚಿತ್ರ ಅರ್ಥಾತ್ ಚಿತ್ರ ಸಮೇತ ಈ ಇಳೆಯೊಳ್ ಭೂಮಿಯಲ್ಲಿ ಇರುವಂತಹ ಗ್ರಂಥ ಎಂದು ಅರ್ಥೈಸಬೇಕಾಗುತ್ತದೆ. ಚಿತ್ರಸಮೇತ 'ವೃಷಿಭೇಂದ್ರ ವಿಳಾಸ' ಗ್ರಂಥ ರಚನೆಯಾದಾಗ ಕವಿ ಜೀವಂತವಿದ್ದು ಈ ಕುಲವನ್ನೇ ಲಿಪಿಗಾರನಿಗೆ ಬರೆದುಕೊಟ್ಟು ಹೆಚ್ಚಿನ ಪದ್ಯವಾಗಿ ಕೃತಿಯಲ್ಲಿ ಸೇರಿರಬಹುದು.

## ನಂಜುಂಡ ಭಾಗವತನ ಚಿತ್ರ

ಮೈಸೂರು ನಗರದ ಮಂಡಿಪೇಟೆಯ ವೀರಭದ್ರಸ್ವಾಮಿ ದೇವಾಲಯದಲ್ಲಿ ಅಲ್ಲಮ್ಮಪ್ರಭು ಶೂನ್ಯಸಿಂಹಾಸನದ ಮೇಲೆ ವಿರಾಜಮಾನವಾಗಿರುವ ಅಕ್ಕಪಕ್ಕ ಮೂರು ಸಾಲಿನಲ್ಲಿ ಶರಣ–ಶರಣೆಯರ ಸುಂದರವಾದ ಚಿತ್ರ ಅವರ ಕಾಯಕದ ಉಲ್ಲೇಖ ಸಮೇತ ಚಿತ್ರವಾಗಿದೆ. ಕೆಳಗಿನ ಸಾಲು ಐತಿಹಾಸಿಕ ವ್ಯಕ್ತಿಗಳದು. ಈ ಸುಂದರ ಚಿತ್ರವನ್ನು ಗಮನಿಸಿ ಅಂದು ಮೈಸೂರು ನಗರದಲ್ಲಿ ನೆಲೆಸಿದ್ದ ಆರ್ಟ್ ಹಿಸ್ಟಾರಿಯನ್ ಡಾ. ಆರ್.ಹೆಚ್. ಕುಲಕರ್ಣಿ ಅವರನ್ನು ವಿನಂತಿಸಿಕೊಂಡ ಮೇರೆಗೆ ಐತಿಹಾಸಿಕ ಮಹತ್ತ್ವವುಳ್ಳ ಈ ಚಿತ್ರದ ಫೋಟೋವನ್ನು ತೆಗೆದು ಕಳುಹಿಸಿಕೊಟ್ಟರು. ಈ ಚಿತ್ರಗಳನ್ನು ತುಮಕೂರು ಅಕ್ಕ ಮಹಾದೇವಿ ಸಮಾಜದ ವತಿಯಿಂದ ೨೦೦೩ರಲ್ಲಿ ಪ್ರಕಟವಾದ **ಚಿತ್ಕಳೆ**[೬] ಗ್ರಂಥದ ಮುಖಪುಟಕ್ಕೆ ಬಳಸಿಕೊಳ್ಳಲಾಗಿದೆ. ಈ ಚಿತ್ರದ ಕೆಳಗಿನ ಸಾಲು ಕ್ರಮವಾಗಿ ಅರ್ಥಾತ್ ನಾಲ್ಕನೇ ಹಂತದಲ್ಲಿ ಎಡದಿಂದ ಬಲಕ್ಕೆ ೧ ಪುಟ್ಟ ನಂಜಮ್ಮನವರು ೨. ಬಸವರಾಜಮ್ಮಣ್ಣಿಯರು ೩. ಕೆಂಪನಂಜಮ್ಮಣ್ಣಿಯವರು ೪. ಲಿಂಗರಾಜೆ ಅರಸಿನವರು ೬. ಶ್ರೀ ಕಂಠರಾಜ ಒಡೆಯರವರು ೯ ನಂಜುಂಡ ಒಡೆಯವರು ೭. ಶ್ರೀ ಅಳಿದ ಮಹಾಸ್ವಾಮಿ ಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್‌ರವರು ೮. ಸು.ಶ್ರೀ. ಕೋ ಚೆನ್ನಬಸವರಾಜ ಒಡೆಯರ್‌ರವರು ೯. ನಂದಿಧ್ವಜ (ವ್ಯಾಸನ ತೋಳು ಸಮೇತ) ೧೦. ಶ್ರೀ ಕಲ್ಯಾಣದ ಬಸವೇಶ್ವರ ಅರಮನೆ ಬಾಗಿಲು ಶುಭಮಸ್ತು ೧೧. ಲಿಂಗಮುದ್ರೆ (ಬಸವ–ಲಿಂಗು) ೧೩. ನಂಜುಂಡಯ್ಯ ೧೪. ಮಧುರವರಸರು ೧೫. ಮಹಾದೇವಿ ೧೬. ಕಲಹಕೇತ ಬೊಮ್ಮಯ್ಯನವರು ೧೭. ನುಲಿಯ ಚಂದಯ್ಯನವರು ೧೮. ಕಕ್ಕಯ್ಯ ೧೯. ಚಿಕ್ಕಯ್ಯ ೨೦. ಗೊಗ್ಗಯ್ಯನವರು.

ಶರಣರ ಸಂಖ್ಯೆ ಅಪರಿಮಿತವಾಗಿರುವುದರಿಂದ ನಾಲ್ಕನೇ ಸಾಲಿನಲ್ಲಿ ಐತಿಹಾಸಿಕ ವ್ಯಕ್ತಿಗಳ ಜೊತೆ ಶರಣರನ್ನು ಚಿತ್ರಗಾರ ಸೇರಿಸಿದ್ದಾನೆ. ಉಳುಮೆ ಮಹಾಮನೆ ಬಾಳಪ್ಪ ಸ್ವಾಮಿಗಳ ಪಕ್ಕ ಕೈಯಲ್ಲಿ ಪುಸ್ತಕ ಹಿಡಿದು ನಿಂತಿರುವ ವ್ಯಕ್ತಿ 'ವೃಷಭೇಂದ್ರ ವಿಳಾಸದ' ಕರ್ತೃ ನಂಜುಂಡ ಭಾಗವತ = ನಂಜುಂಡಯ್ಯ, ಈತ ಬ್ರಾಹ್ಮಣ ಸಂಪ್ರದಾಯದಲ್ಲೇ ಮುಂದುವರಿದು ಶರಣ ಸಾಹಿತ್ಯ ಅಧ್ಯಯನ ಅಧ್ಯಾಪನ ಮಾಡಿದ್ದಾರೆ. ನಂಜುಂಡಯ್ಯನ ಎದೆಮೇಲೆ ಇಷ್ಟಲಿಂಗ ಕಾಣುತ್ತಾ ಇಲ್ಲ. ನಮ್ಮಗಳ ಭಾಗ್ಯ 'ವೃಷಭೇಂದ್ರ ವಿಳಾಸ'ದ ಕರ್ತೃ ನಂಜುಂಡ ಭಾಗವತನ ಚಿತ್ರ ಲಭ್ಯವಾಗಿರುವುದು. 'ವೃಷಭೇಂದ್ರ ವಿಳಾಸ' ಚಿತ್ರಸಹಿತ ಯಕ್ಷಗಾನ ಕೃತಿ ರಚನೆಯಾದಾಗ ಒಂದು ದೊಡ್ಡ ಸಾಹಿತ್ಯಕ ಕ್ರಾಂತಿಯನ್ನು ಮೈಸೂರು ಪರಿಸರದಲ್ಲಿ ಉಂಟು ಮಾಡಿತು. ಮೈಸೂರು ಪ್ರದೇಶದಲ್ಲಿ ಅನುಭವ ಮಂಟಪದ ತೈಲಚಿತ್ರಗಳು ಹಲವಾರು ಲಭ್ಯವಾಗಿದೆ. ಈ ತೈಲಚಿತ್ರ ರಚನೆಗೆ 'ವೃಷಭೇಂದ್ರ ವಿಳಾಸ'ದ ಪ್ರಭಾವವಿದೆ.

ಬೆಂಗಳೂರು ಕೆಂಪೇಗೌಡ ರಸ್ತೆಯ ಅಡ್ಡರಸ್ತೆಯಲ್ಲಿರುವ ಶ್ರೀ ಶಿವಪ್ರಸಾದ ಅವರ ಮನೆಯಲ್ಲಿ ಇರುವ ಅಲ್ಲಮ್ಮಪ್ರಭು ಶೂನ್ಯ ಸಿಂಹಾಸನದ ಮೇಲೆ ಮಂಡಿಸಿರುವ ಸುತ್ತಮುತ್ತ ನೂರಾರು ಶರಣರು ನೆರೆದಿರುವ ಚಿತ್ರದಲ್ಲಿ ಧರ್ಮಗ್ರಂಥವನ್ನು ಅಧ್ಯಯನ ಮಾಡುವ ವ್ಯಾಸಪೀಠರ ಮೇಲೆ ಇಟ್ಟಿರುವ ಕೃತಿಯ ಮೇಲೆ 'ವೃಷಭೇಂದ್ರ ವಿಲಾಸ' ಹೆಸರು ಬರೆದಿದೆ. ಈ ಎಲ್ಲಾ ಅನುಭವ ಮಂಟಪದ ತೈಲಚಿತ್ರವನ್ನೇ ಅಧ್ಯಯನ ಮಾಡಿ **ಚಿತ್ಕಳೆ**[೬] (ತುಮಕೂರು ಅಕ್ಕಮಹಾದೇವಿ ಸಮಾಜದ ನೆನಪಿನ ಸಂಚಿಕೆ)ಯಲ್ಲಿ ಚಿತ್ರಕಲಾ ಪರಂಪರೆ ಇತಿಹಾಸ ತಜ್ಞರಾದ ಡಾ. ಅ.ಲಿ. ನರಸಿಂಹವ್‌ರವರು 'ಬಸವಾದಿ ಶರಣರ ಕಲಾಕೃತಿ – ಒಂದು ಟಿಪ್ಪಣಿ' ಲೇಖನ ಬರೆದಿದ್ದಾರೆ.

ನಂಜುಂಡ ಭಾಗವತನಿಗೆ ವೀರಶೈವ ಧರ್ಮವನ್ನೇ ಪರಿಚಯಿಸಿದ 'ಮಹಾಮನೆ ಸೂತ್ರಾನುವರ್ತಿಗಳಾದ ಬಾಳಪ್ಪ ಸ್ವಾಮಿಗಳ' ಉಲ್ಲೇಖ ಇರುವ ಎರಡು ಮೂರು ಪುಷ್ಪಿಕೆಗಳನ್ನೇ ನಾನು ಈ ಹಿಂದೆ ಗಮನಿಸಿದ್ದೆ. ಲೇಖನ ಬರೆಯುವ ಸಮಯದಲ್ಲಿ ಅವುಗಳು ಲಭ್ಯವಾಗಲಿಲ್ಲ. ನಂಜುಂಡ ಭಗವತನ 'ಶೂನ್ಯಸಿಂಹಾಸನ ನಿರ್ಮಾಣ' ಕೃತಿಯ ಅಂತ್ಯದಲ್ಲಿ 'ಸಹಜಾನಂದ ತತ್ವಬೋಧ ಸ್ವರೂಪನಾದ ಬಾಳಾಕ್ಷದೇಶೀಕೇಂದ್ರರು' ಎಂದಿದೆ. ಲಿಂ॥ ಡಾ. ಬಿ.ಆರ್. ಹಿರೇಮಠರವರು ತಮ್ಮ 'ಕನ್ನಡ ಹಸ್ತಪ್ರತಿ ಲಿಪಿಗಾರರು, ಪ್ರಶಸ್ತಿಗಳು'[೭] ಪುಸ್ತಕದಲ್ಲಿ ಈ ಪುಷ್ಪಿಕೆಯನ್ನು ದಾಖಲಿಸಿದ್ದಾರೆ. "ವಿಕ್ರಮ ಸಂವತ್ಸರದ ಶ್ರಾವಣ ಶುದ್ಧ ಸಪ್ತಮಿ ಸ್ಥಿರವಾರದಲ್ಲಿ ಭೂಕೈಲಾಸ ಉಳುವೆ ಮಹಾಮನೆ ಸೂತ್ರಾನುವರ್ತಿಗಳಾದ ಭಾಳಪ್ಪಸ್ವಾಮಿಗಳ ಕರಸಂಜಾತಳಾದ ಪುಟ್ಟನಂಜಮ್ಮಾ..." ಲಿಂ॥ ಡಾ. ಬಿ.ಆರ್. ಹಿರೇಮಠರವರು ಪುಷ್ಪಿಕೆಯನ್ನು ಸಂಪೂರ್ಣವಾಗಿ ಕೊಟ್ಟಿಲ್ಲ. ಈ ಪುಷ್ಪಿಕೆಯಲ್ಲಿ ಉಲ್ಲೇಖಗೊಂಡಿರುವ ಪುಟ್ಟನಂಜಮ್ಮನ ಚಿತ್ರವು ಮೈಸೂರಿನ ವೀರಭದ್ರಸ್ವಾಮಿ ದೇವಸ್ಥಾನದಲ್ಲಿರುವ ಅನುಭವ ಮಂಟಪದ ಚಿತ್ರದಲ್ಲಿ ಇದೆ. ಈಕೆ ಮೈಸೂರು ಭಾಗದ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದ ಶಿವಶರಣೆ ಇರಬೇಕು, ಇಲ್ಲದೆ ಹೋದರೆ ಅರಮನೆಗೆ ಸಂಬಂಧಪಟ್ಟವರಾಗಿರಬೇಕು, ಈ ಬಗ್ಗೆ ಹೆಚ್ಚಿನ ಸಂಶೋಧನೆ ಮಾಡಬೇಕಾಗಿದೆ.

ಬಸವಣ್ಣನವರ ಮಹಾಮನೆ ಪರಂಪರೆ ಕಾಲಕ್ರಮದಲ್ಲಿ ಒಂದು ಮಠವಾಗಿ ಉಳುವಿಯಲ್ಲಿ ಉಳಿದು ಬಂದಿತ್ತು. ಆ ಪರಂಪರೆ ಸ್ವಾಮಿಗಳು ಮುಮ್ಮಡಿಯವರ ಕಾಲದಲ್ಲಿ ಮೈಸೂರು ನಗರಕ್ಕೆ ಸ್ಥಳಾಂತರಗೊಂಡಿತ್ತಾ ಇಲ್ಲವೆ ಸಹಾಯಹಸ್ತ ಪಡೆಯಲು ಮೇಲಿಂದ ಮೇಲೆ ಮೈಸೂರು ನಗರಕ್ಕೆ ಬಂದು ಹೋಗುತ್ತಾ ಇದ್ದರಾ ಎಂಬ ವಿಷಯ ಸ್ಪಷ್ಟವಾಗುತ್ತಾ ಇಲ್ಲ. ಈಗ ಉಳುವಿಯಲ್ಲಿ 'ಮಹಾಮನೆ' ಹೆಸರಿನ ಮಠವನ್ನು ಸಂಶೋಧನೆ ಮಾಡಬೇಕಾಗಿದೆ. ಮೈಸೂರು ನಗರದಲ್ಲಿ ಇದ್ದ ಲಿಂ॥ ಸ್ವಾಮಿ ಮಹಾಮನೆಯವರಿಗೂ ಈ ಮಹಾಮನೆ ಸೂತ್ರಾನುವರ್ತಿಗಳಾದ ಬಾಳಪ್ಪಸ್ವಾಮಿಗಳಿಗೂ ಏನಾದರು ಸಂಬಂಧ ಇತ್ತಾ– ಈ ಎಲ್ಲಾ ವಿಷಯವನ್ನು ಮೈಸೂರು ಪರಿಸರದ ಯುವ ವಿದ್ವಾಂಸರು ಸಂಶೋಧನೆ ಮಾಡಬೇಕು. ಮೈಸೂರು ನಗರದಲ್ಲಿ ಹಳೆಯ ಬ್ರಾಹ್ಮಣ ಮನೆತನದವರ ಪೈಕಿ 'ಭಾಗವತ' ಎಂದು ಮನೆತನದ ಹೆಸರು ಇಟ್ಟುಕೊಂಡಿರುವ ಮನೆತನದವರನ್ನು ಗುರುತಿಸಿದರೆ ನಂಜುಂಡ ಭಾಗವತನ ಬಗ್ಗೆ ಇನ್ನು ಹೆಚ್ಚಿನ ಮಾಹಿತಿ ಲಭ್ಯವಾಗಬಹುದು. ನಂಜುಂಡ ಭಾಗವತನ ಮಗ ಎಲ್. ಸುಬ್ಬಯ್ಯ ಭಾಗವತ ೧೯೧೩ರಲ್ಲಿ ಸಂಪಾದಿಸಿ ಪ್ರಕಟಿಸಿರುವ 'ಹರಿಶ್ಚಂದ್ರ ಕಥೆ' ಪುಸ್ತಕವನ್ನು ಶೋಧನೆ ಮಾಡಬೇಕು. ಆ ಪುಸ್ತಕ ದೊರೆತರೆ ಇನ್ನೂ ಹೆಚ್ಚಿನ ಮಾಹಿತಿ ಲಭ್ಯವಾಗುತ್ತದೆ.

'ವೃಷಭೇಂದ್ರ ವಿಲಾಸ' ಕೃತಿ ರಚನೆಯಾದ ಮೇಲೆ ಅದನ್ನು ಆಳವಾಗಿ ಅಧ್ಯಯನ ಮಾಡಿ ಚಿತ್ರಗಾರನಿಗೆ ವಿವರಿಸಿ ಅರ್ಥವತ್ತಾಗಿ ಮೈಸೂರು ಶೈಲಿಯ ಚಿತ್ರಗಳೊಡನೆ ಹಸ್ತಪ್ರತಿ ತಯಾರಾಗಿದೆ. ಮೈಸೂರು ಪರಿಸರದಲ್ಲಿ ಸಂಶೋಧನೆ ಮಾಡಿದರೆ ಇನ್ನು ಹಲವು ಪ್ರತಿಗಳು ದೊರೆಯಬಹುದು. ಮೈಸೂರು ಅರಮನೆ ಸರಸ್ವತಿ ಭಂಡಾರದಲ್ಲಿ ನಂಜುಂಡ ಭಾಗವತನ ಕೃತಿಗಳು ಇರಬಹುದು. ನಮ್ಮೆಲ್ಲರ ಭಾಗ್ಯ 'ವೃಷಭೇಂದ್ರ ವಿಲಾಸ'ದ ಹಸ್ತಪ್ರತಿ ಕಾಗದದ್ದು ಧರ್ಮಸ್ಥಳದ ಹಸ್ತಪ್ರತಿ ಭಂಡಾರದಲ್ಲಿ ಲಭ್ಯವಿದೆ. ಈ ಹಸ್ತಪ್ರತಿಯಲ್ಲಿ ಚಿತ್ರಗಳು ಇಲ್ಲ.

ಮುಮ್ಮಡಿ ಕೃಷ್ಣರಾಜ ಒಡೆಯರವರ ಆಶ್ರಿತ ಮತ್ತು ಆಸ್ಥಾನದ ಕವಿ 'ದೇವಲಾಪುರದ ನಂಜುಂಡ ಕವಿ'. ಈತ ಜನ್ಮತಃ ವೀರಶೈವ. ಈತನ ಸಮಗ್ರ ಸಾಹಿತ್ಯವನ್ನು ಹಿರಿಯ ವಿದ್ವಾಂಸರಾದ ಪ್ರೊ. ಎನ್. ಬಸವಾರಾಧ್ಯರು ಸಂಪಾದಿಸಿ ಮೈಸೂರಿನ ಗೀತಾ ಬುಕ್‌ಹೌಸ್‌ರವರಿಂದ ಪ್ರಕಟಗೊಂಡಿದೆ. ಹಿರಿಯ ವಿದ್ವಾಂಸರಾದ ದಿ. ಸಾ.ಕೃ. ರಾಮಚಂದ್ರರಾವ್‌ರವರು ಸುತ್ತೂರು ಮಠದಿಂದ ಪ್ರಕಟವಾಗಿರುವ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಸಂಪಾದಿಸಿರುವ ಕೃತಿಯ ಮುನ್ನುಡಿಯಲ್ಲಿ ನಾಮಸಾದೃಶ್ಯದಿಂದ ಈತನ ಕೃತಿಗಳಾದ 'ಕೃಷ್ಣರಾಜ ಭೋಗಾವಳಿ' 'ಕೃಷ್ಣರಾಜ ಶತಕ'ಗಳನ್ನು ಬರೆದವನು ನಂಜುಂಡ ಭಾಗವತನೇ ಇರಬಹುದು, ತಿಳಿಯದು ಎಂದಿದ್ದಾರೆ. ಏಕಕಾಲದಲ್ಲಿ ಇಬ್ಬರು ಒಂದೇ ಹೆಸರಿನ ಕವಿಗಳು ಇದ್ದರೆ ಇಂತಹ ತೊಂದರೆ ಇದ್ದದ್ದೇ. ದೇವಲಾಪುರದ ನಂಜುಂಡ ಕವಿಗಳ ಸಂಪುಟದಲ್ಲಿ ಸಮಗ್ರ ಸಾಹಿತ್ಯ ಅಚ್ಚಾದಂತೆ ನಂಜುಂಡ ಭಾಗವತನ ಸಾಹಿತ್ಯವು ಸಂಪುಟಗಳಲ್ಲಿ ಮುದ್ರಣವಾಗಿ ಅಧ್ಯಯನಕ್ಕೆ ಒಳಪಡಬೇಕು.

ಆಂಗ್ಲ ಇತಿಹಾಸ ತಜ್ಞರು, ದೇಶಿಯ ಇತಿಹಾಸತಜ್ಞರು ವಿಶ್ವವಿದ್ಯಾಲಯಗಳಲ್ಲಿ ವಿದ್ಯಾಭ್ಯಾಸ ಮಾಡಿದ ನೂರಾರು ಬುದ್ಧಿವಂತರು ನೆಲೆಸಿರುವ ಮೈಸೂರು ನಗರದಲ್ಲಿ ಸಂಸ್ಕೃತಿ ಇತಿಹಾಸಕ್ಕೆ ಬಹುದೊಡ್ಡ ಕಾಣಿಕೆಯನ್ನು ನೀಡಿದ ಹತ್ತಾರು ಜನ ವಿದ್ವಾಂಸರ ಬಗ್ಗೆ ನಿಖರವಾದ ಅಧ್ಯಯನ ನಡೆದು ಆ ಎಲ್ಲಾ ಮಾಹಿತಿಯನ್ನು ಯುವ ವಿದ್ವಾಂಸರು ಎಚ್ಚರಿಕೆಯಿಂದ ಸಂಗ್ರಹಿಸಬೇಕು. ಇಲ್ಲದೆ ಹೋದರೆ ಆಕರಗಳು ಇದ್ದ ಜಾಗದಲ್ಲೇ ಕರಗಿಹೋಗುತ್ತವೆ.

ಕನ್ನಡನಾಡಿನ ಪರಂಪರೆ, ಸೊಬಗು, ಸಂಪ್ರದಾಯ, ನಡೆನುಡಿ, ಅರಿಯಲು ಬಹುದೊಡ್ಡ ಆಕರಗ್ರಂಥವಾಗಿ 'ವೃಷಭೇಂದ್ರ ವಿಲಾಸ' ಸಹಾಯ ಮಾಡುತ್ತದೆ. ವೀರಶೈವ ಧರ್ಮದ ಆಚಾರ ವಿಧಿಗಳನ್ನು ಅಭ್ಯಾಸ ಮಾಡುವವರಿಗೆ ಇದೊಂದು 'ತವನಿಧಿ'. ಇಲ್ಲಿ ಚಿತ್ರಿತವಾಗಿರುವ ಕೆಲವು ಪರಿಕರಗಳನ್ನು ಈಗ ಮನೆಮನೆ ಜಾಲಾಡಿದರೂ ನೋಡಲು ಲಭ್ಯವಿಲ್ಲ. ಈ ಚಿತ್ರಕಥೆ ಸಹಾಯದಿಂದ ಹಲವು ಗೊಂದಲಗಳು ಸಹಾ ಪರಿಹಾರವಾಗುತ್ತದೆ. ಸಿದ್ಧಗಂಗಾಮಠದಲ್ಲಿ ಸ್ವಾಮಿಗಳು ವಾಸಮಾಡುವ ಹಳೆಯ ಮಠದ ವಾಸ್ತು ವಿಜಯನಗರದ ಶೈಲಿಯದು, ನವರಂಗದಲ್ಲಿ ಎಂಟು ಕಂಬಗಳು ಇದ್ದು ಒಂದು ಕಂಬದ ಮೇಲೆ ನಂದಿ ಬಾಯಿಂದ ನಾಲಿಗೆ ಮೇಲೆ ಇದ್ದ ಇಷ್ಟಲಿಂಗವನ್ನು ಸಣ್ಣ ಚೂರಿಯ ಸಹಾಯದಿಂದ ತೆಗೆಯುತ್ತಿರುವ ಉಬ್ಬುಶಿಲ್ಪವಿದೆ. ಈ ಉಬ್ಬುಶಿಲ್ಪದ ಕಥೆ ಯಾವ ಮೂಲದಿಂದಲೂ ಸ್ಪಷ್ಟವಾಗಿರಲಿಲ್ಲ. 'ವೃಷಭೇಂದ್ರ ವಿಲಾಸ' ಗ್ರಂಥ ಪುಟ ೧೮–೨೦ರಲ್ಲಿ ಈ ಕಥೆ ಚಿತ್ರಿತವಾಗಿದೆ. ಈ ಚಿತ್ರವನ್ನು ನೋಡಿದಾಗ ಸಿದ್ಧಗಂಗಾಮಠ ಕಂಬದ ಮೇಲಿನ ಉಬ್ಬುಶಿಲ್ಪದ ಕಥೆ ಸ್ಪಷ್ಟವಾಯಿತು. ಪ್ರಕಟಿತ ಚಿತ್ರಸಹಿತ 'ವೃಷಭೇಂದ್ರ ವಿಲಾಸ' ಕೃತಿಯನ್ನು ಯುವವಿದ್ವಾಂಸರು ಅಧ್ಯಯನ ಮಾಡಿ ಸಂಶೋಧನಾ ಲೇಖನಗಳನ್ನು ಬರೆಯಬೇಕು. ಯುವ ಚಿತ್ರಗಾರರು– ಚಿತ್ರಕಲಾ ಶಾಲೆಯವರು ಇಂತಹ ಮಹತ್ವದ ಗ್ರಂಥದ ಮೇಲೆ ವಿಚಾರ ಸಂಕಿರಣವನ್ನು ಮಾಡಬೇಕು.

ಸುತ್ತೂರು ಜಗದ್ಗುರು ಶ್ರೀಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳ ಹಸ್ತಪ್ರತಿಯಲ್ಲಿ ಇರುವ ಬೇರೆ ಕಾವ್ಯಗಳನ್ನು ಮತ್ತು ಚಿತ್ರಗಳನ್ನು ಇನ್ನೊಂದು ಸಂಪುಟದಲ್ಲಿ ಪ್ರಕಟಿಸಬೇಕು. ಇಂತಹ ಮಹತ್ವದ ಗ್ರಂಥವು ಇಡೀ ಪ್ರಪಂಚದ ಜನತೆಗೆ ಗೊತ್ತಾಗುವಂತೆ ಮಾಡುವ ಕರ್ತವ್ಯ ನಮ್ಮದು.

**ಅಡಿ ಟಿಪ್ಪಣಿ**

೧. **ಕರ್ಣಾಟಕ ಕವಿಚರಿತೆ** ತೃತೀಯ ಸಂಪುಟ, ಆರ್. ನರಸಿಂಹಾಚಾರ್ಯ ಕನ್ನಡ ಸಾಹಿತ್ಯ ಪರಿಷತ್ತು, ೧೯೭೪ ಪುಟ (೨೦೮-೨೦೯)

೨. **ಕನ್ನಡ ಹಸ್ತಪ್ರತಿಗಳ ವರ್ಣಾನಾತ್ಮಕ ಸೂಚಿ** -ಚತುರ್ಥ ಸಂಪುಟ, ಪ್ರಧಾನ ಸಂಪಾದಕರು ಹೆಚ್. ದೇವೀರಪ್ಪ, ಸಂಪಾದಕರು ಬಿ.ಎಸ್. ಸಣ್ಣಯ್ಯ - ೧೯೭೩

ಕೆ. ೩೩೭/೨ (೪೮೩-೯೩೧) ಪತ್ರ ಪುಟ ೨೭೩

೩. **ಕರ್ಣಾಟಕ ಕವಿಚರಿತೆಯ** ಅನುಕ್ತ ಕೃತಿಸೂಚಿ, ಸಂಗ್ರಾಹಕರು ಎನ್.ಶಿವಣ್ಣ, ಎಂ.ಎ. ೧೯೬೭, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ಪುಟ ೧೦ ಮತ್ತು ೬೧

೪. **'ವೃಷಭೇಂದ್ರ ವಿಳಾಸ'** ನಂಜುಂಡ ಭಾಗವತ ವಿರಚಿತ, ಸಂ.: ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರು ೨೦೦೮

೫. **ಕರ್ಣಾಟಕ ಸಂಸ್ಕೃತಿ ಸಮೀಕ್ಷೆ** ಲೇಖಕ ಡಾ.ಎಚ್. ತಿಪ್ಪೇರುದ್ರಸ್ವಾಮಿ ೧೯೯೮ ಪ್ರಕಾಶಕರು ಡಿ.ವಿ.ಕೆ. ಮೂರ್ತಿ, ಮೈಸೂರು, ಅವಲೋಕನೆಗೆ ಲಭ್ಯವಾದ ಪ್ರತಿ ೨೦೦೩ರ ಮುದ್ರಣ ಪ್ರತಿ ಪುಟ (೭೬೨-೭೬೫)

೬. **ಚಿತ್ಕಳೆ:** ಸಂ. ಡಾ. ಬಿ. ನಂಜುಂಡ ಸ್ವಾಮಿ ೨೦೦೩ ಪ್ರಕಾಶಕರು ಶ್ರೀ ಅಕ್ಕಮಹಾದೇವಿ ಸಮಾಜ ಜೆ.ನೇ ರಸ್ತೆ, ತುಮಕೂರು - ೨೦೦೩

೭. **ಕನ್ನಡ ಹಸ್ತಪ್ರತಿ ಲಿಪಿಗಾರರು, ಪ್ರಶಸ್ತಿಗಳು** ಡಾ. ಬಿ.ಆರ್. ಹಿರೇಮಠ, ೧೯೯೩, ಅರುಣೋದಯ ಪ್ರಕಾಶನ, ಧಾರವಾಡ ಪುಟ ೯

❑❑

# ಜನಪದ ಕಾವ್ಯಗಳಲ್ಲಿ ದಲಿತ ಶರಣರು

– ಜಿ.ಆರ್. ತಿಪ್ಪೇಸ್ವಾಮಿ

ಭಾರತ ಹಳ್ಳಿಗಳ ನಾಡು. ಕೃಷಿಯೇ ಹಳ್ಳಿಗಳ ಬದುಕು. ಈ ಬದುಕಿನಲ್ಲೂ ಹಲವಾರು ಬದಲಾವಣೆಗಳು ಕಾಣಿಸಿವೆ. ಆಧುನೀಕರಣಕ್ಕೊಳಗಾಗದ ಕೃಷಿಕರ ಬದುಕಿನಲ್ಲಿ ಜಾತಿ, ಧರ್ಮಗಳ ತಿಳಿವಳಿಕೆ ಇದ್ದರೂ ಕುಲವೆಂಬ ಭಾವನೆಗೆ ಬದಲಾಗಿ ಅದರಲ್ಲೂ ಭಕ್ತಿ ಇತ್ತು. ಅವರದೇ ಆದ ರೀತಿ ನೀತಿಗಳಿದ್ದವು. ಶಿವಶರಣರು ತಾವು ನಡೆದು ಬಂದ ದಾರಿಯ ಬಗೆಗೆ ಒಲವು ಇದ್ದು ಕಾಯಕನಿಷ್ಠೆಯ ಬಗೆಗೆ ಗೌರವವಿರುವುದನ್ನು ಕಾಣುತ್ತೇವೆ. ಹಾಗಾಗಿ ದೇಶದ ಬೆನ್ನುಮೂಳೆ ಯಾವಾಗಲು ನೇಗಿಲಯೋಗಿಯೇ ಆಗಿದ್ದಾನೆ. ಆತನ ಮೂಲಕವೇ ಹಳ್ಳಿಯ ಸಂಸ್ಕೃತಿ ರೂಪುಗೊಂಡಿತು. "ನಮ್ಮ ಹಳ್ಳಿಗರ ಸಂಸ್ಕೃತಿಯು ಒಡಮೂಡಿದ್ದು ಪಂಡಿತರ ಕಾವ್ಯಗಳಲ್ಲಲ್ಲ, ಶಿಲಾಶಾಸನ, ಶಿಲ್ಪಕಲೆಯಲ್ಲಲ್ಲ; ಪಾಮರರೆಂದು ಕರೆಯಲ್ಪಡುವ ಹಳ್ಳಿಗರ ಹಾಡುಗಳಲ್ಲಿ; ಜಾನಪದ ಸಾಹಿತ್ಯದಲ್ಲಿ ಜೀವನದ ವಿವಿಧ ನೈಜಚಿತ್ರಗಳನ್ನು ಚಿತ್ರಿಸುವ ಈ ಹಾಡುಗಳು ರೈತನಿಗೆ ಆನಂದವಾದಾಗಾಗಲಿ, ಇಲ್ಲವೆ ದಿನದ ದುಡಿಮೆಯ ದಣಿವನ್ನಾರಿಸಿಕೊಳ್ಳುವುದಕ್ಕಾಗಲಿ ಹೊರಹೊಮ್ಮಿದವುಗಳು. ಅವನಿಗೆ ಮನತುಂಬಿ ಹೌಸಾದರೆ ಚಿಮ್ಮಿ ಚಿಮ್ಮಿ ರಾಗವು ಹರಿದೇ ಬಿಡುವುದು. ಅವನ ಸಹಜತೆಯು ಶಾಸ್ತ್ರೋಕ್ತದ ಕಟ್ಟುನಿಟ್ಟುಗಳಿಲ್ಲದೆ ತನ್ನದೇ ಆದ ಒಂದು ರಸ ವಾಣಿಯಲ್ಲಿ ನಾದ ಮಾಡಹತ್ತುವುದು. ಈ ರಸವಾಣಿಗೆ ಯಾರು ಮನಸೋಲಲಿಕ್ಕಿಲ್ಲ; ಅವನ ಹಾಡಿನಲ್ಲಿ ಸ್ಫೂರ್ತಿ ಇದೆ; ಸ್ವಾತಂತ್ರ್ಯವಿದೆ; ತಿರುಳ್ಗನ್ನಡವಿದೆ. ಅಂತೆಯೇ ಜಾನಪದ ಸಾಹಿತ್ಯವು ಪಾಮರರ ಉಸಿರಾದರೂ ಅದನ್ನು ರಸಿಕರೆಲ್ಲರೂ ಹೊತ್ತು ಕುಣಿದಾಡುತ್ತಾರೆ. ಜಾನಪದ ಸಾಹಿತ್ಯವು ನಿರಾಭರಣ ಸುಂದರಿ; ಅದಕ್ಕೆ ಅಲಂಕಾರ ಭಾರವಿಲ್ಲ; ಪರಂಪರೆಯ ಗುಲಾಮತನವಿಲ್ಲ; ಸಮಯಾದಿಗಳ ಜೊಂಪಾಟವಿಲ್ಲ; ಅನುಕರಣ ಮೊದಲಾದವುಗಳ ಮುರವತ್ತಿಲ್ಲ; ನಿತ್ಯ ನಿಸರ್ಗಕ್ಕೆ ಅದು ಸದಾ ಕಣ್ಣು ತೆರೆದಿದೆ. ಅಲ್ಲಿ ಬಂದುದು ಎಲ್ಲವೂ ಅಚ್ಚ ಹೊಸದೇ; ಅದರಲ್ಲಿ ಸುಳಿದಾಡುತ್ತಿರುವುದು ಜನವಾಣಿ; ಕುಣಿದಾಡುತ್ತಿರುವುದು ಜನಜೀವನ; ಉಸಿರಾಡುತ್ತಿರುವುದು ನಮ್ಮ ಸಂಸ್ಕೃತಿ. ಅಷ್ಟೇ ಏಕೆ ಅದು ನಮ್ಮ ಪ್ರಪಂಚ – ಸಂಭಾರವೇ ಆಗಿದೆ. ಆ ಸಂಭಾರ ಸಾಮಗ್ರಿಗಳ ಸೌರಭವು ಒಟ್ಟುಗೂಡಿದಾಗೊಂದು; ಬಿಡಿಬಿಡಿಯಾದಾಗೊಂದು, ಹೀಗೆ ಹೇಗಿದ್ದರೂ ಅದು ರಸಿಕರನ್ನು ರಸಸಾಗರದಲ್ಲಿ ತೇಲಿಸಿಬಿಡುವುದು. ಅದನ್ನು ಗಂಡುಕಟ್ಟಿ (ರಚಿಸಿ) ಹಾಡಿದರೇನು? ಹೆಣ್ಣು ಕಟ್ಟಿ ಹಾಡಿದರೇನು? ಅದರಿಂದ ಸೂಸಿಬರುವ ಸೌರಭವು ಒಂದೇ.[೧]

ಬಯಲು ನಾಡಾದ ಬೆಳುವಲ, ಫಲವತ್ತಾದ ಭೂಮಿ. ಅಲ್ಲಿ ಹಂತಿಯ ಹಾಡುಗಳ ಸುಗ್ಗಿಯೋ ಸುಗ್ಗಿ. ನೆಲಸಂಸ್ಕೃತಿಯನ್ನು ವರ್ಣಿಸುವಲ್ಲಿ ಕೃಷಿಕರಿಗೆ ಎಲ್ಲಿಲ್ಲದ ಸಂಭ್ರಮ.

**ಸುಗ್ಗಿದಾಸೋಹೆಂದು ಹಿಗ್ಗು ಬೆಳುವಲುನೋಡು**
**ಹುಗ್ಗಿ ಹೋಳಿಗೆಯು ನಿಸ್ತಾಡು । ಸೂಗ್ಯೂಟ**
**ನಗ್ಗೇಡು ಇದಕೆ ಮಲೆನಾಡು**

ಹೂಗಾರ ಮಾದಯ್ಯನ ಹಂತಿಯ ಹಾಡಿನಲ್ಲಿ ವರ್ಣಿಸಿರುವ ರೀತಿ ಇದು. ಫಸಲು ಸಮೃದ್ಧವಾದಾಗ ಬದುಕು ಹಸನಾಗಿ ಸಮೃದ್ಧಕಾವ್ಯ ಮೂಡುವುದು ಸಹಜ. "ಆಸ್ಥಾನ ಕವಿಗಳಂತೆ ಅವನದು ಕಾಲ್ಪನಿಕ ಸೃಷ್ಟಿಯಲ್ಲ. ಕಂಡದ್ದನ್ನರಗಿಸಿ ಸುಖವಿದ್ದರೆ ಹಾಡುತ್ತ ನಕ್ಕಿದ್ದಾನೆ; ದುಃಖವಿದ್ದರೆ ಹಾಡುತ್ತ ಅತ್ತಿದ್ದಾನೆ. ಅವನ ಹಾಡುಗಳು ಪ್ರಪಂಚದ ಬಗೆಹರಿಯದ ಸಮಸ್ಯೆಗಳಿರಬಹುದು; ಕೈಗೂಡದ ಪ್ರಣಯರೀತಿ ಇರಬಹುದು; ಅಸಹಾಯ ಸ್ಥಿತಿಯ ಐತಿಹಾಸಿಕ ಪ್ರಸಂಗವೂ ಇರಬಹುದು; ನಗೆ ತುಂಬಿದ ಹಾಸ್ಯವೂ ಇರಬಹುದು; ಪ್ರೇಮಿಗಳ ಪ್ರೇಮಸಲ್ಲಾಪವಿರಬಹುದು; ಧರ್ಮದ ಆಂದೋಲನವಿರಬಹುದು; ಇಲ್ಲವೆ ಮಹಾಪುರುಷರ ಸ್ಮಾರಕ ಚರಿತವಿರಬಹುದು – ಹೀಗೆ ಇವೆಲ್ಲವೂ ಅವನ ಹಾಡುಗಳ ಮುಖ್ಯ ವಿಷಯಗಳಾಗಿ ಆವರಿಸಿಕೊಳ್ಳಬಹುದು. ಈ ಎಲ್ಲ ಹರಿದಾಟಗಳಲ್ಲಿ ಅವನು ಧರ್ಮಕ್ಕೆ ತೀವ್ರ ಅಂಟಿಕೊಳ್ಳುವುದು ಅವನಲ್ಲಿ ಒಡೆದು ಕಂಡುಬರುವ ಗುಣವಾಗಿದೆ. ತಾ ಕಂಡು ಹಾಡುವ ಅವನ ಅನುಭಾವಗಳು ಕೇವಲ ಬಿಡಿ ಪದ್ಯಗಳಿರಬಹುದು; ಇಲ್ಲವೆ ದೊಡ್ಡ ಹಾಡುಗಳು ಇರಬಹುದು".[೨]

ಶಿವಶರಣರ ಕಾರ್ಯಚಟುವಟಿಕೆಗಳು ಬೆಳುವಲದ ಬೇರೆ ಬೇರೆ ಭಾಗಗಳಲ್ಲಿ ಜರುಗುತ್ತಿದ್ದವು. ಬೆಳುವಲದ ಅನೇಕ ಶಿವಶರಣರು ಕಲ್ಯಾಣ ಕ್ರಾಂತಿಯಲ್ಲಿ ಭಾಗವಹಿಸಿದ್ದರು.

ಕನ್ನಡ ಪ್ರಾಧ್ಯಾಪಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–೬

ಶಿವಮತವನ್ನು ಉಳಿಸಲು ಅನೇಕರು ಪ್ರಯತ್ನಪಟ್ಟಿದ್ದಾರೆ. ಈ ಸಂಗತಿ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. "ಕ್ರಾಂತಿಯಲ್ಲಿ ಕಲ್ಯಾಣ ಮಂಟಪವು ಕಣ್ಮರೆಯಾಗಿ ಆಂದೋಲನವು ಶಾಂತವಾಗಲು ಆ ಮಂಟಪದ ಅನೇಕ ಜಂಗಮರು ಶಿವಶರಣರು ಕಲ್ಯಾಣದ ನೆರೆಯಲ್ಲಿರುವ ಈ ಬೆಳುವಲದ ನಾಡಿನಲ್ಲಿಯೇ ನಿಂತಂತೆ ಕಾಣುತ್ತದೆ".

**ಬೆಳುವಲವು ಬೆಳೆಯಾಗಿ ಬಳುವಳಿಯು ಹೊಸಮತಕೆ**
**ಬೆಳತನಕ ಚೌಡ ನಿನ್ಹಾಡು । ಕಣದೊಳಗೆ**
**ಬೆಳೆಗೆ ಬಳುವಳಿಯು ಹುಲುಸಾಯ್ತು**

ಜಾತಿಗಾರ ಚೌಡಯ್ಯನ ಹಂತಿಯ ಹಾಡಿನಲ್ಲಿ ಇದನ್ನು ಗುರುತಿಸಿರುವುದು ನಿಜವೆನಿಸುತ್ತದೆ. ಹೊಸ ಬೆಳಸಿಗೆ ಬೆಳುವಲವು ಕಾರಣವಾದ ಸಂಗತಿಯೂ ಹಾಡಿನಲ್ಲಿದೆ.

**ಹಿಂಗಾರಿ ಬೆಳಸಾಗಿ ಮುಂಗಡವೆ ಬೆಳೆ ಬಂದು**
**ಟೆಂಗ ಬಿಳಿಜೋಳ ಒಕ್ಕುವುದು । ಬೆಳುವಲವು**
**ಜಂಗಮಕೆ ಎಡೆಯು ಹೊಸ ಬೆಳಸು**

ಸದ್ಗುರುಗಳನ್ನು, ಯೋಗಿಗಳನ್ನು ನೆನಪಿಸಿಕೊಂಡು ಶಿವಶರಣರು ಜಂಗಮರನ್ನು ಹುಡುಕಿಕೊಂಡು ಮೋಕ್ಷ ಬೇಡಲು ಹೊರಟ ಸನ್ನಿವೇಶಗಳನ್ನು ಹಾಡಾಗಿ ಪರಿಣಮಿಸಿರುವುದುಂಟು.

ಶಿವಶರಣರು ಅಂದಿನ ಸಮಾಜದಲ್ಲಿ ಮೇಲು-ಕೀಳು ಎಂಬ ಜಾತಿಗೆ ಅಂಟಿದ್ದ ತಾರತಮ್ಯ ಭಾವನೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಆ ಮೂಲಕ ಎಲ್ಲ ಬಗೆಯ ಅಸಮಾನತೆಯನ್ನು ನಿರ್ಮೂಲನೆಗೊಳಿಸಿ ಸಮಗ್ರವೂ ಸ್ವತಂತ್ರವೂ ಆದ ಸಮಾಜ ನಿರ್ಮಾಣವಾಗಬೇಕೆಂದು ಹಂಬಲಿಸಿದವರು. ಕಾಯಕದ ಮೂಲಕ ಶ್ರಮಕ್ಕೆ ದುಡಿಮೆಗೆ ಗೌರವ ಪ್ರಾಪ್ತವಾಗಬೇಕೆಂದು ಜನರ ಮನೋಭಾವನೆಯನ್ನು ಮಾರ್ಪಡಿಸಲು ಪ್ರಯತ್ನಿಸಿದವರು. ಈ ಮೂಲಕ ಅಂದಿನ ಕಾಲದ ಆರ್ಥಿಕ ಜೀವನಕ್ಕೊಂದು ಹೊಸ ತಿರುವನ್ನಿತ್ತ ಶರಣರಲ್ಲಿ ಬಸವ, ಜೇಡರದಾಸಿಮಯ್ಯ, ಮೋಳಿಗೆ ಮಾರಯ್ಯ, ಅಂಬಿಗರ ಚೌಡಯ್ಯರಂತೆ ಮಾದಾರ ಕೇತಯ್ಯ, ಜಾತಿಗಾರ ಚೌಡಯ್ಯ ಹಾಗೂ ಮಾದಾರ ಚೆನ್ನಯ್ಯ ಪ್ರಮುಖರಾಗಿದ್ದಾರೆ.

**ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ**
**ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುರುವು ಹರಿಯುವುದು**
**ಜಂಗಮನಾದರೂ ಕಾಯಕದಿಂದಲೇ ಪಾಶ ಹರಿವುದು**

ಶಿವಶರಣರ ಈ ಉಕ್ತಿಯಂತೆ ಕಾಯಕತತ್ವದ ಮೂಲಕ ಆರ್ಥಿಕ ತತ್ವ ಹಾಗೂ ಧಾರ್ಮಿಕ ಆಧ್ಯಾತ್ಮಿಕ ಹಿನ್ನಲೆಯಾಗಿಸುವುದರ ಮೂಲಕ ಕಾಯಕವನ್ನು ಹೆಚ್ಚು ದೃಢವಾದ ಕಲ್ಪನೆಯಾಗುವಂತೆ ಮಾಡಿದರು. ಮಾದಾರ ಕೇತಯ್ಯ, ಜಾತಿಗಾರ ಚೌಡಯ್ಯ, ಮಾದಾರ ಚೆನ್ನಯ್ಯ, ಘನಶರಣ ಹರಳಯ್ಯ, ಸತ್ಯಶರಣೆ ಶಿವನಾಗಮ್ಮ, ಹೊಲೇರ ಹೊನ್ನಯ್ಯ - ಮುಂತಾದವರು ಅಂದಿನ ಸಮಾಜದಲ್ಲಿ ಶೋಷಿತ ಹಾಗೂ ನಿರ್ಲಕ್ಷಕ್ಕೆ ಒಳಗಾಗಿದ್ದ ತಳಸಮುದಾಯದಿಂದ ಬಂದಂತಹ ಪ್ರಮುಖ ವ್ಯಕ್ತಿಗಳಾಗಿ ಜ್ಞಾನಿಗಳಾಗಿ ವೃತ್ತಿಯ ಮೂಲಕ ಆಧ್ಯಾತ್ಮಿಕ ಸಾಧನೆಗೆ ಪ್ರಬಲವಾದ ಮಾರ್ಗವನ್ನು ಹಾಕಿಕೊಟ್ಟವರಾಗಿದ್ದಾರೆ.

ಶರಣನಾದ ಕೇತಯ್ಯನು ತನ್ನ ಕಾಯಕದಲ್ಲಿ ಪರಮನಿಷ್ಠನು, ಶರಣರ ಕಾಯಕವನ್ನು ನಿರ್ಲಕ್ಷಿಸುವವರು ಈ ಜಗದೊಳಗೆ ಯಾರಿಲ್ಲ. ಅಂತೆಯೇ ಈಶ್ವರನೂ ಶರಣರ ಕಾಯಕವನ್ನು ತಪ್ಪಿಸುವಲ್ಲಿ ಸೋತಿರುವನು. ಹಾಗಿರುವಾಗ ಮೇದಾರ ಜಾತಿಯಲ್ಲಿ ಜನಿಸಿರುವ ಕೇತಯ್ಯನನ್ನು ಕಾಯಕದಲ್ಲಿ ಮೀರಿಸುವವರಾರು. ತನ್ನ ಕಾಯಕದ ಮೂಲಕ ಅಮರತ್ವನಾದ ಶರಣ ಕೇತಯ್ಯನಿಗಿಂತ ಹಿರಿಯರಾರು ಈ ಜಗದೊಳಿಲ್ಲ. ಆದ ಕಾರಣ ಜಗದೊಳಗೆ ಇವನ ಗುಣಗಾನ ಮಾಡುತಿರೆ ಇವನ ಕೃಪೆಯಿಂದ ಮಳೆ ಇಲ್ಲದೆ ಕಂಗಾಲಾಗಿರುವ ಒಕ್ಕಲಿಗನಿಗೆ ಸಂತಸವಾಗುವಂತೆ ಈ ಭೂಮಿಯಲ್ಲಿ ಚಿನ್ನದಂತಹ ಸಮೃದ್ಧವಾದ ಮಳೆ ಸುರಿಸಿ ಬಂಗಾರದಂತಹ ಬೆಳೆಬೆಳೆಯಲು ಕೃಷಿ ಭೂಮಿ ಹಸಿರಾಗಿ ಬೆಳೆ ಎಂಬ ಹೊನಲು ಈ ಭುವಿಯಲಿ ಹರಿಯಲು ಕೇತಯ್ಯ ಕಾರಣನಾಗಿದ್ದಾನೆಂದು ಜನಪದ ಕವಿ ನುಡಿದಿದ್ದಾರೆ.

**ಗುರುವಿಲ್ಲದೇ ಕಲಿತ ಹರಭಕ್ತ ನೀನೊಬ್ಬ**
**ನರಲೋಕದೊಳಗೆ ಯಾರುಂಟು । ಕೇತಯ್ಯ**
**ಚಿರವಂತ ಊಟ ನಿನ್ಹಾಡು**

ಗುರುವಿಲ್ಲದೆಯೆ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡವನು ಕೇತಯ್ಯ. ಮಲೆನಾಡ ಗಡಿ ಪ್ರದೇಶವಾದ ಉಳಿಮೆ ಬೆಟ್ಟದ ಬಯಲಿನಲ್ಲಿ ಬೆಳೆದು ತನ್ನ ಕಾಯಕವ ಕಂಡುಕೊಂಡ ಕೇತಯ್ಯನ ಹೆಂಡತಿ ಸಾತವ್ವ ಕೂಡ ಜಾತಿಯಲಿ ಮೇದಾರಗಿತ್ತಿಯಾದರೂ ನೀತಿಯಲ್ಲಿ ಶಿವಮತವನ್ನು ಅನುಸರಿಸುವವಳು. ಹೀಗೆ ಕಾಡಿನಲ್ಲಿದ್ದರೂ ಮಾನವತೆ, ಕರುಣೆ, ಕಾಯಕವ ಸೂಸುವ ಕೇತಯ್ಯನ ವಿಚಾರಗಳು ಕುತೂಹಲಕಾರಿಯಾಗಿವೆ. "ಹೊಟ್ಟೆಪಾಡಿಗಾಗಿ ಮೂಢನಂಬಿಕೆ ಮೌಢ್ಯವನ್ನು ಸಾರುತ್ತ ಮಾನವೀಯತೆಯನ್ನು ಕೊಲ್ಲುತ್ತಿರುವ ಪುರೋಹಿತಶಾಹಿ ವೃತ್ತಿಯನ್ನು ವಿಮರ್ಶಿಸುವ, ಶ್ರಮತತ್ವವನ್ನು ಸಾರುವ ಹೊಸ ಮತವಾಗಿ ಕೇತಯ್ಯನ ತತ್ವ" ಕಂಡುಬಂದಿದೆ.

ಒಮ್ಮೆ ಸಾತವ್ವಳ ಕಾರಣದಿಂದ ಕೇತಯ್ಯ ಶಿವಮತದ ವಿಚಾರ ಅರಿಯಲು ಕಲ್ಯಾಣ ಪಟ್ಟಣವನ್ನು ಸೇರುವನು. ಅಲ್ಲಿ ಅಲ್ಲಮಪ್ರಭು, ಬಸವಣ್ಣ, ಮಡಿವಾಳ ಮಾಚಯ್ಯ ಮೊದಲಾದವರಲ್ಲಿ ತನ್ನ ವಿಚಾರ ವಿಮರ್ಶೆಗಳನ್ನು ಚಿಂತನ-ಮಂಥನದ ಮೂಲಕ ಅರುಹಿ ದಿನ ಕಳೆದಂತೆ ಶರಣರಲ್ಲಿದ್ದ ಅಜ್ಞಾನವನ್ನು ತೊಳೆಯುವ ಸುಜ್ಞಾನಿ ಎಂಬಂತೆ ಹೆಸರಾದ.

**ಹರಮತದ ಹಾಡುಗಳ ಮೊರದೊಳಗೆ ಹೆಣೆ ಹೆಣೆದು**
**ಕರಡಿಗೆಯ ತುಂಬಿ ಕಲ್ಯಾಣ । ಪೇಟೆಯೊಳು**
**ಶರಣರಿಗೆ ಮಾರಿ ದಾಸೋಹ.**

ತನ್ನ ಕಾಯಕದ ಮೂಲಕ ಶಿವಮತದ ಸುವಿಚಾರಗಳನ್ನು ತಿಳಿಸುತ್ತಾ ತನ್ನ ಸತಿಯೊಡನೆ ಸೇರಿ ಶರಣರಿಗೆ ಮೃಷ್ಟಾನ್ನ

ಭೋಜನವನ್ನು ಹಾಕುತ್ತಾ ದಿನ ದಿನ ಬಿದಿರುಗಳ ಕಡಿದು ತನ್ನ ವೃತ್ತಿಯನ್ನು ಮಾಡುತ್ತಿದ್ದ ಕೇತಯ್ಯನನ್ನು ಕಲ್ಯಾಣದ ಕಾಡಿನಲ್ಲಿ ಶಿವಪಾರ್ವತಿಯರು ನೋಡಿ ಇವನ ಕಾಯಕವನ್ನು ಮೆಚ್ಚಿದರು. ಪಾರ್ವತಿ ಬಿದಿರಿನಲ್ಲಿ ಚಿನ್ನ, ಮುತ್ತುರತ್ನಗಳನ್ನು ತುಂಬಿಸಿದಳು.

**ಬಂಗಾರ ಹುಳಹತ್ತಿ ಭಂಗವಾಗಿದೆ ಬಿದಿರು**
**ಕಂಗಳಿಗೆ ಬೇಡ ಹೊಲೆಯೆಂದ । ದಾಸೋಹ**
**ಸಂಗ ಜೋಡಣೆಗೆ ಕುಂದೆಂದ**

ಆದರೆ ಕೇತಯ್ಯ ಬಿದಿರಿನಲ್ಲಿ ಬಂಗಾರವನ್ನು ಕಂಡು ಬಂಗಾರದ ಹುಳಹತ್ತಿ ಬಿದಿರು ತನ್ನ ಸ್ವಾಭಾವಿಕತೆ ತನ್ನ ಕಾಯಕತ್ವ ಕಳೆದುಕೊಂಡಿದೆ ಆದಕಾರಣ ತನ್ನ ಸಾಫಲ್ಯವನ್ನು ಪಡೆಯದ ಈ ಬಿದಿರನ್ನು ಪಡೆದರೆ ತಾನು ಮಾಡುತ್ತಿರುವ ಶುದ್ಧ ಕಾಯಕತ್ವಕ್ಕೆ ಕೇಡುಂಟಾಗುತ್ತದೆಂದ. ಈ ಮೂಲಕ ತಾನು ಮಾಡುತ್ತಿರುವ ದಾಸೋಹ ಕಾರ್ಯಕ್ರಮಕ್ಕೆ ಭಂಗ ಉಂಟಾಗತ್ತದೆಂದು ಭಾವಿಸಿದ್ದಲ್ಲದೆ ಶುದ್ಧ ಮನಸ್ಸಿನಿಂದ ಬಂಗಾರವನ್ನು ಹೊಂದಿದ್ದ ಬಿದಿರನ್ನು ತಿರಸ್ಕರಿಸಿದ. ಸ್ವಾಭಾವಿಕವಾದ ಬಿದಿರು ದೊರೆಯದೆ ಕಂಗಾಲಾಗಿ ಶಿವನನ್ನು ನೆನೆಯುತ್ತಾ ಹೊಸ ಬಿದಿರು ಮೆಳೆಯನ್ನು ಅನುಗ್ರಹದಿಂದ ಪಡೆದನು. ಗಂಡ ಹೆಂಡಿರು ಈ ಮೂಲಕ ಬುಟ್ಟಿ ಮೊರಗಳನ್ನು ತಯಾರಿಸಿ ಸಂತೆಯಲ್ಲಿ ಮಾರಿ ಅದರಿಂದ ಬಂದ ಹಣದಿಂದ ದಾಸೋಹ ಏರ್ಪಡಿಸಿ ಹಸಿದ ಶರಣರನ್ನು ತಣಿಸಿದರು.

**ಬಂದ ಜಂಗಮ ಪರಿಸೆ ಅಂದೆ ಕರಗಿತು ಉಂಡು**
**ನಂದದಾ ದೀಪ ಕಾಯಕವು । ಕೇತನಿಗೆ**
**ಎಂದೆನುತ ಹೊಗಳಿ ನಡೆದಿರಲು**

ಹೀಗೆ ಕೇತಯ್ಯ ನಿಧನ ಹೊಂದಲು ಈ ಸುದ್ದಿ ಹೂಗಾರ ಮಾದಣ್ಣನ ಮೂಲಕ ಕಲ್ಯಾಣ ಮಂಟಪಕ್ಕೆ ತಿಳಿಯಿತು. ಆಗ ಬಸವಣ್ಣನು ಈ ಸುದ್ದಿಯನ್ನು ಮಾಚಯ್ಯನಿಗೆ ತಿಳಿಸಲು ಮಾದಣ್ಣನನ್ನು ಕಳುಹಿಸಿದರು.

**ಹರಹರನೆ ಶರಣರಿಗೆ ಮರಣವೊದಗಿತೆ ಇಂದು**
**ಬರಲಾರೆ ಹೇಳು ಬಸವನಿಗೆ । ನಾನಲ್ಲಿ**
**ಹೊರತಾಗಿ ಮಾತ ನುಡಿಲಾರೆ**
**ನಾನು ಬಸವನಮುಖವ ಏನುನೋಡಲಿ ಕೇಳು**
**ಮಾನವಂತರಿಗೆ ತಮ್ಮೊಚನ । ಪ್ರಾಣೆಂಬ**
**ತಾನ ಬಿಟ್ಟಿಹನು ಬಸವೇಶ**

ಕೇತಯ್ಯನ ಮರಣದ ಸುದ್ದಿ ತಿಳಿದು ಇಡೀ ಶರಣರಿಗೆ ಮರಣ ಬಂತು ಎಂದು ಮಾಚಣ್ಣ ನುಡಿಯುತ್ತಾನೆ. ಅಂದು ಕೇತಯ್ಯ ಶರಣರ ಬಳಗದಲ್ಲಿ ಎಷ್ಟು ಪ್ರಾಮುಖ್ಯತೆ ಹೊಂದಿದ್ದನೆಂಬುದು ತಿಳಿಯುತ್ತದೆ. ಅಲ್ಲದೆ ಈ ದುಃಖವನ್ನು ಕೇಳಿದ ವೀರ ಮಾಚನು ಬಸವನಿಗೆ ಹೇಗೆ ಮುಖತೋರಲಿ ಎಂಬಲ್ಲಿ ಕೇತಯ್ಯನ ಮರಣದ ಸುದ್ದಿ ಎಂತಹ ಮಡುಗಟ್ಟಿದ ಸನ್ನಿವೇಶದ ವಾತಾವರಣವನ್ನು ಶರಣರಲ್ಲಿ ಉಂಟುಮಾಡಿತ್ತು ಎಂಬುದನ್ನು ತಿಳಿಯಬಹುದು.

ಮುಂದಿನ ಮಾರ್ಗದರ್ಶನವನ್ನು ಮಾಚಯ್ಯ ನೀಡಬೇಕೆಂದು ಬಸವಣ್ಣನು ಮಾಚನಿಗೆ ಹೇಳಿದಾಗ, ಆತ ಕೇತಯ್ಯನನ್ನು ನೆನೆಸುತ್ತ ಘಂಟೆಯನ್ನು ಭಾರಿಸಲು ಮೂಜಗವು ಮಗುವಾಗಿ ಆ ಸದ್ದಿನಿಂದ ಹೌಹಾರಿತು :

**ಪುರಪುರವೆ ಭಜಿಸುತಲಿ ಹರಲೋಕ ಹರಸುತಲಿ**
**ಮೆರೆಸಿದನು ಮಾಚ ಕಾಯಕವ । ಕಳೆ ತುಂಬಿ**
**ನರಲೋಕವಾತು ಶಿವಲೋಕ**

ಈ ಮೂಲಕ ಮಡಿವಾಳ ಮಾಚಯ್ಯ ಕಾಯಕ ತತ್ವವನ್ನು ಪುರಜನರು, ಶಿವಲೋಕವು ಹರಸುವಂತೆ ಮಾಡಿದನು.

ಈ ಮೂಲಕ ಶಿವನನ್ನೆ ಬುಟ್ಟಿಮಾಡಿ ಭೂಮಿಯನ್ನು ಕಳಸಕ್ಕೆ ಕಟ್ಟಿ ಶಿವದೀಪಹಚ್ಚಿ ಕಲ್ಯಾಣದಲ್ಲಿ ದಿವ್ಯವಾದ ಬೆಳಕಿನ ಮೂಲಕ ಕೇತಯ್ಯ ಕಂಡನು. ಈ ಭೂಮಿಯಲ್ಲಿ ಶಿವಮತವೇ ತಾಯಿಮತವಿದ್ದಂತೆ ಎಂದು ವಿವಿಧ ಮತಗಳ ತಾರತಮ್ಯವನ್ನು ತೊಲಗಿಸುತ್ತ ಶಿವಮತದೊಳಗೆ ಒಂದಾಗಬೇಕೆಂದು ಕೇತಯ್ಯ ಜನರಲ್ಲಿ ಕಾಯಕತತ್ವವನ್ನು ಪ್ರಸಿದ್ದಿಪಡಿಸಿದ. ಕೇತಯ್ಯ ಮರಣವನ್ನು ಪಡೆದರು ಸಹ ಶರಣರ ಕಾಯಕವನ್ನು ಮುಗಿಸಿದ.

**ಶರಣು ಶರಣೆಂಬುವೆವು ಹರಣ ಹಾರುವ ತನಕ**
**ಕರುಣಿಸಿರಿ ಕೇತಯ್ಯ । ನಮುಗಿನ್ನು**
**ಹರಿಸಲಿ ಹುಲುಸು ಹುಲ್ಲುಲ್ಲಿಗುಣ**

ಶಿವಶರಣರು ಕೇತಯ್ಯನ ಕರುಣೆಯನ್ನು ಬೇಡುವಂತೆ ಶರಣ ಕೇತಯ್ಯ ಪ್ರಸಿದ್ಧಿಯನ್ನು ಪಡೆದನು. ಕೇತಯ್ಯ ಬಿದಿರು ಕಡಿಯುವಾಗ ಬಿದಿರಿನಿಂದ ಉದುರಿದ ಚಿನ್ನದ ಹರಳುಗಳ ಪ್ರಸಂಗದಲ್ಲಿ ಹರಳುಗಳನ್ನು 'ಹುಳು' ಎಂದು ಭಾವಿಸಿದ ಕೇತಯ್ಯನ ಜೀವನದ ಈ ಘಟನೆ ಮೂಲಧ್ವನಿಯಾಗಿ ಕಾಣಿಸುತ್ತದೆ. ಕೇತಯ್ಯನ ಪ್ರಾಣದೊಡನೆ ಬಸವಣ್ಣನ ಪ್ರಾಣವೂ ಹೋಯಿತೆಂಬ ಐತಿಹ್ಯವೂ ಇಲ್ಲಿ ಮುಖ್ಯವಾಗಿದೆ.

ಶಿವನ ಸಂಕೇತವಾದಂತಹ ಕಾಯಕ ವೃತ್ತಿಯನ್ನು ಮಾಡಿದ ಶಿವಶರಣ ಜಾತಿಗಾರ ಚೌಡಯ್ಯ ಪ್ರಸಿದ್ದಿಯಾದವನು. ಶಿವನಾಮ ಸ್ಮರಣೆ ಮಾಡುತ್ತಾ ಕಾಲಿಗೆ ಗೆಜ್ಜೆಕಟ್ಟುತ್ತ ತಬಲದ ಸದ್ದಿಗೆ ಕುಣಿಯುವ ಶಿವನಾಮ ರೂಪವಾದ ನೃತ್ಯವೇ ಆತನ ವೃತ್ತಿಯಾಗಿತ್ತು.

ಇವನ ಕುಣಿತಕ್ಕೆ ಸಂಗೀತದ ತಾಳಕ್ಕೆ ಮೋಡವು ಕೂಡ ತಲೆದೂಗಿ ಸಂತೋಷದಿಂದ ಮಳೆಯನ್ನ ಸುರಿಸುತ್ತದೆ, ಈ ತೆರನಾಗಿ ಶಿವನ ವಿವಿಧ ಲೀಲೆಗಳನ್ನು ಹಾಡುತ್ತಾ ಚೌಡಯ್ಯ ಹೊಸಮತವನ್ನು ಕಲ್ಯಾಣದಲ್ಲಿ ಸಾರುತ್ತಿದ್ದ.

**ಚರಮೂರ್ತಿ ರೇಕಯ್ಯ ಗುರುವಾದ ಚೌಡನಿಗೆ**
**ಹರಸಿ ಶಿವದೀಕ್ಷೆ ನೀಡಿದನು । ಕಾಯಕವು**
**ಹರಸೇವೆಯಿಂದ ಜಗದೊಳಗೆ**

ಈ ರೀತಿಯಾಗಿ ಇದ್ದ ಚೌಡಯ್ಯನಿಗೆ ಚರಮೂರ್ತಿ ರೇಕಯ್ಯನವರು ಶಿವದೀಕ್ಷೆಯನ್ನು ನೀಡಿ ಅವನಿಗೆ

ಶಿವಸೇವೆಯನ್ನು ಮಾಡಲು ಮತ್ತಷ್ಟು ಸಹಕಾರ ನೀಡಿದರು. ಚೌಡಯ್ಯನು ಈ ಜಗದೊಳಗೆ ಪ್ರತಿದಿನ ಹಗಲು-ಇರುಳೆನ್ನದೆ ಶಿವತತ್ವವನ್ನು ಹಾಡುತ್ತ ಶಿವಲೀಲೆಯನ್ನು ತಿಳಿಸುತ್ತಾ ಜನರು ಇವನ ವಿದ್ಯೆಗೆ ಒಳಗಾಗಿ ಶಿವನಲ್ಲಿ ಭಕ್ತಿ ಹೊಂದುವಂತೆ ಚೌಡಯ್ಯ ಮಾಡಿದನು. ಆಗ ಕೊಟ್ಟಗಿರಿಯ ಒಡೆಯನಾದ ಅಚ್ಚುತನು ಕುಣಿಯುವ ಕಾಯಕದಲ್ಲಿ ನನ್ನನ್ನು ಮೀರಿಸುವರಿಲ್ಲ ಎಂದು ವಾದ ಮಾಡುತ್ತಾ ಚೌಡಯ್ಯನಿಗೆ ಸವಾಲನ್ನು ಹಾಕುವನು.

**ನಟರಾಯ ತಾನೆಂದು ಕಟುಮದವು ಅಚ್ಚುತಗೆ**
**ಸೆಟೆಮಾತುಕೇಳಿ ಚೌಡಯ್ಯ । ಕಾಯಕವ**
**ದಿಟವೆಂದು ಕುಣಿದು ತೋರಿಸಲು**

ಆಗ ಚೌಡಯ್ಯ ಆತನ ಸವಾಲನ್ನು ಸ್ವೀಕರಿಸಿ ಪರಮನಿಷ್ಠೆಯಿಂದ ಶಿವನನ್ನು ನೆನೆಯುತ್ತಾ ಕುಣಿಯುತ್ತಾ ತನ್ನ ಕಾಯಕವ ತೋರಲು ನಾಡೆಲ್ಲ ಹೂವಾಗಿ ನೆರೆದಿದ್ದ ಜನಕ್ಕೆ ಶಿವಭಕ್ತಿ ಮೂಡಿ ನಟರಾಯನಿಗೆ ತನ್ನ ಗರ್ವ ದೂರವಾಗಿ ನೀತಿಯಲ್ಲಿ ಮಾತನಾಡುತ್ತ ಚೌಡಯ್ಯನಿಗೆ ಶರಣಾದ. ಇದಾದ ನಂತರ ಚಿಕ್ಕಯ್ಯ ಎಂಬುವನು ಚೌಡಯ್ಯನ ಪ್ರಸಿದ್ಧಿಯನ್ನು ತಿಳಿದು ಆತನಿಗೆ ಸವಾಲು ಹಾಕಿದ. ಅದೇನೆಂದರೆ 'ಕುಣಿಯುವ ಕಾಯಕದಲ್ಲಿ ತಾನು ಗೆಲ್ಲುವೆನು. ಚೌಡಯ್ಯನ ವಿರುದ್ಧ ಸೋತರೆ ಕಾಡಿನಲ್ಲಿ ಕತ್ತೆಗಳನ್ನು ಕಾಯುತ್ತೇನೆ' ಎಂದು. ಈ ವಿಷಯ ಊರಿನ ಜನರಿಗೆ ತಿಳಿದು ಇಬ್ಬರಿಗೂ ಸ್ಪರ್ಧೆ ಏರ್ಪಟ್ಟಿತು. ಆಗ ಚೌಡಯ್ಯನು ತಾನು ಕಳಪೆಯ ಪ್ರದರ್ಶನವನ್ನು ತೋರಿದನು.

**ಶಿವಲೀಲೆ ಆಡುತಲಿ ಶಿವನ ತಾಂಡವ ಕುಣಿದ**
**ಶಿವನೆಂದು ಚೌಡ ಎದೆ ನಡುಗಿ । ಜಕ್ಕಯ್ಯ**
**ಕವಲೇರಿ ಬಿದ್ದ ಭೂತಳಕೆ**

ಚೌಡಯ್ಯ ಕುಣಿಯುತ್ತಿರಲು ಇವನ ನರ್ತನವನ್ನು ನೋಡಿದ ಜಕ್ಕಯ್ಯನಿಗೆ ಶಿವನೇ ನರ್ತನವನ್ನು ಮಾಡುತ್ತಿರುವನು ಎಂದು ದಿಗಿಲಾಗಿ ಭೂತಳಕ್ಕೆ ಬಿದ್ದುಬಿಡುವನು. ಅಷ್ಟರಮಟ್ಟಿಗೆ ಶಿವನಿಗೆ ಸರಿಸಮಾನವೆಂಬಂತೆ ಚೌಡಯ್ಯ ನರ್ತಿಸುತ್ತಿದ್ದನು. ಸೋತ ಜಕ್ಕಯ್ಯನು ತಾನು ಹೇಳಿದಂತೆ ಕಾಡಿನಲ್ಲಿ ಕತ್ತೆಗಳನ್ನು ಕಾಯುತ್ತ ಚೌಡನಿಗೆ ಆಳಾಗಿ ನಿತ್ಯ ಮೇಳಗಳೊಂದಿಗೆ ನರ್ತಿಸುತ್ತಿದ್ದನು.

**ಜಗವೆಲ್ಲ ಕೇಳುತಲಿ ಯುಗದೊಳಗೆ ಜಾತಿಗರ**
**ಮಿಗಿಲಾದ ಚೌಡಶರಣೆಂದು । ಕೂಡಿದವು**
**ಜಗದ ಬಹುರೂಪಿ ಮೇಳಗಳು**

ಜಗದಲ್ಲಿ ಚೌಡಯ್ಯನ ಲೀಲೆಗಳನ್ನು ನೋಡುವ ಚೌಡಯ್ಯನು ಜಾತಿ ತಾರತಮ್ಯಕ್ಕೆ ಒಳಗಾಗಿದ್ದರೂ ತನ್ನ ಕಾಯಕದ ಮೂಲಕ ಪ್ರಸಿದ್ಧಿಯನ್ನು ಪಡೆದನು. ಇವನ ಸೇವೆಗೆಂದು ಕಾಡಿನಲ್ಲಿದ್ದ ಸಿದ್ದಿಗಳು ನಾಡಿನಲ್ಲಿದ್ದ ಬುಡುಬುಡಿಕೆಯವರು ಬಂದು ಇವನಿಗೆ ಸೇವೆ ನೀಡಿದರು.

ಭಕ್ತ ಜಂಗಮರು ಊಟವನ್ನು ಮಾಡಿ ತೃಪ್ತರಾಗಬೇಕೆಂದು ಭಾವಿಸಿದ ಚೌಡಯ್ಯನು ಯುಕ್ತಿಯಿಂದ ಹಬ್ಬ ಮಾಡಬೇಕೆಂದು ನಿರ್ಧರಿಸಿದನು. ಆಗ ಅವನು ತನ್ನ ಬಳಿ ಕವಡೆಗಾಸು ಇಲ್ಲದ್ದನ್ನು ಅರಿತಿದ್ದರೂ ದೃಢನಿರ್ಧಾರವನ್ನು ಮಾಡಿ ರಾಜನ ಬಳಿಗೆ ಹೋಗಿ ತನಗೆ ಹಬ್ಬ ಮಾಡಲು ಹತ್ತು ಸಾವಿರ ಹಣವನ್ನು ಸಾಲವಾಗಿ ನೀಡಬೇಕೆಂದೂ ಈ ಸಾಲವನ್ನು ತಾನು ಮೂರು ವರ್ಷದಲ್ಲಿ ತೀರಿಸುತ್ತೇನೆಂದು ಕೇಳುವನು. ಆಗ ಅರಸನು ಪೂರ್ಣಾರ್ಧದಲ್ಲಿ ಹಣವನ್ನು ನೀಡುತ್ತೇನೆ ಆದರೆ ಒತ್ತೆ ಇಡಲು ನಿನ್ನ ಬಳಿ ಏನಿದೆ? ಎಂದಾಗ ಚೌಡಯ್ಯನು ಪ್ರಶ್ನಿಸುವುದು ಹೀಗೆ :

**ಆಡುವದು ಶಿವರೂಪ ಹಾಡುವದು ಶಿವನುಡಿಯು**
**ಮಾಡುವದು ನಿತ್ಯ ಶಿವಪೂಜೆ । ಶರಣರಿಗೆ**
**ಈಡು ಜಗದೊಳಗೆ ಏನುಂಟು**

ಅರಸನ ಕೋರಿಕೆ ಮೇರೆಗೆ ಶಿವನೃತ್ಯವನ್ನು ಮಾಡುತ್ತಾ ಸಂಗೀತದ ರಾಗಗಳನ್ನು ಹಾಡುತ್ತಿರಲು ಇದನ್ನು ಕೇಳುತ್ತಿದ್ದ ಅರಸನಿಗೆ ತೋಳುಗಳಲ್ಲಿ ಬಲತುಂಬಿ ಏಳು ಸಾಗರವನ್ನು ಹೊತ್ತ ಏಳು ಹೆಡೆಯುಳ್ಳ ಸರ್ಪವು ಹೊತ್ತಂತೆ ಇವನಿಗೆ ಭಾಸವಾಯಿತು. ಆಗ ಚೌಡಯ್ಯನ ಮಹಿಮೆಯನ್ನು ತಿಳಿದ ಅರಸು ಇವನಿಗೆ ನಮಿಸುತ್ತಾ ಹಬ್ಬ ಮಾಡಲು ಹತ್ತು ಸಾವಿರ ಹಣವನ್ನು ನೀಡುವನು. ಈ ವಿಚಾರದಿಂದ ಊರಿನಲ್ಲಿ ಚೌಡಯ್ಯನನ್ನು ಎಲ್ಲರೂ ಹೊಗಳಿದರು.

ಚೌಡಯ್ಯನ ಲೀಲೆಗಳಿಗೆ ಮರುಳಾದ ಶಿವ ಇವನನ್ನು ಪರೀಕ್ಷಿಸಲೆಂದು ಜಂಗಮನ ವೇಷದಲ್ಲಿ ಬಂದು ತನಗೆ ಹಾಡನ್ನು ಹಾಡಿ ತಣಿಸಬೇಕೆಂದು ಕೇಳಿದ. ಆಗ ತಾನು ರಾಜನ ಬಳಿ ಹತ್ತು ಸಾವಿರ ಹಣ ಪಡೆದುದಾಗಿ ಅದಕ್ಕೆ ಅಡಮಾನವಾಗಿ ಶಿವನ ಹಾಡು-ರಾಗಗಳನ್ನು ಇಟ್ಟಿರುವೆನೆಂದ. ಆದ ಕಾರಣ ಮೂರು ವರುಷ ತನ್ನಲ್ಲಿ ಇದ್ದರೆ ಬಳಿಕ ತಾನು ಹಾಡನ್ನು ಹಾಡಿ ನಿನ್ನನ್ನು ರಂಜಿಸುವೆನೆಂದು ತನ್ನ ಸತ್ಯವನ್ನು ಮೆರೆದನು.

**ಹಾಡದಾಸೆಗೆ ಒಪ್ಪಿ ಬೀಡಿಟ್ಟ ಜಂಗಮನು**
**ಗೂಢ ಶಿವತತ್ವ ಬೋಧಿಸಲು । ಶಿವಶರಣ**
**ಚೌಡ ಆಚರಿಸಿ ಗುರುವೆಂದು**

ಈ ತೆರನಾಗಿ ಶಿವನನ್ನೆ ತನ್ನ ಮನೆಯಲ್ಲಿರಿಸಿಕೊಂಡ ವಿಷಯವು ಜಗಕ್ಕೆಲ್ಲ ಹರಡಿ ಜಾತಿಗಾರ ಚೌಡಯ್ಯನು ಪ್ರಸಿದ್ಧಿಯಾಗಿದ್ದನು. ಅಲ್ಲದೆ ತನ್ನ ಕಾಯವನ್ನು ಮಾಡುತ್ತಿರುವ ಚೌಡಯ್ಯನಿಗೆ ಶಿವಕೃಪೆಯಿಂದ ಹಣಹರಿದು ಬಂದು ಅರಸನ ಸಾಲವನ್ನು ಮೂರು ವರ್ಷಕ್ಕೆ ತೀರಿಸಿ ಋಣ ಮುಕ್ತನಾದನು. ಸಾಲಹರಿದು ಚೌಡಯ್ಯನಿಗೆ ಶಿವನು ತನ್ನ ನಿಜರೂಪವನ್ನು ತೋರಿ ಇವನನ್ನು ಕೈಲಾಸಕ್ಕೆ ಆಹ್ವಾನಿಸಿದ.

**ಜೇಡನಿಗೆ ಕೈಲಾಸ ನೀಡೆನಗೆ ಶಿವಭಕ್ತಿ**
**ಮಾಡುವೆನು ಸೇವೆ ಶಿವಮತಕೆ । ಶರಣರಿಗೆ**
**ನಾಡ ಕಾಯಕವೆ ಕೈಲಾಸ**

ಹೀಗೆ ಚೌಡಯ್ಯನು ತನಗೆ ಶಿವಭಕ್ತಿಯನ್ನು ನೀಡಿ

ಶಿವಮತದ ಸೇವೆ ಮಾಡಲು ಅನುಗ್ರಹಿಸಬೇಕೆಂದು ಶಿವನಲ್ಲಿ ಪ್ರಾರ್ಥಿಸಿದ. ಇದನ್ನು ಕಲ್ಯಾಣ ಮಂಟಪದ ಎಲ್ಲ ಶರಣರು ಕೇಳಿ ಚೌಡಯ್ಯನ ಹೊಸಮತವನ್ನು ಕಂಡು ಅಲ್ಲಮ, ಮಡಿವಾಳ ಮಾಚಯ್ಯ ಮೊದಲಾದವರು ಇವನನ್ನು ಕೂಡಿಕೊಳ್ಳುತ್ತಾರೆ.

"ಬಸವಪೂರ್ವ ಯುಗದ ಪ್ರಾಚೀನ ಶರಣಧರ್ಮದ ಮುನ್ನಡೆಗೆ ಕಾರಣ ಪುರುಷರೂ ನಂತರದ ತಲೆಮಾರಿಗೆ ಸ್ಮರಣಾರ್ಹರೂ ಆಗಿರುವ ಹಿರಿಯ ತಲೆಮಾರಿನ ಶರಣರೆಂದರೆ ಹುಲ್ಲು ಮಾರಿಕೊಂಡು, ಜೋಡು ಹೊಲಿದುಕೊಂಡು, ಮೀನು ಮಾರಿಕೊಂಡು ಅವರಿವರ ಬಟ್ಟೆ ಒಗೆದುಕೊಂಡು ಎಣ್ಣೆ ಗಾಣ ಹೊಡೆದುಕೊಂಡು ಜೀವಿಸಿದ ಸಾಮಾನ್ಯರಲ್ಲೇ ಅತಿ ಸಾಮಾನ್ಯರು ಅಥವಾ ಇದನ್ನೇ ಇನ್ನು ಸರಿಯಾಗಿ ಹೇಳಬೇಕೆಂದರೆ ಇವರು ಸಾಮಾನ್ಯರೂ ಅಲ್ಲ, ಇವರು ಏನೇನೂ ಗತಿಯಿಲ್ಲದ ನಿರ್ಗತಿಕರು. ಆದರೆ ಆ ನಿರ್ಗತಿಕರಲ್ಲೂ ನಿಕೃಷ್ಟರಾದವನು ಮಾದಾರ ಚನ್ನಯ್ಯ ಎಂಬುದೇ ಇಲ್ಲಿ ಮನಗಾಣಬೇಕಾಗಿರುವ ಬಹುದೊಡ್ಡ ವಿಚಾರ. ಏಕೆಂದರೆ ಈ ನಿಕೃಷ್ಟಮಾನವ ವೈದಿಕ ವ್ಯವಸ್ಥೆಯಲ್ಲಿ ಅಕ್ಷರಸ್ಥನಾಗುವುದು ಸುಲಭದ ಮಾತಲ್ಲ. ಪ್ರಜ್ಞಾವಂತನೆನಿಸುವುದು ತೀರಾ ಸರಳವಾದ ಸಂಗತಿಯಲ್ಲ; ಇವೆರಡಕ್ಕಿಂತಲೂ ಮುಖ್ಯವಾದ ಸಂಗತಿಯೆಂದರೆ ಅಭಿವ್ಯಕ್ತಿ ಜಾಣ್ಮೆಯುಳ್ಳ ಒಬ್ಬ ವಿಚಾರವಂತನೆನಿಸುವುದು ಸಾಧ್ಯವೇ ಇಲ್ಲ. ಸಾಧ್ಯವಾದಲ್ಲಿ ಸಮಾಜ ಅದನ್ನು ಸಹಿಸುವಂತಿಲ್ಲ. ಬಹುಶಃ ಈ ಹಿನ್ನೆಲೆಯಲ್ಲಿ ನೋಡಿದಾಗ ಅತ್ಯಂತ ನಿಕೃಷ್ಟನೆನಿಸಿ ಜೋಡುಗಳನ್ನು ಹೊಲಿದ ಚನ್ನಯ್ಯನ ಕೈ ಲೇಖನಿಯನ್ನು ಹಿಡಿದು ವಚನಗಳನ್ನು ರಚಿಸಬೇಕಾದರೆ ಅವನು ಮುಟ್ಟಿರಬಹುದಾದ ಪ್ರಬುದ್ಧತೆಯ ಮಟ್ಟವನ್ನು ಜೋಡು ಹೊಲಿಯುವುದರಿಂದ ಹಿಡಿದು ಧರ್ಮ ಜಿಜ್ಞಾಸೆಯವರೆಗು ಅವನ ಜೀವನಾನುಭವ ಆಳ ಎತ್ತರಗಳನ್ನು ಸುಲಭವಾಗಿ ಕಲ್ಪಿಸಿಕೊಳ್ಳಬಹುದೆಂದು ತೋರುತ್ತದೆ".[೩]

**ಜಾತಿಯಲಿ ಮಾದಿಗನಾದರೂ ನೀತಿಯೊಳು ಶಿವಶರಣ**
**ಇವನ ಮಾತುಗಳು ಉತ್ತಮವಾದ ನೀತಿಭೋದೆ ಇದ್ದಂತೆ**
**ಶಿವನೆ ಇವನೊಂದಿಗೆ ಕೂತು ಇವನ ಎದೆಯೊಳಗೆ ಇದ್ದ**
**ಜ್ಞಾನದ ಅಂಬಲಿಯನ್ನು ಸ್ವೀಕರಿಸಿದ್ದಾನೆ**

ಜನಪದ ಕವಿಯೊಬ್ಬ ಈತನನ್ನು ಅರ್ಥಮಾಡಿಕೊಂಡ ರೀತಿ ಇದು. ಬಳ್ಳಿಗಾವೆ ಎಂಬ ಊರಿನಲ್ಲಿ ಮಾದಾರ ಚೆನ್ನಯ್ಯನೆಂಬ ಶಿವಶರಣ ಹದಮಾಡಿದ ತೊಗಲಿನಿಂದ ಜೋಡುಗಳನ್ನು ಮಾಡಿ ಇದರಿಂದ ಬಂದ ಹಣದಿಂದ ತನ್ನ ಜೀವನ ಸವೆಸುತ್ತಾ ದಾಸೋಹದ ಕೆಲಸವನ್ನು ತನ್ನ ಮಡದಿ ಗಂಗೆಯೊಂದಿಗೆ ಮಾಡುತ್ತಿರುತ್ತಾನೆ. ಇಂತಹ ಸಂದರ್ಭದಲ್ಲಿ ನಾಡಿನಲ್ಲಿ ಪಲ್ಲವರ ಗೆದ್ದು ಚಾಲುಕ್ಯರು ನಾಡನ್ನಾಳುತ್ತಿರಲು ತನ್ನ ಕಾಯಕಕ್ಕೆ ನೆರೆಗಡಿಗೆ ಚೆನ್ನಯ್ಯ ತೆರಳುತ್ತಾನೆ. ಅದುವೆ ಚೋಳರಸ ಆಳುತ್ತಿದ್ದ ಕಾಂಚಿಪಟ್ಟಣ.

ಕುದುರೆ ಲಾಯಕ್ಕೆ ಹುಲ್ಲನ್ನು ಸಾಗಿಸುವ ಕೆಲಸವನ್ನು ಕಾಂಚಿಪುರದಲ್ಲಿ ಮಾದಾರ ಚೆನ್ನಯ್ಯ ಮಾಡುತ್ತಾ ಈ ಮೂಲಕ ತನಗೆ ಶಿವನು ಜೀವನ ಸಾಗಿಸಲು ಕೆಲಸವೊಂದನ್ನು ನೀಡಿರುವನೆಂದು ಭಾವಿಸುತ್ತಾನೆ.

**ಉಂಬಲ್ಲಿ ಉಡುವಲ್ಲಿ ಕೊಂಬಲ್ಲಿ ಕೊಡುವಲ್ಲಿ**
**ಶಂಭು ಹರನೆಂದು ಶಿವಗುಣಿಸಿ । ಮಾಡುವನು**
**ತುಂಬ ಶಿವಶರಣ ಚೆನ್ನಯ್ಯ**

ಪ್ರತಿನಿತ್ಯ ಶಿವನನ್ನು ಸ್ಮರಿಸುತ್ತಾ ಭಜಿಸುತ್ತಾ ಶಿವನಿಗೆ ನಿತ್ಯ ಎಡೆಯನ್ನು ಹಾಕುತ್ತಾ ಅದಕ್ಕಾಗಿ ಅವನು ಕಾಡಿನಲ್ಲಿ ಅಲೆದು ದುಂಬಿ ಮುಟ್ಟದ ಹೂವು, ಎಳನೀರು ಮೊದಲಾದ ಹಣ್ಣುಗಳನ್ನು ಶುದ್ಧ ಮನಸ್ಸಿನಿಂದ ಅರ್ಪಿಸುತ್ತಾ ಕಾಲ ಕಳೆಯುತ್ತಿದ್ದ. ಒಂದು ದಿನ ಚೆನ್ನಯ್ಯ ಹೆಂಡತಿ ಗಂಗಾದೇವಿಯು ಕೆಲಸದಿಂದ ಬಂದ ತನ್ನ ಗಂಡನಿಗೆ ಊಟಕ್ಕೆ ಸಿದ್ಧಪಡಿಸಬೇಕೆನ್ನುವಾಗ ಮನೆಯಲ್ಲಿ ಮುಗ್ಗು ಬಂದಿರುವ ಜೋಳ ಮಾತ್ರ ಇರುತ್ತದೆ.

**ಬರೆ ಮನೆಯು ಏನಿಲ್ಲ ಬರೆ ಮುಕ್ಕು ಜೋಳೊಂದು**
**ಹರನೆಂದು ಬೀಸಿ ಅಂಬಲಿಯ । ಮಾಡಿಧಳು**
**ಶರಣ ಚೆನ್ನಯ್ಯ ಉಣಲೆಂದು**

ಇಂತಹ ಸಂದರ್ಭದಲ್ಲಿ ಚೆನ್ನಯ್ಯ ಉಣಲೆಂದು ಮುಕ್ಕು ಜೋಳದಿಂದ ಅಡುಗೆ ತಯಾರಿ ಮಾಡಿ ತನ್ನ ಪತಿಗೆ ಬಡಿಸುವಳು. ಆಗ ಕಾಯಕವ ಮಾಡಿ ಹಸಿದಿದ್ದ ಚೆನ್ನಯ್ಯ ತನ್ನ ಹಸಿವಿನ ದಣಿವಾರಿಸಲು ಶಿವ ನನಗೆ ಇಂದು ಮುಗ್ಗುಜೋಳ ಕರುಣಿಸಿರುವನೆಂದು ಅದನ್ನೇ ಶಿವನಿಗರ್ಪಿಸುತ್ತಾನೆ. ಇವನ ಭಕ್ತಿಗೆ ಶಿವನು ಮೆಚ್ಚುತ್ತಾನೆ :

**ಮಸೆದಾಡಿ ಜಗದೊಳಗೆ ಹಸಿದಿರುವ ಶಿವನನ್ನು**
**ಹಸಿದಿರುವನೆಂದು ಕರೆಯದಕೆ । ಬೀಸತ್ತೊ**
**ಮಸಣದೊಳು ಇದ್ದು ಹಸುವಾರಿ**
**ಶಿವಶರಣ ಚೆನ್ನಯ್ಯ ಶಿವಗೆಡೆಯ ಮಾಡುದಕೆ**
**ಶಿವಗಾಯ್ತು ಹಸಿವು ಉಣ್ಣದಕೆ । ಅಂಬಲಿಯ**
**ಶಿವರೂಪ ತೋರಿ ಚೆನ್ನನಿಗೆ**

'ಹಸಿದಿರುವ ನಾನು ಮೊದಲು ಊಟ ಮಾಡುತ್ತೇನೆ' ಎಂದು ಶಿವನು ಮಾದರ ಚೆನ್ನಯ್ಯನು ಉಣ್ಣುವ ತಟ್ಟೆಯಲ್ಲಿ ಮೊದಲು ಉಂಡನು. ಇದರಿಂದ ಸಂತಸಗೊಂಡ ಚೆನ್ನಯ್ಯನು ಶಿವನನ್ನೇ ಭಜಿಸುತ್ತ ಹಲವು ದಿನ ಸಂತೋಷದಲ್ಲಿ ಕಳೆದನು. ಮರುದಿನವೇ ಮುಂಜಾನೆ ಕರಿಕಾಲ ಚೋಳರಸ ಶಿವನ ದರ್ಶನಕ್ಕೆ ವೈಭವಯುತವಾದ ವಸ್ತುಗಳೊಂದಿಗೆ ಎಡೆಯನ್ನು ನೀಡಿದನು. ಆದರೆ ಶಿವನು ಅದನ್ನು ಸ್ವೀಕರಿಸಲಿಲ್ಲ. ಇದರಿಂದ ಬೇಸರಗೊಂಡ ಚೋಳರಸನು ಕತ್ತಿಯಿಂದ ತನ್ನ ಕೊರಳನ್ನು ಕೊಯ್ದುಕೊಳ್ಳಲಿಕ್ಕೆ ಹೋದಾಗ ಶಿವನು ತಡೆದು ಭಕ್ತನಾದ ನಿನಗೆ ಇದು ಸರಿಯಾದುದಲ್ಲ ಎಂದು ಉಪದೇಶಿಸಿ ನಾನು ಬಡವನಾದ ಚೆನ್ನಯ್ಯನಲ್ಲಿ ಬಾಡೂಟ ಉಂಡಿಹೆನು ಅಂಬಲಿಯ ಕಡುಮಾತು. ಹಸಿವೆ ಹಿಂಗಿದೆ ಅಂತಹ ಊಟದ ರುಚಿಯ ಹೇಗೆ ಹೇಳಲಿ ಅದನ್ನು ನಾನೊಬ್ಬನೆ ಸವಿದೆ

ಆದರೆ ನೀನು ತಂದಿರುವ ಊಟ ಎಂತಹುದು ಎಂದು ಶಿವ ಪ್ರಶ್ನಿಸುತ್ತಾನೆ.

ಶಿವನುಂಡ ಚೆನ್ನಯ್ಯ ಶಿವಭಕ್ತನೆಲ್ಲಿಹನು
ಭವದೊಳಗೆ ನನ್ನ ರಾಜ್ಯದೊಳೆ । ನಿಜಹೌದೆ
ಶಿವನುಡಿಯ ಸತ್ಯವಿರಬಹುದೆ

ಎಂದು ಚೋಳರಸನು ಶಿವನನ್ನು ಪೂಜಿಸುತ್ತಿದ್ದ ಮಾದರ ಚೆನ್ನಯ್ಯನನ್ನು ಸೇವಕರ ಮೂಲಕ ಪತ್ತೆಹಚ್ಚಿದನು.

ಅರಸ ಚೋಳನೆ ಕೇಳು ಇರುತಿಹನು ಚೆನ್ನಯ್ಯ
ಹೊರಗೆ ಕೇರಿಯೊಳು ಮಾದಿಗನು । ಶಿವಭಕ್ತ
ಪರಿವಾರ ನುಡಿದು ಕೈಮುಗಿದು

ಅರಸನು ತುಂಬಾ ಸಂತಸಗೊಂಡು ಚೆನ್ನಯ್ಯನ ಬಳಿ ತನ್ನ ಪರಿವಾರದ ಜೊತೆ ಬರಲು ಪುರದ ಜನ ಮಾದಿಗ ಜನಕ್ಕೆ ಸೇರಿದ ಈ ಚೆನ್ನಯ್ಯ ಶಿವಶರಣನೆಂಬುದನ್ನು ತಿಳಿದು ಅಚ್ಚರಿಪಡುತ್ತಾ ಬರುವರು. ಆಗ ಅರಸನ ಆಗಮನದಿಂದ ದಿಗಿಲುಗೊಂಡ ಚೆನ್ನಯ್ಯ ಬೆರಗುಗೊಂಡು ರಾಜನು ಇವನಿಗೆ ಕೈಮುಗಿದ.

ನಡುಗುತಲಿ ಚೆನ್ನಯ್ಯ ಉಡುಉಡುಗಿ ಮನದೊಳಗೆ
ಬಿಡು ಅರಸ ಕಾಲ ನಿನ್ನಾಣೆ । ಎನ್ನಾಣೆ
ಹಡಿದಪ್ಪನಾಣೆ ಶಿವನಾಣೆ

ಅರಸ ಚೋಳನೆ ಕೇಳು 'ಹರಕ ಜಾತಿಯ ಮಾದ ತಿರುಕ ನನಗೇಕೆ ಈ ಉಪಚಾರ' ಎಂದು ಚೆನ್ನಯ್ಯ ಅರಸನನ್ನು ಪ್ರಶ್ನಿಸಿದ.

ಹರನೊಲಿದ ಜಾತಿಯೇ ವರಜಾತಿ ಜಗದೊಳಗೆ
ಮರೆಮಾತು ಏಕೆ ನಡೆಮೊದಲು । ಹೋಗೋಣ
ಹರನ ಬಳಿ ಇದನು ಅರಿಯುವುದಕ್ಕೆ

ಶಿವನ ಬಳಿ ಚೆನ್ನಯ್ಯ ಹಾಗೂ ಚೋಳರಸ ತೆರಳಲು, ಶಿವನು ಅರಸನನ್ನು ಕುರಿತು 'ಹೇಳಲಾರದ ಭಕ್ತಿ ಕೀಳೇನು ಕುಲದಲ್ಲಿ ಚೆನ್ನನದು । ನಡೆನುಡಿಯು ಮೂಳಾದ ಕುಲವೆ ಹೊಲೆಗುಲವು' ಎಂದು ನುಡಿವನು.

ಆಗ ಚೋಳರಸನು 'ತಾನು ಮೆಚ್ಚಿದೆನು ನಿನ್ನ ನಿಜಭಕ್ತಿಗೆ ನಿನ್ನ ಶಿವಭಕ್ತಿಗೆ' ಇದನ್ನು ಎಲ್ಲರಿಗೂ ತಿಳಿಸಲು ಈ ಜಗದೊಳಗೆ ಇಂದು ನಿರ್ಧಾರ ಮಾಡಿರುವೆನೆಂದು ಚೆನ್ನಯ್ಯನಿಗೆ ಹೇಳುತ್ತಾನೆ.

ಕರಿಕಾಲ ಚೋಳರಸ ಅರಿತು ಹೊಸಮತವನ್ನು
ಗುರುದೇವ ಎನಗೆ ಚೆನ್ನಯ್ಯ । ನೆಂದಿರಲು
ಶರಣ ಸಮರಸವ ಹೊಂದಿದನು

ಆಗ ಶಿವಲಿಂಗವು ಬೆಳಗಿ ಶಿವಕಾಂಚಿಯು ಪ್ರಸಿದ್ಧಿ ಪಡೆಯಿತು. ಕಾಂಚಿ ಶಿವಶರಣರಿಗೆ ನೆಲೆವೀಡಾಯಿತು. ಕೈಲಾಸವೇ ನಾಚುವಂತೆ ಕಾಂಚಿ ಶಿವಶರಣರ ಉಪಚಾರದಿಂದ ಮೆರೆಯಿತು.

ಜಾತಿಯೊಳು ಮಾದಾರನು ನೀತಿಯೊಳು ಶಿವಶರಣ
ಮಾತು ವಚನಗಳ ಚೆನ್ನಯ್ಯ । ಶಿವನುಂಡ
ಕೂತು ಎದೆಯೊಳಗೆ ಅಂಬಲಿಯ

ಹೀಗೆ ಮಾದರ ಚೆನ್ನಯ್ಯನ ಗುಣಗಾನವನ್ನು ಭಜಿಸುತ್ತಾ ಈ ಮೂಲಕ ಕರುಣೆಯಿಂದ ನಮ್ಮನ್ನು ಸದ್ಗತಿಯಲ್ಲಿ ನಡೆಸಿ ಒಳ್ಳೆ ಮಾರ್ಗದಲ್ಲಿ ಹರಸು ಎಂದು ಶರಣರು ಬೇಡುತ್ತಾರೆ.

"ಚೆನ್ನಯ್ಯ ಪ್ರಾಚೀನ ಶರಣಧರ್ಮದ ಪ್ರತಿಪಾದಕನೂ ತನ್ನ ಯುಗದ ಶಿವಭಕ್ತ ಜನಾಂತಃಕರಣದಲ್ಲಿ ಒಂದು ಜನಪರ ಸಾಂಸ್ಕೃತಿಕ ಚಳುವಳಿಯ ನೇತಾರನೂ ಆಗಿ ತನ್ನ ಪ್ರಬುದ್ಧ ಬದುಕನ್ನೆಲ್ಲ ಹಿಡಿಹಿಡಿಯಾಗಿ ಅದಕ್ಕೆ ಸಮರ್ಪಿಸಿದವನೆನಿಸುತ್ತಾನೆ. ಅಲ್ಲದೆ, ತಾನು ದುಡಿದು ತಂದಂಥ ಕೂಲಿನಾಲಿಯನ್ನು ದಾಸೋಹದ ಮೂಲಕ ಶರಣ ಧರ್ಮದ ಪುರೋಭಿವೃದ್ಧಿಗಾಗಿ ಸುರಿದದ್ದರಿಂದಲೇ ಪ್ರಾಚೀನ ಶರಣಧರ್ಮದ ಸಾವಿರ ವರ್ಷಗಳ ಸಾಂಸ್ಕೃತಿಕ ಜನಮನದ ಪರಂಪರೆಯಲ್ಲಿ ಚೆನ್ನಯ್ಯ ಒಬ್ಬ ಜಾನಪದ ನಾಯಕನಾಗಿರುವಂತೆಯೇ ನಾಡಿನ ಚರಿತ್ರೆಯಲ್ಲಿ ಒಂದು ಅಪೂರ್ವ ಅಧ್ಯಾಯವೂ ಆಗುವುದು ಎನಿಸುತ್ತದೆ".[೪]

'ಹರಳಯ್ಯನೆಂಬೋನು ನರನಲ್ಲ ಕಾಣಿರೊ
ಅವನು – ಶರಣರಿಗೆ ಶರಣ ಘನಶರಣ' ಎಂದು ಕೊಂಡಾಡಿಸಿಕೊಂಡಿರುವ 'ಘನಶರಣ ಹರಳಯ್ಯ' ಹೆಸರಿನ ಕಾವ್ಯ ಗಮನ ಸೆಳೆಯುವಂಥದ್ದು. "ಜನಪದರು ಹಾಡಿರುವ ಘನಶರಣ ಹರಳಯ್ಯ ಕಾವ್ಯ ಹಲವಾರು ವಿಭಿನ್ನ ವಿಚಾರಗಳ ನಿರೂಪಣೆಯಿಂದ ಕೂಡಿದುದಾಗಿದೆ. ಹರಳಯ್ಯ ಬಸವಣ್ಣನವರಿಂದ ಎರಡು ಶರಣಾರ್ಥಿಗಳನ್ನು ಸ್ವೀಕರಿಸಿದ್ದಕ್ಕೆ ಪ್ರತಿಯಾಗಿ ತನ್ನ ಅಂಗೋಪಾಂಗಗಳನ್ನೇ ಆಯುಧಗಳನ್ನಾಗಿ ಮಾಡಿಕೊಂಡು ತನ್ನ ಬಲತೊಡೆ ಮತ್ತು ತನ್ನ ಪತ್ನಿ ಕಲ್ಯಾಣಮ್ಮನ ಎಡತೊಡೆ ಚರ್ಮದಿಂದ ಪಾದರಕ್ಷೆಯನ್ನು ತಯಾರಿಸಿ ಅದನ್ನು ಬಸವಣ್ಣನವರ ಪಾದಗಳಿಗೆ ಮೆಟ್ಟಿಸಿ ತಮ್ಮ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಆಶಯ ಪ್ರೀತಿ ಮತ್ತು ಭಕ್ತಿಗಳೆಂಬ ಮೌಲ್ಯಗಳ ಪರಾಕಾಷ್ಠೆ ಎನಿಸುತ್ತದೆ. ಆ ಚರ್ಮದ ಚಂದದ ಚಪ್ಪಲಿಗಳನ್ನು ಚಿನ್ನ ಮತ್ತು ರತ್ನಗಳಿಂದ ಅಲಂಕರಿಸಿದ ಹರಳಯ್ಯ ಎಂದಿರುವುದು ಜನಪದ ಕವಿಯ ಭಾವಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಹರಳಯ್ಯ ಮತ್ತು ಕಲ್ಯಾಣಮ್ಮನವರು ಆ ಪಾದುಕೆಗಳನ್ನು ಹೊತ್ತುಕೊಂಡು ಬಸವಣ್ಣನವರ ಮಠಕ್ಕೆ ಬಂದು"[೫] 'ನಿಮಗೆ ಪಾದರಕ್ಷೆ ಮಾಡಿಕೊಂಡು ಬಂದಿರುವೆನೆನ್ನುತ್ತಾನೆ. ಅವನ್ನ ಗಮನಿಸಿದ ಬಸವಣ್ಣ ಇವು ನರಲೋಕದವರಿಗೆ ಸಲ್ಲುವಂಥವಲ್ಲ ಕೂಡಲಸಂಗಮಂಗೆ ಸಲ್ಲುವಂಥ ಪಾದರಕ್ಷೆ' ಎನ್ನುತ್ತಾನೆ.

ಬಸವಣ್ಣನವರ ನಡತೆಯನ್ನು ಗಮನಿಸಿದ ಹರಳಯ್ಯ 'ಆಸೆಯಾಗಿ ಮಾಡಿದ್ದು ಆನಂದವಾದ ಪಾದ್ರಾಕ್ಷ್ಯ ನನ್ನಾಸೆಗೆ ಮೋಸಮಾಡಬವುದ' ಎಂದು ಕೊರಗುತ್ತಾನೆ. ಕೂಡಲಸಂಗನಿಗೆ ನೀಡಬೇಕಾದ ಆ ಪಾದರಕ್ಷೆಗಳನ್ನ ದಟ್ಟಿಯ ಒಂದು ಮೂಲೆಯಲ್ಲಿ ಕಟ್ಟಿಕೊಂಡು ರಾಜಬೀದಿಯಲ್ಲಿ ಬರುವಾಗ ಬ್ರಾಹ್ಮಣ ಮದುವರಸ ಗಮನಿಸುತ್ತಾನೆ, ಬೇಡವೆಂದರೂ

ಬಯಸಿ ಅವುಗಳ ಮೇಲೆ ಕಾಲಿಡುತ್ತಿದ್ದಂತೆಯೇ ಅವು ಮಾಯವಾದವು; ಅವನ ಶರೀರದಲ್ಲಿ ಉರಿಯೋ ಉರಿ. ಅದನ್ನ ತಳಲಾರದೆ ತಣ್ಣೀರನ್ನು ತರಿಸಿ ಎರಚಿಕೊಳ್ಳುತ್ತಾನೆ. ಆದರೂ ಶಮನವಾಗಲಿಲ್ಲ. ನೀರು ತರಲು ಹೋಗುತ್ತಿದ್ದ ಗೌಡೀರಲ್ಲಿ ಒಬ್ಬಳು ದೊಂಬರಾಟ ನೋಡುತ್ತ ಮೈಮರೆತು ನಿಂತಿದ್ದಳು. ನಂತರ ತಾನು ಬಂದ ಉದ್ದೇಶ ನೆನಪಾಯಿತು. ದೂರದ ನೀರು ತರಲು ಹೋದರೆ ತಡವಾಗುತ್ತದೆಂದು ಭಾವಿಸಿ ಹತ್ತಿರದಲ್ಲಿದ್ದ ಹರಳಯ್ಯ ಚರ್ಮ ಹದ ಮಾಡಲು ಕರೆಬಾನಿಯ ನೀರನ್ನು ತಂದು ಮದುವರಸನ ಮೇಲೆ ಸುರಿದದ್ದೇ ತಡ ಆತನ ಉರಿಯಲ್ಲಾ ಮಾಯವಾಯಿತು. ಆತನಿಗೆ ಸೋಜಿಗವೋ ಸೋಜಿಗ! ವಾಸ್ತವಸಂಗತಿಯನ್ನ ಆಕೆಯಿಂದ ತಿಳಿಯುತ್ತಾನೆ.

**ಆ ಹರಳಯ್ಯ ನಿಂದೀಸಿ ನಾಕೆಟ್ಟು ಬೆಂದೆನಲ್ಲ**
**ಈಗವನ ಮನೆಯ ಸಿರುತೀರ್ಥ**
**ಈಗವನ ಮನೆಯ ಸಿರುತೀರ್ಥ ನನ ಮಂಡೆಯ ಮೇಲೆ**
**ಬೀಳಲಾಗಿ ಪಾವನವಾಯ್ತು ನನರುದಯವು ।**

ತನ್ನ ಮನವನ್ನ ಪರಿವರ್ತಿಸಿಕೊಂಡ ಮದುವರಸನು ಹರಳಯ್ಯನ ಸಂಬಂಧ ಬೆಳೆಸಲು ಪ್ರಯತ್ನಿಸುತ್ತಾನೆ. ಈ ಮನಸ್ಥಿತಿಯೇ ಕಲ್ಯಾಣ ಕ್ರಾಂತಿಗೆ ಕಾರಣವಾಗಿಬಿಡುತ್ತದೆ.

"ಬಹುತೇಕ ಕಾವ್ಯಗಳಲ್ಲಿ ಮದುವರಸನ ಮಗಳಿಗೂ ಹರಳಯ್ಯನ ಮಗನಿಗೂ ವಿವಾಹವಾದಂತೆ ತಿಳಿಸಿದರೆ ಈ ಕಾವ್ಯ ಹರಳಯ್ಯನ ಮಗಳು ಹಾಗೂ ಮಧುವರಸನ ಮಗನ ನಡುವೆ ವಿವಾಹ ಸನ್ನಾಹ ನಡೆದಂತೆ ತಿಳಿಸುತ್ತದೆ. ಜೊತೆಗೆ ವರ್ಣಸಂಕರದ ಪರಿಣಾಮವನ್ನು ಊಹಿಸಿ ಹರಳಯ್ಯ ಈ ಮದುವೆಯನ್ನು ನಿರಾಕರಿಸಿದಂತೆ ಹೇಳಿರುವುದು ಹೊಸ ವಿಚಾರವಾಗಿದೆ. ಅಲ್ಲದೆ ಹರಳಯ್ಯನ ಮಗಳು ಅರುಂಧತಿ ನಕ್ಷತ್ರವಾದಳು ಎಂದು ಹೇಳುವುದೇ ಕಾವ್ಯದ ಮೂಲ ಆಶಯವಾಗಿದ್ದು ಅದರ ಮೇಲೆ ಹೆಚ್ಚು ಒತ್ತುಕೊಟ್ಟಂತೆ ಕಂಡುಬರುತ್ತದೆ. ಆನಂತರ ಬ್ರಾಹ್ಮಣ ವರನನ್ನು ಮದುವೆಯಾಗಲೊಲ್ಲದೆ ಹರಳಯ್ಯನ ಮಗಳು ಮದುವೆ ಮಂಟಪದಿಂದ ಮಾಯವಾದಂತೆ ಚಿತ್ರಿಸುವುದು ಇದಕ್ಕೆ ಪೂರಕವಾಗಿದೆ. ಈ ಸಂಗತಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ವಧುವರರ ಸಮ್ಮತಿ ಪಡೆಯದೆ ಆತುರವಾಗಿ ಮದುವೆಗೆ ಕಾರ್ಯ ಯೋಜನೆ ರೂಪಿಸಿರುವಂತೆ ಕಂಡುಬರುತ್ತದೆ. ಇದು ಯಾರದೋ ಒತ್ತಾಯ-ಆಪೇಕ್ಷೆಗಳಿಗಾಗಿ ಏರ್ಪಟ್ಟು ವಿಫಲವಾದಂತೆ ಅನ್ನಿಸುತ್ತದೆ. ಹೀಗೆ ಮದುವೆ ಜರುಗದೆ ಹೋದಾಗ ಬಿಜ್ಜಳನಲ್ಲಿ ಮಧುವರಸ ದೂರು ಸಲ್ಲಿಸಿ ಬಸವಣ್ಣನವರನ್ನು ಆರೋಪಿಯನ್ನಾಗಿಸಿರುವುದು ವಿಚಿತ್ರವೆನಿಸುತ್ತದೆ. ಅನಂತರದ ಪವಾಡ ಸದೃಶ ಘಟನೆಗಳ ಮೂಲಕ ಸಂದರ್ಭವನ್ನು ಸಾಪೇಕ್ಷವಾಗಿ ಮುಕ್ತಾಯಗೊಳಿಸಲಾಗಿದೆ. ಒಟ್ಟಾರೆ ಈ ಬಗೆಯ ಚಿತ್ರಣ ಹಲವು ಪ್ರಶ್ನೆಗಳನ್ನು ಎತ್ತುತ್ತದೆ. ಈ ಕುರಿತಾದ ಇನ್ನಷ್ಟು ಸಂಶೋಧನೆಗೆ ಇದು ಪ್ರೇರಣೆ ನೀಡುತ್ತದೆ. ಅಲ್ಲದೆ ಇದು ಗ್ರಂಥಸ್ಥ ಕಥಾವಸ್ತುವಿಗಿಂತ ಭಿನ್ನಮುಖಗಳನ್ನು ಹೊಂದಿದ್ದು ಮತಪ್ರಚಾರದ ಸೋಂಕು ಇದರಲಿಲ್ಲ. ಮಾನವ ಸಹಜ ಸ್ವಭಾವದ ನಡಿಗೆ ಈ ಕಥನ ಗೀತೆಯಲ್ಲಿದೆ. ಪವಾಡದ ಗುಣಗಳು ಮನೆ ಮಾಡಿವೆ. ಮಡದಿ ಕಲ್ಯಾಣಮ್ಮನ ಕುರಿತ ಕೆಲ ವಿವರಗಳು ಪೌರಾಣಿಕ ಪವಾಡಗಳ ನೆಲೆಯಲ್ಲಿ ಕಾಣಿಸಿಕೊಳ್ಳುತ್ತವೆ. ಅಲ್ಲದೆ ಶರಣೆಯರ ವಿಶೇಷ ಉಲ್ಲೇಖ ಹಾಗೂ ಶರಣೆಯರ ಕಾಯಕನಿಷ್ಠೆಯನ್ನು ವಿಶೇಷವಾಗಿ ಹೇಳಿರುವುದು ಇಲ್ಲಿ ಗಮನ ಸೆಳೆಯುತ್ತದೆ. ಎಲ್ಲಕ್ಕೂ ಹೆಚ್ಚಾಗಿ ಬಸವಣ್ಣನವರ ಇಲ್ಲಿನ ವರ್ತನೆಗಳು ಹೆಚ್ಚು ಮಾನವೀಯವಾಗಿದ್ದು, ದಮನಿತ ವರ್ಗಗಳನ್ನು ಉನ್ನತಿಗೊಳಿಸುವ ಸಹಜ ಸ್ವಭಾವಕ್ಕೆ ಸಾಕ್ಷಿಯಾಗುತ್ತಾರೆ".೬

ಬಸವಣ್ಣ ಹರಳಯ್ಯನ ಸಂಬಂಧವನ್ನ ಹಂತಿಯ ಪದಗಳೂ ವರ್ಣಿಸಿವೆ. ಹರಳಯ್ಯ ಬಸವಣ್ಣನಿಗೆ ಕೊಡಲು ಹೊಸಜೋಡುಗಳನ್ನು ಸಿದ್ಧಪಡಿಸಿ ತರುತ್ತಾನೆ. ಆಗ ಬಸವಣ್ಣ ಆತನನ್ನು ತಬ್ಬಿಕೊಂಡು ಮುದ್ದಾಡುತ್ತಾನೆ. ಅಸ್ಪೃಶ್ಯ ಕುಲದ ನನ್ನನ್ನು ಮುಟ್ಟಬೇಡ ಎನ್ನುತ್ತಾನೆ ಹರಳಯ್ಯ :

**ಮುಟ್ಟದರು ಬಸವೇಶ ಕೆಟ್ಟ ಹೊಲೆಯನು ನಾನು**
**ಬಟ್ಟಬಯಲಾಗಿ ಹೋಗಲೀ ನಿಮ್ಮಿಂದೆ**
**ಸುಟ್ಟು ಬೂದ್ಯಾಗಿ ಬೀಳುತಲಿ**

ಆ ಮಾತಿಗೆ ನೊಂದ ಬಸವಣ್ಣ ಹರಳಯ್ಯನ ಮನಸ್ಸಿನ ಅನುಮಾನವನ್ನು ಹೋಗಲಾಡಿಸುತ್ತಾನೆ.

**ಹೊಲೆಯಲಲ್ಲದೆ ಲೋಕ ತಲೆಯಲ್ಲಿ ಹುಟ್ಟುವುದೆ !**
**ಹೊಲೆಯ ಎಣಿಸಿದರೆ ಕುಲವುಂಟೆ – ಶರಣರಿಗೆ**
**ಹೊಲಬಳಿದು ಬೇರೆ ಕುಲವುಂಟೆ ?**

ಹರಳಯ್ಯ ಮಾಡಿರುವ ಜೋಡುಗಳನ್ನು ಮೆಟ್ಟುವ ಅರ್ಹತೆಯಾದರೂ ನನಗೆಲ್ಲಿದೆ? ಅವು ಶಿವನಿಗೆ ಸಲ್ಲಬೇಕಾದಂಥವು ಎನ್ನುವ ಬಸವಣ್ಣನ ಮಾತುಗಳು ಅತ್ಯಂತ ಮಹತ್ವವನ್ನು ಪಡೆಯುತ್ತವೆ :

**ಶಿವ ಕಳೆಯ ಈ ಜೋಡು ಜವನ ದಾಡೆಗಳಯ್ಯ**
**ಭವದೊಳಗೆ ಮೆಡುವ ಜನವುಂಟೆ – ಹರಳಯ್ಯ**
**ಶಿವಗೊಪ್ಪಿಸೆನ್ನ ಕ್ಷಮಿಸೆಂದ.**

ಪಿ.ಕೆ. ರಾಜಶೇಖರ ಅವರು ಸಂಗ್ರಹಿಸಿದ 'ಘನಶರಣ ಹರಳಯ್ಯ'ದಲ್ಲಿ ಮಧುವರಸನ ಮೈಯ ಉರಿಯನ್ನು ಕಡಿಮೆ ಮಾಡಲು ಹರಳಯ್ಯ ಕರೆಬಾನಿಯ ನೀರನ್ನು ಬಳಸಿದ ಚಿತ್ರಣವಿದ್ದರೆ ರೈತಾಪಿಗಳು ಹಾಡಿದ ಹಂತಿಯ ಹಾಡುಗಳಲ್ಲಿ ಹರಳಯ್ಯನ ಮನೆಯ ಬಚ್ಚಲ ನೀರಿನಿಂದ ಮದುವರಸನ ಮೈಯುರಿ ನಿಲ್ಲುತ್ತದೆಂಬ ಚಿತ್ರಣವಿದೆ. ಅಲ್ಲದೆ ಶಿವಶರಣ ಹರಳಯ್ಯನನ್ನು ಮನದುಂಬಿ ಹಾಡಿರುವ ರೈತಾಪಿಗಳ ಹಾಡು ಹೀಗಿವೆ :

**ಹರಳ ಬಳಸಿದ ನೀರು ಹರಿದು ಬಚ್ಚಲಗುಂಡಿ**
**ಮೆರೆಯುವುದು ಇಂದು ಕಲ್ಯಾಣ-ಕೇರಿಯೊಳು**
**ಹರಳಯ್ನ ಗುಂಡಿ ಶಿವತೀರ್ಥ**

ಹರನ ಶಿಖರದ ಮೇಲೆ ಸಿರಿಗಂಧ ಗಿಡಹುಟ್ಟಿ
ಕಿರೀಟದೊಳು ಎರಡು ಗಿಳಿಕೂತು ಹಾಡಿದವು
ಹರಳಯ್ಯನವರ ಹಳಿಗತೆಯ

ಶರಣು ಶರಣೆಂಬುವೆವು ಹರಣ ಹಾರುವತನಕ
ಕರುಣೆಸಿರಿ ಶರಣ ಹರಳಯ್ಯ – ನಮಗಿನ್ನು
ಹರಸಿರಿ ಹುಲುಸು ಹುಲುಲ್ಲಿಗೊ

ಲೋಕಕಲ್ಯಾಣಗಳೇ ಪ್ರಮುಖ ಗುರಿಯಾಗಿಸಿಕೊಂಡು ಆ ನಿಟ್ಟಿನಲ್ಲಿ ಕಾರ್ಯೋನ್ಮುಖರಾದವರನ್ನು ರೈತಾಪಿಗಳು ಗೌರವದಿಂದ ಕಂಡಿದ್ದಾರೆ. ಬಸವಣ್ಣನಂಥ ಶರಣರನ್ನು ಕುರಿತು ಹಾಡುವಾಗಲೆಲ್ಲಾ ದನಿ ಎತ್ತಿರುವುದನ್ನು ಗಮನಿಸಬಹುದು.

ಜೀಯ ಹೊಸಮತಕೆ ಶಿವಭಕ್ತ – ಸಾರುದಕೆ
ರಾಯ ಜೀವನದ ಹೊಸನುಡಿಗೆ

ಹೊಲೆಯ ಮಾದಿಗರೆಂಬ ಬಲೆಯಾತ ಕಿತ್ತೊಗೆದ
ಬಲಿರೆ ಬಸವಯ್ಯ ಬಸವರಸ – ನಿನ್ನುಸಿರು
ನೆಲೆಯಾತು ನಿತ್ಯ ಜನಪದಕೆ

ಹಂತಿಯದು ಹಾಡೆಂದು ಪಂತ ಕಟ್ಟಲುಬೇಡ
ಕಂತಿ ಕರಗುವುದು ನಿಂತಲ್ಲಿ – ಬಸವಯ್ಯ
ಕುಂತು ಎದೆಯೊಳಗೆ ಹಾಡಿಸಿದ

ಬಸವಣ್ಣ ಕಲ್ಯಾಣಪಟ್ಟಣದ ಬೀದಿಯಲ್ಲಿ ಬರುತ್ತಿರುವಾಗ ಶಿವನಾಗಮ್ಮನ ಮನೆಯಲ್ಲಿ ಶಿವಪೂಜೆ ನಡೆಯುತ್ತಿತ್ತು. ಕರಡೆ, ಜಾಗಟೆ, ಗಗ್ಗರ, ಗಂಟೆ ಮುಂತಾದ ವಾದ್ಯಗಳ ಶಬ್ಧ ಕೇಳಿಸಿಕೊಂಡು ಆ ಪೂಜೆಗೆ ಹಾಜರಾದ ಬಸವಣ್ಣನವರನ್ನು ಶಿವನಾಗಮ್ಮ ಪ್ರೀತಿಯಿಂದ ಬರಮಾಡಿಕೊಂಡು ಪಾದಪೂಜೆ ಮಾಡಿ ಬೀಳ್ಕೊಟ್ಟಳು. ಇದನ್ನು ಗಮನಿಸಿದ ಮಂಚಣ್ಣ ಬಿಜ್ಜಳನಲ್ಲಿಗೆ ಬಂದು ದೂರು ನೀಡಿದ.

ಹೊಲೇರ ಶಿವನಾಗಮ್ಮನ ಮಠದಲ್ಲಿ ಶಿವಪೂಜೆ
ನಿಮ್ಮ ಪರದಾನಿಗಳಿಗೆ ತರವೇನು !
ಇವರು ವಿರಕ್ತರು ಸ್ವಾಮಿ ಮೇಲಾಗಿ ಶಿವಭಕ್ತ್ರು
ಭವಿಗಳ ಮನೆಗೆ ಇವ್ರು ಹೋಗಬವುದ !

ಮಂಚಣ್ಣ ಹೇಳಿದ ಈ ವಿಷಯವನ್ನು ಬಿಜ್ಜಳ ಬಸವಣ್ಣನಲ್ಲಿ ಖಚಿತಪಡಿಸಿಕೊಳ್ಳುತ್ತಾನೆ. ಅಂಥವರ ಮನೆಗೆ ಹೋಗಬಹುದೆ ಎಂದು ಮಂಚಣ್ಣ ಪ್ರಶ್ನಿಸಿದ್ದಕ್ಕೆ 'ಶಿವಭಕ್ತರಿಗೆ ಭಿನ್ನವಿಲ್ಲ ಬೇದವಿಲ್ಲ ।

'ಇದರಿಂದ ತೊಂದರೆ ನಿಮಗೇನು?' ಎನ್ನುತ್ತಾನೆ. ಕುಪಿತಗೊಂಡ ಮಂಚಣ್ಣ 'ನಮ್ಮ ಮೈಯಲ್ಲಿ ರಕುತ ಅವಳ ಮೈಯಲ್ಲಿ ಹಾಲು ತುಂಬಿದೆಯೇ' ಎಂದು ಕೇಳುತ್ತಾನೆ. ಬಸವಣ್ಣ ನಿಜವೆನ್ನುತ್ತಾನೆ. ಮಂಚಣ್ಣನ ಕೋರಿಕೆಯಂತೆ ಪರೀಕ್ಷಿಸಲು ಬಸವಣ್ಣ, ಶಿವನಾಗಮ್ಮನ್ನ ಬಿಜ್ಜಳನ ಆಸ್ಥಾನಕ್ಕೆ ಬರಮಾಡಿಕೊಳ್ಳುತ್ತಾನೆ. ನಾಗಮ್ಮನ ಕೈಯನ್ನ ಹಿಡಿದು ಕಿರುಬೆರಳನ್ನು ಹಿಂಡುತ್ತಾನೆ. ಹಿಂಡಿದಾಗ ನೊರೆಹಾಲು ಕಂಡ ಮಂಚಣ್ಣ, ಅವಳ ಸತ್ಯವನ ಮೆಚ್ಚುತ್ತಾರೆ. ಒಟ್ಟಾರೆ ಸತ್ಯಶರಣೆ ಶಿವನಾಗಮ್ಮನನ್ನು ಕುರಿತ ಜನಪದ ಕಾವ್ಯದಲ್ಲಿ ಬಸವಣ್ಣವರ ದಲಿತನಿಷ್ಠೆ ಮತ್ತು ಸತ್ಯಶರಣೆ ಶಿವನಾಗಮ್ಮನ ಶ್ರೇಷ್ಠತೆ ಇವೆರಡೂ ಅಭಿವ್ಯಕ್ತಗೊಂಡಿರುವುದನ್ನು ಗಮನಿಸಬಹುದು.

ಪಿ.ಕೆ. ರಾಜಶೇಖರ ಅವರು ಸಂಪಾದಿಸಿಕೊಟ್ಟಿರುವ 'ಜನಪದ ಶರಣ ಕಾವ್ಯಗಳು'ನಲ್ಲಿ ಹೊಲೇರ ಹೊನ್ನಯ್ಯನ ಹೆಸರಿನಲ್ಲಿ ಎರಡು ಕಾವ್ಯಗಳಿವೆ. ಅದರಲ್ಲಿ 'ಹೊಲೇರ ಹೊನ್ನಯ್ಯ' ೧ನೇ ಭಾಗದಲ್ಲಿನ ಹೊನ್ನಯ್ಯ ದಲಿತಶರಣ. ಇವನನ್ನು ಕುರಿತ ಕಾವ್ಯದಲ್ಲಿ ಬಡಗಿಯವನ ಮಗಳು ನೀರಿಗಾಗಿ ಬಾವಿಯ ಬಳಿ ಬರುತ್ತಾಳೆ. ನೀರು ತೆಗೆದುಕೊಂಡು ಹಿಂತಿರುಗುವಾಗ ಹೊಲೇರ ಹೊನ್ನಯ್ಯ ಅವಳನ್ನು ತಡೆದು ಎಲೆಯಡಿಕೆಯನ್ನು ಅವಳ ಬಾಯಿಗೆ ಇಡತೊಡಗುತ್ತಾನೆ. ಅದರಿಂದ ಅವಳು ಕೋಪಗೊಂಡು ಮನೆಗೆ ಬಂದು ಮಲಗಿಬಿಡುತ್ತಾಳೆ. ಇವಳ ಕೋಪಕ್ಕೆ ಕಾರಣ ತಿಳಿದ ತಂದೆ ಹೊಲೆಯರ ವಂಶವನ್ನೇ ಇಲ್ಲದಂತೆ ಮಾಡುವೆನೆಂದು ಹರತೆ ಹೊಡಕೊಂಡು ಬರುತ್ತಾನೆ. ಆಗ ಹೊಲೆಯ ಹುಡುಗ ತಪ್ಪಿಸಿಕೊಂಡು ಓಡತೊಡಗುತ್ತಾನೆ. ಸಮೀಪದಲ್ಲಿ ಬಟ್ಟೆ ಒಗೆಯುತ್ತಿದ್ದ ಮಡಿವಾಳ ಮಾಚಯ್ಯನ ಬಳಿ ಬಂದು ರಕ್ಷಣೆ ಪಡೆಯುತ್ತಾನೆ. ಬಡಗಿ ಹೊನ್ನಯ್ಯನನ್ನು ಹುಡುಕಿಕೊಂಡು ಬರುತ್ತಾನೆ. 'ಆತನನ್ನು ನಾನು ಕಾಣೆ ತನ್ನ ಮಗನನ್ನು ಬಾನಿ ದಬ್ಬಾಕಿ ಮಡಗಿರುವೆ' ಎನ್ನುತ್ತಾನೆ ಮಡಿವಾಳ. ಆದರೆ ಬಡಗಿಗೆ ಅನುಮಾನ ಬಂದು ಹೀಗೆಂದ :

ನಿನ್ನ ಮಗನಾದರೆ ನಿನ್ನೊಂದಿಗುಣಬೇಕು
ನಿನ್ನ ಮಡದೀಯ ಎದೆಯಾಲೊ ।
ನಿನ್ನ ಮಡದೀಯ ಎದೆಯಾಲು ಕುಡಿದಾರೆ
ಬುಟ್ಟೋಯ್ತೀನಿ ನಾನು ಮಡಿವಾಳ

ಅದೇ ರೀತಿ ಮಡಿವಾಳ ಆ ಹುಡುಗನೊಂದಿಗೆ ಊಟ ಮಾಡುತ್ತಾನೆ. ಅವನ ಹೆಂಡತಿ ಹಾಲು ಕುಡಿಸುತ್ತಾಳೆ. ಇದನ್ನು ಕಂಡು ಬಡಗಿ ತೆಪ್ಪಗೆ ಹಿಂದಿರುಗುತ್ತಾನೆ. ಅಂದಿನಿಂದ ಆ ಹುಡಗನನ್ನು ಮಾಚಪ್ಪ ಸಾಕುತ್ತಾನೆ. ಕತ್ತೆ ಕಾಯುತ್ತ ಎದೆಬಡಿದು ಹರೆ ಬಡಿಯುವುದನ್ನು, ಕಿನ್ನರಿ ನುಡಿಸುವುದನ್ನು ಕಲಿಯುತ್ತಾನೆ. ಕಷ್ಟದಲ್ಲಿ ಸಿಲುಕಿದವನನ್ನು ಕಾಪಾಡುವ ಬಡಗಿ ದಂಪತಿಗಳು ಮಾನವೀಯತೆಯ ಸಾಕಾರವಾಗಿದ್ದಾರೆ. ವಾದ್ಯ ನುಡಿಸುವ ಕಲೆಯಲ್ಲೇನೋ ಹೊಲೆಯರ ಹುಡುಗ ನಿಪುಣನಾಗಿದ್ದ. ಆದರೆ ವಾದ್ಯ ನುಡಿಸದೆ ಶಿವಪಾರ್ವತಿಯರ ಮದುವೆ ನಡೆಯುವಂತಿಲ್ಲ. ಅದಕ್ಕೆ ಆ ಹುಡುಗನನ್ನು ಹುಡುಕುತ್ತಾರೆ. ಕೊನೆಗೆ ಆತ ಶಿವಪಾರ್ವತಿಯರ ಮದುವೆಗೆ ಆನೆಯ ಮೇಲೆ ವಾದ್ಯಗಳನ್ನು ತುಂಬಿಕೊಂಡು ಹೋಗುತ್ತಿರುವಾಗ ೧೨ ಕಿನ್ನರಿ ಬಾರಿಸುತ್ತಿರುವಾಗ ಪೀಪಿ ಬಾಯಿಂದ ಜಾರಿ ಕೆಳಕ್ಕೆ ಬೀಳುತ್ತದೆ. ಅದನ್ನ ಹಜಾಮರ ಹುಡುಗ ತೆಗೆದುಕೊಳ್ಳುತ್ತಾನೆ. ಕೈಯಲ್ಲಿನ ಕುಡ ಕೆಳಕ್ಕೆ ಬಿದ್ದದ್ದನ್ನು ಮಾದಿಗರ ಹುಡುಗ ಪಡೆದ. ಉಳಿದ ೧೦ ವಾದ್ಯಗಳೊಡನೆ ಹೊಲೇರ ಹುಡುಗ ಹೋಗುತ್ತಾನೆ. ಶಿವಪಾರ್ವತಿ ಮದುವೆ ಅದ್ದೂರಿಯಾಗಿ ನಡೆಯುತ್ತದೆ.

ಹೊಲೆಯರ ಸೃಷ್ಟಿಯ ಕುಲಪುರಾಣವನ್ನು ವಿವರಿಸುವ ಭಾಗವಿದೆ. "ಶಿವಪಾರ್ವತಿಯರ ಮನೆಯಲ್ಲಿ ಕಾಮಧೇನುವನ್ನು ಕಾಯ್ದುಕೊಂಡಿದ್ದ ಹೊಲೆಮಗ ಕಾಮಧೇನುವಿನ ಹಾಲುಕಾಯಿಸಿದ್ದ ಪಾತ್ರೆಯ ಸೀಕಿನ ರುಚಿಗೆ ಮರುಳಾಗಿ ಕಾಮಧೇನುವನ್ನ ತಿನ್ನಬಯಸಿದ. ಅದಕ್ಕಾಗಿ ಕಾಮಧೇನುವನ್ನು ಕೊಂದ. ಅದನ್ನ ನಾಲ್ಕು ಪಾಲು ಮಾಡಿ ಒಂದು ಪಾಲು ಬೇಡರ ಹುಡುಗನಿಗೆ, ಒಂದು ಪಾಲು ತುರುಕರ ಹುಡುಗನಿಗೆ, ಒಂದು ಪಾಲು ಮಾದಾರ ಹುಡುಗನಿಗೆ ಕೊಟ್ಟು ತಾನೊಂದು ಪಾಲು ಹೊತ್ತುಕೊಂಡು ಬೋರೆ ಹತ್ತಿರಕ್ಕೆ ಬಂದ. ಆಗ ಮಳೆ ಬಂತು. ಅಲ್ಲೊಂದು ಗುಡಿಯಿತ್ತು. ತುರುಕರ ಹುಡುಗ ಹಾಗೂ ಬೇಡರ ಹುಡುಗ ಗುಡಿ ಒಳಕ್ಕೆ ಹೋದರು. ಉಳಿದಿಬ್ಬರು ಗುಡಿಯ ಹೊರಗಡೆ ಉಳಿದರು. ಆ ಸಮಯಕ್ಕೆ ಶಿವಪಾರ್ವತಿಯರು ಅಲ್ಲಿಗೆ ಬಂದರು. ಅವರನ್ನು ನೋಡಿದ ಮಕ್ಕಳು ಓಡೋಡಿ ಹೋಗಿ ಎಡಕ್ಕೊಬ್ಬ ಬಲಕ್ಕೊಬ್ಬ ತಬ್ಬಿಕೊಂಡರು. ಎಡಕ್ಕೆ ನಿಂತ ಮಾದಾರ ಹುಡುಗ ಎಡಗೈಯವನಾದ; ಬಲಕ್ಕೆ ನಿಂತ ಹೊಲೆಯರ ಹುಡುಗ ಬಲಗೈಯವನಾದ. ನಾಲ್ಕು ಜನ ಮಕ್ಕಳನ್ನು ಆಶೀರ್ವದಿಸಿ ಕಳಿಸಿಕೊಟ್ಟರು. ಅವರು ಲೋಕಕ್ಕೆ ಪಡಿ ಅಳೆಯುತ್ತ ಮುಂದೆ ಮುಂದೆ ಹೊರಟರು".[೭]

ಹೊಲೇರ ಹೊನ್ನಯ್ಯನ ಮಗ ತನಗೂ ನೀಡಿ ಎಂದು ಕೇಳಿಕೊಳ್ಳುತ್ತಾನೆ. ನೀತುಗೌಡನ ಹತ್ತಿರ ಪಡೆಯಿರಿ ಎಂದು ಹೇಳಿ ಮುಂದೆ ಸಾಗುತ್ತಾರೆ. ಅಲ್ಲಿಗೆ ಬಂದ ಬಸವಣ್ಣ ಮುದ್ದೇಗೌಡನ ಮೂಲಕ ಹೊನ್ನಯ್ಯನ ಮಗನಿಗೆ ಪಡಿಯನ್ನು ಕೊಡಿಸಲು ಸೂಚಿಸುತ್ತಾನೆ. 'ಲೋಕಕ್ಕೆ ಪಾಲು ಕೇಳುವಾಗ ನಾನು। ಹೊನ್ನಯ್ಯನನ್ನು ಮರೆಯಾದುಂಟ' ಎನ್ನುತ್ತಾನೆ. ಬಸವಣ್ಣನಿಗೆ ಸಂತಸ ಶರಣ ಮುದ್ದಯ್ಯ ಹೊನ್ನಯ್ಯನ ಜೊತೆಯಲ್ಲಿ ಕಲ್ಯಾಣ ಪಟ್ಟಣಕ್ಕೆ ಹೋದರು. ಹೊನ್ನಯ್ಯ ಬರುವುದನ್ನು ನೋಡಿ ಎಲ್ಲರೂ ಸಂಭ್ರಮ ಪಡುತ್ತಾರೆ.

'ಎಲ್ಲ ಕುಲಸ್ತ್ರೂಗೂ ಕಾಲ್ನಡಿಗೆಯಾದರೆ ನಮ್ಮ ಕುಲದೋರಿಗೆ ಪಟ್ಟದಾನೆ' ಎಂದು ಸಂಭ್ರಮಪಡುತ್ತಾನೆ. ಆದರೆ ಆನೆ ಮೇಲೆ ಕುಳಿತು ವಾದ್ಯ ನುಡಿಸುತ್ತಿದ್ದ ಈ ಕಲ್ಯಾಣ ಪಟ್ಟಣದೊಳಗೆ ಹೋಗಲು ಅವಕಾಶವಾಗಲಿಲ್ಲ. ಇದೇ ಕಾರಣದಿಂದಲೋ ಏನೋ ಮದುವೆಗಳಲ್ಲಿ ಹೊನ್ನಯ್ಯನ ಕುಲದವರು ಮದುವೆ ಮಂಟಪದೊಳಗೆ ಹೋಗಲು ಅವಕಾಶವಂಚಿತರಾದರಂತೆ. "ಇದು ಕಾರ್ಯಕಾರಣ ಸಂಬಂಧ ಹೇಳುವ ಕತೆಯಂತೆ ಕಂಡರೂ ಬಸವಣ್ಣನವರ ಕಾಲದಲ್ಲೇ ಕಲ್ಯಾಣಪಟ್ಟಣದಲ್ಲೂ ಇದ್ದಿರಬಹುದಾದ ಜಾತೀಯತೆಯನ್ನು ಕಾವ್ಯ ಸೂಚಿಸುತ್ತಿರುವಂತಿದೆ. ಯಾರೊಬ್ಬರಿಗೂ ಅಹಂಕಾರ ಸಲ್ಲ ಎಂಬ ನೀತಿಯೂ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ".

ಇನ್ನೊಂದು ಕಾವ್ಯದಲ್ಲಿನ ಹೊಲೇರ ಹೊನ್ನಯ್ಯ ಮಹಾನ್ ಕಲಾವಿದ. ಶಿವಪಾರ್ವತಿ ಮದುವೆಗೆ ಕಲಾವಿದನ ಅಪೇಕ್ಷೆಯಂತೆ ಆತನನ್ನು ಆನೆಯ ಮೇಲೆ ಬರಲು ತಿಳಿಸಲಾಯಿತು. ಅದೇ ರೀತಿ ಬಂದ. ಮಂಚಣ್ಣ ಬಿಜ್ಜಳನ ಬಳಿಗೆ ಬಂದು ವರ್ಣಸಂಕರದ ಮದುವೆ ವಿಷಯ ತಿಳಿಸಿದ. ಆತನ ಅನುಮಾನವನ್ನು ಬಸವಣ್ಣ 'ಶರಣರು ಶರಣರ ಜೊತೆ ಸಮ್ಮಂದ ಮಾಡಿದರದಕೆ ದೋಷವಿಲ್ಲ' ಎಂದ. ಇದಕ್ಕೆ ಕೋಪಗೊಂಡ ಬಿಜ್ಜಳ 'ಬ್ರಾಮಣ ಮಾದಾರ ಒಂದೇ ಆಗುವುದು । ಯಾವ ಶಾಸ್ತ್ರದಲಿ ಹೇಳಿರಪ್ಪ' ಎಂದು ಮದುವೆಯನ್ನು ನಿಲ್ಲಿಸಲು ಹೇಳಿದ. ಆಗ ಬಸವಣ್ಣ ಅಧಿಕಾರ ಬಿಟ್ಟು ಹೋದರು. ಆ ಜಾಗಕ್ಕೆ ಕೊಂಡುಗ ಮಂಚಣ್ಣ ಬಂದು ಹರಳಯ್ಯ-ಮದುವರಸನನ್ನು ಆನೆಯ ಕಾಲಿನಿಂದ ತುಳಿಸುವ ಶಿಕ್ಷೆ ವಿಧಿಸಿದ. ಆನೆ ಅವರನ್ನು ಶಿಕ್ಷಿಸುವ ಬದಲಿಗೆ ಕೊಂಡುಗ ಮಂಚಣ್ಣನನ್ನೇ ತನ್ನ ಸೊಂಡಿಲಿನಿಂದ ಬಾಚಿ ಎತ್ತಿಕೊಂಡು 'ಬಟ್ಟೆ ಒಗೆಯುವಂತೆ ಒಗೆಯಿತು'. ಮಂಚಣ್ಣ ಅಪ್ಪಚ್ಚಿಯಾದ. ಹರಳಯ್ಯನನ್ನು ಎತ್ತಿ ಬೆನ್ನಿಗೇರಿಸಿಕೊಂಡು ದಕ್ಷಿಣದ ಬೆಟ್ಟದಪುರದತ್ತ ಸಾಗಿತು. "ಅಲ್ಲಿಂದ ಹರಳಯ್ಯನವರ ಬಳಗ ರಾವಂದೂರಿನ ಬಳಿಯ ಅರುಹಂತಪುರಕ್ಕೆ ಬಂತು. ಅಲ್ಲಿ ನಡೆದ ಜೈನ-ಶರಣ ಸಂಘರ್ಷದಲ್ಲಿ ಹರಳಯ್ಯ ವಿಜಯಿಯಾದರು. ಜೈನರೆಲ್ಲ ಶರಣರಾಗಿ ಪರಿವರ್ತಿತರಾದರು. ಹರಳಯ್ಯ ತನ್ನ ಪವಾಡವನ್ನು ಮೆರೆದ ಹಳ್ಳಿ ಹರಳಹಳ್ಳಿಯಾಯಿತು. ಅಲ್ಲಿದ್ದ ಚಂದ್ರನಾಥ ಬಸದಿ ಚಂದ್ರಮೌಳೇಶ್ವರ ದೇವಾಲಯವಾಯಿತು. ಮಲೆಯ ಮಾದೇಶ್ವರ ಜನಪದ ಮಹಾಕಾವ್ಯದಲ್ಲಿ 'ಬಸ್ತಮ್ಮ', 'ಶ್ರವಣದೊರೆ' ಎಂಬ ಹೆಸರುಗಳಿದ್ದು ಅವರನ್ನು ಮಾದೇಶ್ವರ ಸಂಹರಿಸಿದರೂ ಅಲ್ಲೆಲ್ಲೂ ಜೈನಧರ್ಮದ ಹೆಸರಿಲ್ಲದಂತೆ ಸೌಮ್ಯವಾಗಿ ಮತವನ್ನು ನಾಶಮಾಡಿದಂತೆ ಕಾಣುತ್ತದೆ. ಆದರೆ ಇಲ್ಲಿ ಜೈನ-ಶರಣ ಸಂಘರ್ಷ ನೇರವಾಗಿ ಪ್ರಸ್ತಾಪವಾಗಿರುವುದು ಬಹುಶಃ ಸ್ಥಳೀಯ ಜನರಲ್ಲಿ ಪ್ರಚಲಿತವಿದ್ದ ಐತಿಹ್ಯವೇ ಕಾರಣವೆಂದು ಕಾಣುತ್ತದೆ".[೮]

**ಅಡಿ ಟಿಪ್ಪಣಿಗಳು:**

೧. ಡಾ. ಬಿ. ಎಸ್. ಗದ್ದಗಿಮಠ : **ಕನ್ನಡ ಜಾನಪದ ಗೀತಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಕಟವಾದ ವರ್ಷ : ೧೯೬೩, ಪುಟ : ೧೮೦

೨. – ಅದೇ – : ಪುಟ : ೧೮೧

೩. ಡಾ. ಮ. ನ. ಜವರಯ್ಯ : **ದಲಿತ ವರ್ಗದ ಶರಣರು ಒಂದು ಅಧ್ಯಯನ** ಪುಟ ೩೦

೪. – ಅದೇ – : ಪುಟ ೩೪

೫. ಡಾ. ಪಿ. ಕೆ. ರಾಜಶೇಖರ : **ಜನಪದ ಶರಣಕಾವ್ಯಗಳು,** ಪುಟ XXV

೬. – ಅದೇ – : ಪುಟ XXVI

೭. – ಅದೇ – : ಪುಟ XIIX

೮. – ಅದೇ – : ಪುಟ ೧೧೧

❑❑

# ಸಮೀಕ್ಷಾತ್ಮಕ ಖಗೋಳ ವಿಜ್ಞಾನ ಮತ್ತು ಪುರಾತನ ಸ್ಮಾರಕಗಳು

-ಎಂ.ವಿ. ವಿಶ್ವೇಶ್ವರ

ನಿಗೂಢ ಆಕಾಶಕಾಯಗಳ ವೀಕ್ಷಣೆ, ಅಧ್ಯಯನ ಮತ್ತು ಅವುಗಳಿಂದುಂಟಾಗುವ ಪರಿಣಾಮಗಳಿಗೆ ತಕ್ಕಂತೆ ತನ್ನ ದೈನಂದಿನ ಜೀವನ ವಿಧಾನವನ್ನು ರೂಪಿಸಿಕೊಳ್ಳುವುದು ಮಾನವ ಅತಿಪ್ರಾಚೀನ ಕಾಲದಿಂದಲೂ ಅನೂಚಾನವಾಗಿ ರೂಢಿಸಿ ಕೊಂಡಿರುವ ಪ್ರವೃತ್ತಿ. ಬರಿಗಣ್ಣಿಗೇ ಗೋಚರವಾಗುವ ಕೆಲವಾದರೂ ಪ್ರಮುಖ ತಾರೆ, ಗ್ರಹಗಳ ವಿಶಿಷ್ಟ 'ಋತ'ವನ್ನನುಸರಿಸಿದ ಚಲನೆ, ಆಕಾಶಕಾಯಗಳು ನಿರ್ದಿಷ್ಟಪಥದಲ್ಲಿ ಪುನರಾವರ್ತನೆಗೊಳ್ಳುವಲ್ಲಿನ ಕಾಲಗಣನೆ, ತಮ್ಮ ಹತ್ತಿರದ ಪರಿಸರದಲ್ಲಿ ಅದು ತರುವ ಋತು, ಮಳೆ, ಮುಂತಾದ ಬದಲಾವಣೆ, ನೇರವಾಗಿ ತನ್ನ ಬದುಕಿಗೆ ಸಂಬಂಧಿಸಿದ ಅಪಾಯ, ಆಹಾರ ದೊರಕುವ ಸಾಧ್ಯತೆ ಮುಂತಾದ ಪರಿಣಾಮಗಳನ್ನು ಭಯ, ಕುತೂಹಲಗಳಿಂದ ವೀಕ್ಷಿಸಿ, ಅವುಗಳ ರಹಸ್ಯಗಳನ್ನು ಅರ್ಥಯಿಸಿಕೊಂಡ ಕೆಲವು ಹಿರಿಯರು ಸೂಕ್ತ ರಕ್ಷಣೋಪಾಯಗಳನ್ನು ಮುನ್ನುಡಿದು ಮಾನವ ಜನಾಂಗದ ಉಳಿವಿಗೆ ಕಾರಣರಾದರು. ನಾಗರೀಕತೆ, ತಂತ್ರಜ್ಞಾನ ಬೆಳೆದಂತೆ ಪ್ರಕೃತಿಯ ಶಿಶುವಾದ ಮಾನವ ರಚಿಸಿದ ರಾಚನಿಕ ನಿರ್ಮಿತಿಗಳಲ್ಲಿ, ಸೃಜಿಸಿದ ಸಾಹಿತ್ಯದಲ್ಲಿ ಆಯಾಕಾಲದವರೆಗಿನ ತಿಳುವಳಿಕೆ, ಬೆಳವಣಿಗೆಗಳನ್ನು ಮೂರ್ತಾಮೂರ್ತರೂಪದಲ್ಲಿ, ರೂಪಕ, ಸಂಕೇತಗಳಾಗಿ ಸಮರ್ಥವಾಗಿ ಸೆರೆಹಿಡಿದಿಡಲಾಗಿದೆ. ಋಗ್ವೇದದ ಅತ್ಯಂತ ಪ್ರಾಚೀನವೆನಿಸಿದ ಋಕ್ಕುಗಳಲ್ಲಿ ಇಂತಹ ನಿಗೂಢಾಂಶಗಳು ಸಾಕಷ್ಟು ಪ್ರತಿಫಲಿತವಾಗಿವೆ. ಇದಕ್ಕೆ ಬಹುಶಃ, ಎರಡು ಉದ್ದೇಶಗಳಿರಬೇಕು. ಈ ವಿವರಗಳು ಅಪಾತ್ರರ ಕೈಗೆ ದೊರಕಿ ಅನರ್ಥ ಉಂಟು ಮಾಡದಿರಲಿ ಎಂದು ಮತ್ತು ಅರ್ಥಯಿಸಿಕೊಂಡ ಸತ್ಪಾತ್ರರನ್ನು ಇಂತಹ ಅಧ್ಯಯನಗಳ ಮುಂದುವರಿಕೆಗೆ ಪ್ರೇರೇಪಿಸುವುದು.

ಸಾಂಸ್ಕೃತಿಕ ಹಾಗೂ ಧಾರ್ಮಿಕ ಅವಶ್ಯಕತೆಗಳಿಗೆ ಅನುಗುಣವಾಗಿ ವಿವಿಧ ರೀತಿಯ ಕಟ್ಟಡಗಳು ನಿರ್ಮಾಣವಾದಾಗ ಆಯಾಕಾಲದವರೆಗಿನ ಮಹತ್ವದ ಖಗೋಳಶಾಸ್ತ್ರೀಯ ವಿವರ, ಕಾಣ್ಕೆಗಳನ್ನು ಅವುಗಳಲ್ಲಿ ಉದ್ದೇಶಪೂರ್ವಕವಾಗಿ ಅಳವಡಿಸಿದಂತೆ ತೋರುತ್ತದೆ. ಕಟ್ಟಡ ಕಟ್ಟಿರುವ ವಿಶಿಷ್ಟ ಭೌಗೋಳಿಕ ನೆಲೆ, ಪರಿಸರ, ಕಟ್ಟಿದವರ ನಂಬಿಕೆ, ಸಂಪ್ರದಾಯಗಳು, ಅದರ ತಲ, ಊರ್ಧ್ವವಿನ್ಯಾಸಗಳ ಆಕಾರ, ಬಳಸಿದ ಅಳತೆ, ಅಂಗ ಉಪಾಂಗಗಳ ಅಥವಾ ಭಾಗ ಉಪಭಾಗಗಳ ಸಂಖ್ಯೆ, ಪರಸ್ಪರ ಪ್ರಮಾಣವಿಶೇಷ, ನಿರ್ಮಿತಿಯ ಒಟ್ಟು ವಿನ್ಯಾಸದಲ್ಲಿ ಮುಖ್ಯ ಅಕ್ಷದ ನೇರ್ಪಡೆ, ಪ್ರಧಾನ ದಿಕ್ಕುಗಳೊಂದಿಗೆ ಅದರ ಹೊಂದಾಣಿಕೆ, ಅದಕ್ಕಿರುವ ಖಗೋಳಶಾಸ್ತ್ರೀಯ ಮಹತ್ತ್ವ ಮುಂತಾದವುಗಳ ಸೂಕ್ಷ್ಮ ಅವಲೋಕನ, ಅಧ್ಯಯನದಿಂದ ಕುತೂಹಲಕರವಾದ ಮಾಹಿತಿ ದೊರಕುತ್ತದೆ. ಈ ವಿಷಯಕವಾದ ಅಧ್ಯಯನಗಳಲ್ಲಿಯೇ ಪುರಾತತ್ತ್ವ ಶೋಧ, ವಾಸ್ತುರಚನೆ, ಮತ್ತು ಖಗೋಳಶಾಸ್ತ್ರದ ವಿವರಗಳು ಪರಸ್ಪರ ಸಂಧಿಸುವುದು, ಸಹಕಾರವನ್ನು ಅಪೇಕ್ಷಿಸುವುದು. ಒಂದರ ಒಳಗುಟ್ಟು ಗಳನ್ನರಿಯದೆ ಇನ್ನೊಂದು ಅರಿವಿನ ವ್ಯಾಪ್ತಿಗೆ ಬರುವುದಿಲ್ಲ. ಆದುದರಿಂದಲೇ ಪ್ರಾಚೀನ ಕಾಲದಿಂದ ಲಿಖಿತರೂಪದಲ್ಲಿ ಇಂತಹ ವಿಶಿಷ್ಟಾಂಶಗಳನ್ನು ದಾಖಲಿಸುವುದಕ್ಕೂ ಬಹು ಹಿಂದೆಯೇ, ಮಾನವ ರೂಪಿಸಿ ಉಳಿಸಿರುವ, ತನ್ನ ಕಾಲದ ತಾಂತ್ರಿಕ ವಿವರಗಳನ್ನು ತನ್ನೊಡಲಲ್ಲಿ ಬಚ್ಚಿಟ್ಟುಕೊಂಡಿರುವ ಸ್ಮಾರಕಾದಿ ಸ್ಥಾವರ ಹಾಗೂ ಜಂಗಮ ರೂಪದ ಪ್ರಾಚ್ಯವಸ್ತುಗಳ ಖಗೋಳಶಾಸ್ತ್ರೀಯ ಅಧ್ಯಯನ ಮಹತ್ವದ್ದಾಗುತ್ತದೆ.

ಇಂತಹ ಅಧ್ಯಯನಗಳು ಭಾರತದಲ್ಲಿ ತೀರ ಈಚೆಗೆ ನಡೆಯುತ್ತಿವೆ. 'ಭಾರತೀಯ ಖಗೋಳ ಭೌತಶಾಸ್ತ್ರ ಸಂಸ್ಥೆ'ಯ ನಿರ್ದೇಶಕರಾಗಿದ್ದ ಡಾ॥ ಎನ್. ಕಾಮೇಶ್ವರರಾವ್ ಈ ದಿಶೆಯಲ್ಲಿ ಅನೇಕ ಸಂಶೋಧನೆಗಳನ್ನು ವೈಜ್ಞಾನಿಕವಾಗಿ ನಡೆಸಿದ ಪ್ರಥಮರು. ಅವರ ಕ್ಷೇತ್ರಕಾರ್ಯ ಹಾಗೂ ಅಧ್ಯಯನಗಳ ಫಲವಾಗಿ ಭಾರತದ ಸ್ಮಾರಕಗಳಲ್ಲಿ ಮಹತ್ವದ ಖಗೋಳಶಾಸ್ತ್ರೀಯ ವಿವರಗಳು ಅಡಗಿರುವುದು ಬೆಳಕಿಗೆ ಬಂದಿವೆ. ಸ್ಮಾರಕಗಳನ್ನು ನೋಡುವ, ಅರ್ಥಯಿಸುವ ದೃಷ್ಟಿ ಬದಲಾಗಿದೆ, ಬದಲಾಗುತ್ತಿದೆ.

## ನವಶಿಲಾಯುಗ ಮತ್ತು ಬೃಹಚ್ಛಿಲಾಯುಗ

ಸೂರ್ಯೋದಯಕ್ಕೆ ಕೆಲವೇ ಕ್ಷಣಗಳ ಮೊದಲು ಗಗನದಲ್ಲಿ ಕಾಂತಿಯಿಂದ ಉದಯಿಸಿ ಅನಂತರ ಬೆಳಗಾದಂತೆ

# ೩೮, ಶಾಂಕರೀ, ೨ನೇ ಮುಖ್ಯರಸ್ತೆ, ಇಟ್ಟುಮಡು ಬಡಾವಣೆ, ಬನಶಂಕರಿ ೩ ನೆಯ ಹಂತ, ೩ ನೆಯ ಫೇಸ್, ಬೆಂಗಳೂರು-೮೫

ಮರೆಯಾಗುವ ಕೆಲವು ಪ್ರಮುಖ ನಕ್ಷತ್ರ ಮತ್ತು ಗ್ರಹಗಳು ಒಳ್ಳೆಯ ಬೇಟೆ, ಸುಭಿಕ್ಷ ತರುವ ಮಳೆ, ವಿನಾಶಕಾರಿ ಪ್ರವಾಹ ಮುಂತಾದವುಗಳ ಮುನ್ಸೂಚನೆಯಾಗಿರುವುದೆಂದು ಮಾನವ ಅನಾದಿಕಾಲದಿಂದ ಕಂಡುಕೊಂಡಿದ್ದಾನೆ. ಆಕಾರಣದಿಂದ ಅನೇಕ ಪ್ರಾಚೀನ ಸಂಸ್ಕೃತಿಗಳಲ್ಲಿ ಅಂತಹ ವಿಶಿಷ್ಟ ಸಂದರ್ಭಗಳನ್ನು ಪವಿತ್ರವೆಂದು ಸೂರ್ಯನ ಆರಾಧನೆಗೆ ಪ್ರಶಸ್ತವಾದುದೆಂದು ಪರಿಗಣಿಸಲಾಗಿದೆ. ಸೂರ್ಯನೊಂದಿಗೆ ಸಿರಿಯಸ್ (ಮಹಾಶ್ವಾನ ನಕ್ಷತ್ರ ಪುಂಜದ ಒಂದು ಉಜ್ವಲತಾರೆ-ಲುಬ್ಧಕ)ನ ಸಹೋದಯಕ್ಕೂ ನೈಲ್ ನದಿಯಲ್ಲಿ ಬರುವ ಸುಭಿಕ್ಷ ತರುವ ಪ್ರವಾಹಕ್ಕೂ ನೇರ ಸಂಬಂಧವಿದ್ದುದನ್ನು ಪ್ರಾಚೀನ ಈಜಿಪ್ತಿನ ಜನರು ಅರಿತು ಬಹುಶಃ ಅದೇ ಕಾಲಕ್ಕೆ (ಜೂನ್ ತಿಂಗಳ ೨೧ರ ವೇಳೆಗೆ) ಒದಗುವ ಕರ್ಕಾಟಕ ಸಂಕ್ರಮಣದಿಂದ ಹೊಸ ವರ್ಷವನ್ನಾರಂಭಿಸುತ್ತಿದ್ದರು. ಭಾರತದಲ್ಲಿಯೂ ಸಹೋದಯ ಸಂಕ್ರಮಣ ಕಾಲಗಳು ಪ್ರಾಚೀನ ಕಾಲದಿಂದ ಋತು ಬದಲಾವಣೆ, ಬೇಟೆ, ಕೃಷಿ ಕಾರ್ಯಗಳ ಆರಂಭಕ್ಕೆ ಮುನ್ಸೂಚನೆ ನೀಡುತ್ತವೆಂಬ ನಂಬಿಕೆಯಿದೆ. ಮುಂದೆಯೂ ಭಾರತೀಯ ಪರಂಪರೆಯಲ್ಲಿ ನಕ್ಷತ್ರ/ಗ್ರಹಗಳು ಸೂರ್ಯನೊಡನೆ ಉದಯಿಸುವ ಮುಹೂರ್ತವನ್ನು ಸಹೋದಯ ಪುಣ್ಯಕಾಲವೆಂದು ಪರಿಗಣಿಸಿ, ಸೂರ್ಯಾರಾಧನೆ, ದಾನಧರ್ಮಾದಿ ಕಾರ್ಯಗಳಿಗೆ ಪವಿತ್ರವೆಂದು ಶಾಸ್ತ್ರಸಾಹಿತ್ಯ, ಶಾಸನಗಳಲ್ಲಿ ಪ್ರಸಿದ್ಧವಾಗಿದೆ. ಈ ಹಿನ್ನೆಲೆಯಲ್ಲಿ ಕಾಶ್ಮೀರದ ಬುರ್ಜಹಾಂನಲ್ಲಿ ಸಂಶೋಧಿತವಾದ ಕೊರೆದ ಗೆರೆಯ ಚಿತ್ರಣವುಳ್ಳ ಶಿಲಾಫಲಕ ಮಹತ್ವದ್ದಾಗುತ್ತದೆ.

ಜಮ್ಮು-ಕಾಶ್ಮೀರ ರಾಜ್ಯದ ಶ್ರೀನಗರದಿಂದ ಉತ್ತರ-ಈಶಾನ್ಯಕ್ಕೆ ಸು.೨೪ ಕಿ.ಮೀ. ದೂರದಲ್ಲಿರುವ ಬುರ್ಜಹಾಂ ಹಲವು ವಿಶೇಷಗಳಿಗಾಗಿ ಪ್ರಸಿದ್ಧವಾದ ಪ್ರಾಗೈತಿಹಾಸಿಕ ನಿವೇಶನ. ೧೯೬೦ ರಿಂದ ೧೯೬೫ ರವರೆಗೆ ಭಾರತೀಯ ಪುರಾತತ್ತ್ವ ಸರ್ವೇಕ್ಷಣವು ನಡೆಸಿದ ಉತ್ಖನನದಿಂದ ಇಲ್ಲಿ ಕ್ರಿ.ಪೂ. ೨೩೦೦ ರಿಂದ ಕ್ರಿ.ಶ. ೩-೪ನೆಯ ಶತಮಾನದವರೆಗಿನ ನಾಲ್ಕು ಹಂತಗಳ ಸಾಂಸ್ಕೃತಿಕ ಅವಶೇಷಗಳು ಬೆಳಕಿಗೆ ಬಂದಿವೆ. ಇಲ್ಲಿನ ಸ್ವಾಭಾವಿಕ ಕರೇವಾ ಮಣ್ಣಿನ ನೆಲದಲ್ಲಿ ವೃತ್ತ ಅಥವಾ ವೃತ್ತಾಯತಾಕಾರದ ಕುಳಿತೋಡಿ ಅದರಲ್ಲಿ ವಾಸಿಸುತ್ತಿದ್ದ ನವಶಿಲಾಯುಗ ಸಂಸ್ಕೃತಿಯ ಜನರು ಈ ನಿವೇಶನದ ಮೊದಲ ನಿವಾಸಿಗಳು. ಸಾಧಾರಣವಾಗಿ ಕಿರಿದಾದ ಪ್ರವೇಶ ರಂಧ್ರದಿಂದಾರಂಭವಾಗಿ ಕ್ರಮೇಣ ವಿಸ್ತಾರವಾಗುವ ಕುಳಿಯ ನೆಲಹಾಸು ಸಮತಟ್ಟಾಗಿರುತ್ತದೆ. ಇಂತಹ ಕುಳಿಗಳಲ್ಲಿ ತೀರ ದೊಡ್ಡದಾದ್ದು ಮೇಲೆ ೨.೭೪ ಮೀ. ಮತ್ತು ತಳದಲ್ಲಿ ೪.೫೭ ಮೀ. ವ್ಯಾಸ, ೩.೯೬ ಮೀ. ಆಳವಾಗಿದ್ದು ಮಾನವ ವಸತಿಯಿದ್ದುದರ ಬಗೆಗೆ ನಿಚ್ಚಳ ಕುರುಹು, ಅವಶೇಷಗಳನ್ನು ಹೊಂದಿದೆ. ಮೊದಲೆರಡು ಹಂತ (೧ ಮತ್ತು ೨)ಗಳನ್ನು ಪ್ರತಿನಿಧಿಸುವ ನವಶಿಲಾಯುಗ ಸಂಸ್ಕೃತಿ, ಇಂಗಾಲ-೧೪ರ ವಿಶ್ಲೇಷಣೆಯಿಂದ ಕ್ರಿ.ಪೂ. ೨೩೦೦-೧೫೦೦ ರವರೆಗಿನ ಕಾಲದ್ದೆಂದು ತಿಳಿದಿದೆ. ಮೂರನೆಯ ಹಂತ(೩)ದ ಬೃಹಚ್ಛಿಲಾಯುಗ ಕಾಲದಲ್ಲಿ ಭೂಮಟ್ಟದಲ್ಲಿ ಆರು ದೊಡ್ಡ ಕಲ್ಲುಗಳನ್ನು ಸುಮಾರಾಗಿ ಅರ್ಧ ವೃತ್ತಾಕಾರದ ವಿನ್ಯಾಸದಲ್ಲಿ ಹೂತಿರುವುದು ಕಂಡು ಬಂದಿದೆ. ನವಶಿಲಾಯುಗದ ಕೊನೆಕೊನೆಗೆ ಈ ಕಲ್ಲುಗಳನ್ನು ವಿಶೇಷ ರೀತಿಯಲ್ಲಿ ಜೋಡಿಸಿರುವುದರ ಉದ್ದೇಶ, ಔಚಿತ್ಯ ಸ್ಪಷ್ಟವಾಗಿಲ್ಲವೆಂದು ಉತ್ಖನನಕಾರರ ಅಭಿಪ್ರಾಯ. ನಾಲ್ಕನೆಯ ಹಂತವಾದ ಆದಿಇತಿಹಾಸಯುಗ ಸಂಸ್ಕೃತಿ ಕ್ರಿ.ಶ. ೩-೪ನೆಯ ಶತಮಾನದ್ದು.



೧. ಬುರ್ಜಹಾಂನಲ್ಲಿ ದೊರೆತ 'ಎರಡು ಸೂರ್ಯ' ಮತ್ತು ಬೇಟೆಯ ಚಿತ್ರಣವಿರುವ ಕಲ್ಲಿನ ಫಲಕ (ಕೃಪೆ: ಭಾ.ಪು.ಸ).

ನವಶಿಲಾಯುಗ ಸಂಸ್ಕೃತಿಯ ಸ್ತರದಲ್ಲಿ ದೊರಕಿರುವ ಕೊರೆದ ಗೆರೆಗಳಿಂದ ಮೂಡಿಸಿದ ಬೇಟೆಯ ಚಿತ್ರಣವಿರುವ ಕಲ್ಲಿನ ಫಲಕ (ಛಾಯಾಚಿತ್ರ-೧) ಈ ನಿವೇಶನದ ಮಹತ್ವದ ಶೋಧ. ಮೂರು ಪಂಕ್ತಿಗಳಲ್ಲಿರುವ ಚಿತ್ರಣದ ಮೊದಲ ಕೆಳಗಿನ ಪಂಕ್ತಿಯಲ್ಲಿ ಮಧ್ಯದಲ್ಲಿ ಒಂದು ಸಾರಂಗವಿದ್ದು ಅದನ್ನು ಹಿಂದಿನಿಂದ ಬೇಟೆಗಾರನೊಬ್ಬ ಈಟಿಯಿಂದ ಇರಿಯುತ್ತಿದ್ದರೆ ಮುಂಭಾಗದಲ್ಲಿ ಇನ್ನೊಬ್ಬ ಗುರಿಯಿಟ್ಟು ಬಾಣಬಿಡಲು ಸಜ್ಜಾಗಿ ನಿಂತಿದ್ದಾನೆ. ಮಧ್ಯದ ಪಂಕ್ತಿಯಲ್ಲಿ ಒಂದು ಬೇಟೆನಾಯಿ, ಮೇಲಣ ಪಂಕ್ತಿಯಲ್ಲಿ 'ಎರಡು ಸೂರ್ಯರ' ಚಿತ್ರಣವಿದೆ. ಬಹುಶಃ ರಾಚನಿಕ ನಿರ್ಮಿತಿಯೊಂದಕ್ಕೆ ಸೇರಿದ ಚಿತ್ರಣವಿರುವ ಈ ಆಯತಾಕಾರದ ಕಲ್ಲಿನ ಹಲಗೆಯು ಮುಖ ನೆಲಕ್ಕೆ ಹತ್ತಿಕೊಂಡಂತೆ ದೊರಕಿದೆ. ಆಕಾಶಕಾಯಗಳ ವೀಕ್ಷಣೆಯ ಹವ್ಯಾಸಿಗಳಿಗೆ ಹಾಗೂ ಖಗೋಳವಿಜ್ಞಾನಿಗಳಿಗೆ ಈ ಸಾಂಕೇತಿಕ ಚಿತ್ರಣ ಪರಸ್ಪರ ಹತ್ತಿರದಲ್ಲಿರುವ, ಸಮಾನಪ್ರಕಾಶದ ಎರಡು ಉಜ್ವಲ ನಕ್ಷತ್ರಗಳನ್ನು ಸೂಚಿಸುತ್ತದೆಂದು ಸುಲಭವಾಗಿ ತಿಳಿಯುತ್ತದೆ.

ಹೀಗೆ ಎರಡು ನಕ್ಷತ್ರಗಳು ಸಮೀಪದಲ್ಲಿರುವ ಬೇಟೆಯ ಚಿತ್ರಣ ಖಗೋಳಶಾಸ್ತ್ರದ ದೃಷ್ಟಿಯಿಂದ ಮಹತ್ವದ್ದು.

ಇಂತಹುದೇ ಜೋಡಿತಾರೆಯ ಚಿತ್ರಣವಿರುವ ಕಲ್ಲಿನ ಭಾಗಗಳು ಪೋರ್ಚುಗಲ್ಲಿನ ಫ್ರಾಟೆಲ್ (Fratel) ಮತ್ತು ಸ್ಪೇಯ್ನ್‌ನ ಲಾ ಹಿಲೆಟಾ(La Hileta)ಗಳಲ್ಲಿನ ಪ್ರಾಗೈತಿಹಾಸಿಕ ನಿವೇಶನಗಳಲ್ಲೂ ಬೆಳಕಿಗೆ ಬಂದಿವೆ. ಇದರಿಂದ ಬೇಟೆಗೆ ಸಂಬಂಧಿಸಿದ ಕೆಲವು ಅಭಿಪ್ರಾಯ, ಅನುಭವ ನಂಬಿಕೆಗಳು ಪ್ರಾಚೀನ ಪ್ರಪಂಚದ ಹಲವಡೆ ಏಕರೂಪವಾಗಿ ಪ್ರಚಲಿತವಿತ್ತೆಂದು ತಿಳಿಯುತ್ತದೆ.

ಪ್ರಸ್ತುತ ಫಲಕವು ಕುಳಿಯೊಳಗೆ ನೆಲಮುಖವಾಗಿ ಬಿದ್ದಿತ್ತೆನ್ನುವುದು ಬಹುಶಃ ಸಮೃದ್ಧ ಬೇಟೆಯ ಋತು ಅಥವಾ ನಿರ್ದಿಷ್ಟ ವೇಳೆ ಮತ್ತು ಕುಳಿಯ ಒಳಗಿಂದ ನೋಡಿದಾಗ ಆಕಾಶದಲ್ಲಿ ಕಂಡುಬರುವ ಜೋಡಿತಾರೆ- ಇವೆರಡರ ನಡುವಣ ಸಂಬಂಧ ಸೂಚಕವೆನಿಸುತ್ತದೆ. ಬುರ್ಜಹಾಂನ ಅಕ್ಷಾಂಶ ಸು. +೩೪°. ಆದ್ದರಿಂದ ಇಲ್ಲಿ ನಡುನೆತ್ತಿಯ ಮೇಲೆ ಜೋಡಿತಾರೆ ಕಾಣಬೇಕಾದರೆ ಅವುಗಳ ಕೋನದೂರವೂ (declination) +೩೪° ಸಮೀಪದಲ್ಲಿರಬೇಕು. ತೀರ ದೊಡ್ಡದಾದ ಕುಳಿಯ ಬಾಯಿಯ ವ್ಯಾಸವನ್ನು (೨.೭೪ ಮೀ), ಪರಿಗಣಿಸಿದರೂ ಕುಳಿಯೊಳಗಿನ ಕೇಂದ್ರ ಬಿಂದುವಿನಿಂದ ಮೇಲೆ ನೋಡಿದಾಗ ಸು. ೩೦° ವ್ಯಾಸದಷ್ಟು ಮಾತ್ರವೇ ಗಗನ ಗೋಚರವಾಗುವುದು.

ಚಿತ್ರದಲ್ಲಿರುವ ಎರಡು ಸೂರ್ಯರು ಸೂರ್ಯ-ಚಂದ್ರರಾಗಲು ಸಾಧ್ಯವಿಲ್ಲ. ಪೂರ್ಣ ಉದಯಿಸಿದಾಗ ಸೂರ್ಯನ ಪಕ್ಕದಲ್ಲಿ ಚಂದ್ರನೂ ಪೂರ್ಣವಾಗಿದ್ದು, ಅವನಷ್ಟೇ ಉಜ್ವಲವಾಗಿ ಹೊಳೆಯುವುದಿಲ್ಲ. ಸೂರ್ಯ ಚಂದ್ರರಲ್ಲಿ ಒಂದಾಗಿದ್ದು ಅದರೊಡನೆ ಸಹೋದಯ ಹೊಂದುತ್ತಿರುವ ನಕ್ಷತ್ರವಿರಬೇಕೆಂದು ಭಾವಿಸಲೂ ಸಾಧ್ಯವಾಗದು. ಏಕೆಂದರೆ ಸಹೋದಯವುಂಟಾದಾಗ ಸ್ಫೋಟದ ಹಂತದಲ್ಲಿರುವ ತಾರೆಯ (ಸೂಪರ್‌ನೋವಾ) ಹೊರತಾಗಿ ಇನ್ನಾವುದೂ ಅಷ್ಟು ಉಜ್ವಲವಾಗಿರುವುದಿಲ್ಲ. ಉಳಿದಂತೆ ಸ್ವಯಂ ಪ್ರಕಾಶವಿಲ್ಲದ ಆದರೂ ಸಾಕಷ್ಟು ಹೊಳೆಯುವ ಗ್ರಹವಾಗಿರುವ ಸಾಧ್ಯತೆಯಿಲ್ಲ. ಗ್ರಹಗಳ ಕೋನದೂರ ಸುಮಾರು +೨೩.೫° ಇದ್ದು ಇವು ಬುರ್ಜಹಾಂನಲ್ಲಿ ನಡುನೆತ್ತಿಯ ಮೇಲಿಂದ ಯಾವಾಗಲೂ ೧೦°-೧೧° ಹೊರಗೇ ಇರುತ್ತವೆ. ಹೀಗಾಗಿ ಚಿತ್ರಣದಲ್ಲಿರುವುದು ಬೇರಾವುದೋ ಉಜ್ವಲ ಜೋಡಿತಾರೆಯೇ ಇರಬೇಕು. ಇದರ ಜೊತೆಗೆ ಕುಳಿಯಿಂದ ಆಕಾಶಕಾಯ ಕಾಣಬೇಕಾದರೆ ರಾತ್ರಿ ಅಥವಾ ನಸುಕಿನಲ್ಲಿ ಅದರ ಬಾಯಿ ತೆರೆದಿರಬೇಕು. ಕಾಶ್ಮೀರದಂತಹ ಪ್ರದೇಶದಲ್ಲಿ ಇದು ಸಾಧ್ಯವಾಗುವುದು ವಸಂತ ಇಲ್ಲವೇ ಗ್ರೀಷ್ಮಋತುವಿನ ರಾತ್ರಿಗಳಲ್ಲಿ ಮಾತ್ರ. ಹೀಗಾಗಿ ಕ್ರಿ.ಪೂ. ೨೦೦೦ ದ ಸುಮಾರಿಗೆ ಬೇಸಗೆಯ ದಿನಗಳಲ್ಲಿ ಬುರ್ಜಹಾಂನ ಮಾನವ ನಿರ್ಮಿತ ಕುಳಿಗಳಿಂದ ನೋಡಬಹುದಾದ ಜೋಡಿತಾರೆಗಳ ಸಂಭವನೀಯ ಪಟ್ಟಿಯು ತೀರ ಕಿರಿದಾಗಿ ಮಿಥುನ ರಾಶಿಯ ಮೊದಲೆರಡು ಉಜ್ವಲ ನಕ್ಷತ್ರಗಳಾದ ಆಲ್ಫಾ ಜೆಮ್ (ಕ್ಯಾಸ್ಟರ್)-ಬೀಟಾ ಜೆಮ್ (ಪೊಲ್ಲೂಕ್ಸ್); ಆಲ್ಫಾ ಔರ್-ಆಲ್ಫಾ ಪೆರ್; ಮತ್ತು ಬೀಟಾ ಕ್ಯಾಸ್-ಲ್ಯಾಂಬ್ಡಾ ಕ್ಯಾಸ್- ಈ ಮೂರು ತಾರಾಜೋಡಿ ಉಳಿಯುತ್ತವೆ. ಆದರೆ ಇವುಗಳ ಪರಸ್ಪರ ದೂರ ಮತ್ತು ಒಟ್ಟಾರೆ ಕೋನದೂರ (ಕ್ರಿ.ಪೂ. ೨೦೦೦ರ ಸುಮಾರಿಗೆ) ಮುಂತಾದ ಇತರ ಅಂಶಗಳು ಹೊಂದದೆ ಈ ಯಾವ ಜೋಡಿಯೂ ಕುಳಿಯೊಳಗಿಂದ ದೃಷ್ಟಿಗೋಚರವಾಗುವುದಿಲ್ಲ.

ಅದರಂತೆಯೇ ಈ ನಿವೇಶನದಲ್ಲಿ ನವಶಿಲಾಯುಗದ ಕೊನೆಯ ಅಥವಾ ಬೃಹತ್ ಶಿಲಾಯುಗದ ಆರಂಭಕಾಲವಾದ ಕ್ರಿ.ಪೂ.೧೫೦೦ರ ಸುಮಾರಿಗೆ ಇವೇ ತಾರಾಜೋಡಿಗಳ ಚಲನೆಯನ್ನು ತಾಳೆ ಮಾಡಲಾಯಿತು ಆಲ್ಫಾ ಔರ್-ಆಲ್ಫಾ ಪೆರ್ ಜೋಡಿಯು ಕರ್ಕಾಟಕ ಸಂಕ್ರಮಣದ ಹಾಗೂ ಅದರ ಆಚೀಚಿನ ಕೆಲವು ದಿನಗಳಲ್ಲಿ ಸೂರ್ಯೋದಯವಾಗುವ ಸ್ವಲ್ಪ ಮೊದಲು ಬುರ್ಜಹಾಂ ಕುಳಿಯಲ್ಲಿ ಕುಳಿತವರಿಗೆ ಕಾಣಬಹುದಾದಷ್ಟು ಉಜ್ವಲವಾಗಿದ್ದು, ಸ್ಪಷ್ಟವಾಗಿ ಗುರುತಿಸಬಹುದಾಗಿರುತ್ತವೆ. ಇದರಿಂದ ಕಲ್ಲಿನ ಮೇಲಿರುವ 'ಇಬ್ಬರು ಸೂರ್ಯರ' ಒಗಟು ಅರ್ಥವಾಗುತ್ತದೆ. ಬೇಸಗೆಯ ಮುಂಜಾವು ಸಮೃದ್ಧ ಬೇಟೆಗೂ ಪ್ರಶಸ್ತವಾಗಿದ್ದು ಬಹುಶಃ ಅದೇ ವೇಳೆಗೆ ಸಾರಂಗಗಳು ಹೆಚ್ಚು ಸಂಖ್ಯೆಯಲ್ಲಿ ದೊರೆಯುತ್ತಿದ್ದಿರಬೇಕು. ಉತ್ಖನನದಲ್ಲಿ ಯಾವುದೇ ದವಸ ಧಾನ್ಯಗಳ ಬಗೆಗೆ ಮಾಹಿತಿ ಲಭ್ಯವಾಗಿಲ್ಲ. ಅಲ್ಲದೆ ಈ ನಿವೇಶನದ ಇನ್ನೊಂದು ಗಮನಾರ್ಹ ಅಂಶ (ಬೇಟೆಗೆ ಉಪಯೋಗಿಸಬಹುದಾದ) ಮೂಳೆಯ ಬಾಣದ ಮೊನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳಕಿಗೆ ಬಂದಿರುವುದು. ಇದರಿಂದ ನವಶಿಲಾಯುಗದ ಕೊನೆಗಾಲದಲ್ಲಿಯೂ ಬೇಟೆಯೇ ಇಲ್ಲಿನ ಜನರ ಪ್ರಮುಖ ಆಹಾರ ಸಂಪಾದನಾ ಮಾರ್ಗ ವಾಗಿತ್ತೆನ್ನಬಹುದು. ಈ ಹಿನ್ನೆಲೆಯಲ್ಲಿ ಸಾರಂಗದ ಬೇಟೆಗೂ, ಮೇಲೆ ಹೇಳಿದ ತಾರಾಜೋಡಿಯ ಉದಯ, ಕಾಣುವಿಕೆಗೂ, ನೇರ ಸಂಬಂಧ ಕಲ್ಪಿತವಾಗಿ, ಪ್ರಕೃತಿ ಮುನ್ಸೂಚನೆಯ ವರವಾಗಿ ಕರುಣಿಸಿದ ಈ ಸಮನ್ವಯವನ್ನು ಕಲಾತ್ಮಕವಾಗಿ, ಸಾಂಕೇತಿಕ ವಾಗಿ ಚಿತ್ರಿಸಿ ಉಳಿದವರಿಗೆ ಮಾರ್ಗದರ್ಶನ ಮಾಡಿರುವುದರ ಮಹತ್ವ ಸ್ಪಷ್ಟವಾಗುತ್ತದೆ. ಅಲ್ಲದೆ ಈ ಚಿತ್ರಣ ಭಾರತದ ಸಂದರ್ಭದಲ್ಲಿ ಖಗೋಳ ವೀಕ್ಷಣೆ ಹಾಗೂ ಅರ್ಥೈಸುವಿಕೆಯ ಬಗೆಗಿನ ಅತ್ಯಂತ ಪ್ರಾಚೀನತಮ ದಾಖಲೆಯಾಗಿಯೂ ಮಹತ್ವದ್ದಾಗುತ್ತದೆ. ಮುಂದೆ ಬೃಹತ್ ಶಿಲಾಯುಗ ಕಾಲದಲ್ಲಿ ಭೂಮಟ್ಟದಲ್ಲಿಯೇ ಅನತಿದೂರದಲ್ಲಿ ಕ್ರಮಬದ್ಧವಾಗಿ ಜೋಡಿಸಿದ ಕಲ್ಲುಗಳ ವಿಶಿಷ್ಟ ವಿನ್ಯಾಸಕ್ಕೂ ಖಗೋಳ ವಿಜ್ಞಾನದ ಹಿನ್ನೆಲೆಯಿರಬೇಕು.

ಬೃಹತ್ ಶಿಲಾಯುಗದ ರಾಚನಿಕ ಕಲ್ಗೋರಿ, ಶಿಲಾವೃತ್ತ, ನಿಲುಸುಗಲ್ಲು ಮುಂತಾದ ಪ್ರಭೇದಗಳಿಗಾಗಿ ದಕ್ಷಿಣ ಭಾರತ ಪ್ರಸಿದ್ಧವಾಗಿದೆ. ಮುಖ್ಯವಾಗಿ ೧೮ರಿಂದ ೧೩೫ ಅಡಿಯವರೆಗಿನ ವ್ಯಾಸವಿರುವ ಶಿಲಾವೃತ್ತಗಳು ಬಹಳಷ್ಟು ಕಡೆ ಕಂಡುಬಂದಿವೆ.

ಇದೇ ಸಂಸ್ಕೃತಿಗೆ ಸೇರಿದ ಪ್ರಪಂಚದ ಇತರೆಡೆಗಳಲ್ಲಿನ ಕಲ್ಗೋರಿ, ಶಿಲಾವೃತ್ತಗಳ ಬಗೆಗೆ ವಿಶೇಷವಾಗಿ ಬ್ರಿಟನ್ನಿನ ಸ್ಟೋನ್ ಹೆಂಜ್‌ಗಳ ಖಗೋಳಶಾಸ್ತ್ರೀಯ ಅಧ್ಯಯನಗಳು ಸಾಕಷ್ಟು ಪ್ರಸಿದ್ಧವಾಗಿವೆ. ಸ್ಟೋನ್ ಹೆಂಜ್‌ನ ವಿಶಿಷ್ಟವಿನ್ಯಾಸ ಮತ್ತು ಕರ್ಕಾಟಕ ಸಂಕ್ರಮಣ ಕಾಲದ ಸೂರ್ಯೋದಯದ ಪರಸ್ಪರ ಸಂಬಂಧವನ್ನು ಕುರಿತ ಅಧ್ಯಯನಗಳಿಗೆ ಶತಮಾನಕ್ಕೂ ಹೆಚ್ಚಿನ ಇತಿಹಾಸವೇ ಇದೆ. ಇತ್ತೀಚೆಗೆ ಸುದೀರ್ಘಕಾಲದ ಅಧ್ಯಯನಗಳ ನಂತರ ಸೌರ ಮತ್ತು ಚಾಂದ್ರ ಸಂಕ್ರಮಣಗಳ ಅಕ್ಷಕ್ಕೆ ಕೇವಲ ೧°ಯಷ್ಟು ವ್ಯತ್ಯಾಸವಿರುವಷ್ಟು ನಿಕರವಾಗಿ ವಿನ್ಯಾಸ ಮಾಡಿರುವ ಕೆಲವಾದರೂ ಶಿಲಾವೃತ್ತಗಳು ಚಾಂದ್ರಮಾನ ಖಗೋಳ ಸಮೀಕ್ಷಾಲಯಗಳಾಗಿದ್ದವೆಂದು ಎ. ಥಾಮ್ ನಿರ್ಣಯಕ್ಕೆ ಬಂದಿದ್ದಾರೆ. ಕೆಲವೆಡೆಯ ಕ್ರಮಬದ್ಧ ಜೋಡಣೆಗಳು ಮುಖ್ಯವೆನಿಸಿದ ಉಜ್ವಲ ತಾರೆಗಳ ಉದಯಾಸ್ತದ ಅಕ್ಷಕ್ಕೆ ಸಮರೇಖೆಯಲ್ಲಿರುವುದೂ ಬೆಳಕಿಗೆ ಬಂದಿದೆ. ಭಾರತದಲ್ಲಿನ ಬೃಹತ್ ಶಿಲಾಯುಗೀನ ಕಲ್ಗೋರಿ ಪ್ರಭೇದಗಳಲ್ಲಿ ಹುದುಗಿರಬಹುದಾದ ಇಂತಹ ಖಗೋಳಶಾಸ್ತ್ರೀಯ ವಿವರಗಳ ಅಧ್ಯಯನಕ್ಕಾಗಿ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಪ್ರಸಿದ್ಧ ಪ್ರಾಗೈತಿಹಾಸಿಕ ನಿವೇಶನವಾದ ಬ್ರಹ್ಮಗಿರಿಯಲ್ಲಿನ ಸಮಾಧಿ ಸ್ಮಾರಕಗಳಲ್ಲಿ ಹಾಗೂ ಸಮಾಧಿ ಪ್ರಕ್ರಿಯೆಗೆ ಸಂಬಂಧಪಡದ ರಾಚನಿಕ ನಿರ್ಮಿತಿಯಾದ ಗುಲ್ಬರ್ಗಾ ಜಿಲ್ಲೆಯ ಹನಮಸಾಗರದ ಸಾಲುಗಲ್ಲಿನ ನಿವೇಶನ(alignment)ದಲ್ಲಿ ಅನ್ವೇಷಣೆ, ಅಧ್ಯಯನ ಕೈಗೊಳ್ಳಲಾಯಿತು.

೧೯೪೭ರಲ್ಲಿ ವ್ಹೀಲರ್ ನಡೆಸಿದ ವೈಜ್ಞಾನಿಕ ಉತ್ಖನನ ಮತ್ತು ವರದಿಗಳಿಂದಾಗಿ ಅತ್ಯುತ್ತಮ ದಾಖಲಾತಿಯ ಪರಂಪರೆ ಇರುವ ಕರ್ನಾಟಕ ರಾಜ್ಯದ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯ ಬೃಹತ್ ಶಿಲಾಸಮಾಧಿಗಳ ನಿರ್ಮಾಣ ಕಾಲ ಸು.ಕ್ರಿ.ಶ.೧೦೦೦-೮೦೦ ಎಂದು ತಿಳಿದುಬಂದಿದೆ. ಇವೆರಡರ ನಡುವಣ ಕಾಲವಾದ ಕ್ರಿ.ಪೂ. ೯೦೦ರ ಸುಮಾರಿನ ಖಗೋಳ ಕಾಯಗಳ ಚಲನೆಗಳನ್ನು ಆಧಾರವಾಗಿಟ್ಟುಕೊಂಡು ವಿಷುವ (equinox) ಹಾಗೂ ಅಯನ (solstice) ಸಂಕ್ರಮಣಕಾಲ, ಸೂರ್ಯೋದಯ ಹಾಗೂ ಪೂರ್ಣಚಂದ್ರೋದಯದ ಅಕ್ಷಗಳಿಗೂ ಈ ಶಿಲಾವೃತ್ತಗಳಿಗೂ ಇರಬಹುದಾದ ಸಂಬಂಧವನ್ನು ಅಭ್ಯಸಿಸಲಾಯಿತು. ಇದರಿಂದ ಅನೇಕ ಗಮನಾರ್ಹ ಅಂಶಗಳು ತಿಳಿದು ಬಂದಿವೆ. ಬ್ರಹ್ಮಗಿರಿಯ ಸಮಾಧಿಗಳ ನಿರ್ಮಾಪಕರು ಬಹುತೇಕ ದಿಕ್ಸೂಚಕ ರೇಖೆಗಳನ್ನು ಎಳೆಯಲು ಸ್ಪರ್ಶಕ (tangent) ರೇಖೆ ಬಳಸಿರುವುದು ಕುತೂಹಲಕರವಾದ ಅಂಶ. ಉದಾ: ಕಲ್ಗೋರಿ-೨ ರ ಕೇಂದ್ರದಿಂದ ಕರ್ಕಾಟಕ ಸಂಕ್ರಮಣದಂದು ಸೂರ್ಯೋದಯವಾಗುವ ರೇಖೆ ಕಲ್ಗೋರಿ-೩ ರ ಸ್ಪರ್ಶಕವಾಗಿದೆ (ರೇಖಾಚಿತ್ರ-೧). ಅಲ್ಲದೆ ಬಹಳಷ್ಟು

೧. 'ಸಿ' ಪ್ರದೇಶದಲ್ಲಿನ ಬೃಹತ್ ಶಿಲಾಯುಗದ ಕಲ್ಗೋರಿಗಳು (ಬ್ರಹ್ಮಗಿರಿ, ಕರ್ನಾಟಕ). ಸೌರ(ಸೌ) ಮತ್ತು ಚಾಂದ್ರ(ಚಾ), ಕರ್ಕಾಟಕ ಸಂಕ್ರಾಂತಿ ಸೂಚಕ (ಭಿನ್ನವಾದ) ರೇಖೆಗಳು, ಬಾಣದ ಗುರುತಿನ ರೇಖೆ ಉದಯಾಸ್ತದ ದಿಕ್ಕುಗಳನ್ನು ಸೂಚಿಸುತ್ತದೆ. (ಕೃಪೆ: ಎನ್. ಕೆ. ರಾವ್).



ಕಲ್ಗೋರಿಗಳ ಸ್ಪರ್ಶಕಗಳು ಮಕರಸಂಕ್ರಾಂತಿಯ ದಿನದ ಸೂರ್ಯೋದಯವನ್ನು ಸೂಚಿಸುತ್ತವೆ. ಬಹುಶಃ ಆ ಕಾಲದಲ್ಲಿ ಆಕಾಶ ನಿಚ್ಚಳವಾಗಿದ್ದು ಖಗೋಳ ಕಾಯಗಳ ವೀಕ್ಷಣೆ ಸುಲಭವಾಗಿರುವುದರಿಂದ, ಆಗಿನಿಂದಲೇ ಮಕರ ಸಂಕ್ರಾಂತಿಯಿಂದ ವರ್ಷವನ್ನಾರಂಭಿಸುವ ಪದ್ಧತಿ ಬೆಳೆದುದರಿಂದ ಅಥವಾ ಆ ದಿನ ಪಿತೃಪೂಜೆ, ತರ್ಪಣಾದಿಗಳಿಗೆ ಪ್ರಶಸ್ತವಾದುದೆಂದು ಪರಿಗಣಿಸಿದ್ದುದರಿಂದ ಹೀಗೆ ಮಾಡಿರಬಹುದು. ಜೊತೆಗೆ ಅನೇಕ ಉಜ್ವಲ ತಾರೆಗಳ ಉದಯಾಸ್ತರೇಖೆಗಳೊಂದಿಗೆ ಮೇಳಯಿಸಿದ ವಿನ್ಯಾಸಗಳೂ ಇಲ್ಲಿವೆ. ಇವಲ್ಲಕ್ಕಿಂತ ಹೆಚ್ಚಾಗಿ ಕ್ರಿ.ಪೂ. ೯೦೦-೬೦೦ರ ಕಾಲದಲ್ಲಿ ಅಂದಿನ ಧ್ರುವತಾರೆಗೆ ಅತಿ ಸಮೀಪದಲ್ಲಿದ್ದ ಉಜ್ವಲತಾರೆ (ಬೀಟಾUMi)ಯ ಮಹತ್ತಮ ದಿಗಂಶ (azimuth) ರೇಖೆಯೊಂದಿಗೆ ಸಮನ್ವಯಿಸಿದ ಅಕ್ಷಗಳಿರುವ ನಿರ್ಮಾಣಗಳಿರುವುದೂ ತಿಳಿದು ಬಂದಿದೆ. ಇದರಿಂದ ಈ ಸಮಾಧಿ ನಿರ್ಮಾಣಗಳ ಕಾಲವನ್ನೂ ನಿರ್ಣಾಯಕವಾಗಿ ತೀರ್ಮಾನಿಸಬಹುದಾಗಿದೆ.

ಬ್ರಹ್ಮಗಿರಿಯಲ್ಲಿ ಸುಮಾರು ೩೦೦ರಷ್ಟು ಶಿಲಾವೃತ್ತ ಮುಂತಾದ ಕಲ್ಗೋರಿಗಳಿವೆ. ಇವುಗಳಲ್ಲಿ ಕೇವಲ ೬-೮ರಲ್ಲಿ ಮಾತ್ರ ಇಂತಹ ಖಗೋಳಶಾಸ್ತ್ರೀಯ ವಿವರಗಳು ಕಂಡುಬರುತ್ತಿವೆ. ಇದರಿಂದ ಇಂತಹ ವೈಜ್ಞಾನಿಕ ವಿವರಗಳು ಕೇವಲ ಆಕಸ್ಮಿಕವಾಗಿ ಆದವೆಂದು ತಿಳಿಯುವ ಸಾಧ್ಯತೆಗಳಿವೆ. ಆದರೆ ಯಾವುದೇ ಪೂರ್ವನಿರ್ಧಾರಿತ ಯೋಜನೆ, ವಿನ್ಯಾಸ ಕ್ರಮವಿಲ್ಲದೆ ಅಡ್ಡಾದಿಡ್ಡಿಯಾಗಿ ಇವುಗಳನ್ನು ರೂಪಿಸಿದ್ದರೆ ಇಷ್ಟೊಂದು ವೈವಿಧ್ಯಮಯ ರೀತಿಯ, ಕರಾರುವಾಕ್ಕಾದ ಹಾಗೂ ಕುತೂಹಲಕರವಾದ 'ಆಕಸ್ಮಿಕ'ಗಳು ಒಂದೇ ಕಡೆ ಒದಗುವುದನ್ನು ವೈಜ್ಞಾನಿಕ ಮನೋಭಾವವಿರುವವರು ಒಪ್ಪಲು ಸಾಧ್ಯವಿಲ್ಲ. ಹೀಗೆ ಕಡಿಮೆ ಸಂಖ್ಯೆಯ ನಿರ್ಮಿತಿಗಳು ಮಾತ್ರ ಖಗೋಳಶಾಸ್ತ್ರೀಯ ತತ್ವಗಳನ್ನು ಹೊಂದಿರುವುದು ಬಹುಶಃ ಇಲ್ಲಿನ ರಚನೆಗಳೆಲ್ಲ ಏಕ ಕಾಲಕ್ಕೆ ಆಗದೆ ಸು.೪೦೦ ವರ್ಷಗಳ ದೀರ್ಘಾವಧಿಯಲ್ಲಿ ರೂಪಿತವಾಗಿರುವುದು ಕಾರಣವಾಗಿರಬೇಕು. ಅಲ್ಲದೆ ಬೃಹಚ್ಛಿಲಾಯುಗದ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯ ಪೂರ್ಣ ಪರಿಚಯವಿಲ್ಲದಿದ್ದರೂ ಆ ಕಾಲಕ್ಕೆ ಉಳಿದೆಡೆಯಲ್ಲಿ ಪ್ರಚಲಿತವಿದ್ದಂತೆ ಇಲ್ಲಿಯೂ ಧಾರ್ಮಿಕ ಪ್ರಕ್ರಿಯಾದಿಗಳನ್ನು ನಡೆಸುವ ಪುರೋಹಿತಶಾಹಿ ಅರ್ಚಕ, ಮುಖಂಡ ಅಥವಾ ಹಿರಿಯರ ಧಾರ್ಮಿಕ, ರಾಜಕೀಯ. ಸಾಮಾಜಿಕ ಹೆಗ್ಗಳಿಕೆಯನ್ನು ಸೂಚಿಸುವುದಕ್ಕಾಗಿ ಆತ ಹಾಗೂ ಆತನ ಶಿಷ್ಯವರ್ಗ ಮತ್ತಿತರ ಆಪ್ತರ ಸಮಾಧಿಗಳಲ್ಲಿ ಮಾತ್ರವೇ ಇಂತಹ ಖಗೋಳಶಾಸ್ತ್ರೀಯ ವಿವರಗಳನ್ನು ಅಳವಡಿಸಿರುವ ಸಾಧ್ಯತೆಗಳೂ ಇಲ್ಲದಿಲ್ಲ.

ಸಮಾಧಿಸ್ಮಾರಕ ಸಮೂಹವಿರುವ ಬ್ರಹ್ಮಗಿರಿ ನಿವೇಶನವಲ್ಲದೆ ಬೃಹತ್ ಶಿಲಾಯುಗದ ಜನರು ಬಹುಶ್ರಮಪಟ್ಟು ರೂಪಿಸಿರುವ, ಶವಸಂಸ್ಕಾರ ಪ್ರಕ್ರಿಯೆಗಳಿಗೆ ಸ್ವಲ್ಪವೂ ಸಂಬಂಧಪಡದ, ರಾಚನಿಕ ಶಿಲಾಸ್ಮಾರಕ ಪ್ರಭೇದಗಳಲ್ಲಿ ಕ್ರಮಬದ್ಧವಾಗಿ ಜೋಡಿಸಿದ ಸಾಲ್ಗಲ್ಲುಗಳ ಸಮೂಹವು ಮುಖ್ಯವಾದ್ದು. ದಕ್ಷಿಣಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ವಿಶಿಷ್ಟ ನಮೂನೆಗಳಲ್ಲಿ ನಿಲಸುಗಲ್ಲು (menhir) ಒಂದು. ಭೂಮಿಗೆ ಲಂಬವಾಗಿ ನಿಲ್ಲಿಸಿದ ಎತ್ತರವಾದ ಚಪ್ಪಡಿಕಲ್ಲು ಅಥವಾ ಬಂಡೆಗಳು ಈ ವರ್ಗಕ್ಕೆ ಸೇರುತ್ತವೆ. ಈ ಗುಂಪಿನ ಎರಡು ಪ್ರಭೇದಗಳೆಂದರೆ ಸಮಾನಾಂತರ ಪಂಕ್ತಿಗಳಲ್ಲಿ ಸಾಲಾಗಿ ನಿಲ್ಲಿಸಿದ ಸಾಲ್ಗಲ್ಲುಗಳು ಮತ್ತು ಒಂದು ನಿರ್ದಿಷ್ಟ ವಿನ್ಯಾಸದಲ್ಲಿ ನೆಟ್ಟಿರುವ ಕಲ್ಲುಗಳು (alignments). ಖಗೋಳ ವಿಜ್ಞಾನದ ದೃಷ್ಟಿಯಿಂದ ಬಹುಕುತೂಹಲಕರವಾದ ಈ ಸ್ಮಾರಕಗಳ ವಿಶೇಷ ಸಮೀಕ್ಷೆ ಕೈಗೊಂಡ ಅಲ್ಚಿನ್ ಉತ್ತರ ಕರ್ನಾಟಕ ಹಾಗೂ ಹೈದರಾಬಾದ್ ಪ್ರದೇಶಗಳಲ್ಲಿನ ೪೦ಕ್ಕಿಂತ ಹೆಚ್ಚು ನಿವೇಶನಗಳ ಪಟ್ಟಿ ಮಾಡಿ ಅಭ್ಯಸಿಸಿದ್ದಾರೆ. ಹೆಚ್ಚಿನವುಗಳಲ್ಲಿ ಕಲ್ಲುಗಳನ್ನು ಚೌಕಾಕಾರದಲ್ಲಿ ಜೋಡಿಸಲಾಗಿದೆ. ವಿಶೇಷವೆಂದರೆ ಇವುಗಳ ಜೋಡಣೆ ಬಹುತೇಕ ಕರಾರುವಾಕ್ಕಾಗಿ ಪ್ರಧಾನ ದಿಕ್ಕುಗಳಿಗೆ ನೇರ್ಪಟ್ಟಿರುವುದು. ಕೆಲವು ಕಲ್ಲುಗಳು ೧೪-೧೬ ಅಡಿ ಎತ್ತರದವು. ಅಂದಿನ ಜನವಸತಿ ನಿವೇಶನದಿಂದ ದೂರದಲ್ಲಿ, ಸಮಾಧಿ ನಿವೇಶನಕ್ಕಿಂತ ಬೇರೆಯಾದ ಆದರೆ ಅದಕ್ಕೆ ಸನಿಹದಲ್ಲಿರುವ, ಕೆಲವು ವಿಶಿಷ್ಟ ಲಕ್ಷಣಗಳುಳ್ಳ ಸ್ಥಳದಲ್ಲಿ ಇವುಗಳ ನೆಲೆ. ಇಂತಹ ಆಯ್ದ ಸ್ಥಳಗಳಲ್ಲಿ ಇವುಗಳನ್ನು ಸಂಯೋಜಿಸಿ ರೂಪಿಸಿದ ಉದ್ದೇಶ ಇಂದಿಗೂ ಸ್ಪಷ್ಟವಾಗಿಲ್ಲ. ಐರೋಪ್ಯ ದೇಶಗಳಲ್ಲಿ ಫ್ರಾನ್ಸ್‌ನ ಲೆ ಮೆನ್ಸ್ (Le Mence) ಮುಂತಾದೆಡೆಗಳಲ್ಲಿರುವ ಇಂತಹ ಸ್ಮಾರಕಗಳಿಗೆ ಖಗೋಳಶಾಸ್ತ್ರೀಯ ಮಹತ್ವ, ಉದ್ದೇಶಗಳಿವೆಯೆಂದು ಮೊದಲು ನಿರೂಪಿಸಿದವರು ಎ. ಥಾಮ್. ಭಾರತದಲ್ಲಿನ ಇಂತಹುದೇ ಸ್ಮಾರಕಗಳಿಗೂ ಅಂತಹ ಉದ್ದೇಶ, ಮಹತ್ವ, ಕಾರ್ಯ ನಿರ್ವಹಣಾಕ್ಷಮತೆ ಇರುವ ಸಂಭಾವ್ಯತೆಯನ್ನು ಪರೀಕ್ಷಿಸುವ ಉದ್ದೇಶದಿಂದ ಕಾಮೇಶ್ವರ ರಾವ್ ಹನಮಸಾಗರ ನಿವೇಶನದ ಅಧ್ಯಯನ ಕೈಗೊಂಡರು.

ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯಲ್ಲಿರುವ ಹನಮಸಾಗರ ಕೃಷ್ಣಾನದಿಯ ತೀರದಿಂದ ಉತ್ತರಕ್ಕೆ ಸು. ೬ ಕಿ.ಮೀ. ದೂರದಲ್ಲಿರುವ, ದಕ್ಷಿಣಭಾರತದ ಪ್ರಮುಖ ಬೃಹತ್ ಶಿಲಾಯುಗೀನ ನೆಲೆ. ೧೯೪೧ರಲ್ಲಿ ಮಹಾದೇವನ್ ಕಂಡು ಹಿಡಿದ ಈ ನಿವೇಶನದ ಬಗೆಗೆ ಪೂನಾದ ಡೆಕ್ಕನ್ ಕಾಲೇಜಿನ ಪದ್ದಯ್ಯನವರು ಹೆಚ್ಚಿನ ವಿವರ ನೀಡಿದ್ದಾರೆ. ಕಣಶಿಲೆಯ, ಮನೋಹರವಾದ ಬೆಟ್ಟಗುಡ್ಡಗಳಿಂದ ಕೂಡಿದ್ದರೂ ನಡುವಣ ತಪ್ಪಲಿನ ಸು. ೭೫೦ ಮೀ. X ೭೫೦ ಮೀ. ವಿಸ್ತಾರವಾದ, ತೀರಸಮತಟ್ಟಾದ ಪ್ರದೇಶದಲ್ಲಿರುವ ಈ ನಿವೇಶನವನ್ನು ಸ್ಥಳೀಯವಾಗಿ ಸಾಲ್ಗಲ್ (ಸಾಲುಗಳಲ್ಲಿರುವ ಕಲ್ಲುಗಳು) ಎಂದೇ ಗುರುತಿಸುತ್ತಾರೆ. ೧ ರಿಂದ ೧.೨೫ ಮೀ. ಎತ್ತರದ, ೨-೩ ಮೀ. ಗರಿಷ್ಠ ವ್ಯಾಸ ಹೊಂದಿರುವ

ಬೃಹತ್ ಗ್ರಾನೈಟ್ (ಕಣಶಿಲೆಯ) ಬಂಡೆಗಳನ್ನು ಇಲ್ಲಿ ವಜ್ರಾಕೃತಿಯ (ಚೌಕಾಕಾರ)ಲ್ಲಿ ಜೋಡಿಸಿದೆ. ಯಾವುದೇ ಬಂಡೆಯ ಮೇಲೆ ಗಣಿಯಿಂದ ತೆಗೆದ, ಉಳಿ, ಸುತ್ತಿಗೆ, ಕೊರೆಗಗಳಿಂದ ನೇರ್ಪು ಮಾಡಿರುವ ಗುರುತುಗಳಿಲ್ಲ. ಹತ್ತಿರದ ಬೆಟ್ಟಗುಡ್ಡಗಳ ತಪ್ಪಲಿನಲ್ಲಿದ್ದ ಈ ಬಂಡೆಗಳನ್ನು ಕೇವಲ ಮಾನವಶಕ್ತಿಯನ್ನುಪಯೋಗಿಸಿ ಉರುಳಿಸಿಕೊಂಡು ಬಂದೇ ಇಲ್ಲಿ ಕ್ರಮಬದ್ಧವಾಗಿ ಜೋಡಿಸಿರಬೇಕು. ಪದ್ದಯ್ಯನವರ ಪ್ರಕಾರ ಇಲ್ಲಿ ತಲಾ ೫೦ ಕಲ್ಲುಗಳಿರುವ ೫೦ ಸಾಲುಗಳಿವೆ. ಅಂದರೆ ಒಟ್ಟು ೨,೫೦೦ ಬೃಹತ್ ಬಂಡೆಗಳು! ಒಂದರ ಕೇಂದ್ರದಿಂದ ಇನ್ನೊಂದರ ಕೇಂದ್ರಕ್ಕೆ ಸು. ೧೨ ಮೀ. ಅಂತರವಿದ್ದು, ಕಲ್ಗಳ ಕೇಂದ್ರದ ಮೂಲಕ ಸಾಲುಗಳ ರೇಖೆ ಸಾಗುವಂತೆ ಸು ೬೦೦ X ೬೦೦ ಮೀ. ಸ್ಥಳದಲ್ಲಿ ಇವು ವಿನ್ಯಾಸಗೊಂಡಿವೆ. ಈ ಸಾಲುರೇಖೆಗಳು ಕರಾರುವಾಕ್ಕಾಗಿ ಪ್ರಧಾನ ದಿಕ್ಕುಗಳ ಅಕ್ಷದಲ್ಲಿವೆ. ವಜ್ರಾಕೃತಿಯ ಚೌಕದ ಕೇಂದ್ರದಲ್ಲಿ ಇನ್ನೊಂದು ವರ್ಗಾಕಾರದ ಸಣ್ಣ (೩೫ ಮೀ. X ೩೫ಮೀ) ರಚನೆಯಿದೆ. ಪದ್ದಯ್ಯನವರು ನೀಡಿರುವ ಈ ವಿವರಗಳನ್ನು ಆಧರಿಸಿ ಅಡಕ ಚಿತ್ರ (ರೇಖಾಚಿತ್ರ-೨)ವನ್ನು ರೂಪಿಸಿದೆ.

ಹನಮಸಾಗರದ ಅಕ್ಷಾಂಶ ರೇಖಾಂಶಗಳು ಕ್ರಮವಾಗಿ ೭೬° ೨೭' ೧೦" G ಮತ್ತು ೧೬° ೧೯' ೧೮" ಪೂ. ಚಿತ್ರ-೨ರಲ್ಲಿ ಸೂಚಿಸಿರುವಂತೆ ಇಲ್ಲಿನ ಕಲ್ಲುಗಳನ್ನು ಕರ್ಕಾಟಕ ಹಾಗೂ ಮಕರ ಸಂಕ್ರಮಣಗಳಂದು ಸೂರ್ಯನ ಉದಯಾಸ್ತದ ದಿಕ್ಕುಗಳನ್ನು ಸೂಚಿಸುವಂತೆ ವೈಶಿಷ್ಟ್ಯ ಪೂರ್ಣವಾಗಿ ವಿನ್ಯಾಸಗೊಳಿಸಿದೆ. ಈ ಸಂಕ್ರಮಣಗಳಂದು ಸೂರ್ಯನ ಉದಯಕಿರಣಗಳು ಪೂರ್ವದ ಕೊನೆಯ ಸಾಲಿನ ಕಡೆಯ ಕಲ್ಲುಗಳಿಂದ ಹಾದು ಪಶ್ಚಿಮದ ಮಧ್ಯದ ಕಲ್ಲುಗಳ ಮೂಲಕ ಸಾಗುತ್ತವೆ. ಅದರಂತೆಯೇ ಅಸ್ತಕಿರಣಗಳು ಪಶ್ಚಿಮದ ಕಡೆಯ ಸಾಲಿನ ಕೊನೆಯ ಕಲ್ಲುಗಳಿಂದ ಸಾಗಿ, ಪೂರ್ವದ ಮಧ್ಯದ ಕಲ್ಲುಗಳ ಬಳಿ ವೀಕ್ಷಣೆಗೆ ಒದಗುತ್ತವೆ. ವಜ್ರಾಕೃತಿಯ




೨. ಖಗೋಳ ಶಾಸ್ತ್ರೀಯ ದಿಕ್‌ರೇಖೆಗಳನ್ನು ಸೂಚಿಸಿರುವ ಹನಮಸಾಗರ ನಿವೇಶನದ ವಿನ್ಯಾಸದ ಅಡಕ ನಕ್ಷೆ (ಮಧ್ಯದ ಸಾಲುಗಳ ಕಲ್ಲುಗಳನ್ನು ಉದ್ದೇಶಪೂರ್ವಕವಾಗಿ ತುಂಬಿಲ್ಲ.) (ಕೃಪೆ: ಎನ್. ಕೆ. ರಾವ್).

೨. ಹನಮಸಾಗರದ ಸಾಲ್ಗಲ್ಲುಗಳು ಪೂರ್ವದ ನೋಟ. ಬಾಣದ ಗುರುತು ಕೇಂದ್ರದ ಚಕ್ರ(ಚೌಕ) ಕಟ್ಟೆಯನ್ನು ತೋರಿಸುತ್ತದೆ. (ಕೃಪೆ: ಕೆ. ಪದ್ದಯ್ಯ).



ಚೌಕಾಕಾರದ ವಿನ್ಯಾಸ ಈ ಉದ್ದೇಶವನ್ನು ಪರಿಪೂರ್ಣವಾಗಿ ಸಾಧಿಸಿದೆ. ಒಟ್ಟು ವಿನ್ಯಾಸದ ಕೇಂದ್ರದಲ್ಲಿರುವ 'ಚಕ್ರಿ (ಚೌಕಿ) ಕಟ್ಟೆ' ವೀಕ್ಷಣಾಕೇಂದ್ರದ ಸ್ಥಾನಸೂಚಕ. ರಾವ್ ಅವರ ಕ್ಷೇತ್ರಕಾರ್ಯದಲ್ಲಿ ವಿನ್ಯಾಸದ ಪಶ್ಚಿಮದಲ್ಲಿ ಕೇಂದ್ರಕ್ಕೆ ಸಮಾಕ್ಷದಲ್ಲಿರುವ ಇನ್ನೊಂದು ಕಟ್ಟೆ ಪತ್ತೆಯಾಗಿದೆ. ಅದರಂತೆಯೇ ಪೂರ್ವದಲ್ಲಿಯೂ ಇರುವ, ಇದ್ದ ಸಾಧ್ಯತೆಯಿದೆ. ಬಹುಸಂಖ್ಯೆಯಲ್ಲಿನ ಕಲ್‌ಸಾಲುಗಳು ಹೆಚ್ಚು ಕರಾರುವಾಕ್ಕಾದ ಸಮೀಕ್ಷೆಗಳಿಗೆ ಬೇಕಾದ ದೃಕ್‌ರೇಖೆ (sight lines)ಗಳನ್ನು ಒದಗಿಸುತ್ತವೆ. ದಿಗಂತದಲ್ಲಿ ಉದಯಾಸ್ತ ಕಾಲಗಳಲ್ಲಾಗುವ (ಅಯನ ಸಂಕ್ರಮಣಬಿಂದುಗಳ ಬಳಿ ಸೂರ್ಯನ ಮಂದಗತಿ ಮತ್ತು ವಿಷುವ ಸಂಕ್ರಮಣಬಿಂದುಗಳ ಬಳಿಯ ತೀವ್ರಗತಿಯಿಂದುಂಟಾಗುವ) ಬದಲಾವಣೆಯನ್ನು ಪರಿಶೀಲಿಸುವಾಗ ಹೆಚ್ಚಿನ ಸಂಖ್ಯೆಯ ದೃಕ್‌ರೇಖೆಗಳು ಅವಶ್ಯಕವಾಗುತ್ತವೆ. ತಾತ್ವಿಕವಾಗಿ ಹಾಗೂ ತಾರ್ಕಿಕವಾಗಿ ಈ ವಿಶಿಷ್ಟ ವಿನ್ಯಾಸದ ಪ್ರಯೋಜನ ಹಲವು ಹತ್ತು ತೆರನವು. ಕಲ್ಲುಗಳ ನೆರಳಿನ ಪ್ರಮಾಣವನ್ನನುಸರಿಸಿ ದಿನದಲ್ಲಿನ ಕಾಲಗಣನೆ, ತಿಂಗಳು, ಋತು, ವರ್ಷದ ಕಾಲಗಣನೆಗಳು ಸಾಧ್ಯ. ಚಾಂದ್ರ ಸಂಕ್ರಮಣ ಮುಂತಾದ ಚಲನೆಗಳ ಸಮೀಕ್ಷೆಗೆ ಸಹಕಾರಿಯಾಗಬಹುದಾದರೂ ಅದಕ್ಕೆ ತೀವ್ರ ಕ್ಷೇತ್ರಕಾರ್ಯ, ಅಧ್ಯಯನ ಅವಶ್ಯಕ.

ಖಗೋಳದ ಸಮೀಕ್ಷಾತ್ಮಕ ವೀಕ್ಷಣೆಗಾಗಿ ಬಹುಶಃ ಬೃಹತ್ ಶಿಲಾಯುಗದ ಜನರು ರೂಪಿಸಿಕೊಂಡ ವಿವಿಧ ವಿನ್ಯಾಸಪೂರ್ಣ ನಿರ್ಮಿತಿಗಳಲ್ಲಿ ಹನಮಸಾಗರದ್ದೂ ಒಂದು. ಇಂತಹ ಸಮೀಕ್ಷೆಯ ಮುಖ್ಯ ಉದ್ದೇಶ ಆ ಕಾಲದ ಕೃಷಿಕ ಸಮಾಜದ ಆದ್ಯ ಅವಶ್ಯಕತೆಗಳಾದ ಬಿತ್ತನೆ, ಮಳೆ, ಕುಯಿಲುಗಳಿಗೆ ಪ್ರಶಸ್ತವಾದ ನಿರ್ದಿಷ್ಟ ಕಾಲ, ಅವಧಿಗಳ, ಋತು ಬದಲಾವಣೆಯ ಬಗೆಗೆ ಮುನ್ಸೂಚನೆ ನೀಡುವುದು. ಜೊತೆಗೆ ಧಾರ್ಮಿಕ ಪ್ರಕ್ರಿಯೆಗಳಿಗೆ ಪವಿತ್ರ ಮೂಹರ್ತ, ದಿನಗಳನ್ನು ನಿರ್ಧರಿಸುವುದು. (ವಿಶೇಷ ಮಹತ್ವದ ವ್ಯಕ್ತಿಗಳ ಮರಣ ದಿನಾಂಕಗಳನ್ನು ದಾಖಲಿಸಿ, ಗುರುತಿಸಿಕೊಂಡು ಅಂದಿನ ಧಾರ್ಮಿಕ ಆಚರಣೆಯ ವಿಧಿವಿಧಾನಗಳ ನಿರ್ಧಾರಕ್ಕೂ ಒದಗಬಹುದೇನೋ?).

ಈಗ ಇಡೀ ಹನಮಸಾಗರ ನಿವೇಶನ ಕೃಷಿಕರ ವೈಯಕ್ತಿಕ ಸ್ವತ್ತಾಗಿದ್ದು ವ್ಯವಸಾಯ ನಿರಂತರವಾಗಿ ಸಾಗುತ್ತಿದೆ. ಪರಿಣಾಮವಾಗಿ ಕಲ್ಲುಗಳ ವಿನ್ಯಾಸ ಬಹುಮಟ್ಟಿಗೆ ಹದಗೆಡುತ್ತಿದೆ. ಇಂತಹ ಪ್ರಮುಖ ನಿವೇಶನಗಳನ್ನು ಭಾವೀ ಪೀಳಿಗೆಗಾಗಿ ಉಳಿಸಿಕೊಳ್ಳುವುದು ನಮ್ಮೆಲ್ಲರ ಹೊಣೆಗಾರಿಕೆ.

ಹೀಗೆ, ದಕ್ಷಿಣ ಭಾರತದ ಸಹಸ್ರಾರು ನಿವೇಶನಗಳಲ್ಲಿ ಅನೇಕ ಸ್ಥಳಗಳಲ್ಲಿ, ವಿಶೇಷವಾಗಿ ಕೊಡಗಿನ ಮೋರಿಬೆಟ್ಟ, ಬೆಂಗಳೂರಿನ ಬಳಿಯ ಸಾವನದುರ್ಗ, ಮಾನಗೊಂಡನಹಳ್ಳಿ, ಬನ್ನೇರುಘಟ್ಟ, ಶಿವಮೊಗ್ಗ ಜಿಲ್ಲೆಯ ನಿಲಸ್ಕಲ್, ಕೊಪ್ಪಳ ಜಿಲ್ಲೆಯ ಗಂಗಾವತಿಯ ಹತ್ತಿರದ ಹಿರೇಬೆನಕಲ್ ಸಮೂಹ, ಬಾಗಲಕೋಟೆ ಜಿಲ್ಲೆಯ ಐಹೊಳೆ, ಗುಲ್ಬರ್ಗಾ ಜಿಲ್ಲೆಯ ಮರಳಭಾವಿ, ವಿಭೂತಿಹಳ್ಳಿ ಮುಂತಾದ ಸ್ಥಳಗಳಲ್ಲಿರುವ ಸಮಾಧಿ ಹಾಗೂ ಸಾಂಕೇತಿಕ ಸ್ಮಾರಕಗಳೆಲ್ಲದರ ವಿಶೇಷಾಧ್ಯಯನದಿಂದ ಬಹಳಷ್ಟು ಮಾಹಿತಿ, ಆಧಾರಗಳು ಬೆಳಕಿಗೆ ಬರಬಹುದು. ಮೇಲೆ ಹೇಳಿದ ಹೆಚ್ಚಿನ ಸ್ಥಳಗಳಲ್ಲಿ ವಿವಿಧ ರೀತಿಯ ಕಲ್ಗೋರಿಗಳು ಬೆಟ್ಟದ ತಪ್ಪಲಿನಲ್ಲಿ ಅಥವಾ ದಿನ್ನೆಯಂತಹ ಎತ್ತರಪ್ರದೇಶದಲ್ಲಿ ಒಂದು ನಿರ್ದಿಷ್ಟ ಕೋನ, ಅಕ್ಷ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡೇ ನಿರ್ಮಾಣವಾಗಿರುವುದು ಬಹುಶಃ ದಿಗಂತ ಹಾಗೂ ಆಕಾಶಕಾಯಗಳ ವೀಕ್ಷಣೆಗಾಗಿಯೇ ಇರಬೇಕು. ಹೆಚ್ಚಿನ ಅಂತಶ್ಶಾಸ್ತ್ರೀಯ ಅಧ್ಯಯನಗಳಿಂದ ಮಾತ್ರವೇ ಇನ್ನಷ್ಟು ಪೂರಕ ಮಾಹಿತಿ ಬೆಳಕಿಗೆ ಬರಲು ಸಾಧ್ಯ.

### ಇತಿಹಾಸ ಕಾಲದ ವಾಸ್ತು ನಿರ್ಮಿತಿಗಳು

ಮೌರ್ಯ ಸಾಮ್ರಾಟ ಅಶೋಕನ ಕಾಲದಿಂದ ಬೆಳೆದುಬಂದ ಕಲ್ಲಿನ ರಾಚನಿಕ ವಾಸ್ತುಗಳಲ್ಲಿ ಸಾಕಷ್ಟು ಉತ್ತಮ ಸ್ಥಿತಿಯಲ್ಲಿ ಉಳಿದಿರುವುವು ಮಧ್ಯಪ್ರದೇಶ ರಾಜ್ಯದ ರಾಯ್‌ಸೇನ್ ಜಿಲ್ಲೆಯ ಸಾಂಚಿಯಲ್ಲಿನ ಸ್ತೂಪಗಳು. ಬೌದ್ಧರಿಗೆ ಪವಿತ್ರವೆನಿಸಿದ ಧಾತು ಕರಂಡಕ, ಅದ್ಭುತ ಸೌಂದರ್ಯ,



೩. ಸ್ತೂಪ-೧ ಮತ್ತು -೨ ತಲವಿನ್ಯಾಸ. (ಸಾಂಚಿ, ಮಧ್ಯ ಪ್ರದೇಶ). ಸ್ತೂಪ-೧ರ ದಕ್ಷಿಣೋತ್ತರ ಅಕ್ಷ ಸು.೧೫ಲಿ ನೈಋತ್ಯಕ್ಕೆ ವಾಲಿರುವುದು ಗಮನಾರ್ಹ, ಸ್ತೂಪ -೨ರಲ್ಲಿ ಹೊರವೇದಿಕೆಯ ಕಂಬ(೮೮), ಒಳವೇದಿಕೆಯ ೧೨ ಭಾಗ ಮತ್ತು ಪರಿಷ್ಕಾರಕ ಸಂಖ್ಯೆ(೧೧ ೨/೯)ಯನ್ನು ನಿರ್ಧರಿಸಿದ ಕ್ರಮ-ಇವು ಸೂಚಿತವಾಗಿವೆ. (ಕೃಪೆ: ಭಾ.ಪು.ಸ).

ಕಲಾತ್ಮಕ ಶಿಲ್ಪ, ಮಹತ್ತರ ಐತಿಹಾಸಿಕ, ಧಾರ್ಮಿಕ ದಾಖಲೆಗಳಾದ ಶಾಸನಗಳ ಆಗರವಾಗಿರುವಂತೆಯೇ ಇಲ್ಲಿನ ಮಹಾಸ್ತೂಪ (ಸ್ತೂಪ-೧)ವು ಬೌದ್ಧರ ವಿಶ್ವಶಾಸ್ತ್ರ (cosmology) ತತ್ತ್ವದ ಜ್ಯಾಮಿತೀಯ, ಸಾಂಕೇತಿಕ ನಿರೂಪಣೆಯೂ ಆಗಿದೆ. ಇದರ ಮುಖ್ಯ ಪ್ರವೇಶದ್ವಾರ, ತೋರಣಗಳನ್ನು ಪ್ರಧಾನ ದಿಕ್ಕುಗಳಿಗೆ ಕರಾರುವಾಕ್ಕಾಗಿ ಹೊಂದಿಸಲಾಗಿದೆಯಲ್ಲದೆ, ಕೆಲವು ಅಳತೆ, ಪ್ರಮಾಣಗಳು ಸೌರಮಂಡಲದ ತತ್ವಗಳನ್ನು ಆಧರಿಸಿದೆ. ಆಕಾಶದಲ್ಲಿ ಸೂರ್ಯನ ಚಲನೆಯನ್ನು ಅನುಸರಿಸಿ ಸ್ತಂಭ, ಸೂಚಿಗಳಿರುವ ವೇದಿಕೆಯನ್ನು ರೂಪಿಸಿದೆ. ಆದರೆ ಸ್ತೂಪ-೧ರ ತಲವಿನ್ಯಾಸವನ್ನು ಪ್ರಧಾನ ದಕ್ಷಿಣೋತ್ತರ ದಿಕ್ಕಿನ ಅಕ್ಷಕ್ಕೆ ಹೊಂದಿಸದೆ ಸು. ೧೫°ಗಳಷ್ಟು ನೈಋತ್ಯದತ್ತ ವಾಲಿಸಿರುವುದು ಗಮನಾರ್ಹವಾಗಿದೆ. ಈ ಸ್ತೂಪದ ಪರಿಸರದಲ್ಲಿ ಅಶೋಕನ ಪ್ರಸಿದ್ಧ ಶಾಸನಸ್ತಂಭವಿದ್ದುದರಿಂದ ವೇದಿಕೆ, ತೋರಣಗಳನ್ನು ಕಟ್ಟುವಾಗ ಶುಂಗ-ಶಾತವಾಹನ ಕಾಲದಲ್ಲಿ ಸ್ತೂಪವನ್ನು ಸಂದರ್ಶಿಸುವವರಿಗೆ, ಪೂಜಿಸುವವರಿಗೆ ತೊಂದರೆ ಆಗದಿರಲೆಂದು ಈ ಬದಲಾವಣೆ ಮಾಡಿರಬಹುದೆಂದು ಸರ್ ಜಾನ್ ಮಾರ್ಷಲ್ ಅಭಿಪ್ರಾಯಪಟ್ಟಿದ್ದಾರೆ. ಆದರೆ ಸಾಂಚಿಯಲ್ಲಿ ಶುಂಗ-ಶಾತವಾಹನ ಕಾಲದಲ್ಲಿ ಕಟ್ಟಿದ ಅಶೋಕನ ಸ್ತಂಭಶಾಸನವಿಲ್ಲದಿರುವ ಇತರ ಸ್ತೂಪಗಳ ತಲವಿನ್ಯಾಸದಲ್ಲಿಯೂ ದಕ್ಷಿಣೋತ್ತರ ಅಕ್ಷ ನೈಋತ್ಯದತ್ತ ವಾಲಿರುವುದು ಕುತೂಹಲಕರವಾಗಿದೆ.

ಬೌದ್ಧ ಧರ್ಮಾನುಯಾಯಿಗಳಿಗೆ ವೈಶಾಖ ಶುದ್ಧ ಪೌರ್ಣಿಮೆ ಅತ್ಯಂತ ಪವಿತ್ರವಾದ ದಿನ. ಬುದ್ಧನ ಜೀವನದ ಮೂರು ಮುಖ್ಯಘಟನೆಗಳಾದ ಜನನ, ಸಂಬೋಧಿ ಮತ್ತು ಮಹಾಪರಿನಿರ್ವಾಣಗಳು ಸಂಭವಿಸಿದುದು ಈ ದಿನದಂದೇ. ಅದರಲ್ಲಿಯೂ ಸಿದ್ಧಾರ್ಥನಿಗೆ ಜ್ಞಾನೋದಯನಾಗಿ ಆತ ಬುದ್ಧನಾದುದು ವೈಶಾಖ ಪೌರ್ಣಿಮೆಯಂದೇ. ಆದುದರಿಂದ ವಿಶೇಷ ಮಹತ್ವದ ಈ ದಿನದಂದು ಅನೇಕ ಧಾರ್ಮಿಕ ಆಚರಣೆ, ದಾನಧರ್ಮಾದಿಗಳನ್ನು ಬೌದ್ಧರು ನಡೆಸಿಕೊಂಡು ಬಂದಿದ್ದಾರೆ. ಅದರಂತೆಯೇ ಮಹಾಪರಿನಿರ್ವಾಣದ ನೆನಪಿನಲ್ಲಿ ಬಹುಶಃ ಶುಂಗ-ಶಾತವಾಹನ ಕಾಲದಿಂದಾರಂಭವಾದಂತೆ ವೈಶಾಖದ ಹುಣ್ಣಿಮೆಯಂದು ವಿಹಾರ, ಸ್ತೂಪ, ಸಂಘಗಳಿರುವೆಡೆಯೆಲ್ಲ 'ಧಾತುಪೂಜನ'ವೆಂಬ ಉತ್ಸವವನ್ನು ಆಚರಿಸುವ ಸಂಪ್ರದಾಯವೂ ಪ್ರಾರಂಭವಾಯಿತು. ಈ ಹಿನ್ನೆಲೆಯಲ್ಲಿ ಸಾಂಚಿಯ ಸ್ತೂಪಗಳ ದಕ್ಷಿಣೋತ್ತರ ಅಕ್ಷವನ್ನು ನೈಋತ್ಯಕ್ಕೆ ವಾಲಿಸಿರುವುದರ ಅರ್ಥ ಸ್ಪಷ್ಟವಾಗುತ್ತದೆ. ವಾಲಿದ ಈ ಅಕ್ಷರೇಖೆಯು ದಿಗಂತದಲ್ಲಿ ವೈಶಾಖ ಶುದ್ಧ ಪೌರ್ಣಿಮೆಯಂದು ಸೂರ್ಯಾಸ್ತವಾಗಿ, ಪೂರ್ಣ ಚಂದ್ರ ಉದಯವಾಗುವ ರೇಖೆಗೆ ಸರಿಯಾಗಿ ಹೊಂದಿಸಲ್ಪಟ್ಟಿದೆ. ಇದು ಬುದ್ಧ ಪೌರ್ಣಿಮೆಯ ಹಿರಿಮೆಯನ್ನು ಎತ್ತಿಕಾಣಿಸಲು ಶುಂಗ ಕಾಲದ ಸ್ಥಪತಿ, ವಾಸ್ತುತಜ್ಞರು ಉದ್ದೇಶಪೂರ್ವಕವಾಗಿ ಮಾಡಿದ ಬದಲಾವಣೆ.

೩. ಸೂರ್ಯದೇವಾಲಯ ಮತ್ತು ಪುಷ್ಕರಿಣಿ (ಮೊಢೇರಾ, ಗುಜರಾತ್). (ಕೃಪೆ: ಎನ್. ಕೆ. ರಾವ್).



ಇದಲ್ಲದೆ ವೇದಿಕೆಯಲ್ಲಿ ಸ್ತಂಭ, ಸೂಚಿಗಳ ಸಂಖ್ಯೆ, ವಿನ್ಯಾಸವನ್ನು ಚಾಂದ್ರ-ಸೌರಪಂಚಾಂಗದ ಮಾಸ, ಋತು, ವರ್ಷಕ್ಕೆ ಸರಿಹೊಂದುವಂತೆ ಅಳವಡಿಸಿರುವುದು ಆ ಕಾಲದ ವಾಸ್ತುತಜ್ಞರ ಖಗೋಳ ಶಾಸ್ತ್ರ, ಪಂಚಾಂಗ ಜ್ಞಾನಗಳ ಜೊತೆಗೆ ಕಲಾತ್ಮಕ ನೈಪುಣ್ಯಕ್ಕೂ ಸಾಕ್ಷಿಯಾಗಿದೆ. ಸ್ತೂಪ-೨ರ ತಲವಿನ್ಯಾಸದಲ್ಲಿ ಕಂಡುಬರುವಂತೆ (ರೇಖಾಚಿತ್ರ-೩) ಪ್ರದಕ್ಷಿಣಾಪಥದ ಸುತ್ತ ಇರುವ ಕಟಾಂಜನದಲ್ಲಿ ಒಟ್ಟು ೮೮ ಕಂಬಗಳಿವೆ (ವೃತ್ತಾಯತಾಕಾರದ ಬಿಂದುಗಳಿಂದ ಸೂಚಿಸಿರುವುದು), ಪ್ರತಿ ಎರಡು ಸ್ತಂಭಗಳ ನಡುವೆ (ತೋರಣದ್ವಾರದ ಹೊರಸ್ತಂಭಗಳನ್ನು ಹೊರತುಪಡಿಸಿ) ಸೂಚಿಗಳಿದ್ದು. ಸ್ತಂಭಗಳನ್ನು ನಾಲ್ಕು ವೃತ್ತ ಭಾಗಗಳಲ್ಲಿ ಜೋಡಿಸಿದೆ. ಸ್ತಂಭಗಳ ಒಟ್ಟು ಸಂಖ್ಯೆ (೮೮) ಮೂರು ಚಾಂದ್ರಮಾನ ತಿಂಗಳ ಒಟ್ಟು ದಿನಗಳನ್ನು ಸೂಚಿಸುತ್ತದೆ. (೨೯.೫ x ೩=೮೮.೫ ಅರ್ಧದಿನವನ್ನು ಸ್ತಂಭರೂಪದಲ್ಲಿ ತೋರಿಸುವುದು ಸಾಧ್ಯವಿಲ್ಲವಾಗಿ ೨೯ ಅಥವಾ ೩೦ರ ಪೂರ್ಣಸಂಖ್ಯೆಯಾಗಿ ಗ್ರಹಿಸಿದೆ).

ಅದರಂತೆಯೇ ವೇದಿಕೆಯ ಪ್ರತಿಕಂಬವನ್ನು ಪ್ರದಕ್ಷಿಣ ಕ್ರಮದಲ್ಲಿ ಎಣಿಸುತ್ತ ಮೊದಲಿನ ಕಂಬಕ್ಕೆ ಹಿಂದಿರುಗುವಲ್ಲಿ ೮೯ ಕಂಬಗಳು, ೮೮ ನಡುವಣ ಸ್ಥಳಗಳೂ ಬರುತ್ತವೆ. ಹೀಗೆ ಎಣಿಸುತ್ತ ನಾಲ್ಕುಬಾರಿ ಪ್ರದಕ್ಷಿಣೆ ಮಾಡಿದರೆ ೧೨ ಚಾಂದ್ರ ತಿಂಗಳುಗಳಲ್ಲಿನ ದಿನಗಳ ಒಟ್ಟು ಸಂಖ್ಯೆ (೩೫೪) ದೊರೆಯುತ್ತದೆ. ಈಗ ಒಳವೇದಿಕೆಯ ಕಂಬಗಳನ್ನು (೧೦೧) ಚಿತ್ರದಲ್ಲಿ ತೋರಿಸಿರುವಂತೆ ೯ ಕಂಬಗಳ ೧೧ ಗುಂಪು ಮಾಡಿದರೆ, ೧೨ನೆಯ ಗುಂಪಿಗೆ ೨/೯ ಉಳಿಯುತ್ತದೆ. ಈ ಸಂಖ್ಯೆ ೧೧ ೨/೯, ಚಾಂದ್ರವರ್ಷವನ್ನು ಸೌರವರ್ಷವಾಗಿ ಪರಿವರ್ತಿಸಲು ಸೇರಿಸಬೇಕಾದ ಪರಿಷ್ಕಾರಕವಾಗಿರುವುದು ಗಮನಾರ್ಹ. ಅಂದರೆ ಪ್ರತಿ ಚಾಂದ್ರಮಾಸದ ದಿನಗಳಿಗೆ ಒಂದು ದಿನ ಹೆಚ್ಚು ಸೇರಿಸಿ ಕಡೆಯ ೧೨ನೆಯ ತಿಂಗಳಿಗೆ ೨/೯ ಸೇರಿದರೆ ಸೌರವರ್ಷದ ದಿನಗಳ ಸಂಖ್ಯೆ (೩೬೫) ಒದಗುತ್ತದೆ. ಅಲ್ಲದೆ ಸ್ತೂಪದ ಮೇಲಿರುವ ಹರ್ಮಿಕೆಯ ವೇದಿಕೆ ಚಾಂದ್ರಪಥದ ನಕ್ಷತ್ರಗಳನ್ನು ಸೂಚಿಸುತ್ತದೆ. ಹೀಗೆ ಸ್ತೂಪ ಮತ್ತು ವೇದಿಕೆಗಳ ಒಟ್ಟು ವಿನ್ಯಾಸದಲ್ಲಿ ಚಂದ್ರ, ಸೂರ್ಯ, ನಕ್ಷತ್ರಗಳಿಗೆ ಸಂಬಂಧಿಸಿದ ವಿವರಗಳನ್ನು, ಭೂಮಿಯಿಂದ ಅವು ಇರುವ ದೂರದ ಪ್ರಮಾಣವನ್ನನುಸರಿಸಿ (ಹೊರವೇದಿಕೆಯಲ್ಲಿ ಚಾಂದ್ರ, ಒಳವೇದಿಕೆಯಲ್ಲಿ ಸೌರ ಮತ್ತು ಮೇಲೆ ನಕ್ಷತ್ರ) ಅಳವಡಿಸಲಾಗಿದೆ.

ಇದೆಲ್ಲಕ್ಕಿಂತ ಹೆಚ್ಚಾಗಿ ಈ ಸ್ಮಾರಕಗಳನ್ನು ರೂಪಿಸಲು ಸಾಂಚಿಯನ್ನು ಸೂಕ್ತ ಸ್ಥಳವೆಂದು ಆಯ್ಕೆ ಮಾಡಿರುವುದೂ ಖಗೋಳ ವಿಜ್ಞಾನದ ತತ್ತ್ವವನ್ನು ಆಧರಿಸಿಯೇ. ಸಾಂಚಿ ನಿವೇಶನದ ಅಕ್ಷಾಂಶ (೨೩೮-೨೮°)ವು ಕರ್ಕಾಟಕ ಸಂಕ್ರಮಣದ ದಿನ ಸೂರ್ಯನ ಕೋನದೂರ ಅಥವಾ ಕ್ರಾಂತಿಯ ಪರಿಮಿತಿಯೊಳಗೆ (ಸೂರ್ಯನ ಕೋನತ್ರಿಜ್ಯ ಸು. ೧೬°) ಇದ್ದು ವರ್ಷದ ಅತಿದೀರ್ಘ ದಿನದಂದು ರವಿ ನಡುನೆತ್ತಿಯ ಮೇಲಿರುವುದರಿಂದ ಆ ವೇಳೆಯಲ್ಲಿ ಇಲ್ಲಿನ ಯಾವುದೇ ಸ್ಮಾರಕದ ನೆರಳು ಭೂಮಿಯ ಮೇಲೆ ಬೀಳುವುದಿಲ್ಲ. ಇಂತಹ ಖಗೋಳವಿಜ್ಞಾನದ ವಿವರಗಳನ್ನು ನಿಕರವಾಗಿ ಒಳಕೊಂಡಿರುವ ಈ ಸ್ಮಾರಕಗಳು ಭಾರತದ ಇದುವರೆಗೆ ತಿಳಿದಿರುವ ಪ್ರಾಚೀನತಮ ಜ್ಯೋತಿರ್ವಿಜ್ಞಾನ ನಿರ್ಮಿತಿಯಾಗಿವೆ.

ಧಾರ್ಮಿಕ ನಿರ್ಮಿತಿಗಳನ್ನು ಖಗೋಳವಿಜ್ಞಾನದ ವಿವರಗಳ ವೀಕ್ಷಣೆ, ದಾಖಲಾತಿ ಮುಂತಾದವುಗಳಿಗೆ ಬಳಸುವ ಪರಂಪರೆಯ ಮುಂದುವರಿಕೆಯನ್ನು ಅನಂತರದ ಕಟ್ಟಡಗಳಲ್ಲಿ ಸಂಶೋಧಿಸುವ ಸಂದರ್ಭದಲ್ಲಿ ಕಾಶ್ಮೀರದ ಮಾರ್ತಾಂಡದಲ್ಲಿನ ಸೂರ್ಯದೇವಾಲಯ ಮುಖ್ಯವಾದ್ದು. ಕಾರ್ಕೋಟ ವಂಶದದೊರೆ ಲೋಕಾದಿತ್ಯ (ಕ್ರಿ.ಶ. ೭೨೪-೭೬೦) ಕ್ರಿ.ಶ. ೭೨೪ ಸುಮಾರಿಗೆ ಎತ್ತರದ ರಮಣೀಯ ಪ್ರದೇಶದಲ್ಲಿ ಕಟ್ಟಿದ ಈ ಪ್ರಾಚೀನತಮ ಕಲ್ಲಿನ ದೇವಾಲಯ ತನ್ನ ಸರಳಸೌಂದರ್ಯ, ಭವ್ಯಗಾತ್ರಗಳಿಗೆ ಪ್ರಸಿದ್ಧವಾಗಿದೆ. ಪ್ರಾಚೀನ ದಾರುವಾಸ್ತು [=ಕಾಷ್ಠಶಿಲ್ಪ] ವನ್ನನುಸರಿಸಿಯೇ ಕಟ್ಟಿರುವುದರಿಂದ ಇನ್ನಾವ ವಿಶೇಷ ಆಕರ್ಷಣೆಯಿಲ್ಲ. ಖಗೋಳ ವಿಜ್ಞಾನದ ವಿವರ, ಸೌರಮಂಡಲದ ಸಾಂಕೇತಿಕತೆಯನ್ನು ಸಾಂಚಿಯ ಸ್ತೂಪದಂತೆಯೇ ಸ್ಪಷ್ಟವಾಗಿ ನಿರೂಪಿಸುತ್ತಿರುವ




೪. ಮಾರ್ತಾಂಡ (ಕಾಶ್ಮೀರ) ಮಂದಿರದ ತಲವಿನ್ಯಾಸ. ಪ್ರಾಕಾರದ ಹೊರಪರಿಧಿಯ ೧೨ ಜೊತೆ ಕಂಬ, ಒಳಪರಿಧಿಯ ೮೮ ಕಂಬ ಮತ್ತು ಮಕರ-ಕರ್ಕಾಟಕ ಸಂಕ್ರಾಂತಿಗಳಂದು ಸೂರ್ಯಾಸ್ತದ ದಿಕ್ಕನ್ನು ಸೂಚಿಸಿದೆ. (ಕೃಪೆ: ಎನ್. ಕೆ. ರಾವ್).

ಈ ದೇವಾಲಯವನ್ನು ಕುರಿತ ಕ್ಷೇತ್ರಾಧ್ಯಯನ ಕಾರ್ಯ ಇನ್ನೂ ಮುಂದುವರೆಯುತ್ತಿದೆ.

ಪಶ್ಚಿಮಾಭಿಮುಖವಾದ ಈ ದೇವಾಲಯದ ತಲವಿನ್ಯಾಸದಲ್ಲಿ (ರೇಖಾಚಿತ್ರ-೪) ಗರ್ಭಗೃಹ ಹಾಗೂ ಮಂಡಪಗಳಿದ್ದು, ಮಂಡಪದ ಉತ್ತರ-ದಕ್ಷಿಣ ಗೋಡೆಗಳಿಗೆ ಹೊಂದಿಕೊಂಡಂತೆ ಗರ್ಭಗೃಹಗಳ ಜೋಡಿಗಳಿವೆ. ಹೀಗಾಗಿ ಮಂಡಪದ ಮಧ್ಯಭಾಗ ಇಡೀವಾಸ್ತುವಿನ ಕೇಂದ್ರವಾಗಿದೆ. ಗರ್ಭಗೃಹ, ಮುಖ್ಯಪ್ರವೇಶದ್ವಾರಗಳ ನಡುವೆ ಸಮಾನ ಅಕ್ಷದಲ್ಲಿ ಆಯತಾಕಾರದ ಪುಷ್ಕರಿಣಿಯಿದೆ. ಇದನ್ನೆಲ್ಲ ಸುತ್ತುವರೆದಂತೆ ವಿಶಾಲ ಆವರಣ, ಅದರ ಸುತ್ತ ಭವ್ಯಪ್ರಾಕಾರವಿದೆ. ಪ್ರಾಕಾರದ ಒಳಪರಿಧಿಯಲ್ಲಿ ೮೪ ಕಿರು ಮಂದಿರಗಳಿದ್ದು ಅವುಗಳ ಪಕ್ಕಗಳಲ್ಲಿರುವ ಬಹುಮುಖಿ ಕಂಬಗಳು ಸಿರಿಯೋ-ರೋಮನ್ ಶೈಲಿಯ ಪೀಠ, ಬೋದಿಗೆಗಳನ್ನು ಹೊಂದಿವೆ. ಪ್ರಾಕಾರದ ನಾಲ್ಕು ಒಳಮೂಲೆಗಳಲ್ಲಿ ಉಪಮಂದಿರಗಳಿವೆ.

ಮಂದಿರದ ತಲವಿನ್ಯಾಸದಲ್ಲಿ ಮೊದಲಿಗೇ ಮನಸೆಳೆಯುವ ಅಂಶ ಸಾಂಚಿಸ್ತೂಪದ ಹೊರವೇದಿಕೆಯಲ್ಲಿನಂತೆ, ಮೂರು ಚಾಂದ್ರಮಾಸಗಳನ್ನು ಪ್ರತೀಕಿಸುವ, ಇಲ್ಲಿನ ಪ್ರಾಕಾರದೊಳಗಿನ ೮೮ ಕಂಬಗಳು, ಒಳಮೂಲೆಯ ನಾಲ್ಕು ಉಪಮಂದಿರಗಳಿಂದ ಸೂಚಿತವಾಗುವಂತೆ ಪ್ರಾಕಾರದ ನಾಲ್ಕು ಪ್ರದಕ್ಷಿಣೆ ೩೫೪ ದಿನಗಳ ಚಾಂದ್ರವರ್ಷದ ಸೂಚಕ. ಹೊರವಲಯದ ೧೨ ಜೋಡಿಕಂಬಗಳು ವರ್ಷದ ಹನ್ನೆರಡು ತಿಂಗಳು ಮತ್ತು ಸೂರ್ಯಪಥದಲ್ಲಿನ ರಾಶಿಮಂಡಲಗಳನ್ನು ಪ್ರತಿನಿಧಿಸುತ್ತವೆ. (ಕೋನಾರ್ಕ ದೇವಾಲಯದ ೧೨ ಜೋಡಿಚಕ್ರಗಳಂತೆ.) ಈ ಮಂದಿರದ ಇನ್ನೊಂದು ಮುಖ್ಯಾಂಶ ಇದು ಪಶ್ಚಿಮಾಭಿಮುಖವಾಗಿರುವುದು ಮತ್ತು ಗರ್ಭಗೃಹದ ಕೇಂದ್ರದಿಂದ ಪ್ರವೇಶದ್ವಾರದ ಮಧ್ಯೆ ಸಾಗುವ ಪ್ರಧಾನಾಕ್ಷವನ್ನು ವಿಷುವತ್ಸಂಕ್ರಾಂತಿಯಂದು ಸೂರ್ಯಾಸ್ತವಾಗುವ ದಿಕ್ಕಿಗೆ ಹೊಂದಿಸಿರುವುದು. ಈ ಅಂಶಕ್ಕಿರುವ ವಿಶೇಷ ಸಂಕೇತ, ಔಚಿತ್ಯ ಸದ್ಯದಸ್ಥಿತಿಯಲ್ಲಿ ತಿಳಿದಿಲ್ಲ. ಜೊತೆಗೆ ಪ್ರಾಕಾರದ ಆಗ್ನೇಯ ಹಾಗೂ ವಾಯವ್ಯ ಮೂಲೆಗಳಲ್ಲಿರುವ ಉಪಮಂದಿರದ ಕೇಂದ್ರದಿಂದ ಎಳೆದ ಗೆರೆಗಳು ಈ ಪ್ರಧಾನಾಕ್ಷವನ್ನು ಮಂಡಪದಲ್ಲಿ ಛೇದಿಸುತ್ತವೆ. ಈ ಬಿಂದುವಿನಿಂದ ಅದೇ ದೇವಾಲಯಗಳ ಮೇಲಿಂದ ಮಕರ (ವಾಯವ್ಯ) ಮತ್ತು ಕರ್ಕಾಟಕ (ನೈಋತ್ಯ) ಸಂಕ್ರಾಂತಿಯಂದು ಸೂರ್ಯಾಸ್ತವನ್ನು ವೀಕ್ಷಿಸಬಹುದು. ಈ ಎರಡು ದಿಕ್‌ರೇಖೆಗಳ ನಡುವಣಕೋನ ಆಯತಾಕಾರದ ಪ್ರಾಕಾರದ ಅಗಲ, ಗರ್ಭಗೃಹ ತಲುಪುವ ಸೋಪಾನದ ಅಗಲ ಮತ್ತು ಆಯಾಮೂಲೆಗಳ ಉಪಮಂದಿರದ ಅಳತೆ, ವಿನ್ಯಾಸಗಳನ್ನು ನಿರ್ಧರಿಸಿದೆ. ಹೀಗೆ ತಲವಿನ್ಯಾಸದ ಭಾಗ, ಉಪಭಾಗಗಳಲ್ಲಿ ಇಷ್ಟು ಕರಾರುವಾಕ್ಕಾಗಿ ಖಗೋಳ ವಿಜ್ಞಾನದ ಅಂಶಗಳನ್ನು



೪. ಗೂಢ ಮಂಡಪದೊಳಗಿಂದ ಮಾರ್ಚ್ ೨೮ರ ಬೆಳಗ್ಗೆ ಸೂರ್ಯೋದಯದ ದೃಶ್ಯ. (ಕೃಪೆ: ಎನ್. ಕೆ. ರಾವ್).



೫. ಸೂರ್ಯಕಿರಣಗಳು ಗರ್ಭಗೃಹವನ್ನು ಪ್ರವೇಶಿಸಿರುವುದು (ಚಿತ್ರ-೪ ತೆಗೆದ ಮರುಕ್ಷಣ).(ಕೃಪೆ: ಎನ್. ಕೆ. ರಾವ್).

ಮೊದಲೇ ನಿರ್ಧರಿಸಿ, ವಾಸ್ತುವಿನಲ್ಲಿ ಸಂಯೋಜಿಸಲು ವರ್ಷದ ವಿವಿಧ ಕಾಲಗಳಲ್ಲಿ ನಡೆಸಿರುವ ಸಮೀಕ್ಷಾತ್ಮಕ ಕ್ಷೇತ್ರಾಧ್ಯಯನವಷ್ಟೇ ಅಲ್ಲದೆ ವಿವಿಧಶಾಸ್ತ್ರಗಳಲ್ಲಿ ಸಾಕಷ್ಟು ಪರಿಣತಿಯೂ ಇರಬೇಕಾಗುತ್ತದೆ. ಈ ದೇವಾಲಯದಲ್ಲಿ ಮುಂದುವರೆಯುತ್ತಿರುವ ಅಧ್ಯಯನದಿಂದ ಇನ್ನಷ್ಟು ಕುತೂಹಲಕಾರಿ ಮಾಹಿತಿ ಬೆಳಕಿಗೆಬರುವ ನಿರೀಕ್ಷೆಯಿದೆ.

ಹೀಗೆ ಬಹುಶಃ, ಬೃಹತ್ ಶಿಲಾಯುಗದ ಕಲ್ಗೋರಿಗಳಲ್ಲಿ ಸೂಕ್ಷ್ಮವಾಗಿ ಆರಂಭವಾಗಿ, ಸಾಂಚಿಯಲ್ಲಿ ಮುಂದುವರೆದು, ಮಾರ್ತಾಂಡ ದೇವಾಲಯದಲ್ಲಿ ಅಭಿವ್ಯಕ್ತವಾಗಿರುವಂತೆ, ಪ್ರಕೃತಿಯ ವ್ಯಾಪಾರಗಳ ನಿರಂತರ ಪರಿಶೀಲನೆಯಿಂದ ತಾವು ಕಂಡುಕೊಂಡ ತಮ್ಮ ದೈನಂದಿನ, ಧಾರ್ಮಿಕ ಜೀವನವನ್ನು ನಿಯಂತ್ರಿಸುವ, ರೂಪಿಸಿ, ನಿರ್ಧರಿಸುವ ಅನೇಕ ಸಾರ್ವಕಾಲಿಕ ವೈಜ್ಞಾನಿಕತಥ್ಯಗಳನ್ನು ರಾಚನಿಕವಾಸ್ತುವಿನಲ್ಲಿ ಕುಶಲತೆಯಿಂದ ಉದ್ದೇಶಪೂರ್ವಕವಾಗಿ ಸಂಯೋಜಿಸುವ ಒಂದು ಪರಂಪರೆಯೇ ರೂಪುಗೊಳ್ಳುತ್ತಿರುವುದನ್ನು ಕಾಣಬಹುದು.

ಈ ಸಂಯೋಜನಾಕ್ಷಮತೆಯ ಮುಂದುವರೆದ ಹಂತವನ್ನು, ದೇವಾಲಯವನ್ನು ಆಕಾಶಕಾಯಗಳ-ಮುಖ್ಯವಾಗಿ ಸೂರ್ಯನ ಚಲನೆಯನ್ನು ವೀಕ್ಷಿಸುವ ವೇಧಶಾಲೆಯಾಗಿ ಬಳಸಿರುವುದನ್ನು ಸ್ಪಷ್ಟವಾಗಿ ನಿರ್ದೇಶಿಸುವ, ಗುಜರಾತ್ ರಾಜ್ಯದ ಮೆಹಸಾನ್ ಜಿಲ್ಲಾ ಕೇಂದ್ರದ ವಾಯವ್ಯ ದಿಕ್ಕಿಗೆ ೨೫ ಕಿ.ಮೀ. ದೂರದಲ್ಲಿರುವ ಮೊಧೇರಾ ಗ್ರಾಮದಲ್ಲಿನ ಸೂರ್ಯದೇವಾಲಯದಲ್ಲಿ ಕಾಣಬಹುದು. ಅದ್ಭುತ ವಿನ್ಯಾಸದ ಪುಷ್ಕರಿಣಿಯಿರುವ ಈ ಭವ್ಯಸಮುಚ್ಚಯವನ್ನು ಸೋಲಂಕಿ ರಾಜವಂಶದ ಮೊದಲನೆಯ ಭೀಮ (ಕ್ರಿ.ಶ.೧೦೨೨-೧೦೬೩)ನ ಕಾಲದಲ್ಲಿ ನಿರ್ಮಿಸಲಾಯಿತು. ಇದರ ಹೊರಗೋಡೆಯ ಮೇಲಿರುವ ಶಾಸನವೊಂದು ಕ್ರಿ.ಶ.೧೦೨೬ರ ವೇಳೆಗೇ ದೇವಾಲಯ ಪೂರ್ಣವಾಗಿದ್ದು ಪೂಜೆ ನಡೆಯುತ್ತಿತ್ತೆಂದು ದಾಖಲಿಸಿದೆ.

ಈ ದೇವಾಲಯದ ತಲವಿನ್ಯಾಸದಲ್ಲಿ (ರೇಖಾಚಿತ್ರ-೫) ಚೌಕಾಕಾರದ (೩.೩೫ ಮೀ. ಚದರ) ಸಾಂಧಾರ ಗರ್ಭಗೃಹ, ಗೂಢಮಂಡಪ ಅಥವಾ ಸಭಾಂಗಣ ಮತ್ತು ಇವೆರಡರಿಂದ ಸ್ವಲ್ಪ ಪ್ರತ್ಯೇಕವಾದ ಆದರೆ ಅದೇ ಅಕ್ಷದಲ್ಲಿರುವ, ಕಂಬಗಳಿಂದ ಕೂಡಿದ ಮುಕ್ತರೀತಿಯ ವಿಶಾಲ ಸಭಾಮಂಡಪಗಳಿವೆ. ಗರ್ಭಗೃಹದ ಕೆಳಗೆ ಇನ್ನೊಂದು ನೆಲಕೋಣೆ ಇತ್ತು, ಇದೆಯೆಂದು ಪ್ರತೀತಿ. ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿದ್ದ ಅಪ್ಪಟಚಿನ್ನದ ಮೂಲ ಸೂರ್ಯವಿಗ್ರಹವನ್ನು ಮುಸ್ಲಿಂ ಆಕ್ರಮಣಕಾರರು ಕೊಂಡೊಯ್ದರೆಂದು ಜನಗಳ ನಂಬಿಕೆ. ದೇವಾಲಯದ ಶಿಖರ ಮತ್ತು ಸಭಾಮಂಡಪದ ಮೇಲ್ಭಾಗಗಳು ಭಗ್ನವಾಗಿವೆ. ಸಭಾಮಂಡಪದ ಪೂರ್ವಕ್ಕೆ ರಾಮಕುಂಡವೆಂಬ ಆಯತಾಕಾರದ (೧೭೬ ಅಡಿX೧೨೦ ಅಡಿ) ವಿಶಾಲ ಪುಷ್ಕರಿಣಿಯಿದೆ. ಹಿಂಚಾಚು, ಮುಂಚಾಚು, ವೇದಿಕೆ, ವಿವಿಧ ದೇವದೇವಿಯರ ಶಿಲ್ಪಗಳಿದ್ದ ೧೦೦೮ (?) ಕಿರುಮಂದಿರಗಳಿಂದ ಅಲಂಕೃತವಾದ ಈ ಕುಂಡದ ವಿನ್ಯಾಸ ವೈಶಿಷ್ಟ್ಯಪೂರ್ಣವಾಗಿದೆ. ವಿಶೇಷವಾಗಿ ಪ್ರಧಾನದಿಕ್ಕು ಮತ್ತು ಮೂಲೆಗಳ ಉಪಮಂದಿರಗಳನ್ನು ಉದ್ದೇಶಪೂರ್ವಕ ವಾಗಿ ಯೋಜಿಸಿದೆ.

ವಿಷುವತ್ಸಂಕ್ರಾಂತಿಯ ಬೆಳಗ್ಗೆ ಸೂರ್ಯನ ಬೆಳಕು ನೇರವಾಗಿ ಪೂರ್ವಾಭಿಮುಖವಾದ ಗರ್ಭಗೃಹದಲ್ಲಿದ್ದ ಮೂಲಶಿಲ್ಪದ ಮೇಲೆ ಬೀಳುತ್ತದೆಂದು ಪ್ರತೀತಿಯಿದ್ದುದರಿಂದ ಈ ದೇವಾಲಯ ಖಗೋಳವಿಜ್ಞಾನಿಗಳ ವಿಶೇಷಗಮನ



೬. ಸೂರ್ಯಕಿರಣಗಳು ಗರ್ಭಗೃಹವನ್ನು ಪ್ರವೇಶಿಸಿರುವುದು, ಸೂರ್ಯ ಮೂರ್ತಿ ಉದಯಿಸಿದ ನಂತರ. (ಕೃಪೆ: ಎನ್. ಕೆ. ರಾವ್).



೭. ಮುಖ್ಯ ದ್ವಾರದ ಲಲಾಟದ ಮೇಲಿಂದ ಸೂರ್ಯಕಿರಣಗಳು ಮರೆಯಾಗುವ ಮುನ್ನ. (ಕೃಪೆ: ಎನ್. ಕೆ. ರಾವ್)



೮. ಗರ್ಭಗೃಹದೊಳಗಿಂದ ಕಿರಣಗಳು ಹೊರಬಿದ್ದು ದ್ವಾರಬಂಧದ ಮೇಲಿರುವುದು (ಚಿತ್ರ-೭ ತೆಗೆದ ಮರುಕ್ಷಣ). (ಕೃಪೆ: ಎನ್. ಕೆ. ರಾವ್)

ಸೆಳೆಯಿತು. ಇಲ್ಲಿ ನಡೆಸಿದ ಅಧ್ಯಯನಗಳಿಂದ ಹಲವು ಮಹತ್ವದ ಮಾಹಿತಿ ದೊರಕಿವೆ. ಖಗೋಳದ ಅಧ್ಯಯನಗಳಿಗಾಗಿಯೇ ಈ ದೇವಾಲಯವನ್ನು ಕಟ್ಟಿಸಿರುವುದಾಗಿ ನಿವೇಶನದ ಆಯ್ಕೆಯಿಂದಲೇ ತಿಳಿಯುತ್ತದೆ. ಮೊಧೇರಾದ ಅಕ್ಷಾಂಶ ೨೫° ೫೮೩ ಮತ್ತು ಕ್ರಿ.ಶ. ೧೦೨೬ರಲ್ಲಿನ ಅದರ ಪರಿಷ್ಕೃತ ಬಾಗಿನಂತೆ ೨೫° ೫೬೫. ಇದರಿಂದ ಕರ್ಕಾಟಕ ಸಂಕ್ರಮಣದ ಮಧ್ಯಾಹ್ನ ಸೂರ್ಯ (ಶೃಂಗ ಬಿಂದುವಿನ) ನೇರ ನಡುನೆತ್ತಿಯ ಮೇಲಿದ್ದು ದೀರ್ಘತಮ ಹಗಲಿನಂದು ಈ ದೇವಾಲಯದ ನೆರಳೂ ಭೂಮಿಯ ಮೇಲೆ ಬೀಳುವುದಿಲ್ಲ.

ಈ ದೇವಾಲಯವನ್ನು ಸೂರ್ಯನ ಚಲನೆಯನ್ನು– ವಿಶೇಷವಾಗಿ ವಿಷುವದುದಯವನ್ನು ವೀಕ್ಷಿಸಿ, ಅಳೆಯುವ ಉದ್ದೇಶದಿಂದ ಕಟ್ಟಲಾಗಿದೆ. ವಿಷುವತ್ಸಂಕ್ರಾಂತಿ (ಮಾರ್ಚ್ ೨೧) ಕಳೆದ ಒಂದು ವಾರದಬಳಿಕ, ಮಾರ್ಚ್ ೨೮ ರಂದು ಈ ದೇವಾಲಯಕ್ಕೆ ಹೋಗಿ ಅಧ್ಯಯನ ನಡೆಸಿದ ಕಾಮೇಶ್ವರ ರಾವ್ ಮತ್ತು ತಂಡದವರು ಸೆರೆಹಿಡಿದಿರುವ ಛಾಯಾಚಿತ್ರಗಳಿಂದ ಈ ಅಂಶ ದೃಢಪಟ್ಟಿದೆ. ಗೂಢಮಂಡಪದ ಕೇಂದ್ರದಲ್ಲಿ (ನೋಡಿ. ಛಾಯಾಚಿತ್ರ–೫) ನಿಂತು ಸೂರ್ಯೋದಯ ಮತ್ತು ಅದರ ಅನಂತರದ ಕ್ಷಣಗಳಲ್ಲಿ ಬೆಳಕು ಕಂಬದಿಂದ ಹೊರಬಂದು, ಗರ್ಭಗೃಹವನ್ನು ಪ್ರವೇಶಿಸಿ, ಅಲ್ಲಿಂದಾಚೆಗೆ ಬಂದಿರುವ ದೃಶ್ಯಗಳನ್ನು ಕ್ರಮವಾಗಿ ಛಾಯಾಚಿತ್ರ ೩ ರಿಂದ ೮ ಪ್ರದರ್ಶಿಸುತ್ತವೆ. ಸಂಕ್ರಮಣ ಕಳೆದ ಒಂದು ವಾರದ ನಂತರ ಅಧ್ಯಯನ ನಡೆಸಿರುವುದರಿಂದ, ನಡುವಣ ಕಾಲದಲ್ಲಿ



೫. ಸೂರ್ಯದೇವಾಲಯ ಮತ್ತು ಪುಷ್ಕರಿಣಿಯ ತಲವಿನ್ಯಾಸ (ಮೊಧೇರಾ, ಗುಜರಾತ್). ವಿಷುವ ಹಾಗೂ ಕರ್ಕಾಟಕ ಸಂಕ್ರಾಂತಿ ಮತ್ತು ಮಾರ್ಚ್ ೨೮ರಂದು ಸೂರ್ಯೋದಯದ ದಿಕ್ಕನ್ನು ಸೂಚಿಸಿದೆ. (ಕೃಪೆ: ಎನ್. ಕೆ. ರಾವ್).

ಸೂರ್ಯ ತನ್ನ ಪಥದಲ್ಲಿ ೨° ಯಷ್ಟು ಉತ್ತರದತ್ತ ಚಲಿಸಿದ್ದು, ಬೆಳಕು ಸ್ವಲ್ಪ ದಕ್ಷಿಣಕ್ಕೆ ಸರಿದಿದೆ. ಇದರಿಂದ ಸಂಕ್ರಾಂತಿಯಂದು ಬೆಳಕು ನೇರವಾಗಿ ಗರ್ಭಗೃಹದಲ್ಲಿದ್ದ ವಿಗ್ರಹವನ್ನು ಪೂರ್ತಿ ಬೆಳಗುತ್ತಿತ್ತೆಂದು ನಿರ್ಣಾಯಕವಾಗಿ ಹೇಳಬಹುದು.

ಸಭಾಮಂಡಪದ ಕೇಂದ್ರದಲ್ಲಿ ನಿಂತು ನೋಡಿದರೆ ವಿಷುವದುದಯ ರೇಖೆ ಪುಷ್ಕರಿಣಿಯ ಪೂರ್ವಬಾಹುವಿನ ಮಧ್ಯದಲ್ಲಿರುವ ಉಪಮಂದಿರದ ಮಧ್ಯೆ ಹಾದು ಹೋಗುವುದು ಕಂಡು ಬರುತ್ತದೆ. ಈ ಉಪಮಂದಿರದ ಅಗಲ ಗರ್ಭಗೃಹದ ಕೇಂದ್ರದಲ್ಲಿ ಸುಮಾರು ೧.೬°–೧.೭°ಯ ಕೋನವನ್ನುಂಟು ಮಾಡುತ್ತದೆ (ಚಿತ್ರ ೪). ಸೂರ್ಯನನ್ನು ಬರಿಗಣ್ಣಿನಿಂದ ನೋಡಲಾಗದಿರುವುದರಿಂದ ನಡುವೆ ಅಡ್ಡಗೋಡೆ ಅಥವಾ ಪರದೆಯಂತಹ ತಡೆಯಿರಬೇಕಾಗುತದೆ. ಇದರಿಂದ ಸೂರ್ಯ ಆ ತಡೆಯನ್ನು ಸಮೀಪಿಸುವುದು, ತಡೆಯ ಹಿಂದೆ ಮರೆಯಾಗುವುದು ಮತ್ತು ದಾಟಿಹೋಗುವ ಕ್ಷಣಗಳನ್ನು ಗ್ರಹಿಸಲು ಸುಲಭವಾಗುತ್ತದೆ. ಸಭಾಮಂಡಪಕ್ಕೆ ನೇರ ಎದುರಾಗಿ, ಪುಷ್ಕರಿಣಿಯ ಪೂರ್ವದಡದ ಈ ಉಪಮಂದಿರ ಇಂತಹ ಪರದೆಯ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತದೆ. ಈ ಉದ್ದೇಶದಿಂದಲೇ ಬಹುಶಃ ಅದನ್ನು ಅಲ್ಲಿ ಯೋಜಿಸಿರುವುದು. ಇದರ ಶಿಖರ ಪೂರ್ತಿ ಕಾಣೆಯಾಗಿದ್ದರೂ, ಉತ್ತರದ ಮಂದಿರ ಸಾಕಷ್ಟು ಸುಸ್ಥಿತಿಯಲ್ಲಿರುವುದರಿಂದ ಅದರ ಊರ್ಧ್ವವಿನ್ಯಾಸದಂತೆಯೆ ಇದೂ ಇತ್ತೆಂದು ಊಹಿಸಬಹುದು. ಉತ್ತರದ ಶಿಖರಾಗ್ರದಲ್ಲಿ ಚಪ್ಪಟೆಯಾದ ಆಮಲಕವಿದೆ. ಅಂತಹ ಆಮಲಕ ಪೂರ್ವದ ಗುಡಿಯ ಮೇಲಿದ್ದರೆ ಅದರ ಅಗಲವು ಗರ್ಭಗೃಹದ ಕೇಂದ್ರದಲ್ಲಿ ೧೬ ನಿಮಿಷಗಳ ವೃತ್ತಖಂಡವನ್ನು ರೂಪಿಸುತ್ತದೆ. ಈ ಆಮಲಕ ಉಂಟು ಮಾಡುವ ವೃತ್ತಖಂಡದ ಅಳತೆ ಸೂರ್ಯಚಕ್ರದ ವ್ಯಾಸಾರ್ಧಭಾಗವಾಗಿರುವುದು ಕೇವಲ ಕಾಕತಾಳೀಯ ಎನ್ನಲಾಗದು.

ಮಕರ . ಮತ್ತು ಕರ್ಕಾಟಕ ಸಂಕ್ರಮಣಗಳಂದು ಸೂರ್ಯೋದಯದ ದಿಕ್ಕುಗಳು ಸೂಚಿತವಾಗಿರುವುದು ಇಲ್ಲಿ ಕಾಣುವ ಇನ್ನೊಂದು ಮುಖ್ಯವಿವರ. ಈ ಎರಡು ದಿಕ್‌ರೇಖೆಗಳು ಸಭಾಮಂಡಪದ ಕೇಂದ್ರದಿಂದ ಪ್ರಾರಂಭವಾಗಿ, ಮಂಡಪದಿಂದ ಪುಷ್ಕರಿಣಿಗೆ ಇಳಿಯುವ ಮೆಟ್ಟಲುಗಳ ಅಧಿಷ್ಠಾನ ವಿನ್ಯಾಸದ ಬಾಗನ್ನು ಬಳಸಿಕೊಂಡು ಸಾಗುತ್ತ, ವಾಯವ್ಯ ಹಾಗೂ ಆಗ್ನೇಯ ಮೂಲೆಯಲ್ಲಿರುವ ಗುಡಿಗಳ ಮೂಲಕ (ಬಹುಶಃ ಸ್ತೂಪಿಯ ಮೇಲಿಂದ) ಹೋಗುತ್ತವೆ. ಸಂಕ್ರಮಣ ಸೂರ್ಯೋದಯವನ್ನು ಪರಿಶೀಲಿಸಲು ಮಂಡಪದ ಕಂಬಗಳೇ ತಡೆಗೋಡೆಯ ಕಾರ್ಯನಿರ್ವಹಿಸುತ್ತವೆ. ಮಾರ್ತಾಂಡದ ದೇವಾಲಯದಂತೆ ಇಲ್ಲಿಯೂ ಈ ಎರಡು ರೇಖೆಗಳ ನಡುವಣಕೋನ ದಕ್ಷಿಣೋತ್ತರವಾಗಿ ಪುಷ್ಕರಿಣಿಯ ಅಗಲವನ್ನೂ, ಮೂಲೆಯ ಮಂದಿರಗಳ ಸ್ಥಾನವನ್ನೂ ನಿರ್ಧರಿಸುತ್ತದೆ.

ಸಮುಚ್ಚಯದ ತಲ ಹಾಗೂ ಊರ್ಧ್ವವಿನ್ಯಾಸವನ್ನು ರೂಪಿಸುವಾಗ ಉದ್ದೇಶಿತ ಖಗೋಳವೀಕ್ಷಣೆಗೆ ಅನುಕೂಲ ವಾಗುವಂತೆ ಪ್ರತಿವಿವರದ ಬಗೆಗೂ ಗಮನನೀಡಿ ಕ್ರಮಬದ್ಧವಾಗಿ ನಿರ್ಮಾಣವಾಗುವಂತೆ ಮುನ್ನೆಚ್ಚರಿಕೆ ವಹಿಸಲಾಗಿದೆ. ಉದಾಹರಣೆಗೆ ದೇವಾಲಯದ ಎತ್ತರವನ್ನು ಹೆಚ್ಚಿಸಲು ಉಪಪೀಠದಂತಹ ವಿಶಾಲ ವೇದಿಕೆ ಒದಗಿಸಿದೆ. ಪುಷ್ಕರಿಣಿಯನ್ನು ಕೆಳಮಟ್ಟದಲ್ಲಿ ವಿನ್ಯಾಸಮಾಡಿ ಕಿರುಮಂದಿರ, ಮೂಲೆಮಂದಿರಗಳ ಶಿಖರಾಗ್ರ ಮಾತ್ರವೇ ಕಾಣುವಂತೆ ಮಾಡಿದೆ. ವೀಕ್ಷಣೆಯ ಕೇಂದ್ರವಾದ ಸಭಾಮಂಡಪವನ್ನು ಕಂಬಗಳನ್ನು ಆಧರಿಸಿ ನಿಂತ ಮುಕ್ತಮಂಡಪವಾಗಿಸಿರುವುದಲ್ಲದೆ ಪ್ರತಿಯೊಂದು ಕಂಬದ ಸ್ಥಾನವನ್ನು ಸೂರ್ಯನ ಚಲನೆಯನ್ನು ವೀಕ್ಷಿಸಲು ಅವಶ್ಯಕವಾದ ಪರದೆಯಂತೆ ಕಾರ್ಯ ನಿರ್ವಹಿಸಲಾಗುವಂತೆ ಜಾಣ್ಮೆಯಿಂದ ಸಂಯೋಜಿಸಿದೆ. ಇದರಿಂದ ಮಂಡಪದ ಸುತ್ತ ಸುಮಾರು ೩೩೦°ಗಳಷ್ಟು ವಿಸ್ತಾರವಾದ ಭೂ ಪ್ರದೇಶ ಮುಕ್ತವಾಗಿದ್ದು ದಿಗಂತವ್ಯಾಪಾರಗಳ ವೀಕ್ಷಣೆಗೆ ವಿಪುಲಾವಕಾಶ ಒದಗಿದೆ.

ಈ ದೇವಾಲಯದಲ್ಲಿ ಸೂರ್ಯನ ವಿಷುವದುದಯಗಳ ಅಧ್ಯಯನಕ್ಕೆ ಒತ್ತು ನೀಡಿರುವುದು ಗಮನಾರ್ಹವಾದ್ದು. ಇದರಿಂದ ವರ್ಷಗಳ ನಡುವಣ ಕಾಲಾವಧಿ (೩೬೫ ೧/೪ ದಿನಗಳು)ಯನ್ನು ತಾಳೆನೋಡಿ ಪರಿಷ್ಕರಿಸಬಹುದು. ಕ್ರಾಂತಿವೃತ್ತದಲ್ಲಿ ಚಲಿಸುವಾಗ ಸೂರ್ಯಗತಿಯ ವೇಗದಲ್ಲಾಗುವ ಬದಲಾವಣೆಯನ್ನು ಕರಾರುವಾಕ್ಕಾಗಿ ನಿರ್ಧರಿಸಬಹುದು. ಇದು ಹನಮಸಾಗರದ ಸಾಲ್ಗಲ್ಲುಗಳಿಗಿಂತ ಅತ್ಯಂತ ಪರಿಷ್ಕೃತ ಹಂತವಾಗಿದ್ದು, ಅಲ್ಲಿಗಿಂತ ಹೆಚ್ಚು ನಿಕರವಾದ ಮಾಹಿತಿ ನೀಡಬಲ್ಲದು. ಮುಖ್ಯವೆನಿಸಿದ ಈ ಸಂಶೋಧನೆಗಳ ಜೊತೆಗೆ ಖಗೋಳಶಾಸ್ತ್ರದ ಕಗ್ಗಂಟುಗಳನ್ನು ಬಿಡಿಸಲು ಸಹಾಯಕವಾದ ಇತರ ಮಾಹಿತಿಯನ್ನೂ ಸಂಕಲಿಸಬಹುದು.

ಮಾರ್ತಾಂಡ ಮತ್ತು ಮೊಧೇರಾದ ದೇವಾಲಯಗಳಲ್ಲಿ ಕೆಲವು ಸಾಮ್ಯಗಳಿವೆ. ಎರಡರ ಮುಂದೆಯೂ ಪುಷ್ಕರಿಣಿಯಿದೆ. ವಿಷುವಸೂರ್ಯನ ಬೆಳಕು ಗರ್ಭಗೃಹವನ್ನು ಪ್ರವೇಶಿಸುತ್ತವೆ, ಆದರೆ ಅಯನ ಸಂಕ್ರಮಣಗಳಂದು ಪ್ರವೇಶಿಸುವುದಿಲ್ಲ. ಮಾರ್ತಾಂಡದಲ್ಲಿ ಪ್ರಾಕಾರದ ಮೂಲೆಗಳಲ್ಲಿದ್ದ ಅಯನ ಸಂಕ್ರಮಣ ಸೂಚಕಮಂದಿರಗಳು ಮೊಧೇರಾದಲ್ಲಿ ಪುಷ್ಕರಿಣಿಯ ತುದಿಗಳಿಗೆ ಬಂದು ಸಹಜವಾಗಿ ಪುಷ್ಕರಿಣಿಯ ಗಾತ್ರ ಹಿರಿದಾಗಿದೆ. ಈ ಸಾಮ್ಯಗಳು ಕನಿಷ್ಠ ಮೂರುಶತಮಾನಗಳ ಕಾಲ ಒಂದು ವಿಶಿಷ್ಟ ಅಧ್ಯಯನ ಪರಂಪರೆ ಮತ್ತು ವಾಸ್ತುಶೈಲಿಯ ಮುಂದುವರಿಕೆ, ಪರಿಷ್ಕರಣೆಯ ದ್ಯೋತಕವಾಗಿರುವಂತೆಯೇ ಒಂದು ಸ್ಪಷ್ಟ ಉದ್ದೇಶವನ್ನೂ ಧೃಢಪಡಿಸುತ್ತವೆ.

ಈಚೆಗೆ ಖಗೋಳಶಾಸ್ತ್ರೀಯ ವಿವರಗಳು ಹಾಗೂ ವಿಲಕ್ಷಣ ವಾಸ್ತುವಿನ ಅನುಪಮ ಸಂಯೋಜನೆಯನ್ನು ಸ್ಪಷ್ಟವಾಗಿ ನಿರೂಪಿಸುತ್ತಿರುವ ಸಂಕೀರ್ಣವಿನ್ಯಾಸದ ಶೃಂಗೇರಿಯ ವಿದ್ಯಾಶಂಕರ ದೇವಾಲಯವನ್ನು ಕುರಿತ ಸಮೀಕ್ಷಾತ್ಮಕ ಅಧ್ಯಯನ ನಡೆಯುತ್ತಿದ್ದು ಅಮೂಲ್ಯ ಮಾಹಿತಿ ಬೆಳಕಿಗೆ ಬರುವ ನಿರೀಕ್ಷೆಯಿದೆ.

ಇದುವರೆಗೆ ಸಮೀಕ್ಷಿಸಿರುವ ಅಧ್ಯಯನಗಳಲ್ಲದೆ ಕರ್ನಾಟಕ ರಾಜ್ಯದ ಬೆಂಗಳೂರಿನ ಗವೀಪುರದಲ್ಲಿರುವ ಗವಿಗಂಗಾಧರೇಶ್ವರ ದೇವಾಲಯ, ಧಾರವಾಡ ಜಿಲ್ಲೆಯ ಗಳಗನಾಥ ಗ್ರಾಮದಲ್ಲಿ ತುಂಗಭದ್ರಾ ನದಿಯ ದಡದಲ್ಲಿರುವ ಕಲ್ಯಾಣದ ಚಾಲುಕ್ಯರ ಕಾಲದ ಗಳಗೇಶ್ವರ ದೇವಾಲಯ, ಬೇಲೂರಿನ ಪ್ರಸಿದ್ಧ ಚನ್ನಕೇಶವ ದೇವಾಲಯ ಸಮುಚ್ಚಯದ ಮುಖ್ಯ ದೇವಾಲಯವಲ್ಲದೆ ಇನ್ನಿತರ ಮಂದಿರಗಳಾದ ಕಪ್ಪೆ ಚನ್ನಿಗರಾಯ, ಸೌಮ್ಯನಾಯಕಿ, ರಂಗನಾಯಕಿ ಮತ್ತು ವೀರನಾರಾಯಣ ದೇವಾಲಯಗಳು; ಬೆಳವಾಡಿಯ ವೀರನಾರಾಯಣ ಹಾಗೂ ಕಲ್ಲೇಶ್ವರ ದೇವಾಲಯಗಳು; ತುಮಕೂರಿನ ಸಮೀಪದ ಕೈದಾಳದ ಚನ್ನಕೇಶವ ದೇವಾಲಯ ಮೊದಲಾದ ಸ್ಥಳಗಳಲ್ಲಿರುವ ಹೊಯ್ಸಳರ ಕಾಲ, ಶೈಲಿಯ ದೇವಾಲಯಗಳಲ್ಲಿಯೂ ಕೆಲವು ವಿಶಿಷ್ಟ ಸಂಕ್ರಮಣಗಳಂದು ಸೂರ್ಯಕಿರಣಗಳು ಗರ್ಭಗೃಹವನ್ನು ಪ್ರವೇಶಿಸಿ ಮೂಲವಿಗ್ರಹದ ಮೇಲೆ ಬೀಳುತ್ತವೆ.

ಮೇಲಿನವುಗಳಲ್ಲದೆ ಬಳ್ಳಾರಿ ಜಿಲ್ಲೆಯ ಪ್ರಸಿದ್ಧ ವಿಶ್ವಪರಂಪರೆ ನಿವೇಶನವಾಗಿರುವ ಹಂಪಿ ಮತ್ತು ಪರಿಸರದ ವಿಜಯನಗರಕಾಲದ ಸ್ಮಾರಕಗಳಲ್ಲಿ ಕಂಡುಬಂದಿರುವ ಖಗೋಳಶಾಸ್ತ್ರೀಯ ವಿವರಗಳನ್ನು ಕುರಿತು ನಡೆದಿರುವ, ನಡೆಯುತ್ತಿರುವ ಅಧ್ಯಯನಗಳು ಅನೇಕ ಹೊಸ ಹೊಸವಿವರಗಳನ್ನು ಬೆಳಕಿಗೆ ತರುತ್ತಿವೆ. ಇವುಗಳ ಬಗೆಗೆ ಪ್ರತ್ಯೇಕ ಸಮೀಕ್ಷಾತ್ಮಕ ಲೇಖನಗಳು ಸಿದ್ಧಗೊಳ್ಳುತ್ತಿವೆ.

ಕಡೆಯದಾಗಿ, ಭಾರತದಲ್ಲಿ ಪುರಾತತ್ತ್ವೀಯ ಖಗೋಳವಿಜ್ಞಾನ ತೀರ ಇತ್ತೀಚಿನವರೆಗೆ ಬಹು ನಿರ್ಲಕ್ಷಿತವಾಗಿದ್ದು, ಇದೀಗ ಬೆಳೆಯುತ್ತಿರುವ ಒಂದು ಶಾಖೆ. ಇದುವರೆಗೆ ನಡೆದಿರುವ ಅಧ್ಯಯನಗಳು ನೀರ್ಗಲ್ಲುಗಳ ತುದಿಯಷ್ಟೆ. ಇವೂ ಸಹ ಮೌಖಿಕ ಪರಂಪರೆಯಲ್ಲಿ ಪ್ರಸಿದ್ಧವಾದ ಹಾಗೂ ಮೇಲ್ನೋಟಕ್ಕೆ ಎದ್ದು ಕಾಣುವ ವಿಶೇಷಗಳಿರುವ ಉದಾಹರಣೆಗಳ ವೈಜ್ಞಾನಿಕ ವಿಶ್ಲೇಷಣೆಗಳು. ಸಹಜವಾಗಿ ಶತಶತಮಾನಗಳ ಕಾಲಾವಧಿಯಿಂದ ಬೇರ್ಪಟ್ಟಿವೆ. ತಾರ್ಕಿಕವಾಗಿ ಇಂತಹ ಒಂದು ಅಧ್ಯಯನ, ಸಂಯೋಜನೆಗಳ ಪರಂಪರೆಯ ಅಸ್ತಿತ್ವ ಅನೂಚಾನವಾಗಿ ಮುಂದುವರೆದಿದ್ದು ಅದರ ಚಿಗುರು, ಹೂವು, ಹಣ್ಣುಗಳಂತಹ ಉದಾಹರಣೆಗಳು ಪ್ರತಿಶತಮಾನದಲ್ಲಿಯೂ ಒಂದೆರಡಾದರೂ ದೇಶಾದ್ಯಂತ ಹರಡಿರುತ್ತವೆ. ಅವೆಲ್ಲವನ್ನು ಕುರಿತ ಮಾಹಿತಿಯ ಸಂಕಲನ, ವಿಶ್ಲೇಷಣೆ ಇಂದಿನ ತುರ್ತು ಅಗತ್ಯ. ಪ್ರಾಗಿತಿಹಾಸಕಾಲದ

ಉದಾಹರಣೆಗಳಲ್ಲಿ ಸಾಕಷ್ಟು ಅನಿಶ್ಚಿತತೆ, ಸಂದಿಗ್ಧತೆ ಇವೆ. ಭಾರತದಾದ್ಯಂತ ಇರುವ ಈ ಕಾಲದ ಸಾವಿರಾರು ನಿವೇಶನಗಳಲ್ಲಿ ಕಾಲ, ದೇಶ, ವೈವಿಧ್ಯಗಳನ್ನು ಬಿಂಬಿಸುವ ಆಯ್ದ ಕೆಲವು ಮಾದರಿ ನಿವೇಶನ(type site)ಗಳ ವಿಶೇಷ ರೀತಿಯ ತೀವ್ರ ಅಧ್ಯಯನದ ಮೂಲಕ ಇನ್ನಷ್ಟು ಪೂರಕ ಮಾಹಿತಿಯನ್ನು ಸಂಕಲಿಸಬೇಕಾಗಿದೆ. ಮೌಖಿಕ ಪರಂಪರೆ, ಸಾಹಿತ್ಯಕ ಆಧಾರಗಳನ್ನಾಧರಿಸಿದ ಕ್ಷೇತ್ರಕಾರ್ಯದಿಂದ ಇಂತಹ ಅನೇಕ ಉದಾಹರಣೆಗಳನ್ನು ಪ್ರಸ್ತುತಪಡಿಸಬಹುದು. ಅದರಂತೆಯೇ ಇತಿಹಾಸಕಾಲದ ಉದಾಹರಣೆಗಳ ಬಗೆಗೂ ಪೂರಕ ಹಾಗೂ ಸಮರ್ಥಕ ವಿವರಗಳನ್ನು ಬಳಸಿ ಪುಷ್ಟವಾಗಿಸಬೇಕಿದೆ. ಜೊತೆಗೆ ವಿಜ್ಞಾನದ ಶಾಖೆಗಳಲ್ಲಿ ಪುರಾತತ್ತ್ವ ಮತ್ತು ಖಗೋಳವಿಜ್ಞಾನಗಳು ತರ್ಕಬದ್ಧ ಊಹೆ, ಕಲ್ಪನೆಗಳನ್ನು ಆಧರಿಸಿಯೇ ಉಳಿಯಬೇಕು. ಮೇಲ್ನೋಟಕ್ಕೆ ಅಸಂಬದ್ಧವೆಂದು ತೋರುವ, ತುಂಡುತುಂಡಾದ ತುಣುಕುಗಳಲ್ಲಿ (ಕೆಲವೊಮ್ಮೆ ಕಾಲ, ದೇಶ ಸಂದರ್ಭಗಳಿಂದ ಬೇರ್ಪಟ್ಟು) ದೊರೆಯುವ ಅಪೂರ್ಣ ಆಕರಗಳನ್ನೇ ಆಧರಿಸಬೇಕಾದ ಅನಿವಾರ್ಯತೆಯಿಂದ ಈ ವಿಜ್ಞಾನ ಶಾಖೆಗಳು (ಚಿಂತನಾ ಪ್ರಧಾನವೂ ತರ್ಕಬದ್ಧವೂ ಆಗಿದ್ದರೂ) ಊಹೆ, ಕಲ್ಪನೆಗಳ ಹೊನಲನ್ನೇ ಹರಿಸುತ್ತವೆಂಬ ಭಾವನೆಯಿದೆ. ಹೀಗಿರುವಾಗ ಈ ಎರಡೂ ಶಾಖೆಗಳು ಒಟ್ಟಾಗಿ ಮುಂದಿಡುವ ಊಹೆಗಳು ಸಹಜವಾಗಿ ಬಹುಪ್ರಮಾದಭರಿತವಾಗುವ ಸಂಭವವಿದ್ದು ಬಲು ಜವಾಬ್ದಾರಿಯಿಂದ ಎಚ್ಚರಿಕೆಯಿಂದ ಕಾರ್ಯನಿರ್ವಹಿಸಬೇಕಾಗುತ್ತದೆ. ಇವೆಲ್ಲದರ ನಡುವೆಯೂ ಪುರಾತತ್ತ್ವೀಯ ಖಗೋಳವಿಜ್ಞಾನದ ಪ್ರಚೋದನಾ ಸಾಮರ್ಥ್ಯ ಬಲುತೀವ್ರವಾದ್ದು.

**ಕೃತಜ್ಞತೆಗಳು**

ಪ್ರಾಚೀನ ಪುರಾತತ್ತ್ವೀಯ ನಿವೇಶನ ಮತ್ತು ಸ್ಮಾರಕಗಳಲ್ಲಿ ಕಂಡುಬರುವ ಕೆಲವು ವೈಶಿಷ್ಟ್ಯಗಳನ್ನು ಕುರಿತು ಕುತೂಹಲ ಬೆಳಸಿಕೊಂಡಿದ್ದ ನನ್ನಂತಹವರನ್ನು ಖಗೋಳಶಾಸ್ತ್ರ ರೀತ್ಯಾ ಕ್ಷೇತ್ರಕಾರ್ಯ, ಅಧ್ಯಯನ ಕೈಕೊಳ್ಳಲು ಪ್ರೇರೇಪಿಸಿದವರು ಹಾಗೂ ವಿಶೇಷವಾಗಿ ಇಂತಹ ಶಾಸ್ತ್ರೀಯ ವಿಷಯಗಳನ್ನು ಕುರಿತ ಲೇಖನಗಳು ದೇಶಭಾಷೆಗಳಲ್ಲಿ ಪ್ರಕಟವಾಗಿ ಪ್ರಚುರವಾಗಬೇಕಾದ ಅವಶ್ಯಕತೆ ತೀರ ಹೆಚ್ಚಿನದೆಂದು ಮನಗಂಡು ಕನ್ನಡದಲ್ಲಿ ಈ ಲೇಖನದ ರಚನೆಗೆ ಪ್ರೇರಣೆ ಒದಗಿಸಿ ಸಂಬಂಧಿಸಿದ ಮಾಹಿತಿ ಮತ್ತು ಛಾಯಾಚಿತ್ರಗಳನ್ನು ನೀಡಿ ಸಹಕರಿಸಿದ ಭಾರತೀಯ ಖಗೋಳ ಭೌತಶಾಸ್ತ್ರ ಸಂಸ್ಥೆಯ ನಿರ್ದೇಶಕರಾದ ಡಾ। ಎಂ. ಕಾಮೇಶ್ವರರಾವ್ ಅವರಿಗೆ ಲೇಖಕನು ಅತ್ಯಂತ ಕೃತಜ್ಞನಾಗಿದ್ದಾನೆ. ಅಗತ್ಯವಿದ್ದ ಸಂದರ್ಭ ಗ್ರಂಥಗಳನ್ನು ಕಾಲಕಾಲಕ್ಕೆ ಒದಗಿಸಿದ ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಬೆಂಗಳೂರು ವಲಯದ ಗ್ರಂಥಪಾಲಕರಾದ ಶ್ರೀ ಷೇಕ್ ಸೈಫುಲ್ಲ ಅವರಿಗೂ ಭಾರತೀಯ ಇತಿಹಾಸ ಅನುಸಂಧಾನ ಪರಿಷತ್, ಬೆಂಗಳೂರು, ದಕ್ಷಿಣ ಪ್ರಾದೇಶಿಕ ವಲಯದ ಉಪನಿರ್ದೇಶಕರಾದ ಡಾ ॥ ಎಸ್. ಕೆ. ಅರುಣಿ ಅವರಿಗೂ ನನ್ನ ಕೃತಜ್ಞತೆಗಳು.

**ಚಿತ್ರಗಳು**

೧. 'ಸಿ' ಪ್ರದೇಶದಲ್ಲಿನ ಬೃಹತ್ ಶಿಲಾಯುಗದ ಕಲ್ಗೋರಿಗಳು (ಬ್ರಹ್ಮಗಿರಿ, ಕರ್ನಾಟಕ). ಸೌರ(ಸೌ) ಮತ್ತು ಚಾಂದ್ರ(ಚಾ), ಕರ್ಕಾಟಕ ಸಂಕ್ರಾಂತಿ ಸೂಚಕ (ಛಿನ್ನವಾದ) ರೇಖೆಗಳು, ಬಾಣದ ಗುರುತಿನ ರೇಖೆ ಉದಯಾಸ್ತದ ದಿಕ್ಕುಗಳನ್ನು ಸೂಚಿಸುತ್ತದೆ. (ಕೃಪೆ: ಎನ್. ಕೆ. ರಾವ್).

೨. ಖಗೋಳ ಶಾಸ್ತ್ರೀಯ ದಿಕ್‌ರೇಖೆಗಳನ್ನು ಸೂಚಿಸಿರುವ ಹನಮಸಾಗರ ನಿವೇಶನದ ವಿನ್ಯಾಸದ ಅಡಕ ನಕ್ಷೆ (ಮಧ್ಯದ ಸಾಲುಗಳ ಕಲ್ಲುಗಳನ್ನು ಉದ್ದೇಶಪೂರ್ವಕವಾಗಿ ತುಂಬಿಲ್ಲ.) (ಕೃಪೆ: ಎನ್. ಕೆ. ರಾವ್).

೩. ಸ್ತೂಪ-೧ ಮತ್ತು -೨ ತಲವಿನ್ಯಾಸ. (ಸಾಂಚಿ, ಮಧ್ಯ ಪ್ರದೇಶ). ಸ್ತೂಪ-೧ರ ದಕ್ಷಿಣೋತ್ತರ ಅಕ್ಷ ಸು.೧೫ಲಿ ನೈಋತ್ಯಕ್ಕೆ ವಾಲಿರುವುದು ಗಮನಾರ್ಹ, ಸ್ತೂಪ -೨ರಲ್ಲಿ ಹೊರವೇದಿಕೆಯ ಕಂಬ(೮೮), ಒಳವೇದಿಕೆಯ ೧೨ ಭಾಗ ಮತ್ತು ಪರಿಷ್ಕಾರಕ ಸಂಖ್ಯೆ(೧೧ ೨/೯)ಯನ್ನು ನಿರ್ಧರಿಸಿದ ಕ್ರಮ-ಇವು ಸೂಚಿತವಾಗಿವೆ. (ಕೃಪೆ: ಭಾ.ಪು.ಸ).

೪. ಮಾರ್ತಾಂಡ (ಕಾಶ್ಮೀರ) ಮಂದಿರದ ತಲವಿನ್ಯಾಸ. ಪ್ರಾಕಾರದ ಹೊರಪರಿಧಿಯ ೧೨ ಜೊತೆ ಕಂಬ, ಒಳಪರಿಧಿಯ ೮೮ ಕಂಬ ಮತ್ತು ಮಕರ-ಕರ್ಕಾಟಕ ಸಂಕ್ರಾಂತಿಗಳಂದು ಸೂರ್ಯಾಸ್ತದ ದಿಕ್ಕನ್ನು ಸೂಚಿಸಿದೆ. (ಕೃಪೆ: ಎನ್. ಕೆ. ರಾವ್).

೫. ಸೂರ್ಯದೇವಾಲಯ ಮತ್ತು ಪುಷ್ಕರಿಣಿಯ ತಲವಿನ್ಯಾಸ (ಮೊಧೇರಾ, ಗುಜರಾತ್). ವಿಷುವ ಹಾಗೂ ಕರ್ಕಾಟಕ ಸಂಕ್ರಾಂತಿ ಮತ್ತು ಮಾರ್ಚ್ ೨೮ರಂದು ಸೂರ್ಯೋದಯದ ದಿಕ್ಕನ್ನು ಸೂಚಿಸಿದೆ. (ಕೃಪೆ: ಎನ್. ಕೆ. ರಾವ್).

**ಛಾಯಾಚಿತ್ರಗಳು**

೧ ಬುರ್ಜಹಾಂನಲ್ಲಿ ದೊರೆತ 'ಎರಡು ಸೂರ್ಯ' ಮತ್ತು ಬೇಟೆಯ ಚಿತ್ರಣವಿರುವ ಕಲ್ಲಿನ ಫಲಕ (ಕೃಪೆ: ಭಾ.ಪು.ಸ).

೨. ಹನಮಸಾಗರದ ಸಾಲ್ಗಲ್ಲುಗಳು ಪೂರ್ವದ ನೋಟ. ಬಾಣದ ಗುರುತು ಕೇಂದ್ರದ ಚಕ್ರ (ಚೌಕ) ಕಟ್ಟೆಯನ್ನು ತೋರಿಸುತ್ತದೆ (ಕೃಪೆ: ಕೆ. ಪದ್ದಯ್ಯ)

೩. ಸೂರ್ಯದೇವಾಲಯ ಮತ್ತು ಪುಷ್ಕರಿಣಿ (ಮೊಧೇರಾ, ಗುಜರಾತ್). (ಕೃಪೆ: ಎನ್. ಕೆ. ರಾವ್).

೪. ಗೂಢ ಮಂಡಪದೊಳಗಿಂದ ಮಾರ್ಚ್ ೨೮ರ ಬೆಳಿಗ್ಗೆ ಸೂರ್ಯೋದಯದ ದೃಶ್ಯ. (ಕೃಪೆ: ಎನ್. ಕೆ. ರಾವ್).

೫. ಸೂರ್ಯಕಿರಣಗಳು ಗರ್ಭಗೃಹವನ್ನು ಪ್ರವೇಶಿಸಿರುವುದು (ಚಿತ್ರ-೪ ತೆಗೆದ ಮರುಕ್ಷಣ). (ಕೃಪೆ: ಎನ್. ಕೆ. ರಾವ್).

೬. ಸೂರ್ಯಕಿರಣಗಳು ಗರ್ಭಗೃಹವನ್ನು ಪ್ರವೇಶಿಸಿರುವುದು, ಸೂರ್ಯ ಮೂರ್ತಿ ಉದಯಿಸಿದ ನಂತರ. (ಕೃಪೆ: ಎನ್. ಕೆ. ರಾವ್).

೭. ಮುಖ್ಯದ್ವಾರದ ಲಲಾಟದ ಮೇಲಿಂದ ಸೂರ್ಯಕಿರಣಗಳು ಮರೆಯಾಗುವ ಮುನ್ನ. (ಕೃಪೆ: ಎನ್. ಕೆ. ರಾವ್).

೮. ಗರ್ಭಗೃಹದೊಳಗಿಂದ ಕಿರಣಗಳು ಹೊರಬಿದ್ದು ದ್ವಾರಬಂಧದ ಮೇಲಿರುವುದು (ಚಿತ್ರ-೭ ತೆಗೆದ ಮರುಕ್ಷಣ). (ಕೃಪೆ: ಎನ್. ಕೆ. ರಾವ್).

ಆಕರ ಗ್ರಂಥಗಳು

**Allichin, F.R., Jayanth Vyasanakere.P, Sudeesh.K and Shylaja. B.S.** 1956, - The Stone Alignments of Hyderabad in MAN, 56, pp.133-136. 2008 - Astronomical Significance of the Gavi Gangadhareshwara temple in Bangalore, Current Science, Vol-95, No-11, pp.1632-1636.

**Gupta, Shakti. M.** 1977 - Surya, the Sun God, Somalia Publication Pvt. Ltd, New Delhi.

**Marshall, J.H. and A. Foucher.** 1940 - The Monuments of Sanchi, Vol III, Archaeological Survey of India, (Rep. 1983), New Delhi.

**Mitra, Debala.** 1977 - Pandrethan, Avanthipur and Martand, Archaeological Survey of India, New Delhi.

**Paddayya, K.** 1995 - The Stone Alignment at Hanamasagar, District Gulbarga, Karnataka, in. Srinivasan L.K. and Nagaraju S. Sri Nagabhinandanam: Dr. M.S. Nagaraja Rao Festschrift. pp. 861-875.

**Rao, N. Kameswara.** 1992 - Astronomy with Buddhist Stupas of Sanchi, in BASI, 20.

**Rao, N. Kameswara.** 1993 - Astronomical orientations of the megalithic stone circles of Brahmagiri, in BASI, 21.

**Rao, N. Kameswara.** 1995 - Observational Astronomy and Ancient Monumnets in India. in Srinivasan L.K. and Nagaraju S. Sri Nagabhinandanam: Dr. M.S. Nagaraja Rao Festschrift. pp. 23-28

**Rao, N. Kameswara.** 2005 - Aspects of prehistoric astronomy in India, BASI, 33, pp. 499-511

**Sundara, A.** 1975 - The Early Chamber Tombs of South India, University Publishers (India), Delhi.

**Thom, A.** 1967 - Megalithic Astronomy: Indications in Standing Stones, in Vistas in Astronomy, 7.

**Volwashen, A.** 1969 - Living Architecture: India. Grosset and Dunlop, New York.

**Wheeler, R.E.M.** 1948 - Brahmagiri and Chandravalli 1947: Megalithic and other cultures in Mysore State, Ancient 1ndia, No. 4, New Delhi.

**John McKim Malville** 2001 - Cosmic Landscape and Urban Layout, New Light on Hampi: Recent Reseaches at Vijayanagara, Marg Publications, (Ed) John M.Fritz & George Michell, pp 112-125.

**John McKim Malville** 2000 - The Cosmic Geometries of Vijayanagara in J M Malville and L.M.Gujral, eds., Ancient Cities, Sacred Skies: Cosmic Geometries and City Planning in Ancient India, New Delhi, pp.100-118.

**ಅರುಣಿ ಎಸ್.ಕೆ** 2007 - ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪುಟ 154–166

**ಶ್ರೀವತ್ಸ ಎಸ್. ವಟಿ** 2009 - ಬೇಲೂರು ಚೆನ್ನಕೇಶವ ದೇವಾಲಯ ಸೂರ್ಯ ರಶ್ಮಿ ಪ್ರವೇಶೋತ್ಸವ ನೆಲೆ ಮತ್ತು ಹಿನ್ನೆಲೆ, ಹೊಯ್ಸಳ ಟೂರಿಸಂ, ಸಂಪುಟ–3, ಸಂಚಿಕೆ–5, ಪುಟ 5–9

❑❑

# ಸಂಸ್ಕೃತದಲ್ಲಿ ಕೋಶಕಲ್ಪನೆ

– ಶ್ರೀರಾಮ ಭಟ್ಟ

ಯಾವುದೇ ಒಂದು ಭಾಷೆಯ ಸಮೃದ್ಧಿ ಅದರ ಶಬ್ದಸಂಪತ್ತಿನಿಂದಲೂ ಗೋಚರವಾಗುತ್ತದೆ. ಒಂದು ದೇಶದ ಸಾಂಸ್ಕೃತಿಕ ವಿಕಾಸದಲ್ಲೂ ಶಬ್ದರಾಶಿಯ ಪಾತ್ರ ದೊಡ್ಡದು. ಸಾಂಸ್ಕೃತಿಕ ವಿಕಾಸದಲ್ಲಿ ರಚನಾತ್ಮಕವಾಗಿರುವ ಎಲ್ಲ ಭಾಷೆಗಳಲ್ಲೂ ಶಬ್ದ ಸಾಧುತ್ವವನ್ನು ಕಾಪಾಡುವ, ಅರ್ಥವೈವಿಧ್ಯವನ್ನು ವಿವರಿಸುವ ಕೆಲಸ ಕಾಲಕಾಲಕ್ಕೆ ನಡೆದುಬಂದಿದೆ. ವ್ಯಾಕರಣ ಶಬ್ದಸಾಧುತ್ವವನ್ನು ಕಾಪಾಡುವ ಪ್ರಯತ್ನ ಮಾಡಿದರೆ ಕೋಶ ಅರ್ಥಪ್ರತಿಪತ್ತಿಯನ್ನು ಹೇಳುವ ಪ್ರಯತ್ನ ಮಾಡುತ್ತದೆ. ಪ್ರಾಚೀನ ಕಾಲದಲ್ಲಿ ವ್ಯಾಕರಣ ಮತ್ತು ಕೋಶಗಳು ಅಷ್ಟಾಗಿ ಬೇರೆಯಾಗಿರದೆ ಪರಸ್ಪರ ಪೂರಕಗಳಾಗಿದ್ದವು. ಸಂಸ್ಕೃತ ವ್ಯಾಕರಣ ಗ್ರಂಥಗಳಲ್ಲಿ ಕ್ರಿಯಾಪದಗಳ ರೂಪಸಿದ್ಧಿಯನ್ನು ತಿಳಿಸುವಾಗ ಅವುಗಳನ್ನು ಹತ್ತು ಗಣಗಳಾಗಿ ವಿಂಗಡಿಸಿಕೊಳ್ಳುವುದರ ಜೊತೆಗೆ ಸುಮಾರು ೨೦೦೦ ಧಾತುಗಳ ಅರ್ಥವನ್ನೂ ವಿವರಿಸಲಾಗಿದೆ. ಪಾಣಿನೀ ಸೂತ್ರಗಳನ್ನು ವಿವರಿಸುವಾಗ ಉದಾಹರಿಸಿರುವ ಶಬ್ದಗಳನ್ನೇ ಪಟ್ಟಿಮಾಡಿದರೆ ಒಂದು ದೊಡ್ಡ ಕೋಶವೇ ಆದೀತು. ಹೀಗೆ ವ್ಯಾಕರಣ ಮತ್ತು ಕೋಶಗಳು ಶಬ್ದಶಾಸ್ತ್ರದ ಅಂಗಗಳು. "ಏಕಃ ಶಬ್ದಃ ಸಮ್ಯಗ್ ಜ್ಞಾತಃ ಸುಪ್ರಯುಕ್ತಃ ಸ್ವರ್ಗೇ ಲೋಕೇ ಚ ಕಾಮಧುಗ್ ಭವತಿ" ಎಂಬ ಪ್ರಾಚೀನರ ನುಡಿ ಶಬ್ದದ ಸಮ್ಯಗ್‌ಜ್ಞಾನ–ಸರಿಯಾದ ತಿಳುವಳಿಕೆ ಮತ್ತು ಸುಪ್ರಯುಕ್ತ–ಸಾಧುಪ್ರಯೋಗದ ಆವಶ್ಯಕತೆಯನ್ನು ಒತ್ತಿ ಹೇಳುತ್ತದೆ.

ಅಕ್ಷರಗಳ ಸಮುದಾಯವೆನಿಸಿದ ಪದ ಕೇವಲ ಸಂಕೇತವಷ್ಟೆ. ಈ ಅಕ್ಷರಶರೀರ ಒಂದು ನಿರ್ದಿಷ್ಟ ಅರ್ಥವನ್ನು ಹೊಂದಿರುತ್ತದೆ. ಅದು ಸಂದರ್ಭವಶದಿಂದ, ಪ್ರಯೋಗ ರೂಢಿಯಿಂದ ಅರ್ಥವೈವಿಧ್ಯವನ್ನೂ ಅರ್ಥವಿಸ್ತಾರವನ್ನೂ ಪಡೆಯುತ್ತದೆ. ಇದನ್ನೇ ಶಬ್ದದ 'ಶಕ್ತಿ' ಎಂದು ಕರೆಯಲಾಗಿದೆ. ಶಬ್ದಶಕ್ತಿಯನ್ನು ಗ್ರಹಿಸುವಲ್ಲಿ ಕೋಶದ ಅಗತ್ಯವನ್ನು ಈ ಮಾತು ಬಿಂಬಿಸುತ್ತದೆ.

**ಶಕ್ತಿಗ್ರಹಂ ವ್ಯಾಕರಣೋಪಮಾನಕೋಶಾಪ್ತವಾಕ್ಯಾತ್ ವ್ಯವಹಾರತಶ್ಚ।**
**ವಾಕ್ಯಸ್ಯ ಶೇಷಾತ್ ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ॥**

(ವ್ಯಾಕರಣ, ಉಪಮಾನ, ಕೋಶ, ಆಪ್ತವಾಕ್ಯ, ವ್ಯವಹಾರ, ವಾಕ್ಯಶೇಷ, ವಿವರಣ ಮತ್ತು ಪ್ರಸಿದ್ಧ ಶಬ್ದದ ಸಾನಿಧ್ಯ–ಇವುಗಳಿಂದ ಶಬ್ದದ ಶಕ್ತಿಯನ್ನು ಗ್ರಹಿಸಲು ಸಾಧ್ಯವಾಗುತ್ತದೆ ಎಂದು ಬಲ್ಲವರು ಹೇಳುತ್ತಾರೆ).

'ಕುಶ್'–ಸಂಶ್ಲೇಷಣೇ ಎಂಬ ಧಾತುವಿನಿಂದ ನಿಷ್ಪನ್ನವಾದ 'ಕೋಶ'ಪದ ಸಂಶ್ಲೇಷಣ ಎಂದರೆ ಸುರಕ್ಷಿತವಾಗಿ ಹಿಡಿದಿರುವುದು ಅಥವಾ ಬಚ್ಚಿಟ್ಟುಕೊಳ್ಳುವುದು ಎಂಬ ಅರ್ಥವನ್ನು ಒಳಗೊಂಡಿದೆ. ಕೀಟ ತನ್ನ ಮೈಯಿಂದ ಹೊರಬಂದ ಲೋಳೆಯ ಸೂಕ್ಷ್ಮ ಎಳೆಗಳಿಂದ ಮಾಡಿಕೊಂಡ ಗೂಡು ಮತ್ತು ಮೊಟ್ಟೆ ಎಂಬ ಅರ್ಥದಲ್ಲಿ 'ಕೋಶ'ಪದ ರೂಢವಾಗಿದೆ.

'ಕುಷ್'–ನಿಷ್ಕರ್ಷೇ ಎಂಬ ಧಾತುವಿನಿಂದ ನಿಷ್ಪನ್ನವಾದ 'ಕೋಷ' ಪದ ಆಕರ್ಷಿಸು ಎಂಬ ಅರ್ಥವನ್ನು ಹೊಂದಿದೆ. ಮಧುಮಯ ಪರಾಗಾದಿಗಳಿಂದ ದುಂಬಿ ಪತಂಗಗಳನ್ನಾಕರ್ಷಿಸುವ ಮೊಗ್ಗು, ಸರ್ವಜನಾಕರ್ಷಕವಾದ ಚಿನ್ನ, ಬೆಳ್ಳಿ, ನಾಣ್ಯ, ಧನಾಗಾರ ಮುಂತಾದ ಅರ್ಥದಲ್ಲೂ 'ಕೋಷ' ಪದ ರೂಢವಾಗಿದೆ. ಶಬ್ದದ ಅರ್ಥ ಇಲ್ಲಿ ದಾಖಲಾಗಿ ಸುರಕ್ಷಿತವಾಗಿದೆಯೆಂಬ ಅರ್ಥದಲ್ಲೂ, ಜಿಜ್ಞಾಸುಗಳನ್ನು ಆಕರ್ಷಿಸುತ್ತದೆಂಬ ಅರ್ಥದಲ್ಲೂ ಶಬ್ದಾದಿ ಸಂಗ್ರಹಗ್ರಂಥಕ್ಕೆ ಕೋಶ ಮತ್ತು ಕೋಷ ಎಂಬ ಎರಡೂ ರೂಪಗಳೂ ಬಳಕೆಯಲ್ಲಿ ಬಂದಿವೆಯೆಂದು ತೋರುತ್ತದೆ. "ಅರ್ಥಂ ವಾಚಃ ಪುಷ್ಪಫಲಂ–ಅರ್ಥವು ಭಾಷೆಯ ಹೂವು–ಹಣ್ಣು". ಸಂಸ್ಕೃತದ ಪ್ರಾಚೀನ ಕೋಶ ಪರಿಕಲ್ಪನೆಯನ್ನು ಪ್ರಮುಖ ಕೋಶಗಳ ಅವಲೋಕನದಿಂದ ಕಂಡುಕೊಳ್ಳುವುದು ಪ್ರಕೃತ ಲೇಖನದ ಉದ್ದೇಶ.

ಕೋಶಗಳಿಗೆಲ್ಲ ಮೂಲ ಅಥವಾ ಮಾದರಿಯಾದದು ನಿಘಂಟು ಮತ್ತು ನಿರುಕ್ತ. ಕಶ್ಯಪಮುನಿ ರಚಿಸಿದ್ದೆಂದು ಹೇಳಲಾದ ನಿಘಂಟು ಎಂಬ ಗ್ರಂಥದಲ್ಲಿ ಋಗ್ವೇದದಲ್ಲಿ ಬರುವ ನಿಸರ್ಗ, ನಿಸರ್ಗದೇವತೆ, ಯಜ್ಞ, ಪ್ರಜ್ಞೆ, ಭಾವ, ಸಂಗ್ರಾಮ ಮುಂತಾದವನ್ನು ಕುರಿತ ಪದಗಳನ್ನು ಐದು ಅಧ್ಯಾಯಗಳಲ್ಲಿ ಸಂಗ್ರಹಿಸಲಾಗಿದೆ. "ನಿಗಮ (ವೇದ)ದಿಂದ ಪದಗಳನ್ನಾಯ್ದು

**# ಶ್ರೀರಾಮ ಭಟ್ಟ, ೨೪೬೫, 'ಸ್ನೇಹ', ೩ನೇ ಮೇನ್, 'ಇ' ಬ್ಲಾಕ್, ಸಹಕಾರನಗರ, ಬೆಂಗಳೂರು ೫೬೦ ೦೯೨**

ಕೊಟ್ಟಿದ್ದರಿಂದ (ನಿ+ಗಮಯಂತಿ) ನಿಘಂಟು ಎಂಬ ಹೆಸರು ಬಂತು. ಅಥವಾ ನಿಶ್ಚಿತ ಕ್ರಮದಲ್ಲಿ ಪದಗಳನ್ನು ಜೋಡಿಸಿದ್ದು, ಒಟ್ಟುಗೂಡಿಸಿದ್ದು (ನಿ+ಹನನಾತ್) ಎಂಬ ಅರ್ಥದಲ್ಲಿ 'ನಿಘಂಟು' ಪದ ನಿಷ್ಪನ್ನವಾಗಿರಲೂ ಬಹುದು" ಎಂದು ನಿರುಕ್ತಕಾರರಾದ ಯಾಸ್ಕರು ಹೇಳಿದ್ದಾರೆ. (ನಿಘಂಟವಃ ಕಸ್ಮಾತ್। ನಿಗಮಾ ಇಮೇ ಭವಂತಿ. . . ಅಪಿ ವಾ ಹನನಾದೇವ ಸ್ಯುಃ। ಸಮಾಹತಾ ಭವಂತಿ। ಯದ್ವಾ ಸಮಾಹೃತಾ ಭವಂತಿ– ನಿರುಕ್ತ, ಪ್ರಥಮ ಅಧ್ಯಾಯ) ಅರ್ಥವಿವರಣೆ ನಿಘಂಟುಕಾರನ ಉದ್ದೇಶವೇ ಆಗಿರಲಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ನಿಘಂಟುವಿನಿಂದಲೇ ಪ್ರೇರಣೆ ಪಡೆದು ಹೊರಟ ನಿರುಕ್ತವು ಶಬ್ದದ ಬೇರು ಬಗೆವ ಕೆಲಸ ಮಾಡಿ ಕೋಶದ ವ್ಯಾಪ್ತಿಯನ್ನು ವಿಸ್ತರಿಸಿತು. ಮೊಟ್ಟಮೊದಲಿಗೆ ಧ್ವನಿಶಾಸ್ತ್ರ (Phonetics) ಮತ್ತು ಶಬ್ದನಿಷ್ಪತ್ತಿ (Etymology) ಯನ್ನು ಅತ್ಯಂತ ವೈಜ್ಞಾನಿಕ ರೀತಿಯಲ್ಲಿ ಪರಿಚಯಿಸಿದ ಹಿರಿಮೆ ಈ ಗ್ರಂಥದ್ದು. ಪದಗಳನ್ನು ನಾಮ, ಆಖ್ಯಾತ (ಕ್ರಿಯೆ) ಉಪಸರ್ಗ ಮತ್ತು ನಿಪಾತಗಳೆಂದು ವಿಭಾಗಿಸಿ, ಅವುಗಳನ್ನು ವೈಜ್ಞಾನಿಕವಾಗಿ ವ್ಯಾಖ್ಯಾನಿಸಿ, ನಾಮಪದಗಳಿಗೆಲ್ಲ ಕ್ರಿಯೆಯೇ ಮೂಲ (ನಾಮಾನಿ ಆಖ್ಯಾತಜಾನಿ) ಎಂಬ ಸಿದ್ಧಾಂತವನ್ನು ಮಂಡಿಸಿದ ಕೀರ್ತಿ ಯಾಸ್ಕರದು. ನಿರುಕ್ತದಲ್ಲಿ ನೈಘಂಟು, ನೈಗಮ, ದೈವತಗಳೆಂಬ ಮೂರು ಕಾಂಡಗಳಿವೆ. ನೈಘಂಟುಕ ಕಾಂಡದ ಮೂರು ಅಧ್ಯಾಯಗಳಲ್ಲಿ ಪರ್ಯಾಯ ಪದಗಳನ್ನು ಹೇಳಲಾಗಿದೆ. (ಏಕಾರ್ಥಂ ಅನೇಕಶಬ್ದಂ ಇತ್ಯೇತದುಕ್ತಮ್) ನೈಗಮ ಕಾಂಡದ ಮೂರು ಅಧ್ಯಾಯಗಳಲ್ಲಿ ಪದಗಳ ನಾನಾರ್ಥಗಳನ್ನು ಹೇಳಲಾಗಿದೆ. (ಅನೇಕಾರ್ಥಾನಿ ಏಕಶಬ್ದಾನಿ ಅತೋ ಅನುಕ್ರಮಿಷ್ಯಾಮಃ). ದೈವತ ಕಾಂಡದ ಆರು ಅಧ್ಯಾಯಗಳಲ್ಲಿ ಇಂದ್ರಾದಿ ಅಭಿಮಾನೀ ದೇವತೆಗಳನ್ನು ಹೆಸರಿಸಿ, ಸ್ವರೂಪವನ್ನು ವಿವರಿಸಲಾಗಿದೆ. ವೇದಮಂತ್ರಗಳನ್ನು ಉಲ್ಲೇಖಿಸಿ ಪದದ ಅರ್ಥವನ್ನು ಸಾಧಾರವಾಗಿ ಸಮರ್ಥಿಸಿರುವುದು ನಿರುಕ್ತದ ವೈಶಿಷ್ಟ್ಯ.

ಕೋಶ ಪರಂಪರೆ ವೈದಿಕದಿಂದ ಲೌಕಿಕಕ್ಕೆ ಕಾಲಿಟ್ಟಿದ್ದು ಭಾಗುರಿಯ ಕೋಶದಲ್ಲಿ. ಇಂದು ಈ ಕೋಶ ಲಭ್ಯವಿಲ್ಲದಿದ್ದರೂ ಇದರ ಉಲ್ಲೇಖಗಳು ಬೇರೆ ಗ್ರಂಥಗಳಲ್ಲಿ ದೊರೆತಿವೆ. ಭಾಗುರಿ ಕೋಶಕ್ಕೆ 'ತ್ರಿಕಾಂಡ'ವೆಂಬ ಹೆಸರಿತ್ತೆಂದು ತಿಳಿದುಬಂದಿದೆ. ವ್ಯಾಕರಣ ಗ್ರಂಥವನ್ನೂ ರಚಿಸಿದ ಭಾಗುರಿ ಪಾಣಿನಿಗಿಂತ ಪೂರ್ವಕಾಲದಲ್ಲಿದ್ದವನು. ಇವನಂತೆ ವೈಯಾಕರಣಿಯೂ ಕೋಶಕಾರನೂ ಆಗಿದ್ದ ಇನ್ನೊಂದು ಹೆಸರು ಆಪಿಶಲ. ಆಪಿಶಲ ಕೋಶದ ಉದ್ಧರಣವೊಂದು ಭಾನುಜಿದೀಕ್ಷಿತನ ಅಮರಕೋಶ ಟೀಕೆಯಲ್ಲಿ ದೊರೆತಿದೆ. ಶಾಕಟಾಯನ ಮತ್ತು ವ್ಯಾಡಿ (ಉತ್ಪಲಿನೀ) ಎಂಬ ಇನ್ನೆರಡು ಕೋಶಕಾರರ ಉಲ್ಲೇಖಗಳು ನಾನಾರ್ಥಾರ್ಣವ ಸಂಕ್ಷೇಪ ಮತ್ತು ಅಭಿಧಾನ ಚಿಂತಾಮಣಿ ಎಂಬ ಕೋಶಗಳ ವ್ಯಾಖ್ಯಾನದಲ್ಲಿ ದೊರೆತಿವೆ. ಕೀತ್‌ರು 'ಸಂಸ್ಕೃತ ಸಾಹಿತ್ಯ ಇತಿಹಾಸ'ದಲ್ಲಿ ಕಾತ್ಯಾಯನ (ನಾಮಮಾಲಾ) ವಾಚಸ್ಪತಿ (ಶಬ್ದಾರ್ಣವ) ವಿಕ್ರಮಾದಿತ್ಯ (ಸಂಸಾರಾವರ್ತ)ರೆಂಬ ಕೋಶಕಾರರನ್ನು ಹೆಸರಿಸಿದ್ದಾರೆ. ಈ ಕೋಶಗಳನ್ನು 'ಹಾರಾವಲೀ' ಎಂಬ ಕೋಶದಲ್ಲಿ ಪುರುಷೋತ್ತಮದೇವನೂ ಉಲ್ಲೇಖಿಸಿದ್ದಾನೆ.

## ಅಮರಕೋಶ

ಲಭ್ಯವಿರುವ ಕೋಶಗಳಲ್ಲಿ 'ಅಮರಕೋಶ' ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆಗಿದೆ. ಈ ಕೋಶವನ್ನು ರಚಿಸಿದವನು ಅಮರಸಿಂಹ. ಇವನು ವಿಕ್ರಮಾದಿತ್ಯನ ಆಸ್ಥಾನದ ನವರತ್ನಗಳಲ್ಲೊಬ್ಬನೆಂದು ಹೇಳಿಕೆಯ ಆಧಾರದಿಂದ ಇವನ ಕಾಲ ಕ್ರಿ.ಶ. ೪೫೦ರ ಸುಮಾರಿಗೆ ಇರಬಹುದೆಂದು ಊಹಿಸಲಾಗಿದೆ. ಇವನು ಮಹಾಯಾನ ಬೌದ್ಧ ಸಂಪ್ರದಾಯಕ್ಕೆ ಸೇರಿದವನಾಗಿರಬಹುದಾದ್ದರಿಂದ ಕ್ರಿ.ಶ. ಏಳನೆಯ ಶತಮಾನದವನೆಂಬ ವಾದವೂ ಇದೆ. ಕ್ರಿ.ಶ. ಆರನೆಯ ಶತಮಾನದಲ್ಲೇ ಅಮರಕೋಶ ಚೀನೀ ಭಾಷೆಗೆ ಅನುವಾದಗೊಂಡಿದ್ದರಿಂದ ಅದಕ್ಕೂ ಮೊದಲೇ ಇವನಿದ್ದಿರಬೇಕೆಂದು ಮ್ಯಾಕ್ಸ್‌ಮುಲ್ಲರ್ ಅಭಿಪ್ರಾಯಪಟ್ಟಿದ್ದಾರೆ.

ಅಮರಕೋಶದ ಸಂವಿಧಾನ ಕ್ರಮವನ್ನು ನೋಡುವುದಕ್ಕೆ ಮೊದಲು ನಮಗೆ ಇಂದು ಪರಿಚಿತವಾದ ಆಧುನಿಕ ಅರ್ಥಕೋಶಗಳ (Dictionary) ರಚನಾಕ್ರಮವನ್ನು ಹಿನ್ನೆಲೆಯಾಗಿಟ್ಟುಕೊಳ್ಳುವುದು ಒಳ್ಳೆಯದು. ಅರ್ಥಕೋಶಗಳನ್ನು ಅಕ್ಷರಾನುಕ್ರಮಣಿಕೆಯಲ್ಲಿ ರಚಿಸುವುದು ಇಂದಿನ ಸಾಮಾನ್ಯಕ್ರಮ. ಅಕ್ಷರಾನುಕ್ರಮಣಿಕೆಯಲ್ಲಿ ಪದಗಳನ್ನು ಜೋಡಿಸಿ ಪ್ರತಿಪದಗಳ ಬೇರೆ ಬೇರೆ ಅರ್ಥಗಳನ್ನು ಹೇಳುವುದು, ಅವಶ್ಯಕವಾದಲ್ಲಿ ಲಿಂಗಗಳನ್ನು ಸೂಚಿಸುವುದು, ಕೆಲವು ಕಡೆ ಪದವಿಭಾಗವನ್ನೂ (Parts of Speech) ಹೆಸರಿಸುವುದು, ಕೆಲವೊಮ್ಮೆ ಬೇರೆ ಬೇರೆ ಅರ್ಥಗಳನ್ನು ಸಮರ್ಥಿಸಿಕೊಳ್ಳಲು ಪ್ರಸಿದ್ಧ ಗ್ರಂಥೋಕ್ತಿಗಳನ್ನೂ, ಆಡುನುಡಿಗಳನ್ನೂ ಉಲ್ಲೇಖಿಸುವುದು– ಒಟ್ಟಾರೆ ಕೋಶ ರಚನೆಯ ಕ್ರಮ. ಇದು ಸುಲಭ ಕ್ರಮ; ಅದಕ್ಕಾಗಿ ಜನಪ್ರಿಯವಾಯಿತು. ಭಾರತೀಯ ಮೂಲದ್ದು ಸ್ವಲ್ಪ ಕ್ಲಿಷ್ಟಕ್ರಮವೆಂದೇ ಹೇಳಬಹುದು. ಅದಕ್ಕೆ ಕಾರಣ ಸಂಸ್ಕೃತ ಕೋಶಗಳು ಶ್ಲೋಕರೂಪದಲ್ಲಿರುವುದು. ಶ್ಲೋಕಕ್ಕೆ ಹೊಂದುವಂತೆ ಪರ್ಯಾಯ ಪದಗಳನ್ನು ಜೋಡಿಸುತ್ತ, ಆ ಪದಗಳ ಲಿಂಗಗಳನ್ನೂ ಸೂಚಿಸುವುದು ಸಂಸ್ಕೃತ ಕೋಶಗಳಲ್ಲಿ ಕಂಡುಬರುವ ಸಾಮಾನ್ಯಕ್ರಮ. ಇದಕ್ಕೆ ಅಮರಕೋಶವೂ ಹೊರತಲ್ಲ. ಸಂಸ್ಕೃತ ಭಾಷೆಯ ಜಾಯಮಾನದಲ್ಲೇ ಒಂದು ವಿಶಿಷ್ಟತೆಯಿದೆ. ಇಲ್ಲಿ ಲಿಂಗ ಶಬ್ದನಿಷ್ಠವಾಗಿದೆಯೇ ವಿನಾ ಅರ್ಥನಿಷ್ಠವಾಗಿಲ್ಲ. ಲಿಂಗ ಅರ್ಥನಿಷ್ಠವಾಗಿ ಇಲ್ಲವೇ ಇಲ್ಲವೆಂದಲ್ಲ; ಆದರೆ ಅರ್ಥವನ್ನೇ ಆಧರಿಸಿ ಲಿಂಗವನ್ನು ನಿಖರವಾಗಿ ಹೇಳುವಂತಿಲ್ಲ. ಉದಾಹರಣೆಗೆ:

ಪತ್ನೀ ಪಾಣಿಗೃಹೀತೀ ಚ ದ್ವಿತೀಯಾ ಸಹಧರ್ಮಿಣೀ।
ಭಾರ್ಯಾ ಜಾಯಾಥ ಪುಂ ಭೂಮ್ನಿ ದಾರಾಃ . . .॥ (೧೦೬೬, ೬೫)

ಪತ್ನಿ, ಪಾಣಿಗೃಹೀತೀ, ದ್ವಿತೀಯಾ, ಸಹಧರ್ಮಿಣೀ, ಭಾರ್ಯಾ, ಜಾಯಾ, ದಾರಾಃ ಇವು ಹೆಂಡತಿ ಎಂಬರ್ಥದ ಪದಗಳು. ಇವುಗಳಲ್ಲಿ ದಾರಾಃ ಎಂಬುದು ಪುಲ್ಲಿಂಗ ಪದ, ಉಳಿದವು ಸ್ತ್ರೀಲಿಂಗಪದಗಳು. ಅದನ್ನು 'ಅಥಪುಂ' ಎಂಬುದರಿಂದ ವಾಚ್ಯವಾಗಿ ಹೇಳಲಾಗಿದೆ. ಉಳಿದ ಪದಗಳನ್ನು ಈಕಾರಾಂತ ಮತ್ತು ಆಕಾರಾಂತವಾಗಿ ಹೇಳಿ ಸ್ತ್ರೀಲಿಂಗಕಗಳೆಂದು ಸೂಚಿಸಲಾಗಿದೆ. (ದಾರಾಃ ಎಂಬ ಪದ ಭೂಮ್ನಿ-ನಿತ್ಯಬಹುವಚನಾಂತ. ಅದರಿಂದಲೇ ಕನ್ನಡದಲ್ಲಿ 'ನಮ್ಮ ಹೆಂಡಿರು-ನಮ್ಮ ಹೆಂಗಸರು' ಎಂಬ ಪ್ರಯೋಗ ಬಂದಿರಬಹುದೆ?). ಹೀಗೆ ಒಂದೇ ಅರ್ಥದ ಪದಗಳು ಬೇರೆ ಬೇರೆ ಲಿಂಗಗಳಲ್ಲಿ ಪ್ರಯೋಗವಾಗಿರುವುದನ್ನು ಕಾಣಬಹುದಾದ್ದರಿಂದ ಸಂಸ್ಕೃತ ಕೋಶಗಳಲ್ಲಿ ಲಿಂಗನಿರ್ದೇಶ ಸರ್ವಸಾಧಾರಣವಾಗಿದೆ.

ಸಂಸ್ಕೃತದಲ್ಲಿ ಪದಪ್ರಯೋಗಕ್ಕೆ ಮೂಲಪದ ಗೊತ್ತಿದ್ದರೆ ಸಾಲದು. ಅದರ ಅಂಗಭಾಗದಂತೆ ಇರುವ ಲಿಂಗವೂ ಗೊತ್ತಿರಬೇಕು. ಇಕಾರಾಂತವೇ ಆದರೂ ಕವಿ ಮತ್ತು ಮತಿ ಶಬ್ದಗಳು ತೃತೀಯಾ ವಿಭಕ್ತಿ ಏಕವಚನದಲ್ಲಿ ಕವಿನಾ ಮತ್ತು ಮತ್ಯಾ ಎಂದಾಗುತ್ತವೆ. ಈ ವ್ಯತ್ಯಾಸಕ್ಕೆ ಕಾರಣ ಕವಿ ಶಬ್ದ ಪುಲ್ಲಿಂಗ; ಮತಿ ಶಬ್ದ ಸ್ತ್ರೀಲಿಂಗ. ಹೀಗಾಗಿ ನಾಮಮಾತ್ರ ಕೋಶಗಳಲ್ಲಿ (ಭಾಗುರಿಯ ತ್ರಿಕಾಂಡ) ಲಿಂಗಜ್ಞಾನದ ಆಕಾಂಕ್ಷೆಯೂ, ಲಿಂಗವನ್ನು ಮಾತ್ರ ಸೂಚಿಸುವ ಕೋಶಗಳಲ್ಲಿ (ವ್ಯಾಡಿಯ ಉತ್ಪಲಿನೀ) ಅರ್ಥಜ್ಞಾನದ ಆಕಾಂಕ್ಷೆಯೂ ಉಳಿದಿದ್ದು ಅವು ಸಂಪೂರ್ಣವೆನಿಸುವುದಿಲ್ಲ. ನಾಮ ಲಿಂಗಗಳೆರಡನ್ನೂ ಸೂಚಿಸಿದಾಗಲೇ ಸಂಸ್ಕೃತ ಕೋಶಕ್ಕೆ ಸಮಗ್ರತೆ ಪ್ರಾಪ್ತವಾಗುತ್ತದೆ. ಅಮರಕೋಶ ಇಂಥದ್ದು. ಆದ್ದರಿಂದಲೇ ಅಮರಸಿಂಹ ತನ್ನ ಕೋಶಕ್ಕೆ 'ನಾಮಲಿಂಗಾನುಶಾಸನಮ್' ಎಂದು ಅನ್ವರ್ಥಕವಾದ ಹೆಸರನ್ನಿಟ್ಟಿದ್ದಾನೆ.

ಸಮಾಹೃತ್ಯಾನ್ಯತಂತ್ರಾಣಿ ಸಂಕ್ಷಿಪ್ತೈಃ ಪ್ರತಿಸಂಸ್ಕೃತೈಃ।
ಸಂಪೂರ್ಣಮುಚ್ಯತೇ ವರ್ಗೈಃ ನಾಮಲಿಂಗಾನುಶಾಸನಮ್॥

ಗ್ರಂಥದ ಎರಡನೆಯ ಈ ಶ್ಲೋಕದಲ್ಲಿ ಅಮರಸಿಂಹನು ಕೋಶರಚನೆಯಲ್ಲಿ ತಾನು ಅನುಸರಿಸಿದ ಆರು ಸೂತ್ರಗಳನ್ನು ಸೂಚಿಸಿದ್ದಾನೆ. ಅವು;

೧. **ಅನ್ಯತಂತ್ರಸಮಾಹಾರ:** ಇತರ ಗ್ರಂಥಗಳಿಂದ ಹಾಗೂ ಹಿಂದಿನ ಕೋಶಗಳಿಂದ ಶಬ್ದಗಳನ್ನು ಸಂಗ್ರಹಿಸುವುದು.

೨. **ಸಂಕ್ಷೇಪ:** ಎಲ್ಲ ಶಬ್ದಗಳನ್ನು ತುಂಬದೆ ತನ್ನ ಉದ್ದೇಶಕ್ಕೆ ತಕ್ಕಂತೆ ಆಯ್ಕೆ ಮಾಡುವುದು.

೩. **ಪ್ರತಿಸಂಸ್ಕರಣ:** ಶಬ್ದರೂಪಗಳಲ್ಲಿ ವ್ಯತ್ಯಾಸ ಕಂಡಾಗ ಯಾವ ರೂಪ ಸಾಧು ಎಂದು ನಿರ್ಧರಿಸಿ ಉಚಿತ ಕ್ರಮದಲ್ಲಿ ಜೋಡಿಸುವುದು ಮತ್ತು ಪರ್ಯಾಯ ಪದಗಳನ್ನಷ್ಟೇ ಅಲ್ಲದೆ ಅವಶ್ಯಕವಾದಲ್ಲಿ ಪದದ ಅರ್ಥವನ್ನು ವಿವರಿಸುವುದು. (ಉದಾ: ವೇಣವಃ ಕೀಚಕಾಸ್ತೇಸ್ಯುಃ ಯೇ ಸ್ವನಂತಿ ಅನಿಲೋದ್ಧತಾಃ - ಗಾಳಿ ಹೊಡೆದಾಗ ಧ್ವನಿಗೈಯುವ ರಂಧ್ರಪೂರ್ಣ ಬಿದಿರು ಮೆಳೆಗಳನ್ನು 'ಕೀಚಕ' ಎನ್ನುವರು).

೪. **ವರ್ಗೀಕರಣ:** ವಸ್ತು ಮತ್ತು ಭಾವವನ್ನಾಧರಿಸಿ ವ್ಯಾಕರಣ ವಿಶಿಷ್ಟ ರೂಪವನ್ನೂ ಗ್ರಹಿಸಿ ಪ್ರತ್ಯೇಕ ವರ್ಗಗಳಲ್ಲಿ ಶಬ್ದಗಳನ್ನು ಕಲೆಹಾಕುವುದು.

೫. **ನಾಮಲಿಂಗಾನುಶಾಸನ:** ಪದಗಳ ಜೊತೆಯಲ್ಲೇ ಲಿಂಗಗಳನ್ನು ಸೂಚಿಸುವುದು.

೬. **ಸಂಪೂರ್ಣತೆ:** ವರ್ಗಗಳ ಆರಂಭದಲ್ಲಿ ಆವಶ್ಯಕ ಸೂಚನೆ, ಟಿಪ್ಪಣಿಗಳನ್ನು ನೀಡಿ, ಈ ಮೇಲಿನ ಎಲ್ಲ ಅಂಶಗಳನ್ನೂ ಒಳಗೊಳ್ಳುವುದರ ಮೂಲಕ ಕೋಶಕ್ಕೆ ಸಾಕಲ್ಯ, ಸಮಗ್ರತೆಯನ್ನು ಒದಗಿಸುವುದು.

"ಈ ಆರು ಅಂಶಗಳು ಅಮರಸಿಂಹನ ವೈಯಕ್ತಿಕ ಯೋಜನಾಸೂತ್ರಗಳು ಮಾತ್ರವೇ ಆಗಿರದೆ ಭಾರತೀಯ ಕೋಶಕಲ್ಪನೆಯ ಷಡಂಗವೂ ಆಗಿರುವಂತೆ ಕಾಣುತ್ತದೆ." (ಎನ್. ಬಾಲಸುಬ್ರಹ್ಮಣ್ಯ)

ಮೂರು ಕಾಂಡಗಳನ್ನೊಳಗೊಂಡ ಈ ಕೋಶದಲ್ಲಿ ಸುಮಾರು ಮೂರು ಸಾವಿರ ಸಾಲು (ಅರ್ಧಶ್ಲೋಕ)ಗಳಿವೆ; ಹನ್ನೆರಡು ಸಾವಿರ ಪದಗಳಿವೆ. ಸ್ವರ್ಗ, ದಿಕ್, ಕಾಲ, ಧೀ, ಶಬ್ದಾದಿ, ನಾಟ್ಯ, ಪಾತಾಲಭೋಗಿ, ನರಕ, ವಾರಿ, ಭೂಮಿ, ಪುರ, ಶೈಲ, ವನೌಷಧಿ, ಸಿಂಹಾದಿ, ಮನುಷ್ಯ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಗಗಳೆಂದು ವಸ್ತುವನ್ನು ಆಧರಿಸಿ ವಿಭಾಗಿಸಿ, ಮೊದಲ ಎರಡು ಕಾಂಡಗಳನ್ನು ರಚಿಸಲಾಗಿದೆ. ಮೂರನೆಯ ಕಾಂಡದಲ್ಲಿ ಪರಿಶಿಷ್ಟ ರೂಪದಲ್ಲಿ ವಿಶೇಷ್ಯನಿಘ್ನ, ಸಂಕೀರ್ಣ, ಅವ್ಯಯ, ಲಿಂಗಾದಿ ಸಂಗ್ರಹ ವರ್ಗಗಳೆಂದು ವ್ಯಾಕರಣವನ್ನೇ ಪ್ರಧಾನವಾಗಿ ಆಧರಿಸಿದ ಕ್ರಮದಲ್ಲಿ ಪದಗಳನ್ನು ಜೋಡಿಸಲಾಗಿದೆ. ಅಲ್ಲದೆ ನಾನಾರ್ಥ ವರ್ಗವೆಂಬ ಪ್ರತ್ಯೇಕ ವಿಭಾಗದಲ್ಲಿ ಒಂದೇ ಪದಕ್ಕಿರುವ ಬೇರೆ ಬೇರೆ ಅರ್ಥವನ್ನು ಪಟ್ಟಿಮಾಡಿ ತನ್ನ ಕಾವ್ಯಶಾಸ್ತ್ರಾದ್ಯವೇಕ್ಷಣದ ಬಹುಜ್ಞತೆಯನ್ನು ಮೆರೆದಿದ್ದಾನೆ. ಉದಾಹರಣೆಗೆ 'ಗೋ' ಶಬ್ದಕ್ಕಿರುವ ಅರ್ಥವನ್ನು ಹೇಗೆ ಇಲ್ಲಿ ದಾಖಲಿಸಿದ್ದಾನೆಂಬುದನ್ನು ನೋಡಬಹುದು.

ಸ್ವರ್ಗೇಷು ಪಶುವಾಗ್ವಜ್ರದಿಙ್ನೇತ್ರ ಘೃಣಿಭೂಜಲೇ।
ಲಕ್ಷ್ಯದೃಷ್ಟ್ಯಾ ಸ್ತ್ರಿಯಾಂ ಪುಂಸಿ ಗೌಃ . . .॥ (೩೮೪, ೬೫)

ಸ್ವರ್ಗ, ಬಾಣ, ಹಸು-ಎತ್ತು, ಮಾತು, ವಜ್ರ, ದಿಕ್ಕು ಕಣ್ಣು, ಕಿರಣ, ಭೂಮಿ, ನೀರು ಎಂಬ ಅರ್ಥದಲ್ಲಿ 'ಗೋ' ಶಬ್ದದ ಪ್ರಯೋಗವಿದೆ. ಲಕ್ಷ್ಯವನ್ನಾಧರಿಸಿ ಸ್ತ್ರೀಲಿಂಗ-ಪುಲ್ಲಿಂಗಗಳೆರಡರಲ್ಲೂ ಈ ಪದವನ್ನು ಪ್ರಯೋಗಿಸಬಹುದು.

ಈ ರೀತಿಯ ವಿಭಾಗಕ್ರಮ ಅಮರಕೋಶಕ್ಕೆ ವೈಜ್ಞಾನಿಕ ದೃಷ್ಟಿಕೋನವನ್ನು ನೀಡಿದೆ. ವಸ್ತು ಮತ್ತು ಭಾವವನ್ನಾಧರಿಸಿ ಪದಗಳನ್ನು ಪೃಥಕ್ಕರಿಸುವುದರಿಂದ ಶಬ್ದನಿಷ್ಪತ್ತಿಯ ಸೂಕ್ಷ್ಮವನ್ನರಿಯಲು, ಪದದ ಹದವರಿತು ಪ್ರಯೋಗಿಸಲು ಸಾಧ್ಯವಾಗುತ್ತದೆ. ಈ ಸವಲತ್ತು, ಪದಗಳನ್ನು ಒಟ್ಟಾಗಿ ಅಕ್ಷರಾನುಕ್ರಮದಲ್ಲಿ ಜೋಡಿಸುವುದರಿಂದ ಅಷ್ಟಾಗಿ ದೊರೆಯಲಾರದು. ಈ ನಿಟ್ಟಿನಲ್ಲಿ ಅಮರಸಿಂಹ ಸಂಪೂರ್ಣ ಯಶಸ್ಸನ್ನು ಪಡೆಯದಿದ್ದರೂ ವೈಜ್ಞಾನಿಕ ಕ್ರಮಕ್ಕೆ ಭದ್ರ ಬುನಾದಿಯನ್ನು ಹಾಕಿದ್ದಾನೆ ಎಂಬುದರಲ್ಲಿ ಸಂದೇಹವಿಲ್ಲ. ಪಿ.ಎಂ. ರೋಜೆಟ್‌ನ ಈ ಮಾತನ್ನು ಗಮನಿಸಬಹುದು–

"The classification of words is there, as might be expected, exceedingly imperfect and confused, especially in all that relates to abstract ideas or a mental operation...A more logical order, however, pervades the sections relating to natural objects. Such as Seas, Earth, Towns, Plants and Animals, which form separate classes, exhibiting a remarkable effort at analysis at so remote a period of Indian literature."

(Introduction of Thesaurus of English words and Phrases by P.M. Roget)

ಅಕ್ಷರಾನುಕ್ರಮಣಿಕೆಯ ಆಧುನಿಕ ಕ್ರಮದಲ್ಲಿ ಮೊಟ್ಟಮೊದಲಿಗೆ ಡಿಕ್ಷನರಿಯನ್ನು ರಚಿಸಿದವನು ರಾಬರ್ಟ್ ಕೌಡ್ರಿ, ಇದು ಸುಮಾರು ೨೫೦೦ ಪದಗಳುಳ್ಳ ಇಂಗ್ಲಿಷ್ ಡಿಕ್ಷನರಿ. ಇದು ಪ್ರಕಟವಾದದ್ದು ಕ್ರಿ.ಶ. ೧೬೦೪ರಲ್ಲಿ. ಆ ಬಳಿಕ ಹದಿನೆಂಟನೆಯ ಶತಮಾನದಲ್ಲಿ ಡಾ. ಜಾನ್ಸನ್‌ರ ಸ್ಟ್ಯಾಂಡರ್ಡ್ ಡಿಕ್ಷನರಿ ಇದೇ ಕ್ರಮದಲ್ಲಿ ಪ್ರಕಟವಾಯಿತು. ಆದರೆ ಕ್ರಿ.ಶ. ಹತ್ತೊಂಬತ್ತನೆಯ ಶತಮಾನದಲ್ಲಿ ಪಿ.ಎಂ. ರೋಜೆಟ್ ಎಂಬ ವೈದ್ಯನು ವಸ್ತು ಮತ್ತು ಭಾವವನ್ನಾಧರಿಸಿ ಪದಗಳನ್ನು ವರ್ಗೀಕರಿಸುವುದೇ ಹೆಚ್ಚು ವೈಜ್ಞಾನಿಕ ಕ್ರಮವೆಂದು ಒತ್ತಿಹೇಳಿ 'ಥೆಸಾರಸ್ ಆಫ್ ಇಂಗ್ಲೀಷ್ ವರ್ಡ್ಸ್ ಅಂಡ್ ಫ್ರೇಸಸ್' ಎಂಬ ಶಬ್ದಕೋಶವನ್ನು ರಚಿಸಿದ್ದಾನೆ. (ಇಲ್ಲಿ ಥೆಸಾರಸ್ ಎಂದರೆ ಕೋಶ ಎಂಬುದನ್ನು ಗಮನಿಸಬಹುದಾಗಿದೆ). ಅದಕ್ಕೆ ಅಮರಕೋಶ ಸ್ಫೂರ್ತಿ ನೀಡಿದ್ದನ್ನು ಮೇಲಿನ ಮಾತುಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ.

ಅಮರಕೋಶ ಸಂಸ್ಕೃತದಲ್ಲಿ ಬೇರೆ ಕೋಶಗಳಿಗಿಂತ ಹೆಚ್ಚು ಜನಪ್ರಿಯವಾಗಿದೆ. ಇದಕ್ಕೆ ದೊರೆತಪ್ರಾಧಾನ್ಯ ಇತರ ಕೋಶಗಳಿಗೆ ಲಭಿಸಿಲ್ಲ. ಇಂದೂ ಸಂಸ್ಕೃತಪ್ರಿಯರು ಮಕ್ಕಳಿಗೆ ಬಾಲಪಾಠ ರೂಪದಲ್ಲಿ ಅಮರಕೋಶವನ್ನು ಹೇಳಿಕೊಡುವ ರೂಢಿ ಇದೆ. ಇದಕ್ಕೆ,

ತ್ರಿಲಿಂಗ್ಯಾಂ ತ್ರಿಷ್ವಿತಿ ಪದಂ ಮಿಥುನೇ ತು ದ್ವಯೋರಿತಿ।
ನಿಷಿದ್ಧಲಿಂಗಂ ಶೇಷಾರ್ಥಂ ತ್ವಂತಾಥಾದಿ ನ ಪೂರ್ವಭಾಕ್॥

ಈ ರೀತಿಯ ಅನುಷ್ಟುಪ್ ಛಂದಸ್ಸಿನ ಲಯ ಮತ್ತು ಅದೇ ಅಕ್ಷರಗಳ ಪುನರಾವರ್ತನೆಯ ಮಾಧುರ್ಯವೂ ಕಾರಣವಿರಬಹುದು. ಅಮರಕೋಶದುದ್ದಕ್ಕೂ ಉತ್ತಮ ಪದ್ಯರಚನಾಕಾರನ ಶಕ್ತಿ ಎದ್ದುಕಾಣುತ್ತದೆ.

ಅಮರಕೋಶಕ್ಕೆ ದೊರೆತಷ್ಟು ವಿದ್ವಜ್ಜನರ ಮನ್ನಣೆಯೂ ಬೇರೆ ಕೋಶಗಳಿಗೆ ಲಭಿಸಿಲ್ಲ. ಇದಕ್ಕೆ ಸಂಸ್ಕೃತದಲ್ಲಿರುವ ೩೫ಕ್ಕೂ ಹೆಚ್ಚು ಅಮರಕೋಶ ವ್ಯಾಖ್ಯಾನಗಳೇ ಸಾಕ್ಷಿ. ಕನ್ನಡವೂ ಸೇರಿದಂತೆ ಭಾರತೀಯ ಭಾಷೆಗಳಲ್ಲೆಲ್ಲ ಅನೇಕ ಅನುವಾದ ಸಹಿತ ವ್ಯಾಖ್ಯಾನಗಳು ಪ್ರಕಟವಾಗಿವೆ. ಇಂಗ್ಲಿಷ್ ಭಾಷೆಯಲ್ಲೂ ಕೋಲ್‌ಬ್ರೂಕ್ ಮುಂತಾದ ವಿದ್ವಾಂಸರು ಅನುವಾದ ಮಾಡಿದ್ದಾರೆ. ಲೂಯಿ ರೈಸ್ ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಅನುವಾದ ಮಾಡಿದ್ದಾರೆ. ಇದರ ಪರಿಷ್ಕೃತ ಆವೃತ್ತಿಯಲ್ಲಿ ಮಾನ್ಯರಾದ ಎನ್. ಬಾಲಸುಬ್ರಹ್ಮಣ್ಯ ಅವರು ಬರೆದ ಭೂಮಿಕೆ ಅಮರಕೋಶದ ಸಮಗ್ರ ಪರಿಚಯವನ್ನೂ ವಿಶ್ಲೇಷಣೆಯನ್ನೂ ಒದಗಿಸಿದೆ. (ಅಮರಕೋಶ; ಸಂಪಾದನ: ಲೂಯಿ ರೈಸ್; ಪರಿಷ್ಕೃತ ಸಂಸ್ಕರಣ: ಎನ್. ಬಾಲಸುಬ್ರಹ್ಮಣ್ಯ; ಪ್ರಕಟಣೆ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೦).

ಅಮರಕೋಶಕ್ಕೂ ಮೂಲ ಅಗ್ನಿಪುರಾಣವೆಂದು 'ಶಬ್ದಕಲ್ಪದ್ರುಮ' ಕೋಶವನ್ನು ರಚಿಸಿದ ರಾಜಾ ರಾಧಾಕಾಂತ ದೇವನು ಅಭಿಪ್ರಾಯಪಟ್ಟಿದ್ದಾನೆ. (ಸರ್ವೇಷಾಂ ಕೋಶಾಣಾಮಾದಿ ಅಗ್ನಿಪುರಾಣೋಕ್ತಾಭಿಧಾನಮ್।... ಅಮರಸಿಂಹಸ್ತು ಉಕ್ತ ಅಗ್ನಿ ಪುರಾಣೀಯಾಭಿಧಾನಸ್ಯ... ಅಂತೇ ಲಿಂಗಾದಿಸಂಗ್ರಹವರ್ಗಸ್ಯ ಯೋಗಂ ಕೃತ್ವಾ ಸ್ವೀಯಕೋಶಂ ರಚಿತವಾನ್ – ಶಬ್ದಕಲ್ಪದ್ರುಮಮುಖಬಂಧನಮ್) ಇದ್ದರೂ ಇರಬಹುದು. ಆದರೂ ಇದಮಿತ್ಥಂ ಎಂದು ಹೇಳುವುದು ಕಷ್ಟ! ಪುರಾಣಗಳ ಕಾಲ ಕರ್ತೃತ್ವಗಳ ಬಗ್ಗೆ ಇದಮಿತ್ಥಂ ಎಂದು ಹೇಳಲಾಗದಷ್ಟೆ!

## ತ್ರಿಕಾಂಡಶೇಷ

ಪುರುಷೋತ್ತಮದೇವ ವಿರಚಿತ ತ್ರಿಕಾಂಡಶೇಷವೆಂಬ ಕೋಶ ಅಮರಕೋಶದ ಪರಿಶಿಷ್ಟರೂಪದಲ್ಲಿದೆ. ಆರಂಭದಲ್ಲೇ ಈ ಅಂಶವನ್ನು ಹೀಗೆ ಸ್ಪಷ್ಟಪಡಿಸಲಾಗಿದೆ.

ಅಲೌಕಿಕತ್ವಾದ್ ಅಮರಃ ಸ್ವಕೋಶೇನ ಯಾನಿ ನಾಮಾನಿ ಸಮುಲ್ಲಿಲೇಖ।
ವಿಲೋಕ್ಯ ತೈರಪ್ಯಧುನಾ ಪ್ರಚಾರಂ ಅಯಂ ಪ್ರಯತ್ನಃ ಪುರುಷೋತ್ತಮಸ್ಯ॥

ಅಮರಕೋಶದ ಕ್ರಮದಲ್ಲೇ ವರ್ಗಗಳನ್ನು ಮಾಡಿಕೊಳ್ಳಲಾಗಿದ್ದು ಒಟ್ಟು ೫೮೪ ಶ್ಲೋಕಗಳಿವೆ.

'ಸಿಂಹೋ ಮೃಗೇಂದ್ರಃ ಪಂಚಾಸ್ಯಃ ಹರ್ಯಕ್ಷಃ ಕೇಸರೀ

ಹರಿಃ' – ಈ ಆರು ಅಮರಕೋಶದಲ್ಲಿ ದೊರೆಯುವ ಸಿಂಹದ ಪರ್ಯಾಯ ಪದಗಳು. ತ್ರಿಕಾಂಡಶೇಷದಲ್ಲಿ ಇನ್ನೂ ಒಂಭತ್ತು ಪದಗಳನ್ನು ಹೀಗೆ ಹೇಳಲಾಗಿದೆ.

**ಸಿಂಹಃ ಕಂಠೀರವೋ ಭೀಮವಿಕ್ರಾಂತಃ ಕರಿಮಾಚಲಃ।**
**ಪಂಚ ಶಿಖಸ್ಯ ಶೈಲಾಟಃ ಪಾರೀಂದ್ರಃ ಶ್ವೇತಪಿಂಗಲಃ॥**
**ಮರುತ್ಯವಶ್ಚ ನಾದೋಸ್ಯ ಚುಕ್ಕಾರಃ ಕ್ಷ್ವೇಡಿತಂ ಚ ತತ್।**

ಜೊತೆಗೆ ಸಿಂಹನಾದಕ್ಕೆ ಚುಕ್ಕಾರಃ ಮತ್ತು ಕ್ಷ್ವೇಡಿತಂ ಎಂಬ ಹೆಸರನ್ನೂ ಸೇರಿಸಲಾಗಿದೆ.

### ಹಾರಾವಲೀ

ಪುರುಷೋತ್ತಮದೇವನ ಇನ್ನೊಂದು ಸ್ವತಂತ್ರ ಕೋಶ ಹಾರಾವಲೀ. ಇಲ್ಲಿ ಪದಗಳ ನಾನಾರ್ಥಗಳನ್ನು ವಿವರಿಸಲಾಗಿದೆ. ಒಟ್ಟು ೨೭೮ ಶ್ಲೋಕಗಳಿವೆ. ಹಿಂದಿನ ಕೋಶಗಳಲ್ಲಿಲ್ಲದ ಹೊಸ ಪದಗಳನ್ನು ಹೆಚ್ಚಾಗಿ ಹೇಳಿರುವುದು ಇದರ ವೈಶಿಷ್ಟ್ಯ. ಉದಾಹರಣೆಗೆ:

**ಪುರಂದರಾ ತು ಸುರಲಾ ಕಾವೇರಿ ಚಾರ್ಧಜಾಹ್ನವೀ।**
**ಕೌಮುದಃ ಕಾರ್ತಿಕೋ ಮಾಸಃ ಸೌಭಿಕಸ್ತ್ವಿಂದ್ರಜಾಲಿಕಃ॥**

ಪುರಂದರಾ, ಸುರಲಾ ಎಂಬುದು ಗಂಗಾ ನದಿಯ ಹೆಸರು; ಕಾವೇರಿಗೆ ಅರ್ಧಜಾಹ್ನವೀ ಎಂಬ ಇನ್ನೊಂದು ಹೆಸರು; ಕೌಮುದ ಕಾರ್ತಿಕ ಮಾಸದ ಪರ್ಯಾಯ ಪದ; ಸೌಭಿಕ ಎಂದರೆ ಇಂದ್ರಜಾಲಿಕ.

### ಅಭಿದಾನ ರತ್ನಮಾಲಾ

ಹಲಾಯುಧ ಕೋಶವೆಂದೇ ಪ್ರಸಿದ್ಧವಾದ ಅಭಿಧಾನ ರತ್ನಮಾಲಾ ಎಂಬ ಕೋಶದ ಕರ್ತೃ ಹಲಾಯುಧ. ಈತನ ಕಾಲ ಕ್ರಿ.ಶ. ಹತ್ತನೆಯ ಶತಮಾನ. ಒಟ್ಟು ೮೮೭ ಶ್ಲೋಕಗಳಿವೆ. ಸ್ವರ್ಗ, ಭೂಮಿ, ಪಾತಾಲ, ಸಾಮಾನ್ಯ, ಅನೇಕಾರ್ಥ ಕಾಂಡಗಳೆಂದು ಒಟ್ಟು ಐದು ಕಾಂಡಗಳಿವೆ. ಕವಿಗಳಿಗೆ ಉಪಯುಕ್ತವಾಗುವ ರೀತಿಯಲ್ಲಿ ಈ ಕೋಶವನ್ನು ರಚಿಸಿದ್ದೇನೆಂದು ಆರಂಭದಲ್ಲಿ ಕೇಳಿಕೊಂಡಿದ್ದಾನೆ. (ಅಭಿಧಾನರತ್ನಮಾಲಾ ಕವಿಕಂಠವಿಭೂಷಣಾರ್ಥಮುದ್ಧಿಯ ತೇ) ಜಯಶಂಕರ ಜೋಶಿ ಅವರ ಸಂಪಾದಕತ್ವದಲ್ಲಿ ಹಿಂದೀ ಸಮಿತಿ ಲಖನೌ ೧೯೫೭ರಲ್ಲಿ ಇಂಗ್ಲಿಷ್ ಅನುವಾದದೊಂದಿಗೆ ಪ್ರಕಟಿಸಿದೆ.

### ವೈಜಯನ್ತೀ

ವಿಶಿಷ್ಟಾದ್ವೈತ ಮತಾನುಯಾಯಿಯಾದ ಯಾದವ ಪ್ರಕಾಶನೆಂಬವನು ರಚಿಸಿದ ಕೋಶ ವೈಜಯನ್ತೀ. ಇವನ ಕಾಲ ಕ್ರಿ.ಶ. ಹನ್ನೊಂದನೆಯ ಶತಮಾನ. ಇವನು ದಕ್ಷಿಣ ದೇಶದವನಾದ್ದರಿಂದ ದ್ರಾವಿಡ ಮೂಲದ ಪದಗಳನ್ನೂ ಉಲ್ಲೇಖಿಸಿರುವುದು ಇವನ ವೈಶಿಷ್ಟ್ಯ.

**ಅಶ್ವಸ್ತುರಂಗಸ್ತುರಗೋ ಹಯಸ್ಸಪ್ತಿಸ್ತುರಂಗಮಃ।**
**ಕುದರೋ ಘೋಟಕಸ್ತಾರ್ಕ್ಷ್ಯಃ ಕ್ರಮಣೋ ಗೃಹಭೋಜನಃ॥**

ಇಲ್ಲಿ ಕುದರೆ–ಕುದುರೆ ಎಂಬ ಪದವನ್ನು ಗಮನಿಸಬಹುದು. ಸಂಸ್ಕೃತದಲ್ಲಿ ಜನಪ್ರಿಯ ಆಡುಭಾಷೆಗಳ ಪದವನ್ನೂ ಸ್ವೀಕರಿಸುವುದರ ಮೂಲಕ ಭಾಷೆಯನ್ನು ಹಿಗ್ಗಲಿಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದು. ಎಂಟು ಕಾಂಡಗಳಲ್ಲಿ ಒಟ್ಟು ೩೧೦೦ ಶ್ಲೋಕಗಳಿದ್ದು ಅಕ್ಷರ ಸಂಖ್ಯೆ, ಲಿಂಗ ಮತ್ತು ಅಕ್ಷರಾನುಕ್ರಮಣಿಕೆಯಲ್ಲಿ ಪದಗಳನ್ನು ಜೋಡಿಸಲಾಗಿದೆ. ಆದರೆ ಶ್ಲೋಕರೂಪದಲ್ಲಿದುದರಿಂದ ಮತ್ತು ವರ್ಗಗಳಾಗಿ ಪದಗಳನ್ನು ವಿಂಗಡಿಸಿದ್ದರಿಂದ ಅವು ಸ್ಪಷ್ಟವಾಗಿ ತೋರುವುದಿಲ್ಲ.

### ಧನಂಜಯ ನಿಘಂಟು

ಧನಂಜಯನು ಅನೇಕಾರ್ಥ ನಿಘಂಟು, ನಾಮಮಾಲಾ, ಅನೇಕಾರ್ಥ ನಾಮಮಾಲಾ ಎಂಬ ಮೂರು ಕೋಶಗಳನ್ನು ರಚಿಸಿದ್ದಾನೆ. ನಾಮಮಾಲಾ ಎಂಬ ಕೋಶದಲ್ಲಿ ವ್ಯವಹಾರೋಪಯೋಗಿಯಾದ ಪದಗಳನ್ನು ೨೦೦ ಶ್ಲೋಕಗಳಲ್ಲಿ ಹೇಳಿದ್ದಾನೆ. ಈ ಕೋಶವನ್ನು ಸಂಸ್ಕೃತ ಕಲಿಯುವ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯುಕ್ತವಾಗುವಂತೆ ರಚಿಸಲಾಗಿದೆ. ಒಂದು ಶಬ್ದದಿಂದ ಶಬ್ದಾಂತರಗಳನ್ನು ರಚಿಸಬಲ್ಲ ಸುಲಭ ಹಾಗೂ ಆಕರ್ಷಕ ಕ್ರಮವನ್ನು ಇಲ್ಲಿಕಾಣಬಹುದು. ಪೃಥ್ವೀ ಅಥವಾ ಅದರ ಪರ್ಯಾಯ ಪದಕ್ಕೆ 'ಧರ' ಎಂಬರ್ಥದ ಪದಗಳನ್ನು ಜೋಡಿಸಿದರೆ ಪರ್ವತ ಎಂಬ ಅರ್ಥ;' 'ರುಹ'ಎಂಬರ್ಥದ ಪದಗಳನ್ನು ಜೋಡಿಸಿದರೆ ಗಿಡ–ಮರ ಎಂಬ ಅರ್ಥದ ಪದಗಳು ನಿಷ್ಪನ್ನವಾಗುತ್ತವೆ. ಈ ಕೋಶದಲ್ಲಿ ಸುಮಾರು ೧೭೦೦ ಪದಗಳಿವೆ. 'ಅನೇಕಾರ್ಥ ನಾಮಮಾಲಾ' ಕೋಶದಲ್ಲಿ ೪೬, ಅನೇಕಾರ್ಥ ನಿಘಂಟುವಿನಲ್ಲಿ ೨೬೮ ಶ್ಲೋಕಗಳಲ್ಲಿ ಸುಮಾರು ೨೦೦೦ ಪದಗಳ ನಾನಾರ್ಥಗಳನ್ನು ಹೇಳಿದೆ.

### ನಾನಾರ್ಥಾರ್ಣವ ಸಂಕ್ಷೇಪ

ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿದ್ದನೆಂದು ಹೇಳಲಾದ ಕೇಶವಸ್ವಾಮಿಯು ನಾನಾರ್ಥಾರ್ಣವ ಸಂಕ್ಷೇಪ ಮತ್ತು ಶಬ್ದಕಲ್ಪದ್ರುಮಗಳೆಂಬ ಎರಡು ಕೋಶಗಳನ್ನು ರಚಿಸಿದ್ದಾನೆ. ನಾನಾರ್ಥಾರ್ಣವ ಕೋಶದಲ್ಲಿ ಒಂದೇ ಪದದ ಅನೇಕ ಅರ್ಥಗಳನ್ನೂ, ಶಬ್ದಕಲ್ಪದ್ರುಮದಲ್ಲಿ ಶಬ್ದಗಳ ವ್ಯುತ್ಪತ್ತಿಯನ್ನೂ ಕೊಡಲಾಗಿದೆ. ಭಾಸನ ನಾಟಕಗಳನ್ನು ಸಂಶೋಧಿಸಿ, ಸಂಪಾದಿಸಿದ ಟಿ. ಗಣಪತಿ ಶಾಸ್ತ್ರಿಯವರ ಸಂಪಾದಕತ್ವದಲ್ಲಿ ೧೯೧೩ರಲ್ಲಿ ಈ ಕೋಶ ಪ್ರಕಟವಾಗಿದೆ.

### ಅಭಿದಾನ ಚಿಂತಾಮಣಿ

ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ರಚಿತವಾದ ಇನ್ನೊಂದು ಪ್ರಮುಖ ಕೋಶ 'ಅಭಿದಾನ ಚಿಂತಾಮಣಿ'. ಇದರ ಕರ್ತೃ ಹೇಮಚಂದ್ರ, ಇದಲ್ಲದೆ ಅನೇಕಾರ್ಥಸಂಗ್ರಹ, ನಿಘಂಟುಶೇಷಗಳೆಂಬ ಇನ್ನೆರಡು ಕೋಶಗಳನ್ನು ರಚಿಸಿದ್ದಾನೆ. ನಿಘಂಟುಶೇಷದಲ್ಲಿ ವೃಕ್ಷ, ಗುಲ್ಮ, ಲತಾ, ಶಾಕ, ತೃಣ, ಧಾನ್ಯಗಳನ್ನು ವಿವರಿಸುವ ಪ್ರತ್ಯೇಕ ಆರು ಕಾಂಡಗಳಿವೆ. ವೈದ್ಯಕೀಯಕ್ಕೆ ಪೂರಕವಾಗಿದೆ. ಅಭಿಧಾನಚಿಂತಾಮಣಿ ವಿಶೇಷ ಉಲ್ಲೇಖಕ್ಕೆ ಅರ್ಹವಾದ ಕೋಶ. ೧೫೪೨ ಶ್ಲೋಕಗಳುಳ್ಳ ಈ ಕೋಶದಲ್ಲಿ ವಸ್ತು ಆಧಾರಿತ ವಿಭಾಗ ಕ್ರಮವಿದ್ದು ಆರು ಕಾಂಡಗಳಿವೆ. ಪದಗಳನ್ನು ರೂಢಯೋಗ (ಅನ್ವರ್ಥ) ಮತ್ತು ಯೋಗರೂಢಗಳಾಗಿ ವಿಭಾಗಿಸಿ ಪರ್ಯಾಯ ಪದಗಳನ್ನು ನೀಡಲಾಗಿದೆ. ಜೈನ ತೀರ್ಥಂಕರರ ಹೆಸರು, ವಂಶ, ತಂದೆ-ತಾಯಿ, ಚಿಹ್ನೆ ಮುಂತಾದ ವಿವರಗಳನ್ನೂ, ವರ್ಣಸಂಕರಗಳ ಹೆಸರುಗಳನ್ನೂ (ಬ್ರಾಹ್ಮಣ ಶೂದ್ರರ ಸಂಗದಿಂದ ಹುಟ್ಟಿದವ ನಿಷಾದ, ಶೂದ್ರ ಬ್ರಾಹ್ಮಣ ಸಂಗದಿಂದ ಹುಟ್ಟಿದವ ಚಂಡಾಲ ಮುಂತಾಗಿ) ಆ ಕಾಲದ ಸಮಾಜ ವ್ಯವಸ್ಥೆಯನ್ನು ತಿಳಿಯಲು ಸಹಾಯಕವಾಗುವ ಇಂಥ ಅನೇಕ ವಿವರಗಳನ್ನೂ ಈ ಕೋಶದಲ್ಲಿ ಕೊಡಲಾಗಿದೆ.

### ನಾನಾರ್ಥರತ್ನಮಾಲಾ

ಇರುಗಪ್ಪ ದಂಡನಾಯಕನೆಂಬುವನು ನಾನಾರ್ಥ ರತ್ನಮಾಲಾ ಎಂಬ ಕೋಶವನ್ನು ರಚಿಸಿದವನು. ಇವನು ಹರಿಹರನೆಂಬ ರಾಜನಲ್ಲಿ ಮಂತ್ರಿಯಾಗಿದ್ದನಂತೆ. ಈ ಕೋಶದಲ್ಲಿ ೧,೨೫೫ ಶ್ಲೋಕಗಳಿದ್ದು ಅಕ್ಷರಸಂಖ್ಯೆಯನ್ನಾಧರಿಸಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರಗಳೆಂಬ ನಾಲ್ಕು ಕಾಂಡಗಳೂ, ಸಂಕೀರ್ಣ ಮತ್ತು ಅವ್ಯಯಗಳೆಂಬ ಇನ್ನೆರಡು ಕಾಂಡಗಳೂ ಇವೆ. ಏಕಾಕ್ಷರ ಕಾಂಡದಲ್ಲಿ ಅ ದಿಂದ ಕ್ಷ ದವರೆಗಿನ ಒಂದು ಅಕ್ಷರದ ಪದಗಳ ಅರ್ಥವನ್ನು ಕೊಡಲಾಗಿದೆ. ಮುಂದೆ ಎರಡರಿಂದ ನಾಲ್ಕು ಅಕ್ಷರಗಳುಳ್ಳ ಪದಗಳನ್ನು ಅಂತ್ಯ ವ್ಯಂಜನಾನುಕ್ರಮಣಿಕೆಯಲ್ಲಿ (ಅರ್ಕದಿಂದ ರೂಕ್ಷ, ಸಂಪರ್ಕದಿಂದ ಗವಾಕ್ಷ, ಅಳಿಪಿಕದಿಂದ ದೇವವೃಕ್ಷ) ಜೋಡಿಸಲಾಗಿದೆ. ಸಂಕೀರ್ಣ ಕಾಂಡದಲ್ಲಿ ಕ್ರಮವಾಗಿ ಪಂಚಾಕ್ಷರ, ಷಡಕ್ಷರ, ಸಪ್ತಾಕ್ಷರ ಮತ್ತು ವಿಷಮ ವರ್ಣಗಳ ಪದಗಳನ್ನು (ಅವಕರಕದಿಂದ ಕ್ರಿಯಾಸಮಭಿಹಾರದವರೆಗೆ) ವಿವರಿಸಲಾಗಿದೆ.

### ಮೇದಿನೀಕೋಶ

ಮೇದಿನಿಕರನೆಂಬುವನು ರಚಿಸಿದ ಕೋಶ ಮೇದಿನೀಕೋಶವೆಂದೆ ಪ್ರಸಿದ್ಧವಾಗಿದೆ. ೨೩೭೮ ಶ್ಲೋಕಗಳುಳ್ಳ ಈ ಕೋಶ ಕೂಡ ಶ್ಲೋಕರೂಪದಲ್ಲೇ ಗ್ರಥಿತವಾಗಿದ್ದರೂ, ಪದಜೋಡಣೆಯಲ್ಲಿ ಹೊಸ ಕ್ರಮವೊಂದನ್ನು ಇಲ್ಲಿ ಅನುಸರಿಸಲಾಗಿದೆ. ಇಲ್ಲಿ ಕಾಂಡಭೇದಗಳಿಲ್ಲ. ಪದದ ಅಂತ್ಯವ್ಯಂಜನದ ಸ್ಥಾನಸಂಖ್ಯೆಯನ್ನು ಆಧರಿಸಿ ಪದಗಳನ್ನು ಜೋಡಿಸಲಾಗಿದೆ. ಕೈಕ, ಕದ್ವಿ, ಕತ್ರಿ, ಕಚತುರ್, ಕಪಂಚ ಈ ಕ್ರಮದಲ್ಲಿ ಪದಗಳನ್ನಾಯ್ದು ವಿವರಿಸಲಾಗಿದೆ. (ಹಾಗೇ ಇತರ ವರ್ಣಗಳಿಗೂ ಅನ್ವಯಿಸುವುದು). ಕೈಕ ಎಂದರೆ 'ಕ' ಎಂಬ ಒಂದೇ ಅಕ್ಷರದ ಪದ. (ಕೋ ಬ್ರಹ್ಮಣಿ ಸಮೀರ ಆತ್ಮ ಯಮ ದಕ್ಷೇಷು ಭಾಸ್ಕರೇ) ಕದ್ವಿ ಎಂದರೆ ಎರಡು ಅಕ್ಷರಗಳುಳ್ಳ ಪದದಲ್ಲಿ 'ಕ'ಕಾರ ಕೊನೆಯದೂ ಎರಡನೆಯದೂ ಆಗಿರುವ ಪದ. ಉದಾ: ಅರ್ಕ (ಅರ್ಕೋ ಅರ್ಕಪರ್ಣೇ ಸ್ಫಟಿಕೇ ರವೌ ತಾಮ್ರೇ ಬೃಹಸ್ಪತೌ) ಹಾಗೆಯೆ ಕತ್ರಿ - ಅಶೋಕಃ ('ಕ'ಕಾರ ಮೂರನೆಯದು ಮತ್ತು ಕೊನೆಯ ವರ್ಣವಾಗಿರುವ ಪದ) ಕಚತುಃ-ಅಲಿಮಕಃ, ಕಪಂಚ-ಅನೇಡಮೂಕ. ಹೀಗೆ ಈ ಕೋಶವನ್ನು ನೋಡುವಾಗ ಪದದ ಅಂತ್ಯವರ್ಣವನ್ನೂ ಅದರ ಸ್ಥಾನ ಸಂಖ್ಯೆಯನ್ನೂ ತಿಳಿದುಕೊಳ್ಳಬೇಕು. ಅವಗ್ರಹ ಎಂಬ ಪದ 'ಹ'ಕಾರಾಂತವಾಗಿದ್ದು 'ಹ' ವರ್ಣ ನಾಲ್ಕನೆಯದಾಗಿದೆ. ಆದ್ದರಿಂದ 'ಹಚತುಃ' ವಿಭಾಗದಲ್ಲಿ ಅವಗ್ರಹ ಪದದ ವಿವರ ದೊರೆಯುತ್ತದೆ. (ಅವಗ್ರಹೋ ವೃಷ್ಟಿರೋಧೇ ಪ್ರತಿಬಂಧೇ ಗಜಾವಿಕೇ).

ಈ ಕ್ರಮಕ್ಕೂ ಸ್ಫೂರ್ತಿ ಅಮರಕೋಶದಿಂದಲೇ ದೊರೆತಿರಬೇಕು. ಅಮರಕೋಶದ ನಾನಾರ್ಥವರ್ಗದಲ್ಲಿ ಅಂತ್ಯ ವ್ಯಂಜನಾನುಕ್ರಮಣಿಕೆಯಲ್ಲಿ ಪದಗಳನ್ನು ಜೋಡಿಸಲಾಗಿದೆ. ನಾನಾರ್ಥವರ್ಗದ ಮೊದಲಲ್ಲೇ ಇದರ ಪ್ರಸ್ತಾಪವಿದೆ. (ನಾನಾರ್ಥಾಃ ಕೇಪಿ ಕಾಂತಾದಿ ವರ್ಗೆಷ್ವೇವಾತ್ರ ಕೀರ್ತಿತಾ-ಅನೇಕಾರ್ಥಗಳುಳ್ಳ ಕೆಲವುಪದಗಳು ಮಾತ್ರ ಕಾಂತ, ಖಾಂತ, ಗಾಂತ ಮುಂತಾದ ವರ್ಗಗಳಲ್ಲಿ ಇಲ್ಲಿ ಹೇಳಲ್ಪಟ್ಟಿವೆ).

ಒಟ್ಟಿನಲ್ಲಿ ಅಮರಕೋಶದಿಂದ ಪ್ರಭಾವಿತರಾಗಿ ಹಲವರು ಕೋಶಗಳನ್ನು ರಚಿಸಿದ್ದಾರೆ. ಅಮರಕೋಶದ ಅರಕೆಗಳನ್ನು ತುಂಬಲು ಪ್ರಯತ್ನಿಸಿ ಅನೇಕ ಕೋಶಗಳು ಬಂದಿವೆ. ರಾಧಾಕಾಂತದೇವನು ತನ್ನ 'ಶಬ್ದಕಲ್ಪದ್ರುಮ'ವೆಂಬ ಆಧುನಿಕ ಪದ್ಧತಿಯ ಸಂಸ್ಕೃತ ಕೋಶದಲ್ಲಿ ಇಪ್ಪತ್ತೇಳು ಉಪಲಬ್ಧವಿರುವ ಕೋಶಗಳನ್ನೂ, ಮೂವತ್ತೆರಡು ಉಪಲಬ್ಧವಲ್ಲದ ಕೋಶಗಳನ್ನೂ ಹೆಸರಿಸಿದ್ದಾನೆ. ಇದಲ್ಲದೆ ಸಾಂಖ್ಯ, ಜ್ಯೋತಿಷ, ಆಯುರ್ವೇದಾದಿ ಶಾಸ್ತ್ರಗಳಿಗೆ ಮಾತ್ರ ಮೀಸಲಾದ ಕೋಶಗಳೂ ಇವೆ. ಮಂತ್ರ-ತಂತ್ರಗಳಿಗೆ ಉಪಯುಕ್ತವಾದ, ಬೀಜಾಕ್ಷರಗಳ ರಹಸ್ಯವನ್ನು ವಿವರಿಸುವ 'ವರ್ಣಬೀಜಪ್ರಕಾಶ'ವೆಂಬ ಕೋಶವೂ ಇದೆ. ಅಮರಸಿಂಹನೂ ಸ್ವತಃ ತನ್ನ ಹಿಂದಿನ ಕೋಶಗಳಿಂದಲೇ ಪ್ರಚೋದಿತನಾಗಿ ಕೋಶ ಕಲ್ಪನೆಗೆ ಸಮಗ್ರತೆಯನ್ನೊದಗಿಸಲು ಪ್ರಯತ್ನಿಸಿದ. ಅವನ ನಂತರವೂ ಈ ಕೆಲಸ ನಿರಂತರವಾಗಿ ಸಾಗಿಬಂತು. ಒಂದು ಶಾಸ್ತ್ರವನ್ನೋ, ಜ್ಞಾನಶಾಖೆಯನ್ನೋ,

ಸಂಸ್ಕೃತಿ ಕಾರ್ಯವನ್ನೋ ವಿಸ್ತರಿಸುತ್ತ ಹೋಗುವುದು ನಮ್ಮ ಸಂಪ್ರದಾಯದ ಉತ್ತಮ ಪ್ರಕ್ರಿಯೆಗಳಲ್ಲೊಂದು. ದೇವಸ್ಥಾನದ ಗರ್ಭಗುಡಿಯನ್ನು ಕಟ್ಟಿದ ಬಳಿಕ ಕಾಲಾಂತರದಲ್ಲಿ ಹಂತ ಹಂತವಾಗಿ ನವರಂಗ, ಮಂಟಪ, ಚಂದ್ರಶಾಲೆ, ಪ್ರಾಂಗಣ, ಪ್ರಕಾರಗಳನ್ನು ಕಲಾಪೂರ್ಣವಾಗಿ ಕಟ್ಟಿದ್ದರಲ್ಲೂ, ನಗರಕ್ಕೆ ಬಡಾವಣೆಗಳನ್ನು ಸೇರಿಸುತ್ತ ಬೆಳೆಸುವುದರಲ್ಲೂ ಇದನ್ನು ಕಾಣಬಹುದು. ಸಾಹಿತ್ಯ, ವ್ಯಾಕರಣ, ತರ್ಕ, ಗಣಿತ, ಮೀಮಾಂಸ, ವೇದಾಂತ, ಶಿಲ್ಪ, ಆಯುರ್ವೇದಾದಿ ಜ್ಞಾನಕ್ಷೇತ್ರಗಳಲ್ಲೂ ಈ ವಿಸ್ತರಣ ಪ್ರಕ್ರಿಯೆಯನ್ನು ಕಾಣಬಹುದು. ಪ್ರಾಚೀನರು ಹಲವು ವರ್ಷಗಳನ್ನೇ, ಕೆಲವೊಮ್ಮೆ ಜೀವಿತದ ಬಹುಭಾಗವನ್ನೇ ಮುಡಿಪಾಗಿಟ್ಟು ಸತತ ಅಧ್ಯಯನ-ಚಿಂತನಗಳಿಂದ ಜ್ಞಾನಶಾಖೆಯನ್ನು ಹೆಮ್ಮರವಾಗಿ ಬೆಳೆಸಿಕೊಂಡು ಬಂದರು. (ಅಮರಸಿಂಹನೂ ಕೋಶ ನಿರ್ಮಾಣಕ್ಕೆ ತನ್ನ ಜೀವಿತದ ಬಹುಭಾಗವನ್ನೇ ವ್ಯಯ ಮಾಡಿರಬೇಕು. ಏಕೆಂದರೆ ಇವನ ಬೇರಾವ ಗ್ರಂಥಗಳೂ ಈವರೆಗೆ ಲಭಿಸಿಲ್ಲ). ಕೆಲವು ಕೋಶಗಳಲ್ಲಿ ಕೋಶ ನಿರ್ಮಿತಿಗೆ ತೆಗೆದುಕೊಂಡ ದೀರ್ಘಕಾಲವನ್ನೂ ಉಲ್ಲೇಖಿಸಲಾಗಿದೆ. (ಹಾರಾವಲೀ ನಿರ್ಮಿತೇಯಂ ಮಯಾ ದ್ವಾದಶವತ್ಸರೈಃ- ಹಾರಾವಲೀ ಎಂಬ ಕೋಶವನ್ನು ರಚಿಸಲು ನಾನು ಹನ್ನೆರಡು ವರ್ಷಗಳನ್ನು ತೆಗೆದುಕೊಂಡಿದ್ದೇನೆ-ಪುರುಷೋತ್ತಮದೇವ).

ಪ್ರಾಚೀನ ಪದ್ಧತಿಯ ಕೋಶ ಪರಂಪರೆಯಲ್ಲಿ ಮೈಸೂರು ಸಂಸ್ಥಾನವನ್ನಾಳಿದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ 'ಶ್ರೀ ಚಾಮುಂಡಾ ಲಘು ನಿಘಂಟು' ಕೊನೆಯದೆಂದು ತೋರುತ್ತದೆ. ಇದರಲ್ಲಿ ಮೂರು ಪ್ರಕರಣಗಳಿವೆ. ಮೊದಲ ಪ್ರಕರಣದಲ್ಲಿ ಹದಿಮೂರು ಶ್ಲೋಕಗಳಲ್ಲಿ ದೇವತೆಗಳ ಆಭರಣ ಮತ್ತು ಆಯುಧಗಳನ್ನು ಹೆಸರಿಸಲಾಗಿದೆ. ಎರಡನೆಯ ಪ್ರಕರಣದಲ್ಲಿ ೨೪ ಶ್ಲೋಕಗಳಲ್ಲಿ ಪ್ರಾಣಿ-ಪಕ್ಷಿಗಳ ವಿವರಗಳಿವೆ. ಮೂರನೆಯ ಪ್ರಕರಣದಲ್ಲಿ ವೃಕ್ಷಗಳನ್ನು ಹೆಸರಿಸುವ ೧೦೧ ಶ್ಲೋಕಗಳಿವೆ. ೧೯೫೪ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಈ ಲಘು ನಿಘಂಟನ್ನು ಪ್ರಕಟಿಸಿದ್ದು ಕನ್ನಡ ಅನುವಾದವನ್ನು ಕೊಟ್ಟಿದೆ. ವಿದ್ವಾಂಸರಾದ ಎಲ್. ಗುಂಡಪ್ಪ ಮತ್ತು ಎಂ.ಎಸ್. ಸುಬ್ರಹ್ಮಣ್ಯ ಶಾಸ್ತ್ರಿ ಅವರು ಸಂಪಾದಿಸಿದ ಈ ಆವೃತ್ತಿಯ ಅರಿಕೆಯಲ್ಲಿ ಹಸ್ತಪ್ರತಿಯ ಮುಖಪತ್ರ ಮತ್ತು ಒಂದು ಪುಟದ ಪಡಿಯಚ್ಚನ್ನು ಕಾಣಿಸಿದ್ದಾರೆ.

ಶಬ್ದ ಸಾಧುತ್ವವನ್ನು ಕಾಪಾಡಲು, ಶಬ್ದ ವಿಸ್ತಾರವನ್ನು ತಿಳಿಯಲು ನಮ್ಮ ಪ್ರಾಚೀನರು ಮಾಡಿದ ಪ್ರಯತ್ನ, ವಹಿಸಿದ ಕಾಳಜಿ ಆಶ್ಚರ್ಯವನ್ನುಂಟು ಮಾಡುತ್ತದೆ. ಪದವು ಸಂಕೇತ ಮಾತ್ರವಾಗಿದ್ದರೂ ಅದಕ್ಕಿರುವ ಅನಂತತೆಯನ್ನು-ಆದ್ದರಿಂದಲೇ ಅದನ್ನು ತಿಳಿಯಬೇಕಾದ ಅಗತ್ಯವನ್ನು-ಅವರು ಮನಗಂಡಿದ್ದರು. ಪತಂಜಲಿಯ ವ್ಯಾಕರಣ ಮಹಾಭಾಷ್ಯದಲ್ಲಿ 'ಹೀಗೊಂದು ಕಥೆ ಇದೆ' ಎಂದಿದ್ದಾನೆ:-

"ಒಮ್ಮೆ ಬೃಹಸ್ಪತಿ ಇಂದ್ರನಿಗೆ ಎಲ್ಲ ಪದಗಳ ವಿವರಣೆಯನ್ನು ಕಲಿಸಹೊರಟ. ದಿವ್ಯವರ್ಷ ಸಹಸ್ರ (೩,೬೦,೦೦೦ ಮಾನವ ವರ್ಷ) ಕಳೆದರೂ ಅದು ಕೊನೆಗೊಳ್ಳಲಿಲ್ಲ. ಬೃಹಸ್ಪತಿಯೇ ಅಧ್ಯಾಪಕ; ಇಂದ್ರನೇ ವಿದ್ಯಾರ್ಥಿ; ಅಧ್ಯಯನ ಕಾಲ ಸಾವಿರ ದಿವ್ಯವರ್ಷ. ಆದರೂ ಕೊನೆಗೊಳ್ಳಲಿಲ್ಲ. ಹೀಗಿರುವಾಗ ಇಂದಿನವರ ಗತಿಯೇನು! ಹೇಳಿ ಕೇಳಿ ಅಲ್ಪಕಾಲ ಬದುಕುವವರು; ಹೆಚ್ಚೆಂದರೆ ನೂರು ವರ್ಷ!"

**("ಏವಂ ಹಿಶ್ರೂಯತೇ- ಬೃಹಸ್ಪತಿರಿಂದ್ರಾಯ ದಿವ್ಯಂ ವರ್ಷ ಸಹಸ್ರಂ ಪ್ರತಿಪದೋಕ್ತಾನಾಂ ಶಬ್ದಾನಾಂ ಶಬ್ದಪಾರಾಯಣಂ ಪ್ರೋವಾಚ, ನಾಂತಂ ಜಗಾಮ! ಬೃಹಸ್ಪತಿಶ್ಚ ಪ್ರವಕ್ತಾ, ಇಂದ್ರಶ್ಚ ಅಧ್ಯೇತಾ, ದಿವ್ಯಂ ವರ್ಷ-ಸಹಸ್ರಮಧ್ಯಯನ ಕಾಲಃ, ನಾಂತಂ ಜಗಾಮ, ಕಿಂ ಪುನರದ್ಯತ್ವೇ! ಯಃ ಸರ್ವಥಾ ಚಿರಂ ಜೀವತಿ, ಸ ವರ್ಷ ಶತಂ ಜೀವತಿ" -ಮಹಾಭಾಷ್ಯ, ಪಸ್ಪಶಾಹ್ನಿಕ).**

ಎಲ್ಲ ಕೋಶಕಾರರೂ ಒಂದಿಲ್ಲೊಂದು ರೀತಿಯಲ್ಲಿ ಇದೇ ಅರ್ಥದ ಮಾತುಗಳನ್ನೇ ಆಡಿದ್ದಾರೆ. ಶಬ್ದಸಾಗರದ ದಡ ದಾಟುವುದು ಯಾರಿಗೂ ಸಾಧ್ಯವಿಲ್ಲ ಎಂದು ಕನ್ನಡದ ಕೇಶಿರಾಜನೂ ಹೇಳಿದ್ದಾನೆ- **ಶಬ್ದಪಾರಮಾರ್ಗಮಶಕ್ಯಂ.**

❑❑

# ಸೀತಾರಾಮಾಂಜನೇಯ ಸಂವಾದಮು : ಒಂದು ಅಪರೂಪದ ಯೋಗಗ್ರಂಥ

– ಗೌರೀಸುತ

ಶ್ರೀ ಸೀತಾರಾಮಾಂಜನೇಯ ಸಂವಾದವೆಂಬ ವೇದಾಂತ ಗ್ರಂಥವು, ವರಂಗಲ್ಲು ನಿವಾಸಿ ಸೀತಾರಾಮಮೂರ್ತಿ ಪರಶುರಾಮ ಪಂತುಲ ಲಿಂಗಮೂರ್ತಿ ಗುರುಮೂರ್ತಿ ಎಂಬ ಸತ್ಕವಿಗಳಿಂದ ತೆಲುಗಿನಲ್ಲಿ ವಿರಚಿತವಾದ ಯೋಗಶಾಸ್ತ್ರ, ಚಂಪೂ ಕಾವ್ಯ. ಬ್ರಹ್ಮಾಂಡ ಪುರಾಣದ ಆಧ್ಯಾತ್ಮ ರಾಮಾಯಣದ ರಾಮಹೃದಯವೆನ್ನುವುದು ಇದಕ್ಕೆ ಆಧಾರ. ಶ್ರೀರಾಮ ಪಟ್ಟಾಭಿಷೇಕಾನಂತರ ಸೀತಾರಾಮರು ಹನುಮಂತನಿಗೆ ಮಾಡಿದ ತತ್ತ್ವೋಪದೇಶದ ಸಂವಾದವನ್ನು ಪರಶಿವನು ಪಾರ್ವತಿಗೆ ತಿಳಿಸಿದನೆನ್ನಲಾಗಿದೆ. ಅದೇ ಇಲ್ಲಿಯ ವಸ್ತು. ಮೂರಾಶ್ವಾಸಗಳ ಈ ಗ್ರಂಥವು ತಾರಕ, ಸಾಂಖ್ಯ, ಅಮನಸ್ಕ ಯೋಗಗಳ ಕುರಿತು ಸವಿಸ್ತಾರವಾದ ವಿಷಯಗಳನ್ನು ಒಳಗೊಂಡಿದೆ. ಸಾಮಾನ್ಯರಿಗೆ ಅರ್ಥವಾಗದ ವೇದಾಂತ ವಿಷಯವನ್ನು ಸುಲಭ ಶೈಲಿಯಲ್ಲಿ ಪದ್ಯರೂಪದಲ್ಲಿ ಹೇಳುವುದು ಸಾಮಾನ್ಯದ ಕೆಲಸವಲ್ಲ. ಇದನ್ನು ಅತಿ ಸಮರ್ಥತೆಯಿಂದ ಕವಿಗಳು ನಿರ್ವಹಿಸಿದ್ದಾರೆ. ಗಹನವಾದ ಅದ್ವೈತ ವಿಚಾರಗಳನ್ನು ಸಾಮಾನ್ಯರಿಗೆ ತಿಳಿಸುವಂತೆ ಮಾಡಲು ಇಲ್ಲಿರುವ ಶ್ರೀ ಪಾಲಪರ್ತಿ ನಾಗೇಶ್ವರಶಾಸ್ತ್ರಿಗಳ ವಿರಚಿತ ಪ್ರತಿಪದಾರ್ಥ, ತಾತ್ಪರ್ಯಗಳ ವಿದ್ವತ್ಪೂರ್ಣ ವ್ಯಾಖ್ಯಾನವು ಈ ಗ್ರಂಥದ ಮಕುಟಕ್ಕಿಟ್ಟ ಮತ್ತೊಂದು ಮಣಿ. ಯೋಗಾಭ್ಯಾಸಿಗಳಿಗೆ ಅಗತ್ಯವಾಗುವ ಎಲ್ಲಾ ಜ್ಞಾನವೂ ಈ ಗ್ರಂಥದಲ್ಲಿದೆ. ಯೋಗಾಭ್ಯಾಸದಿಂದ ಪ್ರಾಣಾದಿ ವಾಯುಗಳು ಸ್ವಾಧೀನವಾಗುತ್ತದೆಂದೂ ವಾಯುವಿಗೆ ಮತ್ತು ಮನಸ್ಸಿಗೆ ಸಂಬಂಧ ಇರುವುದರಿಂದ ಮನಸ್ಸಿನ ಸ್ವಾಧೀನತೆ ಪಡೆಯಬಹುದೆಂದೂ, ಮನಸ್ಸಿನ ಸ್ವಾಧೀನತೆಯಿಂದ ತತ್ತ್ವಗಳ, ಇಂದ್ರಿಯಗಳ ಸ್ವಾಧೀನತೆ, ಮನೋ ವಿಕಾರಗಳ ಸ್ವಾಧೀನತೆ, ಅದರಿಂದ ಬುದ್ಧಿಯ ಸ್ವಾಧೀನತೆ, ಅದರಿಂದ ಮನೋಲಯ, ಅದರಿಂದ ಬ್ರಹ್ಮತ್ವ, ಬ್ರಹ್ಮಾನಂದ ಸಿದ್ಧಿಸುತ್ತದೆಂದು ವಿವಿಧ ಹಂತಗಳನ್ನು ತಿಳಿಯಪಡಿಸಲಾಗಿದೆ. ಇದನ್ನು ತಾರಕ, ಸಾಂಖ್ಯ, ಅಮನಸ್ಕ ಯೋಗಗಳೆಂದು ವಿಭಜಿಸಿ, ಅದಕ್ಕೆ ಅಭ್ಯಾಸ, ಜ್ಞಾನ, ಭಕ್ತಿ, ಧ್ಯಾನ, ಸಮಾಧಿ ಮಾರ್ಗಗಳನ್ನು ನಿರ್ದೇಶಿಸಲಾಗಿದೆ. ತಾರಕ ಯೋಗವು ಮನಸ್ಸನ್ನು ಪರಿಶುದ್ಧ ಮಾಡಲು, ಸಾಂಖ್ಯಯೋಗವು ಪರಬ್ರಹ್ಮ ಸ್ವರೂಪ ಇಂಥದ್ದು ಎಂದು ತಿಳಿಸಲು, ಅಮನಸ್ಕ ಯೋಗವು ನೀನೇ ಪರಬ್ರಹ್ಮ ಎಂದು ನಿರ್ಣಯಿಸುವ (ಅದ್ವೈತ) ದಾರಿ ತೋರಿಸಲು ಸಹಕಾರಿ ಆಗುತ್ತದೆ. ಒಟ್ಟಾರೆ ಮನುಷ್ಯನ ಅತ್ಯಾಸೆ, ಒತ್ತಡ, ಕೋಪ, ದುಗುಡ, ಅನಾರೋಗ್ಯ, ಚಿಂತೆ, ಅಶಾಂತಿ ಇತ್ಯಾದಿ ಕ್ಲೇಶಗಳ ಪರಿಹಾರಕ್ಕೆ ಯೋಗಸಾಧನೆ ಮಾರ್ಗೋಪಾಯವೆಂದು, ಯೋಗಾಭ್ಯಾಸದಿಂದ ದೈಹಿಕ ಹಾಗೂ ಮಾನಸಿಕ ಸ್ವಾಸ್ಥ್ಯವನ್ನು ಸಾಧಿಸಿ, ಆನಂದವನ್ನು ಹೊಂದಬಹುದೆಂಬುದು ಈ ಗ್ರಂಥದ ಪ್ರಮುಖ ಸಂದೇಶ. ಇದರ ವಿವರಗಳನ್ನು ಮುಂದೆ ನೋಡಬಹುದು.

## ಕರ್ತೃ – ವ್ಯಾಖ್ಯಾನಕಾರರ ಪರಿಚಯ

ಸೀತಾದೇವಿಯು ತಾರಕಯೋಗವನ್ನು ಮತ್ತು ಶ್ರೀರಾಮನು ಸಾಂಖ್ಯ, ಅಮನಸ್ಕಯೋಗಗಳನ್ನು ಆಂಜನೇಯನಿಗೆ ತತ್ತ್ವೋಪದೇಶದ ಮೂಲಕ ಹೇಳಿರುವ ನಿಮಿತ್ತ ಈ ಕೃತಿಯನ್ನು ಸಂವಾದವೆಂದು ಕರೆಯಲಾಗಿದೆ. ಕೃತಿಕಾರರು ಯೋಗಶಾಸ್ತ್ರದಲ್ಲಿ ಅತ್ಯಂತ ನಿಷ್ಣಾತರು ಎಂಬುದನ್ನು ಈ ಕೃತಿ ನಿರೂಪಿಸುತ್ತದೆ. ತಮ್ಮ ಯೋಗಶಾಸ್ತ್ರ ಪಾಂಡಿತ್ಯವನ್ನು ಸಂಪೂರ್ಣವಾಗಿ ಕವಿಗಳು ಬಳಸಿಕೊಂಡಿದ್ದಾರೆ. ಈ ಮುದ್ರಿತ ಪ್ರತಿಗೆ ದಿನಾಂಕ ೨೯-೯-೧೯೨೭ರಲ್ಲಿ ಪೀಠಿಕೆಯನ್ನು ಬರೆದಿರುವ ಶ್ರೀರಾಮಭಕ್ತ ದಮ್ಮಿ-ರಾಮಕೃಷ್ಣಯ್ಯನವರು ಈ ಕವಿಯು ಕ್ರಿಪೂ. ಸುಮಾರು ೧೭೫೦ರಲ್ಲಿ ಇದ್ದಿರಬಹುದೆಂದು ತಿಳಿಯಲು ಆಧಾರಗಳಿವೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಹೈದರಾಬಾದ್ ಸಮೀಪದಲ್ಲಿರುವ ವರಂಗಲ್ ಪ್ರಾಂತದ ಪಟ್ಟಿವಾಡದವರೆಂದು, ಇವರಿದ್ದ ಮನೆಯಲ್ಲೇ ಇವರ ವಂಶೀಕರು ಈಗಲೂ ಇದ್ದಾರೆಂದು ಹೇಳಿದ್ದಾರೆ. ಇವರು ನಿಯೋಗಿ ಬ್ರಾಹ್ಮಣರೆಂದು, ತಂದೆ ರಾಮಮಂತ್ರಿ, ತಾಯಿ ತಿಮ್ಮಾಂಬ, ಪತ್ನಿ ಲಿಂಗಾಂಬ, ಮಗ ರಾಮಮೂರ್ತಿ ಎಂದು, ಮಗನು ಸಹ ಕವಿಪುಂಗವನೆಂದು ಬರೆದ್ದಾರೆ. ಕವಿಯು ಪ್ರಾಯದಲ್ಲಿ ಶೃಂಗಾರ ರಸಿಕ ಸ್ವಭಾವದವರಾಗಿದ್ದು 'ರತೀ ಮನ್ಮಥ ವಿಲಾಸ'ವನ್ನು ರಚಿಸಿದಂತೆಯೂ, ಅನಂತರದಲ್ಲಿ ನಾರಾಯಣ ದೇಶಿಕರಿಂದ ತಾರಕನಾಮ

# ಎಂ.ಎನ್. ಅನಂತರಾಮನ್, ೭೫೭, 'ವೇದಾದ್ರಿ', ಬನಶಂಕರಿ ೩ನೇ ಹಂತ, ೩ನೇ ಫೇಸ್, ೩ನೇ ಬ್ಲಾಕ್, ಬೆಂಗಳೂರು – ೫೬೦ ೦೮೫

ಮಂತ್ರೋಪದೇಶವಾಗಿ, ನಿರಂತರ ಧ್ಯಾನ ಮಾಡುತ್ತಿದುದರಿಂದ ಮನಸ್ಸು ಪರಿಶುದ್ಧವಾಗಿ, ರಾಮಭಕ್ತಿ, ಪರಮಾರ್ಥ ಚಿಂತನೆ ಹುಟ್ಟಿ ವೇದಾಂತ ಸಂಬಂಧ ಶತಕಗಳನ್ನು ರಚಿಸಿದಂತೆಯೂ, ಮುಂದೆ ಮಹಾದೇವ ಗುರುಕೃಪೆಯಿಂದಾಗಿ ಸಂಶಯಗಳಿಂದ ಮುಕ್ತರಾಗಿ, ಕೇವಲಾತ್ಮ ವಿಜ್ಞಾನ ಹೊಂದಿದಾಗ ಶ್ರೀರಾಮನೇ ಸಾಕ್ಷಾತ್ಕರಿಸಿ ಆದೇಶಿಸಿದಂತೆ ಕವಿತಾ ಪ್ರೌಢಿಮೆಯಿಂದ ಈ ರಚನೆಯನ್ನು ಮಾಡಿದಂತೆ ಪೀಠಿಕೆಯಿಂದ ತಿಳಿಯುತ್ತದೆ. ಆಚಾರ್ಯ ಜಿ. ನಾಗಯ್ಯನವರು ಸಹ ಇದೇ ಅಭಿಪ್ರಾಯವನ್ನು ತಮ್ಮ 'ತೆಲುಗು ಸಾಹಿತ್ಯ ಸಮೀಕ್ಷೆ'ಯಲ್ಲಿ ವ್ಯಕ್ತಪಡಿಸಿದ್ದಾರೆ. ಕವಿಯು ಕ್ರಿ.ಶ. ೧೭೬೦ರಲ್ಲಿ ವರಂಗಲ್ಲಿನಲ್ಲಿ ಜನ್ಮಿಸಿದಂತೆ ಬರೆದಿದ್ದಾರೆ. ಅಂದರೆ ಕವಿಯು ಈ ಗ್ರಂಥವನ್ನು ರಚಿಸಿರುವ ಸಮಯ ಸುಮಾರು ೧೮೧೦-೧೮೨೦ ಇರಬಹುದು ಅನಿಸುತ್ತದೆ.

ಈ ಪದ್ಯ ಕಾವ್ಯಕ್ಕೆ ಶ್ರೀ ಪಾಲಪರ್ತಿ ನಾಗೇಶ್ವರಶಾಸ್ತ್ರಿಗಳು ಪ್ರತಿಪದಾರ್ಥ, ತಾತ್ಪರ್ಯಗಳನ್ನು ಬರೆದಿದ್ದಾರೆ. ಅರ್ಥ, ತಾತ್ಪರ್ಯಗಳು ಮಾತ್ರವಲ್ಲದೆ ಪ್ರತೀ ಗಹನವಾದ ವಿಷಯದ ಬಗ್ಗೆ, ಆಳವಾದ ಪಾಂಡಿತ್ಯದೊಂದಿಗೆ ಪೂರ್ವಗ್ರಂಥಾಧಾರಿತ ವಿಪುಲ ವ್ಯಾಖ್ಯಾನವನ್ನು ಒದಗಿಸಿದ್ದಾರೆ. ಒಂದೇ ಮಾತಲ್ಲಿ ಹೇಳಬೇಕಾದರೆ, ಮೂಲ ಗ್ರಂಥಕ್ಕೆ ಸಮವಾದ ಸಂಶೋಧಿತ ಸ್ವತಂತ್ರ ಸಿದ್ಧಾಂತ ರಚನೆಯನ್ನೇ ಮಾಡಿದ್ದಾರೆ. ಶ್ರೀ ನಾಗೇಶ್ವರಶಾಸ್ತ್ರಿಗಳ ಸಂಸ್ಕೃತ ಶಾಸ್ತ್ರಾಧ್ಯಯನ ಅಪಾರವೆನಿಸುತ್ತದೆ. ಬಹುತೇಕ ಪದ್ಯಗಳಲ್ಲಿನ ನಿಗೂಢಾರ್ಥ, ಭಾವಾರ್ಥ, ಶಬ್ದಾರ್ಥ, ವಿಶೇಷಾರ್ಥಗಳನ್ನು ವಿವರಿಸಿದ್ದಾರೆ. ಇದರ ಜೊತೆಗೆ, ಈ ಕೃತಿಯಲ್ಲಿ ಪ್ರಯೋಗಿಸಿರುವ ೪೩ ಛಂದೋ ವೈವಿಧ್ಯತೆಗಳಿಗೆ ಲಕ್ಷಣಗಳನ್ನು ಸಹ ತಮ್ಮ ವ್ಯಾಖ್ಯಾನದಲ್ಲಿ ನೀಡಿ ಆಸಕ್ತ ಓದುಗರಿಗೆ ಅಧಿಕ ಮಾಹಿತಿಯನ್ನು ನೀಡಿರುವುದು ವಿಶೇಷ. ಈ ಲೇಖನದ ಕೊನೆಯಲ್ಲಿರುವ ಪರಿಶಿಷ್ಟದಲ್ಲಿ ಸಂಖ್ಯಾನುಕ್ರಮವಾಗಿ ನೀಡಿರುವ ಸಾಮಗ್ರಿ ಎಲ್ಲವೂ ವ್ಯಾಖಾನಕಾರರ ಸಂಕಲನವೇ ಎಂದಾಗ ಇವರ ಜ್ಞಾನ ಪಾಂಡಿತ್ಯದ ಸಾಮರ್ಥ್ಯವೇನು ಎನ್ನುವುದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಆಧ್ಯಾತ್ಮಿಕ ವಿಚಾರಗಳಲ್ಲಿ ಈ ವ್ಯಾಖ್ಯಾನಕಾರರಿಗೂ ಕವಿಗಳಷ್ಟೇ ಸಮಾನ ಜ್ಞಾನವಿದ್ದಂತೆ ಕಾಣುವುದಂತೂ ಸತ್ಯ. ಇದರಿಂದಾಗಿಯೇ ಈ ರಚನಾ ವಸ್ತುವಿಗೆ ಇಷ್ಟು ವಿಸ್ತಾರವಾದ ಅರ್ಥವಿವರಣೆಯನ್ನು ಕೊಡಲು ಸಾಧ್ಯವಾಗಿದೆ. ಕೆಲವು ಸಂದರ್ಭಗಳಲ್ಲಿ ಕವಿ ಹೃದಯ ವನ್ನು ಶ್ಲೇಷಾರ್ಥಗಳ ಮೂಲಕ ರಮಣೀಯವಾಗಿ ವಿವರಿಸಿದ್ದಾರೆ. ವಾಚ್ಯಾರ್ಥ, ವ್ಯಂಜನಾರ್ಥ(ಆಧ್ಯಾತ್ಮಿಕ ವಿಚಾರದ ಪರವಾಗಿ) ಗಳೆರಡನ್ನೂ ಸಮಗ್ರವಾಗಿ ನೀಡಿದ್ದಾರೆ. ಈ ಮಹನೀಯರಿಗೂ ಸಹ ಯೋಗಶಾಸ್ತ್ರಜ್ಞಾನ ಆಳವಾಗಿದ್ದಿರಲೇಬೇಕು ಎಂದೆನಿಸುತ್ತದೆ. ಈ ಕಾರಣದಿಂದಾಗಿಯೇ ಇವರು ತಾರಕಯೋಗವನ್ನು ವಿವರಿಸುವಾಗ ವಿವಿಧ ಆಸನದ ಭಂಗಿಗಳನ್ನು, ಅದರ ಉಪಯೋಗಗಳನ್ನು, ಪ್ರಾಣಾಯಾಮಾದಿ ವಿವರಣೆಯನ್ನು ಮನಮುಟ್ಟುವಂತೆ ನೀಡಿದ್ದಾರೆ. ಇವರ ಭಾಷೆಯೂ ಸಹ ಶುದ್ಧ ಗ್ರಾಂಥಿಕದಲ್ಲಿ ನಾರಿಕೇಳಪಾಕದಂತೆ ಸಾಗಿ, ಸಾಹಿತ್ಯಾಭಿಲಾಷಿಗಳಿಗೆ ರಸಸಿದ್ಧಿಯನ್ನು ಮಾಡಿಸುತ್ತದೆ. ಇದು ಇವರ ಪಾಂಡಿತ್ಯಕ್ಕೆ; ಸಾಮರ್ಥ್ಯಕ್ಕೆ ಮತ್ತೊಂದು ಗರಿಯನ್ನಿಟ್ಟಿದೆ.

ವ್ಯಾಖ್ಯಾನಕರ್ತೃ ವಿರಚಿತ ಪದ್ಯಗಳಿಂದ ಇವರು ಕಾಶ್ಯಪ ಗೊತ್ರದವರೆಂದು, ಪಾಲಪರ್ತಿ ಭಾಗವತ ದೀಕ್ಷಿತರ ಪುತ್ರ ನಾಗೇಶ್ವರ ನಾಮಧೇಯದವರೆಂದು, ಶೇಷಾಚಾರ್ಯರ ಶಿಷ್ಯರೆಂದು, ಈ ಸತ್ಕೃತಿಗೆ ಜನರು ಮೆಚ್ಚುವಂತೆ ಅರ್ಥವನ್ನು ಬರೆದಿದ್ದಾರೆಂದು ತಿಳಿಯುತ್ತದೆ. ಪೀಠಿಕಾ ಭಾಗದಿಂದ ಇವರು ವೆಲನಾಡು ಬ್ರಾಹ್ಮಣರೆಂದು, ಕ್ರಿ.ಶ. ೧೮೭೫ರಲ್ಲಿ ಮದ್ರಾಸಿನಲ್ಲಿ ಅವರದ್ದೇ ಆದ ಸುಮನೋಮನೋಲ್ಲಾಸಿನೀ ಎಂಬ ಮುದ್ರಣಾಲಯದಲ್ಲಿ ಈ ಕೃತಿ ಮುದ್ರಣವಾಯಿತೆಂಬ ವಿಷಯಗಳು ತಿಳಿಯುತ್ತವೆ. ಈ ಮುದ್ರಣಾಲಯದಲ್ಲಿ ಇವರು ಹೀಗೆ ಅನೇಕ ಗ್ರಂಥಗಳನ್ನು ಪರಿಷ್ಕರಿಸಿ ಮುದ್ರಿಸುತ್ತ ನಿರಂತರ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದರೆಂದು ತಿಳಿದುಬರುತ್ತದೆ. ಅಂದರೆ ಪ್ರಸ್ತುತ ವ್ಯಾಖ್ಯಾನ ಸುಮಾರು ೧೮೭೦-೭೫ ರ ಮಧ್ಯಕಾಲದಲ್ಲಿ ಬರೆದಿರಬಹುದೆಂದು ಊಹಿಸಬಹುದು. ಪದ್ಯ ತಾತ್ಪರ್ಯಗಳಲ್ಲಿ ಅಲ್ಲಲ್ಲಿ ಬಿಟ್ಟುಹೋಗಿದ್ದ ಭಾಗಗಳನ್ನು ನಂತರದಲ್ಲಿ ಬ್ರಹ್ಮಶ್ರೀ ನೋರಿ ಗುರುಲಿಂಗಶಾಸ್ತ್ರಿಗಳು ಪೂರ್ಣಗೊಳಿಸಿದರೆಂದು ಸಹ ಪೀಠಿಕೆಯಿಂದ ವಿದಿತವಾಗುತ್ತದೆ. ಒಟ್ಟಾರೆ ಈ ವ್ಯಾಖ್ಯಾತರಿಂದ ಈ ಕೃತಿ ಇನ್ನಷ್ಟು ಪ್ರಖ್ಯಾತಿಯನ್ನು ಪಡೆದಿದೆ ಎನ್ನುವುದು ನಿಸ್ಸಂಶಯ.

## ಕೃತಿ ಪರಿಚಯ

ಇದು ಜೀವಬ್ರಹ್ಮೈಕ್ಯ ಸಿದ್ಧಾಂತವನ್ನು ನಿರೂಪಿಸುವ ಗ್ರಂಥ. ಮೂರು ಆಶ್ವಾಸಗಳ ಗ್ರಂಥವಾದ ಈ ಕೃತಿಯಲ್ಲಿ ಮೊದಲನೆಯ ಆಶ್ವಾಸವನ್ನು ತಾರಕಯೋಗವೆಂದು, ಎರಡನೆಯ ಆಶ್ವಾಸವನ್ನು ಸಾಂಖ್ಯಯೋಗ ಮತ್ತು ಮೂರನೆಯ ಆಶ್ವಾಸವನ್ನು ಅಮನಸ್ಕಯೋಗವೆಂದು ವಿಭಜಿಸಲಾಗಿದೆ. ಈ ರಚನೆಗೆ ಕಾರಣವನ್ನು ಕವಿಗಳು ಹೇಳುತ್ತಾರೆ. ಕವಿ ಪರಮ ಶ್ರೀರಾಮ ಭಕ್ತ. ಆದ್ದರಿಂದಲೇ ಆ ಶ್ರೀರಾಮನೇ ಗುರುಗಳ ರೂಪದಲ್ಲಿ ಸಾಕ್ಷಾತ್ಕರಿಸಿ ವಾತ್ಸಲ್ಯದಿಂದ ಆಶೀರ್ವದಿಸಿ, 'ಶರೀರ ತ್ರಯ, ಅವಸ್ಥಾತ್ರಯ, ಪಂಚಕೋಶ ವ್ಯತಿರಿಕ್ತ ಸಚ್ಚಿದಾನಂದ ಸ್ವರೂಪ ಪ್ರತ್ಯಗಾತ್ಮನು ನೀನು, ಸತ್ಯ ಜ್ಞಾನಾನಂದ ಸ್ವರೂಪ ಪರಮಾತ್ಮನು ನಾನು' ಎಂದು ಹೇಳಿ, ಸರ್ವ ಉಪನಿಷತ್ಸಾರವಾದ ಪರಮತತ್ತ್ವ ರಹಸ್ಯವನ್ನು ಉಪದೇಶಿಸಿ 'ಜೀವನ್ಮುಕ್ತಿ ಸುಖವನ್ನನುಭವಿಸಿ ಕೈವಲ್ಯವನ್ನು ಪಡೆಯುವೆ' ಎಂದು ಹೇಳಿದರೆಂದು ತಿಳಿಸುತ್ತಾ, 'ಪ್ರಸ್ತುತದಲ್ಲಿ ಬ್ರಹ್ಮಾಂಡಪುರಾಣದಲ್ಲಿನ ಆಧ್ಯಾತ್ಮ ರಾಮಾಯಣದ ಶ್ರೀರಾಮಹೃದಯವು ಶಿವ ಪಾರ್ವತಿಯರ

ಸಂವಾದ ರೂಪದಲ್ಲಿದ್ದು ಅದರ ಅರ್ಥವನ್ನು ವಿಸ್ತರಿಸಿ ಪ್ರಬಂಧವಾಗಿ ರಚಿಸಿ ತನ್ನ ಹೆಸರಿಗೆ ಅರ್ಪಣೆ ಮಾಡಲು ಆದೇಶಿಸಿ ಅಂತರ್ಧಾನವಾದರೆಂದು ಹೇಳಿದ್ದಾರೆ. ಇದರಿಂದ 'ಸರ್ವಪಾಪ ಮುಕ್ತನಾಗಿ ಕೃತಾರ್ಥನಾಗುವೆ' ಎಂದು ಶ್ರೀರಾಮ ಹೇಳಿದಂತೆ ಫಲಶೃತಿಯನ್ನು ಸಹ ತಿಳಿಸಿದ್ದಾರೆ. ತನ್ನ ಗ್ರಂಥವು ಶ್ರೇಷ್ಠವೂ ಮಂಗಳಕರವೂ ಆಗಿದ್ದು, ಮೋಕ್ಷಾರ್ಥಿಗಳಿಂದ ಸದಾ ಕೇಳುವಂಥದ್ದು, ಓದುವಂಥದ್ದು ಮತ್ತು ಹೇಳುವಂಥದ್ದು, ಎಲ್ಲ ಗ್ರಂಥಗಳಿಗಿಂತಲೂ ಹೆಚ್ಚಿನದು, ಮೆಚ್ಚಿನದು ಮತ್ತು ನೆಚ್ಚಿನದು ಎಂದು ಪ್ರಶಂಸಿದ್ದಾರೆ.

### ತಾರಕ ಯೋಗ ವಿಚಾರ

ಗ್ರಂಥದಲ್ಲಿ ಆಧ್ಯಾತ್ಮಿಕ, ವೇದಾಂತ ವಿಚಾರಗಳ ಮಹಾಪ್ರವಾಹವನ್ನೇ ಹರಿಸಿದ್ದಾರೆ. ಪ್ರಥಮಾಶ್ವಾಸದಲ್ಲಿ ಇಷ್ಟ ದೇವತಾ ಸ್ತೋತ್ರದ ನಂತರ, ಪಂಚಮಲ[೧] ವಿವರಣೆ, ತಾಪತ್ರಯ[೨] ನಿರೂಪಣೆ, ಷಡದ್ವ[೩], ಚತುಷ್ಷಷ್ಠಿ ಕಲೆ[೪], ಚತುರ್ದಶ ವಿದ್ಯೆ[೫], ಅಷ್ಟಾದಶ ವಿದ್ಯೆ[೬], ಆಗಮಭೇದ[೭], ಅಜ್ಞಾನಭೂಮಿಕಾ, ಜ್ಞಾನಭೂಮಿಕಾ, ಆನಂದಾದಿಗಳನ್ನು, ಯೋಗಾಷ್ಟಾಂಗಗಳಾದ ಯಮ (ಅಹಿಂಸ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ), ನಿಯಮ (ಶೌಚ, ತಪಸ್ಸು, ಸಂತೋಷ, ಸ್ವಾಧ್ಯಾಯ, ಈಶ್ವರ ಪ್ರಣಿಧಾನ), (ಸ್ವಸ್ತಿಕ, ಪದ್ಮ, ಕೂರ್ಮ, ಭದ್ರ ಇತ್ಯಾದಿ ೨೨ ಆಸನಗಳ ವಿವರಣೆ), ಪ್ರಾಣಾಯಾಮ (ಪೂರಕ, ರೇಚಕ, ಕುಂಭಕ, ನಾಡೀಶೋಧನ, ಬಂಧತ್ರಯ ಇತ್ಯಾದಿ), ಧಾರಣ, ಧ್ಯಾನ, ಸಮಾಧಿ (ಷಡ್ವಿಧ[೮] ಸಮಾಧಿ)ಗಳು, ರಾಜವಿದ್ಯಾ, ಪಂಚಕ್ಲೇಶ[೯], ಅಷ್ಟಪಾಶ[೧೦], ಅಷ್ಟಕಷ್ಟ[೧೧], ಅಷ್ಟೈಶ್ವರ್ಯ[೧೨], ಸಾಧನಚತುಷ್ಟಯ ಸಂಪತ್ತಿ[೧೩], ಸಪ್ತವಿಧಬುದ್ಧಿ[೧೪], ಅಷ್ಟಮೂರ್ತಿ[೧೫], ರಾಗದ್ವೇಷಾದಿಗಳ ವಿವರಣೆ, ಅಭ್ಯಾಸಾದಿ ಯೋಗನಿರ್ಣಯ, ಪಂಚಮುದ್ರಾ[೧೬], ದಶನಾದ[೧೭], ವಾಸನಾತ್ರಯ[೧೮], ಹಂಸತತ್ತ್ವ, ಷಟ್ಕಮಲ[೧೯], ಬಂಧತ್ರಯ[೨೦], ಬಿಂದುನಾದಕಲಾ, ಅಮನಸ್ಕ ರಾಜಯೋಗ, ಅಷ್ಟವಿಧಾನಂದಗಳನ್ನು ಪ್ರಥಮಾಶ್ವಾಸದಲ್ಲಿ ವರ್ಣಿಸಿದ್ದಾರೆ. ಅಂದರೆ ಇಲ್ಲಿ ಪ್ರಮುಖವಾಗಿ ಅನ್ನಮಯಕೋಶ (ದೈಹಿಕ), ಪ್ರಾಣಮಯಕೋಶ (ಆಂತರಿಕ). ಅದಕ್ಕೆ ಸಂಬಂಧಿಸಿದ ವೃತ್ತಿ, ಪ್ರವೃತ್ತಿಗಳನ್ನು ಅತ್ಯಂತ ವಿಸ್ತೃತವಾಗಿ ಹೇಳಿದ್ದಾರೆ. ಇಲ್ಲಿ ಯೋಗಾಭ್ಯಾಸ ಫಲವನ್ನು ನಿರೂಪಿಸುತ್ತಾ,

ಕಂ॥ ಯೋಗಾಭ್ಯಾಸಮುವಲನ ಸು।
ದಾ ಗತಿ ಚಿತ್ತೇಂದ್ರಿಯಮುಲ ದರ್ಪಮುಲಡಗುನ್।
ರಾಗದ್ವೇಷಾದುಲು ಚನು।
ಬಾಗುಗ ನಾತ್ಮಕು ಸುಖಾನುಭಮುಂಗಲುಗುನ್॥

ಎಂದು ಹೇಳಿದ್ದಾರೆ. ಅಂದರೆ, ಯೋಗಾಭ್ಯಾಸದಿಂದ ಪ್ರಾಣಾದಿ ಪಂಚವಾಯುಗಳ, ಜ್ಞಾನ, ಕರ್ಮ, ಅಂತರಿಂದ್ರಿಯಗಳೆಂಬ ಹದಿನಾಲ್ಕು ಇಂದ್ರಿಯಗಳ ಸ್ವೇಚ್ಛಾವರ್ತನೆ ನಿಂತು ರಾಗ, ದ್ವೇಷ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಈರ್ಷೆ, ಅಸೂಯೆ, ದಂಬ, ದರ್ಪ, ಅಹಂಕಾರವೆಂಬ ದುರ್ಗುಣಗಳು ನಶಿಸಿ, ಬ್ರಹ್ಮಾನಂದ ಉಂಟಾಗುತ್ತದೆಂದು ಇದರ ಭಾವಾರ್ಥ.

ಯೋಗವನ್ನು ಅಭ್ಯಾಸಯೋಗ ಮತ್ತು ಜ್ಞಾನಯೋಗ ಎಂದು ಎರಡು ಭಾಗ ಮಾಡುತ್ತಾರೆ. ಚಿತ್ತಪಕ್ವತೆ ಇಲ್ಲದವರಿಗೆ ಅಭ್ಯಾಸಯೋಗ ಹಾಗೂ ಚಿತ್ತಪಕ್ವತೆ ಇರುವವರಿಗೆ ಜ್ಞಾನಯೋಗವೆಂದು ವಿಭಜಿಸಿ, ಅಭ್ಯಾಸಯೋಗವನ್ನು ಪ್ರಾಣಾಯಾಮವೆಂದು ವಿವರಿಸಿ ಪ್ರಾಣಾಯಾಮವು ಪ್ರಾಕೃತ ವೈಕೃತ, ಕೇವಲ ಕುಂಭಕವೆಂದು ಮೂರು ವಿಧಗಳೆಂದೂ ಇದರಲ್ಲಿ ಪ್ರಾಕೃತವು ಮಂತ್ರಯೋಗವು, ವೈಕೃತ ಲಯಯೋಗವು, ಕೇವಲ ಕುಂಭಕವು ಹಠಯೋಗವೆಂದು ಹೇಳಿದ್ದಾರೆ. ಜ್ಞಾನಯೋಗವೆಂದರೆ, ವೇದಾಂತ ಶಾಸ್ತ್ರ ವಿಷಯಗಳನ್ನು ಶ್ರವಣಮಾಡಿ, ವೈರಾಗ್ಯ, ಉಪಶಾಂತಿ, ವಿವೇಕ ವೃತ್ತಿಗಳಿಂದ ಕೂಡಿ, ಜೀವನ್ಮುಕ್ತಿಯನ್ನು ಹೊಂದಿ, ದೇಹ ಮುಕ್ತಿಯವರೆಗೆ ಪ್ರಾರಬ್ಧವನ್ನು ಅನುಭವಿಸುತ್ತಾ ಇರುವುದು ಎಂದು ಹೇಳಿ ಇದನ್ನೇ ರಾಜಯೋಗ ಎಂದು ವಿವರಿಸಿದ್ದಾರೆ.

ತೇ॥ ರಾಜಯೋಗಂಬು ಮುಕ್ತಿಕಿ ರಾಜಪಥಮು। ರಾಜಗುಹ್ಯಂಬು ಪರಮಂಬು ರಾಜ ವಿದ್ಯ।
ಯದಿಯ ಮೂಡುವಿಧಂಬುಲ ನಲರುಚುಂಡು। ಸಾಂಖ್ಯ ತಾರಕ ಸದಮನಸ್ಕಮುಲನಂಗ॥ ೧-೪೯

ತೇ॥ ತಾರಕಂಬು ಮನಶ್ಶುದ್ಧಿ ಕಾರಕಂಬು। ಸಾಂಖ್ಯಮಾತ್ಮಸ್ವರೂಪ ವಿಚಾರಕಂಬು।
ಅನುಭಜ್ಞಾನಮಮನಸ್ಕ ಮಟ್ಲುಗಾನ। ನಾದ್ಯಮೆರಿಗಿಂತು ಮೊದಲುನೀ ವವಧರಿಂಪು॥೧-೫೦

ರಾಜಯೋಗವು ಮೋಕ್ಷಾರ್ಥಿಗಳಿಗೆ ರಾಜಬೀದಿಯಂತೆ, ಬಹು ಗೋಪ್ಯವಾದದ್ದು, ಎಲ್ಲ ವಿದ್ಯೆಗಳಿಗೂ ಶ್ರೇಷ್ಠವಾದದ್ದು, ಮತ್ತದು ಸಾಂಖ್ಯ, ತಾರಕ ಅಮನಸ್ಕವೆಂದು ಮೂರುವಿಧ ಎಂದು ತಾತ್ಪರ್ಯ. ತಾರಕ ಯೋಗವು ಮನಸ್ಸನ್ನು ಶುದ್ಧ ಮಾಡುವಂಥದ್ದು, ಸಾಂಖ್ಯವು ಆತ್ಮಸ್ವರೂಪವು ಹೀಗೆ ಎಂದು ತಿಳಿಸುವಂಥದ್ದು, ಅಮನಸ್ಕವು ನೀನೇ ಪರಬ್ರಹ್ಮ ಎಂದು ನಿರ್ಣಯಿಸುವಂಥದ್ದು, ಆದ್ದರಿಂದ ನಿನಗೆ ಎಲ್ಲವನ್ನು ತಿಳಿಸುತ್ತೇನೆ ಕೇಳು ಎನ್ನುವುದು ಇದರ ತಾತ್ಪರ್ಯ. ನೀನೇ ಪರಬ್ರಹ್ಮ ಎನ್ನುವುದು 'ಅಹಂ ಬ್ರಹ್ಮಾಸ್ಮಿ' ಎಂದಂತೆ. ಇದು ತುರೀಯ ವಿವೇಕ. ಇದಕ್ಕೆ ಮೊದಲು ದೇಹಶುದ್ಧಿ, ಮನಶ್ಶುದ್ಧಿ ಆಗಬೇಕು– ಇದಕ್ಕೆ ತಾರಕಯೋಗ. ದೇಹ ಮನಸ್ಸುಗಳನ್ನು ತಿಳಿದಮೇಲೆ ಆತ್ಮನನ್ನು ತಿಳಿಯಬೇಕು– ಇದಕ್ಕೆ ಸಾಂಖ್ಯ ಯೋಗ. ಆತ್ಮನನ್ನು ತಿಳಿದಮೇಲೆ ಅಂತರ್ಬ್ರಹ್ಮನನ್ನು ತಿಳಿಯ ಬೇಕು– ಇದಕ್ಕೆ ಅಮನಸ್ಕ ಯೋಗ. ಅದಕ್ಕಾಗಿಯೇ ತಾರಕ, ಸಾಂಖ್ಯ, ಅಮನಸ್ಕ ಯೊಗಗಳನ್ನು ಪ್ರಥಮ, ದ್ವಿತೀಯ ತೃತೀಯ ಆಶ್ವಾಸಗಳ ಕ್ರಮದಲ್ಲಿ ರಚಿಸಿದ್ದಾರೆ.

ಈ ಮಂತ್ರ, ಲಯ, ಹಠ, ರಾಜ ಯೋಗಗಳಲ್ಲಿ ಯಾವುದನ್ನು ಅಭ್ಯಾಸ ಮಾಡಬೇಕಾದರೂ ಮೊದಲು

ಯಮ, ನಿಯಮ, ಆಸನ, ಪ್ರಾಣಾಯಾಮಗಳನ್ನು ಅಭ್ಯಾಸ ಮಾಡಬೇಕಾಗುವುದು. ಇವು ಪೂರ್ವಾಂಗಗಳು. ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳು ಉತ್ತರಾಂಗಗಳು. ಉತ್ತರಾಂಗಗಳನ್ನು ಯೋಗ ಸಮಾಪ್ತಿಯಲ್ಲಿ ಅಭ್ಯಾಸ ಮಾಡಬೇಕು ಎನ್ನುತ್ತಾರೆ.

ಯೋಗಾಭ್ಯಾಸಿಗಳಿಗೆ ಊಟದ ನಿಯಮವನ್ನು ಹೇಳುತ್ತಾ,

**ಚ॥ ವನರುಚು ನೇಮಿಯುಂದಿನನಿ ವಾನಿಕಿ ಮಿಕ್ಕಿಲಿ ವೆಕ್ಕಸಂಬುಗಾ.... ವರ ಯೋಗ ಲಕ್ಷ್ಯಮುಲ್॥ (೧-೯೭)**

**ಕಂ॥ ಯುಕ್ತಾಹಾರ ವಿಹಾರುಡು।**
**ಯುಕ್ತ ಸ್ವಪ್ನಾವಬೋಧುಡು ಕರ್ಮುಮುಲನ್। ಯುಕ್ತವಿಚೇಷ್ಟುಡಗು ಘನ।**
**ಯುಕ್ತುನಕಗು ಪರಮ ರಾಜಯೋಗಮು ಸುಖಮ್ಮೈ॥**

**(೧-೯೮)**

ಅಂದರೆ,

ಅತಿಯಾದ ಉಪವಾಸ, ಅತಿಯಾದ ಊಟ, ಅತಿಯಾದ ನಿದ್ರೆ, ಅತಿಯಾದ ಎಚ್ಚರ ಇರುವವರಿಗೆ ರಾಜಯೋಗ ಸಿದ್ಧಿಸುವುದಿಲ್ಲವೆಂದೂ ಮಿತವಾದ ಊಟ, ಮಿತವಾದ ಸಂಚಾರ, ಮಿತವಾದ ನಿದ್ರೆ, ಮಿತವಾದ ಎಚ್ಚರ, ಮಿತವಾದ ಕರ್ಮನಿಷ್ಠೆ ಇರುವವರಿಗೆ ಯೋಗವು ಸಿದ್ಧಿಸುತ್ತದೆಂದು ಹೇಳಿದ್ದಾರೆ.

ಈ ಪದ್ಯಗಳು ಭಗವದ್ಗೀತೆಯ ಆರನೇ ಅಧ್ಯಾಯದ,

**"ನಾತ್ಯಶ್ನತಸ್ತು ಯೋಗೋಸ್ತಿ... ನೈವಚ ಅರ್ಜುನಾ॥**

ಮತ್ತು

**"ಯುಕ್ತಾಹಾರ ವಿಹಾರಸ್ಯ ..... ಯೋಗೋ ಭವತಿ ದುಃಖಹಾ ॥**

೧೬, ೧೭, ಶ್ಲೋಕಗಳ ಪ್ರತಿರೂಪಗಳೇ ಆಗಿರುವುದು ಗಮನಾರ್ಹ.

ಹಾಗೆ, ಯೋಗಾಭ್ಯಾಸ ಮಾಡುವ ಸ್ಥಳದ ಬಗ್ಗೆ ಭಗವದ್ಗೀತೆಯ ೬-೧೦, ೧೧ ರಲ್ಲಿ ಹೇಳಿರುವಂತೆಯೇ,

**ಸೀ॥ ವಿತತಮ್ಮೈ ವಿಜನಮ್ಮೈ, ವಿಮಲಮ್ಮೈ, ಸುಖಮ್ಮೈ..... ಯೋಗಮಭ್ಯಸಿಂಪಂಗ ವಲಯುನ್॥ (೧-೯೯)**

ಎಂದು ಹೇಳಿ, ವಿಶಾಲವಾದ, ಏಕಾಂತವಾದ, ನಿರ್ಮಲವಾದ, ಸುಖವಾದ, ಉಬ್ಬು ತಗ್ಗುಗಳಿಲ್ಲದ ನೆಲದಮೇಲೆ ದರ್ಭಾಸನ, ಕೃಷ್ಣಾಜಿನ, ವಸ್ತ್ರ ಇತ್ಯಾದಿಯನ್ನು ಹಾಸಿ, ಸುಖವಾಗಿರುವಂತೆ ಕೂತು, ನಿಶ್ಚಲ ಮನಸ್ಸಿನಿಂದಿರುತ್ತಾ, ದೇಹವನ್ನು ನೆಟ್ಟಗೆ ಮಾಡಿ, ನೋಟವನ್ನು ಕಣ್ಣು ಹುಬ್ಬುಗಳ ಮಧ್ಯೆ ನಿಲ್ಲಿಸಿ ಬ್ರಹ್ಮನಿಷ್ಠೆಯನ್ನು ಪಡೆಯಬೇಕೆಂಬುದು ಇಲ್ಲಿ ಕವಿ ವಿವರಿಸಿದ್ದಾರೆ.

ಮುಂದುವರೆಸುತ್ತಾ, ಪಂಚಮುದ್ರೆಗಳನ್ನು (ಖೇಚರಿ, ಭೂಚರಿ, ಮಧ್ಯಮ, ಷಣ್ಮುಖಿ, ಶಾಂಭವಿ: ೧-೧೦೨) ಪ್ರಸ್ತಾಪಿಸಿ, ನಾದಬಿಂದುಕಲಾ ದರ್ಶನಕ್ಕೆ ಇವು ಪ್ರಮುಖವೆಂದು ಹೇಳಿದ್ದಾರೆ. ಇಲ್ಲವಾದಲ್ಲಿ ಅಂಥಹವನು ಇಂದ್ರಿಯ ಜಯವಿಲ್ಲದೆ, ವಿಷಯಭೋಗನಾಗಿ ಅಜ್ಞಾನಿಯಾಗೇ ಇರುತ್ತಾನೆ. ಮುದ್ರೆಗಳನ್ನು ಅಭ್ಯಸಿಸಿ, ಚಿತ್ತೈಕಾಗ್ರತೆಯಿಂದ, ಕಿವಿಯನ್ನು ಮುಚ್ಚಿ, ಮೌನನಾಗಿ ಅಂತರ್ಮುಖನಾದರೆ ಪ್ರಣವವು ('ಅ' ಕಾರ, 'ಉ' ಕಾರ, 'ಮ' ಕಾರವು) ದಶವಿಧನಾದ ಗಳಾಗಿ ಕೇಳುತ್ತವೆಂದಿದ್ದಾರೆ(೧-೧೨೬). ಹೀಗೆ ನಾದಗಳ ಸಾಧನೆ ಮಾಡಿದವರು, ನಿರ್ಮಲವಾದ ಕಣ್ಣಕಾಂತಿಯಿಂದ ಚಿತ್ಕಲಾ ಸಂಪತ್ತಿಯಿಂದ ಪ್ರಕಾಶಮಾನವಾಗಿ ಇರುತ್ತಾರೆ (೧-೧೩೧). ಇಲ್ಲಿ ಚಿತ್ಕಲಾ ಸಾಕ್ಷಾತ್ಕಾರ, ಜ್ಞಾನಸೂರ್ಯೋದಯ, ಜ್ಞಾನಚಂದ್ರೋದಯ, ತಾದಾತ್ಮ್ಯ, ನಿರ್ವಿಕಲ್ಪಸ್ಥಿತಿಗಳು, ಮುಕ್ತಿ ಸಮಾಗಮ ಲಭಿಸುತ್ತದೆ ಎಂದಿದ್ದಾರೆ. ಇದಕ್ಕೆ ಕಠೋರ ಸಾಧನೆ ಅತಿ ಮುಖ್ಯ. ಇಂಥಹ ಸಾಧನೆಯನ್ನು ಕೈಗೊಂಡಾಗ ಪ್ರಾಣಾಪಾನಾದಿ ವಾಯುಗಳನ್ನು ಚಲಿಸದಂತೆ ಬಂಧಿಸಬೇಕು. ಹೀಗೆ ಬಂಧಿಸಿದಾಗ ಬುದ್ಧಿಚಂಚಲತೆ ಇರುವುದಿಲ್ಲ (೧-೧೩೮).

ಇಡಾ, ಪಿಂಗಳಾ, ಸುಷುಮ್ನಾ ಎಂಬ ಮುಖ್ಯ ನಾಡಿಗಳ ಬಗ್ಗೆ ವಿವೇಚಿಸುತ್ತಾ,

**"ಮಾತೃ ಪಿತೃ ಭುಕ್ತಾನ್ನ ಸಂಭೂತ ರಕ್ತ ಶುಕ್ಲಬಿಂದು ಜನಿತಂಬೈ ತ್ವಜ್ಮಾಂಸರುಧಿರಮಜ್ಜಾಸ್ಥಿ ಸ್ನಾಯುವುಲನು ಷಟ್ಕೌಶಿಕಂಬುಲು ಗಲಿಗಿ ಯೊಪ್ಪು ನೀ ಸ್ಥೂಲ ಶರೀರಂಬುನಂದು ಡೆಬ್ಬದಿರೆಂಡುವೇಲ ನಾಡುಲು ಗಲವಂದು ಗುದಂಬುನಕಂಟೆ ರೆಂಡಂಗುಳಂಬುಲ ಮೀದಟ ಲಿಂಗಂಬುನಕಂಟೆ ರೆಂಡಂಗುಳಂಬುಲ ಕ್ರಿಂದಟ ನಧೋಮುಖಾಗ್ರಂಬೈ ಮೂಡು ಕೋಣಂಬುಲುದನರ ದೇಹಮಧ್ಯಮಸ್ಥಾನಂಬುನ ಮೂಲಾಧಾರ ಚಕ್ರಂಬಲರು ನದಿ ಮೊದಲು ಸಹಸ್ರಾರಂಬು ತುದಗಾ ಬೃಷ್ಠಭಾಗಂಬುನ ವೀಣಾದಂಡಂಬು ಭಂಗಿ ಸಮಸ್ತ ನಾಡಿಕಾ ಮೂಲಕದಂಬೈ.... ಸಾವಿತ್ರೀ ಸರಸ್ವತೀ ನಾಮಿಕಯ್ಯೈಬ್ರಹ್ಮರಂಧ್ರ ಗತಯ್ಯೈ ಸುಷುಮ್ನಾನಾಡಿ ಪ್ರವರ್ತಿಲ್ಲು, ದದ್ವಾಮ ದಕ್ಷಿಣ ಪಾರ್ಶ್ವಂಬುಲಯಂದಾಧಾರಂಬು ಮೊದಲುಕೊನಿ ನಾಸಿಕಾಗ್ರಪರ್ಯಂತಮು ವ್ಯಾಪಿಂಚಿ.... ಇಡಾ ಪಿಂಗಳಲನು ನಾಡುಲೊಪ್ಪುಚುಂಡು... "**

ಹೀಗೆ ಸಾಗುತ್ತದೆ ವಿವರಣೆ. ತಂದೆ ತಾಯಿಯ ರಕ್ತ, ಶುಕ್ಲಬಿಂದುಗಳಿಂದ ಜನಿಸಿದ ಈ ಶರೀರವು ಚರ್ಮ, ಮಾಂಸ, ರಕ್ತ, ಮಜ್ಜ(ಕೊಬ್ಬು), ಅಸ್ಥಿ(ಮೂಳೆ), ಸ್ನಾಯು ಎಂಬ ಆರು ಕೋಶಗಳಿಂದಾಗಿದ್ದು, ಎಪ್ಪತ್ತೆರಡು ಸಾವಿರ (ದ್ವಿ ಸಪ್ತತೀ ಸಹಸ್ರ) ನಾಡಿಗಳಿಂದ ಕೂಡಿದೆ. ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಹದಿನಾಲ್ಕು ನಾಡಿಗಳು ಪ್ರಮುಖ೨೧, ಅವುಗಳಲ್ಲಿ ಮೂರು ಶ್ರೇಷ್ಠ( ಇಡಾ, ಪಿಂಗಳಾ, ಸುಷುಮ್ನಾ), ಅದರಲ್ಲಿ ಒಂದು ಅತೀ ಶ್ರೇಷ್ಠವಾಗಿದೆ (ನಾಡೀ ಶಿರೋಮಣಿ). ಸುಷುಮ್ನಾ ನಾಡಿಯನ್ನೇ ಬ್ರಹ್ಮನಾಡಿ ಎನ್ನುವರು. ಈ ನಾಡಿಗಳು ಅವುಗಳದ್ದೇ ಆದ ವಿಶಿಷ್ಟ ಕೆಲಸಗಳನ್ನು ನಿರ್ವಹಿಸುತ್ತಿರುತ್ತವೆ. ಅನಾಹತ ಚಕ್ರ

ಅಂದರೆ ಹೃದಯ ಸ್ಥಾನದಲ್ಲಿ ನೂರೊಂದು ನಾಡಿಗಳು ಪ್ರಕಾಶಿಸುತ್ತಿರುತ್ತವೆ. ಅದರೊಲ್ಲೊಂದು ಪ್ರಮುಖ ನಾಡಿ (ಅಮೃತ ನಾಡಿ) ಮೇಲ್ಮುಖವಾಗಿರುತ್ತದೆ. ಇದರ ಮಾರ್ಗವೇ ಮೋಕ್ಷಮಾರ್ಗವೆನ್ನುವುದು ವೇದಾಂತ ವಾಕ್ಯ. (**ಶತಂಚೈಕಾದ ಹೃದಯ ಸ್ಯನಾಡ್ಯಃ ತಾಸಾಂ ಮೂರ್ಧಾನಮಶ್ರುತ್ಯೈ ತಯೋರ್ಧ್ವ ಮಾಯಾನ್ನಮೃತತ್ವಮೇತಿ, ತಸ್ಯಾಶ್ಶಿಕಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ॥**) ಇಲ್ಲಿ ಸ್ವಲ್ಪ ಸಂದೇಹ ಉಂಟಾಗಬಹುದು. ಇಡಾ, ಪಿಂಗಳಾ, ಸುಷುಮ್ನಾ ನಾಡಿಗಳು ಪ್ರಧಾನವೋ, ಅಮೃತ ನಾಡೀ ಪ್ರಧಾನವೋ? ಎನ್ನುವುದು. ಇದನ್ನೂಹಿಸಿಯೇ ವ್ಯಾಖ್ಯಾನಕಾರರು ಪ್ರಾಣಸಂಯಮ ಮಾಡುವವರಿಗೆ ಇಡಾ, ಪಿಂಗಳ, ಸುಷುಮ್ನಗಳು, ಮನಸ್ಸಂಯಮ ಮಾಡುವವರಿಗೆ ಅಮೃತನಾಡಿ ಪ್ರಧಾನವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ, ಪ್ರಾಣಸಂಯಮ ಮಾಡದೆ ಮನಸ್ಸಂಯಮ ಮಾಡುವುದು ಸುಲಭವಲ್ಲ. ಸುಷುಮ್ನಾನಾಡೀ ಮಾರ್ಗ ತಪೋಮಾರ್ಗವೆಂದು, ಅಮೃತನಾಡೀ ಮಾರ್ಗ ಮೊಕ್ಷ ಮಾರ್ಗವೆಂದು ಬ್ರಹ್ಮನಿಷ್ಠರು ತಿಳಿಸಿದ್ದಾರೆನ್ನುವುದು ಗಮನಾರ್ಹ.

ಹೀಗೆ ಅಡ್ಡ (ತಿರ್ಯಕ್), ಮೇಲೆ (ಊರ್ಧ್ವ), ಕೆಳಗೆ (ಅಧೋ) ವ್ಯಾಪಿಸಿರುವ ಎಪ್ಪತ್ತೆರಡು ಸಹಸ್ರ ನಾಡಿಗಳಲ್ಲಿ ದಶವಿಧ ಪ್ರಾಣಗಳು[೨೨] ಸಂಚರಿಸುತ್ತಿರುತ್ತವೆ. ಚಲನ (ಕದಲುವುದು), ಧಾವನ (ಓಡುವುದು), ಕಂಪನ (ನಡುಗುವುದು), ಆಕುಂಚನ (ಮುದುರುವುದು), ಶೋಷಣ (ಬಳಲುವುದು) ಎಂಬುದು ಪ್ರಾಣದ ಗುಣಧರ್ಮಗಳು. ಈ ಪ್ರಾಣಗಳು ನಾಡಿಗಳ ಜತೆಗೂಡಿ ದೇಹದಲ್ಲಿ ಹಲವಾರು ಕಾರ್ಯಗಳನ್ನು ನಿರ್ವಹಿಸುತ್ತವೆ. ಅಮರಕೋಶದಲ್ಲಿ ದಶಪ್ರಾಣಗಳ ನೆಲೆಯನ್ನು ಸ್ಪಷ್ಟವಾಗಿ ಹೇಳಲಾಗಿದೆ.

**ಹೃದಿ ಪ್ರಾಣೋ ಗುದೇಪಾನಃ ಸಮಾನೋ ನಾಭಿಸಂಸ್ಥಿತಃ।**
**ಉದಾನ ಕಂಠದೇಶಸ್ಥೋ ವ್ಯಾನಸ್ಸರ್ವಶ್ಶರೀರಗಃ॥**

**ನಾಗಶ್ಚ ಕೂರ್ಮಃ ಕೃಕರೋ ದೇವದತ್ತೋ ಧನಂಜಯಃ।**
**ವಾಗ್ದ್ವಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇ ಸ್ಮೃತಃ॥**

**ಕೃಕರಾಚ್ಚ ಕ್ಷುತಂ ಜ್ಞೇಯಂ ದೇವದತ್ತಾದ್ವಿಜೃಂಭಣಂ।**
**ನಜಹಾತಿ ಮೃತಂ ವಾಪಿ ಸರ್ವವ್ಯಾಪೀ ಧನಂಜಯಃ॥** (೧-೭೫, ೭೬ ,೭೭)

ಪ್ರಾಣವಾಯು ಹೃದಯ ಭಾಗದಿಂದ ಹೊರಗೆ ಬಂದು ೧೨ ಅಂಗುಲ ದೂರದವರೆಗೆ ಚಲಿಸಿ ತದನಂತರದಲ್ಲಿ ಲಯಿಸುತ್ತದೆ ಎಂದು ಹೇಳಿರುವುದು ಅತ್ಯಂತ ಕುತೂಹಲಕಾರಿ ವಿಷಯ. ವ್ಯಾಖ್ಯಾನಕಾರರು ದಶವಾಯುಗಳಿಗೆ ಬಣ್ಣಗಳನ್ನು[೨೩] ಸಹ ಹೇಳಿರುವುದು ಗಮನಾರ್ಹ. ಮನಸ್ಸೆಂಬುದು ಸ್ಥೂಲ ಶರೀರಾವೃತವಾಗಿ, ನಾಡೀಸಹಿತವಾಗಿ, ಪ್ರಾಣಗಳಿಂದ ಆವರಿಸಲ್ಪಟ್ಟು, ಸ್ವಾಭಾವಿಕ ಶಾರೀರಿಕ ಕ್ರಿಯೆಗಳ ನಿರ್ವಹಣೆಯನ್ನು ಗಮನಿಸುತ್ತಾ, ರಾಗದ್ವೇಷಾದಿ ವಿಕಾರಗಳಿಂದ ಕೂಡಿ, ವಿಷಯ ಸುಖಗಳನ್ನು ಗ್ರಹಿಸುವುದಕ್ಕಾಗಿ, ಜ್ಞಾನೇಂದ್ರಿಯಗಳೆಂಬ ಸಹಾಯಕರಿಂದ ಮಾಹಿತಿಯನ್ನು[೨೪] ಸಂಗ್ರಹಿಸುತ್ತಿರುತ್ತದೆ. ಈ ಮಾಹಿತಿ ಇರುವ ಮನಸ್ಸನ್ನು ಸಾಧನವಾಗಿಸಿಕೊಂಡು ಬುದ್ಧಿ ಅಥವಾ ಪ್ರಜ್ಞೆ ಪ್ರಕಾಶಿಸುತ್ತದೆ. ಈ ಬುದ್ಧಿ/ಪ್ರಜ್ಞೆಯನ್ನೇ 'ಬಿಂದು' ಎಂದು ಕರೆದರು. ಶರೀರ, ಪ್ರಾಣ, ಇಂದ್ರಿಯಗಳ ಸಂಯುಕ್ತವಾದ ಬುದ್ಧಿಯು ವಿಷಯಾಭಿಲಾಷಿಯಾಗಿ ಚಂಚಲತೆಯಿಂದ ಹುಟ್ಟಿನಿಂದಾದಿಯಾಗಿ ಸಾಯುವವರೆಗೆ ಅನೇಕ ಕರ್ಮಗಳನ್ನು ಮಾಡುತ್ತಾ, ಅದರ ಫಲಗಳಾದ ಸುಖದುಃಖಗಳನ್ನು ಅನುಭವಿಸುತ್ತಾ, ನಿರಂತರ ಸಂಚಾರಿಯಾಗಿರುತ್ತದೆ, ಇದನ್ನು ಹತೋಟಿಗೆ ತಂದು ಚಂಚಲ ಅಂತಃಕರಣವನ್ನು ಸುಸ್ಥಿರ ಮಾಡುವ ಕೆಲಸವಾದರೆ ಬ್ರಹ್ಮಜ್ಞಾನಕ್ಕೆ ದಾರಿಯಾಗುತ್ತದೆ, ಅದನ್ನು ನೀನು ಮಾಡು ಎಂದು ಸೀತಾದೇವಿಯು ಆಂಜನೇಯನಿಗೆ ಉಪದೇಶ ಮಾಡಿದಂತೆ ಹೇಳಿ ಕವಿಯು ತಮ್ಮ ಅಪಾರ ಆಧ್ಯಾತ್ಮಜ್ಞಾನ ಸಂಪತ್ತಿಯನ್ನು ನಮಗೆ ನೀಡಿದ್ದಾರೆ.

ಇಲ್ಲಿ ಯೋಗ ಸಾಧನೆಗೆ ಅತಿ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಯೋಗ ಸಾಧನೆ ಮಾಡುವವನು ತನ್ನ ಇಂದ್ರಿಯ ನಿಗ್ರಹದಿಂದ ಕರ್ಮ ವಿಪಾಕವನ್ನು ಕಡಿಮೆ ಮಾಡಿಕೊಳ್ಳಬಲ್ಲ. ಕರ್ಮವಿಪಾಕ ಇದ್ದರೆ ವಾಸನೆಗಳು ಇರುತ್ತವೆ. ವಾಸನೆಗಳು ಇದ್ದರೆ ಮುಂದಿನ ಜನ್ಮ. ಮುಂದಿನ ಜನ್ಮವಿಲ್ಲದ್ದು ಕೈವಲ್ಯ/ ಮೋಕ್ಷ/ ಮುಕ್ತಿ. ಪತಂಜಲಿಗಳ ಯೋಗಸೂತ್ರದ "ಕರ್ಮಾ ಶುಕ್ಲಾಕೃಷ್ಣಂಯೋಗಿನ ಸ್ತ್ರಿವಿಧಾಂಇತರೇಷಾಂ" (೪-೭) ಎಂಬುದರ ಭಾವಾರ್ಥ ಕೂಡಾ ಇದೇ. ಮಹತ್ಸಾಧಕನಾದ ಯೋಗಿ ಮಾಡುವ ಕರ್ಮಗಳು ಪುಣ್ಯ ಪಾಪಗಳು ಆಗಿರುವುದಿಲ್ಲ. ಇದರಿಂದ ಅವನಿಗೆ ವಾಸನೆ ಎನ್ನುವುದಿರುವುದಿಲ್ಲ. ಆಗ ಕೈವಲ್ಯ ಪ್ರಾಪ್ತಿ. ಅದಕ್ಕಾಗಿ ಯೊಗಸಾಧನೆ ಅತಿಮುಖ್ಯ ಎನ್ನುವುದು ಮಹರ್ಷಿ ಪತಂಜಲಿಗಳ ತಾತ್ಪರ್ಯ. ಆಂಜನೇಯನು ಅಂಥಹ ಯೋಗಸಾಧನೆಯನ್ನು ಮಾಡಲಿ ಎಂದು ಸೀತೆ ಹೇಳಿದಂತೆ ಕವಿಗಳು ನಮಗೆ ತಿಳಿಯಪಡಿಸಿದ್ದಾರೆ.

ಈ ಶರೀರವು ಪಾಂಚಭೌತಾತ್ಮಿಕವೆಂಬುದು ಸರ್ವವಿದಿತ. ಆದರೆ ಅದು ಕೇವಲ ಪಂಚಭೂತಗಳಿಗೆ ಮಾತ್ರ ಸೀಮಿತವಾಗುವುದಿಲ್ಲ. ಇದು ಅತ್ಯದ್ಭುತವಾದ ಸೃಷ್ಟಿ. ಮುವ್ವತ್ತಾರು ತತ್ತ್ವಗಳಿಂದ[೨೫] ಕೂಡಿದೆ. (ಷಟ್ತ್ರಿಂಶತತ್ತ್ವ ಸಂಯುತಂ). ಈ ಎಲ್ಲಾ ತತ್ವಗಳಿಗೆ ಶ್ರೀರಾಮನೇ ಪ್ರಭು ಎಂದು ರಾಮನಿಗೆ ಮತ್ತು ಪರಬ್ರಹ್ಮನಿಗೆ ಅಭೇದವನ್ನು ಕವಿಗಳು ಸೂಚಿಸಿ ತಮ್ಮ ಅಖಂಡ ರಾಮಭಕ್ತಿ ಪ್ರದರ್ಶಿಸಿದ್ದಾರೆ. ಹೀಗೆ ಮುಂದುವರೆಸಿ, ಹಂಸ ಶಬ್ದನಿರೂಪಣೆ, ರೇಚಕ ಪೂರಕ ಕುಂಭಕ ವಿವರಣೆ, ಷಟ್ಕಮಲಗಳ ನಿರ್ಣಯ, ರಾಜಯೋಗನಿರೂಪಣೆ ಮಾಡಿ, ಯೋಗಸಿದ್ಧಿಗೆ ಕಾಲನಿರ್ಣಯವನ್ನು ಮಾಡುತ್ತಾರೆ. ಅಂತೆಯೇ ತಾರಕ ಯೋಗಸಿದ್ಧಿಯ ಸಾಧಕರನ್ನು ಮೂರು ವರ್ಗಗಳಾಗಿ ವಿಭಾಗಿಸುತ್ತಾರೆ. ನಿರ್ಮಲ ನಿಶ್ಚಲ ಚಿತ್ತವೃತ್ತಿ

ಉಳ್ಳವರು, ಮಂದಪ್ರಜ್ಞೆ ಇರುವವರು ಮತ್ತು ಮೂಢರು. ಪ್ರತಿನಿತ್ಯ ಎರಡು ಜಾವಗಳ ಅಂತರದಲ್ಲಿ ನಿಯಮ ತಪ್ಪದೆ ಅಭ್ಯಾಸ ಮಾಡಿದರೆ ಮೊದಲನೇ ವರ್ಗದವರಿಗೆ ಆರು ತಿಂಗಳಲ್ಲಿ (ಷಾಣ್ಮಾಸ), ಎರಡನೇ ವರ್ಗದವರಿಗೆ ಒಂದು ವರ್ಷದಲ್ಲಿ, ಮೂರನೇ ವರ್ಗದವರಿಗೆ ಹನ್ನೆರಡು ವರ್ಷಗಳಲ್ಲಿ ತಾರಕ ಯೋಗಸಿದ್ಧಿ (ಪ್ರಣವಾನುಸಂಧಾನ ಸಿದ್ಧಿ) ಆಗುವುದೆಂದು ಯೋಗಶಾಸ್ತ್ರದಲ್ಲಿ ಹೇಳಿದೆಯೆಂದು ಹೇಳುತ್ತಾ ದಿವ್ಯಜ್ಞಾನ ವಿಜ್ಞಾನ ಸಂಪನ್ನರಾದ ಗುರುಗಳ ಸನ್ನಿಧಿಯಲ್ಲಿ ನೆಲೆಸಿ ಸ್ಥಾನಾಂಗಭಾವಾತ್ಮ ಶುಶ್ರೂಷೆ ಸಲ್ಲಿಸುವ ಮಹಾನುಭಾವರಿಗೆ ನಿಸ್ಸಂಶಯವಾಗಿ ಬೇಗ ನಿರ್ಗುಣ ಬ್ರಹ್ಮ ಸಾಕ್ಷಾತ್ಕಾರ ಆಗುತ್ತದೆಂದು ತಮ್ಮ ಯೋಗಸಾಧನಾ ಸಾಮರ್ಥ್ಯದ ಸತ್ಯಶಕ್ತಿಯನ್ನು ನಮ್ಮ ಮುಂದಿಡುತ್ತಿದ್ದಾರೆ ಕವಿ ಗುರುಮೂರ್ತಿ.

ಕಡೆಯ ಗದ್ಯ ಭಾಗದಲ್ಲಿ ಶ್ರೀಸೀತಾರಾಮಾಂಜನೇಯ ಸಂವಾದವೆಂಬ ಸಮಾಸಕ್ಕೆ ಸಾಮಾನ್ಯಾರ್ಥದಲ್ಲಿ ಇದು ಕೇವಲ ಸೀತಾ, ರಾಮ, ಆಂಜನೇಯರ ಮಧ್ಯೆ ನಡೆದ ಸಂಭಾಷಣೆ ಎಂದು ಹೇಳಬಹುದು. ಆದರೆ, ವ್ಯಾಖ್ಯಾನಕಾರರು ನೀಡಿರುವ ವಿಪುಲಾರ್ಥವು ಅತ್ಯದ್ಭುತ. 'ಶ್ರೀ' ಎಂದರೆ, ಬ್ರಹ್ಮವಿದ್ಯಾಸ್ವರೂಪಿ ಎಂದರ್ಥ. 'ಸೀತಾ' ಎಂದರೆ, ಮೂಲಪ್ರಕೃತಿಯಾದ ಸೀತಾ, 'ರಾಮ' ಎಂದರೆ, ಪರಬ್ರಹ್ಮನಾದ ರಾಮ, 'ಆಂಜನೇಯ' ಎಂದರೆ, ಪ್ರತ್ಯಗಾತ್ಮನಾದ ಆಂಜನೇಯ, 'ಸಂವಾದ' ಎಂದರೆ, ಪರಮಾರ್ಥ ಪ್ರತಿಪಾದಕವಾದ ವಿಷಯಸಂಭಾಷಣೆ, ಎಂದು ವೇದಾಂತ ಶಾಸ್ತ್ರದಲ್ಲಿನ ಯೋಗಶಾಸ್ತ್ರದ ತಾರಕಯೋಗದ (ಪ್ರಣವಾನುಸಂಧಾನದ) ಅನುಭವ ವಿಚಾರ ಪರಿಶೀಲನೆ ಎಂದಿದ್ದಾರೆ. **"ಅಕಾರೋ ವಹ್ನಿರಿತ್ಯುಕ್ತಃ ಉಕಾರಸ್ಸೂರ್ಯ ಉಚ್ಯತೇ। ಮಕಾರಶ್ಚಂದ್ರ ಇತ್ಯುಕ್ತ ಏತತ್ತಾರಕ ಲಕ್ಷಣಮ್"॥** ಅಕಾರ, ಉಕಾರ, ಮಕಾರಗಳು ಅಗ್ನಿ, ಸೂರ್ಯ, ಚಂದ್ರರು, ಈ ಮೂವರ ಮಧ್ಯೆ ಬೆಳಗುವುದು ತಾರಕ ಅಂದರೆ, ಪ್ರಣವ. ಆ ಪ್ರಣವಾರ್ಥವಾದ ಬ್ರಹ್ಮನು ನಾನು ಎಂದು ಅನುಸಂಧಾನ ಮಾಡುವುದೇ ತಾರಕಯೋಗ ಎಂದು ಹೀಗೆ ವಿವರಿಸಿರುವ ವ್ಯಾಖ್ಯಾನಕಾರರ ಅಖಂಡ ಪಾಂಡಿತ್ಯ ಹಿರಿಮೆ ನಿಜಕ್ಕೂ ಈ ಗ್ರಂಥದಲ್ಲಿ ಅಡಿಗಡಿಗೂ ಪ್ರಸ್ಫುಟವಾಗುತ್ತಿರುತ್ತದೆ.

## ಸಾಂಖ್ಯಯೋಗ ವಿಚಾರ

ಎರಡನೆಯ ಆಶ್ವಾಸದಲ್ಲಿ ಸಾಂಖ್ಯಯೋಗಾನುಭವನ್ನು ಕುರಿತ ವಿವರಣೆ ನಡೆದಿದೆ. ಇದರಲ್ಲಿ ಪ್ರಮುಖವಾಗಿ ಮನೋಮಯ ಕೋಶ(ಮಾನಸಿಕ) ಅಂದರೆ ಮನಸ್ಸಿಗೆ ಸಂಬಧಪಟ್ಟ, ಜೀವಾತ್ಮ, ಪರಮಾತ್ಮ ವಿಚಾರಗಳನ್ನು, ಜೀವ ನಿರ್ಣಯ ವಿಚಾರವನ್ನು, ಸ್ಥೂಲ ಸೂಕ್ಷ್ಮ ಶರೀರ ವಿಚಾರಗಳನ್ನು, ಈಶ್ವರ ಶರೀರ ವಿವೇಚನೆಯನ್ನು, ಓಂಕಾರ ಸ್ವರೂಪವನ್ನು, ಪಂಚಪ್ರಳಯಗಳ ವಿವರಣೆಯನ್ನು, ಆನಂದ ಲಕ್ಷಣ ಇತ್ಯಾದಿ ಅನೇಕವನ್ನು ವಿವರಿಸಿದ್ದಾರೆ.

**'ಸಾಂಖ್ಯಾಮನಸ್ಕಂಬುಲುಪನಿಷದರ್ಥ ಪ್ರತಿಪಾದ ಕಂಬುಲು'** ಎಂದು ಹೇಳಿದ್ದಾರೆ. ಅಂದರೆ, ಸಾಂಖ್ಯ ಅಮನಸ್ಕ ಯೋಗಗಳು ವೇದಾಂತ ತಾತ್ಪರ್ಯವಾದ ಪರಬ್ರಹ್ಮನನ್ನು ನಿರೂಪಿಸುವಂಥದ್ದು ಎನ್ನುವುದು ವ್ಯಾಖ್ಯಾನಕಾರರ ಅಭಿಮತ. ಜೀವ ಹಾಗೂ ಈಶ್ವರ ಮಿಳಿತವೇ ಪರಬ್ರಹ್ಮವೆಂದು, ಅಂಥಹ ಪರಬ್ರಹ್ಮನು ನಾನೇ ಎಂದು ಅನುಸಂಧಾನ (ಒಟ್ಟುಗೂಡಿಸುವ) ಮಾಡುವುದನ್ನೇ ಸಾಂಖ್ಯಯೋಗವೆಂದು ಕರೆದಿದ್ದಾರೆ. ಅಂದರೆ ಕ್ಲಪ್ತವಾಗಿ ಸಾಂಖ್ಯಯೋಗವೆಂದರೆ ಜ್ಞಾನಯೋಗವೆಂದು ತಿಳಿಯಬಹುದಾಗಿದೆ. ಪರಮಾತ್ಮ (ಬ್ರಹ್ಮ) ಎಂದರೆ ತನಗೆ ಯಾವುದೇ ಬಂಧನಗಳಿಲ್ಲದೆ[೨೭], ಯಾವುದಕ್ಕೂ ಅಂಟಿಕೊಳ್ಳದೆ ಶೋಕವಿಲ್ಲದೆ, ಲೋಕವಿಲ್ಲದೆ[೨೮] ಮಾಯೆ ಇಲ್ಲದೆ, ಜೀವ ವಿಕಾರವಿಲ್ಲದೆ[೨೯], ಕೇವಲಾನಂದವಾಗಿ ಚಿತ್ತಶಕ್ತಿಯನ್ನು ಪ್ರಕಾಶಿಸುವಂತೆ ಮಾಡಿ, ತಾನೂ ಪ್ರಕಾಶಿಸುವುದೇ ಪರಬ್ರಹ್ಮ ಎಂದು ಹೇಳಿದ್ದಾರೆ.

ಇದೇ ಅರ್ಥವನ್ನು ಶಂಕರ ಭಗವತ್ಪಾದರು,

**ತಮಸಃ ಪರಮಾರ್ಕವರ್ಣಮ್।**
**ಪೂರ್ಣಮ್ ಸನಾತನಪದಮ್। ಪುರುಷೊತ್ತಮಾಖ್ಯಮ್। ಯಸ್ಮಿನ್ನಿದಂ**
**ಜಗದಶೇಷಮ್ ಅಶೇಷ ಮೂರ್ತೌ,**
**ರಜ್ಜ್ವಾಮ್ ಭುಜಂಗಮಯಿವಾ ಪ್ರತಿಭಾಸಿತಮ್ ವೈ॥**

ಎಂದು ರಮ್ಯವಾಗಿ ಹಿಂದೆಯೇ ತಿಳಿಸಿದ್ದಾರೆ. ತೇಜೋಮಯನಾದವನು, ಅಲೋಕನಾದವನು, ಭಾಸಿಸುವವನೇ ಪರಮಾತ್ಮ, ಪರಬ್ರಹ್ಮ ಎಂದಿದ್ದಾರೆ.

ಜೀವ ಈಶ್ವರ ಮಿಳಿತವೇ ಪರಬ್ರಹ್ಮ ಎಂದು, ಆ ಪರಬ್ರಹ್ಮ ನಾನೇ ಎಂದು ಅನುಸಂಧಾನ ಮಾಡುವುದೇ ಸಾಂಖ್ಯಯೋಗ ಎಂದಿದ್ದಾರೆ. ಇಲ್ಲಿ ಮೊದಲು ಪರಬ್ರಹ್ಮನನ್ನು, ಅನಂತರ ಈಶ್ವರನನ್ನು ತದನಂತರ ಜೀವನನ್ನು ತಿಳಿಸುತ್ತಾ ಈ ಮೂವ್ವರನ್ನು ತಿಳಿಯಬೇಕಾದರೆ, ಮಧ್ಯೆ ಬರುವ ಅಡಚಣೆಗಳಾದ ಮಾಯೆ, ಜ್ಞಾನ ಪ್ರತಿಬಂಧಕಗಳನ್ನು (ಕಲಿಕೆಗೆ ಬರುವ ಅಡಚಣೆಗಳನ್ನು) ದಾಟಬೇಕು ಎಂದಿದ್ದಾರೆ. ಅವುಗಳಬಗೆಗಿನ ಸ್ವಲ್ಪ ವಿಚಾರ:

ಮಾಯೆ ಎಂದರೆ ಅವಿದ್ಯೆ, ಮೂಲಪ್ರಕೃತಿ, ಅವ್ಯಕ್ತ ಎಂದು ಹೇಳಲಾಗಿದೆ. ಪತಂಜಲಿಗಳು, **'ಅನಿತ್ಯಾಶುಚಿದುಃಖಾನಾತ್ಮಸು ನಿತ್ಯಶುಚಿಸುಖಾತ್ಮಖ್ಯಾತಿರವಿದ್ಯಾ'** (೨-೫) ಎಂದಿದ್ದಾರೆ. ಅನಿತ್ಯವನ್ನು ನಿತ್ಯವಾಗಿ, ಅಶುಚಿಯನ್ನು ಶುಚಿಯಾಗಿ, ದುಃಖವನ್ನು ಸುಖವಾಗಿ, ಅನಾತ್ಮವನ್ನು ಆತ್ಮವಾಗಿ ತಿಳಿಯುವುದೇ ಅವಿದೆ ಎಂದರ್ಥ. ಇದನ್ನೇ ಮಾಯೆ ಎಂದಿದ್ದಾರೆ. ಈ ಮಾಯೆಯಿಂದ ನಾವು ಜೀವನನ್ನಾಗಲೀ, ಈಶ್ವರನ್ನಾಗಲೀ, ಬ್ರಹ್ಮನನ್ನಾಗಲೀ ತಿಳಿಯಲು ಸಾಧ್ಯವಾಗುವುದಿಲ್ಲ. ಇದೊಂದು ಅಡಚಣೆ. ಇದನ್ನು ತೊರೆಯಬೇಕು. ಮತ್ತೊಂದು ಅಡಚಣೆ ಎಂದರೆ

ಜ್ಞಾನ ಪ್ರತಿಬಂಧಕ. ಅಂದರೆ ನಮ್ಮ ಜ್ಞಾನವೃದ್ಧಿಗೆ ಪ್ರತಿರೋಧ. ಇವು ಮೂರು ವಿಧ. ಭೂತ ಪ್ರತಿಬಂಧ, ವರ್ತಮಾನ ಪ್ರತಿಬಂಧ, ಭಾವಿ ಪ್ರತಿಬಂಧ.

ಪರಬ್ರಹ್ಮನನ್ನು ತಿಳಿಸುತ್ತಾ, ಅವನು ನಿರ್ಗುಣ, ನಿಷ್ಕಾರಣ, ನಿರೀಹ (ಬಯಕೆ/ ಆಸೆ ಇಲ್ಲದವನು), ನಿಷ್ಕಂಪ, ನಿಷ್ಕ್ರಿಯ, ನಿಷ್ಕಲ್ಮಷ, ನಿಷ್ಕಲ (ಕಲಾತೀತ), ನಿಷ್ಕಳಂಕ, ಪ್ರಸ್ಥಾನತ್ರಯ[೩೦]ಗಳಿಂದ ತಿಳಿಯತಕ್ಕವನು, ಅವಸ್ಥಾತ್ರಯ[೩೧]ವನ್ನು ತಿಳಿದವನು, ವಿಶ್ವದ ಸೃಷ್ಟಿ ಸ್ಥಿತ್ಯಂತ್ಯಗಳನ್ನು ತಿಳಿದಿರುವವನು, ಶೋಕರಹಿತನು, ಅಲೋಕನು, ಜ್ಞಾನಿ, ನಿರ್ವಿಕಾರ ಎಂದು ಹೀಗೆ ವರ್ಣಿಸುತ್ತಾಹೋಗುತ್ತಾರೆ.

(ಕರ್ತೃ, ಹೇತು, ಕ್ರಿಯಾ, ಜ್ಞಾತೃ, ಜ್ಞಾನ, ಜ್ಞೇಯ, ದ್ರಷ್ಟೃ, ದರ್ಶನ, ದೃಶ್ಯ - ಇವುಗಳನ್ನು ನವವಿಧ ಸಂಸ್ಕಾರಗಳು, ನವ ವಿಧ ಪ್ರಪಂಚ ಎನ್ನುತ್ತಾರೆ. ಪರ್ಯಾಯವಾಗಿ ಪ್ರಾಣಪಂಚಕ, ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಭೂತ ಪಂಚಕ, ಅಂತಃಕರಣ ಚತುಷ್ಟಯ, ಸ್ಥೂಲಶರೀರ, ತ್ರಿಕರ್ಮ (ಪುಣ್ಯ, ಪಾಪ, ಮಿಶ್ರ), ಅವಸ್ಥಾತ್ರಯ, ಅಜ್ಞಾನ ಎಂದೂ ಹೇಳುವುದುಂಟು. (ಅಂದರೆ ಪರಬ್ರಹ್ಮನಿಗೆ ಜೀವಿಯ ಈ ನವವಿಧ ಸಂಸ್ಕಾರಗಳ ಜೊತೆ ನಂಟು ಇಲ್ಲವೆಂದು ಅರ್ಥ)).

ಮಲಿನ ಸತ್ತ್ವ ಪ್ರಧಾನವಾದ ಅವಿದ್ಯೆ, ಕಾರಣ ಶರೀರವನ್ನಾವಹಿಸಿ, ಬ್ರಹ್ಮಚ್ಛಾಯೆಯನ್ನು ಹೊಂದಿ, ನಿದ್ರಾಸಕ್ತವಾಗಿ ಸ್ಥೂಲ ಸೂಕ್ಷ್ಮ ಶರೀರ ತಾನೇ ಎಂದು ಭಾವಿಸಿ ಆ ಶರೀರವನ್ನು ರಕ್ಷಿಸುತ್ತಾ ಮೂಢನಾಗಿ ವರ್ತಿಸುತ್ತಿರುವುದೇ ಜೀವ ಎಂದು ಪ್ರತಿಪಾದಿಸಿದ್ದಾರೆ.

ಮಾಯಾತ್ಮಕವಾದ ಜೀವನಲ್ಲಿ ಚೈತನ್ಯವಾದ ಪರಬ್ರಹ್ಮ ಸೇರಿದರೆ ಅದನ್ನು ಈಶ್ವರ (ಈಶ್ವರ ತತ್ತ್ವ) ಎನ್ನುತ್ತಾರೆ. ಈ ಈಶ್ವರ ಪರಮಾತ್ಮನ ಸ್ವರೂಪಿ ಆಗಿರುವುದರಿಂದ ಮಾಯಾ ರಹಿತನಾಗಿರುತ್ತಾನೆ. ಇಲ್ಲಿ ಕವಿಗಳು ಸೀತಾರಾಮರಲ್ಲಿ ಈ ಮಾಯೆ-ಈಶ್ವರ ತತ್ತ್ವವನ್ನು ಆರೋಪಿಸಿದ್ದಾರೆ. ಸತ್ತ್ವಗುಣ ಸ್ವರೂಪಿಯಾದ ಸೀತೆಯೇ ಮಾಯೆ. ಅಂತಹ ಮಾಯೆಯ ಜೊತೆ ಇರುವ ನಾನೇ ಈಶ್ವರ. ಮಾಯೆ ನನಗೆ ಸ್ವಾಧೀನವಾಗಿದ್ದರೂ, ನಾನು ಮಾಯೆಗೆ ಸ್ವಾಧೀನನಾಗಿ ಹೀಗೆ ಹುಟ್ಟುತ್ತಿರುತ್ತೀನೆಂದು ಶ್ರೀರಾಮ ಹನುಮಂತನಿಗೆ ಹೇಳಿದಂತೆ ಕವಿ ನಮಗೆ ಹೇಳಿದ್ದಾರೆ. ಹೀಗೆ ಮಾಯೆಗೆ ವಶವಾಗಿ ಸರ್ವೇಶ್ವರನಾದ ನಾನು ಜಗವನ್ನು ಸೃಷ್ಟಿಸಿ, ಅವುಗಳನ್ನು ರಕ್ಷಿಸಲು ಅನೇಕ ಅವತಾರಗಳನ್ನು (ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ) ಧರಿಸಿ ಮುಂದೆ ಬಲರಾಮ, ಕೃಷ್ಣ, ಬುದ್ಧ, ಕಲ್ಕಿ ರೂಪಗಳನ್ನು ಧರಿಸುತ್ತೇನೆಂದು ರಾಮ ಹೇಳಿದನೆಂದು ಹೇಳುತ್ತಾರೆ.

ಮುಂದುವರೆಸುತ್ತಾ, ಸೂಕ್ಷ್ಮ ಶರೀರ, ಈಶ್ವರ ವಿಚಾರ, ಜೀವೇಶ್ವರ ವಿಚಾರ, ಓಂಕಾರ ಸ್ವರೂಪ, ಪಂಚಕೋಶ ವಿವೇಕ, ದೃಗ್ದೃಶ್ಯ ವಿವೇಕ, ಕ್ಷರಾಕ್ಷರ ವಿಚಾರ ಇತ್ಯಾದಿಗಳನ್ನು ವಿಸ್ತೃತವಾಗಿ ವರ್ಣಿಸಿದ್ದಾರೆ.

**ಸಾಧಕನ ಲಕ್ಷಣ :** ಶಾಸ್ತ್ರಾಧ್ಯಯನ ಪಾಂಡಿತ್ಯವನ್ನು ಸಾಧಿಸಿ, ಇಂದ್ರಿಯ ತೃಷ್ಣೆಯನ್ನು ನಿರೋಧಿಸಿ, ಕಾಮ, ಕ್ರೋಧಾದಿ ಷಡ್ವರ್ಗವನ್ನು ವಿರೋಧಿಸಿ, ಶರೀರ ತ್ರಯವನ್ನು[೩೨] ನಿಷೇಧಿಸಿ, ತಾಪತ್ರಯವನ್ನು ತ್ಯಜಿಸಿ, ಶಾರೀರಕ, ಮಾನಸಿಕ ವ್ಯಾಧಿರಹಿತನಾಗಿ, ನಿರ್ವಿಕಲ್ಪನಿಷ್ಠ ಸಮಾಧಿ ಸುಮುಖನಾಗಿ, ನಿತ್ಯನಿರ್ಮಲಾನಂದಮಯನಾದ ಪುರುಷನೇ ಸಾಧಕನು, ಅಭ್ಯಾಸಿ, ಉಪಾಸಕ ಎಂದು ಸಾಕಷ್ಟು ಅರ್ಹತೆಗಳನ್ನು ವಿಧಿಸಿದ್ದಾರೆ. ಆಂಜನೇಯನು ಇಂಥಹ ಸಾಧನೆಯನ್ನು ಮಾಡಬೇಕೆಂದು ಶ್ರೀರಾಮ ಹೇಳಿದನೆಂದು, ಶಿವನು ಪಾರ್ವತಿಗೆ ತಿಳಿಸುವ ವಿವರವನ್ನು ಕವಿ ಇಲ್ಲಿ ನಮಗೆ ವಿವರಿಸಿದ್ದಾರೆ.

ಇನ್ನು ಸದ್ರೂಪ ಲಕ್ಷಣವನ್ನು (ಅಂದರೆ ಪರಬ್ರಹ್ಮ ಸ್ವರೂಪನಾದ ಪರಮಾತ್ಮನನ್ನು- ಪರಮ ಜ್ಞಾನಾನಂದ ಸ್ವರೂಪ) ವನ್ನು ವರ್ಣಿಸುತ್ತಾ ಎರಡು ಮನೋಹರವಾದ ಪದ್ಯಗಳನ್ನು ಪಂಚಚಾಮರವೃತ್ತ ಛಂದಸ್ಸಿನಲ್ಲಿ ರಚಿಸಿದ್ದಾರೆ.

ಪಂಚ ಪ್ರಳಯಗಳನ್ನು[೩೩] ಕುರಿತು ಹೇಳಿದ ಸುದೀರ್ಘ ವಚನದಲ್ಲಿ ಲಘು ಅಕ್ಷರ ಉಚ್ಚರಿಸಲು ಹಿಡಿಯುವ ಕಾಲವನ್ನು ನಿಮೇಷವೆಂದು ವಿವರಿಸಲು ಪ್ರಾರಂಭಿಸಿ ಕಾಷ್ಠ, ಗಳ, ಕಲ, ಮುಹೂರ್ಥ, ದಿನ, ಪಕ್ಷ, ಮಾಸ, ಋತು, ಅಯನ, ಸಂವತ್ಸರ, ಯುಗ, ಮಹಾಯುಗ, ಮನ್ವಂತರ, ಬ್ರಹ್ಮ ದಿನ - ಇತ್ಯಾದಿಗಳನ್ನು ವಿವರಿಸಿ, ಮನು ಪ್ರಳಯ, ಯುಗಾಂತರ ಪ್ರಳಯ, ನೈಮಿತ್ತಿಕ ಪ್ರಳಯ, ಅವಾಂತರ ಪ್ರಳಯಗಳು ಪ್ರಸಿದ್ಧವೆನ್ನುತ್ತಾರೆ. ಪ್ರಳಯದಿಂದ ಸಮಸ್ತ ಜೀವರಾಶಿಯು ನಶಿಸುತ್ತದೆ. ರುದ್ರ ತನ್ನ ಪ್ರಳಯ ನೇತ್ರವನ್ನು ತೆರೆಯುತ್ತಾನೆ. ಸೂರ್ಯನು ಹನ್ನೆರಡು[೩೪] ಮೂರ್ತಿಗಳಾಗಿ(ದ್ವಾದಶಾದಿತ್ಯರು) ಪ್ರಕಾಶಿಸುತ್ತಾನೆ. ಅಗ್ನಿ ಜ್ವಾಲೆಗಳು ಆವರಿಸಿ ಜಗವನ್ನು ಬೂದಿಮಾಡುತ್ತದೆ. ಸಪ್ತ ಮಾರುತಗಳು[೩೫] ಒಮ್ಮೆಲೇ ಬೀಸುತ್ತವೆ. ನವ ಮೇಘಗಳು[೩೬] ಆಬ್ಬರಿಸಿ ನೂರು ದಿವ್ಯ ವರ್ಷಗಳು ಭೀಕರ ಮಳೆ ಸುರಿಸುತ್ತವೆ. ಆಗ ಸಪ್ತ ಸಾಗರಗಳು[೩೭] ಒಂದಾಗಿ ಜಲಾವೃತವಾಗುತ್ತವೆ... ಹೀಗೆ ವಿಷಯ ಧಾರೆ ಸಾಗುತ್ತದೆ. ಈ ಪಂಚ ಮಹಾ ಪ್ರಳಯಗಳಿಂದ ಏನೂ ಚಲಿಸದೆ, ಏನೂವ್ಯತ್ಯಯವಾಗದೆ ಅವುಗಳಿಗೆ ಸಾಕ್ಷೀಭೂತನಾಗಿ ಭೂತ, ಭವಿಷ್ಯ, ವರ್ತಮಾನ ಕಾಲಗಳಲ್ಲಿ ಒಂದೇವಿಧವಾಗಿ ಇರುವುದರಿಂದ ಸದ್ರೂಪಕನಾಗಿ, ಕಾಲ ವಿಭಾಗಕ್ಕೆ ಒಳಪಡದವನು ನಾನು ಎಂದು ಶ್ರೀರಾಮ ಹನುಮಂತನಿಗೆ ಹೇಳಿದಂತೆ ಕವಿ ಬಣ್ಣಿಸಿದ್ದಾರೆ. ಶ್ರೀರಾಮನು ಅಖಂಡನು, ಪರಿಪೂರ್ಣ ಪರಬ್ರಹ್ಮ ಚೇತನ ಎಂದು ವರ್ಣಿಸುತ್ತಾ, ರಾಮನಿಗೆ ದೇಶ ಪರಿಚ್ಛೇದ, ಕಾಲ ಪರಿಚ್ಛೇದ, ವಸ್ತು ಪರಿಚ್ಛೆದ ಇವಾವುದೂ ವರ್ತಿಸುವುದಿಲ್ಲ ಎಂದು ತಮ್ಮ ಅಖಂಡ ರಾಮಭಕ್ತಿಯನ್ನು ಪ್ರದರ್ಶಿಸಿದ್ದಾರೆ.

ಸಾಂಖ್ಯಯೋಗವನ್ನು ಕುರಿತ ಎರಡನೇ ಆಶ್ವಾಸವನ್ನು ಮುಗಿಸುತ್ತಾ,

**ಆ॥ ಏನಖಂಡ ಸಚ್ಚಿದಾನಂದ ಮಯುಡನ್ನೈ, ಇಟ್ಲು ವೆಲುಗುಚುನಿಕಿ ನೆರಿಗಿನನ್ನು,**
**ನೇನಂಟಂಚು ದೆಲಿಯು ನಿಪುಣುಲು ಮತ್ಸ್ವರೂಪಾತ್ಮುಲಗುಚು**
**ಮುಕ್ತುಲಗುದುರನಘ । (೨-೧೬೫)**

ನಾನು ಅಖಂಡ ಸತ್ಯಜ್ಞಾನಾನಂದ ಸ್ವರೂಪನಾಗಿ ಬೆಳಗುವುದನ್ನು ತಿಳಿದು, ಈ ನನ್ನನು ತಾವೆಂದು ತಿಳಿದುಕೊಳ್ಳುವ ನಿಪುಣರು ನನ್ನ ಸ್ವರೂಪಾತ್ಮರಾಗಿ ಜೀವನ್ಮುಕ್ತರಾಗುತ್ತಾರೆ. ಅಂಥಹ ಜೀವನ್ಮುಕ್ತನು ನೀನಾಗು ಆಂಜನೇಯಾ ಎಂದು ರಾಮನು ಹೇಳುತ್ತಾನೆ. ಹೀಗೆ ಪೂರ್ಣ ಮಾನಸಿಕ ಚಿತ್ತವೃತ್ತಿಗೆ ಸಂಬಂಧಪಟ್ಟ ಸಾಂಖ್ಯಯೋಗದ ಉಪದೇಶದ ಮುಲಕ ನಮಗೆಲ್ಲರಿಗೂ ಪರಬ್ರಹ್ಮ ದರ್ಶನವನ್ನು ಮಾಡಿಸಿದ್ದಾರೆ.

## ಅಮನಸ್ಕ ಯೋಗ ವಿಚಾರ

ಗ್ರಂಥದ ಮೂರನೇ ಆಶ್ವಾಸದಲ್ಲಿ ಅಮನಸ್ಕ ಯೋಗವನ್ನು ಕುರಿತು ವಿವರಿಸಿದ್ದಾರೆ. ತಾರಕ, ಸಾಂಖ್ಯ ಯೋಗಗಳ ಉಪದೇಶ ಮಹಾಪೂರದಲ್ಲಿ ಮಿಂದು ವಿಷಯ ಸಮಾಧಿ ಸ್ಥಿತಿಯನ್ನು ತಲುಪಿದ ನಂತರದಲ್ಲಿ ಆಂಜನೇಯನು, ಬ್ರಹ್ಮಾನಂದಭರಿತನಾಗಿ, ಸೀತಾರಾಮರನ್ನು ಕುರಿತು ಅಪಾರ ಭಕ್ತಿ ಸ್ತೊತ್ರದ ಹೊಳೆಯನ್ನೇ ಹರಿಸುತ್ತಾನೆ. ಒಂದು ದೀರ್ಘ ದಂಡಕದಿಂದ ಆರಂಭಿಸಿ ೩೩ ಪದ್ಯಗಳಲ್ಲಿ ರಾಮ ಸ್ತೊತ್ರವನ್ನು ಮಾಡಲಾಗಿದೆ. ಇದರಲ್ಲಿ ೧೦ ಪದ್ಯಗಳು ಹೊಸ ಹೊಸ ಛಂದಸ್ಸಿನಲ್ಲಿ ರಚಿತವಾಗಿರುವುದು ವಿಶೇಷ. ಇದೆಲ್ಲಾ ಕವಿಯ ಅಮೋಘ ಪಾಂಡಿತ್ಯ ಪ್ರಕರ್ಷೆಗೆ ನಿದರ್ಶನಗಳು. ಆತ್ಮ ಸಮಾಧಿಗೆ ಅಮನಸ್ಕಯೋಗವೆಂದು, ಅದನ್ನು ಸಾಧಿಸುವುದು ಅತಿ ಕಷ್ಟವೆಂದು ಕವಿಗಳು ಹೇಳಿದ್ದಾರೆ. ಏಳು ಸಮುದ್ರಗಳನ್ನು ಆ ತುದಿಯಿಂದ ಈ ತುದಿಗೆ ಈಜಬಹುದು, ಬೆಟ್ಟಗಳನ್ನು ಅಚ್ಚನ ಕಲ್ಲುಗಳಂತೆ ಎಗರಿಸಿ ಹಿಡಿಯಬಹುದು, ಆಕಾಶವನ್ನು ನುಂಗಬಹುದು, ಆದರೆ ಅಮನಸ್ಕಯೋಗವನ್ನು ತಿಳಿದು ಸಾಧಿಸುವುದು ಕಷ್ಟವೆಂದು ಅತಿಶಯೋಕ್ತಿಗಳಲ್ಲಿ ವರ್ಣಿಸಿದ್ದಾರೆ. ಬ್ರಹ್ಮವಿದರಿಗೇ ತಿಳಿಯಲಾಗದಂತಹ ಅಮನಸ್ಕಯೋಗವು ಸಾಮಾನ್ಯರಿಗೆ ಸಾಧ್ಯವಾಗದು. ಆತ್ಮ, ಅನಾತ್ಮವಿವೇಕ ಇರುವವರಿಗೆ ಈ ಅಮನಸ್ಕಯೋಗವು ಹೂವನ್ನು ಬಿಡಿಸುವುದಕ್ಕಿಂತ, ಕಣ್ಣುಗಳನ್ನು ಮುಚ್ಚುವುದಕ್ಕಿಂತ ಸುಲಭವಾಗಿ ಪಡೆಯಬಹುದಾದಂಥದ್ದು ಎಂದು ಹೇಳಿದ್ದಾರೆ.

ನಮ್ಮ ಮನಸೇ ಸ್ಥೂಲ ಸೂಕ್ಷ್ಮ ದ್ರವ್ಯ, ಪಮಾಣುಗಳು (ದ್ರಷ್ಟ), ಮನಸೇ ಕಾಮ ಕ್ರೋಧಾದಿ ವೃತ್ತಿಗಳು, ಮನಸೇ ಸಕಲ ಧರ್ಮಗಳು, ಬಂಧ ಮೊಕ್ಷಗಳು, ಮನಸೇ ಅರಿವು, ದೃಶ್ಯ – ಈ ಎಲ್ಲವೂ ಮನಸಿನ ಕಲ್ಪನೆಗಳೇ. ಸಕಲ ಸಂಸಾರವು ಮನಸಿಲ್ಲಿ ಹುಟ್ಟುವುದು, ಮನಸಿನಲ್ಲಿ ವಾಸಿಸುವುದು, ಮನಸಿನಲ್ಲಿ ಲಯವಾಗುವುದು. ಆದ್ದರಿಂದ ಮನಸೇ ಈ ಸಂಸಾರವೆಲ್ಲ. ಎಚ್ಚರದಲ್ಲಿ (ಜಾಗೃತಿ) ಜಗದ ಎಲ್ಲಾ ವ್ಯಾಪಾರಗಳು ಮನಸ್ಸಿಗೆ ತಿಳಿಯುತ್ತವೆ. ಸುಷುಪ್ತಿಯಲ್ಲಿ ಏನೂ ತಿಳಿಯುವುದಿಲ್ಲ. ಆದ್ದರಿಂದ ಬಂಧ, ಮುಕ್ತಿ, ಕಾರಣ, ಕಾರ್ಯ ಎಲ್ಲವೂ ಈ ಮನಸ್ಸೇ. ಇಂಥಹ ಸಂಕಲ್ಪ, ಸಂಸಾರ, ಬಂಧ, -ಮೋಕ್ಷ, ಅಜ್ಞಾನ, ಅವಿದ್ಯ, ಮಾಯಾ ರೂಪವಾದ ಮನಸ್ಸು ಇಲ್ಲದಿರುವುದೇ ಅಮನಸ್ಕಯೋಗವು. ತಾರಕ, ಸಾಂಖ್ಯ ಯೊಗೋಪಾಸಕರಿಗೆ ಮನಶ್ಶುದ್ಧಿ, ಪರಬ್ರಹ್ಮ ಸ್ವರೂಪ ನಿರ್ಣಯ ಲಭಿಸುವಂತೆ ಅಮನಸ್ಕ ಯೋಗ ನಿಷ್ಠೆ ಇರುವವರಿಗೆ ನಿರಂತರ ಬ್ರಹ್ಮಾನಂದ ಉಂಟಾಗುತ್ತದೆ (೩–೪೩).

ಇದಕ್ಕೆ ಶ್ರದ್ಧಾಭಕ್ತಿಯುಕ್ತವಾದ ದೀಕ್ಷೆ ಬಹಳ ಮುಖ್ಯ. ದೇಹ ಸಂಬಂಧದ ವ್ಯಾಪಾರಗಳೆಲ್ಲವೂ ನಿಲ್ಲಬೇಕು. ತ್ರಿಗುಣ ವಿಕಾರದಿಂದ ಕೂಡಿದ ಮನಸ್ಸು ಇಲ್ಲದವನಾಗಬೇಕು. ಮನಸ್ಸನ್ನು ಆವಹಿಸಿರುವ ಮಾಯೆ ತೊಲಗಬೇಕು, ವಿಕಲ್ಪಗಳಿಲ್ಲದ ಮನಸ್ಸಿನವನು ಆಗಬೇಕು, ವಾಸನೆಗಳು ಮನಸ್ಸನ್ನು ಕಲಕದೇ ಇರಬೇಕು. ಇಂಥಹ ಸ್ಥಿತಿ ಅಂದರೆ, ಲೌಕಿಕ ವ್ಯಾಪಾರದ ಕಡೆ ಮನಸ್ಸಿಲ್ಲದ ಯೋಗಾನುಸಂಧಾನದ ಸಮಾಧಿ ಸ್ಥಿತಿಯೇ ಅಮನಸ್ಕ ರಾಜಯೋಗ ಎನಿಸಿಕೊಳ್ಳುವುದು ಎಂದು ರಾಮನು ಆಂಜನೇಯನಿಗೆ ಹೇಳುತ್ತಾನೆ.

ಇಲ್ಲಿ ಆಂಜನೇಯನಿಗೆ ಒಂದು ಸಂದೇಹ ಬರುತ್ತದೆ. ಮನಸ್ಸು ಸಮಾಧಿಯಲ್ಲಿದ್ದರೆ, ಮನಸ್ಸಂಬಂಧಿತ ಬುದ್ಧಿಯಲ್ಲಿ ಈ ದಶೇಂದ್ರಿಯಗಳು, ಪ್ರಾಣಾದಿ ವಾಯಗಳು ಮುಂತಾದ ಸೂಕ್ಷ್ಮ ಶರೀರದ ತತ್ತ್ವಗಳು ಈ ಸ್ಥೂಲದೇಹವನ್ನು ಬಿಟ್ಟು ಇರಲಾರವು. ಶರೀರತ್ರಯ, ಅಹಂಕಾರಾದಿ ವ್ಯಾಪಾರವೆಲ್ಲವೂ ಮನಸ್ಸಿನಲ್ಲಿ ಇದ್ದೇ ಇರುತ್ತದೆ. ಜ್ಞಾನ ವಿಜ್ಞಾನ ಸಂಪನ್ನರಾದ ಬ್ರಹ್ಮಜ್ಞಾನಿಗಳೇ ಸ್ವಲ್ಪ ಸಮಯ ಮನಸ್ಸಿಲ್ಲದವರಾಗಿದ್ದು, ತದನಂತರ ಪುನಃ ಲೌಕಿಕ ವ್ಯಾಪಾರದ ಕಡೆ ಬರುತ್ತಾರೆ. ಇಂಥಹ ಸಂದರ್ಭಗಳಲ್ಲಿ ಪರಬ್ರಹ್ಮ ಸ್ವರೂಪವಾದ ಸಮಾಧಿ ಸಾಧನೆ ಹೇಗೆ ಸಾಧ್ಯ? ಎನ್ನುವುದು. ಇದನ್ನೇ ರಾಮನಿಗೆ ಹೇಳಿದಾಗ ರಾಮ, 'ನಮಗೆ ಕಾಣುವ ಈ ಪ್ರಪಂಚವೆಲ್ಲವೂ ಪ್ರಕೃತಿ. ಆದರೆ, ಈ ಪ್ರಕೃತಿ ತಾನಲ್ಲವೆಂಬ ಸ್ಥಿರತೆಯನ್ನು ಮನಸ್ಸು ಹೊಂದಬೇಕು. ಇದೇ ಮನಸ್ಸಿನ ಜಡತೆ. ಇಂಥಾ ಜಡವಾದ ಮನಸ್ಸನ್ನು ಹೊಂದಿ ಬ್ರಹ್ಮನನ್ನು ತಿಳುಯುವವನೇ ಅಮನಸ್ಕ – ಸ್ವಯಂಪ್ರಕಾಶ ಸ್ವರೂಪನು'ಎಂದು ಹೇಳುತ್ತಾನೆ (೩–೬೮). 'ಆಕಾಶದಲ್ಲಿನ ಗಾಳಿ ಇತ್ಯಾದಿಗಳು ಚಲಿಸುವಹಾಗೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಮನಸ್ಸನು ಚಲಿಸಿದರೆ, ನಾನು ಚಲಿಸುತ್ತೀನಿ ಎಂದು ತಿಳಿಯಬೇಡ. ನಿಶ್ಚಲವಾಗಿ ಇರಲು ಪ್ರಯತ್ನಿಸು. ನಾನು ಪರಬ್ರಹ್ಮ ಸ್ವರೂಪನು ಎಂದು ಅದ್ವೈತವನ್ನು ಅವಲಂಬಿಸು. ಮಾನಸೇಂದ್ರಿಯ ಚಲನವಲನಗಳು ನಿನ್ನಂಟುವುದಿಲ್ಲ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ, ಅಂತಃಕರಣಕ್ಕೆ ಅಗೋಚರನಾದ, ತ್ರಿಗುಣರಹಿತನಾದ ರೂಪವುಳ್ಳವನಾಗಿರು. ಇಂಥಹ ರೂಪ

ಪರಬ್ರಹ್ಮವೇ ಆಗಿರುವುದರಿಂದ ನಾನೂ ಪರಬ್ರಹ್ಮ ಸ್ವರೂಪನೇ ಎಂದು ತಿಳಿ, ಹೀಗೆ ಬ್ರಹ್ಮ ಚೈತನ್ಯದಲ್ಲಿ ಏಕೀಭವಿಸಿ, ಮನಸ್ಸನ್ನು ಜಡವಾಗಿಸಿ, ತನ್ನನು ತಾನು ತಿಳಿದು ಗಾಳಿ ಸೋಕದ ದೀಪದಂತಿದ್ದು ಆನಂದವನ್ನು ಹೊಂದುವುದೇ ಸಹಜ ಅಮನಸ್ಕ ರಾಜಯೊಗ ಸಮಾಧಿ, ಅದುವೇ ಜೀವನ್ಮುಕ್ತಿ' ಎಂದು ರಾಮ ಹನುಮಂತನಿಗೆ ಉಪದೇಶಿಸುತ್ತಾನೆ.

'ಮಡಿಕೆ ಕೇವಲ ಮಣ್ಣಿನ ರೂಪವೆಂದು, ಆಭರಣಗಳು ಕೇವಲ ಚಿನ್ನವೆಂದು, ಆಯುಧಗಳು ಕಬ್ಬಿಣ ಎಂದು, ಸಮುದ್ರದ ಅಲೆಗಳು, ನೊರೆ ಕೇವಲ ನೀರುಮಾತ್ರ ಎಂದು, ವಿವಿಧ ವಿನ್ಯಾಸ ವಸ್ತ್ರಗಳೆಲ್ಲಾ ಬರೀ ದಾರವೆಂದು ತಿಳಿದು, ಭ್ರಮೆಯನ್ನು ಬಿಟ್ಟು, ನಾಮರೂಪಕ್ರಿಯಾತ್ಮಕವಾಗಿ ಕಾಣುವ ಸಮಸ್ತ ಪ್ರಪಂಚವೆಲ್ಲಾ ಪರಬ್ರಹ್ಮವೇ ಎಂದು, ಸರ್ವಕಾಲದಲ್ಲಿ ಬ್ರಹ್ಮೈಕ್ಯದಲ್ಲಿರುವುದೇ ಆನಂದವಾಗಿರಲು ನಾವು ಮಾಡುವ ಉಪಾಯ' ಎಂದು, ರಾಮ ಹನುಮನಿಗೆ ಹೇಳುತ್ತಾನೆ.

ತಾದಾತ್ಮ್ಯ ಅಥವಾ ತನ್ಮಯತೆಯನ್ನು ವಿವರಿಸುತ್ತಾ ಕವಿ,

**ಸೀ॥ ಸ್ಥೂಲ ಶರೀರಂಬು ಸುಸ್ಥಿರಂಬುಗ ನುಂಡು, ಸಕಲೇಂದ್ರಿಯಮುಲುಪಶಾಂತಿ ನೊಂದು,**
**ಸನ್ಮಃಪವನಮುಲ್ ಸಂಚಲಿಂಪಕಯುಂಡು, ಕಾಮಾದಿ ಶತೃವರ್ಗಮು ನಶಿಂಚು,**
**ಸ್ಫುರದಮಾನಿತ್ವಾದಿಸುಗುಣಮುಲ್ಸಮಕೂರು, ಘನಗುಣಾತೀತ ಲಕ್ಷಣಮು ಮೆದವು,**
**ಬೊಲುಪಾರು ವೈರಾಗ್ಯ ಬೋಧೋಪರತುಲುಸಂ, ಪೂರ್ಣಂಬುಲೈ ಮದಿ ಬೊದಲುಚುಂಡು,**
**ಪರಮಸುಖವಾರ್ಧಿಯುಪ್ಪೊಂಗಿ ಪಾರುಚುಂಡು, ಮುಂದಟ ವಸಿಂಚು ಮೋಹಿಂಚಿ ಮೋಕ್ಷಲಕ್ಷ್ಮಿ,**
**ಸಂಶಯಂಬುಲೇಕ ದೃಢಮುಗಾ ಸಂತತಂಬು, ಸರ್ವಮುನು ಬ್ರಹ್ಮಮನಿ ಚೂಚು ಶಾಂತನಿಧಿಕಿ (೩-೯೨).**

ಎಂದು ವರ್ಣಿಸಿದ್ದಾರೆ. ಶಾಂತನಾದ ಬ್ರಹ್ಮವಿದನಿಗೆ, ಸ್ಥೂಲದೇಹ ಸ್ಥಿರವಾಗಿ, ಇಂದ್ರಿಯಗಳು ಶಾಂತವಾಗಿ, ಮನಸ್ಸು, ವಾಯುಗಳು ಸ್ತಬ್ಧವಾಗಿ, ವೈರಿವರ್ಗ ನಾಶವಾಗಿ, ಗುಣಗಳು ಪ್ರಕಾಶಿಸಿ, ಸತ್ವಗುಣವನ್ನು ಮೀರಿದ ಲಕ್ಷಣ ಗೋಚರಿಸುವುದೆಂದು, ಸುಖಸಾಗರ (ಆನಂದ) ಉಕ್ಕಿ ಹರಿಯುವುದೆಂದು, ಮೋಕ್ಷ ಸಿದ್ಧಿಸುವುದೆಂದು ಹೇಳಿದ್ದಾರೆ.

ಹೀಗೆ ಮುಂದುವರೆಸುತ್ತಾ, ಬ್ರಹ್ಮವಿದನಾದವನಿಗೆ ಪ್ರಕೃತಿ ರೂಪವಾದ ಸತ್ವರಜಸ್ತಮೋಗುಣ ವಿಕಾರಗಳು ಅಂಟಿಯೂ ಅಂಟದೆ ಇರುತ್ತವೆಂದು ಹೇಳಿ, ಬ್ರಹ್ಮ ವಿದ, ಬ್ರಹ್ಮ ವಿದ್ವರ, ಬ್ರಹ್ಮ ವಿದ್ವರೀ, ಬ್ರಹ್ಮವಿದ್ವರಿಷ್ಠರ ಲಕ್ಷಣಗಳನ್ನು ವಿವರಿಸುತ್ತಾರೆ. ಅನಂತರ ವೈರಾಗ್ಯ, ಆತ್ಮಪ್ರಿಯತ್ವಗಳ ಬಗ್ಗೆ ಹೇಳಿ, 'ಅಹಂ ಬ್ರಹ್ಮಾಸ್ಮಿ, ಪ್ರಜ್ಞಾನಂ ಬ್ರಹ್ಮ, ಅಯಮಾತ್ಮಾ ಬ್ರಹ್ಮ, ತತ್ವಂ ಬ್ರಹ್ಮ' ಎಂಬ ಮಹಾವಾಕ್ಯಗಳ ಬಗ್ಗೆ ವಿವರಣೆಯನ್ನು ನೀಡುತ್ತಾ ಅದುವೇ ಚೈತನ್ಯ, ಪ್ರಜ್ಞಾನ, ಬ್ರಹ್ಮ, ಆತ್ಮ ಎಂಬ ಹೆಸರುಗಳಿಂದ ಪ್ರಸಿದ್ಧಿಯಾಗಿ, ಜಗದಧಿಷ್ಠಾನ ಭೂತವಾದ ಬ್ರಹ್ಮವೇ ಸ್ವಪ್ರಕಾಶವಾದ ಆತ್ಮ, ಆ ಆತ್ಮ ಸ್ವರೂಪವೇ ನಾನು ಎಂಬುದನ್ನು ಪ್ರತಿಪಾದಿಸುತ್ತಿವೆ ಎಂದು ಹೇಳಿದ್ದಾರೆ.

ಇಂಥಹ ನಿಶ್ಚಲ ಸಮಾಧಿಯನ್ನು ಸಾಧಿಸುವುದು ಅತ್ಯಂತ ಕ್ಲಿಷ್ಟಕರ, ಸಾಮಾನ್ಯರಿಗೆ ಸಾಧ್ಯವಾಗದ್ದು ಎಂದು ಸಹ ಹೇಳಿದ್ದಾರೆ. ವೇದಶಾಸ್ತ್ರಗಳನ್ನು ಕಲಿಯಬಹುದು, ಕಲಿಸಬಹುದು, ಯಜ್ಞದಾನ ತಪಗಳನ್ನು ಮಾಡಬಹುದು, ಮಾಡಿಸಬಹುದು, ಸಕಲ ತೀರ್ಥಗಳನ್ನು ನೋಡಬಹುದು, ನೋಡಿಸಬಹುದು, ಅಷ್ಟಾಂಗ ಯೋಗ ವಿದ್ಯೆಯನ್ನು ಕಲಿಯಬಹುದು, ಕಲಿಸಬಹುದು ಆದರೆ, ವಿಜ್ಞಾನಯೋಗದಲ್ಲಿ ಜೀವೇಶ್ವರ ಐಕ್ಯದಲ್ಲಿ ದೇಹ, ಇಂದ್ರಿಯಗಳನ್ನು ನಿರೋಧಿಸಿ, ಮನಸ್ಸನ್ನು ನಿಲ್ಲಿಸಿ, ಅಂತರ್ಮುಖಮಾಡಿ, ನಿರಂತರ ನಿರ್ವಿಕಲ್ಪ ಸಮಾಧಿ ರೂಪವಾದ ತಪಸ್ಸಿನಲ್ಲಿ ನಿಲ್ಲಿಸುವುದು ಅತ್ಯಂತ ಕಷ್ಟಸಾಧ್ಯ ಎಂದಿದ್ದಾರೆ. ಅಂತಃಕರಣ[೩೮] ಬಹಿರ್ಮುಖವಾದಾಗ ಅದನ್ನು ಮನಸ್ಸು ಎಂದು, ಅಂತರ್ಮುಖವಾದಾಗ ಬುದ್ಧಿ ಎಂದು ಹೇಳಲಾಗುತ್ತದೆ. ಇಲ್ಲಿ ಚಿತ್ತ ಅಹಂಕಾರಗಳು ಮನಸ್ಸು ಬುದ್ಧಿಗಳಿಗೆ ಸಹಾಯವಾಗಿರುವುದರಿಂದ ಚಿತ್ತ ಸಹಾಯವಿರುವ ಮನಸ್ಸನ್ನು ವಿಜ್ಞಾನ ಸ್ವರೂಪವಾಗಿಸಿ, ತನ್ನಲ್ಲೇ ಅಡಗಿಸಿಕೊಂಡಿರುವುದು ಬಹಳ ಕಷ್ಟ ಎನ್ನುವುದೇ ಕವಿಯ ಅಭಿಪ್ರಾಯ. ಹೀಗೆ ಲೌಕಿಕ ವ್ಯಾಪಾರವನ್ನು ಬಿಟ್ಟು ನಿರ್ವಿಕಲ್ಪ ಸಮಾಧಿಯನ್ನು ಸಾಧಿಸುವವರೇ ಸ್ಥಿತ ಪ್ರಜ್ಞರು ಎನ್ನುತ್ತಾರೆ.

**ಅಂತಿಮ ತಾತ್ಪರ್ಯವಾಗಿ:** ಯಾವ ಬ್ರಹ್ಮವಿದನಿಗೆ ಮನಸ್ಸು, ಇಂದ್ರಿಯಗಳು ತನ್ನ ಅನುಜ್ಞೆಯಲ್ಲಿದ್ದು, ಆಜ್ಞೆಯ ಅನುಸಾರ ಸಂಕಲ್ಪಾದಿ ಕಾರ್ಯಗಳನ್ನು ನಿರ್ವಹಿಸುತ್ತದೆಯೋ ಅಂಥಹ ಬ್ರಹ್ಮವಿದನು ಅಹಂ ಬ್ರಹ್ಮಾಸ್ಮಿ ಎಂಬ ನಿಶ್ಚಲ ಬುದ್ಧಿ ಇರುವವನಾಗುತ್ತಾನೆ. ಬ್ರಹ್ಮಜ್ಞಾನದಿಂದ ನಿರ್ಗುಣೋಪಾಸನದ ಅಂಗಗಳನ್ನು[೩೯] ಸೂಕ್ಷ್ಮದೃಷ್ಟಿಯಿಂದ ಗ್ರಹಿಸಿ ಅಭ್ಯಾಸ ಮಾಡುವ ಬ್ರಹ್ಮವಿದ್ವರಿಷ್ಠರಿಗೆ[೪೦] ನಿರಂತರ ಚಿತ್ತ ವಿಶ್ರಾಂತಿ ಲಭಿಸುತ್ತದೆ. ಇಂಥಹ ಅತಿಕ್ಲಿಷ್ಟ ಸಾಧನೆಯನ್ನು ಮಾಡಿದರೆ, ಆತ್ಮಸ್ವರೂಪವಾದ ಮೊಕ್ಷವು ಸಿದ್ಧಿಸುತ್ತದೆ. ಇದುವೇ ಬ್ರಹ್ಮಾನಂದವನ್ನು ನೀಡುವುದು, ಇದುವೇ ಬ್ರಹ್ಮವಿದ್ಯೆ ಎಂದು ರಾಮನು ಹನುಮಂತನಿಗೆ ಉಪದೇಶಿಸಿ, ಈ ಸೀತಾರಾಮಾಂಜನೇಯ ಸಂವಾದವನ್ನು ಭಕ್ತಿಯಿಂದ, ರಾಗಾದಿ ಮಾಲಿನ್ಯವಿಲ್ಲದೆ ನಿರ್ಮಲವಾದ ಅಂತಃಕರಣದಿಂದ ಪಠಿಸಿದರೆ, ಕೇಳಿದರೆ, ಬರೆದರೆ ಅಂಥಹವರಿಗೆ ಮೋಕ್ಷಸಿದ್ಧಿ ಆಗುತ್ತದೆ ಎಂದು ಫಲಶೃತಿಯನ್ನು ಹೇಳುತ್ತಾನೆ. ತದನಂತರದಲ್ಲಿ ಹನುಮಂತನು ಅತಿ ಸಂತುಷ್ಟನಾಗಿ ಸೀತಾರಾಮರಿಗೆ ಅತಿ ಭಕ್ತಿಯಿಂದ ನಮಸ್ಕರಿಸಿ ಹೊರಟು, ಏಕಾಂತಸ್ಥಳದಲ್ಲಿ ಸುಖಾಸೀನನಾಗಿ, ಚಿತ್ತವಿಕಾರ[೪೧] ರಹಿತನಾಗಿ, ನಿರ್ವಿಕಲ್ಪ ಸಮಾಧಿ ನಿಷ್ಠೆಯನ್ನು ಸಾಧಿಸಿ ಜೀವನ್ಮುಕ್ತನಾಗುತ್ತಾನೆಂದು ಪರಮೇಶ್ವರನು ಪಾರ್ವತಿಗೆ ಹೇಳಿದ ಸುದೀರ್ಘ ರಾಜಯೋಗಾಧಾರಿತ ಶ್ರೀ ಸೀತಾರಾಮ

ತತ್ತ್ವೋಪದೇಶವು ಸಂಪನ್ನವಾಗುತ್ತದೆ.

## ಕೃತಿ ವೈಭವ

ಈ ಕೃತಿ ೩೧೨ ಮುದ್ರಿತ ಪುಟಗಳ ಸಂಪುಟ (ಟೀಕಾ ತಾತ್ಪರ್ಯ ಸಹಿತ). ಅಕ್ಷರಗಳು ಈಗಿನ ೮-೧೦ ಗಾತ್ರ ಮಾತ್ರ, ಒಟ್ಟು ೩ ಆಶ್ವಾಸಗಳು ಸೇರಿ ೭೦೪ ಪದ್ಯಗದ್ಯಗಳಿವೆ. ಪ್ರಥಮಾಶ್ವಾಸದಲ್ಲಿ ೨೭೨, ದ್ವಿತೀಯಾಶ್ವಾಸದಲ್ಲಿ ೨೦೫ ಮತ್ತು ತೃತೀಯಾಶ್ವಾಸದಲ್ಲಿ ೨೨೭, ಪದ್ಯಗದ್ಯಗಳು ರಚಿತವಾಗಿವೆ. ಪದ್ಯಗಳೆಲ್ಲವೂ ಸಂಪೂರ್ಣ ಛಂದೋಬದ್ಧ. ಸಾಮಾನ್ಯ ವೃತ್ತಗಳಲ್ಲದೆ ದೇಶೀ ಛಂದಸ್ಸನ್ನು ವಿಸ್ತಾರವಾಗಿ ಬಳಸಲಾಗಿದೆ.

ಆಧ್ಯಾತ್ಮಿಕವಾದ, ಅತ್ಯಂತ ಗಹನವಾದ, ವೇದಾಂತ ಸೂಕ್ಷ್ಮಗಳನ್ನು ವಿವರಿಸುವ ಕಥಾವಸ್ತು ಇರುವ ಈ ಗ್ರಂಥದಲ್ಲಿ ಕವಿಯ ನಿರಾತಂಕ ಕವಿತಾಧಾರೆಯು ಅಚ್ಚರಿಯನ್ನು ಮೂಡಿಸುತ್ತದೆ. ಪದ್ಯ ಗದ್ಯ ಮಿಶ್ರಿತ ಚಂಪೂ ಶೈಲಿಯಲ್ಲಿ ಸಾಗಿದ ಈ ಕಾವ್ಯವು ಅಂದಿನ ಕಾಲದಲ್ಲಿ ಜನಪ್ರಿಯವಾಗಿದ್ದ ಪ್ರಬಂಧ ರೀತಿಯಲ್ಲಿ ನಿಬದ್ಧವಾಗಿರುವುದು ಗಮನಾರ್ಹ. ಪ್ರಬಂಧದಲ್ಲಿ ವರ್ಣನೆಗಳಿಗೆ ಹೆಚ್ಚು ಪ್ರಾಧಾನ್ಯತೆ ಇರುತ್ತದೆ. ಜೊತೆಗೆ ಕಾಲ್ಪನಿಕ ಕಥಾವಸ್ತುವನ್ನು ವಿಪುಲವಾಗಿ ಬೆಳೆಸಿ ಶೃಂಗಾರ ರಸಕ್ಕೆ ಅಗ್ರಪೀಠವನ್ನು ಹಾಕುತ್ತಿದ್ದ ಕಾಲವದು. ಇಲ್ಲಿನ ಕಥಾವಸ್ತುವಿನಲ್ಲಿ ಶೃಂಗಾರ ವರ್ಣನೆಗಳಿಗೆ ಪ್ರಾಧಾನ್ಯತೆ ಕೊಡಲಾಗದಿದ್ದರೂ, ಮಿಕ್ಕೆಲ್ಲ ಪ್ರಬಂಧ ಗುಣಗಳನ್ನು ಕವಿ ತಮ್ಮ ಕಾವ್ಯದಲ್ಲಿ ಆರೋಪಿಸಿರುವುದು ಅವರ ರಚನಾ ನಿಪುಣತೆಗೆ ಕನ್ನಡಿ ಹಿಡಿದಂತೆ. ಶ್ರೀ ಕಾರದಿಂದ ಕೃತಿ ಮಂಗಳಕರವಾಗಿ ಪ್ರಾರಂಭವಾಗಿದೆ. ಇಷ್ಟದೇವತಾ ಸ್ತೋತ್ರವು ಶ್ರೀ ಜಾನಕೀ ರಾಮಬ್ರಹ್ಮನ ಆರಾಧನೆಯಿಂದ ಪ್ರಾರಂಭವಾಗಿರುವುದು ಅವರ ಅಪಾರ ರಾಮಭಕ್ತಿಗೆ ಸಾಕ್ಷಿ. ಕೃತ್ಯಾದಿ ಪದ್ಯದಲ್ಲೇ ಈ ಗ್ರಂಥವು ಅದ್ವೈತ ತತ್ತ್ವವಿಚಾರವು ಎಂಬ ಅಭಿಪ್ರಾಯವನ್ನು ಸೂಚ್ಯಪ್ರಾಯವಾಗಿ ಹೇಳಿದ್ದಾರೆ. ಅನಂತರದಲ್ಲಿ ಸೀತಾದೇವಿ, ಬ್ರಹ್ಮ, ವಿಷ್ಣು, ಮಹೇಶ್ವರ, ಸರಸ್ವತಿ, ಲಕ್ಷ್ಮಿ, ಪಾರ್ವತಿ, ಗಣಪತಿ, ಹನುಮ- ಹೀಗೆ ಅನೇಕ ದೇವರುಗಳ ಪ್ರಾರ್ಥನೆಯು, ಗುರುಗಳ ಪ್ರಾರ್ಥನೆ, ಪೂರ್ವ್ವ ಸುಕವಿ ಭೂಷಣ, ಕುಕವಿ ದೂಷಣ, ಸಮಸ್ತ ಭೂತ ನಮನ, ಕಾವ್ಯಹೇತು, ಕೃತಿಕಾರನ ಭಾಗ್ಯ ಪ್ರಶಂಸೆ, ಗುರುಪರಂಪರಾಭಿವರ್ಣನೆ, ಕವಿ ವಂಶಾನುಕ್ರಮ, ಷಷ್ಠ್ಯಂತ್ಯಗಳು- ಇತ್ಯಾದಿ ಎಲ್ಲಾ ಪ್ರಬಂಧಕಾವ್ಯ ಲಕ್ಷಣಗಳನ್ನು ಪಾಲಿಸಿದ್ದಾರೆ.

ಶ್ರೀರಾಮನ ಆಜ್ಞೆಯೇ ಈ ಗ್ರಂಥ ರಚನೆಗೆ ಕಾರಣವೆಂದು ಹೇಳಿ, ಕವಿ ಇಂಥಹ ರಾಜಯೋಗದ ವಸ್ತುವನ್ನು ರಚಿಸುವುದು ತನ್ನ ಭಾಗ್ಯ ವೆಂದು ಹೆಮ್ಮೆ ಪಟ್ಟಿದ್ದಾರೆ. ಕೈಲಾಸ ಗಿರಿಯ ಪ್ರಸ್ತಾವನೆಯನ್ನು ಷಷ್ಠ್ಯಂತ್ಯದಲ್ಲಿ ತಂದು ಕಥಾಪ್ರಾರಂಭವನ್ನು ಸುದೀರ್ಘ ವಿದ್ವತ್ಪೂರ್ಣ ವಚನದಿಂದ ಮಾಡಿದ್ದಾರೆ. ಈ ವಚನವೊಂದೇ ಕವಿಯ ಅಮೋಘ ವಿಷಯ ಜ್ಞಾನವನ್ನು, ರಚನಾ ಪಾಂಡಿತ್ಯವನ್ನು, ಪದಗಳು ಪೋಣಿಸುವಲ್ಲಿರುವ ಕುಶಲತೆ, ನಿಪುಣತೆಯನ್ನು ಸಾರುತ್ತದೆ. ಸಂಸ್ಕೃತ ಪದಭೂಯಿಷ್ಠವಾದ ಪದ್ಯ ರಚನೆ ಒಂದೆಡೆಯಾದರೆ, ಸುಲಭ ಸರಳ ಶೈಲಿಯ ಪದ್ಯಗದ್ಯಗಳ ರಚನೆ ಇನ್ನೊಂದೆಡೆ- ದರ್ಶನ ನಿಡುತ್ತವೆ.

ಕೆಲವು ಪದ್ಯಗಳು ಅತಿ ಸರಳ ಶೈಲಿಯಲ್ಲಿದ್ದು ಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವ ರೀತಿಯಲ್ಲಿವೆ.

ಉದಾಹರಣೆಗೆ-

ತೇ॥ ತಾರಕಂಬು ಮನಶ್ಶುದ್ಧಿ ಕಾರಕಂಬು, ಸಾಂಖ್ಯಮಾತ್ಮ ಸ್ವರೂಪ ವಿಚಾರಕಂಬು।
ಅನುಭವ ಜ್ಞಾನಮಮನಸ್ಕ ಮಟ್ಲುಗಾನ, ನಾದ್ಯಮೆರಿಗಿಂತು ಮೊದಲ ನೀ
ವವಧರಿಂಪು॥ (೧-೯೦)

ಕಂ॥ ಯೋಗಾಭ್ಯಾಸಮುವಲನಸ, ದಾಗತಿ ಚಿತ್ತೇಂದ್ರಿಯಮುಲ
ದರ್ಪಮುಲಡಗುನ್।
ರಾಗದ್ವೇಷಾದುಲುಚನು, ಬಾಗುಗ ನಾತ್ಮಕು ಶುಖಾನುಭವಮುಂಗಲುಗುನ್॥
(೧-೯೫)

ಎಂದಿದ್ದರೆ, ಇನ್ನು ಕೆಲವು ಆಳವಾದ ಪಾಂಡಿತ್ಯವಿಲ್ಲದವರಿಗೆ ಅರ್ಥವಾಗುವುದೇ ಕಷ್ಟವೆಂಬ ಪ್ರೌಢ ಶೈಲಿಯಲ್ಲಿ ಸಾಗಿವೆ.

ಮ॥ ಅಮರೇಂದ್ರಾರ್ಚಿತ ಪೂರ್ವ ವರ್ಣಿತ ನಿತಾಂತಾಂತರ್ಬಹಿರ್ಮಧ್ಯಲ,
ಕ್ಷ್ಯಮು ಲುದ್ವದ್ವರ ಮಂಡಲ ತ್ರಯಕಳಾ ಸಮ್ದರ್ಶನಾಭ್ಯಾಸ ಯೋ,
ಗಮು ಲೀರೆಂಡುನು ನಾದಬಿಂದು ರುಚಿ ಸಾಕ್ಷಾತ್ಕಾರಸದ್ಧೇತುಭೂ, ತಮುಲೈ
ಯೊಪ್ಪು ನಿರಂತರಂಬಲಘುತನ್ ಧ್ಯಾನಂಬು ಗಾವಿಂಚಿನನ್. (೧-೧೦೯)

ಶಾ॥ ಆಧಾರಂಬಿಲಯ್ಯೆ ಜಲಂಬು ಮಣಿಪುರಾಂಭೋಜಮ್ಮೆ ವಹ್ನಿಯ್ಯೆ,
ಸ್ವಾಧಿಷ್ಠಾನಮನಾಹತಂಬನಿಲಮ್ಮೆ ಚಂಚದ್ವಿಶುದ್ಧಂಬುಖಂಬೈ,
ಧೀಮಾನಸರೂಪಕ ಪ್ರಕೃತಿ ಯಾಜ್ಞಾಭ್ಜಾತಮ್ಮೆಯೊಪ್ಪುಸ, ವಾಧಾರೋನ್ನತ
ವಿಶ್ವಮೂರ್ತಿನಗು ನಾಕಾದಿತ್ಯ ಸಂಪೂಜಿತಾ॥ (೨-೪೭)

ಇವರ ಕವಿತ್ವವು ಅರ್ಥ ಗರ್ಭಿತವಾಗಿ, ಮೃದು ಮಧುರವಾಗಿ, ಕಿವಿಗಿಂಪಾಗಿ, ವಿಚಾರನಿಬಿಡವಾಗಿದೆ. ರಚನಾ ಶೈಲಿ ಕೆಲವೊಮ್ಮೆ ಆಂಧ್ರ ಭಾಗವತದ ಕರ್ತೃವಾದ 'ಬಮ್ಮೆರ ಪೋತನ'ರವರ ಶೈಲಿಯನ್ನು ಹೋಲುತ್ತದೆ. ವಸ್ತು ಗಾಂಭೀರ್ಯತೆಯ ಮಧ್ಯದಲ್ಲೂ, ಅಷ್ಟಾದಶ ವರ್ಣನೆಗಳ ಅಭಾವದಲ್ಲೂ ಕವಿತೆ ಓದುಗರಿಗೆ ಬೇಸರ ವಾಗದಂತೆ ಮುಂದಕ್ಕೆ ನಡೆಸಿ ಕರೆದೊಯ್ಯುವ ಶಬ್ದಶಕ್ತಿಯನ್ನು ಹೊಂದಿದೆ. ಕವಿ ಶಬ್ದಾರ್ಥಾಲಂಕಾರಗಳೆರಡನ್ನೂ ಸಮರ್ಥತೆಯಿಂದ ಪೋಷಿಸಿರುವುದು ವಿದ್ವದ್ಯೋತಕ.

ಉದಾ: ಶಬ್ದಾಲಂಕಾರ:

ಸೀ॥ ಮಂದಾಕಿನೀ ಸಂದೋಹ ದುಗ್ಧಾಬ್ಧಿ ಸೌಂದರ್ಯಲಹರುಲಚಂದನಮುನನು,
ಮಂದಾರ ಮಲ್ಲಿಕಾ ಕುಂದಾರವಿಂದೋರು ಚಂದನಪುಷ್ಪ ರುಕ್ಚಯಮು ಪಗಿದಿ,
............ ...... ...... ........... ............ .... .......
ಹಾರನೀಹಾರ ಡಿಂಡೀರ ಶಾರದಾಭ್ರ, ಹೀರ ಕರ್ಪೂರ ತಾರಕಾ ಕಾರಕಾಂತಿ....
(೧-೧೩೮)

ಸ್ರ್ವಿಣಿ॥ ಯೋಗ ಯೋಗಾಂಗ ಸಂಯುಕ್ತ ಯೋಗಪ್ರಿಯಾ,
ಯೋಗ ಮುದ್ರಾನ್ವಿತಾ ಯೋಗ ನಿದ್ರಾಂಚಿತಾ।

ಯೋಗ ರಕ್ಷ್ಯಾವನಾಸ ಯೋಗಸಿದ್ಧಿಪ್ರದಾ,
ಯೋಗಮಾಯಾಶ್ರಯಾ ಯೋಗ ಯೋಗೀಶ್ವರಾ॥ (೩-೧೦)

## ವೃತ್ತ್ಯನುಪ್ರಾಸ

ಪಂಚಚಾಮರ॥ ಇಲಾಜಲಾನಲಾನಿಲಾಂಬ ರೇಂದುಭಾನುಮಂಡಲೋ,
ಜ್ವಲಾಖಿಲಾವಿಲಾಮಲಾತ್ಮಜಾಲಕಾಂತರಸ್ಥಚಂ।
ಚಲಾಚಲಾವಿಲಾಸ ಶೂನ್ಯ ಸಂತತಾಪರೋಕ್ಷಚಿ,
ತ್ಕಳಾ ಕಲಾಪ ಲಾಲಿತಪ್ರಕಾಶಕುಂಡತಂಡಗುನ್ (೨-೧೦)

## ಉದಾ: ಅರ್ಥಾಲಂಕಾರ

ಚ॥ ಅಲಯಕ ಸಪ್ತ ವಾರಿಧುಲ ನಾವಲಿ ನೀವಲಿ ಕೊಕ್ಕರೀತಿಗಾ,
ಗಲಯಗ ನೀದವಚ್ಚುನು, ನಗಂಬುಲ ನಚ್ಚನಗಂಡ್ಲುಗಾ ಗರಂ,
ಬುಲ ಗೊನಿಯಾಡವಚ್ಚು, ನಭಮುನ್ ಗಬಳಿಂಪಗವಚ್ಚುಗಾನಿ, ಯಿ
ಯ್ಯಿಲ ನಮನ್ಸ್ಕ ಯೋಗಮು ಗ್ರಹಿಂಪಗರಾದುದಲಂಪ ನೇರಿಕಿನ್॥ (೩-೩೯)

ಇವು ಕೇವಲ ದೃಷ್ಟಾಂತಕ್ಕೆ ಒಂದೆರಡು ಮಾತ್ರ ಇಂಥಹ ಹಲವಾರು ಪದ್ಯಗಳನ್ನು ಈ ಗ್ರಂಥದಿಂದ ಉದಾಹರಿಸಬಹುದು.

ಕವಿತ್ವದಲ್ಲಿ ಪ್ರಭುತ್ವವನ್ನು, ಪ್ರತಿಭೆಯನ್ನು, ಸಹಜತೆಯನ್ನು ಸಾಧಿಸಿದ ಕವಿ ಈತ ಎಂದು ನಿಸ್ಸಂಶಯವಾಗಿ ಹೇಳಬಹುದು. ನಾನಾ ವಿಧ ಛಂದೋರೀತಿಗಳನ್ನು ತಮ್ಮ ಗ್ರಂಥದಲ್ಲಿ ಬಳಸಿದ್ದಾರೆ. ಈ ಕೃತಿಯಲ್ಲಿ ೪೩ ರೀತಿಯ ಛಂದಸ್ಸುಗಳನ್ನು ಕವಿ ಬಳಸಿದ್ದಾರೆ.

ಶಾರ್ದೂಲ-೨೭, ಸೀಸ ಪದ್ಯ-೮೫, (ಸೀಸ ಪದ್ಯದ ಮೇಲಿನ ತೇಟಗೀತಿ-೮೫), ಕಂದ ಪದ್ಯ-೧೬೬, ಮತ್ತೇಭ ವೃತ್ತ-೩೧, ತೇಟಗೀತಿ-೧೧೭, ವಚನ-೬೦, ಉತ್ಪಲಮಾಲಾ-೧೦, ಚಂಪಕಮಾಲಾ-೨೫, ಆಟವೆಲದಿ-೪೩, ಸುಗಂಧಿ-೩, ಉತ್ಸಾಹ-೨, ಮಹಾಸ್ರಗ್ಧರ-೨, ಸ್ರಗ್ಧರ-೧, ತೋಟಕ ವೃತ್ತ-೨, ವನಮಯೂರ ವೃತ್ತ-೨, ಮತ್ತಕೋಕಿಲ-೩, ಮಾಲಿನೀ-೨, ಪಂಚಚಾಮರ-೪, ಲಯವಿಭಾತಿ-೧, ಲಯಗ್ರಾಹಿ-೧, ಸರ್ವತಃಪ್ರಾಸ ಸೀಸ-೬, ದಂಡಕ-೧, ಇಂದ್ರವಜ್ರ-೧, ಉಪೇಂದ್ರವಜ್ರ-೧, ಪೃಥ್ವಿ-೧, ಭುಜಂಗಪ್ರಯಾತ-೧, ತರಲ-೧, ಕ್ರೌಂಚಪದ ವೃತ್ತ-೧, ಕವಿರಾಜವಿರಾಜಿತ-೨, ದ್ವಿರದಗತಿ ರಗಡ-೧, ಸ್ರಗ್ವಿಣೆ-೧, ವಸಂತತಿಲಕ-೧, ಮಾನಿನಿ-೩, ವಿದ್ಯುನ್ಮಾಲಾ ವೃತ್ತ-೧, ಸುಕಾಂತಿ ವೃತ್ತ-೧, ಉಪಜಾತಿವೃತ್ತ-೧, ವಿಭೂತಿ ವೃತ್ತ-೧, ಮಂದಾಕ್ರಾಂತ ವೃತ್ತ-೧, ಸೀಸದಶಕ-೧, ಭೂತಿಲಕ ವೃತ್ತ-೧, ತೋದಕ ವೃತ್ತ-೨, ಸುಂದರೀ ವೃತ್ತ-೧, ಶ್ಲೋಕ-೧.

ಇವುಗಳಲ್ಲಿ ಏಕಾಕ್ಷರ, ದ್ವ್ಯಕ್ಷರ, ಮುಕ್ತಪದಗ್ರಸ್ತ, ನಿರೋಷ್ಠ್ಯ ಪದ್ಯಗಳು, ಸರ್ವತಃಪ್ರಾಸ, ಚತುಪ್ರಾಸಸೀಸಾದಿಗಳನ್ನು ಸಹ ಪ್ರಯೋಗಿಸಿದ್ದಾರೆ.

## ಏಕಾಕ್ಷರ ಪದ್ಯ

ಕಂ॥ ನಾನಾ ನೂನುನಿ ನನಿನ, ನ್ನೇ ನೇನನ ನಿನ್ನು ನನ್ನು ನೇನನ ನನಿನನ್,
ನೇನನು ನೇ ನನ್ನಾನಾ, ನೇನನು ನನ್ನೆನ್ನಿ ನನ್ನು ನಿನು ನೇನನನಾ॥
('ನ' ಕಾರ ಪ್ರಯೋಗ ಮಾತ್ರ)

## ದ್ವ್ಯಕ್ಷರ ಪದ್ಯ

ಕಂ॥ ಮೇನು ಮನಮು ಮಾನಮು ಮುನು, ನೇನನು ಮನಮ್ಮು ಮಾನಿ
ನೇಮಮ್ಮುನ ನ,
ನ್ನೇ ನೇನನಿ ನಮ್ಮಿನನೀ, ಮಾನಮನೂನಾನು ಮಾನಮ್ಮೆ ಮನುನೆಮ್ಮಿನ್॥
('ಮ' ಕಾರ, 'ನ' ಕಾರ ಪ್ರಯೋಗ ಮಾತ್ರ)

ಹೀಗೆ ಈ ಕೃತಿಯಲ್ಲಿ ಕವಿಯ ಹೃದಯ, ತತ್ತ್ವ, ಪ್ರತಿಭೆ, ವಿಷಯ ಪಾಂಡಿತ್ಯ, ವಿಚಾರ ಪ್ರಭುತ್ವ, ಭಾಷಾ ಜ್ಞಾನ, ರಚನಾ ಸಾಮರ್ಥ್ಯ ಎಲ್ಲವೂ ಪ್ರಸ್ಫುಟವಾಗಿ ಕಾಣುತ್ತವೆ. ಮಾನವ ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕ ವಿಚಾರಗಳೆಲ್ಲವನ್ನು ಎಳೆ ಎಳೆಯಾಗಿ ಬಿಡಿಸಿ ನಮ್ಮ ಮುಂದಿಟ್ಟಿರುವುದರಿಂದ ಈ ಗ್ರಂಥ ಅತ್ಯಂತ ಪಠಣ ಯೊಗ್ಯ. ಸಾಹಿತ್ಯಾಸಕ್ತರು, ಯೋಗಾಭಿಲಾಷಿಗಳು ಅವಶ್ಯ ಓದಬೇಕಾದ ಕೃತಿ.

**ಅಡಿಟಿಪ್ಪಣಿ :**

(ಸೂಚನೆ: ಪಠ್ಯದಲ್ಲಿ ಸೂಚಿತವಾಗಿರುವ ಸಂಖ್ಯಾ ಸಂಬಂಧಿ ವಿವರಣೆಯನ್ನು ಪರಿಶಿಷ್ಟದಲ್ಲಿ ಅನುಕ್ರಮವಾಗಿ ನೀಡಲಾಗಿದೆ)

**೧. ಪಂಚ ಮಲಗಳು:**

ಆಣವ, ಕಾರ್ಮಿಕ, ಮಾಯಿಕ, ಮಾಯೇಯ, ತಿರೋಧಾನ.

**೨. ತಾಪತ್ರಯಗಳು:**

ಆಧ್ಯಾತ್ಮಿಕ, ಆಧಿಭೌತಿಕ, ಆಧಿ ದೈವಿಕ.

**೩. ಷಡಧ್ವಗಳು:**

ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ತತ್ತ್ವಾಧ್ವ, ಭುವನಾಧ್ವ ಕಳಾಧ್ವ

**೪. ಚತುಷ್ಷಷ್ಟಿ(೬೪) ಕಲೆಗಳು:**

ಇತಿಹಾಸ, ಆಗಮ, ಕಾವ್ಯ, ಅಲಂಕಾರ, ನಾಟಕ, ಗಾಯನ, ಕವಿತ್ವ, ಕಾಮಶಾಸ್ತ್ರ, ದ್ಯೂತ, ದೇಶಭಾಷಾಜ್ಞಾನ, ಲಿಪಿಕರ್ಮ, ವಾಚನ, ಸರ್ವಾವಧಾನ, ಸ್ವರಶಾಸ್ತ್ರ, ಶಕುನ, ಸಾಮುದ್ರಿಕ, ರತ್ನಶಾಸ್ತ್ರ, ರಥಕೌಶಲ, ಅಶ್ವಕೌಶಲ, ಗಜಕೌಶಲ, ಮಲ್ಲಶಾಸ್ತ್ರ, ಸೂದ(ಪಾಕ) ಕರ್ಮ, ಭೂರುಹ(ವೃಕ್ಷ), ದೋಹದ (ತೋಟ), ಗಂಧವಾದ, ಧಾತುವಾದ, ಖನಿವಾದ, ರಸವಾದ, ಜಾಲವಾದ(ಮೀನುಗಾರಿಕೆ), ಅಗ್ನಿಸ್ತಂಭ, ಖಡ್ಗಸ್ತಂಭ, ಜಲಸ್ತಂಭ, ವಾಯುಸ್ತಂಭ, ವಶ್ಯ, ಆಕರ್ಷಣ, ಮೊಹನ, ವಿದ್ವೇಷಣ, ಉಚ್ಚಾಟನ, ಮಾರಣ, ಕಾಲವಂಚನ, ಪರಕಾಯಪ್ರವೇಶ, ಪಾದುಕಾಸಿದ್ಧಿ, ವಾಕ್ಸಿದ್ಧಿ, ಘಟಿಕಾ(ಕಾಲ)ಸಿದ್ಧಿ, ಇಂದ್ರಜಾಲ, ಅಂಜನ, ಪರದೃಷ್ಟಿ ವಂಚನ, ಸ್ವರವಂಚನ, ಮಣಿಸಿದ್ಧಿ, ಮಂತ್ರಸಿದ್ಧಿ, ಔಷಧಸಿದ್ಧಿ, ಚೋರಕರ್ಮ, ಚಿತ್ರ, ಲೋಹ, ಅಶ್ಮ (ಕಲ್ಲು), ಮೃತ್ (ಮಣ್ಣು), ತಾರು (......), ವೇಣು (ಕೂದಲು), ಚರ್ಮ, ಅಂಬರ (ವಸ್ತ್ರ ಕ್ರಿಯೆಗಳು, ಅದೃಶ್ಯಕರಣ, ದಂಡಕರಣ, ಮೃಗಯಾವಿಧಿ, ವಾಣಿಜ್ಯ, ಪಶುಪಾಲನ, ಕೃಷಿ, ಆಸವ(ಹೆಂಡ)ಕರ್ಮ, ಲಾವ (ಹಕ್ಕಿ), ಕುಕ್ಕುಟ

(ಕೋಳಿ), ಮೇಷ(ಟಗರು)ಗಳ ಯುದ್ಧ ಕೌಶಲ.

**೫. ಚತುರ್ದಶ(೧೪) ವಿದ್ಯೆಗಳು:**

ವೇದಗಳು–೪ (ಋಕ್, ಯಜು, ಸಾಮ, ಅಥರ್ವಣ), ವೇದಾಂಗಗಳು–೬ (ಶಿಕ್ಷಾ, ವ್ಯಾಕರಣ, ಛಂದಸ್, ನಿರುಕ್ತ, ಜ್ಯೋತಿಷ, ಕಲ್ಪ), ಮೀಮಾಂಸ, ನ್ಯಾಯ, ಪುರಾಣ, ಧರ್ಮಶಾಸ್ತ್ರಗಳು.

**೬. ಅಷ್ಟಾದಶ ವಿದ್ಯೆಗಳು:**

ಆಯುರ್ವೇದ, ಧನುರ್ವೇದ, ನೀತಿಶಾಸ್ತ್ರ, ಅರ್ಥಶಾಸ್ತ್ರ, ಧರ್ಮಶಾಸ್ತ್ರ,ನ್ಯಾಯ ಶಾಸ್ತ್ರ, ಮೀಮಾಂಸ, ಪುರಾಣಗಳು, ವೇದಗಳು–೪, ವೇದಾಂಗಗಳು–೬.

**೭. ಆಗಮ ಭೇದಗಳು:**

ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಜಗತಿ, ಅಂಶುಮಾನ, ಸುಪ್ರಭೇದ, ರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೊದ್ಗೀತ, ಲಲಿತ, ಸಂತಾನಕ, ಸಾರ್ವೋತ್ತಮ, ಪಾರಮೇಶ್ವರ, ಕಿರಣ, ಭೇದ, ವಾತೂಲ.

**೮. ಷಡ್ವಿಧ ಸಮಾಧಿಗಳು:**

ಬಾಹ್ಯ ದೃಶ್ಯಾನುವಿದ್ಧ ಸವಿಕಲ್ಪ, ಬಾಹ್ಯ ಶಬ್ದಾನುವಿದ್ಧ ಸವಿಕಲ್ಪ, ಅಂತರ್ದೃಶ್ಯಾನುವಿದ್ಧ ಸವಿಕಲ್ಪ, ಅಂತರ್ಶಬ್ದಾನುವಿದ್ಧ ಸವಿಕಲ್ಪ, ಬಾಹ್ಯ ನಿರ್ವಿಕಲ್ಪ, ಅಂತರ್ನಿರ್ವಿಕಲ್ಪ.

**೯. ಪಂಚ ಕ್ಲೇಶಗಳು:**

ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ.

**೧೦. ಅಷ್ಟ ಪಾಶಗಳು:**

ದಯೆ, ಜಿಗುಪ್ಸೆ, ಮೋಹ, ಭಯ, ಸಂಶಯ, ಕುಲ, ಬಲ, ಶೀಲ.

**೧೧. ಅಷ್ಟ ಕಷ್ಟಗಳು:**

ಋಣ, ಯಾಚನ, ವೃದ್ಧತ್ವ, ಜಾರತ್ವ, ಚೋರತ್ವ, ದರಿದ್ರ, ರೋಗ, ಭುಕ್ತಶೇಷ.

**೧೨. ಅಷ್ಟೈಶ್ವರ್ಯಗಳು:**

ಅಣಿಮ, ಮಹಿಮ, ಗರಿಮ, ಲಘಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ

**೧೩. ಸಾಧನ ಚತುಷ್ಟಯ:**

ನಿತ್ಯಾನಿತ್ಯವಸ್ತು ವಿವೇಕ, ಇಹಮುತ್ರಾರ್ಥಫಲಭೋಗ ವಿರಾಗ, ಶಮಾದಿ ಷಟ್ಕಸಂಪತ್ತಿ (ಶಮ, ದಮ, ಉಪರತಿ, ತಿತೀಕ್ಷ, ಶ್ರದ್ಧ, ಸಮಾಧಾನ) ಮೊಕ್ಷೇಚ್ಛ.

**೧೪. ಸಪ್ತವಿಧ ಬುದ್ಧಿ:**

ಪಂಡ, ಮೇಧ, ಚಾರ್ವಿ, ಚತ್ವ, ಗೃಹೀತಿ, ಶ್ರಾತಿ, ಪ್ರತಿಭ.

**೧೫. ಅಷ್ಟ ಮೂರ್ತಿಗಳು:**

ಪೃಥ್ವಿ, ಸಲಿಲ, ತೇಜಸ್, ವಾಯು, ಆಕಾಶ, ಸೂರ್ಯ, ಚಂದ್ರ, ಸೋಮಯಾಜಿ.

**೧೬. ಬಂಧತ್ರಯಗಳು:**

ಮೂಲ, ಉಡ್ಯಾಣ, ಜಲಂಧರ.

**೧೭. ಪಂಚ ಮುದ್ರೆಗಳು:**

ಖೇಚರಿ, ಭೂಚರಿ, ಮಧ್ಯಮ, ಷಣ್ಮುಖಿ, ಶಾಂಭವಿ.

**೧೮. ದಶ ನಾದಗಳು:**

ಚಿಣಿ, ಚಿಣಿಚಿಣಿ, ಘಂಟ, ಶಂಖ, ವೀಣ, ತಾಳ, ವೇಣು, ಭೇರಿ, ಮೃದಂಗ, ಮೇಘ ನಾದಗಳು.

**೧೯. ವಾಸನಾ ತ್ರಯಗಳು:**

ಲೋಕ ವಾಸನೆ, ಶಾಸ್ತ್ರ ವಾಸನೆ, ದೇಹ ವಾಸನೆ.

**೨೦. ಷಟ್ಕಮಲಗಳು:**

ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ

**೨೧. ಹದಿನಾಲ್ಕು ನಾಡಿಗಳು:**

ಇಡ, ಪಿಂಗಳ, ಸುಷುಮ್ನ, ಕುಹು, ಗಾಂಧಾರಿ, ಹಸ್ತಿಜಿಹ್ವ, ಪೂಷ, ಅಲಂಪೂಷ, ಶುಕ್ಲ, ಸರಸ್ವತಿ, ವಿಶ್ವೋದರಿ, ಪಯಸ್ವಿನಿ, ಶಂಕಿನಿ, ದಾಮಿನಿ.

**೨೨. ದಶ ಪ್ರಾಣಗಳು:**

ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ.

**೨೩. ದಶ ಪ್ರಾಣಗಳ ಬಣ್ಣಗಳು:**

ಇಂದ್ರನೀಲ, ಹರಿತ, ಮಿಂಚಿನ ಬಣ್ಣ, ಹಾಲಿನ ಬಿಳುಪು, ನೀಲಿ, ಹಳದಿ, ಬಿಳುಪು, ಕಾಡಿಗೆ, ಸ್ಫಟಿಕ, ಗಾಢ ನೀಲಿ.

**೨೪. ಜ್ಞಾನೇಂದ್ರಿಯಗಳು ಸಂಗ್ರಹಿಸುವ ಮಾಹಿತಿ:**

ಶ್ರವಣೇಂದ್ರಿಯ ದಿಂದ (ಕಿವಿಯಿಂದ): ಧ್ವನ್ಯಾತ್ಮಕ, ವರ್ಣಾತ್ಮಕ ಶಬ್ದ (ವಾದ್ಯ ಧ್ವನಿ, ಮಂತ್ರ ಪಠಣ) – ೨; ತ್ವಗಿಂದ್ರಿಯದಿಂದ (ಚರ್ಮದಿಂದ): ಮೃದು, ಕಠಿಣ, ಶೀತ, ಉಷ್ಣ, ಮಿಶ್ರಿತ – ೫; ನೇತ್ರೇಂದ್ರಿಯದಿಂದ (ಕಣ್ಣಿಂದ): ರಕ್ತ, ಶ್ವೇತ, ನೀಲ, ಪೀತ, ಹರಿತ, ಮಿಶ್ರಿತ – ೬; ರಸನೇಂದ್ರಿಯದಿಂದ (ನಾಲಿಗೆಯಿಂದ): ಉಪ್ಪು, ಹುಳಿ, ಸಿಹಿ, ಕಾರ, ಕಹಿ, ವಗರು – ೬; ಘ್ರಾಣೇಂದ್ರಿಯ ದಿಂದ (ಮೂಗಿಂದ): ಸುಗಂಧ, ದುರ್ಗಂಧ, ಮಿಶ್ರಿತ – ೩.

**೨೫. ಮೂವತ್ತಾರು ತತ್ತ್ವಗಳು:**

ಜ್ಞಾನೇಂದ್ರಿಯಗಳು (೫) : ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು. ಕರ್ಮೇಂದ್ರಿಯಗಳು (೫) : ಬಾಯಿ, ಕೈ, ಕಾಲು, ಗುದ, ಮರ್ಮಾಂಗ. ಪಂಚವಾಯುಗಳು (೫) : ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ. ಪಂಚ ವಿಷಯಗಳು (೫) : ಶಬ್ದ, ಸ್ಪರ್ಶ, ರೂಪ, ರಸ, ಗಂಧ. ಪಂಚ ಭೂತಗಳು (೫) : ನೆಲ, ಜಲ, ಬೆಂಕಿ, ಗಾಳಿ, ಗಗನ. ಅಂತಃಕರಣಗಳು (೪) : ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ. ಶರೀರ ತ್ರಯಗಳು (೩) : ಸ್ಥೂಲ, ಸೂಕ್ಷ್ಮ, ಕಾರಣ. ಅವಸ್ಥಾ ತ್ರಯಗಳು (೩) : ಜಾಗೃತ, ಸ್ವಪ್ನ, ಸುಷುಪ್ತ. ಮನೋವಿಕಾರ (೧) : ಅಜ್ಞಾನ.

**೨೬. ಸಾಷ್ಟಾಂಗ ನಮಸ್ಕಾರ:**

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ। ಪದ್ಭ್ಯಾಂ ಕರಾಭ್ಯಾಂ ಕರ್ಣಾಭ್ಯಾಂ। ಪ್ರಣಾಮೋಷ್ಟಾಂಗ ಮುಚ್ಯತೇ॥ (ಎದೆ, ತಲೆ, ಕಣ್ಣು, ಮನಸು, ಬಾಯಿ, ಪಾದ, ಹಸ್ತ, ಕಿವಿ– ಈ ಅಂಗಗಳ ಜೊತೆಗೂಡಿಸಿ ಪ್ರಣಾಮ ಮಾಡಿದರೆ ಅದು ಅಷ್ಟಾಂಗ ನಮಸ್ಕಾರವಾಗುತ್ತದೆ).

**೨೭. ಬಂಧನಗಳು:**

ದ್ರವ್ಯ ಪ್ರಜ್ಞ, ದೇವತಾ ಪ್ರಜ್ಞ, ಕ್ರಿಯಾ ಪ್ರಜ್ಞ

**೨೮. ನವವಿಧ ಲೋಕಗಳು:**

ಕರ್ತ, ಕ್ರಿಯ, ಹೇತು, ಜ್ಞಾತೃ, ಜ್ಞಾನ, ಜ್ಞೇಯ, ದ್ರಷ್ಟ,

ದರ್ಶನ, ದೃಶ್ಯ- ಇವುಗಳನ್ನೇ ನವವಿಧ ಸಂಸ್ಕಾರಗಳೆಂದು ಸಹ ಕರೆಯಲಾಗುತ್ತದೆ. ಇದನ್ನೇ ಅಂತರ ನವವಿಧ ಪ್ರಪಂಚವೆಂದು ಸಹ ಹೇಳುತ್ತಾರೆ.

**೨೯. ಜೀವ ವಿಕಾರಗಳು:**

ಹುಟ್ಟುವುದು, ಇರುವುದು, ಬೆಳೆಯುವುದು, ಮುದಿಯುವುದು, ಸವೆಯುವುದು, ಸಾಯುವುದು.

**೩೦. ಪ್ರಸ್ಥಾನತ್ರಯ:**

ಉಪನಿಷತ್ ಭಾಷ್ಯ, ಗೀತಾ ಭಾಷ್ಯ, ಸೂತ್ರ ಭಾಷ್ಯ.

**೩೧. ಅವಸ್ಥಾತ್ರಯ:**

ಜಾಗ್ರದಾವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತಾವಸ್ಥೆ.

**೩೨. ಶರೀರ ತ್ರಯ:**

ಸ್ಥೂಲ, ಸೂಕ್ಷ್ಮ, ಕಾರಣ.

**೩೩. ಪಂಚ ಪ್ರಳಯಗಳು:**

ನಿತ್ಯಪ್ರಳಯ, ನೈಮಿತ್ತಿಕ (ವಿಶೇಷ) ಪ್ರಳಯ, ದೈನಂದಿನ (ಬ್ರಹ್ಮನ ಹಗಲಲ್ಲಿ ಆಗುವ) ಪ್ರಳಯ, ಕಲ್ಪಾಂತ (ಬ್ರಹ್ಮಾಂತ) ಪ್ರಳಯ, ಮಹಾ ಪ್ರಳಯ.

**೩೪. ದ್ವಾದಶಾದಿತ್ಯರು:**

ವಿವಸ್ವಾನ್, ಆರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಶಕ್ರ, ಉರುಕ್ರಮ.

**೩೫. ಸಪ್ತ ಮಾರುತಗಳು:**

ಪ್ರವಹ, ಆವಹ, ಉದ್ವಹ, ಸಂವಹ, ನಿವಹ, ಪ್ರತಿವಹ, ಪರಾವಹ.

**೩೬. ನವ ಮೇಘಗಳು:**

ಆವರ್ತ, ಸಂವರ್ತ, ಪುಷ್ಕರ, ದ್ರೋಣ, ಕಾಲ, ನೀಲ, ಅರುಣ, ತಮೋ, ವಾರುಣ.

**೩೭. ಸಪ್ತ ಸಾಗರಗಳು:**

ಇಕ್ಷು (ಕಬ್ಬಿನ ಹಾಲು), ಕ್ಷೀರ (ಹಾಲು), ಘೃತ (ತುಪ್ಪ), ದಧಿ (ಮೊಸರು), ಜಲ (ನೀರು), ಲವಣ (ಉಪ್ಪು), ಸುರಾ (ಮದ್ಯ).

**೩೮. ಅಂತಃಕರಣಗಳು:**

ಚಿತ್ತ, ಅಹಂಕಾರ, ಮನಸ್ಸು, ಬುದ್ಧಿ.

**೩೯. ನಿರ್ಗುಣೋಪಾಸನದ ಅಂಗಗಳು:**

ಯಮ, ನಿಯಮ, ತ್ಯಾಗ, ಮೌನ, ಸುಖಾಸನ, ಸಿದ್ಧಾಸನ, ಮೂಲಬಂಧ, ದೇಹಸಾಮ್ಯ, ಯುನ್ಮನೀ, ದ್ರಷ್ಟ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಕೈವಲ್ಯನಿಷ್ಠೆ (ಸಮಾಧಿ).

**೪೦. ಬ್ರಹ್ಮವಿದ್ವರಿಷ್ಠ:**

ಯಾರಿಂದಲೂ ಮನಸ್ಸಿನ ಚಂಚಲತೆಯನ್ನು ಹೊಂದದೆ, ಅಂತರ ಬಾಹ್ಯ ಪ್ರಪಂಚವನ್ನು ಮರೆತು, ನಿರಂತರ ವೃತ್ತಿಶೂನ್ಯವಾದ ನಿಷ್ಠೆಯಲ್ಲಿದ್ದು, ಪರಿಪೂರ್ಣನು, ಪರಬ್ರಹ್ಮನಿಗಿಂತ ಭಿನ್ನವಲ್ಲದವನು, ಸರ್ವೋತ್ತಮನು, ಚಿದ್ರೂಪ ಪರಮಾತ್ಮನ ತೇಜಸ್ಸ್ವರೂಪನು ಆಗಿ ಪ್ರಕಾಶಿಸುವವನು.

**೪೧. ಚಿತ್ತವಿಕಾರಗಳು:**

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ದಂಬ, ದರ್ಪ, ಕುಹಕ, ಕ್ರೌರ್ಯ, ಶೌರ್ಯ, ಜಾಡ್ಯ, ರಾಗ, ದ್ವೇಷ, ಕಾರ್ಪಣ್ಯ, ನಿಂದಾ, ಸ್ತುತಿ, ಮಾನ, ಅವಮಾನ, ಈರ್ಷ್ಯೆ, ಅಸೂಯೆ, ನಿರ್ದಯೆ, ನಿಷ್ಠುರ, ಅಹಂಕಾರ, ವಾಕ್ಪಾರುಷ್ಯ (ಕಠಿನ ಮಾತು).

ಪಠ್ಯದಲ್ಲಿ ಸಂಖ್ಯೆಯ ಮೂಲಕ ಉಲ್ಲೇಖಿಸದ ಹೆಚ್ಚುವರಿ ಉಪಯುಕ್ತ ವಿಚಾರ:

**ಅ. ಅಷ್ಟ ಭೋಗಗಳು:**

ದಾಸ, ಭೃತ್ಯು, ಸುತ, ಬಂಧು, ವಸ್ತು, ವಾಹನ, ಧನ, ಧಾನ್ಯ

**ಆ. ಸರ್ವಜ್ಞತ್ವಾದಿ (ಮಾಯಾ) ಗುಣಗಳು:**

ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವ ಸ್ರಷ್ಟೃತ್ವ, ಸರ್ವ ಪಾಲಕತ್ವ, ಸರ್ವ ಸಂಹಾರಕತ್ವ, ಸರ್ವ ಭೋಕ್ತೃತ್ವ, ಸರ್ವನಿಯಂತೃತ್ವ, ಸರ್ವ ವ್ಯಾಪಕತ್ವ

**ಇ. ಶೌಚ ದ್ವಯ:**

ಬಾಹ್ಯ ಪರಿಶುದ್ಧತೆ, ಅಂತರ ಪರಿಶುದ್ಧತೆ.

**ಈ. ತ್ರಿವಿಧ ತಪಸ್ಸು:**

ಶಾರೀರಕ ತಪಸ್ಸು, ವಾಙ್ಮಯ ತಪಸ್ಸು, ಮಾನಸಿಕ ತಪಸ್ಸು.

**ಉ. ಸ್ವಾಧ್ಯಾಯ ತ್ರಯ:**

ವಾಚಿಕ, ಉಪಾಂಶು, ಮಾನಸಿಕ.

**ಊ. ಅಷ್ಟವಿಧ ಗುರುಗಳು:**

ಬೊಧಕ, ವೇದಕ, ನಿಸ್ಷಿದ್ಧ, ಕಾಮ್ಯಕ, ಸೂಚಕ, ವಾಚಕ, ಕಾರಣ, ವಿಹಿತ.

**ಋ. ಷಟ್ಕೋಶಗಳು:**

ಚರ್ಮ(ತ್ವಕ್), ಮಾಂಸ, ರಕ್ತ (ರುಧಿರ), ಕೊಬ್ಬು (ಮಜ್ಜ), ಮೂಳೆ(ಅಸ್ತಿ), ಸ್ನಾಯು.

**ೠ. ಷಡ್ವರ್ಣಗಳು:**

ರಕ್ತ, ಶ್ವೇತ, ನೀಲ, ಪೀತ, ಹರಿತ, ಮಿಶ್ರ

**ಎ. ಷಡ್ರಸಗಳು:**

ಉಪ್ಪು (ಲವಣ), ಹುಳಿ (ಆಮ್ಲ), ಸಿಹಿ (ಮಧುರ), ಕಾರ (ಕಟು), ಕಹಿ (...), ಒಗರು (ಕಷಾಯ).

**ಏ. ಕಾಲಗಣನೆ:**

ನಿಮೇಷ, ಕಾಷ್ಠ, ಕಳ, ಕ್ಷಣ, ಮುಹೂರ್ತ, ದಿನ, ಪಕ್ಷ, ಮಾಸ, ಋತು, ಅಯನ, ಸಂವತ್ಸರ, ಯುಗ, ಮಹಾಯುಗ, ಮನ್ವಂತರ, ಬ್ರಹ್ಮದಿನ.

❑❑

# ಶಾಬ್ದಿಕ ತರ್ಕ

– ಎಸ್. ಲಕ್ಷ್ಮೀದೇವಿ

ದ್ರಾವಿಡ ಭಾಷಾ ಮನೆತನದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿರುವ, ಅಷ್ಟೇ ಅಲ್ಲದೆ ಇತ್ತೀಚೆಗಷ್ಟೇ ತಮಿಳಿನ ನಂತರ ಶಾಸ್ತ್ರೀಯ ಸ್ಥಾನಮಾನಕ್ಕೆ ಪಾತ್ರವಾದ ಕನ್ನಡ ಭಾಷೆಯು ಅಧ್ಯಯನದ ದೃಷ್ಟಿಯಿಂದ ಹಾಗೂ ಅದರ ಆಳದ ನೆಲೆಯಿಂದ ಮಹತ್ತರವಾದ ಸ್ಥಾನವನ್ನು ಪಡೆದಿದೆ. ಇಂತಹ ಕನ್ನಡದ ಪ್ರಾಚೀನತೆಯು ಸುಮಾರು ೨೦೦೦ ವರ್ಷಗಳ ಹಿಂದಿನದೆಂದು ವಿದ್ವಾಂಸರ ಸಾಕ್ಷ್ಯಾಧಾರಗಳಿಂದ ತಿಳಿದುಬಂದಿದೆ.

"ಅಶೋಕನ ಬ್ರಹ್ಮಗಿರಿ ಶಿಲಾಶಾಸನದಲ್ಲಿ ಕ್ರಿಪೂ. ೨೫೨ರಲ್ಲಿ ಅಂದರೆ ಕ್ರಿಪೂ. ೩ನೇ ಶತಮಾನದಲ್ಲಿ ಕಂಡ 'ಇಸಿಲ' ಎಂಬ ಪದ ಕನ್ನಡದ ಪ್ರಾಚೀನತೆಯನ್ನು ಹೇಳುತ್ತದೆ. ಇದಲ್ಲದೆ ಮಹಾಕಾವ್ಯವಾದ 'ಮಹಾಭಾರತ'ದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಅನೇಕ ಮಾಹಿತಿಗಳಿವೆ. ರಾಷ್ಟ್ರಕೂಟರ ದೊರೆ ಅಮೋಘವರ್ಷ ನೃಪತುಂಗ ಇಲ್ಲವೆ ಶ್ರೀವಿಜಯ ವಿರಚಿತವೆಂದು ಹೇಳಲ್ಪಡುವ 'ಕವಿರಾಜಮಾರ್ಗ'ದಲ್ಲಿ 'ಕಾವೇರಿಯಿಂದ ಗೋದಾವರಿಯವರೆಗೆ ಇದ್ದ ನಾಡು ಕರುನಾಡು' ಎಂದು ಸೂಚಿಸಲ್ಪಟ್ಟರೆ, ೯ನೇ ಶತಮಾನದ ಶಿವಕೋಟ್ಯಾಚಾರ್ಯ ತನ್ನ 'ವಡ್ಡಾರಾಧನೆ'ಯ ಕಥೆಗಳಲ್ಲಿ ಕರುನಾಡಿನ ಸಾಮಾಜಿಕ, ಧಾರ್ಮಿಕ ಮತ್ತು ಆಡಳಿತಾತ್ಮಕ ವಿಚಾರಗಳ ಬಗ್ಗೆ ಮಾಹಿತಿ ನೀಡಿದ್ದಾನೆ.

ಇತ್ತೀಚೆಗಷ್ಟೇ ಕನ್ನಡದ ಪ್ರಾಚೀನತೆಯ ಬಗ್ಗೆ ಮಾತನಾಡುತ್ತಾ, ತಮಿಳಿನ ಭಾಷಾ ವಿದ್ವಾಂಸರಾದ ಡಾ. ಐರಾವತಂ ಮಹಾದೇವನ್, ಕ್ರಿಪೂ. ೨ನೇ ಶತಮಾನದಿಂದ ಕ್ರಿಶ. ೪ನೇ ಶತಮಾನದವರೆಗೆ ಹೇಗೆ ತಮಿಳು ಭಾಷೆಯ ಮೇಲೆ ಹಳಗನ್ನಡ ಪದಗಳ ಪ್ರಭಾವವಿದೆ ಎಂಬುದನ್ನು ಗುರುತಿಸಿದ್ದಾರೆ. ಅಲ್ಲದೆ ೨ನೇ ಶತಮಾನದ ಗ್ರೀಕ್ ದಾಖಲೆಗಳಲ್ಲೂ ಸಹಾ ಲೇಸು, ಆಡಿಸು, ಕುಡಿಸು, ಲಲ್ಲೆ ಮುಂತಾದ ಪದಗಳ ಬಳಕೆ ಇರುವುದನ್ನು ಕಾಣಬಹುದು. ಇದಲ್ಲದೆ, ಐಗುಪ್ತ ದೇಶದ ಭೂಗೋಲ ಶಾಸ್ತ್ರಜ್ಞ ಪ್ಟೊಲೆಮಿ ಬಳಸಿದ 'ಕಲ್ಲಿಗೇರಿಸ್' ಎಂಬ ಶಬ್ದದಲ್ಲಿ, ೨ನೇ ಶತಮಾನದ ಹಾಲನ 'ಗಾಥಾ ಸಪ್ತಶತಿ'ಯಲ್ಲಿ ಬಳಕೆಯಾದ 'ತುಪ್ಪ' ಮತ್ತು 'ಪೊಟ್ಟೆ' ಇತ್ಯಾದಿ ಪದಗಳಲ್ಲಿ, ತೊಲ್ಗಾಪ್ಪಿಯಂನಲ್ಲಿ 'ಅವ್ವೆಯಾರ್' ಬಳಸಿದ 'ಕರುನಾಟರ್' ಎಂಬ ಪದದ ಬಳಕೆಯಲ್ಲಿ ಕನ್ನಡದ ಪ್ರಾಚೀನತೆಯನ್ನು ಗುರುತಿಸ ಬಹುದಾಗಿದೆ."

"ಹೀಗೆ ಕನ್ನಡ ಸಂಸ್ಕೃತಿಯ ಭಾಗವಾಗಿರುವ ಕನ್ನಡ ಅಧ್ಯಯನವು ಕಾಲದಿಂದ ಕಾಲಕ್ಕೆ ಹೊಸ ತಿಳುವಳಿಕೆಯನ್ನು ತನ್ನ ತೆಕ್ಕೆಗೆ ಜೋಡಿಸಿಕೊಳ್ಳುತ್ತ ಬಂದಿದೆ. ಹೀಗಾಗಿ ವಿದೇಶಿ ಮತ್ತು ದೇಶಿ ವಿದ್ವಾಂಸರು ತೊಡಗಿಸಿಕೊಂಡ ಈ ವಿದ್ವತ್‌ಕ್ಷೇತ್ರದಲ್ಲಿ ಮುಂದಿನ ವಿದ್ವಾಂಸರು ಕಾಲದಿಂದ ಕಾಲಕ್ಕೆ ಹೊಸಬೆಳೆಯನ್ನು ತೆಗೆಯುತ್ತ ಬಂದಿದ್ದಾರೆ. ಕನ್ನಡ ಅಧ್ಯಯನ ಪಳೆಯುಳಿಕೆಯ ಶಾಸ್ತ್ರವಾಗದೆ, ಬದಲಾಗುತ್ತಿರುವ ಕಾಲಮಾನದಲ್ಲಿ ಎದುರಾಗುತ್ತಿರುವ ಆಹ್ವಾನಕ್ಕೆ ತಕ್ಕಂತೆ ತನ್ನ ಗತಿಯನ್ನು ಬದಲಾಯಿಸಿಕೊಳ್ಳುತ್ತ ಬಂದಿರುವುದು ಗಮನಿಸತಕ್ಕ ಅಂಶ. ಸಾಂಪ್ರದಾಯಿಕ ಚಿಂತನೆಗಳು ಆಧುನೀಕರಣದ ಈ ಕಾಲಘಟ್ಟದಲ್ಲಿ ಸಕಾಲಿಕಗೊಳ್ಳುವುದು ಅನಿವಾರ್ಯವಾಗಿದೆ. ಮಾಹಿತಿ ತಂತ್ರಜ್ಞಾನದ ಮೂಲಕ ಜಗತ್ತಿನ ಜ್ಞಾನಪ್ರವಾಗವೇ ನಮ್ಮ ಅಂಗೈಯೊಳಗೆ ಚುಳುಕಾಗುವ ಈ ಸಂದರ್ಭದಲ್ಲಿ ಕನ್ನಡದ ಚಹರೆ ಮತ್ತು ಕನ್ನಡ ಭಾಷೆಯ ಚಲನಶೀಲತೆಯನ್ನು ಶೋಧಿಸಲಿಕ್ಕೆ ಭಾಷಾ ಆಧುನೀಕರಣ ಮತ್ತು ಪ್ರಮಾಣೀಕರಣದ ಪ್ರಕ್ರಿಯೆಗಳ ನೆಲೆಯಲ್ಲಿ ಅಧ್ಯಯನದ ಹೊಸ ಸಾಧ್ಯತೆಗಳನ್ನು ಅನುಲಕ್ಷಿಸಿ, ಭಾಷಾನೀತಿ, ಭಾಷಾ ಯೋಜನೆ ರೂಪಿಸುವುದು ಅನಿವಾರ್ಯ ಹಾಗೂ ಅವಶ್ಯವಾಗಿದೆ. ಆಗ ಅಧ್ಯಯನದ ಸ್ವರೂಪ ಹಾಗೂ ಬಳಕೆಯ ವಿಧಾನದಲ್ಲಿ ಪರಿವರ್ತನೆ ಸಾಧ್ಯವಾಗುತ್ತದೆ.

ನಮ್ಮೆದುರು ನುಗ್ಗಿ ಬರುತ್ತಿರುವ ಜಾಗತೀಕರಣಕ್ಕೆ ಪ್ರತಿರೋಧವಾಗಿ ನಮ್ಮ ದೇಶೀಯ ಜ್ಞಾನಪರಂಪರೆಯನ್ನು ಮರುಶೋಧಿಸಿ ಆಮೂಲಕ ಕುಸಿಯುತ್ತಿರುವ ನಮ್ಮ ಬೇರುಗಳನ್ನು ಬಲಗೊಳಿಸಿಕೊಳ್ಳಬೇಕಾಗಿದೆ. ಭಾಷೆ, ಸಾಹಿತ್ಯ, ವ್ಯಾಕರಣ, ಛಂದಸ್ಸು, ಚರಿತ್ರೆ, ಕೃಷಿ, ವೈದ್ಯ, ಪರಿಸರ ಮುಂತಾದ ಅಧ್ಯಯನ ವಿಷಯಗಳನ್ನು ಹೊಸ

ಸಹಾಯಕ ಪ್ರಾಧ್ಯಾಪಕಿ, ಕನ್ನಡ ಭಾಷೆ ಮತ್ತು ಅನುವಾದ ವಿಭಾಗ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ.

ಆಲೋಚನೆಯ ನಲೆಯಲ್ಲಿ ವಿಶ್ಲೇಷಿಸಬೇಕಾಗಿದೆ. ಆಧುನಿಕ ವಿಜ್ಞಾನ, ತಂತ್ರಜ್ಞಾನವೇ 'ಜ್ಞಾನ' ಎಂದು ರೂಪಿಸಿರುವ ಇಂದಿನ ಆಲೋಚನೆಗೆ ಪ್ರತಿಯಾಗಿ ಈ ಜ್ಞಾನಶಾಖೆಗಳಲ್ಲಿ ಹುದುಗಿರುವ ದೇಶಿ ಪರಂಪರೆಯ ಜ್ಞಾನದ ಹುಡುಕಾಟ ನಡೆಯಬೇಕಾಗಿದೆ. ಅಂತಹ ಪ್ರಯತ್ನಗಳಿಗೆ ಬೇಕಾದ ಮಾರ್ಗದರ್ಶನ ಸೂತ್ರಗಳ ಹಾಗೂ ಆಕರ ಪರಿಕರಗಳ ನಿರ್ಮಾಣದ ನೆಲೆ ತುಂಬ ಮುಖ್ಯವಾಗಿದೆ.

ಇದೊಂದು ಚಲನಶೀಲ ಪ್ರಕ್ರಿಯೆಯಾಗಿದೆ. ಸಮಕಾಲೀನ ಭಾಷಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ಮುಖಾಮುಖಿಯಾಗುತ್ತ ಕನ್ನಡ ನಾಡುನುಡಿಯನ್ನು ಹೊಸದಾಗಿ ಶೋಧಿಸುತ್ತಾ, ವಿವರಿಸುತ್ತಾ ಬಂದಿದೆ. ಅಂದರೆ ಕನ್ನಡದ ಅರಿವಿನ ವಿಕೇಂದ್ರೀಕರಣವೇ ವರ್ತಮಾನದ ಹೊಸ ಬೆಳವಣಿಗೆ. ಇಂದು ಅನೇಕ ವಿಶ್ವವಿದ್ಯಾಲಯಗಳು ಈ ಕೆಲಸವನ್ನು ನಿರ್ವಹಿಸುತ್ತಿವೆ."

ಹೀಗೆ ಕನ್ನಡದ ಭಾಷೆ ಹಾಗೂ ವರ್ಣಮಾಲೆಗಳ ಬಳಕೆ ಕ್ರಿಸ್ತಪೂರ್ವದಿಂದಲೇ ಬಳಕೆಯಾಗುತ್ತಿತ್ತು ಎಂಬುದಕ್ಕೆ ನಮಗೆ ಅನೇಕ ಆಧಾರಗಳು ದೊರೆಯುತ್ತವೆ. ಇಂಥ ವರ್ಣಮಾಲೆಯನ್ನು ಬಳಸಿ ಅದೆಷ್ಟೋ ಕೆಲಸಗಳು ನಮ್ಮಲ್ಲಿ ಆಗುತ್ತಿವೆ. ಈ ವರ್ಣಮಾಲೆ ಕಾಲ ಕಳೆದಂತೆ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಅಸ್ತಿತ್ವದಲ್ಲಿದೆ.

ಇಂತಹ ಕನ್ನಡ ಭಾಷೆ ಮತ್ತು ಕನ್ನಡ ವರ್ಣಮಾಲೆಯನ್ನು ಬಳಸಿಕೊಂಡು ಬೋಧನಾ ತತ್ತ್ವಕ್ಕೆ ಅನುಗುಣವಾಗಿ ಮಕ್ಕಳ ಮನಸ್ಸನ್ನು ಸುಲಭವಾಗಿ ನಾಟುವ ಹಾಗೂ ವಿಭಿನ್ನ ರೀತಿಯಲ್ಲಿ ಮಕ್ಕಳಲ್ಲಿ ಶಾಬ್ದಿಕ ತರ್ಕವನ್ನು ಬೆಳೆಸುವ, ಒಂದು ವಿಶಿಷ್ಟ ಪ್ರಯೋಗಕ್ಕೆ ಕೈ ಹಾಕಲಾಗಿದೆ.

ಇದು ಕೇವಲ ಕನ್ನಡ ವರ್ಣಮಾಲೆಯನ್ನು ವಿಭಿನ್ನವಾಗಿ ಬಳಸುವ ಹಾಗೂ ಕನ್ನಡ ಭಾಷೆಯ ಉನ್ನತಿಗಾಗಿ ಅಥವಾ ಬಡ್ತಿಗಾಗಿ ನಡೆಸಿರುವ ಒಂದು ಪ್ರಯತ್ನವಷ್ಟೇ. ಕನ್ನಡ ವರ್ಣಮಾಲೆಯನ್ನು ಬಳಸಿ ರಚಿಸಿರುವ ಈ ಲೇಖನ ವಿದ್ವತ್ ಪ್ರಪಂಚಕ್ಕಲ್ಲ, ಸಾಮಾನ್ಯ ಜನರಿಗೆ.

ಇಲ್ಲಿ ರಚಿಸಲ್ಪಟ್ಟಿರುವ 'ವರ್ಬಲ್ ರೀಸನಿಂಗ್' ಕೇವಲ ವರ್ಣಮಾಲೆಯನ್ನಷ್ಟೇ ಬಳಸಿ ರಚಿಸಲ್ಪಟ್ಟಿರುವುದಿಲ್ಲ. ಇದನ್ನು ಮೀರಿ ಮುಂದೆ ಇದು ಅನೇಕ ಸಾಧ್ಯತೆಗಳನ್ನು ಪಡೆಯುತ್ತದೆ. ಅಲ್ಲದೆ ಅಂಥ ಸಾಧ್ಯತೆಗಳಿಗೆ ದಾರಿ ಮಾಡಿಕೊಡುತ್ತದೆ. ಇದು ಕೇವಲ ಒಂದು ಬಗೆಯ ಆಲೋಚನಾ ವಿಧಾನವಷ್ಟೇ, ಇಂತಹ ಅನೇಕ ಆಲೋಚನೆಗಳಿಗೆ ದೀವಿಗೆಯಷ್ಟೇ.

ಶಾಬ್ದಿಕ ತರ್ಕ (ವರ್ಬಲ್ ರೀಸನಿಂಗ್) ಎಂಬುದು ಬುದ್ಧಿಗೆ ಹಾಗೂ ಮಾನಸಿಕ ಜಾಗೃತಿಗೆ ಸಂಬಂಧಿಸಿದ ಸಂಗತಿ. ಭಾಷಾ ಘಟಕಗಳ ಸಾಹಚರ್ಯ ಹಾಗೂ ಸಂಬಂಧವನ್ನು ತಾರ್ಕಿಕವಾಗಿ ಗುರುತಿಸುವ ಕ್ರಿಯೆಗೆ ಇದನ್ನು ಸಂಬಂಧಿಸಬಹುದಾಗಿದೆ. ವಿವಿಧ ಘಟಕಗಳ ನಡುವಿನ ಸಾಮ್ಯ ಅಥವಾ ವೈಷಮ್ಯವನ್ನು ಗುರುತಿಸುವಲ್ಲಿ ಮನಸ್ಸನ್ನು ಕ್ರಿಯಾಶೀಲವಾಗಿಸುವ ಪ್ರಕ್ರಿಯೆ ಶಾಬ್ದಿಕ ತರ್ಕ. ಪರೀಕ್ಷೆಯ ಸಂದರ್ಭದಲ್ಲಿ ಅದರಲ್ಲಿಯೂ ವಸ್ತುನಿಷ್ಠ ಪರೀಕ್ಷೆಯಲ್ಲಿ ಶಾಬ್ದಿಕ ತರ್ಕ ಪ್ರಮುಖ ಪಾತ್ರ ವಹಿಸುತ್ತದೆ. ನಾಲ್ಕಾರು ಐಚ್ಛಿಕಗಳ ನಡುವಿನ ಸಂಬಂಧವನ್ನು ನಿರ್ಧರಿಸಿ ಉತ್ತರಿಸುವಲ್ಲಿ ಶಾಬ್ದಿಕ ತರ್ಕ ಸಮರ್ಥ ಸಾಧನವಾಗಿದೆ. ಸಂಬಂಧಗಳನ್ನು ಗುರುತಿಸುವಲ್ಲಿ ಖಚಿತತೆ ಅಗತ್ಯ. ತೀರ ಸಮೀಪ ಐಚ್ಛಿಕಗಳಲ್ಲಿ ಕರಾರುವಾಕ್ಕಾಗಿ ಸಂಬಂಧಿಸಿದ ಘಟಕವನ್ನು ಗುರುತಿಸುವಲ್ಲಿ ಮಾನಸಿಕ ಪ್ರಕ್ರಿಯೆಗೆ ತಯಾರಿ ಅತ್ಯಗತ್ಯ. ಬುದ್ಧಿಯನ್ನು ಚುರುಕುಗೊಳಿಸುವ ಶಾಬ್ದಿಕ ತರ್ಕ, ಅದರೊಂದಿಗೆ ಕನ್ನಡ ಭಾಷೆಯ ಅಕ್ಷರ ವ್ಯವಸ್ಥೆ, ಅವುಗಳ ಜೋಡಣೆ, ಕನ್ನಡ ಪದಗಳ ಪ್ರಜ್ಞೆಯನ್ನು ಉತ್ತೇಜಿಸುತ್ತದೆ

ಇಲ್ಲಿ ಪ್ರಮುಖವಾಗಿ ಐದು ಅಭ್ಯಾಸಗಳನ್ನು ನೀಡಲಾಗಿದೆ. ಈ ಅಭ್ಯಾಸಗಳೆಲ್ಲಾ ವರ್ಣಮಾಲೆ, ಸಂಖ್ಯೆ ಮತ್ತು ದೇಶ್ಯ-ಅನ್ಯದೇಶ್ಯ ಪದಗಳನ್ನು ಒಳಗೊಂಡಿದೆ. ಅವುಗಳನ್ನು ಸೂಕ್ಷ್ಮವಾಗಿ ಸ್ವರಗಳು, ಯೋಗವಾಹಗಳು, ವರ್ಗೀಯ, ಅವರ್ಗೀಯ ವ್ಯಂಜನಗಳು ಮತ್ತು ಗುಣಿತಾಕ್ಷರ ಅಥವಾ ಕಾಗುಣಿತಗಳೆಂದು ವಿಂಗಡಿಸಿಕೊಂಡು ಈ ಅಭ್ಯಾಸಗಳನ್ನು ರಚಿಸಲಾಗಿದೆ. ಇಲ್ಲಿಯೂ ಒಳ ವಿನ್ಯಾಸದಲ್ಲಿ ಬರುವ ಹ್ರಸ್ವಸ್ವರ, ದೀರ್ಘಸ್ವರ, ಅನುಸ್ವಾರ, ವಿಸರ್ಗ, ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕಗಳನ್ನು ಗಮನಿಸಿ ಅದನ್ನು ಬಳಸಿಕೊಳ್ಳುವಾಗ ಜತನ ವಹಿಸಲಾಗಿದೆ.

ಈ ಅಭ್ಯಾಸವನ್ನು,

೦೧. ಅಕ್ಷರ ಅಥವಾ ವರ್ಣಮಾಲೆ

೦೨. ದೇಶ್ಯ ಹಾಗೂ ಅನ್ಯದೇಶ್ಯ

೦೩. ಕಾಗುಣಿತ ಮತ್ತು ಸ್ವರ

೦೪. ಪುನರಾವೃತ್ತಿ ಮತ್ತು ಅಕ್ಷರಲೋಪ

೦೫. ಸಂಖ್ಯೆಗಳು ಮತ್ತು ಕಾಗುಣಿತ

ಹೀಗೆ ಐದು ಪ್ರಧಾನ ಭಾಗಗಳಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ಪ್ರತಿಭಾಗವೂ ೪ ಅಭ್ಯಾಸ ಪ್ರಶ್ನೆಗಳನ್ನು ಒಳಗೊಂಡಿದ್ದು, ಮುಂದೆ ಇದನ್ನು ಅಭ್ಯಾಸದ ಅನುಕೂಲಕ್ಕಾಗಿ ಮೊದಲಿಗೆ ಚರ್ಚಿಸುತ್ತಾ ಆನಂತರ ಅಭ್ಯಾಸವನ್ನು ಕ್ರಮವಾಗಿ ನೀಡಲಾಗಿದೆ. ವಿಶೇಷವಾಗಿ ದೇಶ್ಯ, ಅನ್ಯದೇಶ್ಯ ಪದಗಳು, ಕಾಗುಣಿತ ಮತ್ತು ಸ್ವರಗಳು, ಸಂಖ್ಯೆಗಳನ್ನು ಬಳಸಿ ಈ ಭಾಗಗಳು ರಚನೆಯಾಗಿವೆ. ಇದು ಬುದ್ಧಿವಂತ ವಿದ್ಯಾರ್ಥಿಗಳ ಭಾಷಾ ವಿಜ್ಞಾನ ಬೆಳೆಯಲು ಉಪಯುಕ್ತ ಅಂಶವಾಗಬಹುದು.

ವರ್ಣಮಾಲೆಯನ್ನು ಬಳಸಿ ಕನ್ನಡದಲ್ಲಿ ಒಂದು

ಹೊತ್ತಿಗೆಯನ್ನು ತಯಾರಿಸಿ, ಸ್ಪರ್ಧಾತ್ಮಕ ಪರೀಕ್ಷೆಗೆ ಅದನ್ನು ಸಾಧನ ಸಾಮಗ್ರಿಯಾಗಿ ಬಳಸುವ ಆಲೋಚನೆಯ ವಿಧಾನದ ಹಿನ್ನೆಲೆಯಲ್ಲಿ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಇದರಲ್ಲಿ ಕನ್ನಡ ವರ್ಣಮಾಲೆಯ ಸಾಧ್ಯತೆಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಆಡಳಿತಾತ್ಮಕವಾಗಿ ಇದು ಬಳಸಲ್ಪಟ್ಟರೆ ಇದರ ಸಾರ್ಥಕತೆ ಇದೆ. ಇದು ಒಂದು ಸಾಧನ ಸಾಮಗ್ರಿಯಾಗಿ ಮುಂದೆ ಬಳಸಲ್ಪಡುವ ಸಾಧ್ಯತೆಗಳು ಹೇರಳವಾಗಿದೆ.

ಇದರ ಮುಖ್ಯ ಗುರಿ ಕನ್ನಡ ಭಾಷೆಯಲ್ಲೇ ಕನ್ನಡ ಪತ್ರಿಕೆಯನ್ನು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಬಳಸುವುದು. ಮತ್ತು ಕನ್ನಡ ವರ್ಣಮಾಲೆಯ ಸಾಧ್ಯತೆಯನ್ನು ಮುಂದಿನ ಪೀಳಿಗೆಗೆ ತಿಳಿಸುವುದಾಗಿದೆ. ಯಾರು ಕನ್ನಡ ಭಾಷೆಯನ್ನು ಅರ್ಥೈಸಿಕೊಂಡು ಸ್ಪರ್ಧಾತ್ಮಕ ಪರೀಕ್ಷೆಯನ್ನು ಎದುರಿಸಲು ಪ್ರಯತ್ನಿಸುತ್ತಾರೋ ಅಂತಹ ವ್ಯಕ್ತಿಗಳಿಗೆ ಈ ಲೇಖನ.

ಭಾಷೆ ಬಹಳ ವಿಸ್ತಾರವಾದುದು, ಪ್ರಯೋಗಗಳು ಅಗಣಿತವಾದುದು. ಇಂದು ನಾವು ಇದನ್ನು ಎಲ್ಲ ವಲಯಗಳಲ್ಲಿ ಕನ್ನಡದ ಅನುಷ್ಠಾನದ ಮೂಲಕ ಉಳಿಸಿ, ಬೆಳೆಸಬೇಕಾಗಿದೆ. ಆಗ ಕನ್ನಡ ಸಂಸ್ಕೃತಿಯು ವಿಶ್ವಪ್ರಜ್ಞೆಯಾಗಿ ರೂಪಗೊಳ್ಳಲು ಸಾಧ್ಯವಾಗುತ್ತದೆ. 'ಕನ್ನಡದ್ದೇ ಮಾದರಿ'ಯ ಶೋಧ ಇಂದಿನ ಮತ್ತು ಬರುವ ದಿನಗಳ ತೀವ್ರ ಅಗತ್ಯವಾಗಿದೆ.

## ಅಕ್ಷರ ಅಥವಾ ವರ್ಣಮಾಲೆ

ಅ ಆ ಇ ಈ ಉ ಊ ಋ

ಎ ಏ ಐ ಒ ಓ ಔ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ

ಮೊದಲ ಭಾಗಕ್ಕೆ ಬಳಸಲಾದ ಈ ವರ್ಣಮಾಲೆಯನ್ನು ಡಾ॥ ಶಿ.ಚ. ನಂದಿಮಠರವರ 'ಕನ್ನಡ ವ್ಯಾಕರಣ ದರ್ಪಣ' ಕೃತಿಯಿಂದ ಆಯ್ಕೆಮಾಡಿಕೊಂಡು ಇಲ್ಲಿ ಬಳಸಿಕೊಳ್ಳಲಾಗಿದೆ.

ಇವುಗಳನ್ನು ತೆಗೆದುಕೊಂಡ ಸಂದರ್ಭದ ಹಿನ್ನೆಲೆಯಲ್ಲಿ ಅವುಗಳನ್ನು ಮೊದಲಿಗೆ ವಿಂಗಡಿಸಿಕೊಂಡು ತದನಂತರ ಸಂಯೋಜಿಸಲಾಗಿದೆ. ಈ ವಿಂಗಡಣೆಯನ್ನೂ ಭಾಷಾ ಶಾಸ್ತ್ರಕ್ಕೆ ಅಥವಾ ವ್ಯಾಕರಣಕ್ಕೆ ಅನುಗುಣವಾಗಿಯೇ ಮಾಡಲಾಗಿದೆ. ಅವು ಈ ಕೆಳಕಂಡಂತಿವೆ.

೧ – ೧೩ = ಸ್ವರಗಳು

೧೪ – ೧೫ = ಯೋಗವಾಹಗಳು

೧೬ – ೪೯ = ವ್ಯಂಜನಾಕ್ಷರಗಳು

(ಅವುಗಳಲ್ಲಿ ೧೬ – ೪೦ = ವರ್ಗೀಯ ವ್ಯಂಜನಗಳು, ೪೧ – ೪೯ = ಅವರ್ಗೀಯ ವ್ಯಂಜನಗಳು)

ಇವುಗಳನ್ನು ಕ್ರಮವಾಗಿ,

೧, ೩, ೫, ೭, ೮, ೧೧ = ಹ್ರಸ್ವ ಸ್ವರಗಳು

೨, ೪, ೬, ೯, ೧೦, ೧೨, ೧೩ = ದೀರ್ಘಸ್ವರಗಳು

೧೪, ೧೫ = ಅನುಸ್ವಾರ ಮತ್ತು ವಿಸರ್ಗ

೧೬, ೧೮, ೨೧, ೨೩, ೨೬, ೨೮, ೩೧, ೩೩, ೩೬, ೩೮ = ಅಲ್ಪಪ್ರಾಣಗಳು

೧೭, ೧೯, ೨೨, ೨೪, ೨೭, ೨೯, ೩೨, ೩೪, ೩೭, ೩೯ = ಮಹಾಪ್ರಾಣಗಳು

೨೦, ೨೫, ೩೦, ೩೫, ೪೦ = ಅನುನಾಸಿಕಗಳು

೪೧, ೪೨, ೪೩, ೪೪, ೪೫, ೪೬, ೪೭, ೪೮, ೪೯ = ಅವರ್ಗೀಯ ವ್ಯಂಜನಗಳು ಎಂದು ವಿಂಗಡಿಸಿ ಇಲ್ಲಿ ಬಳಸಿಕೊಳ್ಳಲಾಗಿದೆ.

ಈ ಮೇಲೆ ತಿಳಿಸಿದಂತೆ ಇವುಗಳಿಗೆ ಕ್ರಮವಾಗಿ ಸಂಖ್ಯೆಗಳನ್ನು ನೀಡುತ್ತಾ ಬರಲಾಗಿದೆ. ಅವು ಹೀಗಿವೆ.

ಅ = ೧ ಆ = ೨ ಇ = ೩ ಈ = ೪

ಉ = ೫ ಊ = ೬ ಋ = ೭ ಎ = ೮

ಏ = ೯ ಐ = ೧೦ ಒ = ೧೧ ಓ = ೧೨

ಔ = ೧೩ ಅಂ = ೧೪ ಅಃ = ೧೫

ಕ = ೧೬ ಖ = ೧೭ ಗ = ೧೮ ಘ = ೧೯ ಙ = ೨೦

ಚ = ೨೧ ಛ = ೨೨ ಜ = ೨೩ ಝ = ೨೪ ಞ = ೨೫

ಟ = ೨೬ ಠ = ೨೭ ಡ = ೨೮ ಢ = ೨೯ ಣ = ೩೦

ತ = ೩೧ ಥ = ೩೨ ದ = ೩೩ ಧ = ೩೪ ನ = ೩೫

ಪ = ೩೬ ಫ = ೩೭ ಬ = ೩೮ ಭ = ೩೯ ಮ = ೪೦

ಯ = ೪೧ ರ = ೪೨ ಲ = ೪೩ ವ = ೪೪ ಶ = ೪೫

ಷ = ೪೬ ಸ = ೪೭ ಹ = ೪೮ ಳ = ೪೯

ಪ್ರಸ್ತುತ ಅಕ್ಷರ ಅಥವಾ ವರ್ಣಮಾಲೆಯನ್ನು ಅನುಸರಿಸಿ ರಚಿಸಲ್ಪಟ್ಟ ಪ್ರಶ್ನೆಗಳಲ್ಲಿ ಗುಂಪಿಗೆ ಸೇರದ ಪದವನ್ನು ಗುರುತಿಸುವ ವಿಧಾನಕ್ಕೆ, ಈ ಕೆಳಗೆ ಸುಮಾರು ನಾಲ್ಕು ವಿಧಾನಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ಇಲ್ಲಿ ಉದಾಹರಿಸಲಾಗಿದೆ. ಅವು,

೧. a) ಟ ಡ b) ಥ ತ c) ಥ ಧ d) ನ ಫ e) ಬ ಭ

೨. a) ಟ ಳ b) ಠ ಹ c) ಡ ಷ d) ಧ ಶ e) ಣ ವ

೩. a) ಟ ಠ ಡ b) ಡ ಢ ಣ c) ಣ ತ ಥ d) ಥ ದ ನ e) ನ ಪ ಫ

೪. a) ಟ ಢ b) ಣ ಥ c) ದ ಪ d) ಫ ಮ e) ಯ ವ

ಮೇಲ್ಕಂಡ ಪ್ರಶ್ನೆಗಳಲ್ಲಿ ಒಟ್ಟು ಐದು ಒಳ ವಿಂಗಡಣೆಗಳು ಇದ್ದು ಅವುಗಳಲ್ಲಿ ಸಾಮಾನ್ಯವಾದ ಕೆಲವು ಅಂಶಗಳಿವೆ. ಒಟ್ಟಾರೆಯಾಗಿ ಅವುಗಳನ್ನು ಗಮನಿಸಿದಾಗ ಮಾತ್ರ ಗುಂಪಿಗೆ ಸೇರದ ಪದ ಯಾವುದೆಂಬುದರ ಅರಿವಾಗುತ್ತದೆ.

ಉದಾಹರಣೆಗೆ ಕ್ರಮಸಂಖ್ಯೆ ೧ ನ್ನು ತೆಗೆದುಕೊಳ್ಳಿ. ಇಲ್ಲಿ ಟ ಮತ್ತು ಡ ಗಳ ನಡುವೆ ಒಂದು ಅಕ್ಷರದ ಅಂತರವಿದೆ. ಟಡ, ಥತ, ಥಧ, ನಫ, ಇವುಗಳಲ್ಲಿ ಕ್ರಮವಾಗಿ ಠ, ಣ, ದ, ಪ, ಅಕ್ಷರಗಳನ್ನು ಕೈಬಿಡಲಾಗಿದೆ. ಆದರೆ ಈ ಕ್ರಮಕ್ಕೆ ಸೇರದ ಪದವೆಂದರೆ e) ಬ ಭ. ಏಕೆಂದರೆ ಇಲ್ಲಿ 'ಬ ಮ' ಎಂದಿರಬೇಕು. ಆದರೆ 'ಬಭ'ವನ್ನು ಒಂದು ಅಕ್ಷರದ ಅಂತರವಿಲ್ಲದಂತೆ ಕೊಟ್ಟು, ಅಂತರವಿಲ್ಲದಂತೆ ತೋರಿಸಲಾಗಿದೆ. ಹಾಗಾಗಿ ಇಲ್ಲಿ ಗುಂಪಿಗೆ ಸೇರದ ಪದ 'ಬಭ'.

ಕ್ರಮಸಂಖ್ಯೆ ೨ ರಲ್ಲಿ ಟ ಮತ್ತು ಳ ನಡುವೆ ೨೨ ಅಕ್ಷರಗಳ ಅಂತರವಿದೆ. ಅವು ಕ್ರಮವಾಗಿ ಕಡಮೆಯಾಗುತ್ತಾ ಹೋಗುತ್ತವೆ. ಇದನ್ನು ಕ್ರಮವಾಗಿ ಸಂಖ್ಯೆಯಲ್ಲಿಯೂ ಸೂಚಿಸಬಹುದು.

ಉದಾಹರಣೆಗೆ :

| | | | | |
|---|---|---|---|---|
| a) | ಟ | ೨೬ | ಳ | ೪೯ |
| ಹಾಗೆಯೇ, | | | | |
| b) | ಠ | ೨೭ | ಹ | ೪೮ |
| c) | ಡ | ೨೮ | ಷ | ೪೬ |
| d) | ಧ | ೨೯ | ಶ | ೪೫ |
| e) | ಣ | ೩೦ | ವ | ೪೪ |

ಇಲ್ಲಿ ಡ ೨೮ ಸ ೪೭ ಬಂದರಷ್ಟೇ ಸರಿ. ಆದರೆ ಇದನ್ನು ಗುಂಪಿಗೆ ಸೇರಿಸದೆ 'ಸ' ೪೭ ಬದಲಿಗೆ 'ಷ' ೪೬ರನ್ನು ನೀಡಲಾಗಿದೆ. ಆದ ಕಾರಣ c) ಡ ಷ ಗುಂಪಿಗೆ ಸೇರದ ಪದ.

ಇದರಂತೆಯೇ ಕ್ರಮಸಂಖ್ಯೆ ೩ರನ್ನು ಪರಿಶೀಲಿಸುವುದಾದರೆ ಇಲ್ಲಿ ಬಳಸಲ್ಪಟ್ಟಿರುವ ಎಲ್ಲಾ ಅಕ್ಷರಗಳು ಕ್ರಮವಾಗಿ ೩ ಅಕ್ಷರಗಳಿಂದ ಕೂಡಿದೆ. ಅವುಗಳಲ್ಲಿ ಅಂತರವಿಲ್ಲದಂತೆ ಎಲ್ಲಾ ಅಕ್ಷರಗಳೂ ಸಾಲಾಗಿ ಇದ್ದು ಕೊನೆಯ ಅಕ್ಷರವನ್ನು ಎರಡನೇ ಒಳವರ್ಗದಲ್ಲಿ ಮತ್ತೆ ಸೇರಿಸಲಾಗಿದೆ.

| | | |
|---|---|---|
| a) | ಟ ಠ ಡ = | ೨೬, ೨೭, ೨೮. |
| b) | ಡ ಢ ಣ = | ೨೮, ೨೯, ೩೦. |
| c) | ಣ ತ ಥ = | ೩೦, ೩೧, ೩೨. |
| d) | ಥ ದ ನ = | ೩೨, ೩೩, ೩೫. |
| e) | ನ ಪ ಫ = | ೩೫, ೩೬, ೩೭. |

ಇವುಗಳು ಕ್ರಮವಾಗಿ ಹೀಗೆ ಬಂದಿವೆ.

ಇಲ್ಲಿ ಗುಂಪಿಗೆ ಸೇರದ ಪದ d) ಥ ದ ನ. ಕಾರಣ ಥ ದ ಧ ಎಂದಿರಬೇಕಾದ ಸ್ಥಳದಲ್ಲಿ 'ಧ' ಬದಲಿಗೆ 'ನ' ವನ್ನು ಬಳಸಲಾಗಿದೆ. ಹಾಗಾಗಿ ಇದು ಗುಂಪಿಗೆ ಸೇರದ ಪದ.

ಕೊನೆಯದಾಗಿ ೪ನೇ ಉದಾಹರಣೆಯಲ್ಲಿ

| | | | | |
|---|---|---|---|---|
| a) ಟ | ಢ | = | ೨೬, | ೨೯. |
| b) ಣ | ಥ | = | ೩೦, | ೩೨. |
| c) ದ | ಪ | = | ೩೩, | ೩೬. |
| d) ಫ | ಮ | = | ೩೭, | ೪೦. |
| e) ಯ | ವ | = | ೪೧, | ೪೪. |

ಗಳನ್ನು ಕ್ರಮವಾಗಿ ತೆಗೆದುಕೊಳ್ಳಲಾಗಿದೆ.

ಇಲ್ಲಿ ಎರಡು ಅಕ್ಷರಗಳ ಅಂತರವನ್ನು ಕಾಣಬಹುದು. ಕ್ರಮವಾಗಿ ಟಢ, ದಪ, ಫಮ, ಯವ, ಇವುಗಳು ಎರಡು ಅಕ್ಷರದ ಅಂತರವನ್ನು ಒಳಗೊಂಡಿದ್ದರೆ, ಒಳವರ್ಗ, b) ಣ ಥ ಕೇವಲ ಒಂದು ಅಕ್ಷರದ ಅಂತರವನ್ನಷ್ಟೇ ಒಳಗೊಂಡಿದೆ. ಉದಾಹರಣೆಗೆ 'ಣ ದ' ಇರಬೇಕಾದಲ್ಲಿ 'ಣ ಥ' ಎಂದಿದೆ. ಹಾಗಾಗಿ ಇದು ಗುಂಪಿಗೆ ಸೇರದ ಪದ.

ಹೀಗೆ ಈ ಅಭ್ಯಾಸದಲ್ಲಿ ಅಕ್ಷರ ಅಥವಾ ವರ್ಣಮಾಲೆಯನ್ನು ಅನುಸರಿಸಿ ಗುಂಪಿಗೆ ಸೇರದ ಪದವನ್ನು ರಚಿಸಲಾಗಿದೆ. ಒಟ್ಟಾರೆಯಾಗಿ ಅ ಯಿಂದ ಳ ವರೆಗಿನ ವರ್ಣಮಾಲೆಯ ಸಹಾಯದಿಂದ ಇದನ್ನು ರಚಿಸಲಾಗಿದೆ.

## ದೇಶ್ಯ ಹಾಗೂ ಅನ್ಯದೇಶ್ಯ

ಈ ಎರಡನೇ ಭಾಗವನ್ನು ದೇಶ್ಯ ಹಾಗೂ ಅನ್ಯದೇಶ್ಯ

ಶಬ್ದಗಳನ್ನು ಅನುಸರಿಸಿ ರಚಿಸಲಾಗಿದೆ. ಯಾವುದೇ ದೇಶದ ಭಾಷೆಯಾಗಲಿ ಅದು ತನ್ನ ಸುತ್ತಮುತ್ತಲ ಬೇರೆ ಬೇರೆ ಭಾಷೆಗಳ ಸಂಬಂಧವನ್ನು ಪಡೆಯುತ್ತಾ, ಆಯಾಯ ಭಾಷೆಯ ಶಬ್ದಗಳನ್ನು ತನ್ನಲ್ಲಿ ಸೇರಿಸಿಕೊಂಡು ಬೆಳೆಯುತ್ತಿದೆ. ಕನ್ನಡ ಭಾಷೆಯಲ್ಲೂ ಇಂಥ ಅನೇಕ ಶಬ್ದಗಳು ಸೇರಿವೆ.

ಹೀಗೆ ಕೊಡುಕೊಳ್ಳುವ ವ್ಯವಹಾರ ಇಂದಿಗೂ ಹೊಸತೇನಲ್ಲ, ಹಳೆಯ ಬೇರಲ್ಲಿ ಹೊಸ ಚಿಗುರನ್ನು ಕಾಣುವ ಪ್ರಯತ್ನ ಇಂದಿಗೂ ನಿರಂತರವಾಗಿ ನಡೆದಿದೆ. ಈ ಭಾಗದಲ್ಲಿ ಇಂತಹ ಒಂದು ಪ್ರಯತ್ನಕ್ಕೆ ಕೈ ಹಾಕಲಾಗಿದೆ. ಇಲ್ಲಿನ ಮೊದಲ ನಾಲ್ಕು ಪ್ರಶ್ನೆಗಳಲ್ಲಿ ನಾಲ್ಕು ಬಗೆಯ ಉದಾಹರಣೆಗಳಿವೆ.

ಒಟ್ಟು ನಾಲ್ಕು ಪ್ರಶ್ನೆಗಳುಳ್ಳ ಈ ಭಾಗಗಳಲ್ಲಿ ತಲಾ ಪ್ರಶ್ನೆಗಳೂ ನಾಲ್ಕು ಬಗೆಯಲ್ಲಿ ಅಂದರೆ ಮೊದಲ ಪ್ರಶ್ನೆ ಸಂಸ್ಕೃತ – ಕನ್ನಡದಲ್ಲಿ ಎರಡನೇ ಪ್ರಶ್ನೆ ಹಿಂದೂಸ್ಥಾನಿ–ಕನ್ನಡದಲ್ಲಿ, ಮೂರನೇ ಪ್ರಶ್ನೆ ಇಂಗ್ಲಿಷ್ – ಕನ್ನಡದಲ್ಲಿ ಹಾಗೂ ನಾಲ್ಕನೇ ಪ್ರಶ್ನೆ ಹೊಸಗನ್ನಡ–ಹಳಗನ್ನಡದಲ್ಲಿದೆ. ಪ್ರತಿ ಪ್ರಶ್ನೆಯೂ ಐದು ಒಳ ವಿಂಗಡನೆಯನ್ನು ಹೊಂದಿದೆ. ಅವುಗಳಲ್ಲಿ ನಾಲ್ಕು ಉತ್ತರಗಳು ಸರಿಯಾಗಿದ್ದು ಒಂದು ತಪ್ಪಾದ ಉತ್ತರವಿರುತ್ತದೆ.

ಮೊದಲ ಪ್ರಶ್ನೆಯಲ್ಲಿ ಸಾಮಾನ್ಯವಾಗಿ ಎಲ್ಲಾ ಪದಗಳು ಸಂಸ್ಕೃತ ಪದಗಳಾಗಿದ್ದು ಕೇವಲ ಒಂದು ಪದವಷ್ಟೇ ಕನ್ನಡದ ಪರವಾಗಿದ್ದು ಅದು ಗುಂಪಿಗೆ ಸೇರದ ಪದವಾಗಿದೆ. ಮೊದಲ ಪ್ರಶ್ನೆಯನ್ನು ಉದಾಹರಣೆಗೆ ತೆಗೆದುಕೊಂಡರೆ..

a) ನಕ್ಷತ್ರ b) ಆವು c) ಅನ್ನ d) ತೀರ್ಥ

e) ವಿದ್ಯಾರ್ಥಿ

ಇಲ್ಲಿ a) c) d) e) ಸಂಸ್ಕೃತ ಪದಗಳಾಗಿದ್ದು b) 'ಆವು' ಒಂದೇ ಕನ್ನಡ ಪದವಾಗಿದೆ. ಹಾಗಾಗಿ ಇದು ಗುಂಪಿಗೆ ಸೇರದ ಪದ.

ಎರಡನೇ ಪ್ರಶ್ನೆಯಲ್ಲಿ ಎಲ್ಲಾ ಪದಗಳು ಹಿಂದೂಸ್ಥಾನಿ ಪದಗಳೇ ಆಗಿದ್ದು ಗುಂಪಿಗೆ ಸೇರದ ಪದ ಕನ್ನಡದ್ದಾಗಿದೆ. ಉದಾಹರಣೆಗೆ :

a) ಅಸಲಿ b) ಬದಲ್ c) ಕರು

d) ನಕಲಿ e) ತಯಾರ್

ಇಲ್ಲಿ c) ಕರು ಕನ್ನಡದ ಪದ, ಉಳಿದಂತೆ ಎಲ್ಲವೂ ಹಿಂದೂಸ್ಥಾನಿ ಪದಗಳಾಗಿವೆ. ಹಾಗಾಗಿ 'c', ಗುಂಪಿಗೆ ಸೇರದ ಪದವಾಗಿದೆ.

ಇದರಂತೆಯೇ ಪ್ರಶ್ನೆ ಮೂರರಲ್ಲಿ ಎಲ್ಲಾ ಪದಗಳೂ ಇಂಗ್ಲಿಷ್ ಪದಗಳಾಗಿದ್ದು ಗುಂಪಿಗೆ ಸೇರದ ಪದ ಕನ್ನಡವಾಗಿದೆ. ಉದಾಹರಣೆಗೆ :

a) ಫೀಸ್ b) ಆಸಿಡ್ c) ಲೈಟ್ d) ನೆರೆ

e) ಪೆಟ್ರೋಲ್

ಇಲ್ಲಿ d) ನೆರೆ ಎಂಬುದು ಕನ್ನಡದ ಪದ. ಉಳಿದಂತೆಲ್ಲವೂ ಇಂಗ್ಲಿಷ್ ಭಾಷೆಯಿಂದ ಬಂದ ಪದಗಳೇ ಆಗಿವೆ.

ಆದರೆ ನಾಲ್ಕನೇ ಪ್ರಶ್ನೆಯಲ್ಲಿ, ವಿಶೇಷವಾಗಿ ಹೊಸಗನ್ನಡ ಪದಗಳನ್ನು ಕೊಟ್ಟು ಗುಂಪಿಗೆ ಸೇರದ ಪದವಾಗಿ ಹಳಗನ್ನಡ ಪದವನ್ನು ನೀಡಲಾಗಿದೆ. ಉದಾಹರಣೆಗೆ :

a) ತುರು b) ಆಕಳು c) ಸೇರು d) ಬೆಲ್ಲ e) ಪಣ್

ಇಲ್ಲಿ e) ಪಣ್ ಗುಂಪಿಗೆ ಸೇರದ ಪದ. ಕಾರಣ ಹಳಗನ್ನಡದಲ್ಲಿನ ಅನೇಕ ಪದಗಳು, ಶಬ್ದಗಳು ಈಗಿನ ಹೊಸಗನ್ನಡಕ್ಕೆ ರೂಪಾಂತರ ಹೊಂದಿ ಪ್ರಯೋಗಗೊಳ್ಳುತ್ತಿವೆ. ಅಂತಹ ಪದಗಳನ್ನು ಗುರುತಿಸಿ ಇಲ್ಲಿ ಹಳಗನ್ನಡ ರೂಪವನ್ನು ನೀಡಲಾಗಿದೆ. ಹೀಗೆ ಸಂಸ್ಕೃತ. ಹಿಂದೂಸ್ಥಾನಿ ಇಂಗ್ಲಿಷ್ ಮತ್ತು ಹೊಸಗನ್ನಡ ಪದಗಳಲ್ಲಿ ಕನ್ನಡ ಮತ್ತು ಹಳಗನ್ನಡ ಪದಗಳನ್ನು ಬೆರೆಸಿ ಗುಂಪಿಗೆ ಸೇರದ ಪದಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

### ಕಾಗುಣಿತ ಮತ್ತು ಸ್ವರ

ಈ ಮೂರನೇ ಭಾಗವನ್ನು ಕಾಗುಣಿತ ಮತ್ತು ಸ್ವರಗಳನ್ನು ಅನುಕರಿಸಿ ರಚಿಸಲಾಗಿದೆ.

ಕಾಗುಣಿತದಲ್ಲಿ ಕೇವಲ 'ಕ' ವರ್ಗ ಮತ್ತು 'ಚ' ವರ್ಗಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಅಂದರೆ

**ಕ ಕಾ ಕಿ ಕೀ ಕು ಕೂ ಕೃ ಕೆ ಕೇ ಕೈ ಕೊ ಕೋ ಕೌ ಕಂ ಕಃ**

**ಖ ಖಾ ಖಿ ಖೀ ಖು ಖೂ ಖೃ ಖೆ ಖೇ ಖೈ ಖೊ ಖೋ ಖೌ ಖಂ ಖಃ**

**ಗ ಗಾ ಗಿ ಗೀ ಗು ಗೂ ಗೃ ಗೆ ಗೇ ಗೈ ಗೊ ಗೋ ಗೌ ಗಂ ಗಃ**

**ಘ ಘಾ ಘಿ ಘೀ ಘು ಘೂ ಘೃ ಘೆ ಘೇ ಘೈ ಘೊ ಘೋ ಘೌ ಘಂ ಘಃ**

**ಚ ಚಾ ಚಿ ಚೀ ಚು ಚೂ ಚೃ ಚೆ ಚೇ ಚೈ ಚೊ ಚೋ ಚೌ ಚಂ ಚಃ**

**ಛ ಛಾ ಛಿ ಛೀ ಛು ಛೂ ಛೃ ಛೆ ಛೇ ಛೈ ಛೊ ಛೋ ಛೌ ಛಂ ಛಃ**

**ಜ ಜಾ ಜಿ ಜೀ ಜು ಜೂ ಜೃ ಜೆ ಜೇ ಜೈ ಜೊ ಜೋ ಜೌ ಜಂ ಜಃ**

**ಝ ಝಾ ಝಿ ಝೀ ಝು ಝೂ ಝೃ ಝೆ ಝೇ ಝೈ ಝೊ ಝೋ ಝೌ ಝಂ ಝಃ**

ಹಾಗೂ ಸ್ವರ & ಯೋಗವಾಹಗಳಾದ

ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ ಅಂ ಅಃ

ಇವುಗಳನ್ನು ಪರಿಗಣಿಸಿ ರಚಿಸುವಾಗ ಙ ಮತ್ತು ಞ ಗಳನ್ನು ಕೈ ಬಿಡಲಾಗಿದೆ. ಇದು ಕಾಗುಣಿತದಲ್ಲಿ ಬಳಕೆಯಲ್ಲಿ ಇಲ್ಲ. ಕೇವಲ ವ್ಯಂಜನಾಕ್ಷರಗಳಲ್ಲಿ ಮಾತ್ರ ಬಳಕೆಯಲ್ಲಿದೆ.

ಎಂದಿನಂತೆ ಇಲ್ಲೂ ನಾಲ್ಕುಪ್ರಶ್ನೆಗಳು. ಅವು ಕ್ರಮವಾಗಿ ೫ ಉಪವರ್ಗಗಳನ್ನು ಅಥವಾ ಒಳ ವಿಭಾಗಗಳನ್ನು ಒಳಗೊಂಡಿದೆ.

ಇಲ್ಲಿಯ ಮೊದಲ ಪ್ರಶ್ನೆಯನ್ನು ತೆಗೆದುಕೊಂಡಾಗ ಕಾಗುಣಿತ ಇಲ್ಲಿ ಕ್ರಮ ತಪ್ಪದಂತೆ ಬಂದಿದೆ.

ಉದಾಹರಣೆಗೆ : a) ಕ ಕಾ b) ಕಿ ಕೀ c) ಕು ಕೂ d) ಕೃ ಅ e) ಕೆ ಕೇ.

ಇಲ್ಲಿ ಗುಂಪಿಗೆ ಸೇರದ ಗುಚ್ಛ d), ಕಾರಣ ಇಲ್ಲಿ ಕಾಗುಣಿತದ ನಡುವೆ ಸ್ವರ ಮೂಡಿದ್ದು ಅದು ಗುಂಪಿಗೆ ಸೇರದ ಗುಚ್ಛವಾಗಿದೆ. ಅಂದರೆ d) ಕೃ ಕೆ ಎಂದಿರಬೇಕು. ಇಲ್ಲಿ ಕೃ, ಅ ಎಂದು ನೀಡಲಾಗಿದೆ. ಹಾಗಾಗಿ ಕಾಗುಣಿತದ ನಡುವೆ ಸ್ವರ ಬಂದಿದೆ. ಆದ್ದರಿಂದ ಶೀರ್ಷಿಕೆಯಲ್ಲಿ ಇರುವಂತೆ ಕಾಗುಣಿತ ಮತ್ತು ಸ್ವರ ಹಾಗೂ ಯೋಗವಾಹಗಳನ್ನು ಬಳಸಿ ಇಲ್ಲಿ ಗುಂಪಿಗೆ ಸೇರದ ಗುಚ್ಛವನ್ನು ನೀಡಲಾಗಿದೆ. ಇದು ಪ್ರತಿ ಭಾಗದ ಮೊದಲ ಪ್ರಶ್ನೆಯ ಸ್ವರೂಪವಾಗಿದೆ.

ಅಂತೆಯೇ ೨ನೇ ಪ್ರಶ್ನೆಯಲ್ಲಿ, ಕಾಗುಣಿತದ ಮೊದಲ ಅಕ್ಷರ ಪುನರಾವೃತ್ತಿಯಾಗಿ ಅನಂತರ ಎರಡನೇ ಅಕ್ಷರ ಮೂಡಿ ಬರುತ್ತದೆ.

ಉದಾಹರಣೆಗೆ : a) ಕ ಕ ಕಾ b) ಕಾ ಕಾ ಕಿ c) ಕಿ ಕಿ ಕೀ d) ಕೀ ಕೀ ಕು e) ಕು ಕು ಉ

ಇಲ್ಲಿ 'ಕ' ನಂತರ 'ಕ' ಎಂದು ಎರಡು ಸಾರಿ ಪುನರಾವೃತ್ತಿಯಾಗಿದೆ. ಅನಂತರ ಎರಡನೇ ಅಕ್ಷರ 'ಕಾ' ಮೂಡಿ ಬಂದಿದೆ. ಹೀಗೆ ಪ್ರತಿಭಾಗದ ಎರಡನೇ ಸಾಲು ರಚಿಸಲ್ಪಟ್ಟಿದೆ. ಇಲ್ಲಿ ಗುಂಪಿಗೆ ಸೇರದ ಪದ ಇ). ಇಲ್ಲಿ ಕು ಕು ಉ ಎಂದಿದೆ. 'ಉ' ಸ್ವರಾಕ್ಷರ. ಕಾಗುಣಿತದಲ್ಲಿ 'ಉ' ಸ್ವರಮೂಡಿ ಬಂದಿರುವುದರಿಂದ ಇದು ಗುಂಪಿಗೆ ಸೇರದ ಗುಚ್ಛ

ಇನ್ನುಳಿದಂತೆ ಮೂರನೇ ಪ್ರಶ್ನೆಯಲ್ಲಿ ಪ್ರತೀ ಒಳವರ್ಗದ ಕೊನೆಯ ಅಕ್ಷರ ಮುಂದಿನ ವರ್ಗದ ಮೊದಲ ಅಕ್ಷರವಾಗಿ ಪುನರಾವೃತ್ತಿಯಾಗಿ ಅನಂತರ ಸ್ವರಗಳನ್ನು ಒಳಗೊಳ್ಳುತ್ತದೆ. ಉದಾಹರಣೆಗೆ :

a) ಕ ಕಾ ಕಿ b) ಕಿ ಕೀ ಕು c) ಕು ಕೂ ಕೃ

d) ಕೃ ಕೆ ಕೇ e) ಕೇ ಕೈ ಐ

ಇಲ್ಲಿ ಗುಂಪಿಗೆ ಸೇರದ ಗುಚ್ಛ e). ಕಾರಣ ಕೇ ಕೈ ಕೊ ಎಂದಿರಬೇಕಾದಲ್ಲಿ ಕೇ ಕೈ ಐ ಎಂದಿದೆ. 'ಐ' ಸ್ವರಾಕ್ಷರ. ಹಾಗಾಗಿ ಇಲ್ಲಿ ಗುಂಪಿಗೆ ಸೇರದ ಗುಚ್ಛ ಇ

ಇನ್ನು ನಾಲ್ಕನೇ ಪ್ರಶ್ನೆಯಲ್ಲಿ ಕಾಗುಣಿತದ ಪ್ರತೀ ಅಕ್ಷರವೂ ದ್ವಿಗುಣವಾಗುತ್ತಾ ಹೋಗುತ್ತದೆ. ಉದಾಹರಣೆಗೆ :

a) ಕ ಕ ಕಾ ಕಾ b) ಕಿ ಕಿ ಕೀ ಕೀ

c) ಕು ಕು ಕೂ ಉ d) ಕೃ ಕೃ ಕೆ ಕೆ

e) ಕೇ ಕೇ ಕೈ ಕೈ

ಇಲ್ಲಿ ಪ್ರತಿ ಒಳವರ್ಗದ ಪ್ರತಿ ಅಕ್ಷರವೂ ದ್ವಿಗುಣಗೊಂಡಿದೆ. ಆದರೆ c) ಮಾತ್ರ ಕು ಕು ಕೂ ಉ ಎಂದಿದೆ. ಇಲ್ಲಿ 'ಉ' ಸ್ವರಾಕ್ಷರ. ಇಲ್ಲಿ ಕು ಕು ಕೂ ಕೂ ಎಂದಿರಬೇಕು. ಆದರೆ 'ಕೂ' ಬದಲಿಗೆ 'ಊ' ಎಂದು ನೀಡಿ ಅದನ್ನು ಗುಂಪಿಗೆ ಸೇರದ ಗುಚ್ಛವನ್ನಾಗಿಸಲಾಗಿದೆ.

ಒಟ್ಟಿನಲ್ಲಿ ಈ III ನೇ ಭಾಗವನ್ನು ಕಾಗುಣಿತ ಮತ್ತು ಸ್ವರ ಹಾಗೂ ಯೋಗವಾಹಗಳನ್ನು ಬಳಸಿ ರಚಿಸಲಾಗಿದೆ. ಗುಂಪಿಗೆ ಸೇರದ ಪದ ಗುರುತಿಸುವಾಗ ಶೀರ್ಷಿಕೆ ಗಮನಿಸುವುದು ಅತೀ ಅವಶ್ಯಕ.

### ಪುನರಾವೃತ್ತಿ ಮತ್ತು ಅಕ್ಷರಲೋಪ

ಈ ನಾಲ್ಕನೇ ಭಾಗವನ್ನು ಪುನರಾವೃತ್ತಿ ಮತ್ತು ಅಕ್ಷರ ಲೋಪಗಳನ್ನು ಗಮನಿಸಿ ರಚಿಸಲಾಗಿದೆ. ಒಟ್ಟು ನಾಲ್ಕು ಪ್ರಶ್ನೆಗಳಿದ್ದು, ಪ್ರತಿ ಒಳವಿಂಗಡನೆಯೂ ಐದು ಅಕ್ಷರಗಳ ಗುಚ್ಛವನ್ನು ಒಳಗೊಂಡಿದೆ.

ಉದಾ : a, b, c, d, e.

ಈ ಐದು ಅಕ್ಷರ ಗುಚ್ಛಗಳಲ್ಲಿ ನಾಲ್ಕು ಒಂದೇ ರೀತಿಯಲ್ಲಿದ್ದು ಅಥವಾ ಸರಿಯಾಗಿರುವ ಉತ್ತರವಾಗಿದ್ದು ಉಳಿದಂತೆ ಒಂದು ತಪ್ಪಾಗಿರುವ ಉತ್ತರವಾಗಿರುತ್ತದೆ. ಹೀಗೆ ಪ್ರತಿ ಭಾಗದಲ್ಲಿನ ಮೊದಲ ಪ್ರಶ್ನೆಗಳು 'ಕ' ವರ್ಗಕ್ಕೆ ಸೇರಿದವು, ಅಂತೆಯೇ ಪ್ರತಿ ಭಾಗದ ಎರಡನೆಯ ಸಾಲು 'ಚ' ವರ್ಗಕ್ಕೆ, ಮೂರನೇ ಸಾಲು 'ಟ' ವರ್ಗಕ್ಕೆ ಹಾಗೂ ನಾಲ್ಕನೇ ಸಾಲು 'ತ' ವರ್ಗಕ್ಕೆ ಸೇರಿದವು.

ಹೀಗೆ ರಚಿಸಲ್ಪಟ್ಟ ಈ ಮಾದರಿಯಲ್ಲಿ ಕಾಗುಣಿತವನ್ನು ಪರಿಗಣಿಸಿ ರಚಿಸಲಾಗಿದೆ.

ಹೀಗೆ ಪ್ರತಿ ಅಕ್ಷರಗಳ ಒಳವಿಂಗಡನೆಯ ಗುಚ್ಛವೂ ಶೀರ್ಷಿಕೆಯಲ್ಲಿ ಇರುವಂತೆ ಪುನರಾವೃತ್ತಿಗೊಂಡಿದ್ದು, ಒಂದು ಸ್ಥಳದಲ್ಲಿ ಮಾತ್ರ ಅದು ಅಕ್ಷರ ಲೋಪವನ್ನು ಹೊಂದಿರುತ್ತದೆ. ಉದಾಹರಣೆಗೆ :

a) ಪ ಪ b) ಪಾ ಪಾ c) ಪಿ ಸಿ

d) ಪೀ ಪೀ e) ಪು ಪು.

ಇಲ್ಲಿ ಗುಂಪಿಗೆ ಸೇರದ ಅಕ್ಷರಗಳ ಗುಚ್ಛ c). ಕಾರಣ a, b, d, e, ಗಳಲ್ಲಿ ಅಕ್ಷರಗಳು ಎಲ್ಲೂ ಲೋಪವಾಗದಂತೆ ಪುನರಾವೃತ್ತಿಯಾಗಿದೆ. ಆದರೆ 'c' ಯಲ್ಲಿ ಮಾತ್ರ ಪಿ ಸಿ ಎಂದಿದೆ.

ಇಲ್ಲಿ ಪಿ.ಪಿ ಎಂದು ಇರಬೇಕು. ಆಗಷ್ಟೇ ಅದು ಸರಿಯಾದ ಉತ್ತರವಾಗಿರುತ್ತಿತ್ತು. ಪಿ.ಸಿ ಎಂದು ಇರುವುದರಿಂದ ಇದು ಗುಂಪಿಗೆ ಸೇರದ ಪದ. ಅಂದರೆ 'ಪಿ' ಬದಲಿಗೆ 'ಸಿ' ಎಂದಿದೆ. ಆದ ಕಾರಣ ಇದು ತಪ್ಪು.

ಆದ್ದರಿಂದ ಪುನರಾವೃತ್ತಿ ಮತ್ತು ಅಕ್ಷರಲೋಪವನ್ನು ಗಮನಿಸಿ ಇಲ್ಲಿ ಗುಂಪಿಗೆ ಸೇರದ ಅಕ್ಷರಗಳ ಗುಚ್ಛವನ್ನು ಗಮನಿಸಲು ಪ್ರಯತ್ನಿಸಲಾಗಿದೆ.

## ಸಂಖ್ಯೆಗಳು ಮತ್ತು ಕಾಗುಣಿತ

ಈ ಐದನೇ ಭಾಗವನ್ನು ಸಂಖ್ಯೆಗಳು ಮತ್ತು ಕಾಗುಣಿತಗಳನ್ನು ಗಮನಿಸಿ ರಚಿಸಲಾಗಿದೆ. ಎಂದಿನಂತೆ ಒಟ್ಟು ನಾಲ್ಕು ಪ್ರಶ್ನೆಗಳುಳ್ಳ ಈ ಭಾಗದ ಪ್ರತಿ ಒಳ ವಿಂಗಡನೆಯೂ ಐದು ಸಾಧ್ಯತೆಗಳನ್ನು ಒಳಗೊಂಡಿದ್ದು ಅದರಲ್ಲಿ ಒಂದು ತಪ್ಪು ಉತ್ತರವಾಗಿರುತ್ತದೆ.

ಈ ಹಿಂದೆ ಸ್ವರಗಳು ಮತ್ತು ವ್ಯಂಜನಗಳಿಗೆ 'ಅ' ಯಿಂದ 'ಳ' ವರೆಗೆ ೧ ರಿಂದ ೪೯ ಅಂಕಿ ಸಂಖ್ಯೆಗಳನ್ನು ನಿರ್ದೇಶಿಸಿದಂತೆ ಇಲ್ಲಿ ಬಳಸಿಕೊಳ್ಳಲಾಗಿರುವ ಕಾಗುಣಿತಕ್ಕೆ ಅಂದರೆ 'ಕ' ದಿಂದ 'ಳ' ವರೆಗೆ ಒಟ್ಟು ೫೦ ರಿಂದ ೫೨೯ ಅಂಕಿ ಸಂಖ್ಯೆಗಳನ್ನು ನಿರ್ದೇಶಿಸಲಾಗಿದ್ದು ಅವುಗಳನ್ನು ಸ್ಥಾನಕ್ಕೆ ತಕ್ಕಂತೆ ನೀಡಲಾಗಿದೆ. ಅಂದರೆ ಸ್ವರ ಮತ್ತು ವ್ಯಂಜನಗಳ ಮುಂದುವರಿಕೆಯಾಗಿ ಕಾಗುಣಿತಕ್ಕೆ ಅಂಕಿ ಸಂಖ್ಯೆಗಳನ್ನು ನೀಡಲಾಗಿದೆ.

ಉದಾ : ಳ ೪೯ ಕ ೫೦

ಇಲ್ಲಿ ಸ್ವರ ಮತ್ತು ವ್ಯಂಜನಗಳು ಹಾಗೂ ಕಾಗುಣಿತವನ್ನು ನೋಡುವಾಗ ವ್ಯಂಜನಕ್ಕೆ ಸ್ವರ ಸೇರಿಯೇ ಕಾಗುಣಿತವಾಗುವುದನ್ನು ಕಾಣುತ್ತೇವೆ. ಹಾಗಾಗಿ ವ್ಯಂಜನದಲ್ಲಿ ಬಳಸಲ್ಪಡುವ 'ಕ' ಹಾಗೂ ಕಾಗುಣಿತದಲ್ಲಿ ಬಳಸಲ್ಪಡುವ 'ಕ'ಗಳಿಗೂ ಪ್ರತ್ಯೇಕವಾದ ಸಂಖ್ಯೆಗಳನ್ನು ನೀಡಿದೆ. ಅಂದರೆ ವ್ಯಂಜನದಲ್ಲಿ ಬಳಸಲ್ಪಡುವ 'ಕ' ೧೬ ಆದರೆ, ವ್ಯಂಜನ ಮತ್ತು ಸ್ವರ ಸೇರಿ ಬಳಕೆಯಾಗುವ ಕಾಗುಣಿತದ 'ಕ' ೫೦ ಎಂಬ ಸಂಖ್ಯೆಯನ್ನು ಒಳಗೊಂಡಿರುತ್ತದೆ. ಹೀಗೆ ಇದನ್ನು ಬಳಸುವಾಗ ಶೀರ್ಷಿಕೆಯನ್ನು ಗಮನಿಸುವುದು ಅತ್ಯಗತ್ಯ.

ಅಲ್ಲದೆ ಶೀರ್ಷಿಕೆಯ ಆಧಾರದ ಹಿನ್ನೆಲೆಯಲ್ಲಿ ಇವುಗಳನ್ನು ಪ್ರತ್ಯೇಕಿಸಿ ನೋಡಬೇಕಾಗುತ್ತದೆ. ಇಲ್ಲಿ ಕ, ಖ, ಗ, ಘ, ಮತ್ತು ಚ, ಛ, ಜ, ಝ, ಗಳನ್ನು ಒಳಗೊಂಡ ಕಾಗುಣಿತವನ್ನು ಬಳಸಿಕೊಳ್ಳಲಾಗಿದೆ. ಅಂದರೆ ಕೇವಲ 'ಕ' ವರ್ಗ ಮತ್ತು 'ಚ'. ವರ್ಗ. ಇವುಗಳನ್ನು ರಚಿಸುವಾಗ ಙ ಮತ್ತು ಞ ಗಳನ್ನು ಹೆಚ್ಚು ಬಳಕೆಯಲ್ಲಿ ಇಲ್ಲದ ಕಾರಣ ಕೈಬಿಡಲಾಗಿದೆ. ಇಲ್ಲಿ ಬಳಸಿಕೊಳ್ಳಲಾಗಿರುವ 'ಕ' ದಿಂದ 'ಝಃ' ವರೆಗೆ ಕ್ರಮವಾಗಿ ೫೦ ರಿಂದ ೧೬೯ ಸಂಖ್ಯೆಗಳನ್ನು ನೀಡಲಾಗಿದೆ. ಅಧ್ಯಯನದ ದೃಷ್ಟಿಯಿಂದ ಪೂರ್ಣವಾಗಿ ಕಾಗುಣಿತವನ್ನೂ ನೀಡಲಾಗಿದೆ.

**ಕಾಗುಣಿತ ಅಥವಾ ಗುಣಿತಾಕ್ಷರಕ್ಕೆ ನೀಡಿರುವ ಸಂಖ್ಯೆಗಳು ಮುಂದಿನ ಪುಟದಲ್ಲಿದೆ.**

ಹೀಗೆ ನೀಡುವಾಗ ಗುಂಪಿಗೆ ಸೇರದ ಅಕ್ಷರಗಳ ಸಂಖ್ಯೆಯನ್ನು ಬದಲಿಸಿ ನೀಡಲಾಗಿದೆ, ಅದನ್ನು ವಿದ್ಯಾರ್ಥಿಗಳು ಗ್ರಹಿಸಿ ಗುಂಪಿಗೆ ಸೇರದ ಗುಚ್ಛವನ್ನು ಗಮನಿಸಬೇಕು. ಮೊದಲ ಪ್ರಶ್ನೆಯನ್ನು ಗಮನಿಸುವುದಾದರೆ ಉದಾಹರಣೆಗೆ :

a) ಕ ೫೦ ಝಃ ೧೬೯ b) ಕಾ ೫೧ ಝಂ ೧೬೮

c) <u>ಕಿ ೫೨ ಝೌ ೧೬೮</u> d) ಕೀ ೫೩ ಝೋ ೧೬೬

e) ಕು ೫೪ ಝೊ ೧೬೫

ಇಲ್ಲಿ ಗುಂಪಿಗೆ ಸೇರದ ಗುಚ್ಛ c). ಕಾರಣ ಕಿ ೫೨ ಝೌ ೧೬೭ ಎಂದಿರಬೇಕು. ಆದರೆ ಝೌ ೧೬೮ ಎಂದು ನೀಡಲಾಗಿದೆ. ಹಾಗಾಗಿ ಅದು ಗುಂಪಿಗೆ ಸೇರದ ಗುಚ್ಛ. ಹಿಂದಿನ ಝಂ ೧೬೮ ಮುಂದಿನ ಝೋ ೧೬೬ ಆಗಿರುವಾಗ ಝೌ ೧೬೭ ಎಂದಿರಬೇಕು ಎಂಬುದನ್ನು ತಿಳಿದು, ಅದನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಬೇಕು.

ಇನ್ನು ಎರಡನೇ ಪ್ರಶ್ನೆಯಲ್ಲಿ ಮೊದಲು ತಿಳಿಸಿದ ಸಂಖ್ಯಾಪದ್ಧತಿಯನ್ನು ಬುಡಮೇಲು ಮಾಡಲಾಗಿದೆ. ಅಂದರೆ ಕ ೫೦ ಝಃ ೧೬೯ ಎಂದು ಇರುವುದನ್ನು ಬುಡಮೇಲಾಗಿ 'ಕ' ಸಂಖ್ಯೆ 'ಝಃ'ಗೂ 'ಝಃ' ಸಂಖ್ಯೆ 'ಕ' ಗೂ ನೀಡಲಾಗಿದೆ ಇಲ್ಲಿ ಕ ೧೬೯ ಝಃ ೫೦ ಎಂದು ಪರಿಗಣಿಸಲಾಗಿದೆ. ಹೀಗೆ ಕ್ರಮವಾಗಿ ಸಂಖ್ಯೆಗಳನ್ನು ಬುಡಮೇಲು ಮಾಡುತ್ತ ನೀಡಲಾಗಿದೆ. ಒಟ್ಟಾರೆ ೨ನೇ ಪ್ರಶ್ನೆಯನ್ನು ಕೊನೆಯ ಸಂಖ್ಯೆ ಮೊದಲ ಅಕ್ಷರಕ್ಕೆ, ಮೊದಲ ಸಂಖ್ಯೆ ಕೊನೆಯ ಅಕ್ಷರಕ್ಕೆ ನೀಡುವ ಮೂಲಕ ರಚಿಸಲಾಗಿದೆ. ಉದಾಹರಣೆಗೆ :

a) ಕ ೧೬೯ ಝಃ ೫೦ b) ಕಾ ೧೬೮ ಝಂ ೫೧

c) ಕಿ ೧೬೭ ಝೌ ೫೨ d) <u>ಕೀ ೧೬೬ ಝೋ ೫೨</u>

e) ಕು ೧೬೫ ಝೊ ೫೪

ಇಲ್ಲಿ ಗುಂಪಿಗೆ ಸೇರದ ಗುಚ್ಛ d). ಇಲ್ಲಿ ಝೋ ೫೩

ಕಾಗುಣಿತ ಅಥವಾ ಗುಣಿತಾಕ್ಷರಕ್ಕೆ ನೀಡಿರುವ ಸಂಖ್ಯೆಗಳು ಇಂತಿವೆ.

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | ೫೦ | ೫೧ | ೫೨ | ೫೩ | ೫೪ | ೫೫ | ೫೬ | ೫೭ | ೫೮ | ೫೯ | ೬೦ | ೬೧ | ೬೨ | ೬೩ | ೬೪ |
| ೦೧. | ಕ | ಕಾ | ಕಿ | ಕೀ | ಕು | ಕೂ | ಕೃ | ಕೆ | ಕೇ | ಕೈ | ಕೊ | ಕೋ | ಕೌ | ಕಂ | ಕಃ |
| | ೬೫ | ೬೬ | ೬೭ | ೬೮ | ೬೯ | ೭೦ | ೭೧ | ೭೨ | ೭೩ | ೭೪ | ೭೫ | ೭೬ | ೭೭ | ೭೮ | ೭೯ |
| ೦೨. | ಖ | ಖಾ | ಖಿ | ಖೀ | ಖು | ಖೂ | ಖೃ | ಖೆ | ಖೇ | ಖೈ | ಖೊ | ಖೋ | ಖೌ | ಖಂ | ಖಃ |
| | ೮೦ | ೮೧ | ೮೨ | ೮೩ | ೮೪ | ೮೫ | ೮೬ | ೮೭ | ೮೮ | ೮೯ | ೯೦ | ೯೧ | ೯೨ | ೯೩ | ೯೪ |
| ೦೩. | ಗ | ಗಾ | ಗಿ | ಗೀ | ಗು | ಗೂ | ಗೃ | ಗೆ | ಗೇ | ಗೈ | ಗೊ | ಗೋ | ಗೌ | ಗಂ | ಗಃ |
| | ೯೫ | ೯೬ | ೯೭ | ೯೮ | ೯೯ | ೧೦೦ | ೧೦೧ | ೧೦೨ | ೧೦೩ | ೧೦೪ | ೧೦೫ | ೧೦೬ | ೧೦೭ | ೧೦೮ | ೧೦೯ |
| ೦೪. | ಘ | ಘಾ | ಘಿ | ಘೀ | ಘು | ಘೂ | ಘೃ | ಘೆ | ಘೇ | ಘೈ | ಘೊ | ಘೋ | ಘೌ | ಘಂ | ಘಃ |
| | ೧೧೦ | ೧೧೧ | ೧೧೨ | ೧೧೩ | ೧೧೪ | ೧೧೫ | ೧೧೬ | ೧೧೭ | ೧೧೮ | ೧೧೯ | ೧೨೦ | ೧೨೧ | ೧೨೨ | ೧೨೩ | ೧೨೪ |
| ೦೫. | ಚ | ಚಾ | ಚಿ | ಚೀ | ಚು | ಚೂ | ಚೃ | ಚೆ | ಚೇ | ಚೈ | ಚೊ | ಚೋ | ಚೌ | ಚಂ | ಚಃ |
| | ೧೨೫ | ೧೨೬ | ೧೨೭ | ೧೨೮ | ೧೨೯ | ೧೩೦ | ೧೩೧ | ೧೩೨ | ೧೩೩ | ೧೩೪ | ೧೩೫ | ೧೩೬ | ೧೩೭ | ೧೩೮ | ೧೩೯ |
| ೦೬. | ಛ | ಛಾ | ಛಿ | ಛೀ | ಛು | ಛೂ | ಛೃ | ಛೆ | ಛೇ | ಛೈ | ಛೊ | ಛೋ | ಛೌ | ಛಂ | ಛಃ |
| | ೧೪೦ | ೧೪೧ | ೧೪೨ | ೧೪೩ | ೧೪೪ | ೧೪೫ | ೧೪೬ | ೧೪೭ | ೧೪೮ | ೧೪೯ | ೧೫೦ | ೧೫೧ | ೧೫೨ | ೧೫೩ | ೧೫೪ |
| ೦೭. | ಜ | ಜಾ | ಜಿ | ಜೀ | ಜು | ಜೂ | ಜೃ | ಜೆ | ಜೇ | ಜೈ | ಜೊ | ಜೋ | ಜೌ | ಜಂ | ಜಃ |
| | ೧೫೫ | ೧೫೬ | ೧೫೭ | ೧೫೮ | ೧೫೯ | ೧೬೦ | ೧೬೧ | ೧೬೨ | ೧೬೩ | ೧೬೪ | ೧೬೫ | ೧೬೬ | ೧೬೭ | ೧೬೮ | ೧೬೯ |
| ೦೮. | ಝ | ಝಾ | ಝಿ | ಝೀ | ಝು | ಝೂ | ಝೃ | ಝೆ | ಝೇ | ಝೈ | ಝೊ | ಝೋ | ಝೌ | ಝಂ | ಝಃ |

ಎಂದಿರಬೇಕು. ಆದರೆ ೫೨ ಎಂದಿದೆ. ಹಾಗಾಗಿ ಇದು ಗುಂಪಿಗೆ ಸೇರದ ಗುಚ್ಛ

ಇನ್ನುಳಿದಂತೆ ಮೂರನೇ ಪ್ರಶ್ನೆಯನ್ನು ಗಣಿತದ ಆಧಾರವನ್ನು ಆಶ್ರಯಿಸಿ ರಚಿಸಲಾಗಿದೆ. ೨x೧=೨, ೨x೨=೪, ೨x೩=೬, ೨x೪=೮, ೨x೫=೧೦. ಹೀಗೆ. ಉದಾಹರಣೆಗೆ :

a) ಕ ೨ ಕಾ ೪ b) ಕಾ ೬ ಕಿ ೮

c) ಕಿ ೧೦ ಕೀ ೧೧ d) ಕೀ ೧೨ ಕು ೧೪

e) ಕು ೧೬ ಕೂ ೧೮,

ಇಲ್ಲಿ 'ಕ' ಅಕ್ಷರಕ್ಕೆ ೨ ಎಂದರೆ 'ಕಾ' ೪ ಎಂದಾಗುತ್ತದೆ. ಅಂತೆಯೇ 'ಕಿ' ೬ ಎಂದಿರಬೇಕು. ಆದರೆ 'ಕಾ' ಮತ್ತೆ ಳ, ಒಳಗುಚ್ಛದಲ್ಲಿ ಪುನರಾವರ್ತನೆ ಹೊಂದುವುದರಿಂದ ಅದಕ್ಕೆ ಅದರ ಮುಂದಿನ ಸಂಖ್ಯೆಯನ್ನು ಆರೋಪಿಸಲಾಗುತ್ತದೆ. ಅಂದರೆ 'ಕಾ' ೬ a) ವರ್ಗದ 'ಕಾ' ಮೊದಲಿಗೆ ೪ ಎಂದಿದೆ. ಅದಕ್ಕೆ ೨ನ್ನು ಸೇರಿಸಿ ೬ ಎಂದು ಬರುವುದನ್ನು b) ವರ್ಗದ 'ಕಾ'ಗೆ ನೀಡಲಾಗಿದೆ. ಹಾಗಾಗಿ ಇಲ್ಲಿ ಕಿ.೮ ಎಂದು ಆಗುತ್ತದೆ. ಹೀಗೆ ಅದು ೨ ಸಂಖ್ಯೆಯನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ಹೋಗುತ್ತದೆ.

ಇಲ್ಲಿ ಗುಂಪಿಗೆ ಸೇರದ ಗುಚ್ಛ c). ಕಾರಣ ಕೀ ೧೧ ಎಂದಿದೆ. ಯಾವುದೇ ಸಮಸಂಖ್ಯೆಗೆ ಸಮಸಂಖ್ಯೆ ಸೇರಿದಾಗ ಅದು ಬೆಸಸಂಖ್ಯೆಯ ಮೊತ್ತವನ್ನು ಹೊಂದುವುದಿಲ್ಲ. c). ವರ್ಗದಲ್ಲಿ ಕಿ ೧೦ ಕೀ ೧೧ ಎಂದಿದೆ. ಇಲ್ಲಿ ಕೀ ೧೨ ಎಂದಿರಬೇಕು. ಆದರೆ ಗುಂಪಿಗೆ ಸೇರದ ಗುಚ್ಛವನ್ನಾಗಿಸಲು ೧೧ ಎಂದು ನೀಡಲಾಗಿದೆ. ಹಾಗಾಗಿ ಇದು ಗುಂಪಿಗೆ ಸೇರದ ಗುಚ್ಛ.

ನಾಲ್ಕನೇ ಪ್ರಶ್ನೆಯನ್ನು ತೆಗೆದುಕೊಂಡಾಗ ಉದಾಹರಣೆಗೆ:

a) ಕ ೫೦ ಕಾ ೫೦ b) ಕಿ ೫೨ ಕೀ ೫೨

c) ಕು ೫೪ ಕೂ ೫೫ d) ಕೃ ೫೫ ಕೆ ೫೫

e) ಕೇ ೫೭ ಕೈ ೫೭.

ಈ ನಾಲ್ಕನೇ ಪ್ರಶ್ನೆಯಲ್ಲಿ ಕ ೫೦ ಎಂದಿದ್ದರೆ, ಅದರ ಮುಂದಿನ ಅಕ್ಷರ ಕಾ ಸಹ ೫೦ ಆಗುತ್ತದೆ. ಒಂದೇ ಸಂಖ್ಯೆಯನ್ನು ಎರಡು ಅಕ್ಷರಗಳಿಗೂ ನೀಡುವ ಪದ್ಧತಿಯನ್ನು ಇಲ್ಲಿ ಅನುಸರಿಸಲಾಗಿದೆ, ಅಂದರೆ ಇಲ್ಲಿ ಗುಂಪಿಗೆ ಸೇರದ ಗುಚ್ಛ ಛಿ, ಕಾರಣ ಇಲ್ಲಿ ಕು ೫೪ ಎಂದಿದ್ದು ಕೂ ೫೫ ಎಂದಿದೆ. ಹಾಗಾಗಿ ಇದು ಗುಂಪಿಗೆ ಸೇರದ ಗುಚ್ಛ, ಇಲ್ಲಿ ಕೂ ಸಹಾ ೫೪ ಸಂಖ್ಯೆಯನ್ನು ಒಳಗೊಳ್ಳಬೇಕಿತ್ತು. ಗುಂಪಿಗೆ ಸೇರದ ಗುಚ್ಛವನ್ನು ಸಿದ್ಧಗೊಳಿಸಲು ಇಲ್ಲಿ 'ಕೂ' ಅಕ್ಷರಕ್ಕೆ ೫೫ ಎಂದು ನೀಡಲಾಗಿದೆ.

ಹೀಗೆ ಸಂಖ್ಯೆಗಳು ಮತ್ತು ಕಾಗುಣಿತದ ಆಧಾರದಲ್ಲಿ ಈ ಐದನೇ ಭಾಗವನ್ನು ರಚಿಸಲಾಗಿದೆ. ಒಟ್ಟಿನಲ್ಲಿ ಐದು ಪ್ರಧಾನಭಾಗಗಳಲ್ಲಿ ಈ ಲೇಖನವನ್ನು ವರ್ಗೀಕರಿಸಿ ಆಯಾ ಶೀರ್ಷಿಕೆಯ ಹಿನ್ನೆಲೆಯಲ್ಲಿ ಪ್ರಶ್ನೆಗಳನ್ನು ನೀಡಲಾಗಿದೆ. ಉದಾಹರಣೆಗೆ ಈ ಕೆಳಗೆ ಐದು ಅಭ್ಯಾಸಗಳನ್ನು ನೀಡಲಾಗಿದೆ.

ಅಕ್ಷರ ಅಥವಾ ವರ್ಣಮಾಲೆಯ ಸ್ಥಾನವನ್ನು ಅನುಸರಿಸಿ ರಚಿಸಲ್ಪಟ್ಟ ಪ್ರಶ್ನೆಗಳು:

**ಅಭ್ಯಾಸ – ೧**

೧. a) ಅ ಇ b) ಈ ಊ c) ಋ ಏ
d) ಐ ಓ e) ಔ ಅಂ

೨. a) ಅ ಳ b) ಆ ಹ c) ಇ ಷ
d) ಈ ಶ e) ಉ ವ

೩. a) ಅ ಆ ಇ b) ಇ ಈ ಉ
c) ಉ ಊ ಋ d) ಋ ಏ ಐ e) ಐ ಒ ಓ

೪. a) ಅ ಈ b) ಉ ಎ c) ಏ ಓ
d) ಔ ಕ e) ಖ ಘ

ದೇಶ್ಯ ಹಾಗೂ ಅನ್ಯದೇಶ್ಯ ಶಬ್ದಗಳನ್ನು ಅನುಸರಿಸಿ ರಚಿಸಲ್ಪಟ್ಟ ಪ್ರಶ್ನೆಗಳು

**ಅಭ್ಯಾಸ – ೨**

೧. a) ನದಿ b) ಅಧ್ಯಾಯ c) ಆರ್ಯ
d) ಹೊಲ e) ವಿಷಯ

೨. a) ತಯಾರ್ b) ಜನಾಬ್ c) ಬದಲ್
d) ಖಾವಂದ್ e) ಜೋಳ

೩. a) ಸ್ಪೀಡ್ b) ಸೇರು c) ಪಿಟೀಲ್
d) ಹೊಟೇಲ್ e) ಪಾಸ್

೪. a) ಹೆಚ್ಚು b) ಹುಡುಕು c) ಹಣ್
d) ಕಣ್ಣು e) ದೊಡ್ಡ

## ಕಾಗುಣಿತ ಮತ್ತು ಸ್ವರ

**ಅಭ್ಯಾಸ – ೩**

೧. a) ಖೀ ಖು b) ಖೂ ಖೃ c) ಖೆ ಖೇ
d) ಖೈ ಖೊ e) ಖೋ ಓ

೨. a) ಕೊ ಕೊ ಕೋ b) ಕೋ ಕೋ ಕೌ c) ಕೌ ಕೌ ಕಂ
d) ಕಂ ಕಂ ಕಃ e) ಕಃ ಕಃ ಅಃ

೩. a) ಖೂ ಖೃ ಖೆ b) ಖೆ ಖೇ ಖೈ c) ಖೈ ಖೊ ಖೋ
d) ಖೋ ಖೌ ಖಂ e) ಖಂ ಖಃ ಅಃ

೪. a) ಖೂ ಖೂ ಖೃ ಉ b) ಖೆ ಖೇ ಖೇ ಖೇ

c) ಖೈ ಖೈ ಖೊ ಖೊ d) ಖೋ ಖೋ ಖೌ ಖೌ
e) ಖಂಖಂ ಖಃ ಖಃ

## ಪುನರಾವೃತ್ತಿ ಮತ್ತು ಅಕ್ಷರಲೋಪ

ಅಭ್ಯಾಸ – ೪

೧. a) ಖ ಖ b) ಖಾ ಖಾ c) ಖಿ ಗಿ
d) ಖೀ ಖೀ e) ಖು ಖು

೨. a) ಛ ಛ b) ಛಾ ಛಾ c) ಛಿ ಛಿ
d) ಛೀ ಛೀ e) ಛು ವಂ

೩. a) ಠ ಠ b) ಠಾ ಠಾ c) ಠಿ ಠಿ
d) ಠೀ ಠೀ e) ಠು ಠು

೪. a) ಥ ಥ b) ಥಾ ಥಾ c) ಥಿ ಧಿ
d) ಥೀ ಥೀ e) ಥು ಥು

## ಸಂಖ್ಯೆಗಳು ಮತ್ತು ಕಾಗುಣಿತ

ಅಭ್ಯಾಸ – ೫

೧. a) ಕೂ ೫೫ ಝ್ಯು೧೬೪ b) ಕೃ ೫೬ ಝೀ ೧೬೩
c) ಕೆ ೫೭ ಝು ೧೬೨ d) ಕೇ ೫೮ ಝ್ಯು ೧೬೨
e) ಕೈ ೫೯ ಝೂ ೧೬೦

೨. a) ಕೂ ೧೬೪ ಝ್ಯು೫೫ b) ಕೃ೧೬೩ ಝೀ ೫೬
c) ಕೆ ೧೬೨ ಝು ೫೭ d) ಕೇ ೧೬೧ ಝ್ಯು ೫೮
e) ಕೈ ೧೬೦ ಝೂ ೫೮

೩. a) ಕೂ ೨೦ ಕೃ ೨೨ b) ಕೃ ೨೪ ಕೆ ೨೫
c) ಕೆ ೨೬ ಕೇ ೨೮ d) ಕೇ ೩೦ ಕೈ ೩೨
e) ಕೈ ೩೪ ಕೊ ೩೬

೪. a) ಕೈ ೫೯ ಕೊ ೫೯ b) ಕೋ ೬೧ ಕೌ ೬೧
c) ಕಂ ೬೩ ಕಃ ೬೩ d) ಖ ೬೫ ಖಾ ೬೬
e) ಖಾ ೬೬ ಖಿ ೬೬

# ಕನ್ನಡಿಗರ ಕುಲಗೌರವ : ಅಭಿಧಾನ ವಸ್ತುಕೋಶ

– ಎಂ. ಮಹ್ಮದ್ ಬಾಷಗೂಳ್ಯಂ

ಕನ್ನಡ ಸಂರಸ್ವತ ಲೋಕದಲ್ಲಿ ಇಮ್ಮಡಿನಾಗವರ್ಮನಿಗೆ (ಕ್ರಿ.ಶ. ೧೧೪೨) ವಿಶೇಷ ಗೌರವವಿದೆ. ಕನ್ನಡದ ಭಾಷೆ, ಭಾವ ಬೆಡಗಿಗೆ ಶ್ರಮಿಸಿದವರಲ್ಲಿ ಈತ ಪ್ರಮುಖ. ಈತನ ಅದ್ವಿತೀಯ ಪಾಂಡಿತ್ಯಕ್ಕೆ ಮರುಳಾಗದವರಿಲ್ಲ, ಲಾಕ್ಷಣಿಕ, ಚಿಕಿತ್ಸಿಕ ದೃಷ್ಟಿಗೆ ಶರಣಾದವರಿಲ್ಲ. ಕೇಳಿರಾಜ, ಸಾಳ್ವ, ಭಟ್ಟಾಕಲಂಕ, ಜನ್ನ ಹೀಗೆ ಅನೇಕ ಪ್ರತಿಭಾವಂತರು ಇಮ್ಮಡಿ ನಾಗವರ್ಮನನ್ನು ಸ್ಮರಿಸಿದ್ದು ಉಲ್ಲೇಖನೀಯ.

ಕನ್ನಡ ಭಾಷೆಯನ್ನು ಕೀಳಾಗಿ ಕಾಣುವ ಕಾಲ ಘಟ್ಟದಲ್ಲಿ ಕನ್ನಡದ ವ್ಯಾಕರಣವನ್ನು ಸಂಸ್ಕೃತದ ಸೂತ್ರ ವೃತ್ತಿಯಲ್ಲಿ 'ಕರ್ನಾಟಕ ಭಾಷಾ ಭೂಷಣ' ಎಂಬ ಹೆಸರಿನಲ್ಲಿ ಈತ ಬರೆದನು. ಕನ್ನಡ ಭಾಷೆ ಹಾಗೂ ಕನ್ನಡಿಗರು ಯಾವುದರಲ್ಲಿಯೂ ಕಡಿಮೆ ಇಲ್ಲ ಎಂದು ಸಾರಿದನು.

"ಕನ್ನಡದ ಕನ್ನಡತನವನ್ನೂ, ಸೊಬಗನ್ನೂ ತೋರಿಸಿ ಬಿನ್ನಭಾವದ ಹೆರವರನ್ನು ತಿದ್ದುವ ರನ್ನದ ಕನ್ನಡ 'ಕಾವ್ಯವಲೋಕನ' ರಚಿಸಿ,"[೧] ತನ್ನ ಬಹುಜ್ಞತೆಯನ್ನು ತೋರಿದನು. ವರ್ಧಮಾನಪುರಾಣವು 'ಆತನ ವಾಗ್ಮಿತೆಗೆ, ಕಲಿಕಾ ಸಾಮರ್ಥ್ಯಕ್ಕೆ ಸಾಕ್ಷಿ. ಕನ್ನಡಾಂಬೆಯ ಕಿರೀಟಕ್ಕೆ ಕಳಸಪ್ರಾಯವಾದ 'ಅಭಿಧಾನವಸ್ತು ಕೋಶ'ವು ಕಂದ ಪದ್ಯರೂಪಿ ಕನ್ನಡದ ನಿಘಂಟು. ಆತನ ಮೂರು ಕೃತಿಗಳ ಪೈಕಿ 'ಅಭಿಧಾನವಸ್ತು ಕೋಶ'ವು ಹಲವು ಕಾರಣಗಳಿಂದಾಗಿ ವಿಭಿನ್ನ, ವಿಶಿಷ್ಟ. ಈ ಕೃತಿಯನ್ನು ಎ.ವೆಂಕಟರಾವ್ ಮತ್ತು ಎಚ್.ಶೇಷಯ್ಯಂಗಾರರು ಸಂಪಾದಿಸಿದ್ದಾರೆ.

'ಅಭಿಧಾನ ವಸ್ತುಕೋಶವು 'ಸಂಸ್ಕೃತ ಪದಗಳಿಗೆ ಕನ್ನಡದ ಅರ್ಥ ಹೇಳುವ ಪದ್ಯರೂಪದ ನಿಘಂಟು'[೨] ಎಂಬ ಹೆಗ್ಗಳಿಕೆ ಪಾತ್ರವಾಗಿದೆ.

"ಕನ್ನಡದಲ್ಲಿ ಕಂದವೃತ್ತಗಳಲ್ಲಿ ಬರೆದಿರುವ ಸಂಸ್ಕೃತ ಪದಗಳ ಒಂದು ನಿಘಂಟು. ಸಂಸ್ಕೃತ ಪದಗಳ ಅರ್ಥವನ್ನು ಕನ್ನಡ ಭಾಷೆಯನ್ನು ವಿವರಿಸುವುದು ಇಲ್ಲಿಯ ಉದ್ದೇಶ."[೩]

"ಇದು ಕಂದವೃತ್ತಗಳಲ್ಲಿ ರಚಿತವಾಗಿದೆ. ಕನ್ನಡದಲ್ಲಿ ಬಳಕೆ ಆಗಿರುವ ಸಂಸ್ಕೃತ ಶಬ್ಧಗಳಿಗೆ ಅರ್ಥವನ್ನೂ ನಿರೂಪಿಸುವ ಸಂಸ್ಕೃತ ಕರ್ನಾಟಕ ನಿಘಂಟು."[೪]

"ಸಂಸ್ಕೃತ ಶಬ್ದಗಳಿಗೆ ಕನ್ನಡ ಅರ್ಥಹೇಳುವ ಪದ್ಯರೂಪಿ ನಿಘಂಟು"[೫]

"ಅಭಿಧಾನ ವಸ್ತುಕೋಶವು ಕರ್ನಾಟಕ ಭಾಷೆಯಲ್ಲಿ ಛಂದೋರೂಪವಾಗಿ ಕನ್ನಡ ಶಬ್ದಗಳಲ್ಲಿ ಪ್ರಯೋಗಿಸಬಹುದಾದ ಸಮಸಂಸ್ಕೃತ ಶಬ್ದಗಳ ಸ್ವರೂಪವನ್ನು ತಿಳಿಸುವ ಕೋಶ"[೬] ಮುಂತಾದ ವಿದ್ವಾಂಸರು ಅಭಿಧಾನ ವಸ್ತುಕೋಶದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಗಮನಿಸಬೇಕಾದ ವಿಷಯವೆಂದರೆ 'ಇಮ್ಮಡಿ ನಾಗವರ್ಮನು ಜೀವಿಸಿದ್ದ ಕಾಲಕ್ಕಿಂತ ಮುಂಚೆ ಕನ್ನಡ ಸಾರಸ್ವತ ಲೋಕದಲ್ಲಿ ಪ್ರಯೋಗಗಳ ಪರ್ವವೇ ನಡೆದು ಹೋಗಿತ್ತು. ಕ್ರಿಸ್ತ ಪೂರ್ವದಲ್ಲೂ ಕನ್ನಡದ ಹೆಜ್ಜೆಗುರುತು ಇದ್ದಿತು. ಹಲ್ಮಿಡಿಯ ಶಾಸನ ದೊರೆತು ಭಾಷೆಯ ಅಸ್ತಿತ್ವ ಸ್ಪಷ್ಟವಾಗಿತ್ತು. ಪೂರ್ವದ ಹಳೆಗನ್ನಡ, ಹಳೆಗನ್ನಡ, ಕಾಲಘಟ್ಟದ ಕಿರಣ ಬೆಳಗಿತ್ತು. ಅಷ್ಟೇಕೆ ರನ್ನ, ಪೊನ್ನ, ಜನ್ನ ರಂತಹ ಪ್ರತಿಭಾನ್ವಿತರೂ ಕನ್ನಡ ಸಾಹಿತ್ಯದ ಸುವರ್ಣಯುಗ ಧರ್ಮವನ್ನೇ ನಿರ್ಮಿಸಿದ್ದರು.

ಆದರೂ ಕನ್ನಡ ಸಾರಸ್ವತಲೋಕದಲ್ಲಿ ಏನೋ ಕೊರತೆ. ಅಲಂಕಾರ, ವ್ಯಾಕರಣ, ಛಂದಸ್ಸು ಕುರಿತು ಹಲವು ಕೃತಿಗಳು ರಚಿತವಾಗಿದ್ದವು, ಆದರೆ ಅವು ಸ್ವತಂತ್ರ ಕೃತಿಗಳಾಗಿರದೆ, ಭಾಷಾಂತರವಾಗಿದ್ದವು. ಅಷ್ಟೇಕೆ ಕನ್ನಡಕ್ಕೆ ಕನ್ನಡದ್ದೇ ಆದ ಒಂದು ನಿಘಂಟು ಇರಲಿಲ್ಲ. ಕನ್ನಡದ ಪ್ರಥಮ ನಿಘಂಟು ಎಂಬ ಖ್ಯಾತಿಯ ರನ್ನ ಕಂದ ನಿಘಂಟು (ಕ್ರಿ.ಶ. ೯೯೩) ಇದ್ದಿತಾದರೂ ಗಾತ್ರದಲ್ಲೂ ಪಾತ್ರದಲ್ಲೂ ಇದು ತೀರಾ ಚಿಕ್ಕದು. ಕವಿಚಕ್ರವರ್ತಿ ರನ್ನನ ನಿಘಂಟು ಎಂದು ಹೇಳಲಾದ ಈ ನಿಘಂಟು 'ರನ್ನ ಕಂದ'ವು ಪಾಠಕ್ಲೇಶಗಳಿಂದ ಕೂಡಿದೆ. ಕ್ಲಿಷ್ಟ, ಸರಳ ಎಂಬ ಭೇದ ಇಲ್ಲಿಲ್ಲ. ಸುಮಾರು ೫೦ ದೇಶ್ಯ ಶಬ್ದಗಳಿಗೆ ಕನ್ನಡದಲ್ಲೇ ಅರ್ಥ ಹೇಳಿರುವುದು ಗಮನಾರ್ಹ.

ಚತುರಾಸ್ಯ ನಿಘಂಟು, ಶಬ್ದಸಾರ ವಸ್ತುಕೋಶ, ಕಬ್ಬಿಗರ ಕೈಪಿಡಿ, ಮುಂತಾದ ಖ್ಯಾತ ನಿಘಂಟುಗಳಿಗಿಂತ ಪೂರ್ವದಲ್ಲಿ ರಚಿತವಾಗಿರುವುದು ಅಭಿಧಾನ ವಸ್ತುಕೋಶದ ಹೆಗ್ಗಳಿಕೆ. ಕನ್ನಡ ಸಾಹಿತ್ಯದ ಪ್ರಾಚೀನತೆಗೆ ಇದು ಆಕರವಾಗಿ ನಿಲ್ಲುತ್ತದೆ.

೫೭, ೧/೩, ೬ನೇ ಮುಖ್ಯರಸ್ತೆ, ೧ನೇ ಕ್ರಾಸ್, ಸಿ ಬ್ಲಾಕ್, ಗಾಯತ್ರಿನಗರ, ಬೆಂಗಳೂರು – ೨೧

ಈ ಎಲ್ಲಾ ವೈಶಿಷ್ಟ್ಯತೆಯನ್ನು ಮೀರಿಸುವ, ಗಾತ್ರ ಪಾತ್ರದಲ್ಲೂ ಹಿರಿದಾದ ನಿಘಂಟು "ಅಭಿಧಾನವಸ್ತು ಕೋಶ". ಇಮ್ಮಡಿ ನಾಗವರ್ಮನ ಬಹುಜ್ಞತೆಗೆ ಅವನ ಪ್ರಕಾಂಡ ಪಾಂಡಿತ್ಯಕ್ಕೆ, ಮೇರು ಸದೃಶ ವೈಚಾರಿಕತೆಗೆ, 'ಇದೆಲ್ಲಕ್ಕಿಂತ ಹೆಚ್ಚಾಗಿ ಕನ್ನಡದ ಭಾವ, ಭಾಷೆ ಸಿರಿವಂತಿಕೆಗೆ ಇದು ಸಾಕ್ಷಿಯಾಗಿ ನಿಲ್ಲುದು. ಕೃತಿಯ ಆರಂಭದಲ್ಲಿ ಕರ್ತೃ ಇಮ್ಮಡಿ ನಾಗವರ್ಮನು –

"ಕರಮೇ ಜಡಮತಿಯು ಮಜಿವಂ ।
ತಿರೆ ಕನ್ನಡದಿಂ ಜಲಕಾನಾಗಿರ್ಪಿನೆಗಂ ॥
ವಿರಚಿಸಿದಂ..."[೭] ಎಂದಿದ್ದಾನೆ. (ಪದ್ಯ ೪)

ಕನ್ನಡಕ್ಕೆ ಪರಿಪೂರ್ಣವಾದ ಕೋಶದ ಕೊರತೆಯನ್ನು ನೀಗಿದ ತೃಪ್ತಿ ತನಗಿದೆ ಎಂದು ಹಲವು ಪದ್ಯಗಳಲ್ಲಿ ದಾಖಲಿಸಿರುವುದು ಉಲ್ಲೇಖನೀಯ. ಅಭಿಧಾನವಸ್ತುಕೋಶವು ಮೂಲತಃ ಕನ್ನಡದ ಪದಗಳಿಗೆ ಸಂಸ್ಕೃತ ಅರ್ಥವನ್ನು ಹೇಳುವ ಪದ್ಯ ರೂಪಿ ನಿಘಂಟು. ಹಾಗಂತ ಕವಿಯ ಆಶಯವಾಗಿದ್ದರೂ ಕೃತಿಯನ್ನು ಅವಲೋಕಿಸಿದಾಗ ಹೆಚ್ಚಾಗಿ ಸಂಸ್ಕೃತ ಪದಗಳಿಗೆ ಪರ್ಯಾಯವಾಗಿ ಸಂಸ್ಕೃತದ ಅರ್ಥ ಹೇಳಿರುವುದು ಗೋಚರಿಸುತ್ತದೆ.

ಕೃತಿಯ ಬಹುತೇಕ ಕಡೆ ಅಚ್ಚಗನ್ನಡದ ಪದಗಳನ್ನೂ ದಾಖಲಿಸಿರುವುದು ಕೃತಿಕಾರನ ಕನ್ನಡಾಭಿಮಾನಕ್ಕೆ ಹಿಡಿದ ಕನ್ನಡಿ. ನೂರಾರು ಹೂವುಗಳ ಮಕರಂದವನ್ನು ಹೀರಿ ಜೇನು ಕಟ್ಟಿದಂತೆ, ತನ್ನ ಕಾಲದಲ್ಲಿ ಹಾಗೂ ಅದಕ್ಕಿಂತ ಪೂರ್ವದಲ್ಲಿದ್ದ ಬಹುತೇಕ ನಿಘಂಟುಗಳನ್ನು ಅವಲೋಕಿಸಿರುವ ಇಮ್ಮಡಿ ನಾಗವರ್ಮನು 'ಅಭಿಧಾನವಸ್ತುಕೋಶ'ವನ್ನು ಕನ್ನಡ ನೆಲಕ್ಕೆ ಒಪ್ಪುವಂತೆ, ಕನ್ನಡಿಗರಿಗೆ ಪ್ರಿಯವಾಗುವಂತೆ ರಚಿಸಿದ್ದಾನೆ. ಇದರ ಪೀಠಿಕಾಪ್ರಕರಣದಲ್ಲಿ "ವರರುಚಿ, ಭಾಗುರಿ, ಹಲಾಯುಧ, ಶಾಶ್ವತ, ಧನಂಜಯ ಮತ್ತು ಅಮರಕೋಶ ಮುಂತಾದ ಸಂಸ್ಕೃತ ಕೋಶಗಳಿಂದ ಶಬ್ದಗಳನ್ನು ಸಂಗ್ರಹಿಸಿ ಅಭಿಧಾನವಸ್ತುಕೋಶ"ವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. (ಪದ್ಯ ೧–೧) ಈ ಎಲ್ಲಾ ಲಾಕ್ಷಣಿಕರ ಕೃತಿಗಳ ತಿರುಳು ಸ್ವೀಕರಿಸಿದ್ದರೂ "ವಿಶೇಷವಾಗಿ ಹಲಾಯುಧ ಕೋಶವನ್ನೇ ಹೆಚ್ಚಾಗಿ ಅನುಸರಿಸಿರುವನು. ಅಮರಕೋಶದಲ್ಲಿರುವ ಕೆಲವು ಶಬ್ದಗಳೂ ಇದರಲ್ಲಿ ನುಸುಳಿರುವವು" ಎಂದು ಸಂಪಾದಕರು ಅಭಿಪ್ರಾಯ ಪಟ್ಟಿದ್ದಾರೆ. (ಮುನ್ನುಡಿ, ಪುಟ ೬)

ಕಂದವೃತ್ತಗಳಲ್ಲಿಯೇ ಬರೆಯಲ್ಪಟ್ಟ 'ಅಭಿಧಾನ ಕೋಶವು' ಛಂದೋವೈವಿಧ್ಯತೆಯಿಂದಲೂ ಗಮನ ಸೆಳೆಯುತ್ತದೆ. ಅವನ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಖ್ಯಾತಿಗಳಿಸಿದ್ದ ಸಂಸ್ಕೃತ ವೃತ್ತ ಜಾತಿಗಳಲ್ಲಿ ಉತ್ಪಲಮಾಲೆ, ಶಾರ್ದೂಲ, ಸ್ರಗ್ಧರೆ, ಮಹಾಸ್ರಗ್ಧರೆ, ಮತ್ತೇಭ, ಚಂಪಕಮಾಲೆ, ಮಾಲಿನಿ, ಮಂದಾಕ್ರಾಂತ, ವಸಂತತಿಲಕ, ಶಾಲಿನಿ, ಶಿಖರಿಣಿ, ಹರಿಣಿ, ಪ್ರಹರ್ಷಿಣಿ, ವಂಶಸ್ಥ, ಉಪೇಂದ್ರ, ವಜ್ರ ಎಂಬ ಸಮಸ್ತ ವೃತ್ತಗಳು ಉಪಜಾತಿ ವೃತ್ತಗಳೂ, ಅರ್ಧ ಸಮವೃತ್ತಗಳೂ, ಕನ್ನಡ ಭಾಷೆಯಲ್ಲಿ ಅಸಾಧಾರಣಗಳಾದ ಅಕ್ಷರ, ತ್ರಿಪದಿಗಳನ್ನು ಇಲ್ಲಿ ಬಳಸಿರುವುದು ಇಮ್ಮಡಿ ನಾಗವರ್ಮನ ಛಂದೋಲಯ ಜ್ಞಾನಕ್ಕೆ ಆತನ ವ್ಯಾಕರಣ ವೈಶಿಷ್ಟ್ಯ ಗುಣಕ್ಕೆ ಪೂರಕವಾಗಿದೆ. ಈ ಲಾಕ್ಷಣಿಕನು "ವಾಕ್ ಮೊದಲಾದ ಕೆಲವು ವ್ಯಂಜನಾಂತತ ಶಬ್ದಗಳ ವಾಕ್ಕು ಇತರೆ ಸಮಸಂಸ್ಕೃತ ರೂಪಗಳನ್ನು ಕೊಡದೆ, ಸಂಸ್ಕೃತ ಮೂಲರೂಪಗಳನ್ನೇ ಈ ಸಮಸಂಸ್ಕೃತ ಶಬ್ದಗಳ ನಿಘಂಟುವಿನಲ್ಲಿ ಕೊಟ್ಟಿರುವುದು ವಿಚಾರಾರ್ಹ."[೧೮]

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೆಂದರೆ ಅಂತಹ ಪದಗಳನ್ನು ಪರ್ಯಾಯ ಪದಗಳೊಡನೆ ದ್ವಂದ್ವಸಮಾಸ ಮಾಡುವ ಮೂಲಕ ಈ ದೋಷವನ್ನು ದೂರಮಾಡುವ ಸಾಧ್ಯತೆ ಉಂಟು. ಸಂಸ್ಕೃತ ಶಬ್ದಗಳ ಅಂತ, ಲಿಂಗ ಹಾಗೂ ನಿಭಕ್ತಿ ಮುಂತಾದುವುಗಳ ಪರಿಚಯ ಕಡಿಮೆ ಆಗಿದ್ದು, ಪ್ರಚಲಿತ ಕೋಶಗಳನ್ನು ಮುಂತಾದವುಗಳ ಪರಿಚಯ ಕಡಿಮೆ ಆಗಿದ್ದು, ಪ್ರಚಲಿತ ಕೋಶಗಳನ್ನು ಅರಿಯಲು, ಅವುಗಳ ತಿರುಳು ತಿಳಿಯಲು, ಸಾರಗ್ರಹಿಸಲು ಶಕ್ತಿ ಸಾಲದ ಕನ್ನಡಿಗರಿಗೆ ಅಭಿದಾನವಸ್ತು ಕೋಶವು ಒಂದು ದಾರಿ ದೀವಿಗೆ..! ಈ ಆಶಯವನ್ನು ಗಮನದಲ್ಲಿರಿಸಿಕೊಂಡೇ ಈ ಕೃತಿಯನ್ನು ಕೃತಿಕಾರ ರಚಿಸಿದಂತೆ ತೋರುತ್ತದೆ.

"ಅಪಾರವಾದ ಸಂಸ್ಕೃತ ಭಾಷೆ ಅರಿಯಲು, ಜ್ಞಾನ ಹೆಚ್ಚಿಸಿಕೊಳ್ಳಲು ಆಗಿನ ಕಾಲದಲ್ಲಿ ಸಂಸ್ಕೃತಕ್ಕೆ ಮೊರೆಹೋಗುವುದು ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ 'ಕನ್ನಡದಲ್ಲೂ ಬಳಕೆಯಲ್ಲಿದ್ದ, ಬಳಸಬಹುದಾದ ಸುಮಾರು ೮,೦೦೦ ಸಂಸ್ಕೃತ ಶಬ್ದಗಳನ್ನು ಸೇರಿಸಿ ಒದಗಿಸಿದ್ದಾನೆ."[೧೨]

'ಅಭಿದಾನವಸ್ತು ಕೋಶ'ಕ್ಕೆ ಆಕರವಾಗಿರುವ ಹಲಾಯುಧನ (ಅಭಿಧಾನ ರತ್ನಮಾಲೆ) ಕೋಶದಲ್ಲಿ ೧) ಸ್ವರ್ಗಕಾಂಡ ೨) ಭೂಮಿಕಾಂಡ ೩) ಪಾತಾಳಕಾಂಡ ೪) ಸಾಮಾನ್ಯ ಕಾಂಡ ೫) ನಾನಾರ್ಥಕಾಂಡಗಳೆಂದು ಐದು ಕಾಂಡಗಳಿವೆ.

"ನಾಗವರ್ಮನು ಇಲ್ಲಿಯ ಪ್ರಥಮ ಮೂರು ಕಾಂಡಗಳನ್ನು ಅವಿಭಿನ್ನಾರ್ಥ ಕಾಂಡಂ' ಎಂಬಲ್ಲಿ ಅಳವಡಿಸಿದ್ದಾನೆ. ಉಳಿದ ಸಾಮಾನ್ಯ ನಾನಾರ್ಥ ಕಾಂಡಗಳ ಹೆಸರನ್ನು ಶಬ್ದ ಸಮುದಾಯವನ್ನು ಬೇರ್ಪಡಿಸದೆ, ಅದರಂತೆಯೇ ಹೇಳಿದ್ದಾನೆ."[೧೧]

'ಅಭಿಧಾನವಸ್ತು ಕೋಶ'ದಲ್ಲಿ (ಅ) ಅವಿಭಿನ್ನಾರ್ಥಕಾಂಡ ಅಥವಾ ಏಕಾರ್ಥಕಾಂಡ (ಆ) ಸಾಮಾನ್ಯ ಕಾಂಡ (ಇ) ನಾನಾರ್ಥಕಾಂಡ ಎಂಬ ಮೂರು ಕಾಂಡಗಳಿವೆ.

ಅವಿಭಿನ್ನಾರ್ಥಕಾಂಡದಲ್ಲಿ (೧) ಸ್ವರ್ಗ (೨) ಕಾಲ (೩) ಸಂಸರಣ (೪) ಸಲಿಲ (೫) ಭೂ (೬) ಧಾತು (೭) ವನ (೮) ವೃಕ್ಷ (೯) ಮೃಗ-ಪಕ್ಷಿ (೧೦) ಗೃಹೋಪಕರಣ

೧೧)ಮನುಷ್ಯ ೧೨) ದೇಹಾವಯವ ೧೩) ಭೂಷಣ. ೧೪)ಸಮರಾಧಿ ಸಂಪ್ರಕೀರ್ಣ (೧೫) ಪಶು, (೧೬) ಧಾನ್ಯ ಎಂಬ ಸರ್ಗಗಳಿವೆ. ಆಯಾ ವರ್ಗಗಳಲ್ಲಿ ಅಡಕವಾಗಿರುವ ವ್ಯಕ್ತಿ, ವಸ್ತು ನಾಮಗಳನ್ನು ಕ್ರೋಢೀಕರಿಸಲಾಗಿದೆ.

ಇವುಗಳಿಗೆ ಸಾಂದರ್ಭೋಚಿತ ಕನ್ನಡದ ಅರ್ಥವೂ ಇದೆ. ಸಾಮಾನ್ಯ ಕಂಡದಲ್ಲಿ ಎರಡು ವರ್ಗಗಳಿವೆ. ಇಲ್ಲೂ ಕೂಡ ಅರ್ಥದ ಜೊತೆಗೆ ಗುಣ, ದ್ರವ್ಯ, ಕ್ರಿಯಾಜನ್ಯವಿಶೇಷಣ, ವಿಶೇಷ ಪದಗಳ ವಿವರವುಂಟು. ಅಗ್ರಗಣ್ಯ, ಪಂಡಿತ, ವಿದ್ವಾಂಸ, ಜಾಣ, ಲುಬ್ಧ, ಪ್ರಿಯ, ಶೂರ, ದಾನಿ, ಮೃದು, ಕಠೋರ, ಪ್ರೀತಿ, ಕ್ರೂರ, ಸೂಕ್ಷ್ಮ, ಸ್ಥೂಲ, ಅರುಣ, ಶುಭ್ರ ಸೇರಿದಂತೆ ಹಲವಾರು ಪದಗಳ ಸಂಗ್ರಹ ಕೃತಿಯ ವೈಶಿಷ್ಟ್ಯಗಳಲ್ಲಿ ಒಂದು. ವಿಶೇಷ ವರ್ಗದಲ್ಲಿ ಸಾಮಾನ್ಯ ವಾಚಿಗಳ ವಿವರವಿದೆ.

ಕೊನೆಯ ನಾನಾರ್ಥಕಾಂಡದಲ್ಲಿ ಒಂದಕ್ಕಿಂತ ಹೆಚ್ಚು ಅರ್ಥಇರುವ ಶಬ್ದಗಳಿವೆ. ಇದರಲ್ಲಿ ಜಿನ, ಶಿವ, ಪ್ರಭು, ಜೈವಾತ್ರ್ಯಕ, ಜೀವ, ಸೊದೆ, ವಧು, ವಿಧಿ, ಲೋಕ, ಪಾತಾಳ, ರಾಗ, ವೇಗ ಸಾರ, ಲಕ್ಷ್ಯ ತರಳ ಸೇರಿದಂತೆ ಅನೇಕ ಪದಗಳಿಗೆ ಇರುವ ನಾನಾರ್ಥಗಳನ್ನು ಹಲಾಯುಧ ಕೋಶ ಹೊರತಾಗಿ ಈತ 'ಅಮರಸಿಂಹನನ್ನು ಹಿಂಬಾಲಿಸಿದ್ದರೂ ಕೂಡ ಶಬ್ದಗಳನ್ನು ವರ್ಗೀಕರಿಸುವುದರಲ್ಲಿ ಮಾತ್ರ ಭಿನ್ನಮಾರ್ಗವನ್ನು ಅವಲಂಬಿಸಿದ್ದಾನೆ." [೧೩]

ಇಲ್ಲಿ ಒಂದು ಪದ್ಯದ ಉದಾಹರಣೆಯನ್ನು ಗಮನಿಸಬಹುದು. ಅಮರಾವತಿ (ಇಂದ್ರನ ರಾಜಧಾನಿ) ನಗರ ವನದ ಹೆಸರು, ನಂದನವನ, ಇದು ನಮೇರು ಮಂದಾರ, ಪಾರಿಜಾತ, ಮುಂತಾದ ದೇವ ವೃಕ್ಷಗಳಿಗೆ ಜನ್ಮಸ್ಥಾನ. ಇಲ್ಲಿನ ದೇವ ಅಶ್ವ (ಕುದುರೆ ಹೆಸರು : ಉಚ್ಚೈಶ್ರವಸ್ಸು) ಈ ಅರ್ಥ ಉಳ್ಳ ಪದ್ಯ ಇದು.

"ಅಮರಾವತಿ ನಗರಿವನಂ!
ನಮೇರು ಮಂದಾರ ಪಾರಿಜಾತಾದಿ ಸುರ!
ದ್ರುಮಯೋನಿ ನಂದನಂ ತುರ
ಗಮುದುಚ್ಚೈಶ್ರವಸಮುದುವೆ ದಿವಿಜ ತುರಂಗಂ[೧೪] ॥

(ಅವಿಭಿನ್ನಾರ್ಥಕಾಂಡಂ, ಸ್ವರ್ಗವರ್ಗಂ, ಪದ್ಯ-೩೬)

ಈ ಪದ್ಯಕ್ಕೆ ಆಕರವಾಗಿರುವ ಮತ್ತು ಸಂವಾದಿಗಳಾದ 'ಹಲಾಯುಧ' ಅಮರಕೋಶ, ನಿಘಂಟಿನ ಶ್ಲೋಕಗಳು ಈ ಕೆಳಗಿನಂತಿವೆ:

"ಅಮರಾವತಿ ಚ ನಗರೀ ನಂದನಮುದ್ಯಾನ ಮಿಂದಸ್ಯ (ಉತ್ತರಾರ್ಧ) ॥೫೫॥
"ಉಚ್ಚೈಃಶ್ರವಾಸ್ತುದೇವಾಶ್ವೋ ಮಾತಲಿಃ ಶಕ್ರಸಾರಥಿಃ (ಉತ್ತರಾರ್ಧ) ॥೬೧॥

(ಹಲಾಯುಧ ನಿಘಂಟು, ಸ್ವರ್ಗಕಾಂಡಂ)

ಮಂದಾರ ಪಾರಿಜಾತಕ ಹರಿಚಂದನ ಕಲ್ಪವೃಕ್ಷ ಸಂತಾನಾಃ ।
ಪಂಚೈತೇ ಸುರತರವೋ ಮೇರುಸ್ವರ ಪರ್ವತುಸ್ಸುಮೇರುಶ್ಚ ॥೧೩೫॥" [೧೫]
"ಹಯ ಉಚ್ಚೈಃಶ್ರವಾಸ್ತುತೋ ಮಾತಲಿರ್ನಂದನಂ ವನಮ್ (ಪೂರ್ವಾರ್ಧ) ॥೫೪॥
ಪಂಚೈ ತೇ ದೇವತರವೋ ಮಂದಾರಃ ಪಾರಿಜಾತಕಃ (ಉತ್ತರಾರ್ಧ) ॥೫೪॥[೧೬]

(ಅಮರಕೋಶ, ಸ್ವರ್ಗವರ್ಗಂ-೩೬)

ಹಲಾಯುಧ, 'ಅಮರಕೋಶ'ದ ತಿರುಳನ್ನು ಸೃಜನಾತ್ಮಕ ಪ್ರಕ್ರಿಯೆ ಮೂಲಕ ಸ್ವೀಕರಿಸಿರುವ ಇಮ್ಮಡಿನಾಗವರ್ಮನು ತನ್ನ 'ಅಭಿಧಾನವಸ್ತುಕೋಶ'ದಲ್ಲಿ ತನ್ನದೆ ಆದ ಶೈಲಿಯಲ್ಲಿ ವಿಷಯ ವೈವಿಧ್ಯತೆಯನ್ನು ನಿರೂಪಿಸಿದ್ದಾನೆ. ಮೂಲಾರ್ಥ ಒಂದೇ ಇದ್ದರೂ, ಹೇಳುವ ವಿಧಾನ ಬೇರೆ. ಅದೇರೀತಿ 'ಅಮರಕೋಶ'ದ ವಿಭಾಗ ಕ್ರಮಕ್ಕೂ 'ಅಭಿದಾನವಸ್ತುಕೋಶ' ವಿಭಾಗ ಕ್ರಮಕ್ಕೂ ಸಾಮ್ಯತೆ ಉಂಟು.

"ಅಮರಕೋಶದ ೨ನೆಯ ಕಾಂಡಗಳ ವಿಷಯವು ಅಭಿಧಾನವಸ್ತುಕೋಶದ ಒಂದನೆಯ ಕಾಂಡದಲ್ಲಿಯೂ, ಮೂರನೆಯ ಕಾಂಡದ ವಿಶೇಷ ನಿಘ್ನವರ್ಗ ಸಂಕೀರ್ಣ ವರ್ಗಗಳು ಎರಡನೆಯ ಕಾಂಡದಲ್ಲಿಯೂ ನಾನಾರ್ಥವರ್ಗವು ಮೂರನೆಯ ಕಾಂಡದಲ್ಲಿ ಅಡಕವಾದಂತೆ ಕಾಣುತ್ತದೆ."[೧೭]

ಈ ರೀತಿಯ ಸಂವಾದಿ, ಸ್ವೀಕೃತಿಯ ವಿಷಯ ಲೇಖಕವರ್ಗದಲ್ಲಿ ಸಾಮಾನ್ಯ. ಇದರ ಹೊರತಾಗಿ ಪ್ರಾಚೀನ ಕೃತಿಗಳಲ್ಲಿ ಹುದುಗಿದ್ದ ಅಂತರ್ಗತವಾಗಿದ್ದ ಹಲವಾರು ಪ್ರಾಸಾಂಗಿಕ, ವೈಚಾರಿಕ ವಿಷಯಗಳನ್ನು ಸಂಗ್ರಹಿಸಿ, ಇಲ್ಲಿ Nativityಗೆ ತಕ್ಕಂಥೆ ಸೋಸಿ ವಿಶದೀಕರಿಸಿ, ವಿಶ್ಲೇಷಿಸಿರುವ ಇಮ್ಮಡಿ ನಾಗವರ್ಮನ ಸೃಷ್ಟಿಶೀಲ ಕ್ರೀಯೆ ಎಂಥವರಿಗೂ ಇಷ್ಟವಾಗದೇ ಇರದು. ನಿಘಂಟು ಪರಂಪರೆಯಲ್ಲಿ ಪ್ರಾಚೀನ-ವರ್ತಮಾನದ ಕೊಡು, ಕೊಳ್ಳು ಸಂಪ್ರದಾಯ ಹೊಸತೇನಲ್ಲ. ಆದರೆ 'ಅಭಿಧಾನವಸ್ತುಕೋಶ' ದ ವಿಷಯ ವೈಶಾಲ್ಯತೆ, ಕನ್ನಡ ನೆಲಕ್ಕೆ ಹೊಂದಿಕೆಯಾಗುವಂತೆ ರಚಿತಗೊಂಡ ಕ್ರಮ ಹಾಗೂ ಪ್ರಕಾರಗಳ ದಾಖಲೆ ಎಂಥದೇ ಓದುಗರನ್ನು ಕ್ಷಣಾರ್ಧದಲ್ಲಿ ಹಿಡಿದಿಡುತ್ತದೆ.

"ಅರ್ಥೈಸುವ ವಿಧಾನವಾಗಲೀ, ಛಂಧೋವೈವಿಧ್ಯವನ್ನು ಅಳವಡಿಸುವಲ್ಲಾಗಲೀ, ಅಲ್ಲಲ್ಲಿಯೇ ಸೂಕ್ತಿಯಂಥಹ ಕೆಲವು ಮಾತುಗಳನ್ನೂ ನೀಡುವಲ್ಲಿಯೇ ಆಗಲೀ, ಸಂಸ್ಕೃತದೊಡನೆ ಕನ್ನಡ ಪದಗಳನ್ನು ಬೆರೆಸಿ ಹೇಳುವಲ್ಲಿಯೇ ಆಗಲಿ, ಹೀಗೆ ಹತ್ತು ಹಲವು ರೀತಿಗಳಲ್ಲಿ ಕನ್ನಡ ಸಾಹಿತ್ಯದಲ್ಲಿ 'ಅಭಿಧಾನವಸ್ತುಕೋಶ'ವು ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆ."[೧೮]

ನಿಘಂಟು ರಂಗದಲ್ಲಿ ಆಗತಾನೆ ಪ್ರವೇಶಿಸಿರುವವರಿಗೆ, ಪಾಂಡಿತ್ಯದಲ್ಲಿ, ಬಹುಶ್ರುತರಾಗಬೇಕೆಂದು ಬಯಸುವುವವರಿಗೆ ಇಮ್ಮಡಿ ನಾಗವರ್ಮನ ಕೃತಿ ತುಂಬಾ ಸಹಕಾರಿ. ಇದು ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತ ಪದಗಳಿಗೆ ಅರ್ಥವನ್ನು ಹೇಳುವ ಪದ್ಯರೂಪವಾದ ಸಂಸ್ಕೃತ ಕರ್ಣಾಟಕ ನಿಘಂಟು ಆಗಿರುವುದರಿಂದ ಕನ್ನಡ ಭಾವಾರ್ಥದಲ್ಲಿ ಸಂಸ್ಕೃತ ವಾಙ್ಮಯ ಅರಿಯುವವರಿಗೂ ಇದು ದಾರಿ ತೋರುತ್ತದೆ.

ಶಬ್ದ, ಅರ್ಥದ ತಿರುಳು ಹಾಗೂ ಪರ್ಯಾಯ ಪದರೂಪಗಳ ಗ್ರಹಿಕೆಯ ಬಗ್ಗೆ ಬೆಳಕು ಚೆಲ್ಲುವ ಬಗೆಯನ್ನು ಕೃತಿಕಾರ ನಮೂದಿಸುವುದು ಹೀಗೆ :

"ಪರ್ಯಾಯ ಶಬ್ದದೋಳ್ ತಾ।
ತ್ಪರ್ಯದಿನಱಿದರ್ಥಗತಿಯನನ್ವರ್ಥತೆಯಿಂ ॥
ಪರ್ಯಾಲೋಚಿಸಿ ಕೊಳ್ಗಾ
ಹಾರ್ಯಮಿದೆಂದನಭಿಹಿತದೊಳಭಿಯೋಗಪರರ್ ॥
(ಅಭಿನ್ನಾರ್ಥ ಕಾಂಡಂ, ಸ್ವರ್ಗವರ್ಗಂ–ಪದ್ಯ– ೬)

ಸಮಾನಾರ್ಥ ಉಳ್ಳ ಪರ್ಯಾಯ ಶಬ್ದಗಳ ಅರ್ಥವನ್ನು, ಆ ಶಬ್ದಗಳ ತಾತ್ಪರ್ಯ, ಪರಸ್ಪರ ಅನ್ವಯಿಕೆ, ಬಿಡಿಸಿ ಹೇಳದಿರುವ ಶಬ್ಧಗಳ ಸ್ವರೂಪ ಗ್ರಹಿಕೆಗೆ ಈ ಕೋಶ ಸಹಕಾರಿ ಎಂಬುದು ಕೃತಿಕಾರನ ಆಂತರ್ಯದ ಅರ್ಥ. ಮಾತ್ರವಲ್ಲ, ಅಲ್ಲಲ್ಲಿ ಸಂಸ್ಕೃತ ಶಬ್ದಗಳನ್ನು ಹೇಳುವಾಗ ಕನ್ನಡ ಶಬ್ದಗಳನ್ನು ಸೇರಿಸಿರುವುದು, ಕನ್ನಡ ಶಬ್ದಗಳಲ್ಲಿಯೇ ಅರ್ಥ ಹೇಳಿರುವುದು ಉಂಟು"[೨೧] ಉದಾಹರಣೆಗೆ;

ಶಿಂಜಿನಿನೂಪುರ ಮಂದುಗೆ । ಮಂಜೀರಂ ॥ (೧–೧೩–೭)
ಬಸಿಱೆರೆದರಂ । ಜಠರಂ । (೧–೧೨–೬)

ನಾನಾರ್ಥಕಾಂಡದಲ್ಲಿ ಹಲವು ಶಬ್ದಗಳು ಇರುವ ಬೇರೆ ಅರ್ಥಗಳನ್ನು ಒಗ್ಗೂಡಿಸಿರುವುದಕ್ಕೆ ಉದಾಹರಣೆ :

ಪೂವಿಂಗಂ ಮಾಲತಿಗಂ । ದೇವರ್ಕಳಂ
ಸಮಂತು ಸುಮನೋನಾಮಂ । (೧–೧೮–೮)

ಸಂಸ್ಕೃತ ಶಬ್ದಗಳಿಗೆ ಮಾತ್ರ ಅರ್ಥವನ್ನಷ್ಟೇ ಹೇಳಿರುವುದು, ಉದಾಹರಣೆಗೆ,

ಆವುದು ಬೆಳಗುಂ ದೃಷ್ಟಿಯಿ ।
ನಾ ವಿಷಯಂ ದೇವ ಮಾತೃಕಂ ॥ (೧–೫–೩)

ಒಂದು ವಿಷಯಕ್ಕೆ ಕುರಿತ ಸಂಸ್ಕೃತ ಶಬ್ದಗಳಿಗೆ ವಿವರಣೆ ನೀಡಿರುವುದಕ್ಕೆ ಉದಾಹರಣೆ :

"ಒಂದು ಸಮಾಜವೊಂದು ತೇರ್ಮೂಱಶ್ವಯ್ದು ಕಾಲಾಳ್ಗಳ್ ಪತ್ತಿಯಕ್ಕುಂ
... ಪತ್ತ ನೀಕಿನಿಯಕ್ಕೌಹಿಣಿಯೆನಿಕ್ಕುಂ" (೧–೧೮–೮)

ಮೂಲತಃ ಕನ್ನಡ ಭಾಷಾಭಿಮಾನಿಯಾಗಿದ್ದ ಇಮ್ಮಡಿ ನಾಗವರ್ಮನು, ಕನ್ನಡ ಪದ ಬಳಕೆ ವಿಷಯ ಬಂದಾಗ ಭಾವತುಂಬಿ, ಆ ಕಾಲದಲ್ಲಿ ಪ್ರಚಲಿತವಿದ್ದ ಭಾಷೆಯನ್ನು ಬಳಸುವುದರಲ್ಲಿ ಹಿಂದೆ ಬೀಳುವುದಿಲ್ಲ. ಕನ್ನಡ ಪದಕ್ಕೆ ಪರ್ಯಾಯವಾಗಿ ವಿಶೇಷ ಎನಿಸುವ ಸಂಸ್ಕೃತ ಪದ ಬಳಸಿರುವುದು ವಿಶೇಷ. ಉದಾಹರಣೆಗೆ :

"ಉದಪಾನಂ ಕೂಪಂ ಪ್ರಹಿ ।
ಉದಕೋಚ್ಛ್ವಾಸಂ ಕೋಡಿದ
ಲದ ಬಗರಣೆ ಚುಂಡಿ ಚೂತಕಂ ಚುರಿ ಪೆಸರಂ ॥"
(ಅಭಿನ್ನಾರ್ಥಕಾಂಡಂ, ಪದ್ಯ–೧೬)

ಇಲ್ಲಿ ಬಳಸಿರುವ 'ಕೋಡಿ' ಕನ್ನಡ ಶಬ್ಧ. ಇದಕ್ಕೆ ಪೂರಕವಾಗಿ 'ಬಗರಣೆ' ಎಂದು ಹೇಳಿದ್ದಾನೆ. ಪರ್ಯಾಯವಾಗಿ ಕೆರೆ, ಹಳ್ಳ, ಕಾಲುವೆ ಪದಗಳನ್ನು ಸಲಿಲ ವರ್ಗದಲ್ಲಿ ಬಳಸಿದಂತೆ ತೋರುವುದಿಲ್ಲ. ಇಮ್ಮಡಿ ನಾಗವರ್ಮನಿದ್ದ ಸಂಸ್ಕೃತ ಭೂಯಿಷ್ಟ ಕಾಲಘಟ್ಟದಲ್ಲಿ ಇಂತಹ ಪದ ಬಳಕೆ ಇತ್ತೋ... ಅಥವಾ ಇದ್ದರೂ ಆತನ ಗಮನಕ್ಕೆ ಯಾಕೆ ಬರಲಿಲ್ಲ ಎಂಬುದರ ಬಗ್ಗೆ ವಿದ್ವಾಂಸರು ಕ್ಷಕಿರಣ ಬೀರುವ ಅಗತ್ಯವಿದೆ.

ಕನ್ನಡ ಪದ 'ಕೋಡಿ'ಗೆ ಪರ್ಯಾಯವಾಗಿ ಚುಂಡಿ, ಚೂತಕಂ, ಚುರಿ ಎಂಬ ಸಂಸ್ಕೃತ ಶಬ್ದಗಳನ್ನು ಹೆಸರಿಸಿರುದು ಕೃತಿಕಾರನ ಸಂಸ್ಕೃತ ಬಹುಶ್ರುತವನ್ನು ಕನ್ನಡದ ಸಂದರ್ಭವನ್ನು ಎತ್ತಿ ತೋರಿಸುತ್ತದೆ.

ಈತ ಹಲಾಯುಧನ ಕೋಶ ಅನುಸರಿಸಿದ್ದರೂ, ಅಲ್ಲಿ ಕಾಣಸಿಗದ ಸಂಸ್ಕೃತದ, ಉದಕೋಚ್ಛ್ವಾಸಂ' ಕೋಡಿಗೆ ಪರ್ಯಾಯ ಪದ ಎಂಬ ಅಪರೂಪದ ಪದವನ್ನು ಅರ್ಥೈಸಿದ್ದು ಇಮ್ಮಡಿ ನಾಗವರ್ಮನ ಬಹುಜ್ಞತೆಗೆ ಒಂದು ಸಣ್ಣ ಉದಾಹರಣೆ.

ಸಲಿಲವರ್ಗದ ವರ್ಗದ (ಪದ್ಯ– ೧೬)ಲ್ಲಿ ಬರುವ 'ಆವಾಳ ಮಾವಾಳ' ಎಂಬಲ್ಲಿ 'ಪಾವಸೆ(ಪಾಚಿ)ಗೆ "ಶೈವಳ, ಜಳನೀಲಿಕಾ' ಎಂಬ ಹೆಸರುಗಳನ್ನು ಹೇಳಿದ್ದಾನೆ. ಭೂವರ್ಗದಲ್ಲಿ ಕರಿಮಣ್ಣಿನ ಭೂಮಿಯೇ 'ಎರೆಮಣ್ಣು' (ಪದ್ಯ ೪) ಎಂಬ ಕನ್ನಡ ಶಬ್ದಕ್ಕೆ 'ಕೃಷ್ಣಭೂಮಿ' ಎನ್ನುವ ಸಂಸ್ಕೃತದ ಪದವನ್ನು ಪರ್ಯಾಯವಾಗಿ ಅರ್ಥೈಸುವ ಜಾಣ್ಮೆ ಮೆರೆಯುತ್ತಾನೆ.

ಅಭಿಧಾನ ವಸ್ತುಕೋಶದ ಅವಿಭಿನ್ನಾರ್ಥಕಾಂಡ, ನಾನಾರ್ಥಕಾಂಡ ಹಾಗೂ ಸಾಮಾನ್ಯಕಾಂಡದಲ್ಲಿ ಇಂತಹ ಚಮತ್ಕಾರಗಳೆಷ್ಟೋ..! ಈ ಕೋಶದಲ್ಲಿ ಒಟ್ಟು ೭೫೯ ಪದ್ಯಗಳಿವೆ. ಸಮಗ್ರಕೋಶವನ್ನು ಈತ 'ಕಂದ'ದಲ್ಲಿಯೇ ಬರೆದಿದ್ದರೂ, ವರ್ಗಗಳ ಕೊನೆಯಲ್ಲೂ, ಇತರೆಡೆಯಲ್ಲೂ ವಿಷಯ ವೈವಿದ್ಯಕ್ಕಾಗಿ ಹಲವಾರು ಛಂದೋ ಪ್ರಕಾರಗಳನ್ನೂ ಬಳಸಿದ್ದು ವಿಶಿಷ್ಟ ಲಾಕ್ಷಣಿಕನಂತೆ ಗೋಚರಿಸುತ್ತಾನೆ.

ಮನುಷ್ಯ ವರ್ಗ, ಪುರಗೃಹೋಪಕರಣಾದಿವರ್ಗ, ಭೂಷಣಾದಿವರ್ಗ, ಸಮರಾದಿ ಸಂಪ್ರಕೀರ್ಣವರ್ಗ, ಪಶುವರ್ಗ, ಧಾನ್ಯವರ್ಗ, ಕಾಂಡದ ಉಪಸಂಹೃತಿ ವಿಶೇಷಣ ವರ್ಗ, ವಿಶೇಷ್ಯವರ್ಗ, ನಾನಾರ್ಥವರ್ಗಗಳಲ್ಲಿ ಅಲ್ಲಲ್ಲಿ ಕನ್ನಡದ ಅರ್ಥವನ್ನೂ ಕೊಟ್ಟಿದ್ದಾನೆ. ಕೃತಿಯ ನಿರೂಪಣೆಗೆ ಸಂಸ್ಕೃತ ಶಾಸ್ತ್ರ ಗ್ರಂಥಗಳ ಧಾಟಿ ಅನುಸರಿಸಿ, ವಿಸ್ತಾರವಾದ ವಿಷಯ ವೈಶಿಷ್ಟ್ಯ ದಾಖಲಿಸಿರುವುದಕ್ಕೆ ಕನ್ನಡಿಗರು ಆತನಿಗೆ ಚಿರಋಣಿಯಾಗಿರಬೇಕು. 'ರನ್ನಕಂದ'ದ ಬಳಿಕ ಗಾತ್ರದಲ್ಲೂ ಪಾತ್ರದಲ್ಲೂ 'ಅಭಿಧಾನವಸ್ತುಕೋಶ'ವೇ ಹಿರಿದು. ಕೃತಿಯ ಒಟ್ಟಾರೆ ತಿರುಳು ಅರಿಯಲು ಅದರ ಮಹತ್ವ–ಚಾರಿತ್ರಿಕ ಅಂಶಗಳು ಬೆಳಕಿಗೆ ಬರಲು, ಕೃತಿಯನ್ನು ಪುನರ್ ವ್ಯಾಖ್ಯಾನಿಸುವ ಅಗತ್ಯವಿದೆ.

**ಅಡಿಟಿಪ್ಪಣಿ**

೧. ಹೆಮ್ಮಿಗೆ ದೇಶಿಕಾಚಾರ್ಯ, **ಉಪಾಯನ**, ಪ್ರೊ. ಡಿ.ಎಲ್. ಎನ್. ಅಭಿನಂದನ ಗ್ರಂಥ

೨. ಪ್ರೊ. ಹೆಚ್.ಎಂ. ಶಂಕರನಾರಾಯಣರಾವ್, **ಎರಡನೆಯ ನಾಗವರ್ಮನ ಕಾಲ, ದೇಶ, ಕೃತಿಗಳು**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು – ಪುಟ – ೭

೩. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ – **ಶಾಸ್ತ್ರೀಯ** ೧, ಪುಟ ೩೬೯, ಸಪ್ನ ಪ್ರಕಾಶನ, ಬೆಂಗಳೂರು

೪. ಎನ್. ಬಸವಾರಾಧ್ಯ ನಿಘಂಟು ಶಾಸ್ತ್ರ ಮತ್ತು ಕನ್ನಡ ನಿಘಂಟುಗಳು, **ಸಂಶೋಧನೆ**. ಪುಟ ೧೨೯

೫. ಚಿಟಗುಪ್ಪಿ ಭೀಮರಾವ್– **ಇಮ್ಮಡಿ ನಾಗವರ್ಮ**, ಪುಟ ೧೨೬.

೬. ಅದೇ... ಮುನ್ನುಡಿ – ಪುಟ ೬

೭. ಎ. ವೆಂಕಟರಾವ್, ಎಚ್. ಶೇಷಯ್ಯಂಗಾರ್ (ಸಂ) **ಅಭಿದಾನವಸ್ತು ಕೋಶ**, ಮುನ್ನುಡಿ, ಪುಟ ೬

೮. ಚಿಟಗುಪ್ಪಿ ಭೀಮರಾವ್, **ಪೂರ್ವೋಕ್ತ**, ಪುಟ ೧೨೬ ಪುಟ ೧೨೭.

೯. ಎ. ವೆಂಕಟರಾವ್, ಎಚ್ ಶೇಷಯ್ಯಂಗಾರ್ (ಸಂ) **ಅಭಿಧಾನವಸ್ತು ಕೋಶ**, ಮುನ್ನುಡಿ, ಪುಟ ೭

೧೦. ವಾಹಮದು; ೩= ದಿವ್ಯ ತುರಂಗಂ (ಗ) + = ನ.ಸ. ಅಕ್ಷರಸಾದೃಶದಿಂದ ಘಟಿಸಿದೆ. ಫ– ಕಾರ್ತಿಕ್, ಅನನ್ಯ ಅಭಿನಂದನ ಗ್ರಂಥ, ಪುಟ– ೬೦೮

೧೧. ಎಚ್. ಶೇಷಯ್ಯಂಗಾರ್, **ನಾಗವರ್ಮನ ವಸ್ತುಕೋಶ**, (ಪ್ರಬುದ್ಧ ಕರ್ನಾಟಕ – ೫–೨).

೧೨. ಡಾ, ಸರಸ್ವತಿ ವಿಜಯ್ ಕುಮಾರ್ – **ಸಾರ್ಥಕ**, ಪ್ರೊ ಮರಿಯಪ್ಪ ಭಟ್ಟರ ಅಭಿನಂದನ ಗ್ರಂಥ– ಪುಟ ೪೨೭

೧೩. ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ – **ಪೂರ್ವೋಕ್ತ**, ಪುಟ ೩೭೦.

# ಪಂಪ ಮತ್ತು ಕುಮಾರವ್ಯಾಸ ಭಾರತ : ಸೃಜನಶೀಲತೆಯ ನೆಲೆಗಳು

–ಎಚ್ ಎನ್. ಮುರಳೀಧರ

ಈ ವಿಷಯಕ್ಕೆ ಸಂಬಂಧಿಸಿದಂತೆ ಪ್ರಸ್ತುತ ವಿವೇಚನೆಯಲ್ಲಿ ಹಾಕಿಕೊಳ್ಳಲು ಬಯಸುವ ಚೌಕಟ್ಟಿಗೆ ಸಂಬಂಧಿಸಿದಂತೆ ಮೊದಲಿಗೆ ಒಂದೆರಡು ಮಾತುಗಳನ್ನು ಹೇಳಬೇಕು. ಅದು ನಮ್ಮ ಶೈಕ್ಷಣಿಕ ಅನುಸಂಧಾನಗಳ ವೈರುದ್ಧ್ಯಗಳದು. ಒಂದೆಡೆ ನಾವು ಸಾಹಿತ್ಯದ ಅಭಿವ್ಯಕ್ತಿ ಪ್ರಕಾರಗಳಿಗೆ ಸಂಬಂಧಿಸಿದಂತೆ ಅತೀವವಾದ ಕಾಳಜಿಯನ್ನು ವಹಿಸುತ್ತೇವೆ. ಕಾವ್ಯ, ನಾಟಕ, ಸಣ್ಣಕಥೆ, ಕಾದಂಬರಿ, ಪ್ರಬಂಧ ಮೊದಲಾದ ಪೃಥಕ್ಕರಣವನ್ನು ನಮ್ಮ ಶೈಕ್ಷಣಿಕ ಪಠ್ಯಕ್ರಮ ಮೇಲ್ನೋಟಕ್ಕಂತೂ ಮಾಡುವಂತೆ ತೋರುತ್ತದೆ. ಈ ದೃಷ್ಟಿಯಿಂದಲೇ ನಮಗೆ ಚಂಪು, ರಗಳೆ, ಷಟ್ಪದಿ, ಸಾಂಗತ್ಯ ಮೊದಲಾದುವುಗಳೂ ಒಂದು ಹಂತದವರೆಗೆ ಬೇರೆ ಬೇರೆಯಾಗಿಯೇ ಪರಿಗಣಿತವಾಗಿರುವಂತೆ ತೋರುತ್ತದೆ. ಆದರೆ ಈ ಪರಿಗಣನೆಯ ಇನ್ನೊಂದು ತುದಿಯಲ್ಲಿ ಸಂಕಥನ (Discourse) ಗೌಣವಾಗುತ್ತದೆ; ಕೇವಲ ಕಥೆ ಮಾತ್ರವೇ ಮುಖ್ಯವಾಗುತ್ತದೆ. ಅಭಿವ್ಯಕ್ತಿಯ ಅನನ್ಯತೆಗಳು ಅವಗಣನೆಗೆ ಒಳಗಾಗಿ ತಾತ್ಪರ್ಯರೂಪವಾದ ಆಶಯ ಎಲ್ಲಿಲ್ಲದ ಪ್ರಾಧಾನ್ಯವನ್ನು ಪಡೆದುಕೊಂಡು ಬಿಡುತ್ತದೆ. ಹೇಗೆ ಹೇಳಲಾಗುತ್ತಿದೆ ಎನ್ನುವುದು ಪಕ್ಕಕ್ಕೆ ಸರಿದು ಏನನ್ನು ಹೇಳಲಾಗುತ್ತಿದೆ ಎನ್ನುವುದು ಮುನ್ನೆಲೆಗೆ ಬರುತ್ತದೆ. ನಮ್ಮ ಶೈಕ್ಷಣಿಕ ಪಠ್ಯಕ್ರಮ ಮತ್ತು ಪರೀಕ್ಷಾ ವಿಧಾನಗಳು ನಮ್ಮ ಮೇಲೆ ಹೊರಿಸಿರುವ ಭಾರವೆಂದೂ ಇದನ್ನು ಗ್ರಹಿಸಬಹುದು.

ಈ ಸನ್ನಿವೇಶದ ಇನ್ನೊಂದು ಪರಿಣಾಮದ ಬಗೆಗೆ ಇಲ್ಲಿಯೇ ಹೇಳಬೇಕು. ಅದೆಂದರೆ ನಾವು ಸಾಹಿತ್ಯವನ್ನು ಮುಕ್ಕಾಲು ಪಾಲು ಓದುವ ಪಠ್ಯವಾಗಿ ಸ್ವೀಕರಿಸಿರುವುದು. ಇನ್ನೂ ಮುಂದುವರಿದು ಹೇಳಬೇಕೆಂದರೆ ನಮ್ಮ ಓದು ಆಧುನಿಕ ಸಂದರ್ಭದಿಂದ ಉತ್ಪನ್ನವಾದ ತಾರ್ಕಿಕ ಓದು. ಇದು ಅರ್ಥವನ್ನು ಪಠ್ಯದ ಕೇಂದ್ರದಲ್ಲಿಡಲು ಪ್ರೇರಿಸುತ್ತದೆ. ಇದನ್ನು ನಿರೂಪಣೆಯ ಅನುಕೂಲಕ್ಕಾಗಿ 'ಗದ್ಯ ಸಂವೇದನೆ' ಎಂದು ಕರೆಯಬಹುದೇನೋ. ಇದು ನಮ್ಮನ್ನು ಪದ್ಯವನ್ನು ಪದ್ಯವಾಗಿ ನೋಡದಂತೆ ತಡೆಯುತ್ತದೆ. ಪದ್ಯವನ್ನು ಪದ್ಯವಾಗಿ ನೋಡುವುದೆಂದರೆ ಅದನ್ನೊಂದು ಛಂದೋರೂಪವಾಗಿ ಗ್ರಹಿಸಬೇಕೆಂದಲ್ಲ. ಕಣ್ಣಿಗೆ ಕಾಣುವ ಅಕ್ಷರಗಳೇ ಹೆಚ್ಚಾಗಿ ಆವರಿಸಿಕೊಂಡಾಗ ಕಿವಿಯ ಮೂಲಕ ಮಾತ್ರವೇ ಅನುಸಂಧಾನಕ್ಕೆ ಒಳಗಾಗಬೇಕಾದ ಪದ್ಯದ ನಾದದ ವ್ಯಾಕರಣ ಮರೆಯಾಗಿಬಿಡುತ್ತದೆ. 'ಅರ್ಥ'ವನ್ನು ಮೀರಿದ ಗ್ರಹಿಕೆಗಳು ದೂರವೇ ಉಳಿದುಬಿಡುತ್ತವೆ.

ಈ ಮೇಲಿನ ಸಂಗತಿಗಳನ್ನು ಪ್ರಸ್ತಾವಿಸಿದ್ದರ ಉದ್ದೇಶ ಸಾಹಿತ್ಯಕ ಶ್ರೇಣೀಕರಣವೊಂದನ್ನು ನಿರ್ಮಿಸಬೇಕೆಂದಾಗಲಿ ತೀರ್ಪುಗಾರಿಕೆಯ ಸಂಹಿತೆಯೊಂದನ್ನು ಕಟ್ಟಿಕೊಳ್ಳಬೇಕು ಎಂದಾಗಲಿ ಅಲ್ಲ. ಬದಲಾಗಿ ಅಭಿವ್ಯಕ್ತಿಯನ್ನು ಅದರ ಅನನ್ಯತೆಯಲ್ಲಿ ಗುರುತಿಸಲು ಪ್ರಯತ್ನಿಸದಿದ್ದಾಗ ನಮಗೆ ನೆಲದ ನಕ್ಷೆ ದೊರೆಯಬಹುದೇ ಹೊರತು ಅನುಭವ ದಕ್ಕಲಾರದು. ಹೀಗಾಗಿ ಪಂಪ ಕುಮಾರವ್ಯಾಸರ ವೈಶಿಷ್ಟ್ಯಗಳನ್ನಾದರೂ ನಾವು ಇದೇ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಈ ಬಗೆಯ ಅನುಸಂಧಾನದಿಂದ ನಾವು ಎಲ್ಲವನ್ನೂ ಗ್ರಹಿಸಿಬಿಡುತ್ತೇವೆ ಎನ್ನುವುದು ಧಾರ್ಷ್ಟ್ಯದ ಮಾತಾಗಬಹುದಾದರೂ ಈ ಬಗೆಯ ಪ್ರವೇಶದಿಂದ ಒಂದಿಷ್ಟು ಸಾರ್ಥಕ ನೋಟಗಳನ್ನು ಪಡೆದುಕೊಳ್ಳಲು ಸಾಧ್ಯವೆನ್ನುವುದು ವಿನಮ್ರ ಸೂಚನೆ.

ಮೊದಲಿಗೆ ಪಂಪ-ಕುಮಾರವ್ಯಾಸರ ಕಾವ್ಯಕರ್ಮದ ಸ್ವರೂಪಕ್ಕೆ ಸಂಬಂಧಿಸಿದಂತೆ ಕೆಲವು ಸಂಗತಿಗಳನ್ನು ಗಮನಿಸಬಹುದು. ಇವರಿಬ್ಬರ ದೇಶ-ಕಾಲ-ಸಂದರ್ಭಗಳು ಬೇರೆ ಬೇರೆಯಷ್ಟೇ ಅಲ್ಲ ವಿಭಿನ್ನವೂ ಹೌದೆಂಬ ಅರಿವು ಇಲ್ಲಿನ ಹಿನ್ನೆಲೆಯಲ್ಲಿದೆ. ಅಲ್ಲದೆ ಇನ್ನೊಂದು ದೃಷ್ಟಿಯಿಂದ ಸಾಹಿತ್ಯಕೃತಿಯೊಂದು ತನ್ನ ಸಂದರ್ಭದ ಸಾಮಾಜಿಕ ಉತ್ಪನ್ನವೂ ಆಗಿರುತ್ತದೆ ಎಂಬುದನ್ನೂ ಮರೆಯುವಂತಿಲ್ಲ. ಹೀಗಿದ್ದರೂ ವ್ಯಕ್ತಿಗತ ಅಪೇಕ್ಷೆ ಮನೋಧರ್ಮಗಳೂ ಕೆಲಸ ಮಾಡಿರುವುದನ್ನು ಗಮನಿಸದಿರುವಂತಿಲ್ಲ. ಆದರೆ ಒಂದು ಸಂಗತಿ ಮಾತ್ರ ನಿಜ; ಇಲ್ಲಿ ಇವೆಲ್ಲವನ್ನೂ ಹೀಗೆ ಪೃಥಕ್ಕರಿಸಿಕೊಳ್ಳುವುದು ಗ್ರಹಿಕೆ – ವಿಶ್ಲೇಷಣೆಗಳ ಅನುಕೂಲಕ್ಕಾಗಿಯೇ ಹೊರತು ಒಟ್ಟಾರೆಯಾದ ಪ್ರಕ್ರಿಯೆಯಲ್ಲಿಯೇ ವಿಭಜನೆಗಳನ್ನು ಉಂಟು ಮಾಡುವುದಕ್ಕಂತೂ ಅಲ್ಲ.

ಪಂಪಭಾರತದ ವಸ್ತುವಿನ್ಯಾಸದ ಬಗ್ಗೆ ಈಗಾಗಲೇ

# ೯೯೬, 'ಶ್ರೀಪಾದ' ೧೫ನೇ ಅಡ್ಡರಸ್ತೆ, ೧ನೇ ಹಂತ, ಕುಮಾರಸ್ವಾಮಿ ಲೇಔಟ್, ಬೆಂಗಳೂರು – ೫೬೦ ೦೭೮

ಸಾಕಷ್ಟು ಚರ್ಚೆ ನಡೆದಿದೆ. ಆ ವಿವರಗಳನ್ನೆಲ್ಲ ಇಲ್ಲಿ ಮತ್ತೆ ಉಲ್ಲೇಖಿಸುವ ಅಗತ್ಯವಿಲ್ಲ. ಆದರೆ ಈ ವಿವೇಚನೆಗಳಲ್ಲೆಲ್ಲ ಮುಖ್ಯವಾಗಿ ಗಮನಿಸಬೇಕಾದ ಒಂದು ಸಂಗತಿಯೆಂದರೆ ಮಹಾಭಾರತದೊಂದಿಗೆ ಪಂಪನು ನಡೆಸಿದನೆಂದು ಹೇಳಲಾದ ಸಮಕಾಲೀನ ಅನುಸಂಧಾನ. ಇದೇ ಆತನ ಕೃತಿಯ 'ಲೌಕಿಕ' ಆಯಾಯವೂ ಹೌದು. ಈ ಸಂದರ್ಭದಲ್ಲಿ ಪಂಪನು ತನ್ನ ವಸ್ತುವಿನೊಂದಿಗೆ ನಡೆಸಿರುವ 'ಕರ್ಷಣ' ಕೆಲವೊಂದು ಕುತೂಹಲಗಳಿಗೆ ನಮ್ಮನ್ನು ತೆರೆಯುತ್ತದೆ. ಅದು ಸಮಕಾಲೀನ ಹಾಗೂ ಸರ್ವಕಾಲೀನಗಳ ಸಮನ್ವಯದ ಬಗೆಗೆ ಆತನು ಎದುರಿಸಿದ ಸವಾಲು ಕೂಡ ಹೌದು. 'ಸಮಸ್ತ' ಭಾರತದ ಸಾಧ್ಯತೆಗಳನ್ನು ನಾವು ಈ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ. 'ಕತೆ ಪಿರಿದಾಡೊಡಂ ಕತೆಯ ಮೆಯ್ಗಿಡಲೀಯದೆ' ಎನ್ನುವಲ್ಲಿ ಕತೆ ಮೆಯ್ಗಿಡಬಹುದೆಂಬ ಆತಂಕವೂ ಇರಬಹುದೆಂಬುದನ್ನು ಅಲ್ಲಗಳೆಯುವಂತಿಲ್ಲ. ಅಲ್ಲದೆ ಕತೆ ಪಿರಿದು ಎಂಬುದನ್ನು ಕೇವಲ ಗಾತ್ರಕ್ಕೆ ಅನ್ವಯಿಸದೆ ಸಾಧಾರಣೀಕರಣದ ಸಾಧ್ಯತೆಗಳಿಗೆ ಸಂಬಂಧಿಸಿದಂತೆಯೂ ನೋಡಬಹುದು.

ಪಂಪನ ಮಾರ್ಗ ದೇಸಿಗಳ ಸಮನ್ವಯದ ತುಡಿತದ ಹಿನ್ನೆಲೆಯಲ್ಲಿ ಈ ಬಗೆಯ ಇನ್ನೊಂದು ಆಯಾಮವನ್ನು ಆರೋಪಿಸಲು ಬರುತ್ತದೆಯೇ ಎನ್ನುವುದೂ ವಿಚಾರಣೀಯವಾದ ಸಂಗತಿಯೇ. ಆದರೆ ಇವೆರಡೂ ಪಂಪನಿಗೆ ಕೇಂದ್ರಾಕರ್ಷಣ ಹಾಗೂ ಕೇಂದ್ರಾಪಕರ್ಷಣ ಶಕ್ತಿಗಳಾಗಿ ಪರಿಣಮಿಸಿದವೆಂಬುದನ್ನು ಮಾತ್ರ ಮರೆಯದಿರುವಂತಿಲ್ಲ. ಆದರೆ ಕುಮಾರವ್ಯಾಸನಿಗೆ ಈ ಬಗೆಯ ಇಬ್ಬಂದಿಯೊಂದಿಗೆ ಸಮತೋಲನವನ್ನು ಸಾಧಿಸಬೇಕಾದ ಜರೂರು ಒದಗಿಬರಲಿಲ್ಲ.[೧] ಹಾಗೆ ನೋಡಿದರೆ ಕುಮಾರವ್ಯಾಸನ ಸಂಘರ್ಷವಿರುವುದೇ ಪಂಪನಂಥವರು ಸ್ಥಾಪಿಸಿದ ಲೌಕಿಕದ ಸ್ವರೂಪದೊಂದಿಗೆ. ಲೌಕಿಕದ ವಿಕ್ರಮಗಳು ಅವನಿಗೆ ಪೂರ್ವಪಕ್ಷವಾಗುತ್ತವೆ. ಅರ್ಜುನ ದುರ್ಯೋಧನರು ನೆರವಿಗಾಗಿ ಕೃಷ್ಣನನ್ನು ಭೇಟಿ ಮಾಡುವ ಸಂದರ್ಭದಲ್ಲಿ ಈ ನಿಲುವು ನಾಟಕೀಯತೆಯನ್ನು ಪಡೆದುಕೊಳ್ಳುತ್ತದೆ. ಭೂಪಾಲರು ಮತ್ತು ಭೂಮಿ ಇವರೆಡರ ನಡುವಣ ಸಂಬಂಧ ಇಲ್ಲಿ ಪ್ರಶ್ನೆಗೆ ಒಳಗಾಗುವುದು ಕೃಷ್ಣನ ಮೂಲಕ.

**ಕೌರವೇಶ್ವರ ಕೇಳು ಧರಣೀ**
**ನಾರಿಯನಿಬರಿಗೊಕ್ಕತನವಿ**
**ದ್ದಾರ ಮೆಚ್ಚಿದಳಾರ ಸಂಗಡ ಪುರಿಯ ಹಾಯಿದಳು**
**ಭೂರಿ ಮಮಕಾರದಲಿ ನೃಪರು ವಿ**
**ಚಾರಿಸದೆ ಧರೆಯೆಮ್ಮದೆಂದೇ**
**ನಾರಕದ ಸಾಮ್ರಾಜ್ಯಕೈದುವರೆಂದು ಹರಿ ನುಡಿದ (ಉ.ಪ.೫.೨೮)**

ಇದೇ ಬಗೆಯ ಮಾತುಗಳನ್ನು ಪಂಪನಲ್ಲಿಯೂ ಕೇಳಬಹುದಾದರೂ ಅದು 'ಆದಿಪುರಾಣದಲ್ಲಿ'; ಆದಿಪುರಾಣ ಆಗಮಿಕ. ಅರಿಕೇಸರಿಯ ಲೌಕಿಕಕ್ಕೆ ಸಂಬಂಧಿಸಿದಂತೆ ಇಂತಹ ಮಾತುಗಳನ್ನು ಹೇಳಲು ಬರುವುದಿಲ್ಲ. ಹೇಳಿದರೆ ವಿಕ್ರಮ ತನ್ನ ನೆಲೆಯನ್ನು ಕಳೆದುಕೊಳ್ಳುತ್ತದೆ. ಆದರೆ ಕುಮಾರವ್ಯಾಸನಿಗೆ ಲೌಕಿಕ-ಆಗಮಿಕಗಳೆಂಬ ವಿಭಜನೆಯೇ ಸಾಧ್ಯವಿಲ್ಲ. ಯಾವ ಒಂದನ್ನು ತೆಗೆದುಕೊಂಡರೂ ಅದು ಇನ್ನೊಂದರಲ್ಲಿ ಕರಗಿಹೋಗುತ್ತದೆ. ಮಹಾಭಾರತವನ್ನು ಕೃಷ್ಣಕಥೆಯಾಗಿಸುವುದೆಂದರೆ ಬಹುಶಃ ಇದೇ. ಕೃಷ್ಣತತ್ತ್ವದ ಮೂಲಕ ಒಂದು ನೆಲೆಯಲ್ಲಿ ಲೌಕಿಕ ಆಗಮಿಕಗಳನ್ನು, ಇನ್ನೊಂದು ನೆಲೆಯಲ್ಲಿ ಲೌಕಿಕ ಹಾಗೂ ಆಗಮಿಕಗಳಲ್ಲಿ ಒಂದೊಂದರೊಳಗೆ ನಿಹಿತವಾಗಿರುವ ವಿಭಿನ್ನ ಆಯಾಮಗಳನ್ನು ಪರಸ್ಪರ ಡಿಕ್ಕಿ ಹೊಡೆಯಿಸಿ ಸಾರಾಸಾರಗಳು ಧ್ವನಿಸುವಂತೆ ಮಾಡುವುದು ಅವನ ರೀತಿಯಿದ್ದೀತು. ಸಮುದ್ರದ ಅಲೆಗಳಂತೆ ಕ್ರಿಯೆ-ಪ್ರತಿಕ್ರಿಯೆಗಳ ಸಂಘರ್ಷದ ನೆಲೆ ಯಾವಾಗಲೂ ಕಾಣಸಿಗುವುದು ಮೇಲಿನ ಸ್ತರದಲ್ಲಿ. ಆದರೆ ಅದರ ಅಂತರ್ಯದ ಗಂಭೀರತೆ ಮಾತ್ರ ತಾನು ಸ್ವತಃ ಚಲಿಸದೆ ಎಲ್ಲ ಚಲನೆಗೆ ಆಧಾರವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಕೀರ್ತನಾಥ ಕುರ್ತಕೋಟಿಯವರ ಈ ಅಭಿಪ್ರಾಯವನ್ನು ಗಮನಿಸಬೇಕು:

> ಮಹಾಭಾರತ ಕೌರವ ಪಾಂಡವರ ಸಂಬಂಧ ಹಾಗೂ ಸಂಘರ್ಷಗಳ ದೀರ್ಘವಾದ ಕತೆ. ಕೃಷ್ಣ ಪಾಂಡವರೊಡನೆ ಸಂಬಂಧ ಬೆಳೆಸಿಕೊಂಡ ಯದುವಂಶದ ರಾಜಪುರುಷನೆಂದು ಅವನಿಗೆ ಈ ಕತೆಯಲ್ಲಿ ಸ್ಥಾನ ದೊರೆತಿದೆ. ಕೃಷ್ಣ ದೇವರೂ ಆಗಿರುವುದರಿಂದ ವಾಸ್ತವವಾಗಿ ಅವನಿಗೆ ಕತೆಯೇ ಇಲ್ಲ. ಆದರೂ ಕುಮಾರವ್ಯಾಸ ತನ್ನ ಕಾವ್ಯವನ್ನು 'ಕೃಷ್ಣ ಕಥೆ' ಎಂದು ಕರೆದಿದ್ದಾನೆ. ಕೃಷ್ಣನ ಕಥೆಯಲ್ಲದ್ದು ಕೃಷ್ಣಕಥೆಯಾಗುವದಾದರೂ ಹೇಗೆ?... ತಾತ್ತ್ವಿಕವಾಗಿ ಈ ತೊಡಕನ್ನು ಕುಮಾರವ್ಯಾಸ ಬಿಡಿಸಿಕೊಂಡಿದ್ದಾನೆ. ಕೃಷ್ಣನಿಗೆ ಆಕಾರವಿದೆ, ಆದರೆ ಆ ಆಕಾರ ನಿರಾಕಾರ ತತ್ತ್ವದ ನೆಲೆಯಾಗಿದೆ.. ನಿರಾಕಾರದ ನಟನೆ ಆಕಾರವಾಗುತ್ತದೆ. ಅದೇ ರೀತಿ ವಿಶ್ವವೆಲ್ಲ ಅವನಲ್ಲಿ ಅಡಗಿದ್ದರೂ ಅವನು ಈ ಭೂಮಿಯಲ್ಲಿ ಸಂಚರಿಸುತ್ತಿರುವನೆಂಬ ಮಾತು ವಿರೋಧಾಭಾಸದಿಂದ ಕೂಡಿದೆ. ಅದಕ್ಕಾಗಿ ಅವನು ಕತೆಯಲ್ಲಿ ಬಂದಿರುವುದರಿಂದ ಒಂದು ಪಾತ್ರ; ಆದರೂ ಅವನು ಕತೆಯ ಹೊರಗಿನವನು. ಕತೆಯೊಳಗೆ ಪ್ರವೇಶಿಸುವುದರಿಂದ ಅದನ್ನು ನಡೆಸುವುದರಿಂದ, ಕತೆ ಅವನದಾಗುತ್ತದೆ. 'ಇದು ಮುರಾರಿಯ ಲೀಲೆಗೊಸುಗ ಉದಯಿಸಿದ ಜಗ', ಆದರೆ ತಾನು ಜಗತ್ತೇ ಆಗಿ ಅದರಿಂದ ಅಲಿಪ್ತನಾಗಿ ಉಳಿಯುವುದು ಅವನ ಲೀಲೆ.[೨]

ಹೀಗಿರುವುದರಿಂದಲೇ ಇಲ್ಲಿ ಯುದ್ಧಗಳು, ಪರಾಕ್ರಮ ಎಲ್ಲವೂ ಇದ್ದರೂ ಯುದ್ಧರಂಗ ಮಾತ್ರ ನಿರ್ಣಯಕವಾಗುವುದಿಲ್ಲ. ಅಥವಾ ಇನ್ನೊಂದು ರೀತಿಯಲ್ಲಿ

ಹೇಳುವುದಾದರೆ, ನಿಜವಾದ ಯುದ್ಧ ರಣಾಂಗಣದಲ್ಲಿ ನಡೆಯುವುದೇ ಇಲ್ಲ. 'ಬಹು ರಾಜಕಾರ್ಯವನೀಗಲೇ ತಿದ್ದುವೆನು' ಎಂಬ ಕೃಷ್ಣನ ಮಾತನ್ನು ವಿಮರ್ಶಕರು ಈಗಾಗಲೇ ಪರಿಶೀಲಿಸಿದ್ದಾರೆ. ಇಲ್ಲಿ ದುರ್ಯೋಧನ ಕೂಡ ದಾರ್ಶನಿಕನಾಗಿ ಮಾತನಾಡಬಲ್ಲ.

ಭಾರ ಹೆಚ್ಚಿದಡೊರಲಿ ಭೂಮೀ
ನಾರಿ ಬಿನ್ನಹ ಮಾಡಿದೊಡೆ ದೈ
ತ್ಯಾರಿ ಬಿಜಯಂಗೈದನವನಿಗೆ ಮನುಜವೇಷದಲಿ
ಭೂರಿ ದನುಜರನೊರಸಿದನು ಕೈ
ಯಾರ ಬಳಿಕರ್ಜುನನ ಕೈಯಲಿ
ಕೌರವರ ಕೊಲಿಸುವನು ನಾವಿನ್ನಂಜಲೇಕೆಂದ

ಕಾವನಾತನೆ ಕೊಲುವನಾತನೆ
ಸಾವೆನಾತನ ಕೈಯ ಬಾಯಲಿ
ನೀವು ಪಾಂಡವರೊಡನೆ ಸುಖದಲಿ ರಾಜ್ಯವಾಳುವುದು
ಸಾವ ನಾನಂಜದೊಡೆ ಬದುಕುವ
ನೀವು ಚಿಂತಿಸಲೇಕೆ ನಿಮ್ಮನು
ಕಾವನೈ ಕರುಣದಲಿ ಗದುಗಿನ ವೀರನಾರಯಣ

(ಉದ್ಯೋಗ ಪರ್ವ, ೫. ೨೧, ೨೨)

ಹೀಗಾಗಿ ಇಲ್ಲಿ ಕ್ರಿಯೆಗೆ ಮುಮ್ಮುಖವಾದ ಚಲನೆ ಇಲ್ಲ. ಅದು ಹೇಗೆ ಬೇಕಾದರೂ ಚಲಿಸಬಲ್ಲದು ಅಥವಾ ನಿಂತಲ್ಲಿಯೇ ಸುತ್ತುತ್ತಲೇ ಚಲನೆಯ ಭ್ರಮೆಯನ್ನು ಉಂಟುಮಾಡಬಲ್ಲುದು.

ಲೌಕಿಕ ದೃಷ್ಟಿಗೆ ಮೇಲಿನ ಸ್ತರದಲ್ಲಿಯ ಕ್ರಿಯೆ ಚಲನೆಗಳು ಮುಖ್ಯವಾಗುತ್ತವೆ. ಆದರೆ ಕುಮಾರವ್ಯಾಸನಿಗೆ ಅವುಗಳಿಗೆಲ್ಲ ಮೂಲಕಾರಣವಾಗಿರುವ ನಿಶ್ಚಲತತ್ತ್ವ ಮುಖ್ಯವಾಗುತ್ತದೆ. ಈ ಅರ್ಥದಲ್ಲಿಯೂ ಅವನ ಕೃಷ್ಣ 'ಮೂಲ ಕಾರಣ', 'ಆದಿ ಪುರಾಣ'. 'ಅನಾದಿ ಮೂರುತಿ', ಇತ್ಯಾದಿ. ಅವನ ಕೃಷ್ಣತತ್ತ್ವಕ್ಕೂ ಕಾವ್ಯಾಭಿವ್ಯಕ್ತಿಯ ಸ್ವರೂಪಕ್ಕೂ ಇರುವ ಸಂಬಂಧವನ್ನು ನಾವು ಅವನ ಮತುಗಳಲ್ಲಿಯೇ ಗ್ರಹಿಸಬಹುದು.

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮ ಜನಾರ್ದನರು
ಚಾರು ಕವಿತೆಯ ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ

ಪದದ ಪ್ರೌಢಿಯ ನವರಸಂಗಳ
ವುದಿತವೆನುವಭಿಧಾನ ಭಾವವ
ಬೆದಕಲಾಗದು ಬಲ್ಲ ಪ್ರೌಢರುಮೀ ಕಥಾಂತರಕೆ
ಇದ ವಿಚಾರಿಸೆ ಬಜೆಯ ತೊಳಸಿಯ
ವುದಕದಂತಿರೆಯಿಲ್ಲಿ ನೋಱ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟುಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ವುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣ ಕಿಂಕರಗೆ

ಈ ಕೃಷ್ಣತತ್ತ್ವದ ಹಿನ್ನೆಲೆಯಲ್ಲಿಯೇ ಕುಮಾರವ್ಯಾಸನ ಕಾವ್ಯಮೀಮಾಂಸೆಯೂ ಅಡಗಿದೆ. ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ ಅವೆರಡೂ ಒಂದೇ ಆಗಿದೆ. ಆಲಂಕಾರಿಕ ಅಭಿವ್ಯಕ್ತಿ, ರಸಗಳಿಂದ ಕಾವ್ಯ ಪ್ರೌಢವಾಗುತ್ತದೆ ಎನ್ನುವುದು ರೂಢಿಯ ಪರಿಕಲ್ಪನೆ. ಆದರೆ ಇದು ಇಲ್ಲಿ ನಿರಾಕರಣೆಗೆ ಒಳಗಾಗುತ್ತಿದೆ. ಅದಕ್ಕೆ ಪ್ರತಿಯಾಗಿ 'ಬಜೆಯ ತೊಳಸಿಯ ವುದಕ' ಸ್ಥಾಪನೆಗೊಳ್ಳುತ್ತಿದೆ. ಶಬ್ದಾಲಂಕಾರ, ಅರ್ಥಾಲಂಕಾರಗಳು ಭಾಷೆಗೆ ಚಲನೆಯನ್ನು ತಂದುಕೊಡುವ ಸಂಗತಿಗಳು. ಆದರೆ ಕುಮಾರವ್ಯಾಸನಿಗೆ ಹೊರಸ್ತರದ ಚಲನೆಗಿಂತ ಒಳಸ್ತರದ ಪ್ರೇರಣೆ ಪ್ರಧಾನ. ಚಲನೆ ಇಲ್ಲವೆಂದಲ್ಲ; ಆದರೆ ಪ್ರೇರಣೆಯ ಮೂಲಕ ಚಲನೆಯನ್ನು ಗ್ರಹಿಸಬೇಕೆನ್ನುವುದು ಇಂಗಿತ. ಇದನ್ನು ಸ್ವೀಕೃತಿಯ ಕಡೆಯಿಂದ ಮಾತ್ರವಲ್ಲ, ನಿರ್ಮಿತಿಯ ಕಡೆಯಿಂದಲೂ ನಿಜವಾಗಿಸಬೇಕೆನ್ನುವುದು ಅವನ ಸಂಕಲ್ಪ. ಇದಕ್ಕೆ ಅವನು ಕಂಡುಕೊಂಡ ವಿಧಾನವೆಂದರೆ ಕರ್ತೃತ್ವದ ನಿರಾಕರಣೆ. ಸಾಮಾನ್ಯವಾಗಿ ಕರ್ತೃತ್ವವನ್ನು ಪ್ರೇರಣೆಯ ಸ್ತರಕ್ಕೆ ವರ್ಗಾಯಿಸಲಾಗಿದೆ. ಆದ್ದರಿಂದಲೇ 'ವೀರನಾರಾಯಣನೆ ಕವಿ, ಲಿಪಿಕಾರ ಕುವರವ್ಯಾಸ.' ಇದನ್ನು ಒಂದು ರೀತಿಯಲ್ಲಿ ಪ್ರತಿ ಕಾವ್ಯಮೀಮಾಂಸೆಯಾಗಿ ಗುರುತಿಸಬೇಕೆಂದು ತೋರುತ್ತದೆ. ಅಭಿವ್ಯಕ್ತಿಯ ಚಲನೆಯ ಹಿಂದಿರುವುದು 'ಚಿಂತಿತ'ವಾಗುವ ನೆಲೆ. ಆದ್ದರಿಂದಲೇ ಅದು 'ಪದವಿಟ್ಟು ಅಳುಪವ' ವಿನ್ಯಾಸವೂ ಹೌದು. ಇಲ್ಲಿ ಕೆಲವೊಮ್ಮೆ 'ಪರರ ಒಡ್ಡವದ ರೀತಿಯನ್ನು ಕೊಳ್ಳು'ವುದೂ ಇರುತ್ತದೆ. ಆದರೆ ತನ್ನನ್ನೊಂದು ಮಾಧ್ಯಮ ಮಾತ್ರವಾಗಿ ಮಾಡಿಕೊಂಡು ಪ್ರೇರಣೆಯೊಂದಿಗೆ ನೇರವಾಗಿ ಗುರುತಿಸಿಕೊಂಡಾಗ ಅಲ್ಲಿ ಭಾವಪ್ರವಾಹದ ಓತಪ್ರೋತವೊಂದೇ ಮುಖ್ಯವಾಗುತ್ತದೆ. ಹೀಗಾಗಿ ಇಲ್ಲಿ ಕಿಂಕರತ್ವವೂ ಅಗ್ಗಳಿಕೆಯಾಗುತ್ತದೆ. ಈ ದೃಷ್ಟಿಯಿಂದ ನಿರಾಕರಣೆಯೆಂಬುದು ಅರ್ಥದ ಅಥವಾ ಉದ್ದೇಶದ ನೆಲೆಯ ನಿರಾಕರಣೆಯೂ ಆಗುತ್ತದೆ.

ಆದರೆ ಪಂಪನ ಮಾರ್ಗದಲ್ಲಿ ಮಾತ್ರ ಕರ್ತೃತ್ವದ ಸ್ಥಾಪನೆಯಲ್ಲಿಯೇ ಕಾವ್ಯಕರ್ಮವಿರುವುದು. ಈ ಮಾತನ್ನು ಗುಣಾತ್ಮಕವಾದ ದೃಷ್ಟಿಯಿಂದ ಹೇಳಿದ್ದಲ್ಲ; ಬದಲಾಗಿ ವಿಶ್ಲೇಷಣಾತ್ಮಕವಾದ ವ್ಯತ್ಯಾಸಕ್ಕಾಗಿ ಗುರುತಿಸಿದ್ದು. ಪಂಪನು ತನ್ನ ಬಗೆಗೆ ಕೊಡುವ ವೈಯಕ್ತಿಕ ವಿವರಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಅಲ್ಲದೆ ಕರ್ತೃತ್ವವಿಲ್ಲದೆ ವಿಕ್ರಮಗಳಿಗೂ ಅಸ್ತಿತ್ವವಿಲ್ಲ. ಒಂದು ದೃಷ್ಟಿಯಿಂದ ಕಾವ್ಯದ ಅರ್ಥ ಮತ್ತು ಕ್ರಿಯೆಯ ಅರ್ಥ ಇವೆರಡೂ ಇಲ್ಲಿ ತಳುಕುಹಾಕಿಕೊಳ್ಳುತ್ತವೆ. ಇವೆರಡೂ ಪರಸ್ಪರ ಪೂರಕವೂ ಪೋಷಕವೂ ಆಗುವುದೇ ಇಲ್ಲಿನ ಮೌಲ್ಯವಾಗುತ್ತದೆ. ಪಂಪನ ಪ್ರಶಸ್ತಿಯನ್ನು ಅವನದೇ ಮಾತುಗಳಲ್ಲಿ ನೋಡುವುದಾದರೆ –

ಕವಿತೆ ನೆಗಜ್ತಿಯಂ ನಿಜೆಸ ಜೋಳದ ಪಾಟಿ ನಿಜಾಧಿನಾಥನಾ
ಹವದೊಳರಾತಿ ನಾಯಕರ ಪಟ್ಟನೆ ಪಾಲಿಸೆ ಸಂದ ಪೆಂಪು ಭೂ
ಭುವನದೊಳಾಗಳುಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ
ವಿವರಿಸೆ ಸಂದನೇಂ ಕಲಿಯೋ ಸತ್ಕವಿಯೋ ಕವಿತಾ ಗುಣಾರ್ಣವಂ

(ವಿಕ್ರಮಾರ್ಜುನ ವಿಜಯಂ, ೧೪.೫೦)

ಈ ದೃಷ್ಟಿಯಿಂದ ಇಲ್ಲಿ ಕವಿತನವೂ ಕಲಿತನವೂ ಸಮಾನವಾಗಿ ಪ್ರಾಧಾನ್ಯವನ್ನು ಪಡೆದುಕೊಳ್ಳುತ್ತವೆ. ಹೀಗಾಗಿ ಗುಣಾರ್ಣವನೊಂದಿಗೆ ಬೇರೊಂದು ನೆಲೆಯಲ್ಲಿ ಕವಿತಾಗುಣಾರ್ಣವನೂ ಸಮೀಕರಣಕ್ಕೆ ಒಳಗಾಗಿ ಸಾರ್ಥಕತೆಯನ್ನು ಪಡೆದುಕೊಳ್ಳುತ್ತಾನೆ. 'ಕವಿತೆಯೊಳಾಸೆಗೆಯ್ವ ಫಲ' ದಿಂದ ಇಲ್ಲಿ ಬಿಡುಗಡೆಯಿಲ್ಲ. ಹೀಗಾಗಿ ಎಲ್ಲ ಚಲನೆಯೂ 'ಅರ್ಥ'ದ ಕಡೆಗೆ ಸಾಗುತ್ತದೆ. ಪಂಪನ ಕೃತಿಯ ವಿನ್ಯಾಸವನ್ನು ಅರ್ಥವೇ ನಿರ್ಧರಿಸುತ್ತದೆ; ಎಲ್ಲವನ್ನೂ ಅರ್ಥಕ್ಕೆ ಪರಿವರ್ತಿಸುತ್ತದೆ. ಕುರ್ತಕೋಟಿಯವರ ಈ ಅಭಿಪ್ರಾಯವನ್ನು ನಾವೊಂದಿಷ್ಟು ಗಮನಿಸಬೇಕು :

*... ಭಾರತದ ಕಥೆ ಸಂಪೂರ್ಣವಾಗಿ ಮೌಖಿಕ ಸಂಪ್ರದಾಯದ್ದು. ಶತಮಾನಗಳವರೆಗೆ ಈ ಕಾವ್ಯದ ರಚನೆ ನಡೆದಿರಬೇಕು. ಆ ಕಥೆ ರೂಪಾಂತರ ಹೊಂದಿ ಪಂಪನಲ್ಲಿ ಇಳಾಶಾಸನವಾದ ಇತಿಹಾಸ ಕಥಾಪ್ರಬಂಧವಾಗುತ್ತದೆ. ಆದಿಪುರಾಣದ ಕಥೆಯಾಗಲಿ, ಮಹಾಭಾರತದ ಕಥೆಯಾಗಲಿ ಎರಡೂ ಬಾಯಿಂದ ಬಾಯಿಗೆ ಹರಿದು ಬಂದ ಕಥಾ ಪ್ರವಾಹಗಳಾಗಿದ್ದರೆ ಪಂಪನ ಕಾವ್ಯಕೃತಿಗಳು ಶಾಸನಗಳಾಗುತ್ತವೆ. ಬರವಣಿಗೆಯ ಸಂಪೂರ್ಣವಾದ ಮತ್ತು ಪರಿಷ್ಕೃತವಾದ ರೂಪವೆಂದರೆ ಶಾಸನವೇ. ಬಾಯಿಮಾತಿಗಿರುವ ಮುಕ್ತತೆ ಬರವಣಿಗೆಗೆ ಇಲ್ಲ. ಅದರಂತೆ ಬಾಯಿಮಾತು ನೆನಪಿನಲ್ಲಿ ನೆಲೆನಿಂತ ಮೇಲೆ ಅಳಿಸಿಹಾಕಲೂ ಸಾಧ್ಯವಿಲ್ಲ. ಆದರೆ ಬರವಣಿಗೆಯನ್ನು ಅಳಿಸಿಹಾಕಬಹುದು. ಪಂಪನ ಕಾವ್ಯದ ಆಳವಾದ ಸಂದಿಗ್ಧತೆ ಇಲ್ಲಿದೆ.*[೩]

ಈ ಸವಾಲನ್ನು ಕುಮಾರವ್ಯಾಸ ಎದುರಿಸಿದ ರೀತಿಯ ಬಗೆಗೆ ಇನ್ನೊಂದೆರೆಡು ಮಾತುಗಳನ್ನು ಹೇಳಬಹುದು. ಒಂದು ಕಡೆ ಅವನು ಕರ್ತೃತ್ವವನ್ನು ನಿರಾಕರಿಸಿಕೊಳ್ಳಲು ಲಿಪಿಕಾರನಾದ. ಅಂತೆಯೇ ಲಿಪಿಕಾರತನ ಬಂಧದಿಂದಲೂ ತನ್ನನ್ನು ಮುಕ್ತಗೊಳಿಸಿಕೊಂಡ. ಏಕೆಂದರೆ ಇಲ್ಲಿ ಬರವಣಿಗೆಯಂತೆ ಕಾಣುವುದು ಕೂಡ ಮೂಲತಃ ಹೇಳಿದ್ದೇ ಆಗಿದೆ. ಹೇಳಿದ್ದನ್ನು ಬರೆಯುವುದೆಂದರೆ ಚಿಂತಿತ ನೆಲೆಯನ್ನು, ಆ ಮೂಲಕ ಅರ್ಥ ಮತ್ತು ಉದ್ದೇಶಗಳನ್ನು ದೂರವಿಡುವುದು. ಇದರ ಇನ್ನೊಂದು ತುದಿಯೆಂದರೆ ಇಲ್ಲಿ ಬರವಣಿಗೆ ಇರುವುದಾದರೂ ಅದು ತನ್ನ ಗ್ರಾಹಕರನ್ನು ತಲುಪುವುದು ಕಣ್ಣಿನ ಮೂಲಕವಲ್ಲ, ಕಿವಿಯ ಮೂಲಕ. ಕಾವ್ಯದ ಶ್ರವಣ ಇಲ್ಲಿ ಒಂದು ಆಚರಣೆಯೂ ಹೌದು. "ಅವನು (ಕುಮಾರವ್ಯಾಸ) ತನ್ನ ಕಾವ್ಯವನ್ನು ಬರೆದದ್ದೇನೋ ನಿಜ, ಆದರೆ ಬರೆಹದಲ್ಲಿ ಬರವಣಿಗೆಯ ಗುಣ ಕಾಣದೆ ಬಾಯಿಮಾತಿನ ಗುಣ ಕಾಣುತ್ತದೆಯೆಂದು ಹೇಳಬೇಕಾಗಿದೆ" ಎನ್ನುವಲ್ಲಿ ಕುರ್ತಕೋಟಿಯವರು ಈ ಸಂಗತಿಯನ್ನು ಗುರುತಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇಲ್ಲಿ ಕರ್ತೃತ್ವ ನಿರಾಕರಣೆಗೆ ಬೇರೊಂದು ಆಯಾಮ ಬರುತ್ತದೆ. ಎಂದರೆ ಅದು ಜವಾಬ್ದಾರಿಯಿಂದ ಪಾರಾಗುವುದಲ್ಲ; ಬದಲಾಗಿ ಹೆಚ್ಚಿನ ಜವಾಬ್ದಾರಿಯನ್ನು ಹೊರುವುದು. 'ಕವಿಯ ಹೃದಯವೊಂದು ವೀಣೆ, ಲೋಕವದನು ಮಿಡಿವುದು' ಎನ್ನುವಂತೆ ಸಮುದಾಯದ ಮುಖವಾಣಿಯಾಗುವುದು; ಸಮುದಾಯದಿಂದ ಪಡೆದದ್ದನ್ನು ಸಮುದಾಯಕ್ಕೆ ಸಲ್ಲಿಸುವ, ಎಂದರೆ 'ಕೆರೆಯ ನೀರನ್ನು ಕೆರೆಗೆ ಚೆಲ್ಲುವ' ಕಾಯಕ. ಕುಮಾರವ್ಯಾಸನ ಕಾವ್ಯ ಭಕ್ತಿಕಾವ್ಯವಾಗುವುದೂ ಈ ದೃಷ್ಟಿಯಿಂದಲೇ. ಅದು ಸ್ತೋತ್ರಗಳಿಂದ ತುಂಬಿದೆ ಎನ್ನುವುದರಿಂದಲ್ಲ; ಬದಲಾಗಿ ಲೋಕದಿಂದ ಪಡೆಯುವ ವಿನ್ಯಾಸ ಹಾಗೂ ಲೋಕಕ್ಕೆ ನೀಡುವ ವಿನ್ಯಾಸ ಇವುಗಳಿಗೆ ಸಂಬಂಧಿಸಿದಂತೆ ಯಾವ ವಿಶಿಷ್ಟವಾದ ಬಿಂದುವಿನಲ್ಲಿ ತನ್ನನ್ನು ಸ್ಥಾಪಿಸಿಕೊಳ್ಳುತ್ತದೆಯೋ ಅದರಿಂದ.

ಈ ಸಂಗತಿ ನಮ್ಮನ್ನು ಮುಂದೆ ಕಾವ್ಯದ ಆಕೃತಿಯ ಕಡೆಗೆ ಕೊಂಡೊಯ್ಯುತ್ತದೆ. ಪಂಪ-ಕುಮಾರವ್ಯಾಸರ ಕಾವ್ಯಬಂಧಗಳ ಪರಿಶೀಲನೆ ಇಲ್ಲಿ ಮುನ್ನೆಲೆಗೆ ಬರುತ್ತದೆ. ಕನ್ನಡ ಚಂಪುವಿನ ಚೌಕಟ್ಟನ್ನು ನಿರ್ಮಿಸುವಲ್ಲಿ ಕನ್ನಡ ಚಂಪೂ ಕವಿ ಪರಂಪರೆಯ ಪಾಲೆಷ್ಟು, ಪಂಪನ ವೈಯಕ್ತಿಕವಾದ ಕೊಡುಗೆಯಷ್ಟು ಎಂಬುದನ್ನು ಇಂದು ಗೆರೆ ಕೊರೆದಂತೆ ಹೇಳುವುದು ಸಾಧ್ಯವಿಲ್ಲ ಮತ್ತು ಅದರ ಅಗತ್ಯವೂ ಇಲ್ಲ. ಆದರೆ ಕನ್ನಡ ಚಂಪುವಿಗೆ ಒಂದು ಪರಿಷ್ಕರಣವನ್ನು ನೀಡಿ ಆದಿಕವಿಯೆನಿಸಿಕೊಂಡವನು ಪಂಪ ಎಂಬುದನ್ನು ಬಹುಪಾಲು ಎಲ್ಲರೂ ಒಪ್ಪುತ್ತಾರೆ. ಚಂಪುವಿನ ಛಂದೋವೈವಿಧ್ಯವನ್ನು ಈಗಾಗಲೇ ಗುರುತಿಸಲಾಗಿದೆ. ಈ ಛಂದೋವೈವಿಧ್ಯ ಕಾವ್ಯದ ಗ್ರಾಹಕರ ಕಡೆಯಿಂದ ಎಷ್ಟರಮಟ್ಟಿಗೆ ನಿಯೋಗಾತ್ಮಕ(Functional) ವಾಯಿತು ಎನ್ನುವುದು ಮುಂದಿನ ಪ್ರಶ್ನೆ. ಇದನ್ನು ಬಹುಶಃ ಹೀಗೆ ವಿವರಿಸಿಕೊಳ್ಳಬಹುದು. ಸಂಸ್ಕೃತದ ವೃತ್ತಗಳ ಲಯಗಾರಿಕೆಯನ್ನು ನಿರ್ಧರಿಸುವುದು ಅವುಗಳಲ್ಲಿ ಬರುವ ಯತಿಸ್ಥಾನ. ಆದರೆ ಕನ್ನಡದ ಸಂದರ್ಭದಲ್ಲಿ ಯತಿ 'ವಿಲಂಘನೆ'ಗೆ ಒಳಗಾಯಿತು. ಇದರಿಂದ ಮೂಲ ಲಯಗಳ ಏಕತಾನತೆ ತಪ್ಪಿತಲ್ಲದೆ ಅರ್ಥಾನುಸಾರಿಯಾದ ಬೇರೊಂದು ಲಯವಿನ್ಯಾಸ ಕನ್ನಡಕ್ಕೆ ಪ್ರಾಪ್ತವಾಯಿತು. ವೃತ್ತದ ಚೌಕಟ್ಟನ್ನು ಒಪ್ಪಿಕೊಂಡೂ ಕನ್ನಡಕ್ಕೆ ಸಹಜವಾದ ಆಡುನುಡಿಯ ಲಯಗಳನ್ನೂ ಕಾಕುಗಳನ್ನೂ ತರಲು ಇದರಿಂದ ಸಾಧ್ಯವಾಯಿತು. ಆದರೆ ಇದರಿಂದ ಉಂಟಾದ ಇನ್ನೊಂದು ಪರಿಣಾಮವೆಂದರೆ ಒಂದು ವೃತ್ತಕ್ಕೂ ಇನ್ನೊಂದು ವೃತ್ತಕ್ಕೂ ಲಯದ ದೃಷ್ಟಿಯಿಂದ ಇದ್ದ ವಿಶಿಷ್ಟತೆ ಮುರಿದುಹೋದದ್ದು. ಅಷ್ಟೇಕೆ, ಒಂದೇ ವೃತ್ತವೇ ಹಲವು ರೂಪಗಳನ್ನು ತಳೆಯಲು ಸಾಧ್ಯವಾದದ್ದು. ಸಾಲಿನ ದೀರ್ಘತೆಯನ್ನು ಗಮನಿಸಬಹುದಲ್ಲ ಎನ್ನಬಹುದಾದರೂ ಇಲ್ಲಿ ಪಾದಗಳ ದೀರ್ಘತೆ ಹಾಗೂ

ವಾಕ್ಯಗಳ ದೀರ್ಘತೆ ಎಂದೂ ಸಮಾನಾಂತರವಾಗಿಲ್ಲ. ಈ ವೃತ್ತಗಳನ್ನು ವಿಶಿಷ್ಟವಾದ ಲಯವಿನ್ಯಾಸಗಳಿಗೆ ಅನುಗುಣವಾಗಿ ವಾಚಿಸುವ ಕ್ರಮವೊಂದು ಅಂದು ಇತ್ತೆ? ತಿಳಿಯದು. ಒಂದು ವೇಳೆ ಇದ್ದಿತಾದರೂ ವೃತ್ತದ ಆಂತರಿಕ ಲಯವೇ ಭಂಗವಾಗಿರುವುದರಿಂದ ಪ್ರತಿಯೊಂದು ಪದ್ಯಕ್ಕೂ ವಿಶಿಷ್ಟವಾದ ಅರ್ಥಾನುಸಾರಿಯಾದ ಲಯವನ್ನೇ ವಾಚನವು ಕಂಡುಕೊಳ್ಳಬೇಕಾಗುತ್ತದೆ. ಇನ್ನು ಆಧುನಿಕ ಸಂದರ್ಭದಲ್ಲಂತೂ ವೃತ್ತಗಳ ಓದು ಲಯಕ್ಕೆ ಸಂಬಂಧಿಸಿದಂತೆ ನಿಯೋಗಾತ್ಮಕವಾಗಿಲ್ಲ ಎಂದು ಹೇಳಬೇಕಾಗಿಯೇ ಇಲ್ಲ. ಈ ಮಾತುಗಳನ್ನು ಹೇಳಿದ ಉದ್ದೇಶವೆಂದರೆ ಪಂಪನ ಕಾವ್ಯ ಬಂಧವು ನಿರ್ಮಿತಿ ಹಾಗೂ ಸ್ವೀಕೃತಿ ಎರಡರ ದೃಷ್ಟಿಯಿಂದಲೂ ಪ್ರಾಥಮಿಕವಾಗಿ ಅರ್ಥಾನುಸಾರಿಯಾದುದು ಎಂಬುದನ್ನು ಗುರುತಿಸಲು. ಎಂದರೆ ಭಾವಪ್ರಕಾಶಕ್ಕೆ ಅಗತ್ಯವಾದ ಶಾಬ್ದಿಕ ಪರಿಣಾಮವನ್ನು ಉಂಟುಮಾಡುವ ಕವಿ ವಿಶೇಷವಾದ ಪ್ರಯತ್ನದಲ್ಲಿ ತೊಡಗಬೇಕಾಗುತ್ತದೆಯೆಂದೂ ಇದರಿಂದ ಹೇಳಿದಂತಾಯಿತು. ಇದು ಕಾವ್ಯಾಭಿವ್ಯಕ್ತಿಯ ಒಂದು ಜಾಡು.

ಈ ಹಿನ್ನೆಲೆಯಲ್ಲಿ ಕುಮಾರವ್ಯಾಸನ ಷಟ್ಪದಿಗೆ ಬರೋಣ. ಅವನ ಭಾಮಿನಿಗೆ ಮೂಲಭೂತವಾಗಿ ಒಂದು ಮಾತ್ರಾಬದ್ಧತೆ ಇದೆ. ಲಕ್ಷ್ಯ – ಲಕ್ಷಣ ಸಮನ್ವಯದ ದೃಷ್ಟಿಯಿಂದ ಅದರ ವಿಲಂಘನೆ ಎಲ್ಲೂ ಕಂಡುಬರುವುದಿಲ್ಲ. ಆದರೆ ಇಲ್ಲಿನ ಅಭಿವ್ಯಕ್ತಿಯ ವಿನ್ಯಾಸಕ್ಕೆ ಇನ್ನೊಂದು ಆಯಾಮವಿದೆ. ಅದು ಏಕಕಾಲದಲ್ಲಿ ಲಯಕ್ಕೆ ಒಗ್ಗುವ ಹಾಗೂ ಲಯವನ್ನು ಮುರಿಯುವ ಅಥವಾ ಮೀರುವ ಒಂದು ವಿನ್ಯಾಸ. ಅದು ಅರ್ಥಾನುಸಾರಿಯಾಗಿರುವಂತೆ ಕಂಡರೂ ಅರ್ಥವನ್ನು ಮೀರಬಲ್ಲದು; ಲಯದ ಕಟ್ಟುಪಾಡಿಗೆ ಒಳಪಟ್ಟಿರುವಂತೆ ತೋರಿದರೂ ಅದರಿಂದ ಬಿಡಿಸಿಕೊಳ್ಳಬಲ್ಲುದು. ಇದರಿಂದ ಹೊರಪಡುವ ಅಭಿವ್ಯಕ್ತಿಯ ಸಾಧ್ಯತೆಗಳು ಅಸಂಖ್ಯ. ಕುಮಾರವ್ಯಾಸನ ವಾಕ್ಯಗಳ ರಚನೆಯ ವಿನ್ಯಾಸವೇ ಒಂದುವಿಶೇಷ ಅಧ್ಯಯನದ ವಸ್ತುವಾಗಬಲ್ಲುದು. ಅಭಿವ್ಯಕ್ತಿಯನ್ನು ಶಬ್ದ ಮತ್ತು ಅರ್ಥಗಳ ಎರಡು ತುದಿಗಳಲ್ಲಿ ಹಿಡಿದು ಅವನಂತೆ ಆಟವಾಡಿದವರು ವಿರಳ. ಅವನು ಅರ್ಥದ ಕಡೆಗೆ ವಾಕ್ಯವನ್ನು ಮುನ್ನಡೆಸುತ್ತಲೇ ಇದ್ದಕ್ಕಿದ್ದಂತೆ ಅದನ್ನು ಬೇರೊಂದು ಪರಿಣಾಮದ ಕಡೆಗೆ ತಿರುಗಿಸಬಲ್ಲ. ಇನ್ನೊಂದು ರೀತಿಯಲ್ಲಿ ಇದು ಶ್ರವಣಕಾವ್ಯದ ಸಾಧ್ಯತೆಯೂ ಹೌದು.

ಮೊದಲ ಹಂತದಲ್ಲಿ ಶಬ್ದವು ಅರ್ಥವನ್ನು ತನ್ನೊಳಗೆ ತುಂಬಿಕೊಳ್ಳುತ್ತದೆ. ಆ ಬಳಿಕ ಶಬ್ದ ಅಭಿನಯಕ್ಕೆ, ಆಚರಣೆಗೆ, ನಾಟ್ಯೀಕರಣಕ್ಕೆ ಒಳಗಾಗುತ್ತದೆ. ಪುನರುಕ್ತಿ, ಪುನರಾವರ್ತನೆ, ಪರ್ಯಾಯ ಪದಗಳು ಹಾಗೂ ವಾಕ್ಯಗಳ ಮೂಲಕ ಅದೇ ಅರ್ಥವೇ ಬೇರೆ ಬೇರೆ ವಿನ್ಯಾಸಗಳಲ್ಲಿ ಪ್ರಕಟವಾಗುವುದು, ಪ್ರಾಸಗಾರಿಕೆ, ಒಂದೆಡೆ ತೀರ ಆಡುಮಾತಿನಂತೆ ತೋರುತ್ತಿದ್ದರೂ ಅಷ್ಟೇ ಗಾಢವಾಗಿ ನಾದ ಲಯಗಳನ್ನು ಹುದುಗಿಸಿಟ್ಟುಕೊಂಡ ಪ್ರಯೋಗಗಳು ವ್ಯಂಜಕದ ಪರಿಕರಗಳನ್ನು ಸಿದ್ಧಗೊಳಿಸುತ್ತ 'ಶ್ರವಣ ಸುಧಾ ವಿನೂತನ ಕಥನ ಕಾರಣ'ಗಳಾಗುತ್ತವೆ. ಅಲ್ಲದೆ ಇದು ಕೇವಲ ಶ್ರವಣದಲ್ಲೇ ಪರ್ಯವಸಾನವಾಗುವಂಥದೂ ಅಲ್ಲ. ಅದು ಮತ್ತೆ ದೃಶ್ಯದ ಜಗತ್ತೊಂದನ್ನು ಅನಾವರಣಗೊಳಿಸುತ್ತ ಹೋಗುತ್ತದೆ. ಕುಮಾರವ್ಯಾಸನ ನಿರೂಪಣೆಯಲ್ಲಿ ಆಂಗಿಕಕ್ಕೆ ಸಂಬಂಧಿಸಿದ ಸೂಚನೆಗಳು ವಿಶೇಷವಾಗಿ ಬರುವುದನ್ನೂ ಈ ಹಿನ್ನೆಲೆಯಲ್ಲಿ ಗಮನಿಸಬಹುದು.[೫] 'ಕುಮಾರವ್ಯಾಸನಲ್ಲಿ ಮಾತು ಕೇವಲ ಮಾತಲ್ಲ. ಅದು ಕೃತಿಯೂ ಆಗುತ್ತದೆ. ಭೀಮಾರ್ಜುನರು ಕೌರವನ ಸಭೆಯಲ್ಲಿ ಮಾಡಿದ ಪ್ರತಿಜ್ಞೆಯಾಗಲಿ, ಸಂಜಯನ ಮೂಲಕ ದುರ್ಯೋಧನನಿಗೆ ಕಳಿಸಿದ ಸಂದೇಶಗಳಾಗಲಿ ಮಾತಿನ ರೂಪವನ್ನು ಪಡೆದಿದ್ದರೂ ಸತ್ತ್ವದಲ್ಲಿ ಕೃತಿಗಳೇ ಆಗಿವೆ" ಎಂಬ ಕುರ್ತಕೋಟಿಯವರ ಅಭಿಪ್ರಾಯವೂ ಇದನ್ನೇ ಅನುಮೋದಿಸುತ್ತದೆ.

ಇನ್ನು ಭಾಷಾ ಪ್ರಯೋಗಕ್ಕೆ ಸಂಬಂಧಿಸಿದಂತೆ ಒಂದೆರಡು ವಿಚಾರಗಳು. ಸಂಸ್ಕೃತಕ್ಕೆ ಸಂಬಂಧಿಸಿದಂತೆ ಕನ್ನಡ ಕವಿಗಳ ಅನುಸಂಧಾನ, ಅಳವಡಿಕೆಗಳ ಬಗೆಗೆ ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ. ಅವನ್ನು ಮತ್ತೆ ಇಲ್ಲಿ ಹೇಳುವ ಅಗತ್ಯವಿಲ್ಲ. ಆದರೆ ಈ ಸಂದರ್ಭಕ್ಕೆ ಸಂಬಂಧಿಸಿದಂತೆ ಪಂಪ ಹಾಗೂ ಕುಮಾರವ್ಯಾಸರಲ್ಲಿ ಏರ್ಪಟ್ಟ ವೈಸಾದೃಶ್ಯದ ಕುರಿತಾಗಿ ಪ್ರಸ್ತವಿಸಬೇಕಾಗಿದೆ. ಪಂಪನದು ಸಮನ್ವಯದ ದಾರಿಯೆಂಬುದನ್ನು ಮತ್ತೆ ಮತ್ತೆ ಹೇಳುತ್ತ ಬರಲಾಗಿದೆ. ಸಮನ್ವಯವೆಂಬ ಮಾತೇ ವೈರುಧ್ಯಗಳ ಅಸ್ತಿತ್ವವನ್ನು ದೃಢಪಡಿಸುತ್ತದೆ; ಎದುರಿಸಬೇಕಾದ ಸವಾಲೊಂದಿತ್ತೆಂಬುದನ್ನು ಖಚಿತಪಡಿಸುತ್ತದೆ ಸಿದ್ಧಶೈಲಿಯ ಮಾರ್ಗವೊಂದು ಕಡೆ; ಕಟ್ಟುತ್ತಲೇ ಕಂಡುಕೊಳ್ಳಬೇಕಾದ ದೇಸಿ ಇನ್ನೊಂದು ಕಡೆ. ವ್ಯಕ್ತಿ ನಿರಪೇಕ್ಷವಾದ ಮಾರ್ಗವನ್ನು ಸ್ವೀಕರಿಸಿ ವ್ಯಕ್ತಿಗತ ಸಹಜ ಅಭಿವ್ಯಕ್ತಿಗೆ ಒಗ್ಗಿಸುವ ಪ್ರಯತ್ನದಲ್ಲಿಯೇ ಪಂಪನ ಸೃಜನಶೀಲತೆಯ ಸಾಧ್ಯತೆ ಹಾಗೂ ಮಿತಿಗಳನ್ನು ಗುರುತಿಸಲಾಗಿದೆ. ಇಷ್ಟರ ಮೇಲೆ ಪಂಪನ ಸಂಸ್ಕೃತಕ್ಕೆ ಮನಸೋತಿದ್ದನೆಂದೂ ಉದ್ದುದ್ದ ಸಂಸ್ಕೃತ ಸಮಸ್ತ ಪದಗಳ ಬಳಕೆಯ ಬಗೆಗೆ ಆತನಿಗೆ ಮೋಹವಿತ್ತೆಂದೂ ಹೇಳಲಾಗಿದೆ.[೬] ಅದೇನೇ ಇದ್ದರೂ ಸಂಸ್ಕೃತ ಪರಂಪರೆ ಒದಗಿಸಿದ ವಿದ್ವದೀಯ ನೆಲೆಯನ್ನು ಕೇವಲ ಎರವಲಿನ ಬಂಡವಾಳ ಮಾಡಿಕೊಳ್ಳದೆ ಅಭಿವ್ಯಕ್ತಿಯ ಸಹಜತೆಗಾಗಿಯೂ ಸೆಣಸಿದನೆಂಬುದೇ ಬಹುಶಃ ಪಂಪನ ಬಗೆಗೆ ಹೇಳಬಹುದಾದ ಮಾತಾಗುತ್ತದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ ಕುಮಾರವ್ಯಾಸ ಸಂದರ್ಭ ಒಂದು ರೀತಿಯಲ್ಲಿ ವಿಶಿಷ್ಟವಾಗುವಂತೆ ತೋರುತ್ತದೆ. ಏಕೆಂದರೆ ಇಲ್ಲಿ ಸಂಸ್ಕೃತ ಎರಡು ಪ್ರಧಾನವಾದ ನೆಲೆಗಳಲ್ಲಿ ತನ್ನನ್ನು ಪ್ರತಿಷ್ಠಾಪಿಸಿಕೊಂಡಿತ್ತು.

ಒಂದು ಅರಸೊತ್ತಿಗೆಯ ನೆಲೆ; ಇನ್ನೊಂದು ವೈದಿಕರ ಉತ್ತರಮೀಮಾಂಸೆ ಅರ್ಥಾತ್ ಪಾಂಡಿತ್ಯಕೇಂದ್ರಿತವೇದಾಂತ. ಭಕ್ತಿಚಳವಳಿ ಇವೆರಡರ ವಿರುದ್ಧವೂ ಸೆಣಸಬೇಕಾಗಿ ಬಂದಿತು. ಭಗವಂತನ ಸಾರ್ವಭೌಮತ್ವವನ್ನು ಮಾತ್ರ ಒಪ್ಪಿ ಆತನ ದಾಸತ್ವದಲ್ಲಿ ಅಹಮಿಕೆಯ ನಿರಸನದಲ್ಲಿ ತೊಡಗಿದ ಭಕ್ತಿಯಲ್ಲಿ ಕಿಂಕರತೆ ಎನ್ನುವುದೊಂದು ಪರಮಮೌಲ್ಯವಾಯಿತು. ಇಷ್ಟರ ಮೇಲೆ ಆ ಭಗವಂತನೂ ಕಿಂಕರರ ಕಿಂಕರನೇ ಆದ. ಈ ಹಿನ್ನೆಲೆಯಲ್ಲಿ ಲೋಕದ ಅರಸರ ಆಡಂಬರ, ವೈಭವ, ಪರಾಕ್ರಮಗಳೆಲ್ಲವೂ ನಿರಾಕರಣೆಗೆ ಒಳಗಾದವು. ಇನ್ನೊಂದು ಕಡೆಯಲ್ಲಿ ಸೋಗಿನ ವೇದಾಂತವೊಂದು ನಿರಾಕಾರ, ನಿರ್ಗುಣೋಪಾಸನೆಗಳ ಲೋಕೋತ್ತರ ನೆಲೆಗಳಲ್ಲಿ ಸ್ವಾನುಭವದೂರವಾದ ಪರಿಕಲ್ಪನೆಗಳನ್ನು ಸ್ಥಾಪಿಸಿಕೊಂಡಿತ್ತು. ಕೇವಲ ಪಾಂಡಿತ್ಯ ಪ್ರದರ್ಶನವನ್ನೇ ಪರಮಾರ್ಥವೆಂದು ನಂಬಿದ ಈ ಪಂಡಿತ ಮಂಡಳಿ ಭಕ್ತಿಯನ್ನು ಅವಹೇಳನದ ವಸ್ತುವನ್ನಾಗಿ ಮಾಡಿಕೊಂಡಿತ್ತು. ಅಲ್ಲದೆ ಯಾಗಯಜ್ಞಗಳೂ ಹೋಮಹವನಾದಿಗಳೂ ಈ ಪಂಥಕ್ಕೆ ಸಾರಸರ್ವಸ್ವವಾಗಿ ಪರಿಣಮಿಸಿದ್ದವು. ಭಕ್ತಿಪರಂಪರೆ ಇವೆರಡನ್ನೂ ಮೇಲೆಳೆದುಕೊಂಡದ್ದರ ಪರಿಣಾಮವನ್ನು ಪ್ರತಿಕ್ರಿಯಾತ್ಮಕವಾಗಿ ಕುಮಾರವ್ಯಾಸನಲ್ಲಿಯೂ ಕೆಲಮಟ್ಟಿಗೆ ಗುರುತಿಸಲು ಸಾಧ್ಯವಿದೆ.

ಕುಮಾರವ್ಯಾಸನು ಕೃಷ್ಣತತ್ತ್ವದ ಮೂಲಕ ಹೇಗೆ ರಾಜತ್ವದ ವಿರೋಧಿ ನೆಲೆಯೊಂದನ್ನು ಸ್ಥಾಪಿಸುತ್ತಾನೆ ಎಂಬುದನ್ನು ಹಿಂದೆಯೇ ಪರಿಶೀಲಿಸಿದೆ. ಆತನ ಕಾವ್ಯ ಪ್ರಾರಂಭವಾಗುವುದೇ 'ಶ್ರೀವನಿತೆಯರಸ' ಎಂಬ ಸಂಬೋಧನೆಯ ಮೂಲಕ. 'ಭಟ ಖಡ್ಗಮಂಡಲೋತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ'ಯೊಂದಿಗೆ ಈ 'ಶ್ರೀವನಿತೆ' ಪಡೆದುಕೊಳ್ಳುವ ವೈಸಾದೃಶ್ಯವನ್ನು ಗಮನಿಸಬೇಕು. ಒಂದೆಡೆ ಅರಸನಾದವನು ಅರಸೊತ್ತಿಗೆಯನ್ನು ಕಳೆದುಕೊಳ್ಳುತ್ತಾನೆ; ಇನ್ನೊಂದೆಡೆ ಅರಸನಲ್ಲದವನು ಶಾಶ್ವತವಾಗಿ ಅರಸೊತ್ತಿಗೆಯಲ್ಲಿ ನೆಲೆಗೊಳ್ಳುತ್ತಾನೆ. ಸಾಮಾನ್ಯವಾಗಿ ಅರಸರಾದವರು ತಮ್ಮ ವೈಭವ ಪರಾಕ್ರಮಗಳನ್ನು ಉದ್ದುದ್ದದ ಸಂಸ್ಕೃತ ಭೂಯಿಷ್ಠ ಪದಪುಂಜಗಳ ಮೂಲಕ ಹೊಗಳುಭಟರಿಂದ ಉದ್ಘೋಷಿಸಿಕೊಳ್ಳುವುದು ರೂಢಿಯಷ್ಟೇ! ಕುಮಾರವ್ಯಾಸನ ಈ ಪದ್ಯಗಳು ಆ ಬಿರುದಾವಳಿಗಳನ್ನು ತದ್ವಿರುದ್ಧವಾದ ದಿಕ್ಕಿನಲ್ಲಿ ಆಚರಿಸುವಂತೆ ತೋರುತ್ತವೆ. ಬಹುಶಃ 'ವೀರ ನಾರಾಯಣ'ನ ವೀರತ್ವದ ವ್ಯಾಖ್ಯಾನವೂ ಈ ಮೂಲಕವೇ ಹೊಮ್ಮುತ್ತದೆ ಎನ್ನಬೇಕು. 'ಚಕ್ರಭಂಡಾರಿಸಿತು.. ಆವು ಉಂಡಾಡಿಭಟ್ಟರು' ಎಂಬ ಕೃಷ್ಣನ ಮಾತು ಇದಕ್ಕೆ ಬೇಕಾದ ಸುಳುಹನ್ನು ನೀಡುತ್ತದೆ.

ಇದನ್ನೇ ಭಕ್ತಿ ಸಂದರ್ಭದ ಪ್ರಯೋಗಗಳಿಗೂ ವಿಸ್ತರಿಸಿಕೊಳ್ಳಬಹುದು. ಸೋಗಿನ ವೇದಾಂತವನ್ನು ಕುಮಾರವ್ಯಾಸನು ಎದುರಿಸುವ ಕ್ರಮಕ್ಕೆ ಒಂದು ನಿದರ್ಶನ'

ಅರಸಿ ಹರಿಯ ಅಮ್ನಾಯ ತತಿ ಕುಕ್ಕರಿಸಿದವು ;
ಮುನಿಗಳ ಸಮಾಧಿಗೆ ಕರುಬುವವರಾವಲ್ಲ,
ಕಾಣರು ನಖದ ಕೊನೆಗಳನು
ಅರಸ ತಾನೇ ಹರಿಹರಿದು ತನ್ನೆರಕದವರನು ಬಿಡದೆ ಸಲಹುವ,
ಕರುಣವೆಂತುಟೊ ರಾಯ ಗದುಗಿನ ವೀರ ನರಯಣನ !

ಭಕ್ತಿಯ ಈ ಸ್ಥಾಪನೆಯ ಮೂಲಕ ಕೃಷ್ಣನ ಸಂದರ್ಭದ ಸಂಸ್ಕೃತ ಪ್ರಯೋಗಗಳಿಗೆ ಸಂಬಂಧಿಸಿದಂತೆ ಕುಮಾರವ್ಯಾಸನು ಪರಿಪ್ರೇಕ್ಷ್ಯವೊಂದನ್ನು ಕಟ್ಟಿಕೊಡುತ್ತಾನೆನ್ನಬಹುದು. ಪಂಡಿತ ಮಂಡಳಿ ತನ್ನ ಪಾಂಡಿತ್ಯ ಪ್ರದರ್ಶನದ ಅಸ್ತ್ರವನ್ನಾಗಿ ಮಾಡಿಕೊಂಡಿದ್ದ ಭಾಷಾರೂಪವನ್ನು ಅದು ಇರುವಂತೆಯೇ ತೆಗೆದುಕೊಂಡು ಅದರ ನಿರಾಕರಣೆಯ ನೆಲೆಯಲ್ಲಿ ಪ್ರಯೋಗಿಸುವುದು ಇಲ್ಲಿನ ವಿಧಾನ. ಪೂರ್ವಪಕ್ಷಕ್ಕೆ 'ಅವರದೇ ನಾಣ್ಯದಲ್ಲಿ ಹಿಂದಿರುಗಿಸಿ ಕೊಡುವ' ಕ್ರಮವಾಗಿಯೂ ಇದನ್ನು ಗಮನಿಸಬೇಕು. ಹೀಗಾಗಿ ಇಲ್ಲಿ 'ನಾರಾಯಣ'ನ ಹಿಂದೆ 'ನರಯಣ'ನಿದ್ದಾನೆ; 'ನರಯಣ'ನ ಹಿಂದೆ 'ನಾರಾಯಣ'ನಿದ್ದಾನೆ. ಹೀಗಾಗಿ ಈ ಪ್ರಯೋಗಗಳು ವಾಚಕಗಳು ಮಾತ್ರವಲ್ಲ, ವ್ಯಂಜಕಗಳೂ ಆಗಬಲ್ಲವು. ಅಥವಾ ವಾಚಕ – ವ್ಯಂಜಕಗಳ ನಡುವೆ ಆಕರ್ಷಣೆಯನ್ನು ಉಂಟುಮಾಡುತ್ತ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳನ್ನು ತೆರೆಯಬಲ್ಲವು. ಕೆ.ವಿ. ನಾರಾಯಣ ಅವರ ಗಮನಿಕೆಯೊಂದನ್ನು ಈ ಹಿನ್ನೆಲೆಯಲ್ಲಿ ನೋಡಬಹುದು.

ಕನ್ನಡದಲ್ಲಿ ಕಾವ್ಯಭಾಷೆಯ ಒಂದು ಮುಖ್ಯ ಲಕ್ಷಣವೆಂದರೆ ಕನ್ನಡ ಪದಕೋಶದೊಂದಿಗೆ ಅನ್ಯಪದಕೋಶವನ್ನು ಬೆರೆಸಿ ರಚಿಸಿದ ವಾಕ್ಯಗಳಲ್ಲಿನ ವೈಸಾದೃಶ್ಯವನ್ನೇ ಒಂದು ಗುಣಾತ್ಮಕ ಅಂಶವನ್ನಾಗಿ ರೂಢಿಸಿಕೊಂಡಿರುವುದು. ಆದ್ದರಿಂದಲೇ ಅನ್ಯದೇಶ್ಯ ಪದಗಳಿರಲಿ, ಅತಿ ದೀರ್ಘ ಸಮಾಸಗಳನ್ನು ಕನ್ನಡದ ವಾಕ್ಯಗಳಲ್ಲಿ ಬೆರೆಸಲು ಕೂಡ ನಮ್ಮ ಕವಿಗಳು ಹಿಂಜರಿದಿಲ್ಲ. ಹಾಗೆ ಬಳಸಿದ ಸಂಸ್ಕೃತದ ಪದ ಸಮಾಸಗಳು ಒಟ್ಟು ಕನ್ನಡದ ಚೌಕಟ್ಟಿನಲ್ಲಿ ಪಡೆಯುವ ಸಾಂದರ್ಭಿಕತೆಯೇ ಮುಖ್ಯವಾಗುತ್ತದೆ. ಈ ಅಂಶವನ್ನು ಮರೆತರೆ ಅಚ್ಚಗನ್ನಡದ ಬೆನ್ನು ಹತ್ತುವದಾಗುತ್ತದೆ.[೮]

ಅನ್ಯದೇಶ್ಯಕ್ಕೆ ದೇಶ್ಯದ ವ್ರತವನ್ನು ನೀಡಿ ಅದನ್ನು ವ್ಯಂಗ್ಯದ ಎಲ್ಲ ಸಾಧ್ಯತೆಗಳೊಂದಿಗೆ ಬಳಸಿಕೊಂಡಿರುವ ಕ್ರಮವನ್ನು ಕುಮಾರವ್ಯಾಸನಲ್ಲಿ ಉದ್ದಕ್ಕೂ ನೋಡಬಹುದು. ಇಲ್ಲಿ 'ವ್ಯಂಗ್ಯ' ಎನ್ನುವುದು ಕಾವ್ಯ ಮೀಮಾಂಸೆಯ ಅರ್ಥದಲ್ಲಿ ಮಾತ್ರವಲ್ಲ, ರೂಢಿಯ ಅರ್ಥದಲ್ಲೂ ನಿಜ. ಪರಿಕಲ್ಪನೆಗಳ ಶಾಸ್ತ್ರೀಯತೆಯನ್ನು ಮುರಿಯುವ ಕವಿಪ್ರತಿಭೆಯ ನಿದರ್ಶನವಾಗಿಯೂ ಇದನ್ನು ಕಾಣಬಹುದು.

ನಮ್ಮಲ್ಲಿ ಒಂದು ಬಗೆಯ ತೌಲನಿಕ ಸಂವೇದನೆಯಿದೆ. ಇದು ಒಂದು ಸಾಹಿತ್ಯಾಭಿವ್ಯಕ್ತಿಯನ್ನು ಅದರ ಅನನ್ಯತೆಯಲ್ಲಿ ಗುರುತಿಸಲು ಪ್ರಯತ್ನಿಸುವುದಿಲ್ಲ. ಬದಲಾಗಿ ಅದನ್ನು ಇನ್ನೊಂದಾಗಿ ಕಾಣಲು ಅಪೇಕ್ಷಿಸುತ್ತದೆ. ಇದರಿಂದಾಗಿ

ಎರಡರಲ್ಲಿ ಯಾವೊಂದರ ವಿಶಿಷ್ಟತೆಯೂ ದಕ್ಕದೆ ಹೋಗುವ ಸಂಭವ. ಕುಮಾರವ್ಯಾಸನ ವಿಷಯದಲ್ಲೂ ಈ ಮಾತು ನಿಜವೆಂದು ಹೇಳಬೇಕಾಗಿಲ್ಲ. ನಾವು ಕುಮಾರವ್ಯಾಸನಲ್ಲಿ ಪಂಪನನ್ನೋ ರನ್ನನನ್ನೋ ಕಾಣಲು ಪ್ರಯತ್ನಿಸುತ್ತೇವೆ. ಆದರೆ ಕುಮಾರವ್ಯಾಸನನ್ನೇ ಕಾಣದೆ ಹೋಗುತ್ತೇವೆ. ಈ ಪ್ರಬಂಧದ ಮೊದಲಲ್ಲೇ ಪ್ರಸ್ತಾಪಿಸಿದಂತೆ ಪಠ್ಯದ ಅನನ್ಯತೆಯನ್ನು ಪರಿಗಣಿಸದ ಕೇವಲ ಆಶಯಾತ್ಮಕವಾದ ಓದು ಇದಕ್ಕೆ ಬಹುಮಟ್ಟಿಗೆ ಕಾರಣ. ಎಸ್.ವಿ. ರಂಗಣ್ಣನವರ ಒಂದು ಅಭಿಪ್ರಾಯದಲ್ಲಿ ಇದರ ಒಂದು ಪ್ರಾತಿನಿಧಿಕವಾದ ನಿದರ್ಶನವನ್ನು ಕಾಣಬಹುದು. ಕುಮಾರವ್ಯಾಸನ ವಚನಸಮೃದ್ಧಿಯನ್ನು ಅವರು ಗುರುತಿಸಿದರೂ "ಈ ಒಂದು ಶಕ್ತಿಯೆ ದೋಷವಾದುದೂ ಉಂಟು. ಪದವನ್ನೇ ಅಲ್ಲ, ಪಂಕ್ತಿಯನ್ನೆ ಅಲ್ಲ, ಸಂಧಿಗಳನ್ನೂ ತೊಡೆದುಹಾಕಿದ್ದರೆ ಅವನ ಖ್ಯಾತಿ ಹೆಚ್ಚುತ್ತಿತ್ತು" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಬಹುಶಃ ಪಂಪನ ಕನ್ನಡಕದಿಂದ ಕುಮಾರವ್ಯಾಸನನ್ನು ನೋಡಿದ್ದರ ಪರಿಣಾಮವಾಗಿಯೂ ಇದನ್ನು ಗುರುತಿಸಬಹುದು. ಆಧುನಿಕ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಪ್ರಾಚೀನ ಕಾವ್ಯಗಳ ಸಂಗ್ರಹ ಆವೃತ್ತಿಯನ್ನು ತರುವ ರೂಢಿಯೊಂದರ ಉಪಪರಿಣಾಮವೆಂದೂ ಇದನ್ನು ಕಾಣಬಹುದು. ಅದೇನೇ ಇದ್ದರೂ, ಕುಮಾರವ್ಯಾಸನನ್ನು ಕುಮಾರವ್ಯಾಸನನ್ನಾಗಿಯೇ ಇಡಿತನದಲ್ಲಿ ಗ್ರಹಿಸುವ, ಅವನ ಪಠ್ಯಸಂವಹನದ ಸ್ವರೂಪವನ್ನು ಕೇಂದ್ರದಲ್ಲಿರಿಸಿಕೊಂಡು ಕೃತಿಯ ಅನನ್ಯತೆಯನ್ನು ವಿಶ್ಲೇಷಿಸುವ ಬಗೆಯ ಅಧ್ಯಯನಗಳು ಅಧ್ಯಯನಕಾರರಿಗಾಗಿ ಇನ್ನೂ ಕಾದುಕೊಂಡಿವೆಯೆಂದೇ ಹೇಳಬಹುದು.

**ಉಲ್ಲೇಖಗಳು ಮತ್ತು ಟಿಪ್ಪಣಿ**

೧. '...... ಪಂಪನಿಗೆ ಯಾವುದು ಕಲಾಮಾತ್ರವಾದ ಲೌಕಿಕ ಕಾವ್ಯವೋ ಅದು ನಾರಣಪ್ಪನಿಗೆ ಜೀವನೋದ್ದೇಶಸರ್ವಸ್ವಕ್ಕೂ ಮಾರ್ಗವಾದ ಪವಿತ್ರ ಸಾಧನೆ. ಪಂಪನಂತೆ ನಾರಣಪ್ಪ ತನ್ನ ಮಹೋನ್ನತಿಯನ್ನು ಇಬ್ಬಗೆ ಮಾಡಿಕೊಂಡು ಲೌಕಿಕ ಆಗಮಿಕವೆಂದು ಎರಡು ಕಾವ್ಯಗಳಲ್ಲಿ ಅದನ್ನು ಹಂಚಿ, ಪ್ರಕೃತಿ ಸಹಜವಾದ ಔನ್ನತ್ಯವನ್ನು ಕುಬ್ಜತರವನ್ನಾಗಿ ಮಾಡಿಕೊಂಡಿಲ್ಲ. ನಾರಣಪ್ಪನಿಗೆ ತನ್ನ ಕೃತಿ ಲೌಕಿಕ, ಆಗಮಿಕ, ವ್ಯಾವಹಾರಿಕ, ಪಾರಮಾರ್ಥಿಕ ಎಲ್ಲವನ್ನೂ ಒಳಗೊಂಡ ಅಖಂಡ ಕೃತಿ ಕಾವ್ಯರಾಸಾಸ್ವಾದನೆ ಮಾತ್ರವಲ್ಲ, ದೈವೋಪೋಸನೆಯೂ ಅಲ್ಲಿ ಅವಿಭಕ್ತ ಉದ್ದೇಶ." – ಕುವೆಂಪು, **'ದ್ರೌಪದಿಯ ಶ್ರೀಮುಡಿ'**, ಸಮಗ್ರ ಗದ್ಯ, ಸಂ. ೧, (ಹಂಪಿ : ಕನ್ನಡ ವಿಶ್ವವಿದ್ಯಾಲಯ, ೨೦೦೩), ಪು. ೩೯

೨. ಕೀತಿನಾಥ ಕುರ್ತಕೋಟಿ, **ಕನ್ನಡ ಸಾಹಿತ್ಯ ಸಂಗಾತಿ**, (ಹಂಪಿ : ಕನ್ನಡ ವಿಶ್ವವಿದ್ಯಾಲಯ, ೧೯೯೭), ಪುಟ ೨೦೪–೨೦೫

೩. ಅದೇ, ಪು. ೧೫

೪. ಅದೇ, ಪು. ೧೯

೫. ಈ ಸೂಚನೆಯನ್ನು ನೀಡಿದವರು ಡಾ॥ ಕೃಷ್ಣ ಪರಮೇಶ್ವರ ಭಟ್ಟ

೬. ಕುಮಾರವ್ಯಾಸ, (ನವದೆಹಲಿ, ಸಾಹಿತ್ಯ ಅಕಾಡೆಮಿ, ೧೯೮೯) ಪುಟ ೮೬–೮೭

೭. ಕೆ. ಕೃಷ್ಣಮೂರ್ತಿ, 'ಪಂಪನಿಗಿದ್ದ ಸಂಸ್ಕೃತದ ಹಿನ್ನೆಲೆ', ಪಂಪ: ಒಂದು ಅಧ್ಯಯನ, (ಬೆಂಗಳೂರು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೪), ಪುಟ ೧೧.

೮. ಬೇರು ಕಾಂಡ ಚಿಗುರು, (ಬೆಂಗಳೂರು : ವಿವೇಕ ಪ್ರಕಾಶನ, ೧೯೯೭), ಪುಟ ೧೮೯.

❑❑

# ಕನ್ನಡ : ಬದುಕಿನ ಭಾಷೆ

– ತಾಳ್ತಜೆ ವಸಂತಕುಮಾರ

ಭಾವನೆಗಳನ್ನು ಭಾಷೆಯ ಮೂಲಕ ಅಭಿವ್ಯಕ್ತಪಡಿಸುವ ಸಾಮರ್ಥ್ಯವು ಮನುಷ್ಯನ ಅನನ್ಯ ಲಕ್ಷಣಗಳಲ್ಲಿ ಒಂದಾಗಿದೆ. ಮನುಷ್ಯನ ಬದುಕಿನಲ್ಲಿ ಶಬ್ದಾತೀತವಾದ ಒಂದು ಭಾಷೆಯೂ ಇದೆ. ಯಾರೋ ಎಡವಿದಾಗ ಆಧರಿಸಲು ಧಾವಿಸುವ ಕೈಗಳಿಗೆ, ಅಂತಿಮ ದರ್ಶನಕ್ಕೆ ಹೋದಾಗ ಜಿನುಗುವ ಕಣ್ಣಿನ ಕಂಬನಿಗಳಿಗೆ, ತಾಯಿಯ ಹತೋಟಿಯನ್ನು ಮೀರಿ ಪುಟಿಯುವ ತುಂಟ ಕಂದನ ಜೀವನೋತ್ಸಾಹಕ್ಕಷ್ಟೇ ಅರ್ಥವಾಗುವ ಎಲ್ಲ ವ್ಯಾಕರಣ–ಶಾಸ್ತ್ರಗಳ ಎಲ್ಲೆಗಳಿಂದ ಮುಕ್ತವಾದ ಅದು ಹೃದಯದ ಭಾಷೆಯಾಗಿದೆ. ಇದು, ತನ್ನ ಸ್ಥೂಲಾರ್ಥದಲ್ಲಿ 'ಹೃದಯವಂತಿಕೆ' ಎನ್ನಿಸಿಕೊಳ್ಳುತ್ತದೆ.

ಈ ಹೃದಯದ ಭಾಷೆಯ ಪರಿಜ್ಞಾನವಿಲ್ಲದುದರಿಂದಲೇ 'ಭಾಷೆಯ ಉಳಿವು,' 'ಪ್ರಾದೇಶಿಕ ಭಾಷೆಗಳ ಭವಿಷ್ಯ' ಮುಂತಾದ ವಿಚಾರಗಳ ಬಗೆಗೆ ನಾವು ಚಿಂತನ ಗೋಷ್ಠಿಗಳನ್ನು ಆಯೋಜಿಸಬೇಕಾಗುತ್ತದೆ. ಎಂದರೆ, ಸೂಕ್ಷ್ಮ ಸಂವೇದನೆಗಳನ್ನು ಪ್ರಯತ್ನಪೂರ್ವಕವಾಗಿ ಜೀವಂತವಾಗಿಡಬೇಕಾಗಿರುವ ದುರಂತಕ್ಕೆ ನಾವಾಗಿಯೇ ಅಹ್ವಾನವನ್ನು ನೀಡಿದ್ದೇವೆ; ನೀಡುತ್ತಿದ್ದೇವೆ.

ಈ ಹೃದಯ ಸಂವಾದಕ್ಕೆ ನಾವು ಅನರ್ಹರಾಗುತ್ತಿರುವುದರ ಹಿಂದೆ ಸಂಕೀರ್ಣವಾದ ಕಾರಣಗಳಿವೆ. ಆತ್ಮ ಸಂವಾದ ಹಾಗೂ ಬಾಹ್ಯ ಸ್ಪಂದನಗಳು ನಾಸ್ತಿಯಾದ ವೈಕಲ್ಯವನ್ನು ನಾವು ಪ್ರಜ್ಞಾಪೂರ್ವಕವಾಗಿ ಬರಮಾಡಿಕೊಳ್ಳುತ್ತಿದ್ದೇವೆಯೇ ಎಂಬ ಸಂದೇಹಕ್ಕೂ ಇಲ್ಲಿ ಎಡೆ ದೊರೆಯುತ್ತದೆ.

ಇದರ ಕೇಂದ್ರವನ್ನು ಎರಡು ಮುಖ್ಯ ನೆಲೆಗಳ ಮುಖಾಂತರ ತಲುಪಬಹುದು. ಸ್ವಾರ್ಥವಲ್ಲದ ಅಭಿಮಾನ, ಆತ್ಮ ವಿಶ್ವಾಸ, ಉತ್ತರದಾಯಿತ್ವಗಳ ತೀವ್ರವಾದ ಅಭಾವವು ವ್ಯಕ್ತಿಯ ಆಂತರಿಕ ಸಂಸ್ಕಾರದ ಮೇಲೆ ಮಾಡುವ ನೇತ್ಯಾತ್ಮಕ ಪರಿಣಾಮಗಳು ಇದರ ಒಂದು ಮಗ್ಗುಲಲ್ಲಿವೆ.

ಇನ್ನೊಂದೆಡೆಯಿಂದ, ಹೊಸ ಪ್ರಪಂಚದಲ್ಲಿ ಹೆಚ್ಚುತ್ತಿರುವ ಲಘು ಪ್ರವೃತ್ತಿಯ ಬಗೆಗಿನ ಆಕರ್ಷಣೆ, ಅನ್ಯಾನ್ಯ ಮಾಧ್ಯಮಗಳ ಅವ್ಯಾಹತ ದಾಳಿಗಳು, ಕುಟುಂಬ, ಕಛೇರಿ ಮುಂತಾದ ಸಮುದಾಯದ ನೀತಿಗಳೆಲ್ಲವೂ ನಿಧಾನ ವಿಷಗಳಾಗಿ ಮನುಷ್ಯ ಸಂವೇದನೆಗಳನ್ನು ರೂಕ್ಷವಾಗಿ ಪರಿವರ್ತಿಸುತ್ತಿವೆ. ಈ ಎರಡೂ ಕೊನೆಗಳನ್ನು ಜೋಡಿಸಿದಾಗ, ಭಾಷೆಯು ನಮ್ಮ ಪೂರ್ವಾರ್ಜಿತ ಸೊತ್ತೆಂಬ ಜಾಗೃತಿಯ ಕೊರತೆಯ ರೂಪರೇಷೆಗಳು ಸ್ಪಷ್ಟವಾಗುತ್ತವೆ.

ಈ ಅಂಶವನ್ನು ಮನುಷ್ಯ ಶರೀರದ ರೂಪಕದ ಸಹಾಯದಿಂದ ವಿಶದಪಡಿಸಬಹುದು. ತನ್ನದಲ್ಲದ ಅಂಗವೊಂದನ್ನು ಅನಿವಾರ್ಯವಾಗಿ ಸ್ವೀಕರಿಸಬೇಕಾಗಿ ಬಂದಾಗ – ಅದು ಎಷ್ಟೇ ಮಹತ್ವದ್ದಾಗಿದ್ದರೂ – ಶರೀರವು ತೋರುವ ಪ್ರತಿರೋಧದ ಮಾದರಿಯಲ್ಲಿಯೇ ನಮ್ಮ ಸುಪ್ತ ಪ್ರಜ್ಞೆಯೂ ಪರಕೀಯವಾದ ಸಾಂಸ್ಕೃತಿಕಾಂಶಗಳನ್ನು ನಿರಾಕರಿಸುತ್ತದೆ. ಆದುದರಿಂದಲೇ ನಮ್ಮ ಬದುಕಿನಲ್ಲಿ 'ಸ್ವಂತದ ಭಾಷೆ'ಯೊಂದರ ಅಸ್ತಿತ್ವವು ಅಗತ್ಯವಾಗುತ್ತದೆ. ಅದು ದೃಢವಾದಷ್ಟೂ ಹೃದಯ ಭಾಷೆಯೂ ನಮನಶೀಲವಾಗುತ್ತದೆ; ದೇಶ–ಕಾಲ ಗಡಿಯಾಚೆಗೂ ಸಂವಹನವನ್ನು ಸಾಧಿಸುತ್ತದೆ.

ಭಾಷೆಯ ಸಂದರ್ಭದಲ್ಲಿ ನಮ್ಮಲ್ಲಿ ಸರ್ವೇಸಾಧಾರಣವಾಗಿರುವ ಶ್ರೇಣೀಕರಣದ ಭ್ರಾಂತಿಯನ್ನೂ ಇಲ್ಲಿ ಪ್ರಸ್ತಾಪಿಸಬೇಕು. ಭಾಷೆಗಳಲ್ಲಿ ತರತಮವೆನ್ನುವುದು ಕೇವಲ ನಮ್ಮ ಕಲ್ಪನೆಗಳಷ್ಟೇ ಆಗಿವೆ. ಇಲ್ಲಿ ಪ್ರಸ್ತುತವಾಗುವುದು ಸ್ವಕೀಯ–ಪರಕೀಯವೆಂಬ ವ್ಯತ್ಯಾಸ ಮಾತ್ರವೇ ಆಗಿದೆ. ಎಂದರೆ, ಭಾಷೆಯೊಂದರ ಸ್ವೀಕಾರ ಯೋಗ್ಯತೆ, 'ಇದು ನನ್ನ ಭಾಷೆ' ಎಂಬ ಆಪ್ತ ಭಾವದ ಬಲಗಳಿಂದಷ್ಟೇ ಅದರ ಸೌಷ್ಠವವು ನಿರ್ಧಾರಿತವಾಗುತ್ತದೆ. ಭಾಷೆಯು ಅದಕ್ಕದೇ ಆಗಿ ಕೇವಲ ಒಂದು ಸಂವಹನ ಮಾಧ್ಯಮವಾಗಿದೆ. ಬಿದಿರ ತುಂಡೊಂದು ಕೊಳಲಾಗಿ ನಾದ ಸೌಖ್ಯವನ್ನು ನೀಡುತ್ತದೋ, ಒಲೆಯೂದುವ ಕೊಳವೆಯಾಗಿ ಉಪಯುಕ್ತತೆಯ ಹಂತಕ್ಕೆ ನಿಂತು ಬಿಡುತ್ತದೋ, ಲಾಠಿಯಿಂದ ಬಳಕೆಯಾಗಿ ನೋವುಂಟು ಮಾಡುತ್ತದೋ ಎನ್ನುವದರ ಮೇಲೆ ಅದರ ಸ್ವರೂಪ, ಶ್ರೇಷ್ಠ– ಕನಿಷ್ಠ ಪಂಕ್ತಿಗಳು ನಿರ್ಧಾರಿತವಾಗುತ್ತದೆ.

ವಿಶ್ರಾಂತ ಪ್ರಾಧ್ಯಾಪಕರು, 'ಸುಧಾಮ', ಪಂಜಳ, ಉಪ್ಪಿನಂಗಡಿ (ದ.ಕ. ಜಿಲ್ಲೆ.)

ಈ ಹಿನ್ನೆಲೆಯಲ್ಲಿ ಸ್ವಂತದ ಭಾಷೆಯ ಬದಲಿಗೆ, ಯಾವುದೋ ನೆಲದ, ಎಲ್ಲಿಯದೋ ಸತ್ವವನ್ನು ಮೈತುಂಬಿಕೊಂಡ ಭಾಷೆಯೊಂದನ್ನು ಅಂಗೀಕರಿಸುವ ನಮ್ಮ 'ಶ್ರದ್ಧಾಂತರ'ದ ಮೂಲ ಚೂಲಗಳನ್ನು ಶೋಧಿಸಬೇಕಾಗುತ್ತದೆ.

ಕರ್ನಾಟಕದ ಸಂದರ್ಭದಲ್ಲಿ 'ಕನ್ನಡವು ಅವನತಿಯ ಹಾದಿಯಲ್ಲಿದೆ' ಎಂಬ ಆತಂಕವು ವಾಸ್ತವವೇ ಅಲ್ಲ ಭ್ರಮೆಯೇ ಎಂಬ ಪ್ರಶ್ನೆಯು ಪ್ರಸ್ತುತವಾಗುತ್ತದೆ. ಕನ್ನಡವು ನಮ್ಮ ದೈನಂದಿನ ಬದುಕಿನಿಂದ ಕಳಚಿಹೋಗುತ್ತಿದೆಯೇ ಹೇಗೆ? ಈ ನಶಿಸುವಿಕೆಯ ಲಕ್ಷಣಗಳು ಎಲ್ಲೆಲ್ಲಿ ಎದ್ದು ಕಾಣುತ್ತವೆ? ಇದು ನಮನಶೀಲತೆಯೇ ಅಲ್ಲ ಅಂಧಾನುಕರಣೆಯೋ – ಈ ಎಲ್ಲಾ ಅಂಶಗಳೂ ಪ್ರಸ್ತಾಪಕ್ಕೆ ಅರ್ಹವಾಗಿವೆ.

ಕೆಲವು ನಿದರ್ಶನಗಳ ಮೂಲಕ ಈ ಸ್ಥಿತಿಯನ್ನು ಪರಿಶೀಲಿಸಬಹುದು. ವ್ಯಕ್ತಿತ್ವ ವಿಕಸನದ ಮೂಲ ನೆಲೆಯಾಗಿರುವ ಕೌಟುಂಬಿಕ ಪರಿಸರವನ್ನು ಈ ದೃಷ್ಟಿಯಿಂದ ವ್ಯಾಖ್ಯಾನಿಸಬಹುದು. ನಮ್ಮ ಊಟ–ಉಡುಗೆಗಳಾಗಲಿ, ಪೀಠೋಪಕರಣಗಳಾಗಲಿ, ಗೃಹ ಬಳಕೆಯ ಸಾಮಗ್ರಿಗಳಾಗಲಿ, ಸಂಬಂಧವಾಚಕಗಳಾಗಲಿ ನಮ್ಮವುಗಳಾಗಿ ಉಳಿದಿವೆಯೇ? ಬೇರೆ ಬೇರೆ ಸಂಸ್ಕೃತಿಗಳೊಂದಿಗಿನ ನಿರಂತರ ಸಂಪರ್ಕಗಳಿಂದಾಗಿ ಬದಲಾವಣೆಗಳು ತೀರಾ ಅನಿವಾರ್ಯವೆನ್ನುವುದು ಒಪ್ಪಿಕೊಳ್ಳಬಹುದು. ಆದರೆ ನಮ್ಮ ಸಂಸ್ಕೃತಿಯ ಸಾರವತ್ತಾದ ಅಂಶಗಳು ಅರಿವಿನಿಂದ ಅಳಿದು ಹೋಗುವುದಕ್ಕೆ ಇದು ಸರ್ವಥಾ ಸಮರ್ಥನೆಯಾಗಲಾರದು.

ತುಂಬ ಸಶಕ್ತ ಮತ್ತು ಜನಪ್ರಿಯವಾದ ಸಂವಹನ ಸೇತುಗಳಾಗಿರುವ ಮಾಧ್ಯಮಗಳೂ ಈ 'ಭಾಷಿಕ ಸಂಕರ'ಕ್ಕೆ ಹೊಣೆಯಾಗಿವೆ. ಕನ್ನಡದ 'ಕ್ಷಮೆಕೇಳು' ಎನ್ನುವ ಕ್ರಿಯೆಯು ಆಂಗ್ಲ ಭಾಷೆಯ 'Sorry' ಎಂಬ ಪದದೊಂದಿಗೆ ಸಂಲಗ್ನಗೊಂಡು 'Sorry ಕೇಳುವುದು' ಎಂಬ ಪದ ಸಮುಚ್ಚಯವನ್ನು ಸೃಷ್ಟಿಸಿದೆ. ಇದು ಅತ್ತ ಆಂಗ್ಲ ಭಾಷಾ ಮರ್ಯಾದೆಯನ್ನೂ ಪರಿಗಣಿಸುವುದಿಲ್ಲ, ಇತ್ತ ಕನ್ನಡದ ಕಳೆಯನ್ನೂ ಲಕ್ಷಿಸುವುದಿಲ್ಲ. ಇಂಥಹ ಅಸಂಖ್ಯ ಉದಾಹರಣೆಗಳನ್ನು ನಮ್ಮ ದೂರದರ್ಶನ, ನಿಯತಕಾಲಿಕೆ ಮುಂತಾದ ಸಮೂಹ ಮಾಧ್ಯಮಗಳು ಧಾರಾಳವಾಗಿ ಪ್ರಸಾರ – ಪ್ರಚಾರ ಮಾಡುತ್ತವೆ.

ಒಂದು ಹಂತದಲ್ಲಿ, ನಮ್ಮ ಚಿಂತನಶೀಲರೂ, ವೈಚಾರಿಕ ಪ್ರಭೃತಿಗಳೂ, 'ಕನ್ನಡದ ಉಳಿವು ಶ್ರೀಸಾಮಾನ್ಯನಿಂದ ಮಾತ್ರವೇ ಸಾಧ್ಯ' ಎನ್ನುವ ಸಿದ್ಧಾಂತವನ್ನು ಮುಂದಿಟ್ಟಿದ್ದರು. ನಮ್ಮ ಕಣ್ಣ ಮುಂದೆಯೇ 'ಸಾದಾ ದೋಸೆ'ಯಂಥ ಪ್ರಯೋಗಗಳು ಅಪರಿಚಿತವೋ, ಅರೆ ಪರಿಚಿತವೋ ಆಗುತ್ತಿವೆ. ವಲಸೆಯಂಥ ಆರ್ಥಿಕ ಹಿನ್ನೆಲೆಯ ಕಾರಣಗಳೂ ಇದರ ಹಿಂದಿವೆ. ಮುಂಬಯಿ ಕನ್ನಡಿಗರು 'ಅಂಗಡಿ'ಯ ಬದಲಿಗೆ 'ದುಕಾನಿ'ಗೆ ಹೋಗಿ ಬರುತ್ತಾರೆ. ಅಲ್ಲಿ ಸಿಗುವ ಸಾಮಗ್ರಿಗಳು 'ಅಗ್ಗ'ವಾಗಿರದೆ 'ಸಸ್ತಾ' ಆಗಿರುತ್ತವೆ. ಅಲ್ಲಿಯ ಮಟ್ಟಿಗೆ ಅದು ಸರಿಯೆನ್ನುವ ಔದಾರ್ಯವನ್ನು ತೋರಿಸಿದರೂ, ಉಪ್ಪಿನಂಗಡಿಯಲ್ಲಿ 'ಸಸ್ತಾ ಬಜಾರು' ಪ್ರತ್ಯಕ್ಷವಾಗುವುದನ್ನು ಒಪ್ಪಿಕೊಳ್ಳಲು ನನ್ನಂಥವರಿಗೆ ಕಷ್ಟವಾಗುತ್ತದೆ. ಇದು ವ್ಯಾವಹಾರಿಕ ನೆಲೆಯ ಸಾಮಾಜಿಕ ಅನಿವಾರ್ಯತೆಯ ಬದಲಿಗೆ 'ಹಿರಿ' ಸಂಸ್ಕೃತಿಯ ಅನುಕರಣೆಯಾಗಿ ಕಾಣಿಸುವುದಿಲ್ಲವೇ?

ಸಮಸ್ತ ಕನ್ನಡಿಗರೂ ಇಂಥವುಗಳಿಗೆಲ್ಲಾ ಸಾಕ್ಷಿಗಳಾಗುತ್ತಲೇ ಇದ್ದಾರೆ. ಆದರೆ ಸ್ವಂತದ್ದೇನನ್ನೋ ಕಳೆದುಕೊಳ್ಳುತ್ತಿದ್ದೇವಲ್ಲ ಎಂಬ ಭಾವವು ಸಾರ್ವತ್ರಿಕವಾಗಿ ಏಕೆ ಉದ್ದೀಪ್ತಗೊಳ್ಳುತ್ತಿಲ್ಲ? ನಮ್ಮದೇ ಸೊತ್ತಾಗಿರುವ ಭಾಷೆಯನ್ನು ಉಳಿಸಿಕೊಳ್ಳಬೇಕೆಂಬ ಪ್ರಜ್ಞಾಪೂರ್ವಕ ಪ್ರಯತ್ನಗಳೂ, ಚಿಂತನ ಸತ್ರಗಳೂ ಏಕೆ ಅಗತ್ಯವಾಗುತ್ತವೆ? 'ಮೊಗಸಾಲೆ' ಎನ್ನುವ ಅಚ್ಚ ಕನ್ನಡ ಪದವಾಗಲಿ, ಅದರ ಪರ್ಯಾಯವಾದ 'ಮುಖ ಮಂಟಪ' ಎನ್ನುವ ಶಬ್ದವಾಗಲಿ ನಮ್ಮ ಮಗುವಿಗೆ ತಿಳಿದಿಲ್ಲವಲ್ಲ ಎಂದು ಎಷ್ಟು ಮಂದಿ ತಾಯ್ತಂದೆಯರು ಹಳಹಳಿಸುತ್ತಾರೆ? ಸಹಜವಾಗಿಯೇ 'ಚಮಚ'ವೆನ್ನಲು ಬಯಸುವ ಎಳೆಯರಿಗೆ ಆ ವಸ್ತುವು 'ಸ್ಪೂನ್' ಆಗಿದೆಯೆಂದು ಮಾತ್ರವೇ ಏಕೆ ಕಲಿಸಲಾಗುತ್ತದೇ? ಬೇಕಾದಷ್ಟು ಭಾಷೆಗಳನ್ನು ನಾವು ಕಲಿಯೋಣ. ಆದರೆ ಸ್ವ ಭಾಷೆಯ ಗಟ್ಟಿಯಾದ ಅಸ್ತಿವಾರದ ಮೇಲೆ ಆ ಎಲ್ಲ ಅನ್ಯ ಭಾಷೆಗಳ ಕಟ್ಟೋಣವನ್ನು ನಿಲ್ಲಿಸೋಣವೆಂಬ ಎಚ್ಚರವು ನಮಗಿಲ್ಲ.

ಇದು ನಮ್ಮೆದುರಿಗಿನ ವಸ್ತು ಸ್ಥಿತಿಯಾಗಿದೆ. ಹಾಗಾದರೆ ಈ ಕೊಂಡಿಗಳು ಕಳಚಿಕೊಂಡಿದ್ದೆಲ್ಲಿ? ಮೊದಲ ಗೊಣಸು ಸಡಿಲಾದಾಗಲೇ ಬಿಗಿಗೊಳಿಸಬೇಕಾದ ಕರ್ತವ್ಯವನ್ನು ನಾವು ಸರಿಯಾಗಿ ನಿಭಾಯಿಸಲಿಲ್ಲವೆಂದೇ ಹೇಳಬೇಕು. ಸದ್ಯಕಾಲೀನ ಪರಿಸ್ಥಿತಿಯಲ್ಲಿ 'ಕನ್ನಡದ ಪ್ರೀತಿ'ಯು ತನ್ನ ಅಖಂಡತ್ವವನ್ನು ಕಳೆದುಕೊಂಡು ಎಳೆಎಳೆಯಾಗಿ ಬೇರ್ಪಟ್ಟಿದೆ. ಆದುದರಿಂದಲೇ ಅದರ ಪುನಾಜೋಡಣೆಯ ಉಪಕ್ರಮವು ತೀರಾ ಪ್ರಯಾಸದಾಯಕವಾಗಿದೆ.

ಈ ಹಿನ್ನೆಲೆಯಲ್ಲಿ 'ಕನ್ನಡದ ಕಳಕಳಿ–ಕಾಳಜಿಗಳು ಹಾಸ್ಯಾಸ್ಪದವಾಗುತ್ತಿರುವುದನ್ನು ನಾವು ವಿಮರ್ಶಿಸಬೇಕು. ಯಾವುದೇ ರೀತಿಯ ಸುಧಾರಣೆಯೂ ಕೇವಲ ಘೋಷಣೆಗಳಿಂದಲೇ ಸಾಧಿತವಾಗಲಾರದು. ಭಾಷೆಯ ಬಗೆಗಿನ ಪ್ರೀತಿಯು ಆಂತರಿಕ ಅಗತ್ಯವಾದಾಗ, ಪ್ರತಿಯೊಬ್ಬನ ಆದ್ಯತೆಯೂ ಆದಾಗ ಮಾತ್ರ ಅಂಥ ನಿಲುವು ಅಧಿಕೃತವೆನಿಸುತ್ತದೆ, ಪ್ರಾಮಾಣಿಕವಾಗುತ್ತದೆ.

ಭಾಷೆಯ ಉಳಿವು, ಅದನ್ನು ಯಥಾವತ್ತಾಗಿ ಬದುಕುವುದರಲ್ಲಿದೆ. ಈ ಅರ್ಥದಲ್ಲಿ ಕನ್ನಡವು 'ಬದುಕಿನ ಭಾಷೆ'ಯಾಗಿದೆಯೇ? ಆಗುತ್ತಿದೆಯೇ? ಬೇರುಗಳು ರೋಗಗ್ರಸ್ತವಾದಾಗ, ಸಸಿಗೆ ಎಷ್ಟೇ ಪೋಷಣೆ, ನೀರು, ನೆಳಲುಗಳನ್ನು ನೀಡಿದರೂ ಅದು ನಳನಳಿಸಿ ಹಸಿರುಡುವುದು ಸಾಧ್ಯವಾಗುತ್ತದೆಯೇ?

ಆಪಾತತಃ ಭಾಷೆಯೆಂದರೆ ಪ್ರತ್ಯೇಕವಾದ ಒಂದು ಅಧ್ಯಯನ ಘಟಕವಲ್ಲ; ಅದಕ್ಕದೇ ಸ್ವಯಂ ಪೂರ್ಣವೂ ಅಲ್ಲ. ಪದಗಳನ್ನು ಉಳಿದ ಸಾಂಸ್ಕೃತಿಕ ಅವಯವಗಳಿಂದ ಬೇರೆಯಾಗಿಟ್ಟು ನೋಡುವುದರಲ್ಲಿಯೇ ನಾವು ತಪ್ಪುತ್ತಿದ್ದೇವೆ. ಯಾವುದೇ ಭಾಷೆಯು ಬದುಕಿ, ಬೆಳೆಯಬೇಕಾದರೆ ಅದಕ್ಕೆ ನೈಸರ್ಗಿಕವಾಗಿರುವ,ಉತ್ತೇಜಕವಾಗಿರುವ,ಅನುಕೂಲಕರವಾದ ಪರಿಸರವು ತೀರಾ ಅಗತ್ಯವಾಗುತ್ತದೆ. ಮನುಷ್ಯ ಶರೀರದ ಒಳಗೆ ಸದಾ ಮಿಡಿಯುತ್ತಿರುವ ಹೃದಯವನ್ನು ಅದರಿಂದ ಹೊರತೆಗೆದು ಪ್ರಯೋಗಾಲಯದಲ್ಲಿ ಎಷ್ಟು ಸಮಯ ಜೀವಂತವಾಗಿ ಇಡಬಹುದು? ಭಾಷೆಯೂ ತನ್ನ ಸ್ವಂತದ ನೆಲೆಯಲ್ಲಿ, ಸಂಬಂಧಿ ಪರಿಕರಗಳ ಮಧ್ಯೆ ಇದ್ದಾಗ ಮಾತ್ರವೇ ಸುಪುಷ್ಟವಾಗಿ ಬೆಳೆಯುತ್ತದೆ. ಬಾಹ್ಯ ಶಕ್ತಿಗಳ ನೆರವನ್ನೆಂದೂ ಅಪೇಕ್ಷಿಸದ ಸ್ವಾಯತ್ತತೆಯನ್ನು ಗಳಿಸಿಕೊಳ್ಳುತ್ತದೆ. ಇಲ್ಲಿ ಅದ್ಭುತವಾದ ಪ್ರಾಕೃತಿಕ ಹೊಂದಾಣಿಕೆಯೇ ಕಾಣಿಸುತ್ತದೆ. ಎಂದರೆ, ವಿಶಾಲ ಸಂಸ್ಕೃತಿಯ ಭಾಗವಾಗಿ ತನ್ನನ್ನು ಗುರುತಿಸಿಕೊಳ್ಳುವ ಭಾಷೆಯು ಅದರಿಂದಲೇ ತನ್ನ ಪೋಷಣೆಗೆ ಬೇಕಾದ ಸತ್ವವನ್ನೂ ಹೀರಿಕೊಂಡು ಸಮೃದ್ಧವಾಗುತ್ತದೆ. ಇದು ಕನ್ನಡದ ಮಟ್ಟಿಗೂ ಅಕ್ಷರಶಃ ಸತ್ಯವಾದ ಮಾತೇ ಆಗುತ್ತದೆ.

ಕನ್ನಡ ಸಂಸ್ಕೃತಿಯಲ್ಲಿ ಬದುಕುವುದು ಸಾಧ್ಯವಾದಾಗ ಕನ್ನಡ ಭಾಷೆಯು ತಾನಾಗಿಯೇ ಬೆಳೆಯುತ್ತದೆ. ಆಗ ಅದು ತಂತಾನೇ ಬದುಕಿನ ಭಾಷೆಯೂ ಆಗುತ್ತದೆ. ಭಾಷೆಯು ಯಾವತ್ತೂ ಸಂಸ್ಕೃತಿಗಿಂತ ದೊಡ್ಡದಾಗಲಾರದು. ಒಂದು ಸಂಸ್ಕೃತಿಯು ನಶಿಸಿದಂತೆಲ್ಲ ಅದರ ಭಾಷೆಯೂ ಸೊರಗುತ್ತ ಹೋಗುವುದು ಅನಿವಾರ್ಯವಾಗುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಕೆಲಭಾಗಗಳಲ್ಲಿ ಪ್ರಚಲಿತವಾಗಿರುವ 'ಒತ್ತೆಕೋಲ'ದಂಥ ಆರಾಧನಾ ವಿಧಿಯೊಂದನ್ನು ಅರ್ಥಮಾಡಿಕೊಳ್ಳುವುದೆಂದರೆ, ಅದು ಸೃಷ್ಟಿಸುವ ಅಲೌಕಿಕ ಪರಿಸರ, ಮಧ್ಯರಾತ್ರಿಯ ಅನಂತರದ ನಿಗೂಢ ನೀರವತೆಯ ನೆರವು, ಕೆಂಡ ಹಾಯುವ ದೃಶ್ಯಗಳೆಲ್ಲವೂ ಸೇರಿದ ಅನುಭವವನ್ನು ಗ್ರಹಿಸುವುದೇ ಆಗಿದೆ. ವರ್ಷಕ್ಕೊಮ್ಮೆಯೋ, ಎರಡು ವರ್ಷಕ್ಕೊಮ್ಮೆಯೋ ಇದನ್ನು ಕಾಣುವ ಮಗು, ಅದರ ಪಾರಿಭಾಷಿಕಗಳನ್ನು ಅಪ್ರಯತ್ನವಾಗಿಯೇ ತನ್ನ ಶಬ್ದಕೋಶಕ್ಕೆ ಸೇರಿಸಿಕೊಳ್ಳುತ್ತದೆ. ಬದಲಿಗೆ ರಂಗದ ಮೇಲೆ ಕ್ಷಣಕಾಲ ಇದನ್ನು ಪ್ರದರ್ಶಿಸುವುದರಿಂದ ಕೇವಲ ಹಗಲು ವೇಷವೊಂದನ್ನು ಕಂಡಂತಾಗುತ್ತದಷ್ಟೆ.

ಈ ನಿದರ್ಶನವು ಭೌತಿಕ– ಭಾವನಾತ್ಮಕ ಪ್ರಪಂಚಗಳಿಗೆ ಸಮಾನವಾಗಿ ಹೊಂದಿಕೆಯಾಗುತ್ತದೆ. 'ಹಿರಿಯರನ್ನು ಗೌರವಿಸುವುದು' ಎನ್ನುವುದು ಕೇವಲ ಒಂದು ಪದಪುಂಜವಲ್ಲ. ನಿರ್ದಿಷ್ಟವಾದ ಮನೆಯೊಂದರಲ್ಲಿ ಆ ಭಾವವು ಸದಾ ಸಂಚರಿಸುತ್ತಿದ್ದರೆ 'ಗೌರವ' ಎನ್ನುವ ಪದವೂ 'ಓ' ... ಈ ಅನಿಸಿಕೆಗೆ ಗೌರವವೆನ್ನುತ್ತಾರೆ' ಎನ್ನುವ ಭಾಷಿಕವಾದ ಅರ್ಥಾಭಿವ್ಯಕ್ತಿಯೂ ಉಳಿದುಕೊಳ್ಳುತ್ತದೆ.

ಈ ಪ್ರಮೇಯವನ್ನು ಆಧರಿಸಿ 'ಕನ್ನಡ ಬದುಕಿನ ಭಾಷೆ'ಯೆಂಬ ಪರಿಕಲ್ಪನೆಯನ್ನು ಗಮನಿಸಬೇಕು. ಆಗ ಈ ಕೆಳಗಿನ ಸ್ಥೂಲವಾದ – ಹೊಳಹುಗಳು ರೂಪುಗೊಳ್ಳುತ್ತವೆ.

(ಅ) ಭಾಷೆಯ ಬಗೆಗಿನ ಮಡಿವಂತಿಕೆಯು ಸರ್ವಥಾ ಅಪೇಕ್ಷಣೀಯವಲ್ಲ.

(ಆ) ಸಂಸ್ಕೃತಿ ವಿರಹಿತವಾದ ಭಾಷೆಯು ಅರ್ಥಹೀನ.

(ಇ) ಬಹು ಭಾಷಿಕ ವಲಯವೊಂದರ ಸ್ವೀಕೃತಿಯು ಅನಿವಾರ್ಯ.

(ಈ) ಸಂವಾದದ ಭಾಷೆ, ಸಾಂಸಾರಿಕ ಭಾಷೆ, ವೇದಿಕೆಯ ಭಾಷೆ ಮುಂತಾದವುಗಳ ಪರಿವಿಡಿ – ಪ್ರತ್ಯೇಕತೆಗಳ ಪರಿಜ್ಞಾನ.

(ಉ) ಭಾಷೆಯ ಕಲಿಕೆಗೆ ಸಂವಾದಿ ಪರಿಸರವು ತೀರಾ ಅಗತ್ಯ. ನಮ್ಮ ಜಿಲ್ಲೆಯಂಥ ಬಹು ಭಾಷಿಕ ಪ್ರದೇಶಗಳಲ್ಲಿ ತುಳು, ಕನ್ನಡ, ಕೊಂಕಣಿ, ಬ್ಯಾರಿ ಮಲಯಾಳಂ ಮುಂತಾದ ಭಾಷೆಗಳೆಡೆಯಲ್ಲಿ ಸರಾಗವಾಗಿ ಸಂಚರಿಸಬಲ್ಲ ಮಗುವೊಂದು ಇಂಗ್ಲೀಷಿನಂಥ ಅಪರಿಚಿತ ಭಾಷೆಯೊಂದರ ಸಂದರ್ಭದಲ್ಲಿ ಆತಂಕಿತವಾಗುತ್ತದೆ.

(ಊ) ವೈಯಕ್ತಿಕ ಸಂಬಂಧಗಳು ಅಹಿತಕರ ವಾಗುತ್ತಿರುವುದಕ್ಕೆ ಭಾಷಾ ಮೂಲದ ಸಂವಹನದ ಮಿತಿಗಳೂ ಕಾರಣಗಳಾಗುತ್ತವೆ.

ನಮ್ಮ ಸಂದರ್ಭದಲ್ಲಿ, ಕನ್ನಡವು ಬದುಕಿನ ಭಾಷೆಯೂ ಆದಾಗ ದೊರೆಯುವ ಪ್ರಯೋಜನಗಳನ್ನೂ ಇಲ್ಲಿ ಪರಿಶೀಲಿಸಬೇಕಾಗುತ್ತದೆ. ಬಹಳ ಸಂಕ್ಷೇಪವಾಗಿ ಅಲ್ಲಿ ಈ ಕೆಳಗಿನ ಕೆಲವು ಅಂಶಗಳು ನಿಷ್ಪನ್ನವಾಗುತ್ತವೆ :

(ಅ) ಅಭಿವ್ಯಕ್ತಿಗಳು ಸಶಕ್ತವೂ, ಪ್ರಾಮಾಣಿಕವೂ ಆಗುತ್ತವೆ.

(ಸ್ವಯ, ಸಿಡಿತ ಮುಂತಾದ ಪದಗಳ ಅರ್ಥವಿಕೆಗಳನ್ನು ಅನ್ಯ ಭಾಷೆಗಳಲ್ಲಿ ಹಿಡಿದಿಡುವುದು ತುಂಬಾ ಕಷ್ಟ)

(ಆ) ಒತ್ತಡರಹಿತವಾಗಿ, ನಿರಾಳವಾಗಿ ಮಾತನಾಡುವ ಹಾಗೂ ಬರೆಯುವ ಸೌಖ್ಯ. (ಆಂತರಿಕ ಭಾಷಾಂತರವು ಅನಗತ್ಯವಾಗುತ್ತದೆ.)

(ಇ) ಕೇವಲ ಪ್ರದರ್ಶಿತಗೊಳ್ಳಬಹುದಾದ ಹಲವು ಪದ ಪರಿಕಲ್ಪನೆಗಳು ನಿತ್ಯ ಬಳಕೆಯಲ್ಲಿರುತ್ತವೆ. ದೈನಂದಿನ ಬದುಕಿನ ಭಾಗಗಳಾಗುತ್ತವೆ.

(ಈ) ವೈವಿಧ್ಯಗಳು ಉಳಿದುಕೊಳ್ಳುತ್ತವೆ.

(ಸಾಂಬಾರೆನ್ನುವ ಏಕರೂಪದ ಬದಲಿಗೆ, ಮುದ್ದೆಹುಳಿ,

ಕಾಯಿರಸಗಳಂಥ ಪದರೂಪಗಳು ಅಸ್ತಿತ್ವದಲ್ಲಿರಬೇಕಾದರೆ ಅಡುಗೆಯಲ್ಲೂ ವಿವಿಧತೆಗಳಿರಬೇಕು; ರುಚಿ ವ್ಯತ್ಯಾಸಗಳು ನಮ್ಮ ಅರಿವಿಗೆ ಬರಬೇಕು)

ಈ ಸ್ಥಿತಿಯು ಪ್ರಾಪ್ತವಾಗಬೇಕಾದರೆ, ನಮ್ಮೆಲ್ಲರ ಸಾಮೂಹಿಕ ಪ್ರಯತ್ನಗಳು ಬೇಕೇಬೇಕಾಗುತ್ತವೆ. ಸೂತ್ರಾತ್ಮಕವಾಗಿ ನಿರೂಪಿಸುವುದಾದರೆ : ಇದು ನನ್ನ ಭಾಷೆ. ಇದನ್ನು ನಾನು ಕಾಯ್ದುಕೊಳ್ಳಬೇಕೆಂಬ ಎಚ್ಚರವೊಂದು ಸಾರ್ವತ್ರಿಕವಾಗಿ ಮೂಡಬೇಕಾಗಿದೆ. ಅದರೊಂದಿಗೆ, ಇದನ್ನು ಅಳಿಯಗೊಡಬಾರದೆನ್ನುವ ಛಲ-ಸಂಕಲ್ಪ ಶಕ್ತಿಗಳ ಬೆಂಬಲವೂ ನಮಗೆ ಬೇಕಾಗುತ್ತದೆ. ಈ ನಮ್ಮ ಭಾಷೆಯ ಮೇಲೆ ಆದ, ಆಗುತ್ತಿರುವ, ಆಗಬಹುದಾದ ಅನ್ಯಾನ್ಯ ದಾಳಿಗಳನ್ನು ಎದುರಿಸಬಲ್ಲ, ಸಮರ್ಥವಾದ ರಕ್ಷಣಾ ವ್ಯೂಹವೊಂದರ ರಚನೆಯು ನಮ್ಮೆಲ್ಲರ ಹೊಣೆಗಾರಿಕೆಯೇ ಆಗಿದೆ. ಅಹಂಕಾರವಲ್ಲದ ಆತ್ಮವಿಶ್ವಾಸ ಹಾಗೂ ಅದರಿಂದ ಹುಟ್ಟುವ ಭಾಷೆಯು ಪ್ರತಿಷ್ಠೆಯ ಸಂಕೇತವಲ್ಲ ; ಬದಲಿಗೆ ಬದುಕಿನ ಭಾಷ್ಯವೆಂಬ ಆರೋಗ್ಯಕರವಾದ ಸಂಯೋಜನೆ – ಸಂತುಲನವನ್ನು ಕನ್ನಡಿಗರೆಲ್ಲರೂ ಗಮನಿಸಬೇಕಾಗಿದೆ. ಬದುಕುವ ಪರಿಸರ ಮತ್ತು ವ್ಯಕ್ತಿಗತವಾದ ಆಂತರಿಕ ಸತ್ವಗಳೆರಡೂ ಏಕೀಭವಿಸುತ್ತ 'ಕನ್ನಡ'ವಾದಾಗ ಅದು ಬದುಕಿನ ಭಾಷೆಯಾಗುತ್ತದೆ; ಬದುಕುತ್ತದೆ. ಹಾಗಾಗಲೆಂಬುದು ನಮ್ಮೆಲ್ಲರ ಒಕ್ಕೊರಲ ಹಾರೈಕೆ.

❑❑

# ಕುಂದಾಪುರ ನುಡಿ ಸೊಗಡು

– ಎ.ವಿ. ನಾವಡ

ಕರ್ನಾಟಕ ಒಂದು, ಇಲ್ಲಿನ ಭಾಷೆಯೂ ಒಂದು. ಕನ್ನಡದ ಕವಿರಾಜಮಾರ್ಗಕಾರ ಹೇಳುವಂತೆ ಅವನ ಕಾಲದಲ್ಲಿದ್ದದ್ದು 'ಕನ್ನಡಂಗಳ್.' ಅಂದರೆ ಕನ್ನಡಕ್ಕೆಷ್ಟು ಹಳಮೆಯೋ ಅಷ್ಟೇ ಹಳಮೆ ಬಹುರೂಪಿಯಾದ ಕನ್ನಡಂಗಳಿಗೂ ಇದೆ ಎನ್ನುವುದು ನಿಚ್ಚಳ. ಇಂದು ಹೇಗೋ ಹಾಗೆ ಕವಿರಾಜಮಾರ್ಗಕಾರನಿಗೂ ಕನ್ನಡಕ್ಕೆ ಒಂದು ಪ್ರಮಾಣ ಭಾಷೆಯನ್ನು ನಿರ್ಮಾಣ ಮಾಡುವ ಉದ್ದೇಶ ಇದ್ದಂತೆ ಕಾಣುತ್ತದೆ. ಅಂದರೆ ಅವನಿಗೆ ಒಲುವೆ ಇದ್ದುದು ಲಿಖಿತಭಾಷೆಯ ಕಡೆಗೆ. ತನ್ನ ಕಾಲದ ಭಾಷೆಯ ವಿಕಲ್ಪ ಅಥವಾ ಬಹುರೂಪತೆಯನ್ನು ಕಂಡೇ ಆತ 'ಪಲಗನ್ನಡಮಂ ಪೊಲಗೆಡಿಸಿ ನುಡಿವರಾಗಮ ಬಲಹೀನರ್' ಎಂದುದಾಗಿರಬೇಕು. ಹೀಗೆ ಆತ ತನ್ನ ಕಾಲದ ಭಾಷಾಪ್ರಭೇದಗಳ ಪ್ರಮಾಣೀಕರಣಕ್ಕೆ ಪ್ರಯತ್ನಿಸಿದಂತೆ ಕಾಣುತ್ತದೆ. 'ವಾಸುಗಿಯುಂ ಬೇಸರಿಸುಗುಂ ದೇಸಿ ಬೇರೆ ಬೇರೆಯಪ್ಪುದರಿಂ' ಎನ್ನುವ ಅವನ ಇಂಗಿತವನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿ ಅವನ ಮನಸ್ಸು ಹಲವನ್ನು ಒಂದಾಗಿಸುವ, ಪ್ರಭುತ್ವದ ಕಡೆಗೆ ಚಲಿಸುವುದನ್ನು ಸೂಚಿಸುತ್ತದೆ. ಕವಿರಾಜಮಾರ್ಗಕಾರನ ಪ್ರಸ್ತಾಪ ಏಕೆ ಮಾಡುತ್ತಿದ್ದೇನೆಂದರೆ ಸ್ವಾತಂತ್ರ್ಯಾನಂತರ, ಅದರಲ್ಲೂ ಏಕೀಕರಣದ ಬಳಿಕ ಭಾಷೆಯ ಪ್ರಮಾಣೀಕರಣದ ಉದ್ದೇಶದ ಹಿನ್ನೆಲೆಯಲ್ಲಿ ಭಷೆಯ ವಿಕಲ್ಪಗಳಿಗೆ ಉಜ್ಜುಂಗೊರಡು ಹಾಕಿ ಒಂದು ರೂಪವೇ 'ನಿರ್ದಿಷ್ಟ'ವೆಂದೂ, 'ಅಧಿಕೃತ'ವೆಂದೂ ಗ್ರಹಿಸುವ ಪ್ರವೃತ್ತಿ ಕಂಡುಬರುತ್ತದೆ. ಈ 'ಪ್ರಮಾಣೀಕರಣ'ದ ಹಿನ್ನೆಲೆಯಲ್ಲಿ ಅಖಿಲಕರ್ನಾಟಕಕ್ಕೆ ಒಂದೇ ಭಾಷಾಮಾದರಿಯ ಪಠ್ಯಪುಸ್ತಕವನ್ನು ರೂಪಿಸಲಾಯಿತು. ಜೊತೆಗೆ ಕೆಲವೊಂದು ರಾಜಕೀಯ, ಸಾಮಾಜಿಕ ಮರೆ ಪ್ರಯತ್ನದ ಫಲವಾಗಿ ಹತ್ತಾರು ಒಳನುಡಿಗಳಲ್ಲಿ ಒಂದನ್ನು ಮಾತ್ರ ಭಾಷಾಪಠ್ಯ ಮಂಡಳಿ ಒಪ್ಪಿಕೊಂಡು ಕಾರ್ಯ ತತ್ಪರವಾಯಿತು. ಈ ಮೂಲಕ ನಮ್ಮ ಭಾಷಾ ಪ್ರಭೇದ / ಒಳನುಡಿಗಳಾದ ಧಾರವಾಡ ಕನ್ನಡ, ಗುಲ್ಬರ್ಗ ಕನ್ನಡ, ಮೈಸೂರು ಕನ್ನಡ, ಕರಾವಳಿ ಕನ್ನಡಗಳಲ್ಲಿ ಯಾವುದು ಅಧಿಕೃತವಾಗಿ ಪಠ್ಯಪುಸ್ತಕಗಳಲ್ಲಿ ಬಳಕೆಯಾಯಿತೋ ಅದು ಮಾತ್ರವೇ 'ಅಥೆಂಟಿಕ್' ಎಂಬ ಕಲ್ಪನೆ ಹುಟ್ಟಿಕೊಂಡು ಆ ಮೂಲಕ ಒಂದು ಬಗೆಯ ತರತಮಭಾವ ಏರ್ಪಟ್ಟಿತ್ತು. ಈ ಭಾಷಾಪ್ರಭೇದವೇ ಸ್ವೀಕಾರಾರ್ಹವಾದುದು ಎಂಬ ಭಾವನೆ ನೆಗೆದು ಕಾಣಿಸಿತು. ತಾವು ಮನೆಯಲ್ಲಿ ಆಡುವ ಮಾತಿನ ಬಗ್ಗೆ ಕೀಳರಿಮೆ ಬೆಳೆಸಿಕೊಂಡ ಬಾಲಕರಲ್ಲಿ ಶಾಲೆಯಲ್ಲಿ ಅಧ್ಯಾಪಕರು ಬಳಸುವ ಭಾಷೆ, ಪಠ್ಯದ ಭಾಷೆಯೇ 'ಹಿರಿದು' ಎಂಬ ಭಾವನೆ ಬೆಳೆಯಿತು. ಎಂ.ಎನ್. ಶ್ರೀನಿವಾಸ್ ಅವರು ಹೇಳಿದ ಸಾಮಾಜಿಕ ಸಂಸ್ಕೃತೀಕರಣದಂತೆಯೇ ಭಾಷೆಯಲ್ಲೂ ಈ ಬಗೆಯ ಸಂಸ್ಕೃತೀಕರಣ ಅಥವಾ ಶಿಷ್ಟೀಕರಣದ ಚಲನೆ ಇದು. ಇದರಿಂದಾಗಿ ಭಾಷೆಯ ಸತ್ವ ಅಥವಾ ಸೊಗಡು ಮರವೆಗೆ ಸಂದಿತು. ಜೊತೆಗೆ ಹೊಸಜಗತ್ತಿನ ಬೇಡಿಕೆಗೆ ತಕ್ಕಂಥ ಭಾಷೆಯನ್ನು ಅಣಿಗೊಳಿಸುವ ಪ್ರಯತ್ನದಲ್ಲಿ ಏರ್ಪಟ್ಟ ಆಧುನೀಕರಣದಲ್ಲಿ ಕನ್ನಡದ ಸೊಗಡು ಮರೆಯಾಯಿತು. ಈ ದಿಸೆಯಲ್ಲಿ ಡಾ.ಡಿ.ಎನ್. ಶಂಕರಭಟ್ಟರು ತಮ್ಮ ಇತ್ತೀಚಿನ 'ಕನ್ನಡ ಸೊಲ್ಲರಿಮೆ' ಗ್ರಂಥ ಸರಣಿಯಲ್ಲಿ ಬಳಸುವ ಕನ್ನಡದ್ದೇ ಪದಗಳು, 'ಇಂಗ್ಲೀಷ್ ಪದಗಳಿಗೆ ಕನ್ನಡದ್ದೇ ಪದಗಳು, 'ನಿಘಂಟು'ವಿನಲ್ಲಿ ಬಳಸಿದ ಕನ್ನಡ ಪದಗಳು ಸಂಸ್ಕೃತದ 'ಬಿಗಿಹಿಡಿತ'ದಿಂದ ಕನ್ನಡವನ್ನು ಬಿಡಿಸುವ ಪ್ರಯತ್ನದ ಹಿಂದಿನ ತಾತ್ವಿಕತೆಯನ್ನು ಅರ್ಥಮಾಡಿಕೊಳ್ಳಬೇಕು.

ದಕ್ಷಿಣ ಕನ್ನಡದ ಶಾಲಾ ಕಾಲೇಜುಗಳಲ್ಲಿ, ಕೋರ್ಟು ಕಚೇರಿಗಳಲ್ಲಿ ಬಳಕೆಯಾಗುವ ಕನ್ನಡವಲ್ಲದೆ ಕೋಟ –ಕುಂದಾಪುರ ಪರಿಸರದ ಕನ್ನಡ, ಸುಳ್ಯ ಪರಿಸರದ ಅರೆಗನ್ನಡ ಅಥವಾ ಗೌಡಕನ್ನಡ, ಹವ್ಯಕ ಕನ್ನಡ, ಮಂಗಳೂರು ಪರಿಸರದ ಕೋಟದವರ ಕನ್ನಡ, ಕಾಸರಗೋಡಿನ ಕೋಟೆ / ರಾಮರಾಜ ಕ್ಷತ್ರಿಯರ ಆಡುಮಾತು, ಬೈರರ ಕನ್ನಡ ಮುಂತಾದ ಒಳಭೇದಗಳನ್ನು ಗುರುತಿಸಬಹುದು.

### ಕರಾವಳಿ ಕನ್ನಡ

ಮಂಗಳೂರು ಪರಿಸರದಲ್ಲಿ ಬಳಕೆಯಲ್ಲಿರುವ ಮಾತಿನ ರೂಪಕ್ಕೂ ಬರಹದ ಕನ್ನಡಕ್ಕೂ ವಿಶೇಷ ವ್ಯತ್ಯಾಸವಿಲ್ಲ – ಎಂಬುದಾಗಿ ದ್ರಾವಿಡ ಭಾಷಾವಿದರು ತಪ್ಪಾಗಿ ಭಾವಿಸಿದರು.

ಹಂಸ, # ೩೦೧, ಎಬೋಡ್ ಅಪಾರ್ಟ್‌ಮೆಂಟ್ಸ್, ಕಲ್ಪನಾರಸ್ತೆ, ವಾಸ್‌ಲೇನ್, ಮಂಗಳೂರು ೫೭೫೦೦೨

ದಕ್ಷಿಣ ಕನ್ನಡದಲ್ಲಿ ಬಳಕೆಯಲ್ಲಿರುವ ವಿಶಿಷ್ಟ ಪದಕೋಶಗಳು – ಸಪುರ, ತೋರ ಮುಂತಾದ ಪದಗಳ ಆಧಾರದ ಮೇಲೆ ಮಂಗಳೂರು ಕನ್ನಡ ಪ್ರಭೇದವನ್ನು ಗುರುತಿಸುತ್ತಾ ಬಂದರು. ಕನ್ನಡದ ಹಲವಾರು ಪ್ರಭೇದಗಳಿಂದ ಭಿನ್ನವಾದ ಇಲ್ಲಿನ ಕರಾವಳಿಯ ಕನ್ನಡದ ಅಭ್ಯಾದಲ್ಲಿ ವಿದ್ವಾಂಸರು ಬಹಳ ಕಾಲ ವಿಶೇಷ ಆಸಕ್ತಿ ವಹಿಸದೆ ಹೋದರು. ಇದೀಗ ಸುಮಾರು ಒಂದೂಕಾಲು ಸಾವಿರ ವರ್ಷಗಳಿಂದ ಸ್ವತಂತ್ರವಾಗಿ ಬೆಳವಣಿಗೆಯನ್ನು ಹೊಂದಿದ ಕರಾವಳಿ ಕನ್ನಡದ ಇತಿಹಾಸವನ್ನು ಪುನಾರಚಿಸಲು ವಿದ್ವಾಂಸರು ತೊಡಗಿದ್ದಾರೆ.

ದಕ್ಷಿಣ ಕನ್ನಡದಲ್ಲಿ ಬಳಕೆಯಲ್ಲಿರುವ ಕರಾವಳಿ ಕನ್ನಡದಲ್ಲಿ ಮುಖ್ಯವಾಗಿ ಎರಡು ರೂಪಗಳನ್ನು ಗುರುತಿಸಬಹುದು. **ಮೊದಲನೆಯ ರೂಪ,** ಈ ಜಿಲ್ಲೆಯ ಸುಮಾರು ೧೦ಲಕ್ಷ ಜನರ ತಾಯಿನುಡಿಯಾಗಿರುವ ಕನ್ನಡ. ಈ ಕನ್ನಡವು ಹವ್ಯಕ, ಗೌಡ, ಕೋಟ, ಕೋಟೆ ಮುಂತಾದ ಸಾಮಾಜಿಕ ಉಪಭಾಷೆಯನ್ನು ಹೊಂದಿರುತ್ತದೆ. ಪ್ರತಿಯೊಂದು ಸಾಮಾಜಕ ಪ್ರಭೇದವೂ ಪ್ರಾದೇಶಿಕವಾಗಿ ಭಿನ್ನ ಭಿನ್ನ ರೂಪವನ್ನು ಪಡೆದಿವೆ. (ಮಂಗಳೂರು ಹವ್ಯಕ, ಪುತ್ತೂರು ಹವ್ಯಕ, ಕಾಸರಗೋಡು ಹವ್ಯಕ ಇತ್ಯಾದಿ.) ಈ ಕರಾವಳಿ ಕನ್ನಡದ ವಿಶಿಷ್ಟ ಪ್ರಭೇದಗಳು ಇತರೆಡೆಯ ಕನ್ನಡಕ್ಕಿಂತ ಧ್ವನ್ಯಾತ್ಮಕವಾಗಿ, ವ್ಯಾಕರಣದ ದೃಷ್ಟಿಯಿಂದ ಬೇರೆಯಾಗಿ ಗೋಚರಿಸುತ್ತವೆ.

ಎರಡನೆಯದು **ಬರಹದ ರೂಪಕ್ಕೆ ಸಮಾನವಾಗಿರುವ ಮಾತಿನ ರೂಪ.** ಮನೆಯೊಳಗೆ ಮೊದಲು ಹೇಳಿದ ಹವ್ಯಕ, ಕೋಟ, ಕುಂದಾಪುರ ಕನ್ನಡ, ಗೌಡಕನ್ನಡ, ಮೋಯ ಮಲೆಯಾಳಂ ಮುಂತಾದ ಭಾಷೆಗಳನ್ನಾಡುತ್ತಾ ಹೊರವ್ಯವಹಾರಗಳಲ್ಲಿ, ಶಾಲೆ – ಕಾಲೇಜುಗಳಲ್ಲಿ, ಬೋಧನದಲ್ಲಿ ಬಳಸುವ ಕಲಿತು ಬಂದ ಕನ್ನಡ – ಜೀವಂತಿಕೆಯ ಯಾವ ಲಕ್ಷಣವನ್ನೂ ತೋರದ ಈ ಗ್ರಾಂಥಿಕ ಕನ್ನಡವನ್ನೇ ಶುದ್ಧಗನ್ನಡವೆಂದು ನಮ್ಮಲ್ಲನೇಕರು ಹೆಮ್ಮೆಪಟ್ಟುಕೊಳ್ಳುತ್ತಿರುವುದು ಬಹುತೇಕ ಕರ್ನಾಟಕದ ಪ್ರಮಾಣ ಭಾಷೆಯನ್ನು ಹೋಲುವ ಇದನ್ನು ಪ್ರಾದೇಶಿಕ ವಿಶಿಷ್ಟ ಭಾಷೆಯೆಂದು ಪರಿಗಣಿಸಲು ಸಾಧ್ಯವಿಲ್ಲ. ಹೀಗಾಗಿ ಮೊದಲ ವರ್ಗದ ಭಾಷೆಯನ್ನೇ ಅಥವಾ ಭಾಷಾ ಸಮುದಾಯವನ್ನೇ ಕರಾವಳಿ ಕನ್ನಡ ಎನ್ನಬೇಕಾಗಿದೆ.

೧. ಕರಾವಳಿಯ ಕನ್ನಡ ಐತಿಹಾಸಿಕವಾಗಿ ಕನ್ನಡದ ಅನೇಕ ವೈಲಕ್ಷಣ್ಯಗಳನು ಉಳಿಸಿಕೊಂಡಿದೆ. ಕರಾವಳಿಯೇತರ ಕನ್ನಡಗಳಲ್ಲಿ ಹಾಗೂ ಕನ್ನಡ ಶಾಸನಗಳಲ್ಲಿ ಸುಮಾರು ಒಂದೂಕಾಲು ಸಾವಿರ ವರ್ಷಗಳ ಹಿಂದೆ ನಡೆದಿರಬಹುದಾದ ಮಧ್ಯಸ್ವರ (ಎಏಒಓ)ಗಳು ಉಚ್ಚಸ್ವರಗಳಾಗಿ (ಇ ಈಉಊ) ಹೊಂದುವ ಮಾರ್ಪಾಟು ಕರಾವಳಿಯ ಕನ್ನಡದಲ್ಲಿ ನಡೆದಿಲ್ಲ. ಪದಗಳ ಮೊದಲಲ್ಲಿ 'ಎ' ಇಲ್ಲವೆ 'ಒ' ಕಾರ ಬಂದಿದ್ದು ಪದದಲ್ಲಿ ವ್ಯಂಜನ ಮತ್ತು ಅದರೊಂದಿಗೆ ಇಕಾರ ಉಕಾರಗಳು ಬಂದಾಗ ಮೊದಲ ಅಕ್ಷರದ ಎಕಾರ ಇಕಾರವಾಗುತ್ತದೆ. ಈ ಬದಲಾವಣೆ ಎಂಟನೆಯ ಶತಮಾನದಿಂದೀಚೆಗೆ ಶಾಸನಗಳಲ್ಲಿ ನಡೆದಿದೆ. ಬದಲಾವಣೆಗೆ ಒಳಗಾಗದೆ ಇರುವ ಮೂಲಕ ಕರಾವಳಿ ಕನ್ನಡ ತನ್ನ ಹಳೆಯತನವನ್ನು ಉಳಿಸಿಕೊಂಡಿದೆ.

**ಉದಾಹರಣೆಗೆ:**

| ಶಿಷ್ಟಗನ್ನಡ | ಹವ್ಯಕ | ಕುಂದಾಪುರ |
|---|---|---|
| ಕಿವಿ | ಕೆಮಿ | ಕೆಮಿ |
| ಇದಿರು | ಎದ್‌ರ್ | ಎದ್‌ರ್ |
| ಬಿದಿರು | ಬೆದ್ರ್ | ಬೆದ್ರ್ |
| ಬಿಳಿ | ಬೆಳಿ | ಬೆಳಿ |
| ಇಲಿ | ಎಲಿ | ಎಲಿ |

ಸದ್ಯ ನಾನು ಉಡುಪಿಯಿಂದ ಬಡಗಿಗೆ ಆರು ಕಿ.ಮೀ. ದೂರದ ಕಲ್ಯಾಣಪುರದ ತೊಡಗಿ ಬೈಂದೂರು ಶಿರಾಲಿಯ ನಡುವಣ ಭೂಭಾಗದ ಜನ ಒಂದು ಬಗೆಯ ಪ್ರಾದೇಶಿಕ ಕನ್ನಡವನ್ನು ಮಾತನಾಡುತ್ತಾರೆ. ಅದನ್ನೇ ಜನ ಕುಂದಾಪುರ ಕನ್ನಡ ಅಥವಾ ಕೋಟಕನ್ನಡ ಎಂದು ಕರೆದರೆ, ಪಂಡಿತರು ಕುಂದಕನ್ನಡ ಎಂದೂ ಕರೆದುದುಂಟು. ಕುಂದಾಪುರ ಕನ್ನಡದಲ್ಲಿ ಕೈನುರಿಯಿಸಿಕೊಂಡ ಪರಿಣತರೊಬ್ಬರು ಈ ನುಡಿಯ ಅನನ್ಯತೆಯನ್ನು ಹೀಗೆ ಹೇಳುತ್ತಾರೆ. *"ಕನ್ನಡದ ಸೊಗಡು, ಮಣ್ಣಿನ ವಾಸ್ನೆ ಬೇರೆಲ್ ಕಾಂಬೂಕಾತ್ ಮಾರಾಯ್ರೆ, ಅದ್ನ ಕಣ್ಣಾರೆ, ಕಾಣ್ಕಾರೆ ನಂಬದಿಗೇ ಹೋಯ್ಕ್. ಈ ಹೈವೇ ಒಂದ್ ಬಂದ್ ಎಲ್ಲಾ ಅಳ್ಳಿ ಹಾಕ್ತ್ ಕಾಣಿ. ಈ ಭಾಷೀಲಿ ಯಾರ್ ಹೇಂಗ್ ಮಾತಾಡ್ರೂ ಕೇಂಬೂಕೆ ಲಾಯಕ್ ಆತ್ ಕಾಣಿ"* (ಪಿ.ಎನ್. ಮಯ್ಯ ೨೦೧೧) ಭಾಷೆಯ ಮೇಲಿನ ಅಭಿಮಾನದೊಂದಿಗೆ ಅದು ಆಧುನಿಕ ವ್ಯವಸ್ಥೆಯಿಂದಾಗಿ ಭಾಷೆಯ ಸೊಗಡಿಗೆ ಊನ ತಟ್ಟುತ್ತದೆ ಎಂಬ ನೋವು ವ್ಯಕ್ತವಾಗಿದೆ. ಈ ಭಾಷೆಯ ಹೊರಟಿಗರು ಇದನ್ನು 'ಹೋಯ್ಕ್ ಬರ್ಕ್ ಭಾಷೆ' ಎಂದು ಗುರುತಿಸುವುದೂ ಉಂಟು. ನನ್ನ ಚಿಕ್ಕಂದಿನಲ್ಲಿ ನಾವು ಮನೆಯೊಳಗೆ ಮಾತನಾಡುವ ಮಂಗಳೂರು ಕೋಟ ಭಾಷೆಯನ್ನು ಕೇಳಿ ನಮ್ಮ ಗುರುಗಳು 'ಅಪ್ಪ ಹೋತ, ಮಗ ಆಡು' ಎಂದು ನಕ್ಕಿ ಮಾಡುವುದಿತ್ತು.

ಈ ಭಾಷೆಯ ವ್ಯಾಕರಣವನ್ನು ಡಾ. ಎ.ಎಸ್. ಆಚಾರ್ಯರಂತವರು ಇಂಗ್ಲೀಷ್‌ನಲ್ಲಿ ಬರೆದು ಪುಣೆಯ ಡೆಕ್ಕನ್ ಕಾಲೇಜಿನಿಂದ ಪ್ರಕಟಿಸಿದ್ದಾರೆ. ಸ್ಥಳೀಯ ವಿದ್ವಾಂಸರು ಅದೇ ಮಾದರಿಯ ಕನ್ನಡದಲ್ಲಿ ಈ ಭಾಷೆಯ ರಚನೆಯ ಗುಟ್ಟನ್ನು ರಟ್ಟು ಮಾಡಿದ ಉದಾಹರಣೆಗಳು

ಇವೆ. ಕುಂದಾಪುರ ' ಕಾಲೇಜಿನ ವಿದ್ಯಾರ್ಥಿಗಳು ತಮ್ಮ ಕಾಲೇಜಿನ ವಾರ್ಷಿಕಾಂಕಗಳಲ್ಲಿ ದೊಡ್ಡ ಪ್ರಮಾಣದ ಭಾಷಿಕ, ದೂರದರ್ಶನ, ಚಲನಚಿತ್ರಗಳಲ್ಲಿ ಕುಂದಾಪುರ ಕನ್ನಡದ ಸಾಂಸ್ಕೃತಿಕ ಸಂಪತ್ತನ್ನು ಕಲೆ ಹಾಕಿದುದು ಗಮನಾರ್ಹ ಸಂಗತಿ. ಸಂಭಾಷಣೆಯ ತುಣುಕುಗಳು ಹಾಸ್ಯ ಸನ್ನಿವೇಶಗಳಲ್ಲಿ ಮಾತ್ರ ಬಳಕೆಗೊಂಡು ಈ ಆಡುಮಾತಿನ ಬಗ್ಗೆ ಒಂದು ಬಗೆಯ ಅಪಹಾಸ್ಯಕ್ಕೆ ಆಸ್ಪದ ಮಾಡಿಕೊಟ್ಟಿವೆ. ಈ ಭಾಷಾರೂಪದ ಅಪಾರ ವೈವಿಧ್ಯವನ್ನು, ಸಾಧ್ಯತೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಬಳಸಿದವರೆಂದರೆ ಶ್ರೀಮತಿ ವೈದೇಹಿ ಹಾಗೂ ಶ್ರೀಮತಿ ಮಿತ್ರಾವೆಂಕಟರಾಜ್. ಕರಾವಳಿಯ ಕುಂದಾಪುರಕನ್ನಡದ ಕೆಚ್ಚು ಏನು ಎನ್ನುವುದನ್ನು ತಿಳಿಯುವುದಕ್ಕೆ ವೈದೇಹಿಯವರ 'ಅಕ್ಕು' ಕತೆಯ ಕೆಲವು ಸಾಲುಗಳು ಸಾಕು.

"ದಿಬ್ಬ ಬಂದಾಯಿತ್, ನನ್ನತ್ರ ಯಾರೂ ಇರ್ಲಿಲ್ಲೆ. ಎಲ್ರೂ ಚಪ್ರಕ್ಕೋಡಿದ್ರ್, ನಂಗೊನ್ನಮೂನ ಹೆದ್ರಿಕೆ ಆದ್ಹಂಗಿದ್ದಿತ್. ಅಷ್ಟೊತ್ತಿಗೆ ಅಕ್ಕು ಬಂದ್ಲ್. 'ಓ ಅಕ್ಕು!' ಎಂದೆ. ಅಯ್ಯಬ್ಬ ಅನ್ಸಿ, "ಹೂಂ ಹೂಂ, ಅಕ್ಕುವಾ ಅವ್ಳ್ ನರ್ಳ!' – ಹರಪಿದ ಹಂಗ್ ಉತ್ರ ಕೊಟ್ಲ್ ಅಕ್ಕು. ಸ್ವಲ್ಪ ದೂರ ನಿಂತಿದ್ಲ್. ನನ್ನನ್ನ ದುರುದುರು ಕಂಡ್ಳ್. 'ಅಷ್ಟ್ ಚಂದ ಯಾಕ್ ಮಾಡ್ಕಣ್ಡ್?' ಅಂತ್ಹೇಳಿ ಕೇಂಡ್ಲ್. ನಾ ಮಾತಾಡ್ಲಿಲ್ಲೆ. ಅವ್ಳ ಸ್ವರ ಸೀಳ್ ಬಿಟ್ಹಾಂಗಿದ್ದಿತ್. ಅವಳನ್ನೇ ಕ್ಯಾಂತಾ ಕೂತೆ. 'ಇಲ್ಬಾ' ಅಂದ್ಲ್. 'ಯಾಕೆ?" ಎಂದೆ. 'ಬಾ ಅಂದ್ರ್ ಬರ್ಕ್.' ಅಂದ್ಲ್. ನಂಗೆ ಯಾರನ್ನಾದ್ರೂ ಕರೀಕಂತ ಕಂಡ್ತ್. ಬೇಡ ಅಂತೆಳಿಯೂ ಕಂಡ್ತ್. 'ಅಕ್ಕೊ, ಹುಶಾರಿಲ್ಯ?" ಎಂದೆ. ಉತ್ರ ಕೊಡ್ದೆ ಸೀದ ನುಗ್ಗಿ ಬಂದದ್ದೇ ನೆತ್ತೀವರೆಗೆ ಮುಡ್ದ ಹೂವನ್ನೇ.

'ಯೇ ಮುಣ್ಯಾತ್ಗಿತ್ತಿ, ನನ್ನ ಗಂಡ್ ನರ್ಕಕ್ಕೆ ಹೋಯಾಯ್ತ್. ನಾ ಇಪ್ಪಲ್ಲಿವರಗಾರೂ ಗಟ್ಟಿ ಇರ್ತೆ, ನಂಗೊಂದ್ ಯಂತ ಮಾಡ್ಬೇಡ' – ಎಂದು ಸುಳ್ಳು ಶರಣಾಗತಿಯ ದನಿಯಲ್ಲಿ ಹೇಳುತ್ತ 'ಪಾಪ' ಎಂದು ತನ್ನೊಳಗೆ ಹೇಳಿದರು ದೊಡ್ಡತ್ತೆ.

'ಯಾಕ್ ಪಾಪ? ನಾಯಂತ ಮಾಡ್ದೆ? ನಿನ್ಹಾಂಗೆ ನಾನೇನ್ ಗಂಡ ಸತ್ ಮುಂಡೆ ಅಲ್ಲ. ನನ್ನ ಗಂಡ ಬಾಸಾಯಿ ತಿಂಬುಕೆ ದೇಶಾಂತರ ಹೋದ ಅಂತಳಿ ನಾ ಪಾಪ್ಪ? ಮೈ ಮೇಲ್ ಬಂದ್ ಅಡ್ಡದ್ಮನೆ ತಿಮ್ಮಪ್ಪಯ್ಯನ್ ಹೊಂಡಕ್ಕ್ ದೂಡಿ ಹಾಕ್ದವ್ಳ್ ನಾನ್! ಕೇಣ್ ಕೇಣಲೇ ಗಾಡ್ಮಿಣಿ." – ಆಕೆ ಮತ್ತೆ ಏನೇನೆಲ್ಲ ಹೇಳುತ್ತಿದ್ದಳೋ. ದೊಡ್ಡಜ್ಜಯ್ಯ ಬಂದರು. ಅವರ ಉಸಿರಿನ, ಕೋಲಿನ ಪರಾಕು ಕೇಳಿಯೇ ಮುಕ್ಕಾಲು ಜನ ದಿಕ್ಕಾಪಾಲಾದರು. 'ಯೇ ವಾಸು!' ವಾಸು ಚಿಕ್ಕಪ್ಪಯ್ಯ ಹನುಮಂತನಂತೆ ಹಾರಿ ಬಂದ. 'ತಕೋ' ನಾಲ್ಕ್ ಹಾಕದ್ಕ, ಪಿತ್ತ ಇಳ್ಸಿಕೊಡ್' ದೊಡ್ಡಜ್ಜಯ್ಯ ಅಷ್ಟು ಹೇಳಿದ್ದೇ ಮೈಮೇಲೆ ಬಾಸುಂಡೆ ಬಿದ್ದೇಬಿಟ್ಟಿತು ಎಂಬಂತೆ 'ಅಯ್ಯಯ್ಯೋ, ನನ್ನನ್ ತೇೂತ್ರೋ' – ಎನ್ನುತ್ತ ಅಕ್ಕು ದಿಡುಗುಟ್ಟಿಕೊಂಡು ಓಡಿ ಮೂಲೆ ಕೋಣೆಯಲ್ಲಿ ಬಾಗಿಲು ಹಾಕಿಕೊಂಡಳು.

ಈ ಆಡುಮಾತಿನ ಸೊಗಸು, ಅರ್ಥ ಪರಂಪರೆಯ ಕೆಚ್ಚು ನಮ್ಮ ಪ್ರಮಾಣ ಕನ್ನಡದಲ್ಲಿ ಎಷ್ಟೊಂದು ದುರ್ಬಲವಾಗಿರುತ್ತದೆ ಎನ್ನುವುದಕ್ಕೆ ಮುಂದಿನ ಕಲ್ಪಿತ ಸಾಲುಗಳು ಸ್ಪಷ್ಟ ದೃಷ್ಟಾಂತ.

ದಿಬ್ಬಣ ಬಂದಾಯಿತು. ನನ್ನ ಬಳಿ ಯಾರೂ ಬರಲಿಲ್ಲ. ಎಲ್ಲರೂ ಚಪ್ಪರಕ್ಕೆ ಓಡಿದರು. ನನಗೆ ಒಂದು ನಮೂನೆಯ ಹೆದರಿಕೆ ಆದ ಹಾಗಿತ್ತು. ಅಷ್ಟು ಹೊತ್ತಿಗೆ ಅಕ್ಕು ಬಂದಳು. 'ಓ ಅಕ್ಕು' ಎಂದನು ಅಯ್ಯಬ್ಬ ಅನ್ನಿಸಿ, 'ಹೂಂ ಹೂಂ, ಅಕ್ಕುವಾ ಅವಳ ನೆರಳು ಪರಚಿದಂತೆ ಉತ್ತರ ಕೊಟ್ಟಳು ಅಕ್ಕು. ಸ್ವಲ್ಪ ದೂರ ನಿಂತಿದ್ದಳು. ನನ್ನನ್ನು ದುರುದುರು ಕಂಡಳು. 'ಅಷ್ಟೊಂದು ಚಂದ ಏಕೆ ಮಾಡಿಕೊಳ್ಳಬೇಕು' ಎಂದು ಕೇಳಿದಳು. ನಾನು ಮಾತಾಡಲಿಲ್ಲ. ಅವಳ ಸ್ವರ ಸೀಳು (ಬಿರುಕು) ಬಿಟ್ಟಹಾಗಿತ್ತು. ಅವಳನ್ನೇ ನೋಡುತ್ತಾ ಕೂತೆ. 'ಇಲ್ಲಿ ಬಾ' ಅಂದಳು. 'ಏಕೆ' ಏಂದೆ. ಬಾ ಎಂದರೆ ಬರಬೇಕು' ಎಂದಳು. ನನಗೆ ಯಾರನ್ನಾದರೂ ಕರೀಬೇಕು ಎಂದು ಅನ್ನಿಸಿತು. 'ಬೇಡ ಎಂದು ಹೇಳಿಯೂ ಅನ್ನಿಸಿತು. 'ಅಕ್ಕೊ, ಹುಶಾರಿಲ್ಲವಾ' ಎಂದೆ. ಉತ್ತರ ಕೊಡದೆ ಸೀದಾ ನುಗ್ಗಿ ಬಂದು ನೆತ್ತಿವರೆಗೆ ಮುಡಿದ ಹೂವನ್ನು 'ಯೇ ಮುಣ್ಯಾದಿಗಿತ್ತಿ, ನನ್ನ ಗಂಡ ಸತ್ತು ನರಕಕ್ಕೆ ಹೋಗಿಯಾಯಿತು. ನಾನು ಇರುವಲ್ಲಿವರೆಗಾದರೂ ಗಟ್ಟಿಯಾಗಿ ಇರುತ್ತೇನೆ. ನನಗಾಗಿ ಏನೂ ಮಾಡಬೇಡ' ಎಂದು ಸುಳ್ಳು ಶರಣಾಗತಿಯ ದನಿಯಲ್ಲಿ ಹೇಳುತ್ತಾ 'ಪಾಪ' ಎಂದು ತನ್ನೊಳಗೇ ಹೇಳಿದರು ದೊಡ್ಡತ್ತೆ.

"ಏಕೆ ಪಾಪ? ನಾನೇನು ಮಾಡಿದ್ದೇನೆ?' ನಿನ್ನ ಹಾಗೆ ನಾನೇನೂ ಗಂಡ ಸತ್ತ ಮುಂಡೆ ಅಲ್ಲ. ನನ್ನ ಗಂಡ ಬೀದಿಮೇಲೆ ತಿನ್ನಲೆಂದು ದೇಶಾಂತರ ಹೋದ ಎಂದು ಹೇಳಿ ನಾನು ಪಾಪವಾ? ಮೈದುಂಬಿದ ಹೊತ್ತಿನಲ್ಲಿ ಅಡ್ಡದ್ಮನೆ ತಿಮ್ಮಪ್ಪಯ್ಯನನ್ನು ಹೊಂಡಕ್ಕೆ ದೂಡಿ ಹಾಕಿದವಳು ನಾನೇ! ಕೇಳಿ, ಕೇಳಲ್ಲ ಬಜಾರಿ!' ಆಕೆ ಮತ್ತೆ ಏನೇನೆಲ್ಲ ಹೇಳುತ್ತಿದ್ದಳೋ, ದೊಡ್ಡಜ್ಜಯ್ಯ ಬಂದರು. ಅವರ ಉಸಿರಿನ, ಕೋಲಿನ ಪರಾಕು ಕೇಳಿಯೇ ಮುಕ್ಕಾಲು ಜನ ದಿಕ್ಕಾಪಾಲಾದರು. 'ಯೇ, ವಾಸು!' ವಾಸು ಚಿಕ್ಕಪ್ಪಯ್ಯ ಹನುಮಂತನಂತೆ ಹಾರಿ ಬಂದ. 'ತಗೋ, ನಾಲ್ಕು ಹಾಕು ಅದಕ್ಕೆ, ಪಿತ್ಥ (ಅಹಂಕಾರ) ಇಳಿಸಿಕೊಡು.' ದೊಡ್ಡಜ್ಜಯ್ಯ ಅಷ್ಟು ಹೇಳಿದ್ದೇ ಮೈಮೇಲೆ ಬಾಸುಂಡೆ ಬಿದ್ದೇಬಿಟ್ಟಿತು. ಎಂಬಂತೆ 'ಅಯ್ಯಯ್ಯೋ, ನನ್ನನ್ನೂ ತೇೂತಾರೆ –ಎನ್ನುತ್ತ ಅಕ್ಕು ದಿಡುಗುಟ್ಟಿಕೊಂಡು ಓಡಿ ಮೂಲೆ ಕೋಣೆಯಲ್ಲಿ ಬಾಗಿಲು ಹಾಕಿಕೊಂಡಳು.

ಭಾಷಿಕ ಒಳನುಡಿಯೊಂದರಲ್ಲಿ ಅಭಿವ್ಯಕ್ತಗೊಂಡ ಸೃಜನಶೀಲ ಬರೆಹಕ್ಕೂ ಅದರ ಕೆಟ್ಟನೆರಳಿನಂತೆ ರೂಪುಗೊಂಡ ಪ್ರಮಾಣ ಕನ್ನಡದ ಅಭಿವ್ಯಕ್ತಿಯ ಮಾನನಕ್ಕೂ ಇರುವ

ಭಿನ್ನತೆಯನ್ನು ನಾವು ಗಮನಿಸಬಹುದು. ಅದಕ್ಕೆಂದೇ ಭಾಷೆಯ ಸೊಗಡನ್ನು ಅರಿಯಲು ನಾವು ಸೃಜನಶೀಲ ಬರಹಗಳ ಕಡೆಗೇ ಹೋಗಬೇಕು. ಆದರೆ ಅನೇಕ ಸೃಜನಶೀಲ ಬರಹಗಾರರಿಗೆ ಆಡುಮಾತಿನ ಬಳಕೆಯಲ್ಲಿ ಒಂದು ಬಗೆಯ 'ಹಿಂಜರಿಕೆ' ಕಾಣಿಸುತ್ತದೆ. ಇದರಿಂದ ಜೀವಂತಭಾಷೆಯೊಂದರ ಮಾದರಿ ಮರೆಯಾಗುವ ಸಾಧ್ಯತೆ ಇದೆ.

ಕುಂದಾಪುರ ಕನ್ನಡದ ಆಡುಮಾತಿನ ಸೊಗಡನ್ನು ಅರಿವಲ್ಲಿ ಬಳಕೆಯಲಿರುವ ಆದ್ಗತಿ (=ಜಾಣ್ಣುಡಿ, ನಾಣ್ಣುಡಿ) ಗಳು ಬೈಗುಳಗಳು ಚುಚ್ಚುನುಡಿಗಳು ನೆರವಿಗೆ ಬರುತ್ತವೆ. ಅವು ಬಹುತೇಕ ರೂಪಕಾಭಿವ್ಯಕ್ತಿಗಳಾಗಿರುತ್ತವೆ. **'ಅವ್ನಿಗೆ ಆಪಾಟಿ ಹುಟ್ಸಿಹಣ್ಣ್'** ಎಂದರೆ ದುರಹಂಕಾರಿ ಎಂದರ್ಥ. ಇಂತಹ ಮಾತುಗಳು ಎಲ್ಲಾ ಆಡುಮಾತಿನಲ್ಲೂ ಇರುತ್ತವೆ. ಆಯಾ ಆಡುಗರು ಬದುಕುವ ಸನ್ನಿವೇಶ, ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಗೆ ತಕ್ಕಂತೆ ಅವರ ಮಾತಿನಲ್ಲಿ ಸೊಗಡು, ಬೆಡಗುಗಳ ಏರ್ಪಡುತ್ತವೆ. ಇಲ್ಲಿ ಕಾಣುವುದು ಕುರಿತೋದದವರ ಅನುಭವ ಸಂಪನ್ನತೆ. ಇಂತಹ ಮಾತುಗಳನ್ನು ಅರ್ಥಮಾಡಿಕೊಳ್ಳಲು ಅವುಗಳ ಸಾಂದರ್ಭಿಕ ಹಿನ್ನೆಲೆಯ ಅರಿವು ಇರಬೇಕಾಗುತ್ತದೆ. ಅವ್ಯಯೀ ಭಾವ ಸಮಾಸದಂತೆ ಅಲ್ಲಿನ ಒಂದೊಂದು ಪದ ಹೇಳುವ ಶಾಬ್ದಿಕ ಅರ್ಥಕ್ಕಿಂತ ಬೇರೆಯಾದ ಅರ್ಥಪರಂಪರೆಯೊಂದು ಅಲ್ಲಿರುತ್ತದೆ. ಉದಾ :- **ಅಜ್ಜನ ಕೊರ್ಹಿ (ಮಣ್ಣಿನ ಪಾತ್ರ) ಮೊಮ್ಮಗನಿಗೆ.** ಸಾಮಾನ್ಯವಾಗಿ ದುಷ್ಪಚಟಗಳಿಂದ ತನ್ನ ವ್ಯಕ್ತಿತ್ವನ್ನೇ ಹಾಳುಮಾಡಿಕೊಂಡ ವ್ಯಕ್ತಿಯೊಬ್ಬನ ಕುರಿತು ಹೇಳುವ ಮಾತಿದು. ಅಜ್ಜನ ದುರ್ಬುದ್ಧಿ ಕುರಿತು ಹೇಳುವ ಮಾತಿದು. ಅಜ್ಜನ ದುರ್ಬುದ್ಧಿ ಬಳುವಳಿಯಾಗಿ ಮೊಮ್ಮಗನಿಗೆ ಬಂದಾಗ ಈ ಬಗೆಯ ಮಾತನ್ನ ಆಡುವುದು ಸಾಮಾನ್ಯ. ಅಜ್ಜನ ಕಚ್ಚೆ ಹರುಕುತನ, ಜೂಜು ಮುಂತಾದ ಕಲ್ಯಾಣಗುಣಗಳು ಮೊಮ್ಮಗನಿಗೆ ಇಳಿದು ಬಂದಾಗ ಜನ ಹೀಗೆ ಪ್ರತಿಕ್ರಿಯಿಸುವುದುಂಟು. ಕೆಲವೊಮ್ಮೆ ಉಪದೇಶಾತ್ಮಕವಾದ ನುಡಿಗಟ್ಟುಗಳು ಇರುತ್ತವೆ. ಇಲ್ಲಿ ಉಪದೇಶ ನೇರವಾಗಿರದೆ ಸೊಟ್ಟವಾಗಿರುತ್ತವೆ. **'ಅಣ್ಣು ಶೆಟ್ರ ಬೆಲ್ಲ ಅಲ್ಲ ಇದು'** ಈ ಮಾತಿಗೆ ಒಂದು ಘಟನೆಯ ಹಿನ್ನೆಲೆಯನ್ನು ಹೇಳುತ್ತಾರೆ.

ಹಿಂದೆ ಎಂದೋ ಅಣ್ಣು ಶೆಟ್ರು ಎನ್ನುವವರ ಬೆಲ್ಲದ ಅಂಗಡಿಯಲ್ಲಿ ಸಿಕ್ಕಿದವರೆಲ್ಲ ಕೈ ಹಾಕಿ ಬೆಲ್ಲ ತೆಗೆದುಕೊಳ್ಳುತ್ತಿದ್ದರಂತೆ. ಇದಕ್ಕೆ ಕಾರಣ ಅವರ ಔದಾರ್ಯ, ಸಜ್ಜನಿಕೆ. ಇದರ ಫಲವಾಗಿ ಅಂಗಡಿ ವ್ಯಾಪಾರದಲ್ಲಿ ಅವರು ಸೋತರು. ವ್ಯಾಪಾರದಲ್ಲಿ ಕಟ್ಟುನಿಟ್ಟು, ವ್ಯಾವಹಾರಿಕ ಕುಶಲತೆ ಇಲ್ಲದೆ ಹೋದರೆ ಅಣ್ಣುಶೆಟ್ರ ಗತಿ ಎಲ್ಲರಿಗೆ ಎನ್ನುವುದು ಇಲ್ಲಿನ ಧ್ವನಿ. ಕೆಲವು ವಾಗ್ರೂಢಿಗಳು ವ್ಯಕ್ತಿಯ ಗುಣಶೀಲವನ್ನು ಸೂಚಿಸಲು ಬಳಕೆಗೊಳ್ಳುತ್ತವೆ. **'ಬಜ್ಜದ ಮಾನಿಯ ಉಪ್ಪು ಬಳ್ಲೂಕು ಬಾರ'** ಅಂದರೆ ಊಟದ ಎಲೆಗಳ ಉಪ್ಪು ಬಳಸುವಂತಹ ಸರಳ, ಸುಲಭ ಕೆಲಸಕ್ಕೂ ಆಗದವ, ಅಪ್ರಯೋಜಕ ಎನ್ನುವುದನ್ನು ಹೇಳಲು ಬಳಸುವ ಮಾತಿದು. ಸಾಮಾನ್ಯವಾಗಿ ಬ್ರಾಹ್ಮಣರ ಮನೆಗಳಲ್ಲಿ, ಸಾಮೂಹಿಕ ಅನ್ನಸಂತರ್ಪಣೆಯಲ್ಲಿ ಮೊತ್ತಮೊದಲು ಬಳಸುವುದು ಉಪ್ಪು. ಉಪ್ಪು ಬಡಿಸುವವ ಸಾಮಾನ್ಯವಾಗಿ ಆ ಕೆಲಸದ ಜೊತೆಗೆ ಇನ್ನೊಂದು ಕೆಲಸವನ್ನು ನಿರ್ವಹಿಸಬೇಕು. ಅದು, ಹಾಕಿದ ಎಲೆಗಳನ್ನು ಲೆಕ್ಕ ಮಾಡುವ ಮೂಲಕ ಊಟಕ್ಕೆ ಬಂದವರೆಷ್ಟು, ಮಾಡಿದ ಅಡುಗೆ ಸಾಕಾಗಬಹುದೆ, ಇಲ್ಲವೇ ಇತ್ಯಾದಿಗಳನ್ನು ನಿರ್ಧರಿಸಲು ಈತನ ಲೆಕ್ಕಾಚಾರ ಬಹಳ ಮುಖ್ಯವಾದುದು. ಆದರೆ ಹಾಕಿದ ಎಲೆಗೆ ಉಪ್ಪು ಬಳಸಿ ಲೆಕ್ಕ ಹೇಳಲೂ ಬಾರದವನ ಬೆಪ್ಪುತನ, ತಿರಸ್ಕಾರ ಇಲ್ಲಿನ ಮಾತಿನಲ್ಲಿದೆ. **'ಇಂವ ಇಮ್ಮಂಡಿ ಹಾವು'** ವ್ಯಕ್ತಿಯೊಬ್ಬನ ಇಬ್ಬಂದಿತನವನ್ನು ಸಶಕ್ತವಾಗಿ ಹೇಳುವ ನುಡಿಗಟ್ಟು ಇದು. ಎರಡು ಮಂಡೆ (ತಲೆ) ಇರುವ ಹಾವನ್ನು, ಹಾವಿನ ಗುಣವನ್ನು ವ್ಯಕ್ತಿಗೆ ಇಲ್ಲಿ ಆರೋಪಿಸಿದೆ. **'ಊಟಕ್ಹೋಪ ಸಮೇಗೆ ಬಾಯ್ ಮರ್ತ್ ಹೋದ್ರ್'** ಧ್ವನಿಪೂರ್ಣವಾದ ಚಾಟೂಕ್ತಿ ಇದು. ಒಂದು ಸಮಾರಂಭದ ಸಂಯೋಜನೆಗೆ ಬೇಕಾದ ಪ್ರಮುಖ ವಸ್ತುವನ್ನೇ ಮರೆತು ನಗೆಪಾಟಲಿಗೆ ಗುರಿಯಾದ ವ್ಯಕ್ತಿಯೊಬ್ಬನ ಕುರಿತು ಆಡಿದ ಮಾತು ಇದು. ಊಟಕ್ಕೆ ಅವಶ್ಯವಾದುದು ಬಾಯಿಯಷ್ಟೇ! ಅದರಲ್ಲೂ ವಿಶೇಷ ಊಟಕ್ಕೆ ಹೋಗುವಾಗ ಅದನ್ನೆ ಮರೆತು ಹೋದರೆ ಏನಾಗಬೇಕು? ಹಾಗೇನೇ ಸಮಾರಂಭವೊಂದಕ್ಕೆ ಅವಶ್ಯ ಬೇಕಾದ ಸಾಮಗ್ರಿಯನ್ನೇ ಮರೆತರೆ ಸಮಾರಂಭವು ಜರಗದು, ಎನ್ನುವುದನ್ನು ಈ ನುಡಿಗಟ್ಟು ಧ್ವನಿಸುತ್ತದೆ. **'ಒನ್ಕಿಗೆ ಮುಂಡಾಸ್ ಸುತ್ತಿದಾಂಗೆ'** - ಇದು ವ್ಯರ್ಥಪ್ರಯತ್ನವನ್ನು ಸೂಚಿಸುವ ವಾಗ್ರೂಢಿ ಇದು. ತನಗೆ ಸಾಮರ್ಥ್ಯವಿಲ್ಲದ ಕೆಲಸಕ್ಕೆ ತೊಡಗಿದವನ ಪಾಡನ್ನು ಈ ಮಾತು ಹೇಳುತ್ತದೆ. ಒನಕೆಗೆ ಮುಂಡಾಸು ಸುತ್ತುವುದು ವ್ಯರ್ಥದ ಕೆಲಸ, ಜೊತೆಗೆ ನಗೆಪಾಟಲಿನ ವಿಷಯ. ಸುತ್ತಿದರೂ ಅದು ಬಿಗಿಯಾಗಿ ನಿಲ್ಲದು. ಹಾಗೇನೇ ಆಗದ ಕೆಲಸಕ್ಕೆ ಕೈಹಾಕಿ ಎಲ್ಲರಿಂದ ನಗಿಸಿಕೊಳ್ಳುವವನ ದಯನೀಯ ಸ್ಥಿತಿಯನ್ನು ಈ ಮಾತು ಹೇಳುತ್ತದೆ.

ಒಂದು ಭಾಷೆಯ ಸೊಗಸನ್ನು, ಧ್ವನಿಸಾಮರ್ಥ್ಯವನ್ನು ಹಿಡಿದಿಟ್ಟು ಹೊರಹಾಕುವುದು ಜನಪದ ಸಾಹಿತ್ಯದ ಹೆಗ್ಗಳಿಕೆ. ಕುಂದಾಪುರ ಪರಿಸರದಲ್ಲಿ ಬತ್ತಕುಟ್ಟುವ ಸಂದರ್ಭದಲ್ಲಿ ಹಾಡುವ **'ಬತ್ತ ತೊಳುವ ಹಾಡು'** ಬಯಲು ಸೀಮೆಯಲ್ಲಿ ಕೇಳಿಬರುವ 'ರಾಗಿ ಬೀಸುವ ಹಾಡು'ಗಳಿಗೆ ಸಮಾನಾಂತರವಾದುದು. ಶ್ರಮಗೀತೆಯ ಮಾದರಿಯ ಈ ಹಾಡುಗಳು ಬಡಸ್ತ್ರೀಯರ ನೋವಿನ ಕತೆ, ವ್ಯಂಗ್ಯ ಹಾಸ್ಯಗಳ ಸ್ಫೋಟಕ ವಸ್ತುವನ್ನು ಉಳ್ಳದ್ದು. ಇಲ್ಲಿನ ಹಾಡುಗಳಲ್ಲಿ ಕರಾವಳಿಯ ಮಾತೃರೂಪಿ ಸಂಸ್ಕೃತಿಯ ಚಹರೆಯನ್ನು ಗುರುತಿಸಬಹುದು.

ಸೀರಿಯ ಹರಿದರೆ ಸೇರಿಸಿ ಉಡಲಕ್ಕು
ಮಡದಿ ತಪ್ಪಿದ್ರೆ ತರಲಕ್ಕು ಅಣ್ಣಯ್ಯ
ಒಡಹುಟ್ಟನೆಲ್ಲಿ ತರುವುದು

ಕರಾವಳಿ ಭಾಗದಲ್ಲಿ ಗಂಡನಿಗೆ ಹೆಂಡತಿ ಮದುವೆಯ ಬಳಿಕವೂ ಅನ್ಯಳು. ತನ್ನ ಕುಟುಂಬಕ್ಕೆ ಅವಳು ಸೇರುವುದಿಲ್ಲ. ಆದರೆ ಒಡಹುಟ್ಟಿದ ತಂಗಿ, ಅಕ್ಕ ಅವನ ಕುಟುಂಬದ ಭಾಗ. ಇಲ್ಲಿ ವೈವಾಹಿಕ ಸಂಬಂಧಕ್ಕಿಂತ ರಕ್ತಸಂಬಂಧ ಹೆಚ್ಚಿನದು.

ತಂಗಿಯಾದವಳು ಮದುವೆಯ ಬಳಿಕವೂ ತನ್ನ ಕುಟುಂಬದ ಭಾಗವಾದ ಅಣ್ಣನ ಶ್ರೇಯಸ್ಸನ್ನು ಹಾರೈಸುವ ಬಗೆ.

ಇಡಿಯಕ್ಕಿ ಕಡಿದರೆ ಕಡಿಯಕ್ಕಿ ಉಣ್ಣುವ
ಇಡಿಯಕ್ಕಿ ಮಾರಿ ಹಣಕಟ್ಟಿ ಅಣ್ಣಯ್ಯ
ಕಡ್ಮಾಡುಪ್ಪರ್ಗಿ ಮನಿಕಟ್ಟು.

ತನ್ನ ಅಣ್ಣನ ಬಡತನದ ದಾರುಣತೆಯನ್ನು ಈ ಹಾಡು ಹೇಳುತ್ತದೆ. ಇಡಿಯಕ್ಕಿ ಕಡಿದು ಹೋದಾಗ ಕಡಿಯಕ್ಕಿಯನ್ನು ಬಿಡದೆ ಉಣ್ಣುವ ಬಡವ ನನ್ನ ಅಣ್ಣ. ಇರುವ ಇಡಿಯಕ್ಕಿಯನ್ನು ಮಾರಿಯಾದರೂ ಕಡ್ಮಾಡಿನ ಉಪ್ಪರಿಗೆ ಮನೆಯನ್ನು ಕಟ್ಟುವಂತಾಗಲಿ ಎನ್ನುವುದು ತಂಗಿಯ ಹಾರೈಕೆ.

ಬಡತನದ ಉತ್ಕಟ ಸ್ಥಿತಿಯಲ್ಲಿ ಬಡವಿಯೊಬ್ಬಳ ಅಶ್ರುತಗಾನ ಬತ್ತಕುಟ್ಟುವ ಸಂದರ್ಭದಲ್ಲಿ ಹೀಗೆ ಹಾಡಾಗಿ ಹರಿದಿದೆ.

ಬಡವರು ಸತ್ತರೆ ಸುಡಲಿಕ್ಕೆ ಸೌದಿಲ್ಲೆ
ಒಡಲ ಕಿಚ್ಚಿನಲಿ ಹೆಣಬೆಂತೋ ದೇವರೆ
ಬಡವಂಗೆ ಸಾವ ಕೊಡಬ್ಯಾಡ...

ಈ ಹಾಡಿನಲ್ಲಿ ಒಂದೇ ಒಂದು ಸಂಸ್ಕೃತ ಪದವಿಲ್ಲ. ಗ್ರಾಮೀಣ ಬಡಹೆಂಗಸಿನ ಬಾಯಲ್ಲಿ ಸಂಸ್ಕೃತವಾದರೂ ಹೇಗೆ ಬರಬೇಕು? ಕುಂದಾಪುರ ಪರಿಸರದ 'ಬತ್ತಕುಟ್ಟುವ ಹಾಡು'ಗಳಲ್ಲಿ ಕಾಣಿಸುವ ರೂಪಕಗಳಲ್ಲಿ ವ್ಯಂಜಿಸುವ ಧ್ವನಿರಮ್ಯತೆ ಆಡುಮಾತಿನ 'ಶಕ್ತಿ'ಯನ್ನು ಹೇಳುತ್ತದೆ.

ಗಂಡನ ಲೈಂಗಿಕ ಸ್ವಚ್ಛಂದತೆಯನ್ನು ಹೆಂಡತಿಯಾದವಳು ಪ್ರತಿಭಟಿಸುವ ಮಾದರಿ ;

ಹಣ್ಣಡಕೆ ಇದ್ದಾಂಗೆ ಕಾಯಡಕಿ ಒಡಿದಾನೆ
ಹೆಂಡರಿದ್ದಾಂಗೆ ನೆರಿಮನಿಗ್ಹೋಪನಿಗೆ
ಎಡದಾರೀಲಿ ಸೆಡ್ಲ್ ಎರಗಾಲಿ

(ಮದ್ದುಂಟೆ ಜನನ ಮರಣಕ್ಕೆ; – ಸಂಗ್ರಹದಿಂದ)

ಹಣ್ಣಡಿಕೆ ಇದ್ದಾಗಲೇ (ಕೈ ಹಿಡಿದ ಹೆಂಡತಿ) ಕಾಯಡಕಿ (ಉಪಪತ್ನಿ)ಯನ್ನು ಒಡೆಯಲು ಹೋದ ಗಂಡನಿಗೆ ಸಿಡಿಲು ಬಡಿಯಲಿ ಎಂದು ಶಾಪಹಾಕುತ್ತಾಳೆ ನೊಂದ ಹೆಂಡತಿ.

ಕರಾವಳಿಯ ಮಾತೃಮೂಲೀಯ ಸಂಸ್ಕೃತಿಯಲ್ಲಿ ಕುಟುಂಬದೊಳಗೆ ಹೆಣ್ಣು ಅಧೀನೆಯಲ್ಲ, ಯಜಮಾನಿ. ಅಲ್ಲಿ ಗಂಡ ಬಿಟ್ಟ ಅಥವಾ ಗಂಡಸತ್ತ ಹೆಣ್ಣು ಅಪವಿತ್ರಳಲ್ಲ. ಹೀಗಾಗಿ ಶೀಲ, ಪಾತಿವ್ರತ್ಯದಂತೆ ಸಾಂಪ್ರದಾಯಿಕ ವೈಧವ್ಯದ ಪರಿಕಲ್ಪನೆಯನ್ನು ನಿರಾಕರಿಸಿದ ಜೀವನಪ್ರೀತಿ ಇವರದು. ಶಿಷ್ಟ ಸಂಸ್ಕೃತಿಯಲ್ಲಿ ಅಪಶಕುನದ ಸಂಕೇತವಾಗಿ ಮುಂಡ ಮೋಚಿಕೊಂಡು ಮೂಲೆ ಸೇರಬೇಕಾದ ವಿಧವೆಗೆ ಮರುಮದುವೆಯನ್ನು ಬಯಸುವ ಇಲ್ಲಿನ ದೃಷ್ಟಿ ಜೀವನಪರವಾದುದು, ಮಾನವೀಯವಾದುದು.

ಹಗ್ಗಿಗೆ ಹೊಯ್ಯುಮಳೆ ಸುಗ್ಗಿಗೆ ಹೊಯ್ಯಲಿ
ದುಂಡುಮಲ್ಲಿಗಿ ಚಿಗುರಲಿ – ಈ ಊರ
ಗಂಡ ಸತ್ತವರ ಮದುವೆಗೆ

(ಮದ್ದುಂಟೆ ಜನನ ಮರಣಕ್ಕೆ.)

ಆಡುಮಾತಿನ ಸತ್ವದ ಪೂರ್ಣಾಭಿವ್ಯಕ್ತಿ ದೊರೆಯುವುದು ಅಜ್ಜಿಕತೆಗಳಲ್ಲಿ. ಪ್ರೇಕ್ಷಕರೆದುರು ಕುಳಿತು ಆಯಾ ಸಂದರ್ಭಕ್ಕೆ ತಕ್ಕಂತೆ ಕತೆ ಕಟ್ಟಿ ಹೇಳುವ ಆಶುರೂಪದ ಕಥಾನಿರ್ವಹಣೆಯನ್ನು ಗಮನಿಸಬೇಕು. ಬಹುಶಃ ಭಾಷಿಕ ಆಧುನೀಕರಣದ ಈ ಸಂದರ್ಭದಲ್ಲಿ ನಾವು ಕಳೆದುಕೊಳ್ಳುತ್ತಿರುವ ಭಾಷಿಕ ಸೊಗಡನ್ನು ಹಿಡಿದಿಡಲು ಜನಪದಕತೆಗಳು ಮತ್ತೆ ಜೀವಂತವಾಗಿರುವಂತೆ ಮಾಡುವುದು ಎನ್ನುವುದು ನನ್ನ ಅಭಿಪ್ರಾಯ. ಕುಂದಾಪುರಕ್ಕೆ ಸಮೀಪದ ಉಳ್ಳೂರು ಎನ್ನುವ ಗ್ರಾಮೀಣ ಪರಿಸರದಲ್ಲಿ ಬಾಳಿದ ನಿರಕ್ಷರಿ ಮೂಕಜ್ಜಿ ಭಾಷಿಕ ಸೃಜನಶೀಲತೆಗೆ ಜೀವಂತ ರೂಪಕ. ಅವರು ನಮ್ಮ ಕುಟುಂಬದ ಸದಸ್ಯರೆದುರು ನಿರೂಪಿಸಿದ ಕಥೆಯ ಮಾದರಿ.

### ನಾಕ್ ಮಂದಿ ಕೆಪ್ಪ್ರ ಕತಿ

ಒಂದೂರಗೆ ಸುಬ್ಬಿ ಅಂದ್ಹೇಳಿ ಒಬ್ಳ್ ಹೆಂಗ್ಸ್ ಇದ್ಲ್. ಅವ್ಳ್ ಕೆಪ್ಪಿ. ಅವ್ಳ್ ಮಗ್ಳ್ ನಾಗಿ ಅಂದ್ಹೇಳಿ ಕೆಪ್ಪಿ. ಒಬ್ ಮಗ ಇದ್ದ ಅವ್ನೂ ಕೆಪ್ಪ, ಕೆಮಿ ಕೇತಿಲ್ಲೆ. ಅವ್ರಿಗ್ ಒಂದ್ ಎರ್ಡ್ ಮುಡಿ ಬ್ಯಾಸಾಯ್ ಇತ್ತ್. ಅವ್ನ್ ಕೈಲ್ ಹಂಡ, ಹುಂಡ ಅಂದ್ಹೇಳಿ ಎರ್ಡ್ ಎತ್ತ ಇದ್ದೊ. ಅವನ್ನ್ ತಕಂಡ್ ಹೋಯ್ ಹೂಡ್ಕ್ ಬಪ್ಪ, ಹೀಂಗೆಲ್ಲ, ಮಾಡ್ಕಂಡ್ ಬ್ಯಾಸಾಯ್ ಮಾಡ್ಕಂಡ್ ಇದ್ದಿದ್ದ. ಆದ್ರೆ ಅವ್ನಿಗೆ ಮದಿ ಆಯ್ಲಿಲ್ಲೆ. ಕೆಪ್ಪ್ ಅಂದ್ರೆ ಏನೂ ಕೇತಿಲ್ಲೆ. ಅಂತವ್ನಿಗೆ ಯಾರ್ ಹೆಣ್ಣಿನ್ ಕೊಡ್ತ್ರ್? ಆದ್ರೆ ಮದಿ ಆಗ್ದಿದ್ರೆ ಬರ್ಮ್‌ಕುಂತಿ ಆತ್ತ್ ಅಂದ್ಹೇಳಿ ಒಂದ್ ಇತ್ತ್. ಹೀಂಗಾಯಿ ಮದಿ ಆಯ್ಲೇ ಬೇಕ್.

ಹಾಂಗೆ ಯಾವ್ದೋ ಒಂದ್ ಊರಂಗೆ' ಒಳ್ಳ್ ಹುಟ್‌ಹುಟ್‌ತ್ನೆ ಕೆಪ್ಪಿ ಇದ್ಲ್. ಈ ಕೆಪ್ರ್‌ಕೆಪ್ರಿಗೆ ಗಂಟ್ ಮಾಡ್ಕಂಡ್ ಈ ಕೆಪ್ಪಿನಿಗೂ ಆ ಕೆಪ್ಪಿಗೂ ತದ್ಕಂಡ್ ಮದಿ ಮಾಡ್ಯೊ. ಒಟ್ ಮನೆಗ್ ಇದ್ದವ್ರ್ ಅಬ್ಬಿ, ಅಣ್ಣ, ತಂಗಿ ಮೂರ್ ಮಂದಿ, ಮದಿ ಮಾಡ್ಕ ಬಂದಿದ್ವಲೆ ಅವ್ಳ್ ಒಬ್ಳ್. ಹೀಂಗ್ ನಾಕ್ ಮಂದಿ ಕೆಪ್ರ್ ಒಟ್ಟಾದ್ರ್, ಅವೆಲ್ಲ ಕೆಲ್ಸ ಮಾಡ್ತೋ, ಅವ್ರವ್ರ್ ಆಲೋಚ್ನಿ ಬಂದ್ಹಂಗೆ ಏನೇನಾರು

ಮಾತಾಡ್ಕಂಬ್ದ್. ಕಣ್ಣಿಗ್ ಕಾಣತ್ತಲೆ ಆ ಕಸ್ಬ ಮಾಡ್ಕಂಬ್ದ್. ಮಗ್ಳ ಸೌದಿ ತಪ್ದ್, ಇವ ಹೂಡೂಕ್ ಹೋಪ್ದ್, ಗೆದ್ದಿ ಸಲ್ಪ ದೂರ್ ಇತ್ತ್. ಈ ಹೂಡೂಕ್ ಹೋದವ್ನಿಗೆ ಮದ್ಯಾನ್ನಕೆ ಏನಾರೋ ಎರ್ದ್ ಅನ್ನೊ ಗಂಜಿಯೋ ಅದ್ನೊಂದ್ ಚಟ್ನಿ ಮಾಡ್ಕಂಡ್ ಹೆಂಡ್ತಿ ತಕಂಡ್ ಹೋಯ್ ಕೊಡೋದ್. ಹಿಂಗಿದ್ ಕಟ್ಲ ಮ್ಯಾಲ್ ಇದ್ದಿತ್.

ಒಂದಿನ ಇಂವ ಹೂಡ್ತಾ ಆಯ್ಕಂಡಿದ್ದ. ಯಾವ್ದೊ ಊರಿನವ ದಾರಿಮ್ಯಾಲ್ ಹೋತ. ಅವ್ನಿಗೆ ರಸ್ತೆ ಬುಡ್ಕ ಹೋಯ್ಕ್ ಆಯಿತ್ತ್. ಪರಸ್ತಳದವ ಅಂವ. ಇವ್ನ ಕೈಲ್ "ಹೋಯ್.. ಆ ರಸ್ತೆಗ್ ಹೋಯ್ಕಾರ್ ಯಾವ್ ದಾರೆಗ್ ಹೋಯ್ಕೊ' ಅಂದ. "ಅದ್ನ ಕೋಡುದ್ ನಿಕ್ಕಿ. ಹಂಡ್ಗ ಆರೂರ ಹುಂಡ್ಗ ಮೂರೊರ (ವರ) ಕೊಡುದ್ ನಿಕ್ಕಿ" ಅಂದ. ಅಂವ ಎಣ್ಕಂಡ 'ನಾ ಒಂದ್ ಹೇಳಿರೆ ಇಂವ ಒಂದ್ ಹೇಳ್ತ, ಏನೋ ಕೇಣ್‌ಲಿಲ್ಲ್ಯೋ ಏನೋ ಅಂದ್ಕಂಡ್ 'ರಸ್ತಿಗ್ ಯಾವ ದಾರಿ ಮ್ಯಾಲ್ ಹೋದ್ರ ರಸ್ತಿಗ್ ಹೋತ್ತಾ?" ಹಂಡ್ಗ ಆರೊರ, ಹುಂಡ್ಗ ಮೂರೊರ ನಂದ್ ವುಂದೇ ಮಾತ್. ಕಡಕಟ್ಟಿಗೆ ಕೊಡವವನಲ್ಲ. ಒಂದ್ ಚಿಕ್ಕಾಸ್ ಕಮ್ಮಿ ಆರೆ ನಾ ಕೊಡವ್ನ್ನ ಅಲ್ಲ. ಚರ್ತಿಗಿರ್ತಿ ನನ್ನ ಕೊಡ್ ಮಾಡುಕೆಡಿಯಾ. ಹಂಡ್ಗ ಆರೂರ ಹುಂಡ್ಗ ಮೂರೋರ. ಕೊಡುದ್ ನಿಕ್ಕಿ' ಅಂದ. ಅಲ್ಲ್ ಅತ್ತ್ ಇತ್ತ್ ಮನ್‌ಸ್ರ ಕಾಣಲಿಲ್ಲೆ. ಸ್ವಲ್ಪ ಸ್ವರ ಏರ್ಸಿ "ಹೌದಾ, ರಸ್ತಿಗ್ ಹೋಪ್ ದಾರಿ ಯಾವ್ದೋ? ಯಾವ್ ದಾರಿ ಮ್ಯಾಲ್ ಹೋತ್ತೋ?" ಅಂದ.

"ಮತ್ತೂ ಆ ಪಿರಿಪಿರಿಪಿರಿ ನಾನ್ ಮಾತಾಡ್‌ವವ್ನ ಅಲ್ಲ. ನನ್ನ ಎತ್ತಿಗ್ ಏನ್ ವನೆ ಅದೆ? ಅವ್ ಏನ್ ಮಣ್ಣ್ ಹಾಕ್ರೂ ತಿಂತೋ. ತಿಂಬ್ಕ್ ಏನಾರು ಕಮ್ಮಿಯ? ಹೂಡೂಕ್ ಏನಾರು ಮನಿಕಂತತ್ತಾ? ಕಳ್ಳನಾ ಅಲ್ಲ. ಅವ್ ಲಕ್ಷಣ್ ಆರು ಹಾಳಾದೆಯ? ಚಣ್ಣ್ ರುಣಿ, ಏನ್ ಕೋಡ್ ಸಪುರ್ ಕೋಡ್, ಚಣ್ ಮುಕೊ, ಯಾವ್ದ್ರೆಗ್ ವನಿ ಬೆಚ್ಚುಕಿತ್ತ್? ಏನ್ಹಾಕ್ರೂ ತಿಂತೊ. ತಿಂಬ್ದ್ರೆಗ್ ಏನಾರು ವನಿ ಆದಿಯಾ? ಏನಿಲ್ಲೆ. ಮನೆಗ್ ಹುಟ್ಟಿದವ್. ಕಾಲಾರು ಏನ್ ಹಾಸ್‌ಗಾಲ ಆದ್ರದ್? ಕುದ್ರಿ ಕಾಲ್ ಕೊಳ್ಬ ಆದ್ರದ್. ಚಣ್ಣ ರುಣ, ಪಟ್ಟಿ ಹಾಕಿದ್ಹಾಗ್ ಇತ್ತ್. ಮನೆಗ್ ಹುಟ್ಟಿದವ್, ಕಗ್ಗ. ಆ ವುಂದ್ ಚಿಕ್ಕಾಸ್ ಕಮ್ಮಿ ಆರ್ ನಾ ಕೊಡ್‌ವವ್ನ ಅಲ್ಲ. ಬೇಕಾರ್ ತೆಕಣಿ ಬಿಡಿನಿ. ನೆಡ್‌ನೆಡಿನಿ, ನನ್ನ ಕೂಡ್ ಪರ್ಸಂಗೊ ಹೆಚ್ಚ ಮಾಡ್ಬೇಡಿ. ದೊಡ್ಡ್ ಪರ್ಸಂಗ ಬಿಚ್ಕಂಡೀರ್... ಹೋಯ್ನಿ ಹೋಯ್ನಿ ನಾ ಕೊಡೋದಿಲ್ಲೆ. ಅವ್ನಿಗೆ ತನ್ನಷ್ಟಕ್ಕೆ ನಿಗಿ ಬಂತ್. ಕೆಪ್ಪ ಇಂವ. ಜರ್‍ಸಲಿ ಅಂದ ಯಾರ್ ಕೈಲ್ ಮತ್ತ್ ಕೆಂಡ್ರ ಸೈ ಅಂದ ನೆಡ್ದ. ಇಷ್ಟಕ್ಕೆ ಮದ್ಯಾನ್ ಆಯ್ತ್. ಹೆಂಡ್ತಿ ಅಂಬೋಳ್ ಗಂಜಿ ಚಟ್ನಿ ತಕಂಡ್ ಬಂದ್ಲ್.

"ಕ್ಯಾಂಡಿಯ ಹೆಣೆ, ಒಬ್ಬ ಎತ್ತಿನ ಮೂರೊರ ಅಂದ್ಯೆ. ನಾನ್ ಕಟ್ಟಿದ್ ಬಾಯ್ ಬಿಡುದಿಲ್ಲೆ, ಚಿಕ್ಕಾಸ್ ಕಮ್ಮಿಯಾರೆ ನಾನ್ ಕೊಡ್‌ವವ್ನ ಅಲ್ಲ" ಅಂದೆ. ಬಾಳ ಚರ್ತಿ ಮಾಡ್ದ. ಕಡಿಗ್ ಎದ್ಕಂಡ್ ಹೋದ. ನಾ ಮಾಡದ್ದ್ ಸಮ ಅಯಿಲ್ಲ್ಯಾ? ಮನೆಗ್ ಹುಟ್ಟಿದವ್, ಮನೆಗ್ ಸತ್ರೂ ನಮ್ಗೇನ್ ನಷ್ಟ ಆದಿಯಾ? ಇನ್ನೂ ನಾಕ್ ಕಾಲ ಹೂಡ್‌ವ್ಹಾಗ್ ಇದ್ದೊ. ಯಾವ್ದ್ರೆಗ್ ವನೆ ಆದ? ಎಲ್ಲ ಹೇಳ್‌ಯೆ, ವನಿ ಇಲ್ಲೆ ಆದ್ರೆಗ್, ಮನೆಗ್ ಹುಟ್ಟದವ್ ಹೂಡತ್ತ್ ಅಂದೆ. ತಕಣ್ಣಿ ಬೇಕಾರೆ ಅಂದೆ. ಚರ್ತಿನೆ ಮಾಡ್ತ್ ಆಯ್ಕಂಡ್, ಮನೆಗ್ ಬೆಚ್ಕಂಡದ್ದ್ ಸಮ ಆಯಿಲ್ಲ್ಯಾ? ಇರ್ತೋ ಅಲ್ದಾ ಕಾಣ್, ನಾ ಮಾಡದ್ದ್ ಸಮ ಆಯಿಲ್ಲ್ಯಾ?" ಇಂವ ಬಾಯ್ ಹಂದತ್ತ್ ಎಲ್ಲ ಅವ್ಳಿಗ್ ಕಾಣತ್ತ್. "ಎಂತದ್ ಕೂಳೆಗ್ ಕಲ್ಲ್ ಬಂತ್ ಅಂತ್ರ್ಯಾ? ನಿಮ್ಮ್ ಅಬ್ಬಿ ಮಾಡದ್ದ್ ನನ್ನ್ ಬೈಯುಕೆ, ನಿಮ್ಮ ಅಬ್ಬಿ ಮಾಡದ್ದ್ ನಾ ಮಾಡದ್ದ್ ಅಲ್ಲ ಅದ್. ನಾ ದಿನಾಲು ಅಷ್ಟಪ ದೂರಿಂದ್ ಬಿಸ್ಲ್ ಅಂದ್ ಇಲ್ಲೆ, ಮಳಿ ಅಂದ್ ಇಲ್ಲೆ ತಕ ಬಪ್ದ್. ಕೂಳೆಗ್ ಕಲ್ಲ್ ಬಂತ್ ಅಂದ್ ನನ್ನ ಬೈಯುಕೆ. ನಾ ನಾಳಿಗ್ ತಕಬಪ್ಪೋಳ್ ಅಲ್ಲ. ನಿಮ್ಮ್ ಅಬ್ಬಿ ಮಾಡದ್ದ್, ನಾನ್ ನಿಮ್ಮ್ ಅಬ್ಬಿ ಕೂಡ್ ಹೇಳ್‌ತ್ನಲೆ. ನಾಳಿಗ್ ಕಂಡಿತುಕ್ಕೂ ನಾ ತಪ್ಪೋಳಲ್ಲ. ನನ್ದ್ ವುಂದೆ ನಿಕ್ಕಿ, ನನ್ಗ್ ಬೈಯುಕೆ ವುಂದಲ್ಲ ಯ್ಯೆಯ್ದಲ್ಲ ಸಾಕಪ್ಪ ಇನ್ ಕೂಳ್ ತಕಬಪ್ಕ್ ಎಡಿಯ ನನ್ಗ್" ಅಂದ ಗೊಣಗೊಣಗೊಣ ಅಂದ್ಕಂತ ಬಾಯೆಗ್ ಏನೇನೋ ಹೇಳ್ಕಂತ 'ನಾ ಮಾಯ್ ಕೂಡ್ ಹೇಳ್‌ತ್ನಲೆ, ನಾ ತಪ್ಪೋಳಲ್ಲ' ಅಂದ್ಕಂತ ಹೋದ್ಲ್. ಹೋತ್ ಹೋತ್ನೆ ಇವ್ಳಿಗ್ ಮಾಯ್ ಕೂಡ್ ಎಷ್ಟೊತ್ತಿಗ್ ಹೇಳುದಮಂಗ್ ಇಲ್ಲೆ. 'ಕೇಂಡ್ರ್ಯೋ ಮಾಯೆ, ನಿಮ್ಮ ಮಗ ಹೇಳತ್ತ್, ಕೂಳೆಗ್ ಕಲ್ಲ್ ಬಂತ್ ಅಂತ್ರ ನೀವ್ ಮಾಡದ್ದ್, ಬೈಸ್ ಕಂಬ್ಕ್ ಬಾನೊಬ್ಳ್, ನನ್ನ ಕೂಡ್ ಎಡಿಯ. ನಾ ನಾಳಿಗ್ ತಕಹೋಪೋಳ್ ಅಲ್ಲ. ನೀವೇನ್ ಹೇಳ್ರೂ ನಾ ತಕಹೋಪೋಳಲ್ಲ, ನಂಗ್ ಬ್ಯಾರೆ ಕೆಲ್ಸ ಮಾಡುಕ್ ಬತ್ತಿಲ್ಯಾ? ನಂಗ್ ಗುತಿತ್ತ್, ಯಾವ ಕೆಲ್ಸ್ ಬಂತ್ ಅಂದ್ ಬೈಯ್‌ದ್ದ್ ವುಂದಾ ಯೂಯ್ದಾ ನಂಗ್ ಕೇಂಬ್ಕೆ ಎಡಿಯ, ನಾ ತಕ ಹೋಪೋಳ್ ಅಲ್ಲ" ಅಂದ್ಲ್.

ಇವ್ಳ ಬಾಯ್ ಹಂದತ್ತ್ ಅವ್ಳಿಗ್ ಕಾಣತ್ತ್, ಯಾರಿಗೆ ಮಾಯ್‌ಗೆ. 'ನಂತೆ ರಂಡೆ ಅತ್ತಿಗಿ ಹಾದ್ರಗಿತ್ತಿ ಅಂತ್ಯಾ? ತಿಂದ್ ಸೊಕ್ಕ್ ಅಲ್ದಾ ನಿಂಗೆ ಬಗೇರ್ ಮನೆಗೆ ಗಂಜಿ ತಳಿ ನೆಕ್ಕುಕ್ ತಿಕಾಣಿ ಇಲ್ದೆ ಇಲ್ ಬಂದ್ ಹೊಕ್ಕಂಡಿದ್ದೆ. ಮಿಂಡ್ನ ಕಂಡ್ ಹಿಡ್ದಿದ್ಯಾ ನೀನ್ ಇಲ್ಲ್? ನಾನ್ ಹಿಂಗೆ ಸುಮ್ನ ಆಯ್ಕಂತ್ನಾ? ಅತ್ತಿಗಿ ಬರ್ಲಿ ನಾನ್ ಹೇಳ್‌ತ್ನಲೆ' ಆಂದ್ ಅವ್ಳ ಬೈದ್ಲ್. ಇವ್ಳ ಇನ್ನ ಆಯ್ಕಂಡ್ಲ್. ಇವ್ರಿವ್ರವ್ಳಿಗ್ಗೆ ಜಗ್ಳ ಆತ್, ಮಾಯಿ ಸೊಸಿ ಒಳ್ಗೆ.

ಅಷ್ಟಕೆ ಅವ್ಳ ಅತ್ತಿಗೆ ಸೌದಿಗ್ ಹೋದವ್ಳ ಬಂದ್ಲ್. "ಕ್ಯಾಂಡ್ಯಾ ಹೆಣೆ, ಇವ್ಳ ಸೊಕ್ಕೆಗ್ ಹೇಳತ್ತ, ತಿಂದ್ ಹೆಚ್ಚಾದ್ದ್ ಅವ್ಳಿಗೆ. ಅತ್ತಿಗೆ ಹಾದ್ರ ಗಿತ್ತಿ ಅಂತಾಳ್. ಏನ್ ಹೇಳ್‌ವವ್ಳ

**ಏನ್ ಬಿಡ್‌ವವ್ಕ್? ಮನೆಗ್ ಬೆಚ್ಚ್ ಕಂಡ್ರೆ ನಮ್ಗ್ ಮರ್ವಾದಿ ಉಳುವಾ. ದಗ್ಲಬಾಜ್ ರಂಡೆ ಅವ್ಳ್.' 'ಏನಂತೆ? ಶೈಲಿ ತಂದದ್ದ್ ಕಮ್ಮಿ ಆಯ್ತ್ ಅಂತ್ಯಾ? ಒಳ್ಳೊಳ್ಳೆದ್ ತಕಬಂದ್ರೆ ಅಲ್ಲ್ ಕಾವೋರ್ ಬಿಡ್ತ್ರಾ? ನಿನ್ಗ್. ಮಿಂಡ್‌ದಿಕ ಅವ್ರೆಲ್, ಅಂದ್ ಯದ್ವಾತದ್ವಾ ಬೈಸ್ಕಂತ ಹೊಡ್ಸಕಂಬಷ್ಟ್ ಆಯ್ತ್. ಕಡಿಗ್ ಆಚೀಚ್ ಅವ್ರೆಲ್ಲ ಬಂದ್ಕಂಡ್ ಕೈಸನ್ನಿ ಬಾಯಸನ್ನಿ ಮ್ಯಾಲ್ ಅವ್ರ್ ಜಗ್ಳ ತೀರ್ಸಿ ಹೋದ್ರಂತ್ ಆಯ್ತ್.**

ಈ ಒಳಮಾತಿನಲ್ಲಿ ನಮ್ಮ ಶಾಲೆ ಕಾಲೇಜುಗಳ, ಕೋರ್ಟು ಕಛೇರಿಗಳಲ್ಲಿ ಬಳಕೆಗೊಳ್ಳುವ ಪ್ರಮಾಣ ಕನ್ನಡಕ್ಕೆ ಭಿನ್ನವಾದ ಅನೇಕ ಅಪೂರ್ವ ಪದಕೋಶ ಕಾಣಿಸುತ್ತದೆ. ಆ ಪದಗಳ ಬೇರುಗಳು ಹಳಗನ್ನಡ, ನಡುಗನ್ನಡಗಳಲ್ಲಿ ಸಿಗಬಹುದು. ಇಲ್ಲವೇ ತುಳುವೇ ಮುಂತಾದ ದ್ರಾವಿಡ ಭಾಷೆಗಳಲ್ಲಿರಬಹುದು.

ಉದಾ :-

| ಕುಂದಾಪುರ ಕನ್ನಡ | ಹಳಗನ್ನಡ ನಡುಗನ್ನಡ | ಅರ್ಥ |
|---|---|---|
| ಅಲುಬು/ಅಲುಬು | ಅಲುಂಬು | ಬಟ್ಟೆ ಜಾಲಾಡಿಸು |
| ಎರು/ಎರ್ಪು | ಇರುಂಪೆ | ಇರುವೆ |
| ಹುಳ್ಳಿ / (ಕೋಡಿ) | ಪುಳ್ಳಿ | ಕಟ್ಟಿಗೆ |
| ಕರ್ಚು | ಕರ್ಚು | ತೊಳೆ |
| ಮೀವರಿ | ಮೀವರಿ | ಬಚ್ಚಲುಮನೆ |

ಕುಂದಾಪುರ ಕನ್ನಡದೊಳಗೆ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರ ಎಂಬ ಇಬ್ಬಗೆಯ ಭೇದ ಕಾಣಿಸುತ್ತದೆ. ಬ್ರಾಹ್ಮಣರಿಗೆ ಶಿಷ್ಟ ಕನ್ನಡದ ಅಥವಾ ಪ್ರಮಾಣ ಕನ್ನಡದ ಸೆಳೆತ ಇದ್ದರೆ ಶೂದ್ರಾಪಿ ಜನರ ಮಾತು ಹೆಚ್ಚು ದೇಸೀಯವಾಗಿರುತ್ತದೆ. ಕನ್ನಡದ ಹಳಮೆಯನ್ನು ಇನ್ನೂ ಉಳಿಸಿಕೊಂಡಿರುವಂತೆ ಕಾಣುತ್ತದೆ. ಪದಗಳ ಸಂಕ್ಷೇಪಿಕರಣ ಅಥವಾ ಅಡಕಗೊಳಿಸುವಿಕೆ ಎಲ್ಲಾ ಆಡುಮಾತುಗಳಂತೆ ಇಲ್ಲಿನ ವೈಲಕ್ಷಣ್ಯ. ಕೆಲವೊಂದು ದೃಷ್ಟಾಂತಗಳು.

ಬಪ್ಪ್ಯಲೆ – ಬನ್ನಿ ಅಲ್ಲ.

ಬತ್ರ್ಯಾ– ಬರುತ್ತೀರಾ

ಬರ್ಕೇ ಬರ್ಕ್ – ಬರಲೇಬೇಕು

ಬಂದ್ರಿಯಾ – ಬಂದಿರಾ?

ಬಪ್ಪುದ್ ಬ್ಯಾಡ್ – ಬರುವುದು ಬೇಡ

ಉಂಬ್ರ್ಯಲೆ – ಊಟ ಮಾಡಿರಿ

ಬರ್ಕ ಬರ್ಕ – ಬರೆದುಕೊಂಡು ಬರಬೇಕಾ?

ಬರ್ಕ ಬರ್ಕಂತ್ – ಬರೆದುಕೊಂಡು ಬರಬೇಕಂತೆ

ನಾ ಮೀತೆ – ನಾ ಮೀಯುತ್ತೇನೆ

ನೀ ಮೀ ಬಾ – ನೀ ಸ್ನಾನ ಮಾಡಲು ಬಾ

**ಈ ಭಾಷಾ ಪ್ರಭೇದದ ಕೆಲವು ವಿಶಿಷ್ಟ ಪದಗಳು:**

ತಿಪ್ರ – ಸೊಕ್ಕು

ಜಿಮಿ – ಉತ್ಸಾಹ

ಪಿಣ್ಕುಟಿ – ತೀರಾ ಚಿಕ್ಕದು

ಹೊಕ್ಡ್ – ಸಮೀಪ

ಹರ್ಮ್ಯಾಯಿಕೊ – ಕಪಟ

ಆದ್ಗತಿ – ವಾಗ್ರೂಢಿ

ಗೆಡ್ಸ್ – ಒರಸು

ವಾರಂತ – ಎಲ್ಲೆಡೆ

ಕೊಗ್ಳ್ – ಮನೆಮಾಡು

ಬಾಯಿರ್ – ಬಾಯಾರಿಕೆ

ಇಂಬ್ಡ್‌ಜಿಡ್ಕ್ – ಬಗೆಹರಿಯದ ಸಮಸ್ಯೆ

ಒಜ್ಜೆ – ಭಾರ

ಚಿಲ್ ಆಗು – ಅಪ್ಪಚ್ಚಿ ಆಗು

ಚೊರ್ಬು – ತೊಳೆಯಲು

ಗ್ವಾಂಕಿ – ಗಂಟಲು

ಹಕ್ಪಿ – ಉಪಾಯ

ಪರ್ತಾಡ್ – ಸಮವಯಸ್ಕ

ಚಂಪಾನ್ ಚೂರು – ಪುಡಿ ಪುಡಿ

ಎದಿ – ಸಾಧ್ಯ

ಉಜ್ರ – ಒಸರು

ಗಿಂಡ್ – ತುರಿಕೆ

ಚುಳ್ಳಿ – ಕೊಕ್ಕು

ಬೈಸ್ರ – ಸಂಜೆಹೊತ್ತು

ಒಚ್ಚು – ಸಿಪ್ಪೆ ತೆಗಿ

ಗೆರ್ಚ್ – ಉಜ್ಜು

ಪಿಂಟ್ – ಜಂಭ

**ಕೃಷಿ ಸಂಬಂಧಿ ಪದಗಳು**

ಅಗೇಡಿ – ಬತ್ತದ ಸಸಿಗಳನ್ನು ನೆಡುವ ಗದ್ದೆ

ಮಕ್ಕಿ – ಫಲವತ್ತಾದ ಬೆಟ್ಟುಗದ್ದೆ ಬಯಲು

ಬಯಿಲ್ – ಸಮತಟ್ಟಾದ ಗದ್ದೆ

ಹಡ್ಲ್ ಗೆದ್ದಿ – ಬಂಜಾರು ಗದ್ದೆ

ಅರಾಲ್ ಗೆದ್ದಿ –ಸಮುದ್ರ ದಡದ ಮರಳು ಮಿಶ್ರಿತ ಗದ್ದೆ

ಬೆಳ್‌ನಂಜ್ – ಬಿಳಿ ಸೇಡಿಮಣ್ಣಿನ ಗದ್ದೆ

ಬಾನ್ನೀರ್ ಮಕ್ಕಿ – ಮಳೆಯನ್ನೇ ಆಶ್ರಯಿಸಿರುವ ಬೆಟ್ಟುಗದ್ದೆ

ಹಡುವಲ್ – ಸುಗ್ಗಿ ಬೆಳೆಗೆ ಸಸಿಮಾಡುವ ಗದ್ದೆ

ಉಜಿರ್ ಗೆದ್ದಿ – ನೀರಿನ ಒಸರು ಹೆಚ್ಚಿರುವ ಗದ್ದೆ

ಕೋಡಿಕಟ್ಟೆ – ನೀರಿನ ಕೋಡಿ ನಿಂತಿರುವ ಗದ್ದೆ

ಕಳಿನ್ ಗದ್ದಿ – ನದಿಕಡುವಿನ ಸಮೀಪದ ಗದ್ದೆ

ಕರ್‌ನಂಜ್ – ಕರಿಮಣ್ಣಿನ ಜವುಡುಗದ್ದೆ

**ನೀರು ಎತ್ತುವ ಸಲಕರಣೆ**

ನಿಯಿಹಣಿ – ಏತ

ವಾಂದೆ – ಸುಮಾರು ಐದುಅಡಿ ಉದ್ದದ ದೋಣಿಯಾಕಾರದ ಮರದ ಮರಿಗೆಯಿಂದ ನೀರನ್ನು ಎತ್ತಿಹಾಯಿಸುವ ಸಾಧನ

ಮೆಣ್ಭಣೆ – ಏತದ ಅಡ್ಡಮರದ ಮೇಲೆ ಜನ ನಡೆದಾಡಿ ನೀರೆತ್ತುವ ಏತ.

ಸಂಬಳ್ಗೆ – ಡಬ್ಬದ ಬಾಯಿಗೆ ಎದುರೆದರು ಎರಡು ಹಗ್ಗ ಬಿಗಿದು ಅದರ ಆಧಾರದಿಂದ ಎದುರಾಗಿ ನಿಂತ ಇಬ್ಬರು ನೀರು ಮೊಗೆವ ಸಾಧನ.

**ಕೊನೆಮಾತು**

ಒಟ್ಟಿನಲ್ಲಿ ನಮ್ಮ ಭಾಷೆಯ 'ನಮ್ಮತನ' ಎನ್ನುವುದು ಅದು ಆಡುಮಾತಿನಲ್ಲಿ. ಶಾಸ್ತ್ರೀಯ ಭಾಷೆ ಕನ್ನಡವನ್ನು ರೂಪಿಸುವ ಸಂಭ್ರಮದಲ್ಲಿ, ಶಾಸ್ತ್ರಭಾಷೆಯನ್ನು ಕಟ್ಟುವ ಭರಾಟೆಯಲ್ಲಿ ಆಡುಮಾತಿಗೆ ಎರವಾಗಬಾರದು. ಆಡುಮಾತನ್ನು ಬಳಕೆಯಲ್ಲಿ ಉಳಿಸಿಕೊಳ್ಳುವ ಪ್ರಯತ್ನ ಬುದ್ಧಿಪೂರ್ವಕವಾಗಿ ನಡೆಯಬೇಕು. ಆಡುಮಾತಿನ 'ರಚನೆ'ಯ ಬಗ್ಗೆ ಸಾಕಷ್ಟು ಅಧ್ಯಯನ ನಡೆದರೂ ಭಾಷೆಯ ಸೊಗಸಿನ ಬಗೆಗಾಗಲಿ, ಆಡುಮಾತು ಕಟ್ಟಿಕೊಡುವ ಮೀಮಾಂಸೆಯ ಬಗೆಗಾಗಲೀ ಅಧ್ಯಯನ ನಡೆದಿಲ್ಲ. ಅದು ಆಗಬೇಕಾದ ಕೆಲಸ.

**ಆಕರ ಸೂಚಿ :**

ಗಾಯತ್ರೀ ನಾವಡ ೧೯೯೯ **'ಕರಾವಳಿ ಜನಪದ ಸಾಹಿತ್ಯದಲ್ಲಿ** ಸಿರಿಪ್ರಕಾಶನ.

**ಸ್ತ್ರೀವಾದಿ ನೆಲೆಗಳು** ಪ್ರ. ಸಿರಿ ಪ್ರಕಾಶನ, ಹೊಸಪೇಟೆ, **ಗಾಯತ್ರಿ ನಾವಡ** ೧೯೮೬

**ಮೂಕಜ್ಜಿ ಬದುಕು ಸಾಹಿತ್ಯ** ಪ್ರ. ಪ್ರಾದೇಶಿಕ ವ್ಯಾಸಂಗ ಕುಂದಾಪುರ

ಪಿ. ಎನ್. ಮಯ್ಯ ೧೯೯೩ **ಚಾಟೂಕ್ತಿಗಳು** ಪ್ರ: ಪಾರಂಪಳ್ಳಿ ಪ್ರಕಾಶನ, ಸಾಲಿಗ್ರಾಮ

ಗುಂಡ್ಮಿ ಚಂದ್ರಶೇಖರ ಐತಾಳ ೧೯೬೭ (ಸಂ) **ಮದ್ದುಂಟೆ ಜನನ ಮರಣಕ್ಕೆ** : ಸಾಲಿಗ್ರಾಮ, ಗಾಯತ್ರಿ ನಾವಡ ೧೯೯೯

**ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿನೆಲೆಗಳು** ಪ್ರ ಸಿರಿಪ್ರಕಾಶನ, ಹೊಸಪೇಟೆ.

❑❑

# ಸ್ಮಶಾನ ಕುರುಕ್ಷೇತ್ರ ನಾಟಕದಲ್ಲಿ ಯುದ್ಧವಿರೋಧಿ ನಿಲುವು; ಜೀವಪರ ಕಾಳಜಿ

–ಕೋ.ವೆಂ. ರಾಮಕೃಷ್ಣೇಗೌಡ

ಕುವೆಂಪು ಮಹಾಕವಿಯಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ವಿಮರ್ಶಕರಾಗಿ, ಸಂಸ್ಕೃತಿ ಚಿಂತಕರಾಗಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯ ಶ್ರೇಷ್ಠತೆಯನ್ನು ಗೌರವಿಸಿದ, ಆನಂದಿಸಿದ ಸಂತಶ್ರೇಷ್ಠ. ಮೌಢ್ಯ ಆಚರಣೆಗಳಿಗೆ ವೈಚಾರಿಕ ಸ್ಪರ್ಶ ನೀಡಿ ಸದಾಚಾರ ಮೂಡಲು ನೆರವಾದ ಸಮಾಜ ಚಿಕಿತ್ಸಕ. ಪಾರಂಪರಿಕ ನಂಬಿಕೆಗಳಲ್ಲಿದ್ದ ಕೊಳೆಯನ್ನು ತೊಡೆಯಲು ನಿರಂತರ ಪ್ರಯತ್ನಶೀಲರಾಗಿದ್ದ ಹಠಯೋಗಿ. ನೇಮ–ನಿಷ್ಠೆಗಳು ವ್ಯಕ್ತಿಗತ ನೆಲೆಯಲ್ಲಿರಬೇಕೇ ಹೊರತು, ಸಾಮಾಜಿಕ ಹೇರಿಕೆಯಾಗಬಾರದೆಂದು ಪ್ರತಿಪಾದಿಸಿದ ದಾರ್ಶನಿಕ. ಅವರ ಚಿಂತನೆಗಳು ವ್ಯಷ್ಟಿಯಿಂದ ಸಮಷ್ಟಿಯ ಕಡೆಗೆ; ಬಿಂದುವಿನಿಂದ ಸಿಂಧುವಿನೆಡೆಗೆ; ಅಲ್ಪದಿಂದ ಕಲ್ಪದೆಡೆಗೆ ಸಾಗುವುದನ್ನು ಕಾಣಬಹುದು. ಅವರ ಸಾಹಿತ್ಯದ ಕೇಂದ್ರಬಿಂದು ಮಾನವೀಯ ಅನುಕಂಪವಾಗಿದೆ. 'ಶ್ಮಶಾನ ಕುರುಕ್ಷೇತ್ರ' ನಾಟಕದಲ್ಲಿ ವ್ಯಕ್ತವಾಗಿರುವ ಯುದ್ಧವಿರೋಧಿ ನಿಲುವು; ಜೀವಪರ ಕಾಳಜಿಯು ಸಮಾಜಮುಖಿ ನೆಲೆಯಿಂದ ಮೂಡಿದುದಾಗಿದೆ. ಅಲ್ಲಿ ಬರುವ ಪಾತ್ರಗಳು ಬೇರೆ ಬೇರೆಯಾಗಿ ಕಾಣಿಸಿಕೊಂಡರೂ, ಒಂದೇ ಆಶಯಕ್ಕಾಗಿ ಮಿಡಿಯುವುದನ್ನು ಆರಂಭದ ದೃಶ್ಯದಿಂದ ಅಂತಿಮ ದೃಶ್ಯದವರೆಗೆ ನಿಚ್ಚಳವಾಗಿ ಕಾಣುತ್ತೇವೆ.

ಪೌರಾಣಿಕ ಕಥಾವಸ್ತುವನ್ನೊಳಗೊಂಡಿರುವ ನಾಟಕವು ಕುರುಕ್ಷೇತ್ರ ಯುದ್ಧ ಮುಗಿದ ನಂತರ ರಣರಂಗವನ್ನು ದರ್ಶಿಸುತ್ತದೆ. ಯಾವ ಭೂಮಿಯಲ್ಲಿ ಘನವೀರರು ತಮ್ಮ ಪರಾಕ್ರಮವನ್ನು ಮೆರೆದರೋ, ಯಾವ ಸೈನಿಕರು ತಮ್ಮ ಸ್ವಾಮಿನಿಷ್ಠೆಯನ್ನು ಪ್ರದರ್ಶಿಸಲು ಕೊಲೆಯ ಕಾಯಕವನ್ನು ಮೈದುಂಬಿ ಮಾಡಿದರೋ, ಯಾವ ಭೂಮಿಗಾಗಿ ತಮ್ಮ ಅತುಳಶಕ್ತಿ ಸಂಪನ್ನತೆಯನ್ನು ಪಣವಾಗಿಟ್ಟರೋ, ಆ ಎಲ್ಲವೂ, ಎಲ್ಲರೂ ಮಣ್ಣುಗೂಡುವುದು; ಬೂದಿಯಾಗುವುದು; ತಮ್ಮ ಅಸ್ತಿತ್ವವನ್ನೇ ಇಲ್ಲವಾಗಿಸಿಕೊಳ್ಳುವುದು ಶತಸಿದ್ಧ ಎಂಬುದು ಅರಿವಿಗೆ ಬರುವಂತೆ ಕುವೆಂಪು ಅವರು ತಂತ್ರವನ್ನು ಹೆಣೆದಿದ್ದಾರೆ. ಮೌನ ಆವರಿಸುವ ಶ್ಮಶಾನದಲ್ಲಿ ಮಾತುಗಳು ಸಾಂತ್ವನದ ಸಂಕೇತವಾಗಿ ಮೂಡಿ, ಸಮಾಧಾನದ ದಡಮುಟ್ಟಲು ಊರುಗೋಲಾಗುತ್ತವೆ.

ಕುರುಕ್ಷೇತ್ರದಲ್ಲಿ ನಡೆದ ಯುದ್ಧವು ಎರಡು ದೇಶಗಳ ನಡುವೆ ನಡೆದುದಲ್ಲ; ಇಬ್ಬರು ರಾಜರ ನಡುವೆ ನಡೆದುದೂ ಅಲ್ಲ. ಬದಲಾಗಿ ದಾಯಾದಿಗಳು ಅಧಿಕಾರಕ್ಕಾಗಿ ನಡೆಸಿದ ಕಚ್ಚಾಟ! ಈ ಜಗಳವೇ ಮಹಾಯುದ್ಧಕ್ಕೆ ನಾಂದಿಯಾಯಿತು. ಅದರ ಪರಿಣಾಮವಾಗಿ ಅಗಣಿತ ಅಮಾಯಕರ ಮಾರಣ ಹೋಮ ನಡೆದುಹೋಯಿತು. ಕಾಳಗದಲ್ಲಿ ಭಾಗಿಯಾಗಿದ್ದವರು ರಾಜರಿರಲಿ, ಮಂತ್ರಿಗಳಿರಲಿ, ಸೇನಾಪತಿ, ಸೈನಿಕರಿರಲಿ, ಅವರೆಲ್ಲರೂ ಸಾಮಾಜಿಕ ಹೊಣೆಗಾರಿಕೆಯನ್ನು ಹೊಂದಿರುತ್ತಾರೆ. ಸಾಂಸಾರಿಕ ಬಂಧನದ ಬೆಸುಗೆಯಲ್ಲಿ ಮುಳುಗಿರುತ್ತಾರೆ. ಇವರೆಲ್ಲರೂ ವ್ಯಕ್ತಿಯಾಗಿ ನಿರ್ವಹಿಸಬೇಕಾದ ಹಲವು ಖಾಸಗಿ ಕರ್ತವ್ಯಗಳಿರುತ್ತವೆ. ಬೇರೊಬ್ಬರು ಆ ಕರ್ತವ್ಯಗಳನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಯುದ್ಧ ಭೂಮಿಯಲ್ಲಿ ಸಾಮೂಹಿಕ ಹತ್ಯೆ ನಡೆಯುವುದರಿಂದ ಸಾಂಸಾರಿಕ, ಸಾಮಾಜಿಕ, ಸಾಂಸ್ಕೃತಿಕ ಬಂಧವು ಏಕಕಾಲಕ್ಕೆ ಮುರಿದುಬೀಳುವ ದುರಂತಮಯ ಸ್ಥಿತಿ ನಿರ್ಮಾಣಗೊಳ್ಳುವುದು; ಮಾನವೀಯ ಸಂಬಂಧಗಳ ಕೊಂಡಿ ಕಡಿದು ಹೋಗುವುದು. ದೇಶದ ಅರ್ಥವ್ಯವಸ್ಥೆಯು ಅಲ್ಲೋಲ ಕಲ್ಲೋಲಗೊಂಡು ಪ್ರಗತಿಗೆ ಕೊಡಲಿಪೆಟ್ಟು ನೀಡುತ್ತದೆ.

ಯುದ್ಧಗಳಿಗೆ ಕಾರಣಗಳನ್ನು ಹುಡುಕಲು ಪ್ರಯತ್ನಿಸಿದರೆ, ಅದರ ಕೇಂದ್ರವು ವ್ಯಕ್ತಿಯ ಮನಸ್ಸೇ ಆಗಿರುತ್ತದೆ. ಸ್ವಾರ್ಥಪರತೆ, ಅಹಂಕಾರ, ನಾನತ್ವ, ದುರಾಸೆ, ಇತರರ ಬುದ್ಧಿ ಮತ್ತು ಸಾಮರ್ಥ್ಯಗಳಿಗೆ ಮನ್ನಣೆ ನೀಡದಿರುವುದು, ದ್ವೇಷ, ಅಸೂಯೆ, ಅಸಹನೆ, ಪ್ರತೀಕಾರ ಮನೋಭಾವ, ಧನದಾಹ, ದರ್ಪ, ಹುಂಬ ಮಹತ್ವಾಕಾಂಕ್ಷೆ, ಶೌರ್ಯ ಪ್ರದರ್ಶನದ ಹುಚ್ಚು, ಸಾಮರ್ಥ್ಯವನ್ನು ಮೀರಿದ ಆತ್ಮವಿಶ್ವಾಸ ಮೊದಲಾದ ವ್ಯಕ್ತಿಗತ ಸ್ವಭಾವಗಳೇ ಯುದ್ಧಗಳಿಗೆ ಪ್ರಬಲ ಕಾರಣಗಳಾಗುತ್ತವೆ. ಕುರುಕ್ಷೇತ್ರ ಯುದ್ಧಕ್ಕೂ ಈ ಸ್ವಭಾವಗಳೇ ಪ್ರಧಾನ ಕಾರಣವಾಗುವುದನ್ನು ಗಮನಿಸಬಹುದು. ದುರ್ಯೋಧನನ ಅಹಂಕಾರ, ಪಾಂಡವರ ಹಠ, ಭೀಷ್ಮ – ದ್ರೋಣರ ಅಸಹಾಯಕತೆ, ಕೃಷ್ಣನ ತಂತ್ರಗಾರಿಕೆಗಳೆಲ್ಲ ಮೇಳೈಸಿ ಕುರುಕ್ಷೇತ್ರ ಯುದ್ಧ ಘಟಿಸಿತೆನ್ನಬಹುದು.

ಮುಖ್ಯಸ್ಥರು, ಕನ್ನಡ ವಿಭಾಗ, ಸಂತ ಜೋಸೆಫ್‌ರ ವಾಣಿಜ್ಯ ಕಾಲೇಜು, ಬ್ರಿಗೇಡ್ ರಸ್ತೆ, ಬೆಂಗಳೂರು – ೨೫

ಕುವೆಂಪು ಅವರು ಪರಂಪರೆಯ ಬಗೆಗೆ ಗೌರವವನ್ನು ಇಟ್ಟುಕೊಂಡೇ ಅದರ ಒಳಸೂಕ್ಷ್ಮಗಳನ್ನು ಅರ್ಥಮಾಡಿಕೊಂಡ ಮೇಧಾವಿಯಾಗಿ ಕಂಡು ಬರುತ್ತಾರೆ. ಅದು 'ಶ್ಮಶಾನ ಕುರುಕ್ಷೇತ್ರ' ನಾಟಕದಲ್ಲೂ ಎದ್ದು ಕಾಣುತ್ತದೆ. ನಾಟಕದ ಹೆಸರು ಸ್ವಾರಸ್ಯವಾಗಿದೆ. ಇಲ್ಲಿ ಎರಡು ಘಟಕಗಳಿವೆ. ಒಂದು ಶ್ಮಶಾನ; ಇನ್ನೊಂದು ಕುರುಕ್ಷೇತ್ರ, ಮೊದಲಿಗೇ ಶ್ಮಶಾನ ಎಂಬುದನ್ನು ತರುವ ಮೂಲಕ ಯುದ್ಧದ ಪರಿಣಾಮದಿಂದ ಆಗುವ ಘೋರ ಅನಾಹುತವನ್ನು ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ನಂತರ ಕುರುಕ್ಷೇತ್ರ ಹೆಸರಿದೆ. ಕುರುಕ್ಷೇತ್ರ ಎಂಬುದು ಕೇವಲ ಒಂದು ಸ್ಥಳದ ಹೆಸರಾಗಿ ಮಾತ್ರ ಉಳಿಯುವುದಿಲ್ಲ. ಬದಲಾಗಿ ಮಹಾಯುದ್ಧದಲ್ಲಿ ಭಾಗವಹಿಸಿದ ವೀರಾಧಿವೀರರ ಪರಾಕ್ರಮವನ್ನು ನೆನಪಿಸುವ ಸ್ಮರಣ ಶಕ್ತಿಯಾಗಿದೆ.

ಪುರಾಣಗಳು ಆಂಶಿಕ ಅಥವಾ ನಂಬಿಕೆಯ ಸತ್ಯವಾಗಿರಬಹುದು. ಅವು ಸಮಕಾಲೀನ ಸಮಾಜದಲ್ಲಿ ನಿರ್ವಹಿಸುವ ಪಾತ್ರವನ್ನು ಗ್ರಹಿಸಿ 'ಕಲ್ಪಿತ ಸತ್ಯ'ವನ್ನು ಸ್ಥಾಪಿಸಲು ತೊಡಗುವುದು ಯಾವುದೇ ನಾಟಕಕಾರರ ತುಡಿತವಾಗಿರುತ್ತದೆ. ಏಕೆಂದರೆ ಪುರಾಣಗಳ ಬಗೆಗೆ ಶ್ರೀ ಸಾಮಾನ್ಯರಲ್ಲಿರುವ ನಂಬಿಕೆಗಳು ಗಟ್ಟಿಯಾಗಿರುವುದರಿಂದ ಬದುಕಿನ ಪ್ರತಿ ಹಂತದಲ್ಲೂ ಅವು ಪ್ರಭಾವ ಬೀರುತ್ತಿರುತ್ತವೆ. ಅವುಗಳನ್ನು ಉಳಿದು ಜೀವನವಿಲ್ಲ ಎಂದು ನಂಬಿದ ಸಾಮಾಜಿಕ ವ್ಯವಸ್ಥೆಯಲ್ಲಿ ಸಾಹಿತಿಗೆ ಪುರಾಣಗಳನ್ನು ಆಧರಿಸಿದ ಕೃತಿ ರಚನೆ ಅನಿವಾರ್ಯ ಎನಿಸಿ ಬಿಡುತ್ತದೆ. ಈ ಕಾರಣದಿಂದಲೇ ಭಾರತೀಯ ಸಾಹಿತ್ಯವು ಪುರಾಣಗಳನ್ನು ಸಾಹಿತ್ಯದ ಮೂಲಧಾತುವಾಗಿ ಬಳಸಿಕೊಂಡಿರುವುದು. ಪುರಾಣಾಧಾರಿತ ಕೃತಿಗಳನ್ನು ಕಟ್ಟಿಕೊಡುವವರ ಮುಂದೆ ಹಲವು ಸವಾಲುಗಳಿರುತ್ತವೆ. ಪುರಾಣಗಳ ಬಗೆಗೆ ಜನ ಒಂದು ನಿರ್ದಿಷ್ಟ ನಂಬಿಕೆಯನ್ನು ಇಟ್ಟುಕೊಂಡಿರುತ್ತಾರೆ. ಸಿದ್ಧ ವ್ಯವಸ್ಥೆ ಅಥವಾ ಮಾದರಿಗೆ ಅವರು ಬದ್ಧರಾಗಿರುತ್ತಾರೆ. ಆ ನಂಬಿಕೆಗೆ ವಿರುದ್ಧವಾಗಿ ಬರುವ ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವ ಮನಸ್ಥಿತಿಯಲ್ಲಿ ಸಾಮಾಜಿಕರು ಇರುವುದಿಲ್ಲ. ಮುಗ್ಧತೆಯ ಹಿನ್ನೆಲೆಯ ಅವರು ಬದ್ಧ ಪ್ರೇಕ್ಷಕರಾಗಿ ಮಾತ್ರ ವರ್ತಿಸುತ್ತಾರೆ. ತಾವು ನಂಬಿರುವ, ಪಾರಂಪರಿಕ ಸತ್ಯವನ್ನು ಸುಳ್ಳೆಂದು ಪ್ರತಿಪಾದಿಸುವ ಎಲ್ಲ ಪ್ರಯತ್ನಗಳ ವಿರುದ್ಧ ಅವರಿಗೆ ಸಿಟ್ಟು ಮಡುಗಟ್ಟಿರುತ್ತದೆ. ಅದರಿಂದ ಮೂಡುವ ಪ್ರತಿರೋಧವು ಯಾವ ಪರಿಣಾಮವನ್ನಾದರೂ ಉಂಟುಮಾಡಬಹುದು. ಈ ಹಿನ್ನೆಲೆಯಲ್ಲಿ ಸಮಾಜ ಹಾಗೂ ಪೌರಾಣಿಕ ನಂಬಿಕೆಗಳ ನಡುವೆ ಉಂಟಾಗಿರುವ ಅನುಸಂಧಾನವನ್ನು ಒಡೆದು ಹೊಸದೊಂದು ನಂಬಿಕೆಯನ್ನು ಕಟ್ಟಿಕೊಡಲು ಪ್ರಯತ್ನಿಸುವಾಗ ನಾಟಕಕಾರನ ಒಳಗೇ ಹಲವಾರು ಪ್ರಶ್ನೆಗಳು ಏಳುತ್ತವೆ. ಅವುಗಳಿಗೆ ಉತ್ತರವನ್ನು ಕಂಡುಕೊಂಡರೆ ಸಾಮಾಜಿಕರ ಪ್ರೀತಿಯನ್ನು ಕೃತಿಕಾರ ಗಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಒಪ್ಪಿತ ಸತ್ಯ ಮತ್ತು ಕಲ್ಪಿತ ಸತ್ಯಗಳ ನಡುವೆ ಸಂಘರ್ಷವನ್ನು ಸೃಷ್ಟಿಮಾಡಬಲ್ಲ ಪ್ರಬಲ ಮಾಧ್ಯಮವಾಗಬಲ್ಲ ನಾಟಕವು ಸಾಮಾಜಿಕ ಪ್ರಕ್ರಿಯೆಯಾಗಿ, ಸಮೂಹ ಸಂಘಟನೆಯಾಗಿ, ಉದ್ದೇಶಿತ ಗುರಿ ಸಾಧನೆಗೆ ಮಾಡುವ ಸಾಂಘಿಕ ಪ್ರಯತ್ನವಾಗಿರುವುದರಿಂದ ನಾಟಕಕಾರರಿಗೆ ಈ ಎಲ್ಲ ಅಂಶಗಳ ಅರಿವು ಇರಬೇಕಾಗುತ್ತದೆ. ನಾಟಕಕಾರ ಒಂದು ಅರ್ಥದಲ್ಲಿ ಬಹು ಜನರನ್ನು ಒಂದೆಡೆ ತರುವ ಸಮನ್ವಯಕಾರ, ಬಹು ಪ್ರತಿಭೆಗಳನ್ನು ಒಟ್ಟುಗೂಡಿಸುವ ಚಿಂತನೆಯ ಸೂತ್ರಧಾರ.

ರಾಮಾಯಣ ಮತ್ತು ಮಹಾಭಾರತ ಕಥೆಗಳು ಭಾರತೀಯರ ಮೇಲೆ ಬೀರಿರುವಷ್ಟು ಪರಿಣಾಮವನ್ನು ಮತ್ತಾವ ಕಥೆಗಳೂ ಬೀರಿರುವುದಿಲ್ಲ. ಅನುದಿನದ ಬದುಕಿನಲ್ಲಿ ಅವು ಹಾಸುಹೊಕ್ಕಾಗಿವೆ; ಪ್ರತಿಕ್ಷಣವನ್ನು ನಿಯಂತ್ರಿಸುವ ಪ್ರಭಾವಳಿಗಳಾಗಿವೆ. ಈ ಸತ್ಯವನ್ನು ಅರಿತಿರುವ ಕುವೆಂಪು ಅವರು ಅವುಗಳ ಮೂಲಕವೇ ತಮ್ಮ ಚಿಂತನೆಯ ಹೊಳಹುಗಳನ್ನು ಬಿಚ್ಚಿಡಲು ಪ್ರಯತ್ನಿಸಿದ್ದಾರೆ. ಪ್ರವಾಹಕ್ಕೆ ವಿರುದ್ಧವಾಗಿ ಈಜುವ ಸಾಹಸವನ್ನು ಮಾಡದೆ, ಪ್ರವಾಹದಲ್ಲಿ ಸಿಕ್ಕಿಕೊಂಡಿರುವವರನ್ನು ದಡ ಮುಟ್ಟಿಸುವ ಕಡೆಗೆ ಅವರು ತಮ್ಮ ಗಮನವನ್ನು ಕೇಂದ್ರಿಕರಿಸುತ್ತಾರೆ. ಆ ಕಾರ್ಯ 'ಶ್ಮಶಾನ ಕುರುಕ್ಷೇತ್ರ' ನಾಟಕದಲ್ಲೂ ನಡೆದಿದೆ. ನಾಟಕದ ಹತ್ತೂ ದೃಶ್ಯಗಳು ಕತ್ತಲಲ್ಲಿ ನಡೆಯುತ್ತವೆ. ಕುವೆಂಪು ಅವರು ಇಡೀ ನಾಟಕವನ್ನು ಕತ್ತಲಿನಲ್ಲಿ ನಡೆಯುವುಂತೆ ಚಿತ್ರಿಸಲು ಕಾರಣವೇನು? ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಕೆಲವು ವಿಷಯಗಳು ಸ್ಪಷ್ಟಗೊಳ್ಳುತ್ತವೆ. ಯುದ್ಧಭೂಮಿಯಲ್ಲಿ ಅಗಣಿತ ಸಾವು ಸಂಭವಿಸಿದ ಪರಿಣಾಮವಾಗಿ ಅಸಂಖ್ಯಾತ ಕುಟುಂಬಗಳಲ್ಲಿ ಕತ್ತಲು ಆವರಿಸಿಕೊಂಡಿತ್ತು. ಎಷ್ಟೋ ಸಂಸಾರಿಗಳ ರಥದ ಚಕ್ರಗಳು ಮುರಿದು, ಬಂಡಿ ಮುಂದೆ ಸಾಗಲಾಗದ ದಯನೀಯ ಸ್ಥಿತಿ ನಿರ್ಮಾಣಗೊಂಡಿತ್ತು. ದುಃಖದ ಸಾಗರದಲ್ಲಿ ಜನ ಮುಳುಗಿ ಹೋಗಿದ್ದರು. ನೋವು ಅವರನ್ನು ಹೆಜ್ಜೆ ಹೆಜ್ಜೆಗೂ ಬಾಧಿಸುತ್ತಿತ್ತು. ಅಮಾಯಕರ ಮಾರಣ ಹೋಮದಿಂದ ಉದ್ಭವಿಸಿದ್ದ ಅನಾಥತೆ, ಅಳಲ ಕೊರಳನ್ನು ಅದುಮಿ ಉಸಿರು ಕಟ್ಟುವ ವಾತಾವರಣ ನಿರ್ಮಾಣಗೊಂಡಿತ್ತು. ಸಾಮೂಹಿಕ ಸನ್ನಿ ಹಿಡಿದವರಂತಿದ್ದ ಜನರಲ್ಲಿ ಆತಂಕ, ಮನೆಮಾಡಿತ್ತು; ಭವಿಷ್ಯ ಅಂಧಕಾರವಾಗಿತ್ತು. ಯಾರಲ್ಲೂ ಉತ್ಸಾಹದ ಲವಲೇಶವೂ ಇಲ್ಲದಿರುವಾಗ, ಕತ್ತಲ ಕೂಪದಲ್ಲಿ ಸಿಲುಕಿದವರಂತೆ ತೊಳಲಾಡುತ್ತಿರುವಾಗ, ನಿರಾಶೆ ಮನವನ್ನು ಆವರಿಸಿಕೊಂಡಿರುವಾಗ ದೃಶ್ಯಗಳನ್ನು ಹಗಲಿನ ಪ್ರಭೆಯಲ್ಲಿ ಬೆಳಗಿಸುವುದು ಹೇಗೆ? ಎಂಬ ಪ್ರಶ್ನೆ ಕುವೆಂಪು ಅವರಲ್ಲಿ ಮೂಡಿರಬೇಕು. ಹಾಗಾಗಿಯೇ ಇಡೀ ನಾಟಕ ಕತ್ತಲಲ್ಲೇ ಮಿಂಚುವುದು! ಕತ್ತಲು ಅಜ್ಞಾನದ ಸಂಕೇತ; ರಾತ್ರಿ ಅಸ್ಪಷ್ಟತೆಯ ದ್ಯೋತಕ. ದುರ್ಯೋಧನನ ಅಜ್ಞಾನದ ಕಾರಣದಿಂದ ನಡೆಯುವ ಕುರುಕ್ಷೇತ್ರ ಯುದ್ಧವು

ಅವನ ಅವಿವೇಕದ ತೀರ್ಮಾನಕ್ಕೆ ಭಾರಿ ಬೆಲೆಯನ್ನು ತೆತ್ತಿತು ಎಂಬುದನ್ನು ದರ್ಶಿಸುತ್ತದೆ. ಎಲ್ಲರ ಮಾತನ್ನು ಧಿಕ್ಕರಿಸಿ, ಕೃಷ್ಣನನ್ನು ಎದುರುಹಾಕಿಕೊಂಡು ಯುದ್ಧವನ್ನು ಆಹ್ವಾನಿಸಿದ ಹುಂಬ ದುರ್ಯೋಧನ ಎಲ್ಲರಿಗೂ ಸಾವಿನ ಕಹಿಣಿಸಿ ತಾನೂ ಅವಸಾನ ಹೊಂದುತ್ತಾನೆ. ಅಧಿಕಾರದಲ್ಲಿರುವವರು ವಿವೇಕರಹಿತರು, ಆತುರಗಾರರು, ದುರಹಂಕಾರಿಗಳು, ಉದ್ಧಟಿಗಳು, ಗರ್ವಿಗಳಾಗಿದ್ದರೆ ಎಂತಹ ಅನಾಹುತವನ್ನು ತಂದೊಡ್ಡುವರು ಎಂಬುದಕ್ಕೆ ಕುರುಕ್ಷೇತ್ರ ಯುದ್ಧವು ಸ್ಪಷ್ಟ ನಿದರ್ಶನವಾಗಿದೆ ಎಂಬುದನ್ನು ಅರ್ಥೈಸುವ ಸಲುವಾಗಿಯೇ ಕುವೆಂಪು ಅವರು ನಾಟಕವನ್ನು ಕತ್ತಲಲ್ಲಿ ನಡೆಯುವಂತೆ ತಂತ್ರವನ್ನು ರೂಪಿಸಿದ್ದಾರೆ.

ಬ್ರಿಟಿಷರ ಕಪಿಮುಷ್ಟಿಯಲ್ಲಿದ್ದ ಭಾರತದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ಕಾವು ಉತ್ತುಂಗಕ್ಕೇರಿದ್ದ ದಿನಮಾನಗಳವು. ಕುವೆಂಪು ಜಗತ್ತಿನ ಇತಿಹಾಸವನ್ನು ತಿಳಿದಿದ್ದರು. ಪ್ರಾಚೀನ ಸಾಹಿತ್ಯವನ್ನು ಅಭ್ಯಸಿದ್ದ ಅವರಿಗೆ ಪೂರ್ವ ಮತ್ತು ಪಶ್ಚಿಮಗಳ ಸಾಹಿತ್ಯದ ಅರಿವಿತ್ತು. ಅವುಗಳಲ್ಲಿ ಚಿತ್ರಿತವಾಗಿರುವ ಯುದ್ಧದ ಚಿತ್ರಣಗಳು ಅವರ ಮೇಲೆ ಅಗಾಧ ಪರಿಣಾಮವನ್ನು ಉಂಟು ಮಾಡಿದವು. ಆಗಲೇ ಅವರಿಗೆ ಯುದ್ಧದ ಕರಾಳ ಪರಿಣಾಮಗಳು ಮನವರಿಕೆಯಾಗಿದ್ದವು. ಕ್ರಾಂತಿಕಾಲದ ಸ್ವಚ್ಛಂಧತೆಯು ಸ್ವಾತಂತ್ರ್ಯ ಯುದ್ಧಕಾಲದಲ್ಲಿ ಇರುವುದಿಲ್ಲ; ದ್ವೇಷ, ಅಸೂಯೆಗಳು ಮಾನವರನ್ನು ನೆಮ್ಮದಿಯಾಗಿ ಬಾಳಲು ಬಿಡುವುದಿಲ್ಲ ಎಂದು ತಿಳಿದಿದ್ದ ಅವರು ೧೯೩೧ರಲ್ಲಿ 'ಶ್ಮಶಾನ ಕುರುಕ್ಷೇತ್ರ' ನಾಟಕವನ್ನು ರಚಿಸಿ ಅದರಲ್ಲಿ ಯುದ್ಧವಿರೋಧಿ ನಿಲುವನ್ನು ಢಾಳಾಗಿ ತಂದಿದ್ದಾರೆ. ಅವರ ಯುದ್ಧ ವಿರೋಧಿ ನಿಲುವಿನ ಹಿಂದೆ ಇರುವ ಜೀವಪರ ಕಾಳಜಿಯನ್ನು ಗುರುತಿಸಬಹುದಾಗಿದೆ. ನಾಟಕದ ಹಿನ್ನೆಲೆಯಲ್ಲಿ ಅವರು ಹೇಳುವ ಈ ಮಾತುಗಳೇ ಅವರ ಮನಃಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತವೆ. "ಒಂದೊಂದು ಯುದ್ಧವೂ ಪ್ರಾರಂಭವಾಗುವಾಗ ಅದು ಯುದ್ಧವನ್ನೇ ಕೊನೆಗಾಣಿಸುವ ಜಗತ್ತಿನ ಕೊನೆಯ ಅನಿವಾರ್ಯ ಸಂಕಟವೆಂದು ಸಾರುತ್ತೇವೆ. ಅನ್ಯಾಯವೆಲ್ಲ ತೊಲಗಿ ನ್ಯಾಯ ಸ್ಥಾಪನೆಯಾಗುವುದೆಂದು ಭಾವಿಸುತ್ತೇವೆ, ಕಲಿ ಹೋಗಿ ಕೃತಯುಗ ಪ್ರಾರಂಭವಾಗುತ್ತದೆಂದು. ಆದರೆ ಆದರೆ? ಮತ್ತೆ! ವಿಶೇಷತೆಗಾಗಿ ಸಾಮಾನ್ಯರ ಅಹುತಿ. ಸಂಸ್ಕೃತಿ ನಾಗರಿಕತೆ ಪ್ರಗತಿ ಎಲ್ಲ ಶ್ಮಶಾನರುದ್ರದ ಮೈಗೆ ಭಸ್ಮಲೇಪನವಾಗುತ್ತದೆ. ವಿಶ್ವಲೀಲೆ ಸಾಗುತ್ತದೆ.

ಯುದ್ಧ ಘೋಷಿಸುವವರು, ಯುದ್ಧವು 'ಅನಿವಾರ್ಯ ಸಂಕಟ' ಎಂದು ಹೇಳಿದರಿಂದ ಅದನ್ನು ಉಳಿದು ಅನ್ಯ ಮಾರ್ಗವೇ ಇಲ್ಲ ಎಂಬ ಸ್ಥಿತಿಗೆ ಜನ ಬಂದು ನಿಲ್ಲುತ್ತಾರೆ. ಈ ಯುದ್ಧ ಮುಗಿದರೆ ಮುಂದೆ ಎಂದೂ ಯುದ್ಧಗಳು ನಡೆಯುವುದಿಲ್ಲ ಎಂಬ ನಂಬಿಕೆಯನ್ನು ಬಿತ್ತಲಾಗುತ್ತದೆ. ಅನ್ಯಾಯವನ್ನು ತೊಲಗಿಸಿ ನ್ಯಾಯಸ್ಥಾಪನೆಯು ಯುದ್ಧದ ಪ್ರಧಾನ ಉದ್ದೇಶ ಎಂದು ಬಿಂಬಸಲಾಗುವುದರಿಂದ ಶ್ರೀಸಾಮಾನ್ಯರು ಯುದ್ಧಕ್ಕೆ ವಿರೋಧವಾಗಿ ನಿಲ್ಲಲಾರರು. ಏಕೆಂದರೆ ಅವರು ಬಹುಪಾಲು ನ್ಯಾಯದ ಪರವಾಗಿಯೇ ನಿಲ್ಲುತ್ತಾರೆ. ಅವರ ದೃಷ್ಟಿಯಲ್ಲಿ ಯುದ್ಧವು ಪರಿವರ್ತನೆಗೆ ದಾರಿಮಾಡಿಕೊಡುತ್ತದೆ. ಆದರೆ ಆಗುವುದೇ ಬೇರೆ. ಯುದ್ಧಗಳಿಂದ ಸಂಸ್ಕೃತಿಗಳು, ನಾಗರಿಕತೆ, ಪ್ರಗತಿ ಎಲ್ಲದರ ನಾಶವಾಗುತ್ತದೆ. ಯುದ್ಧದಿಂದ ದೊರೆಯುವುದು, ಮಹಾಶ್ಮಶಾನಗಳು, ದೊಡ್ಡ ಬೂದಿಯ ಪರ್ವತಗಳು! ಎಂಬುದನ್ನು ಕುವೆಂಪು ಅವರು ಮಾರ್ಮಿಕವಾಗಿ ತಿಳಿಸಿದ್ದಾರೆ. ಪ್ರತಿಯೊಂದು ದೃಶ್ಯದಲ್ಲೂ ಇದು ಮಾರ್ದನಿಸುತ್ತದೆ.

ಕುವೆಂಪು ಅವರ ಸಾಹಿತ್ಯದಲ್ಲಿ ಚಿಂತನೆಗೆ ಪ್ರಾಧಾನ್ಯ. ಅದು ಕಾವ್ಯವಿರಲಿ, ಕಾದಂಬರಿಯಾಗಲೀ, ಕಥೆ, ವಿಮರ್ಶೆ ಯಾವ ಪ್ರಕಾರವೇ ಇರಲಿ ಅಲ್ಲೆಲ್ಲ ತೆರೆದುಕೊಳ್ಳುವುದು ವಿಚಾರಪರತೆ, ಜನಮುಖಿ, ಸಮಾಜಪರ ಕಾಳಜಿ. ಈ ಕಾರಣಕ್ಕಾಗಿಯೇ ಕುವೆಂಪು ಅವರು ಇತರ ಸಾಹಿತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಇದೇ ಮನಃಸ್ಥಿತಿ ಅವರ ಎಲ್ಲ ನಾಟಕಗಳಲ್ಲೂ ತೆರೆದುಕೊಳ್ಳುವುದನ್ನು ಗಮನಿಸಬಹುದು. ಸಾಮಾನ್ಯರಿಗೆ ಮೊದಲ ಮನ್ನಣೆಯನ್ನೀಯುವ ಅವರು ಅದರಲ್ಲಿ ಧನ್ಯತಾಭಾವವನ್ನು ತಾಳುತ್ತಾರೆ. ನಾಟಕದ ಎರಡನೆಯ ದೃಶ್ಯದಲ್ಲಿ ತಾಯಿಯೊಬ್ಬಳು ತನ್ನ ಪತಿಯನ್ನು ಹುಡುಕಿಕೊಂಡು ಕುರುಕ್ಷೇತ್ರ ರಣಭೂಮಿಗೆ ಬರುತ್ತಾಳೆ. ಜೊತೆಯಲ್ಲಿ ಆಕೆಯ ಪುಟ್ಟ ಕಂದನಿದ್ದಾನೆ. ಏನೂ ಅರಿಯದ ಮಗು 'ಅಮ್ಮಾ' ಕತ್ತಲೆಯೊಳಗೆಲ್ಲಿಗೆ ಹೋಗುತಿಹೆ?' ಎಂದು ಪ್ರಶ್ನಿಸುತ್ತಾನೆ. ನಿನ್ನ ತಂದೆಯನ್ನು ಹುಡುಕಲು ಎಂದು ಹೇಳಿ ಮುಂದೆ ಸಾಗುತ್ತಿರುವಾಗ ಒಬ್ಬ ಸೈನಿಕ ಬಿದ್ದಿರುದನ್ನು ನೋಡಿದ ಹುಡುಗ ' ಇವನಾರು? ಇಲ್ಲೇಕೆ ಮಲಗಿಹನು? ಇವನಿಗೆ ಮನೆಯಲ್ಲವೆ? ದೇಸಿಗನೆ? ಎಂದು ತಾಯಿಯನ್ನು ಪ್ರಶ್ನಿಸುವನು. ಆ ಮಾತುಗಳಿಗೆ ಉತ್ತರಿಸಲಾಗದ ತಾಯಿ ತನ್ನಲ್ಲೇ ಬಾಳು ಏನು ಎಂದು ತಿಳಿಯದಿರುವ ಕೂಸಿಗೆ ಸಾವಿನ ಪರಿಚಯವನ್ನು ಹೇಗೆ ಮಾಡಿಕೊಡಲಿ' ಎಂದು ದುಃಖಿಸುತ್ತಾಳೆ. "ಕಂದಾ! ಕಾಳೆಗದ ನೆಲದೊಳೆ ವೀರರಿಗೆ ಬೀಡಿಲ್ಲ ಎಂದು ಹೇಳುವುದೆಂತು? ಸತ್ತವರ ಸಂಗದಲಿ, ಸತ್ತವರ ನೇಹದಲಿ, ಬಾಳುತಿರುವ ಈತನನು ದೇಸಿಗನೆಂದು ಕರೆವುದೆಂತು? ಸಮರವಿಲಯಾಗ್ನಿಗೆ ಬಾಳನು ಬೇಳಿದವನು ಜವನಿದ್ದೆಯಲಿಹನು. ಮರಳಿ ಎಚ್ಚರನು! ತಾಯಿಯ ಈ ಮಾತುಗಳು ಕಂದನಿಗೆ ಅರ್ಥವಾಯಿತೋ ಇಲ್ಲವೋ ತಿಳಿಯುವುದಿಲ್ಲ. 'ಮರಳಿ ಎಚ್ಚರನು' ಮಾತಿನ ಜಾಡನ್ನು ಹಿಡಿದ ಅವನು 'ಮರಳಿ ಮೇಲೇಳನೆ? ಮರಳಿ ಮಾತಾಡನೇ? ನನ್ನಂತೆ ಇವನಿಗೊಬ್ಬ ಕಂದನಿಹನೆಂದು ಹೇಳಿದೆಯಲ್ಲಾ. ಆ ಕಂದನನು ಮರಳಿ ಎದೆಗಪ್ಪಿ ನಲಿಯನೇ?' ಹೀಗೆ ಒಂದರ ಮೇಲೊಂದರಂತೆ ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ಹಾಕುತ್ತಾನೆ. ಮಾತೆಗೆ ಆ ಪ್ರಶ್ನೆಗಳಿಗೆ ಉತ್ತರಿಸುವುದಕ್ಕಿಂತ ಹೆಚ್ಚಾಗಿ

ದುಃಖ ಒತ್ತರಿಸಿ ಬರುತ್ತದೆ. ಆದರೂ ಅದನ್ನು ತಡೆದು ಮಗುವಿಗೆ ಸಾಂತ್ವನದ ಮಾತನಾಡಿ ಸಮಾಧಾನಪಡಿಸಲು ಪ್ರಯತ್ನಿಸುತ್ತಾಳೆ!... ಶಿವಾಶಿವಾ ಸಾವಿನ ಮೌನಕ್ಕಿಂತಲೂ ಬಾಳಿನ ಗೋಳೆ ಲೇಸಲ್ತೆ? ಕಂದಾ ಈತನಿಗೊಂದು ಬರಿಯ ಎಲುಬು ಬಾಹುಗಳ ಗೂಡು! ಬರುವವರು ಹೇಳದಿಹ, ಇರುವವರು ಕಾಣದಿಹ, ಹೋದವರು ಬಾರದಿಹ ಸಾವಿನ ನಾಡು ಇವನಿಗೆ ಬೀಡು! ಈಗಳೀತಂಗೆ ಪಿತೃತ್ವಮಿಲ್ಲ, ಬಂಧುತ್ವಮಿಲ್ಲ! ಈತನೀಗಣ್ಣನೂ ಅಲ್ಲ, ತಮ್ಮನೂ ಅಲ್ಲ' ಎನ್ನುವಳು. ಒಡನೆಯೇ 'ಇನ್ನೇನಾಗಿರುವನಮ್ಮ? ಎಂಬ ಪ್ರಶ್ನೆ ಕಂದನ ಕೊರಳಲ್ಲಿ ಉಲಿಯುತ್ತದೆ. ಆಗ ತಾಯಿಯ ರೋಧನೆ ಮತ್ತೂ ಅಧಿಕಗೊಳ್ಳುತ್ತದೆ. 'ಹೆಣ, ಹೆಣ ಸತ್ತ ಸುಡುಗಾಡಿನ ಹೆಣ! ಎಂದು ತನ್ನ ಕಂದನನ್ನು ಸಂತೈಸಲು ಪ್ರಯತ್ನಿಸುತ್ತಾಳೆ. ಆದರೆ ಮಗನಿಂದ ಬಂದ 'ನಾವರಸುತಿರುವ ನನ್ನ ತಂದೆಯೂ ಇವನಂತೆಯೇ ಆಗಿರುವನೇನು?' ಎಂಬ ಪ್ರಶ್ನೆಯು ಅವಳ ಎದೆಯನ್ನು ನಡುಗಿಸುತ್ತದೆ; ಚೈತನ್ಯವನ್ನು ಉಡುಗಿಸುತ್ತದೆ. ಕಂದನ ಪ್ರಶ್ನೆಗೆ ಉತ್ತರ ಕೊಡುವಷ್ಟು ತಾಳ್ಮೆ ಅವಳಿಗಿರುವುದಿಲ್ಲ. ಇಂಥ ಪ್ರಶ್ನೆಯನ್ನು ತಾಯಿ ನಿರೀಕ್ಷಿಸಿರಲೂ ಇಲ್ಲ. ಕಂದನನ್ನು ಬಾಚಿ ಅಪ್ಪಿಕೊಂಡು 'ಅಯ್ಯೋ ನನ್ನ ಜೀವದ ಕಣ್ಣೇ, ಬಾಳಿನ ನಲ್ಮೆಯನಿಂತು ತೋರುತಿಹ ನಿನ್ನ ಮುಗ್ಧತನದೆದುರು ಸಾವೆನಿತು ಕರ್ಕಶಮಾಗಿ ತೋರುತಿದೆ!" ಎನ್ನುವುದು ಕೇವಲ ಒಬ್ಬ ತಾಯಿಯ ಅಳಲಾಗಿ ಮಾತ್ರ ನಿಲ್ಲುವುದಿಲ್ಲ. ಸಾವಿರ ಸಾವಿರ ತಾಯಂದಿರ ಪ್ರತಿಧ್ವನಿಯಾಗಿ ಅನುರಣಿಸುವಂತಾಗುತ್ತದೆ. ಇದು ಒಬ್ಬ ಕಂದನ ಪ್ರಶ್ನೆಯಲ್ಲ; ಕೋಟಿ ಕೋಟಿ ಕಂದರ ಪ್ರಶ್ನೆಯಾಗಿ ಪಡಿಮೂಡುತ್ತದೆ. ಇಲ್ಲಿ ಕುವೆಂಪು ಯುದ್ಧದಿಂದ ಸಾಮಾನ್ಯ ಕುಟುಂಬಗಳು ಹೇಗೆ ನಿರ್ಗತಿಕವಾಗುತ್ತವೆಂಬುದರ ದಾರುಣತೆಯನ್ನು ದರ್ಶಿಸಿದ್ದಾರೆ. ಮಾನವೀಯ ಸಂಬಂಧಗಳ ಬಂಧದ ಬೆಸುಗೆಗಳು ಕಳಚಿಕೊಳ್ಳುವುದರಿಂದ ಸಮಾಜದ ಮೇಲೆ ಉಂಟಾಗುವ ಪರಿಣಾಮಗಳು ಅಗಣಿತವಾದವು. ಅವುಗಳ ಮರುಬೆಸುಗೆ ಸಾಧ್ಯವಾಗದೆ ಸಂಬಂಧಗಳ ಅನುಪಸ್ಥಿತಿ ಉಂಟಾಗಿ ಯಾತನೆಯ ಕೂಪದಲ್ಲಿ ಸಹಸ್ರ ಸಹಸ್ರ ಹೆಣ್ಣುಗಳು ಮುಳುಗಲು ಯುದ್ಧಗಳು ಹೆದ್ದಾರಿಯನ್ನು ನಿರ್ಮಿಸುತ್ತೆ ಎಂಬುದನ್ನು ಕುವೆಂಪು ಹೇಳಲೆತ್ನಿಸಿದ್ದಾರೆ.

ಕುರುಕ್ಷೇತ್ರ ರಣಾಂಗಣವನ್ನು ಬೃಹತ್ ಶ್ಮಶಾನವಾಗಿ ಕಂಡಿರುವ ಕುವೆಂಪು ಅವರು ಅದರ ಹಿನ್ನಲೆ, ಮುನ್ನೆಲೆಗಳನ್ನು ಸರಿಯಾಗಿಯೇ ಅರ್ಥೈಸಿಕೊಂಡಿದ್ದಾರೆ. ಅಲ್ಲಿ ಕೇವಲ ದುಃಖತಪ್ತ ಮನುಜರಿಲ್ಲ. ಹೆಣಗಳನ್ನು ತಿನ್ನಲು ಹಾತೊರೆಯುವ ಭೂತಗಳೂ ಇವೆ. ಆ ಮರುಳುಗಳ ಮಾತಿನಲ್ಲೂ ಯುದ್ಧವಿರೋಧಿ ನಿಲುವನ್ನು ಪ್ರಕಟಿಸುವುದು ಕುವೆಂಪು ಅವರ ಅದ್ಭುತ ಪ್ರತಿಭೆ. ಇದು ಕಲಿತ ಸತ್ಯವಾದರೂ ಸಾಮಾನ್ಯರ ನಂಬಿಕೆಯ ಹಿನ್ನೆಲೆಯಲ್ಲಿ ಪಡಿಮೂಡಿದ್ದಾಗಿದೆ. ಸಾಧ್ಯವಾದ ಎಲ್ಲ ತಂತ್ರಗಳ ಮೂಲಕ ಯುದ್ಧದ ಕರಾಳ ಮುಖಗಳನ್ನು ದರ್ಶಿಸಿ, ಆ ಮೂಲಕ ಜನರಲ್ಲಿ ಯುದ್ಧವೆಂದರೆ ಅಸಹ್ಯ ಹುಟ್ಟುವಂತೆ ಮಾಡುವ ಪ್ರಯತ್ನ ನಾಟಕದ ಉದ್ದಕ್ಕೂ ಸಾಗುವುದನ್ನು ಕಾಣಬಹುದು. ಮೂರನೆಯ ದೃಶ್ಯದಲ್ಲಿ ಕಾಣಸಿಕೊಳ್ಳುವ ಮರುಳುಗಳು ಪರಸ್ಪರ ಮಾತನಾಡಿಕೊಳ್ಳುತ್ತವೆ. 'ಅಕ್ಕ, ಇದೇನ್ ಮಾನವರ ಮುರುಳಾಟಂ. ಎಮ್ಮ ಮರುಳುತನಮುಮಂ ಗೆಲುವಂತಿರ್ಪುದು!' ಎಂದು ಒಂದನೇ ಮರುಳು ಅಚ್ಚರಿಯನ್ನು ವ್ಯಕ್ತಮಾಡಿದರೆ, 'ನಿಶ್ಚಯಂ; ನಮಗೆ ಒಂದಿನಿತು ನಿಲಲುಂ ಎಡೆಯಿಲ್ಲ. ಮಾನವರ ಮುಂದೆಯೇ ಮಸಣಮಂ ಮುತ್ತಿಹುದು' ಎನ್ನುತ್ತ ಮೊದಲ ಪಿಶಾಚಿಯ ಮಾತಿಗೆ ಸಹಮತವನ್ನು ೨ನೇ ಮರುಳು ವ್ಯಕ್ತಮಾಡುತ್ತದೆ. ಅವುಗಳ ಸಂಭಾಷಣೆ ಹೀಗೆ ಸಾಗುತ್ತದೆ.

೧ನೇ ಮರುಳು : **ಎಮ್ಮ ಇರುಳಲೆತಮಂ ತಾಮೆ ಪಡೆದು ನಕ್ತಂಚರಿಗಳಾದಂತೆ ತೋರುವುದು.**

೨ನೇ ಮರುಳು : **... ತಂಗೆ, ಏಂ ಭಯಂಕರಂ ಈ ಕುರುಕ್ಷೇತ್ರ ಸಂಗ್ರಾಮರ್ಗೆಗಂ? ಮರುಳ್ಗಂ ಮರುಳ್ವಿಡಿದು ಪೋಪಂತೆ ಕೊಲೆ ಕಳೆಯೇರಿರ್ಪುದು.**

೧ನೇ ಮರುಳು : **ಪಿಂತಣ್ಗೆ ಮತ್ತಾವ ಕಾಳೆಗದೊಳುಂ ಇಂತಪ್ಪ ಬೀರಮುಂ ಇಂತಪ್ಪ ಕೊಲೆಯುಮಂ ನಾನ್ ಪಾರ್ದರಿಯೆನ್.**

೨ನೇ ಮರುಳು : **ಏನ್ ಮಚ್ಚರವೊ, ಏನ್ ಕಾಳೆಗದ ಪುರ್ಚೊ, ಈ ಕೀಳ್ ಮಾನಿಸರ್ಗೆ! ಇವರನಾನುಂ ಪೇಸುವೆನ್!**

ಇಂಥ ಅದ್ಭುತ ಕಲ್ಪನೆ ಕುವೆಂಪು ಅಂಥವರಲ್ಲಿ ಮಾತ್ರ ಕಾಣಲು ಸಾಧ್ಯವೆಂದು ತೋರುತ್ತದೆ. ಹೆಣವನ್ನು ತಿಂದು ಅಲೆಯುವ ಭೂತಗಳ ಬಾಯಲ್ಲಿ ನೀತಿ ಹೇಳಿಸುವ ಚಮತ್ಕಾರವನ್ನು ಅವರು ಸಹಜವೆಂಬಂತೆ ತಂದಿದ್ದಾರೆ. ಯುದ್ಧದಲ್ಲಿ ಮಡಿದ ತಮ್ಮವರ ಹೆಣಗಳನ್ನು ಹುಡುಕಲು ಅಸಂಖ್ಯಾತ ಜನ ಅಲ್ಲಿಗೆ ಬಂದಿರುವುದರಿಂದ ಭೂತಗಳು ನಿಲ್ಲಲೂ ಸ್ಥಳ ಇಲ್ಲದಂತಾಗಿರುವ ಕುರುಕ್ಷೇತ್ರ ಯುದ್ಧಭೂಮಿಯು ಭಯಂಕರವಾಗಿದೆ. ಹಿಂದಿನ ಯಾವ ಯುದ್ಧದಲ್ಲೂ ಇಷ್ಟೊಂದು ಸಾವು ಸಂಭವಿಸಿರಲಿಲ್ಲವಂತೆ! 'ಮತ್ಸರವನ್ನು ಹೊಂದಿ ಕಾಳಗದ ಹುಚ್ಚನ್ನು ಪ್ರಕಟಿಸುವ ಕೀಳು ಮನುಷ್ಯರನ್ನು ನಾನು ಹೇಸುತ್ತೇನೆ' ಎಂದು ಪಿಶಾಚಿ ಹೇಳುವುದಾದರೆ ಮನುಷ್ಯರು ಆ ಬಗ್ಗೆ ಯೋಚಿಸುವುದು ಬೇಡವೇ? ಎಂಬ ಪ್ರಶ್ನೆ ಕುವೆಂಪು ಅವರಿಗೆ ಮೂಡಿರಲು ಸಾಕು.

ಯುದ್ಧಗಳು ಜೀವವಿರೋಧಿ ನಿಲುವಿನ ವಿಜೃಂಭಣೆಯಾಗಿಯೇ ಗೋಚರಿಸುವುದರಿಂದ ಭಯಾನಕತೆ ಎಲ್ಲರನ್ನೂ ಕಾಡುವುದು ಸಾಮಾನ್ಯ ಅಂಶ. ನಾಟಕದ ಪ್ರತಿ ಪಾತ್ರವು ಒಂದಲ್ಲ ಒಂದು ಸಂದರ್ಭದಲ್ಲಿ ಈ ಕುರಿತು

ಮಾತನಾಡುವುದನ್ನು ಗಮನಿಸುತ್ತೇವೆ. ಯುಗಾಧಿಪತಿ ದ್ವಾಪರನು ಮೊದಲನೆಯ ದ್ರಶ್ಯದಲ್ಲಿ ಆಡುವ ಮುಂದಿನ ಮಾತುಗಳು ಗಮನಾರ್ಹವಾಗುತ್ತವೆ. "...ಇಂದನ್ನೆವರಂ ಕುರುಕ್ಷೇತ್ರಂ ಅರಸುಗಳ ರಣರಂಗ ಮಾಗಿತ್ತು; ಕೊಳೆಯಲಿಹ ಪೆಣದ ಬಣಬೆಯ ಕಣವಾಗಿರ್ಪುದೀ ಪೊಳ್ತು! ನಿನ್ನೆಯಿದು ಮೆಯ್ಗಲಿಗಳಾಡುಂಬೊಲಾಗಿತ್ತು; ಮರುಳ್ಗಡಾಡುತಿಹ ಮಸಣವಾಗಿಹುದಿಂದು!" ತನ್ನ ಯುಗವು ಶ್ರೇಷ್ಠವೆಂದು ಭ್ರಮಿಸಿದ್ದ ದ್ವಾಪರನಿಗೆ ತನ್ನ ಅಭಿಪ್ರಾಯ ಸುಳ್ಳು ಎಂದು ತಿಳಿದಾಗ ಯುದ್ಧದ ಬಗೆಗೆ ಅಸಹ್ಯ ಹುಟ್ಟುತ್ತದೆ. ಆಗ ಅವನಲ್ಲಿ ಚಿಂತೆ ಮನೆ ಮಾಡುತ್ತದೆ. ಏಕಾಂತದಲ್ಲಿ ತನ್ನ ಯುಗದ ಎಲ್ಲ ಪರಾಕ್ರಮಿಗಳನ್ನು ನೆನೆದು ಮರುಕಪಡುವ ಆತನೊಡನೆ ಮತ್ತೊಂದು ಯುಗದ ಅಧಿನಾಯಕನಾದ ಕಲಿಯು ಮಾತಿಗಿಳಿದಾಗಲೂ ಅದು ಹೀಗೆ ಪ್ರತಿಧ್ವನಿಸುತ್ತದೆ. "ಇದೆ ಪರಾಕ್ರಮಶಾಲಿಗಳ ರಣೋತ್ಸಾಹಕ್ಕೆ ಪ್ರತಿಫಲ ನೋಡಿದೆ ರಣೋನ್ಮತ್ತರಾಗಿರ್ದ ಮೆಯ್ಗಲಿಗಳದಟನಿಂದು ದಿಸಿರ್ಪ ಮಸಣಂ! ಮೇಣಿದೆ ಮಹಾಭಾರತದ ಕುರುಕ್ಷೇತ್ರದಿಂ, ವೀರ ಸಂಗ್ರಾಮದಿಂ, ಲೋಕಪ್ರಸಿದ್ಧವಹ ವಿಜಯದಿಂ ಮೂಡಿಬಂದಿಹ ಸೂಡುಗಳ ಬೀಡು! ಶವಗಳುಗ್ರಾಣಂ! ನಿಶಾಚರಿಗಳಿಗೆ ನಾಡು!' ದ್ವಾಪರನ ಈ ಮಾತುಗಳು ಯುದ್ಧದ ಪರಿಣಾಮವನ್ನು ವಿವರಿಸುವ ಪರಿಣಾಮಕಾರಿ ಅಸ್ತ್ರವಾಗಿ ಮೂಡಿದಂತಿದೆ. ಪರಾಕ್ರಮಿಗಳ ಶೌರ್ಯದ ತುತ್ತತುದಿಯಲ್ಲಿ ಇಡೀ ರಣರಂಗವು ಸೂಡುಗಳ ಬೀಡಾಗಿ, ಶವಗಳ ಉಗ್ರಾಣವಾಗಿ ಪರಿವರ್ತಿತವಾಗುತ್ತದೆ ಎನ್ನುವ ಎಚ್ಚರವನ್ನು ಉಂಟುಮಾಡುವಂತಿದೆ. ಶ್ರೇಷ್ಠವೆನ್ನುವುದೆಲ್ಲ ಒಂದು ದಿನ ನಾಶವಾಗಲೇ ಬೇಕು, ಮಣ್ಣುಗೂಡಲೇಬೇಕು ಎಂದು ತಿಳಿಯುವುದಾದರೂ, ಯುದ್ಧವು ಶ್ರೇಷ್ಠ ಕನಿಷ್ಠ ಎಲ್ಲವನ್ನೂ ಒಟ್ಟಿಗೆ ಬಲಿತೆಗೆದುಕೊಳ್ಳುವ ಕರಾಳ ನಾಲಿಗೆಯನ್ನು ಚಾಚುತ್ತದೆ ಎನ್ನಬಹುದು.

ಯುದ್ಧದಲ್ಲಿ ಭಾಗಿಗಳಾಗುವ ಸಾಮಾನ್ಯ ಸೈನಿಕರೂ ಅದರ ಪರಿಣಾಮವನ್ನು ಕುರಿತು ಮಾತನಾಡಿಕೊಳ್ಳುವಾಗಲೂ ಯುದ್ಧವಿರೋಧಿ ನಿಲುವು ವ್ಯಕ್ತವಾಗುವುದನ್ನು ದುರ್ಯೋಧನನ ಸೇವಕರಾದ ನೀಲಾಕ್ಷ, ಗೀರ್ವಾಣರ ಸಂಭಾಷಣೆಯಲ್ಲಿ ಗುರುತಿಸಬಹುದು.

**ನೀಲಾಕ್ಷ** – ಇನ್ನೆಗಂ ಸಮರರಂಗಂ ಇನಿತು ಭಯಂಕರಮೆಂದು ನಾನರಿದುದಿಲ್ಲ. ಸಮರ ಸಮಯಕ್ಕಿಂತಲೂ ಸಮರೋಪ ಸಂಹಾರದೀ ಮಸಣಮೇ ಮಿಗಿಲಗುರ್ವುವಡೆದಿಹುದಲ್ತೆ?

**ಗೀರ್ವಾಣ** – ಕಾಳಗದಿಂದ್ಪೆತಹ ನಾಶದಗುಂದಲೆಯಂ ನಾನಿಂದು ಮನಗಂಡೆ. ಕಟ್ಟಕಡೆಗಿಂತುಟಾಗುವುದೆಂದು ಮೊದಲಂದು ತಿಳದಿರಾರು?

ಯುದ್ಧವೆಂದರೆ ಶ್ಮಶಾನಗಳ ನಿರ್ಮಾಣವೆಂದು ಅರ್ಥ. ಆದರೆ ಆ ಮಸಣವು ಎಷ್ಟು ಭಯಾನಕವಾಗಿರುತ್ತದೆ; ಹಿರಿದಾಗಿರುತ್ತದೆ ಎಂಬುದು ಯುದ್ಧೋತ್ತರದಲ್ಲಿ ಮಾತ್ರ ತಿಳಿಯುವುದು. ಯಾವ ಸೈನಿಕನೂ ತನಗೆ ಯುದ್ಧವೇ ಬದುಕೆಂದು ತಿಳಿದಿರುವುದಿಲ್ಲ. ಪ್ರಾಚೀನ ಕಾಲದಲ್ಲಂತೂ ಇದು ಸಾಧ್ಯವಿರಲಿಲ್ಲ. ಏಕೆಂದರೆ ಕೃಷಿ ಚಟುವಟಿಕೆಯಲ್ಲಿ ತೊಡಗುವವರಿಂದ ಹಿಡಿದು ಎಲ್ಲ ಶ್ರಮದಾಯಕ ವೃತ್ತಿಗಳಲ್ಲಿ ತೊಡಗುವವರು ಯುದ್ಧವೀರರೇ ಆಗಿರುತ್ತಿದ್ದರು. ಅಂಥವರಿಗೆ ಯುದ್ಧಗಳು ಆಸಕ್ತಿಯ ವಿಷಯಕ್ಕಿಂತಲೂ ಶಕ್ತಿ ಪ್ರದರ್ಶನದ ವೇದಿಕೆಗಳಾಗುತ್ತಿದ್ದವು. ಇಷ್ಟಾದರೂ ಯುದ್ಧಗಳು ಸಾರ್ವತ್ರಿಕ ಮನ್ನಣೆಗೆ ಪಾತ್ರವಾಗುತ್ತಿರಲಿಲ್ಲ. ಏಕೆಂದರೆ ಯುದ್ಧದ ಪರಿಣಾಮ ಏನೆಂಬುದು ಮೊದಲು ಯಾರಿಗೂ ತಿಳಿದಿರುವುದಿಲ್ಲ, ಈ ಅಭಿಪ್ರಾಯವನ್ನೇ ಕುವೆಂಪು ಅವರು ಗೀರ್ವಾಣನ ಮೂಲಕ 'ಕಟ್ಟಕಡೆಗಿಂತುಟಾಗುವುದೆಂದು ಮೊದಲಂದು ತಿಳಿದರಾರು?" ಎಂದು ಹೇಳಿಸಿದ್ದಾರೆ.

ಕಾಳಗಗಳಲ್ಲಿ ಭಾಗಿಯಾಗುವ ಮಕ್ಕಳನ್ನು ಕಳೆದುಕೊಳ್ಳುವ ತಾಯಂದಿರ ಅಳಲ ಆಳವನ್ನು ಯಾರೂ ಅಳೆಯಲು ಸಾಧ್ಯವಿಲ್ಲ. ಹೆತ್ತ ತಾಯಿಯ ದುಃಖಕ್ಕೆ ಯಾವುದೂ ಸಮನಲ್ಲ. ಆಕೆಯನ್ನು ಸಾಂತ್ವನಗೊಳಿಸುವುದು ಯಾರಿಂದಲೂ ಸಾಧ್ಯವಿಲ್ಲ. ಕಾರಣ ಕರುಳ ಕುಡಿಯೊಡನೆ ತಾಯಿಗಿರುವ ಬೆಸುಗೆ ಅಷ್ಟು ಗಟ್ಟಿಯಾದುದು. ನಾಟಕದ ಮೂರನೆಯ ದೃಶ್ಯದಲ್ಲಿ ಕಾಣಿಸಿಕೊಳ್ಳುವ ಮುದುಕಿ ತನ್ನ ಕಂದನನ್ನು ಕರೆಯುವ ಪರಿ ಎಂಥ ಕಲ್ಲು ಮನಕ್ಕಾದರೂ ಕನಿಕರವನ್ನು ಹುಟ್ಟಿಸುತ್ತದೆ. "... ಓ ಎನ್ನ ಕಂದಾ, ನಾರಾಯಣ! ನೀನೆಲ್ಲಿರ್ಪಯ್! ಬಳಿಗೆ ಬಾರಯ್! ನಿನ್ನಜ್ಜಿಯನ್ ಸಂತವಿಡಯ್! ಎನಗಿನ್ನಾರಿರ್ಪರ್? ಎನಗೆ ನೀನೇ ಕಣ್! ನೀನೇ ಬಾಯ್! ನೀನೇ ಎರ್ದೆ! ನೀನೇ ಜೀವಂ! (ರೋಧಿಸುತ್ತಾಳೆ.) ಕಂದಾ ನಾರಾಯಣಾ! ನಾರಾಯಣಾ!" ಮುದುಕಿಯ ಈ ಮಾತುಗಳಿಂದ ಮಗನ ಅನಿವಾರ್ಯತೆ ಆಕೆಗೆ ಯಾವ ರೀತಿ ಇತ್ತು ಎಂಬುದು ತಿಳಿಯುತ್ತದೆ. ಇಳಿಯ ವಯಸ್ಸಿನಲ್ಲಿ ಎಲ್ಲದಕ್ಕೂ ಮಗನನ್ನೇ ಆಶ್ರಯಿಸಿದ ಅವಳಿಗೆ ಮಗನೇ ದೃಷ್ಟಿಯಾಗಿದ್ದ, ಸರ್ವಸ್ವವೂ ಆಗಿದ್ದ! ಅಂಥ ಮಗನನ್ನು ಯುದ್ಧದಲ್ಲಿ ಕಳೆದುಕೊಂಡವಳು ಅವನಿಗಾಗಿ ಹಲುಬುವುದು ಮನ ಕಲಕುತ್ತದೆ. ಇಂಥ ಅದೆಷ್ಟೋ ವೃದ್ಧರು ದುಃಖದ ಸಾಗರದಲ್ಲಿ ಮುಳುಗಲು ಯುದ್ಧಗಳು ಕಾರಣವಾಗುತ್ತವೆಂಬುದನ್ನು ತಿಳಿಸುವುದು ಕುವೆಂಪು ಅವರ ಇಂಗಿತವಾಗಿದೆ.

ಮಕ್ಕಳೆಂದರೆ ಮಕ್ಕಳೆ, ಅವರಲ್ಲಿ ಯಾವುದೇ ಭೇದವನ್ನು ತಾಯಿ ತಂದೆಯರು ಮಾಡುವುದಿಲ್ಲ. ಸಮಾಜದ ದೃಷ್ಟಿಯಲ್ಲಿ ಕೆಟ್ಟವರೆಂದು ಪರಿಗಣಿತರಾದರೂ ಹೆತ್ತವರಿಗೆ ಅವರು ಎಂದೆಂದಿಗೂ ಪ್ರೀತಿಪಾತ್ರರಾಗಿಯೇ ಇರುತ್ತಾರೆ. ನಾಟಕದ ನಾಲ್ಕನೆಯ ದೃಶ್ಯದಲ್ಲಿ ಗಾಂಧಾರಿ ತನ್ನ ಮಗ ದುರ್ಯೋಧನನ ಬಗೆಗೆ ಆಡುವ ಈ ಮಾತುಗಳು ಆಕೆಯ ಮನಃಸ್ಥಿತಿಯನ್ನು ಅರಿಯಲು ನೆರವಾಗುತ್ತವೆ. "... ಹಾ ಮಗನೇ, ನಿನ್ನ ನಾನ್

ಬಯ್ದುದನ್ ಮನ್ನಿಸಯ್, ಆರ್ಗೆ ನೀನೇನಾದರೇನ್! ಜನಕೆ ಪಾಪಿಯೋ? ಭೀಮಂಗೆ ಶತ್ರುವೋ? ಎನಗಂತುಂ, ಓ ಕಂದ, ಮುದ್ದು ಕುವರನ್!..." ದುರ್ಯೋಧನನನ್ನು ಇತರರು ನಿಂದಿಸಬಹುದು; ಅವನು ದುಷ್ಟನೆಂದು ದ್ವೇಷ ಕಾರಬಹುದು. ಆದರೆ ಅವನನ್ನು ಹೆತ್ತ ಗಾಂಧಾರಿಗೆ 'ಮುದ್ದು ಕುವರನೇ.' ಈ ಕಾರಣಕ್ಕಾಗಿಯೇ ನಮ್ಮ ಜನಪದರು 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂದು ಕರೆದಿರುವುದು.

ಹೆತ್ತವರು ಕಂಬನಿಯನ್ನು ಸುರಿಸುವುದು ಕರುಳ ಕುಡಿಯ ಸಂಬಂಧವು ಕಳಚಿತೆಂಬ ದುಃಖದಲ್ಲಿ. ಅದು ಶಾಶ್ವತವಾದ ನೋವನ್ನು ತಂದೊಡ್ಡುವುದು. ಆ ನೋವು ಅಷ್ಟು ಸುಲಭವಾಗಿ ಕಡಿಮೆಯಾಗುವುದಿಲ್ಲ. 'ಅಳುವರನ್ ಸಂತವಿಡೆ ಅಳಲುಕ್ಕಿ ಪರಿದಪುದು. ಅಳಲು ಕಂಬನಿಯಾಗಿ ಪರಿಯಲ್ಕಡುವೆ ಶಾಂತಿ. ಮಸಣದಲಿ ಒಣತತ್ವಗಳನೊರೆಯ ತರಮಲ್ತು! ಗೋಳಾಡುವರ ಕೂಡೆ ಗೋಳಾಡುವುದೇ ಲೇಸು! ಪಡೆದ ಬಸರಿನ ನೋವನಾರು ಸಂತೈಸುವರ್!' ಸಂಜಯನಾಡುವ ಈ ಮಾತು ಆರ್ತರ ಅಳಲ ಬಗೆಗೆ ಸ್ಪಷ್ಟ ವ್ಯಾಖ್ಯಾನದಂತಿದೆ. ಇಂಥ ಸೂಕ್ಷ್ಮಗಳನ್ನೆಲ್ಲಾ ಕುವೆಂಪು ಮನಮುಟ್ಟುವಂತೆ ಚಿತ್ರಿಸಿದ್ದಾರೆ. "ಕಂಬನಿಯ ಪೊಳೆಯೊಳೆ ತೇಲಿ ಪೋಗುವಂ ಬಾ! ಎಂಬ ಧೃತರಾಷ್ಟ್ರನಾಡುವ ಮಾತು. "ಕಂಬನಿಯ ಮುನ್ನೀರೊಳನಿಬರುಂ ಮುಳುಗಿರೆ ಆರನಾರ್ ಹಡಕೆಳೆದು ರಕ್ಷಿಪರ್?" ಎಂಬ ಸಖಿಯ ಸ್ವಗತ, ಇಲ್ಲೆಲ್ಲ ಯುದ್ಧ ವಿರೋಧಿ ಛಾಯೆಯೇ ಗೋಚರಿಸುತ್ತದೆ.

ನಾಟಕದಲ್ಲಿ ಬರುವ ಪ್ರತಿಯೊಂದು ಪಾತ್ರವೂ ಸಮಾಜಮುಖಿಯಾಗಿ, ಮಾನವೀಯ ಅನುಕಂಪವನ್ನು ಪ್ರತಿಪಾದಿಸುತ್ತ, ಆ ಮೂಲಕ ಸಂವೇದನಾಶೀಲ ಗುಣಗ್ರಾಹಿಯಾಗಿ ಕಂಡುಬರುತ್ತದೆ. ದುಃಖದಲ್ಲೂ ವಿವೇಕ ಮಿಂಚುತ್ತದೆ. ಕರುಣೆ ಕಡಲಾಗುತ್ತದೆ. ಯುದ್ಧದ ತರುವಾಯ ತನ್ನವರಾದ ಘಟೋತ್ಕಚ, ಅಭಿಮನ್ಯು ಮುಂತಾದವರನ್ನು ಅರಸುತ್ತ ಶ್ಮಶಾನಕ್ಕೆ ಬರುವ ಪಾಂಡವರು ಕಂಬನಿ ಮಿಡಿಯುವುದು ಕರುಣಾಜನಕವಾಗಿದೆ. "ಇದೆ ಎನ್ನ ಧರ್ಮಕ್ಕೆ ಪ್ರತಿಫಲಂ! ವಾಯುಸುತ, ನೋಡಿದೋ ನಿನ್ನ ಬಲ್ಮೆಯ ಕಿಚ್ಚು ಬೇಳ್ದಿರ್ಪ ದ್ವಾಪರ ಮಹಾಪುರುಷನುಪವನಂ!" ಎಂದು ಭೀಮನನ್ನು ಕುರಿತು ಧರ್ಮರಾಯನಾಡುವ ಮಾತು ವಿವೇಕಯುತವಾಗಿದೆ. ತಾನು ಧರ್ಮಪ್ರತಿಪಾದನೆ ಮಾಡಿ, ಯುದ್ಧವನ್ನು ತಪ್ಪಿಸಬೇಕೆಂದು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾಗಿ, ಯುದ್ಧ ನಡೆದು ಅಸಂಖ್ಯಾತ ಸಾವು ನೋವಿಗೆ ಕಾರಣವಾಗಿರುವುದಕ್ಕೆ ಧರ್ಮರಾಯನಿಗೆ ಮಹಾವೇದನೆಯಿದೆ. ಯುದ್ಧಕ್ಕೆ ಭೀಮನ ಪಾತ್ರವೂ ಇದೆ ಎಂಬುದನ್ನು ಗುರುತಿಸುವುದು ಯುದ್ಧ ವಿರೋಧಿ ಧೋರಣೆಯಾಗಿದೆ. ಅಣ್ಣನ ಮಾತನ್ನು ಕೇಳಿ ಕೆರಳುವ ಭೀಮನಿಂದ ವ್ಯಂಗ್ಯದ ನುಡಿಗಳು ಪ್ರತಿಕ್ರಿಯೆಯ ರೂಪದಲ್ಲಿ ಬರುತ್ತವೆ. ಆಗ ಅರ್ಜುನ 'ಕೊಲೆಯ ಮುನ್ನುಡಿಯೇಕೆ ಧರ್ಮ ಸಂಸ್ಥಾಪಕನೆಗೆ?ರಕ್ತರಣಧುನಿ ಹಾರಿಯದೆಯೆ ಧರ್ಮ ಬೂತಳಕೆ ಕಾಲಿಡದೆ?" ಎನ್ನುತ್ತಾನೆ. ಕುರುಕ್ಷೇತ್ರ ಯುದ್ಧದಲ್ಲಿ ಪ್ರಮುಖ ಪಾತ್ರವನ್ನು ವಹಿಸಿ, ವೀರಾಧಿವೀರರ ಸಾವಿಗೆ ಕಾರಣನಾದ ಅರ್ಜುನನ ಬಾಯಿಂದ ಇಂಥ ಮಾತುಗಳನ್ನು ಆಡಿಸುವ ಮೂಲಕ ಕುವೆಂಪು ಅವರು ಅರ್ಜುನನಂಥ ವೀರನಲ್ಲೂ ಯುದ್ಧವಿರೋಧಿ ನಿಲುವನ್ನು ಪ್ರಕಟಿಸಲು ಪ್ರಯತ್ನಿಸಿದ್ದಾರೆ. ಇದು ಒಂದು ಬಗೆಯಲ್ಲಿ ಪರಮನ ಪ್ರವೇಶ! ಯಾವುದೇ ವ್ಯಕ್ತಿ ಸದಾ ಕಾಲವೂ ಒಂದೇ ನೆಲೆಯಲ್ಲಿ ಚಿಂತಿಸಲಾರ. ಅವನಲ್ಲಿ ತಾನು ಆಲೋಚಿಸುವ ನೆಲೆಗಿಂತ ಭಿನ್ನ ಆಲೋಚನೆಗಳು, ಚಿಂತನೆಗಳು ಮೂಡಲು ಸಾಧ್ಯ. ತನ್ನ ತೋಳ್ಬಲದ ಕಿಚ್ಚಿಗೆ ಅಜ್ಜ ಭೀಷ್ಮ, ಗುರುದ್ರೋಣ, ಸಹೋದರ ಕರ್ಣರಂಥ ಅತಿರಥರನ್ನು ಅಹುತಿ ತೆಗೆದುಕೊಂಡಿದ್ದು ಅರ್ಜುನನ ಮನದಲ್ಲಿ ನೋವನ್ನು ಉಂಟುಮಾಡಿರಬೇಕು; ದುಃಖವನ್ನು ತಂದಿರಬಹುದು. ಇದು ಮಾನವನ ಸಹಜ ಗುಣ. ತಾನು ಮಾಡಿದ ತಪ್ಪನ್ನು ತನ್ನ ಮನದಲ್ಲಾದರೂ ಏಕಾಂತದಲ್ಲಿದ್ದಾಗ ಒಪ್ಪಿಕೊಳ್ಳಲು ಕೆಲವರಾದರೂ ಮನಸ್ಸು ಮಾಡುತ್ತಾರೆ. ಅರ್ಜುನನಲ್ಲೂ ಈ ಬಗೆಯ ಆಲೋಚನೆ ಮೂಡಿದ ಪರಿಣಾಮವಾಗಿ ಅವನಿಂದ ಮೇಲಿನ ಮಾತು ಪ್ರಕಟಗೊಂಡಿದೆ. ಇದು ಕುವೆಂಪು ಅವರ ಪ್ರತಿಭಾ ಸಂಪನ್ನತೆಗೆ ಹಿಡಿದ ಕನ್ನಡಿಯಂತಿದೆ.

ಪಾಂಡವರು ಶ್ಮಶಾನದಲ್ಲಿ ಸಂಚರಿಸುವಾಗ ಅನಾಮಧೇಯ ಸೈನಿಕನೊಬ್ಬ ನೀರಿಗಾಗಿ ಹಂಬಲಿಸುತ್ತಿರುವನು. ಆತನನ್ನು ನೋಡಿ ಭೀಮ ತಾತ್ಸರವನ್ನು ತೋರುತ್ತಾನೆ. ಧರ್ಮರಾಯ ಆಗ 'ಮನುಜನ್ ನರಳುತಿರೆ ಮನುಜನ್ ಸಂತವಿಸೆ ಮನುಜನ್ ದೇವನ್ ತಾನಾದಪನ್ ಇಲ್ಲದಿರೆ ಮನುಜನ್ ದನುಜನ್' ಎಂದು ಮಾನವೀಯ ಅನುಕಂಪವನ್ನು ಪ್ರಕಟಿಸಿ, ನೀರುತರಲು ಅರ್ಜುನನಿಗೆ ತಿಳಿಸುವನು. ಅಣ್ಣನ ಮಾತಿನಿಂದ ಸಿಟ್ಟುಗೊಳ್ಳುವ ಭೀಮನು, 'ಅಗ್ರಜಾ, ಮೊದಲ್ ಅವನಾರವನ್? ಕೇಳದನ್! ನಮ್ಮವನೋ? ಕೌರವನ ಪಡೆಯವನೋ?' ಎಂದು ಎಚ್ಚರಿಸಲು ಪ್ರಯತ್ನಿಸುವನು. ಧರ್ಮರಾಯ ಭೀಮನಿಗೆ 'ನೀನೀಗಳಾದೊಡಂ ವೈರಮಂ ಬಿಟ್ಟುಕಳೆ. ಮಸಣದೊಳ್ ಮರಣದೊಳ್ ಆರಾದಡಾರವರ್? ಎಲ್ಲರುಂ ಜವನವರ್! ನಮ್ಮವರ್ ನಿಮ್ಮವರ್ ಎಲ್ಲರುಂ ಅವನವರ್! ಇಂತಿರಲ್ ನೀನೇಕೆ ನಿಷ್ಕರುಣೆಯಿಂದಾಡುತಿಹೆ?" ಎಂದು ಭೀಮನ ದ್ವೇಷವನ್ನು ದೂರಮಾಡಲು ಪ್ರಯತ್ನಿಸುವನು.

ಕುರುಕ್ಷೇತ್ರದಲ್ಲಿ ಮಹಾಭಾರತ ಯುದ್ಧ ನಡೆಯಲು ಕೃಷ್ಣನ ಪ್ರಯತ್ನಶೀಲತೆಯ ವೈಫಲ್ಯ ಒಂದು ಕಾಣರವಾದರೆ, ಭೀಮ ಮತ್ತು ಅರ್ಜುನರು ತಮ್ಮ ಪರಾಕ್ರಮದ ಮೇಲೆ ಇಟ್ಟಿದ್ದ ಅಪಾರ ನಂಬಿಕೆ ಮತ್ತೊಂದು ಕಾರಣವಾಗಿ ಗೋಚರಿಸುವುದು. ಧರ್ಮರಾಯನ ವಿವೇಕಯುತ ನುಡಿಗಳು ಅವರಿಬ್ಬರಿಗೆ ರುಚಿಸುವುದೇ ಇಲ್ಲ. ಜೊತೆಗೆ ದ್ರೌಪದಿಯ ಕುಮ್ಮಕ್ಕು ಬೇರೆ.

ಒಂದು ಅರ್ಥದಲ್ಲಿ ದ್ರೌಪದಿಯೇ ಆ ಘನಘೋರ ಯುದ್ಧದ ಕೇಂದ್ರಬಿಂದು ಎಂದು ಹೇಳಿದರೂ ತಪ್ಪಲ್ಲ. ಈ ಮೂವರ ಅಭಿಮತದಲ್ಲಿ 'ಮುಳ್ಳನ್ನು ಮುಳ್ಳಿನಿಂದಲೇ ಕೀಳಬೇಕೆಂಬ' ಹಠವಿದೆ. ಇವರ ದೃಷ್ಟಿಯಲ್ಲಿ ದುರ್ಯೋಧನ ಕಾಲಿಗೆ ನಾಟಿರುವ ವಿಷಪೂರಿತ ಮುಳ್ಳು! ಇಂಥ ಮನೋಭಾವವೇ ಯುದ್ಧಕ್ಕೆ ಪ್ರಚೋದನೆಯನ್ನು ನೀಡಿತೆಂದು ಹೇಳಬಹುದು. ಇವರ ನಡುವೆ ಧರ್ಮರಾಯ ಅಸಹಾಯಕನಾದುದು ವಿಪರ್ಯಾಸ. ಕೃಷ್ಣನೂ ಧರ್ಮರಾಯನ ಮಾತಿಗೆ ತಂತ್ರಗಾರಿಕೆಯಿಂದಲೇ ಉತ್ತರವಿತ್ತು, 'ಯುದ್ಧವು ಅನಿವಾರ್ಯ ಸಂಕಟ' ಎಂಬುದನ್ನೂ ಮನವರಿಕೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಇಷ್ಟಾದರೂ ಧರ್ಮರಾಯನ ಮನಸ್ಸು ಯುದ್ಧ ವಿರೋಧಿ ನಿಲುವಿಗಾಗಿಯೇ ಸದಾ ಮಿಡಿಯುತ್ತಿರುತ್ತದೆ. ಅದರ ಪರಿಣಾಮವೇ ಅವನಾಡುವ ಮಾತುಗಳು:

**"ಕಟ್ಟಕಡೆಯೊಳ್ ಎಮಗೆ ಕರುಣೆಯೇ ಶರಣ್ಯಂ! ದಯೆ ಎಂಬುದಾ ಸಚ್ಚಿದಾನಂದಮಾಗಿರ್ಪನ ಮಾರ್ದೊಳಪಲ್ತೆ? ಅನುಜ, ನೀನರಿಯೆಯಾ; ಬಾನಿನಿಂ, ಮುಗಿಲ ಮನೆಯಿಂ, ಮೇಣ್ ಸಗ್ಗದಿಂ ಇಳಿದೈತರ್ಪ ಹೂವುಗಳ ಸೋನೆಮಳೆಯಂದದೊಳ್ ಕರುಣೆ ತಾಂ ಪೇರೆರ್ದೆಗಳಿಂದೊಯ್ಯ ನಿಳಿತಂದಪುದು. ರಾಜಕರವಾಳಕಿಂತಲುಂ ಕರ್ಕಶಂ ಕರುಣೆ, ಶತ್ರುಗಳ ನೊಲಿಸುವುದು ಮಿತ್ರರನ್ ಮಾಡಿ. ಭಗವಂತನೆರ್ದೆಗಿಂತಲುಂ ಕೋಮಲಂ ಕರುಣೆ, ಪರಮಾತ್ಮನೆರ್ದೆಯನೇ ಸೂರೆಗೊಂಡಪುದಲ್ತೆ? ಕೊಡುವವನ ಹರಸುವುದು ; ಕೊಳ್ಳುವವನ ಸಲಹುವುದು ; ಕರುಣೆಯೆಂಬೈಶ್ವರ್ಯಂ, ಅಳಿದೊಡಂ, ಉಳಿದೊಡಂ, ಪೋದೊಡಂ ಬಂದೊಡಂ, ಪಡೆದವನದಾವಗಂ ಶ್ರೀಮಂತನಾಗಿರ್ಪನ್! ಪಡೆದು ಕೊಡುವರ್ಗೆ ಅದು ಮುಕ್ತಿಗೆ ಮಹಾದ್ವಾರಂ; ಮೇಣೇಸಿಕೊಂಬರ್ಗೆ ಸ್ವರ್ಗಕ್ಕೆ ಸೋಪಾನಂ!"**

ಪರರ ಬಗ್ಗೆ ಅಕ್ಕರೆ ಇಲ್ಲದಿದ್ದರೆ ದ್ವೇಷ ತಂತಾನೆ ಮನದಲ್ಲಿ ಮೂಡುವುದು. ಅದು ಯಾವ ಮಟ್ಟಕ್ಕಾದರೂ ಹೋಗಬಹುದು. ಇತರರನ್ನು ಪ್ರೀತಿಯಿಂದ ಕಂಡರೆ ಸಮಸ್ಯೆಗಳು ಸಲೀಸಾಗಿ ಬಗೆಹರಿಯುವುದರಲ್ಲಿ ಸಂದೇಹವಿಲ್ಲ. ಧರ್ಮರಾಯನಾಡುವ ಮೇಲಿನ ಮಾತಿನಲ್ಲಿ ಈ ಭಾವವೇ ಪ್ರಧಾನವಾಗಿ ಹೊಮ್ಮಿದೆ. ಕರುಣೆಯಿಂದ ಶತ್ರುತ್ವ ದೂರವಾಗಿ ಮಿತ್ರತ್ವ ಮನೆಮಾಡುತ್ತದೆ. ಅದಕ್ಕಿರುವ ಶಕ್ತಿಯೆಂದರೆ ಭಗವಂತನ ಎದೆಗಿಂತಲೂ ಕೋಮಲ! ಪರಮಾತ್ಮನ ಹೃದಯವನ್ನು ಸೂರೆಮಾಡುವಷ್ಟು ಶಕ್ತಿ ಸಂಪನ್ನತೆ ಕರುಣೆಗೆ ಇರುವುದರಿಂದಲೇ ಅದನ್ನು ಪಡೆದವನು ಶ್ರೀಮಂತನಾಗಿರುತ್ತಾನೆ. ಕರುಣೆಯು ಮುಕ್ತಿಗೆ ಮಹಾದ್ವಾರವನ್ನು ತೆರೆದು ಸ್ವರ್ಗಕ್ಕೆ ಸೋಪಾನವನ್ನು ಹಾಸುತ್ತದೆ! ಇದಲ್ಲವೆ ಮಾನವೀಯ ಸಂವೇದನೆ. ಕುವೆಂಪು ಅವರ ಶಾಂತಿ ಮಂತ್ರ ನಾಟಕದ ಪ್ರತಿ ಪುಟದಲ್ಲೂ ಮೊಳಗುವುದು ವಿಶೇಷ.

ಪಾಂಡವರನ್ನು ಅಡಿಯಿಂದ ಮುಡಿಯವರೆಗೂ ದ್ವೇಷಿಸುವ ಕೌರವೇಶ್ವರನಾದ ದುರ್ಯೋಧನನದು ನಾಟಕದಲ್ಲಿ ವಿಶಿಷ್ಟ ಪಾತ್ರ. ತನ್ನ ನೆಚ್ಚಿನ ಗೆಳೆಯ ಕರ್ಣನ ಹೆಣದ ಜೊತೆಗೆ ತನ್ನನ್ನು ಚಿತೆಗೆ ಹಾಕಬೇಕೆಂದು ಅಶ್ವತ್ಥಾಮನನ್ನು ಕೇಳಿಕೊಳ್ಳುವ ದೃಶ್ಯ ಕಲ್ಲು ಮನಸ್ಸನ್ನು ಕರಗಿಸುವಂಥದ್ದು. ಸಮಸ್ತ ಪ್ರೀತಿ, ಕರುಣೆಯನ್ನು ಕರ್ಣನಿಗಾಗಿ ಮೀಸಲಿರಿಸಿದ್ದ ದುರ್ಯೋಧನ ಸಾವಿನಲ್ಲೂ ಸ್ನೇಹ- ಸಂಕೋಲೆಯನ್ನು ಬಿಗಿದುಕೊಳ್ಳಲು ಬಯಸುವುದು ಮಾನವತೆಗೆ ಅವನಲ್ಲಿದ್ದ ಬೆಲೆ ಎಷ್ಟೆಂಬುದರ ದ್ಯೋತಕವಾಗಿದೆ. ಕರ್ಣನನ್ನು ಈ ಪರಿಯಾಗಿ ಪ್ರೀತಿಸುವ, ವಿಶ್ವಾಸವನ್ನು ತೋರುವ, ನಂಬುವ ದುರ್ಯೋಧನ, ಪಾಂಡವರನ್ನು ಗೌರವದಿಂದ ಕಾಣಬಹುದಾಗಿತ್ತು ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಬಹುದು. ಪಾಂಡವ ಕೌರವರು ಎಳೆತನದಿಂದ ಒಟ್ಟಿಗೆ ಒಂದೇ ಅರಮನೆಯಲ್ಲಿ ಬೆಳೆದವರು. ಕೌರವರು ಸಂಖ್ಯೆಯಲ್ಲಿ ಅಧಿಕವಾಗಿದ್ದರಿಂದ ಒಂದು ಬಗೆಯ 'ಅಹಂ' ಇದ್ದುದು ಎದ್ದು ಕಾಣುವ ಅಂಶ. ಇದ್ದ ಐದು ಮಂದಿ ಪಾಂಡವರು ತಮ್ಮ ವ್ಯಕ್ತಿತ್ವ, ಚುರುಕುತನ, ಸಹನೆ, ಸೌಹಾರ್ದಗಳಿಂದ ಎಲ್ಲರ ಗಮನವನ್ನು ಸೆಳೆಯುತ್ತಿದ್ದರು. ಬೆಳೆಯುವ ಪೈರು ಮೊಳಕೆಯಲ್ಲಿ ಎಂಬಂತೆ ಅವರೀರ್ವರ ನಡುವೆ ದ್ವೇಷದ ಕಿಡಿ ಹೊತ್ತಿ, ಬೆಳೆದಂತೆಲ್ಲ ಅದರ ಜ್ವಾಲೆ ಪ್ರಖರವಾಗತೊಡಗಿತು. ಗುರುದ್ರೋಣರ ಬಳಿ ವಿದ್ಯೆ ಕಲಿಯುವಾಗ ಅದು ಸ್ಪಷ್ಟತೆಯನ್ನು ಕಂಡುಕೊಂಡು ಅಧಿಕಾರಕ್ಕಾಗಿ ಇಬ್ಬಣವು ಹಕ್ಕು ಪ್ರತಿಪಾದನೆಗೆ ಮುಂದಾದಾಗ ಹಿರಿಯ ಜೀವಗಳಿಗೆ ಧರ್ಮಸಂಕಟ ಪ್ರಾರಂಭವಾಯಿತು.

ಕೌರವನ ಹಟದ ಹಿಂದಿರುವ ಸತ್ಯವು ಆತನ ಕೆಲವು ಕೃತ್ಯಗಳ ಮೂಲಕ ಧರ್ಮಾಧರ್ಮದ ಕಡೆಗೆ ತಿರುಗಿ, ತಂದೆಯನ್ನು ಕಳೆದುಕೊಂಡು ಅನಾಥರಂತಾದ ಪಾಂಡವರ ಪರವಾಗಿ ಪ್ರಮುಖರು ನಿಲ್ಲುವಂತಾಯಿತು. ಇದು ಕೌರವನಲ್ಲಿ ದ್ವೇಷಕ್ಕೆ ದಾರಿ ಮಾಡಿಕೊಟ್ಟಿತು. ಹಗೆತನದ ತುತ್ತತುದಿಯಾಗಿ ಕುರುಕ್ಷೇತ್ರ ಯುದ್ಧವು ಸಂಭವಿಸುತ್ತದೆ. ತನ್ನವರೆಲ್ಲರನ್ನು ಕಳೆದುಕೊಂಡು ತಾನು ಸಾವಿನ ದವಡೆಗೆ ಸಿಲುಕಿರುವಾಗಲೂ ಅವನ ಛಲ, ಹಗೆತನ, ಸಿಟ್ಟು ಒಂದಿನಿತೂ ಕಡಿಮೆಯಾಗಿರಲಿಲ್ಲ. ಇದು ದುರ್ಯೋಧನ ವ್ಯಕ್ತಿತ್ವದ ವಿಶೇಷಣ. ಆದರೆ ಕರ್ಣನ ಬಗೆಗಿನ ಮಮಕಾರ ಮಾತ್ರ ಆ ಸಮಯದಲ್ಲೂ ಪ್ರಖರವಾಗಿರುವುದನ್ನು ನೋಡಿದರೆ ದುರ್ಯೋಧನ ಮೂಲತಃ ಕರುಣಾಮಯಿ ಎಂಬುದನ್ನು ಗುರುತಿಸಲು ಸಹಕಾರಿಯಾಗುತ್ತದೆ. ತೊಡೆಯೊಡೆದು ಹುಡಿಯಲ್ಲಿ ಹೊರಳಾಡುವಾಗಲೂ ತನ್ನ ಕಡೆಯವರು ಮಾಡಿದ ಮೋಸವನ್ನು ನೆನೆದು ಅವನು ಆಕ್ರೋಶಗೊಳ್ಳುತ್ತಾನೆ. **"ನಿಮ್ಮೆಲ್ಲರಂ ನಂಬಿ ಮೋಸವೋದೆನ್! ಓ ಪಿತಾಮಹ ಭೀಷ್ಮ, ಓ ಗುರುಡಿಯಾಚಾರ್ಯ, ನೀಮೆಲ್ಲರೆನ್ನ ಕಡೆಯವರಲ್ತೆ? ತನುವನೆನಗಿತ್ತು ಮನವನವರ್ಗಿತ್ತು ಜೋಳದ ಪಾಳಿಗೋಸುಗಮೆ ಎನ್ನ ಮೇಲಣಭಿಮಾನದಿಂದಲ್ತು, ನಾನ್ ಬಲ್ಲೆನದನ್ ಬರಿಯ ಜೋಳದ ಪಾಳಿಗೋಸುಗಮೆ ಎನ್ನ ಪಕ್ಷದಿ ನಿಂತು ತೋರ್ಕೆಗೆ ಪೊಣರ್ದಿರ್ದಿರಲ್ತೆ? ನೀಮೆಲ್ಲರೆರ್ದೆಮುಟ್ಟಿ, ಮನಮುಟ್ಟಿ ಕಾದಿರ್ದೊಡೆ ಎನಗಾಗುತಿರ್ದುದೇ**

ಈ ಪರಾಭವಂ, ಈ ಅಪಮಾನಂ, ಈ ಊರುಭಂಗಂ? ಪುಸಿನೆವಗಳೊದಗಲ್ ಒಡನೆಯೆ ಜಾರಿದಿರಿ! ಧರ್ಮದ ಮುಸುಂಗಂ ತೊಟ್ಟು ಕೈತವಂ ತೋರಿದಿರಿ!" ಎಂದು ತನಗಾದ ಸೋಲಿನ ವಿಮರ್ಶೆಗೆ ತೊಡಗುತ್ತಾನೆ. ಯುದ್ಧ ಘೋಷಣೆಗೂ ಮುನ್ನ ಈ ಕುರಿತು ಕೌರವೇಶ್ವರ ತುಸು ಯೋಚಿಸಿದ್ದರೂ ಯುದ್ಧವನ್ನು ನಿಲ್ಲಿಸಬಹುದಾಗಿತ್ತು.

ಮಹಾಭಾರತ ಯುದ್ಧವನ್ನು ಧರ್ಮಾಧರ್ಮಗಳ ನಡುವಿನ ಸಂಘರ್ಷ ಎಂದು ಪ್ರತಿಪಾದಿಸುವುದನ್ನು ಕುವೆಂಪು ಅವರ ದುರ್ಯೋಧನ ಒಪ್ಪಿಕೊಳ್ಳುವುದಿಲ್ಲ. **"ಧರ್ಮಂ! ಅಧರ್ಮಂ! ಧರ್ಮಿಗಳಾರ್? ಅಧರ್ಮಿಗಳಾರ್? ಆಹಾ, ಧರ್ಮಸಂಸ್ಥಾಪಕನಲ್ತೆ ಆ ಕೃಷ್ಣನ್!.. ನಾನಂತು ಅರಗುಲಿ ಇರ್ಕೆ, ಪಾಂಡವರೋ? ಅದಾವ ಧರ್ಮಮಂ ಪಿಡಿದರ್? ಮುದುಕನನ್ ಭೀಷ್ಮನಂ ಬೇಡಿ ಕೊಂದರ್ ; ಒಳಸಂಚುಗಳಂ ನಡೆಸಿ ಕಡೆಗಾಣ್ಬೆದರ್! ಎಮ್ಮೆಲ್ಲರ್ಗಮಾಚಾರ್ಯನ್, ಆ ದ್ರೋಣನನ್ನ ಛದ್ಮನೆಯಿಂದೆ ಪರಲೋಕಕಟ್ಟಿದರ್ ! ಕರ್ಣನನ್ – ಆ ಎನ್ನ ನೆಚ್ಚಿನ ಕರ್ಣನನ್, ಬರ್ದಿಲರುಂ ಪೂಜಿಸುವ ಆ ಸೂರ್ಯ ಪುತ್ರನನ್ ಕಂಡಂತೆ ಕಣ್ಣೆದುರೊಳೆ ಕೈತವದಿ ಕೊಂದರ್ ! ಎನ್ನುಮಂ ಮಲ್ಲಗಾಳೆಗಕೆ ತಗದ ರೀತಿಯೊಳೆ ತೊಡೆಯಂ ಪೊಯ್ದು ಕೆಡಪಿದರ್. ಇವರೆಲ್ಲರುಂ ಧರ್ಮಿಗಳ್? ನಾನೊರ್ವನ್ ಅಧರ್ಮಿ! ಇದೆಲ್ಲಂ ಆ ಕೃಷ್ಣನ ಕುಹಕಂ! ಕೈತವರ ಶಿಕ್ಷಾಗುರುವಲ್ತೆ ಆತನ್?"** ಎನ್ನುವ ಮೂಲಕ ಯುದ್ಧಕ್ಕೆ ಮೂಲ ಕಾರಣ ಕೃಷ್ಣ ಎಂಬುದನ್ನು ಪ್ರತಿಪಾದಿಸುವನು. ಜೊತೆಗೆ ಧರ್ಮ ಅಧರ್ಮದ ಜಿಜ್ಞಾಸೆಗೂ ತಾರ್ಕಿಕವಾಗಿ ತೊಡಗುವ ದುರ್ಯೋಧನ ಪಾಂಡವರೂ ಅಧರ್ಮಿಗಳೇ ಎಂಬುದನ್ನು ಸಾಬೀತು ಪಡಿಸುತ್ತಾರೆ. ಕೇವಲ ಏಕವ್ಯಕ್ತಿಯಿಂದ ಯುದ್ಧ ನಿಶ್ಚಯಗೊಳ್ಳುವುದಿಲ್ಲ. ಪಾಂಡವರ ಪಾತ್ರವೂ ಪ್ರಮುಖವಾದದ್ದೆ. ಆದರೆ ಕೌರವನನ್ನು ಮಾತ್ರ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವಲ್ಲಿ ಕೃಷ್ಣನ ತಂತ್ರಗಾರಿಕೆಯೇ ಪ್ರಧಾನ ಪಾತ್ರ ವಹಿಸುವುದೆಂದು ಆತ ಆಕ್ರೋಶ ವ್ಯಕ್ತಮಾಡುವುದನ್ನು ಗಮನಿಸಬಹುದು.

ಯುದ್ಧಗಳಲ್ಲಿ ಪುರುಷರು ನೇರವಾಗಿ ಭಾಗಿಯಾಗಿ ತಮ್ಮ ಪ್ರಾಣವನ್ನು ಕಳೆದುಕೊಂಡು ವೀರಸ್ವರ್ಗವನ್ನು ಪಡೆದರೆ, ಅವರ ಮರಣದ ಪರಿಣಾಮ ಬದುಕುಳಿರುವವರ ಮೇಲಾಗಿ, ಅವರು ನಿತ್ಯವೂ ಸಾಯುವ ಸ್ಥಿತಿ ನಿರ್ಮಾಣವಾಗುತ್ತದೆ. ವಿಶೇಷವಾಗಿ ಮಹಿಳೆಯರೇ ಇಂಥ ಸ್ಥಿತಿಗೆ ಗುರಿಯಾಗುವುದು ದುರಂತ. ಈ ನಾಟಕದಲ್ಲಿ ಬರುವ ಬಹುತೇಕ ಸ್ತ್ರೀ ಪಾತ್ರಗಳ ಅಳಲು ಒಂದೇ ಬಗೆಯಾಗಿರದೆ, ಪಾತ್ರದಿಂದ ಪಾತ್ರಕ್ಕೆ ಭಿನ್ನವಾಗುತ್ತಾ ಹೋಗುತ್ತದೆ. ಸಾಮಾನ್ಯ ಸೈನಿಕರ ಸಂಬಂಧಿಕರಿಗೆ ತಮ್ಮ ಬದುಕಿಗಿದ್ದ ಆಧಾರವು ಮುರಿದುಬಿದ್ದ ಅನುಭವವನ್ನು ತಂದೊಡ್ಡಿದರೆ, ರಾಜವಂಶದವರ ದುಃಖ ಅದಕ್ಕಿಂತ ಭಿನ್ನ ನೆಲೆಗೆ ಹೋಗುತ್ತದೆ. ಕುಂತಿಯ ದುಃಖ ಎಲ್ಲರಿಗಿಂತಲೂ ಭಿನ್ನವಾಗುತ್ತದೆ. ಸಹದೇವನೊಡನೆ ರಣಾಂಗಣಕ್ಕೆ ಆಗಮಿಸುವ ಕುಂತಿ ಕರ್ಣನ ಶವದ ಮೇಲೆ ಬಿದ್ದು **'ಅಯ್ಯೋ ಕಂದಯ್ಯ ಏನಾಗಿ ಪೋಗಿರ್ಪಯ್! ಹೆತ್ತು ಹೊಳೆಗಿತ್ತ ನಿನ್ನನ್ ಸತ್ತ ಸುಡುಗಾಡಿನೊಳ್ ಮತ್ತೆ ಮುದ್ದಿಪಂತಾಯ್ತೆ! ಕನ್ನೆತನದಾ ಲೀಲೆ ಕರ್ಣನನಿರಿವಂತಾಯ್ತೆ! ನಿನ್ನನೀ ಪಾಡಿಗೀಡುಮಾಡಿದ ಪಾಪಿಯನ್ ಮನ್ನಿಸೈ.. ಭಾರತಮನಿಂತು ಮಸಣಮಂ ಮಾಡಲೆಂದೇ ನಿನ್ನನ್ ನಾನ್ ಪೆತ್ತೆನಲ್ತೆ? ಓ ಎನ್ನದೆಯ ಮಗುವೆ, ಓ ಎನ್ನ ಬಯಕೆಗಿಡಿಯೆ, ಮರಳಿ ನೀನೆನ್ನ ಬಸಿರಿಂ ಬಾರೆಯಾ? ಪೇಳೈ! ಓ ಕಂದಾ, ನಿನ್ನ ಮಿತ್ರನ್ ಕೌರವೇಂದ್ರನಲ್ತು ನಾನೇ ಕಾರಣಮಲ್ತೆ ಈ ಮಾರಿಯೌತಣಕೆ, ಈ ಕುರುಕ್ಷೇತ್ರ ಸಮರದೀ ಮಾರಿಯೌತಣಕೆ?.... ಮಗೂ, ಮಗೂ, ನಾಂಗೈದ ಮೊದಲ ತಪ್ಪಿಗೆ ಬಿದಿ ನಿನ್ನನೇತರ್ಕೆ ಬೇಳ್ದುದಿಂತು? ಎನ್ನ ಪಾಪಕ್ಕೆ ನಿನ್ನ ಜೀವನಂ ಬಲಿಯಾಯ್ತೆ? ಅರಸುಗಳ ಬಳಿಯೊಳೆ ಬಂದ ನಿನ್ನನ್ ನಾನ್ ಸೂತ ಕುಲದೊಳ್ ತಿರುಗುವಂತೆಸಗಿದೆನ್; ಮನ್ನಿಸಯ್ ಅಪರಾಧಮಂ ಮನ್ನಿಸಯ್!"** ಎಂದು ರೋದಿಸುತ್ತಾಳೆ. ತನ್ನ ಇತರ ಸುತರಿಗೆ ಯುದ್ಧದಲ್ಲಿ ಗೆಲುವಾಗಿರುವಾಗ, ಕುಂತಿಯು ಆ ಗೆಲುವಿಗೆ ಸಂಭ್ರಮಿಸದೆ ತನ್ನ ಮೊದಲ ಮಗನಾದ ಕರ್ಣನ ಮರಣಕ್ಕೆ ತಾನೇ ಕಾರಣವೆಂದು ಪಶ್ಚಾತ್ತಾಪ ಪಡುವ, ತನ್ನನ್ನು 'ಪಾಪಿ' ಎಂದು ಹಳಿದುಕೊಳ್ಳುವುದು ಆತ್ಮವಿಮರ್ಶೆಯ ಉತ್ತುಂಗ ಸ್ಥಿತಿ ಎಂದು ಹೇಳಬಹುದು. ಶ್ಮಶಾನ ಕುರುಕ್ಷೇತ್ರ ನಾಟಕದಲ್ಲಿ ಇಂಥ ಹಲವಾರು ಸನ್ನಿವೇಶಗಳು ಸೃಷ್ಟಿಯಾಗಿವೆ. ಕುಂತಿಯ ಅಳಲು ಕೇವಲ ಒಬ್ಬ ಮಾತೆಯದಾಗಿರದೆ, ಯುದ್ಧವನ್ನು ವಿರೋಧಿಸುವ ಎಲ್ಲ ತಾಯಂದಿರ ದುಃಖವಾಗಿ ಪಡಿಮಾಡುತ್ತದೆ. ಕುಂತಿಯ ಮಾತುಗಳನ್ನು ಕುವೆಂಪು ಅವರು ಶಕ್ತಿಯುತವಾಗಿ ಮಾಡಿರುವುದಷ್ಟೇ ಅಲ್ಲದೆ, ವಿವೇಚನಾಯುತವಾಗಿರುವಂತೆಯೂ ನೋಡಿಕೊಂಡಿದ್ದಾರೆ. ತಾನು ಮಾಡಿದ ತಪ್ಪಿನಿಂದಾಗಿ ತನ್ನ ಮಗನ ಅವಸಾನವಾಯಿತು. ತನ್ನದು ಅಕ್ಷಮ್ಯ ಅಪರಾಧ ಎಂಬ ಪಾಪಪ್ರಜ್ಞೆ ಕುಂತಿಯಲ್ಲಿ ಜಾಗೃತವಾಯಿತು. ಜೊತೆಗೆ ಮಹಾಭಾರತ ಯುದ್ಧಕ್ಕೆ ತಾನೇ ಕಾರಣಳಾದೆ. ದುರ್ಯೋಧನನಲ್ಲ ಎನ್ನುವಲ್ಲಿ ತನ್ನದಲ್ಲದ ತಪ್ಪನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ತಾಯಿಯಾಗಿ ಕುಂತಿ ತನ್ನ ಮಕ್ಕಳಾದ ಪಾಂಡವರನ್ನು ತಡೆದು, ಯುದ್ಧಕ್ಕೆ ವಿಮುಖರಾಗುವಂತೆ ಮಾಡಬಹುದಾಗಿತ್ತಲ್ಲವೆ? ಎಂಬ ಪ್ರಶ್ನೆ ಎದುರಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಇರಬೇಕು ಕುವೆಂಪು ಅವರು ಕುಂತಿಯ ಅಸಹಾಯಕತೆಯನ್ನು ಅಭಿವ್ಯಕ್ತಿಸುವ ಸಲುವಾಗಿ ಇಂಥ ವಾಕ್ ಸರಣಿಯನ್ನು ಪೋಣಿಸಿರಬೇಕು ಎನಿಸುತ್ತದೆ.

ಕುಂತಿಯ ಉಮ್ಮಳವು ಮಿಂಚಿ ಮಾಯವಾಗುವುದಿಲ್ಲ. ಜೀವನದಿಯಂತೆ ನಿರರ್ಗಳವಾಗಿ ಹರಿಯುತ್ತಲೇ ಇರುವ ಕ್ರಿಯೆಯಾಗಿ ರೂಪುಗೊಳ್ಳುತ್ತದೆ. ಯುದ್ಧದ ಅಂತ್ಯದ ಅರಿವಿಲ್ಲದ ಆಕೆಯಲ್ಲಿ ಮಗನ ಮರಣವು ಅವನ ಜೀವನ ವೃತ್ತಾಂತದ ಸುರುಳಿ ಬಿಚ್ಚಿಕೊಳ್ಳಲು ಕಾರಣವಾಗುತ್ತದೆ. ಹಸ್ತಿನಾವತಿಯಲ್ಲಿ ಪಾಂಡವರು ಕೌರವರ ಬಿಲ್ವಿದ್ಯೆಯ ಪ್ರದರ್ಶನವಿದ್ದಾಗ, ಕರ್ಣನೂ ತನ್ನ ಕೈಚಳಕವನ್ನು ತೋರಲು ಮುಂದಾದಾಗ, ಆತನನ್ನು ಸೂತಪುತ್ರನೆಂದು ರಾಜಪುತ್ರರು

ಹಿಂಗಿಸಿದಾಗ ಮನನೊಂದುದು, ಜನರ ಅಪವಾದಕ್ಕೆ ಗುರಿಯಾಗಬೇಕಾಗುವುದೆಂದು ಕುಂತಿ ಮೌನವಹಿಸಿದ್ದು,ಕೃಷ್ಣನ ಮಾತನ್ನು ಕೇಳಿ 'ತೊಟ್ಟ ಬಾಣವನ್ನು ತೊಡಬೇಡ' ಎಂದು ಕರ್ಣನಿಂದ ಭಾಷೆ ತೆಗೆದುಕೊಂಡಿದ್ದು ಒಂದೊಂದಾಗಿ ಆಕೆಗೆ ನೆನಪಿಗೆ ಬರುತ್ತವೆ. ಇಲ್ಲಿ ಮುಗ್ಧ ತಾಯಿಯನ್ನು, ಆಕೆಯ ಅಷ್ಟೇ ಮುಗ್ಧ ಮಗನನ್ನು ನೋಡುತ್ತೇವೆ. ಮುಗ್ಧರನ್ನು ಬಲಿತೆಗೆದುಕೊಳ್ಳುವವರ ವಿರುದ್ಧ ಕ್ರೋಧವನ್ನು ಕುಂತಿ ವ್ಯಕ್ತಮಾಡುವುದಿಲ್ಲ. ಬದಲಾಗಿ ತನ್ನನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿಕೊಳ್ಳುತ್ತಾಳೆ. **"ನನ್ನ ಮಗುವನ್ ನಾನೆ ಮಿಳ್ತುವೀಡು ಮಾಡಿದೆನ್! ಓ ಬಿದಿಯೆ ಸುಡು ಎನ್ನ ತಾಯ್ತನಮಂ!'** ಎಂದು ತನ್ನನ್ನು ತಾನೇ ಹಳಿದುಕೊಳ್ಳುವಳು. ತಾನು ಮೋಸಕ್ಕೆ ಬಲಿಯಾದೆನೆಂಬ ಪ್ರಜ್ಞೆ ಕುಂತಿಯಲ್ಲಿ ಜಾಗೃತವಾಗುತ್ತದೆ. ಅದರ ಪರಿಣಾಮವಾಗಿಯೇ ಈ ಮಾತುಗಳು ಹೊಮ್ಮುತ್ತವೆ. **"ಮಗನೇ, ಅರಿಯದಬಲೆಯರನೆಲ್ಲರುಂ ಇಂತು ವಂಚಿಸಿದರಲ್ತೆ! ನಿನ್ನನ್ ಕೊಂದರಲ್ತೆ? ನೀನುಂ ಇಂತೆನ್ನಂ ವಂಚಿಸಿಪೋದಯ್?"** ಎಂಬಲ್ಲಿ ಹೆತ್ತ ಕರುಳಿನ ಸಂಕಟವು ಮೇರೆಮೀರುತ್ತದೆ.

ಕುವೆಂಪು ಅವರು ನಾಟಕದ ಪ್ರತಿ ಪಾತ್ರವೂ ಆತ್ಮವಿಮರ್ಶೆ ಮಾಡಿಕೊಳ್ಳುವಂತೆ ಚಿತ್ರಿಸಿರುವುದು ಅವರ ಸೃಜನ ಕ್ರಿಯೆಗೆ ದಟ್ಟ ನಿದರ್ಶನವಾಗಿದೆ. ಕುರುಕ್ಷೇತ್ರ ಯುದ್ಧದಲ್ಲಿ ವಿಜಯಿಗಳಾದರೂ ಪಾಂಡವರು ದುಃಖಿತರಾಗಿದ್ದಾರೆ. ಪಾಂಡವರ ಕಡೆಯುವರೂ ಯುದ್ಧದಲ್ಲಿ ಮಡಿದಿರುವುದು ಅವರ ಅಳಲಿಗೆ ಕಾರಣ. ಅರ್ಜುನನ ಮಗ ಅಭಿಮನ್ಯು, ಭೀಮನ ಮಗ ಘಟೋತ್ಕಚ ಮೊದಲಾದವರ ಚಿತೆಯ ಮುಂದೆ ನಿಂತಿರುವ ಭೀಮ **"ಅಣ್ಣಾ, ಕೊಲೆಗಾರನ್ ಆನ್ ಎಂಬುದನ್ ಈಗಳರಿತೆನ್. ಈ ಎನ್ನ ಮುದ್ದು ಶಿಶುಗಳ ಪೆಣಗಳೆಡೆ ನಿಂತು ಗಾಂಧಾರಿ ಧೃತರಾಷ್ಟ್ರರಳಲಾಳಮಂ ತಿಳಿದೆನ್"** ಎನ್ನುವನು. ಹೌದು, ಇತರರು ದುಃಖದಲ್ಲಿರುವುದನ್ನು ಕಂಡು ಮರುಕ ಹುಟ್ಟಿದರೆ ಅದು ಕೇವಲ ತೋರಿಕೆಯ ದುಃಖವಾಗುವುದು. ಸ್ವತಃ ತನಗೆ ಆಗುವ ಆಘಾತದಿಂದ ಉಂಟಾಗುವ ವೇದನೆಯ ಅಳಲು ಪ್ರತಿಯೊಬ್ಬ ವ್ಯಕ್ತಿಗೆ ಆಗದಿರದು. ಅಂತೆಯೇ ಭೀಮ, ತನ್ನ ಒಬ್ಬ ಮಗನನ್ನು ಕಳೆದುಕೊಂಡು ಇಷ್ಟು ದುಃಖಿತನಾಗಿದ್ದಾನೆ. ನೂರು ಮಂದಿ ಮಕ್ಕಳನ್ನು ಕುರುಕ್ಷೇತ್ರದಲ್ಲಿ ಕಳೆದುಕೊಂಡು ಅನಾಥರಾಗಿರುವ ಗಾಂಧಾರಿ –ಧೃತರಾಷ್ಟ್ರರ ದುಃಖವು ಇನ್ನೆಷ್ಟಿರಬೇಕು. ಇಲ್ಲೇ ಮಾನವೀಯ ಅನುಕಂಪವು ಗರಿಗೆದರುವುದು. ಯುದ್ಧದ ಭೀಕರ ಪರಿಣಾಮದಿಂದ ಉದ್ಭವಗೊಂಡಿರುವ ಸಂಕಟದ ಸ್ಥಿತಿಯು ಮರುಕ ಪಡುವುದರಲ್ಲಿ ಶಮನವಾಗುವುದೆಂದು ಸೂಚ್ಯವಾಗಿ ಕುವೆಂಪು ತಿಳಿಸುತ್ತಾರೆ. ಆ ಸಂದರ್ಭದಲ್ಲಿ ಧರ್ಮರಾಯನಾಡುವ ಮುಂದಿನ ಮಾತುಗಳು ಯುದ್ಧಕ್ಕೆ ಕಾರಣವಾಗುವ ಸಂಗತಿಗಳ ಕುರಿತ ವಿವೇಚನೆಯಂತಿವೆ. **"ಬೀರರಾದೊಡಮೇನ್? ಸ್ಥಿಪ್ರಜ್ಞರಲ್ಲದೀ ಮಾನವರ್ ಕೋಪಮನೆ ಕೆಚ್ಚೆಂದು ಭ್ರಮಿಸುವರ್. ಕೋಪಂ ಬತ್ತದೊಡನೆ ಕೆಚ್ಚು ಕರಗುವುದು. ಕೋಪಮೆಂಬಾ ಮದ್ಯಪಾನಮಿಲ್ಲದೆ ಇವರ್ ಕೊಲೆಗೆ ಕೈಯಿಡಲರಿದು!"** ಕೋಪದಿಂದ ಆಕ್ರೋಶ, ಆಕ್ರೋಶದಿಂದ ಆವೇಶ, ಆವೇಶದಿಂದ ಅವಿವೇಕದ ತೀರ್ಮಾನ, ಅಂತಿಮವಾಗಿ ಸಹಸ್ರ ಜನರ ಮಾರಣ ಹೋಮ ನಡೆಯುವುದು! ಮಾನವೀಯ ಸಂಬಂಧವನ್ನು ಗಟ್ಟಿಗೊಳಿಸದಿದ್ದರೆ ಎಲ್ಲರೊಡನೆಯೂ ದ್ವೇಷವೇ ತಾಂಡವವಾಡುವುದು. ಆಗ ವ್ಯಕ್ತಿ ತಾನು ಹಾಳಾಗುವುದಲ್ಲದೆ ಅಮಾಯಕರ ಜೀವದೊಡನೆಯೂ ಚೆಲ್ಲಾಟವಾಡುವಂತೆ ಯುದ್ಧಗಳಲ್ಲಿ ತೊಡಗುತ್ತಾನೆ. ಪ್ರೀತಿಯಿದ್ದೆಡೆ ದ್ವೇಷಕ್ಕೆ ಅವಕಾಶವಿರದು. ಪ್ರೀತಿಯ ಕೊರತೆಯೇ ಯುದ್ಧದ ಮೂಲ ಎಂಬುದು ವೇದ್ಯವಾಗುತ್ತದೆ.

ಪಾಂಡವರಲ್ಲಿದ್ದಲ್ಲಿಗೆ ಕುಂತಿ, ಸಹದೇವರು ಕರ್ಣನ ಶವವನ್ನು ಹೊತ್ತು ತರುತ್ತಾರೆ. ಕುಂತಿ ತನ್ನ ಸುತರಿಗೆ ಕರ್ಣನ ಶವವನ್ನು ಸಂಸ್ಕಾರ ಮಾಡುವಂತೆ ವಿನಂತಿಸುತ್ತಾಳೆ. ಆಗ ಭೀಮ ಆಕ್ರೋಶಗೊಂಡು **"ಏಂ ಮಾಳ್ಕೆಯಿದು ತಾಯೆ? ಎಮ್ಮ ಕುಲಘಾತುಕನ್ ಈತನನ್ ನಾವುರಿಪುವುದೇ? ನೋಡು, ನೋಡಿದನ್; ಇವನೆ ಕೊಲೆಗೈದಿರ್ಪ ಅಭಿಮನ್ಯು ಘಟೋತ್ಕಚನ್"** ಎನ್ನುವನು. ಅರ್ಜುನನೂ ತಾಯಿಯ ಆಸೆಯನ್ನು ವಿರೋಧಿಸುವನು. ಕುಂತಿಯ ಮೊರೆ ಮಕ್ಕಳ ಮುಂದೆ ಹೀಗೆ ಮೊಳಗುತ್ತದೆ. **"ಓ ಎನ್ನ ಕಂದಗಳಿರಾ! ಕೈ ಮುಗಿದು ಬೇಡುವೆನ್ ಸೆರಗೊಡ್ಡಿ ಬೇಡುವೆನ್.. ಎನ್ನಾಸೆಯಂ ಸಲಿಸಿಂ! ನಾನ್ ನಿಮಗೆ ತಾಯಿ ಅಹುದಾದೊಡೆ–"** ಮಕ್ಕಳನ್ನು ಮಾತೆ ಹೀಗೆ ಅಂಗಲಾಚಿ ಬೇಡುವುದು, ತಾಯಿಯ ಮಮತೆಯ ಕಾರಣದಿಂದ. ತನ್ನ ಮಗನ ಶವಸಂಸ್ಕಾರವನ್ನು ತನ್ನವರೇ ಮಾಡಬೇಕೆಂದು ಬಯಸುವುದರಲ್ಲಿ ವಾಸ್ತವತೆ ಇದೆ ಎಂದು ತೋರಿದರೂ, ಬದುಕಿದ್ದಾಗ ಅವನಿಂದ ಭಾಷೆಯನ್ನು ಪಡೆದು ಸಾವಿಗೆ ಕಾರಣಳಾದವಳು ಸತ್ತ ನಂತರ ಸಂಕಟ ಪಡುವುದು ಉಚಿತವೇ? ಎಂಬ ಪ್ರಶ್ನೆಗೆ ಗ್ರಾಸವಾಗುತ್ತದೆ. ಆದರೆ ಇಂಥ ಪ್ರಶ್ನೆಗಳು ತಾರ್ಕಿಕವಾಗಿ ಸಮಂಜಸವೆನಿಸಿದರೂ ವಾಸ್ತವವಾಗಿ ಕುಂತಿ ಮೋಸ ಹೋದ ಹೆಣ್ಣು ಎಂದು ಹೇಳಬಹುದು. ತನ್ನ ಆಸೆಯನ್ನು ಈಡೇರಿಸಿಕೊಳ್ಳಲು ಕುಂತಿ ಪ್ರಯತ್ನವನ್ನು ಮುಂದುವರಿಸುತ್ತಿರುವಾಗಲೇ ಅಶ್ವತ್ಥಾಮ ಬಂದು, ದುರ್ಯೋಧನನ ಕೊನೆಯ ಆಸೆಯಂತೆ ಕರ್ಣನ ಶವವನ್ನು ಕೌರವನ ಶವದೊಡನೆ ಸಂಸ್ಕಾರ ಮಾಡಬೇಕೆಂದು ಹೇಳಿದಾಗ, ಭೀಮನು **'ಅಶ್ವತ್ಥಾಮ, ಕರ್ಣನನ್ ಕೊಂಡು ಪೋಗಯ್, ನೀನಿವಂಗೆ ಸಂಸ್ಕಾರಂ ಎಸಗುವುದೆ ಧರ್ಮಂ!'** ಎಂದು ತಿಳಿಸುವನು. ಅಶ್ವತ್ಥಾಮನನ್ನು ಕುಂತಿ, ತನ್ನ ಬಯಕೆಗೆ ಅಡ್ಡಬರಬೇಡ ಎಂದು ಕೇಳಿಕೊಳ್ಳುತ್ತಾಳೆ. ಆದರೂ ಅಶ್ವತ್ಥಾಮ ಕರ್ಣನ ಶವನ್ನು ಹೊತ್ತು ಹೋಗುವನು. ಆಗ ಕುಂತಿಯ ಸಹನೆಯ ಕಟ್ಟೆ ಒಡೆಯುತ್ತದೆ. **"ಓ ಕಂದಾ, ಓ ಕರ್ಣ, ನಿನ್ನನಿದಕಾಗೆಯೇ ಪೆತ್ತೆನೇನ್?"** ಎಂದು ನೆಲದ ಮೇಲೆ ಬಿದ್ದು ಗೋಳಾಡುವಳು. ತಾಯಿಯ ಈ ಮಾತಿನಿಂದ ವಿಚಲಿತರಾದ ಪಾಂಡವರು ಸಹದೇವನನ್ನು ಪ್ರಶ್ನಿಸುವರು. "ತಾಯಿಯೊಡಲೊಳೆ ಬಂದ ರಾಧೇಯನೆಮಗೆಲ್ಲ

ಪಿರಿಯಣ್ಣನ್!" ಎಂಬ ಸತ್ಯವನ್ನು ತಿಳಿಸುತ್ತಿದ್ದಂತೆ ಭೀಮ, ಧರ್ಮರಾಯ ದುಃಖಿತರಾಗುವರು. ಅರ್ಜುನ 'ಅಯ್ಯೋ ಏನಾದುದು ಕಡೆಗೆ?" ಎಂದಳುವನು. ಭೀಮನ "ಕಡೆಗುಂ ಪೊಲಸಾದುದೀ ಭಾರತ ಸಂಗ್ರಾಮಂ!" ಎಂಬ ನುಡಿ ಯುದ್ಧವು ಹೇಸಿಗೆಯನ್ನು ಸೃಷ್ಟಿಸುತ್ತದೆ ಎಂಬುದನ್ನು ಧ್ವನಿಸುತ್ತದೆ. "ಓ ಎನ್ನ ಕಂದಾ, ಓ ಕರ್ಣ, ಈಗಳಿವರೆಲ್ಲರುಂ ನಿನ್ನವರೆ, ನಾನೇ ಪಾಪಿ ಪರಕೀಯಳಾದೆನಲ್ತೆ? ಲೋಕಮಿವರಾರನುಂ ನಿಂದಿಸದು, ಎನ್ನನೋ, ಮಗನ ಕೊಲೆಯಂ ಗೈದ ಕುಡಪಾಪಿ ಎಂದು ಪೇಸುವುದು!" ಎಂಬ ಕುಂತಿಯ ನುಡಿಗಳು ಮತ್ತೆ ಮತ್ತೆ ಅನುರಣಿಸುತ್ತವೆ. ತಾಯಿಯಾದವಳ ದುಃಖವು ಅನವರತವೂ ವೇದನೆಯನ್ನುಂಟುಮಾಡುವ ವ್ರಣದಂತೆ. ನೆನೆದಾಗಲೆಲ್ಲ ಕಣ್ಣೀರ ಕೋಡಿಯು ಹರಿಯುವಂತೆ ಮಾಡುತ್ತದೆ. ಕುಂತಿಯ ಸ್ಥಿತಿಯು ಈ ಬಗೆಯದಾಗಿದೆ ಎಂದು ಅರ್ಥವಾಗುತ್ತದೆ.

ಎಂಟನೆಯ ದೃಶ್ಯದಲ್ಲಿ ಕಾಣಿಸಿಕೊಳ್ಳುವ ಮುದುಕಿಯ ಮಾತು ಬಹುಬಗೆಯಲ್ಲಿ ಗಮನ ಸೆಳೆಯುತ್ತದೆ. ಯುದ್ಧದಲ್ಲಿ ಮಗನನ್ನು ಕಳೆದುಕೊಂಡಿರುವ ಆಕೆಯನ್ನು ಈಗ ಕೇಳುವವರೇ ಇಲ್ಲ. ಮೊದಲಾದರೆ ಮಗನಾದ ನಾರಾಯಣನ ಕಾರಣದಿಂದ ಎಲ್ಲರೂ ಆಕೆಯನ್ನು ಮಾತನಾಡಿಸುತ್ತಿದ್ದರು. ನಾರಾಯಣನನ್ನು ಕೇಳುತ್ತಿದ್ದರು. ಅವನು ಗತಿಸಿದ ಬಳಿಕ ಕಣ್ಣೆತ್ತಿಯೂ ನೋಡುವುದಿಲ್ಲ! ಈ ಬಗೆಯ ವ್ಯತ್ಯಾಸವನ್ನು ಗಮನಿಸುವ ಆಕೆ 'ಮಕ್ಕಳಿಲ್ಲದ ಮುದುಕರನ್ ಕೇಳ್ವರಾರ್?' ಎಂದು ದುಃಖಿಸುತ್ತಾಳೆ. ನಾರಾಯಣ ಬದುಕಿದ್ದಾಗ ಎಲ್ಲರಿಗೂ ಅಜ್ಜಿಯು ಪ್ರೀತಿ ಪಾತ್ರಳಾಗಿದ್ದಳು. ಅವನು ವೀರಯೋಧನೆಂದು ತಿಳಿದು ದೊರೆಯ ಸೇನಾಧಿಕಾರಿಗಳು ಅಜ್ಜಿಯ ಬಳಿಗೆ ಬಂದು ನೂರಾರು ಸವಿಮಾತುಗಳಿಂದ ಬಗೆ ಬಗೆಯ ಆಮಿಷಗಳನ್ನು ಒಡ್ಡಿದರು. ದೇಶಾಭಿಮಾನ, ಸ್ವಾಮಿನಿಷ್ಠೆ, ಧರ್ಮನಿಷ್ಠೆ, ಕ್ಷೇತ್ರಧರ್ಮ ಮುಂತಾದ ಅನುಕೂಲಸಿಂಧು ಉಪಾಯ, ವೇದಾಂತಗಳನ್ನು ಹೇಳಿ ನಾರಾಯಣನನ್ನು ಸೈನ್ಯಕ್ಕೆ ಸೇರಿಸಿಕೊಂಡರು. ಅವರ ಮಾತಿಗೆ ಮರುಳಾಗಿ ನಾನು ನಿನ್ನನ್ನು ಸೇನೆಗೆ ಕಳುಹಿಸಿಕೊಟ್ಟೆ. ಈಗ ಯಾರೂ ನನ್ನ ಬಳಿ ಸುಳಿಯುತ್ತಿಲ್ಲ. ಅವರಾಡಿದ ಒಂದೊಂದು ಮಾತು ಹಸಿಸುಳ್ಳು! ಅವರಾಡಿದ ತತ್ವಗಳಾಗಲಿ, ಆ ಅಧಿಕಾರಿಗಳಾಗಲಿ ಇಂದು ಕಣ್ಣು ಮುಂದೆ ಕಾಣುತ್ತಿಲ್ಲ. ಅರಿಯದವರನ್ನು ಬುದ್ಧಿವಂತರು ಮರುಳು ಮಾಡುವ ತಂತ್ರವಿದು. ನಮ್ಮಂಥ ದರಿದ್ರರು ಶ್ರೀಮಂತರ ಕಲಹಾಗ್ನಿಗೆ ಯಜ್ಞಪಶುಗಳಂತೆ ಬಲಿಯಾಗುತ್ತೇವೆ ಎಂದು ಚಿಂತಿಸುತ್ತಾಳೆ. ಯುದ್ಧಗಳಲ್ಲಿ ಪ್ರಮುಖ ಪಾತ್ರವಹಿಸಿ ಹೋರಾಟ ಮಾಡುವವರೆಲ್ಲ ಸಾಮಾನ್ಯವಾಗಿ ಬಡವರು. ಅವರನ್ನು ಬೇರೆ ಬೇರೆ ಆಮಿಷಗಳಿಂದ ಮಾನಸಿಕವಾಗಿ ಶೋಷಣೆ ಮಾಡುವ ತಂತ್ರ ಪ್ರಾಚೀನ ಕಾಲದಲ್ಲಿ ಸಾಮಾನ್ಯ ಸಂಗತಿಯಾಗಿತ್ತು. ರಾಜನನ್ನು ಪ್ರತ್ಯಕ್ಷ ದೇವರೆಂದು ಬಿಂಬಿಸಿ, ಅವನ ಸೇವೆ ಮಾಡುವುದು, ಅವನಿಗಾಗಿ ಸಾಯುವುದು ಪ್ರತಿ ಪ್ರಜೆಯ ಪರಮ ಕರ್ತವ್ಯ ಎಂದು ನಂಬಿಸಲಾಗುತ್ತಿತ್ತು.

'ಜಿತೇನ ಲಭತೇ ಲಕ್ಷ್ಮಿ ಮೃತೇನಾಪಿ ಸುರಾಂಗನಾ ಕ್ಷಣ ವಿಧ್ವಂಸಿನಿ ಕಾಯೆ ಕಾ ಚಿಂತೇ ಮರಣೇ ರಣೇ' ಎಂಬ ಮಾತು ರಾಜಪ್ರಭುತ್ವದ ಕಾಲದಲ್ಲಿ ಸಮಾನ್ಯವಾಗಿ ಕೇಳಿ ಬರುತ್ತಿತ್ತು. ಸಂಸ್ಕೃತದಲ್ಲಿರುವ ಈ ಶ್ಲೋಕದ ಅರ್ಥವೇನೆಂದರೆ, "ರಾಜನು ಯುದ್ಧದಲ್ಲಿ ಗೆದ್ದರೆ ಸೈನಿಕನಾದ ನಿನಗೆ ಹಣ ದೊರೆಯುತ್ತದೆ. ಒಂದು ವೇಳೆ ಯುದ್ಧಭೂಮಿಯಲ್ಲಿ ವೀರಸ್ವರ್ಗವನ್ನು ಪಡೆದರೆ, ದೇವಕನ್ಯೆಯರು ಸ್ವರ್ಗದಲ್ಲಿ ನಿನಗೆ ಸೇವೆಯನ್ನು ಮಾಡುವರು. ನೀನು ಯುದ್ಧ ಮಾಡಿ ಬದುಕಿದರೂ ಲಾಭ; ಸತ್ತರೂ ಸ್ವರ್ಗಸುಖ. ಹೀಗಿರುವಾಗ ಕ್ಷಣಮಾತ್ರದಲ್ಲಿ ಧ್ವಂಸವಾಗುವ ಈ ಶರೀರದ ಮೇಲೆ ವ್ಯಾಮೋಹವನ್ನು ಹೊಂದಿ, ಯುದ್ಧದಲ್ಲಿ ಸಾಯಲು ಚಿಂತೆ ಮಾಡಬೇಡ." ಎಂಬುದಾಗಿ ಸೈನಿಕರನ್ನು, ಬಡವರನ್ನು ನಂಬಿಸಲಾಗುತ್ತಿತ್ತು. ಏನೂ ಅರಿಯದ ಮುಗ್ಧ ಜನ ಇಂಥ ಮಾತುಗಳಿಗೆ ಮರುಳಾಗಿ ರಣೋತ್ಸಾಹವನ್ನು ತೋರುತ್ತಿದ್ದರು. ಯುದ್ಧವೆಂಬ ಯಜ್ಞಕ್ಕೆ ಪ್ರಾಣಿಗಳಂತೆ ಬಲಿಯಾಗುತ್ತಿದ್ದರು! ಹೀಗೆ ಸಾವಿಗೀಡಾಗುವ ಸಾಮಾನ್ಯರ ಬಗೆಗೆ ರಾಜನಾಗಲಿ, ಸೈನ್ಯಾಧಿಕಾರಿಗಳಾಗಲಿ, ಮಂತ್ರಿಗಳಾಗಲಿ ಕಿಂಚಿತ್ತೂ ಕಾಳಜಿಯನ್ನು ಮಾಡುತ್ತಿರಲಿಲ್ಲ ಎಂಬುದು ವಾಸ್ತವ.

ಎರಡು ಪಕ್ಷಗಳಾಗಿ ಹೋರಾಡಿದ ಕೌರವ – ಪಾಂಡವರು ತಮ್ಮ ಬೆಂಬಲಕ್ಕೆ ಜನಬಲವನ್ನು ಕಟ್ಟಿಕೊಂಡಿದ್ದರು. ಅವರ ಬೆಂಬಲದ ಬಲದಿಂದಲೇ ಯುದ್ಧವನ್ನು ಮಾಡಲು ಸಾಧ್ಯವಾಯಿತು. ಯಾವ ಗುಂಪನ್ನು ಬೆಂಬಲಿಸಿ ಸಾಮಾನ್ಯರು ಹೋರಾಡಿದರೂ, ಎದುರಾಳಿಗಳ ಬಗೆಗೆ ದ್ವೇಷವನ್ನು ಅಸಹಜವಾಗಿ ಪ್ರಕಟಿಸಲೇ ಬೇಕಾಗುತ್ತಿತ್ತು. ವಾಸ್ತವದಲ್ಲಿ ಅವರು ವೈರಿಗಳಾಗಿರುತ್ತಿರಲಿಲ್ಲ. ಇಂಥ ಸೂಕ್ಷ್ಮ ಸಂಗತಿಗಳ ಕಡೆಗೂ ಕುವೆಂಪು ನಮ್ಮ ಗಮನವನ್ನು ಸೆಳೆಯುತ್ತಾರೆ. ಎಂಟನೇ ದೃಶ್ಯದಲ್ಲಿ ಮುದುಕಿಯೊಬ್ಬಳು ಯುದ್ಧದಲ್ಲಿ ಅಸುನೀಗಿದ್ದ ತನ್ನ ಮಗನನ್ನು ಹುಡುಕಿಕೊಂಡು ಯುದ್ಧಭೂಮಿಗೆ ಬಂದಿರುತ್ತಾಳೆ. ಅದೇ ಶ್ಮಶಾನ ಕುರುಕ್ಷೇತ್ರಕ್ಕೆ ತನ್ನ ಪತಿಯನ್ನು ಹುಡುಕುವ ಸಲುವಾಗಿ ಪುಟ್ಟ ಕಂದನೊಡನೆ ಬರುವ ಮಾತೆ ಮುದುಕಿಯೊಡನೆ ನಡೆಸುವ ಸಂಭಾಷಣೆಯಿಂದ ಸಾಮಾನ್ಯ ಪ್ರಜೆಗಳು ಯುದ್ಧ ವಿರೋಧಿಗಳಾಗಿಯೇ ಇರುತ್ತಾರೆ ಎಂಬುದು ವೇದ್ಯವಾಗುತ್ತದೆ. ಕುರುಕ್ಷೇತ್ರ ಯುದ್ಧದಲ್ಲಿ ಮುದುಕಿಯ ಮಗ ಕೌರವರ ಪರವಾಗಿ ಯುದ್ಧ ಮಾಡಿದರೆ, ಮಾತೆಯ ಪತಿ ಪಾಂಡವರಿಗಾಗಿ ಸೆಣಸಾಡಿರುವನು. ಆದರೆ ಅವರಿಬ್ಬರು ಪರಸ್ಪರ ವೈರಿಗಳಲ್ಲ. 'ನಿನ್ನ ಮಗನೆನ್ನ ಪತಿಗೆ ಪಗೆಯಾಗಿರ್ದನೇನ್?' ಎಂಬ ಮಾತೆಯ ಮಾತಿಗೆ ಮುದುಕಿ 'ಆರಿಗಾರು ಪಗೆ? ನಿನಗಾನ್ ಪಗೆಯೇ?; ಎಂದು ಪ್ರಶ್ನಿಸುವುದು ಕಂಡು ಬರುವುದು. "ನಮ್ಮವೋಲಿಹ ಬಡಜನಂಗಳೆಲ್ಲ ಮಂಕುಗಳಮ್ಮಾ. ಪಾಂಡವರ್ ಕೌರವರ್ ನೆಲಕೆ ಪೊಯ್ದಾಡಿದರೆ ನಮ್ಮ ಮಕ್ಕಳ್ ಅವರಿವರಂ ಕೆಳೆಗೊಂಡು ನಿಂತು ಹೆಮ್ಮೆಗೆ ಬಡಿದಾಡಿ ಮಡಿಯುವರ್.-

ನನ್ನ ಮಗುವಿಗೆ ನಿನ್ನಾತನ ಮೇಲೆ ಪಗೆಯೇನ್? ನಾವಿರ್ವರುಂ ದುಃಖಾರ್ತರಮ್ಮಾ!" ಮುದುಕಿ ಆಡುವ ಈ ಮಾತು ಸಾಮಾನ್ಯರ ಮನಸ್ಥಿತಿಯನ್ನು ಬಿಂಬಿಸುವಂತಹುದಾಗಿದೆ. ಪರಸ್ಪರ ಸಾಂತ್ವನವನ್ನು ಹೇಳಿಕೊಂಡು ತಮ್ಮವರನ್ನು ಹುಡುಕಲು ಅವರು ತೊಡಗುತ್ತಾರೆ. ತುಸು ಸಮಯದಲ್ಲಿ ಮಾತೆಯ ರೋದನ ಮುದುಕಿಗೆ ಕೇಳಿಸುತ್ತದೆ. ಆ ಕಡೆಗೆ ಮುದುಕಿ ದಾವಿಸುತ್ತಾಳೆ. ಇಬ್ಬರು ಸೈನಿಕರು ಪರಸ್ಪರ ಇರಿದು ಸಾವನ್ನಪ್ಪಿರುತ್ತಾರೆ. ಅವರಲ್ಲಿ ಒಬ್ಬ ಮುದುಕಿಯ ಮಗ; ಮತ್ತೊಬ್ಬ ಮಾತೆಯ ಪತಿ! ಅದು ಅರಿವಿಗೆ ಬಂದಾಗ ಮುದುಕಿ 'ಪಾಂಡವರು ಹಾಳಾಗಲಿ!' ಎಂದರೆ ಮಾತೆಯು 'ಕೌರವರು ಹಾಳಾಗಲಿ!" ಎಂದು ಶಾಪ ಹಾಕುತ್ತಾರೆ. ಸಾಮಾನ್ಯರು ವೈರತ್ವವನ್ನು ಹೇಗೆ ಹೊಂದಿರುತ್ತಾರೆ ಎಂಬುದರ ದರ್ಶನವನ್ನು ಪ್ರಕಟಿಸುವ ಸಲುವಾಗಿಯೇ ಇಂಥ ಚಿತ್ರಣವನ್ನು ಕುವೆಂಪು ಅವರು ತಂದಿದ್ದಾರೆ ಎಂದು ಹೇಳಬಹುದು.

ಶ್ಮಶಾನ ಕುರುಕ್ಷೇತ್ರ ನಾಟಕವು ಕುವೆಂಪು ಅವರ ದಾರ್ಶನಿಕತೆಯು ಪ್ರಕಟಗೊಳ್ಳುವ ವೇದಿಕೆಯಾಗಿಯೂ ಮಾರ್ಪಟ್ಟಿದೆ. ಭೂತ, ವರ್ತಮಾನ ಹಾಗೂ ಭವಿಷ್ಯತ್ ಕಾಲಗಳೂ ಕೃತಿಯಲ್ಲಿ ಮೇಳೈಸಿಕೊಂಡಿವೆ. ಯುಗಪುರುಷನಾದ ದ್ವಾಪರನು ತನ್ನ ಯುಗದ ಅಂತ್ಯದಲ್ಲಿ ಸಂಭವಿಸಿದ ಕುರುಕ್ಷೇತ್ರ ಯುದ್ಧ, ಅದರ ಪರಿಣಾಮವನ್ನು ಕುರಿತು ಚಿಂತಿಸಿ ಖಿನ್ನನಾಗಿರುವಾಗ, ಆಘಾತಕ್ಕೆ ಒಳಗಾಗಿರುವಾಗ, ದುಃಖದಲ್ಲಿ ಮುಳುಗಿರುವಾಗ, ಕಲಿಯ ಮಾತುಗಳು ಭವಿಷ್ಯದ ಬಗೆಗೆ ಭರವಸೆಯನ್ನು ಹುಟ್ಟಿಸುತ್ತವೆ. "ಸಾವಿನಲಿ ಹೊಸಬಾಳು ಹುದುಗಿಹುದು; ನಾಶದಲಿ ನವಸೃಷ್ಟಿ ಪವಡಿಸಿದೆ. ನೂರು ಮಾತಿಂದೇನ್? ಸಾವೆ ಹೊಸ ಬಾಳಿಗಾಧಾರ ಮಾಗಿರ್ಪುದು. ನಾಶಮೇನವಸೃಷ್ಟಿಗುತ್ಸಾಹ ಮಾಗಿರ್ಪುದು!" ಎಂಬುದು ಜೀವಪರ ಕಾಳಜಿಯ ಪ್ರತೀಕವಾಗಿ ತೋರುತ್ತದೆ. ದ್ವಾಪರದೇವನಿಗೆ ಕಲಿಮಹಾಶಯ ಹೇಳುವ ಮುಂದಿನ ಮಾತನ್ನು ಕುವೆಂಪು ಅವರೇ ಹೇಳಿದಂತಿದೆ: **"ರಸಪೂರ್ಣ ಶೂನ್ಯದಿಂದೊಗೆತಂದುದೀವಿಶ್ವಂ; ಅದರೊಳೆ ವಿಲೀನಮಾಗಡಗುವುದು ತಾನ್, ಆದೊಡೇನ್? ಮರಳಿ ಬೇರೊಂದಾಕೃತಿಯ ತಳೆದು, ಬೇರೊಂದು ಕಟ್ಟಳೆಗೆ ತಲೆಬಾಗಿ, ಬೇರೊಂದು ಕಾಲದಲಿ ಮೂಡುವುದು. ಲೀಲೆಯೆಂಬುವುದೆಲ್ಲ ಮೂಡುವುದು ಮುಳುಗುವುದರಲ್ಲಿಹುದು. ಅದಕೇಕೆ ಮರುಗುವುದು? ಕನಸಿನಲಿ ಕಂಡ ಕಡವರಮಳಿಯೆ ಎಚ್ಚೆತ್ತು ಶೋಕಿಪುದುಚಿತಮಲ್ತು."** ಈ ವಿಶ್ವದ ಸೃಷ್ಟಿ ರಹಸ್ಯವನ್ನು ಬಿಚ್ಚಿಡುತ್ತಲೇ ಸೃಷ್ಟಿ, ಸ್ಥಿತಿ, ಲಯಗಳು ಸಹಜವಾಗಿ ನಡೆಯುವ ಕ್ರಿಯೆಗಳಾಗಿದ್ದು ನಾಶದ ಸಂದರ್ಭದಲ್ಲಿ ದುಃಖಿಸುವುದು ಸಮಂಜಸವಲ್ಲ. ಕನಸಿನಲ್ಲಿ ಕಂಡ ಐಶ್ವರ್ಯವನ್ನು ಎಚ್ಚರಗೊಂಡ ನಂತರ ಪಡೆಯಲಾಗದೆ ದುಃಖಪಡುವುದು ಎಷ್ಟು ಅಸಹಜವೋ, ಸತ್ತವರಿಗಾಗಿ ದುಃಖಿಸುವುದೂ ಅಷ್ಟೇ ಅಸಹಜ ಎಂದು ಪ್ರತಿಪಾದಿಸುವುದು ಸ್ಥಿತಪ್ರಜ್ಞತೆಯ ಉತ್ತುಂಗದ ಸ್ಥಿತಿ. ಆ ಮಟ್ಟಕ್ಕೆ ಕುವೆಂಪು ಅವರು ಏರಿದ್ದರು. ಅದರ ಪರಿಣಾಂವಾಗಿಯೇ ಅವರು ತಮ್ಮ ಆಪ್ತೇಷ್ಟರ ಸಾವು ಸಂಭವಿಸಿದಾಗ ದುಃಖಪಡುತ್ತಿರಲಿಲ್ಲ; ಕಣ್ಣೀರು ಹಾಕುತ್ತಿರಲಿಲ್ಲ! ಇದು ಕುವೆಂಪು ಅವರ ಬದುಕು ಮತ್ತು ಬರಹದ ನಡುವಿನ ಸಂಬಂಧ.

ಪುನರ್ಜನ್ಮದಲ್ಲಿ ನಂಬಿಕೆಯಿದ್ದ ಅವರು ಒಣ ಆಚರಣೆಗಳಿಗೆ ಎಂದೂ ಮನ್ನಣೆಯನ್ನು ನೀಡಿದವರಲ್ಲ. ಆದರೆ ಗಾಢ ಆಧ್ಯಾತ್ಮ ಜೀವಿಯಾಗಿದ್ದರು. ಅದರ ಫಲವೇ ನಾಟಕದಲ್ಲಿ ಮೂಡಿರುವ ಕೃಷ್ಣನ ಪಾತ್ರ. ಜಗದೋದ್ಧಾರಕನಾದ ಶ್ರೀಕೃಷ್ಣನು ಕುರುಕ್ಷೇತ್ರ ಶ್ಮಶಾನದಲ್ಲಿ ಮಡಿದ ಪ್ರತಿಯೊಬ್ಬರಿಗೂ ಮೋಕ್ಷವನ್ನು ಕರುಣಿಸುವ ಪಾತ್ರವನ್ನು ನಿರ್ವಹಿಸುತ್ತಾನೆ. ಅವನ ದೃಷ್ಟಿಯಲ್ಲಿ ಆಯಾಸವನ್ನೆಲ್ಲಾ ದೂರಮಾಡುವುದು, ತಾನು ರಚಿಸಲು ಹೊರಟಿರುವ ಕಲಿಯುಗದ ಮಹಾಕಾವ್ಯದ ದರ್ಶನವನ್ನು ಮಾಡಿಸುವುದು ಕುವೆಂಪು ಅವರಿಗೆ ಕೃಷ್ಣನ ಬಗೆಗಿನ ಭಕ್ತಿಯ ಪ್ರತೀಕವೆನ್ನಬಹುದು. ಆದರೆ ಇದೆಲ್ಲಕ್ಕಿಂತ ಮಿಗಿಲಾದುದು ಕುವೆಂಪು ಅವರಿಗೆ ಶ್ರೀಸಾಮಾನ್ಯರು ಕಲಿಯುಗದಲ್ಲಿ ಸುಖ-ಶಾಂತಿ ಸಂತಸದಿಂದ ಬಾಳುವರೆಂಬ ದಾರ್ಶನಿಕತೆ. ನಾಟಕದ ಕೊನೆಗೆ ರುದ್ರನಿಗೆ ಕೃಷ್ಣ ತೋರಿಸುವ ಕಲಿಯುಗದಲ್ಲಿ ಸಾಮಾನ್ಯರ ಬದುಕು. "ನೋಡದೋ ದೂರದೊಳ್, ಬಹುದೂರದೊಳ್, ಕಾಲಗರ್ಭದೊಳ್... ಸಾಮಾನ್ಯ ಮಾನವ ಸಂಸಾರಂ... ಸತಿ-ಪತಿಗಳ ಶೃಂಗಾರಂ. ಮಕ್ಕಳಾಟಂ, ನೋಟಂ, ಕಾವ್ಯಂ, ಸುಮಧುರಂ.. ದಿವ್ಯಂ.. ಸುಶ್ರಾವ್ಯಂ!' ಸಾಮಾನ್ಯರ ಸಂಸಾರಸುಖಮಯವಾಗ ಬೇಕೆಂಬುದೇ ಕುವೆಂಪು ಅವರ ಆಶಯ. ನಾಟಕದ ಪ್ರತಿಪುಟದಲ್ಲಿ ಅದು ಮಿಟಿದು ಕೃತಿಗೆ ಶೋಭೆಯನ್ನು ತಂದುಕೊಟ್ಟಿದೆ. ಕುವೆಂಪು ಅವರ ಅಂಶಗಳು ವರ್ತಮಾನದ ಜಗತ್ತಿಗೆ ದಾರಿದೀಪವಾಗಿವೆ. ಅಂತೆಯೇ ಅನುಷ್ಠಾನ ಯೋಗ್ಯವಾಗಿವೆ.

❑❑

# ಕನ್ನಡ ಕೃತಿ ಸೊಡೆಯಿತ್ತ ಸೋದೆ ವಾದಿರಾಜರು

-ನಿ.ಕೃ. ರಾಮಶೇಷನ್

ಕನ್ನಡದ ಹರಿದಾಸ ಸಾಹಿತ್ಯದ ಮೊದಲ ಹಂತವಾದ ಸೃಜನಾತ್ಮಕ ಗುಣವುಳ್ಳ ಕೀರ್ತನೆ-ಕಾವ್ಯಗಳನ್ನು ನೀಡಿದವರಲ್ಲಿ ಯತಿವರ್ಯರಾದ ಸೋದೆಯ ಶ್ರೀ ವಾದಿರಾಜತೀರ್ಥರು ಏರುವ್ಯಕ್ತಿತ್ವ ಹೊಂದಿದ್ದಾರೆ. ಸಂಸ್ಕೃತ - ಕನ್ನಡ ನುಡಿಗಟ್ಟಿನ ಕೀರ್ತನೆಗಳಲ್ಲಿ ವಾದಿರಾಜರು ಅನೇಕ ಕೃತಿಗಳನ್ನು ನಿಸರ್ಗ ಸಹಜ ರೀತಿಯಲ್ಲಿ ಹಾಡಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಸಿರಸಿ ಈಗ ಹೇಗೆ ನಮಗೆ ತನ್ನ ನಿಸರ್ಗರಮಣೀಯತೆಯನ್ನುಳ್ಳದ್ದೋ ಶ್ರೀ ವಾದಿರಾಜರ ಬದುಕಿನ ಅವಧಿಯಲ್ಲಿ ಅದಿನ್ನೂ ಸಾಂದ್ರ, ದಟ್ಟವಾಗಿತ್ತು. ವಾದಿರಾಜರು ನೆಲೆನಿಂತಿದ್ದು - ಸಿರಸಿಯಿಂದ ಸುಮಾರು ಇಪ್ಪತ್ತುಮೈಲು ಒಳಹಾದಿಯಲ್ಲಿರುವ ಸೋದೆಯಲ್ಲಿ (ಸೋಂದಾ ಎಂದೂ ಕರೆಯುತ್ತಾರೆ) ದ್ವೈತ ಸಿದ್ಧಾಂತದ ಸಮರ್ಥ ಪ್ರತಿಪಾದನೆ - ಪ್ರಚಾರ ಕ್ಷೇತ್ರದಲ್ಲಿ ಅವರ ಹೆಸರು ಅದೆಷ್ಟು ಹಿರಿಮೆಯೊಡಗೂಡಿದುದೋ ಹಾಗೆಯೇ ತಮ್ಮ ಕನ್ನಡ ಕೀರ್ತನೆ ಹಾಗೂ ಕೆಲವು ಮಹತ್ಕಾರ್ಯಗಳಿಂದ ಅಂದಿನ ಸಾಮಾಜಿಕ ಪರಿಸರದ ದೃಷ್ಟಿಯಲ್ಲಿಯೂ ವಾದಿರಾಜರು ಸುಧಾರಕರು, ವಿಶಾಲ ಮನೋಧರ್ಮದವರು, ಮಾನವೀಯ ಗುಣಗಳುಳ್ಳವರೆನ್ನಿಸುತ್ತಾರೆ.

ವಾದಿರಾಜರು ದೀರ್ಘಕಾಲ ಬದುಕಿ ಬಾಳಿದ ಯೋಗಿಗಳು. ಕ್ರಿ.ಶ. ೧೪೮೦-೧೬೦೦ರ ನೂರಿಪ್ಪತ್ತು ವರ್ಷ ಅವರು ಬದುಕಿದ್ದು. ಶ್ರೀ ಮಧ್ವಾಚಾರ್ಯರಿಂದ ಸ್ಥಾಪಿತವಾದ ಉಡುಪಿಯ ಅಷ್ಟಮಠಗಳಲ್ಲಿ ಸೋದೆ ಸಂಸ್ಥಾನವೂ ಒಂದು. ಆ ಯತಿ ಪರಂಪರೆಯಲ್ಲಿ ಇಪ್ಪತ್ತನೆಯವರು ಶ್ರೀವಾದಿರಾಜರು. ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಸನಿಹದ ಕುಂಭಾಸಿ (ಆನೆಗುಡ್ಡೆ ಗಣಪತಿ ಕ್ಷೇತ್ರ) ಸಮೀಪವಿರುವ ಹೂವಿನಕೆರೆ ಎಂಬುವ ಗ್ರಾಮ. ರಾಮಾಚಾರ್ಯ - ಸರಸ್ವತಿದೇವಿ ತಂದೆತಾಯಿಗಳು, ಸೋದೆಯ ಅಂದಿನ ಹತ್ತೊಂಬತ್ತನೆಯ ತಲೆಮಾರಿನ ಯತಿವರ್ಯರಾದ ಶ್ರೀ ವಾಗೀಶ ತೀರ್ಥರ ಯೌಗೀಕ ಅನುಗ್ರಹದಿಂದ ರಾಮಾಚಾರ್ಯ ದಂಪತಿಗಳಿಗೆ ಹುಟ್ಟಿದ ಮಗುವಿಗೆ ಮೊದಲು ಹೆಸರಿಸಿದುದು ಶ್ರೀಗಳವರ ಉಪಾಸ್ಯ ದೇವರಾದ "ಭೂವರಾಹ"ನೆಂಬುದಾಗಿ. ಆನಂತರದಲ್ಲಿ ತಮ್ಮ ಅದ್ಭುತ ವಾಗ್ಮಿತೆ, ಅಧ್ಯಯನ ನೈಪುಣ್ಯದಿಂದ ಶ್ರೀವಾಗೀಶತೀರ್ಥರಿಂದ "ವಾದಿರಾಜ"ರೆಂದಾದದ್ದು! ಅದು ಅನ್ವರ್ಥವೂ ಆಯಿತು, ವಾದಿರಾಜರಲ್ಲಿನ ವಾಗ್ವಿಲಾಸದಿಂದಾಗಿ! ಇಲ್ಲಿ ಈ ಸಾಲುಗಳಲ್ಲಿ ವಾದಿರಾಜರ ಬದುಕಿನೆಳೆಗಳನ್ನು ವಿಸ್ತಾರವಾಗಿ ನಿರೂಪಿಸುವುದಕ್ಕಿಂತ ಮಿಗಿಲಾಗಿ ಅವರ ಕೃತಿಗಳು, ಅಲ್ಲಿರುವ ಅಂದಿನ ಪರಿಸರ ಹಾಗೂ ಇಂದೂ ಹೊಸತೆನ್ನಿಸಬಹುದಾದ ದೃಷ್ಟಿ, ಸಾಹಿತ್ಯಕ ಸೊಗಸನ್ನು ತಿಳಿಸುವ ಧ್ಯೇಯವಿರುವುದರಿಂದ, ಕೃತಿಗಳೆಡೆ ನಮ್ಮ ಗಮನ ಹರಿಸಬಹುದಾಗಿದೆ.

**ಕೃತಿ ಸಂಪದ - ಸಂಸ್ಕೃತದಲ್ಲಿ:** ತಾನು ನಂಬಿ ನಿಷ್ಠೆಯಿಂದ ಅನುಸರಿಸಿದ ಮಧ್ವತತ್ವ- ಸಂಪ್ರದಾಯ ಹಾಗೂ ಆ ಸಿದ್ಧಾಂತ ಪ್ರಸಾರಕ್ಕೆ ತಮ್ಮನ್ನು ಮೀಸಲಾಗಿರಿಸಿಕೊಂಡವರು ಶ್ರೀವಾದಿರಾಜರು. ಸಹಜಪ್ರತಿಭೆಯು "ನವ ನವೋನ್ವೇಷಶಾಲಿನೀ" ಎಂಬುವ ರೀತಿಯಲ್ಲಿ ಅವರಲ್ಲಿದ್ದುದರಿಂದ ಅವರ ಗ್ರಂಥ ಸಮುಚ್ಛಯವೂ ವಿದ್ವತ್ಪೂರ್ಣ ಆದದ್ದೇ ಆಗಿದೆ. ಅವರ ಮಾನವೀಯ ಮನೋಧರ್ಮ, ಕಾವ್ಯಕೌಶಲ, ಉನ್ನತ ರಸಿಕತೆ, ವಿದ್ಯಾವೈಭವ, ತರ್ಕಬದ್ಧತೆ, ಪಾಂಡಿತ್ಯ, ದೈವಭಕ್ತಿ, ಅದರಲ್ಲಿಯೂ ತಾನು ಆರಂಭಿಸಿದ ಶ್ರೀ ಹಯಗ್ರೀವ ಉಪಾಸನೆ (ವಿದ್ಯಾಜ್ಞಾನ ಸ್ವರೂಪಿ ಎಂದೇ ಪೂಜಿತ) ಇವೆಲ್ಲವೂ ಅವರ ಕೃತಿಗಳಲ್ಲಿ ಮಡುಗಟ್ಟಿದೆ ಎನ್ನಬೇಕು. ಇಲ್ಲಿ ವೇದಾಂತ ತತ್ವವೂ ಇವೆ, ಪೌರಾಣಿಕವಾದವೂ ಉಂಟು. ಹಾಗೂ ಶ್ರೀವಾದಿರಾಜರು ನಮ್ಮಂಥ ತುಂಬಾ ಸಾಮಾನ್ಯರಿಗೆ ದೈವಭಕ್ತಿ ಸದಾ ನೆಲೆಗೊಳ್ಳಲು ನೆರವಾಗುವ ಅನೇಕ ಸ್ತೋತ್ರಗಳನ್ನು ರಚಿಸಿದ್ದಾರೆ.

೧. **ಯುಕ್ತಿಮಲ್ಲಿಕಾ:** ವಾದಿರಾಜರ ಮೇರುಕೃತಿ - ಹಾಗೂ ಮಧ್ವಸಿದ್ಧಾಂತದ, ಸಮಸ್ತ ಪ್ರಮೇಯಗಳೂ ವಿಸ್ತರಿಸಲ್ಪಟ್ಟ ಗ್ರಂಥ.

ಮಲ್ಲಿಗೆ ಹೂವಿನಲ್ಲಿ ಹೇಗೆ ನಿತ್ಯಮಲ್ಲಿಗೆ, ಸೂಜಿಮಲ್ಲಿಗೆ, ದುಂಡುಮಲ್ಲಿಗೆ, ಮೂರು ಸುತ್ತು - ಏಳು ಸುತ್ತಿನ ಮಲ್ಲಿಗೆ ಹೀಗೆ ಅನೇಕ ಭೇದಗಳಿವೆಯೋ ಹಾಗೆಯೇ ವೇದಾಂತಯುಕ್ತಿಗಳಲ್ಲಿಯೂ ಕಾಣಬರುವ ಭೇದಗಳನ್ನು

# ೧೭, 'ಶ್ರೀಗುರು ಸದನ', ಜೀವನ್ ಬೀಮಾ ನಗರ, ಶ್ರೀರಾಮಪುರ ೨ನೇ ಹಂತ, ಮೈಸೂರು ೫೭೦ ೦೨೩

ಒಟ್ಟಾರೆ ಅನುಷ್ಟುಪ್ ಛಂದದಲ್ಲಿ ಶ್ರೀವಾದಿರಾಜರು ರಚಿಸಿದ್ದಾರೆ.

"ಸೌರಭ"ಗಳೆಂದು ಹೆಸರಿಸಿರುವ ಒಟ್ಟು ೧೩೬ ಅಧಿಕರಣ ವಿಶೇಷ ಹಾಗೂ ೫೫೭೯ ಶ್ಲೋಕಗಳು ಇರುವ ಕೃತಿ – "ಯುಕ್ತಿಮಲ್ಲಿಕಾ". ಪ್ರತಿ ಸೌರಭದ ಸಮಾರೋಪದಲ್ಲಿ "ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ಗುಣ, (ಶುದ್ಧಿ, ಭೇದ ಇತ್ಯಾದಿ) ಸೌರಭ ಸರ್ವಸ್ವಂ ಮುದೇ ವಿಷ್ಣೋರ್ನ್ಯವೇದಯತ್" ಎಂದು ಉಕ್ತವಾಗಿದೆ. ಈ ಗ್ರಂಥಕ್ಕೆ ವಾದಿರಾಜರ ಪೂರ್ವಾಶ್ರಮದ ತಮ್ಮಂದಿರೇ ಆದ ಶ್ರೀ ಸುರೋತ್ತಮತೀರ್ಥರು "ಭಾವವಿಲಾಸಿನಿ"ಎಂಬ ಶೀರ್ಷಿಕೆಯಲ್ಲಿ ಯುಕ್ತಿಮಲ್ಲಿಕಾ ವ್ಯಾಖ್ಯಾನವನ್ನು ರಚಿಸಿದ್ದಾರೆ.

**೨. ಅಧಿಕಾರಣ ನಾಮಾವಲಿ :** ಬ್ರಹ್ಮಸೂತ್ರಗಳ ಕುರಿತ ವಿವರಣಗ್ರಂಥ.

**೩. ಹರಿಭಕ್ತಿಲತಾ :** ೩೯೪ ಶ್ಲೋಕಗಳ ಗ್ರಂಥ. ಇದನ್ನು ತಿಳಿಯಾದ ಕನ್ನಡದಲ್ಲಿ ಅನುವಾದಿಸಿದರೆ ಸೊಗಸೆನ್ನಿಸುತ್ತದೆ.

**೪ರಿಂದ ೭ರವರೆಗೆ :** ಈಶಾವಾಸ್ಯದಿಂದ ಹಿಡಿದು ವಿವಿಧ ಉಪನ್ಯಾಸದ ಭಾಷ್ಯಕ್ಕೆ ಟಿಪ್ಪಣಿಗಳು.

**೮. ವಾದಿರಾಜರು ನೀಡಿದ ಉಪನ್ಯಾಸ ಮಾಲಾ:** ಹತ್ತು ಉಪನ್ಯಾಸಗಳ ವಿವರ

**೯. ವಿವರಣವಣಮ್:** ಖಂಡನ ಗ್ರಂಥ (ಅದ್ವೈತ)

**೧೦. ಶ್ರುತಿತತ್ತ್ವಪ್ರಕಾಶಿಕಾ:** ೫೦೭ ಶ್ಲೋಕಗಳು, ಅದ್ವೈತ ಖಂಡದ ಗ್ರಂಥ

**೧೧. ಮಹಾಭಾರತ ತಾತ್ಪರ್ಯ ನಿರ್ಣಯ ಟಿಪ್ಪಣಿ:** ಶ್ರೀ ಮಧ್ವಾಚಾರ್ಯರ "ಮಹಾಭಾರತ ತಾತ್ಪರ್ಯ ನಿರ್ಣಯ" ಗ್ರಂಥದ ಅಧ್ಯಯನಕ್ಕೆ ನೆರವಾಗುವ ಟಿಪ್ಪಣಿ.

**೧೨. ತೀರ್ಥಪ್ರಬಂಧ:** ಪ್ರವಾಸ–ಪರ್ಯಟನ– ಕ್ಷೇತ್ರಗಳ ವಿವರಣ ಗ್ರಂಥ.

**೧೩. ನ್ಯಾಯರತ್ನಾವಳಿ:** ಮಧ್ವತತ್ತ್ವ, ಪಂಚಭೇದ ತತ್ತ್ವ ಸಮರ್ಥನೆ.

**೧೪. ಪಾಷಂಡ ಮತಖಂಡನ:** ೧೫ನೇ ಏಕಾದಶೀ ನಿರ್ಣಯ

**೧೫. ಕಲ್ಪಲತಾ:** ಜೈನದರ್ಶನ ಖಂಡನ ಗ್ರಂಥ

**೧೬. ಸರಸಭಾರತೀ ವಿಲಾಸ:** ದ್ವೈತ ಸಿದ್ಧಾಂತ ಪ್ರತಿಪಾದಕ. ಆದರೆ ಕಾವ್ಯದ ಅಧ್ಯಯನ ಸೃಷ್ಟಿಯಿಂದ ಇದೊಂದು ಸೊಗಸಾದ ಗ್ರಂಥ.

**೧೭. ಭೂಗೋಳ ವಿವರಣೆ:** ಭಾಗವತ ಪಂಚಮ ಸ್ಕಂಧದ ಭೂಗೋಳವರ್ಣನೆಗನುಸಾರವಾದದ್ದೆನಿಸುತ್ತದೆ.

**೧೮. ಮಹಾಭಾರತ ಲಕ್ಷಾಲಂಕಾರ:** ಮಹಾಭಾರತದ ಒಂದು ಲಕ್ಷ ಕ್ಲಿಷ್ಟ ಪದಗಳಿಗೆ ಅರ್ಥ ವಿವರಿಸಿ ತಾನು ನಂಬಿದ ಶ್ರೀಹಯಾಸ್ಯ ದೇವರಿಗೆ ಅರ್ಪಿಸಿದ ಗ್ರಂಥ ವಿಶೇಷವಿದು.

ಒಂದು ಐತಿಹ್ಯ ಇಲ್ಲಿ ಉಲ್ಲೇಖನೀಯ. ವಾದಿರಾಜರ ತಾಯಿ ಸರಸ್ವತೀದೇವಿಯು, ತನಗೆ ಗಂಡುಮಗುವಾದಲ್ಲಿ ಪರಮಾತ್ಮನಿಗೆ ಒಂದು ಲಕ್ಷ ಸುವರ್ಣ ಆಭರಣಗಳನ್ನು ಸಮರ್ಪಿಸುವೆನೆಂದು ಹೇಳಿಕೊಂಡಿದ್ದರು, ವಾದಿರಾಜರ ಜನನ– ಅನಂತರ ಅವರ ಎಂಟನೆಯ ವಯಸ್ಸಿಗೇ ಸಂನ್ಯಾಸದೀಕ್ಷೆ ಕೈಗೊಂಡದ್ದು – ಹೀಗಾಗಿ ತಾಯಿ ತನ್ನ ಹರಕೆಯ ವಿಷಯವನ್ನು ಮಗನಿಗೆ ತಿಳಿಸಿದರು. ವಾದಿರಾಜರು "ಆಗಲಿ, ಅದನ್ನು ಸೂಕ್ತ ರೀತಿಯಲ್ಲಿ ಸಮರ್ಪಿಸಿ, ನಿಮ್ಮ ಹರಕೆಯನ್ನು ಪೂರ್ಣಗೊಳಿಸೋಣ," ಎಂಬುದಾಗಿ ಹೇಳಿ, ಪರ್ಯಟನೆಯಲ್ಲಿ, ಪ್ರಯಾಗ ಕ್ಷೇತ್ರದಲ್ಲಿ – ಅವರು 'ಮಹಾಭಾರತ ಲಕ್ಷಾಲಂಕಾರ ಟೀಕೆ'ಯನ್ನು ಸಮರ್ಪಿಸಿ, ಶ್ರೀ ವ್ಯಾಸರ ದರ್ಶನ ಪಡೆದರೆಂದು ಐತಿಹ್ಯವುಂಟು.

**೨೦. ರುಕ್ಮಣೀಶ ವಿಜಯ:** ಸೊಗಸಾದ ಕಾವ್ಯ, ೧೯ ಸರ್ಗಗಳ, ೧೨೫೮ ಶ್ಲೋಕ ವ್ಯಾಪ್ತಿಯ ಕಾವ್ಯವಿದು. ಪುಣೆಯಲ್ಲಿ ಪರ್ಯಟನೆಯಲ್ಲಿರುವಾಗ ಮಾಘಕವಿಯ "ಶಿಶುಪಾಲವಧ"ಕ್ಕೆ ಮಿಗಿಲಾದ ಕಾವ್ಯವನ್ನು ರಚಿಸಲು ನಿರ್ಧರಿಸಿ ಕೇವಲ ೧೯ ದಿನಗಳಲ್ಲಿ ೧೯ನೇ ಸರ್ಗಗಳ "ರುಕ್ಮೀಶ ವಿಜಯ" ರಚಿಸಿದರು ಶ್ರೀ ವಾದಿರಾಜರು.

**೨೧. ಶ್ರೀಮತ್ ಸನತ್ಸುಜಾತೀಯ ಭಾಷ್ಯ:** ಮಹಾಭಾರತ ಉದ್ಯೋಗಪರ್ವದಲ್ಲಿ ಸನತ್ಸುಜಾತ ಮುನಿಯು ಉಪದೇಶಿಸಿದ ವಿಷಯಗಳ ವಿವರ.

**೨೨. ಸ್ವಾಪ್ನ ವೃಂದಾವನಾಖ್ಯಾನ:** ವಾದಿರಾಜರಿಂದ ಪ್ರತ್ಯಕ್ಷವಾಗಿ ರಚಿತವಾಗಿಲ್ಲದಿದ್ದರೂ ಅವರು ಒಬ್ಬ ಅಕುಶಲಮಿತ್ರರಿಗೆ ಸ್ವಪ್ನ ಮೂಲಕ ಉಪದೇಶಿಸಿ ಆತ ನಿರೂಪಿಸಿದ ಗ್ರಂಥವಿದು.

ಇದರ ಜತೆಗೆ ಸುಮಾರು ೬೨ ಸ್ತೋತ್ರಗಳನ್ನು ಪಠಣ – ಮನನಕ್ಕಾಗಿ ಹಾಗೂ ಭಕ್ತಿ ಪ್ರಸಾರವನ್ನು ದೃಷ್ಟಿಯಲ್ಲಿ ಇರಿಸಿಕೊಂಡು ರಚಿಸಿದ್ದಾರೆ.

ವಾದಿರಾಜರ ಕನ್ನಡ ಗ್ರಂಥಗಳನ್ನು ನೋಡೋಣ.

**೧. ಶ್ರೀ ಮನ್ಮಹಾಭಾರತ ತಾತ್ಪರ್ಯನಿರ್ಣಯ:** ಜನಸಾಮಾನ್ಯರಿಗೂ ತಿಳಿಯುವಂತೆ ತಿಳಿಗನ್ನಡದಲ್ಲಿ (೧೫ನೇ ಶತಮಾನದ ಕನ್ನಡ ನುಡಿಗಟ್ಟು) ಗದ್ಯರೂಪದಲ್ಲಿ ನಿರೂಪಿಸಿರುವ ಗ್ರಂಥವಿದು.

**೨. ವೈಕುಂಠ ವರ್ಣನೆ:** ಶ್ರೀ ಹರಿ ಮಹಿಮೆಗಳ ನಿರೂಪಣೆ. ಹಾಡುವ ಸಾಂಗತ್ಯ ಛಂದದಲ್ಲಿ ರಚಿತವಾಗಿದೆ.

೩. ಇಲ್ಲಿ ಅವರು, ಪ್ರಸಿದ್ಧ ಶ್ಲೋಕಗಳಾದ

"ಶುಕ್ಲಾಂಬರಧರಂ ವಿಷ್ಣುಂ" ಹಾಗೂ "ನಾರಾಯಣಂ ನಮಸ್ಕೃತ್ಯ" ಮೊದಲಾದವುಗಳನ್ನು ಕನ್ನಡೀಕರಿಸಿರುವ ಪರಿ ಮೆಚ್ಚುವಂಥದು.

ನಿಷ್ಕಳಂಕ ಚಂದ್ರವದನ ಶುಕ್ಲವಸನ ಲಕ್ಷಶಶಿವರ್ಣ ಪ್ರಸನ್ನ।
ನಾಲ್ಕುತೋಳಿನ ವಿಷ್ಣು ನಮ್ಮ ವಿಘ್ನಂಗಳ ಛಕ್ಕನೆ ಒರೆಸಿ ರಕ್ಷಸಲಿ॥
ನರನೆಂದು ಶೇಷನ ಪೆಸರು ನಾರಾಯಣನ
ಮೆರೆವ ಮೂಲರೂಪವೆನಿಪ
ಗುರುವ್ಯಾಸ ನರೋತ್ತಮ ವಾಯು ದೇವಿಲಕುಮಿ
ಸರಸ್ವತಿಗೊಂದಿಸಿ ಗ್ರಂಥ ಬರೆವುದು ಗಡ ॥೧॥

ಈ ಪದವೆ ಶುಭಪದ ಈ ಪದವರ್ತಿಯಪದ
ಈ ಪದವೆ ಸಂಪದಾಸ್ಪದದ ಪದ ।
ಈ ಪದವೆ ಹರಿಪದ ಈ ಪದ ನೆನೆವ ಪದ
ಈ ಪದವೆ ಆಪದಂತಕ ಪದ ॥

೩. **ಗುಂಡಕ್ರಿಯೆ** : ಈ ಶೀರ್ಷಿಕೆಯ ಅರ್ಥವೇ ದುರ್ಮತಗಳನ್ನು ಧ್ವಂಸಮಾಡುವುದೆಂಬುದು, ಹಾಗೂ ಮಿಥ್ಯಾವಾದದ ಖಂಡನೆ. ಇಲ್ಲಿ ಪ್ರತಿ ಪದ್ಯದಲ್ಲಿಯೂ ಅವರ "ಹಯವದನ" ಅಂಕಿತ-ಮುದ್ರಿಕೆ ಇರುವುದರಿಂದ ಪ್ರತಿಪದ್ಯವೂ ಸ್ವತಂತ್ರ ಪದ್ಯಗ್ರಂಥವೆನಿಸುತ್ತದೆ.

ವಾದಿರಾಜರಿಗೆ ಅವರ ವಾಗ್ಮಿತೆ-ವಾದಸಾಮರ್ಥ್ಯ ಕಂಡು ಅಂದಿನ ವಿಜಯನಗರದ ಅರಸರು "ಪ್ರಸಂಗಾಭರಣ ತೀರ್ಥ"ರೆಂಬ ಬಿರುದಿತ್ತು ಗೌರವಿಸಿದ್ದರೆಂದು ತಿಳಿಯಬರುತ್ತದೆ.

ಹಾಗೂ "ಗುಂಡಕ್ರಿಯೆ" ಹನುಮಂತನೇ ಹಾಡಿದ ರಾಗ ವಿಶೇಷವೆಂದೂ ಪ್ರಚಲಿತವಿದೆ.

೪. **ಲಕ್ಷ್ಮೀಶೋಭನ ಹಾಡು** : ಪ್ರಸಿದ್ಧ ಹಾಡುಗಬ್ಬವಿದು

ಶೋಭನವೆನ್ನಿರೆ ಸುರರೊಳು ಸುಭಗನಿಗೆ
ಶೋಭನವೆನ್ನಿ ಸುಗುಣನಿಗೆ ।
ಶೋಭನವೆನ್ನಿರೆ ತ್ರಿವಿಕ್ರಮರಾಯಗೆ ।
ಶೋಭನವೆನ್ನಿ ಸುರಪ್ರಿಯಗೆ ॥ ಶೋಭಾನೆ॥

ಮದುವೆಮನೆಯಲ್ಲಿ ಈ ಪದವ ಹಾಡಿದರೆ ।
ಮದುಮಕ್ಕಳಿಗೆ ಮುದವಹುದು ।
ವಧುಗಳಿಗೆ ಓಲೆಭಾಗ್ಯ ದಿನದಿನಕೆ ಹೆಚ್ಚುವುದು
ಮದನನಯ್ಯನ ಕೃಪೆಯಿಂದ
ಶೋಭಾನೆ ಶೋಭಾನೆ ॥

ಎಂಬುವಲ್ಲಿ ಮದುಮಗಳಿಗೆ ಮುತ್ತೈದೆ ಭಾಗ್ಯ ಹೆಚ್ಚುತ್ತದೆ, ಎಂದರೆ ಕೈ ಹಿಡಿದ ಪತಿ ದೀರ್ಘಕಾಲ ಜತೆಗೆ ಬದುಕಿ ಬಾಳುವನೆಂಬುವ ಮಂಗಲದ ಹಾಡಿದು. ವಾದಿರಾಜರ ಈ ಕೃತಿ, ಜಾನಪದೀಯ ಕೊಡುಗೆಯಾಗಿಯೂ ನಿಲ್ಲುತ್ತದೆ.

೫. **ಸ್ವಪ್ನ ಗದ್ಯ** : ಧ್ಯಾನದ ಅವಸ್ಥೆಯಲ್ಲಿ ತಾವು ಕಂಡು, ಉಪದೇಶ ಅನುಗ್ರಹಿಸಿದ ಶ್ರೀ ಹಯಗ್ರೀವರ ಉಪದೇಶಸಾರವನ್ನು ನೀಡಿರುವುದಾಗಿ ಶ್ರೀ ವಾದಿರಾಜರು ನಿರೂಪಿಸಿದ್ದಾರೆ. ನಲವತ್ತೈದು ಭಾಮಿನೀ ಷಟ್ಪದಿ ಪದ್ಯಗಳ ಕಾವ್ಯರೂಪದ ಕೃತಿ.

೬. **ಕಲ್ಕಿ ಸುಳಾದಿ** : ವಾದಿರಾಜರ ಕೀರ್ತಿ ಸಂಪದ ತಿಳಿಸುವಲ್ಲಿ ಅವರು ರಚಿಸಿರುವ ಅನೇಕ ಸುಳಾದಿ, ಉಗಾಭೋಗ, ವೃತ್ತ ನಾಮ, ಭ್ರಮರ ಗೀತ - ಇವುಗಳಲ್ಲಿ ಒಂದು, ತಾವು ನಂಬಿ ತಪಸ್ಯೆಯದರ್ಶನದ ಮೂಲಕ ಕಾಂಬ ಶ್ರೀ ಹರಿಯ ಸರ್ವೋತ್ತಮತ್ವ ಹಾಗೂ ಅವನ ಅನೇಕ ಅದ್ಭುತ ಮಹಿಮೆಗಳು - ಆ ದೇವದೇವನ ಅಘಟಿತ ಘಟನಾ ಸಾಮರ್ಥ್ಯ.

೭. **ಕೀಚಕವಧೆ** : ಒಬ್ಬ ಕೆಟ್ಟ ಕಾಮುಕನ ವಧೆ ಎಂದರೆ, ಸಮಾಜ ಅಷ್ಟರ ಮಟ್ಟಿಗೆ ತನ್ನ ಕಲ್ಮಷವನ್ನು ಕಳೆದುಕೊಂಡು ನಿರ್ಮಲವಾಯಿತೆಂದಾದೀತು!

ಮಹಾಭಾರತದ ವಿರಾಟಪರ್ವದಲ್ಲಿ ಬರುವ ಪ್ರಸಂಗ - "ಭೀಮಸೇನ ಕಾಮಿನಿಯಾದನು" ಎಂಬುವ ಇಪ್ಪತ್ತಮೂರು ನುಡಿಗಳ ಖಂಡ ಕಾವ್ಯ - ಕೀರ್ತನ, ಆಗಿ ರಂಜಿಸುತ್ತದೆ.

ವಾದಿರಾಜರಿಗೆ ಕನ್ನಡ ನುಡಿಗಟ್ಟು ವಾಚೋವಿಧೇಯವಾಗಿತ್ತೆಂಬ ಅಂಶವೂ ತಿಳಿಯಬರುತ್ತದೆ. ಕುಮಾರವ್ಯಾಸನ ದ್ರೌಪದಿ ಹೇಗೆ ತನ್ನ ನೋವು ಅಳಲನ್ನು ಅಡುಗೆಯ ವಲಲನಾಡ ಭೀಮನಲ್ಲಿ ತೋಡಿಕೊಂಡು ಕೊನೆಗೆ ಕಿನಿಸಿಂದ ನುಡಿದದ್ದು "ಗಂತರೋ ನೀವ್ ಷಂಡರೋ ಪೇಳೆಂದಳಿಂದು ಮುಖಿ" ಇದನ್ನು ಕೇಳಿ ಭೀಮ ಕುದಿಕುದಿದ. ಮರುದಿನ ಕೀಚನ ವಧೆಯಾಯಿತಲ್ಲವೇ?

ಭೀಮಸೇನ ಕಾಮಿನಿಯಾದನು ॥ಪಲ್ಲವಿ॥
ಭೀಮಸೇನ ಕಾಮಿನಿಯಾಗಲು
ಪ್ರೇಮದಸತಿಯ ಕಾಮಿಸಿದವನ
ಝಾಮರಾತ್ರಿಗೆ ಸೀಳುವೆನೆನ್ನುತ
ಸಾಮಜ ವರದನ ಪಾಡುತಲಿ ॥ಅ.ಪ॥

ಹೀಗೆ ಕೀರ್ತನೆ ಕಾವ್ಯವಾಗಿ ಹರಿಯುತ್ತದೆ.

೮. **ಶ್ರೀ ಹರಿಸರ್ವೋತ್ತಮಸಾರ** : ವಾದಿರಾಜರ ಇನ್ನೊಂದು ಹರಿಸರ್ವೋತ್ತಮತ್ವ ಪ್ರತಿಪಾದಕ ಕೃತಿ, ೧೬ ನುಡಿಗಳ ಗ್ರಂಥ.

ಇಲ್ಲಿ ವಾದಿರಾಜರ ಜಾಣ್ಮೆ, ಕಾವ್ಯ ಕೌಶಲ್ಯ ಗಮನೀಯ.

ಕಾಲ ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ ।
ಮೌಳಿಯ ಮೇಲೆ ಜಲವ ಧರಿಸಿದವನೊಬ್ಬ
ಪಾಲಿಸುವ ಪ್ರಭುವೊಬ್ಬ ಕೊಲುವ ತಳವಾರನೊಬ್ಬ ॥
ಮೂರ್ಲೋಕವರಿಯೆ ಪುಟ್ಟಿಸಿದ ಪಿತನೊಬ್ಬ
ಆಲೋಚನೆಯಲ್ಲಿ ಬಲ್ಲವರಿಗೆ ಸಂಶಯವಿಲ್ಲ
ಮಾಲೆಯನು ಮಹಾಲಕುಮಿ ಹಯವಧನಗಿತ್ತಳಾಗಿ ॥

ಪ್ರಕೃತ ಪದ್ಯದಲ್ಲಿ ಶ್ರೀವಿಷ್ಣುವಿನ ತ್ರಿವಿಕ್ರಮಾವತಾರ ಕಾಲದಲ್ಲಿ ಅವನ ಪಾದದ ಸೋಂಕಿನಿಂದ ಆಗಸದಿಂದ

ಉದ್ಭವೆಯಾದ ಗಂಗಾಜಲದಿಂದ ಬ್ರಹ್ಮನು ಸ್ವಾಮಿಯ ಪಾದ ತೊಳೆದದ್ದು, ಆ ಪವಿತ್ರವಾದ ಗಂಗೆಯನ್ನು ಈಶ್ವರನು ತನ್ನ ಶಿರದಲ್ಲಿ ಧರಿಸಿದ್ದು, ಸೃಷ್ಟಿ ಸ್ಥಿತಿಲಯಗಳಿಗೆ ಬೇರೆ ಬೇರೆ ದೇವತೆಗಳಿರುವರೆಂಬುದಾಗಿ ಕಂಡುಬಂದರೂ ಎಲ್ಲರೂ ಮೂಲರೂಪೀ ಶ್ರೀಮನ್ನಾರಾಯಣನ ಮೊತ್ತಮೊದಲ ಅವತಾರವಾದ ವಾಸುದೇವನ ರೂಪವೇ ಆಗಿದ್ದಾರೆ. ಬ್ರಹ್ಮ, ಮಹೇಶ್ವರ ಅಥವಾ ರುದ್ರನಾಮಕನಾದ ವಾಸುದೇವನ ರೂಪಗಳು ಸ್ವಯಂ ಸೃಷ್ಟಿಲಯ ಗೈಯದೆ, ಆ ಕಾರ್ಯಗಳನ್ನು ಆ ಪರಾತ್ಪರ ವಸ್ತು ಬ್ರಹ್ಮ ಈಶ್ವರರ ಮುಖೇನ ಅವರಲ್ಲಿ ಪ್ರವಿಷ್ಟವಾಗಿ ಅವರಿಂದ ಮಾಡಿಸುತ್ತದೆ" ಎಂಬುವ ಅತ್ಯುನ್ನತ ಚಿಂತನ ಈ ಪದ್ಯದಲ್ಲಿರುವುದು.

ವಾದಿರಾಜರ ಸೊಗಸು, ಕಾವ್ಯ ಸ್ವಾರಸ್ಯ, ಹಾಗೂ ಸಮಾಜಮುಖಿ ಚಿಂತನ ಹೊಸತಾಗಿ ಇರುವುದೇ ಅವರ ಕೀರ್ತನೆಗಳಲ್ಲಿ. ಹದಿನೈದರ ಶತಮಾನ, ಎಂದರೆ ಈಗ್ಗೆ ಆರು ಶತಕಗಳ ಹಿಂದೆ ಅವರು ನಡೆಸಿದ ಕಾರ್ಯ ಇಂದಿಗೂ ನಡೆದು ಬರುತ್ತಿದೆ. ಮಠಾಧೀಶರಾಗಿ ಕರ್ಮಠರಾಗಿ "ಮಡಿ ಮಡಿ"ಯೆಂದು ಅವರು ಇರಲಿಲ್ಲವೆಂಬುವ ಸುಧಾರಕ ಅಂಶವೂ ತಿಳಿಯಬರುತ್ತದೆ. ಇದರ ಜತೆ ತಾವೂ ಕೈಗೊಂಡ ಭಕ್ತಿಪ್ರಸಾರ ಕಾರ್ಯದಲ್ಲಿ ಅವರಿಗೆ ಏಕಮೇವ ನಿಷ್ಠೆ ಇತ್ತು ಎಂಬುದು ಗಮನಾರ್ಹ.

೧. ಶ್ರೀ ಹಯಗ್ರೀವ ದೇವತೆಯು ಜ್ಞಾನವಿದ್ಯಾ ಆನಂದ ಸ್ವರೂಪನೆಂದೇ ವಿಖ್ಯಾತ. ಈ ದೇವತೆಯ ಉಪಾಸನೆಯನ್ನು ನಡೆಸುತ್ತಾ ಬಂದರು ವಾದಿರಾಜರು. ಶ್ರೀ ಹಯಗ್ರೀವ ಮೂರ್ತಿ ಅವರಿಗೆ ಲಭಿಸಿದ್ದುದೂ ಒಂದು ಪವಾಡದಂತಹ ಸಂಗತಿಯೆ! ಸ್ವರ್ಣಕಾರನೊಬ್ಬನು ಗಣಪತಿಯ ವಿಗ್ರಹವನ್ನು ಕಡೆಯಲು ತೊಡಗಿ, ಅದೆಷ್ಟೇ ಸಲ ಎರಕ ಹೊಯ್ದಾಗಲೂ ಅದು ಮತ್ತೆ ಮತ್ತೆ ಹಯಗ್ರೀವ ಮೂರ್ತಿಯಾಕಾರವಾಗಿ ಪರಿಣಮಿಸಿತಂತೆ. ಆತ ದೈವಭಕ್ತ. ಸ್ವಯಂಪ್ರೇರಿತನಾಗಿ ಶ್ರೀ ವಾದಿರಾಜರಿಗೆ ಹಯಗ್ರೀವ ಮೂರ್ತಿ ತಂದಿತ್ತ. ಇದು ಅನಿರೀಕ್ಷಿತ, ಆದರೆ ಅಷ್ಟೇ ಸಂತುಷ್ಟ ತಂದಿತು ವಾದಿರಾಜರಿಗೆ. ಅವರು ಉಪಾಸನೆಗೇ ತೊಡಗಿದರು.

೨. ಉಡುಪಿಯ ಅಷ್ಟ ಮಠಗಳ ಸ್ವಾಮಿಗಳ ಪರ್ಯಾಯ – ಶ್ರೀ ಕೃಷ್ಣನ ಪೂಜೆ ಮಾಡುವ ಸಂಧಿ, ಅವಧಿ ಎರಡು ತಿಂಗಳ ಮಟ್ಟಿಗೆ ಇದ್ದದ್ದನ್ನು ವಾದಿರಾಜತೀರ್ಥರು ಸಮಾಲೋಚಿಸಿ ಈ ಪರ್ಯಾಯವನ್ನು ಎರಡು ವರ್ಷದ ಅವಧಿಗೇರಿಸಿದ್ದು. ಆ ಅವಧಿಯಲ್ಲಿ ಪರ್ಯಾಯ ಪೀಠಸ್ಥ ಸ್ವಾಮಿಗಳ ಹೊರತು, ಇತರ ಮಠಾಧೀಶರು ಸಂಚರಿಸಲು, ಶಿಷ್ಯ ಸಂಗ್ರಹ ಮಾಡಲೂ ಸಾಧಕವಾಯಿತು.

೩. ಧರ್ಮಸ್ಥಳವನ್ನು ಮೊದಲು "ಕುಡುಮ" ಎಂದು ಕರೆಯುತ್ತಿದ್ದದ್ದು. ಆಗ ಇದ್ದ ದೇವರಾಜ ಹೆಗ್ಗಡೆಯವರ ಪ್ರೀತಿ, ಅಭಿಮಾನಕ್ಕೆ ಮೆಚ್ಚಿದ ಶ್ರೀ ವಾದಿರಾಜರು ಅಲ್ಲಿ ಆಗಮೋಕ್ತ ಪೂಜಾ ರೀತ್ಯ ಪ್ರತಿಷ್ಠಾಪನೆ, ಸಂಬಂಧಿಸಿದ ದೇವತಾ ಪೂಜೆ ನೆರವೇರಿಸಿದರು. ಅಲ್ಲಿಯ ಧಾರ್ಮಿಕ ಸಾಮರಸ್ಯ ಇಂದಿಗೂ ಮನನೀಯ. ಹೆಗ್ಗಡೆಯವರು ಜೈನಧರ್ಮಿಯರ ಅರ್ಚಕರು ವಿಪ್ರರು ವಾದಿರಾಜರು, ಆ ಸ್ಥಳವನ್ನು "ಧರ್ಮಸ್ಥಳ"ವೆಂದೇ ಕರೆದರು. ಅದೇ ಮುಂದೆ ರೂಢಿಗೆ ಬಂದಿತು. ಅನತಿ ದೂರದಲ್ಲಿಯ ಸುಬ್ರಹ್ಮಣ್ಯ ಮಠವು ಸಂಸ್ಥಾನದ ಮೂಲಪುರುಷರಾದ ಶ್ರೀ ವಿಷ್ಣು ತೀರ್ಥರಿಂದ ಸಂಸ್ಥಾಪಿತವಾದದ್ದು. ವಾದಿರಾಜರು ಇಲ್ಲಿಗೆ ತೆರಳಿ ಪೂಜೆ ನೆರವೇರಿಸಿದರು. ಜೈನ, ವೈಷ್ಣವ, ಎಲ್ಲ ಸಾಮರಸ್ಯ ಅವರಿಗೆ ಮುಖ್ಯವೆನಿಸಿತು.

ಶ್ರೀ ವಾದಿರಾಜರ ಉದಾರತೆ ಪರಿವಾರದ ಕೆಲವು ಶಿಷ್ಯರಿಗೆ ಅಸೂಯೆಯುಂಟು ಮಾಡಿತು.

ಸ್ವಾಮಿಗಳು ಶ್ರೀ ಹಯಾಸ್ಯ ಮೂರ್ತಿಯನ್ನು ಪರಮ ಏಕಾಂತ ಭಕ್ತಿಯಿಂದ ಪೂಜಿಸಿ, ಪ್ರತಿನಿತ್ಯ ಆ ಮಹಾನುಭಾವನಿಗೆ ಹಯಗ್ರೀವ ಪ್ರಸಾದ (ಕಡಲೆ ಬೇಳೆ ಬೆಲ್ಲ ಹೂರಣ) ನಿವೇದಿಸಿ, ಆತ ಸ್ವೀಕರಿಸಿ ಉಳಿಸಿದ ಅಂಶವನ್ನು ಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಅಸೂಯೆಯುಳ್ಳ ಶಿಷ್ಯರು ಸ್ವಾಮಿಗಳನ್ನು ಪರಿಕ್ಷಿಸಲೋಸುಗ ಕಡಲೆಮಡ್ಡಿಯಲ್ಲಿ ವಿಷವನ್ನು ಬೆರೆಸಿದರು. ಎಂದಿನಂತೆ ವಾದಿರಾಜರು ನೈವೇದ್ಯಕ್ಕೆ ಸ್ವಾಮಿಯನ್ನು ಭಕ್ತಿ ಪ್ರೇಮ ಬೆರೆಸಿ ಆಹ್ವಾನಿಸಿದರು. ಆ ದಿವ್ಯಾಶ್ಚರೂಪಿಯು ಶ್ರೀ ವಾದಿರಾಜರಿಗೆ ಏನನ್ನೂ ಉಚ್ಛಿಷ್ಟವಾಗಿ ಉಳಿಸದೆ, ಪೂರಾ ಹಯಗ್ರೀವವನ್ನು ತಾನೇ ತಿಂದುಬಿಡುವುದೇ! ಆಗ ಯತೀಶ್ವರರಿಗೆ ಕಾತುಕವಾಯಿತು. ತಮ್ಮ ಉಪಾಸ್ಯದೈವದತ್ತ ನೋಡಲು, ಅದರ ಕೊರಳೆಲ್ಲ ನೀಲಿಬಣ್ಣ ತಳೆದು ಕಪ್ಪಗೆ ತಿರುಗುತ್ತಿದ್ದುದ್ದು ಕಂಡುಬಂದಿತು! ಎಲ್ಲಾ ವಿವರವನ್ನು ಗ್ರಹಿಸಿದ ಸ್ವಾಮಿಗಳು ನೊಂದರು ಹಾಗೂ ಸನಿಹದ ಮಾಗಣೆಯವರು ಬೆಳೆಯುತ್ತಿದ್ದ ಗುಳ್ಳದ ಕಾಯಿ(ಈಗ ವಾದಿರಾಜಗುಳ್ಳ ಎಂದೇ ಹೆಸರಾಗಿರುವ ವಿಶಿಷ್ಟವಾದ ಬದನೆಕಾಯಿ)ಗಳನ್ನು ತರಿಸಿ, ಹಿತವಾಗಿ ಹಯಗ್ರೀವನ ಕೊರಳಿಗೆ ಕಾವು ಹದವಾಗಿತ್ತರು. ಅಶ್ವದ ನೀಲವರ್ಣ ಕಡಿಮೆಯಾಯಿತು, ಹಾಗೂ ಈಗಲೂ ನಾವು ಪೂಜಾ ಸಮಯದಲ್ಲಿ ಹಯಾಸ್ಯನನ್ನು ಕಂಡಾಗ, ಆ ನೀಲರೇಖೆ ಮೂರ್ತಿಯ ಕೊರಳಲ್ಲಿ ಉಳಿದಿರುವುದು ಕಾಣಬಹುದು. ಮಾಗಣೆಯವರ ಈ ಉಪಕಾರವನ್ನು ಮನಗಂಡ ಶ್ರೀ ವಾದಿರಾಜರು ಅವರಿಗೆ ಪ್ರೀತಿಯ ವೈಷ್ಣವ ದೀಕ್ಷೆಯನ್ನು ಇತ್ತು ತನ್ನ ಶಿಷ್ಯರಾಗಿ ಅಂಗೀಕರಿಸಿದರು.

ಇದೇ ರೀತಿಯಲ್ಲಿ ಕೋಟಾ ಎಂಬಲ್ಲಿನ ವಿಪ್ರವರ್ಗವನ್ನು ಇತರರು ನಿಕೃಷ್ಟರಾಗಿ ಕಾಣುತ್ತಿದ್ದದ್ದನ್ನು ಗಮನಿಸಿದ ಯತಿವರ್ಯರು ಅವರನ್ನು ವೈಷ್ಣವ ಧರ್ಮದ ಮಡಿಲಿಗೆ ಕರೆದುಕೊಂಡದ್ದು, ಧಾರ್ಮಿಕ ಕಟ್ಟನ್ನು ಮೀರಿ ಮಾನವತೆಯನ್ನು ಮೆರೆದದ್ದು, ಆಗಿನ, ಈಗಿನ ಅತ್ಯಾಧುನಿಕ ವಿಚಾರದಲ್ಲಿ ಕೂಡ ಒಪ್ಪುವಂತಹ ಸುಧಾರಣೆಯೇ!

ಅನ್ಯಜಾತಿ_ಪರಂಪರೆಯವರು-ಯಾರನ್ನು ಕಂಡರೂ ವಾದಿರಾಜರು ತುಂಬುಪ್ರೀತಿಯಿಂದ ಕರೆದು ತಮ್ಮ ಮಡಿಲಿಗೆ ಸೆಳೆದುಕೊಳ್ಳುವ ವಿಶಾಲ ಮನಸ್ಸಿನವರೇ! ಕನಕದಾಸರನ್ನು ಕಂಡರಂತೂ ಅವ್ಯಾಜ ಪ್ರೀತಿ ಅಭಿಮಾನದ ಔನ್ನತ್ಯ ಹೇಳತೀರದು. ತೀರ ನಿಕೃಷ್ಟ ಜಾತಿ ಎಂದೆಲ್ಲ ಕರೆದು ಕೇಳಾಗಿ ಕಾಣುತ್ತಿದ್ದ ಹೊಲೆಯರನ್ನು ಪ್ರೀತಿಯಿಂದ ಕಂಡು, ಅನಕ್ಷರಸ್ಥರಾದ ಅವರ ಬಗ್ಗೆ ಕರುಣೆ ತೋರಿ, ಪಾಡ್ದನ ದಶಾವತಾರ ಕೀರ್ತನೆಗಳನ್ನು ರಚಿಸಿ ಉಪದೇಶಿಸಿದ್ದು ವಾದಿರಾಜರ ಔದಾರ್ಯಗುಣಕ್ಕೆ ಸಾಕ್ಷ್ಯವನ್ನು ನೀಡುತ್ತದೆ! ಈಗ ಇವೆಲ್ಲವೂ ಅನುಸರಿಸುವಂಥ ಕ್ರಮಗಳೇ ಆಗಿವೆ. ಉಡುಪಿಗೆ ಸ್ವಲ್ಪ ದೂರ ಎಲ್ಲೂರು – ಅಲ್ಲಿನ ಶಿವಾಲಯಕ್ಕೆ ಶ್ರೀ ವಾದಿರಾಜರು ಭೇಟಿನೀಡಿ, ಅಲ್ಲಿನ ಪೂಜಾವಿಧಿಗಳನ್ನು ಸರಿಪಡಿಸಿ, ಸೂಕ್ತ ಮಾರ್ಗದರ್ಶನವಿತ್ತು ಭಕ್ತಿಯ ಪರಿಸರವನ್ನೇ ನಿರ್ಮಿಸಿದರು.

ವಾದಿರಾಜರ ಕಾಲದಲ್ಲಿದ್ದ ಸೊಂದಾ ಸಂಸ್ಥಾನದ ದೊರೆ ಕೆಳದಿಯ ನಾಯಕ ಮನೆತನದ ಅರಸಪ್ಪ ನಾಯಕನಂತೂ ಗುರುವರ್ಯರ ಬಗ್ಗೆ ಅಪಾರ ಗೌರವವಿರಿಸಿಕೊಂಡ, ಅನೇಕ ಕೆಲಸಕಾರ್ಯಗಳಲ್ಲಿ ಮೌಲಿಕವಾದ ನೆರವು ನೀಡಿದ. ವಾದಿರಾಜತೀರ್ಥರು ಸೋದೆಯಲ್ಲಿ ಪ್ರತಿಷ್ಠಾಪಿಸಿದ ಶ್ರೀತ್ರಿವಿಕ್ರಮ ದೇವಾಲಯಕ್ಕೆ ನಾನಾ ವಿಧದಲ್ಲಿ ಸೇವೆ ಸಲ್ಲಿಸಿದ. ಇದಕ್ಕೆಲ್ಲ ಶಾಸನ, ಬಖೈರುಗಳ ಆಧಾರವೂ ಇದೆ. ಸೋದಾ ಕ್ಷೇತ್ರವನ್ನು ಅಭಿವೃದ್ಧಿಗೊಳಿಸಿ, ಕಿರುಉಡುಪಿಯಾಗಿ ಮಾಡಿ ಧವಳಗಂಗಾ, ಹಯಾಗ್ರೀವ ತಟಾಕ ಮೊದಲಾದ ಪಂಚತೀರ್ಥಗಳನ್ನು ನಿರ್ಮಿಸಿದ ವಾದಿರಾಜರು ತಮ್ಮ ವಿಶಿಷ್ಟ ತಪಶ್ಶಕ್ತಿಯಿಂದ ವಶಪಡಿಸಿಕೊಂಡಿದ್ದ ನಾರಾಯಣ ಭೂತರಾಜರಿಂದ ಅನೇಕ ಅಮಾನುಷ ಕಾರ್ಯಗಳನ್ನು ಸಹಜ ರೀತಿಯಲ್ಲಿ ನೆರವೇರಿಸಿದ್ದು ಅವರ ಯೌಗಿಕ ಸಾಮರ್ಥ್ಯಕ್ಕೆ ದ್ಯೋತಕವಾಗುತ್ತದೆ. ಅವರು ಸ್ವಭಾವತಃ ಮಹಿಮಾಪುರುಷರು, ಹಾಗೂ ಕ್ರಿ.ಶ. ೧೬೦೦ರಲ್ಲಿ ತಮ್ಮ ೧೨೦ನೆಯ ವಯಸ್ಸಿನಲ್ಲಿಯೂ ಪಟುತ್ವದಿಂದ ಸಶರೀರವೃಂದಾವನ ಸ್ಥರಾದದ್ದು ವಿಶೇಷವೇ!

ವಾದಿರಾಜರಲ್ಲಿ ಹರಿಭಕ್ತಿ, ಮಧ್ವನಿಷ್ಠೆ ಮಾತ್ರ ಅಲ್ಲ, ಕಾವ್ಯಗುಣ, ಪದಬಂಧ ಮಾಧುರ್ಯ, ವರ್ಣನೆಯ ನೈಪುಣ್ಯ ವಿವಿಧ ರೀತಿಯ ಲಯವಿನ್ಯಾಸ, ಷಟ್ಪದಿ, ತ್ರಿಪದಿ, ಸಾಂಗತ್ಯ ಮೊದಲಾದ ಕಾವ್ಯ ಪ್ರಚುರ ಪ್ರಯೋಗಗಳ ಪರಿಣತಿಯನ್ನು ಅವಲೋಕಿಸಬಹುದು, ಅವರ ಕೊಡುಗೆಯೂ ಹೊಸತೆನ್ನಿಸುವ ಭಾವನೆ ತರಿಸುತ್ತದೆ. ಉದಾಹರಣೆಗೆ ಶ್ರೀರಂಗದ ರಂಗನಾಥನ, ಶ್ರೀರಂಗಪಟ್ಟಣದ ಶ್ರೀರಂಗನ ಉತ್ಸವದ ವರ್ಣನೆ, ಅವನಿಗೆ ಜನರು ತಂದು ನಿವೇದಿಸುತ್ತಿದ್ದವೋ

**ಹಚ್ಚನೆ ಹೆಸರುಬೇಳೆ ಹಾಲುಕೆನೆಗಳು**
**ಮುಚ್ಚತಂದ ಕೆನೆಮೊಸರು ಮೀಸಲು ಬೆಣ್ಣೆಯು**
**ಅಚ್ಚತುಪ್ಪದಿ ಪಕ್ವವಾದ ಅತಿರಸಹುಗ್ಗಿಗಳು**
**ಮೆಚ್ಚಿ ಉಂಡು ಪಾನಕ ನೀರು ಮಜ್ಜಿಗೆಗಳು**

ಕೀಚಕನ ವಧೆಯ ಸಂದರ್ಭದಲ್ಲಿ ಭೀಮಸೇಮ ಕಾಮಿನಿಯಾದನು" ದ್ರೌಪದಿಯ ಅಳಲನ್ನು ನಿವಾರಿಸಲೋಸುಗ!

ಅದೆಂಥ ಕಥನಕಲೆ ಶ್ರೀ ವಾದಿರಾಜರದು! ಭೀಮನ ಹೆಣ್ಣು ವೇಷಅಲಂಕಾರ, ಕೀಚಕ ಕತ್ತಲಿನಲ್ಲಿ ತಡವರಿಸಿ ಮುಟ್ಟಿದರೆ, "ಕಲ್ಲೆದೆ ಏಟು ಸ್ಪರ್ಶವಾಯ್ತು ಆತ ನೊಂದ! ಮರುಕ್ಷಣ ಭೀಮನ ಗುದ್ದು ಕೀಚಕನಿಗೆ ಮಾರಕ – ಶ್ರೀ ಕೃಷ್ಣನದಯದಿ ಕಷ್ಟವು ಹಿಂಗಿತು!"

ಶ್ರೀ ಹರಿಯು ಮೋಹಿನಿರೂಪ ಧರಿಸಿದಾಗ ಹರ ಮರುಳಾದ! ಒಂದು ಕ್ಷಣ ಅವನಿಗೆ ಏನೋ ಅಪೂರ್ವ ಸೌಂದರ್ಯ ಕಂಡ ಅನುಭವ! ಆ ಪರಿಸರ, ವಾದಿರಾಜರ ಅಪೂರ್ವ ಕವಿಹೃದಯವನ್ನು ತೋರುತ್ತದೆ.

**ತೆಂಗಿನ ತಿಳಿಗೊಳ ನಿಂಬೆಕಿತ್ತಲೆ ಬಾಳೆ**
**ಹೊಂಬಾಳೆ ಅಡಿಕೆ ಬನಗಳು**
**ಹೊಂಬಾಳೆ ಅಡಿಕೆ ಬನದೊಳಗಾಡುವ**
**ರಂಭೆಯ ಕಂಡು ಹರ ಮರುಳಾದ..**
**ನಡುಬಳುಕಿ ಮುಡಿಸಡಲಿ ಉಡಿಗಂಟೆ ಹೊಳೆಯುತ**
**ಕೊರಳ ಪದಕ ಹಾರ ಒಲೆಯುತ**
**ಕೊರಳ ಪದಕ ಹಾರ ಒಲೆಯುವ ಹೆಣ್ಣಿನ**
**ಇರವ ವರ್ಣಿಸಲಾರಿಗಳವಲ್ಲ...**

ಅದೆಂಥ ಒನಪು ವಯ್ಯಾರ ಮೋಹಿನಿರೂಪು !

**ಅಮ್ಮಾಲೆ ಆಡೋಳು ಒಮ್ಮೊಮ್ಮೆ ನೋಡೋಳು**
**ತನ್ನೊಳಗೆ ತಾನು ನಗುವೋಳು**
**ತನ್ನೊಳಗೆ ತಾನು ನಗುವೋಳು ಬೊಮ್ಮನ**
**ಮಗನ ಮರುಳು ಮಾಡಿ ನಡೆದಳು**

**ಕೆದರಿದ ಕೆಂಜೆಡೆ ಕೊರಳ ರುದ್ರಾಕ್ಷಿ**
**ಕರದಿ ತ್ರಿಶೂಲ ಹೊಳೆಯುತ**
**ಕರದಿ ತ್ರಿಶೂಲ ಹೊಳೆಯುತ ಹೆಣ್ಣಿನ**
**ನುಡಿಸುತ್ತಾ ಹಿಂದೆ ನಡೆದನು**

ಹರನಿಗೆ, ಹರಿಯೆ ಹೆಣ್ಣಿನ ರೂಪು ತಳೆದಿದ್ದನೆಂದು ತಿಳಿದಾಗ ಹೇಗಿರಬಹುದು! ಇದು ವಾದಿರಾಜರ ಕವಿತಾಗುಣದ ರಚನೆ! ಒಂದು ಉಗಾಭೋಗದ ಸಾಲುಗಳು ಅದೆಷ್ಟು ಮಾರ್ಮಿಕವೆನಿಸುವುದೋ ಅಷ್ಟೇ ಈಗಲೂ–ಈಗಿನ ಬದುಕಿಗೂ ಸಮೀಕರಣವೆನಿಸುತ್ತದೆ.

**ಅಡಿಗಾಧಾರವಿಲ್ಲ ಹಿಡಿವುದಕೆ ಕೊಂಬಿಲ್ಲ**
**ಕಡೆ ಹಾಯಿಸುವರಿಲ್ಲ ಕಷ್ಟಪಟ್ಟೆನಲ್ಲ**
**ಕಣ್ಣೀರು ತಪ್ಪಲಿಲ್ಲ ಕಾಯಸುಖ ಪಡಲಿಲ್ಲ**

**ಉಣಹೋಗಿ ಜಾಯ ಮರೆತಂತಾಯಿತಲ್ಲ**
**ಬಡತನವು ಬಿಡಲಿಲ್ಲ ಭಂಗಪಟ್ಟೆನಲ್ಲ**
**ಗರುಡಸರ್ಪದ ಸ್ನೇಹದಂತಾಯಿತಲ್ಲ**

ಎನ್ನ ಮನದುಬ್ಬಸುವ ಸ್ವಾಮಿ ಶ್ರೀ ಹರಿಯೇ ಬಲ್ಲ
ಇನ್ನಾರಿಗುಸುವಲೋ ಶ್ರೀ ಹಯವದನರಾಯ.
ಅನ್ನದಾಸೆಗೆ ಪಾರರ ಮನೆ ಬಾಗಿಲ ಕಾಯ್ದು"

ಎನ್ನುವ ನೋವು ಸರ್ವಥಾ ಸತ್ಯವೆನಿಸುತ್ತದೆ.

ತಿರುಪತಿ ತಿರುಮಲೆಯಧಿಪನನ್ನು ಕಂಡ ವಾದಿರಾಜರ ಕವಿಹೃದಯ ಸುಳಾದಿಯನ್ನೇ ನಿಡಿದಾಗಿ ಹಾಡುತ್ತದೆ :

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆನಾ
ಅರುಣ ತಳದಲಿಪ್ಪ ಅಂಕುಶ ಧ್ವಜ ವಜ್ರಾದಿ
ಸುರುಚಿರ ರೇಖೆಗಳ ಸೊಬಗ ಕಂಡೇನಾ

ಕುರುಳು ಕೂದಲ ಫಾಲ ಸಿಂಗಾಡಿಯಂತಿರ್ಪ್ಪ ಮರ್ಟು
ಕೂರ್ಚುನಂದದಿಗಲ್ಲ ಚುಬುಕ ಚುಟುಕಾಗ್ರದಿಂ
ಸಿರಿಯರಸ ಹಯವದನ ಶೇಷಗಿರಿ ಅರಸನ ಕಿರೀಟವ
ಪಾರಿಪರಿಯ ಸೊಬಗ ಕಂಡು ಕೃತಾರ್ಥನಾದೆನಾ

ಗುರುಭಕುತಿಯಿರಬೇಕು ಹಿರಿಯರ ಕರುಣವು ಬೇಕು
ಹರಿಕಥೆಗಳ ನಿತ್ಯದಲಿ ಕೇಳುತಿರಬೇಕು
ವಿರಕುತಿಬೇಕು ವಿಷ್ಣುವಿನಾರಾಧನೆ ಬೇಕು
ವರಮಂತ್ರ ಜಪಬೇಕು ತಪಬೇಕು ಪರಗತಿಗೆ
ಪರಿಪರಿಯ ವ್ರತಬೇಕು ಸಿರಿಪತಿ ಹಯವದನನ
ಪರಮಾನುಗ್ರಹಬೇಕು ವಿಷಯನಿಗ್ರಹಬೇಕು

ಎಂಬುವಲ್ಲಿ ಈಗಲೂ ಬದುಕಿಗೆ ಅಗತ್ಯಯೆನಿಸುವ ಮೌಲ್ಯಗಳು ಒಪ್ಪವೆನಿಸುತ್ತವೆ. "ವಿಷಯದಾಸೆ ಬಿಡಲೊಲ್ಲದೆ ದೇವ" ಎಂಬದಾಗಿ ಎಂಟನೆಯ ವಯಸ್ಸಿಂದ ಸಂನ್ಯಾಸ ದೀಕ್ಷೆ ಪಡೆದ ಬ್ರಹ್ಮಚಾರಿ ಹಾಡುವುದು ನಮ್ಮಂಥ ಲೌಕಿಕರಲ್ಲಿ ಲೌಕಿಕ ವಿಷಯಾಸಕ್ತರನ್ನು ದೃಷ್ಟಿಯಲ್ಲಿ ಇರಿಸಿಕೊಂಡೇ!

ವಾದಿರಾಜರ ದಶಾವತಾರ ವರ್ಣನೆಯ ನೈಪುಣ್ಯ ಇಲ್ಲಿ ಉದಾರಿಸುವ ಪ್ರಯತ್ನ ಗೈದಿಲ್ಲ. "ವೇದವ ತಂದು ಬೆಟ್ಟವ ಪೊತ್ತು ಧರಣಿಯ ಸಾಧಿಸಿ ಕಂಬದೆ ಬಂದವಗೆ! ಭೂ ದಾನವ ಬೇಡಿ ನೃಪರ ಸಂಹರಿಸಿದ ಆದಿಮೂರುತಿಗಾರತಿ ಎತ್ತಿರೆ" ಎಂಬುವಲ್ಲಿ ಅವತಾರಗಳನ್ನೇ ಕೀರ್ತಿಸುತ್ತಾರೆ!

"ಹೀನಸಂಗವನೆಲ್ಲ ಹಯಮುಖ ದೇವನೆ ವರ್ಜಿಸುವಂತೆ ಮಾಡೋ" ಎನ್ನುವುದು ಈಗಲೂ ಅನುಸರಣೀಯ ಮೌಲ್ಯವೇ ತಾನೇ. ಹಾಗೆಯೇ,

ನಿನ್ನ ಧ್ಯಾನದ ಶಕ್ತಿಯ ಕೋಟೆ । ಅನ್ಯರಲಿವಿರಕ್ತಿಯ ಕೊಡೊ ।
ನಿನ್ನ ನೋಡುವ ಯುಕ್ತಿಯ ಕೊಡೊ । ನಿನ್ನ ಪಾಡುವ ಭಕ್ತಿಯಕೊಡೊ
ನಿನ್ನಪ್ಪ ಬರುವ ಸಂಪತ್ತಿಯ ಕೊಡೋ ಚಿತ್ತದಿ ತತ್ತ್ವದಕೃತ್ಯವ
ತೋರೋ ಮತ್ತೇತುದಿಯಲಿ ಎನಗೆ ಮುಕ್ತಿಯ ಕೊಡೊ ।
ಅತ್ತತ್ತ ಮಾಡೋ ಭವ ಕತ್ತಲೆಯೆನಗೆ । ಮುತ್ತಿದೆ ಹಯವದನ

ಎಂಬುವ ಪ್ರಾರ್ಥನೆ, ಈಗಿನ ಧಾವಂತದ ಯುಗದ ಬದುಕಿಗೆ ಬೇಕಾದ ಮನಃಶಾಂತತೆ, ಪ್ರಸನ್ನತೆಗಳನ್ನು ಈಯುವ ಸಾಧನದಂತಿದೆ.

ಬರೀ ಓದಿ ಕೇಳಿದರೆ ಸಾಕೆ? ಅರಿವಿನ ಅರಗಿಸಿ ಕೊಂಬುವಿಕೆ, ಪ್ರಜ್ಞೆ ಬೇಡವೇ!

ಓದುವೆನು ವಿದ್ಯೆಗಳ ಓದನದ ಬಯಕೆಯಲಿ
ಸಾಧುಶಾಸ್ತ್ರಗಳ ಮರೆದು ತೊರೆದು
ಕಾದುವೆನು ತರ್ಕವ್ಯಾಕರಣ ಬಲದಿಂದ
ಬೀದಿ ಬೀದಿಯಲಿ ಒಸರಿಸಿ ಅರಸಿ.

"ಕುಲಮದ ವೈಭವಮದ
ವಿದ್ಯಾಮದಗಳುಳಿದು
ಹರಿದಾಸರ ಮರೆಯೊಕ್ಕು ಸುಖಿಯಾಗು"

ಎನ್ನುವುದೇ ಹಿತೋಕ್ತಿ! ಧ್ಯಾನದಿಂದ ಹಯಗ್ರೀವ ಮೂರ್ತಿ ಬಂದದ್ದು ಏಕೆ?

ಭಕುತಿಕಡಲೆ ಜ್ಞಾನ ವೈರಾಗ್ಯ ಬೆಲ್ಲದ
ಮುಕುತಿ ಆನಂದ ಸುಖದ ಕ್ಷೀರಲಡ್ಡಿಗೆ
ಯುಕುತಿಧ್ಯಾನ ಕೊಟ್ಟು ನೀನು ಎಲ್ಲ ಮಾತಲ್ಲಿ,
ಶಕುತಿ ಸಂತೋಷ ಮಹಿಮೆ ತೋರಬಂದೆಯ"

ಎಂದು ಅರ್ಥಗರ್ಭಿತವಾದ ನಿವೇದನಗೈಯುವ ಆ ಸ್ತರವು ನಮಗೂ ಅಗತ್ಯವೆನಿಸದೆ!?

"ನೆನೆವೆನನುದಿನ ನೀಲನೀರದ ವರ್ಣನ, ಗುಣದನ್ನನ, ಮುನಿಜನ
ಪ್ರಿಯ ಮುದ್ದು ಉಡುಪಿನ ರಂಗನ, ಧರ್ಮಪಾಲನನ

ಎಂಬುವಲ್ಲಿ ಆ ಓಟವೇ ಸೊಗಸೆನಿಸುತ್ತದೆ.

ವಾದಿರಾಜರ "ಭ್ರಮರಗೀತ" ದಾಸಸಾಹಿತ್ಯ ಪ್ರಕಾರದಲ್ಲಿಯೇ ಒಂದು ವಿಶಿಷ್ಟ ರಚನೆ. ಹಿಂದೀ ಸಾಹಿತ್ಯದಲ್ಲಿಯೂ ಈ ಪ್ರಕಾರ ತುಂಬಾ ಜನಪ್ರಿಯವಾದ್ದದ್ದು.

ಗೋಪಿಯರು "ಭ್ರಮರ"ದ ಮೂಲಕ ತಮ್ಮ ವಿರಹ ಪ್ರೇಮ ಕೃಷ್ಣ ಹಂಬಲದ ತೊಳಲಾಟವನ್ನು ಸಂದೇಶ ರೂಪದಲ್ಲಿ ಕಳಿಸುವ ರಚನೆ. ಗೋಕುಲಕ್ಕೆ ಬಂದ ಉದ್ಧವನನ್ನು ಭ್ರಮರವೆಂದೇ ಪರಿಗಣಿಸಿ ಗೋಪಿಕನ್ಯೆಯರು ತಮ್ಮ ಮನದ ಮುಕುಂದನಿಗೆ ಮಥುರೆಗೆ ಸಂದೇಶ ಕಳುಹುತ್ತಾರೆ ಈ ರಚನೆ ಅವರ ಸೃಜನಶೀಲ ಮನೋಧರ್ಮಕ್ಕೂ ಉದಾಹರಣೆ ಆಗುತ್ತದೆ.

ವಾದಿರಾಜರ ಜನಪ್ರಿಯ ಕೀರ್ತನೆಗಳು ಅನೇಕ. ಅವೆಲ್ಲವೂ ಜನತೆಯ ಬದುಕಿಗೆ ಹಿತಕೋರುವ, ಸ್ವಾಸ್ಥ್ಯವನ್ನು ಕಾಪಾಡುವ ಗೀತಗಳೇ ಆಗುತ್ತವೆ.

ಧವಳ ಗಂಗೆಯ ಗಂಗಾಧರ ಮಹಾಲಿಂಗ
ಮಾಧವನ ತೋರಿಸಯ್ಯ ಗುರುಕುಲೋತ್ತುಂಗ"

ಎನ್ನುವ ಕೀರ್ತನೆಯಲ್ಲಿ ಪರಮೇಶ್ವರನ ಪ್ರಶಂಸೆಯ ಮೂಲಕ ತಮ್ಮ ಆರಾಧ್ಯ ಶ್ರೀ ಹರಿಯನ್ನು ತೋರೆಂದು ಪ್ರಾರ್ಥಿಸುವ ನಿಷ್ಠೆ ಗಮನಾರ್ಹ.

"ಹಯವದನ ಎನ್ನ ನೀನು ಸಲಹಲಾಗದೆ" ಎಂಬುವ

ಅಂಕಿತದ ಕೀರ್ತನದ ಕಾವ್ಯಕೌಶಲ ಗಮನೀಯ :

ಪಾಲಸಾಗರ ಮಧ್ಯದಲ್ಲಿ ಏಳು ಸುತ್ತಿನ ಎಸವ ಕೋಟೆ
ನೀಲಮಾಣಿಕ್ಯ ವಜ್ರದಿಂದ ಗಾರೆನಿಕ್ಕಿದ ಸಜ್ಜೆಗೃಹ

ಮೇಲೆ ಶೇಷನೊರಗು ಹಾಸಿಕೆ ಶ್ರೀರುಕ್ಮಿಣಿ ಸತ್ಯಭಾಮೆರೊಡನೆ ಸರಸ
ಸಲ್ಲಾಪನೆ ಸ್ವಾಮಿ ಕೇಳು ಸಾಮಗಾನ ವೇದ ಘೋಷಣೆ"

ಆಗಿನ ಕಾಲದಲ್ಲಿ "ಗಾರೆನಿಕ್ಕಿದ" ಎಂಬುದು ಗಮನೀಯ. "ಲೋಕಭರಿತನೋ ರಂಗ ಅನೇಕ ಚರಿತನೋ", ಕಂಡೆಳಂಡೆನು ಕೃಷ್ಣ ನಿನ್ನಯ ಮಂಗಳ ವಿಗ್ರಹ, ಆನಂದ ತೀರ್ಥರೆಂಬ ಆರ್ತಿಯ ಪೆಸರುಳ್ಳ, ಗುರುಮಧ್ವಮಿನಿರಾಯ, ಮಂಗೆ ಬೋಳಾದರೇನು ಮನಶುದ್ಧಿ ಇಲ್ಲವು, ನಾಯಿ ಬಾಲಕೆ ನಾರಾಯಣ ತೈಲ ತಿಕ್ಕಿತೀಡಿದರೇನು, ಅಲ್ಲಿಯರಾಯನ ಬಳಿಗೆ ಹೋಗಿ ಪುಲ್ಲಿಗೆಯಬೇಡುವರೆ, ದಿಮ್ಮಿಸಾಲೆ ಗಾನದಿಮ್ಮಿಸಾಲೆ, ಎಂಬುವ ಜಾನಪದ ಹಾಡು,

"ಹಣವೆ ನಿನ್ನಯ ಗಣವೆನಿತು ಬಣ್ಣಿಪೆನಯ್ಯ" ತಾಳುವಿಕೆಗಿಂತ ತಪವು ಇಲ್ಲ ಕೇಳಬಲ್ಲವರಿಗೆ ಹೇಳುವೆನು ಸೊಲ್ಲ" ಎಂಬುವಲ್ಲಿ ವಿದಿತಪಡಿಸುವ ಲೋಕಪ್ರಜ್ಞೆ ಕುತೂಹಲಕಾರಿ ಹಾಗೂ ಸತ್ಯ ಪ್ರತಿಪಾದಕ ರಚನೆಗಳೆನಿಸುತ್ತದೆ. (ಸರ್ವೇ ಗುಣಾಃ ಕಾಂಚನಮಾಶ್ರಯಂತಿ" ಎಂಬುವ ಭರ್ತೃಹರಿಯ ಸಾಲು ನೆನಪಾದೀತು!)

ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯಯ್ಯ ಎಂಬುವ ಸಾಲು ಸರ್ವಥಾ ಅರ್ಥಯುತವಾದ್ದೆ!

ತಾಳು, ತಾಳ್ಮೆಯಿಂದಿರು ಸಹನೆಯೇ ತುಂಬಾ ಬೆಲೆಯುಳ್ಳ ಮೌಲ್ಯ"
"ನಕ್ಕು ನುಡಿವರ ಮುಂದೆ ಅಕ್ಕರಿಸದೆ ತಾಳು
ಅಕ್ಕಸವ ಮಾಡುವರ ಅಕ್ಕರದಿ ತಾಳು
ಉಕ್ಕೋ ಹಾಲಿಗೆ ನೀರನಿಕ್ಕುವ ತೆರೆದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು"

ಎಷ್ಟು ಸಹಜ ವರ್ಣನೆ, ಸತ್ಯ ಕೂಡ ಅಲ್ಲವೇ!

"ನೆಟ್ಟಸಸಿಯು ಫಲಬರುವ ತನಕ ಶಾಂತಿಯ ತಾಳು" ಎಂಬುವ ಒಂದು ಸಾಲಿನಲ್ಲಿ ವಿಶೇಷವಾದ ಅರ್ಥವೇ ಹುದುಗಿದೆ.

"ಉಂಡು ಸುಖ ಅಲ್ಲ, ಉಟ್ಟು ಪರಿಣಾಮ ಇಲ್ಲ"
"ದುಂಡು ನಾಯಿಯಂತೆ ಮನೆ ಮನೆಗಳ ತಿರುಗಿ ಕೆಟ್ಟೆ"
"ಕಂಬಳಿಯ ಬುತ್ತಿಯಂತೀ ದೇಹದೊಳಗೆ
ಸುಖವೆಂಬುದಿಲ್ಲವು ದುಃಖಭರಿತ;
"ತಾಯ ಮಾರಿ ತೊತ್ತ ಕೊಂಬ, ಕಾಮರನಂತೆ"
"ಮಾರಿ ಹಬ್ಬದ ಕುರಿಯು ತೋರಣವ ಮೆಲುವಂತೆ
"ಓದಿದೆನು ಎಲ್ಲಣ್ಣ ಕಲ್ಲಣ್ಣ ಎನುತಲಿ"

ಎಂಬುವ ಅನೇಕ ಸಾಲುಗಳಲ್ಲಿ ಅನೇಕೆಡೆ ವಚನಕಾರರ ಚಿಂತನವು ಪ್ರತಿಫಲನವಾಗಿದೆಯೋ ಎಂದೆನಿಸುವಷ್ಟು ರೋಚಕವೆನಿಸುತ್ತದೆ! (ಹರಕೆಗೆ ತಂದ ಕುರಿ ಹಬ್ಬಕ್ಕೆ ತಂದ ತೋರಣ ಮೇಯ್ದಿತ್ತು-ಎಂಬುವ ವಚನದ ಸಾಲು ನೆನಪಾಗುತ್ತದೆ.)

ವಾದಿರಾಜರ ಒಟ್ಟಾರೆ ಕೀರ್ತನಸಂಪದ, ಅವರ ಕವಿಹೃದಯ ಕಾವ್ಯಗುಣ ಕೌಶಲ, ಭಾವಗೀತಾತ್ಮಕ ಆಂತರ್ಯ, ಸಮಾಜಸುಧಾರಣೆಗೆ ಹಂಬಲಿಸುವ ಮನೋಧರ್ಮ, ಕೀರ್ತನೆಗಳಲ್ಲಿ 'ಅಡಕವಾಗಿರುವ ಸಹಜ ಪಾಂಡಿತ್ಯ, ಲೋಕಾರೂಢಧರ್ಯ ಮನಂಬುಗುವಂತೆ ತಿಳಿಸುವ ಪ್ರವಾದಿತನ, ಅವರ ವಾಗ್ವಿಲಾಸ ಎಲ್ಲವೂ ದಾಸಸಾಹಿತ್ಯದ ಸೃಜನಾತ್ಮಕ ಯುಗದಲ್ಲಿಯಷ್ಟೇ ಅಲ್ಲಸದಾ ಮೂಡಣದ ಧ್ರುವತಾರೆಯಾಗುತ್ತಾರೆ ಅವರು ಹಾಗೂ ಅವರ ಕೀರ್ತನ ಸಂಪದ.

□□

# ನಾಣ್ಯಗಳಲ್ಲಿ ದಶಾವತಾರಗಳ ಚಿತ್ರಣ : ಕಿರು ಸಮೀಕ್ಷೆ

– ಎ.ವಿ. ನರಸಿಂಹಮೂರ್ತಿ

ಅವತಾರಗಳ ಕಲ್ಪನೆ ಹಿಂದೂ ಧರ್ಮದಲ್ಲಿ ಕಾಣಬರುವ ಪ್ರಮುಖವಾದ ಅಂಶ. ಬಹುಶಃ ಪ್ರಪಂಚದ ಇತರ ಯಾವ ಧರ್ಮಗಳಲ್ಲಿಯೂ ಇದು ಕಾಣಬರುವುದಿಲ್ಲ. ದೇವರು ಆಗಾಗ್ಗೆ ಅವತಾರಗಳನ್ನು ಎತ್ತಿ ಸಜ್ಜನರ ಉದ್ಧಾರ ಹಾಗೂ ದುಷ್ಟರನ್ನು ನಾಶಪಡಿಸುವ ಈ ಅಂಶ ಬಹಳ ಆಕರ್ಷಕವಾಗಿ ಕಾಣಬರುವುದಲ್ಲದೆ, ಜನಗಳಿಗೆ ಒಂದು ರೀತಿಯ ಸಮಾಧಾನವನ್ನೂ ಒದಗಿಸಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ನಮ್ಮ ಪರಂಪರೆಯ ಪ್ರಕಾರ ವಿಷ್ಣುವಿನ ಹತ್ತು ಅವತಾರಗಳು ಬಹಳ ಪ್ರಸಿದ್ಧ. ಅವು ಕ್ರಮವಾಗಿ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ. ಅನೇಕ ವಿದ್ವಾಂಸರ ಪ್ರಕಾರ ಇದು ಮಾನವನ ವಿಕಾಸದ ಸಂಕೇತವೂ ಹೌದು. ಮೊದಲ ಮೂರು ಪ್ರಾಣಿಗಳು, ನಾಲ್ಕನೆಯದು ಪ್ರಾಣಿ ಮತ್ತು ಮಾನವನ ಸಮನ್ವಯ, ಐದನೆಯದು ಪೂರ್ಣವಿಕಾಸ ಹೊಂದದ ವಾಮನ, ಆರನೆಯದು ನಾಗರೀಕತೆಯನ್ನು ಕಲಿಸಿಕೊಟ್ಟ ಪರಶುರಾಮ, ಕೊನೆಯ ನಾಲ್ಕು ದಿವ್ಯತ್ವಕ್ಕೇರಿದ ಪರಿಪೂರ್ಣ ಮಾನವರು. ಈ ಅವತಾರಗಳ ಮೂಲ ಉದ್ದೇಶವೇ ದುಷ್ಟರನ್ನು ಸದೆಬಡಿದು ಶಿಷ್ಟರನ್ನು ಸಂರಕ್ಷಿಸುವುದಾಗಿದೆ. ಈ ದಶಾವತಾರಗಳನ್ನು ಕುರಿತಾದ ಅನೇಕ ಪುರಾಣಗಳಿವೆ. ಅವುಗಳ ಆಧಾರದ ಮೇಲೆ ರಚಿತವಾದ ನೂರಾರು ಗ್ರಂಥಗಳು ಸಂಸ್ಕೃತ ಮತ್ತು ಬೇರೆ ಬೇರೆ ಭಾರತೀಯ ದೇಶಭಾಷೆಗಳಲ್ಲಿ ರಚಿತವಾಗಿವೆ. ಶಿಲ್ಪಿಗಳು ಈ ದೇವರುಗಳಿಗಾಗಿ ನೂರಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಈ ದೇವಾಲಯಗಳೊಳಗೆ ನೂರಾರು ದಶಾವತಾರದ ಬಿಡಿ ಶಿಲ್ಪಗಳೂ ಇವೆ. ವಾಗ್ಗೇಯಕಾರರು ದಶಾವತಾರಗಳನ್ನು ಕುರಿತು ಸಂಗೀತ ಕೃತಿಗಳನ್ನು ರಚಿಸಿದ್ದಾರೆ. ವರ್ಣಚಿತ್ರಕಾರರು ದಶಾವತಾರದ ವರ್ಣಚಿತ್ರಗಳನ್ನು ರಚಿಸಿ ಧನ್ಯತಾಭಾವವನ್ನು ಪಡೆದಿದ್ದಾರೆ. ರಾಜವಂಶಗಳು ಹಾಗೂ ರಾಜರು ದಶಾವತಾರಗಳಿಗೆ ಭಕ್ತಿಯನ್ನು ತೋರ್ಪಡಿಸುವುದರಲ್ಲಿ ಹಿಂದೆ ಬಿದ್ದಿಲ್ಲ. ದಶಾವತಾರಗಳ ರೂಪಗಳನ್ನು ಶಾಸನಗಳಲ್ಲಿ ಸ್ತುತಿಸಿರುವುದಲ್ಲದೆ, ಈ ದೇವರ ಚಿತ್ರಗಳಿರುವ ನಾಣ್ಯಗಳನ್ನು ಟಂಕಿಸಿ ತಮ್ಮ ಗೌರವವನ್ನು ಅರ್ಪಿಸಿದ್ದಾರೆ. ಈ ರೀತಿ ದಶಾವತಾರದ ಕಲ್ಪನೆ ನಮ್ಮ ಸಮಾಜೋ–ಧಾರ್ಮಿಕ ಜೀವನದಲ್ಲಿ ಹಾಸುಹೊಕ್ಕಾಗಿದೆ.

ಧಾರ್ಮಿಕ ಇತಿಹಾಸವನ್ನು ರಚಿಸುವಲ್ಲಿ ನಾಣ್ಯಗಳ ಪಾತ್ರ ಮಹತ್ತರವಾದುದು ಎಂಬುದು ನಾಣ್ಯಶಾಸ್ತ್ರಜ್ಞರ ಅಭಿಮತ. ಅದನ್ನು ಹತ್ತಾರು ಉದಾಹರಣೆಗಳಿಂದ ಸಮರ್ಥಿಸಬಹುದು. ಅದರ ವಿವರಗಳಿಗೆ ಹೋಗದೆ ದಶಾವತಾರಗಳು ನಾಣ್ಯಗಳಲ್ಲಿ ಯಾವ ರೀತಿ ಬಳಸಲ್ಪಟ್ಟಿವೆ ಎಂಬುದನ್ನು ಇಲ್ಲಿ ಗಮನಿಸಲಾಗಿದೆ. ದಶಾವತಾರದ ಎಲ್ಲಾ ರೂಪಗಳೂ ನಾಣ್ಯಗಳಲ್ಲಿ ಕಂಡುಬಂದಿಲ್ಲ. ಕ್ಷೇತ್ರಕಾರ್ಯ ನಡೆದು ಹೊಸ ನಾಣ್ಯಗಳು ಪತ್ತೆಯಾದರೆ ದಶಾವತಾರದ ಎಲ್ಲಾ ರೂಪಗಳ ನಾಣ್ಯಗಳು ದೊರಕಬಹುದು. ಈಗ ದೊರಕಿರುವ ದಶಾವತಾರಗಳ ರೂಪಗಳುಳ್ಳ ನಾಣ್ಯಗಳನ್ನು ಕ್ರಮವಾಗಿ ಗಮನಿಸಬಹುದು.

## ಮತ್ಸ್ಯಾವತಾರ

ವಿಷ್ಣುವಿನ ಮೊದಲನೆಯ ಅವತಾರವಾದ ಮತ್ಸ್ಯ ಅಥವಾ ಮೀನು ಧಾರ್ಮಿಕವಾಗಿ ವಿಶೇಷತೆಯನ್ನು ಪಡೆದಿದೆ. ಕಾಲಕ್ರಮದಲ್ಲಿ ಅದು ಅಷ್ಟಮಂಗಲ ಚಿಹ್ನೆಗಳಲ್ಲಿ ಒಂದಾಗಿಯೂ ಪ್ರಸಿದ್ಧಿ ಗಳಿಸಿತು. ಇತಿಹಾಸದ ದೃಷ್ಟಿಯಿಂದ ಮತ್ಸ್ಯ ರೂಪದ ಪ್ರಾಚೀನತೆ ಸಿಂಧೂ–ಸರಸ್ವತೀ ನಾಗರೀಕತೆಯ ಕಾಲಮಾನಕ್ಕೆ ಸೇರುತ್ತದೆ. ಅಂದರೆ ಕ್ರಿ.ಪೂ. ಮೂರನೆಯ ಸಹಸ್ರಮಾನದ ಸಮಯದಲ್ಲಿ ಮತ್ಸ್ಯ ಜನಜನಿತವಾದ ರೂಪದಲ್ಲಿ ಸಿಂಧೂ ಬರವಣಿಗೆಯಲ್ಲಿ ಕಾಣಿಸಿಕೊಂಡಿತ್ತು. ಅದು ನೀರನ್ನು ಸೂಚಿಸುತ್ತದೆ ಎಂದು ಕೆಲವರು ಭಾವಿಸಿದರೆ ಮತ್ತೆ ಕೆಲವರು ಅದು 'ಮ' ಎಂಬ ಅಕ್ಷರದ ಸಂಕೇತ ಎಂದೂ ಭಾವಿಸಿದ್ದಾರೆ. ಅದನ್ನು ಇಲ್ಲಿ ವಿವರವಾಗಿ ಗಮನಿಸಲಾಗಿಲ್ಲ. ಆದರೆ ಭಾರತದ ಪ್ರಪ್ರಥಮ ನಾಣ್ಯಗಳು ಎಂಬ ಕೀರ್ತಿಗೆ ಭಾಜನವಾಗಿರುವ ಪಂಚ್‌ಮಾರ್ಕ್ (ಮುದ್ರಾಂಕಿತ) ನಾಣ್ಯಗಳಲ್ಲಿ ಮತ್ಸ್ಯ ಒಂದು ಪ್ರಮುಖ ರೂಪವಾಗಿ ಕಾಣಬರುತ್ತದೆ. ಇತರ ರೂಪಗಳಿಗೆ ಹೋಲಿಸಿ ನೋಡಿದರೆ ಇದು ಬಹಳವಾಗಿ ಕಂಡುಬರುತ್ತದೆ.

ಕರ್ನಾಟಕದ ನಾಣ್ಯಗಳ ವಿಷಯವನ್ನು ಗಮನಿಸಿದರೆ,

೭/೨, ದೇವಗಿರಿ, ಗೋಕುಲಂ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು – ೫೭೦೦೧೨

ಮತ್ಸ್ಯ ನಮಗೆ ವಿಶೇಷವಾಗಿ ಕಂಡುಬರುವುದು ತುಳುನಾಡಿನಲ್ಲಿ ಆಳಿದ ಆಳುಪ ರಾಜವಂಶದವರ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳಲ್ಲಿ. ಆಳುಪರು ತಮ್ಮನ್ನು 'ಮೀನ ಲಾಂಛನೋಪೇತಃ' ಎಂದು ಕರೆದುಕೊಂಡಿದ್ದಾರೆ. ಆದುದರಿಂದ ಅವರ ರಾಜಲಾಂಛನ ಮೀನು. ಇದನ್ನು ಅವರು ತಮ್ಮ ನಾಣ್ಯಗಳಲ್ಲಿ ಅಳವಡಿಸಿದರು. ಇವರ ಒಂದೆರಡು ನಾಣ್ಯಗಳನ್ನು ಉದಾಹರಣೆಗಾಗಿ ಗಮನಿಸಬಹುದು.

ನಾಣ್ಯ–೧

**ಮುಮ್ಮುಖ** : ಒಂದು ಮೀನು, ಎಡಕ್ಕೆ ಶಂಖ, ಬಲಕ್ಕೆ ಚೌರಿ

**ಹಿಮ್ಮುಖ** : 'ಪಾಂಡ್ಯ ಧನಂಜಯ' (ನಾಗರೀ ಬರಹ)

ನಾಣ್ಯ–೨

**ಮುಮ್ಮುಖ** : ಊರ್ಧ್ವಮುಖ ಎರಡು ಮೀನುಗಳು, ಎಡಕ್ಕೆ ಶಂಖ, ಬಲಕ್ಕೆ ಚೌರಿ

**ಹಿಮ್ಮುಖ** : 'ಪಾಂಡ್ಯ ಧನಂಜಯ' (ನಾಗರೀ ಬರಹ)

ನಾಣ್ಯ–೩

**ಮುಮ್ಮುಖ** : ಅಡ್ಡಡ್ಡಲಾಗಿರುವ ಎರಡು ಮೀನುಗಳು, ಮೇಲ್ಗಡೆ ಎರಡು ಸಣ್ಣ ಮೀನುಗಳು

**ಹಿಮ್ಮುಖ** : 'ಪಾಂಡ್ಯ ಧನಂಜಯ' (ಕನ್ನಡ ಬರಹ)

ನಾಣ್ಯ–೪

**ಮುಮ್ಮುಖ** : ಉದ್ದುದ್ದವಾಗಿರುವ ಎರಡು ಮೀನುಗಳು

**ಹಿಮ್ಮುಖ** : 'ವೀ' ಎನ್ನುವ ಕನ್ನಡ ಅಕ್ಷರ

ಮತ್ತೊಂದು ನಾಣ್ಯದಲ್ಲಿ ಊರ್ಧ್ವಮುಖವಾಗಿರುವ ಎರಡು ದೊಡ್ಡ ಮೀನುಗಳು ಮತ್ತು ಅಕ್ಕಪಕ್ಕದಲ್ಲಿ ಎರಡು ಸಣ್ಣ ಮೀನುಗಳಿವೆ. ಈ ರೀತಿ ಆಳುಪರು ಮೀನುಗಳುಳ್ಳ ವಿವಿಧ ರೀತಿಯ ನಾಣ್ಯಗಳನ್ನು ಟಂಕಿಸಿದರು. ಈ ಹಿಂದೆ ಈ ನಾಣ್ಯಗಳನ್ನು ಮಧುರೆಯ ಪಾಂಡ್ಯರು ಅಚ್ಚು ಹಾಕಿಸಿದರು ಎಂದು ಭಾವಿಸಲಾಗಿತ್ತು. ಏಕೆಂದರೆ ಅವರ ರಾಜಲಾಂಛನವೂ ಮೀನು. ಆದರೆ ಪಾಂಡ್ಯ ಧನಂಜಯ ಎಂಬ ಬಿರುದನ್ನು ಹೊಂದಿದ್ದವರು ಆಳುಪರು. ಜೊತೆಗೆ ನಾಣ್ಯಗಳ ಮೇಲೆ ಕನ್ನಡ ಲಿಪಿಯ ಬರವಣಿಗೆ ಇರುವುದರಿಂದ ಇವುಗಳು ಖಚಿತವಾಗಿ ಆಳುಪರ ನಾಣ್ಯಗಳೆಂದೇ ಹೇಳಬೇಕು. ಪಾಂಡ್ಯ ಧನಂಜಯ ಎಂಬ ಬಿರುದನ್ನು ಆಳುಪ ಅರಸರೆಲ್ಲರೂ ಧರಿಸಿರುವುದರಿಂದ ಯಾವ ರಾಜನಿಗೆ ಸೇರಿದ ನಾಣ್ಯಗಳೆಂದು ಖಚಿತವಾಗಿ ಹೇಳುವುದು ಕಷ್ಟಸಾಧ್ಯ. ವೀ ಎನ್ನುವ ಅಕ್ಷರವನ್ನು ಹೊಂದಿರುವ ನಾಣ್ಯವು ಇದೇ ವಂಶದ ವೀರ ಕುಲಶೇಖರನಿಗೆ ಸೇರಿದ್ದೆಂದು ಭಾವಿಸಲಾಗಿದೆ. ಇದು ಏನೇ ಇದ್ದರೂ ಮೀನಿನ ಚಿಹ್ನೆಯನ್ನೇ ಮತ್ಸ್ಯಾವತಾರದ ಪೂರ್ಣ ಸಂಕೇತವೆಂದು ಭಾವಿಸುವುದು ಅಷ್ಟೊಂದು ಸಮರ್ಥನೀಯವಾಗದು.

**ಕೂರ್ಮಾವತಾರ**

ವಿಷ್ಣುವಿನ ಎರಡನೆಯ ಅವತಾರವಾದ ಕೂರ್ಮವನ್ನು ಹೊಯ್ಸಳ ಮತ್ತು ಆಳುಪರ ನಾಣ್ಯಗಳಲ್ಲಿ ಕಾಣುತ್ತೇವೆ. ನೊಣಂಬವಾಡಿಗೊಂಡ ಎಂಬ ನಮೂನೆಯ ಹೊಯ್ಸಳ ನಾಣ್ಯಗಳು ಬಹಳ ಜನಾನುರಾಗಿಯಾಗಿದ್ದವು. ಹೊಯ್ಸಳ ವಿಷ್ಣುವರ್ಧನನು (ಕ್ರಿ.ಶ.೧೧೦೮–೧೧೪೧) ನೊಳಂಬವಾಡಿ ಎಂಬ ಪ್ರಾಚೀನ ಪ್ರಾಂತ್ಯವನ್ನು ಗೆದ್ದು, ನೊಳಂಬವಾಡಿಗೊಂಡ ಎಂಬ ಬರಹವುಳ್ಳ ಗದ್ಯಾಣ ತೂಕದ ಚಿನ್ನದ ನಾಣ್ಯಗಳನ್ನು ಟಂಕಿಸಿದನು. ಇವು ಬಹಳ ಪ್ರಸಿದ್ಧವಾಗಿರುವ ಚಿನ್ನದ ನಾಣ್ಯಗಳು. ಈ ರೀತಿಯ ಒಂದು ಚಿನ್ನದ ನಾಣ್ಯದಲ್ಲಿ ಕೂರ್ಮದ ಚಿತ್ರವಿರುವುದನ್ನು ಗಮನಿಸಬೇಕು. ಈ ನಾಣ್ಯದ ತೂಕ ೪.೧ ಗ್ರಾಂ, ಅಗಲ ೧೬ ಮಿಲಿಮೀಟರ್. ಇದರ ವಿವರ ಇಂತಿದೆ.

**ಮುಮ್ಮುಖ** : ನಿಂತಿರುವ ಸಿಂಹ; ಸಿಂಹದ ಮೇಲೆ ಕೂರ್ಮ, ಅಕ್ಕಪಕ್ಕದಲ್ಲಿ ಸೂರ್ಯಚಂದ್ರರು.

**ಹಿಮ್ಮುಖ** : ಮೂರು ಸಾಲುಗಳ ಕನ್ನಡ ಲಿಪಿಯ ಬರಹ 'ನೊಣಂಬವಾಡಿಗೊಂಡ'.

ತುಳುನಾಡಿನ ಆಳುಪರ ಚಿನ್ನದ ಗದ್ಯಾಣ ನಾಣ್ಯವೊಂದರಲ್ಲಿ ಕೂರ್ಮದ ಚಿತ್ರವಿದೆ.

**ಮುಮ್ಮುಖ** : ಮಧ್ಯದಲ್ಲಿ ಲಂಬವಾಗಿರುವ ಎರಡು ಮೀನುಗಳು; ಎಡಭಾಗದಲ್ಲಿ ಕೂರ್ಮ; ಬಲಭಾಗದಲ್ಲಿ ವರಾಹ

**ಹಿಮ್ಮುಖ** : ಕನ್ನಡ ಲಿಪಿಯಲ್ಲಿ ಮೂರು ಸಾಲುಗಳ ಬರಹ 'ಪಾಂಡ್ಯ ಧನಂಜಯ'.

ಈ ನಾಣ್ಯ ವಿಶಿಷ್ಟವಾದದ್ದು. ಈ ನಾಣ್ಯದಲ್ಲಿ ಮತ್ಸ್ಯ, ಕೂರ್ಮ ಮತ್ತು ವರಾಹಗಳು ಒಂದರಪಕ್ಕದಲ್ಲಿರುವುದು ಹೆಚ್ಚಳ. ಇದರಲ್ಲಿನ ಮತ್ಸ್ಯವನ್ನು ಕೂರ್ಮ ಮತ್ತು ವರಾಹ ರೂಪಗಳ ಜೊತೆಗೇ ಇರುವ ಕಾರಣ ಮತ್ಸ್ಯಾವತಾರದ ಸಂಕೇತವನ್ನಾಗಿ ತಿಳಿಯುವುದು ಸೂಕ್ತವೆಂದು ತೋರುತ್ತದೆ. ಅಂದರೆ ಒಂದೇ ನಾಣ್ಯದಲ್ಲಿ ದಶಾವತಾರದ ಮೊದಲಿನ ಮೂರು ಅವತಾರಗಳು ಕಾಣಬರುವುದು ತುಂಬ ವಿಶೇಷವಾದದ್ದು. ನಿಂತಿರುವ ಮಾನುಷ ರೂಪದ ಕೂರ್ಮಾವತಾರವನ್ನು ವಿಜಯನಗರದ ಆರವೀಡು ವಂಶದ ಮುಮ್ಮಡಿ ಶ್ರೀರಂಗರಾಯನ (ಕ್ರಿ.ಶ. ೧೬೪೨–೧೬೪೬) ತಾಮ್ರದ ನಾಣ್ಯದ ಮುಮ್ಮುಖದಲ್ಲಿ ಕಾಣಬಹುದು. ಇದರ ತೂಕ ೨ ಗ್ರಾಂ, ಅಗಲ ೦.೫". ಈ ನಾಣ್ಯದ ಕೆಳಭಾಗದಲ್ಲಿ ಕೂರ್ಮವಿದೆ. ಹಿಮ್ಮುಖದಲ್ಲಿ ಶ್ರೀರಂಗ ಎನ್ನುವ ಕನ್ನಡ ಬರವಣಿಗೆ ಇದೆ. ಇದೊಂದು ವಿಶಿಷ್ಟ ನಾಣ್ಯ.

**ವರಾಹಾವತಾರ**

ಬಾದಾಮಿ ಚಲುಕ್ಯರ ರಾಜ ಲಾಂಛನ ವರಾಹ. ಆದುದರಿಂದ ವರಾಹವನ್ನು ಹೊಂದಿದ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದರು. ಈ ನಾಣ್ಯಗಳು ವರಹ ಅಥವಾ ವರಾಹ ಎನ್ನುವ ಹೆಸರಿನಿಂದ ಪ್ರಖ್ಯಾತಿ ಪಡೆದವು. ಈ ವರಹವೆಂಬ ಹೆಸರಿನ ಚಿನ್ನದ ನಾಣ್ಯಗಳು ದಕ್ಷಿಣಭಾರತ ಮತ್ತು ದಖ್ಖನ್ನಿನಲ್ಲಿ ಎಷ್ಟೊಂದು ಪ್ರಾಮುಖ್ಯ ಪಡೆದುವೆಂದರೆ, ಎಲ್ಲ ಚಿನ್ನದ ನಾಣ್ಯಗಳನ್ನೂ ವರಹ ಎಂದು ಕರೆಯುವ ಪದ್ಧತಿ ಆರಂಭವಾಯಿತು. ಗಮನಿಸಬೇಕಾದ ಅಂಶವೆಂದರೆ ಈ ನಾಣ್ಯಗಳ ಮೇಲೆ ವರಾಹದ ಚಿಹ್ನೆಯಿಲ್ಲದಿದ್ದರೂ ಅವುಗಳನ್ನೂ ವರಹ ಎನ್ನುವ ಹೆಸರಿನಿಂದ ಕರೆಯುವ ಪದ್ಧತಿ ಚಾಲ್ತಿಗೆ ಬಂದಿತು. ಇದು ನಾಣ್ಯಶಾಸ್ತ್ರಕ್ಕೆ ಬಾದಾಮಿಯ ಚಲುಕ್ಯರ ಪ್ರಮುಖ ಕೊಡುಗೆಯೆಂದು ಹೇಳಬಹುದು. ಕೆಲವು ಮುಖ್ಯ ವರಹ ನಾಣ್ಯಗಳನ್ನು ಈಗ ಗಮನಿಸಬಹುದು.

**ನಾಣ್ಯ-೧**

ಇದು ಚಿನ್ನದ ನಾಣ್ಯ. ತೂಕ ೩.೮ ಗ್ರಾಂ, ಅಗಲ ೦.೬"

**ಮುಮ್ಮುಖ :** ವರಾಹದ ಚಿತ್ರ; ಸೂರ್ಯ ಚಂದ್ರರು

**ಹಿಮ್ಮುಖ :** ಅಗಲವಾದ ಪುಷ್ಪ ವಿನ್ಯಾಸ

**ನಾಣ್ಯ-೨**

ಇದು ಚಿನ್ನದ ನಾಣ್ಯ. ತೂಕ ೩.೯ ಗ್ರಾಂ, ಅಗಲ ೦.೬"

**ಮುಮ್ಮುಖ :** ಅಲಂಕೃತ ಹೊದಿಕೆ ಇರುವ ವರಾಹ; ಸೂರ್ಯ ಚಂದ್ರರು

**ಹಿಮ್ಮುಖ :** ಅಷ್ಟದಳ ಪದ್ಮ

**ನಾಣ್ಯ-೩**

ಇದು ಚಿನ್ನದ ನಾಣ್ಯ. ಆದರೆ ಇದು ಸಾಮಾನ್ಯ ವರಹದ ಎರಡರಷ್ಟು ತೂಕದ ನಾಣ್ಯ; ತೂಕ ೭.೮ಗ್ರಾಂ. ಇದನ್ನು ಟಂಕಿಸಿದವನು ಬಾದಾಮಿ ಚಲುಕ್ಯರ ಮೊದಲನೆಯ ವಿಕ್ರಮಾದಿತ್ಯ (ಕ್ರಿ.ಶ. ೬೫೫- ೬೮೨ ) ಎಂದು ಭಾವಿಸಲಾಗಿದೆ.

**ಮುಮ್ಮುಖ :** ವರಾಹದ ಚಿತ್ರ, ಪಕ್ಕದಲ್ಲಿ ದೀಪಸ್ತಂಭ. ಅದರ ಕೆಳಗೆ ಶ್ರೀ ವಿಕ್ರಮ ಎನ್ನುವ ಬರಹ.

**ಹಿಮ್ಮುಖ :** ನಿಂತಿರುವ ಮನುಷ್ಯ. ಒಂದು ತುದಿಯಲ್ಲಿ ಸಣ್ಣ ಪ್ರಮಾಣದ ವರಾಹ ಮತ್ತು ವಿಕ್ರಮ ಎನ್ನುವ ನಾಗರೀ ಬರಹ.

ವರಾಹ ಎನ್ನುವ ನಾಣ್ಯಗಳು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ಮೊನ್ನೆಮೊನ್ನೆಯವರೆಗೆ ಬಳಕೆಯಲ್ಲಿ ಇದ್ದವು. ಇದಕ್ಕೆ ಸಮನಾಗಿದ್ದ ಗದ್ಯಾಣ ಎನ್ನುವ ಪದ ನಿಧಾನವಾಗಿ ಮರೆಯಾಗಿ, ಅದರ ಸ್ಥಾನವನ್ನು ವರಾಹ ಆಕ್ರಮಿಸಿಕೊಂಡಿತು. ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಗೋವೆಯ ಕದಂಬರು, ದೇವಗಿರಿಯ ಸೇವುಣರು, ವಿಜಯನಗರದ ದೊರೆಗಳು, ಕೆಳದಿಯ ನಾಯಕರು ಹಾಗೂ ಮೈಸೂರು ಒಡೆಯರ್ ರಾಜಮನೆತನಗಳವರು ವರಾಹ ನಾಣ್ಯಗಳನ್ನು ಬಳಸಿದರು. ವಿಜಯನಗರ ಸಾಮ್ರಾಜ್ಯದ ಲಾಂಛನವೂ ವರಾಹವೇ ಆಗಿರುವುದು ಗಮನಾರ್ಹ. ಇಂದಿಗೂ ಕೂಡ ಮದುವೆಯ ಸಮಾರಂಭದಲ್ಲಿ ಹಣದ ರೂಪದಲ್ಲಿ ಕೊಡುಗೆಯನ್ನು ನೀಡಿದಾಗ ಪುರೋಹಿತರು ಇಷ್ಟು ರೂಪಾಯಿ ಎಂದು ಹೇಳದೆ ಇಷ್ಟು ವರಾಹ ಅಥವಾ ಘಟ್ಟಿ ವರಾಹ ಎಂದು ಹೇಳುತ್ತಾರೆ. ಅಂದರೆ ಈ ನಾಣ್ಯವು ಬಳಕೆಯಲ್ಲಿ ಇಲ್ಲದೇ ಇದ್ದರೂ, ಜನಗಳು ವರಾಹ ಎಂಬ ಚಿನ್ನದ ನಾಣ್ಯವನ್ನು ಮರೆತಿಲ್ಲ ಎಂಬುದನ್ನು ಇದು ತೋರಿಸುತ್ತದೆ. ಶಾಸನಗಳಲ್ಲಿ ಚಕ್ರವರಾಹ, ದೊಡ್ಡ ವರಾಹ, ಘಟ್ಟಿ ವರಾಹ, ಶುದ್ಧ ವರಾಹ, ಕಂಠೀರಾಯ ವರಾಹ ಎಂಬ ವಿವಿಧ ಪ್ರಭೇದಗಳನ್ನೂ ಉಲ್ಲೇಖಿಸಲಾಗಿದೆ.

ಬಾದಾಮಿ ಚಲುಕ್ಯರನ್ನು ಬಿಟ್ಟರೆ, ಪೂರ್ವಚಾಲುಕ್ಯರ ದೊರೆಗಳಾದ ಇಮ್ಮಡಿ ಭೀಮ, ಶಕ್ತಿ ವರ್ಮನ್ ಮುಂತಾದ ದೊರೆಗಳೂ ವರಾಹದ ಚಿತ್ರವಿರುವ ಚಿನ್ನದ ನಾಣ್ಯಗಳನ್ನು ಟಂಕಿಸಿದರು. ರಾಜರಾಜ ಮತ್ತು ಕುಲೋತ್ತುಂಗ ಮುಂತಾದ ಚೋಳ ಅರಸರೂ ವರಾಹದ ಚಿತ್ರವಿರುವ ನಾಣ್ಯಗಳನ್ನು ಟಂಕಿಸಿದರು. ಕಲ್ಯಾಣದ ಚಾಲುಕ್ಯ ದೊರೆಗಳಾದ ಇಮ್ಮಡಿ ಜಯಸಿಂಹ, ಸೋಮೇಶ್ವರ ಅವರ ನಾಣ್ಯಗಳಲ್ಲಿಯೂ ವರಾಹದ ಚಿತ್ರವಿದ್ದಿತು. ರಾಜರಾಜ ಚೋಳನ ಕೆಲವು ನಾಣ್ಯಗಳಲ್ಲಿ ವರಾಹವಿದ್ದಿತೆಂದು ತಿಳಿದುಬಂದಿದೆ. ಕೆಲವು ವಿಜಯನಗರ ದೊರೆಗಳೂ ವರಾಹದ ಚಿತ್ರವಿರುವ ನಾಣ್ಯಗಳನ್ನು ಅಚ್ಚು ಹಾಕಿಸಿದರು. ತುಳುವ ವಂಶದ ದೊರೆ ಅಚ್ಯುತರಾಯ (ಕ್ರಿ.ಶ. ೧೫೨೯-೧೫೪೨) ಮತ್ತು ಆರವೀಡು ವಂಶದ ತಿರುಮಲರಾಯರ (ಕ್ರಿ.ಶ. ೧೫೬೫-೧೫೭೨) ನಾಣ್ಯಗಳಲ್ಲಿ ವರಾಹದ ಚಿತ್ರವಿದ್ದಿತು. ಉದಾಹರಣೆಗೆ ಈ ನಾಣ್ಯವನ್ನು ಗಮನಿಸಬಹುದು.

**ನಾಣ್ಯ-೧**

ತಾಮ್ರದ ನಾಣ್ಯ. ತೂಕ ೨.೩ಗ್ರಾಂ, ಅಗಲ ೦.೫"

**ಮುಮ್ಮುಖ :** ಬಿಂದುಗಳಿಂದ ಮಾಡಿದ ವೃತ್ತದೊಳಗೆ ಬಲಕ್ಕೆ ಚಲಿಸುತ್ತಿರುವ ವರಾಹ

**ಹಿಮ್ಮುಖ :** ಎರಡು ಸಾಲುಗಳ ಕನ್ನಡ ಬರಹ ಅಚುತರಾಯ

**ನಾಣ್ಯ-೨**

ತಾಮ್ರದ ನಾಣ್ಯ. ತೂಕ ೩.೨೩ಗ್ರಾಂ, ಅಗಲ ೦.೬"

**ಮುಮ್ಮುಖ :** ಎರಡು ವೃತ್ತಗಳ ವಿನ್ಯಾಸದಲ್ಲಿ ಎಡಕ್ಕೆ ಚಲಿಸುತ್ತಿರುವ ವರಾಹ

ಹಿಮ್ಮುಖ : ಮೂರು ಸಾಲುಗಳ ನಾಗರೀ ಬರಹ ಶ್ರೀ ತಿರುಮಲರಾಯ

ಇಂಡೋ ಸಸ್ಸಾನಿಯನ್ ಅಥವಾ ಗಧ್ಯೆಯ ನಾಣ್ಯಗಳು ಎಂದು ಪ್ರಸಿದ್ಧಿಯಾಗಿರುವ ನಾಣ್ಯಗಳಲ್ಲಿ ವರಾಹದ ಚಿಹ್ನೆಯಿದೆ. ಈ ರೀತಿಯ ನಾಣ್ಯಗಳು ಗುಜರಾತ್, ಮಾಳ್ವ ಮತ್ತು ರಾಜಸ್ಥಾನಗಳಲ್ಲಿ ಬಳಕೆಯಲ್ಲಿದ್ದವು. ಇವುಗಳ ಕಾಲ ಸುಮಾರು ಕ್ರಿ.ಶ. ೯ ನೆಯ ಶತಮಾನ. ಈ ನಾಣ್ಯಗಳು ಆದಿವರಾಹ ನಾಣ್ಯಗಳೆಂದು ಪ್ರಸಿದ್ಧಿ ಪಡೆದವು. ಈ ನಾಣ್ಯಗಳ ಮುಮ್ಮುಖದಲ್ಲಿ ನಿಂತಿರುವ ವರಾಹಾವತಾರ, ಹಿಮ್ಮುಖದಲ್ಲಿ ಅಗ್ನಿವೇದಿಕೆ ಮತ್ತು ಶ್ರೀಮದಾದಿವರಾಹ ಎಂಬ ನಾಗರೀ ಬರಹಗಳಿವೆ. ಈ ನಾಣ್ಯಗಳು ಚಿನ್ನ, ಬೆಳ್ಳಿ ಮತ್ತು ತಾಮ್ರಗಳಲ್ಲಿ ದೊರಕಿವೆ. ಈ ನಾಣ್ಯಗಳಲ್ಲಿ ವರಾಹವು ಭೂಮಿಯನ್ನು ಮೇಲೆತ್ತುತ್ತಿರುವ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿದೆ.

ಆಳುಪರ ನಾಣ್ಯಗಳಲ್ಲಿಯೂ ವರಾಹವನ್ನು ಕಾಣುತ್ತೇವೆ. ಉದಾಹರಣೆಗೆ ಒಂದು ನಾಣ್ಯವನ್ನು ಗಮನಿಸಬಹುದು. ಇದು ಚಿನ್ನದ ಗದ್ಯಾಣ. ತೂಕ ೪.೬ಗ್ರಾಂ, ಅಗಲ ೨೩ ಮಿಲಿಮೀಟರ್. ಮುಮ್ಮುಖದಲ್ಲಿ ಬಲಕ್ಕೆ ಚಲಿಸುತ್ತಿರುವ ವರಾಹವಿದೆ; ಅದರ ಮೇಲೆ ಚಂದಮ ಎನ್ನುವ ಕನ್ನಡ ಬರಹವಿದೆ. ಹಿಮ್ಮುಖದಲ್ಲಿ ಎರಡು ಮೀನುಗಳು, ಶ್ರೀ ಎಂಬ ಅಕ್ಷರ ಇತ್ಯಾದಿಗಳಿವೆ. ಮತ್ತೊಂದು ನಾಣ್ಯವನ್ನು ಕೂರ್ಮಾವತಾರದ ನಾಣ್ಯವನ್ನು ಕುರಿತು ಹೇಳಲಾದ ಸಂದರ್ಭದಲ್ಲಿ ಗಮನಿಸಲಾಗಿದೆ.

ಇತ್ತೀಚೆಗೆ ದೊರಕಿದ ಒಂದು ಬೆಳ್ಳಿಯ ನಾಣ್ಯವನ್ನು ಗಮನಿಸಬಹುದು. ಈ ನಾಣ್ಯದ ಮುಮ್ಮುಖದಲ್ಲಿ ವರಾಹವಿದೆ. ಇದು ಇಡೀ ನಾಣ್ಯವನ್ನು ಆಕ್ರಮಿಸಿದೆ. ಕಾಲುಗಳು ಹಾಗೂ ಬಾಲ ಬಹಳ ಸ್ಫುಟವಾಗಿ ಕಾಣಬರುತ್ತದೆ. ಕೆಳಭಾಗದಲ್ಲಿ ಕೆಲವು ಸಂಕೇತಗಳಿವೆ. ಮೇಲ್ಗಡೆ ಸೂರ್ಯ ಚಂದ್ರರಿದ್ದಾರೆ. ಹಿಮ್ಮುಖದಲ್ಲಿ ಎರಡು ಸಾಲುಗಳ ಬ್ರಾಹ್ಮೀ ಲಿಪಿಯ ಬರಹವಿದೆ. ಇದನ್ನು ಓದುವುದು ಕಷ್ಟವಾದರೂ ಇದರ ಪಾಠ ಕೋಭನರಸ ಅಥವಾ ನಸಕನಿ ಇರಬಹುದೆಂದು ಭಾವಿಸಲಾಗಿದೆ. ಇದರ ಲಿಪಿಯಿಂದ, ಇದು ಶಾತವಾಹನ ಬ್ರಾಹ್ಮೀ ಲಿಪಿಯೆಂದು ಖಚಿತವಾಗುತ್ತದೆ. ಆದುದರಿಂದ ಇದು ಶಾತವಾಹನ ನಾಣ್ಯವಿರಲೇಬೇಕೆಂದು ನಿರ್ಧರಿಸಲಾಗಿದೆ. ಇದರ ಕಾಲ ಕ್ರಿ.ಶ. ಎರಡನೆಯ ಶತಮಾನ. ಇದುವರೆಗೂ ವರಾಹವನ್ನು ನಾಣ್ಯಗಳ ಮೇಲೆ ಅಳವಡಿಸಿದವರು ಬಾದಾಮಿ ಚಲುಕ್ಯರು ಎಂದು ಭಾವಿಸಲಾಗಿತ್ತು. ಆದರೆ ಶಾತವಾಹನ ಕಾಲದ ಈ ನಾಣ್ಯವನ್ನು ನೋಡಿದ ಮೇಲೆ, ವರಾಹವನ್ನು ಮೊತ್ತಮೊದಲನೆಯ ಬಾರಿಗೆ ನಾಣ್ಯಗಳಲ್ಲಿ ಅಳವಡಿಸಿದವರು ಶಾತವಾಹನರು ಎನ್ನುವ ಪ್ರಮುಖ ಅಂಶ ದೃಢಪಡುತ್ತದೆ. ಈ ರೀತಿ ವರಾಹಾವತಾರವು ನಾಣ್ಯಗಳಲ್ಲಿ ಬಿಂಬಿತವಾಗಿದೆ.

ನರಸಿಂಹಾವತಾರ

ವಿಷ್ಣುವಿನ ನಾಲ್ಕನೆಯ ಅವತಾರವಾದ ನರಸಿಂಹ ನಾಣ್ಯಕಾರರನ್ನು ವಿಶೇಷವಾಗಿ ಆಕರ್ಷಿಸಿದೆ ಎಂಬುದು ಗೊತ್ತಾಗುತ್ತದೆ. ಶಿಲ್ಪದಲ್ಲಿದ್ದಂತೆಯೇ ನರಸಿಂಹನನ್ನು ಸಿಂಹದ ರೂಪದಲ್ಲಿ ಹಾಗೂ ಮಾನುಷ ರೂಪದಲ್ಲಿ ತೋರಿಸುವುದನ್ನು ನಾಣ್ಯಟಂಕನಕಾರರು ಅಳವಡಿಸಿಕೊಂಡಿದ್ದರು. ಆದುದರಿಂದ ಈ ಎರಡೂ ರೂಪಗಳನ್ನು ಇಲ್ಲಿ ಗಮನಿಸಲಾಗಿದೆ. ಭಾರತದ ಅತ್ಯಂತ ಪ್ರಾಚೀನ ನಾಣ್ಯಗಳಾದ ಪಂಚ್‌ಮಾರ್ಕ್ ನಾಣ್ಯಗಳಲ್ಲಿ ಅಥವಾ ಕಾರ್ಷಾಪಣಗಳಲ್ಲಿ ಸಿಂಹದ ಚಿಹ್ನೆಯನ್ನು ನೋಡಬಹುದು. ಇದು ಕ್ರಿಪೂ ಮೂರನೆಯ ಶತಮಾನಕ್ಕೆ ಸೇರುತ್ತದೆ.

ಕಲ್ಯಾಣದ ಚಾಲುಕ್ಯರ ನಾಣ್ಯಗಳಲ್ಲಿ ಸಾಮಾನ್ಯವಾಗಿ ಒಂಬತ್ತು ಪಂಚ್‌ಗಳಿರುತ್ತವೆ. ಇವುಗಳಲ್ಲಿ ಐದರಲ್ಲಿ ಸಿಂಹದ ಚಿಹ್ನೆಯಿರುತ್ತದೆ. ಒಂದಲ್ಲ ಒಂದು ರೂಪದಲ್ಲಿ ಹೊಯ್ಸಳ ನಾಣ್ಯಗಳಲ್ಲಿ ಸಿಂಹವು ಕಾಣಿಸಿಕೊಳ್ಳುತ್ತದೆ. ಹೊಯ್ಸಳರ ದೊರೆ ವಿನಯಾದಿತ್ಯನ (ಕ್ರಿ.ಶ. ೧೦೪೭–೧೯೮) ಚಿನ್ನದ ವರಾಹ ನಾಣ್ಯಗಳಲ್ಲಿ ಮೇಲ್ಭಾಗದಲ್ಲಿ ಸಿಂಹದ ಚಿತ್ರವಿರುತ್ತದೆ. ಕೆಳಭಾಗದಲ್ಲಿ ದುರ್ಗಿಯೂ, ಹಿಮ್ಮುಖದಲ್ಲಿ 'ಮಲೆಪರೊಳುಗಂಡ' ಎಂಬ ಬರಹವೂ ಇರುತ್ತದೆ. ವಿಷ್ಣುವರ್ಧನನ ಚಿನ್ನದ ನಾಣ್ಯಗಳಲ್ಲಿ ಎರಡು ಸಿಂಹಗಳಿವೆ; ಮೇಲೊಂದು, ಕೆಳಗೊಂದು; ಆದುದರಿಂದ ಇದನ್ನು ಎರಡು ಸಿಂಹ ನಮೂನೆಯ ನಾಣ್ಯ ಎಂದು ಕರೆಯಲಾಗುತ್ತದೆ. ಇದೇ ದೊರೆಯ ಇನ್ನೊಂದು ನಮೂನೆಯ ನಾಣ್ಯದಲ್ಲಿ ಇಡೀ ನಾಣ್ಯವನ್ನು ಆಕ್ರಮಿಸಿಕೊಂಡಿರುವ ಸಿಂಹದ ಚಿತ್ರವಿದೆ. ವಿಷ್ಣುವರ್ಧನನ ಮತ್ತೊಂದು ಚಿನ್ನದ ನಾಣ್ಯದಲ್ಲಿ ದುರ್ಗಿಯು ಸಿಂಹವಾಹಿನಿಯಾಗಿದ್ದಾಳೆ. ಈ ರೀತಿಯ ನಾಣ್ಯಗಳನ್ನು ಮೊದಲನೆಯ ನರಸಿಂಹ, ಇಮ್ಮಡಿ ಬಲ್ಲಾಳ, ಇಮ್ಮಡಿ ಮತ್ತು ಮುಮ್ಮಡಿ ನರಸಿಂಹ ಮತ್ತು ಸೋಮೇಶ್ವರ ಈ ಅರಸರು ಟಂಕಿಸಿದರು.

ಗೋವೆಯ ಕದಂಬರ ನಾಣ್ಯಗಳಲ್ಲಿ ವೈವಿಧ್ಯ ಕಾಣಬರುತ್ತದೆ. ಒಂದನೆಯ ಜಯಕೇಶಿ (ಕ್ರಿ.ಶ. ೧೦೫೦–೧೦೭೮) ಮತ್ತು ಎರಡನೆಯ ಜಯಕೇಶಿಯ (ಕ್ರಿ.ಶ. ೧೧೨೬–೧೧೪೭) ಚಿನ್ನದ ನಾಣ್ಯಗಳಲ್ಲಿ ತುಂಬ ಕಲಾತ್ಮಕವಾದ ಸಿಂಹದ ಚಿತ್ರವಿದೆ. ಇದೇ ವಂಶದ ದೊರೆ ಶಿವಚಿತ್ತನ (ಕ್ರಿ.ಶ. ೧೧೪೭–೧೧೮೭) ನಾಣ್ಯಗಳಲ್ಲಿ ಮುಂಗಾಲುಗಳನ್ನು ಮೇಲಕ್ಕೆತ್ತಿಕೊಂಡಿರುವ ಸಿಂಹದ ಚಿತ್ರವಿದೆ. ಒಟ್ಟಿನಲ್ಲಿ ಗೋವೆಯ ಕದಂಬರ ಎಲ್ಲ ಚಿನ್ನದ ನಾಣ್ಯಗಳಲ್ಲೂ ಸಿಂಹದ ಚಿತ್ರವನ್ನು ಕಾಣಬಹುದು.

ವಿಜಯನಗರದ ದೊರೆಗಳು ಸಿಂಹದ ನಾಣ್ಯಗಳನ್ನು ವಿಶೇಷವಾಗಿ ಅಚ್ಚುಮಾಡಿಸಲಿಲ್ಲ. ತುಳುವ ವಂಶದ ವೀರನರಸಿಂಹನು (ಕ್ರಿ.ಶ. ೧೫೦೩–೧೫೦೯) ತನ್ನ ಚಿನ್ನದ

ನಾಣ್ಯಗಳಲ್ಲಿ ಸಿಂಹವನ್ನು ಅಚ್ಚುಹಾಕಿಸಿದನು. ಇವನ ತಾಮ್ರದ ನಾಣ್ಯಗಳ ಮೇಲೆ ಬಾಲವನ್ನು ಮೇಲಕ್ಕೆತ್ತಿಕೊಂಡಿರುವ ಸಿಂಹದ ಚಿತ್ರವಿರುತ್ತದೆ. ಮೈಸೂರಿನ ಒಡೆಯರ್ ದೊರೆಗಳಲ್ಲಿ, ಮುಮ್ಮಡಿ ಕೃಷ್ಣರಾಜರು (ಕ್ರಿ.ಶ. ೧೭೯೯–೧೮೬೮) ಅನೇಕ ನಮೂನೆಯ ತಾಮ್ರದ ನಾಣ್ಯಗಳನ್ನು ಟಂಕಿಸಿದರು. ಇವರ ಇಪ್ಪತ್ತೈದು ಪೈಸೆಯ ಮೈಲಿ ಕಾಸು ನಾಣ್ಯಗಳಲ್ಲಿ ಉಗ್ರರೂಪದ ಸಿಂಹದ ಚಿತ್ರವಿದೆ. ಇದೇ ರೀತಿಯ ಸಿಂಹವನ್ನು ಇವರ ೨೦, ೧೫, ೧೦ ಮತ್ತು ೫ ಕಾಸಿನ ನಾಣ್ಯಗಳಲ್ಲಿ ನೋಡುತ್ತೇವೆ.

ಹೊಯ್ಸಳರ ಶಾಸನವೊಂದರಲ್ಲಿ 'ನರಸಿಂಹ ಗದ್ಯಾಣ' ಎಂಬ ನಾಣ್ಯದ ಉಲ್ಲೇಖ ಕಾಣಬರುತ್ತದೆ. ಇದು ನರಸಿಂಹ ಎಂಬ ರಾಜ ಟಂಕಿಸಿರುವ ಗದ್ಯಾಣವಿರಬಹುದು. ಇವನು ಹೊಯ್ಸಳರ ಎರಡನೆಯ ನರಸಿಂಹನಿರಬೇಕೆಂದು (ಕ್ರಿ.ಶ. ೧೨೨೦–೧೨೩೫) ಅಭಿಪ್ರಾಯಪಡಲಾಗಿದೆ. ಇನ್ನೊಂದು ಅರ್ಥದಲ್ಲಿ ಈ ನಾಣ್ಯದ ಮೇಲೆ ನರಸಿಂಹನ ಚಿತ್ರವಿದ್ದಿರಬೇಕು. ಹೊಯ್ಸಳ ಇಮ್ಮಡಿ ನರಸಿಂಹನ ಮತ್ತೊಂದು ಚಿನ್ನದ ನಾಣ್ಯವನ್ನು ಇಲ್ಲಿ ಗಮನಿಸಬೇಕು. ಇದರ ತೂಕ ೦.೩೫ಗ್ರಾಂ, ಅಗಲ ೦.೬೫". ಇದು ಹಣ ಎಂಬ ನಾಣ್ಯ. ಈ ನಾಣ್ಯದ ಮುಮ್ಮುಖದಲ್ಲಿ ಸಿಂಹವಿದೆ. ಹಿಮ್ಮುಖದಲ್ಲಿ ಶಂಖ ಚಕ್ರಗಳನ್ನು ಕೈಗಳಲ್ಲಿ ಹಿಡಿದಿರುವ ನರಸಿಂಹನ ಚಿತ್ರವಿದೆ. ಇದೊಂದು ಪ್ರಮುಖವಾದ ಹೊಯ್ಸಳರ ಪಣ.

ವಿಜಯನಗರ ನಾಣ್ಯಗಳಲ್ಲಿ ದೇವ–ದೇವತೆಯವರ ವಿನ್ಯಾಸಗಳನ್ನು ವಿಪುಲವಾಗಿ ಕಾಣುತ್ತೇವೆ. ದೇವ ದೇವತೆಗಳಿಲ್ಲದಿರುವ ಒಂದು ವಿಜಯನಗರ ನಾಣ್ಯವೂ ಇಲ್ಲ ಎಂದರೆ ಆಶ್ಚರ್ಯವಾಗುತ್ತದೆ. ಸಂಗಮ ವಂಶದ ಇಮ್ಮಡಿ ಹರಿಹರನು (ಕ್ರಿ.ಶ. ೧೩೭೭–೧೪೦೪) ಲಕ್ಷ್ಮೀನರಸಿಂಹನ ಚಿನ್ನದ ನಾಣ್ಯಗಳನ್ನು ಟಂಕಿಸಿದನು. ಇದು ಅರ್ಧ ವರಹ ಚಿನ್ನದ ನಾಣ್ಯ; ತೂಕ ೧.೭ಗ್ರಾಂ, ಅಗಲ ೦.೫". ಇದರ ವಿವರವಿಂತಿದೆ.

**ಮುಮ್ಮುಖ :** ಕುಳಿತಿರುವ ಲಕ್ಷ್ಮೀನರಸಿಂಹ, ಶಂಖ ಮತ್ತು ಚಕ್ರಗಳಿವೆ. ಒಂದು ಕೈ ಅಭಯ ಮುದ್ರೆ, ಮತ್ತೊಂದು ಕೈ ಲಕ್ಷ್ಮಿಯನ್ನು ಬಳಸಿದೆ.

**ಹಿಮ್ಮುಖ :** ಮೂರು ಸಾಲುಗಳ ನಾಗರೀ ಬರಹ.

ಶ್ರೀಪ್ರತಾಪ ಹರಿಹರ ತುಳುವ ವಂಶದ ವೀರನರಸಿಂಹನ (ಕ್ರಿ.ಶ. ೧೫೦೫–೧೫೦೯) ತಾಮ್ರದ ನಾಣ್ಯದಲ್ಲಿ ನರಸಿಂಹನನ್ನು ನೋಡಬಹುದು. ಇದರ ತೂಕ ೩ ಗ್ರಾಂ, ಅಳತೆ ೦.೬"

**ಮುಮ್ಮುಖ :** ಯೋಗಮುದ್ರೆಯಲ್ಲಿ ಕುಳಿತಿರುವಂತೆ ಇರುವ ನರಸಿಂಹ; ಆದರೆ ಯೋಗಪಟ್ಟವಿಲ್ಲ.

**ಹಿಮ್ಮುಖ :** ಎರಡು ಸಾಲುಗಳ ನಾಗರೀ ಬರಹ ನರಸಿಂಹ

ಆರವೀಡು ವಂಶದ ರಾಮದೇವರಾಯನ (ಕ್ರಿ.ಶ.ಸು. ೧೬೧೭–೧೬೩೨) ತಾಮ್ರದ ನಾಣ್ಯಗಳಲ್ಲಿ ನರಸಿಂಹನನ್ನು ಕಾಣಬಹುದು. ಇದರ ತೂಕ ೩.೧ಗ್ರಾಂ, ಅಗಲ ೦.೬"

**ಮುಮ್ಮುಖ :** ಯೋಗಮುದ್ರೆಯಲ್ಲಿ ಕುಳಿತಿರುವಂತೆ ಇರುವ ನರಸಿಂಹ, ಆದರೆ ಯೋಗಪಟ್ಟವಿಲ್ಲ.

**ಹಿಮ್ಮುಖ :** ಮಧ್ಯದಲ್ಲಿ ಖಡ್ಗ; ಪಕ್ಕದಲ್ಲಿ ನಾಗರೀ ಬರಹ ರಾಮ.

ಮೈಸೂರು ಒಡೆಯರ್ ದೊರೆಗಳಲ್ಲಿ ಕಂಠೀರವ ನರಸರಾಜ ಒಡೆಯರ್(ಕ್ರಿ.ಶ. ೧೬೩೮–೧೬೫೯) ಅವರು ಒಂದು ಟಂಕಶಾಲೆಯನ್ನು ಆರಂಭಿಸಿದರು. ಅದಕ್ಕೆ ಮುಂಚೆ ವಿಜಯನಗರ ಸಾಮ್ರಾಜ್ಯದ ನಾಣ್ಯಗಳೇ ಚಲಾವಣೆಯಲ್ಲಿದ್ದವು. ಇವರು ಟಂಕಿಸಿದ ಕಂಠೀರವ ಪಣ ಬಹಳ ಜನಾನುರಾಗಿ ನಾಣ್ಯವಾಗಿದ್ದಿತು. ಇದು ವರಹದ ಹತ್ತನೆಯ ಭಾಗವಾಗಿತ್ತು. ಇದರ ತೂಕ ೧.೩ಗ್ರಾಂ, ಅಗಲ ೦.೪". ಅರ್ಧವರಹ.

**ಮುಮ್ಮುಖ :** ನಾಲ್ಕು ಕೈಗಳ ಲಕ್ಷ್ಮೀನರಸಿಂಹ. ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರ, ಮೂರನೆಯ ಕೈ ಅಭಯ ಮುದ್ರೆಯಲ್ಲಿ, ನಾಲ್ಕನೆಯ ಕೈ ಲಕ್ಷ್ಮಿಯನ್ನು ಬಳಸಿದೆ.

**ಹಿಮ್ಮುಖ :** ಮೂರು ಸಾಲುಗಳ ಶ್ರೀ ಕಂಠೀರವ ನರಸರಾಜ ಎಂಬ ನಾಗರೀ ಬರಹ.

ಇದೇ ದೊರೆಯ ಪಣ ನಾಣ್ಯದಲ್ಲೂ ಲಕ್ಷ್ಮೀನರಸಿಂಹನ ವಿನ್ಯಾಸವನ್ನು ಕಾಣುತ್ತೇವೆ.

### ವಾಮನಾವತಾರ

ವಾಮನ ಅವತಾರವನ್ನು ಸೂಚಿಸುವ ಯಾವ ನಾಣ್ಯಗಳೂ ದೊರಕಿಲ್ಲ. ಆದರೆ ಕೆಲವು ನಾಣ್ಯಗಳಲ್ಲಿ ಛತ್ರಿ ಇದೆ. ಇದು ವಾಮನನ ಸಂಕೇತ ಎಂದು ಕೆಲವರು ಭಾವಿಸಿದ್ದಾರೆ. ಆದರೆ ಸಾಮಾನ್ಯವಾಗಿ ಛತ್ರಿ ದೊರೆಯ ಸಂಕೇತ ಎಂದು ಭಾವಿಸಲು ಸಾಕಷ್ಟು ದಾಖಲೆಗಳಿವೆ. ಹಾಗಾಗಿ ವಾಮನಾವತಾರದ ನಾಣ್ಯಗಳನ್ನು ಇನ್ನೂ ಪತ್ತೆ ಮಾಡಬೇಕಾಗಿದೆ.

### ಪರಶುರಾಮಾವತಾರ

ಪರಶುರಾಮನ ಅವತಾರವನ್ನು ತೋರಿಸುವ ಖಚಿತವಾದ ನಾಣ್ಯಗಳು ದೊರಕಿಲ್ಲ. ಆದರೆ ಕೆಲವು ನಾಣ್ಯಗಳಲ್ಲಿ ಪರಶುವನ್ನು ವಿನ್ಯಾಸಗೊಳಿಸಲಾಗಿದೆ. ಇವು ಶಿವಪರವಾದ ನಾಣ್ಯಗಳೇನೂ ಅಲ್ಲ. ಆದುದರಿಂದ ಇದನ್ನು ಶಿವನ ಪರಶು ಎಂದು ಭಾವಿಸುವುದಕ್ಕೆ ಬದಲಾಗಿ ಪರಶುರಾಮನ ಸಂಕೇತ ಎಂದು ಭಾವಿಸಲು ಅವಕಾಶವಿದೆ. ಆದರೆ ಇದರಲ್ಲಿ ಖಚಿತತೆ ಇಲ್ಲ.

### ಶ್ರೀರಾಮಾವತಾರ

ಶ್ರೀರಾಮನ ಅವತಾರವು ವಾಲ್ಮೀಕಿ ರಾಮಾಯಣದ ಮೂಲಕ ಪ್ರಾಚೀನ ಕಾಲದಿಂದಲೂ ಜನಪ್ರಿಯವಾಗಿದ್ದರೂ, ಈ ಅವತಾರವನ್ನು ನಾಣ್ಯಗಳ ಮೇಲೆ ಅಳವಡಿಸುವ ಪದ್ಧತಿ ತಡವಾಗಿಯೇ ಆರಂಭವಾಯಿತೆನ್ನಬೇಕು. ವಿಜಯನಗರ ಕಾಲದಲ್ಲಿ ಶ್ರೀರಾಮನ ದೇವಾಲಯಗಳನ್ನು ನಿರ್ಮಿಸುವ ಪ್ರವೃತ್ತಿಯೂ ಹೆಚ್ಚಾಯಿತು. ತಡವಾದರೂ ಪ್ರಾಚೀನ ರಾಜರು ಶ್ರೀರಾಮನಿಗೆ ನಾಣ್ಯಗಳ ಮೂಲಕ ಗೌರವ ಸೂಚಿಸಲು ಮರೆಯಲಿಲ್ಲ. ಇಂತಹ ನಾಣ್ಯಗಳನ್ನು ರಾಮಟಂಕ ಎಂದೂ ಕರೆಯುತ್ತಾರೆ. ಸಾಮಾನ್ಯವಾಗಿ ರಾಮಟಂಕ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರ ಮತ್ತು ಹಿತ್ತಾಳೆಗಳಲ್ಲಿ ಟಂಕಿಸಲ್ಪಟ್ಟಿವೆ. ಇಂದಿಗೂ ಈ ನಾಣ್ಯಗಳು ಆಸ್ತಿಕರ ಪೂಜಾಗೃಹದಲ್ಲಿ ಕಂಡುಬರುತ್ತವೆ.

ರಾಮಟಂಕ ಎಷ್ಟು ಪ್ರಾಚೀನವಾದುದು ಎಂದು ಹೇಳುವುದು ಕಷ್ಟ. ಈಗ ದೊರಕಿರುವ ಮೊದಲ ರಾಮಟಂಕಗಳು ಕ್ರಿ.ಶ. ಹನ್ನೆರಡನೆಯ ಶತಮಾನಕ್ಕೆ ಸೇರುತ್ತವೆ. ಅಜ್ಮೀರದ ಚೌಹಾನ ವಂಶಕ್ಕೆ ಸೇರಿದ ವಿಗ್ರಹರಾಜನು ಚಿನ್ನದ ರಾಮಟಂಕಗಳನ್ನು ಅಚ್ಚುಹಾಕಿಸಿದನು. ಇವುಗಳ ಮುಮ್ಮುಖದಲ್ಲಿ ನಿಂತಿರುವ ಶ್ರೀರಾಮ ಮತ್ತು ಸೀತೆಯರ ಚಿತ್ರಗಳಿವೆ. ಇದರ ಕೆಳಗಡೆ ಶ್ರೀರಾಮ ಎಂಬ ನಾಗರೀ ಬರಹವಿದೆ. ಇದರ ಕಾಲ ಕ್ರಿ.ಶ. ೧೧೫೩. ಅಲ್ಲಾವುದ್ದೀನ್ ಖಿಲ್ಜಿಯ ನಾಣ್ಯಾಧಿಕಾರಿಯಾಗಿದ್ದ ಥಕ್ಕೂರಫೇರು ಎಂಬುವವನು ತನ್ನ ದ್ರವ್ಯ ಪರೀಕ್ಷಾ ಎಂಬ ಕೃತಿಯಲ್ಲಿ ರಾಮಟಂಕವನ್ನು ಉಲ್ಲೇಖ ಮಾಡಿ, ಅವುಗಳನ್ನು ಸೀತಾರಾಮಿ ಎಂದು ಕರೆದಿದ್ದಾನೆ. ಶೇಕಡ ೮೩ ಶುದ್ಧ ಚಿನ್ನದ ರಾಮಟಂಕಗಳು ಪೂಜೆಗೆ ಯೋಗ್ಯ ಎಂದು ಉಲ್ಲೇಖಿಸಿರುವುದೂ ಗಮನಾರ್ಹ.

ವಿಜಯನಗರದ ಆರವೀಡು ವಂಶದ ತಿರುಮಲರಾಯನೇ (ಕ್ರಿ.ಶ. ೧೫೬೫–೧೫೭೨) ಶ್ರೀರಾಮ–ಸೀತೆ–ಲಕ್ಷ್ಮಣ ನಾಣ್ಯಗಳ ಆದ್ಯಪ್ರವರ್ತಕನೆನ್ನಬಹುದು. ಇವನು ಟಂಕಿಸಿದ ಚಿನ್ನದ ವರಹ ಮತ್ತು ಅರ್ಧವರಹ ನಾಣ್ಯಗಳು ಶ್ರೀರಾಮ ನಮೂನೆಯಲ್ಲಿ ಕಂಡುಬಂದಿವೆ. ವರಹ ನಾಣ್ಯದ ತೂಕ ೩.೪ಗ್ರಾಂ, ಅಗಲ ೦.೫". ಪೀಠದ ಮೇಲೆ ಕುಳಿತಿರುವ ಶ್ರೀರಾಮ, ಸೀತೆ ಇದ್ದರೆ ಪಕ್ಕದಲ್ಲಿ ಲಕ್ಷ್ಮಣನು ಕೈ ಮುಗಿದುಕೊಂಡು ಪಕ್ಕದಲ್ಲಿ ನಿಂತಿದ್ದಾನೆ. ರಾಮನ ಒಂದು ಕೈ ಅಭಯ ಮುದ್ರೆಯಲ್ಲಿದೆ. ಹಿಮ್ಮುಖದಲ್ಲಿ ಮೂರು ಸಾಲುಗಳ ಶ್ರೀ ತಿರುಮಲರಾಯಲು ಎಂಬ ತೆಲುಗು ಲಿಪಿಯ ಬರಹವಿದೆ. ಇದೇ ದೊರೆಯ ಅರ್ಧವರಹ ಚಿನ್ನದ ನಾಣ್ಯದ ತೂಕ ೧.೭ ಗ್ರಾಂ, ಅಗಲ ೦.೪". ಇದರಲ್ಲೂ ಶ್ರೀರಾಮ ಮತ್ತು ಸೀತೆ ಪೀಠದ ಮೇಲೆ ಕುಳಿತಿದ್ದಾರೆ. ಬಿಲ್ಲನ್ನು ಹೆಗಲಿಗೆ ತಗಲುಹಾಕಿಕೊಂಡಿರುವ ಲಕ್ಷ್ಮಣನು ಕೈ ಮುಗಿದುಕೊಂಡು ನಿಂತಿದ್ದಾನೆ.

ಆಶ್ಚರ್ಯದ ಸಂಗತಿ ಎಂದರೆ ಮೊಘಲ್ ಚಕ್ರವರ್ತಿ ಅಕ್ಬರನು (ಕ್ರಿ.ಶ. ೧೫೫೬–೧೬೦೫) ಶ್ರೀರಾಮ–ಸೀತೆಯರ ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದ್ದು. ಅರ್ಧರೂಪಾಯಿ ಮೌಲ್ಯದ ಈ ಬೆಳ್ಳಿಯ ನಾಣ್ಯದ ತೂಕ ೫.೪ಗ್ರಾಂಗಳಿದ್ದು ಧಾರ್ಮಿಕ ಸಹಿಷ್ಣು ಮನೋಭಾವದ ಪ್ರತೀಕವಾಗಿದೆ.

**ಮುಮ್ಮುಖ :** ಬಲಕ್ಕೆ ಚಲಿಸುತ್ತಿರುವ ಶ್ರೀರಾಮ, ಅವನ ಕೈಯಲ್ಲಿ ಬಿಲ್ಲಿದೆ, ರಾಮನು ಕಿರೀಟಧಾರಿಯಾಗಿದ್ದಾನೆ. ಅವನ ಪಕ್ಕದಲ್ಲಿ ಸೀತೆ ಇದ್ದಾಳೆ. ಮುಮ್ಮುಖದಲ್ಲಿ ಪೂರ್ತಿಯಾಗಿ ರಾಮ–ಸೀತೆ ಆಕೃತಿಗಳಿವೆ. ರಾಮಸಿಯಾ ಎನ್ನುವ ನಾಗರೀ ಬರಹವಿದೆ.

**ಹಿಮ್ಮುಖ :** ಪರ್ಷಿಯನ್ ಬರಹ ಅಮ್‌ದರ್ ಇಲಾಹಿ ೫೦ ಆಗಿನ ಕಾಲದಲ್ಲಿ ಈ ನಾಣ್ಯವು ರಾಮ–ಸಿಯಾ ರೂಪಾಯಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದ್ದಿತು.

### ಶ್ರೀಕೃಷ್ಣಾವತಾರ

ಪ್ರಾಚೀನ ಭಾರತದ ಅನೇಕ ರಾಜರು ಶ್ರೀಕೃಷ್ಣನ ಭಕ್ತರಾಗಿದ್ದು, ಅಂತಹ ರಾಜರು ಶ್ರೀಕೃಷ್ಣನ ಚಿತ್ರವಿರುವ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಿ ತಮ್ಮ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ರಾಜರುಗಳನ್ನು ಗಮನಿಸಿದರೆ ನಮ್ಮ ಗಮನಕ್ಕೆ ಮೊತ್ತಮೊದಲು ಬರುವವನು ವಿಜಯನಗರದ ತುಳುವ ವಂಶದ ದೊರೆ ಶ್ರೀ ಕೃಷ್ಣದೇವರಾಯ (ಕ್ರಿ.ಶ. ೧೫೦೯–೧೫೨೯). ಇವನು ಕ್ರಿ.ಶ. ೧೫೧೫ರಲ್ಲಿ ಈಗಿನ ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯ ಉದಯಗಿರಿಯ (ಈಗಿನ ಒರಿಸ್ಸಾ ರಾಜ್ಯದಲ್ಲಿಯೂ ಒಂದು ಉದಯಗಿರಿಯಿದೆ. ಕೃಷ್ಣದೇವರಾಯನು ಗೆದ್ದ ಉದಯಗಿರಿ ಇದೇ ಆಗಿರಬಹುದೇ ವಿಚಾರಣೀಯ) ಮೇಲೆ ದಂಡೆತ್ತಿ ಹೋಗಿ ಗಜಪತಿ ರಾಜನನ್ನು ಸೋಲಿಸಿ ಗಮನಾರ್ಹವಾದ ವಿಜಯವನ್ನು ಸಂಪಾದಿಸಿದನು. ಈ ವಿಜಯದ ದ್ಯೋತಕವಾಗಿ, ಅಲ್ಲಿನ ದೇವಾಲಯದಲ್ಲಿದ್ದ ಶ್ರೀಕೃಷ್ಣನ ವಿಗ್ರಹವನ್ನು ತಂದು, ರಾಜಧಾನಿ ಹಂಪಿಯಲ್ಲಿ ಈ ವಿಗ್ರಹಕ್ಕಾಗಿ ಒಂದು ದೇವಾಲಯವನ್ನು ನಿರ್ಮಿಸಿದನು. ಈಗ ಇದು ಕೃಷ್ಣದೇವಾಲಯವೆಂದು ಪ್ರಸಿದ್ಧಿ ಪಡೆದಿದೆ. ಇದರ ಜ್ಞಾಪಕಾರ್ಥವಾಗಿ ಕೃಷ್ಣದೇವರಾಯನು ಕೃಷ್ಣನ ಚಿತ್ರವಿರುವ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಈ ರೀತಿಯ ಚಿನ್ನದ ವರಹ ನಾಣ್ಯಗಳಲ್ಲಿ ಕುಳಿತಿರುವ ಬಾಲಕೃಷ್ಣನ ಚಿತ್ರವಿದೆ. ಅವನ ಬಲಗೈಯಲ್ಲಿ ಬೆಣ್ಣೆಯ ಮುದ್ದೆ ಇದೆ. ಅಕ್ಕಪಕ್ಕಗಳಲ್ಲಿ ಶಂಖ ಚಕ್ರಗಳಿವೆ. ತಲೆಯ ಮೇಲಿರುವ ಕಿರೀಟದಲ್ಲಿ ನವಿಲು ಗರಿಯೂ ಇದೆ. ಈ ನಾಣ್ಯಗಳ ಹಿಮ್ಮುಖದಲ್ಲಿ ಶ್ರೀ ಪ್ರತಾಪ ಕೃಷ್ಣರಾಯ ಎನ್ನುವ ಕನ್ನಡ ಅಥವಾ ನಾಗರೀ ಲಿಪಿಯ ಬರಹವಿದೆ. ಈ ನಾಣ್ಯಗಳು ಎಷ್ಟೊಂದು ಜನಪ್ರಿಯ ವಾಗಿದ್ದುವೆಂದರೆ ಆನಂತರದ ಜನಗಳು ಇದನ್ನು 'ಬೆಣ್ಣೆಮುದ್ದೆ ನಾಣ್ಯ' ಎಂದು ಕರೆಯಲು ಆರಂಭಿಸಿದರು.

ಮೈಸೂರು ಸಂಸ್ಥಾನದ ಒಡೆಯರ್ ಅರಸರು ಯದುವಂಶದವರೇ ಆಗಿದ್ದು ಕೃಷ್ಣನ ವಂಶದವರು ಎಂಬ ಅಭಿಮಾನದಿಂದ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿಯನ್ನೇ ಮುಂದುವರಿಸಿಕೊಂಡು ಬಂದರು. ಈ ವಂಶದಲ್ಲಿ ನಾಲ್ಕು ದೊರೆಗಳ ಹೆಸರು ಕೃಷ್ಣ ಎನ್ನುವುದರಿಂದಲೇ ಪ್ರಾರಂಭವಾಗುತ್ತದೆ (ಕೃಷ್ಣರಾಜ ಒಡೆಯರ್). ಈ ವಂಶದ ಚಿಕ್ಕದೇವರಾಜ ಒಡೆಯರ್ (ಕ್ರಿ.ಶ. ೧೬೭೩-೧೭೦೪) ಚಿನ್ನದ ವರಹ ಮತ್ತು ಅರ್ಧವರಹದ ನಾಣ್ಯಗಳ ಮೇಲೆ ನೃತ್ಯಮಾಡುತ್ತಿರುವ ಕೃಷ್ಣನ ಚಿತ್ರವನ್ನು ಅಳವಡಿಸಿದರು. ಆಗಿನ ಕಾಲದಲ್ಲಿ ಇವು ನರ್ತನ ತಾಂಡವಮೂರ್ತಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದ್ದವು. ಈ ಚಿನ್ನದ ನಾಣ್ಯಗಳನ್ನು ಸಾಹಿತಿಗಳಿಗೆ ಹಾಗೂ ಸಂಗೀತಗಾರರಿಗೆ ಬಹುಮಾನವಾಗಿ ಕೊಡುತ್ತಿದ್ದರು.

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಕಾಲು ರೂಪಾಯಿಯ ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದರು. ಇದರ ಅಗಲ ೦.೬".

**ಮುಮ್ಮುಖ** : ಬಿಂದುಗಳ ವೃತ್ತದೊಳಗೆ ನರ್ತನ ಮಾಡುತ್ತಿರುವ ಬಾಲಕೃಷ್ಣ; ಅವನ ಬಲಗೈಯಲ್ಲಿ ಬೆಣ್ಣೆಯ ಮುದ್ದೆ ಇದೆ.

**ಹಿಮ್ಮುಖ** : ಬಿಂದುಗಳ ವೃತ್ತದೊಳಗೆ ಮೂರು ಸಾಲುಗಳ ಪರ್ಷಿಯನ್ ಬರಹ; ಜುಲುಸ್ ೧೨೪೪ ಕಿಷನ್‌ರಾಜ್

ಒಡೆಯರ್ ಜರ್ಬ್ ಇಮಹಿಸೂರ್. {ಇದರಲ್ಲಿ ಮೈಸೂರು ಟಂಕಶಾಲೆಯ ಹೆಸರು ಕಾಣಬರುತ್ತದೆ}.

ಮುಮ್ಮಡಿಯವರು 'ಅಡ್ಡ' ಮೌಲ್ಯದ ಬೆಳ್ಳಿಯ ನಾಣ್ಯವನ್ನು ಅಚ್ಚು ಹಾಕಿಸಿದರು. ಇದರ ಮುಮ್ಮುಖದಲ್ಲಿ ನರ್ತನ ಮಾಡುತ್ತಿರುವ ಕೃಷ್ಣನ ಚಿತ್ರವಿದೆ. ಹಿಮ್ಮುಖದಲ್ಲಿ ಮಯಿಲಿ ಹಣ ಎಂಬ ಕನ್ನಡ ಬರಹವಿದೆ. ಇವರು ಅಚ್ಚು ಹಾಕಿಸಿದ ಹಾಗ ಎಂಬ ಬೆಳ್ಳಿಯ ನಾಣ್ಯದಲ್ಲೂ ನರ್ತನ ಮಾಡುತ್ತಿರುವ ಕೃಷ್ಣನ ಚಿತ್ರವಿದೆ.

ಒಂದು ಕಾಲದಲ್ಲಿ ಪ್ರಾಚೀನ ಕರ್ನಾಟಕದ ಭಾಗವೇ ಆಗಿದ್ದು, ಸಾಂಸ್ಕೃತಿಕವಾಗಿ ಕರ್ನಾಟಕಕ್ಕೆ ಹೊಂದಿಕೊಂಡು ಇದ್ದ ವೈನಾಡಿನ ದೊರೆಗಳು ಶ್ರೀಕೃಷ್ಣನ ಭಕ್ತರಾಗಿದ್ದರು. ಹದಿನಾರು-ಹದಿನೇಳನೆಯ ಶತಮಾನದಲ್ಲಿ ರಾಜ್ಯವಾಳುತ್ತಿದ್ದ ಈ ದೊರೆಗಳು ಕೃಷ್ಣನ ಚಿತ್ರವಿರುವ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಅಚ್ಚು ಹಾಕಿಸಿದರು. ಇದರಲ್ಲಿ ಶ್ರೀ ಕೃಷ್ಣನು ನಿಂತುಕೊಂಡು ಕೊಳಲನ್ನು ಊದುತ್ತಿದ್ದಾನೆ.

## ಬೌದ್ಧಾವತಾರ

ಕರ್ನಾಟಕದ ಯಾವ ನಾಣ್ಯದ ಮೇಲೂ ಬುದ್ಧನ ಚಿತ್ರವಿರುವ ನಾಣ್ಯಗಳು ದೊರಕಿಲ್ಲ. ಬುದ್ಧನಿಗಾಗಿ ನೂರಾರು ಸ್ತೂಪಗಳು, ವಿಹಾರಗಳು, ಚೈತ್ಯಗಳು ನಿರ್ಮಾಣಗೊಂಡರೂ, ಅವನನ್ನು ನಾಣ್ಯಗಳ ಮೇಲೆ ಅಳವಡಿಸಲು ರಾಜರು ಕಾತುರತೆಯನ್ನು ತೋರದೇ ಇದ್ದುದು ಆಶ್ಚರ್ಯವೇ ಸರಿ. ಕುಷಾಣ ರಾಜವಂಶಕ್ಕೆ ಸೇರಿದ ಕಾನಿಷ್ಕನು (ಕ್ರಿ.ಶ. ಸುಮಾರು ಒಂದು ಅಥವಾ ಎರಡನೆಯ ಶತಮಾನ-? ) ಎರಡು ರೀತಿಯ ನಾಣ್ಯಗಳಲ್ಲಿ ಬುದ್ಧನನ್ನು ವಿನ್ಯಾಸಗೊಳಿಸಿದನು. ಇವೆರಡೂ ಚಿನ್ನದ ನಾಣ್ಯಗಳು.

**ನಾಣ್ಯ-೧**

ಮುಮ್ಮುಖ : ಕಾನಿಷ್ಕನು ಭರ್ಜಿಯನ್ನು ಹಿಡಿದುಕೊಂಡು ನಿಂತಿದ್ದಾನೆ. ಬಲಗೈಯಲ್ಲಿ ಯಜ್ಞವೇದಿಕೆಗೆ ಏನನ್ನೋ ಹಾಕುತ್ತಿದ್ದಾನೆ. ಗ್ರೀಕ್ ಲಿಪಿಯ ಬರಹ ಬಸಿಲಿಯೋಸ್ ಬ್ಯಸಿಲಿಯೋನ್ ಕಾನಿಷ್ಕೊ.

**ಹಿಮ್ಮುಖ** : ನಿಂತಿರುವ ಬುದ್ಧ. ಗ್ರೀಕ್ ಬರಹ ಬೊಡೊ (ಬುದ್ಧ)

**ನಾಣ್ಯ-೨**

**ಮುಮ್ಮುಖ** : ಮೇಲಿನ ನಾಣ್ಯದಲ್ಲಿರುವಂತೆ

**ಹಿಮ್ಮುಖ** : ಪದ್ಮಾಸನದಲ್ಲಿ ಕುಳಿತಿರುವ ಬುದ್ಧ. ಗ್ರೀಕ್ ಬರಹ ಒಡೊಬೊ ಸಕಮ (ಶಾಕ್ಯಮುನಿ ಬುದ್ಧ)

ಪ್ರಾಚೀನ ಭಾರತಕ್ಕೆ ಒಂದು ಸ್ವಲ್ಪ ಕಾಲ ಇಲ್ಲಿ ರಾಜ್ಯವಾಳಿದ ರಾಜವಂಶಗಳಲ್ಲಿ ಶಕವಂಶ ಪ್ರಮುಖವಾದದ್ದು. ಇವರಲ್ಲಿ ಮಾಲೂಸ್ ಎಂಬ ದೊರೆಯಿದ್ದನು. ಇವನ ನಾಣ್ಯಗಳ ಮುಮ್ಮುಖದಲ್ಲಿ ಕುದುರೆಯ ಮೇಲೆ ಕುಳಿತು ಭರ್ಜಿಯನ್ನು ಹಿಡಿದಿರುವ ದೊರೆಯ ಚಿತ್ರವಿದೆ. ಈ ನಾಣ್ಯದ ಹಿಂಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಒಬ್ಬ ಮನುಷ್ಯನ ಚಿತ್ರವಿದೆ. ಕೆಲವರು ಇವನನ್ನು ರಾಜ ಎಂದು ಭಾವಿಸಿದ್ದಾರೆ. ಆದರೆ ಪದ್ಮಾಸನದಲ್ಲಿ ಕುಳಿತಿರುವುದರಿಂದ ಇವನು ಧ್ಯಾನಿ ಬುದ್ಧ ಎಂದು ಅನೇಕ ವಿದ್ವಾಂಸರು ವಾದಿಸಿದ್ದಾರೆ.

ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೊಂದಿದೆ. ದಶಾವತಾರಗಳ ಸಾಲಿನಲ್ಲಿ ಉಲ್ಲೇಖವಾಗಿರುವ ಬುದ್ಧನು ಬೌದ್ಧ ಧರ್ಮದ ಸ್ಥಾಪಕನಾದ ಶಾಕ್ಯಮುನಿ ಬುದ್ಧನಲ್ಲ. ದೇವತೆಗಳನ್ನು ದ್ವೇಷಿಸುವವರ ಬುದ್ಧಿಗಳನ್ನು ಮೋಹಗೊಳಿಸಲು ಕೀಟಕವೆಂಬ ದೇಶದ ಜಿನನೆಂಬುವನ ಮನೆಯಲ್ಲಿ ಅವತರಿಸಿದವನು ದಶಾವತಾರಗಳ ಸಾಲಿನಲ್ಲಿ ಉಲ್ಲೇಖಗೊಂಡಿರುವ ಬುದ್ಧನೆಂದು ತಿಳಿದುಬರುತ್ತದೆ. ಈ ಕಾರಣದಿಂದ ಬೌದ್ಧ ಧರ್ಮದ ಸ್ಥಾಪಕನಾದ ಬುದ್ಧನನ್ನು ನಾಣ್ಯಗಳ ಮೇಲೆ ಚಿತ್ರಿಸಿದ್ದರೆ ಅದನ್ನು ದಶಾವತಾರಗಳ ಸಾಲಿಗೆ ಸೇರಿಸುವುದು ಉಚಿತವಲ್ಲ. ಈ ಅಂಶವನ್ನು ಗಮನಿಸಿದರೆ ಈಗ ದೊರೆತಿರುವ ನಾಣ್ಯಗಳ ಮೇಲೆ ಕಂಡುಬರುವುದು ಬೌದ್ಧ ಧರ್ಮದ ಸ್ಥಾಪಕನಾದ ಶಾಕ್ಯಮುನಿ ಬುದ್ಧನೇ ಎಂಬುದು ಖಚಿತವಾಗುತ್ತದೆ.

ಕಲ್ಕ್ಯಾವತಾರ

ನೇರವಾಗಿ ಕಲ್ಕಿಯನ್ನು ಅಳವಡಿಸಿರುವ ನಾಣ್ಯಗಳು ಕಡಿಮೆ. ಕೆಲವು ನಾಣ್ಯಗಳಲ್ಲಿ ಕುದುರೆಯ ಮೇಲೆ ಕುಳಿತಿರುವ ಒಂದು ಮಾನವನ ಚಿತ್ರವಿದೆ. ಮತ್ತೆ ಕೆಲವು ನಾಣ್ಯಗಳಲ್ಲಿ ಕುದುರೆಯ ಪಕ್ಕದಲ್ಲಿ ಮನುಷ್ಯ ನಿಂತಿರುವಂತೆ ಚಿತ್ರಿತನಾಗಿದ್ದಾನೆ. ಕೆಲವರು ಇದು ಅಶ್ವಮೇಧಯಾಗದ ಸಂಕೇತವೆಂದು ಭಾವಿಸಿದ್ದಾರೆ. ಆದರೆ ಎಲ್ಲ ರಾಜರೂ ಅಶ್ವಮೇಧಯಾಗ ಮಾಡಿದವರಲ್ಲ. ಜೊತೆಗೆ ಯಾವ ವಂಶದ ರಾಜ ಎಂಬುದು ಕೂಡ ವಿಚಾರಾರ್ಹವಾಗಿದೆ. ಆದರೂ ಇದು ಕಲ್ಕಿಯ ಚಿತ್ರವೆಂದು ನಂಬಲಾಗಿದೆ. ಇದರಲ್ಲಿ ಖಚಿತತೆಯಿಲ್ಲ.

ಪ್ರಕೃತ ಲೇಖನದಲ್ಲಿ ನಾಣ್ಯಗಳ ಮೇಲೆ ಚಿತ್ರಿತವಾಗಿರುವ ದಶಾವತಾರಗಳ ಬಗೆಗೆ ಕಿರುಸಮೀಕ್ಷೆಯನ್ನು ಮಾಡಲಾಗಿದೆ. ಆದರೆ ಅನಿವಾರ್ಯವಾಗಿ ಆಯಾ ಅವತಾರಗಳ ಚಿತ್ರಗಳಿರುವ ನಾಣ್ಯಗಳ ಛಾಯಾಚಿತ್ರಗಳನ್ನಿಲ್ಲಿ ನೀಡಲಾಗಿಲ್ಲ. ವಿಷ್ಣುವಿನ ದಶಾವತಾರಗಳ ಮೂಲ ಉದ್ದೇಶವನ್ನೇ ರಾಜವಂಶಗಳು ಪಾಲಿಸಿಕೊಂಡು ಬಂದವು. ದಶಾವತಾರಗಳ ಚಿತ್ರಣವನ್ನು ನಾಣ್ಯಗಳಲ್ಲಿ ಬಳಸಲು ಧಾರ್ಮಿಕ ಅಂಶವೂ ಸಹಾಯಕವಾಗಿದೆ. ಈ ಕಾರಣದಿಂದಾಗಿಯೇ ದಶಾವತಾರದ ಚಿತ್ರಣವುಳ್ಳ ನಾಣ್ಯಗಳು ಟಂಕಿಸಲ್ಪಟ್ಟವು. ಈ ವಿಷಯವು ವಿಸ್ತಾರವಾದ ಗ್ರಂಥವನ್ನು ಬರೆಯಲು ಯೋಗ್ಯವಾದುದಾಗಿದೆ. ಇದರಲ್ಲಿನ ಸಮಸ್ಯೆಗಳು, ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿನ ನಾಣ್ಯಗಳ ಮೇಲಿನ ದಶಾವತಾರಗಳ ಚಿತ್ರಗಳು, ಶಿಲ್ಪಗಳು, ಸಾಹಿತ್ಯ, ಶಾಸನ ಇವೆಲ್ಲವನ್ನು ಅಧ್ಯಯನ ಮಾಡಿ ಪ್ರಮಾಣ ಗ್ರಂಥವನ್ನು ರಚಿಸಬಹುದು. ಜೊತೆಗೆ ಆಯಾ ರಾಜವಂಶಗಳು ಟಂಕಿಸಿರುವ ದಶಾವತಾರಗಳ ಚಿತ್ರಣವುಳ್ಳ ನಾಣ್ಯಗಳ ಸೂಚಿಯೊಂದು ಅವು ಈಗ ಇರುವ ಸ್ಥಳದ ವಿವರಗಳೊಡನೆ ಪ್ರಕಟವಾಗಬೇಕು. ಈ ನಾಣ್ಯಗಳು ಲಭಿಸಿರುವ ಭೌಗೋಳಿಕತೆಯನ್ನು ಕೂಡ ಗಮನಿಸಬೇಕು. ಇದು ಆದಷ್ಟು ಜಾಗ್ರತೆಯಾಗಿ ಕೈಗೂಡಲೆಂದು ಹಾರೈಸುತ್ತೇವೆ.

**ಆಧಾರ ಗ್ರಂಥಗಳು :-**

**೧. ಇತಿಹಾಸದ ಪುಟಗಳಿಂದ–** ಡಾ॥ ಎ.ವಿ. ನರಸಿಂಹ ಮೂರ್ತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೨

**೨. ಕರ್ನಾಟಕ ನಾಣ್ಯ ಪರಂಪರೆ–** ಡಾ॥ ಎ.ವಿ. ನರಸಿಂಹ ಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

**೩. ಕರ್ನಾಟಕ ನಾಣ್ಯಶಾಸ್ತ್ರ ಅಧ್ಯಯನ–**ಡಾ॥ ಎ.ವಿ. ನರಸಿಂಹ ಮೂರ್ತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೦

**೪. ನರಸಿಂಹ ದರ್ಶನ–**ಡಾ ॥ ಎ.ವಿ. ನರಸಿಂಹಮೂರ್ತಿ, ಶ್ರೀಲಕ್ಷ್ಮೀ ವೆಂಕಟರಮಣಸ್ವಾಮಿ ದೇವಸ್ಥಾನ ಟ್ರಸ್ಟ್, ವಾಣೀವಿಲಾಸ ಮೊಹಲ್ಲಾ, ಮೈಸೂರು, ೨೦೧೨

**೫. ಭಾರತೀಯ ನಾಣ್ಯ ಪರಂಪರೆ–** ಡಾ॥ ಎ.ವಿ. ನರಸಿಂಹಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೮

**೬. ವಿಜಯನಗರದ ನಾಣ್ಯ ಸಂಪತ್ತು–** ಡಾ॥ ಎ.ವಿ. ನರಸಿಂಹಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೬

**೭. ಶಬ್ದಾರ್ಥ ಕೌಸ್ತುಭ, ಸಂಪುಟ–**೩ {ಸಂಸ್ಕೃತ ಕನ್ನಡ ಶಬ್ದಕೋಶ}–ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ, ಬಾಪ್ಕೊ ಪ್ರಕಾಶನ, ಬೆಂಗಳೂರು–೨೦೦೭ ರ ಮರುಮುದ್ರಣ, ಪುಟ ೧೩೨೧

**೮. ಸ್ಟಡೀಸ್ ಇನ್ ಕರ್ನಾಟಕ ನ್ಯೂಮಿಸ್‌ಮ್ಯಾಟಿಕ್ಸ್–**ಡಾ ॥ ಎ.ವಿ. ನರಸಿಂಹಮೂರ್ತಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೬

**೯. ಕಾಯಿನ್ಸ್ ಅಂಡ್ ಕರೆನ್ಸಿ ಸಿಸ್ಟಂ ಇನ್ ವಿಜಯನಗರ ಎಂಪೈರ್–**ಡಾ ॥ ಎ.ವಿ. ನರಸಿಂಹಮೂರ್ತಿ, ದ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯಾ, ವಾರಣಾಸಿ, ೧೯೯೧

**೧೦. ಲಾರ್ಡ್ ವರಾಹ ಇನ್ ಇಂಡಿಯನ್ ಥಾಟ್** ಎಂಬ ರಾಷ್ಟ್ರೀಯ ಸಮ್ಮೇಳನದ ಅಧ್ಯಕ್ಷ ಭಾಷಣ– ಡಾ॥ ಎ.ವಿ. ನರಸಿಂಹ ಮೂರ್ತಿ, ೨೦೧೨

**೧೧. ಕಾಯಿನ್ಸ್** – ಪರಮೇಶ್ವರಿ ಲಾಲ್ ಗುಪ್ತ, ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ, ೧೯೬೯

**೧೨. ದಿ ಆಳುಪಾಸ್, ಕಾಯಿನೇಜ್ ಅಂಡ್ ಹಿಸ್ಟರಿ–** ಎಸ್. ಗೋವಿಂದರಾಯ ಪ್ರಭು ಮತ್ತು ಎಂ. ನಿತ್ಯಾನಂದ ಪೈ, ಸಾಣೂರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ, ೨೦೦೬

**೧೩. ದಿ ಕಾಯಿನೇಜ್ ಅಂಡ್ ಹಿಸ್ಟರಿ ಆಫ್ ವಿಜಯನಗರ ಎಂಪೈರ್** – ಡಾ. ಎಂ. ಗಿರಿಜಾಪತಿ, ಬಗ್ಗನಾಡು, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ೨೦೦೯

**೧೪. ತ್ರೀ ಗೋಲ್ಡ್ ಕಾಯಿನ್ಸ್ ಫ್ರಂ ಕರ್ನಾಟಕ–** ರಾಜೇಶ್ ಎಂ.ಆರ್, ಸ್ಟಡೀಸ್ ಇನ್ ಸೌತ್ ಇಂಡಿಯನ್ ಕಾಯಿನ್ಸ್, ಚೆನ್ನೈ ೨೦೦೯, ಸಂಪುಟ–೧೯, ಪುಟ ೭೫–೭೭

# ವಚನಗಳಲ್ಲಿ 'ಶಿವ'ನ ಪರಿಕಲ್ಪನೆ

– ಸಂಗಮೇಶ ಸವದತ್ತಿಮಠ

ಬಾಣ ಕವಿಯ ಸಂಸ್ಕೃತ ಹರ್ಷಚರಿತ್ರದಲ್ಲಿ ಬರುವ, ಶಿವನ ಪಾರಮ್ಯವನ್ನು ವಿವರಿಸುವ

"ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರವೇ।
ತ್ರೈಲೋಕ್ಯನಗರಾರಂಭ ಮೂಲಸ್ಥಂಭಾಯ ಶಂಭವೇ"

ಎಂಬ ಸುಪ್ರಸಿದ್ಧ ಶ್ಲೋಕವು ಕನ್ನಡದ ಬಹಳಷ್ಟು ಶಿಲಾ ಶಾಸನಗಳಲ್ಲಿ ಆರಂಭದ ಸಾಲುಗಳಾಗಿ ಉಲ್ಲೇಖಿಸಲ್ಪಟ್ಟಿದ್ದನ್ನು ಗಮನಿಸಿದರೆ ಕರ್ನಾಟಕದಲ್ಲಿ ಶಿವಾರಾಧನೆ ಬಹಳಷ್ಟು ಪ್ರಭಾವಿಯಾಗಿತ್ತೆಂದೇ ಹೇಳಬೇಕಾಗುತ್ತದೆ. ದ್ರಾವಿಡ ಜನಾಂಗದವರು ಶಿವನನ್ನು ಅತ್ಯಂತ ಪ್ರಾಚೀನ ಕಾಲದಿಂದಲೂ ಆರಾಧಿಸುತ್ತಿದ್ದ ಬಗ್ಗೆ ಅನೇಕ ಸಂಶೋಧಕರು ವಿದ್ವಾಂಸರು ಈಗಾಗಲೆ ಗುರುತಿಸಿದ್ದಾರೆ. ರುದ್ರ ಮತ್ತು ಪಶುಪತಿ ಎಂಬ ಆದಿ ದೈವತಗಳ ನಂತರ ಶಿವನ ಹೆಸರು ಹೆಚ್ಚು ಪ್ರಚಲಿತವಾಯಿತು. ಹರಪ್ಪಾ ಮೊಹೆಂಜೋದಾರೋ ಸಂಸ್ಕೃತಿಯ ಜನ ಪಶುಪತಿಯನ್ನು ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ಋಗ್ವೇದ ಅತ್ಯಂತ ಪ್ರಾಚೀನ ವೇದವಾಗಿದ್ದು ಅಲ್ಲಿ ರುದ್ರನ ವರ್ಣನೆಯೇ ಇದೆ. ಅಲ್ಲಿ ದೈವದ ಹೆಸರಿನಲ್ಲಿ ಶಿವನ ನಾಮ ಪ್ರಸ್ತಾಪ ಬರುವುದಿಲ್ಲ. ನಂತರ ರುದ್ರನನ್ನು ಶಿವನ ರೂಪದಲ್ಲಿ ಪ್ರಾಚೀನ ಜನಾಂಗದವರು ಕಂಡುಕೊಂಡು ಪೂಜಿಸತೊಡಗಿದರು. ಸೃಷ್ಟಿ, ರಕ್ಷಣೆ ಮತ್ತು ನಾಶ ಈ ಮೂರಕ್ಕೂ ಕಾರಣಕರ್ತನೆ ರುದ್ರನೆಂದು ಭಾವಿಸಿಕೊಂಡ ನಂತರ ರುದ್ರನನ್ನು ಆತಂಕದ ಸಮಯದಲ್ಲಿ ಸ್ಮರಿಸುತ್ತ ಪ್ರಶಾಂತ ಮೂರ್ತಿಯಾದ ಶಿವನನ್ನು ಉಳಿದೆಲ್ಲ ಸಮಯಗಳಲ್ಲಿ ಆರಾಧಿಸತೊಡಗಿರಬೇಕೆನಿಸುತ್ತದೆ. ರುದ್ರನು ಭಯಂಕರನು, ಶಿವನು ಪ್ರಶಾಂತನು, ಶುಭಕರನು, ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣೀಭೂತನು. ಹೀಗಾಗಿ ಸರ್ವಕಾಲಕ್ಕೂ ಶಿವನು ಪೂಜನೀಯನಾದುದು ಸಹಜವೇ ಆಗಿದೆ. ಭಕ್ತಿ ಆಂದೋಲನಕಾರರಿಗಂತೂ ಶಿವ ಅದಮ್ಯ ಚೇತನ ಶಕ್ತಿಯೆನಿಸಿದ.

ಶ್ವೇತಾತರೋಪನಿಷತ್ತು ಮೊಟ್ಟ ಮೊದಲಿಗೆ ಭಕ್ತಿಯ ಮಹತ್ವವನ್ನು ಮನಗಾಣಿಸುತ್ತದೆ. ನಂತರದ ಕಾಲದಲ್ಲೂ ಶಿವಭಕ್ತಿ ಏರುಮುಖದಲ್ಲೇ ಸಾಗಿತು. ಶಿವನ ಲೀಲೆಗಳನ್ನು ಹಾಡಿಹೊಗಳುವ ಲೀಲೆಗಳು ಮತ್ತು ಶಿವನ ಸಾಮರ್ಥ್ಯ, ರೂಪಲಾವಣ್ಯ, ಕೌಟುಂಬಿಕ ಚಿತ್ರಣ, ಶಿವಶಕ್ತಿ ಮೂಲವಾದ ತಾತ್ವಿಕ ವಿವೇಚನೆ ಅತ್ಯದ್ಭುತವಾಗಿ ವರ್ಣಿಸಲ್ಪಡತೊಡಗಿದವು. ಮೊಹೆಂಜೋದಾರೋ ಕಾಲದ ಪಶುಪತಿ, ಋಗ್ವೇದಕಾಲದ ರುದ್ರ, ಯಜುರ್ವೇದಕಾದ ಶಿವ, ಶ್ವೇತಾಶ್ವತರ ಉಪನಿಷತ್‌ಕಾಲದ ಮಹೇಶ್ವರ, ಆಗಮಗಳ ಕಾಲದ ಪರಮೇಶ್ವರ, ಶಂಕರ, ಶಂಭು, ಇತ್ಯಾದಿ ಹೆಸರುಗಳಿಂದ ಶಿವನು ಪ್ರಸಿದ್ಧಿಯನ್ನು ಪಡೆಯುತ್ತ ಸಾಗಿಬಂದನು.

ಶಿವ ಎಂಬುದಕ್ಕೆ ನಿರುಕ್ತದ ದೈವತಾಕಾಂಡದಲ್ಲಿ ಸುಖ, ಆನಂದ ಎಂಬ ಅರ್ಥವನ್ನು ನೀಡಲಾಗಿದೆ. ವಶ ಎಂಬುದು ಕಾಲಾಂತರದಲ್ಲಿ ಶಿವ ಎಂದಾಯಿತೆಂದೂ ಹೇಳಲಾಗುತ್ತದೆಯಾದರೂ ಇದನ್ನು ಭಾಷಾವೈಜ್ಞಾನಿಕವಾಗಿ ಖಚಿತಪಡಿಸುವುದು ಕಷ್ಟ.. ಶಿವ ಶಬ್ದದ ಆರಂಭದ ಅಕ್ಷರ 'ಶ'ಕಾರವಿರುವುದರಿಂದ ಇದನ್ನು ಸಂಸ್ಕೃತ ಮೂಲಕ್ಕೇ ಹೇಳಬೇಕಾಗುತ್ತದೆ. ಕಾಮಕ್ರೋಧಾದಿಗಳಿಗೆ ವಶವಾಗದೆ ಅವುಗಳನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕೆಂಬುದು ಇದರ ಅಂತರಾರ್ಥವಿರಬೇಕು. ಒಟ್ಟಿನಲ್ಲಿ ಶಿವ ಎಂಬ ಶಬ್ದಕ್ಕೆ ಶುಭ ಮಂಗಲ ಕಲ್ಯಾಣಕಾರಕ, ಆನಂದದಾಯಕ, ಮೋಕ್ಷಪ್ರದಾಯಕ, ಎಂಬಿತ್ಯಾದಿ ಅರ್ಥಗಳಿವೆ. ರುದ್ರ ಶಿವನನ್ನು ಭಯಂಕರತೆಯ ಸಂಕೇತವಾಗಿ 'ಸೆ/ಚೆಂಪು' (ಕೆಂಪು) ಎಂದು ಕರೆದರೆಂದೂ ಸೆಂಪು ಎಂಬ ಪದ ಶೆಂಬು>ಶಂಭು ರೂಪಕ್ಕೆ ಬೆಳವಣಿಗೆ ಹೊಂದಿರಬೇಕೆಂದು ಊಹಿಸಬಹುದು. ಹಾಗೆಯೆ ಸೆಂಪು+ ಕರ= ಕೆಂಪು ಕರವುಳ್ಳವ ಶಂಕರ ಎಂದಾಗಿರಬೇಕು.

ಭಾರತೀಯ ಸಂಸ್ಕೃತಿಯಲ್ಲಿ ದೇವರುಗಳ ಆರಾಧನೆಗೆ ಸಂಬಂಧಿಸಿದಂತೆ ನೋಡಿದರೆ ಬ್ರಹ್ಮ, ವಿಷ್ಣು ಮಹೇಶ್ವರ ಎಂಬ ತ್ರಿಮೂರ್ತಿಗಳ ಮತ್ತು ಅವರ ಪರಿವಾರದ ದೇವತೆಗಳು ಬಹು ಪ್ರಾಮುಖ್ಯವನ್ನು ಪಡೆದಿರುವಂತೆ ತೋರುತ್ತದೆ. ಇವರು ಒಂದೊಂದು ಜನಾಂಗ ಅಥವಾ ವರ್ಗಗಳ ಜನರ ಆರಾಧ್ಯ ದೈವವಾಗಿರಬೇಕೆನಿಸುತ್ತದೆ. ಈ ವರ್ಗಗಳಲ್ಲಿ ಒಮ್ಮೊಮ್ಮೆ ಸಂಘರ್ಷಗಳೂ ಒಮ್ಮೊಮ್ಮೆ ಸಾಮರಸ್ಯವೂ ಆಗಿರಬೇಕು. ವಿಷ್ಣುವು ವಿಶೇಷವಾಗಿ ಉನ್ನತ ಆರ್ಯ ವರ್ಗದವರ ದೈವವಾಗಿ,

'ಸನ್ನಿಧಿ', ಕುಮಾರೇಶ್ವರ ನಗರ, ಬೆಳಗಾವಿ ರಸ್ತೆ, ಧಾರವಾಡ– ೮

ಬ್ರಹ್ಮನು ಮಧ್ಯನವರ್ಗದ ಅಷ್ಟು ಪ್ರಭಾವಿ ಅಲ್ಲದ ದೇವರಾಗಿ ಉಳಿದುಬಿಟ್ಟರೆ ಮಹೇಶ್ವರನು ಅಂದರೆ ಶಿವನು ದ್ರಾವಿಡರ, ಕೆಳವರ್ಗದವರ ದೇವರಾಗಿ ಪೂಜಿಸಲ್ಪಡತೊಡಗಿದನು. ಈ ಭಕ್ತ ವರ್ಗೀಕರಣ ಹೆಚ್ಚು ಖಚಿತವೇನೂ ಅಲ್ಲ. ಯಾಕೆಂದರೆ ಯಾವ ವರ್ಗದವರೂ ಎಲ್ಲ ದೇವತೆಗಳನ್ನೂ ಪೂಜಿಸುತ್ತಿದ್ದ ಬಗ್ಗೆಯೂ ಉಲ್ಲೇಖಗಳಿರಬಹುದು. ಭಾರತದಾದ್ಯಂತ ಶಿವ ಮತ್ತು ವಿಷ್ಣು ಮಂದಿರಗಳದ್ದೇ ಪ್ರಾಬಲ್ಯ ಇಂದಿಗೂ ಉಂಟು

ವಚನಕಾರರು ಕೆಳವರ್ಗದ ದೈವವಾದ ಶಿವನ ಪಾರಮ್ಯವನ್ನು ಎತ್ತಿಹಿಡಿದು ವರ್ಣಿಸಿರುವುದು ವಿಶೇಷವಾಗಿದೆ. ಶಿವನು ಬೂದಿಬಳಿದುಕೊಂಡು, ಬ್ರಹ್ಮನ ಕಪಾಲ(ತಲೆಬುರುಡೆ) ಯನ್ನು ಹಿಡಿದುಕೊಂಡು ಭಿಕ್ಷೆ ಬೇಡುತ್ತ ತಿರುಗುವ ಅಲೆಮಾರಿಯಾದವನು. ಶಿವನಿರುವುದು ಸ್ಮಶಾನದಲ್ಲಿ, ಅಂತೆಯೆ ಅವನು ಭೂತನಾಥ. ಉಳಿದಂತೆ ಅವನ ವಾಸ ಕೈಲಾಸವೆಂಬ ಹಾಳುಮೊರಡಿಯಲ್ಲಿ. ಅವನಿಗೆ ವಿಷ್ಣುವಿನಂತೆ ವಜ್ರವೈಢೂರ್ಯಗಳ ಆಭರಣಗಳಿಲ್ಲ. ಲಕ್ಷ್ಮಿಯಂಥ ಸಿರಿವಂತೆ ಹೆಂಡತಿಯಿಲ್ಲ. ವನ್ಯ ಜೀವನದ ಕಾಡಿನ ಗಿರಿಜೆ ಶಿವನ ಸತಿ. ದರಿದ್ರ ದೇವರಾದ ಶಿವನನ್ನು ವರಿಸಬೇಡವೆಂದು ಸತಿಯ ತಂದೆ ದಕ್ಷನು ಹೇಳಿದರೂ ಕೇಳದೆ ಅವಳು ಶಿವನನ್ನೇ ವರಿಸಿ ಅವಮಾನಕ್ಕೆ ಗುರಿಯಾದಳು. ಶಿವನಿಗೆ ಕಾಡಿನ ಬದುಕು, ಮೈಮೇಲೆ ಬಟ್ಟೆಯಿಲ್ಲ, ಹುಲಿಚರ್ಮವೇ ಅವನ ಮಾನ ಮುಚ್ಚಲು ಗತಿ. ಹಾವಿನ ಮರಿಗಳೇ ಅವನ ಕಿವಿಯೋಲೆಗಳು. ಎತ್ತು, ಹಾವು, ಇಲಿ, ಮುಂತಾದ ಪ್ರಾಣಿಗಳು, ರುದ್ರಾಕ್ಷಿ, ಕಾಡಿನ ಸೊಪ್ಪು, ನಂದಿ, ಭೃಂಗಿ ಇವನ ಸಹವರ್ತಿಗಳು. ಅವನ ಕೊರಳಿಗೆ ಸತ್ತ ರಕ್ಕಸರ ರುಂಡಮಾಲೆಯೇ ಭೂಷಣ. ಅವನು ಪಶುಗಳ ಪತಿ (ರಕ್ಷಕ). ಶಿವನು ಶೂದ್ರವರ್ಗದವ ಅಂತೆಯೆ ಡಮರು, ತ್ರಿಶೂಲ, ಇವನ ಪ್ರೀತಿಯ ವಸ್ತುಗಳು. ವನ್ಯ ಅಲೆಮಾರಿಗಳು, ಕೃಷಿಕರು, ಬುಡಕಟ್ಟಿನವರ ಕುಣಿತದ ಭಯಂಕರ ನಾಟ್ಯ ಇವನದು– ಅದೇ ತಾಂಡವ ನೃತ್ಯ. ನಾದಪ್ರಿಯ, ಚರ್ಮವಾದ್ಯಪ್ರಿಯ. ನಾದದಲ್ಲಿಯೇ ಬೀಜಾಕ್ಷರ ಹುಟ್ಟಿಸಿ ಕೆಳವರ್ಗದವರಿಗೆ ದನಿಯಾದವ, ಬಾಯಿಯಾದವ, ಏಕಾಕ್ಷರ ನಾಮ ಹೊಂದಿದವ. ಉಗ್ರ ಕೋಪಿ. ತನ್ನ ವೈರಿಗಳನ್ನು ಸುಟ್ಟು ಭಸ್ಮಮಾಡಿಬಿಡುವ ಶಕ್ತಿಯುಳ್ಳವ. ಎಗ್ಗಿಲ್ಲದೆ ಬೇಡಿದವರಿಗೆ ಬೇಡಿದ್ದನ್ನು ಹಿಂದುಮುಂದು ನೋಡದೆ ಕೊಟ್ಟುಬಿಡುವವ. ಆಸೆಬುರುಕ ರಾಕ್ಷಸರು ತಮ್ಮ ತಪ್ಪಿನಿಂದ ವಿಷ್ಣುವಿನ ಕೋಪಕ್ಕೆ ತುತ್ತಾಗಿ ಸಿಕ್ಕಿಹಾಕಿಕೊಂಡು ಪಾರಾಗಲು ಆ ದಲಿತರು ಮೊರೆಹೋಗುವುದು ಶಿವನನ್ನೆ. ಅವರ ಕಷ್ಟ(ವಿಷ)ವನ್ನು ತಾನೇ ಸ್ವೀಕರಿಸಿ ಅವರನ್ನು ಉಳಿಸುವ ಕರುಣಾಳು ದೇವರು. (ವಿಷಕಂಠ). ಸೃಷ್ಟಿಗೆ ಕಾರಣವಾಗುವ ಭಗ–ಲಿಂಗ ಸಂಕೇತವಾಗಿ ನಿಂತ ಈಶ್ವರ ಭಗವಂತ. ಹೆಣ್ಣಿಗೆ ೫೦% ಮೀಸಲಾತಿ ನೀಡಿ ಗೌರವಿಸಿದ ಅರ್ಧನಾರೀಶ್ವರ. ಅವನ ಅರ್ಧನಾರೀಶ್ವರತ್ವ ಪುರುಷ ಪ್ರಕೃತಿಗಳ ಸಮಾಗಮದ ಪ್ರತೀಕ, ಆರ್ಯರು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಬೇಗಿ ಹೆಣ್ಣನ್ನು ಹೀಗಳೆದಾಗ ದ್ರಾವಿಡರ ಶಿವನು ಹೆಣ್ಣಿಗೆ ತಲೆಯಮೇಲೆ ತೊಡೆಯ ಮೇಲೆ, ನಂತರ ತನ್ನ ಅರ್ಧ ಅಂಗದಲ್ಲಿಯೇ ಸ್ಥಾನಕಲ್ಪಿಸಿ ಮಾತೃಪ್ರಾಧಾನ್ಯವನ್ನು ಎತ್ತಿಹಿಡಿದ. ಅಂತೆಯೆ ಇವನ ಸಹಧರ್ಮಿಣಿಯರು ಗೌರಿ, ಗಂಗೆ, ದುರುಗವ್ವ, ಕಾಳವ್ವ, ರುದ್ರಮ್ಮ, ಮುಂತಾದವರು ಇಂದಿಗೂ ಪೂಜೆಗೊಳ್ಳುವುದು ಹೆಚ್ಚಾಗಿ ದಲಿತವರ್ಗದ ಭಕ್ತರಿಂದ. ಇಂಥ ಪರಮೇಶ್ವರನ ಪಾರಮ್ಯವನ್ನು ಕಡಿಮೆಗೊಳಿಸಲು ಮೇಲ್ವರ್ಗದ ದೇವತೆಗಳು ಹೋರಾಡಿ ಸುಸ್ತಾದರು. ಶಿವನು ದುಷ್ಟರನ್ನು ಹಣಿಯಲು ವೀರಭದ್ರನನ್ನು ಅವನು ನೇಮಿಸಿದ. ದಕ್ಷನ ಅಹಂಕಾರವನ್ನು ನಾಶಪಡಿಸಿ ತಕ್ಕ ಪಾಠ ಕಲಿಸಿದ. ವೀರಭದ್ರನ ಒಡಪುಗಳಲ್ಲಿ 'ಆಹಾಹಾ ಸರ್ಪಾ' ಎಂಬ ಮಾತು ಬರುತ್ತದೆ. ವೀರಭದ್ರ ಸರ್ಪಕುಲ ಅಂದರೆ ನಾಗಕುಲದವ. ನಾಗರು ದ್ರಾವಿಡ ಪಣಿಯರು. (ಪಣಿ=ಫಣಿ, ನಾಗರಹೆಡೆ) (ವೀರಪಣಿ+ಜ = ವೀರಬಣಿಜರು ಎಂದರೆ ವೀರಬಣಜಿಗರು, ವೀರಬಣಂಜುಗಳು ಪ್ರಾಯಃ ವೀರಭದ್ರನ ನಾಗಕುಲಕ್ಕೆ ಸಂಬಂಧಿಸಿದ ದ್ರಾವಿಡರು. ಶೂರರಾದ ಇವರು ಪರ್ವತ ಪ್ರದೇಶದಲ್ಲಿ ಎಲ್ಲೆಂದರಲ್ಲಿ ಅಲೆದು ಜನರಿಗೆ ಬೇಕಾದ ವಸ್ತುಗಳನ್ನು ಒದಗಿಸುತ್ತಿದ್ದರು. ಅಂತೆಯೆ ಇವರು ಮುಂದೆ ಪಣಿ+ಕ = ವಣಿಕ ಪಣಿ+ಜ ವಣಿಜ, ವಾಣಿಜ್ಯ (ವ್ಯಾಪಾರಿ) ಮಾಡುವವರೆನಿಸಿರಬೇಕು.) ಶಿವನು ರೌದ್ರಾವತಾರ ತಾಳಿ ರುದ್ರನೆನಿಸಿದ. ಋಗ್ವೇದದಲ್ಲಿ "ಸ ವೀರೋ ದಕ್ಷಸಾದನೋ ವಿಯಸ್ತಂಭರೋದಸಿ" ಅಂದರೆ ದಕ್ಷನನ್ನು ಶಿಕ್ಷಿಸಿದ ವೀರಭದ್ರನು ಭೂಮ್ಯಾಕಾಶಗಳನ್ನು ಸ್ಥಂಭಿಸಿದನು ಎಂಬ ವರ್ಣನೆ ಇದೆ. ಹೀಗೆ ಶಿವ, ರುದ್ರ, ವೀರಭದ್ರರು ದ್ರಾವಿಡರೆಲ್ಲರಿಗೂ ಆರಾಧ್ಯ ದೈವವಾದರು. ದ್ರಾವಿಡ ಶೈವರೂ ಕಾಲಾಂತರದಲ್ಲಿ ವೈದಿಕ ಯಜ್ಞ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು. ಅಥವಾ ಆರ್ಯರೇ ಶಿವನ ಪ್ರಭಾವಕ್ಕೆ ಒಳಗಾಗಿ ಅವನನ್ನು ತಮ್ಮ ಪದ್ಧತಿಯ ಪ್ರಕಾರ ಪೂಜಿಸತೊಡಗಿದರು. ಇದರಿಂದ ಶಿಷ್ಟರು ಪರಿಶಿಷ್ಟರು, ಮೇಲ್ವರ್ಗದವರು, ಕೆಳವರ್ಗದವರು ಎಲ್ಲರೂ ಶಿವಭಕ್ತರಾದರು. ಎಲ್ಲರೂ ಭಾರತೀಯ ಸಂಸ್ಕೃತಿ ಭಾಗವಾದರು.

ಪ್ರಾಚೀನಕಾಲದ ಅಗಸ್ತ್ಯಾದಿ ಋಷಿಮುನಿಗಳು, ರಾವಣಾದಿ ದ್ರಾವಿಡರು, ರೇಣುಕ ಶಂಕರಾಚಾರ್ಯರಂಥ ಆಚಾರ್ಯರು, ಬೇಡರಕಣ್ಣಪ್ಪ, ಮಾದಾರಚೆನ್ನಯ್ಯನಂಥ ದಲಿತರು, ೬೩ ಪುರಾತನರು, ಚೋಳನಂಥ ಅರಸರು, ಬಸವಾದಿಶಿವಶರಣರು ಇಂಥ ಬಹುವರ್ಗೀಯ ಜನರ ಪೂಜನೀಯ ದೈವವೆನಿಸಿದವನೇ ಶಿವನು.

**ವಿಶ್ವಾಧಿಕೋ ರುದ್ರನ ಹೊಗಳುವ ಶ್ರುತಿಗಳು, ವಿಶ್ವರೂಪಾಯ ವೈನಮಃ ...**
**ಎಂದು ಶ್ರುತಿ ಸಾರುತ್ತಿರಲು ಸಂಹಾರ ಕಾರಣನೆ ನಮೋ ನಮ್ಮ**

**ಕೂಡಲಸಂಗಮದೇವ**

ಎಂಬ ಬಸವಣ್ಣನವರ ವಚನದಲ್ಲಿ ವಿಶ್ವಕ್ಕೇ ಶ್ರೇಷ್ಠನೆನಿಸಿದ ರುದ್ರನನ್ನು ವೇದಗಳು "ವಿಶ್ವರೂಪಾಯವೈನಮಃ" ಎಂದು

ಹೊಗಳುತ್ತಿರಲು ಸಂಹಾರ ಕಾರಣರಾದ ರುದ್ರ ವೀರಭದ್ರರು ಎಂದೆಂದಿಗೂ ವಂದನಾರ್ಹರು – ರುದ್ರ ವೀರಭದ್ರರೇ ಕೂಡಲಸಂಗಮನಾಗಿ ಬಂದವರು ಅಂಥ ಕೂಡಲಸಂಗಮ ದೇವನಿಗೆ ನಮೋ ನಮ: ಎನ್ನುತ್ತೇನೆ ಎಂದು ಸ್ಪಷ್ಟವಾಗಿ ವಿವರಿಸಿದ್ದಾರೆ.

ಚೆನ್ನಬಸವಣ್ಣನವರು ರುದ್ರ ಶಿವನನ್ನು ಹೀಗೆ ವರ್ಣಿಸುತ್ತಾರೆ :

...ನಾಸಿಕದಲ್ಲಿ ನಾಗಭೂಷಣನೆಂಬ ರುದ್ರನಿಪ್ಪನಯ್ಯಾ.
ಬಲದ ಕಣ್ಣಲ್ಲಿ ಕಾಮಸಂಹರನೆಂಬ ರುದ್ರನಿಪ್ಪನಯ್ಯಾ,
ಎಡದ ಕಣ್ಣಲ್ಲಿ ತ್ರಿಪುರಸಂಹರನೆಂಬ ರುದ್ರನಿಪ್ಪನಯ್ಯಾ.
ಬಲದ ಕರ್ಣದಲ್ಲಿ ಪಾರ್ವತೀಪ್ರಿಯನೆಂಬ ರುದ್ರನಿಪ್ಪನಯ್ಯಾ

(ವಚನಸಂಖ್ಯೆ ೧೪೬೩)

ಇಲ್ಲಿ ನಾಗಭೂಷಣ, ಕಾಮಸಂಹರ, ತ್ರಿಪುರಸಂಹರ, ಪಾರ್ವತೀಪ್ರಿಯ ಇವೆಲ್ಲವೂ ಶಿವನ ನಾಮಧೇಯಗಳು. ಶಿವ, ಮಹೇಶ್ವರ, ರುದ್ರ, ಶ್ರೀಕಂಠ, ಶಂಭು, ಈಶ್ವರ, ಮಹಾದೇವ, ಪಶುಪತಿ, ನೀಲಕಂಠ, ವೃಷಧ್ವಜ, ಮತ್ತು ಹರ ಈ ಹನ್ನೊಂದು ಜನ ರುದ್ರಪುರುಷರಲ್ಲಿ ಒಬ್ಬನೆಂದು ಶಂಭುವನ್ನು ವರ್ಣಿಸಲಾಗುತ್ತದೆ. ಶಿವ ಶಬ್ದಕ್ಕೆ ಪರ್ಯಾಯವಾದ ಇನ್ನೊಂದು ಪದ 'ಶಂಭು'. ಇದರಂತೆ ಇನ್ನೂ ಹಲವಾರು ರೀತಿಯಲ್ಲಿ ಇವನನ್ನು ಹೆಸರಿಸಲಾಗಿದೆ.

ಚೆನ್ನಬಸವಣ್ಣನವರು ಶಿವನನ್ನು ರುದ್ರನೆಂದೇ ಹೇಳುವ ಬಗೆ ವಿಶಿಷ್ಟವಾಗಿದೆ.

ಪಾರ್ವತೀಪ್ರಿಯನೆಂಬ ರುದ್ರ = ಪಾರ್ವತಿಗೆ ಪ್ರಿಯನಾದವ ಶಿವ
ನಾಗಭೂಷಣನೆಂಬ ರುದ್ರ = ಹಾವನ್ನು ಧರಿಸಿಕೊಂಡವ ಶಿವ
ಶೂಲಪಾಣಿಯೆಂಬ ರುದ್ರ = ಕೈಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡ ಶಿವ
ಕೋದಂಡನೆಂಬ ರುದ್ರ = ಬಿಲ್ಲು ಹಿಡಿದ ಶಿವ
ಕರೆಕಂಠನೆಂಬ ರುದ್ರ = ಕರಿಯ ಕಂಠದವನಾದ ಶಿವ
ದಕ್ಷಸಂಹರನೆಂಬ ರುದ್ರ = ದಕ್ಷನನ್ನು ಸಂಹಾರ ಮಾಡಿದ ಶಿವ
ಫಣಿಭೂಷಣನೆಂಬ ರುದ್ರ = ಹಾವನ್ನು ಧರಿಸಿಕೊಂಡವ ಶಿವ
ರುಂಡಮಾಲಾಧರನೆಂಬ ರುದ್ರ = ರುಂಡಮಾಲೆಗಳನ್ನು ಧರಿಸಿಕೊಂಡವ ಶಿವ
ಕಪಾಲಧರನೆಂಬ ರುದ್ರ = ತಲೆಬುರುಡೆಗಳನ್ನು ಧರಿಸಿಕೊಂಡವ ಶಿವ
ಏಕಾದಶ ರುದ್ರ = ಸೃಷ್ಟಿಯ ಆರಂಭಕಾಲದಲ್ಲಿ ಬ್ರಹ್ಮನ ಭ್ರೂಮಧ್ಯದಿಂದ

ಗುಮ್ಮಳಾಪುರದ ಸಿದ್ಧಲಿಂಗದೇವರು ಶಿವನ ಐವತ್ತಕ್ಕೂ ಹೆಚ್ಚು ನಾಮಗಳನ್ನು ತಮ್ಮ ಒಂದು ವಚನದಲ್ಲಿ ಹೇಳುವುದು ಸ್ವಾರಸ್ಯಕರವಾಗಿದೆ –

..... ಶರ್ವ, ಶಿವ, ಮಹಾದೇವರು, ನೀಲಕಂಠ
ವೃಷಭಧ್ವಜ, ಈಶಾನ, ಶಂಕರ, ಭೀಮ, ಪಿನಾಕಿ, ಚಂದ್ರಶೇಖರ,
ಕಪರ್ದಿ, ವಿರೂಪಾಕ್ಷ, ವಾಮದೇವ, ಮೃಡ, ಭೂತೇಶ, ಶೂಲಿ,
ಸರ್ವಜ್ಞ ಸ್ಥಾಣು, ಪಾರ್ವತಿಪ್ರಿಯ, ಮಹಾಂಕಾಳ, ಮಹಾದೀರ್ಘ,
ಮಹಾತಾಂಡವ, ಗಂಗಾಧರ, ಗಣೇಶ್ವರ, ಗಜಧ್ವಂಸಿ,
.....
ಷಷ್ಠಮದಲ್ಲಿ ಶಿವ, ಮಾಹೇಶ್ವರ, ರುದ್ರ, ಶ್ರೀಕಂಠ, ಶಂಭು, ಈಶ್ವರ,
ಮಹಾದೇವರು, ಪಶುಪತಿ, ನೀಲಕಂಠ, ವೃಷಭಧ್ವಜ,
ಪರಮೇಶ್ವರನೆಂಬ,
ಹನ್ನೊಂದು ಪ್ರಕಾರವನುಳ್ಳ ರುದ್ರದೇವರು.
ಸಪ್ತಮದಲ್ಲಿ ಭವ, ಮೃಡ, ಹರನೆಂಬ ಮೂರು ಪ್ರಕಾರವನುಳ್ಳ
ತ್ರಯಾವಯದೇವರು.
ಅಷ್ಟಮದಲ್ಲಿ ಭಯಂಕರವನುಳ್ಳ ವಿರಾಟಮೂರ್ತಿದೇವರು.
ನವಮದಲ್ಲಿ ಸರ್ವಚೈತನ್ಯಾತ್ಮಕವನುಳ್ಳ ಹಿರಣ್ಯದೇವರು.
ದಶಮದಲ್ಲಿ ಸುಷುಪ್ತಾವಸ್ಥೆಯನುಳ್ಳ ಪ್ರಾಜ್ಞದೇವರು.
ದ್ವಾದಶದಲ್ಲಿ ಜಾಗ್ರಾವಸ್ಥೆಯನುಳ್ಳ ವಿಶೇಶ್ವರದೇವರು.
ಇಂತೀ ನಾಮ ಪರಿಯಾಯಂಗಳನೆಲ್ಲವನು
ಬಸವೇಶ್ವರನೆ ಅಲಂಕರಿಸಿ......
ಚೋಳಬಸವೇಶ್ವರ ನಿಮ್ಮ ಧರ್ಮ ನಿಮ್ಮ ಧರ್ಮ.

(ವಚನ ಸಂಖ್ಯೆ ೭೭೪)

ಬಸವಣ್ಣನವರು ಶಿವನ ರೂಪವನ್ನು ಬಹು ಸುಂದರವಾಗಿ ವರ್ಣಿಸುತ್ತಾರೆ:

ಕರಿಗೊರಳು ಮೆರೆವ ಚತುರ್ಭುಜ ಎಳೆವಾವಿನ ಕುಂಡಲವನಿಕ್ಕಿ,
ಪೊಳೆವ ತ್ರಿಶೂಲ ವೃಷಭವಾಹನದೇವ,
ಉಮೆಯೊಡನೆ ಸಾರ್ದು
ಬೇಡಿದ ವರವೀವನೇ ಕೂಡಲಸಂಗಮದೇವ.

(ವ.೧೧೩೩)

ಲೋಕ ರಕ್ಷಣಾರ್ಥವಾಗಿ ಶಿವನು ವಿಷವನ್ನು ಕುಡಿದಕಾರಣ ಅವನ ಕೊರಳು ಕರಿಯಾಗಿದೆ. ಆಂತೆಯೆ ಅವನು ಕರಿಗೊರಳ. ಮರಿಹಾವುಗಳನ್ನು ಕಿವಿಯ ಕುಂಡಲ(ಆಭರಣ)ಗಳನ್ನಾಗಿ ಮಾಡಿಕೊಂಡವ, ಶೋಭಿಸುವ ನಾಲ್ಕುಭುಜಗಳುಳ್ಳವ, ನಂದಿಯನ್ನು (ವೃಷಭವನ್ನು) ವಾಹನವಾಗಿ ಮಾಡಿಕೊಂಡವ, ಬೇಡಿದ ವರಗಳನ್ನು ನೀಡುವವ.

ಅಜನಿತ (ವ.೯೦೨) = ಅಜಾತ. ಯಾವನಿಗೆ ಹುಟ್ಟು ಸಾವುಗಳಿಲ್ಲವೋ ಅಂಥ ಶಿವ

ಗೊರವ (ವ.೭೫೧) = ಶಿವ

ಕರ್ತಾರ (ವ.೬೧೫) = ಸೃಷ್ಟಿಕರ್ತನಾದ ಶಿವ

ಅಸಮಾಕ್ಷಲಿಂಗ (ವ.೫೬೬) = ಸಮವೆನಿಸದ ಮುಕ್ಕಣ್ಣನಾದ ಶಿವ

ನೊಸಲಕಣ್ಣ ಅಭವ (ವ.೫೬೪) = ಹಣೆಯಲ್ಲಿ ಕಣ್ಣು ಉಳ್ಳ ಶಿವ

ನಂದಿವಾಹನನು ಭಯಂಕರನು ಆದ ಶಿವನು.

ಆರೂಢ = ಮಹಾಜ್ಞಾನಿ ಶಿವ

ಹರಿಯನು ಹರಿಸಿದನೇ (ಬ.ವ ೫೩೬) = (ತಾ) ವಿಷ್ಣುವನ್ನು ಓಡಾಡಿಸಿದವನೇ ಶಿವ

ಕಾಲಾಗ್ನಿರುದ್ರ (ವ.೨೨೭) = ಭಯಂಕರ ಅಗ್ನಿಸ್ವರೂಪನಾದವ ಶಿವ

ಅನಿಮಿಷ (ವ.೧೪೫) = ರೆಪ್ಪೆಯನ್ನು ಬಡಿಯದ ಕಣ್ಣುಳ್ಳ ಶಿವ,

ಸಂಹಾರಕಾರಣ (ಬ.ವ ೫೩೬) = ಯಜ್ಞ ಸಂಸ್ಕೃತಿಯವರ ಸಂಹಾರಕ್ಕೆ ಕಾರಣನಾದವನು. ಅಂದರೆ ವೀರಭದ್ರನ ಮೂಲಕ ದಕ್ಷನ ಯಜ್ಞವನ್ನು ನಾಶಗೊಳಿಸಿ ಅಹಂಕಾರವನ್ನು ಸಂಹಾರ ಮಾಡಲು ಕಾರಣನಾದವನು. ಆದಿಯಾರೂಢಭಯಂಕರನೆ (ಬ.ವ ೫೩೬)= (ತಾ) ಆದಿಯಲ್ಲೇ ಆರೂಢನೆನಿಸಿದ ಭಯಂಕರಶಿವನು.

ಅರ್ಧನಾರಿಯಾದವ (ವ.೫೦೨) = ಪಾರ್ವತಿ(ಶಕ್ತಿ) ಯನ್ನು ತನ್ನಲ್ಲೆ ಒಳಗೊಂಡ ಶಿವ

ಪನ್ನಗಭೂಷಣ (ವ.೩೪೮) = (ತಾ) ಹಾವನ್ನು ಕೊರಳಲ್ಲಿ ಧರಿಸಿದ ಶಿವ.

ಹೀಗೆ ಬಸವಣ್ಣನವರು ಶಿವನನ್ನು ಪೌರಾಣಿಕ ಪರಿಕಲ್ಪನೆಯಲ್ಲಿ ವರ್ಣಿಸಿದ್ದಾರೆ. ಬಸವಣ್ಣನವರು ಒಂದು ವಚನದಲ್ಲಿ (೫೦೧) ಹೊನ್ನ ಹಾವುಗೆಯ ಮೆಟ್ಟಿದವನ, ಮಿಡಿಮುಟ್ಟಿದ ಕೆಂಜೆಡೆಯವನ ಮೈಯಲ್ಲಿ ವಿಭೂತಿಯ ಹೂಸಿದವನ ಕರದಲ್ಲಿ ಕಪಾಲವ ಹಿಡಿದವನ ಅರ್ಧನಾರಿಯಾದವನ... ಎಂದು ಮುಂತಾಗಿ ವರ್ಣಿಸಿರುವುದನ್ನು ನೋಡಿದರೆ ಸಾಕಾರ ರೂಪದ ಶಿವನ ಕಲ್ಪನೆಯನ್ನು ಶರಣರು ಒಪ್ಪಿಕೊಂಡದ್ದು ಸ್ಪಷ್ಟವಾಗುತ್ತದೆ. ಹಾಗೆಯೆ ಮಹಾದೇವಿಯಕ್ಕನೂ ಶಿವನನ್ನು ತನ್ನ ಅನೇಕ ವಚನಗಳಲ್ಲಿ ಈ ರೀತಿಯಲ್ಲಿಯೇ ವರ್ಣಿಸಿದ್ದಾಳೆ. ಪರಶಿವನನ್ನು ಮೊದಲು ಪೌರಾಣಿಕ ಪರಿಕಲ್ಪನೆಯಲ್ಲಿ ವರ್ಣಿಸಿ ನಂತರ ಶಿವನ ನಿರಾಕಾರತ್ವವನ್ನು ಶಿವಶರಣರು ನಿರೂಪಿಸುತ್ತಾರೆ. ಇದರಿಂದ ಶಿವಶರಣರು ಕೈಲಾಸದ ಮಹಾದೇವನು, ಪಾರ್ವತಿ, ಗಣಪತಿ, ಷಣ್ಮುಖರೊಂದಿಗೆ ಕುಟುಂಬಸ್ಥನಾಗಿದ್ದನೆಂಬ ವಿಷಯವನ್ನು ತಮ್ಮ ವಚನಗಳಲ್ಲಿ ಹೇಳಿರುವುದನ್ನು ನೋಡಿದರೆ ಶಿವನನ್ನು ಸಾಕಾರ ಲಿಂಗ ಲಾಂಛನದ ಮೂಲಕ ಪೂಜಿಸುತ್ತ ನಂತರ ಆ ಲಿಂಗವನ್ನೂ ಬಿಟ್ಟು ಪರಶಿವನ ಸಚ್ಚಿದಾನಂದ, ನಿತ್ಯಪರಿಪೂರ್ಣ ನಿರಾಕಾರ ಅಗಮ್ಯ, ಅಗೋಚರ, ಅಪ್ರಮಾಣ ಪರಿಕಲ್ಪನೆಯನ್ನು ಮಾಡಿಕೊಳ್ಳುವುದನ್ನು ಶರಣರು ಹೇಳಿದ್ದಾರೆ ಎನಿಸುತ್ತದೆ. ಶಿವನ ನಿರಾಕಾರ ಪರಿಕಲ್ಪನೆಯನ್ನು ಆಗಮಗಳಲ್ಲಿಯೂ ವರ್ಣಿಸಿದೆ. ಅದನ್ನು ಸಿದ್ಧಾಂತ ಶಿಖಾಮಣಿ ಎಂಬ ವೀರಶೈವ ಸಂಸ್ಕೃತ ಗ್ರಂಥ 'ಏಕ ಏವ ಶಿವಃ ಸಾಕ್ಷಾಚ್ಚಿದಾ ನಂದಮಯೋ ವಿಭುಃ। ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ (೫-೩೪) ಎಂದು ವರ್ಣಿಸಿದೆ.

ಅಲ್ಲಮಪ್ರಭುಗಳು ತಮ್ಮ ವಚನಗಳಲ್ಲಿ ಶಿವ ಶಬ್ದವನ್ನು ಅನೇಕ ರೀತಿಯಲ್ಲಿ ಬಳಸಿದ್ದಾರೆ.

ಕಾಮಾರಿ (ವ.೮೪೫), ಈಶ್ವರ (ವ.೧೦೪), ಜಗದ ಕರ್ತ (ವ. ೪೬೮), ಸ್ವಯಂ ಜ್ಯೋತಿಪ್ರಕಾಶ (ವ. ೪೨೪), ನಲ್ಲ (ವ.೧೦೬), ಬಿಲ್ಲಾಳೆ (ವ.೯೭) ( ಸಂದರ್ಭಾರ್ಥ),

**'ಅಣು ರೇಣು ತೃಣ ಕಾಷ್ಠದಲ್ಲಿ ಕೂಡಿ ಪರಿಪೂರ್ಣ ಶಿವನೆಂದರಿದು,ಇಂತು_ಕ್ಷಣವೇದಿ ಅಂತರಂಗವ ವೇಧಿಸಲ್ಕೆ ಅಗಣಿತ ಅಕ್ಷೇಶ್ವರ ತಾನೆಂದರಿ'** ಎಂದು ಹೇಳುವಲ್ಲಿ ಶಿವನ ಪರಿಪೂರ್ಣತ್ವವನ್ನು ಬಿಂಬಿಸುತ್ತಾರೆ. ಎಲ್ಲರೂ ಶಿವನಿಗೆ ಮುಕ್ಕಣ್ಣನೆಂದರೆ ಅಲ್ಲಮಪ್ರಭುಗಳು ಶಿವನನ್ನು ಅಸಂಖ್ಯಾತ ಕಣ್ಣುಳ್ಳ 'ಅಕ್ಷೇಶ್ವರ' ಎಂದಿರುವುದನ್ನು ಗಮನಿಸಬೇಕು. ರುದ್ರ, ಶಂಕರ, ಶಶಿಧರ, ನೀಲಕಂಠ ಯಾವುದೇ ಹೆಸರಿನ ಗಣೇಶ್ವರನಿರಲಿ ಅವರೆಲ್ಲರೂ ಲಿಂಗದೊಳಗಿನವರು ಎನ್ನುವಲ್ಲಿ ಶಿವನ ನಾಮ ಹಲವಿದ್ದರೂ ಅವನು ವಿಶ್ವವ್ಯಾಪಿ, ಅಗೋಚರ ಶಕ್ತಿಸ್ವರೂಪ.

**ರುದ್ರನೆಂಬಾತನೊಬ್ಬ ಗಣೇಶ್ವರನು, ಭದ್ರನೆಂಬಾತನೊಬ್ಬ ಗಣೇಶ್ವರನು.**
**ಶಂಕರನೆಂಬಾತನೊಬ್ಬ ಗಣೇಶ್ವರನು, ಶಶಿಧರನೆಂಬಾತನೊಬ್ಬ ಗಣೇಶ್ವರನು.**
**ಪೃಥ್ವಿಯೆ ಪೀಠ ಆಕಾಶವೆ ಲಿಂಗ_ಅಂತಹ ಆತನೊಬ್ಬ ಗಣೇಶ್ವರನು.**
**ಬಲ್ಲಾಳನ ವಧುವ ಬೇಡಿದಾತನೊಬ್ಬ ಗಣೇಶ್ವರನು.**
**ಸಿರಿಯಾಳನ ಮಗನ ಭಿಕ್ಷವ ಬೇಡಿದಾತನೊಬ್ಬ ಗಣೇಶ್ವರನು.**
**ಬ್ರಹ್ಮಕಪಾಲ ವಿಷ್ಣುಕಂಕಾಳವನಿಕ್ಕಿ ಆಡುವಲ್ಲಿ**
**ನೀಲಕಂಠನೆಂಬಾತನೊಬ್ಬ ಗಣೇಶ್ವರನು._**
**ಇವರೆಲ್ಲರು ನಮ್ಮ ಗುಹೇಶ್ವರಲಿಂಗದೊಳಡಗಿಪ್ಪರು.**

**(ವಚನ ಸಂಖ್ಯೆ ೫೧೨)**

**ಕೆರೆಯಲುಂಡು ತೊರೆಯ ಹೊಗಳುವರು.**
**ಅತ್ಯುತ್ಕಟದ ಪರಬ್ರಹ್ಮವನೆ ನುಡಿವರು.**
**ಸಹಜ ಪಿನಾಕಿಯ ಬಲೆಯಲ್ಲಿ ಸಿಲುಕಿ**
**ಭವವ ಹರಿಯಲರಿಯರು.**

**ರುದ್ರನ ಛತ್ರವನುಂಡು ಇಲ್ಲವೆಯ ನುಡಿವ ಹಿರಿಯರಿಗೆ**
**ಮಹದ ಮಾತೇಕೋ ಗುಹೇಶ್ವರಾ? (ವಚನ ಸಂಖ್ಯೆ ೬೧೩)**

**ಏನೆಂದರಿಯರು ಎಂತೆಂದರಿಯರು,**
**ಬರುಮಾತಿನ ಬೊಮ್ಮವನಾಡುತ್ತಿಪ್ಪರು.**
**ರುದ್ರನ ನೊಸಲ ಕಣ್ಣ ಕಿಚ್ಚಿನೊಳಗೆ**
**ತ್ರಿಪುರವ ಸುಡಲರಿಯದೆ**
**ಕಾಮನ ಕಣ್ಣ ಕಿಚ್ಚಿನೊಳಗೆ ತ್ರಿಪುರವ ಸುಡುತ್ತಿಪ್ಪರು.**
**ಭೂಮಿಯಾಕಾಶವ ಮೆಟ್ಟಿ,**
**ಕಾಮಗುಣಂಗಳ ಕೂಡೆ ಕಾದಿ ಗೆಲಲರಿಯದೆ**
**ನೀಲಗಿರಿಯ ಮೇಲೆ ನಿಂದು**
**ಉಲಿವದ (ಉಲಿಯ?) ಉಯ್ಯಾಲೆಯನಾಡುತ್ತಿಪ್ಪರಯ್ಯಾ.**
**ಗುಹೇಶ್ವರಾ ನಿಮ್ಮನರಿದೆಹೆವೆಂಬವರೆಲ್ಲ**
**ಬರುದೊರೆವೋದರಯ್ಯಾ. ॥೧೭೫॥**

ಶಿವನು ರುದ್ರನಲ್ಲಿರುವುದನ್ನು ಚೆನ್ನಬಸವಣ್ಣನವರು ಹೇಳುತ್ತ – ಸತ್ವಗುಣ ರಜದಲಡಗಿ, ರಜದ ಗುಣ

ತಮದಲಡಗಿ, ತಮದ ಗುಣ ರುದ್ರನೊಳಡಗಿ. ರುದ್ರನ ಗುಣ ಅಕ್ಷರಾಕ್ಷರ ಪರಶಿವನೊಳಡಗಿ, ಎನ್ನುತ್ತಾರೆ. ಅಂತೆಯೆ ರುದ್ರ>ಶಿವ>ಪರಶಿವ ಎಂಬ ಬೆಳವಣಿಗೆಯನ್ನು ಸೂಚಿಸುತ್ತಾರೆ.

ಇನಿಗಡಲ ಅಣುಗನ ಕೂಡಿದ ಪತಂಗನು
ತಾಮಸದಿವಸವ ಮರೆದಂತೆ.
ಸತ್ವಗುಣ ರಜದಲಡಗಿ, ರಜದ ಗುಣ ತಮದಲಡಗಿ,
ತಮದ ಗುಣ ರುದ್ರನೊಳಡಗಿ.
ರುದ್ರನ ಗುಣ ಅಕ್ಷರಾಕ್ಷರ ಪರಶಿವನೊಳಡಗಿ,
ಅಕ್ಷರಾಣಿ ಚ ಮಾತ್ರಾಣಿ ಸರ್ವೇ ಬಿಂದುಸಮಾಶ್ರಿತಾ: ।
ಬಿಂದುರ್ಭಿದ್ಯತೇ ನಾದಾತ್ ಸುನಾದಸ್ತೇನಭಿದ್ಯತೇ ॥
ಎಂದುದಾಗಿ, ಇದು ಕಾರಣ ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣ ಬಲ್ಲನಲ್ಲದೆ, ಅಜ್ಞಾನಿಗಳೆತ್ತ ಬಲ್ಲರು ? (ವ.ಸಂ.೪೯೦)

ಹಾಗೆಯೆ ಇತಿಹಾಸ, ವೇದ, ಪುರಾಣಗಳಿಗಿಂತ ಪುರಾತನನಾದ ರುದ್ರನಿಂದ ಆರಂಭವಾದ ವೀರಶೈವ ಧರ್ಮವನ್ನು ವೀರಭದ್ರ ಮತ್ತು ಅಗಸ್ತ್ಯಾದಿ ಸಮಸ್ತ ಋಷಿಗಳು ಲಿಂಗಪೂಜಾನಿರತರಾಗಿ, ಪ್ರಸಾದ ಪಾದೋದಕ ಸ್ವೀಕರಿಸಿ ಅತಿ ಶುದ್ಧರಾದರು ಎಂದು ಸ್ಪಷ್ಟಪಡಿಸುತ್ತಾರೆ. (ಚೆನ್ನಬಸವಣ್ಣನವರ ವಚನಗಳು. ವಚನ ಸಂಖ್ಯೆ ೧೪೭೭. ಸಮಗ್ರ ವಚನಸಂಪುಟ ಕರ್ನಾಟಕ ಸರಕಾರ )

...ಅಗಸ್ತ್ಯದಧೀಚಿ ಕಂಕದ ಬಾಣಾಸುರ ಪುರಂದರ ಬ್ರಹ್ಮವಿಷ್ಣು
ದೂರ್ವಾಸ ನಂದಿಕೇಶ್ವರ ಸ್ಕಂದ ಭೃಂಗಿರಿಟ
ವೀರಭದ್ರಾದಿಗಣಂಗಳೆಲ್ಲರೂ
ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದ: ಶಿವಸಮುದ್ಭವ:।
ಶಿವಾಚಾರರಹಸ್ಯಸ್ಯ ಪಾತ್ರತಾಂ ಪರಮಾಂ ಗತ:॥ 'ಇಂತೆಂದುದಾಗಿ
ಇದನರಿದು ಪರಶುರಾಮ ಪರಾಶರ ವಶಿಷ್ಠ ವಾಲ್ಮೀಕಿ
ಕಮಲಾಕರ ವಿಶ್ವಾಮಿತ್ರ ಮಹಾಮುನಿಗಳೆಲ್ಲರೂ
ಪಾಣಿನಿಶ್ಚ ಕಣಾದಶ್ಚ ಕಪಿಲೋ ಗೌತಮಾದಯ:।
ಪ್ರಸಾದಸೇವನಾದ್ಧ್ಯಾನಾದರ್ಚನಾದ್ಧಾರಣಾದಪಿ॥ ಇಂತೆಂದುದಾಗಿ
ಇದು ಕಾರಣ ಕೂಡಲಚೆನ್ನಸಂಗಮದೇವರನಾರಾಧಿಸಿ,
ಪ್ರಸಾದ ಪಾದೋದಕವ ಕೊಂಡು ಅತಿಶುದ್ಧರಾದರು
ಎಲ್ಲಾ ದೇವರುಗಳು, ಎಲ್ಲಾ ಋಷಿಜನಂಗಳು.

ಈ ಪ್ರಕಾರ ರುದ್ರನು ಶಿವನಾಗಿ ಸದಾಶಿವನಾಗಿ ಪರಶಿವ ತತ್ತ್ವನಾದನೆಂಬುದು ವಚನಕಾರರ ಅಭಿಪ್ರಾಯ. "ಯತ್ರ ಜೀವಸ್ತತ್ರ ಶಿವನಲ್ಲ, ಉತ್ಪತ್ತಿ ಸ್ಥಿತಿ ಪ್ರಳಯರಹಿತನು ಸದ್ಭಕ್ತರಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ, ಕೂಡಲ ಚೆನ್ನಸಂಗಮದೇವ" (ವ.ಸಂ.೧೯೩) ಎನ್ನುವಲ್ಲಿ ಶಿವನು ಭಕ್ತರ ಹೃದಯಮಂದಿರದಲ್ಲಿ ಇರುವವನೆಂದೂ ಹೇಳುತ್ತಾರೆ. ಪ್ರಾಣಲಿಂಗಿಸ್ಥಲದಲ್ಲಿ ಜೀವನು ಶಿವನಾಗುವ ಭಾವ ಬಲಿಯಬೇಕು ಇಲ್ಲದಿದ್ದರೆ ಪ್ರಾಣಲಿಂಗ ಎಂಬುದಕ್ಕೆ ಅರ್ಥವೇ ಇಲ್ಲ ಎಂದೆನ್ನುತ್ತಾರೆ ಚೆನ್ನಬಸವಣ್ಣ :

'....ಶಿವಾತ್ಮಕಂ ಸುಖಂ ಜೀವ: ಜೀವಾತ್ಮಕಂ ಸುಖಂ ಶಿವ: ।
ಶಿವಾತ್ಮನಾಪಿ ಸಂತುಷ್ಟಂ ಪ್ರಾಣಲಿಂಗಪ್ರಸಾದಿನಾಂ ॥
ಇಂತೆಂಬ ವಚನವ ಕೇಳಿ ನಂಬೂದು.
ನಂಬದಿದ್ದರೆ ಪ್ರಾಣಲಿಂಗವೆಂಬ ಶಬ್ದಕ್ಕೆ ಭಂಗ ಹೊದ್ದಿತ್ತು.
ಕೂಡಲಚೆನ್ನಸಂಗಮದೇವಾ. (ವ.ಸಂ.೪೨೧)

ಹಲವಾರು ಶಿವಶಿವಶರಣರು ಶಿವನನ್ನು ಬೇರೆ ಬೇರೆ ಬಗೆಯ ಹೆಸರುಗಳಲ್ಲಿ ವಿವರಿಸಿರುವುದನ್ನು ನೋಡಬಹುದು – ಮಾರಾರಿ (ಹೇಮಗಲ್ಲ ಹಂಪ), ಪಂಚವಕ್ತ್ರ (ದೇಶಿಕೇಂದ್ರ ಸಂಗನಬಸವಯ್ಯ),

ತೋಂಟದ ಸಿದ್ಧಲಿಂಗೇಶ್ವರರು ಶಿವನಿಗೆ ಅನೇಕ ಹೆಸರುಗಳನ್ನು ಹೇಳಿದ್ದಾರೆ: ಭೃಂಗೀಶ್ವರ ಇಂದುಧರ, ಪಂಚವದನ, ಸದಾಶಿವ, ಈಶ್ವರ, ಮಹೇಶ್ವರ, ನಂಜುಗೊರಳ, ವಿಷಕಂಠ, ಇತ್ಯಾದಿ.

ರೂಢೀಶ ಶಿವ (ಗುಹೇಶ್ವರ); ತ್ರಿಯಂಬಕ, ಅಜಹರಿ ಅವತಾರಂಗಳ ಸಂಹಾರ ಮಾಡಿದ ದೇವ (ಕುಷ್ಟಗಿ ಕರಿಬಸವೇಶ್ವರ); ಸೊಡ್ಡಳ ಬಾಚರಸರು ತಮ್ಮ ವಚನಗಳಲ್ಲಿ ಶಿವನನ್ನು ವಿಶಿಷ್ಟ ರೀತಿಯಲ್ಲಿ ಅಂದರೆ ವರ್ಣನಾತ್ಮಕವಾಗಿ ವಿವರಿದ್ದಾರೆ:

ಅಮೃತಮಥನದಲ್ಲಿ ದೈನ್ಯವ ಮಾಡಿದವರನುಳುಹಿದ ದೇವ;
ದಕ್ಷಾಧ್ವರದಲ್ಲಿ ದೈನ್ಯವ ಮಾಡಿದವನುಳುಹಿದ ದೇವ;
ಉರಗಾಭರಣ, ಇತ್ಯಾದಿ;

ಮೋಳಿಗೆ ಮಾರಯ್ಯನವರು – ಕಾಲಸಂಹರ, ಶೂಲಿ, ಎಂದರೆ ಮಾದಾರ ಚೆನ್ನಯ್ಯ ಹಣೆಗಣ್ಣು ಉಳ್ಳವ 'ಭಾಳೇಕ್ಷಣ', ಉಮೆಯಪತಿ 'ಉಮಾಪತಿ' ಎಂದೂ ವರ್ಣಿಸುತ್ತಾರೆ. ಮನುಮುನಿ ಗೊಮ್ಮಟದೇವರು 'ಶಂಬರವೈರಿ', 'ದಿನನಾಶ' ಎಂದರೆ, ನೊಸಲ ಕಣ್ಣು ಚತುರ್ಭುಜದೇವ ಮಡಿವಾಳ ಮಾಚಿದೇವ ಹೇಳುತ್ತಾರೆ. ನಗೆಯ ಮಾರಿ ತಂದೆಯ ವಚನಗಳಲ್ಲಿ ಬಂದಿರುವ ಶಿವನ ಹೆಸರಿನ ಪರಿಯೇ ವಿಶಿಷ್ಟವಾಗಿದೆ:

ಜೀಮೂತ ಮೃತ ದಗ್ಧ ಸರ್ವವ್ಯಾಪಕ ನಾಶನ,
ಉರದ ಮಾತಿಂಗೆ ಮಾರನ ಕೊಂದ ಮಲತ್ರಯ ದೂರ,
ಅನಾಗತ ಸಂಸಿದ್ಧ ಭೋಗಮಯ ನಯನಚರಣವಿರಾಜಿತ,

ಇತ್ಯಾದಿ.

ದಾಸೋಹದ ಸಂಗಣ್ಣನ ವಚನದಲ್ಲಿ (ವ.೧೧೦೮೩) ಶಿವನಿಗೆ "ಅಣೋರಣಿ" ಎಂಬ ಪದ ಬಂದಿದೆ. ಪರಶಿವನನ್ನು 'ಅಣೋರಣೀಯಾನ್ ಮಹತೋ ಮಹೀಯಾನ್': ಅಂದರೆ ಅಣುವಿಗಿಂತ ಸಣ್ಣವನು ಹಾಗೂ ದೊಡ್ಡದಕ್ಕಿಂತ ದೊಡ್ಡವನು ಎಂದು ಹೇಳಲಾಗುತ್ತದೆ. ಆ ಪದವನ್ನೇ ಶಿವನಿಗೆ ಬಳಸಿದ್ದಾನೆ. ಹಾಗೆಯೆ ಅವನು ಅತಿಬಳ ಎಂದೂ ಶಿವನಿಗೆ ಹೆಸರಿಸುತ್ತಾನೆ. ಜೇಡರದಾಸಿಮಯ್ಯನು ಪಶುಪತಿ, ಫಣಾಮಣಿದೇವ, ರುಢಿಗೇಶ, ತ್ರಿಣೆಯ[ನ], ಮೃಡ, ಎತ್ತನೇರಿದ ಕರ್ತ, ಎಂದು ಬಳಸಿದ್ದೂ ವಿಶಿಷ್ಟವಾಗಿದೆ. ಗುಪ್ತಮಂಚಣ್ಣನ ವಚನಗಳಲ್ಲಿ– ತಮರಿಪು ಕೋದಂಡ, ಪರಿಪೂರ್ಣ ಪರಂಜ್ಯೋತಿ ಅಘನಾಶನ, ಎಂದು ಶಿವನನ್ನು ಕರೆದರೆ ಕೋಲಶಾಂತಯ್ಯನು 'ಬಿಡುಮುಡಿ' (ಬಿಟ್ಟಮುಡಿಯ ಶಿವ), ಭಾಳಾಂಬಕ ಎನ್ನುತ್ತಾನೆ. ಕಿನ್ನರಿ ಬೊಮ್ಮಯ್ಯನು ತನ್ನ

ವಚನದಲ್ಲಿ 'ಗರಳಧರ' ಎಂದರೆ, 'ಒಡೆಯ' ಎಂದು ಏಲೇಶ್ವರ ಕೇತಯ್ಯ ಹೇಳುತ್ತಾನೆ. ಆದಯ್ಯನು 'ಅಭವ'ನೆಂದರೆ, 'ವಿಷಧರ'ನೆಂದು ಅರಿವಿನಮಾರಿತಂದೆ ಹೇಳುತ್ತಾನೆ.

ನಾಗಭೂಷಣ, ಉಮೇಶ, ಎಂಬವು ಅಂಬಿಗರ ಚೌಡಯ್ಯನ ವಚನಗಳಲ್ಲಿ ಬಳಕೆಯಾದ ಪದಗಳು.

ಶರಣೆ ಸತ್ಯಕ್ಕನು 'ಭಾವ', ಎಂಬ ಆತ್ಮೀಯ ಸಂಬಂಧವಾಚಿಯನ್ನು ಶಿವನಿಗೆ ಬಳಸುತ್ತಾಳೆ. ಇದೊಂದು ಅತ್ಯಂತ ಕುತೂಹಲಕಾರಿಯಾದ ಅಂಶ. ಆ ವಚನ ಒಂದು ಭಾವಗೀತೆಯಂತೆ ಮನ ಸೆಳೆಯುತ್ತದೆ. ಆ ವಚನ ಹೀಗಿದೆ:

**ಭಾವನೇಕೆ ಬಾರನೆನ್ನ ಮನೆಗೆ ?**
**ಹರಿಯಮಗನನುರುಹಿದ ಗರುವದ ಭಾವನೇಕೆ ಬಾರನೆನ್ನ ಮನೆಗೆ ?**
**ಅಸುರರ ಪುರವ ಸುಟ್ಟ ವೀರಭಾವನೇಕೆ ಬಾರನೆನ್ನ ಮನೆಗೆ ?**
**ದಕ್ಷನ ಶಿರವನರಿದು, ಯಾಗವ ಕೆಡಿಸಿ ಕುರಿದಲೆಯ ಹತ್ತಿಸಿ**
**ಬಿನ್ನಾಣದ ಬಲುಹ ಮೆರೆವ ಏಕೋಭಾವನೇಕೆ ಬಾರನೆನ್ನ ಮನೆಗೆ ?**
**ಹರಿಯ ನಯನದ ಪೂಜೆ ಚರಣದಲೊಪ್ಪಿತ್ತೆಂಬ**
**ದುರುಳತನವು ತನಗೆ ಬೇಡವ್ವಾ**
**ಪರವಧುವಿಂಗಳುಪಿ ಇಲ್ಲವೆಂಬ ವಿಗಡತನದ ದುರುಳತನ ಬೇಡವ್ವಾ,**
**ಆತನ ಕರೆದು ತಾರವ್ವಾ, ಶಂಭುಜಕ್ಕೇಶ್ವರನ ನೆರೆದು ನೋಡುವೆನು.**
**(ವಚನ ಸಂಖ್ಯೆ ೧೨೨೫)**

ಈ ವಚನದಲ್ಲಿ 'ಹರಿಯಮಗನನುರುಹಿದಗರುವದಭಾವ', (ವಿಷ್ಣುವಿನ ಮಗನನ್ನು ಸುಟ್ಟ ಗರ್ವದ ಶಿವ), ಅಸುರರ ಪುರವ ಸುಟ್ಟ ವೀರಭಾವ (ರಾಕ್ಷಸರ ಪುರವನ್ನು ಸುಟ್ಟ ಶಿವ), ದಕ್ಷನ ಶಿರವನರಿದು, ಯಾಗವ ಕೆಡಿಸಿ ಕುರಿದಲೆಯ ಹತ್ತಿಸಿ ಬಿನ್ನಾಣದ ಬಲುಹ ಮೆರೆವ ಏಕೋಭಾವ ಎಂದು ಮುಂತಾಗಿ ವರ್ಣಿಸಿದ್ದಾಳೆ. ಪಿನಾಕಿ, ಮನ್ಮಥವೈರಿ ಎಂಬ ಪದಗಳನ್ನೂ ಅವಳು ಬಳಸಿರುವುದು ವಿಶೇಷ.

ಹಣೆಗಣ್ಣನಾದ ಶಿವ; ಅಘಟಿತಘಟಿತ ಎಂದು ಅಕ್ಕಮಹಾದೇವಿ ಹೇಳಿದರೆ. ನೊಸಲಿನಲ್ಲಿ ಮೂರು ಕಣ್ಣುಳ್ಳ ಪಶುಪತಿ ಎಂದು ಅಮುಗೆ ರಾಯಮ್ಮ ಹೇಳುತ್ತಾಳೆ.

ಶಿವಯೋಗಿ ಸಿದ್ಧರಾಮೇಶ್ವರರು ಶಿವನ ಹೆಸರುಗಳನ್ನು ವೈವಿಧ್ಯಮಯವಾಗಿ ನಿರೂಪಿಸಿದ್ದಾರೆ :

ಸರ್ಪಹಾರ, ತಿಂಗಳಧರ, ಭವ, ಭರ್ಗ, ಭೀಮ, ನೀಲಲೋಹಿತ, ವಿರೂಪಾಕ್ಷ, ನೀಲಕಂಠ, ಉಗ್ರ, ಕಪರ್ದಿ, ಕೈಲಾಸವಾಸಿ, ಸಿತಕಂಠ, ಭಾಳಲೋಚನ, ಕಾಲಾರಿ, ಕಾಮಾರಿ, ತ್ರಿಪುರಾರಿ, ಪಾಪಾರಿ, ಚಂದ್ರಚೂಡಿ, ಶಿವಬೆಟ್ಟಜೆಪತಿ, ಗಂಗಾಜೂಟಾಂಗಮಯ, ದರ್ಪಹರ, ನೀಲಕಂಧರ, ಈಸರ(ಈಶ್ವರ), ನಾಗೇಂದ್ರ, ನಂಕೇಶ್ವರ, ಅನಂಗವಿದಾರಣ, ಪಶು ಪಾಶಮೋಚನನು, ಅಂತಕಹರ, ಅಕ್ಷರಾಂಕ,( =ಅಕ್ಷರ ಎಂದರೆ ನಾಶವಾಗದ್ದು, ಅಂಕ ಎಂದರೆ ಕರುಹು ನಾಶವಾಗದೇ ಇರುವುದರಕುರುಹು ಎಂದು ಶಿವನನ್ನು ಸಂಬೋಧಿಸಿ ಇಲ್ಲಿ ಹೇಳಿದೆ) ಹೀಗೆ ನೂರಾರು ಶಬ್ದಗಳು ಸಿದ್ಧರಾಮೇಶ್ವರರ ವಚನಗಳಲ್ಲಿ ನಿರೂಪಿತಗೊಂಡಿವೆ. ಅವರು ಶಂಭು ಎಂಬ ಪದವನ್ನು ಅತ್ಯಂತ ಸ್ವಾರಸ್ಯಕರವಾಗಿ ವರ್ಣಿಸುತ್ತಾರೆ:

"ಶಿವಾ ಭವಾನೀ ರುದ್ರಾಣೀ ಶಿವೋ ಮಹೇಶ್ವರಃ ಶಂಭುಃ" ಎಂಬ,

**ನಮ್ಮಮ್ಮನ ಶಿವನ ನಾಮ ಒಂದೆ ನೋಡಾ.**
**ವಿವೇಕದೃಷ್ಟಿಯಿಂದ ನೋಡಿದಡೆ,**
**ಅದು ಶಿವನ ಶಕ್ತಿಮಂತ್ರವಾಗಿ ಅರಿಯಬಂತ್ತು ನೋಡಾ.**
**'ಓಂ ನಮಃ ಶಿವಾಯ, ನಮಃ ಶಿವಾಯೈ'**
**ಎಂಬುಭಯ ಮಂತ್ರ ಒಂದೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನ. (ವಚನ ಸಂ.೧೯೨೬)**

**..... ಕಂಬಂ ಮೇಲೊಪ್ಪಿ ಇಂಬಪ್ಪ ತುಂಬಿಯ**
**ಶಂಭುವೆಂಬಾ ಕುಸುಮ ವಿಕಾಸವಾಗೆ,**
**ಅಂಬರದ ಮೇಗೆ ಬಿಂಬವೆಸೆದುದ ಕಂಡೆ,**
**ಶಂಭುವೆ ಕಪಿಲಸಿದ್ಧಮಲ್ಲಿಕಾರ್ಜುನ. (ವಚನಸಂ.೮೨೬)**

ಸಿದ್ಧರಾಮೇಶ್ವರರ ಇನ್ನೂ ಕೆಲ ವಚನಗಳನ್ನಿಲ್ಲಿ ನೊಡಬಹುದು:

**ಇಂಬಪ್ಪ ಶರಧಿಯ ಸಂಭ್ರಮದ ಮೊರಹಿನ**
**ಶಂಭುವೆ, ನಿನ್ನನೊಡಗೂಡಿದೆನಯ್ಯಾ**
**ಬೇರೊಂದ ಕೇಳೆ, ಬೇರೊಂದ ಕಾಣೆ.**
**(ವಚನ.ಸಂ೨೪೩)**

**ಕಂಬುವಿನ ಭೇದದ ಅಂಬಿತ್ತು ಅಜಕೋಟಿ,**
**ಕಂಬುವಿಂ ಭವಿಸಿತ್ತು ಜಗವೆಲ್ಲವು.**
**ಆ ಕಂಬುಯೋಗಕ್ಕೆ ತಾನಿಂಬಪ್ಪ ತಾತ್ಪರ್ಯ**
**ಶಂಭು ನೀನಹೆ ಶುದ್ಧ ನೆಲೆ ತಾನದು.**
**ಸಂಭ್ರಮದ ಬಿಂಬಂದೊಂಬತ್ತು ನಾಳದ**
**ತುಂಬಿಯಾಳಾಪದಾ ಮಧು ಪುಷ್ಪದ**
**ಸಂಭ್ರಮದ ಖೇಚರದ ಆನಂದರಚನೆಯ**
**ಶಂಭು ನೀನಾದೆ, ಕಪಿಲಸಿದ್ಧಮಲ್ಲೇಶ್ವರಾ.**
**(ವಚನ ಸಂ.೪೦೦)**

ಶಂಭು ಎಂಬ ಪದವನ್ನು ಶರಣರು ವಿಶೇಷವಾಗಿ ತೆಗೆದುಕೊಂಡಿರುವುದು ಕಂಡುಬರುತ್ತದೆ.

**ಶಂಭುವೆಸರು ವಸ್ತು ವಿಸ್ತೀರ್ಣ ಪ್ರಮಾಣ ಕಾಣಾ**
**ಎಲೆ ನಮ್ಮ ಕೂಡಲಚೆನ್ನಸಂಗಮದೇವಯ್ಯ. ಎಂದು ಚೆನ್ನಬಸವಣ್ಣ ಹೇಳಿದರೆ,**
**ಇಂತಪ್ಪ ಪಾದತೀರ್ಥ ಪ್ರಸಾದವನು ನಂಬಿ ಕೊಂಡರೆ**
**ಶಂಭುವಿನ ಕೈಲಾಸ ಕರತಳಾಮಳಕ ನೋಡಾ ಅಖಂಡೇಶ್ವರಾ**

ಎಂದು ಷಣ್ಮುಖಸ್ವಾಮಿಗಳು ಹೇಳಿದ್ದಾರೆ.

ಸಾಕಾರಶಿವನ ವರ್ಣನೆಗಳನ್ನಲ್ಲದೆ ಸಾಕಾರ ಶಿವನು ಅಮೂರ್ತ ತತ್ತ್ವವಾಗಿ, ಸಕಲ ಬ್ರಹ್ಮಾಂಡಗಳಿಗೂ ವ್ಯಾಪಿಸಿ ನಿಂತ ಬಗೆಯ ಅನನ್ಯತೆಯನ್ನು ಶಿವಶರಣರು ತಮ್ಮ ವಚನಗಳಲ್ಲಿ ಅತ್ಯಂತ ಸ್ವಾರಸ್ಯಕರವಾಗಿ ವಚನಗಳಲ್ಲಿ ನಿರೂಪಿಸಿದ್ದಾರೆ. ಲಿಂಗರೂಪಿಯಾದ ಪರಶಿವನು "ಜಗದಗಲ

ಮುಗಿಲಗಲ ಮಿಗೆಯಗಲ ಪಾತಾಳದಿಂದವೆ ಅತ್ತತ್ತ ನಿಮ್ಮ ಶ್ರೀಚರಣ, ಬ್ರಹ್ಮಾಂಡದಿಂದವೆ ಅತ್ತತ್ತ ನಿಮ್ಮ ಶ್ರೀಮಕುಟ, ಅಗಮ್ಯ ಅಗೋಚರ ಅಪ್ರತಿಮನಾಗಿ" ನಿಂತುದನ್ನು ಬಸವಣ್ಣನವರು ಅತ್ಯಂತ ಸುಂದರವಾಗಿ ವರ್ಣಿಸಿದ್ದಾರೆ. ಚೆನ್ನಬಸವಣ್ಣನವರಂತೂ ಲೋಕವೆಲ್ಲವೂ ಲಿಂಗದಲ್ಲಿ, ಲಿಂಗವೆಲ್ಲವೂ ಶಿವನಲ್ಲಿ ಎಂದು ಹೇಳುವುದರ ಮೂಲಕ ಶಿವನ ವಿಶ್ವವ್ಯಾಪತ್ವವನ್ನು ಜಾಹೀರುಪಡಿಸುತ್ತಾರೆ:

.....

ಲೋಕ ಏವೋಚ್ಯತೇ ಲಿಂಗಂ ಲಿಂಗಮೇವೋಚ್ಯತೇ ಶಿವಃ ।<br>
ತಲ್ಲಿಂಗಧಾರಣಾಚ್ಚಿಷ್ಯಃ ಪೂರ್ವಜನ್ಮವಿವರ್ಜಿತಃ ॥<br>
ಇಂತು ಪ್ರಕೃತ್ಯಾದಿಗಳ ಗುಣಂಗಳು ಪಲ್ಲಟವಾದ ಕಾರಣ.<br>
ಕೂಡಲಚೆನ್ನಸಂಗನಲ್ಲಿ (ವ.ಸಂ.೬೧೪)

ಜಗದೊಳಗೆ ಶಿವನಿಲ್ಲ, ಶಿವನೊಳಗೆ ಜಗವಿಲ್ಲ, ಶಿವನೆ ಜಗವಾದ ಪರಿ ಇನ್ನೆಂತೊ? ಎಂದು ಪ್ರಶ್ನಿಸುವವರಿಗೆ ಚೆನ್ನಬಸವಣ್ಣನವರು ಕೊಡುವ ಉತ್ತರ ಹೀಗಿದೆ :

......

ಯಂತ್ರಧಾರೀ ಮಹಾದೇವೋ ಯಂತ್ರಪಾಣಸ್ಸ ಏವ ಹೀ ।<br>
ಯಂತ್ರಕರ್ಮ ಚ ಕರ್ತಾ ಯಂತ್ರವಾಹಾಯ ವೈ ನಮಃ ॥<br>
ಎಂದುದಾಗಿ; ಸಕಲಬ್ರಹ್ಮಾಂಡಗಳೆಂಬ ಯಂತ್ರಗಳ ವಾಹಕ<br>
ನಮ್ಮ ಕೂಡಲಚೆನ್ನಸಂಗಯ್ಯ. (ವ.ಸಂ.೮೯೭)

ಕರ್ತನು ಭರ್ತನು ಹರ್ತನು ಶಿವನಲ್ಲದೆ<br>
ಬೇರೆ ಮತ್ತೊಬ್ಬ ಕಾವರಿಲ್ಲ ಕೊಲುವರಿಲ್ಲ, ಮತ್ತೊಬ್ಬರುಳ್ಳಡೆ ಹೇಳಿರೆ.<br>
ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾ<br>
ತ್ವಂ ವಿಶ್ವಭರ್ತಾ ತವ ನಾಸ್ತಿ ಭರ್ತಾ ।<br>
ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾ<br>
ತ್ವಂ ವಿಶ್ವನಾಥಸ್ತವ ನಾಸ್ತಿ ನಾಥಃ ॥

ಅಸತ್ಯಮಪ್ರತಿಷ್ಠಂ ಚ ಜಗದಾಹುರನೀಶ್ವರಂ ಎಂದುದಾಗಿ<br>
ಶಿವನೆ, ನಿಮ್ಮನಿಲ್ಲೆಂದು, ಬೊಮ್ಮವಾವೆಂಬ<br>
ಹಮ್ಮಿನ ಅದ್ವೈತಿಗಳ ಹಿಡಿದು, ಕಾಲನ ಕೈಯಲ್ಲಿ ಕೆಡಹಿ<br>
ಬಾಯಲ್ಲಿ ಹುಡಿಯ ಹೊಯ್ಸಿ,<br>
ನರಕಾಗ್ನಿಯಲ್ಲಿ ಅನೇಕಕಾಲ ಇರಿಸದೆ ಮಾಣ್ಬನೆ<br>
ನಮ್ಮ ಕೂಡಲಚೆನ್ನಸಂಗಮದೇವರು? (ವ.ಸಂ.೧೦೩೫)

ಗುಮ್ಮಳಾಪುರದ ಸಿದ್ಧಲಿಂಗದೇವರು ಶಿವನ ಐವತ್ತಕ್ಕೂ ಹೆಚ್ಚು ನಾಮಗಳನ್ನು ತಮ್ಮ ಒಂದು ವಚನದಲ್ಲಿ ಹೇಳುವುದು ಸ್ವಾರಸ್ಯಕರವಾಗಿದೆ

......ಶರ್ವ, ಶಿವ, ಮಹಾದೇವರು, ನೀಲಕಂಠ, ವೃಷಭಧ್ವಜ, ಈಶಾನ, ಶಂಕರ, ಭೀಮ, ಪಿನಾಕಿ, ಚಂದ್ರಶೇಖರ, ಕಪರ್ದಿ, ವಿರೂಪಾಕ್ಷ, ವಾಮದೇವ, ಮೃಡ, ಭೂತೇಶ, ಶೂಲಿ, ಸರ್ವಜ್ಞ ಸ್ಥಾಣು, ಪಾರ್ವತಿಪ್ರಿಯ, ಮಹಾಂಕಾಳ, ಮಹಾದೀರ್ಘ ಮಹಾತಾಂಡವ, ಗಂಗಾಧರ, ಗಣೇಶ್ವರ, ಗಜಧ್ವಂಸಿ,..... ಷಷ್ಠಮದಲ್ಲಿ ಶಿವ, ಮಾಹೇಶ್ವರ, ರುದ್ರ, ಶ್ರೀಕಂಠ, ಶಂಭು, ಈಶ್ವರ, ಮಹಾದೇವರು, ಪಶುಪತಿ, ನೀಲಕಂಠ, ವೃಷಭಧ್ವಜ, ಪರಮೇಶ್ವರನೆಂಬ, ಹನ್ನೊಂದು ಪ್ರಕಾರವನುಳ್ಳ ರುದ್ರದೇವರು. ಸಪ್ತಮದಲ್ಲಿ ಭವ, ಮೃಡ, ಹರನೆಂಬ ಮೂರು ಪ್ರಕಾರವನುಳ್ಳ ತ್ರಯಾವಯದೇವರು. ಅಷ್ಟಮದಲ್ಲಿ ಭಯಂಕರವನುಳ್ಳ ವಿರಾಟಮೂರ್ತಿದೇವರು. ನವಮದಲ್ಲಿ ಸರ್ವಚೈತನ್ಯಾತ್ಮಕವನುಳ್ಳ ಹಿರಣ್ಯದೇವರು. ದಶಮದಲ್ಲಿ ಸುಷುಪ್ತಾವಸ್ಥೆಯನುಳ್ಳ ಪ್ರಾಜ್ಞದೇವರು. ದ್ವಾದಶದಲ್ಲಿ ಜಾಗ್ರಾವಸ್ಥೆಯನುಳ್ಳ ವಿಶೇಶ್ವರದೇವರು. ಇಂತೀ ನಾಮ ಪರಿಯಾಯಂಗಳನೆಲ್ಲವನು ಬಸವೇಶ್ವರನೆ ಅಲಂಕರಿಸಿ...... ಬೋಳಬಸವೇಶ್ವರ ನಿಮ್ಮ ಧರ್ಮ ನಿಮ್ಮ ಧರ್ಮ. (ವಚನ ಸಂಖ್ಯೆ೭೭೪)

ಅಲ್ಲಮಪ್ರಭುಗಳಿಗೆ ಶಿವ ಅಥವಾ ರುದ್ರನೆಂದರೆ ಬರೀ ಹೆಸರಿನ ಒಂದು ವ್ಯಕ್ತಿಯಲ್ಲ. ಶಿವನ ಮಹಿಮೆ ಅಗಾಧವಾದುದು ಅವನನ್ನು ಬರಿ ಹೊಗಳಿದರೆ ಏನು ಪ್ರಯೋಜನ? ಭವವನ್ನು ಹರಿದುಕೊಂಡು ಅವನ ಅದ್ಭುತಶಕ್ತಿ ಎಂಬ ಬಲೆಯಲ್ಲಿ ಬಿದ್ದುಬಿಟ್ಟರೆ ಸಾಕು. ಮುಂದಿನೆಲ್ಲವನ್ನೂ ಅವನು ನೋಡಿಕೊಳ್ಳುತ್ತಾನೆ. ರುದ್ರನ ಆಶ್ರಯವನ್ನು ಹೊಂದಿ ಅವನ ಬಗೆಗೆ ಇಲ್ಲದುದನ್ನು ನುಡಿಯುವ ಹಿರಿಯರು ಎನಿಸಿಕೊಂಡವರಿಗೆ ಮುಕ್ತಿಯ ಮಾತು ಹೇಳುವ ಅವಶ್ಯಕತೆಯಿಲ್ಲವೆಂದು ಅಲ್ಲಮ ಪ್ರಭುಗಳು ಖಡಾಖಂಡಿತವಾಗಿ ಹೇಳುತ್ತಾರೆ:

ರುದ್ರನ ಛತ್ರವನುಂಡು ಇಲ್ಲವೆಯ ನುಡಿವ ಹಿರಿಯರಿಗೆ<br>
ಮಹದ ಮಾತೇಕೋ ಗುಹೇಶ್ವರಾ? (ವಚನ ಸಂಖ್ಯೆ ೬೧೩)

ಹಲವಾರು ಶಿವಶಿವಶರಣರು ಶಿವನನ್ನು ಬೇರೆ ಬೇರೆ ಬಗೆಯ ಹೆಸರುಗಳಲ್ಲಿ ವಿವರಿಸಿರುವುದನ್ನು ನೋಡಬಹುದು ಮಾರಾರಿ, ಪಂಚವಕ್ತ್ರ, ಭೃಂಗೀಶ್ವರ, ಇಂದುಧರ, ಪಂಚವದನ, ಸದಾಶಿವ, ಈಶ್ವರ, ಮಹೇಶ್ವರ, ನಂಜುಗೊರಳ, ವಿಷಕಂಠ, ರೂಢೀಶ, ತ್ರಿಯಂಬಕ, ಅಜಹರಿ ಅವತಾರಂಗಳ ಸಂಹಾರ ಮಾಡಿದ ದೇವ, ಅಮೃತಮಥನದಲ್ಲಿ ದೈನ್ಯವ ಮಾಡಿದವರನುಳುಹಿದ ದೇವ; ದಕ್ಷಾಧ್ವರದಲ್ಲಿ ದೈನ್ಯವ ಮಾಡಿದವನುಳುಹಿದ ದೇವ; ಉರಗಾಭರಣ, ಕಾಲಸಂಹರ, ಶೂಲಿ, 'ಭಾಳೇಕ್ಷಣ', 'ಉಮಾಪತಿ' 'ಶಂಬರವೈರಿ', 'ದಿನನಾಶ', ಚತುರ್ಭುಜದೇವ, ತಮರಿಪು ಕೋದಂಡ, ಪರಿಪೂರ್ಣ ಪರಂಜ್ಯೋತಿ ಅಘನಾಶನ, ಪಶುಪತಿ, ಫಣಾಮಣಿದೇವ, ರುಥಿಗೀಶ, ತ್ರಿಣೆಯ[ನ], ಮೃಡ, ಎತ್ತನೇರಿದ ಕರ್ತ, ಇತ್ಯಾದಿ.

ಒಟ್ಟಿನಲ್ಲಿ ಶಿವಶರಣರ ವಚನಗಳಲ್ಲಿ 'ಶಿವ' ಪದದ ರೂಪ ವೈವಿಧ್ಯದಂತೆಯೆ ಅರ್ಥವಂತಿಕೆ ಅನನ್ಯವಾಗಿದೆ. ಸುಸ್ಪಷ್ಟವಾಗಿದೆ. ಶರಣರು 'ಶಿವ' ಎಂಬ ಪದದ ಬಗೆಗೆ ಪಾರಂಪರಿಕ ತಾತ್ತ್ವಿಕ ಅರ್ಥಗಳನ್ನು ಬಿಟ್ಟುಕೊಟ್ಟಿಲ್ಲ. ಆದರೆ ಅವುಗಳ ಬಗೆಗೆ ಜನ ಸಾಮಾನ್ಯರಲ್ಲಿ ಇರಬಹುದಾಗಿದ್ದ ಸಂದೇಹಗಳನ್ನು ನಿವಾರಿಸಿದ್ದಾರೆ. ತಪ್ಪಾಗಿ ಅರ್ಥಹೇಳುವವರನ್ನು ಖಂಡಿಸಿದ್ದಾರೆ. ಶಿವನ ಪಾರಮ್ಯ ಮತ್ತು ವೈಶಿಷ್ಟ್ಯಗಳನ್ನು ಹಂತ ಹಂತವಾಗಿ ಸ್ಪಷ್ಟಪಡಿಸಿದ್ದಾರೆ. ಸಾಕಾರ ರೂಪದ ಶಿವನ ಮತ್ತು ಅವನ ಪರಿವಾರದ, ಕೈಲಾಸದ ವರ್ಣನೆಗಳೂ ವಚನಗಳಲ್ಲಿ ಇವೆ. ಜೊತೆಗೆ ಶಿವನು ನಿರಾಕಾರನಾಗಿ ಸಕಲ ಬ್ರಹ್ಮಾಂಡಗಳಿಗೂ ವ್ಯಾಪಿಸಿದ ಅಮೂರ್ತ ತತ್ತ್ವವಾಗಿ ಅದ್ಭುತ ಶಕ್ತಿಯಾಗಿ ನಿಂತ

ವರ್ಣನೆಗಳೂ ಇವೆ. ಸಾಕಾರದಿಂದ ನಿರಾಕಾರಕ್ಕೆ ಅಂದರೆ ಮೂರ್ತದಿಂದ ಅಮೂರ್ತಕ್ಕೆ ಸಾಗಿ ಲಿಂಗರೂಪಿ ಶಿವನ ಪೂಜೆಯ ಸಾರ್ಥಕ್ಯ ಪಡೆಯುವ ಬಗೆಯನ್ನು ವಚನಗಳಲ್ಲಿ ಕಾಣಬಹುದು.

(ಇಲ್ಲಿನ ವಚನಗಳ ಸಂಖ್ಯೆಗಳು ಕರ್ನಾಟಕ ಸರಕಾರ ಪ್ರಕಟಿಸಿರುವ ಸಮಗ್ರ ವಚನ ಸಂಪುಟಗಳ ಎರಡನೆಯ ಪರಿಷ್ಕೃತಾವೃತ್ತಿಯಲ್ಲಿನ ಸಂಖ್ಯೆಗಳಾಗಿವೆ.)

**ಆಧಾರ ಗ್ರಂಥಗಳು:**

೧. **ಸಮಗ್ರ ವಚನಸಾಹಿತ್ಯ ಸಂಪುಟಗಳು ೧-೧೪ ಮತ್ತು ವಚನ ಪರಿಭಾಷಾಕೋಶ** ೨೦೦೧ (ಪರಿಷ್ಕೃತ ಆವೃತ್ತಿಗಳು) ಕರ್ನಾಟಕ ಸರಕಾರ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೨. **ಮಹಾಯಾತ್ರೆ**- ಡಾ. ಆರ್.ಸಿ. ಹಿರೇಮಠ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೭

೩. **ಬಸವೇಶ್ವರ ವಚನದೀಪಿಕೆ**- ಡಾ. ಎಚ್.ತಿ ಪ್ಪೇರುದ್ರಸ್ವಾಮಿ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.೧೯೯೫

೪. **ಶಿವಸಂಸ್ಕೃತಿಯ ವಿಕಸನ ನೆಲೆಗಳು** - ಡಾ. ಎಂ.ಜಿ. ನಾಗರಾಜ. ಜಗದ್ಗುರು ಸಾರಗಂಗಾಧರೇಶ್ವರ ಪ್ರಕಾಶನ, ಶ್ರೀಶೈಲಂ

೫. **ವಚನಗಳಲ್ಲಿ ವೀರಶೈವ** - ಡಾ. ಮಲ್ಲಿಕಾರ್ಜುನ ಪರಡ್ಡಿ, ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ. ಜಿ.ಬೀದರ

೬. **ಶಕ್ತಿವಿಶಿಷ್ಟಾದ್ವೈತ ತತ್ತ್ವತ್ರಯ ವಿಮರ್ಶೆ**- ಶ್ರೀಮತ್ಕಾಶೀ ಜಗದ್ಗುರು ಡಾ॥ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು, (ಕನ್ನಡ ಅನುವಾದ - ಡಾ॥ ಸಿ. ಶಿವಕುಮಾರಸ್ವಾಮಿ.) ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಬೆಂಗಳೂರು ಪ್ರಕಟನೆ, ೨೦೦೯

೭. **ಕನ್ನಡ ವಿಶ್ವಕೋಶ**, ಮೈಸೂರು ವಿಶ್ವವಿದ್ಯಾಲಯ.

೮. **ಶಿವಾರಾಧನೆ** - ಡಾ. ಎಂ.ಜಿ. ನಾಗರಾಜ, ಪ್ರಸಾರಾಂಗ, ಶ್ರೀಮದ್ವೀರಶೈವ ಸದ್ಬೋಧನ ಸಂಸ್ಥೆ, ಶ್ರೀ ರಂಭಾಪುರಿ ಮಹಾಸಂಸ್ಥಾನ ಪೀಠ, ಬಾಳೆಹೊನ್ನೂರು ೨೦೧೨

❑❑

# ಕನ್ನಡ ನಿಘಂಟು ಶಾಸ್ತ್ರ ಪರಿಚಯ : ಒಂದು ಸಮೀಕ್ಷೆ

– ಜಿ.ಎಂ.ಹೆಗಡೆ

ಕನ್ನಡದ ಹಿರಿಯ ವಿದ್ವಾಂಸರೂ, ಕನ್ನಡ-ಕನ್ನಡ ನಿಘಂಟಿನ ಸಂಪಾದಕರೂ ಆಗಿದ್ದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ ನೂರು ತುಂಬುವ ಸಂಭ್ರಮದಲ್ಲಿ ಅವರು ೧೯೭೪ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಶಿ.ಶಿ. ಬಸವನಾಳ ಮೂಲಭೂತ ಉಪನ್ಯಾಸ ಮಾಡಲು ಬಂದ ಸಂದರ್ಭ ನೆನಪಾಗಿ ಆನಂದಾಶ್ರುಗಳು ಉಕ್ಕಿ ಬರುತ್ತವೆ. ಆಗ ಡಾ. ಎಸ್. ರಾಮೇಗೌಡರು ಕುಲಪತಿಗಳಾಗಿ ಸೆನೇಟ್ ಸಭಾಂಗಣದಲ್ಲಿ ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು 'ಕನ್ನಡ ನಿಘಂಟುಶಾಸ್ತ್ರ ಪರಿಚಯ' ಉದ್ಬೋಧಕ ಉಪನ್ಯಾಸ ಮಾಡಿದರು. ಅಂದಿನ ಸಮಾರಂಭದಲ್ಲಿ ಕಿಕ್ಕಿರಿದು ಜನ ಸೇರಿದ್ದರು. ಸಾಮಾನ್ಯವಾಗಿ ಇಂಥ ಉಪನ್ಯಾಸಗಳನ್ನು ಮಾಡಿ ಹಲವಾರು ದಿನಗಳು ಕಳೆದರೂ ಅನೇಕ ಜನ ಪುಸ್ತಕದ ಹಸ್ತಪ್ರತಿ ಬರೆದುಕೊಡದೆ ಇರುವ ಉದಾಹರಣೆಗೆ ನಮ್ಮ ನಡುವೆ ಇರುವಾಗ 'ಸಾಹಿತ್ಯಜೀವಿ'ಯಾದ ವೆಂಕಟಸುಬ್ಬಯ್ಯನವರು ಮುದ್ರಿತ ಪುಸ್ತಕ ಅನಾವರಣಗೊಳಿಸಿ ತಮ್ಮ ನಿಘಂಟುಶಾಸ್ತ್ರ ಉಪನ್ಯಾಸದ ವಿಚಾರಧಾರೆಯನ್ನು ಪ್ರಸ್ತುತಪಡಿಸಿದ್ದು ಅವರ ಅಖಂಡ ಸಾಹಿತ್ಯಶ್ರದ್ಧೆಯ ದ್ಯೋತಕವಾಗಿತ್ತು.

ಕನ್ನಡದ ಮೊದಲ ನಿಘಂಟಿನ ಸಹಸ್ರಮಾನೋತ್ಸವ, ಕಿಟೆಲ್ ಕೋಶದ ಶತಮಾನೋತ್ಸವ, ಕನ್ನಡ-ಕನ್ನಡ ನಿಘಂಟಿನ ಸುವರ್ಣ ಮಹೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಿ ಜಿ. ವೆಂಕಟಸುಬ್ಬಯ್ಯನವರು ಕನ್ನಡ ನಿಘಂಟುಶಾಸ್ತ್ರದ ಶಾಸ್ತ್ರೀಯ ಸ್ವರೂಪವನ್ನು ವಿವೇಚಿಸಿದ್ದರು. ಕನ್ನಡದಲ್ಲಿ ನಿಘಂಟುಗಳ ರಚನೆ ಪ್ರಾಚೀನ ಕಾಲದಿಂದ ಆಗುತ್ತ ಬಂದಿದ್ದರೂ ನಿಘಂಟುಶಾಸ್ತ್ರದ ತಾತ್ವಿಕ ಸ್ವರೂಪವನ್ನು ವಿವೇಚಿಸುವ ಗ್ರಂಥಗಳು ಪ್ರಕಟವಾಗಿರಲಿಲ್ಲ. ನಿಘಂಟು ಶಾಸ್ತ್ರದಲ್ಲಿ ಪಂಡಿತರೂ, ಬಹುಕಾಲದ ನಿಘಂಟು ರಚನೆಯ ಅನುಭವವುಳ್ಳವರೂ ಆದ ಜಿ. ವೆಂಕಟಸುಬ್ಬಯ್ಯ ಅವರ ವಿಶೇಷೋಪನ್ಯಾಸಕ್ಕೆ ಸ್ವಾನುಭವದ ಸುವರ್ಣಲೇಪವಿದೆ.

'ಕನ್ನಡ ನಿಘಂಟುಶಾಸ್ತ್ರ ಪರಿಚಯ' (೧೯೭೩) ಗ್ರಂಥದಲ್ಲಿ ನಿಘಂಟುಶಾಸ್ತ್ರ ವಿಷಯದ ಎಂಟು ಬೇರೆ ಬೇರೆ ಅಧ್ಯಾಯಗಳೂ ಆರು ಅನುಬಂಧಗಳೂ ಇವೆ. ೧೦೩ ಪುಟಗಳ ಈ ಶಾಸ್ತ್ರ ಗ್ರಂಥವನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗ ಪ್ರಕಟಿಸಿದೆ. ನಿಘಂಟುಶಾಸ್ತ್ರ ವಿದ್ಯಾರ್ಥಿಗಳಿಗೆ ಪಠ್ಯ ಗ್ರಂಥವೂ ಆಗಿದೆ. ನಿಘಂಟುಶಾಸ್ತ್ರ ಪರಿಚಯ ಅನೇಕ ಒಳನೋಟಗಳಿಂದ ಕೂಡಿದ ಗ್ರಂಥವಾಗಿದೆ.

ಭಾರತೀಯ ಶಾಸ್ತ್ರ ಪರಂಪರೆಯಲ್ಲಿ ನಿಘಂಟಿನ ಕಲ್ಪನೆ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ವೇದದ ಆರು ಅಂಗಗಳಲ್ಲಿ ನಿಘಂಟು ಸೇರಿದೆ. ವಾಸ್ತವಿಕವಾಗಿ ವೇದದ ಆರು ಅಂಗಗಳಲ್ಲಿ ಬರುವ ನಿರುಕ್ತ ಎಂಬುದು ನಿಘಂಟಿನ ಅರ್ಥವನ್ನೇ ಕೊಡುತ್ತದೆ. ನಿರುಕ್ತವನ್ನು ರಚಿಸಿದವರು ಯಾಸ್ಕರು. ಪಾಣಿನಿಯ 'ಅಷ್ಟಾಧ್ಯಾಯಿ' ಸಂಸ್ಕೃತದ ಶ್ರೇಷ್ಠ ವ್ಯಾಕರಣ ಗ್ರಂಥ. ಪಾಣಿನಿಗಿಂತ ಹೆಚ್ಚು ಪ್ರಾಚೀನರಾದ ಯಾಸ್ಕರು ಸಂಸ್ಕೃತ ನಿರುಕ್ತಕ್ಕೆ ಶ್ರೀಕಾರ ಹಾಕಿದವರು. ನಿಘಂಟು ಪದದ ಅರ್ಥವ್ಯಾಪ್ತಿಯನ್ನು ಬೇರೆ ಬೇರೆ ಮೂಲಗಳಿಂದ ಜಿ.ವೆಂಕಟಸುಬ್ಬಯ್ಯ ವಿವರಿಸಿದ್ದಾರೆ. ಅಮರಕೋಶ, ಯಾಸ್ಕರನ ನಿರುಕ್ತು, ಮೊದಲಾದ ಆಕರಗಳಿಂದ ನಿಘಂಟು ಪದವನ್ನು ವಿವರಿಸುತ್ತ ಭರತನ ನಾಟ್ಯಶಾಸ್ತ್ರದಲ್ಲಿ ಬರುವ ಶ್ಲೋಕದತ್ತ ನಮ್ಮ ಗಮನ ಸೆಳೆಯುತ್ತಾರೆ.

**ನಾನಾ ನಾಮಾಶ್ರಯೋತ್ಪನ್ನಂ ನಿಘಂಟುಂ ನಿಗಮಾನ್ವಿತಂ**

**ಧಾತ್ವರ್ಥಹೇತುಸಂಯುಕ್ತಂ ನಾನಾ ಸಿದ್ಧಾಂತ ಸಾಧಿತಂ**

ನಿರುಕ್ತವು ಒಂದು ಬಗೆಯ ಸೂತ್ರಗ್ರಂಥ. ನಿರುಕ್ತವು ವೇದಕ್ಕೆ ಭಾಷ್ಯವೂ, ವೇದದ ಭಾಷೆಗೆ ವ್ಯಾಕರಣವೂ, ವೈದಿಕ ಸಾಹಿತ್ಯಕ್ಕೆ ವಿಮರ್ಶೆಯೂ ಆಗಿ ಮುಪ್ಪಟ್ಟು ಪ್ರಾಮುಖ್ಯವನ್ನು ಗಳಿಸಿದೆ. ನಿರುಕ್ತದಲ್ಲಿ ಬರುವ ಎಲ್ಲ ನಿರ್ವಚನಗಳನ್ನು ಎಲ್ಲರೂ ಒಪ್ಪದಿದ್ದರೂ ಅದರ ಪ್ರಭಾವ ಸಂಸ್ಕೃತ ಸಾಹಿತ್ಯದಲ್ಲಿ ಕಡಿಮೆಯಾಗಿಲ್ಲ' (ಪು.೪) ಎಂಬ ಅಭಿಮತವನ್ನು ಜಿ. ವೆಂಕಟಸುಬ್ಬಯ್ಯ ವ್ಯಕ್ತಪಡಿಸಿದ್ದಾರೆ.

ಭಾಷಾಶಾಸ್ತ್ರವು ಆಧುನಿಕ ಶಾಸ್ತ್ರಗಳ ಅಧ್ಯಯನದ ವಿಶಿಷ್ಟ ಶಾಖೆಯಾಗಿ ಬೆಳವಣಿಗೆ ಹೊಂದಿದ್ದರಿಂದ ಅದರ ಪ್ರಭಾವದಿಂದ ನಿಘಂಟು ರಚನೆ ಮಾಡುವಾಗ ಭಾಷೆಯ ಎಲ್ಲ ಪದಗಳನ್ನು ಇಟ್ಟುಕೊಂಡು ಅವುಗಳಿಗೆ ಅರ್ಥ,

ಜಿ.ಎಂ. ಹೆಗಡೆ, ೬ ನೇ ಕ್ರಾಸು, ಕಲ್ಯಾಣನಗರ, ಧಾರವಾಡ – ೫೮೦ ೦೦೭

ಪ್ರಯೋಗ, ವ್ಯಾಕರಣ ವಿವರ ಬರೆದು ಅಕಾರಾದಿಯಾಗಿ ಹೊಂದಿಸಿಡುವದು ಎಂಬ ಸಾಮಾನ್ಯ ಕಲ್ಪನೆ ಇದೆ. ಆದರೆ ನಿಘಂಟು ಬೇರೆ ಬೇರೆ ಸ್ವರೂಪದ್ದೂ ಆಗಿರುತ್ತದೆ. ಭಾಷಾಶಾಸ್ತ್ರದ ಆಳವಾದ ವ್ಯಾಸಂಗ ಹೆಚ್ಚಿದಂತೆ ನಿಘಂಟಿಗೆ ಸಂಬಂಧಿಸಿದಂತೆ ಎರಡು ಮುಖ್ಯ ವಿಭಾಗಗಳನ್ನು ಗುರುತಿಸಲಾಗಿದೆ. ನಿಘಂಟಿಗೆ ಸಂಬಂಧಿಸಿದ ಮೂಲತತ್ವಗಳಲ್ಲಿ ವೈಜ್ಞಾನಿಕವಾಗಿ ನಿರೂಪಿಸುವ ನಿಘಂಟುಶಾಸ್ತ್ರ (Lexicology) ಮತ್ತು ನಿಘಂಟು ರಚನೆಯ ಕ್ರಮವನ್ನು ವಿವರಿಸುವ ನಿಘಂಟು ರಚನೆ (Lexicography) ಎಂದು ಜಿ.ವೆಂಕಟಸುಬ್ಬಯ್ಯ ವಿವರಿಸಿದ್ದಾರೆ. ಭಾಷೆಯಲ್ಲಿ ಪ್ರಯೋಗವಾಗುವ ಪ್ರತಿಯೊಂದು ಶಬ್ದಕ್ಕೂ ಒಂದು ಚರಿತ್ರೆ ಇರುತ್ತದೆ. ಶಬ್ದಗಳ ಅರ್ಥನಿರ್ಣಯ, ಅರ್ಥಗಳ ಅನುಕ್ರಮ, ಜ್ಞಾತಿಶಬ್ದಗಳ ಉಲ್ಲೇಖ, ಅರ್ಥನಿರೂಪಣೆಯ ಮಾರ್ಗ ಇವುಗಳೆಲ್ಲ ತಿಳುವಳಿಕೆಗೆ ಸಹಾಯಕಾರಿಯಾಗುತ್ತವೆ. ಭಾಷೆಯಲ್ಲಿರುವ ಪದಭಂಡಾರವನ್ನು ಜೀವನಪರ್ಯಂತ ಬಳಸುವ ಮೂಲಕ ಪ್ರತಿಯೊಬ್ಬ ವ್ಯಕ್ತಿ ವೈಯಕ್ತಿಕ ನಿಘಂಟನ್ನು ನಿರ್ಮಿಸಿಕೊಳ್ಳುತ್ತಾನೆ. ಅದೇ ರೀತಿಯಲ್ಲಿ ಸಮಾಜಿಕ ಸಂದರ್ಭದಲ್ಲಿ ಭಾಷೆಯ ಸಮರ್ಥ ಬಳಕೆಯನ್ನು ಗುರುತಿಸಿ ಸಾಮಾಜಿಕ ನಿಘಂಟು ಸಿದ್ಧವಾಗುತ್ತದೆ. ವೈಯಕ್ತಿಕ ಸಂಸ್ಕೃತಿ ಮತ್ತು ಸಾಮಾಜಿಕ ಸಂಸ್ಕೃತಿಯನ್ನು ಗರ್ಭೀಕರಿಸಿಕೊಂಡು ಸಾಗುವದೇ ನಿಘಂಟಿನ ಮುಖ್ಯ ಗುರಿಯಾಗಿದೆ.

ಸಾಮಾನ್ಯ ನಿಘಂಟು, ವಿಶ್ವಕೋಶ ಮಾದರಿಯ ನಿಘಂಟು, ಬೃಹನ್ನಿಘಂಟು ಹೀಗೆ ವಿಭಿನ್ನ ನಿಘಂಟುಗಳ ರಚನೆಗೆ ಸಂಬಂಧಿಸಿದ ಶಬ್ದಾರ್ಥ ವಿಧಾನವನ್ನು ಜಿ. ವೆಂಕಟಸುಬ್ಬಯ್ಯ ಅನೇಕ ನಿದರ್ಶನಗಳೊಂದಿಗೆ ವಿವರಿಸಿದ್ದಾರೆ. ಕನ್ನಡ ಭಾಷೆಗೆ ಅನ್ಯಭಾಷೆಯಿಂದ ಅನೇಕ ಪದಗಳು ಬಂದು ಸೇರಿವೆ. ಕಾಲಾಂತರದಲ್ಲಿ ಇವು ಕನ್ನಡದ ಪದಗಳೇ ಆಗುತ್ತವೆ. ನಿಘಂಟುಕಾರ ಅವುಗಳ ಸಾಮಾಜಿಕ ಮತ್ತು ಚಾರಿತ್ರಿಕ ಸಂದರ್ಭಗಳನ್ನು ವಿವರಿಸಬೇಕಾಗುತ್ತದೆ. ಉರ್ದು, ಅರೇಬಿಕ್, ಪರ್ಶಿಯನ್ ಮತ್ತು ಬ್ರಿಟಿಷರ ಆಡಳಿತದಲ್ಲಿ ಇಂಗ್ಲಿಷ್ ಹೀಗೆ ವಿವಿಧ ಮೂಲಗಳಿಂದ ಕನ್ನಡ ಶಬ್ದಕೋಶಕ್ಕೆ ಸೇರಿದ ಪದಗಳ ಚರಿತ್ರೆಯನ್ನು ಅಭ್ಯಾಸ ಮಾಡುವದು ಸಂಶೋಧನೆಯ ಅಂಶವಾಗುತ್ತದೆ. ಇಂಗ್ಲಿಷಿನಲ್ಲಿರುವ ಸಮಾಸ ಪದಗಳನ್ನು ನಾವು ನಿತ್ಯ ಜೀವನದಲ್ಲಿ ಬಳಸುತ್ತೇವೆ. (Drop out, Fly-over, Drive in ಇತ್ಯಾದಿ) ಆದರೆ ಇಂಥ ಸಮಾಸ ಪದಗಳನ್ನು ಕನ್ನಡದಲ್ಲಿ ನಾವು ಹೊಸದಾಗಿ ಸೃಷ್ಟಿ ಮಾಡುತ್ತಿಲ್ಲ. ಮೇಲ್ದಾರಿ, ಒಳಸೇರುವೆ, ಹೊರಬೀಳು ಮುಂತಾದವನ್ನು ಪ್ರಯೋಗಕ್ಕಾಗಿಯೂ ಬಳಸುತ್ತಿಲ್ಲ. ಹೆಸರುಗಳನ್ನು ಸಂಕ್ಷಿಪ್ತಗೊಳಿಸಿ ವಿಶಿಷ್ಟ ಶಬ್ದಗಳಾಗಿ ಬಳಸುವ ಕ್ರಮ ಕನ್ನಡದಲ್ಲಿ ಬರುತ್ತಿದೆ. ಪಾಟೀಲ ಪುಟ್ಟಪ್ಪ (ಪಾಪು), ಕುವೆಂಪು (ಕುಪ್ಪಳ್ಳಿ ವೆಂಕಟಪ್ಪ ಮಗ ಪುಟ್ಟಪ್ಪ) ಇತ್ಯಾದಿ ಬೆಂಗಳೂರಿನ ನಗರಗಳ ಹೆಸರುಗಳೂ ಸಂಕ್ಷಿಪ್ತಗೊಂಡು ಅನೇಕರಿಗೆ ಅದರ ಸರಿಯಾದ ರೂಪವೇ ತಿಳಿಯದಾಗಿದೆ. ಜೆ.ಪಿ. ನಗರ (ಜಯಪ್ರಕಾಶ ನಾರಾಯಣನಗರ) ಹೆಚ್. ಎಸ್.ಆರ್. ಬಡಾವಣೆ (ಹೊಸೂರು ಸರ್ಜಾಪುರ ರೋಡ್ ಬಡಾವಣೆ) ಇವು ಹೊಸ ಪೀಳಿಗೆಯವರಿಗೆ ತಿಳಿಯಬೇಕಾದರೆ ಸಂಕ್ಷಿಪ್ತಗಳ ನಿಘಂಟು ಬೇಕು ಎಂದು ಲೇಖಕರು ವ್ಯಕ್ತಪಡಿಸಿದ್ದಾರೆ.

ನಿಘಂಟು ಶಾಸ್ತ್ರ ಪರಿಚಯ ಗ್ರಂಥದ ಕುತೂಹಲದ ಭಾಗ 'ಎಷ್ಟು ಬಗೆಯ ನಿಘಂಟುಗಳು?' ಅಧ್ಯಾಯ. ಕನ್ನಡದಲ್ಲಿ ಬಹುಬಗೆಯ ನಿಘಂಟುಗಳಿವೆ. ಒಂದೊಂದರದೂ ಒಂದೊಂದು ಬಗೆಯ ವರ್ಣ ವೈವಿಧ್ಯ. 'ಆಡಳಿತ ಪದಕೋಶ'ದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಪದಗಳ ವಿಶೇಷತೆ ಇದ್ದರೆ 'ಇಂಗ್ಲಿಷ್ ಕನ್ನಡ ವೈದ್ಯ ಪದಕೋಶ'ದಲ್ಲಿ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ಪದಗಳಿಗೆ ಮಾತ್ರ ಅರ್ಥ ನೀಡಲಾಗುತ್ತದೆ. ಬ್ಯಾಂಕಿಂಗ್ ನಿಘಂಟಿನಲ್ಲಿ ವಾಣಿಜ್ಯ, ಅರ್ಥಶಾಸ್ತ್ರ, ಬ್ಯಾಂಕ್ ವ್ಯವಹಾರಕ್ಕೆ ಸಂಬಂಧಿಸಿದ ಪದಗಳು ಸ್ಥಾನ ಪಡೆಯುತ್ತವೆ. ಇಂಗ್ಲಿಷ್ ಕನ್ನಡ ವಿಜ್ಞಾನ ಪದಕೋಶದಲ್ಲಿ ವಿಜ್ಞಾನ ವಿಷಯದ ಶಬ್ದಾರ್ಥಗಳು ನಿರೂಪಿತವಾಗುತ್ತವೆ. ಚರಿತ್ರ ಪದಕೋಶದಲ್ಲಿ ಶಾಸನ, ಇತಿಹಾಸ ಪ್ರಾಚೀನ ಆಕರಗಳಿಗೆ ಸಂಬಂಧಿಸಿದ ಪದಗಳ ವಿವೇಚನೆಯಿರುತ್ತದೆ. 'ವೃತ್ತಿ ಪದಕೋಶ'ದಲ್ಲಿ ಸಾಮಾಜಿಕವಾಗಿ ವಿವಿಧ ಜನಾಂಗಗಳು ತಮ್ಮ ತಮ್ಮ ವೃತ್ತಿಗಳಲ್ಲಿಯ ವಿಶಿಷ್ಟಾಂಶಗಳನ್ನು ದಾಖಲಿಸಬಹುದಾಗಿದೆ. ಇದೇ ರೀತಿ ನಾನಾರ್ಥ ಪದಕೋಶ, ಗ್ರಾಮ್ಯ ಪದಕೋಶ, ಅಪಾರಿಭಾಷಿಕ ಪದಕೋಶ, ನ್ಯಾಯ ಪದಕೋಶ, ಆಡಳಿತ ಪದಕೋಶ, ಜ್ಞಾತಿಶಬ್ದಕೋಶ, ನುಡಿಗಟ್ಟುಗಳ ಕೋಶ, ವಾಗ್ರೂಢಿಗಳ ಕೋಶ, ಸಮಾನಾರ್ಥ ಪದಕೋಶ, ನೂತನಶಬ್ದಕೋಶ, ಎರವಲು ಪದಕೋಶ, ವಿಶಿಷ್ಟ ವರ್ಗಗಳ ಕೋಶ, ಸರ್ವಪದ ಪ್ರಯೋಗ ಕೋಶ (ಉದಾ ಬಸವಣ್ಣನವರ ಪದ ಪ್ರಯೋಗಕೋಶ ಸಂ. ಎಸ್. ಆರ್. ಗುಂಜಾಳ) ಹೀಗೆ ವಿವಿಧ ಬಗೆಯ ನಿಘಂಟುಗಳು ಕನ್ನಡದಲ್ಲಿವೆ. ಏಕ ಭಾಷಾ ನಿಘಂಟುಗಳು (Monolingual Dictionaries) ಮತ್ತು ಬಹುಭಾಷಾ ನಿಘಂಟುಗಳು (Multi lingual Dictionaries) ಶಬ್ದಗಳ ದೊಡ್ಡ ಖಜಾನೆಯಾಗಿ ಉಪಯುಕ್ತವಾಗುತ್ತವೆಂದು ಜಿ. ವೆಂಕಟಸುಬ್ಬಯ್ಯ ಪ್ರತಿಪಾದಿಸಿದ್ದಾರೆ.

ನಿಘಂಟು ರಚನೆಯ ವಿವಿಧ ಹಂತಗಳನ್ನು ಅನುಭವಿ ನಿಘಂಟುಕಾರರಾದ ಜಿ. ವೆಂಕಟಸುಬ್ಬಯ್ಯ ಗ್ರಂಥದ ಏಳನೆಯ ಅಧ್ಯಾಯದಲ್ಲಿ ನಿರೂಪಿಸಿದ್ದಾರೆ. ಪ್ರತಿಯೊಂದು ನಿಘಂಟು ರಚನೆಗೂ ಅಪಾರಶ್ರಮ, ಕಾಲದ ಅಗತ್ಯವಿದೆ. ನಿಘಂಟು ರಚನೆಗೆ ಶಬ್ದ ಸಂಗ್ರಹವು ಮೊದಲ ಹಂತದ ಮುಖ್ಯ ಕೆಲಸ. ಅದನ್ನು ಮಾಡುವಾಗ ಪ್ರಾಚೀನ ಸಾಹಿತ್ಯ, ಶಾಸನ, ಭಾಷೆ, ಜ್ಞಾತಿ ಭಾಷೆ, ಆಡುಭಾಷೆ, ಉಪಭಾಷೆ, ಸಾಹಿತ್ಯ ಮತ್ತು ಶಾಸ್ತ್ರ ವಿಷಯಕವಾದ ಗ್ರಂಥಗಳಿಂದಲೂ ಶಬ್ದ ಪಟ್ಟಿಕೆಗಳನ್ನು ಮಾಡಿಕೊಳ್ಳಬೇಕು. ಹೀಗೆ ಸಂಗ್ರಹಿಸಿದ

ಶಬ್ದಗಳು ಸರಿಯಾಗಿವೆಯೇ ಹೇಗೆ ಎಂಬುದನ್ನು ಪರಿಶೀಲಿಸುವದು ಎರಡನೆಯ ಹಂತವಾಗಿದೆ. ಪ್ರತಿಯೊಂದು ಶಬ್ದಕ್ಕೂ ಪರ್ಯಾಯ ರೂಪಗಳನ್ನು ಜೋಡಿಸಿ ವ್ಯಾಕರಣದ ಸಂಬಂಧಗಳನ್ನು ನಿರ್ದೇಶಿಸುವದು ಮೂರನೆಯ ಹಂತ. ಶಬ್ದಗಳಿಗೆ ಅರ್ಥ ನಿರ್ಣಯವೇ ನಾಲ್ಕನೆ ಹಂತವಾಗಿದ್ದು ಅದು ಎಷ್ಟು ಕ್ಲಿಷ್ಟಕರ ಎಂಬುದನ್ನು ಅನೇಕ ನಿದರ್ಶನಗಳ ಮೂಲಕ ಲೇಖಕರು ವಿದಿತ ಪಡಿಸಿದ್ದಾರೆ. ಕೊನೆಯ ಹಂತ. ಒಂದು ಪದ ಆ ಭಾಷೆಯ ಸ್ವಂತದ್ದೇ ಅಥವಾ ಬೇರೆ ಭಾಷೆಯಿಂದ ಎರವಲು ಪದವೇ ಎಂಬುದನ್ನು ಎಚ್ಚರಿಕೆಯಿಂದ ಗುರುತಿಸಬೇಕಾಗುತ್ತದೆ. ಜ್ಞಾತಿಪದ ಯಾವುದು ಎಂದು ಗುರುತಿಸುವದೂ ಅಷ್ಟೇ ಮುಖ್ಯವಾದದ್ದು. ದಳವಾಯಿ ಪದ ದಳದ + ಬಾಯಿ ಎಂಬ ಸಮಾಸ ಪದವಾಗಿರದೆ ಸಂಸ್ಕೃತದ ದಳಪತಿ ಪ್ರಾಕೃತದಲ್ಲಿ ದಳವಾಯಿ ಮುಂದೆ ಕನ್ನಡದಲ್ಲಿ ದಳವಾಯ್, ದಳವಾಯಿ ಆಗಿರುವದನ್ನು ಇಲ್ಲಿ ಗಮನಿಸಬೇಕು. ನಿಘಂಟಿನಲ್ಲಿ ತಪ್ಪು, ಅರ್ಥಗಳು ಬರಬಾರದು, ಶಬ್ದಾರ್ಥ ಸಿರಿಸಂಪದವಾದ ನಿಘಂಟು ಅನೇಕ ಜನರಿಗೆ ಉಪಯುಕ್ತವಾದುದರಿಂದ ಅದರ ರಚನೆಯಲ್ಲಿ ತೊಡಗಿಕೊಂಡಿರುವವರಿಗೆ ವಿಶೇಷ ಹೊಣೆಗಾರಿಕೆಯಿದೆ. ಶಬ್ದಾರ್ಥಗಳನ್ನು ತಿಳಿಸುವ ಬೇರೆ ಬೇರೆ ಮಾರ್ಗಗಳಿವೆ. ಶಬ್ದಾರ್ಥ ವಿವರಣೆ, ಸಮಾನಾರ್ಥಗಳ ನಿರೂಪಣೆ, ದೃಷ್ಟಾಂತಗಳನ್ನು ನೀಡುವದು, ಚಿತ್ರಗಳನ್ನು ಮುದ್ರಿಸುವದು ಆಗಬೇಕು. ಸಂಸ್ಕೃತ ಶ್ಲೋಕ ಹೀಗೆ ಹೇಳುತ್ತದೆ.

**ಅಲ್ಪಾಕ್ಷರಂ ಅಸಂದಿಗ್ಧಂ ಸಾರವದ್ವಿಸತೋಮುಖಂ**
**ಅಸ್ತೋಭಂ ಅನವದ್ಯಂಚ ಸೂತ್ರಂ ಸೂತ್ರವಿದೋವಿದು:**

ಸೂತ್ರ ಎಂದರೇನೆಂದು ತಿಳಿಸುವ ಈ ಶ್ಲೋಕ ಅರ್ಥಕ್ಕೆ ಚೆನ್ನಾಗಿ ಅನ್ವಯಿಸುತ್ತದೆ.

ಸಂಗ್ರಹಗುಣ, ಅನುಮಾನವಿಲ್ಲದಿರುವಿಕೆ, ಸಾರವತ್ತಾಗಿ ಇರುವದು, ಎಲ್ಲವನ್ನು ಒಳಗೊಂಡಿರುವದು, ಅನಗತ್ಯವಾದುದು ಏನೂ ಇರದಿರುವಿಕೆ, ತಪ್ಪಿಲ್ಲದಿರುವದು ಮತ್ತು ಅರ್ಥದೋಷವಿಲ್ಲದಿರುವಿಕೆ ಈ ಗುಣಗಳಿಂದ ಕೂಡಿರುವ ಸೂತ್ರ ಶಬ್ದಾರ್ಥದಲ್ಲಿ ವಿವರಣೆಯಲ್ಲಿ ಇರಬೇಕು. ಯಾವುದೇ ಒಂದು ಶಬ್ದಕ್ಕೆ ನಾನಾರ್ಥಗಳಿರುತ್ತವೆ. ಎಲ್ಲ ಅರ್ಥಗಳಿಗೂ ಪ್ರಯೋಗಗಳಿರುತ್ತವೆ. ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಬೇಕು. ಪ್ರಾಚೀನ ಕಾವ್ಯಗಳ ಗ್ರಂಥ ಸಂಪಾದನೆಯಲ್ಲಿ ಅಶುದ್ಧ ಪಾಠಗಳಿದ್ದರೆ ಅರ್ಥವ್ಯತ್ಯಾಸವಾಗುತ್ತದೆ. ಆದ್ದರಿಂದ ಗ್ರಂಥಸಂಪಾದನೆಯ ಶುದ್ಧ ಪಾಠವನ್ನು ಕಂಡು ಹಿಡಿದು ಅದಕ್ಕೆ ಸರಿಯಾದ ಅರ್ಥವಿವೇಚನೆ ಮಾಡುವದೂ ನಿಘಂಟುಕಾರನ ಜವಾಬ್ದಾರಿಯಾಗಿರುತ್ತದೆ.

ನಿಘಂಟುಶಾಸ್ತ್ರ ಪರಿಚಯದಲ್ಲಿ ಕನ್ನಡ ಹಾಗೂ ಇಂಗ್ಲಿಷ್‌ನಲ್ಲಿ ಒಂದು ಪದ ಯಾವ ಯಾವ ರೀತಿಯಲ್ಲಿ ವಿವರಣೆ ಪಡೆಯುತ್ತದೆ ಎಂಬುದಕ್ಕೆ ಲೇಖಕರು ನಿದರ್ಶನ ನೀಡಿದ್ದಾರೆ. ದೋಸೆ ಎಂಬ ಪದ ಕನ್ನಡ ನಿಘಂಟಿನಲ್ಲಿ ಇಂಗ್ಲಿಷ್ ನಿಘಂಟಿನಲ್ಲಿ ತಿಳಿಸುವ ಅರ್ಥ ವೈವಿಧ್ಯ ಬೆರಗುಗೊಳಿಸುತ್ತದೆ. ಮಕ್ಕಳ ನಿಘಂಟಿನಲ್ಲಿ ಪ್ರಾಣಿಗಳನ್ನು ಚಿತ್ರಗಳ ಮೂಲಕ ತೋರಿಸಲಾಗುತ್ತದೆ. ಇಂಗ್ಲಿಷ್‌ನಲ್ಲಿ ಆಹಾರ ಪದಾರ್ಥಗಳ ಬಗೆಗೆ ಅರ್ಥವಿವರಣೆ ಮಾತ್ರವಲ್ಲ ಅದನ್ನು ತಯಾರಿಸುವ ವಿಧಾನವನ್ನು ಮನವರಿಕೆ ಮಾಡಿಕೊಡಲಾಗುತ್ತದೆ. ಶಬ್ದ ಒಂದರ ನಿರ್ದಿಷ್ಟಾರ್ಥವನ್ನು ಸ್ಪಷ್ಟಪಡಿಸುವದೂ ನಿಘಂಟು ರಚನೆಯಲ್ಲಿ ಮುಖ್ಯವಾಗುತ್ತದೆ. ವಿಶ್ವಕೋಶದ ಮಾದರಿಯಲ್ಲಿ ಸಂಕ್ಷಿಪ್ತವಾಗಿ ಸಾರವತ್ತಾಗಿ ನಿಘಂಟುಕಾರ ಹೇಳಬೇಕಾಗುತ್ತದೆ.

ಕನ್ನಡ ನಿಘಂಟುಗಳ ಕಿರುಚರಿತ್ರೆಯನ್ನು ಅತ್ಯಂತ ವ್ಯವಸ್ಥಿತವಾಗಿ ಜಿ. ವೆಂಕಟಸುಬ್ಬಯ್ಯನವರು ಗ್ರಂಥದ ಎಂಟನೆಯ ಅಧ್ಯಾಯದಲ್ಲಿ ವಿವರಿಸಿದ್ದಾರೆ. ಕನ್ನಡದಲ್ಲಿ ನಿಘಂಟುಗಳ ಬೆಳವಣಿಗೆಗೆ ಸಾವಿರ ವರ್ಷದ ಚರಿತ್ರೆಯಿದೆ. ನಮ್ಮ ನಿಘಂಟುಗಳಲ್ಲಿ ಮೊದಲನೆಯದಾದ 'ರನ್ನಕಂದ'ಕ್ಕೆ ಸಾವಿರ ವರ್ಷಗಳ ಚರಿತ್ರೆಯಿದೆ. ರನ್ನಕಂದದ ೪೫ ಪದ್ಯಗಳನ್ನು ಡಾ. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿ **ಕರ್ನಾಟಕ ಭಾರತಿ**ಯಲ್ಲಿ ಪ್ರಕಟಿಸಿದ್ದಾರೆ. ಕೇಶಿರಾಜನ (೧೨೬೦) ಶಬ್ದಮಣಿದರ್ಪಣದಲ್ಲಿ ೧೭೯೯ ಶಬ್ದಗಳ ಕನ್ನಡ ನಿಘಂಟು ದೊರಕುತ್ತದೆ. ಬೊಮ್ಮರಸನು (೧೪೫೦) ರಚಿಸಿದ 'ಚತುರಾಸ್ಯ ನಿಘಂಟು' ವಿದ್ವಾಂಸರು ಉಪಯೋಗಿಸುತ್ತಿದ್ದ ನಿಘಂಟಾಗಿದೆ. ಲಿಂಗಮಂತ್ರಿ (೧೫೩೦) ಬರೆದ 'ಕಬ್ಬಿಗರ ಕೈಪಿಡಿ' ವಾರ್ಧಕ ಷಟ್ಪದಿಯಲ್ಲಿ ರಚಿತವಾದ ನಿಘಂಟಾಗಿದೆ. ವೀರಶೈವ ಪರಂಪರೆಯಲ್ಲಿ ಪಂಡಿತನಾದ ೧೬ನೆಯ ಶತಮಾನದ ಗುರು ತೋಂಟದಾರ್ಯ ರಚಿಸಿದ 'ಕರ್ನಾಟಕ ಶಬ್ದಮಂಜರಿ' ಹಳೆಗನ್ನಡ ನಿಘಂಟಾಗಿದೆ. ಇದಕ್ಕೆ ಹಲವಾರು ಟೀಕೆಗಳೂ ಬರೆಯಲ್ಪಟ್ಟಿವೆ. ಹದಿನಾರನೆಯ ಶತಮಾನದಲ್ಲಿ ಶೃಂಗಾರ ಕವಿಯ 'ಕರ್ನಾಟಕ ಸಂಜೀವನಂ' ಮತ್ತು 'ಭಾರತ ನಿಘಂಟು' (ಕರ್ತೃ ಅಪರಿಚಿತವಾಗಿದೆ) ಹದಿನೇಳನೆಯ ಶತಮಾನದಲ್ಲಿ ಸೂರ್ಯ ಕವಿಯ 'ಕವಿಕಂಠಹಾರ' ಪ್ರಾಚೀನ ನಿಘಂಟುಗಳಲ್ಲಿ ಕೊನೆಯದು ಎಂದು ಲೇಖಕರು ಹೇಳಿದ್ದಾರೆ. ಇವುಗಳೆಲ್ಲ ಕನ್ನಡ ಶಬ್ದಗಳಿಗೆ ಸಂಬಂಧಿಸಿದ ನಿಘಂಟಾದರೆ ಹನ್ನೊಂದನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ಅನೇಕರು ಸಂಸ್ಕೃತ ನಿಘಂಟುಗಳನ್ನು ರಚಿಸಿದ್ದಾರೆ.

ಕನ್ನಡ ಕಾವ್ಯಗಳಲ್ಲಿ ಬರುವ ಸಂಸ್ಕೃತ ಪದಗಳ ಕೋಶವನ್ನು ನಾಗವರ್ಮ (೧೧೪೫) 'ಅಭಿಧಾನ ವಸ್ತುಕೋಶ'ದಲ್ಲಿ ಸಿದ್ಧಪಡಿಸಿದ್ದಾನೆ. ಇವನು ಭಟ್ಟಹಲಾಯುಧನ 'ಅಭಿಧಾನರತ್ನಮಾಲಾ' ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದು ಇದು ಸಂಸ್ಕೃತ ನಿಘಂಟುಗಳಿಗೆ ಕನ್ನಡದಲ್ಲಿ ಬರೆದ ಮೊದಲ ಟೀಕೆಯಾಗಿದೆ. ಕನ್ನಡದಲ್ಲಿ ಅಮರಕೋಶಕ್ಕೆ ಸಂಬಂಧಿಸಿದ ಟೀಕೆಗಳೂ ಪ್ರಸಿದ್ಧವಾಗಿವೆ. ೧೮೮೫ರಲ್ಲಿ ಪ್ರಕಟವಾದ 'ಕರ್ನಾಟಕ ಕಲ್ಪದ್ರುಮಂ' ಹೆಸರುಘಟ್ಟದ ಹೊನ್ನಪ್ಪನವರು ಸಿದ್ಧಪಡಿಸಿದ ನಿಘಂಟಾಗಿದೆ. 'ಅಕಾರಾದಿ ವೈದ್ಯ ನಿಘಂಟು',

ಇಂದ್ರ ದೀಪಿಕಾ ನಿಘಂಟು, ಧನ್ವಂತರಿ ನಿಘಂಟು ಎಂಬ ವೈದ್ಯ ನಿಘಂಟುಗಳೂ ಕನ್ನಡದಲ್ಲಿವೆ. ನೃತ್ಯಶಾಸ್ತ್ರಕ್ಕೆ ಸಂಬಂಧಿಸಿದ 'ತತ್ವಾಭಿನಯ ನಿಘಂಟು'ವಿನ ಕಾಲ ಕರ್ತೃ ತಿಳಿದಿಲ್ಲ. ಹೀಗೆ ಪ್ರಾಚೀನ ಕನ್ನಡ ವಾಙ್ಮಯದಲ್ಲಿ ನಿಘಂಟು ದೊರಕುವದಾದರೂ ನಿಘಂಟು ರಚನೆಯ ಶಾಸ್ತ್ರ ಪರಿಚಯ ನಮಗೆ ಪಾಶ್ಚಾತ್ಯರಿಂದಲೇ ದೊರಕಿದೆ ಎಂಬುದನ್ನು ನಾವು ಒಪ್ಪಿಕೊಳ್ಳಬೇಕು ಎಂಬ ಅಭಿಮತವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರೈಸ್ತ ಪಾದ್ರಿಗಳು ಕನ್ನಡ ನಿಘಂಟು ಕ್ಷೇತ್ರಕ್ಕೆ ಕೊಟ್ಟ ಕೊಡುಗೆ ಚರಿತ್ರಾರ್ಹವಾದುದು. ರೆ. ರೀವ್ ಕ್ರಿ.ಶ. ೧೮೩೨ರಲ್ಲಿ ಸಿದ್ಧಪಡಿಸಿದ A Dictionary Carnataka and English, ೧೮೫೮ರಲ್ಲಿ ಡೇನಿಯರ್ ಸ್ಯಾಂಡರ್‌ಸನ್ ಮತ್ತೆ ೧೮೭೨ರಲ್ಲಿ ಜಾನ್ ಗ್ಯಾರೆಟ್ ಪ್ರಕಟಿಸಿದರು. ಫಾದರ್ ಬ್ಯುಟೇಲೋರ್ ಪ್ರಕಟಿಸಿದ ಕನ್ನಡ ಲ್ಯಾಟಿನ್ ನಿಘಂಟು ೧೮೫೫ರಲ್ಲಿ ಮುದ್ರಣಗೊಂಡಿತು. ಬಿಷಪ್ ಸ್ಟೀಫನ್ ಲೂಯಿ ೧೮೬೧ರಲ್ಲಿ ಲ್ಯಾಟಿನ್ - ಕನ್ನಡ ನಿಘಂಟು ಸಿದ್ಧಪಡಿಸಿದನು. ಕನ್ನಡ ಭಾಷೆಗೆ ಕನ್ನಡ-ಕನ್ನಡ-ಇಂಗ್ಲಿಷ್ ಮಹಾಕೋಶವನ್ನು ಸಿದ್ಧಪಡಿಸಿಕೊಟ್ಟವರು ರೆ. ಎಫ್. ಕಿಟೆಲರು. ೧೮೯೪ರಲ್ಲಿ ಕಿಟೆಲ್ ಮಹಾಕೋಶ ಪ್ರಕಟವಾದಾಗ ಇಡೀ ಪ್ರಪಂಚವೇ ಬೆರಗುಗೊಳ್ಳುವಂತಾಯಿತು. ಈ ಮಹಾಕೋಶದಿಂದಾಗಿ ಕಿಟೆಲ್ ಎಲ್ಲರ ಪ್ರಶಂಸೆಗೆ ಪಾತ್ರರಾದರು.

ಕನ್ನಡ ಭಾಷೆಯ ಶಬ್ದಾರ್ಥ ಸಿರಿ ಸಂಪದವನ್ನು ಕಿಟೆಲ್ ಕೋಶ ತೆರೆದು ತೋರಿಸುತ್ತದೆ. ಹದಿನೆಂಟು ಹಳೆಗನ್ನಡ ಗ್ರಂಥಗಳು, ಹದಿನೆಂಟು ನಡುಗನ್ನಡ ಗ್ರಂಥಗಳು, ನಾಲ್ಕು ಸಂಸ್ಕೃತ ಕೋಶಗಳು, ಒಂದು ಮರಾಠಿಕೋಶ, ಕೆಲವು ಹೊಸಗನ್ನಡ ಕೃತಿಗಳು, ಐದು ದ್ರಾವಿಡ ಇಂಗ್ಲಿಷ್ ಶಬ್ದಕೋಶಗಳನ್ನು ಕಿಟೆಲರು ತಮ್ಮ ನಿಘಂಟಿಗೆ ಆಕರವಾಗಿ ಬಳಸಿದ್ದಾರೆ. ಗಂಗಾಧರ ಮಡಿವಾಳೇಶ್ವರ ತುರಮರಿಯವರ ಕನ್ನಡ ಶಬ್ದಕೋಶ, ಸುಬ್ರಹ್ಮಣ್ಯ ಶಾಸ್ತ್ರಿಗಳ ಅಮರಕೋಶದ ವ್ಯಾಖ್ಯಾನ ಮೊದಲಾದ ಗ್ರಂಥಗಳನ್ನು ಕಿಟೆಲರು ಬಳಸಿಕೊಂಡಿದ್ದಾರೆ. ನಿಘಂಟಿನಲ್ಲಿ ಆಡುನುಡಿಯ ವಿವಿಧ ರೂಪಗಳನ್ನು ನಮೂದಿಸಿದಾರೆ. ಗಾದೆ ಮಾತು, ಜ್ಞಾತಿಪದ, ಪ್ರಯೋಗ, ಅರ್ಥ, ಇಂಗ್ಲಿಷಿನಲ್ಲಿ ಸಮಾನ ಅರ್ಥವನ್ನು ಕೊಟ್ಟಿದ್ದಾರೆ. ಕಿಟೆಲ್ ಕೋಶದ ಪ್ರಸ್ತಾವನೆ ಸುದೀರ್ಘವಾದದ್ದು. ಸಂಸ್ಕೃತ ಭಾಷೆಯಲ್ಲಿ ಸೇರಿರುವ ದ್ರಾವಿಡ ಪದಗಳ ಬಗೆಗೆ ಕಿಟೆಲರು ಬರೆದಿದ್ದಾರೆ. ಕಿಟೆಲ್ ಕೋಶದಲ್ಲಿ ಕೊರತೆಗಳಿವೆ. ಆದರೆ ಅದು ಏಕ ವ್ಯಕ್ತಿಯ ಮಹಾ ವಿದ್ವತ್ ಸಾಹಸವಾಗಿದೆ. ಜಗತ್ತಿನ ಮಹಾಕೋಶಗಳ ಸಾಲಿನಲ್ಲಿ ಕಿಟೆಲ್ ನಿಘಂಟಿಗೆ ಅನನ್ಯವಾದ ಸ್ಥಾನವಿದೆ. ಕಿಟೆಲ್ ನಿಘಂಟಿನಲ್ಲಿ ಬಿಟ್ಟುಹೋದ ೭೮೦೦ ಪದಗಳನ್ನು ಸೇರಿಸಿ ಪ್ರೊ.ಎಂ. ಮರಿಯಪ್ಪ ಭಟ್ಟರು ಅದರ ಪುನಃ ಸಂಪಾದನೆಯನ್ನು ಮಾಡಿ ಮದ್ರಾಸ್ ವಿಶ್ವವಿದ್ಯಾಲಯದ ಮೂಲಕ ಪ್ರಕಟಿಸಿದ್ದಾರೆ. ಕಿಟೆಲ್ ಕೋಶ ಬರುವದಕ್ಕೆ ಮೊದಲೇ ಝಿಗ್ಲರ್ ಅವರು ಇಂಗ್ಲಿಷ್ ಕನ್ನಡ ಶಾಲಾ ನಿಘಂಟನ್ನು ಪ್ರಕಟಿಸಿದ್ದರು ಎಂಬುದನ್ನು ಗಮನಿಸಬೇಕು. ಕನ್ನಡ ನಿಘಂಟು ನಿರ್ಮಾಣಕ್ಕೆ ಅಸ್ತಿವಾರ ಹಾಕಿಕೊಟ್ಟ ಕಿಟೆಲರ ಶಾಸ್ತ್ರ ಪರಿಣತಿ, ನಿಘಂಟು ರಚನಾ ಕೌಶಲ್ಯಗಳು ಅದ್ವಿತೀಯವಾದದ್ದು. ಅದಕ್ಕಾಗಿಯೇ ಜರ್ಮನಿಯ ಟ್ಯೂಟಿಂಗನ್ ವಿಶ್ವವಿದ್ಯಾಲಯ ಅವರಿಗೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ.

ಜಿ. ವೆಂಕಟಸುಬ್ಬಯ್ಯನವರು ಈವರೆಗೆ ಕನ್ನಡದಲ್ಲಿ ಪ್ರಕಟವಾದ ನಿಘಂಟುಗಳ ದೊಡ್ಡ ಪರಂಪರೆಯನ್ನೇ ವಿವರಿಸಿದ್ದಾರೆ. ಅದು ನಮಗೆ ಅಪೂರ್ವ ಮಾಹಿತಿಯನ್ನು ಒದಗಿಸುತ್ತದೆ. ಶಿವರಾಮ ಕಾರಂತರ 'ಸಿರಿಗನ್ನಡ ಅರ್ಥಕೋಶ' (೧೯೪೦) ಜನಪ್ರಿಯ ನಿಘಂಟಾಗಿದೆ. ಫಗು ಹಳಕಟ್ಟಿಯವರ ಶಿವಾನುಭವ ಶಬ್ದಕೋಶ, (೧೯೪೭) ವೀರಶೈವ ಸಿದ್ಧಾಂತದಲ್ಲಿ ಪ್ರಯೋಗವಾಗುವ ವಿಶಿಷ್ಟ ಶಬ್ದಾರ್ಥಗಳ ನಿಘಂಟಾಗಿದೆ. ಸೇಡಿಯಾಪು ಇತರರು ಸಂಪಾದಿಸಿದ 'ಕನ್ನಡ ನಿಘಂಟು' ೧೯೫೧ರಲ್ಲಿ ಬಂದಿದೆ. ರಮಾಕಾಂತರಾವ್ ಅವರ 'ಕನ್ನಡ-ಕನ್ನಡ ಶಬ್ದಕೋಶ (೧೯೫೨), ಗುರುನಾಥ ಜೋಶಿ ಅವರ 'ಕನ್ನಡ-ಕನ್ನಡ ಶಬ್ದಕೋಶ (೧೯೫೬) ಪಂಡಿತ ಕವಲಿಯವರ ಕನ್ನಡ ಕಸ್ತೂರಿ ಕೋಶ (೧೯೫೭) ಸಚಿತ್ರ ನಿಘಂಟಾಗಿದೆ. ಸ.ಸ. ಮಾಳವಾಡ, ಟಿ. ಕೇಶವಭಟ್ಟರು 'ಕನ್ನಡ ಕಾವ್ಯ ಪದಮಂಜರಿ' (೧೯೬೫) ಎನ್ಕೆ ಅವರ 'ಕುಮಾರವ್ಯಾಸ ನಿಘಂಟು' (೧೯೭೧) ಕಾವ್ಯಾರ್ಥಕೋಶವಾಗಿವೆ. ಕನ್ನಡದಲ್ಲಿ ಕೆಲವು ವಿಶಿಷ್ಟವಾದ ನಿಘಂಟುಗಳು ಬಂದಿವೆ. ಬೆನಗಲ್ ರಾಮರಾಯರ 'ಪುರಾಣನಾಮ ಚೂಡಾಮಣಿ' (೧೯೪೧) ಯಜ್ಞನಾರಾಯಣ ಉಡುಪಿಯವರ ಪುರಾಣ ಭಾರತಕೋಶ (೧೯೭೫), ಟಿ.ವಿ. ವೆಂಕಟಾಚಲಶಾಸ್ತ್ರಿಗಳ 'ಶ್ರೀವತ್ಸ ನಿಘಂಟು' (೧೯೭೧) ಬಂದಿವೆ. ಕನ್ನಡ ಭಾಷೆಯಲ್ಲಿ ಪ್ರಕಟವಾದ ಕೋಶಗಳ ಇಂಗ್ಲಿಷ್ ಕನ್ನಡ ನಿಘಂಟುಗಳ ದೊಡ್ಡ ಯಾದಿಯನ್ನು ವೆಂಕಟಸುಬ್ಬಯ್ಯ ಕೊಟ್ಟಿದ್ದಾರೆ. ಇಂಗ್ಲಿಷಿನಲ್ಲಿರುವಂತೆ concordance ಅಂದರೆ ಒಬ್ಬ ಕವಿಯ ಪದಪ್ರಯೋಗಕೋಶ ಕನ್ನಡದಲ್ಲಿದೆ. ಒಬ್ಬ ಕವಿಯು ಪ್ರಯೋಗಿಸಿರುವ ಎಲ್ಲ ಮುಖ್ಯ ಶಬ್ದಗಳನ್ನು ಅಕಾರಾದಿಯಾಗಿ ಜೋಡಿಸಿ ಆಯಾ ಪ್ರಯೋಗಗಳಿಗೆ ದೊರಕುವ ಆಕರಗಳನ್ನು ಇಂಥ ನಿಘಂಟಿನಲ್ಲಿ ಗುರುತಿಸಲಾಗುತ್ತದೆ. ಡಾ. ಬಿ. ರಾಮಚಂದ್ರರಾವ್ ಅವರ ೧೯೭೨ರಲ್ಲಿ ಪ್ರಕಟಿಸಿದ 'A Descriptive Grammar of Pampa Bharata' ಮುಖ್ಯವಾದದ್ದು. ಆರ್. ಗುಂಜಾಳರ ಬಸವಣ್ಣನವರ ವಚನಗಳ ಪದ ಪ್ರಯೋಗಕೋಶ, ತೋಂಟದ ಸಿದ್ಧಲಿಂಗ ಯತಿಗಳ ಪದಪ್ರಯೋಗ ಕೋಶ, ಸಿ. ಓಂಕಾರಪ್ಪನವರ Verbal Bases of Kumarvyasa, ಎಂ.ಎಸ್. ಪಾಟೀಲರ ಸಿದ್ಧರಾಮೇಶ್ವರ ವಚನ ಪದ ಪ್ರಯೋಗಕೋಶ, ಎ.ವಿ.

ನಾವಡರ ಗೋವಿಂದಪೈ ಪದಪ್ರಯೋಗ ಕೋಶ, ಜಿ. ವೆಂಕಟಸುಬ್ಬಯ್ಯನವರ ಮುದ್ದಣ ಪದ ಪ್ರಯೋಗಕೋಶ ಸಿದ್ಧವಾಗಿವೆ. ಒಂದು ಗ್ರಂಥಕ್ಕೆ ಕೊಡುವ ಜಟಿಲ ಸಮಸ್ಯೆಗಳಿಗೆ ದೀಪಿಕೆ ಕನ್ನಡದಲ್ಲಿ ಬಂದಿದೆ. ಡಿ.ಎಲ್.ಎನ್. ಅವರ ಪಂಪಭಾರತ ದೀಪಿಕೆ, ವಡ್ಡಾರಾಧನೆ ಕೃತಿಗಳು ಸಾಕ್ಷಿಯಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತು ಅರ್ಧ ಶತಮಾನದಿಂದ ನಾಡಿನ ಶ್ರೇಷ್ಠ ವಿದ್ವಾಂಸರ ನೆರವಿನಿಂದ ಸಿದ್ಧಪಡಿಸಿದ ಕನ್ನಡ-ಕನ್ನಡ ಬೃಹತ್ ನಿಘಂಟಿನ ಸಂಪಾದನ ಕಾರ್ಯದ ವೈಶಿಷ್ಟ್ಯಗಳನ್ನು ಜಿ. ವೆಂಕಟಸುಬ್ಬಯ್ಯ ತುಂಬ ವಿಸ್ತಾರವಾಗಿ ವಿವರಿಸಿದ್ದಾರೆ. ತಾವೇ ಅದರ ಸಂಪಾದಕರಾಗಿ ನಾಲ್ಕು ದಶಕಗಳಿಂದ ಮಾಡಿದ ಕಾರ್ಯಗಳ ಬಗೆಗೆ ವಿಪುಲ ಮಾಹಿತಿ ನೀಡಿದ್ದಾರೆ. ಗ್ರಂಥದ ಕೊನೆಯಲ್ಲಿ ಬಂದ ಅನುಬಂಧಗಳು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ.

ಶ್ರೇಷ್ಠ ನಿಘಂಟುಕಾರನಾಗಲು ಇರಬೇಕಾದ ಅರ್ಹತೆಗಳು ಯಾವವೆಂಬುದನ್ನು ಎಳೆಎಳೆಯಾಗಿ ವೆಂಕಟಸುಬ್ಬಯ್ಯ ಅನುಬಂಧದಲ್ಲಿ ವಿವರಿಸಿದ್ದಾರೆ. ಕನ್ನಡದ ನಿಘಂಟುಕಾರನಿಗೆ ಕನ್ನಡ ಭಾಷೆಯ ಆಳವಾದ ಪರಿಚಯವಿರಬೇಕು. ಸಂಸ್ಕೃತದ ಜ್ಞಾನದ ಜೊತೆಗೆ ಕನ್ನಡದ ಸೋದರ ಭಾಷೆಗಳಾದ ತಮಿಳು, ತೆಲುಗು, ತುಳು, ಮಲೆಯಾಳ ಭಾಷೆಗಳ ಪರಿಚಯ ಅತ್ಯಂತ ಅವಶ್ಯಕ, ಒಂದು ಭಾಷೆಯಿಂದ ಇನ್ನೊಂದು, ಭಾಷೆಗೆ ಅನುವಾದ ಮಾಡುವ ಸಾಮರ್ಥ್ಯ ಇರಬೇಕು. ಕನ್ನಡದಲ್ಲಿ ಲೇಖನ ಬರೆಯುವ ಕೌಶಲ ಇರಬೇಕು. ಗ್ರಂಥ ಸಂಪಾದನೆಯಲ್ಲಿ ನಿಘಂಟುಕಾರ ಪರಿಣತಿ ಸಾಧಿಸಬೇಕಾಗುತ್ತದೆ. ಹಳೆಗನ್ನಡ ಸಾಹಿತ್ಯದ ವ್ಯಾಸಂಗ ಅತ್ಯಾವಶ್ಯಕವಾದುದು. ಕಾವ್ಯದ ರಸಾಸ್ವಾದನೆಯಲ್ಲಿ ನೈಪುಣ್ಯತೆ ಹೊಂದಿರುವ ನಿಘಂಟುಕಾರ ಶಬ್ದಗಳ ಅರ್ಥವನ್ನು ಸಂದೇಹವಿಲ್ಲದಂತೆ ತೀರ್ಮಾನಿಸುವ ನಿಷ್ಣಾತನಾಗಿರಬೇಕು. ಹೀಗೆ ಆದರ್ಶ ನಿಘಂಟುಕಾರ ಪ್ರತಿಭೆ ಪಾಂಡಿತ್ಯವನ್ನು ಪಡೆದಿರಬೇಕು. ಒಂದು ನಿಘಂಟನ್ನು ಉಪಯೋಗಿಸುವದು ಹೇಗೆ? ಎಂಬುದನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕು. ನಿಘಂಟಿನ ಪ್ರಯೋಜನವನ್ನು ಎಲ್ಲರೂ ಪಡೆದುಕೊಳ್ಳಬೇಕು ಎಂಬ ಸದಾಶಯವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಕನ್ನಡದಲ್ಲಿ ಬಂದ ಕೆಲವು ವಿಶಿಷ್ಟ ಕೋಶಗಳ ಬಗ್ಗೆ ಜಿ. ವೆಂಕಟಸುಬ್ಬಯ್ಯ ವಿವರಿಸಿದ್ದಾರೆ. ಓ.ಎಲ್. ನಾಗಭೂಷಣಸ್ವಾಮಿ ಅವರ 'ವಿಮರ್ಶೆಯ ಪರಿಭಾಷೆ', ಜಿ.ಎಸ್. ಶಿವರುದ್ರಪ್ಪ, ಕೆ.ವಿ. ನಾರಾಯಣ ಸಂಪಾದಿಸಿದ 'ಕಾವ್ಯಾರ್ಥ ಪದಕೋಶ'. ಜಿ.ಎಸ್. ಶಿವರುದ್ರಪ್ಪ, ವಿದ್ಯಾಶಂಕರ ಸಂಪಾದಿಸಿದ 'ವಾಕ್ಯಮಾಣಿಕ್ಯಕೋಶ' ಟಿ. ಕೇಶವಭಟ್ಟರ 'ಹವ್ಯಕ ಶಬ್ದಮಂಜರಿ' ಗಳ ಬಗೆಗೆ ಬರೆದಿದ್ದಾರೆ. ಎಂ.ಮರಿಯಪ್ಪ ಭಟ್ಟರ ಹವ್ಯಕ ಇಂಗ್ಲಿಷ್ ನಿಘಂಟನ್ನು ಇಲ್ಲಿಯೇ ಉಲ್ಲೇಖಿಸಬೇಕು. 'ತುಳು ನಿಘಂಟು' ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟಿನ ಬಗೆಗೂ ವಿವರವಾದ ವಿಚಾರಗಳನ್ನು ಲೇಖಕರು ನಮ್ಮ ಗಮನಕ್ಕೆ ತಂದಿದ್ದಾರೆ.

ಜಿ. ವೆಂಕಟಸುಬ್ಬಯ್ಯನವರು ಕನ್ನಡ ಕನ್ನಡ ನಿಘಂಟು, ಇಗೋ ಕನ್ನಡ ನಿಘಂಟುಗಳನ್ನು ಸಿದ್ಧಪಡಿಸಿಕೊಟ್ಟ ಶ್ರೇಷ್ಠ ವಿದ್ವಾಂಸರು. ಇದುವರೆಗೆ ಕನ್ನಡ ಕನ್ನಡ ನಿಘಂಟಿನ ಏಳು ಸಂಪುಟಗಳ ಒಂಬತ್ತು ಸಾವಿರ ಪುಟಗಳಲ್ಲಿ ಹೊರಬಂದ ಆರು ಸಂಪುಟಗಳ ಪ್ರಧಾನ ಸಂಪಾದಕರಾಗಿ ಅವರು ಸಲ್ಲಿಸಿದ ಸೇವೆ ಅಮೋಘವಾಗಿದೆ. ಕನ್ನಡ ಶಬ್ದಾರ್ಥ ಸಂಪದವನ್ನು ಕನ್ನಡಿಗರ ಮನೆಮನಗಳಿಗೆ ಮುಟ್ಟಿಸುವ ಮಹೋನ್ನತ ಕಾರ್ಯದಲ್ಲಿ ತಮ್ಮ ಜೀವನವನ್ನು ಮುಡಿಪಿಟ್ಟು ಜೀವಿ ಅವರು ಕನ್ನಡ ವಿದ್ವತ್‌ಲೋಕದ ಕ್ಷಿತಿಜವನ್ನು ವಿಸ್ತರಿಸಿದವರು. ಅವರ ಪಾಂಡಿತ್ಯ ಪ್ರತಿಭೆ, ವಿಮರ್ಶನದೃಷ್ಟಿ, ವಾಕ್‌ಪಟುತ್ವ, ನಿರಂತರ ಬರವಣಿಗೆಯಿಂದಾಗಿ ಅಭಿನವ ಕಿಟೆಲ್ ಆಗಿದ್ದಾರೆ. ಜಿ. ವೆಂಕಟಸುಬ್ಬಯ್ಯನವರ ಸಾಹಿತ್ಯದಲ್ಲಿ 'ಕನ್ನಡ ನಿಘಂಟುಶಾಸ್ತ್ರ ಪರಿಚಯ' ಮೌಲಿಕ ಕೃತಿಯಾಗಿದೆ. ನೂರರ ಸಂಭ್ರಮದಲ್ಲಿರುವ ಕನ್ನಡದ ಧೀಮಂತ ಚೇತನ ಜೀವಿ ಅವರಿಗೆ ಅಭಿವಂದನೆಗಳು.

❑❑

# ಬರವಣಿಗೆಯ ಪ್ರಮುಖ ಘಟ್ಟಗಳು

– ಎನ್.ಬಿ. ಪರಿಮಳಾಬಾಯಿ

ಇತಿಹಾಸ ರಚನೆಗೆ ಖಚಿತ ಆಕರವೊದಗಿಸುವ ಶಾಸನಶಾಸ್ತ್ರದ ಎರಡು ಮುಖ್ಯ ವಿಭಾಗಗಳಾದ, ಪರಸ್ಪರ ಪೂರಕ ಸಂಬಂಧ ಹೊಂದಿದ ಶಾಸನಗಳ ಓದುವಿಕೆ ಮತ್ತು ವ್ಯಾಖ್ಯಾನಗಳಲ್ಲಿ (Decipherment and Interpretation) ಲಿಪಿಶಾಸ್ತ್ರವು ಮೊದಲ ವಿಭಾಗಕ್ಕೆ ಸಂಬಂಧಿಸಿದೆ. ಪ್ರಾಚೀನ ಕಾಲದ ಶಾಸನವೊಂದನ್ನೋದುವುದು 'Decipherment'. ದೊರೆತ ಶಾಸನವೊಂದನ್ನೋದಬೇಕಾದರೆ ಅದನ್ನು ಪರಿಚಿತ ಲಿಪಿಗೆ ಪರಿವರ್ತಿಸಬೇಕಾದುದು ಅನಿವಾರ್ಯ. ಈ ಕಾರ್ಯಕ್ಕೆ ಪ್ರಾಚೀನ ಅಥವಾ ದೊರೆತ ಶಾಸನದ ಕಾಲದ ಲಿಪಿಯ ಪರಿಚಯವಿರಬೇಕಾದದ್ದು ಅಗತ್ಯ. ಇದರ ಅಧ್ಯಯನವೇ ಲಿಪಿಶಾಸ್ತ್ರ. ಶಾಸನಾಭ್ಯಾಸದಲ್ಲಿ ಮೂಲಭೂತ ಕಾರ್ಯವೆಂದರೆ 'ಡಿಸೈಫರ್‌ಮೆಂಟ್' ನಂತರ ಪ್ರಕಟವಾದ ಶಾಸನಗಳ ವ್ಯಾಖ್ಯಾನ. ಈ ವ್ಯಾಖ್ಯಾನ ನಮ್ಮ ಪರಂಪರೆಯನ್ನರಿಯಲು ಸಹಕರಿಸುತ್ತದೆ. ಅದು ನಿರಂತರವಾದ ಕಾರ್ಯ. ಭಿನ್ನ ಅರ್ಥಗಳು ಹೊಳೆಯುತ್ತಾ ಹೋಗುವ ಶಾಸನಗಳನ್ನು ಹೊಸ ಹೊಸ ದೃಷ್ಟಿಯಿಂದ ನೋಡಬಹುದು. ತಂತಮ್ಮ ಸಾಮಾಜಿಕ ಅಧ್ಯಯನದ ಶಿಸ್ತಿಗೊಳಪಡಿಸಿ ಭಾಷಾವಿಜ್ಞಾನಿ, ಲಿಪಿಶಾಸ್ತ್ರಜ್ಞ, ಸಾಹಿತ್ಯದ ವಿದ್ಯಾರ್ಥಿಗಳು ಶಾಸನಗಳ ವ್ಯಾಖ್ಯಾನ ಮಾಡಿಕೊಳ್ಳುತ್ತಾರೆ. ವ್ಯಾಖ್ಯಾನಕ್ಕೆ ಪೂರಕವಾಗಿ ಬರುವುದು ಲಿಪಿಶಾಸ್ತ್ರ. ಲಿಪಿಶಾಸ್ತ್ರದಲ್ಲಿ ಲಿಪಿಯ ಉಗಮ, ವಿಕಾಸ, ಇವುಗಳನ್ನು ಕುರಿತು ಚರ್ಚಿಸಲಾಗುತ್ತದೆ. ಶಾಸನ ಶಾಸ್ತ್ರದ ಕ್ರಮಬದ್ಧ ಅಧ್ಯಯನಕ್ಕೆ ಶಾಸನಗಳ ಓದುವಿಕೆ ಮತ್ತು ವ್ಯಾಖ್ಯಾನಗಳು ಅಗತ್ಯವಾಗಿವೆ. ವಿಷಯ ವೈವಿಧ್ಯಗಳನ್ನೊದಗಿಸುವ ಶಾಸನಗಳನ್ನು ವ್ಯಾಖ್ಯಾನಿಸಲು ಓದುವಿಕೆ ಅಗತ್ಯ. ಓದುವಿಕೆಗೆ ಲಿಪಿ ತಿಳುವಳಿಕೆ ಅಗತ್ಯ.

ಹೀಗೆ ಲಿಪಿಶಾಸ್ತ್ರ ಶಾಸನಶಾಸ್ತ್ರದ ಒಂದು ಪ್ರಮುಖ ವಿಭಾಗವಾಗಿದೆ. ಅದೊಂದು ಸ್ವತಂತ್ರ ಶಾಖೆಯ ಸಾಮರ್ಥ್ಯ, ಪ್ರಾಮುಖ್ಯತೆಗಳನ್ನು ಪಡೆದಿದೆ. ಮಾನವನ ಅತ್ಯದ್ಭುತ ಸಂಶೋಧನೆಗಳಲ್ಲಿ ಪ್ರಮುಖವಾದದ್ದು ಲಿಪಿ. ಭಾಷೆ–ಲಿಪಿಗಳೆರಡೂ ಒಂದು ಇನ್ನೊಂದರ ಕೈ ಹಿಡಿದು ಸಾಗಬೇಕಾದಂತಹವು. ಆದ್ದರಿಂದ ಲಿಪಿಯ ಪ್ರಾಮುಖ್ಯತೆಯನ್ನು ಭಾಷೆಯ ಜೊತೆಯಲ್ಲೇ ನೋಡಬೇಕಾದದ್ದು ಅನಿವಾರ್ಯ.

ಭಾಷೆ ಮಾನವ ಜೀವನದಲ್ಲಿ ಪ್ರಮುಖಪಾತ್ರ ವಹಿಸುತ್ತದೆ. 'ಕ್ರೋಬರ್ ಎನ್ನುವ ಮಾನವ ಶಾಸ್ತ್ರಜ್ಞ ಪ್ರಾಣಿ ಮತ್ತು ಮಾನವರ ಬಾಳಿನಲ್ಲಿ ಭಿನ್ನತೆಯನ್ನು ಗುರುತಿಸುತ್ತಾ ಅವರಿಬ್ಬರನ್ನು ಭಿನ್ನ ಮಾಡುವುದೇ ಭಾಷೆ' ಎನ್ನುತ್ತಾನೆ. ದಂಡಿಯು ಭಾಷೆಯ ಮಹತ್ವವನ್ನು ಕುರಿತು.

'ಇದಮಂಧಂತಮಃ ಕೃತ್ಸ್ನಂ ಜಾಯೇತ ಭುವನತ್ರಯಂ
ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಾನ್ನದೀಪ್ಯತೇ'

ಎಂದಿದ್ದಾನೆ.

ಭಾಷೆಯ ಮುಂದಿನ ಹಂತವೇ ಬರಹ. ಭಾಷೆ ಶ್ರವ್ಯೇಂದ್ರಿಯಕ್ಕೆ ಸಂಬಂಧಿಸಿದ್ದು. ಅದು ಶಾಬ್ದಿಕ ಸಂಕೇತಗಳ ಒಂದು ವ್ಯವಸ್ಥೆ. ಕಿವಿಗೆ ಕೇಳಿಸುವ ಭಾಷೆಯನ್ನು ಕಣ್ಣಿಗೆ ಕಾಣಿಸುವ ಚಿಹ್ನೆಗಳ ಮೂಲಕ ಹಿಡಿದಿಡುವ ಸಾಧನವೇ ಲಿಪಿ. ಇದನ್ನೇ ಬರಹ ಎನ್ನುತ್ತೇವೆ. ಬರಹವನ್ನು ಬಾಯಿಂದುಚ್ಚರಿಸಿದರೆ ಭಾಷೆಯೆನಿಸಿಕೊಳ್ಳುತ್ತದೆ. ಬರಹ–ಭಾಷೆಗಳ ಸಂಬಂಧ ಬಹು ವಿಲಕ್ಷಣವಾದದ್ದು. ಭಾಷೆ ಲಿಪಿಯಿಲ್ಲದೇ ಬದುಕಬಲ್ಲುದು. ಆದರೆ ಲಿಪಿ ಭಾಷೆಯಿಂದ ಬೇರ್ಪಟ್ಟು ಬದುಕಲು ಸಾಧ್ಯವಿಲ್ಲ.

ಈ ವಿವರಣೆಯಿಂದ ಲಿಪಿ ಭಾಷೆಯ ಚಾಕ್ಷುಷರೂಪ ಎಂದು ಹೇಳಬಹುದು, ಅಷ್ಟೇ ಅಲ್ಲದೆ ಅದು ಭಾಷೆಯ ಸರಳೀಕೃತ ಚಾಕ್ಷುಷರೂಪ. ಏಕೆಂದರೆ ನಮ್ಮ ಶಬ್ದೋಚ್ಚಾರ ಅನಂತ. ಮಾತಿನ ಎಲ್ಲ ಏರಿಳಿತಗಳನ್ನೂ ಲಿಪಿಗೆ ತರುವುದು ಸಾಧ್ಯವಿಲ್ಲ. ಅಷ್ಟು ಚಿಹ್ನೆಗಳು ನಮ್ಮ ಲಿಪಿಯಲ್ಲಿಲ್ಲ. ಆದುದರಿಂದ ನಾವು ನಮ್ಮ ಲಿಪಿಯ ಮೂಲಕ ಭಾಷೆಯನ್ನು ಒಂದು ವಿಶಿಷ್ಟ ರೂಪದಲ್ಲಿ ಬರೆಯುವ ವ್ಯವಸ್ಥೆ ಮಾಡಿಕೊಂಡಿದ್ದೇವೆ.

ಭಾಷೆ ಸೃಷ್ಟಿಯಾಗುತ್ತಲೇ ನಾಶವಾಗುತ್ತದೆ. ಅದು ತಾತ್ಕಾಲಿಕವಾದದ್ದು. 'ಮಾತನಾಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು' ಎಂಬ ಕನ್ನಡ ಗಾದೆ ಭಾಷೆಯ ಮಿತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಭಾಷೆಯ ಈ ತಾತ್ಕಾಲಿಕತೆಯನ್ನು ಎರಡು ದೃಷ್ಟಿಯಿಂದ ನೋಡಬಹುದು.

'ಪೃಥ್ವಿ', # ೩೪ ಸಿ, ೫ನೇ 'ಬಿ' ಕ್ರಾಸ್, ಗಿರಿನಗರ, ಬೆಂಗಳೂರು ೫೬೦ ೦೮೫

೧. ದೇಶದ ಮಿತಿ

೨. ಕಾಲದ ಮಿತಿ

ನಮ್ಮ ಸ್ಮೃತಿ ಶಕ್ತಿ ಮಿತವಾದದ್ದು. ಕ್ಷಣಿಕ ಆವಿಷ್ಕಾರವಾದ ಭಾಷೆಯ ಮಾತನ್ನೆಲ್ಲ ನೆನಪಿನಲ್ಲಿಡುವುದು ಕಷ್ಟ ಮತ್ತು ಮಾನವನ ಶ್ರವಣೇಂದ್ರಿಯಗಳಿಗೆ ಶಬ್ದ ತರಂಗಗಳನ್ನು ಗ್ರಹಿಸುವ ಶಕ್ತಿ ಒಂದು ಮಿತಿಯಲ್ಲಿದೆ. ಅದನ್ನು ದಾಟಿದ ನಂತರ ಶಬ್ದಗ್ರಹಣ ಅವನಿಂದ ಸಾಧ್ಯವಿಲ್ಲ. ಆದ್ದರಿಂದ ಭಾಷೆಗೆ ದೇಶ ಮತ್ತು ಕಾಲದ ಮಿತಿಗಳೆರಡೂ ಪ್ರಾಪ್ತವಾಗುತ್ತವೆ.

ಭಾಷೆಯ ಉಪಯೋಗವನ್ನು ಮಾನವ ಕಂಡುಕೊಂಡದ್ದು ಅನೇಕ ಲಕ್ಷ ವರ್ಷಗಳ ಹಿಂದೆ. ಲಿಪಿಯ ಉಪಯೋಗದ ಅರಿವು ಇತ್ತೀಚಿನದು. 'ಮಾನವ ಮಾನವನಾದದ್ದು ಭಾಷೆಯ ಸಂಶೋಧನೆಯಿಂದ, ಆದರೆ ಮಾನವ ನಾಗರಿಕನಾದದ್ದು ಬರಹದ ಸಂಶೋಧನೆಯಿಂದ' ಬರಹಕ್ಕೆ ಸಂಸ್ಕೃತಿಯಲ್ಲಿ ಮಹತ್ವದ ಸ್ಥಾನವಿದೆ. ಸಂಸ್ಕೃತಿ ಆದಿಮ ಜನಾಂಗದಿಂದ ರೂಪುಗೊಂಡಿರುವಂತಹದು. ಅವರು ಬಳಸುತ್ತಿದ್ದ ಭಾಷೆ ಸಾಂಕೇತಿಕವಾಗಿತ್ತು. ಉದಾ. ಬೇಟೆಗೆ, ಸಂಬಂಧಿಸಿದ ವಿನ್ಯಾಸಗಳ ಮೂಲಕ ಬೇಟೆಗೆ ಹೋಗುವುದನ್ನವರು ಸೂಚಿಸುತ್ತಿದ್ದರು. ಸಂಕೇತಗಳ ಮೂಲಕ ಸಮಾಜದೊಡನೆ ಸಂವಹನ ಸಾಧ್ಯ. ಮಾನವಶಾಸ್ತ್ರಜ್ಞರು ಮಾನವನ ಆದಿಮಸ್ಥಿತಿಯನ್ನರಿಯಲು ಗಿರಿಜನರ ಅಭ್ಯಾಸಗಳನ್ನಧ್ಯಯಿಸುತ್ತಾರೆ. ಕಾರಣ ನಾಗರೀಕತೆಯ ಸ್ಪರ್ಶವೆಂಬುದು ಅವರಿಗಿರುವುದಿಲ್ಲ. ಪ್ರಾಚೀನ ಕಾಲದಿಂದಲೂ ಬದಲಾಗದ ಮಾನವನ ಆದಿಮ ಸ್ಥಿತಿಯನ್ನವರು ಪ್ರತಿನಿಧಿಸುತ್ತಾರೆ.

ಭಾಷೆಯ ಮಿತಿಗಳನ್ನು ಮೀರಲು ಸ್ಮರಣ ವಸ್ತುಗಳ ಬಳಕೆಯು ಲಿಪಿಯ ಅಸ್ತಿತ್ವಕ್ಕೆ ಮೊದಲು ರೂಢಿಯಲ್ಲಿತ್ತು. ಸ್ಮರಣ ವಸ್ತುಗಳನ್ನು ಗಾಯಕರು ಆಫ್ರಿಕಾದಲ್ಲಿ ಉಪಯೋಗಿಸುತ್ತಿದ್ದರು. ಇದನ್ನು ಇಂಗ್ಲಿಷಿನಲ್ಲಿ `Memoric' ಎನ್ನುತ್ತಾರೆ. ಡಾ॥ ಎಂ.ಚಿದಾನಂದಮೂರ್ತಿಗಳು ತಮ್ಮ 'ಭಾಷಾ ವಿಜ್ಞಾನದ ಮೂಲತತ್ವಗಳು' ಎಂಬ ಕೃತಿಯಲ್ಲಿ ಪ್ರಿಯತಮೆಯೋರ್ವಳು ತನ್ನ ಪ್ರೇಮಿಗೆ ಸ್ಮರಣ ವಸ್ತುಗಳ ಮೂಲಕ ಬರೆದ ಪತ್ರವೊಂದರ ವಿಶ್ಲೇಷಣೆ ಮಾಡಿದ್ದಾರೆ. ಅಲ್ಲಿ ಪ್ರಿಯಕರನು ಈ ಸ್ಮರಣ ವಸ್ತುಗಳಿಂದ ಸರಿಯಾದ ಅರ್ಥವನ್ನು ಗ್ರಹಿಸುತ್ತಾನೆ. ಆದರೆ ಈ ಸ್ಮರಣ ವಸ್ತುಗಳಿಗಿರುವ ಮಿತಿಯಿಂದ ವಿರುದ್ಧಾರ್ಥವನ್ನೂ ಗ್ರಹಿಸುವ ಸಾಧ್ಯತೆಯಿದೆ. ಖಚಿತವಾದ, ಸ್ಪಷ್ಟವಾದ ವಿವರ ಅಲ್ಲಿ ಸಾಧ್ಯವಿಲ್ಲ. ಲಿಪಿಯ ವ್ಯಾಪ್ತಿ ಇದಕ್ಕಿಂತ ಹೆಚ್ಚು. ಲಿಪಿಯಿಂದ ನಮ್ಮ ಅಭಿಪ್ರಾಯವನ್ನು ಖಚಿತವಾಗಿ, ಸ್ಪಷ್ಟವಾಗಿ ಹಿಡಿದಿಡುವುದು ಸಾಧ್ಯ. ಭಾಷೆಯ ಎರಡು ಮಿತಿಗಳಾದ ಕಾಲ-ದೇಶಗಳನ್ನದು ಮೀರಿ ನಿಲ್ಲುತ್ತದೆ. ಬರೆದದ್ದು ಅನೇಕ ವರ್ಷಗಳ ನಂತರವೂ ಇರುತ್ತದೆ. ಅನೇಕ ಮೈಲಿಗಳಾಚೆಯೂ ಪಸರಿಸುತ್ತದೆ. ಸಾವಿರ ವರ್ಷಗಳಾಚೆಯ ಪಂಪಾದಿಗಳ ಕೃತಿಗಳು ಲಭ್ಯವಾಗಿರುವುದು ಲಿಪಿಯಿಂದ. ಆ ಮೂಲಕವೇ ಆ ಕೃತಿಗಳು ವಿವಿಧ ಪ್ರದೇಶಗಳಲ್ಲಿ ದೊರೆಯುವುದೂ ಸಾಧ್ಯವಾಗಿದೆ.

ಲಿಪಿಯ ಬಹುದೊಡ್ಡ ಉಪಯೋಗ ನಮ್ಮ ಆಲೋಚನೆಯನ್ನು ಸರಿಗೋಪನಗೊಳಿಸುವುದು. ಲಿಪಿಯಿಂದ ಅಭಿಪ್ರಾಯಗಳನ್ನು ಮುಂದಿನ ಜನಾಂಗಕ್ಕೆ ಉಳಿಸಬಹುದು. ಮಾನವ ಸಂಸ್ಕೃತಿಯಲ್ಲಿ ಸಂಗೋಪನ ಪ್ರಮುಖ ಪಾತ್ರ ವಹಿಸುತ್ತದೆ. ಇದರಿಂದ ಮುಂದಿನ ಜನಾಂಗ ತಮ್ಮ ಸಂಸ್ಕೃತಿಯನ್ನು ಊರ್ಜಿತಗೊಳಿಸಿಕೊಳ್ಳಬಹುದು. ಡಿರಿಂಜರ್ ಎಂಬ ವಿದ್ವಾಂಸ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬರಹವನ್ನು ವಿವರಿಸುವ ಪ್ರಯತ್ನ ಮಾಡಿ, 'ಸಂಸ್ಕೃತಿಯನ್ನು ಸಂಪರ್ಕ ಸಾಧನವೆನ್ನುವುದಾದರೆ ಬರಹಕ್ಕೆ ಪ್ರಮುಖ ಸ್ಥಾನವಿದೆ' ಎನ್ನುತ್ತಾನೆ. ಸಂಸ್ಕೃತಿಯ ವಿವರಣೆಯಲ್ಲಿ ಸಂವಾದ ಮುಖ್ಯ. 'ಸಂಸ್ಕೃತಿ'ಯ ಪ್ರಮುಖ ಅಂಶ ಬರಹ ಎಂದು ಡಿರಿಂಜರ್ ಹೇಳುತ್ತಾನೆ.

ಸಂಸ್ಕೃತಿ-ನಾಗರೀಕತೆಗಳೆರಡೂ ಸಮಾನಾರ್ಥಕ ಪದಗಳಲ್ಲ. 'culture' ಮತ್ತು 'civilisation' ಎಂಬ ಪದಗಳನ್ನು ಸಂಸ್ಕೃತಿ ನಾಗರೀಕತೆಗಳಿಗೆ ಸಂವಾದಿಯಾಗಿ ಬಳಸುತ್ತೇವೆ. 'Culture' ಸಮಗ್ರ ವಸ್ತುವನ್ನು ನಿರ್ದೇಶಿಸಿದರೆ 'Civilisation' ಬೆಳವಣಿಗೆಯನ್ನು ನಿರ್ದೇಶಿಸುತ್ತದೆ. ಸಂಸ್ಕೃತಿ ಪ್ರಾಚೀನವಾದದ್ದು, ಕ್ರಿ.ಪೂ. ೧೦,೦೦೦ ದಿಂದೀಚೆಗೆ ನಾಗರೀಕತೆ ಕಂಡು ಬರುತ್ತದೆ. ಪ್ರಗತಿ ಹಿಂದಿನದರೊಡನೆ ಮುಂದುವರಿಯುವ ಪ್ರಕ್ರಿಯೆ. ಇದನ್ನು 'cumulation' ಎನ್ನುತ್ತೇವೆ. ನಾಗರೀಕತೆ ಪ್ರಗತಿಯನ್ನು ಸೂಚಿಸುವಂತಹದು. ನಾಗರೀಕತೆಯ ಬೆಳವಣಿಗೆಯಲ್ಲಿ ಲಿಪಿಯ ಪಾತ್ರ ಪ್ರಮುಖವಾದದ್ದು. ಹಿಂದಿನ ಜನಾಂಗದ ಜ್ಞಾನ ಸಂಪತ್ತನ್ನು ಲಭ್ಯಗೊಳಿಸುವಲ್ಲಿ ಅದು ಮಹತ್ವದ್ದು. ಮಾನವನ ನಾಗರೀಕತೆ ಆರಂಭವಾಗುವುದು ಲಿಪಿಯ ಉಪಯೋಗವನ್ನು ಕಂಡುಕೊಂಡ ಕಾಲದಲ್ಲಿಯೇ. ಆರ್ಥಿಕ ನೀತಿ, ಪಟ್ಟಣಗಳ ವಿವರ, ಆಡಳಿತ ವ್ಯವಸ್ಥೆ ಇವುಗಳೆಲ್ಲವೂ ಲಿಪಿಯ ಉಗಮದಿಂದಲೇ ಪ್ರಾರಂಭವಾದವು.

ಲಿಪಿಯ ಸಹಾಯದಿಂದ ಸಂಪರ್ಕ ಸಾಧ್ಯ. ಸರ್ಕಾರ ಆಜ್ಞೆ ಮಾಡಲೂ, ಅದನ್ನು ಪ್ರಸಾರ ಮಾಡಲೂ ಸಾಧ್ಯ. ಸಂಘಟನೆ ಇಲ್ಲದೇ ನಾಗರೀಕತೆ ಸಾಧ್ಯವಿಲ್ಲ. ಸಂಘಟನೆ ಸಾಧ್ಯವಾಗುವುದು ಲಿಪಿಯಿಂದ. ಆದ್ದರಿಂದ ಲಿಪಿಯ ಉಗಮ ಮಾನವನ ಇತಿಹಾಸದಲ್ಲಿ ಪ್ರಮುಖವಾದ ಘಟ್ಟ. ಅಂತೆಯೇ ಲಿಪಿಪೂರ್ವ ಚರಿತ್ರೆಯು ಇತಿಹಾಸಪೂರ್ವ ಯುಗವೆಂದೂ, ನಂತರದ್ದು ಇತಿಹಾಸ ಯುಗವೆಂದೂ ಕರೆಸಿಕೊಂಡಿದೆ. ಬರವಣಿಗೆಯು ಮಾನವನ ಬೌದ್ಧಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಶಾಶ್ವತಗೊಳಿಸಿತೆನ್ನಬಹುದು.

ಇಷ್ಟು ಪ್ರಾಮುಖ್ಯತೆ ಪಡೆದ ಲಿಪಿಯು ಹೇಗೆ ಹುಟ್ಟಿತೆಂಬ ಕುತೂಹಲ ಸಹಜವಾದುದು; ಮತ್ತು ಅಷ್ಟೇ ಮುಖ್ಯವಾದುದು.

ಭಾಷಾ ಉಗಮದ ಬಗ್ಗೆ ಬೌಬೌ ವಾದ, ಯೆ, ಹೊ, ಹೆ, ವಾದ ಇತ್ಯಾದಿ ವಾದಗಳಿವೆ. ವಾದ ಪ್ರತಿಪಾದಕನನ್ನುಳಿದರೆ ಇಂತಹ ವಾದಗಳಲ್ಲಿ ಕೆಲವಕ್ಕೆ ಅನುಯಾಯಿಗಳೇ ಇಲ್ಲ. ಭಾಷೆ ಲಕ್ಷ-ಲಕ್ಷ ವರ್ಷಗಳ ಪ್ರಾಚೀನವಾದದ್ದು. ಭಾಷಾ ಕಲಿಕೆಯ ಬಗ್ಗೆ ಅಮೆರಿಕದ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾಲಯದಲ್ಲಿ ಮಗುವಿನ ಭಾಷಾ ಕಲಿಕೆಯ ಬಗ್ಗೆ ಓದಿದ ಒಂದು ಪ್ರಬಂಧದ ವಿಷಯ ಸ್ವಾರಸ್ಯವಾಗಿದೆ. ಶಬ್ದವನ್ನು ಕಲಿತು ಪದಗಳಿಗೆ ಅರ್ಥದ ಸಂಬಂಧವನ್ನು ಕಲ್ಪಿಸುವ ಪ್ರಕ್ರಿಯೆಯೇ ಭಾಷೆ. ಮಗುವಿನ ಭಾಷಾಕಲಿಕೆ ಪ್ರಾರಂಭವಾಗುವುದು ಶಬ್ದಾರಂಭದಿಂದ. ಶಿಶು ಗರ್ಭದಲ್ಲಿದ್ದಾಗ ವಿಕಾಸವಾದವನ್ನು ಪುನರಭಿನಯಿಸುವಂತೆ, ಬಾಲ್ಯದಲ್ಲಿ ಮಗುವೊಂದು ಭಾಷೆಯನ್ನು ಕಲಿಯುವಾಗಲೂ ಮಾನವನ ಭಾಷಾ ಕಲಿಕೆಯ ಘಟ್ಟವನ್ನು ಪುನರಭಿನಯಿಸುತ್ತದೆ. ಆದರೆ ಇಂದು ಈ ಅಂಶ ನಿರಾಕರಣೆಗೊಂಡಿದೆ. ಹೀಗೆ ಭಾಷಾ ಉಗಮದ ಬಗ್ಗೆ ವಾದಗಳ ಮಂಡನೆ-ನಿರಾಕರಣೆ ನಡೆಯುತ್ತಲೇ ಇರುತ್ತದೆ. ಆದರೆ ಲಿಪಿಯ ಉಗಮದ ಬಗ್ಗೆ ಇರುವ ವಾದ ಒಂದೇ, ಚಿತ್ರಗಳಿಂದ ಲಿಪಿಯ ಉಗಮವಾಯಿತೆಂಬ ಏಕೈಕ ಸಿದ್ಧಾಂತ.

೧. **ಚಿತ್ರಲಿಪಿ** – ಲಿಪಿಯು ಕ್ರಿಪೂ. ೧೦,೦೦೦ ದಿಂದ ೧೨,೦೦೦ ವರ್ಷಗಳ ಹಿಂದೆ ಆವಿಷ್ಕಾರಗೊಂಡಿತು. ಅದೊಂದು ಆಕಸ್ಮಿಕ ಘಟನೆ. ಲಿಪಿಯ ಉಪಯೋಗ ಕಂಡುಕೊಳ್ಳುವ ಹೊತ್ತಿಗೆ ಮಾನವ ಮಾತನಾಡುವ ಪ್ರಾಣಿ ಎನಿಸಿಕೊಂಡಿದ್ದ. ಅವನ ನಾಗರೀಕತೆಯ ಬೆಳವಣಿಗೆಗೆ ಅಸ್ತಿಭಾರವೊಂದು ಲಿಪಿಯಿಂದ ಬಿತ್ತು. ಲಿಪಿಯ ಉಗಮವಾದದ್ದು ಚಿತ್ರಗಳಿಂದ. ಅದನ್ನು ಚಿತ್ರಲಿಪಿ ಎನ್ನಲಾಗುತ್ತದೆ. ಮಾನವ ತನ್ನ ಲಿಪಿಯ ಆರಂಭದ ದೆಸೆಯಲ್ಲಿ, ಮನರಂಜನೆಗಾಗಿಯೋ, ಅಭಿಪ್ರಾಯ ಸೂಚನೆಗಾಗಿಯೋ ಸಂವಹನಕ್ರಿಯೆಗಾಗಿಯೋ ಚಿತ್ರಗಳನ್ನು ಬರೆದ. ಇಂದೂ ಕೂಡ ಅಭಿಪ್ರಾಯ ಸಂದೇಶ ಸೂಚಿಸಲು ಚಿತ್ರಗಳ ಬಳಕೆಯಾಗುತ್ತದೆ. ಅಮೆರಿಕದ ರೆಡ್ ಇಂಡಿಯನ್ ಜನಾಂಗ ಚರ್ಮದ ಮೇಲೆ ಚಿತ್ರಗಳನ್ನು ಬರೆದು ಸಂಗತಿ ಸಂವಹನಕ್ಕೆ ಪ್ರಯತ್ನಿಸುತ್ತದೆ. ಲಿಪಿಯ ಆರಂಭದಲ್ಲಿ ತಮಗಾದ ಅನುಭವವನ್ನು ಚಿತ್ರಗಳ ಮೂಲಕ ವ್ಯಕ್ತಪಡಿಸಲು ಪ್ರಾರಂಭಿಸಿದರು. ಇದು ಕಲೆಯ ಉಗಮಕ್ಕೂ ನಾಂದಿಯಾಯಿತು. ನಮ್ಮ ಅಭಿಪ್ರಾಯವನ್ನು ಶಿಲ್ಪ, ಚಿತ್ರ, ಭಾಷೆ, ಇವುಗಳ ಮೂಲಕ ಹೇಳುತ್ತೇವೆ.

ಎಲ್ಲ ಮಾನವಶಾಸ್ತ್ರಜ್ಞರ ಅಭಿಪ್ರಾಯದಂತೆ ಮಾನವ ತನ್ನ ಬದುಕನ್ನು ರೂಪಿಸಲು ಪ್ರಯತ್ನಿಸಿದಾಗ ಆದಿಮ ಜನಾಂಗವೊಂದು ಉತ್ತರ ಶಿಲಾಯುಗದ ಕಾಲದಲ್ಲಿ ರೂಪುಗೊಂಡಿತು. ಕ್ರಿಪೂ. ೨-೩ನೇ ಶತಮಾನದ ಹೊತ್ತಿಗೆ ಪ್ರಬುದ್ಧ ಲಿಪಿಗಳು ದೊರಕುತ್ತವೆ. ಸಂವಾದ ಸಾಧ್ಯತೆಯನ್ನು ಶಾಶ್ವತಗೊಳಿಸುವ ಪ್ರಯತ್ನವೊಂದು ಕಂಡು ಬಂದು ಅದಕ್ಕಾಗಿ ಚಿತ್ರಗಳನ್ನು ಬಳಸಲಾಯಿತು. ಚಿತ್ರ ಲಿಪಿಯಿಂದ ಉತ್ತರ ಶಿಲಾಯುಗದ ಕಾಲದಲ್ಲಿ ಬರಹದ ಮೊದಲಘಟ್ಟ ಪ್ರಾರಂಭವಾಯಿತು.

ಡೆರಿಂಜರ್ ಉತ್ತರ ಶಿಲಾಯುಗದ ಚಿತ್ರಗಳಲ್ಲಿ ಎರಡು ಮುಖ್ಯ ಗುಂಪುಗಳನ್ನು ಗುರುತಿಸುತ್ತಾನೆ. (೧) ಕಲೆಗಾಗಿ, ಮಾಟಕ್ಕಾಗಿ ಬರೆದ ಚಿತ್ರಗಳದೊಂದು ಗುಂಪು. (೨) ಸಂವಹನ ಸಾಧ್ಯತೆಗಾಗಿ ಹುಟ್ಟಿಬಂದಂತಹ ಚಿತ್ರಗಳದೊಂದು ಗುಂಪು. ಎರಡನೇ ಗುಂಪಿನ ಚಿತ್ರಗಳು ಬರವಣಿಗೆಯ ದೃಷ್ಟಿಯಿಂದ ಮುಖ್ಯವಾಗಿವೆ. ಹೀಗೆ ಅಭಿಪ್ರಾಯ ಸೂಚನೆಗಾಗಿ ಬರೆಯಲ್ಪಟ್ಟಂತಹ ಚಿತ್ರಗಳು ಸ್ಪೇನ್, ಮೆಸೆಪಟೋಮಿಯಾ, ಫ್ರಾನ್ಸಿನ ಕೆಲವು ಗುಹೆಗಳಲ್ಲಿ ಸಿಗುತ್ತವೆ. ಈ ಘಟ್ಟವನ್ನು ಚಿತ್ರಲಿಪಿ ಎನ್ನುತ್ತೇವೆ.

ಚಿತ್ರಲಿಪಿಯಲ್ಲಿ ಚಿತ್ರವು ವಸ್ತು ಪ್ರತಿರೂಪವಾಗಿರುತ್ತದೆ. ಸೂರ್ಯನ ಚಿತ್ರವೊಂದು ಸೂರ್ಯನಿಗೆ ಸಂಕೇತವಾಗುತ್ತದೆ. ಇಲ್ಲಿ ವಸ್ತು ಮತ್ತು ಚಿಹ್ನೆಗೆ ನೇರ ಸಂಬಂಧವಿದೆ. ಮತ್ತು ಚಿತ್ರಕ್ಕೂ, ಭಾಷೆಯಲ್ಲಿನ ಪದಕ್ಕೂ ನೇರ ಸಂಬಂಧ ಇಲ್ಲಿ ಇರುವುದಿಲ್ಲ. ಚಿತ್ರಲಿಪಿಯ ಮೂರು ಮುಖ್ಯ ಲಕ್ಷಣಗಳನ್ನು ಮೂರು ಪದಗಳಿಂದ ನಿರ್ದೇಶಿಸಬಹುದು.

(೧) ವಸ್ತು ಪ್ರತಿರೂಪ – ಚಿತ್ರ ವಸ್ತುವಿಗೆ ಸಂಕೇತವಾಗಿ ಬರುತ್ತದೆ.

(೨) ಚಿಹ್ನೆ – ವಸ್ತುಗಳ ನೇರ ಸಂಬಂಧ –  – ವಸ್ತು (ಸೂರ್ಯ).

(೩) ಚಿತ್ರ – ಭಾಷೆಯ ಪದದೊಡನೆ ಸಂಬಂಧವನ್ನು ಪಡೆಯದಿರುವುದು.

೨) **ಭಾವಲಿಪಿ** – ಈ ಘಟ್ಟದಲ್ಲಿ ಚಿತ್ರ ಭಾವದ ಸಂಕೇತವಾಗಿ ಬರುತ್ತದೆ. ಭಾವಲಿಪಿ ಎಂಬ ಹೆಸರೇ ಸೂಚಿಸುವಂತೆ ಚಿತ್ರವೊಂದು ವಸ್ತುವನ್ನು ಸೂಚಿಸದೆ ವಸ್ತು ಸೂಚಿಸುವ ಭಾವವನ್ನು ಪ್ರತಿಪಾದಿಸುತ್ತದೆ. ಉದಾ: ಕಣ್ಣಿನಿಂದಿಳಿದ ನೀರು.

 – ಭಾವ (ದುಃಖ) ಕ್ಯಾಲಿಫೋರ್ನಿಯಾದ ಒಂದು ಬಂಡೆಯ ಮೇಲಿರುವ ಚಿತ್ರ, ಇದು ದುಃಖ ಎಂಬ ಭಾವದ ಸಂಕೇತವಾಗಿ ಬಂದಿದೆ. ಈ ಘಟ್ಟದ ಮುಖ್ಯ ಅಂಶ ವಸ್ತುವಿನಿಂದ ಸೂಚಿತವಾಗುವ ಭಾವ ಮುಖ್ಯವಾಗುವುದು. ವಸ್ತು – ಚಿಹ್ನೆಗಳ ಸಂಬಂಧ ತಪ್ಪಿ ವಸ್ತು – ಭಾವಕ್ಕೆ ಸಂಬಂಧ ಕಲ್ಪಿತವಾಗುತ್ತದೆ. ಅಮೆರಿಕದ ರೆಡ್ ಇಂಡಿಯನ್ ಜನಾಂಗದ ಒಂದು ಚರ್ಮದ ಪತ್ರದಲ್ಲಿ, ಒಂದು ಬಿಳಿಮನೆಯಲ್ಲಿ ಬಿಳಿ ಮನುಷ್ಯನೊಬ್ಬ ನಿಂತಿದ್ದಾನೆ. ಚಿತ್ರದಲ್ಲಿರುವ ಮೀನು, ಹಂದಿ, ಹದ್ದುಗಳ ಕಣ್ಣನ್ನು ತಾಕಿದ ಸರಳರೇಖೆಯೊಮದು ಮನೆಯಲ್ಲಿ ನಿಂತಿರುವ ಮಾನವನ ಕಣ್ಣನ್ನು ತಾಕಿದೆ. ಈ ಪತ್ರ ಅಮೆರಿಕದ ಅಧ್ಯಕ್ಷರಿಗೆ ಬರೆದದ್ದು. Totem ಎಂಬುದು ಆದಿಜನಾಂಗದ ದೇವತೆಗಳ ಸಂಕೇತ. ಮೀನು, ಹಂದಿ, ಹದ್ದುಗಳು ವಿವಿಧ ಜನಾಂಗದ ಸಂಕೇತ. ಅವುಗಳನ್ನು ತಾಕಿದ ಸರಳ ರೇಖೆ ಒಗ್ಗಟ್ಟಿನ ಸಂಕೇತ. ಮುಖ್ಯಸ್ಥನೊಬ್ಬ ಅಮೆರಿಕದ ಅಧ್ಯಕ್ಷರ

ಸ್ನೇಹವನ್ನು ಬಯಸಿ ಬರೆದ ಪತ್ರವಿದು. ಸ್ನೇಹಾಕಾಂಕ್ಷೆಯೇ ಈ. ಚಿತ್ರಗಳ ಭಾವ.

ಭಾಷಾ ಬೆಳವಣಿಗೆಯಲ್ಲಿ ಗಮನಿಸಬೇಕಾದುದು – ಮಾನವ ಮೊದಲು ಮೂರ್ತ ವಸ್ತುಗಳಿಗೆ ಹೆಸರನ್ನು ಕೊಟ್ಟ, ಮನೆ, ಮರ, ಇತ್ಯಾದಿ. ನಂತರ ಆ ಮೂಲಕ ಅಮೂರ್ತ ವಸ್ತುಗಳನ್ನು ಗುರುತಿಸಿ ಕೊಂಡ.

ಉದಾ: ಚಾಕುಹರಿತ – ಬುದ್ಧಿಹರಿತ, ದೀಪಮಂಕು–ಬುದ್ಧಿಮಂಕು. ಕಲ್ಲು ತೂಕ–ಅವನು ತೂಕವಾಗಿದ್ದಾನೆ ಇತ್ಯಾದಿ – ಪ್ರಗತಿ ಮೂರ್ತದಿಂದ ಅಮೂರ್ತಕ್ಕೆ. ಅಂತೆಯೇ ಚಿತ್ರಲಿಪಿ ಮೂರ್ತವಾದದ್ದು. ಭಾವಲಿಪಿ ಅಮೂರ್ತವಾದದ್ದು. ಭಾವಲಿಪಿಯಲ್ಲಿ ಸೂರ್ಯನ ಚಿತ್ರವೊಂದು ಸೂರ್ಯನನ್ನು ಸೂಚಿಸದೇ, ಹಗಲನ್ನೋ, ದಿನವನ್ನೋ, ಶಾಖವನ್ನೋ ಸೂಚಿಸಬಹುದು. ಭಾವಲಿಪಿಯು ಈಗಲೂ ಬಳಕೆಯಾಗುತ್ತಿದೆ.

**೩) ಧ್ವನಿಲಿಪಿ** – ಚಿತ್ರಲಿಪಿಗಿರುವ ಚಿತ್ರ ಭಾವಲಿಪಿಗೂ ಇದೆ. ಇಲ್ಲಿ ಭಾವಕ್ಕೂ ಭಾಷೆಯಲ್ಲಿರುವ ಪದಕ್ಕೂ ಸಂಬಂಧವಿರುವುದಿಲ್ಲ; ಮತ್ತು ಚಿತ್ರಕ್ಕೂ ಆ ಭಾಷೆಯಲ್ಲಿರುವ ಪದಕ್ಕೂ ಸಂಬಂಧವಿರುವುದಿಲ್ಲ. ಭಾವಲಿಪಿಯ ಮುಂದಿನ ಹಂತವು ಬರವಣಿಗೆಯ ಬಹುಮುಖ್ಯ ಘಟ್ಟ, ಚಿತ್ರಕ್ಕೂ, ಭಾಷೆಗೂ ಯಾವುದೇ ಸಂಬಂಧ ಮೊದಲೆರಡು ಘಟ್ಟದಲ್ಲಿಲ್ಲ; ಆದರೆ ಮೂರನೇ ಘಟ್ಟದಲ್ಲಿ ಸಂಕೇತಗಳು ಸರಳವಾಗುತ್ತವೆ. ಲಿಪಿ ಬೆಳವಣಿಗೆಯಲ್ಲಿ ಕ್ರಾಂತಿಯುಂಟಾಗಿ ಸಂಕೇತಗಳು ಸಂಪ್ರದಾಯ ಬದ್ಧವಾಗುತ್ತವೆ. ಚಿತ್ರಕ್ಕೂ – ಸಂಕೇತಕ್ಕೂ ನೇರಸಂಬಂಧ ತಪ್ಪಿ, ವಸ್ತು – ಭಾವಕ್ಕಿದ್ದ ಎರಡನೇ ಘಟ್ಟದ ಸಂಬಂಧವೂ ಕಳಚಿ ಅಥವಾ ಚಿತ್ರ ಮತ್ತು ಆ ಭಾಷೆಯ ಪದಕ್ಕೆ ನೇರ ಸಂಬಂಧ ಕಲ್ಪಿತವಾಗುತ್ತದೆ. ಮಗ ಎಂಬ ಪದದ ಉಚ್ಚಾರಕ್ಕೆ ಸಂಕೇತವಾಗುವ ಸ್ವರೂಪ.[೧]

ಬರಹ ನೇರವಾಗಿ ಅರ್ಥದ ಜೊತೆ ಸಂಬಂಧ ಪಡೆದಿಲ್ಲ. ಆದರೆ ಭಾಷೆ ಅರ್ಥದೊಡನೆ ನೇರವಾದ ಸಂಬಂಧವನ್ನು ಪಡೆದುಕೊಂಡಿದೆ. ಭಾಷೆ >ಅರ್ಥ, ಬರಹ >ಭಾಷೆ >ಅರ್ಥ > ಇದು ಭಾವ ಮತ್ತು ಬರಹದೊಡನೆ ಅರ್ಥದ ಸಂಬಂಧ.

ಬರಹದ ನೇರ ಸಂಬಂಧ ಅರ್ಥದೊಂದಿಗಲ್ಲ, ಭಾಷೆಯೊಂದಿಗೆ. ನಾವು ಬರೆದ ಚಾಕ್ಷುಷ ಚಿಹ್ನೆಗಳು ಭಾಷೆಯೊಡನೆ ಸಂಪರ್ಕ ಸಾಧಿಸಲು ಸಮರ್ಥವಾದಾಗ ಈ ಚಿಹ್ನೆ ಬರಹದ ರೂಪ ತಾಳುತ್ತದೆ. ಬರಹ ಭಾಷೆಯ ಚಾಕ್ಷುಷ ರೂಪ. ಚಿತ್ರಲಿಪಿಯಂತೆ ಭಾವಲಿಪಿಯಲ್ಲಿಯೂ ಚಿತ್ರಗಳು ಭಾಷೆಯ ಶಬ್ದಗಳಿಗೆ ಸಂಕೇತವಾಗದೇ ಅರ್ಥದೊಡನೆ ಭಾಷೆಯ ಮಧ್ಯಸ್ಥಿಕೆಯಿಲ್ಲದೇ ನೇರ ಸಂಬಂಧ ಪಡೆದಿರುತ್ತವೆ. ಲಿಪಿ ಬೆಳವಣಿಗೆಯ ಯಾವುದೋ ಘಟ್ಟದಲ್ಲಿ ಮಹತ್ವದ ಘಟನೆಯೊಂದು ನಡೆದು ಚಿತ್ರಗಳು ಭಾಷೆಯೊಡನೆ ಸಂಪರ್ಕ ಪಡೆದುಕೊಂಡು ಅರ್ಥ ಪ್ರವಹನೆಗೆ ಭಾಷೆಯನ್ನು ಬಳಸಿಕೊಂಡವು. ಆಗ ಧ್ವನಿ ಲೇಖನದ ಘಟ್ಟ ಪ್ರಾರಂಭವಾಯಿತು. ಧ್ವನಿ ಲಿಪಿಯಲ್ಲಿ 'ಸೂರ್ಯ' ನೆಂಬ ಶಬ್ದದ ಚಿಹ್ನೆ ಸೂರ್ಯನನ್ನು ಸೂಚಿಸಲು ಮಾಡಿಕೊಂಡ ಶಾಬ್ದಿಕ ಸಂಕೇತ. ಎಲ್ಲಿಯವರೆಗೆ ಚಿತ್ರವೊಂದು ನೇರವಾದ ಅರ್ಥವನ್ನು ಹೇಳುತ್ತದೆಯೋ ಅಲ್ಲಿಯವರೆಗೆ ಅದು ಬರಹವೆಂಬ ಹೆಸರು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಚಿತ್ರ–ಭಾಷೆಗಳ ಸಂಬಂಧ ಕಲ್ಪನೆ ಮೂರನೇ ಘಟ್ಟದ ಮಹತ್ವದ ಕಾರ್ಯ.

ಇದನ್ನೇ ಹೋಲುವ 'Rebus' ಬರಹದಲ್ಲಿ ಚಿತ್ರ–ವಸ್ತುಗಳ ದಾಂಪತ್ಯ ವಿಚ್ಛೇದನ ಉಂಟು. ಅಲ್ಲಿಯೂ ಸಹ ಚಿತ್ರ ವಸ್ತುವನ್ನು ಹೇಳದೇ ವಸ್ತುಗಿರುವ 'ಪದವನ್ನು ಹೇಳುತ್ತದೆ. ಇಂಗ್ಲಿಷ್ ಭಾಷೆಯಲ್ಲಿ ಚಿಟ್ಟೆ ಮತ್ತು ಎಲೆಗಳ ಈ ಚಿತ್ರಗಳು –



beeleaf – belief ಎಂಬುದನ್ನು ಹೇಳುತ್ತವೆ. ಇಂತಹ ಒಂದು ಪ್ರಕ್ರಿಯೆ ಬರಹದ ಬೆಳವಣಿಗೆಯ ಘಟ್ಟದಲ್ಲಿ ನಡೆಯಿತೆಂದು ವಿದ್ವಾಂಸರು ಸಕಾರಣವಾಗಿ ಹೇಳಿದ್ದಾರೆ. ಈಜಿಪ್ಟಿನ ಬರಹದಲ್ಲಿ ನಾವಿನ್ನೂ ಇಂತಹ ಚಿತ್ರಗಳನ್ನು ಗುರುತಿಸಬಹುದು.



ಆ ಭಾಷೆಯಲ್ಲಿ ಒಂದು ಮುಖದ ಚಿತ್ರ ಬರೆದರೆ ಅದು ಮುಖವನ್ನು ಹೇಳದೆ ಈಜಿಪ್ಷಿಯನ್ ಭಾಷೆಯಲ್ಲಿ ಮುಖ ಎಂಬ ಅರ್ಥವಿದ್ದ 'her' (ಹೆರ್) ಎಂಬ ಶಬ್ದವನ್ನು ಹೇಳುತ್ತದೆ.



ಈ ಚಿತ್ರ ಹೋಗು ಎಂಬುದಕ್ಕಿರುವ ಶಬ್ದವನ್ನು ಹೇಳುತ್ತದೆಯೇ ಹೊರತು ಪಾದಗಳನ್ನಲ್ಲ ಹಾಗೆಯೇ –



ಈ ಚಿತ್ರ ಕಣ್ಣನ್ನು ಹೇಳದೇ ಕಣ್ಣು ಎಂಬ ಅರ್ಥದಲ್ಲಿರುವ ಈಜಿಪ್ಷಿಯನ್ ಭಾಷೆಯ ಶಬ್ದವನ್ನು ಹೇಳುತ್ತದೆ. ಚಿತ್ರ ಮತ್ತು ಭಾಷೆಗಳಿಗೆ ಸಂಬಂಧ ಉಂಟಾದುದನ್ನು ಹೇಳುವ ಖಚಿತ ನಿದರ್ಶನ ಇಲ್ಲಿ ಸಿಗುತ್ತದೆ.

ಇಂತಹ ಚಿತ್ರಗಳು ಈಜಿಪ್ಷಿಯನ್ ಬರಹದಲ್ಲಿ 'hieroglyphs' (ಪವಿತ್ರ ಲೇಖನ)ದಲ್ಲಿ ಸಿಗುತ್ತದೆ. 'ರೀಬಸ್ ಬರಹ'ದಲ್ಲಿ bee ಎನ್ನಲು ಚಿಟ್ಟೆಯ ಚಿತ್ರ ಬರೆದರೆ 'ಬಿ' ಎಂಬುದು ಬರುವಲ್ಲೆಲ್ಲ ಅದರ ಚಿತ್ರವನ್ನೇ ಬರೆಯಬಹುದೆಂಬುದು ಸ್ಪಷ್ಟವಾಗಿದೆ. ಹಾಗೆಯೇ –



ಈ ಚಿತ್ರವನ್ನು 'her' ಎಂಬ ಉಚ್ಚಾರಣೆ ಬರುವಲ್ಲೆಲ್ಲ ಬರೆಯಲು ಸಾಧ್ಯವಿದೆ.

೪) ಪದಲೇಖನ – ಮೇಲಿನ ಮೂರು ಘಟ್ಟಗಳ ನಂತರ ಬರವಣಿಗೆಯ ವೇಗ ಕ್ಷಿಪ್ರವಾಗಿ ನಡೆದಂತೆ ಕಾಣುತ್ತದೆ. ನಾಲ್ಕನೇ ಘಟ್ಟದಲ್ಲಿ ಒಂದು ಚಿತ್ರ ಆ ಭಾಷೆಯ ಒಂದು ಪದವನ್ನು ಹೇಳಲು ಪ್ರಾರಂಭಿಸಿತು. ಇದರ ಸ್ಪಷ್ಟ ಬರಹವನ್ನು ಚೀನಾ, ಜಪಾನೀ ಬರಹಗಳಲ್ಲಿ ನೋಡುತ್ತೇವೆ. ಚೀನಾ ದೇಶದ ಬರಹ ವಿಧಾನವನ್ನು Logography (word writing) 'ಪದಲೇಖನ' ಎನ್ನುತ್ತೇವೆ. ಇಲ್ಲಿ ಒಂದೊಂದು ಪದಕ್ಕೂ ಪ್ರತ್ಯೇಕ ಚಿತ್ರ ಬರೆಯಲಾಗುತ್ತದೆ. ಇಲ್ಲಿ ಬರಹದ ಚಿಹ್ನೆ ಆ ಭಾಷೆಯ ಪದಗಳ ಪ್ರಮಾಣಕ್ಕೆ ಸೀಮಿತವಾದದ್ದು. ಇಂಗ್ಲಿಷಿನಲ್ಲಿ ೨೬ ಚಿಹ್ನೆಗಳಿಂದ ಸಾವಿರಾರು ಶಬ್ದ ಬರೆಯಬಹುದು. ಕನ್ನಡದಲ್ಲಿಯೂ ಸಹ ಪರಿಮಿತ ಚಿಹ್ನೆಗಳಿಂದ ಅನೇಕ ಶಬ್ದಗಳನ್ನು ಬರೆಯಬಹುದು. ಪದ ಲೇಖನದಲ್ಲಿ ಹೀಗಾಗಲು ಸಾಧ್ಯವಿಲ್ಲ. ಅಲ್ಲಿ ಚಿಹ್ನೆಗಳು ಶಬ್ದಗಳಿಗೆ ಸಮಾನ ಪರಿಮಾಣದಲ್ಲಿರುತ್ತವೆ.

ಬೆಳೆಯದ ಭಾಷೆಯೊಂದರಲ್ಲಿ ೧೦ ರಿಂದ ೧೫,೦೦೦ ಶಬ್ದಗಳು. ಬೆಳೆದ ಭಾಷೆಯೊಂದರಲ್ಲಿ ೩೫ರಿಂದ ೪೦,೦೦೦ ಶಬ್ದಗಳು ಇರುತ್ತವೆ. ಕನ್ನಡದಲ್ಲಿ ೨೫,೦೦೦ ಶಬ್ದಗಳಿವೆ. ಈ ಶಬ್ದಗಳನ್ನೆಲ್ಲ ನಾವು ಸುಮಾರು ೧೦೦ ಚಿಹ್ನೆಗಳಿಂದ ಬರೆಯುತ್ತೇವೆ. ಬೇರೆ ಬೇರೆ ಪದಗಳ ಬರಹದಲ್ಲಿ ಚಿಹ್ನೆಗಳ ಆವರ್ತನೆ ಇರುತ್ತದೆ. ಚೀನಿಯರು ೩೫,೦೦೦ ಚಿಹ್ನೆಗಳನ್ನೂ ಕಲಿಯಬೇಕಾಗುತ್ತದೆ. ಅಲ್ಲಿ ಒಂದು ಚಿಹ್ನೆ ಒಂದು ಪದದ ಸಂಕೇತ. ಇದು ವಿಲಕ್ಷಣವಾದದ್ದು. ಚೀನೀ ಭಾಷೆಯಲ್ಲಿ ಅರ್ಥವನ್ನು ಖಚಿತಪಡಿಸುವ ಪ್ರತ್ಯಯಗಳಿಲ್ಲ. ಇಂಗ್ಲಿಷ್ ಭಾಷೆ ಭಾಗಶಃ Isolated Language. ಆದರೆ ಚೀನೀ ಭಾಷೆ ಸಂಪೂರ್ಣ Isolated Language. ಹಾಗೆಯೇ ಬರಹದ ದೃಷ್ಟಿಯಿಂದ ಒಂದು ಪದಕ್ಕೆ ಒಂದೇ ಚಿಹ್ನೆ. ಚೀನಾದಲ್ಲಿ ಶಬ್ದ ಲಿಪಿಯನ್ನು ಬಳಸಲಾಗುವುದರಿಂದ ಬರಹವನ್ನು ಕಲಿಯಬೇಕಾದ ಮಕ್ಕಳು ಅಕ್ಷರಸ್ಥರಾಗಬೇಕಾದರೆ ೩೦೦೦–೪೦೦೦ ಚಿಹ್ನೆಗಳನ್ನಾದರೂ ಕಲಿಯಬೇಕು. ವಿದ್ಯಾವಂತರೆನಿಸಿಕೊಳ್ಳಬೇಕಾದರೆ ೮೦೦೦ ಚಿಹ್ನೆಗಳನ್ನಾದರೂ ಕಲಿಯಬೇಕು. ವಿದ್ವಾಂಸರೆನಿಸಿಕೊಳ್ಳಬೇಕಾದರೆ ೧೦–೧೫೦೦೦ ಚಿಹ್ನೆಗಳನ್ನು ಕಲಿಯಬೇಕು. ಇದಕ್ಕೆ ವಿಶೇಷವಾದ ಸ್ಮೃತಿಶಕ್ತಿಯ ಅಗತ್ಯವಿದೆ. ಶ್ರಮದ ಅಗತ್ಯವೂ ಅಷ್ಟೇ. ಅವರು ಇದಕ್ಕೆ ತಮ್ಮದೇ ಆದ ವಿಧಾನವನ್ನೂ ಅನುಸರಿಸುತ್ತಾರೆ. ಉದಾ.ಗೆ

 ಈ ಚಿಹ್ನೆಯನ್ನು ಮರ ಎಂಬುದಕ್ಕೆ ಬರೆದರೆ. ಕಾಡನ್ನು ಸೂಚಿಸಲು  ಈ ಚಿಹ್ನೆಯ ಆವರ್ತನೆ ಮಾಡಲಾಗುತ್ತದೆ. ಹಾಗೆಯೇ ಸ್ತ್ರೀಯನ್ನು ಸೂಚಿಸುವ ಚಿತ್ರದ ಆವರ್ತನೆ ಜಗಳವನ್ನು ಹೇಳುತ್ತದೆ.

ಚೀನೀ ಬರಹ ಲಿಪಿ ಬೆಳವಣಿಗೆಯ ಒಂದು ಘಟ್ಟಕ್ಕೆ ಸಂಕೇತವಾಗಿ ನಿಂತಿದೆ. ಮರ ಎನ್ನುವ ಶಬ್ದವನ್ನು ಬರೆಯುವುದಕ್ಕೆ ಉಪಯೋಗಿಸಿಕೊಳ್ಳಲಾಗುವ ಈ ಚಿಹ್ನೆ ಮೂಲತಃ ಮರದ ಚಿತ್ರವೇ ಆಗಿದ್ದು ಸರಳಗೊಂಡು ಈ ಆಕಾರ ಪಡೆದಿದೆ. ಹಾಗೆಯೇ 'ಅ', 'ಕ' ಇಂತಹವು ಮೂಲತಃ ಯಾವುದೋ ಪ್ರಾಣಿ, ವಸ್ತುವಿನ ಚಿತ್ರಕ್ಕೆ ಸಂಕೇತವಾಗಿ ಮುಂದೆ ಅವು ಸರಳಗೊಳ್ಳುತ್ತಾ ಈ ಆಕಾರ ಪಡೆದಿದೆ. ನಮ್ಮ ಅಕ್ಷರಗಳು ಒಂದು ಕಾಲದಲ್ಲಿ ಚಿತ್ರಗಳೇ ಆಗಿದ್ದವು. ಇದು ಯಾವುದೇ ಭಾಷೆಗೂ ಅನ್ವಯಿಸುವಂತಹದು.

೫) ಉಚ್ಚಾರಣಾತ್ಮಕ ಲೇಖನ – (Syllabic writing) – ಪದಲೇಖನದಲ್ಲಿ ಬರವಣಿಗೆ ಸ್ಮೃತಿ ಕಷ್ಟ. ಮಾನವನ ಸ್ಮೃತಿ ಶಕ್ತಿ ಪರಿಮಿತವಾದದ್ದು. ಇದನ್ನು ಸುಲಭಗೊಳಿಸಲು ಉಚ್ಚಾರಣಾತ್ಮಕ ಲೇಖನ ಬಳಕೆಗೆ ಬಂದಿತು. ಇದು ಪದ ಲೇಖನದ ಸರಳೀಕೃತ ಮುಂದಿನ ಘಟ್ಟ. ಇದು ಪದವನ್ನು ಹೇಳದೆ ಉಚ್ಚಾರಣಾಂಶವನ್ನು ಹೇಳುತ್ತದೆ. ಇಲ್ಲಿ ಒಂದು ಚಿಹ್ನೆ ಸ್ವರಕ್ಕೆ, ಸ್ವರ ಸಂಯುಕ್ತ ವ್ಯಂಜನಕ್ಕೆ ಸಂಕೇತವಾಗುತ್ತದೆ. ಇಲ್ಲಿ ಸ್ವರ ಮುಖ್ಯ. ಅದರ ಹಿಂದೆ ವ್ಯಂಜನಗಳಿರಬಹುದು; ಮುಂದೆಯೂ ಇರಬಹುದು. ಹಿಂದೆ ಅಥವಾ ಮುಂದೆ ವ್ಯಂಜನಗಳನ್ನು ಐಚ್ಛಿಕವಾಗಿ ಹೊಂದಿರುವ ಉಚ್ಚಾರ ಸ್ವರ ಎನಿಸಿಕೊಳ್ಳುತ್ತದೆ. ಈ ಘಟ್ಟದಲ್ಲಿ ಚಿಹ್ನೆ ಒಂದು ಪದವನ್ನು ಹೇಳದೆ ಒಂದು ಉಚ್ಚಾರಾಂಶವನ್ನು ಹೇಳುತ್ತದೆ.

ಭಾರತೀಯ ವರ್ಣಮಾಲೆ ಸ್ವರಗಳನ್ನು ಹೇಳುವುದಿಲ್ಲ. ಉಚ್ಚಾರಾಂಶವನ್ನು ಹೇಳುತ್ತದೆ. ಭಾಷೆಯಲ್ಲಿ ಬಳಕೆಯಾಗುವ ಉಚ್ಚಾರಾಂಗದಿಂದ ಹೊರಡುವ ಘಟಕಗಳು ಸ್ವರಗಳು. 'ಅ' ಎಂಬುದು ಒಂದು ಸ್ವರ. 'ಕ' ಎಂಬುದು ಸ್ವರವಲ್ಲ. ಸ್ವರ ಸಂಕೇತಗಳನ್ನು ನಾವು ಮಕ್ಕಳಿಗೆ ಕಲಿಸುವುದಿಲ್ಲ. ಉಚ್ಚಾರಾಂಶಗಳನ್ನು ಕಲಿಸುತ್ತೇವೆ.

ಸ್ವನ (phone)

ಸ್ವರ —— ವ್ಯಂಜನ

'ಕ್' ಎಂಬ ವ್ಯಂಜನ ವರ್ಣಮಾಲೆ (Alphabet)

ಕ ಕಾ ಕಿ ಕೀ ಇವೆಲ್ಲ ಉಚ್ಚಾರಾಂಶಗಳು.

ಉಚ್ಚಾರಾಂಶ ಲೇಖನದಲ್ಲಿ ಒಂದು ಚಿಹ್ನೆ ಕೇವಲ ಸ್ವನವನ್ನು ಹೇಳದೆ ಅದರ ಉಚ್ಚಾರಾಂಶವನ್ನು ಹೇಳುತ್ತದೆ. ಆ ಉಚ್ಚಾರಾಂಶದಲ್ಲಿ ಒಂದು ಅಥವಾ ಹೆಚ್ಚು ಸ್ವನಗಳೂ ಇರಬಹುದು. Syllabic ಅಥವಾ ಉಚ್ಚಾರಾಂಶ ಲೇಖನಕ್ಕೆ ಉತ್ತಮ ನಿದರ್ಶನವೆಂದರೆ ಭಾರತೀಯ ಲಿಪಿಗಳು.

೬) ವರ್ಣಮಾಲಾತ್ಮಕ ಲೇಖನ ಅಥವಾ ಸ್ವನಾತ್ಮಕ ಲೇಖನ (Alphabetical writings): ಇದು ಬರವಣಿಗೆಯ ವಿಕಾಸದ ಕೊನೆಯ ಘಟ್ಟ. ಗ್ರೀಕ್ ಬರಹದಲ್ಲಿ ಕಾಣಿಸಿತು. ಈಜಿಪ್ಷಿಯನ್ ಭಾಷೆಯಲ್ಲಿ ೨೪ ಸಂಕೇತಗಳಿವೆ. ಅವು ಸ್ವರ ಸಹಿತ ವ್ಯಂಜನಗಳನ್ನು ಸಂಕೇತಿಸುತ್ತವೆ. ಈ ಸಂಕೇತಗಳನ್ನು ಮುಂದೆ ಬಂದ ಪಶ್ಚಿಮ ಸೆಮೆಟಿಕ್ ಜನಾಂಗಕ್ಕೆ ಸೇರಿದ

ಪೊನೀಷಿಯನ್ನರು ತೆಗೆದುಕೊಂಡರು. ಇವರು ಮಾಡಿಕೊಂಡ ಬದಲಾವಣೆಯೆಂದರೆ ಇವರು ಬಳಸಿಕೊಂಡ ಸಂಕೇತಗಳನ್ನು ಕೇವಲ ವ್ಯಂಜನಗಳಿಗೆ ಸೀಮಿತಗೊಳಿಸಿಕೊಂಡರು. ಉಳಿದುದನ್ನು ಕೈಬಿಟ್ಟರು. ಸ್ವರದ ಅವಶ್ಯಕತೆ ಪೊನೀಷಿಯನ್ ಭಾಷೆಗಿಲ್ಲ. ಮುಂದೆ ಗ್ರೀಕರು ಪೊನೀಷಿಯನ್ನರ ವ್ಯಂಜನಗಳಲ್ಲಿ ಅರ್ಧವನ್ನು ಸ್ವರ ಸಂಕೇತಗಳನ್ನಾಗಿಯೂ, ಉಳಿದರ್ಧವನ್ನು ವ್ಯಂಜನಗಳ ಸಂಕೇತಗಳನ್ನಾಗಿಯೂ ಬಳಸಿಕೊಂಡರು. ಗ್ರೀಕರಲ್ಲಿ ಹೀಗೆ ಸ್ವರ ಹಾಗೂ ವ್ಯಂಜನಗಳಿಗೆ ಪ್ರತ್ಯೇಕ ಸಂಕೇತ ಪ್ರಾರಂಭವಾಯಿತು.

ನಮ್ಮ ಬರಹ ವಿಧಾನ 'Syllobic' ಘಟ್ಟದಲ್ಲಿ ಬಂದು ನಿಂತಿದೆ. ಸ್ವನಾತ್ಮಕ ಅಥವಾ ವರ್ಣಮಾಲಾತ್ಮಕ ಲೇಖನದ ಘಟ್ಟವನ್ನದು ತಲುಪಿಲ್ಲ. ಸ್ವನಾತ್ಮಕ ಲೇಖನದ ಪಾರಿಭಾಷಿಕ ವಿವರಣೆ ಬರಹ ವ್ಯವಸ್ಥೆಯಲ್ಲಿ ಸ್ವರ ಮತ್ತು ವ್ಯಂಜನಗಳಿಗೆ ಪ್ರತ್ಯೇಕ ಚಿಹ್ನೆ ಇರುವುದಲ್ಲದೆ, ಬರಹದಲ್ಲಿ ಪ್ರತ್ಯೇಕವಾಗಿ ಆ ಚಿಹ್ನೆಗಳನ್ನು ತೋರಿಸುವಂತಿರಬೇಕು. ನಮ್ಮಲ್ಲಿ ಸ್ವರ ಮತ್ತು ವ್ಯಂಜನಗಳು ಪ್ರತ್ಯೇಕ ಚಿಹ್ನೆಗಳನ್ನು ಹೊಂದಿದ್ದರೂ ಬರಹದಲ್ಲಿ ನಾವು ಅವುಗಳನ್ನು ಬಿಡಿಸಿ ತೋರಿಸುವುದಿಲ್ಲ. ಇಂಗ್ಲಿಷಿನಲ್ಲಿ ಬಿಡಿಸಿ ತೋರಿಸುತ್ತಾರೆ. ಉದಾ. ರಾಮ ಎಂಬುದನ್ನು ರ್ + ಆ + ಮ್ + ಅ ಎಂದು ಬರೆಯಬೇಕಾಗುತ್ತದೆ. ನಮ್ಮ ಬರಹ ವ್ಯವಸ್ಥೆಯಲ್ಲಿ ರಾಮ ಎಂದೇ ಬರೆಯುತ್ತೇವೆ. ಇಂಗ್ಲಿಷಿನಲ್ಲಾದರೆ Rama ಎಂದು ಬಿಡಿಸಿ ಬರೆಯುತ್ತಾರೆ. ಇದು ಭಾರತೀಯ ಮತ್ತು ಇತರ ಯುರೋಪಿಯನ್ ಭಾಷೆಗಿರುವ ಮೂಲಭೂತ ವ್ಯತ್ಯಾಸ.

ಸ್ವನಾತ್ಮಕ ಲೇಖನದ ಮೂಲತತ್ವ, ಸ್ವರ ವ್ಯಂಜನಗಳಿಗೆ ಪ್ರತ್ಯೇಕ ಚಿಹ್ನೆ ಇದ್ದು ಬರವಣಿಗೆಯಲ್ಲಿ ಈ ಚಿಹ್ನೆ ಸ್ಪಷ್ಟವಾಗಿ ವ್ಯಕ್ತವಾಗಬೇಕು. ಆಗ ಅದು ಸ್ವನಾಭಿಲೇಖನವಾಗುತ್ತದೆ. ಆಲ್ಫಬೆಟ್ ಮೊದಲು ಕಾಣಿಸಿಕೊಂಡದ್ದು ಗ್ರೀಕರಲ್ಲಿ. ಸೆಮೆಟಿಕ್ ಚಿಹ್ನೆ ತೆಗೆದುಕೊಂಡ ಗ್ರೀಕರು ಸ್ವರ ಚಿಹ್ನೆ ಸೇರಿಸಿಕೊಂಡು ಮೊದಲು ಸ್ವರ ಮತ್ತು ವ್ಯಂಜನಗಳನ್ನು ಬಿಡಿಸಿ ಬರೆಯುವ ಪ್ರಯತ್ನ ಮಾಡಿದರು. ಅವರು ಸ್ವರಗಳಿಗೆ ಚಿಹ್ನೆಗಳನ್ನು ಕಲ್ಪಿಸಿದರು. ಅವರಿಂದ ರೋಮನ್ನರು, ರೋಮನ್ನರಿಂದ ಇಂಗ್ಲಿಷರು ಅವುಗಳನ್ನು ತೆಗೆದುಕೊಂಡರು. ಇಂದು ಇಂಗ್ಲಿಷ್ ಬರಹವು ಬರಹದ ಪರಿಪೂರ್ಣ ಸ್ಥಿತಿ ಎನ್ನಲಾಗುತ್ತದೆ. ಆದರೆ ಯಾವುದಕ್ಕೇ ಆಗಲಿ ಪರಿಪೂರ್ಣತೆಯೆಂಬುದು ಅಸಾಧ್ಯ. ಆ ಭಾಷೆಯಲ್ಲಿ ಅವ್ಯವಸ್ಥೆ ಬಹಳ. ಆ ಬರಹದ ಉಚ್ಚಾರಣೆ ಬಹು ಕಷ್ಟ, ಉದಾ Cut, put, ಇತ್ಯಾದಿ. ನಮ್ಮಲ್ಲಿ ಹೊಸ ಶಬ್ದದ ಉಚ್ಚಾರಣೆ ಸುಲಭ. ಆದರೂ ಇಂಗ್ಲಿಷ್ ಲಿಪಿ ಉಚ್ಚಾರಣಾ ಸುಧಾರಣೆಯನ್ನು ತಂದುಕೊಂಡರೆ ಪರಿಪೂರ್ಣತೆಗೆ ಹತ್ತಿರ ಹೋಗುತ್ತದೆ.

### ಅಂತರರಾಷ್ಟ್ರೀಯ ಸ್ವನಾಭಿಲೇಖನ (Internatieonal phonetic Alphabet)

ಹಿಂದೆ ಹೇಳಿದಂತೆ ಯುರೋಪಿನ ಬರಹದ ವ್ಯವಸ್ಥೆಯಲ್ಲಿ ಒಂದು ಸ್ವನವನ್ನು ಹೇಳಲು ೨ – ೩ ಚಿಹ್ನೆ ಬಳಸಲಾಗುತ್ತದೆ. ಅಥವಾ ೨ – ೩ ಸ್ವನವನ್ನು ಹೇಳಲು ಒಂದೇ ಚಿಹ್ನೆ ಬಳಕೆಯಾಗುತ್ತದೆ. ಈ ವ್ಯವಸ್ಥೆ ಶಾಸ್ತ್ರೀಯವಾದ ಚರ್ಚೆಗೆ ಅಡ್ಡಿಯನ್ನೊದಗಿಸುತ್ತದೆ. ಬರಹ ಭಾಷೆಯನ್ನು ಪ್ರಾಮಾಣಿಕವಾಗಿ ಅನುಸರಿಸಬೇಕು. ಕನ್ನಡದಲ್ಲಿ ಸಹ ಇಂತಹ ಅವ್ಯವಸ್ಥೆ ಸ್ವಲ್ಪ ಇದೆ. ಉದಾ –ತಂದೆ – ತಂದೆ, ಕರಿ – ಕರಿ, ಇತ್ಯಾದಿ ಇದನ್ನು ನಾವು ಉಚ್ಚರಿಸುವಾಗ ವ್ಯತ್ಯಾಸವನ್ನು ಎರಡರ ನಡುವೆ ಗುರುತಿಸಬಹುದು. ಇಂಗ್ಲಿಷಿನಲ್ಲಿ ಹೀಗಾಗುವುದು ಸಾಧ್ಯವೇ ಇಲ್ಲ. ಈ ಅವ್ಯವಸ್ಥೆಯ ನಿವಾರಣೆಗಾಗಿ ಭಾಷಾ ವಿಜ್ಞಾನಿಗಳು ಪ್ರಪಂಚದ ಎಲ್ಲಾ ಭಾಷೆಯ ಸ್ವನಗಳನ್ನೂ ಪಟ್ಟಿ ಮಾಡಿ ಒಂದೊಂದು ಸ್ವನಕ್ಕೂ ಒಂದೊಂದು ಪ್ರತ್ಯೇಕ ಚಿಹ್ನೆಯನ್ನು ಕಲ್ಪಿಸಿದರು. ಒಂದು ಸ್ವನಕ್ಕೆ ಒಂದು ಚಿಹ್ನೆ. ಇದರ ಹೊರತು ಅದಕ್ಕೆ ಬೇರೆ ಮೌಲ್ಯವಿಲ್ಲ.

ಉದಾ: ಇಂಗ್ಲಿಷಿನ 'I' ಎಂಬುದು 'ಇ' ಎಂಬುದನ್ನು, 'E' ಎಂಬುದು 'ಎ' ಎಂಬುದನ್ನೂ, 'L' ಎಂಬುದು 'ಳ್' ಎಂಬುದನ್ನೂ 'K' ಎಂಬುದು 'ಕ್' ಎಂಬುದನ್ನೂ, ವಿಸರ್ಗದ ':' ಈ ಚಿಹ್ನೆ ದೀರ್ಘವನ್ನೂ ಹೇಳುತ್ತದೆ. ಹೀಗೆ ಅವರು ಸ್ವರ, ವ್ಯಂಜನಗಳನ್ನು ಬೇರೆ ಬೇರೆ ಪಟ್ಟಿ ಮಾಡುತ್ತಾರೆ. ಅದರಲ್ಲೊಂದು ವ್ಯವಸ್ಥೆಯಿದೆ. ಅವುಗಳಿಗೆ ಆಯಾ ಉಚ್ಚಾರದ ಹೊರತು ಬೇರೆ ಮೌಲ್ಯವಿಲ್ಲ. ಅಲ್ಲಿ ಯಾವ ಚಿಹ್ನೆ ಯಾವ ಉಚ್ಚಾರವನ್ನು ಹೇಳುವುದೆಂಬುದರಲ್ಲಿ ಸಂದೇಹವೇ ಇಲ್ಲ. ಇದು ಒಂದೇ ಭಾಷೆಗೆ ಸೀಮಿತವಾಗಿರದೆ ಎಲ್ಲ ಭಾಷೆಗಳಿಗೂ ಅನ್ವಯಿಸುತ್ತದೆ. ಹೀಗೆ ಕಲ್ಪಿಸಿಕೊಳ್ಳಲಾದ ಲಿಪಿಯೇ ಅಂತರರಾಷ್ಟ್ರೀಯ ಸ್ವನಾಭಿಲೇಖನ. ಭಾಷಾ ವಿಜ್ಞಾನದ ಬರಹದಲ್ಲಿ ಇದನ್ನು ಹೆಚ್ಚು ಬಳಸಲಾಗುತ್ತದೆ.

### ಅಂತರ್ರಾಷ್ಟ್ರೀಯ ಸ್ವನಾಭಿಲೇಖನದ ಅನುಕೂಲತೆಗಳು

೧. ಉಚ್ಚಾರಣೆಯಲ್ಲಿ ತಲೆದೋರಬಹುದಾದ ಗೊಂದಲಗಳ ನಿವಾರಣೆಯಾಗುತ್ತದೆ. Ti: n ಎಂಬುದು ಟೈನ್ ಎಂದೋ, ಟೀನ್ ಎಂದೋ ತೈನ್ ಎಂದೋ ಹೇಳದೆ ತೀನ್ ಎಂಬುದನ್ನೇ ಹೇಳುವ ಚಿಹ್ನೆಯಾಗಿದೆ.

೨. ಚಿಹ್ನೆಗಳು ಒಂದೇ ಭಾಷೆಗೆ ಸೀಮಿತವಾಗದೆ, ಎಲ್ಲ ಭಾಷೆಯ ಲಿಪಿಗೂ ಅನ್ವಯಿಸುತ್ತವೆ.

೩. ಹೊಸ ಶಬ್ದವೊಂದನ್ನು ಈ ಆಧಾರದ ಮೇಲೆ ಕಲ್ಪಿಸಿಕೊಳ್ಳಬಹುದು. ಸದ್ಯಕ್ಕೆ ಈ ಲಿಪಿ ವೈಜ್ಞಾನಿಕವಾಗಿ ಬಳಕೆಯಾಗುತ್ತಿರುವಂತಹದು.

❑❑

# ಕಿಟೆಲ್ – ಬಿ.ಎಲ್. ರೈಸರ ಸ್ನೇಹ ಸಂಬಂಧ

– ಎಸ್.ಎಲ್. ಶ್ರೀನಿವಾಸಮೂರ್ತಿ

ಕನ್ನಡ ಭಾಷೆ, ಸಾಹಿತ್ಯಗಳಿಗೆ ಮಹತ್ತರವಾದ ಸೇವೆಯನ್ನು ಸಲ್ಲಿಸಿದ ಪಾಶ್ಚಾತ್ಯ ವಿದ್ವಾಂಸರ ಪಟ್ಟಿಯಲ್ಲಿ ಥಟ್ಟನೆ ನೆನಪಿಗೆ ಬರುವ ಹೆಸರುಗಳು ಫರ್ಡಿನಾಂಡ್ ಕಿಟೆಲ್ ಮತ್ತು ಶಾಸನ ತಜ್ಞ ಬಿ.ಎಲ್.ರೈಸರದು. ಇಬ್ಬರೂ ಸಮಕಾಲೀನರು (ಕಿಟೆಲ್ ಹುಟ್ಟಿದ್ದು ೧೮೩೨ ರಲ್ಲಿ, ರೈಸರ ಜನನ ೧೮೩೭ರಲ್ಲಿ) ಕಿಟೆಲ್ ಕ್ರೈಸ್ತ ಮಿಷನರಿ; ರೈಸರು ಶಿಕ್ಷಣಾಧಿಕಾರಿ, ಶಾಸನಶಾಸ್ತ್ರಜ್ಞ, ಇಬ್ಬರ ವೃತ್ತಿಗಳು ಬಹುಮಟ್ಟಿಗೆ ಬೇರೆ ಬೇರೆಯಾದರೂ ಅವರಿಬ್ಬರಲ್ಲಿಯೂ ಕಾಣಬಹುದಾದ ಸಮಾನ ಅಂಶಗಳೆಂದರೆ ಕನ್ನಡ ಭಾಷೆಯ ಬಗೆಗೆ ಅತೀವವಾದ ಪ್ರೀತಿ, ಕನ್ನಡ ಸಂಸ್ಕೃತಿಯನ್ನು ಕುರಿತಾದ ಆಸಕ್ತಿ ಮತ್ತು ಪ್ರಾಚೀನ ಕನ್ನಡ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವಲ್ಲಿ ಇದ್ದ ಶ್ರದ್ಧೆ. ಭೌಗೋಳಿಕವಾಗಿ ಇಬ್ಬರೂ ಸಾಕಷ್ಟು ದೂರದ ಪ್ರದೇಶಗಳಲ್ಲಿ ವಾಸಿಸುತ್ತಿದ್ದರಾದರೂ ಕನ್ನಡದ ಕೆಲಸದ ಸಂದರ್ಭ ಬಂದಾಗ ಒಬ್ಬರಿಗೊಬ್ಬರು ನೆರವಾಗುತ್ತಿದ್ದರು ಎಂಬ ಅಂಶವನ್ನು ಕರ್ನಾಟಕ ರಾಜ್ಯ ಪತ್ರಗಾರದಲ್ಲಿನ ದಾಖಲೆಗಳು ಸಾಬೀತು ಪಡಿಸಿವೆ. ಅದರ ವಿವರಗಳನ್ನು ಮುಂದೆ ನಿರೂಪಿಸಿದೆ.

ಕಿಟೆಲ್ ಮತ್ತು ರೈಸರಿಗೆ ಸ್ನೇಹ – ಪರಿಚಯ ಆರಂಭವಾದದ್ದು ಎಲ್ಲಿ, ಯಾವಾಗ ಎಂಬುದನ್ನು ನಿಖರವಾಗಿ ನಿರೂಪಿಸಬಲ್ಲ ದಾಖಲೆಗಳಾವುವೂ ಸದ್ಯಕ್ಕೆ ದೊರೆತಿಲ್ಲ. ಆದರೆ ಬೈಬಲ್‌ನ ಕನ್ನಡ ಭಾಷಾಂತರ, ಬಾಸೆಲ್ ಮಿಷನ್ ವತಿಯಿಂದ ಪ್ರಕಟವಾಗುತ್ತಿದ್ದ ಕನ್ನಡ ಕೃತಿಗಳು, ಕಿಟೆಲರೇ ಬರೆದ ಸಣ್ಣ ಕರ್ನಾಟಕ ಕಾವ್ಯಮಾಲೆ. ಶಬ್ದಮಣಿದರ್ಪಣಂನ ಸಂಪಾದನೆ ಮತ್ತು ಇಂಡಿಯನ್ ಆ್ಯಂಟಿಕ್ವೆರಿ ಮುಂತಾದ ಸಂಶೋಧನ ಪತ್ರಿಕೆಗಳಲ್ಲಿನ ಅವರ ಲೇಖನಗಳನ್ನು ಗಮನಿಸಿ ರೈಸರಿಗೆ ಕಿಟೆಲ್ಲರ ವ್ಯಕ್ತಿತ್ವದ ಪರಿಚಯವಾಗಿರಬೇಕು. ಮುಂದೆ ೧೮೭೫ರಲ್ಲಿ ಕಿಟೆಲರು 'ನಾಗವರ್ಮನ ಕನ್ನಡ ಛಂದಸ್ಸು' ಎಂಬ ಕೃತಿಯನ್ನು ಸಂಪಾದಿಸಿದಾಗ ಅವರು ಬಳಸಿಕೊಂಡ ಹದಿನಾಲ್ಕು ಹಸ್ತಪ್ರತಿಗಳಲ್ಲಿ ನಾಲ್ಕು ಕಾಗದದ ಹಸ್ತಪ್ರತಿಗಳನ್ನು ಒದಗಿಸಿದವರು ಬಿ.ಎಲ್. ರೈಸರು ಎಂಬ ಉಲ್ಲೇಖವಿದೆ. (ಕೃತಿಯ ಮುನ್ನುಡಿ, ಪು. III) ಹಾಗಾಗಿ ಆ ವೇಳೆಗಾಗಲೇ ಇವರಿಬ್ಬರ ಸ್ನೇಹ ಆರಂಭವಾಗಿತ್ತು ಎನ್ನಬಹುದು.

ರೈಸ್ ಮತ್ತು ಕಿಟೆಲರ ಸ್ನೇಹವನ್ನು ಕುರಿತಾದ ಅತ್ಯಂತ ಖಚಿತವಾದ ದಾಖಲೆ ನಮಗೆ ದೊರೆಯುವುದು ಕಿಟೆಲರ ಕನ್ನಡ–ಇಂಗ್ಲಿಷ್ ನಿಘಂಟಿನ ರಚನೆಯ ಹಿಂದಿನ ವಿವರಗಳಲ್ಲಿ. ನಿಜವಾದ ಸಂಗತಿ ಎಂದರೆ ಇವರಿಬ್ಬರ ಸ್ನೇಹದ ಕಥೆ ಎನ್ನುವುದು ಕಿಟೆಲ್‌ಕೋಶದ ರಚನೆಯ ಕಥೆಯೇ ಆಗಿದೆ. ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿನ GM 31 of 1875 ಮತ್ತು GM 139 of 1898 ಎಂಬ ಕಡತಗಳು ಈ ವಿವರಗಳನ್ನು ನಮಗೆ ನೀಡುತ್ತವೆ.

ಕಿಟೆಲ್ ಕೋಶ ತಯಾರಾಗುವುದಕ್ಕೆ ಮುನ್ನ ಕನ್ನಡದಲ್ಲಿ ಪ್ರಮುಖವಾಗಿ ಇದ್ದದ್ದು ಎರಡು ನಿಘಂಟುಗಳು ಮಾತ್ರ ಮೊದಲನೆಯದು ೧೮೨೪ರಲ್ಲಿ ರೀವ್ ಸಂಪಾದಿಸಿದ ನಿಘಂಟು. ಇದನ್ನು ೧೮೪೧ರಲ್ಲಿ ಜೆ. ಗ್ಯಾರೆಟ್ ಎಂಬಾತ ಪರಿಷ್ಕರಿಸಿ ಮರುಮುದ್ರಿಸಿದ. ಎರಡನೆಯದು ಡ್ಯಾನಿಯಲ್ ಸ್ಯಾಂಡರ್ಸನ್ ಎಂಬಾತ ಗ್ಯಾರೆಟ್‌ನ ನಿಘಂಟನ್ನು ಪರಿಷ್ಕರಿಸಿ ಪ್ರಕಟಿಸಿದ ಕೃತಿ (೧೮೫೮).

ಸ್ಯಾಂಡರ್ಸನ್ನನ ನಿಘಂಟಿನ ಪ್ರತಿಗಳು ೧೮೭೮ರ ವೇಳೆಗೆ ಲಭ್ಯವಿರಲಿಲ್ಲ. ಅಷ್ಟೇ ಅಲ್ಲದೆ ತತ್ಕಾಲಿನ ಅಗತ್ಯಕ್ಕೆ ತಕ್ಕಂತೆ ಅದರ ಪರಿಷ್ಕರಣೆಯೂ ಆಗಬೇಕಿತ್ತು. ಆ ವೇಳೆಗಾಗಲೇ ಮೈಸೂರು ಸಂಸ್ಥಾನದ ಆದ್ಯಂತ 'ಹೋಬಳಿ ಶಾಲೆ'ಗಳು ಆರಂಭವಾಗಿದ್ದುದರಿಂದ ನಿಘಂಟಿಗೆ ತೀವ್ರವಾದ ಬೇಡಿಕೆ ಇತ್ತು. ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ ಆಗಿನ ನಿರ್ದೇಶಕರಾಗಿದ್ದ ಬಿ.ಎಲ್.ರೈಸರು ಚೀಫ್ ಕಮೀಷನರ್‌ರಿಗೆ ಈ ಬಗ್ಗೆ ಆಗಾಗ ವರದಿ ಮಾಡುತ್ತಲೇ ಇದ್ದರು. ಈ ಹಿನ್ನೆಲೆಯಲ್ಲಿ ಚೀಫ್ ಕಮೀಷನರ್‌ರು ೧೮೭೫ರ ಜುಲೈ ೧೪ರಂದು ಸ್ಯಾಂಡರ್ಸನ್‌ರಿಗೆ ಪತ್ರ ಬರೆದು 'ನಿಘಂಟನ್ನು ಪರಿಷ್ಕರಿಸಿಕೊಡಲು ಸಾಧ್ಯವೇ?' ಎಂದು ಪ್ರಶ್ನಿಸಿದರು. ಮೊದಲಿಗೆ ಆತ ಒಪ್ಪಿದರೂ ೧೮೭೫ರ ಸೆಪ್ಟೆಂಬರ್ ೭ರಂದು ಪತ್ರ ಬರೆದು

"I have made several attempts to procede with the dichtionary, and my inability to do so has been a constant source of pain ever since I left – India".

ನಂ. ೭೦೨, 'ಅಂತರಗಂಗೆ' ೭ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಭುವನೇಶ್ವರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೮೫

ಎಂಬ ಕಾರಣದೊಂದಿಗೆ ನಿಘಂಟಿನ ಕೆಲಸವನ್ನು ಮುಂದುವರೆಸಲು ಸಾಧ್ಯವಿಲ್ಲ ಎಂದು ಉತ್ತರಿಸಿದರು. ಹಾಗಾಗಿ ಮಂಗಳೂರಿನ ಬಾಸೆಲ್ ಮಿಷನ್‌ನ ಕಡೆಯಿಂದ ಆ ನಿಘಂಟನ್ನು ಮರುಮುದ್ರಿಸುವ ಪ್ರಯತ್ನವೂ ನಡೆಯುತ್ತಿತ್ತು. ಬಾಸೆಲ್ ಮಿಷನ್ ಅದಕ್ಕೆಂದೇ ವಿಶೇಷವಾದ ಮೊಳೆಯಚ್ಚುಗಳನ್ನು ಸಿದ್ಧಪಡಿಸಿ ಮಾದರಿಪುಟಗಳನ್ನು ಮುದ್ರಿಸಿ ಮೈಸೂರು ಸರ್ಕಾರಕ್ಕೆ ಕಳುಹಿಸಿತು.

ನಿಘಂಟಿನ ಕರಡನ್ನು ತಿದ್ದಲು ಬಾಸೆಲ್ ಮಿಷನ್ ಮುದ್ರಿತ ಪುಟಗಳನ್ನು ಬೆಂಗಳೂರಿಗೆ ಕಳುಹಿಸಲು ಚಿಂತಿಸುತ್ತಿತ್ತು. ಆದರೆ ರೈಸರು ಅದಕ್ಕೆ ಒಪ್ಪದೆ 'ಮಂಗಳೂರಿನಲ್ಲಿಯೇ ಕರಡನ್ನು ತಿದ್ದಿಸಿ' ಎಂದರು. ಆಗ ಕರಡನ್ನು ತಿದ್ದಲು ಬಾಸೆಲ್ ಮಿಷನ್ ಕಿಟೆಲ್‌ರನ್ನು ಕೋರಿತು. ಆಗ ಆತ ತಾನೇ ಒಂದು ಹೊಸ ನಿಘಂಟನ್ನು ತಯಾರಿಸುವ ಯೋಜನೆಯನ್ನು ನೀಡಿದರು. ಈ ಬಗ್ಗೆ ೧೮೭೬ರ ಏಪ್ರಿಲ್ ೨೫ರಂದು ಬಾಸೆಲ್ ಮಿಷನ್ ರೈಸರಿಗೆ ಬರೆದ ಪತ್ರದಲ್ಲಿ ಕೆಳಕಂಡ ವಿವರಗಳಿವೆ:

"…. Soon after Mr. Sanderson's Dictionary has been published, some of our missionaries regretted that it had remained so much behind what they thought. It ought, and could have been after such a work from Reev's had been 30 years in existance. It was therefore resolved to compile in our mission a Canarese Dictionary solely founded on original research. Mr. Kittel has for many years been occupied with this task and on our question whether he were perhaps prepared to edit a new edition of Mr. Sanderson's Dictionary, he replied he feeled completed to decline accepting the work stating that if he were to edit Mr. Sanderson's dictionary he would have t o alter it so entirely, that it could be no longer Mr. Sanderson's work. Besides feeling that his Indian career is drawing to an end, he believes he must devote his whole time and strength in finishing this work, which he hoped will be possible in about 5 years and more…."

ಸರಿ, ನಿಘಂಟೇನೋ ತಯಾರಾಗಬಹುದು. ಆದರೆ ಅದನ್ನು ಕೊಳ್ಳುವವರು ಯಾರು? ಇಷ್ಟಕ್ಕೂ ನಿಜಕ್ಕೂ ಕನ್ನಡದಂತಹ ಒಂದು ಭಾಷೆಗೆ ಹೊಸದೊಂದು ನಿಘಂಟು ಬೇಕೆ? ಎಂಬ ಪ್ರಶ್ನೆ ಹುಟ್ಟಿದ್ದು ಲಂಡನ್ನಿನಲ್ಲಿ. ೧೮೭೮ರ ಆಗಸ್ಟ್ ೧ ರಂದು ಬ್ರಿಟಿಷ್ ಸರ್ಕಾರದ ಕಾರ್ಯದರ್ಶಿಯು ಮೈಸೂರಿನ ಚೀಫ್ ಕಮೀಷನರ್‌ರಿಗೆ ಪತ್ರ ಬರೆದು "ಬ್ರಿಟಿಷ್ ಆಳ್ವಿಕೆಯ ಪ್ರಾಂತ್ಯಗಳಾದ ಮದ್ರಾಸ್, ಬಾಂಬೆಗಳಿಗಿಂತ ನಿಮ್ಮ ಪ್ರಾಂತ್ಯದಲ್ಲಿ ಕನ್ನಡವನ್ನು ಮಾತನಾಡುವ ಮಂದಿ ಹೆಚ್ಚಿದ್ದಾರೆ. ಹಾಗಾಗಿ ತಮ್ಮ ಅಭಿಪ್ರಾಯದಲ್ಲಿ ಇಂತಹುದೊಂದು ನಿಘಂಟಿನ ಅಗತ್ಯವಿದೆಯೇ? ಹೌದು ಎಂದಾದಲ್ಲಿ ಮೈಸೂರು ಸರ್ಕಾರ ಎಷ್ಟು ಪ್ರತಿಗಳನ್ನು ಕೊಳ್ಳಬಯಸುತ್ತದೆ?" .ಎಂದು ಪ್ರಶ್ನಿಸಿದ್ದಾರೆ.

ಬ್ರಿಟಿಷ್ ಚಕ್ರಾಧಿಪತ್ಯದ ಈ ಪ್ರಶ್ನೆಗಳಿಗೆ ಮೈಸೂರು ಸರ್ಕಾರದ ಪರವಾಗಿ ಉತ್ತರವನ್ನು ನೀಡಿರುವವರು ವಿದ್ಯಾಭ್ಯಾಸದ ಇಲಾಖೆಯ ನಿರ್ದೇಶಕರಾಗಿದ್ದ ಬಿ.ಎಲ್. ರೈಸರು. ಅವರು ೧೮೭೮ರ ಅಕ್ಟೋಬರ್ ೭ ರಂದು ಏಳು ಪುಟಗಳಷ್ಟು ಸುದೀರ್ಘವಾದ ವರದಿಯನ್ನು ನೀಡಿದ್ದಾರೆ. ಅದರಲ್ಲಿ ಕನ್ನಡದಲ್ಲಿ ಆವರೆಗೆ ಬಂದಿದ್ದ ನಿಘಂಟುಗಳು; ಅವುಗಳ ಗುಣ, ಸೀಮಿತತೆ; ಕಿಟೆಲ್ಲರು ಹೊಸ ನಿಘಂಟನ್ನು ರಚಿಸಬೇಕಾಗಿರುವ ಅವಶ್ಯಕತೆ ಇತ್ಯಾದಿಗಳನ್ನು ಎಳೆಎಳೆಯಾಗಿ ಬಿಡಿಸಿ ತೋರಿಸಿದ್ದಾರೆ.

ಈ ಇಡಿಯ ವರದಿಯು ರೈಸರ ಕನ್ನಡದ ಪ್ರೀತಿಗೂ, ಕನ್ನಡದ ಕೆಲಸದಲ್ಲಿ ಆಸಕ್ತರಾಗಿರುವವರನ್ನು ಬೆಂಬಲಿಸಬೇಕೆಂಬ ಮನೋಭಾವಕ್ಕೂ ಹಿಡಿದ ಕನ್ನಡಿಯಾಗಿದೆ. ಅದರ ಕೆಲವು ಭಾಗಗಳನ್ನಷ್ಟೇ ಗಮನಿಸುವುದಾದರೆ:

"… The Canarese – English Dictionary was a work of great merit for the time at which it was compiled by Mr. Reeve. The edition by Mr. Sanderson was little more than a re-publication in portable form, but with the canarese words printed also in Roman characters. Unfortunately the system of transliteration generally adopted by oriental scholars was not followed. Hence, from a literary point of view, this edition was no improvement on the original work. When, therefore, I became aware of Mr. Kittel's engagement on a new etymological Dictionary, brought up to the standard of the present day, it seemed to me entirely in the interest of the canarese. Language, whether for administrative or scholaric purposes, to await its issue.

… There are almost no European scholars engaged in the study of canarese. Mr. Kittel,

who has lived for some years in Coorg, is already favorably known by his literary works in that language, especially the Sabdamanidarpana and Nagavarma's chandas, and I am not acquainted with any other Canarese scholar, with the inclination for such work, equally qualified to do justice to the compilation of a dictionary of the language... I reqret that so long a time is to elapse before the completion of the Dictionary, but have heard that the Rev. Dr. Moegling, a great Canarese and English scholar... intends assting Mr. Kittel, which may have the effect of hastening the work.

Canarese is the distinctive language of Mysore, the original Karnataka Country, and it seems therefore peculiarly innoccumbent on the Mysore Government to promote its cultivation . It is one of the most import ant, philologically considered of the sourth Indian languages, and has an extensive literature of considerable value. But, from political circumstances, it has become little known in the world of letters; while, being under settled British government, Telugu and Tamil have had numerous students. My recommendation would be, not only in favour of the subvention by this Government of the Dictionary in question, but for a standing grant for the promotion of a knowledge of the language by the publication of a critical edition of Canarese classical works, many of which are now in danger of falling into oblivion, and which after the establishment of a native Government may perhaps never again see the light".

ಈ ವರದಿಯಿಂದ ಕಿಟೆಲ್ ಕೋಶದ ಮಹತ್ವವನ್ನು ಮನಗಂಡ ಮೈಸೂರು ಸರ್ಕಾರವು ೫೦೦೦ ರೂಗಳನ್ನು ಪಾವತಿಸಿ ೩೦೦೦ ಪ್ರತಿಗಳನ್ನು ಕೊಳ್ಳಲು ತಾನು ಸಿದ್ಧವೆಂದು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ತಿಳಿಸಿತು. ಮುಂಬೈ ಮತ್ತು ಮದ್ರಾಸ್ ಸರ್ಕಾರಗಳು ಕ್ರಮವಾಗಿ ೩೦೦ ಮತ್ತು ೭೫ ಪೌಂಡ್ ಹಣನೀಡಿ ೨೨೫ ಮತ್ತು ೭೫ ಪ್ರತಿಗಳನ್ನು ಖರೀದಿಸಲು ಒಪ್ಪಿದವು.

೧೮೯೪ರಲ್ಲಿ ನಿಘಂಟು ಸಂಪೂರ್ಣವಾಗಿ ಮುದ್ರಿತವಾಗಿ ಹೊರಬರುವ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಕಮೀಷನರರ ಆಳ್ವಿಕೆ ಮುಗಿದು ಮಹಾರಾಜರ ಆಳ್ವಿಕೆ ಆರಂಭವಾಗಿತ್ತು. ಈ ವೇಳೆಯಲ್ಲಿ ನಿಘಂಟಿನ ಖರೀದಿಯ ವಿಷಯಕ್ಕೆ ಸಂಬಂಧಿಸಿದಂತೆ ಸ್ವಲ್ಪ ಮಟ್ಟಿನ ಗೊಂದಲವಿದ್ದಂತೆ ತೋರುತ್ತದೆ. ಪ್ರತಿಗಳನ್ನು ಖರೀದಿಸಲು ಸರ್ಕಾರ ಮಂಜೂರು ಮಾಡಿರುವುದು ಕೇವಲ ೩೦೦೦ ರೂ ಗಳು ಮಾತ್ರ, ೫೦೦೦ ಅಲ್ಲ ಎಂದು ಆಗಿನ ಕಂಟ್ರೋಲ್ ಇ.ಆರ್. ಸುಬ್ಬರಾಯರು ತಕರಾರು ತೆಗೆದದ್ದರಿಂದ ಖರೀದಿಯ ಪ್ರಶ್ನೆ ಸ್ವಲ್ಪ ತೊಡಕಾಯಿತು. ಆಗ ಲೂಯಿರೈಸರು ಮಧ್ಯೆ ಪ್ರವೇಶಿಸಿ ೧೮೯೩ರ ಏಪ್ರಿಲ್ ೧೪ರಂದು ಮತ್ತೆ ಎರಡು ಸಾವಿರ ರೂಗಳ ಬಿಡುಗಡೆಗೆ ವ್ಯವಸ್ಥೆ ಮಾಡಿದ್ದರಿಂದ ಸಮಸ್ಯೆ ಬಗೆಹರಿಯಿತು.

ನಿಘಂಟು ಮುದ್ರಿತವಾಗಿ ಹೊರಬಂದ ಮೇಲೆ ರೈಸರು 'ಇಲ್ಲಿಗೆ ನನ್ನ ಪಾಲಿನ ಕೆಲಸ ಮುಗಿಯಿತು' ಎಂದು ಸುಮ್ಮನೆ ಕೂಡಲಿಲ್ಲ. ನಿಘಂಟಿನ ವಿಶೇಷತೆ, ಉಪಯುಕ್ತತೆ ಮುಂತಾದವುಗಳನ್ನು ಜಗತ್ತಿನ ಗಣ್ಯ ವಿದ್ವಾಂಸರಿಗೆ ಪರಿಚಯಿಸುವಂತಹ ವಿಮರ್ಶಾ ಲೇಖನ ಒಂದನ್ನು 'ಜರ್ನಲ್ ಆಫ್ ರಾಯಲ್ ಏಷಿಯಾಟಿಸ್ ಸೊಸೈಟಿ'ಯ ೧೮೯೫ರ ಸಂಚಿಕೆಯಲ್ಲಿ ಬರೆದು ಪ್ರಕಟಿಸಿದರು (ಪುಟಗಳು ೨೩೨-೨೩೫). ಈ ಲೇಖನದಲ್ಲಿ ರೈಸರು ನಿಘಂಟನ್ನು ರಚಿಸಲು ಕಿಟೆಲ್ ಪಟ್ಟಿರುವ ಶ್ರಮ, ಕನ್ನಡದ ಅಭಿಜಾತ ಕೃತಿಗಳಿಂದ ಪದಗಳನ್ನು ಆಯ್ದುಕೊಳ್ಳುವಲ್ಲಿ ತೋರಿರುವ ಆಸಕ್ತಿ, ಮುದ್ರಣದಲ್ಲಿ ಕಂಡುಬರುವ ಅಚ್ಚುಕಟ್ಟುತನ ಮುಂತಾದವುಗಳನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಸಂಸ್ಕೃತ ಪದಗಳನ್ನು ನಿಘಂಟಿಗೆ ಆಯ್ದುಕೊಂಡಿರುವುದನ್ನು ಮತ್ತು ಮರಾಠಿಯ ಛಾಯೆಯ ಪದಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರತಿರುವುದನ್ನು ಟೀಕಿಸಿದ್ದಾರೆ. ಆದರೆ ಇಂತಹುದೊಂದು ದೊಡ್ಡ ಯೋಜನೆಯಲ್ಲಿ ಇಷ್ಟು ಸಣ್ಣಪುಟ್ಟ ತಪ್ಪುಗಳಿದ್ದರೆ ಅದು ಸ್ವಾಭಾವಿಕ ಎಂಬ ಅರಿವು ಅವರಿಗಿತ್ತು. ಹಾಗಾಗಿಯೇ,

"The matters poainted out, however, are such as can easily remedied in another edition. In the whose nothing but prise in due for laborious and conscientions manner in which the work has been compiled..."

ಎಂದು ತಮ್ಮ ಸಮೀಕ್ಷೆಯನ್ನು ಮುಗಿಸಿದ್ದಾರೆ.

ಕಿಟೆಲ್ ತಮ್ಮ ನಿಘಂಟಿನಲ್ಲಿ ಕನ್ನಡ ಭಾಷೆಯನ್ನು 'ಕ್ಯಾನರೀಸ್' ಎಂದು ಕರೆಯದೆ 'ಕನ್ನಡ' ಎಂದೇ ಬಳಸಿರುವುದು ರೈಸರಿಗೆ ಬಹಳ ಸಂತೋಷ ಮತ್ತು ಸಮಾಧಾನಗಳನ್ನು ಕೊಟ್ಟಿದೆ.

"Mr. Kittel's return to Kannada, the gennine and actual form, is to be apphauded, and is worthy of suppaort by the learned world. The time seems now to have come when the use of the hybrid term 'Canarese' derived, it is believed, from the paortnguese CANARIJS, and which the authorities attempt to make more correct by spelling it "Kanarese" should be given up, certainly by scholars and learned institutions. The other south Indian languages – Tamil, Telugu, Malayalam, Tulu – are called by their right names, recognizable as such by the natives who speak them; where as Kannada, a word which presents no difficulty in pronunciation, is not used to designate the speech of which it is the name, and this is called Canarese, a word significant of nothing at all to the natives of the country.

ಎಂಬ ಅವರ ಮಾತುಗಳಲ್ಲಿ ಸರಿಯಲ್ಲದ ಪದದ ಬಳಕೆಯನ್ನು ಕುರಿತಾದ ಅಸಹನೆಯನ್ನೂ, ಕಿಟೆಲರ ಪ್ರಯತ್ನದ ಬಗೆಗಿನ ತೃಪ್ತಿಯನ್ನೂ ನಿಚ್ಚಳವಾಗಿ ಗುರುತಿಸಬಹುದು.

ಮುಂದೆ ೧೮೦೩ರಲ್ಲಿ ಕಿಟೆಲರ 'A Grammar of the Kannada Language' ಕೃತಿ ಪ್ರಕಟವಾದಾಗ ಅದರ ಎರಡು ನೂರು ಪ್ರತಿಗಳನ್ನು ಮೈಸೂರು ಸರ್ಕಾರವು ಕೊಂಡು ಕೊಳ್ಳುವುದರಲ್ಲಿಯೂ ಲೂಯಿರೈಸರ ಪಾತ್ರವಿತ್ತೆಂಬುದನ್ನು ಪತ್ರಾಗಾರದ GM 139 of 1898 (1-7) ಎಂಬ ಕಡತವು ಸಾಬೀತು ಪಡಿಸುತ್ತದೆ.

ರೈಸ್ ಮತ್ತು ಕಿಟೆಲ್ಲರ ನಡುವಣ ಸ್ನೇಹ ಕೇವಲ ಪರಸ್ಪರ ಹೊಗಳಿಕೆಯದ್ದಾಗಿರಲಿಲ್ಲ. ತಾತ್ವಿಕ ವಿಷಯಗಳಿಗೆ ಸಂಬಂಧಿಸಿದ ಭಿನ್ನಾಭಿಪ್ರಾಯಗಳನ್ನು ಇಬ್ಬರೂ ಮುಕ್ತವಾಗಿಯೇ ವ್ಯಕ್ತಪಡಿಸಿದ್ದಾರೆ. ನಿಘಂಟಿಗೆ ಸಂಬಂಧಿಸಿದ ದೋಷಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಾಗ ರೈಸರು ಯಾವುದೇ ಸಂಕೋಚವನ್ನು ಇಟ್ಟುಕೊಂಡಿಲ್ಲ. ಅಂತೆಯೇ ರೈಸರು ಸಂಪಾದಿಸಿದ ಬೆಳತೂರಿನ ಶಾಸನದಲ್ಲಿಯ ಪಾಠವನ್ನು ಕುರಿತಾದ ತಮ್ಮ ಅಭಿಪ್ರಾಯ ಭೇದವನ್ನು ಕಿಟೆಲ್ಲರೂ ಅಷ್ಟೇ ಮುಕ್ತವಾಗಿ 'ಎಪಿಗ್ರಾಫಿಯಾ ಇಂಡಿಕ'ದ ಸಂಪುಟ ೬ (೧೯೦೦ – ೦೧) ರಲ್ಲಿ ಪ್ರಕಟವಾದ ತಮ್ಮ ಲೇಖನ (Belaturu inscription of the time of Rajendradeva S.S. 979) ದಲ್ಲಿ ವ್ಯಕ್ತಪಡಿಸಿದ್ದಾರೆ.

ಕಿಟೆಲ್ ಮತ್ತು ರೈಸ್ ಇಬ್ಬರೂ ನಿವೃತ್ತಿಯ ನಂತರ ತಮ್ಮ ತಮ್ಮ ತಾಯ್ನಾಡಿಗೆ ಹಿಂದಿರುಗಿದರಾದರೂ ಇಬ್ಬರ ನಡುವೆ ಪತ್ರ ವ್ಯವಹಾರ ನಡೆದೇ ಇತ್ತು. ೧೯೦೩ರ ಡಿಸೆಂಬರ್ ೧೮ರಂದು ಟ್ಯೂಬಿಂಗನ್‌ನಿಂದ ಕಿಟೆಲ್ಲರು ಬಾಸೆಲ್ ಮಿಷನ್ನಿನ ಕಾರ್ಯದರ್ಶಿಯವರಿಗೆ ಜರ್ಮನ್ ಭಾಷೆಯಲ್ಲಿ ಬರೆದ ಪತ್ರ ಒಂದನ್ನು ಡಾ॥ ಶ್ರೀನಿವಾಸ ಹಾವನೂರ ಅವರು ಪತ್ತೆ ಹಚ್ಚಿದ್ದಾರೆ. ಈ ಪತ್ರದ ಮೊದಲಲ್ಲಿಯೇ ಕಿಟೆಲ್‌ರು ತಾವು ಬರೆದ ಕನ್ನಡ ವ್ಯಾಕರಣದ ಪುಸ್ತಕವನ್ನು ಕುರಿತಂತೆ ಬಿ.ಎಲ್.ರೈಸರು ೧೯೦೩ರ ಜುಲೈ ೨೦ ರಂದು ಬೆಂಗಳೂರಿನಿಂದ ಬರೆದಿರುವ ಇಂಗ್ಲಿಷ್ ಪತ್ರದ ಅನುವಾದವನ್ನು ಬಳಸಿಕೊಂಡಿದ್ದಾರೆ. ಈ ಪತ್ರವನ್ನು ಬರೆದ ಮರುದಿನ, ಎಂದರೆ ೧೯೦೩ರ ಡಿಸೆಂಬರ್ ೧೯ರಂದು ಕಿಟೆಲ್ ನಿಧನರಾದರು.

ಹೀಗೆ ಕಾಲು ಶತಮಾನಕ್ಕೂ ಹೆಚ್ಚು ಕಾಲ ಕಿಟೆಲ್ ಮತ್ತು ರೈಸರ ನಡುವಣ ಸ್ನೇಹ ವಿಶ್ವಾಸಗಳು ಅವಿರತವಾಗಿ ಸಾಗಿತಲ್ಲದೆ ಅದರ ಫಲವಾಗಿ ಕನ್ನಡ–ಇಂಗ್ಲಿಷ್ ಶಬ್ದಕೋಶ, ಕನ್ನಡ ವ್ಯಾಕರಣ, ನಾಗವರ್ಮನ ಕನ್ನಡ ಛಂದಸ್ಸು ಮುಂತಾದ ಅತ್ಯುತ್ತಮ ಕೃತಿಗಳು ಕನ್ನಡಿಗರಿಗೆ ಲಭ್ಯವಾದವು.

❑❑

# ಪೆರ್ಬಾಣವಾಡಿ ಪ್ರದೇಶದ ಜೈನ ಶಾಸನಗಳು

– ಪಿ.ವಿ. ಕೃಷ್ಣಮೂರ್ತಿ

ಐದನೆಯ ಶತಮಾನದ ಶಾಸನಗಳು 'ಪೆರ್ಬಾಣವಾಡಿ' ಪ್ರದೇಶವನ್ನು 'ಬೃಹತ್ ಬಾಣರ ರಾಜ್ಯ' ಎಂದು ಕರೆದಿವೆ. ಆ ಪ್ರದೇಶವನ್ನು ಪ್ರಾಚೀನ ಬಾಣರಸರು ಆಳಿದ್ದರು. ಬಾಣರಸರು ಶಾತವಾಹನರ ಸಾಮಂತರಾಗಿದ್ದರೆಂದು ಹೇಳಲಾಗಿದೆ. ಆದರೆ ಅವರು ನಿಸ್ಸಂಶಯವಾಗಿ ಕಂಚಿಯ ಪಲ್ಲವರ ಮಾಂಡಲಿಕರಾಗಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಪೆರ್ಬಾಣವಾಡಿ ಪ್ರದೇಶವನ್ನು ಶಾಸನಗಳು 'ದಡಿಗಾವಳಿ ಪನ್ನಿರ್ಚ್ಛಾಸಿರ'ವೆಂದೂ ಉಲ್ಲೇಖಿಸಿವೆ. 'ಪೆರ್ಬಾಣವಾಡಿ'ಯು ತೊಂಡೆಮಂಡಲದ ಪಶ್ಚಿಮಕ್ಕೂ ಗಂಗಾರುಸಾಸಿರವನ್ನು ಹೊರತುಪಡಿಸಿದ ಗಂಗವಾಡಿ ತೊಂಬತ್ತಾರು ಸಾಸಿರ ಪ್ರದೇಶದ ಪೂರ್ವಕ್ಕೆ ಇದ್ದ ನಡುವಿನ ಪ್ರದೇಶವಾಗಿತ್ತು. ಸ್ಥೂಲವಾಗಿ, ಉತ್ತರಕ್ಕೆ ಉತ್ತರ ಪಿನಾಕಿನಿ, ದಕ್ಷಿಣಕ್ಕೆ ದಕ್ಷಿಣ ಪಿನಾಕಿನಿ ನದಿಗಳು, ಉತ್ತರ – ದಕ್ಷಿಣ ದಿಸೆಗಳ ಗಡಿರೇಖೆಗಳಾಗಿದ್ದವು. ಒಟ್ಟಾರೆ ಪೆರ್ಬಾಣವಾಡಿ ಪ್ರದೇಶವು 'ಪಾಲಾರ್' ನದಿಯ ಸಂಪೂರ್ಣ ಜಲಾನಯನ ಪ್ರದೇಶವನ್ನು ಒಳಗೊಂಡಿದ್ದಿತು. ಈ ಪ್ರದೇಶವೇ ಕರ್ನಾಟಕದ ಪ್ರಾಚೀನ ಬಾಣರಸರ ಆಳ್ವಿಕೆಯ ಮೂಲ ನೆಲೆಯಾಗಿದ್ದಿತು. ಕಾಲಾಂತರದಲ್ಲಿ ಪಲ್ಲವರಿಂದ ಪ್ರೇರಿತರಾದ ಗಂಗರಸರು ಬಾಣರಸರಿಂದ ಪ್ರದೇಶವನ್ನು ಆಕ್ರಮಿಸಿಕೊಂಡರು. ಆಗ ಈ ಪ್ರದೇಶ 'ದಡಿಗಾವಳಿ' ಎನಿಸಿಕೊಂಡಿತು. ಈ ಪ್ರದೇಶ ಪ್ರಧಾನವಾಗಿ ಪೂರ್ವಘಟ್ಟಗಳ ಸರಣಿಗೆ ಸೇರಿದ ಪ್ರದೇಶಗಳನ್ನು ಒಳಗೊಂಡಿದ್ದಿತು. ಹಾಗಾಗಿ ಈ ಪ್ರದೇಶ ತನ್ನದೇ ತೆರನಾದ ಭೌಗೋಳಿಕ ಲಕ್ಷಣಗಳಿಂದ ಕೂಡಿದೆ. ಸ್ಥೂಲವಾಗಿ ಈ ಪೆರ್ಬಾಣವಾಡಿ ಪ್ರದೇಶದ ವ್ಯಾಪ್ತಿ ಇಂದಿನ ಆಂಧ್ರದ ಚಿತ್ತೂರು, ಕರ್ನಾಟಕದ ಚಿಕ್ಕಬಳ್ಳಾಪುರ, ಕೋಲಾರ, ತಮಿಳುನಾಡಿನ ಕೃಷ್ಣಗಿರಿ, ಧರ್ಮಪುರಿ, ವೆಲ್ಲೂರ್, ತಿರುವಣ್ಣಾಮಲೆ, ವಿಲುಪ್ಪುರಂ ಜಿಲ್ಲಾ ಪ್ರದೇಶಗಳಲ್ಲಿ ಹಾಗೂ ಈ ಜಿಲ್ಲೆಗಳಿಗೆ ಅಂಟಿಕೊಂಡಂತಿರುವ ಅನಂತಪುರ, ಕಡಪ, ಬೆಂಗಳೂರು, ಕಾಂಚೀಪುರಂ, ಕಡಲೂರು ಜಿಲ್ಲೆಗಳ ಹಲವು ಭಾಗಗಳನ್ನು ಒಳಗೊಂಡಂತೆ ಇದ್ದಿತು. ಬಹು ಪ್ರಾಚೀನಕಾಲದಲ್ಲಿ ಈ ಪ್ರದೇಶವು ಬೆಟ್ಟಗುಡ್ಡಗಳಿಂದ ಕೂಡಿದ ದಟ್ಟವಾದ ಅರಣ್ಯಗಳಿಂದ ಕೂಡಿದ್ದಿತು. ಈ ಪ್ರದೇಶದ ನಡುವಿನ ಭಾಗವಾಗಿದ್ದ ಪಾಲಾರ್ ನದಿಯ ಜಲಾನಯನ ಪ್ರದೇಶವು ಕ್ರಮಕ್ರಮವಾಗಿ ಕೃಷಿಯೋಗ್ಯ ಪ್ರದೇಶವಾಗಿ ರೂಪಾಂತರ ಪಡೆಯುತ್ತಾ ಹೋದ ಹಾಗೇ ಆ ಪ್ರದೇಶವು ಹಲವು ಸಾಮ್ರಾಜ್ಯಶಾಹಿಗಳ ರಾಜ್ಯ ವಿಸ್ತರಣಾ ಕ್ರಿಯೆಗೆ ಒಳಪಡುತ್ತಿದ್ದಂತೆ ಜೈನಧರ್ಮದ ಪ್ರವೇಶಕ್ಕೂ ಅನುವು ಮಾಡಿಕೊಡುತ್ತಾ ಹೋಯಿತು.

ಪೆರ್ಬಾಣವಾಡಿ ಪ್ರದೇಶವು ಆಡಳಿತಾತ್ಮಕವಾಗಿ ಅಂದಿನ ಅನೇಕ ಪ್ರಾದೇಶಿಕ ಉಪವಿಭಾಗಗಳನ್ನು ಒಳಗೊಂಡಿದ್ದಿತು. ಅವುಗಳಲ್ಲಿ ರೊದ್ದನಾಡು, ಮುಲಿಕಿನಾಡು, ಪೊದಲ್‌ನಾಡು, ಗಂಗ – ೬೦೦೦, ಪುಲಿನಾಡು, ಶಿಲ್ಯೆನಾಡು, ಪಾಂಗಲ್‌ನಾಡು, ಮುಗ್ಯೆನಾಡು, ಪೆರುಂತಿಯಿರಿನಾಡು ಮಿಯೂರುನಾಡು, ಮೇಲ್ ಅಡ್ಯೆಯಾರ್ನಾಡು, ಕರ್‍ಯೆವಲಿ ಆದಿನಾಡು, ಕರ್‍ಯೆನಾಡು ಅಥವಾ ಕರನಾಡು ಎಂಬಿವೇ ಮೊದಲಾದ ಪ್ರದೇಶಗಳು ಅಂತರ್ಗತವಾಗಿದ್ದವು.

ಪೆರ್ಬಾಣವಾಡಿ ಪ್ರದೇಶದಾದ್ಯಂತ ನೂರಾರು ಜೈನ ಕೇಂದ್ರಗಳಿದ್ದವು ಬೇಗೂರು, ನಂದಿ, ನೊಣಮಂಗಲ, ಕೋಲಾರ, ಗುಡಿಬಂಡೆ ಪೆನುಗೊಂಡೆ ಅಮರಾಪುರ ಹೊಸೂರು, ತವಳಂ ಮೊದಲಾದವು ಪೆರ್ಬಾಣವಾಡಿಯ ಪಶ್ಚಿಮಕ್ಕಿದ್ದ ಕೆಲವು ಜೈನ ಕೇಂದ್ರಗಳು. ಉತ್ತರದಲ್ಲಿ ಆಂಧ್ರದ ದಾನವಲಪಾಡು ಕೂಡ ಒಂದು ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು. ಪೆರ್ಬಾಣವಾಡಿಯ ಕೇಂದ್ರ ಮತ್ತು ಪೂರ್ವ – ದಕ್ಷಿಣ ಭಾಗಗಳಲ್ಲಿ ಅತ್ಯಧಿಕ ಸಂಖ್ಯೆಯ ಜೈನ ಕೇಂದ್ರಗಳಿದ್ದವು. ತಿರುವಣ್ಣಾಮಲೆ ಜಿಲ್ಲೆಯ ವಂದವಾಸಿ ತಾಲೂಕಿನ ಎಳಂಕಾಡು, ಕೀಳ್‌ಸಾತ್ತಮಂಗಲಂ, ಪಂಚಪಾಂಡವಮಲೆ, ಪೊನ್ನೂರು, ಸುಳುಕ್ಕಿ, ಶಿಯಮಂಗಲಂ, ತಿರುಕ್ಕೋಯಿಲ್, ವೇಡಾಲ್, ಪೋಳೂರು ತಾಲೂಕಿನ ಕಣತ್ತೂರು, ಓಡಲವಾಡಿ, ವೈಗೈತಿರುಮಲೆ, ಚೆಯ್ಯಾರ್ ತಾಲೂಕಿನ ಕರಂತೈ, ಮಾಮಂಡೂರ್, ತಿರುವಣ್ಣಾಮಲೆ ತಾಲೂಕಿನ ವಲತಲಂಕುನ್ರು; ವೆಲ್ಲೂರು ಜಿಲ್ಲೆಯ ಗುಡಿಯಾತ್ತಂ ತಾಲೂಕಿನ ವಳ್ಳಿಮಲೆ, ವೆಲ್ಲೂರು ತಾಲೂಕಿನ ವೇಲಪ್ಪಾಡಿ, ವಲಝು ತಾಲೂಕಿನ ವಿಳಾಪ್ಪಾಕ್ಕಂ, ಸಕ್ಕರ್‌ಮಲ್ಲೂರ್,

# ೩೭, 'ಶ್ರೀಕೃಷ್ಣ ಕೃಪ', ೩ನೇ ಅಡ್ಡರಸ್ತೆ, ಸುಬ್ಬಣ್ಣಲೇಔಟ್, ಹರಿನಗರಕ್ರಾಸ್, ಬೆಂಗಳೂರು – ೫೬೦೦೬೨

ವಿಲುಪ್ಪುರಂ ಜಿಲ್ಲೆಯ ದಿಂಡಿವನಂ ತಾಲೂಕಿನ ದಾದಾಪುರಂ, ಇಡೈಯಾಲ್, ಮಡವಿಳಾಗಂ, ಓಲಗಪುರಂ, ಒಲಕ್ಕೂರು, ಪೆರುಮಂಡೂರ್, ವಿಡಾಲ್, ವೇಲೂರ್, ವಿಳ್ಳುಕ್ಕುಂ; ತಿರುಕೊಯಿಲೂರು ತಾಲೂಕಿನ ಚೋಳವಾಂಡಿಪುರಂ, ಜಂಬೈ, ಪಳ್ಳಿ ಚಂದಲ್, ತಿರುಪ್ಪಾಲಪಾಡಲ್, ಜಿಂಜಿ ತಾಲೂಕಿನ ಅಗಲೂರು, ಚಿತ್ತಮೋರ್, ಪಾರೈಪಟ್ಟು, ತಿರುನಾಥರ್‌ಕುನ್ರು, ತೊಂಡೂರ್, ಉಳುಂದೂರ್‌ಪೇಟ್ ತಾಲೂಕಿನ ತಿರುನರುಂಗೊಂಡೆ ಮೊದಲಾದ ಸ್ಥಳಗಳಲ್ಲಿ ಸಾಕಷ್ಟು ಜೈನ ಸಂಬಂಧಿ ಅವಶೇಷಗಳು ಮತ್ತು ಶಾಸನಗಳು ಕಂಡು ಬಂದಿವೆ.

ಕಳಿಂಗ ರಾಜ್ಯದಲ್ಲಿ ಪ್ರಕೃತಿಸೌಂದರ್ಯದ ಗಣಿ ಕುಮಾರಿ ಬೆಟ್ಟಗಳು. ಆ ಬೆಟ್ಟಗಳ ಮೇಲೆ ಭಗವಾನ್ ಮಹಾವೀರರು ಆರಂಭಿಸಿದ ಜೈನಧರ್ಮ ಪ್ರಚಾರ ಕಾರ್ಯದ ಹೊಣೆ ಹೊತ್ತ ಒಂದು ಗುಂಪು ದಕ್ಷಿಣಕ್ಕೆ ಸಾಗಿ ಆಂಧ್ರದ ಪೂರ್ವ ಘಟ್ಟಗಳ ಗಿರಿ ಕಂದರವನಗಳನ್ನು ದಾಟಿ ಉತ್ತರ ಪಿನಾಕಿನಿಯ ದಕ್ಷಿಣಕ್ಕಿರುವ ಪೆರ್ಬಾಣವಾಡಿ ಪ್ರದೇಶವನ್ನು ಆವರಿಸಿ ಮುಂದೆ ದಕ್ಷಿಣಕ್ಕೆ ಸಾಗಿ ತಮಿಳುನಾಡಿನ ಮೂಲಕ ಶ್ರೀಲಂಕಾವನ್ನು ಪ್ರವೇಶಿಸಿತು. ಸಾಮಾನ್ಯವಾಗಿ ಸಾಕಷ್ಟು ನೀರಿನ ಆಶ್ರಯವುಳ್ಳ ಪ್ರಾಕೃತಿಕ ಬೆಟ್ಟ ಮತ್ತು ಬೆಟ್ಟದ ತಪ್ಪಲುಗಳಲ್ಲಿ ಜೈನ ಯತಿಗಳು ತಮ್ಮ ಆಶ್ರಯ ತಾಣಗಳನ್ನು ಕಂಡುಕೊಂಡು ಜೈನಧರ್ಮದ ಪ್ರಚಾರ ಕಾರ್ಯವನ್ನು ಕೈಗೊಂಡರು. ಅಂತಹ ತಾಣಗಳು ಪೆರ್ಬಾಣವಾಡಿ ಪ್ರದೇಶದಲ್ಲಿ ಅಧಿಕವಾಗಿಯೇ ಇದ್ದವೆಂಬ ಅಂಶ ಮೇಲೆ ಪಟ್ಟಿ ಮಾಡಿರುವ ಜೈನ ಶಾಸನ ಮತ್ತು ಅವಶೇಷಗಳು ಲಭ್ಯವಿರುವ ಸ್ಥಳಗಳ ಹಿನ್ನೆಲೆಯಲ್ಲಿ ಗ್ರಹಿಸಬಹುದಾಗಿದೆ. ಪ್ರಸ್ತುತ ಅಂತಹ ಹಲವು ಪ್ರಮುಖ ಸ್ಥಳಗಳಲ್ಲಿನ ಕೆಲವು ಜೈನ ಶಾಸನಗಳಲ್ಲಿನ ವಿವರಗಳನ್ನು ಪರಿಚಯಿಸುವ ಪ್ರಯತ್ನ ಈ ಬರಹದ ಆಶಯವಾಗಿದೆ.

ಪೆರ್ಬಾಣವಾಡಿ ಪ್ರದೇಶದ ಪೂರ್ವಕ್ಕಿರುವ ತೊಂಡೆಮಂಡಲ ಪ್ರದೇಶದಲ್ಲಿ ಅಂದರೆ ತಿರುವಳ್ಳೂರ್ ಮತ್ತು ಕಾಂಚಿಪುರಂ ಜಿಲ್ಲಾ ಪ್ರದೇಶಗಳಲ್ಲಿ ಜೈನ ಧರ್ಮದ ಪ್ರಚಾರ ಕಾರ್ಯ ಕ್ರಿ.ಪೂ. ಆಚೀಚಿನ ಅವಧಿಯಲ್ಲೇ ಆರಂಭವಾಗಿದ್ದಿತೆಂದು ತೋರುತ್ತದೆ. ಕ್ರಿ.ಶ. ಮೊದಲನೆಯ ಶತಮಾನಕ್ಕೆ ಸೇರಿದ ತಮಿಳು ಕೃತಿ 'ಕುರುಳ್'ನ ಕರ್ತೃ ತಿರುವಳ್ಳುವರ್ ಮೂಲತಃ ಜೈನರಾಗಿದ್ದರೆಂದು ಭಾವಿಸಲಾಗಿದೆ. ಪಲ್ಲವರ ರಾಜಧಾನಿ ಕಂಚಿಯಲ್ಲಿ ಪಲ್ಲವರ ಆಶ್ರಯದಲ್ಲಿ ಜೈನಧರ್ಮ ಚೆನ್ನಾಗಿ ಬೇರೂರಿದ್ದಿತು. ಕ್ರಿ.ಶ. ೭ನೇ ಶತಮಾನದ ಆರಂಭದಲ್ಲಿದ ಪಲ್ಲವ ದೊರೆ ಮೊದಲನೆಯ ಮಹೇಂದ್ರವರ್ಮನು ಜೈನಧರ್ಮಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಿದ್ದನು. ಆಗ್ಗೆ ಪ್ರಸಿದ್ಧ ಜೈನ ಗುರುಗಳಾಗಿದ್ದ ವಾಮನ ಮತ್ತು ಮಲ್ಲಿಷೇಣರ ಕೋರಿಕೆಯ ಮೇರೆಗೆ ಕಂಚಿಯ ಸಮೀಪದ ತಿರುಪ್ಪರುತ್ತಿಕ್ಕುನ್ರಂ ಎಂಬಲ್ಲಿ ವರ್ಧಮಾನ ಮಹಾವೀರ ಮತ್ತು ವೃಷಭನಾಥ ತೀರ್ಥಂಕರರ ಬಸದಿಗಳು ಸ್ಥಾಪನೆಗೊಂಡವು. 'ತಿರುಪ್ಪರುತ್ತಿಕ್ಕುನ್ರಂ' ಎಂಬುದು ಕಂಚಿಯಿಂದ ಸು. ೩ ಕಿ.ಮೀ. ಅಂತರದಲ್ಲಿದ್ದು 'ಜಿನಕಂಚಿ' ಎಂದು ಪ್ರಸಿದ್ಧವಾಗಿದೆ. ಇಲ್ಲಿನ ವರ್ಧಮಾನ ಮಹಾವೀರರನ್ನು 'ತ್ರೈಲೋಕ್ಯನಾಥಸ್ವಾಮಿ' ಎಂದು ಕರೆಯಲಾಗಿದೆ. ಕ್ರಿ.ಶ. ೧೬ನೆಯ ಶತಮಾನದವರೆಗೂ, ಪಲ್ಲವ, ಚೋಳ ವಿಜಯನಗರದ ಅರಸರ ಪೋಷಣೆ ಈ ಕ್ಷೇತ್ರಕ್ಕೆ ಸಂದಿದೆ. ಕಂಚಿಯ ಸಮೀಪದ ಆನಂದಮಂಗಲಂನ ಸಮೀಪದ ಗುಡ್ಡಗಳಲ್ಲಿ ಜಿನಬಿಂಬಗಳನ್ನು ಬಿಡಿಸಲಾಗಿದೆ. ಅಲ್ಲಿ ಕ್ರಿ.ಶ. ೯೪೫ರಲ್ಲಿದ್ದ ಚೋಳ ದೊರೆ ಮದಿರೈ ಕೊಂಡ ಪರಕೇಸರಿವರ್ಮನ ಶಾಸನಗಳಿವೆ. ಹಾಗೇ ಆ ಪರಿಸರದ ಆರ್‌ಪಾಕ್ಕಂ, ಮಾಗರಲ್, ಆರ್ಯಪೆರುಂಬಾಕ್ಕಂ, ವಿಶಾರಾ ಮತ್ತು ಶಿರುವಾಕ್ಕಂಗಳಲ್ಲೂ ಅನೇಕ ಜೈನ ಶಿಲ್ಪಗಳು ಕಂಡುಬರುತ್ತವೆ.

ಪಾಣರಾಷ್ಟ್ರದ 'ಪಾಟಲಿಕ' ಎಂಬಲ್ಲಿದ್ದ ಜೈನ ಮಠದಲ್ಲಿ ಶಕ ೩೮೦ (ಕ್ರಿ.ಶ. ೪೫೮) ರಲ್ಲಿ ಸರ್ವನಂದಿ ಆಚಾರ್ಯ ವಿರಚಿತ 'ಲೋಕವಿಭಾಗ' ಎಂಬ ಜೈನ ದಿಗಂಬರ ಪ್ರಾಕೃತ ಕೃತಿಯನ್ನು ಆಚಾರ್ಯ ಸಿಂಗಸೂರಿ ಎಂಬುವರು ಸಂಸ್ಕೃತಕ್ಕೆ ಭಾಷಾಂತರಿಸಿದರು ಎಂಬ ಸಂಗತಿಯನ್ನು ಪಿ.ಬಿ. ದೇಸಾಯಿ ಅವರು ತಿಳಿಸುತ್ತಾರೆ. ಇಲ್ಲಿ ಉಕ್ತವಾಗಿರುವ ಪಾಟಲಿಕವು ಇಂದು ಕಡಲೂರಿನ ಭಾಗವಾಗಿರುವ ಪಾದಿರಿಪ್ಪುಳಿಯೂರ್ ಅಥವಾ ತಿರುಪ್ಪಾವುಳಿಯೂರ್ ಎಂಬುವ ಸ್ಥಳವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇದು ಪಾಣರಾಷ್ಟ್ರದ ಅಂದರೆ ಪೆರ್ಬಾಣವಾಡಿಯ ಸ್ಥಳವಾಗಿದ್ದಿತು. ಆ ಸ್ಥಳದಲ್ಲಿದ್ದ ಪ್ರಾಚೀನ ಜೈನಮಠವು ಕನಿಷ್ಠ ಕ್ರಿ.ಶ. ೭ನೆಯ ಶತಮಾನದವರೆಗಾದರೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದಿತೆಂದು ತೋರುತ್ತದೆ. ಏಕೆಂದರೆ ಪೆರಿಯಪುರಾಣದಲ್ಲಿ ಉಲ್ಲೇಖವಾಗಿರುವ ತಿರುಣಾವಿಕ್ಕರಸು ಅಥವಾ ಅಪ್ಪರ್ ಎಂಬವರು ಮೂಲತಃ ಶೈವನಾಗಿದ್ದು ಜೈನ ಸಿದ್ಧಾಂತಗಳಲ್ಲಿ ಪರಿಣತನಾಗಿ ಜೈನ ಧರ್ಮವನ್ನು ಸ್ವೀಕರಿಸಿ ಜೈನಯತಿಯೂ ಆಗ ಪ್ರಸಿದ್ಧಿ ಪಡೆದು, ಅನಂತರದಲ್ಲಿ ಶೈವ ಮತಕ್ಕೆ ಮತ್ತೆ ಮತಾಂತರನಾದ ಸಂಗತಿ ಬಂದಿದೆ. ಈ ಹಿನ್ನೆಲೆಯಲ್ಲಿ ಪಲ್ಲವ ಮೊದಲನೆಯ ಮಹೇಂದ್ರವರ್ಮನು ಆರಂಭದಲ್ಲಿ ಜೈನನಾಗಿದ್ದು ಅನಂತರದಲ್ಲಿ ಶೈವ ಪರವಾದ ಧೋರಣೆಯನ್ನು ಹೊಂದಿದ್ದ ಸಂಗತಿಯ ಮೇಲೆ ಬೆಳಕು ಚೆಲ್ಲುತ್ತದೆ.

ಅಲ್ಲದೆ ತೊಂಡೆಮಂಡಲದ ಮೂಲನಿವಾಸಿಗಳಾದ 'ಕುರುಂಬರು' ಬಹುಮಟ್ಟಿಗೆ ಬೌದ್ಧ ಮತ್ತು ಜೈನ ಮತದ ನಿಷ್ಠಾವಂತ ಅನುಯಾಯಿಗಳಾಗಿದ್ದರೆಂದೂ ಹೇಳಲಾಗಿದೆ. ಹೀಗೆ ಈ ಪ್ರದೇಶದಲ್ಲಿ ಬಹಳ ಹಿಂದೆಯೇ ಜೈನಧರ್ಮವು ತನ್ನ ನೆಲೆಯನ್ನು ಕಂಡುಕೊಂಡಿದ್ದರೂ ಈಗ ಅಳಿದುಳಿದಿರುವ ಬಹಳಷ್ಟು ಅವಶೇಷಗಳ ಕಾಲಮಾನ ೯-೧೦ನೆಯ ಶತಮಾನಗಳಿಂದೀಚಿನದಷ್ಟೇ ಆಗಿರುವುದು ಆಶ್ಚರ್ಯದ ಸಂಗತಿಯಾಗಿದೆ. ವಿಲ್ಲುಪುರಂ ಜಿಲ್ಲೆಯ ತಿರುಕೋಯಿಲೂರ್ ತಾಲೂಕಿನ ಜಂಬೈ ಒಂದು ಪ್ರಾಚೀನತಮ ಜೈನ ಕೇಂದ್ರವಾಗಿದ್ದಿತು. ಅಲ್ಲಿನ ಬೆಟ್ಟದ ಗವಿಯೊಳಗಿನ ಶಾಸನವು

ಆದಿಮಾನ್ ವಂಶದ ನೆಡುಮಾನ್ ಅಂಜಿ ಎಂಬ ಅರಸನಿಗೆ ಸೇರಿದ್ದು, ಕ್ರಿ.ಶ. ೧ನೆಯ ಶತಮಾನ ತಮಿಳು ಬ್ರಾಹ್ಮಿ ಲಿಪಿಯ ಈ ಶಾಸನದಲ್ಲಿ:

"ಸತಿಯ ಪುತೋ ಅತಿಯನ್ ನೆಡುಮಾನಂಜಿ ಇತ್ತ ಪಾಟಿ" ಎಂಬ ಬರಹವಿದೆ. ಈ ಶಾಸನದಲ್ಲಿ ಉಕ್ತವಾಗಿರುವ 'ಸತಿಯ ಪುತೋ' ಎಂಬುದು ಗಮನಾರ್ಹವಾದುದಾಗಿದೆ. ಅಶೋಕನ ಶಾಸನವೊಂದರಲ್ಲಿ ಈ 'ಸತಿಯ ಪುತೋ'ದ ಉಲ್ಲೇಖ ಬಂದಿರುವುದನ್ನು ನಾವು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಸಾಮಾನ್ಯವಾಗಿ ಕರ್ನಾಟಕದ ಪರಶುರಾಮ ಕ್ಷೇತ್ರವಾದ ಸಹ್ಯಾದ್ರಿ ಪರ್ವತ ಪ್ರದೇಶವನ್ನು 'ಸತಿಯ ಪುತೋ' ಎಂದು ಪರಿಭಾವಿಸಲಾಗಿದೆ. ಹಾಗೇ ಇಲ್ಲಿ ಉಕ್ತವಾಗಿರುವ ಅತಿಯನ್ ನೆಡುಮಾನಂಜಿ ಯಾರು ಎಂಬುದು ಶೋಧವಾಗಬೇಕಾಗಿದೆ.

ತಿರುವಣ್ಣಾಮಲೆ ಜಿಲ್ಲೆಯ ಚೆಯ್ಯಾರು ತಾಲೂಕಿನ ಮಾಮಂಡೂರ್, ಒಂದು ಪ್ರಾಚೀನ ಜೈನ ಕೇಂದ್ರವಾಗಿದ್ದಿತು. ಅಲ್ಲಿನ ಬೆಟ್ಟದ ಬಂಡೆಯ ಮೇಲಿನ ಶಾಸನವು ತಮಿಳು - ಬ್ರಾಹ್ಮಿ ಲಿಪಿಯಲ್ಲಿದ್ದು ಸುಮಾರು ಕ್ರಿ.ಶ. ೩-೪ನೇ ಶತಮಾನಕ್ಕೆ ಸೇರಿದುದಾಗಿದೆ. ಅದರಲ್ಲಿ ತೇನೂರನ್ನು ಕಾಣಿಮಾನ್ ಎಂಬ ಸ್ಥಳೀಯ ಪ್ರಭು ಆಕ್ರಮಿಸಿದ ವಿವರ ಹಾಗೂ ಗುಹೆಯಲ್ಲಿ ಜೈನ ಸನ್ಯಾಸಿಗಳಿಗಾಗಿ ಮಾಡಿದ ಶಿಲಾತಾಣದ ಕೆತ್ತನೆಯ ಕೆಲಸವನ್ನು ಚಾಲಾವನ್ ಎಂಬ ಶಿಲ್ಪಿ ಮಾಡಿದಂತೆ ತಿಳಿಸುತ್ತದೆ. ಈ ಶಾಸನದಲ್ಲಿ ಉಕ್ತನಾಗಿರುವ ಸ್ಥಳೀಯ ಪ್ರಭು ಕಣಿಮಾನ್‌ನ ಬಗ್ಗೆ ಆಗಲೀ, ಅವನು ಆಕ್ರಮಿಸಿದ 'ತೇನೂರ್' ಎಂಬ ಸ್ಥಳದ ಬಗ್ಗೆ ಆಗಲೀ ಹೆಚ್ಚಿನ ವಿವರ ಸದ್ಯಕ್ಕೆ ಅಲಭ್ಯ.

ವಿಲುಪ್ಪುರಂ ಜಿಲ್ಲೆಯ ಜಿಂಜಿ ತಾಲೂಕಿನ ಶಿಂಗವರಂ ಸಮೀಪದ ತಿರುನಾಥರ್‌ಕುನ್ರು ಬೆಟ್ಟದಲ್ಲಿನ ಕ್ರಿ.ಶ. ೫-೬ನೆಯ ಶತಮಾನದ ತಮಿಳು-ಬ್ರಾಹ್ಮಿ ಲಿಪಿಯ ಶಾಸನವು 'ಚಂದ್ರನಂದಿ' ಮುನಿಯು ಐವತ್ತೈದು ದಿನಗಳ ಕಾಲ ಉಪವಾಸ ವ್ರತವನ್ನು ಸ್ವೀಕರಿಸಿ ಮುಡಿಪಿದ ವಿವರ ನೀಡುತ್ತದೆ. ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಈ ಸ್ಥಳ ಆರಂಭದಲ್ಲಿ ಜೈನಧರ್ಮದ ಕೇಂದ್ರವೂ ಆಗಿದ್ದಿತೆಂಬುದು ಪ್ರಸ್ತುತ ಶಾಸನದಿಂದ ಮನಗಾಣಬಹುದು.

ತಿರುವಣ್ಣಾಮಲೆ ಜಿಲ್ಲೆಯ ಅನೇಕ ಜೈನ ಕೇಂದ್ರಗಳಲ್ಲಿ ವಂದವಾಸಿ ತಾಲ್ಲೂಕಿನ 'ಪೊನ್ನೂರು' ಹೆಚ್ಚು ಗಮನಾರ್ಹವಾದುದಾಗಿದೆ. ಸುಮಾರು ಕ್ರಿ.ಶ. ೬-೯ನೆಯ ಶತಮಾನಗಳ ಮಧ್ಯಾವಧಿಯಲ್ಲಿ ಜೀವಿಸಿದ್ದ ಹೇಲಾಚಾರ್ಯರೆಂಬ ಜೈನ ಯತಿವರ್ಯರು ಜೈನಧರ್ಮದ ಇತಿಹಾಸದಲ್ಲಿ ಹೆಚ್ಚು ಪ್ರಸಿದ್ಧರಿದ್ದರು. ಅವರು ಅನೇಕ ಜನ ಶ್ರಾವಕ ಮತ್ತು ಕಂತಿಯರನ್ನು ಶಿಷ್ಯರನ್ನಾಗಿ ಪಡೆದಿದ್ದರು. ಅವರೇ ಅಗ್ನಿದೇವತೆ ಎನಿಸಿದ 'ಜ್ವಾಲಮಾಲನಿ' ಯಕ್ಷಿ ಆರಾಧನ ಸಂಪ್ರದಾಯವನ್ನು ವಿಶೇಷವಾಗಿ ಆರಂಭಿಸಿ ಪ್ರಚಾರಕ್ಕೆ ತಂದರು. ಇಲ್ಲಿನ ಚಿಕ್ಕಬೆಟ್ಟ 'ಕನಕಗಿರಿ'ಯಲ್ಲಿರುವ ಆದಿನಾಥನ ಬಸದಿಯಲ್ಲಿ ಅನೇಕ ಅಮೂಲ್ಯ ಕಂಚಿನ ಪ್ರತಿಮೆಗಳಿದ್ದು ಅವುಗಳಲ್ಲಿ ಒಂದು 'ಜ್ವಾಲಮಾಲಿನಿ' ಅಮ್ಮನವರದ್ದಾಗಿದ್ದು ವಿಶಿಷ್ಟವಾದುದಾಗಿದೆ. ಎಂಟು ಕೈಗಳಿಂದ ಕೂಡಿರುವ ಆ ಬಿಂಬದ ಪ್ರತಿಮೆಯ ತಲೆಯ ಹಿಂಬದಿ ಪ್ರಭಾವಳಿಯಿಂದ ಅಲಂಕೃತಗೊಂಡಿದೆ. ಬಲಗಡೆಯ ಕೈಗಳಲ್ಲಿ ಗುರಾಣಿ, ಅಭಯ, ಶೂಲ ಮತ್ತು ದಂಡ, ಎಡಗಡೆಯ ಕೈಗಳಲ್ಲಿ ಶಂಖ, ಖೇಟಕ ಕಪಾಲ ಮತ್ತು ಪುಸ್ತಕಗಳಿವೆ. ಇದು ಹಿಂದೂಗಳ ಮಹಾಕಾಳಿಯ ರೂಪವನ್ನು ಹೋಲುತ್ತದೆ ಎಂದು ಅಭಿಪ್ರಾಯವಿದೆ.

ಇಲ್ಲಿನ ಆದಿನಾಥ ದೇವಾಲಯದ ಮುಂದಿನ ಮಹಾಮಂಟಪದ ಪೂರ್ವ ತಳಹದಿಯ ಮೇಲಿರುವ ಕ್ರಿ.ಶ. ೧೨೫೭ರ ಪಾಂಡ್ಯ ಮಾರವರ್ಮನೆಂಬ ವಿಕ್ರಮ ಪಾಂಡ್ಯನ ಶಾಸನವು ವಿಡಾಲ್‌ಪಟ್ರುವಿನ ನಾಟ್ಟವರ್‌ಗಳು ಆದಿನಾಥ ದೇವರ ಪೂಜಾಕೈಂಕರ್ಯ ಹಾಗೂ ಬಸದಿಯ ಜೀರ್ಣೋದ್ಧಾರಕ್ಕೆ ಪಳ್ಳಿ ವಿಳಾಗಮ್ ಅವರಿಂದ ಸಲ್ಲಬೇಕಾದ ತೆರಿಗೆಗಳನ್ನು ದತ್ತಿ ನೀಡಿರುವ ವಿವರವನ್ನು ದಾಖಲಿಸುತ್ತದೆ. ಅದೇ ಮಂಟಪದ ತೊಲೆಯ ಮೇಲಿನ ತ್ರುಟಿತ ಶಾಸನ ವಿಜಯನಗರದ ಸಾಳುವ ನರಸಿಂಹನ ಕಾಲದ್ದಾಗಿದ್ದು 'ಪೊನ್ನೂರಿನ ಕನಕಮಲೈ ಆಳ್ವಾರ್' ಎಂಬ ಬರಹ ಕಂಡುಬರುತ್ತದೆ. ಅದೇ ಸ್ಥಳದ ಇನ್ನೊಂದು ಶಾಸನ ಕ್ರಿ.ಶ. ೧೭೩೩ರದ್ದಾಗಿದ್ದು, ಸ್ವರ್ಣಪುರದ ಜೈನರು ಪ್ರತಿ ಭಾನುವಾರ ಪಾರ್ಶ್ವನಾಥ ಮತ್ತು ಜ್ವಾಲಮಾಲಿನಿ ಅಮ್ಮನವರ ಪ್ರತಿಮೆಗಳನ್ನು ಆದೀಶ್ವರ ದೇವಾಲಯದಿಂದ ವಾಯವ್ಯಕ್ಕಿರುವ ನೀಲಗಿರಿ ಪರ್ವತದಲ್ಲಿರುವ ಹೇಲಾಚಾರ್ಯರ ಪೂಜಾ ಸಂದರ್ಭದಲ್ಲಿ ತೆಗೆದುಕೊಂಡು ಹೋಗಬೇಕೆಂದು ತಿಳಿಸುತ್ತದೆ. ಇಲ್ಲಿ ಉಕ್ತವಾಗಿರುವ ಸುವರ್ಣಪುರ ಎಂಬುದು 'ಪೊನ್ನೂರಿನ' ಸಂಸ್ಕೃತ ರೂಪ. ಕನಕಗಿರಿ ಎಂಬುದು ಆದಿನಾಥ ದೇವಾಲಯವಿರುವ ಚಿಕ್ಕ ಬೆಟ್ಟವೇ ಆಗಿದೆ. ನೀಲಗಿರಿ ಎಂಬುದು ಹೇಮಾಚಾರ್ಯರ ಪವಿತ್ರ ಪಾದಗಳಿರುವ ದೊಡ್ಡ ಬೆಟ್ಟವಾಗಿದೆ.

ಪ್ರಸಿದ್ಧ ಹೇಲಾಚಾರ್ಯ ಮುನಿಗಳು ದ್ರಾವಿಡ ಗಣಕ್ಕೆ ಸೇರಿದವರೆಂದೂ, ಹೇಮಗ್ರಾಮದ ನಿವಾಸಿಗಳೆಂದೂ ಹೇಳಲಾಗಿದೆ. ಇಲ್ಲಿನ ಹೇಮಗ್ರಾಮ ಎಂಬುದು ಪೊನ್ನೂರೇ ಆಗಿದೆ. ನೀಲಗಿರಿ ಪರ್ವತವು ಜ್ವಾಲಮಾಲನಿಯ ಆವಾಸ ಸ್ಥಾನವೆಂದು ಭಾವಿಸಲಾಗಿದೆ. ಆಕೆಯ ಆರಾಧನ ಸಂಪ್ರದಾಯದ ಪ್ರವರ್ತಕರು ಹೇಲಾಚಾರ್ಯರಾಗಿದ್ದು ಮುಂದೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದಲ್ಲಿದ್ದ ಇಂದ್ರನಂದಿ ಯೋಗೀಂದ್ರರ ಮೂಲಕ ಈ ಸಂಪ್ರದಾಯ ಹೆಚ್ಚು ಪ್ರಸಾರವನ್ನು ಹೊಂದಿತು. ಒಟ್ಟಾರೆ ಜ್ವಾಲಮಾಲಿನಿ ಅಮ್ಮನವರ ಆರಾಧನೆ ಈ ಪೆರ್ಬಾಣವಾಡಿ ಪ್ರದೇಶದಲ್ಲೇ ಮೊದಲಿಗೆ ಹೇಲಾಚಾರ್ಯರಿಂದ ಆರಂಭಗೊಂಡಿತೆಂದು ಹೇಳಬಹುದಾಗಿದೆ.

ಇದೇ ಜಿಲ್ಲೆಯ ವೇಡಾಲ್ ಸಮೀಪದ ಬೆಟ್ಟಗುಡ್ಡಗಳು ಅನೇಕ ಜೈನ ಅವಶೇಷಗಳಿಂದ ಕೂಡಿದೆ. ಅಲ್ಲಿ ದೊರೆತಿರುವ ಪಲ್ಲವ ನಂದಿವರ್ಮನ ಹಾಗೂ ಚೋಳ ದೊರೆ ಆದಿತ್ಯನ ಶಾಸನಗಳಲ್ಲಿ ಆ ಸ್ಥಳವನ್ನು ವಿಡಾಲ್ ಅಥವಾ ವಿಡಾಲ್‌ಪಳ್ಳಿ ಎಂದು ಕರೆದಿವೆ. 'ಪಳ್ಳಿ' ಎಂಬುದು ಸಾಮಾನ್ಯವಾಗಿ ಜೈನಮಠವಿರುವ ವಿದ್ಯಾಸಂಸ್ಥೆ ಆಗಿರುತ್ತದೆ. ಅಲ್ಲಿನ ಆಂಡಾರ್ ಮಡಂ ಎಂದು ಕರೆಯುವ ಮಠದ ಸ್ವಾಭಾವಿಕ ಗುಹೆಯ ಬಂಡೆಯ ಒಂದರ ಮೇಲೆ ಪಲ್ಲವರ ಶಾಸನವಿದ್ದರೆ ಅಲ್ಲಿಯೇ ಇನ್ನೊಂದು ಬಂಡೆಯ ಮೇಲೆ ಚೋಳ ರಾಜಕೇಸರಿವರ್ಮನಾದ ಮೊದಲನೆಯ ಆದಿತ್ಯನ ಶಾಸನವಿದೆ. ಆ ಶಾಸನದಲ್ಲಿ ಅಲ್ಲಿನ ಮಠವು ಜೈನ ಕಂತಿಯರ ಆವಾಸ ಸ್ಥಾನವಾಗಿದ್ದುದನ್ನು ಬಿಂಬಿಸುತ್ತದೆ. ವಿಡಾಲ್ ಎಂಬ 'ಮಾದೇವಿ ಆರಂದಿಮಂಗಲಂ'ನ ಗುಣಕೀರ್ತಿ ಭಟಾರರ ಮಹಿಳಾ ಅನುಯಾಯಿಯಾದ ಕನಕ ವೀರಕುರುತ್ತಿಯಾರ್ ಎಂಬುವರ ೫೦೦ ಮಂದಿ (ಸ್ತ್ರೀ) ಶಿಷ್ಯೆಯರು ಹಾಗೂ ४೦೦ ಮಂದಿ (ಸ್ತ್ರೀ) ಸನ್ಯಾಸಿನಿ (ಕಂತಿ) ಯರ ಮಧ್ಯೆ ವಿವಾದವೇರ್ಪಟ್ಟಿದ್ದ ಸಂಗತಿಯನ್ನು ಕ್ರಿ.ಶ. ೮೮೫ರ ಶಾಸನ ನಿರೂಪಿಸುತ್ತದೆ. ಆಗ ಕನಕವೀರ ಕುರತ್ತಿಯಾರ್‌ರ ಸ್ಥಳೀಯ ಭಕ್ತರು, ಆಕೆ ಮತ್ತು ಆಕೆಯ ಶಿಷ್ಯೆಯರ ಆಹಾರಕ್ಕಾಗಿ ವ್ಯವಸ್ಥೆ ಮಾಡಿರುವ ಸಂಗತಿ ಶಾಸನದಲ್ಲಿ ದಾಖಲಾಗಿದೆ. ಈ ಶಾಸನದ ಪ್ರಕಾರ ವಿಡಾಲ್ ಸ್ಥಳವು ಸಿಂಗಪುರನಾಡಿನ ಭಾಗವೆಂದು ತಿಳಿಯುತ್ತದೆ. ಈ ಶಾಸನದಿಂದ ವಿಡಾಲ್ ಸ್ಥಳದ ಜೈನಮಠವು ಜೈನ ಕಂತಿಯರಿಗಾಗಿಯೇ ಇದ್ದ ಮಠವೆಂದು ತೋರುತ್ತದೆ. ಅಲ್ಲದೆ ಅಲ್ಲಿ ೯೦೦ಕ್ಕೂ ಅಧಿಕ ಸಂಖ್ಯೆಯ ನಿವಾಸಿ (Residential) ಜೈನ ಅನುಯಾಯಿ ಹಾಗೂ ಸನ್ಯಾಸಿನಿಯರಿಗೆ ಅದು ಆಶ್ರಯ ತಾಣವಾಗಿದ್ದಿತು. ಪ್ರಸ್ತುತ ಶಾಸನದಲ್ಲಿ ಆ ಎರಡೂ ಗುಂಪುಗಳ ಮಧ್ಯೆ ಉಂಟಾಗಿದ್ದ ವಿವಾದದ ಬಗ್ಗೆ ಆಗಲೀ ಅಥವಾ ಅದು ಹೇಗೆ ಸೂಕ್ತವಾಗಿ ಪರಿಹಾರವಾಯಿತೆಂಬುದರ ಬಗ್ಗೆ ಆಗಲಿ ವಿವರಣೆ ದೊರೆಯುವುದಿಲ್ಲ. ಅದೇ ಬಂಡೆಗಲ್ಲಿನ ಮೇಲಿನ ಶಾಸನ ತ್ರುಟಿತವಿದ್ದು ಆ ಸ್ಥಳವನ್ನು 'ಮಾದೇವಿ ಆರನ್‌ದಿ ಮಂಗಲಂ' ಎಂದು ಉಲ್ಲೇಖಿಸುತ್ತದೆ.

ತಿರುವಣ್ಣಾಮಲೆ ಜಿಲ್ಲೆಯ ಮತ್ತೊಂದು ಪ್ರಸಿದ್ಧ ಜೈನ ಕೇಂದ್ರವೆಂದರೆ ತಿರುಮಲೆ ಅಥವಾ 'ವೈಗೈ ತಿರುಮಲೆ' ಎಂಬ ಪೋಳೂರು ತಾಲೂಕಿನ ಸ್ಥಳ. ಈ ಸ್ಥಳದ ಸಮೀಪದ ಬೆಟ್ಟಗುಡ್ಡಗಳಲ್ಲಿ ಅನೇಕ ಶಾಸನಗಳಿದ್ದು ಗಮನ ಸೆಳೆಯುತ್ತವೆ. ಅವುಗಳಲ್ಲಿ ಪ್ರಾಚೀನತಮವಾದುದು ಚೋಳ ರಾಜ ಮೊದಲನೆಯ ಪರಾಂತಕನದು. ಸುಮಾರು ಕ್ರಿ.ಶ. ೯೧೦ಕ್ಕೆ ಸೇರಿದ ಆ ಶಾಸನವು ಕಡುತ್ತಲೈ ಸ್ಥಳದ ಇಬ್ಬರು ನಿವಾಸಿಗಳು ವೈಗಾವೂರಿನ ಜೈನ ಬಸದಿಯ ಒಬ್ಬ ಜೈನಭಕ್ತನ ಆಹಾರಕ್ಕಾಗಿ ಚಿನ್ನವನ್ನು ದತ್ತಿ ಇಟ್ಟ ಸಂಗತಿಯನ್ನು ನಿರೂಪಿಸುತ್ತದೆ. ಅಲ್ಲಿನ ಇನ್ನೊಂದು ಶಾಸನವು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದ್ದಾಗಿದ್ದು ಆತನ ಮಡದಿ ಗಂಗಮಾದೇವಿಯ ಸೇವಕನೋರ್ವನಿಂದ ವೈಗವೂರ್ ಸಮೀಪದ ತಿರುಮಲೆ ಬೆಟ್ಟದ ಮೇಲಿನ ಯಕ್ಷನಿಗೆ ನಂದಾ ದೀಪಕ್ಕಾಗಿ ದತ್ತಿ ಬಿಟ್ಟ ವಿವರವನ್ನು ದಾಖಲಿಸಿದೆ. ಅದೇ ಬೆಟ್ಟದ ಬುಡದಲ್ಲಿನ ಕ್ರಿ.ಶ. ೧೦೦೫ರ ಚೋಳದೊರೆ ಮೊದಲನೆಯ ರಾಜರಾಜನ ಶಾಸನವು ಪ್ರಸಿದ್ಧ ಜೈನ ಗುರು ಗುಣವೀರಮಾ ಮುನಿಯು ವೈಗೈ ಮಲೆಯ ಸಮೀಪದಲ್ಲಿನ ಕೆರೆಗೆ ತೂಬೊಂದನ್ನು ಕಟ್ಟಿಸಿ ಅದಕ್ಕೆ ಆತನ ಗುರು 'ಗಣಿಶೇಖರ ಮರುಪೊರ್‍ಚೂರಿಯನ್' ಎಂಬ ಹೆಸರನ್ನು ಇಟ್ಟಿರುವ ವಿವರವನ್ನು ನೀಡುತ್ತದೆ.

ಕ್ರಿ.ಶ. ೧೦೨೩ ಮತ್ತು ೧೦೨४ಕ್ಕೆ ಸೇರಿದ ಚೋಳ ದೊರೆ ಮೊದಲನೆಯ ರಾಜೇಂದ್ರನ ಎರಡು ಶಾಸನಗಳು ಅದೇ ತಿರುಮಲೆ ಬೆಟ್ಟದ ಬೇರೆ ಬೇರೆ ಎಡೆಗಳಲ್ಲಿದ್ದು, ಅವುಗಳಲ್ಲಿ ಒಂದು ಶಾಸನವು; ಇಳಯಮಣಿ ನಂಗೈ ಎಂಬುವ ಮಹಿಳೆಯು ವೈಗವೂರಿನ ತಿರುಮಲೆಯಲ್ಲಿನ ಆರಂಭನಂದಿ ದೇವರ ಮುಂದೆ ನಂದಾದೀವಿಗಾಗಿ ವ್ಯವಸ್ಥೆ ಮಾಡಿರುವ ವಿವರಗಳನ್ನು ನೀಡುತ್ತದೆ. ಇಲ್ಲಿ ಉಲ್ಲೇಖವಾಗಿರುವ 'ಆರಂಭನಂದಿ ದೇವರು' ಎಂಬುದು ಆದಿನಾಥ ಅಥವಾ ವೃಷಭನಾಥನ ಸೂಚಕವಾಗಿದೆ. ಅದೇ ಶಾಸನದಲ್ಲಿ ಆ ಹಿಂದೆ ಪಲ್ಲವರಾಣಿ ಶಿಣ್ಣವೈ ಎಂಬುವಳೂ ನಂದಾದೀವಿಗೆಗಾಗಿ ದತ್ತಿ ಬಿಟ್ಟಿದ್ದ ವಿವರಣೆ ಸಾಂದರ್ಭಿಕವಾಗಿ ಬಂದಿದೆ. ಇನ್ನೊಂದು ಶಾಸನವೂ ನಂದಾ ದೀಪಕ್ಕೆ ಸಂಬಂಧಿಸಿದ ಶಾಸನವೇ ಆಗಿದ್ದು ಅದನ್ನು ಮಲ್ಲಿಯೂರ್‌ನ ನಿವಾಸಿ, ನನ್ನಪ್ಪಯ್ಯನೆಂಬ ವರ್ತಕನ ಮಡದಿ ಚಾಮುಂಡಬ್ಬೆ ಎಂಬುವಳು ಪವಿತ್ರ ವೈಗೂರಿನ ಬೆಟ್ಟದ ಮೇಲಿನ ಶ್ರೀ ಕುಂದವ್ವೆ ಜಿನಾಲಯದ ದೇವರ ನಂದಾದೀವಿಗೆಗೆ ವ್ಯವಸ್ಥೆ ಮಾಡಿರುವ ವಿವರವನ್ನು ನೀಡುತ್ತದೆ. ಇಲ್ಲಿ ಉಕ್ತಳಾಗಿರುವ ಕುಂದವ್ವೆಯು ಚೋಳ ದೊರೆ ರಾಜರಾಜನ ಹಿರಿಯ ಸೋದರಿ ಎಂದು ಅಭಿಪ್ರಾಯವಿದೆ. ಅವಳು ಅನೇಕ ಶಿವ, ವಿಷ್ಣು ದೇವಾಲಯಗಳಿಗೂ ವಿಪುಲ ದಾನ ದತ್ತಿಗಳನ್ನು ನೀಡಿರುವ ಸಂಗತಿ ಬೇರೆ ಶಾಸನಗಳಿಂದ ತಿಳಿದು ಬರುತ್ತದೆ; ಅಲ್ಲದೆ ಈಕೆ ವಿಲುಪ್ಪುರಂ ಜಿಲ್ಲೆಯ ದಿಂಡಿವನಂ ತಾಲೂಕಿನ ದಾದಾಪುರಂ ಮತ್ತು ತಿರುಚಿನಾಪಳ್ಳಿ ಜಿಲ್ಲೆಯ ತಿರುಮಲವಾಡಿ ಸ್ಥಳಗಳಲ್ಲೂ ಒಂದೊಂದು ಬಸದಿಗಳನ್ನು ಕಟ್ಟಿಸಿದಳೆಂದು ತಿಳಿಯುತ್ತದೆ. ಬೆಟ್ಟದ ಮೇಲಿನ ಈ ಜಿನಾಲಯವು ಚೋಳರಾಜಕುಮಾರಿ ಕುಂದವ್ವೆಯಿಂದ ಸ್ಥಾಪಿತವಾದುದರಿಂದಾಗಿ ಶಾಸನಗಳು ಇದನ್ನು 'ಶ್ರೀ ಕುಂದವ್ವೆ ಜಿನಾಲಯ' ಎಂದು ಕರೆದಿರುವಂತೆ ತೋರುತ್ತದೆ.

ಇಲ್ಲಿನ ಗುಹೆಯ ಕೆಳಗಿರುವ ಚಿಕ್ಕ ಬಸದಿಯಲ್ಲಿನ ಶಾಸನವು ಕಡೈಕ್ಕೊಟ್ಟೂರಿನಿಂದ ಆಗಮಿಸಿದ್ದ ಅರಿಷ್ಟ ನೇಮಿ ಆಚಾರ್ಯ ಎಂಬುವರು ಅಲ್ಲಿ ಯಕ್ಷಿಯ ಪ್ರತಿಮೆಯನ್ನು ಸ್ಥಾಪಿಸಿದ ವಿಷಯವನ್ನು ತಿಳಿಸುತ್ತದೆ. ಇಲ್ಲಿ ಉಕ್ತನಾಗಿರುವ ಅರಿಷ್ಟ ನೇಮಿಯು ಇದೇ ತಿರುಮಲೆಯ ಜೈನ ಗುರು 'ಪರವಾದಿಮಲ್ಲ'ನ ಶಿಷ್ಯನಾಗಿದ್ದನು. ಮೂಲತಃ ಚೋರ

ವಂಶೀಯಳಾದ ರಾಜಕುಮಾರಿ ಎಳಿನಿ ಎಂಬುವಳು ಇಲ್ಲಿನ ಪವಿತ್ರ ಅರಹಂತನ ಬೆಟ್ಟದ ಮೇಲೆ ಯಕ್ಷ, ಯಕ್ಷಿಯರನ್ನು ಸ್ಥಾಪಿಸಿದಳೆಂದೂ, ಅವು ಕಾಲಾಂತರದಲ್ಲಿ ನಶಿಸಿ ಹೋಗಿದ್ದರಿಂದ ಮುಂದೆ ಆಕೆಯ ವಂಶೀಯನಾದ ಚೋರ ರಾಜರಾಜನ ಪುತ್ರ ವಿಡುಗಳಾಗಿಯ ಪೆರುಮಾಳ್ ಎಂಬುವನು ಆ ಎರಡೂ ಬಿಂಬಗಳನ್ನೂ ಜೀರ್ಣೋದ್ಧಾರ ಮಾಡಿದನೆಂದು ವಿವರ ಹಾಗೂ ಪೂಜಾ ಸಂದರ್ಭದಲ್ಲಿ ಬಳಸಲು ಜಾರ್ಗತೆ ಮತ್ತು ನೀರಿಗಾಗಿ ಕಾಲುವೆಯನ್ನು ತೋಡಿಸಿದ ವಿವರಗಳು ಶಾಸನವೊಂದರಲ್ಲಿ ದಾಖಲಾಗಿವೆ. ಶಾಸನದ ಸಂಸ್ಕೃತ ಭಾಗದಲ್ಲಿ ತಿರುಮಲೆ ಬೆಟ್ಟವನ್ನು 'ತುಣ್ಡೀರಾಹ್ವಯ ಮಂಡಲಾರ್ಹಸುಗಿರಿ' (ತುಂಡೀರ ರಾಜ್ಯದ ಅರ್ಹಂತನ ಪ್ರಸಿದ್ಧ ಬೆಟ್ಟ) ಎಂದು ಕರೆಯಲಾಗಿದೆ. ತುಂಡೀರ ಎಂದರೆ ಚೋಳರ ರಾಜ್ಯ. ತಮಿಳಿನಲ್ಲಿ ಆ ಬೆಟ್ಟವನ್ನು 'ಎಣ್ಣುಗ್ಗಣವಿರೈ ತಿರುಮಲೈ' ಎಂದೂ ಕರೆಯಲಾಗಿದೆ. ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದು ಮಂಟಪದ ಗೋಡೆಯ ಮೇಲಿದ್ದು, ಪೊನ್ನೂರಿನ ಮಣ್ಣೈ ಪೊನ್ನಾಂಡೈನ ಮಗಳಾದ ನಲ್ಲತ್ತಾಳ್ ಎಂಬುವಳು ಪೊನ್ನೆಯಿಲ್ ನಾಥನ ವಿಹಾರ ನಾಯನಾರ್‌ಗಳನ್ನು ಮಾಡಿಸಿ ಕೊಟ್ಟಳೆಂಬ ವಿವರ ನೀಡುತ್ತದೆ. ಇಲ್ಲಿ ಉಕ್ತವಾಗಿರುವ 'ವಿಹಾರ ನಾಯನಾರ್' ಎಂಬುದು ಉತ್ಸವ ಮೂರ್ತಿಯನ್ನು ಸೂಚಿಸುತ್ತದೆ ಎಂದು ತೋರುತ್ತದೆ.

ಹೀಗೆ ವೈಗೈ ತಿರುಮಲೆಯ ಈ ಪ್ರದೇಶದ ಒಂದು ಪ್ರಾಚೀನ ಹಾಗೂ ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು. ಇದು ಮೊದಲಿಗೆ ಪೆರ್ಬಾಣವಾಡಿಯ ಕರೈವಲಿನಾಡಿನ ಭಾಗವಾಗಿದ್ದಿತು. ಚೋಳರ ಆಳ್ವಿಕೆಯ ಕಾಲದಲ್ಲಿ ಜಯಗೊಂಡ ಚೋಳಮಂಡಲದ ಪಾಂಗಲನಾಡಿನ ಭಾಗವಾಗಿದ್ದಿತು. ಈಗಲೂ ವೈಗೈ ತಿರುಮಲೆಯ ಪರಿಸರದಲ್ಲಿ ಹಲವು ಜೈನ ಕುಟುಂಬಗಳು ನೆಲೆಸಿದ್ದು ಅವರ ಬಳಿ ಅನೇಕ ಜೈನ ಸಂಬಂಧಿ ಸಾಹಿತ್ಯಿಕ ಮತ್ತು ಜೈನ ಶಾಸ್ತ್ರ ಕೃತಿಗಳು ಉದಾ: ತ್ರೈಲೋಕ್ಯ ಚೂಡಾಮಣಿ (ಪ್ರಾಕೃತ), ತತ್ತ್ವಾರ್ಥಸೂತ್ರಂ (ಸಂಸ್ಕೃತ) ಹರಿಚಂದ್ರರ ಜೀವಂಧರ ಚಂಪೂ (ಸಂಸ್ಕೃತ) ಗುಣಭದ್ರರ ಮಹಾಪುರಾಣ, ಯತ್ಯಾಚಾರಧರ್ಮ (ಸಂಸ್ಕೃತ) ಕುಂತನಾಥ ಸ್ವಾಮಿ ಪುರಾಣಂ (ತಮಿಳು), ಶ್ರೀಪುರಾಣಂ (ತಮಿಳು) ಮುಂತಾದವು ಲಭ್ಯವಿರುವುದಾಗಿ ತಿಳಿದು ಬಂದಿದೆ.

ತಿರುವಣ್ಣಾಮಲೆ ಜಿಲ್ಲೆ ವಂದವಾಸಿ ತಾಲೂಕಿನ ಮತ್ತೊಂದು ಜೈನ ಕೇಂದ್ರ ಪಂಚಪಾಂಡವಮಲೆ. ಇದನ್ನು 'ತಿರುಪ್ಪಾಮಲೆ' ಎಂದೂ ಕರೆಯಲಾಗಿದೆ. ಈ ಮಲೆಯಲ್ಲಿ ಎರಡು ಗವಿಗಳಿದ್ದು ಒಂದು ಸ್ವಾಭಾವಿಕ ಇನ್ನೊಂದು ಕೃತಕ. ಈ ಮಲೆಯಲ್ಲಿನ ಸುಮಾರು ಕ್ರಿ.ಶ. ೮ನೆಯ ಶತಮಾನದ ಪಲ್ಲವರಾಜ ನಂದಿವರ್ಮನ ಆಳ್ವಿಕೆಯ ಕಾಲದ ಶಾಸನವು 'ಪುಗಳಾಲೈಮಂಗಲಂನ ನಿವಾಸಿಯಾದ ನಾರಣನ್ ಎಂಬುವನು ಪೊನ್ನಿಯಕ್ಕಿಯಾರ್ ಮತ್ತು ತನ್ನ ಗುರುಗಳಾದ ನಾಗನಂದಿ ಅವರ ಪ್ರತಿಮೆಗಳನ್ನು ಸ್ಥಾಪಿಸಿದನೆಂದು, ತಿಳಿಸುತ್ತದೆ. ಇಲ್ಲಿ ಉಕ್ತನಾಗಿರುವ ನಾರಣನ್ ಒಬ್ಬ ನಿಷ್ಠಾವಂತ ಜೈನ ಧರ್ಮೀಯನೆಂದೂ ಆತನ ಗುರುಗಳಾದ ನಾಗನಂದಿ ಯತಿಗಳು ಪ್ರಸಿದ್ಧರೆಂದು ತೋರುತ್ತದೆ. ಇಲ್ಲಿ ಉಕ್ತವಾಗಿರುವ 'ಪೊನ್ನಿಯಕ್ಕಿಯರ್'ನ್ನು ಪೊನ್ + ಇಯಕ್ಕಿಯರ್ ಎಂದು ಬಿಡಿಸಿಕೊಳ್ಳಬಹುದು. ಪೊನ್ ಎಂದರೆ ಚಿನ್ನ ಮತ್ತು ಇಯಕ್ಕಿ ಎಂಬುದು 'ಯಕ್ಷಿ'ಯ ತಮಿಳು ರೂಪ. ಯಕ್ಷಿಯು ಜಿನನ ಸೇವಕಿ. ಇಲ್ಲಿನ ಪೊನ್ನಿಯಕ್ಕಿಯರ್ ಪ್ರಾಯಶಃ ಜೈನ ಸಿದ್ಧಾಯಿಕೆ ಇರಬಹುದು. ಸಿದ್ಧಾಯಿಕೆ ಮಹಾವೀರ ತೀರ್ಥಂಕರನ ಯಕ್ಷಿ. ಯತಿ ನಾಗನಂದಿಯು ಈ ಯಕ್ಷಿಯ ಆರಾಧನೆಯನ್ನು ಹೆಚ್ಚು ಪ್ರಸಿದ್ಧಿಗೆ ತಂದವನಾಗಿದ್ದಾನೆ. ಇದು ದಕ್ಷಿಣ ಭಾರತದ ಯಕ್ಷಿ ಆರಾಧನೆಯ ಪ್ರಾಚೀನತಮ ಶಾಸನಾಧಾರಿತ ಉಲ್ಲೇಖವೆಂದು ತೋರುತ್ತದೆ.

ಅದೇ ಬೆಟ್ಟದಲ್ಲಿನ ಕ್ರಿ.ಶ. ೯೮೪-೮೫ರ ಇನ್ನೊಂದು ಶಾಸನ ಚೋಳ ದೊರೆ ರಾಜರಾಜನ ಕಾಲದ್ದಾಗಿದ್ದು ಆತನ ಸಾಮಂತ ಲಾಟರಾಜ ವೀರಚೋಳನು ಒಬ್ಬ ನಿಷ್ಠಾವಂತ ಜೈನಾನುಯಾಯಿಯಾಗಿ ತೀರ್ಥಂಕರರ ಪಾದಾರಾಧಕನಾಗಿದ್ದನು. ಈತನು ಕೂರಗನಪಾಡಿ (ಕೂರಂಬಾಡಿ)ಯ ಕೆಲವು ಆದಾಯಗಳನ್ನು ತನ್ನ ರಾಣಿಯ ಆಶಯದಂತೆ ಜಿನನಿಗೆ ಪಳ್ಳಿಚ್ಚಂದ ದತ್ತಿಯಾಗಿ ಬಿಟ್ಟ ವಿವರವನ್ನು ನೀಡುತ್ತದೆ. ಈ ಬೆಟ್ಟವನ್ನು ಹಿಂದೆಯೇ ಉಲ್ಲೇಖಿಸಿರುವಂತೆ 'ತಿರುಪ್ಪಾಮಲೈ' ಎಂದೂ ಕರೆಯುತ್ತಾರೆ. ಇದನ್ನು ತಿರು, ಪಾಲ್, ಮಲೈ ಎಂದು ಮೂರು ಪದಗಳಾಗಿ ಬಿಡಿಸಿಕೊಳ್ಳಬಹುದು. 'ತಿರು' ಎಂಬುದು ಸಂಸ್ಕೃತದ 'ಶ್ರೀ' ಆಗಿದ್ದು ಪವಿತ್ರ ಎಂಬ ಅರ್ಥವಿದೆ. 'ಪಾಲ್' ಎಂದರೆ ಹಾಲು, 'ಮಲೈ' ಎಂದರೆ ಬೆಟ್ಟ ಅಥವಾ ಗುಡ್ಡ. ಒಟ್ಟಾರೆ 'ಪವಿತ್ರ ಹಾಲು ಗುಡ್ಡ' ಎಂದು ಇದನ್ನು ಕರೆಯಬಹುದು. ನೆರೆಹೊರೆಯ ಜೈನರಿಗೆ ಈ ಬೆಟ್ಟವು ಒಂದು ಪ್ರಾಚೀನ ಪವಿತ್ರ ಜೈನ ಕ್ಷೇತ್ರವಾಗಿದ್ದಿತು ಎಂದು ಧಾರಾಳವಾಗಿ ಹೇಳಬಹುದು. ಈ ಬೆಟ್ಟದ ಸಮೀಪದಲ್ಲೇ ವಿಳಾಪಾಕ್ಕಂ ಎಂಬ ಗ್ರಾಮವಿದೆ. ಆ ಗ್ರಾಮದಲ್ಲಿ ತೀರ್ಥಂಕರನ ವಿಗ್ರಹವೊಂದು ಕಂಡುಬಂದಿದೆ. ಇದಕ್ಕಿಂತ ಹೆಚ್ಚಾಗಿ ಈ ಊರಿನ ನಾಗನಾಥೇಶ್ವರ ದೇವಾಲಯದ ಬಳಿ ಲಭ್ಯವಾಗಿರುವ ಶಾಸನ ಹೆಚ್ಚು ಗಮನಾರ್ಹವಾದುದಾಗಿದೆ. ಅದು ಕ್ರಿ.ಶ. ೯೪೫ಕ್ಕೆ ಸೇರಿದ ಚೋಳ ದೊರೆ ಮೊದಲನೆಯ ಪರಾಂತಕನ ಕಾಲದ್ದಾಗಿದ್ದು, ವಿಳಾಪಾಕ್ಕಂ ಗ್ರಾಮದಲ್ಲಿ 'ಪಟ್ಟನಿ ಕುರತ್ತಿ ಅಡಿಗಳ್' ಎಂಬುವರಿಂದ ವಾಸಕ್ಕೆ ಮನೆಯೊಂದನ್ನೂ ನೀರಿಗಾಗಿ ಬಾವಿಯೊಂದನ್ನು ಮಾಡಿಸಿ ಅಲ್ಲಿನ ೨೪ ಜನ ಸಭೆಯವರ ಮೇಲ್ವಿಚಾರಣೆಗೆ ಒಪ್ಪಿಸಿದ ವಿವರ ನೀಡುತ್ತದೆ. ಇಲ್ಲಿ ಉಕ್ತಳಾಗಿರುವ 'ಪಟ್ಟನಿ ಕುರತ್ತಿ ಅಡಿಗಳ್' ಎಂಬುವವರು ಒಬ್ಬ ಸಮರ್ಥ ಮಹಿಳಾ ಗುರುಗಳಾಗಿದ್ದರು ಮತ್ತು ತಿರುಪ್ಪಾಮಲೆಯು ಒಂದು ದೊಡ್ಡ ಜೈನ ಕೇಂದ್ರವಾಗಿದ್ದಿತು ಎಂದು ಹೇಳಬಹುದಾಗಿದೆ. ಪ್ರಸಿದ್ಧ ಅರಿಷ್ಟ ನೇಮಿ ಭಟಾರರ

ಶಿಷ್ಯೆಯಾಗಿದ್ದ ಪಟ್ಟನಿ ಕುರತ್ತಿ ಅಡಿಗಳನ್ನು 'ಪಟ್ಟಣಿ ಗುರುವಡಿಗಳ್' ಎಂದು ಕರೆಯಬಹುದು. ಈ ಸ್ಥಳವು ಯಕ್ಷಿಯ ಆರಾಧನೆ ಮತ್ತು ವೇಡಾಲ್ ನಂತೆ ಮಹಿಳಾ ಗುರುವಡಿಗಳ ಮತ್ತು ಕಂತಿಯರ ಆವಾಸ ಸ್ಥಾನವಾಗಿದ್ದಿತೆಂದು ಹೇಳಬಹುದಾಗಿದೆ.

ತಿರುವಣ್ಣಾಮಲೆ ಜಿಲ್ಲೆಯ ವಂದವಾಸಿ ತಾಲೂಕಿನ ಕೀಳ್‌ಸಾತ್ತ ಮಂಗಲಂನಲ್ಲಿ ೧೪೦೦ ವರ್ಷಗಳಷ್ಟು ಪ್ರಾಚೀನವಾದ ಚಂದ್ರನಾಥ ತೀರ್ಥಂಕರರ ಬಸದಿ ಇದೆ. ಇಲ್ಲಿಗೆ ಸಮೀಪದ ಬೆಟ್ಟದಲ್ಲಿ ಪಲ್ಲವ ನಂದಿವರ್ಮನ ಶಿಲಾಶಾಸನವಿದೆ. ಇಲ್ಲಿನ ಮಾನಸ್ತಂಭ ೩೩ ಅಡಿ ಎತ್ತರವಾಗಿದ್ದು ಏಕ ಶಿಲೆಯಿಂದಾದುದಾಗಿದೆ. ಇದು ಒಂದು ಗಮನಾರ್ಹ ಜೈನ ನೆಲೆಯಾಗಿದ್ದಿತು. ಅಲ್ಲಿನ ಕೆಲವು ಶಾಸನಗಳೂ ಜೈನಮುನಿಗಳ ಆಹಾರದಾನಕ್ಕಾಗಿ ದತ್ತಿ ಬಿಟ್ಟವಿವರವನ್ನು ನೀಡುತ್ತವೆ. ಕ್ರಿ.ಶ. ೮ನೆಯ ಶತಮಾನದ ಶಾಸನವೊಂದು ಇಳಯರಪ್ಪಾಂಡಿ ಎಂಬುದು ೭ ಕಟಂಜು ಚಿನ್ನವನ್ನು ಜೈನಮುನಿಗಳ ಆಹಾರ ದಾನಕ್ಕಾಗಿ ದತ್ತಿ ಇಟ್ಟು ಪ್ರತಿದಿನ ಒಂದು ಕಟಂಜುವಿಗೆ ಒಂದು ಉಳಕ್ಕು ಅಕ್ಕಿಯನ್ನು ಬಸದಿಗೆ ಸಲ್ಲುವಂತೆ ಸೂಚಿಸಿದೆ. ಹಾಗೆ ಕ್ರಿ.ಶ. ೭೮೭ರ ಒಂದು ಶಾಸನ ವಿಳುಕ್ಕುಂ ಸ್ಥಳದ ಜಿನಯರ್‌ನ ಮಗಳಾದ ಪೂಂಡಿ ಮುಪ್ಪವ್ವೆ ಎಂಬುವಳು ಜೈನ ಮುನಿಗಳ ಆಹಾರದಾನಕ್ಕಾಗಿ ೧೭ ಕಟಂಜು ಚಿನ್ನವನ್ನು ದತ್ತಿ ಇಟ್ಟು ಸಂಗತಿಯನ್ನು ದಾಖಲಿಸಿದೆ. ಆಗ್ಗೆ ಈ ಸ್ಥಳದಲ್ಲಿನ ಜೈನಮಠವು ತನ್ನ ಅಸ್ತಿತ್ವವನ್ನು ಕಳೆದುಕೊಂಡಿದ್ದುದರಿಂದ ಆಹಾರದಾನದ ವ್ಯವಸ್ಥೆಯ ಜವಾಬ್ದಾರಿಯನ್ನು ಅಲ್ಲಿನ ಗ್ರಾಮಸ್ಥರಿಗೇ ವಹಿಸಿರುವುದನ್ನು ಅದೇ ಶಾಸನಗಳು ದಾಖಲಿಸಿವೆ. ಕ್ರಿ.ಶ. ೮೭೬ ರ ಶಾಸನವು ಕಡಗತಿ ನಾಯರ್‌ನ ಮಡದಿ ಮಂಡವ್ವೆ ಎಂಬುವಳು ಇಲ್ಲಿನ ಜೈನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿ ಅದಕ್ಕೆ ಮುಖ ಮಂಟಪವನ್ನು ಕಟ್ಟಿಸಿದ್ದಲ್ಲದೆ ಅಲ್ಲಿದ್ದ ಜೈನ ಮಠವನ್ನೂ ಜೀರ್ಣೋದ್ಧಾರ ಮಾಡಿಸಿ, ಯಕ್ಷ ಭಟಾರಿ (ಯಕ್ಷ) ಗಾಗಿ ಒಂದು ದೇವಾಲಯವನ್ನು ಕಟ್ಟಿಸಿದಳೆಂಬ ವಿವರ ನೀಡುತ್ತದೆ. ಜೊತೆಗೆ ದೊಡ್ಡ ಗಂಟೆಯೊಂದನ್ನು ಅಲ್ಲಿಗೆ ನೀಡಿರುವ ಸಂಗತಿಯನ್ನು ದಾಖಲಿಸಿದ್ದಾಳೆ. ಹೀಗೆ ಕೀಳ್ ಸಾತ್ತಮಂಗಲವು ಒಂದು ಕಾಲದಲ್ಲಿ ಪ್ರಸಿದ್ಧವಾದ ಜೈನ ಕೇಂದ್ರವಾಗಿದ್ದಿತೆಂಬುದು ಅಲ್ಲಿ ದೊರೆತಿರುವ ಶಾಸನಗಳ ಹಿನ್ನೆಲೆಯಲ್ಲಿ ಗ್ರಹಿಸಬಹುದಾಗಿದೆ.

ಇದೇ ನಂದಿವಾಸಿ ತಾಲೂಕಿನ ತಿರಕ್ಕೊಲ್‌ನಲ್ಲೂ ೧೦-೧೧ನೆಯ ಶತಮಾನದ ಜೈನ ಶಾಸನಗಳಿದ್ದು, ಪೊನ್ನೂರು ನಾಡಿನ ತಂಡಪುರಂನಲ್ಲಿ, ಚೋಳಮಂಡಲದ ಪನ್ಯೆಯೂರ್‌ನಾಡಿನ ತೆಂಕರೈಯ ಉಪವಿಭಾಗವಾದ ನೆಲ್ವೆಲಿನಾಡಿನ ನಿವಾಸಿಯಾದ ಎಜಿನಂದಿ ಎಂಬ ನರತೊಂಗ ಪಲ್ಲವರೈಯನ್ ಜೈನಮಠದ ತುಪ್ಪಕ್ಕಾಗಿ ಕುರಿಗಳನ್ನು ದತ್ತಿ ಬಿಟ್ಟ ಸಂಗತಿಯನ್ನು ದಾಖಲಿಸಿದೆ. ಈ ಪ್ರದೇಶದ ಶಾಸನಗಳಲ್ಲಿ ಕುರಿಗಳನ್ನು ದತ್ತಿ ಬಿಡುವುದನ್ನು ಗಮನಿಸಿದರೆ ಇಲ್ಲಿ ಕೃಷಿಗಿಂತ ಪಶುಪಾಲನೆಯೇ ಬಹುತೇಕ ಜನರ ಜೀವನಾಧಾರವಾಗಿದ್ದಿತೆಂದು ತೋರುತ್ತದೆ. ಹಾಗಾಗಿ ಮಠಗಳೂ ಕೂಡ ದೊಡ್ಡ ಪ್ರಮಾಣದ ಕುಟುಂಬವೇ ಆಗಿದ್ದಿತೆಂದು ಹೇಳಬಹುದಾಗಿದೆ.

ಅದೇ ಸ್ಥಳದ ಕ್ರಿ.ಶ. ೧೦೦೭ರ ಇನ್ನೊಂದು ಶಾಸನ ತ್ರುಟಿತವಿದ್ದು, ರಾಜಕೇಸರಿ ಪುರದಲ್ಲಿ ಶ್ರೀಗಂಗರೈಯನ್ ಎಂಬುವನು ಗಂಗಸುರಪ್ಪೆರುಂಪಳ್ಳಿ ಎಂಬ ಜೈನ ಮಂದಿರವನ್ನು ರಚಿಸಿದ ಹಾಗೂ ಅದೇ ಸ್ಥಳದಲ್ಲಿ ಮೈಸುತ್ತಪ್ಪೆರುಂಪಳ್ಳಿ ಎಂಬ ಮತ್ತೊಂದು ಜೈನಮಂದಿರವನ್ನೂ ರಚಿಸಿದ ಹಾಗೂ ತಿರುವಡೈಕ್ಕಲೈನಲ್ಲಿ ಇವುಗಳ ನಿರ್ವಹಣೆಗಾಗಿ ಪಳ್ಳಿಚ್ಚಂದ ಭೂ ದತ್ತಿಯನ್ನು ನೀಡಿರುವ ವಿವರಗಳಿರುವಂತೆ ಕಂಡು ಬರುತ್ತದೆ. ಇಲ್ಲಿ ಉಕ್ತವಾಗಿರುವ ರಾಜಕೇಸರಿಪುರ ಎಂಬುದು ಈ ಶಾಸನಗಳು ದೊರೆತಿರುವ ಸ್ಥಳವಾದ ತಿರುಕ್ಕೊಲ್‌ನ್ನೇ ನಿರ್ದೇಶಿಸುತ್ತಿರಬಹುದು. ಇಲ್ಲಿಯೂ ಗಂಗರಸರು ಜೈನಮಂದಿರವನ್ನು ಕಟ್ಟಿಸಿದ ಸೂಚನೆ ಇಲ್ಲಿದೆ. ಹೀಗೆ ಈ ಪ್ರದೇಶದಲ್ಲಿ ಕಣ್ಣಾಡಿಸಿದ ಕಡೆಯಲೆಲ್ಲ ಜೈನ ಶಾಸನಗಳು ಕಂಡುಬರುತ್ತವೆ.

ವಿಲುಪ್ಪುರಂ ಜಿಲ್ಲೆಯ ಜಿಂಜಿತಾಲೂಕಿನ ಚಿತ್ತಮೂರು ಕೂಡ ಒಂದು ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು. ಅಲ್ಲಿನ ಶಾಸನಗಳು ಜಗತಾಪಿಗುತ್ತಿಯ ವೈಶ್ಯನಾದ ಮಹಾನಾಗ ಕುಲದ ಬಯಿಸೆಟ್ಟಿಯ ಮಗ 'ಭೂಶ್ರೇಷ್ಠಿ' (ಬೂಸೆಟ್ಟಿ) ಎಂಬುವನು ಸುಂದರವಾದ ಮಾನಸ್ತಂಭವೊಂದನ್ನು ಸ್ಥಾಪಿಸಿದ ವಿವರವನ್ನು ನೀಡುತ್ತವೆ.

ತಿರುವಣ್ಣಾಮಲೆ ಜಿಲ್ಲೆಯ ಚೆಯ್ಯೂರು ತಾಲೂಕಿನ ಕರಂದೈ ಸ್ಥಲವೂ ಒಂದು ಪ್ರಸಿದ್ಧ ಜೈನ ಕ್ಷೇತ್ರವೆನಿಸಿಕೊಂಡಿದ್ದ ಸಂಗತಿ ಅಲ್ಲಿ ದೊರೆತಿರುವ ಶಾಸನಗಳಿಂದ ಮನಗಾಣಬಹುದಾಗಿದೆ. ಸು. ಕ್ರಿ.ಶ. ೧೦ನೆಯ ಶತಮಾನದ ಶಾಸನವು ಅಜರಾಮರಾದ ಸುಮಂತಭದ್ರರು ಪುಷ್ಪ ಸೇನಾಯೋಗೀಂದ್ರರ ಹೃದಯ ಕಮಲದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದ್ದರೆಂದು ವರ್ಣಿಸಿದೆ. ಅಲ್ಲಿನ ೧೧ನೆಯ ಶತಮಾನದ ಶಾಸನ: ರಾಜರಾಜ ವಳನಾಡಿನ ಭಾಗವಾಗಿದ್ದ ಪಾನ್ವೆಯೂರ್ ನಾಡಿನ ಅರುಮೊಳಿದೇವಪುರಂ ನಗರದ ನಗರ್ತರು ತಿರುಪ್ಪರಂಬೂರ್‌ನ ಜೈನ ಬಸದಿಯಲ್ಲಿ ತಿರುಪ್ಪಳ್ಳಿಯೆಲುಚ್ಚಿ ಸಂದರ್ಭದ ವಿಶೇಷ ದೀಪಾರಾಧನೆಗಾಗಿ ದತ್ತಿ ಬಿಟ್ಟಿರುವ ಸಂಗತಿಯನ್ನು ದಾಖಲಿಸಿದೆ. ಇನ್ನೊಂದು ಶಾಸನವು ಕಲಿಯೂರ್‌ನಾಡಿನ ಪರಂಬೂರ್‌ನ ಒಡೆಯನಾದ ತುಗಿಲಿಕಿಲನ್ ಅರ್ರೈಯನ್ ಎಂಬುವನು ಅನುಗದೇವರ (ಅರ್ಹತ್) ವೀರ ರಾಜೇಂದ್ರ ಪೆರುಮಾಳ್ ಪಳ್ಳಿ ಆಳ್ವಾರರ ನಂದಾದೀಪಕ್ಕಾಗಿ ಕುರಿಗಳನ್ನು ದತಿ ಬಿಟ್ಟ ವಿವರವನ್ನು ದಾಖಲಿಸಿದೆ. ಅಲ್ಲಿನ ಸಿದ್ಧರು ಪವಿತ್ರ ನಾಮಗಳನ್ನೊಳಗೊಂಡ ಮಂತ್ರಗಳನ್ನು ಜಪಿಸುತ್ತಿದ್ದರೆಂದು ಶಾಸನವೊಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೫೧೦ರ

ವಿಜಯನಗರ ಅರಸ ಶ್ರೀಕೃಷ್ಣದೇವರಾಯನ ಕಾಲದ ಶಾಸನವು ಹಿಂದೆ ನರಸಿಂಹರಾಯನ ಅಧಿಕಾರಿಯಾಗಿದ್ದ ರಾಮನಾಯಕನೆಂಬುವನು ದೇವದಾನದ ಭೂಮಿಗಳ ಮೇಲೆ ಜೋಡಿ ಸುಂಕವನ್ನು ವಿಧಿಸಿದ್ದನು. ಶ್ರೀಕೃಷ್ಣದೇವರಾಯನು ಪಟ್ಟಕ್ಕೆ ಬಂದ ಸಂದರ್ಭದಲ್ಲಿ ಪಡೆವೀಡು ರಾಜ್ಯ ಮತ್ತು ಚಂದ್ರಗಿರಿ ರಾಜ್ಯದ ಜೈನ, ಬೌದ್ಧ, ಮಂದಿರಗಳಿಗೂ ಸೇರಿದಂತೆ ಎಲ್ಲಾ ದೇವದಾನಗಳನ್ನು ಸರ್ವಮಾನ್ಯ ದಾನಗಳನ್ನಾಗಿ ಪರಿವರ್ತಿಸಿ ಮಾಡಿದ ರಾಜಾಜ್ಞೆಯನ್ನು ದಾಖಲಿಸಿರುವುದು ವಿಶಿಷ್ಟವಾಗಿದೆ. ಹೀಗೆ ಕರಂದೈ ಸ್ಥಳವು ಗಮನಾರ್ಹ ಜೈನ ಶಾಸನಗಳ ನೆಲೆಯಾಗಿದೆ.

ವೆಲ್ಲೂರ ಜಿಲ್ಲೆಯ ಗುಡಿಯಾತ್ತಂ ತಾಲೂಕಿನ 'ವಳ್ಳಿಮಲೆ' ಬಹುಮುಖ್ಯ ಜೈನ ಕೇಂದ್ರವಾಗಿದ್ದಿತೆಂದು ತೋರುತ್ತದೆ. ಈ ಪ್ರದೇಶದ ಪ್ರಾಚೀನ ಒಡೆಯರಾಗಿದ್ದ ಬಾಣರಸರಿಗೆ ಆಧ್ಯಾತ್ಮ ಗುರುಗಳಾಗಿದ್ದ ಭವನಂದಿಯ ಶಿಷ್ಯ ದೇವಸೇನ ಭಟಾರರ ಉಲ್ಲೇಖ ಇಲ್ಲಿನ ಶಾಸನವೊಂದರಲ್ಲಿ ಬಂದಿದೆ. ಈ ಸ್ಥಳದಲ್ಲಿ ಪ್ರಾಯಶಃ ಪ್ರಸಿದ್ಧ ಜೈನ ಗುರುವಾಗಿದ್ದ ಅಜ್ಜನಂದಿ ಭಟಾರರಿಂದ ಸ್ಥಾಪಿಸಲ್ಪಟ್ಟ ದೇವಸೇನ ಮುನಿಯ ಶಿಲ್ಪ ಹಾಗೂ ಆತನೇ ಸ್ಥಾಪಿಸಿರುವ ಇತರ ಅನೇಕ ಜೈನ ಮುನಿಗಳ ಶಿಲ್ಪಗಳನ್ನು ಇಲ್ಲಿ ಕಾಣಬಹುದಾಗಿದೆ. ಜಿನ ಶಿಲ್ಪಗಳಿರುವ ಅದೇ ಬಂಡೆಯ ಮೇಲೆ ಕೆಲವು ಶಾಸನಗಳಿವೆ. ಗಂಗ ರಾಚಮಲ್ಲನನ್ನು ಉಲ್ಲೇಖಿಸುವ ಕನ್ನಡ ಮತ್ತು ಗ್ರಂಥ ಲಿಪಿಯಲ್ಲಿನ ಶಾಸನಗಳು ಆತನು ಅಲ್ಲೊಂದು ಜೈನಮಂದಿರವನ್ನು ಮಾಡಿಸಿದ ಸಂಗತಿಯನ್ನು ನಿರೂಪಿಸುತ್ತವೆ. ಅಲ್ಲದೆ ಆ ಶಾಸನದಲ್ಲಿ ಪ್ರಸಿದ್ಧ ಗಂಗ ದೊರೆ ರಾಚಮಲ್ಲನನ್ನು ಶಿವಮಾರನ ಮರಿಮೊಮ್ಮಗನೂ, ಶ್ರೀ ಪುರುಷನ ಮೊಮ್ಮಗನೂ ರಣವಿಕ್ರಮನ ಮಗನೆಂದು ವರ್ಣಿಸಲಾಗಿದೆ. ಹಾಗಾಗಿ ಕ್ರಿ.ಶ. ೧೦ನೆಯ ಶತಮಾನಕ್ಕಾಗಲೇ ತಮಿಳುನಾಡಿನ ಗಡಿಪ್ರಾಂತ್ಯಗಳಲ್ಲಿ ಗಂಗರಸರ ಪ್ರಭಾವ ಅಧಿಕವಾಗಿಯೇ ಇದ್ದಿತೆಂದು ತಿಳಿಯುತ್ತದೆ. ರಾಚಮಲ್ಲನಿಂದ ನಿರ್ಮಾಣವಾದ ಜೈನ ಮಂದಿರದ ಶಿಲ್ಪಗಳು ಎರಡು ಗುಂಪುಗಳಿಂದ ಕೂಡಿದೆ. ನೈಸರ್ಗಿಕ ಶಿಲಾ ಆಶ್ರಯ ತಾಣದಲ್ಲಿ ನಿರ್ಮಿತವಾಗಿರುವ ಈ ಬಸದಿಯ ಭಿತ್ತಿಯಲ್ಲಿ ತೀರ್ಥಂಕರರ, ಯಕ್ಷ, ಯಕ್ಷಿಯರ ಸುಂದರ ಬಿಂಬಗಳನ್ನು ಬಿಡಿಸಲಾಗಿದೆ. ಅದೇ ಸ್ಥಳದಲ್ಲಿನ ಶಿಲ್ಪವೊಂದರ ಬುಡದಲ್ಲಿನ ಕಿರು ಶಾಸನವು ಆ ಪ್ರತಿಮೆಯು ಜೈನ ಮುನಿ ಆರ್ಯನಂದಿಯಿಂದ ಸ್ಥಾಪಿಸಲ್ಪಟ್ಟ ಸಂಗತಿಯನ್ನು ದಾಖಲಿಸಿದೆ. ಮತ್ತೊಂದು ಶಿಲ್ಪದ ಕೆಳಗಿನ ಬರಹವು ಜೈನ ಮುನಿ ಗೋವರ್ಧನ ಅವರನ್ನು ಸೂಚಿಸುತ್ತದೆ. ಅಲ್ಲದೆ ಜೈನ ಗುರು ಬಾಲಚಂದ್ರ ಭಟ್ಟಾರಕರ ಶಿಷ್ಯ ಆರ್ಯನಂದಿಯೆಂದು ಇನ್ನೊಂದು ಶಾಸನದಿಂದ ತಿಳಿದುಬರುತ್ತದೆ. ಹೀಗೆ ವಳ್ಳಿಮಲೆಯ ಜೈನ ಶಾಸನಗಳು ೯-೧೦ನೆಯ ಶತಮಾನದ ಅವಧಿಯಲ್ಲಿ ಪೆರ್ಬಾಣವಾಡಿ ಪ್ರದೇಶದ ಒಂದು ಪ್ರಮುಖ ಜೈನಕೇಂದ್ರವಾಗಿದ್ದಿತೆಂಬುದನ್ನು ಅಲ್ಲಿನ ಶಾಸನಗಳು ಸಾಬೀತು ಪಡಿಸಿವೆ.

ಗಂಗರಸ ರಾಚಮಲ್ಲನು ಸಿಯಮಂಗಲಂ(ವಂದವಾಸಿ ತಾ॥)ನಲ್ಲೂ ಜೈನ ಮಂದಿರಗಳನ್ನು ಕಟ್ಟಿಸಿದ್ದಾನೆ. ಕ್ರಿ.ಶ. ೮೯೨-೯೩ರ ಆತನ ಶಾಸನವು ಗದ್ಯ ಪದ್ಯಗಳಿಂದ ಕೂಡಿದ್ದು ನಂದಿ ಸಂಘಕ್ಕೆ ಸೇರಿದ ಅರುಂಗಲಾನ್ವಯವನ್ನು ವರ್ಣಿಸಿ ವಿದ್ಯಾದ್ರಿಯಲ್ಲಿ ಜಿನರಾಜನಿಗಾಗಿ ರಾಚಮಲ್ಲನು ಎರಡು ಬಸದಿಗಳನ್ನು ಮಾಡಿಸಿದ ವಿವರವನ್ನು ದಾಖಲಿಸಿದೆ. ಇವು ಗುಹಾಂತರ ದೇವಾಲಯಗಳು. ಅಲ್ಲಿನ ಇನ್ನೊಂದು ೧೦ನೆಯ ಶತಮಾನದ ಶಾಸನವೂ ಗದ್ಯಪದ್ಯಗಳಿಂದ ಕೂಡಿದ್ದು ಶಾಸನದ ಸಂಸ್ಕೃತ ಭಾಗದಲ್ಲಿ ದ್ರಾವಿಡ ಸಂಘದ ನಂದಿ ಸಂಘಕ್ಕೆ ಸೇರಿದ ಅರುಂಗಲಾನ್ವಯವನ್ನು ವರ್ಣಿಸಿದೆ. ಶಾಸನದ ತಮಿಳು ಭಾಗದಲ್ಲಿ ಅರುಂಗಲಾನ್ವಯದ ಮಂಡಲಾ ಚಾರ್ಯರಾದ ವಜ್ರನಂದಿ ಯೋಗೀಂದ್ರರು ಬೆಟ್ಟಕ್ಕೆ ಸೋಪಾನ ಮಾರ್ಗವನ್ನು ಏರ್ಪಡಿಸಿದ ವಿವರವನ್ನು ದಾಖಲಿಸುತ್ತದೆ.

ತಗಡೂರು ಎಂದು ಪ್ರಸಿದ್ಧವಾಗಿದ್ದ ಇಂದಿನ ಧರ್ಮಪುರಿಯು ೧೦ನೆಯ ಶತಮಾನದಲ್ಲಿ ಅನೇಕ ಜೈನ ಬಸದಿಗಳ ನೆಲೆವೀಡಾಗಿದ್ದಿತು. ಕ್ರಿ.ಶ. ೯ನೆಯ ಶತಮಾನದ ನೊಳಂಬ ಅಯ್ಯಪದೇವನ ಶಾಸನವು ನಿಧಿಯಣ್ಣನಿಂದ ಕಟ್ಟಿಸಲ್ಪಟ್ಟಿದ್ದ ಜೈನಮಂದಿರಕ್ಕೆ ಬೂದುಗೂರು ಎಂಬ ಗ್ರಾಮವನ್ನು ರಾಜ ದತ್ತಿ ಬಿಟ್ಟ ವಿವರವನ್ನು ನೀಡುತ್ತದೆ. ದೇವಾಲಯದ ಕರ್ತೃವಾದ ನಿಧಿಯಣ್ಣನೂ ದೇವರ ಪೂಜಾ ಕೈಂಕರ್ಯಗಳಿಗಾಗಿ ತೋಟವೊಂದನ್ನು ದತ್ತಿ ಬಿಟ್ಟಿರುತ್ತಾನೆ. ನೊಳಂಬ ಮಹೇಂದ್ರರನ ಒಂದು ಶಾಸನವು ನಿಧಿಯಣ್ಣ ಮತ್ತು ಚಂದಿಯಣ್ಣ ಎಂಬುವವರನ್ನು ಉಲ್ಲೇಖಿಸುತ್ತದೆ. ಶ್ರೀಮಂಗಲಂನ ವರ್ತಕರ ಮಕ್ಕಳಾದ ಇವರು ತಗಡೂರಿನಲ್ಲಿ ಜೈನ ದೇವಾಲಯವನ್ನು ಕಟ್ಟಿಸಿ, ರಾಜನಿಂದ ಸರ್ವಮಾನ್ಯವಾಗಿ ಪಡೆದಿದ್ದ ಮೂಲಪಳ್ಳಿ ಗ್ರಾಮವನ್ನು ಪೊಗರಿಯ ಗಣದ ವಿನಯಸೇನ ಸಿದ್ಧಾಂತಭಟಾರರ ಶಿಷ್ಯ ಕನಕಸೇನ ಸಿದ್ಧಾಂತಭಟಾರರಿಗೆ ಅದೇ ಬಸದಿಯ ಜೀರ್ಣೋದ್ಧಾರ ಮತ್ತು ಪೂಜಾ ಕೈಂಕರ್ಯಗಳಿಗಾಗಿ ದತ್ತಿ ಬಿಟ್ಟ ಸಂಗತಿಯನ್ನು ಮತ್ತೊಂದು ಶಾಸನ ನಿರೂಪಿಸುತ್ತದೆ.

ಪ್ರಾಚೀನ ತಗಡೂರಿನ ಸಮೀಪದಲ್ಲಿದ್ದ ಮಯಿರಿದರಮಂಗಲಂ ಅಂದರೆ ಇಂದಿನ ಅದಿಮಾನ್ ಕೋಟೆಯ ಶಿಲಾಶಾಸನವು ಜೈನೋತ್ತಮ ಸೋಮಣ್ಣನು ಕಟ್ಟಿಸಿದ ಬಸದಿಯ ಬಗ್ಗೆ ಉಲ್ಲೇಖ ನೀಡುತ್ತದೆ. ಆದರೆ ಇಂದು ಈ ಸ್ಥಳದಲ್ಲಿ ಯಾವುದೇ ಜೈನಾವಶೇಷಗಳು ಉಳಿದು ಬಂದಿಲ್ಲ.

ಕೃಷ್ಣಗಿರಿ ತಾಲೂಕಿನ ತವಳಂ ಗ್ರಾಮದ ಸಮೀಪದ ಪೊನ್ನೈ ನದಿಯ (ದಕ್ಷಿಣ ಪಿನಾಕಿನಿ) ದಡದ ಮೇಲಿರುವ ಕ್ರಿ.ಶ. ೮ನೆಯ ಶತಮಾನದ ಕನ್ನಡ ಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿನ ಶಾಸನವು ಜೈನ ಮುನಿಯೋರ್ವನನ್ನು ಪ್ರಶಸ್ತಿಸುವ ಪದ್ಯಗಳಿಂದ ಕೂಡಿದೆ.

ಪೆರ್ಬಾಣವಾಡಿಯ ಪಶ್ಚಿಮ ಗಡಿ ಪ್ರದೇಶದ ಹೊಸೂರು ಕೃಷ್ಣಗಿರಿ ಜಿಲ್ಲೆಯ ತಾಲೂಕಿನ ಕೇಂದ್ರ. ಈ ಸ್ಥಳದ ಉತ್ತರಭಾಗವನ್ನು ಬಸದಿ ಎಂದು ಗುರುತಿಸುತ್ತಾರೆ. ಈ ಬಸದಿ ಸ್ಥಳದಲ್ಲಿರುವ ಬೆಟ್ಟದ ಮೇಲೆ ಹೊಯ್ಸಳ ವಿಷ್ಣುವರ್ಧನ ಕಾಲದ ಶಾಸನವಿದ್ದು ಅಲ್ಲಿದ್ದ ಪಾರ್ಶ್ವನಾಥನ ಜಿನಾಲಯಕ್ಕೆ ಇಲಂದೈ ಚಿತ್ರಮೋಳಿ ನಲ್ಲೂರನ್ನು ಗಂಗಿಪ್ಪಯ್ಯ ಮತ್ತು ಕೆಟ್ಟಾಂಡಿಯಾರ್ ಎಂಬುವರು ಗದ್ದೆ ಮತ್ತು ಹೊಲದ ಭೂಮಿಯನ್ನು ಕ್ರಯಕ್ಕೆ ಪಡೆದು ಆ ಬಸದಿಯ ಪೂಜಾಕೈಂಕರ್ಯ ಆಹಾರ ದಾನ ಮುಂತಾದವುಗಳಿಗೆ ಬಸದಿಯ ಸ್ಥಾನಪತಿ ವಾಸುಪೂಜ್ಯ ಪಂಡಿತರಿಗೆ ಕರ ಸಹಿತವಾಗಿ ದತ್ತಿ ಬಿಟ್ಟ ವಿವರವನ್ನು ದಾಖಲಿಸಿದೆ. ಶ್ರೀ ಭೂಚಂದ್ರ ಸಿದ್ಧನಂದಿದೇವರ ಮಗ ಗಂಗಿಯಪ್ಪನು ಅಲ್ಲಿನ ಬಸದಿಯನ್ನು ನಿರ್ಮಾಣ ಮಾಡಿಸಿದನೆಂಬದು ಅದೇ ಶಾಸನದಿಂದ ತಿಳಿದು ಬರುತ್ತದೆ. ಬಸದಿಯೆಂಆದು ಕರೆಯುವ ಈ ಬೆಟ್ಟದಲ್ಲಿ ಈಗ ವೆಂಕಟೇಶ್ವರ ಸ್ವಾಮಿ ದೇವಾಲಯವಿದೆ.

ವಿಶಾಲವಾದ ಪೆರ್ಬಾಣವಾಡಿ ಪ್ರದೇಶದಲ್ಲಿ ಇನ್ನೂ ಅನೇಕ ಜೈನ ನೆಲೆಗಳು ಇವೆ. ಅವುಗಳಲ್ಲಿ ಪೋಲೂರು ತಾಲೂಕಿನ ಕುಣ್ಣಿತ್ತೂರು, ಓಡಲವಾಡಿ; ಅರಣಿ ತಾಲೂಕಿನ ಪುಂಡಿ, ವಾಲಜುಪೇಟ್ ತಾಲೂಕಿನ ಸಕ್ಕರಮಲ್ಲೂರ್, ವಿಲಪ್ಪಾಕ್ಕಂ; ವೆಲ್ಲೂರು ತಾಲೂಕಿನ ವೆಲಪ್ಪಾಡಿ, ಮೊದಲಾದೆಡೆಗಳಲ್ಲೂ ಅನೇಕ ಜೈನ ಶಾಸನಗಳಿವೆ.

ಸಾಕಷ್ಟು ವಿಶಾಲವಾಗಿದ್ದ ಪೆರ್ಬಾಣವಾಡಿ ಪ್ರದೇಶದಲ್ಲಿ ವಿಪುಲ ಸಂಖ್ಯೆಯ ಗಿರಿಕಂದರಗಳು, ನೈಸರ್ಗಿಕ ಗುಹೆಗಳು ಆ ಗುಹೆಗಳ ಪರಿಸರದಲ್ಲಿ ಅಸಂಖ್ಯ ಜೈನ ಶಿಲ್ಪ ಹಾಗೂ ಶಾಸನಗಳು ಚದುರಿದಂತೆ ಹರಿಡಿಕೊಂಡಿರುವುದು ಕಂಡುಬರುತ್ತದೆ. ಈ ಪ್ರದೇಶವು ಬಹು ಪ್ರಾಚೀನ ಕಾಲದಲ್ಲೇ ಜೈನ ಧರ್ಮೀಯರ ಆವಾಸ ಸ್ಥಾನವಾಗಿದ್ದಿತು. ಈ ಪ್ರದೇಶಕ್ಕೆ ಜೈನ ಧರ್ಮವು ಪ್ರಾಯಶಃ ಮಹಾವೀರ ತೀರ್ಥಂಕರರ ಕಾಲದಲ್ಲೇ ಪ್ರವೇಶ ಪಡೆಯಿತೆಂದು ತೋರುತ್ತದೆ. ೭ನೆಯ ಶತಮಾನಕ್ಕೂ ಪೂರ್ವದಲ್ಲೇ ಈ ಪ್ರದೇಶದಲ್ಲಿ ಜೈನ ಧರ್ಮ ಹೆಚ್ಚು ಪ್ರಚಲಿತವಿದ್ದಿತೆಂದು ಹೇಳಬಹುದಾಗಿದೆ. ಅನಂತರ ಕೆಲವು ಕಾಲ ಹಿಂದೆ ಸರಿದಿದ್ದರೂ ಅನಂತರದಲ್ಲಿ ಕರ್ನಾಟಕ ಜೊತೆ ಜೊತೆಗೆ ಚೇತರಿಸಿಕೊಂಡಂತೆ ಕಂಡುಬರುತ್ತದೆ. ಈ ಪ್ರದೇಶದಲ್ಲಿ ೧೪೦ಕ್ಕೂ ಅಧಿಕ ಸಂಖ್ಯೆಯ ಜೈನ ಶಾಸನಗಳು ಅಂದರೆ ತಮಿಳುನಾಡಿನ ಒಟ್ಟು ಜೈನ ಶಾಸನಗಳ ಮೂರನೇ ಒಂದರಷ್ಟು ಈ ಭಾಗದಲ್ಲೇ ಲಭ್ಯವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಈ ಪ್ರದೇಶದ ಶಾಸನಗಳಿಂದ ತಿಳಿದು ಬರುವ ಒಂದು ಮುಖ್ಯ ಸಂಗತಿಯೆಂದರೆ ಜೈನಧರ್ಮದಲ್ಲಿ ಸ್ತ್ರೀಯರು ಹೆಚ್ಚಿನ ಪಾತ್ರವಹಿಸಿರುವುದು. ವೇಡಾಲ್ ಮತ್ತು ತಿರುಪ್ಪಾಮಲೈಗಳು ಮಹಿಳಾ ಗುರುವಡಿಗಳ್ ಹಾಗೂ ಕಂತಿಯ ನಿವಾಸಿ ಸ್ಥಾನಗಳಾಗಿದ್ದುದನ್ನು ಗಮನಿಸಬಹುದಾಗಿದೆ. ಹಾಗೇ ಆ ಪ್ರದೇಶದ ಜೈನ ಶಾಸನಗಳಲ್ಲಿ ಸ್ತ್ರೀ ಶಕ್ತಿಗೆ ಹೆಸರಾದ ಜೈನ ಯಕ್ಷಿಯರ ಆರಾಧನೆಗೆ ಹೆಚ್ಚಿನ ಪ್ರಾಧಾನ್ಯತೆ ದೊರೆತಿರುವುದು ಗಮನ ಸೆಳೆಯುತ್ತದೆ. ವಿಶೇಷವಾಗಿ ಪೊನ್ನೂರು ಮತ್ತು ಪಂಚಪಾಂಡವ ಮಲೆಯೆನಿಸಿದ 'ತಿರುಪ್ಪಾಮಲೆ'ಗಳು ಯಕ್ಷಿ ಆರಾಧನೆಯ ಉಗಮಸ್ಥಾನಗಳೆಂದು ಗುರುತಿಸಲಾಗಿದೆ. ತಿರುಪ್ಪಾಮಲೆಯು - ಸಿದ್ಧಾಯಿಕ ಯಕ್ಷಿಯ ಆರಾಧನಾ ಕ್ಷೇತ್ರವಾದರೆ, ಪೊನ್ನೂರು ಜ್ವಾಲಮಾಲಿನಿ ಅಮ್ಮನವರ ಆರಾಧನಾ ಕ್ಷೇತ್ರವಾಗಿ ಬೆಳೆದಿದೆ. ಕರ್ನಾಟಕ ಮತ್ತು ಆಂಧ್ರಭಾಗಗಳಿಗೆ ಹೊಂದಿಕೊಂಡಿದ್ದ ಈ ಪ್ರದೇಶವು ಡೆಕ್ಕನ್ ಮತ್ತು ಉತ್ತರ ಭಾರತದೊಂದಿಗೆ ಸಂಪರ್ಕ ಕಲ್ಪಿಸುವ ವಾಣಿಜ್ಯ ಮಾರ್ಗಗಳು ಈ ಪೆರ್ಬಾಣವಾಡಿ ಪ್ರದೇಶದ ಮೂಲಕವೇ ಹಾದು ಹೋಗಬೇಕಾಗಿದ್ದುದರಿಂದ ಜನವಸತಿಯ ಸಂಚಲನ ಹಾಗೂ ಜೈನ ಮುನಿಗಳ ವಾಸಕ್ಕೆ ಸೂಕ್ತವಾದ ನೈಸರ್ಗಿಕ ಗಿರಿಧಾಮಗಳು ಅಸಂಖ್ಯವಾಗಿದ್ದುದರಿಂದ ಈ ಪ್ರದೇಶದಲ್ಲಿ ಅಧಿಕ ಸಂಖ್ಯೆಯ ಜೈನ ಶಾಸನಗಳು ಕಾಣಿಸಿಕೊಳ್ಳಲು ಕಾರಣವಾಯಿತು ಹಾಗೂ ೯-೧೦ನೆಯ ಶತಮಾನದ ಅವಧಿಯಲ್ಲಿ ಕರ್ನಾಟಕದ ಬಾಣ ನೊಳಂಬ ಹಾಗೂ ಗಂಗರಸರ ತೆಕ್ಕೆಗೂ ಈ ಪ್ರದೇಶ ಆಗಾಗ್ಗೆ ಒಳಪಡುತ್ತಿದ್ದುರಿಂದಲೂ ಇಲ್ಲಿ ಅಧಿಕ ಸಂಖ್ಯೆಯ ಜೈನ ಸ್ಮಾರಕಗಳು ನಿರ್ಮಾಣವಾಗಲು ಕಾರಣವಾಯಿತೆಂದು ಪರಿಭಾವಿಸಬಹುದಾಗಿದೆ. ಈ ಪ್ರದೇಶದ ಜೈನ ಶಿಲ್ಪ, ಶಾಸನ ಮತ್ತು ನೆಲೆಗಳ ಸೂಕ್ಷ್ಮ ಅಧ್ಯಯನ ನಡೆಯಬೇಕಾದ ಅಗತ್ಯವಿದೆ. ಆ ಮೂಲಕ ಅನೇಕ ಅಗೋಚರ ಹೊಸ ಹೊಸ ಐತಿಹಾಸಿಕ ಸಂಗತಿಗಳು ಬೆಳಕಿಗೆ ಬಂದು ವಿಸ್ಮಯವುಂಟಾದರೆ ಆಶ್ಚರ್ಯವಿಲ್ಲ.

**ಆಧಾರಸೂಚಿ:**


೧. **Annual Reports on Indian Epigraphy**, 1897 onwards.

೨. **Jaina Inscriptions in Tamil Nadu** (Ed.,) Dr. A. Ekambaranathan and Dr. C.K. Shivaprakash, Madras, 1987.

೩. P.B. Desai, **Jainism in South India and some Jaina Epigraphs**, Sholapur, 1957.

೪. ಪಿ.ವಿ. ಕೃಷ್ಣಮೂರ್ತಿ, **ಬಾಣರಸರ ಶಾಸನಗಳು ಒಂದು ಅಧ್ಯಯನ**, ಬೆಂಗಳೂರು, ೨೦೦೯.

೫. ಡಿ. ಪದ್ಮನಾಭ ಶರ್ಮ, ಭುವನಹಳ್ಳಿ, **ಭಾರತದ ಜೈನತೀರ್ಥ ಕ್ಷೇತ್ರಗಳು**, ಬಾಹುಬಲಿ ಬಳಗ, ಬೆಂಗಳೂರು ೧೯೮೬.

೬. ಹಂಪ ನಾಗರಾಜಯ್ಯ; **ಶಾಸನಗಳಲ್ಲಿ ಬಸದಿಗಳು ಪಕ್ಷಿ ನೋಟ**, ರತ್ನತ್ರಯ ಪ್ರಕಾಶನ, ಮೈಸೂರು, ೧೯೯೪.


❑❑

# ಭಾವಗೀತೆ : ಶೈಲಿ

– ಬಿ.ಆರ್. ಲಕ್ಷ್ಮಣರಾವ್

ಭಾವಗೀತೆಯ ಶೈಲಿ ಮುಖ್ಯವಾಗಿ ರಾಗ ಸಂಯೋಜನೆಗೆ ಸಂಬಂಧಿಸಿದ್ದಾಗಿದೆ. ಈ ಶೈಲಿ ಇತರ ಸಂಗೀತ ಶೈಲಿಗಳಿಂದ ಹೇಗೆ ಭಿನ್ನ ಎಂದು ನೋಡೋಣ. ಸ್ಥೂಲವಾಗಿ ಹೇಳುವುದಾದರೆ 'ಶಾಸ್ತ್ರೀಯ ಸಂಗೀತ'ದಲ್ಲಿ ಸಂಗೀತವೇ ಪ್ರಧಾನ, ಸಾಹಿತ್ಯ ಗೌಣ. 'ರಂಗ ಗೀತೆ'ಗಳಲ್ಲಿ ಸಾಹಿತ್ಯ ಪ್ರಧಾನವಾದರೂ ಅದು ಬಹುಮಟ್ಟಿಗೆ ನಾಟಕದ ಸಂದರ್ಭಕ್ಕೆ ಸೀಮಿತವಾದದ್ದು. ಅದಕ್ಕೆ ಸ್ವತಂತ್ರ ಅಸ್ತಿತ್ವ ಕಡಿಮೆ. 'ಜನಪದ ಗೀತೆ'ಗಳಲ್ಲಿ ಸಾಹಿತ್ಯ ಪ್ರಧಾನವಾದರೂ ಅಲ್ಲಿ ಸಂಗೀತದ ಪಾತ್ರ ಗೌಣ. ಜೊತೆಗೆ 'ಜನಪದ ಗೀತೆ' ನಿಂತ ನೀರೇ ಹೊರತು ನಿರಂತರವಾಗಿ ಹರಿಯುವ ನಿತ್ಯನೂತನ ನದಿಯಲ್ಲ. 'ಚಲನಚಿತ್ರಗೀತೆ'ಗಳಲ್ಲಂತೂ ಸಾಹಿತ್ಯ ಕೇವಲ ಸಾಂದರ್ಭಿಕ. ಅಲ್ಲಿ ಸಂಗೀತದ ಮಾಧುರ್ಯವೇ ಪ್ರಧಾನ. 'ಗಮಕ'ದ ಬಗ್ಗೆ ಹೇಳುವುದಾದರೆ, ಹಳೆಗನ್ನಡ ಮತ್ತು ನಡುಗನ್ನಡ ಕಾವ್ಯವನ್ನು ನಮ್ಮ ಗಮಕಿಗಳು ಬಹು ಹಿಂದಿನಿಂದಲೂ ಹಾಡಿ, ಜನತೆಗೆ ತಲುಪಿಸುತ್ತ ಬಂದಿದ್ದಾರೆ. ಹೀಗೆ ಕಾವ್ಯಕ್ಕೆ ಗಣನೀಯ ಸೇವೆ ಸಲ್ಲಿಸಿ, ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಆದರೆ 'ಗಮಕ' ಆಧುನಿಕ ಭಾವಗೀತೆಗಳ ನಿರೂಪಣೆಗೆ ಹೊಂದುವುದಿಲ್ಲ. ಹೀಗಾಗಿ, ಗಮಕವನ್ನು 'ಸುಗಮ ಸಂಗೀತ'ದ ಪ್ರಾರಂಭಿಕ ಹಂತಗಳಲ್ಲಿ ಒಂದೆಂದು ಮಾತ್ರ ನಾವು ಪರಿಗಣಿಸಬಹುದಾಗಿದೆ. ಇನ್ನೂ, 'ಭಾವಗೀತೆ'ಯ ಶೈಲಿಗೆ ಬಂದರೆ, ಇಲ್ಲಿ ಸಾಹಿತ್ಯ ಅಥವಾ ಕಾವ್ಯವೇ ಪ್ರಧಾನ; ಸಂಗೀತ ಅದರ ಪರಿಚಾರಕ ಮಾತ್ರ. ಸಂಗೀತವೆಂಬ ಮಾಧ್ಯಮದ ಮೂಲಕ ಕವಿತೆಯನ್ನು ಸಹೃದಯ ಶ್ರೋತೃವಿಗೆ ತಲುಪಿಸುವುದೇ ಭಾವಗೀತೆಯ ರಾಗ ಸಂಯೋಜಕನ ಮತ್ತು ಗಾಯಕನ ಪ್ರಮುಖ ಉದ್ದೇಶ ಮತ್ತು ಗುರಿ. ಹೀಗಾಗಿ, ಭಾವಗೀತೆಗೆ ತನ್ನದೇ ಆದ ಶೈಲಿಯೊಂದಿದೆ ಎಂಬುವುದು ಸ್ಪಷ್ಟವಾಗುತ್ತದೆ.

ಪ್ರತಿಯೊಬ್ಬ ಸಮರ್ಥ ಕವಿಯೂ ತನ್ನದೇ ಆದ ವಿಶಿಷ್ಟ ಶೈಲಿ ಮತ್ತು ಸ್ವೋಪಜ್ಞತೆಗಳನ್ನು ರೂಢಿಸಿಕೊಂಡಿರುತ್ತಾನೆ. ಇದೇ ಮಾತನ್ನು ಪ್ರತಿಯೊಬ್ಬ ಸಮರ್ಥ ರಾಗಸಂಯೋಜಕನ ಬಗ್ಗೆಯೂ ಹೇಳಬಹುದು. ಹೀಗಾಗಿ ಇಂದು ಭಾವಗೀತೆ ಹಲವಾರು ವಿಶಿಷ್ಟ ಶೈಲಿಗಳಲ್ಲಿ ನಮ್ಮ ಮುಂದೆ ತೋರಿ ಬರುತ್ತಿದೆ. ಇದು 'ಕುವೆಂಪು ಶೈಲಿ', ಇದು 'ಬೇಂದ್ರೆ ಶೈಲಿ', ಇದು 'ನರಸಿಂಹಸ್ವಾಮಿ ಅವರ ಶೈಲಿ' ಎಂದು ಕವಿತೆಗಳ ಬಗ್ಗೆ ಹೇಳುವಂತೆಯೇ ಇದು. 'ಕಾಳಿಂಗರಾಯರ ಶೈಲಿ' ಇದು 'ಅನಂತಸ್ವಾಮಿ ಅವರ ಶೈಲಿ', ಇದು 'ಅಶ್ವತ್ಥ್ ಶೈಲಿ' ಎಂದು ರಾಗ ಸಂಯೋಜನೆಗಳ ಬಗ್ಗೆ ಹೇಳಿಬಿಡಬಹುದು.

ಇದೀಗ ಭಾವಗೀತೆಗಳ ಶೈಲಿಯ ಬಗ್ಗೆ ಗಂಭೀರವಾಗಿ, ಕೂಲಂಕಷವಾಗಿ ನಾವು ವಿವೇಚಿಸಬೇಕಾದ ಕಾಲ ಸನ್ನಿಹಿತವಾಗಿದೆಯೆಂದು ತೋರುತ್ತೆ. ಏಕೆಂದರೆ ಕವಿಗಳ ಬಗ್ಗೆ ಹಾಗೂ ಕಾವ್ಯದ ಬಗ್ಗೆ ವಿಪುಲವಾದ ಅಧ್ಯಯನ, ವಿಮರ್ಶೆ ಮತ್ತು ಮೌಲ್ಯಮಾಪನ ಕಾಲಕಾಲಕ್ಕೆ ನಡೆಯುತ್ತ ಬಂದಿದೆ. ಆದರೆ ಭಾವಗೀತೆಗಳ ರಾಗ ಸಂಯೋಜನೆಯ ಬಗ್ಗೆಯಾಗಲೀ, ಗಾಯನದ ಬಗ್ಗೆಯಾಗಲೀ ಇಂಥ ಆಳವಾದ ಅಧ್ಯಯನ, ವಿಮರ್ಶೆ ಮತ್ತು ಮೌಲ್ಯಮಾಪನ ಆಗಬೇಕಾಗಿದ್ದ ಮಟ್ಟಕ್ಕೆ ಆಗಿಲ್ಲ. ಭಾವಗೀತೆ ಅಥವಾ ವ್ಯಾಪಕ ಅರ್ಥದಲ್ಲಿ ಸುಗಮ ಸಂಗೀತದ ಬೆಳವಣಿಗೆಯ ದೃಷ್ಟಿಯಿಂದ ಇದು ತುಂಬ ಅಗತ್ಯವೆಂದು ನಾನು ಭಾವಿಸುತ್ತೇನೆ. ಇಂದು ಸುಗಮ ಸಂಗೀತ ಒಂದು ವಿಶಿಷ್ಟ ಹಾಗೂ ನಿರ್ದಿಷ್ಟ ಸಂಗೀತ ಪ್ರಕಾರವಾಗಿ ನಿಸ್ಸಂದಿಗ್ಧವಾಗಿ ತನ್ನನ್ನು ತಾನು ಸ್ಥಾಪಿಸಿಕೊಂಡಿದೆ ಹಾಗೂ ಪಂಡಿತ ಪಾಮರರೆಲ್ಲರ ಮನ್ನಣೆ, ಮಾನ್ಯತೆ ಗಳಿಸಿಕೊಂಡಿದೆ. ಈ ಕ್ಷೇತ್ರಕ್ಕೆ ಇಂದು ಅನೇಕ ಯುವ ಪ್ರತಿಭೆಗಳ ಆಗಮನವಾಗಿದೆ. ಈ ಉದಯೋನ್ಮುಖ ಸಂಗೀತ ಸಂಯೋಜಕರು ಮತ್ತು ಗಾಯಕ, ಗಾಯಕಿಯರು ಈ ಕ್ಷೇತ್ರದಲ್ಲಿ ತಮ್ಮ ನೆಲೆ ಬೆಲೆಗಳನ್ನು ಕಂಡುಕೊಳ್ಳಲು ಉತ್ಸಾಹದಿಂದ ಶ್ರಮಿಸುತ್ತಿದ್ದಾರೆ. ಇವರಿಗೆ ಸರಿಯಾದ ಮಾರ್ಗದರ್ಶನದ ಅಗತ್ಯವಿದೆ. ಇಂತಹ ಯುವ ಪ್ರತಿಭೆಗಳನ್ನು ಗಮನದಲ್ಲಿಟ್ಟುಕೊಂಡು ನಾನು ಕೆಲವು ಮಾತುಗಳನ್ನು ಹೇಳಲು ಬಯಸುತ್ತೇನೆ.

ಮೊಟ್ಟಮೊದಲಿಗೆ ನನಗನ್ನಿಸುವುದು: ಭಾವಗೀತೆಯ ರಚನೆ ಹೇಗೆ ಒಂದು ಸೃಜನಶೀಲ ಕ್ರಿಯೆಯೋ ಹಾಗೆಯೇ ಭಾವಗೀತೆಗೆ ರಾಗ ಸಂಯೋಜಿಸುವುದೂ ಸಹ ಒಂದು ಸೃಜನಶೀಲ ಕ್ರಿಯೆ. ಭಾಷಾ ಪ್ರೌಢಿಮೆ ಮತ್ತು

೧೭/೬, ಚಿಂತಾಮಣಿ, ೩ನೇ ಅಡ್ಡರಸ್ತೆ, ೧೬ನೇ ಮುಖ್ಯರಸ್ತೆ, ಬಾಲಾಜಿ ಲೇಔಟ್, ಪದ್ಮನಾಭನಗರ, ಬೆಂಗಳೂರು – ೫೬೦೦೭೦

ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಗಳಿಸಿದವರೆಲ್ಲರೂ ಹೇಗೆ ಒಳ್ಳೆಯ ಕವಿಗಳಾಗುವುದು ಸಾಧ್ಯವಿಲ್ಲವೋ ಅದೇ ರೀತಿ ಸಂಗೀತದಲ್ಲಿ ಪಾಂಡಿತ್ಯ ಗಳಿಸಿದವರೆಲ್ಲರೂ ಒಳ್ಳೆಯ ರಾಗ ಸಂಯೋಜಕರಾಗುವುದೂ ಸಾಧ್ಯವಿಲ್ಲ. ಒಳ್ಳೆಯ ಕವಿಯಲ್ಲಿ ನಾವು ಕಾಣುವುದು ಪ್ರತಿಭೆ ಮತ್ತು ಕಲ್ಪನಾ ವಿಲಾಸವನ್ನು. ಇವು ಗಳಿಕೆಯಿಂದ ಬರುವಂಥವಲ್ಲ. ಬದಲಾಗಿ, ಸಹಜ ಜನ್ಯ ಮತ್ತು ಸ್ವಯಂ ಸ್ಫೂರ್ತವಾದಂಥವು. ಒಬ್ಬ ಸಮರ್ಥ ರಾಗ ಸಂಯೋಜಕನಲ್ಲೂ ಸಹ ನಾವು ಈ ಗುಣಗಳನ್ನು ಕಾಣುತ್ತೇವೆ. ಹಾಗೆಂದು, ಒಬ್ಬ ಶ್ರೇಷ್ಠ ಕವಿ ಬರೆದ ಎಲ್ಲ ಕವಿತೆಗಳೂ ಒಂದೇ ಗುಣಮಟ್ಟದ್ದಾಗಿರುವುದಿಲ್ಲ. ಅವುಗಳಲ್ಲಿ ಶ್ರೇಷ್ಠವಾದದ್ದೂ ಇರುತ್ತವೆ, ಸಾಧಾರಣವಾದದ್ದೂ ಇರುತ್ತವೆ. ಏಕೆಂದರೆ ಶ್ರೇಷ್ಠ ಕಾವ್ಯ ಕವಿಗೆ ಯಾವುದೋ ಮಾಯೆಯಲ್ಲಿ ಅನಿರೀಕ್ಷಿತವಾಗಿ, ತಾನೇ ತಾನಾಗಿ ಎಂಬಂತೆ ಬುದ್ಧಿ ಭಾವಗಳ ವಿದ್ಯುದಾಲಿಂಗನದಿಂದ ಒದಗಿ ಬರುವಂಥದು. ಹಠ ಹಿಡಿದು, ಕೂತು ಸಾಧಿಸಿದರೆ ದಕ್ಕುವಂಥದಲ್ಲ. ಇಲ್ಲಿ intuition ಅಥವಾ ಸಹಜ ಸ್ಫೂರ್ತಿಯ ಪಾತ್ರ ಮಹತ್ವದ್ದು. ಇಲ್ಲದಿದ್ದರೆ ಶ್ರೇಷ್ಠ ಕವಿ ಬರೆದದ್ದೆಲ್ಲ ಶ್ರೇಷ್ಠ ಕಾವ್ಯವೇ ಆಗಿರಬೇಕಿತ್ತು. ಇದೇ ಮಾತನ್ನು ನಾವು ರಾಗ ಸಂಯೋಜನೆಗೂ ಅನ್ವಯಿಸಬಹುದು. ಹೀಗಾಗಿ, ನಮ್ಮ ಶ್ರೇಷ್ಠ ರಾಗ ಸಂಯೋಜಕರ ಸಂಯೋಜನೆಗಳಲ್ಲೂ ಕೆಲವು ಶ್ರೇಷ್ಠ ಮಟ್ಟದ್ದಿವೆ, ಸಾಧಾರಣ ಮಟ್ಟದ್ದೂ ಕೆಲವಿವೆ. ಒಟ್ಟಾರೆ ಕವಿ ಮತ್ತು ರಾಗ ಸಂಯೋಜಕ ಇಬ್ಬರಲ್ಲೂ ಇರಬೇಕಾದ ಗುಣಗಳೆಂದರೆ ಪ್ರತಿಭೆ ಮತ್ತು ಕಲ್ಪನಾಶೀಲತೆ ಇವು ಅತ್ಯಂತ ವಿರಳವಾಗಿ ಕಂಡು ಬರುವ ಗುಣಗಳಾದ್ದರಿಂದ, ಶ್ರೇಷ್ಠ ಕವಿಗಳ ಹಾಗೆ ಶ್ರೇಷ್ಠ ರಾಗ ಸಂಯೋಜಕರೂ ಸಹ ಬೆರಳೆಣಿಕೆಯಷ್ಟೇ ಮಂದಿ ಇರುವುದು ಸಹಜವೇ ಆಗಿದೆ.

ಭಾವಗೀತೆಗಳ ರಾಗಸಂಯೋಜಕನಲ್ಲಿ ಅಗತ್ಯವಾಗಿ ಇರಬೇಕಾದ ಇನ್ನೆರಡು ಗುಣಗಳೆಂದರೆ (೧) ಸಹಜವಾದ ಕಾವ್ಯ ಪ್ರೀತಿ ಮತ್ತು (೨) ಸದಭಿರುಚಿ, ಕಾವ್ಯವನ್ನು ಅದರ ಎಲ್ಲ ಭಾವಸೂಕ್ಷ್ಮತೆ, ಧ್ವನಿ ರಮ್ಯತೆ ಮತ್ತು ಅರ್ಥ ಸಾಧ್ಯತೆಗಳೊಂದಿಗೆ ಗ್ರಹಿಸುವ ಶ್ರದ್ಧೆ ಮತ್ತು ಆಸಕ್ತಿ ಅವನಲ್ಲಿರಬೇಕು. ತಾನು ರಾಗ ಸಂಯೋಜಿಸಲಿರುವ ಕವಿತೆಯನ್ನು ಅವನು ಸಂಪೂರ್ಣವಾಗಿ ತನ್ನದಾಗಿಸಿಕೊಳ್ಳಬೇಕು. ಆಗ ಮಾತ್ರ ಅವನು ಆ ಕವಿತೆಯ ಎಲ್ಲ ಸ್ತರಗಳನ್ನೂ, ಸ್ವಾರಸ್ಯಗಳನ್ನೂ ಕೇಳುಗನಿಗೆ ತಲುಪಿಸಲು ಶಕ್ತನಾಗುತ್ತಾನೆ.

ಒಬ್ಬ ರಾಗಸಂಯೋಜಕನ ಮನೋಧರ್ಮ ಮತ್ತು ಅಭಿರುಚಿ ಆತ ರಾಗಸಂಯೋಜನೆಗೆ ಕವಿತೆಗಳನ್ನು ಆರಿಸಿಕೊಳ್ಳುವುದರಲ್ಲೇ ವ್ಯಕ್ತವಾಗುತ್ತದೆ. ಒಬ್ಬ ಉತ್ತಮ ರಾಗಸಂಯೋಜಕನು ಅಗ್ಗದ ಜನಪ್ರಿಯತೆಗೆ ಎಂದಿಗೂ ಮಾರು ಹೋಗುವುದಿಲ್ಲ. ಅವನಿಗೆ ಸಾಂಸ್ಕೃತಿಕ ಜವಾಬ್ದಾರಿ ಇರುತ್ತದೆ. ಸ್ವಭಾವಜನ್ಯವಾದ ಸದಭಿರುಚಿ ಇರುತ್ತದೆ. ಹೀಗಾಗಿ ಆತ ಉತ್ತಮ ಕವಿಗಳ ಉತ್ತಮ ರಚನೆಗಳನ್ನಷ್ಟೇ ತನ್ನ ರಾಗ ಸಂಯೋಜನೆಗೆ ಆರಿಸಿಕೊಳ್ಳುತ್ತಾನೆ. ಹೀಗೆ ತಾನು ಆರಿಸಿಕೊಂಡ ಕವಿತೆಯನ್ನು ಅದರ ಎಲ್ಲ ಸೂಕ್ಷ್ಮಗಳೊಂದಿಗೆ ಸಮಗ್ರವಾಗಿ ಅರ್ಥ ಮಾಡಿಕೊಳ್ಳಲು ಶ್ರದ್ಧೆಯಿಂದ ಪ್ರಯತ್ನಿಸುತ್ತಾನೆ. ಈ ಪ್ರಯತ್ನದಲ್ಲಿ ಅವನು ಸ್ವತಃ ಕವಿಯ ಅಥವಾ ಕಾವ್ಯಾಸಕ್ತರ ನೆರವನ್ನು ಪಡೆಯಬಹುದು. ಅನಂತರ ಅವನು ಸ್ವತಃ ಆ ಕವಿತೆಯಲ್ಲೇ ಸುಪ್ತವಾಗಿ ಅಡಗಿರುವ ಅದರ ನಾದ ಶರೀರವನ್ನು ತನ್ನ ಪ್ರತಿಭೆಯಿಂದ ಶೋಧಿಸಿ ಹೊರತೆಗೆಯುತ್ತಾನೆ. ಹೀಗೆ ಕೇವಲ ಶಬ್ದಶಿಲ್ಪವಾಗಿದ್ದ ಕವಿತೆಯನ್ನು ಅವನು ನಾದಶೀಲವಾಗಿ ಪರಿವರ್ತಿಸುತ್ತಾನೆ. ಆ ಮೂಲಕ ಕವಿತೆಯ ಸಂವಹನ ಶಕ್ತಿಯನ್ನು ಅವನು ಇಮ್ಮಡಿಗೊಳಿಸುತ್ತಾನೆ. ಏಕೆಂದರೆ ಆವರೆಗೆ ಕೇವಲ ಓದುಗರಿಗೆ ಮಾತ್ರ ಲಭ್ಯವಾಗಿದ್ದ ಕವಿತೆ ಆ ಬಳಿಕ ಕೇಳುಗರ ಹೃದಯಕ್ಕೂ ನೇರವಾಗಿ ಲಗ್ಗೆ ಹಾಕುವ ಶಕ್ತಿಯನ್ನು ಗಳಿಸಿಕೊಳ್ಳುತ್ತದೆ. ಹೀಗೆ ರಾಗ ಸಂಯೋಜಕನು ಕವಿ ಮತ್ತು ಕಾವ್ಯ ರಸಿಕರ ನಡುವೆ ಒಂದು ಅರ್ಥಪೂರ್ಣ ಮತ್ತು ಸಾರ್ಥಕ ಸೇತುವೆಯಾಗುತ್ತಾನೆ. ನನ್ನ ಈ ಮಾತುಗಳಿಗೆ ನಮ್ಮ ಈವರೆಗಿನ ಎಲ್ಲ ಶ್ರೇಷ್ಠರಾಗ ಸಂಯೋಜಕರೂ ಉದಾಹರಣೆಯಾಗಿದ್ದಾರೆ.

ಮೇಲಿನ ಈ ಎಲ್ಲ ಮಾತುಗಳನ್ನೂ ಭಾವಗೀತೆಗಳ ಗಾಯನಕ್ಕೂ ಅನ್ವಯಿಸಬಹುದು. ಏಕೆಂದರೆ ನಮ್ಮ ರಾಗಸಂಯೋಜಕರಲ್ಲಿ ಬಹಳಷ್ಟು ಮಂದಿ ಸ್ವತಃ ಶ್ರೇಷ್ಠ ಗಾಯಕರೂ ಆಗಿದ್ದಾರೆ. ಭಾವಗೀತೆಗಳ ಗಾಯನಕ್ಕೆ ಮಾತ್ರ ಅನ್ವಯಿಸಿ ಹೇಳುವುದಾದರೆ ಇಷ್ಟಂತೂ ಖಚಿತ. ಕಾವ್ಯಪ್ರೀತಿ, ಭಾವತನ್ಮಯತೆ ಮತ್ತು ಸುಗಮ ಸಂಗೀತದ ವೈಶಿಷ್ಟ್ಯಗಳ ಸ್ಪಷ್ಟ ಅರಿವು ಇಲ್ಲದ ಯಾರೂ ಸಹ ಭಾವಗೀತೆಯ ಶ್ರೇಷ್ಠ ಗಾಯಕ ಅಥವಾ ಗಾಯಕಿ ಆಗಲು ಸಾಧ್ಯವಿಲ್ಲ.

ಭಾವಗೀತೆಗಳಿಗೆ ವಾದ್ಯ ಸಂಯೋಜನೆಯ ಅಗತ್ಯ ಮತ್ತು ಔಚಿತ್ಯದ ಬಗ್ಗೆ ಒಂದೆರಡು ಮಾತು. ಈಚೆಗೆ ಭಾವಗೀತೆಗಳ ಗಾಯನದ ನಡುವೆ ವಾದ್ಯಗಳ ಅಬ್ಬರ ಅತಿಯಾಗುತ್ತಿದೆಯೆಂಬ ಆರೋಪ ಕೇಳಿ ಬರುತ್ತಿದೆ. ಈ ಆರೋಪದಲ್ಲಿ ಹುರುಳಿಲ್ಲವೆಂದರೆ ತಪ್ಪಾಗುತ್ತದೆ. ಗೀತೆಗೆ ತನ್ನ ಭಾವಾವರಣವನ್ನು ನಿರ್ಮಿಸಲು ವಾದ್ಯ ಸಂಗೀತ ನಿಜಕ್ಕೂ ಅಗತ್ಯ. ಈ ಅಗತ್ಯವನ್ನು ಹಿತಮಿತವಾಗಿ ಪೂರೈಸುವುದಷ್ಟೇ ವಾದ್ಯ ಸಂಗೀತದ ಔಚಿತ್ಯ. ಈ ಔಚಿತ್ಯದ ಎಲ್ಲೆ ಮೀರಿ ವಾದ್ಯ ಸಂಗೀತ ವಿಜೃಂಭಿಸಲು ಯತ್ನಿಸಿದರೆ ಅದು ಭಾವಗೀತೆಗೆ ಮಾರಕವಾಗುವುದು ನಿಶ್ಚಿತ.

ಸುಗಮ ಸಂಗೀತದ ಯುವ ಪ್ರತಿಭೆಗಳಿಗೆ ಒಂದು ಕಿವಿಮಾತು. ಗುರುವಿನ ಅಗತ್ಯವೇನಿದ್ದರೂ ವಿದ್ಯೆಯನ್ನು ಸರಿಯಾಗಿ, ಸಮಗ್ರವಾಗಿ ಕಲಿಯುವವರೆಗೆ ಮಾತ್ರ. ಅನಂತರ, ಗೋಪಾಲಕೃಷ್ಣ ಅಡಿಗರು ಹೇಳಿರುವಂತೆ, 'ಗುರುವಿನ ಸಮಾನನಾಗುವ ತನಕ ದೊರೆಯದಣ್ಣ ಮುಕುತಿ'. ಈ ರೀತಿ ಗುರುವಿಗೆ ಸಮಾನರಾಗಬಲ್ಲ ಹಾಗೂ ಸಾಧ್ಯವಾದ ಮಟ್ಟಿಗೂ ಗುರುವನ್ನೇ ಮೀರಬಲ್ಲ ಶಿಷ್ಯ ಸಮೂಹ ಇಂದು

ತಯಾರಾಗಬೇಕಾಗಿದೆ. ಹೀಗಾದಾಗ ಮಾತ್ರ ಸುಗಮ ಸಂಗೀತ ಭದ್ರವಾಗಿ ನೆಲೆಯೂರಿ ಬೆಳೆಯಬಲ್ಲದು.

ಇಂದು ಸುಗಮ ಸಂಗೀತವು ಕರ್ನಾಟಕದಲ್ಲಿ ಒಂದು ವಿಶಿಷ್ಟ ಸಂಗೀತ ಪ್ರಕಾರವಾಗಿ ಭದ್ರವಾಗಿ ನೆಲೆಯೂರಿ ನಿಂತಿದೆ. ನಾಡಿನಾದ್ಯಂತ ಹಲವಾರು ಸುಗಮ ಸಂಗೀತ ಸಂಸ್ಥೆಗಳು ಹಾಗೂ ಶಾಲೆಗಳು ಇಂದು ಸಾವಿರಾರು ಯುವ ಪ್ರತಿಭೆಗಳನ್ನು ಈ ಕ್ಷೇತ್ರಕ್ಕಾಗಿ ಸಜ್ಜುಗೊಳಿಸುತ್ತಿವೆ. ಈ ಸಂಸ್ಥೆಗಳು ಹಾಗೂ ಶಾಲೆಗಳು ನಿರ್ವಹಿಸಬೇಕಾದ ಮುಖ್ಯ ಕರ್ತವ್ಯಗಳೆಂದರೆ: (೧) ಯುವ ಪ್ರತಿಭೆಗಳಿಗೆ ಸುಗಮ ಸಂಗೀತದ ಪರಂಪರೆ ಮತ್ತು ವೈಶಿಷ್ಟ್ಯದ ಬಗ್ಗೆ ಮನವರಿಕೆ ಮಾಡಿಕೊಡುವುದು ಹಾಗೂ (೨) ಈವರೆಗಿನ ಶ್ರೇಷ್ಠ ಮತ್ತು ಜನಪ್ರಿಯ ಸಂಯೋಜನೆಗಳನ್ನು ಅವರಿಗೆ ಕಲಿಸುವುದು. ಹಾಗೆಯೇ ಕೇವಲ ಗಾಯಕ, ಗಾಯಕಿಯರಷ್ಟೇ ಅಲ್ಲದೆ ಸಮರ್ಥ ರಾಗಸಂಯೋಜಕರೂ ಸಹ ಈ ಕ್ಷೇತ್ರದಲ್ಲಿ ಮೂಡಿ ಬರಬೇಕಾಗಿದೆ ಹಾಗೂ ಹೊಸ ಕವಿ, ಕವಯತ್ರಿಯರು ತಮ್ಮ ವಿನೂತನ ಭಾವಗೀತೆಗಳಾದ ಈ ಕ್ಷೇತ್ರವನ್ನು ಶ್ರೀಮಂತಗೊಳಿಸಬೇಕಾಗಿದೆ. ಆಗಷ್ಟೇ ಸುಗಮ ಸಂಗೀತವು ಸಮೃದ್ಧವಾಗಿ ಹಾಗೂ ನಿರಂತರವಾಗಿ ಬೆಳೆಯಲು ಸಾಧ್ಯವಾಗುತ್ತದೆ.

❑❑

# ಕುಮಾರವ್ಯಾಸ ಭಾರತದ ಕೆಲವು ಸ್ವಾರಸ್ಯ ಸಂಗತಿಗಳು

– ಎ.ವಿ. ಪ್ರಸನ್ನ

ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾ ಮಂಜರಿಯು ನೂರಾರು ವಿಷಯಗಳ ಗಣಿಯಾಗಿದೆ. ಅಲ್ಲಿನ ಭಾಷೆ, ಛಂದಸ್ಸು, ಅಲಂಕಾರ ವೈವಿಧ್ಯಗಳು, ಗ್ರಾಮೀಣ ಭಾಷೆ–ಸಂಸ್ಕೃತಿಗಳ ಸೊಗಡು, ಶಬ್ದಾರ್ಥಗಳ ವೈಶಿಷ್ಟ್ಯ, ಸಂದೇಹಾಸ್ಪದ ವ್ಯಾಕರಣಾಂಶಗಳು, ವೀರರಸ–ಭಕ್ತಿ ಭಾವದ ಪ್ರಕಟ, ಹಸಿ ಹಸಿಯಾಗಿ ಮೈದೋರುವ ಪಾತ್ರಗಳ ಸಹಜ ಮಾನುಷ ಸ್ವಭಾವಗಳು, ಅಮಾನುಷ ಮತ್ತು ಅತಿಮಾನುಷ ನಡವಳಿಕೆಗಳು, ಕಾವ್ಯದೊಳಗೆ ವಿಲೀನವಾಗುವ ಸೃಷ್ಟಿಯ ವರ್ಣನೆಗಳು, ಮಾನವನ ವಿಭಿನ್ನ ನಡವಳಿಕೆಗಳು, ಹತ್ತಾರು ನೀತಿ ಬೋಧಕ ಪ್ರಸಂಗಗಳು, ಗೂಡಾರ್ಥಗಳು, ಜಾನಪದ ನಡೆ–ನುಡಿ–ಭಾಷೆ–ಸಂಸ್ಕೃತಿಗಳು– ಮೂಲ ಭಾರತದಲ್ಲಿಲ್ಲದ ಕೆಲವು ಸಂಗತಿಗಳು, ಹೀಗೆ ಅಸಂಖ್ಯಾತ ಸ್ವಾರಸ್ಯಗಳನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ. ಅಂತಹ ಒಂದೆರಡು ಪ್ರಸಂಗಗಳನ್ನು ಈ ಲೇಖನದಲ್ಲಿ ಉಲ್ಲೇಖಿಸಬಯಸುತ್ತೇನೆ.

## ೧. ಅಶ್ವತ್ಥಾಮೋ ಹತಃ

ದ್ರೋಣಾಚಾರ್ಯರ ಸಕಾರಣವಲ್ಲದ ಮರಣಕ್ಕೆ ಕಾರಣವಾದುದು, ಅಶ್ವತ್ಥಾಮ ಸತ್ತನೆಂಬ ಸುಳ್ಳು ಸುದ್ದಿ. ಅಶ್ವತ್ಥಾಮ ಚಿರಂಜೀವಿಯೆಂಬುದು ಸ್ಪಷ್ಟವಿದ್ದಾಗ್ಯೂ ದ್ರೋಣಾಚಾರ್ಯರು ಅದನ್ನು ನಂಬುತ್ತಾರೆ. ದ್ರೋಣರ ಪ್ರಜ್ಞೆ ಆ ಸಮಯಕ್ಕೆ ನಾಶವಾಗಿತ್ತೇ ಎಂಬ ಪ್ರಶ್ನೆ ಬಹು ಸಹಜವಾದುದು, ಆದರೆ ಆ ಸುದ್ದಿಯನ್ನು ಬಿತ್ತರಿಸಿದವನು ಧರ್ಮಜನೆಂಬುದೇ ಇದಕ್ಕೆ ಸಮಾಧಾನ. ತನ್ನ ಪುತ್ರ ಅಶ್ವತ್ಥಾಮ ಚಿರಂಜೀವಿಯೆಂಬ ಸತ್ಯಕ್ಕಿಂತಲೂ, ಧರ್ಮರಾಯನು ಅಸತ್ಯವನ್ನೇ ಆಡಿದರೂ, ಅದೇ ನಿಜವೆಂದು ದ್ರೋಣಾಚಾರ್ಯರೇ ನಂಬುವಷ್ಟು ಮಟ್ಟಿಗಿನ ಸತ್ಯಸಂಧತೆ ಧರ್ಮರಾಯನ ಹೆಸರಿನೊಂದಿಗೇ ಬೆಳೆದು ಬಂದುದು ಇದರಿಂದ ಸಾದರವಾಗುತ್ತದೆ. ಇನ್ನೊಂದು ದಿಕ್ಕಿನಿಂದ ಪರ್ಯಾಲೋಚಿಸಿದಲ್ಲಿ, ಶ್ರೀ ಕೃಷ್ಣನು ಧರ್ಮರಾಯನ ಸತ್ಯಸಂಧತೆಯ ಬಿರುದನ್ನು ತನ್ನ ಕಾರ್ಯಸಾಧನೆಗಾಗಿ ಉಪಯೋಗಪಡಿಸಿಕೊಂಡ ಸಂದರ್ಭವಿದೆಂದೂ ವ್ಯಾಖ್ಯಾನಿಸಬಹುದು. ಹೇಗೇ ಆದರೂ ಕೃಷ್ಣನದ್ದು ಅಂತಿಮ ನ್ಯಾಯದ ಗುರಿ, ಅದಕ್ಕೆ ಮಾರ್ಗದ ಹಂಗಿಲ್ಲ ಎಂಬುದಕ್ಕೆ ಈ ಪ್ರಕರಣವೊಂದು ಪ್ರಖರ ಉದಾಹರಣೆ.

ಇಂತಹ ಅನೇಕ ಪ್ರಶ್ನೆಗಳಿಗೆ ಕಾರಣವಾಗುವ ಈ ಪ್ರಸಂಗದಲ್ಲಿ ಧರ್ಮರಾಯನು ಹೇಳುವ ಅಶ್ವತ್ಥಾಮನ ಮರಣದ ಸಂಗತಿಯನ್ನು ಹೇಳಲು, ಅಷ್ಟೇ ಅನುಮಾನಾಸ್ಪದವಾದ ಭಾಷೆಯ ತಂತ್ರವನ್ನು ವ್ಯಾಸ–ಪಂಪ–ರನ್ನರು ಉಪಯೋಗಿಸಿಕೊಂಡಿದ್ದಾರೆ. ವ್ಯಾಸರು ಸಹಜವಾಗಿ ಸಂಸ್ಕೃತದಲ್ಲಿ 'ಅಶ್ವತ್ಥಾಮೋಹತ: ಕುಂಜರಃ' ಎಂದು ಧರ್ಮರಾಯನಿಂದ ಹೇಳಿಸಿ, ವಾಕ್ಯದ ಕಡೆಯ ಶಬ್ದವನ್ನು ಅವನು ಸಣ್ಣ ಧ್ವನಿಯಲ್ಲಿ ದ್ರೋಣರಿಗೆ ಕೇಳದಂತೆ ಉಚ್ಚರಿಸಿದನೆಂದು ಹೇಳುತ್ತಾರೆ. ಧರ್ಮರಾಯನು ತಾಂತ್ರಿಕವಾಗಿ ಅಸತ್ಯವನ್ನು ಹೇಳಿಲ್ಲ, ಅಶ್ವತ್ಥಾಮ ಎಂಬ ಆನೆ ಹತವಾಯಿತು ಎಂದು ಹೇಳಿದ್ದೇನೆ– ಎಂದು ತೃಪ್ತಿಪಟ್ಟುಕೊಳ್ಳಬಹುದಾದರೂ ಪರಿಣಾಮದಲ್ಲಿ ಅದು ಸುಳ್ಳೇ ಆಗಿದೆ. ತಾನು ಹೇಳುತ್ತಿರುವುದು ಸುಳ್ಳಲ್ಲವೆಂದು ಅವನಿಗೆ ತಿಳಿದಿದ್ದು, ಅವನು ಹೀಗೆ ಹೇಳಿದ್ದರೆ ಮಾತ್ರ ಅವನು ನಿರ್ದೋಷಿ, ಆದರೆ, ತಾನು ಅಂತಿಮ ಪರಿಣಾಮದಲ್ಲಿ ಸುಳ್ಳೇ ಆಗುವ ಈ ಅಸತ್ಯವನ್ನು ಹೇಳಬೇಕೆಂದು ಅವನಿಗೆ ಸ್ಪಷ್ಟವಾಗಿಯೂ ತಿಳಿದಿರುವ ಕಾರಣದಿಂದ, ಅವನಿಗೆ ಈ ಅಸತ್ಯವಾಕ್ಕಿನ ದೋಷ ತಪ್ಪುವುದಿಲ್ಲ. ಧರ್ಮರಾಯನು ಈ ಪೂರ್ಣ ವಾಕ್ಯವನ್ನು ಒಂದೇ ಧ್ವನಿಯಲ್ಲಿ ಹೇಳಿದ, ಆದರೆ ಕೃಷ್ಣ ಕಡೆಯ ಶಬ್ದ ಮಾತ್ರ ಕೇಳದಂತೆ ಶಂಖವನ್ನು ಊದಿದನೆಂಬುದೊಂದು ಉಪಕಥೆಯಿದೆ. ಆದರೆ ಇದಕ್ಕೆ ಆಧಾರ ತಿಳಿಯುವುದಿಲ್ಲ. ವ್ಯಾಸರಲ್ಲಿಯೂ ಈ ಪ್ರಸಂಗವಿಲ್ಲ. ಹೀಗಾಗಿ ಕೃಷ್ಣನ ನೇರ ಹೊಣೆಗಾರಿಕೆ ಅಷ್ಟುಮಟ್ಟಿಗೆ ಕಡಿಮೆಯಾಗಿ, ಧರ್ಮರಾಯನನ್ನೇ ಹೊಣೆಯಾಗಿಸುತ್ತದೆ.

ಇನ್ನು, ಪಂಪ ಈ ಪ್ರಸಂಗವನ್ನು ಸಂಕ್ಷಿಪ್ತವಾಗಿ ಹೇಳುತ್ತಾ, ಧರ್ಮರಾಯನ ಸತ್ಯಸಂಧತೆಗೆ ಧಕ್ಕೆ ಬಾರದ ರೀತಿಯಲ್ಲಿ ಈ ಪ್ರಸಂಗವನ್ನು ನಿರ್ವಹಿಸಿದ್ದಾನೆ. ಆ ಕಂದ ಹೀಗಿದೆ:–

ಗೌರವ ಪ್ರಾಧ್ಯಾಪಕ, ಕುಮಾರವ್ಯಾಸ ಪೀಠ, ತುಮಕೂರು ವಿಶ್ವವಿದ್ಯಾಲಯ

ಸಾಮಜಮಶ್ವತ್ಥಾಮಂ
ನಾಮದಿನೊಂದಳಿದೊಡಲ್ಲಿ ಕಂಡು ಹತೋಶ್ವ-
ತ್ಥಾಮಾ ಎನೆ ನೃಪನಶ್ವ-
ತ್ಥಾಮನೆಗೆತ್ತೂಣರ್ದನೊವಜನೊರ್ವೆಸರಿಭಮಂ

-ಪಂಪ ಭಾರತ ೧೨-೨೭

'ಅಶ್ವತ್ಥಾಮ' ಎಂಬ ಹೆಸರಿನ ಆನೆಯೊಂದು ಸತ್ತಾಗ, ಅದನ್ನು ಕಂಡು ಧರ್ಮರಾಯನು 'ಹತೋಶ್ವತ್ಥಾಮಾ' ಎನ್ನಲು, ತನ್ನ ಮಗ ಅಶ್ವತ್ಥಾಮನೇ ಸತ್ತನೆಂದು ತಿಳಿದು ಚಿಂತಿಸಿದನೆಂಬುದು ಈ ಕಂದಪದ್ಯದ ತಾತ್ಪರ್ಯ. ನಂತರ ದ್ರೋಣ ಬಿಲ್ಲನ್ನು ಬೀಸಾಡುತ್ತಾನೆ. ಪುನಃ ಧರ್ಮಜನು 'ಸತ್ತದ್ದು ಆನೆಯೇ' ಎಂದು ಹೇಳಿದರೂ ಸಹ ದ್ರೋಣನು ಈಗಾಗಲೇ ಬಿಲ್ಲನ್ನು ಬೀಸಾಡಿದ್ದೇನೆ. ಪುನಃ ಹಿಡಿಯುವುದಿಲ್ಲವೆಂದು ಹೇಳಿ ಯೋಗ ಸಮಾಧಿಯಲ್ಲಿ ಪ್ರಾಣ ಬಿಡುತ್ತಾನೆ. ಇಲ್ಲಿ ಪಂಪ ಧರ್ಮರಾಯನನ್ನು ಸಂಪೂರ್ಣ ನಿರ್ದೋಷಿಯಾಗಿಸುವ ಭರದಲ್ಲಿ ದ್ರೋಣನನ್ನು ವಿನಾಕಾರಣ ಯುದ್ಧದಿಂದ ತಪ್ಪಿಸಿಕೊಂಡು ಪ್ರಾಣ ಕಳೆದುಕೊಂಡ ಅಪರಾಧಕ್ಕೆ ಗುರಿಮಾಡಿದ್ದಾನೆ.

ರನ್ನ ಸಹ 'ನಿಮಗಮೇತರಿನಕಾರಣಂ ಸಾವು ಸಂಭವಿಸಿರ್ದುದೋ ಕುಂಭ ಸಂಭವಾ' ಎಂದು ದುರ್ಯೋಧನನ ಬಾಯಲ್ಲಿ ಹೇಳಿಸಿ, ದ್ರೋಣನದು ಅಕಾರಣ ಮರಣವೆಂದೇ ಹೇಳುತ್ತಾನೆ. ಬೇರೊಂದು ಸಂದರ್ಭದಲ್ಲಿ ದುರ್ಯೋಧನ ಧರ್ಮಜನನ್ನು ಹೀಯಾಳಿಸುವಾಗ 'ಹತೋಶ್ವತ್ಥಾಮಾ ಎನಲಕ್ಕುಮೆ' ಎಂದು ಹೇಳಿ, ಧರ್ಮಜನಲ್ಲಿ ಅಸತ್ಯದ ದೋಷವನ್ನೇ ಧ್ವನಿಸುತ್ತಾನೆ. ಇದು ಈ ಪ್ರಸಂಗವನ್ನು ರನ್ನ ಕಂಡ ರೀತಿ.

ಇಷ್ಟು ಹಿನ್ನೆಲೆಯೊಂದಿಗೆ ಈ ಪ್ರಸಂಗವನ್ನು ಕುಮಾರವ್ಯಾಸ ನಿರ್ವಹಿಸಿರುವ ವಿಶಿಷ್ಟ ರೀತಿಯನ್ನು ಪರಿಶೀಲಿಸಬಹುದು. ದ್ರೋಣನ ನಾಯಕತ್ವದ ಯುದ್ಧದಲ್ಲಿ ಪಾಂಡವರ ಸೇನೆ ನುಗ್ಗು ನುರಿಯಾಗುತ್ತಿದೆ. ಇದನ್ನು ಕಂಡ ಕೃಷ್ಣ, ಸತ್ಯವಲ್ಲದ ಮಾತನ್ನು ಕೇಳಿದರೆ ದ್ರೋಣನನ್ನು ಸಂಹರಿಸಬಹುದೆನ್ನುತ್ತಾನೆ. ಅರ್ಜುನ ಇದಕ್ಕೆ ಒಪ್ಪುವುದಿಲ್ಲ. ಭೀಮನು ಮಾಳವರ ಸೈನ್ಯದಲ್ಲಿದ್ದ ಅಶ್ವತ್ಥಾಮ ಎಂಬ ಹೆಸರಿನ ಆನೆಯನ್ನು ಕೊಂದು, 'ಇಂದಿನ ಬವರದಲಿ ಕಡಿವಡೆದುದುಶ್ವತ್ಥಾಮ ಕೇಳೆಂದು' ದ್ರೋಣನಿಗೆ ಕೇಳುವಂತೆ ಕೂಗಿ ಹೇಳುತ್ತಾನೆ. ಇಲ್ಲಿ ಅಶ್ವತ್ಥಾಮನನ್ನು ಕುರಿತು ಹೇಳುತ್ತಿರುವುದರಿಂದ ಅದು 'ಕಡಿವಡೆದನಶ್ವವತ್ಥಾಮ' ಎಂದು ಇರಬೇಕಾಗಿತ್ತು. ದೂರದಿಂದ ಕೂಗಿ ಹೇಳುವಾಗ ಈ ವ್ಯತ್ಯಾಸ ಗಮನಕ್ಕೆ ಬರಲಾರದೆಂಬುದು ಕವಿಯ ಅಭಿಪ್ರಾಯವಾಗಿರಬಹುದು. ಭೀಮನ ಮಾತಿನಲ್ಲಿ ನಂಬಿಕೆಬಾರದ ದ್ರೋಣ, ಧರ್ಮಜನ ಹತ್ತಿರ ಹೋಗಿ-"ಎಲೆ ಯುಧಿಷ್ಠಿರ! ನನ್ನ ಮಗನೇನು ಅಳಿದನೇ, ನಿರ್ಮಳವಚೋನಿಧಿ ನೀನು ಹೇಳು" ಎಂದು ಧರ್ಮರಾಯನ ಸತ್ಯಸಂಧತೆಯ ಮೇಲೆ ಅಪಾರ ನಂಬುಗೆಯಿಂದ ದ್ರೋಣ ಕೇಳುತ್ತಾನೆ. ಒಂದು ಕ್ಷಣ ಧರ್ಮರಾಯ ತಬ್ಬಿಬ್ಬಾಗುತ್ತಾನೆ. ಅವನಿಗೆ ಯೋಚಿಸಲೂ ಅವಕಾಶ ನೀಡದೆ ಕೃಷ್ಣ ಹೇಳುತ್ತಾನೆ- "ಎಲೆ ಪಾಪಿ, ಹೇಳು, ಯುದ್ಧದಲ್ಲಿ ಮಾಳವರ ಸೈನ್ಯದಲ್ಲಿದ್ದ 'ಅಶ್ವತ್ಥಾಮ' ಎಂಬ ಹೆಸರಿನ ಆನೆ ಸತ್ತಿತು. ಹೆದರ ಬೇಡ"- ಎನ್ನುತ್ತಾನೆ. ಆಗ ಧರ್ಮರಾಯ ಹೇಳುವ ಮಾತುಗಳು ಹೀಗಿವೆ:

ಆದರಶ್ವತ್ಥಾಮಗಜವಿದಿ
ರಾದುದಳಿದುದು ದಿಟವೆನಲು ಬಿಸು
ಸುಯ್ದನರಸಲು ನುಡಿಗೆ ನಂಬಿದನಕಟ ಮಗನೆನುತ
ಕಯ್ದು ಕೈಯಲಿ ಜಾರೆ ಝೊಂಪಿಸಿ
ಖೇದದಲಿ ಕಾತರಿಸಿ ಚಿತ್ತವಿ
ಭೇದದಲಿ ಕಳವಳಿಸಿ ಕರೆದನು ರೋಷತ್ತಾಮಸವ

-ಕ.ಭಾ.ಕ. ದ್ರೋಣ ಪರ್ವ ೧೮-೬೩

ವ್ಯಾಸಭಾರತದಲ್ಲಿನ 'ಅಶ್ವತ್ಥಾಮೋ ಹತಃ ಕುಂಜರಃ' ಎಂಬ ಮಾತುಗಳ ಬದಲಿಗೆ ಕನ್ನಡ ಭಾಷೆಯ ವಿಶಿಷ್ಟ ಸಾಧ್ಯತೆಗಳನ್ನು ಬಳಸಿಕೊಂಡು ಕುಮಾರವ್ಯಾಸ ತನ್ನ ಕನ್ನಡ ಭಾಷೆಯ ಮೇಲಿನ ಅನನ್ಯ ಹಿಡಿತವನ್ನು ತೋರಿಸಿಕೊಟ್ಟಿದ್ದಾನೆ. "ಅಶ್ವತ್ಥಾಮ ಸತ್ತನೇ, ನೀನು ಹೇಳು"- ಎಂಬ ದ್ರೋಣನ ನುಡಿಗೆ ಉತ್ತರವಾಗಿ, ಕೃಷ್ಣನಿಂದ ಪ್ರಚೋದಿತನಾದ ಧರ್ಮರಾಯ, "ಆದರೆ, ಅಶ್ವತ್ಥಾಮ ಎಂಬ ಹೆಸರಿನ ಆನೆ ಯುದ್ಧದಲ್ಲಿ ಇದಿರಾಯಿತು, ಅದು ಮಡಿದುದು ದಿಟ" ಎನ್ನುತ್ತಾನೆ. ಈ ಮಾತಿಗೆ ಇಷ್ಟೇ ಅರ್ಥವಿದ್ದಿದ್ದರೆ ಅದರಲ್ಲೇನೂ ಸ್ವಾರಸ್ಯವಿರುತ್ತಿರಲಿಲ್ಲ. ಹಾಗೂ ಆ ಸಂದರ್ಭಕ್ಕೆ ಅದರಿಂದ ಹೆಚ್ಚೇನೂ ಪ್ರಯೋಜನವಿರುತ್ತಿರಲಿಲ್ಲ. ಧರ್ಮರಾಯನ ಈ ಒಂದೇ ಮಾತಿಗೆ ಎರಡು ರೀತಿಯ ಅರ್ಥ ಬರುವಂತೆ ಕುಮಾರವ್ಯಾಸ ಈ ವಾಕ್ಯವನ್ನು ರಚಿಸಿದ್ದಾನೆಂಬುದೇ ಇಲ್ಲಿನ ವಿಶೇಷ. ಮೊದಲನೇ ಅರ್ಥಕ್ಕಾಗಿ ಹೀಗೆ ಓದಿಕೊಳ್ಳಬೇಕು- "ಆದರೆ ಅಶ್ವತ್ಥಾಮಗಜವು ಇದಿರಾಯಿತು, (ಅದು) ಅಳಿದುದು ದಿಟ' ಎಂದರೆ ಯುದ್ಧದಲ್ಲಿ 'ಅಶ್ವತ್ಥಾಮ' ಎಂಬ ಹೆಸರಿನ ಆನೆ (ಭೀಮನಿಗೆ) ಎದುರಾಯಿತು. ಅದು ಸತ್ತಿದ್ದು ದಿಟ. ಇದು ಧರ್ಮರಾಯನು ಹೇಳಿದ ಸತ್ಯ. ಅವನ ಮನಸ್ಸಿನಲ್ಲಿ, ತಾನು ಸುಳ್ಳು ಹೇಳುತ್ತಿಲ್ಲ, ಸತ್ಯವನ್ನೇ ಹೇಳುತ್ತಿದ್ದೇನೆ. ಇದರಲ್ಲಿ ತನ್ನ ದೋಷವೇನೂ ಇಲ್ಲ- ಎಂಬ ಭಾವವಿದೆ. ಆದರೆ ಅವನ ಇದೇ ಮಾತು ದ್ರೋಣನಿಗೆ ಅರ್ಥವಾದದ್ದು ಹೀಗೆ:- ಆದರೆ ಅಶ್ವತ್ಥಾಮ, ಗಜವಿದಿರಾದುದು, ಅಳಿದುದು ದಿಟ; ಎಂದರೆ ಯುದ್ಧದಲ್ಲಿ ಒಂದು ಆನೆಯು ಅಶ್ವತ್ಥಾಮನಿಗೆ ಇದಿರಾಯಿತು. (ಅದರಿಂದ, ಅಶ್ವತ್ಥಾಮನು) ಮರಣ ಹೊಂದಿದುದು ದಿಟ- ಎಂದು ಅರ್ಥವಾಗಿ, ತನ್ನ ಮಗ ಅಳಿದನೆಂದು ಭಾವಿಸಿ ರೋಷಾವೇಷದಿಂದ ಪಾಂಡವ ಸೈನ್ಯವನ್ನು ಸಂಹರಿಸುತ್ತಾನೆ. ಭೀಮ ಅವನನ್ನು ಅಪಹಾಸ್ಯ ಮಾಡುತ್ತಾ "ಮಕ್ಕಳಿಗೋಸುಗವಲೇ ಹಣವ ಗಳಿಸುವುದು. ಅವನೇ ಅಳಿದಮೇಲೂ ಈ ದ್ರೋಣ ಯುದ್ಧ ಮಾಡುತ್ತಿದ್ದಾನೆ. ಶಿವ ಶಿವಾ" ಎನ್ನುತ್ತಾನೆ. ಇದನ್ನು ಕೇಳಿದ ಮೇಲೆ ದ್ರೋಣ ಶಸ್ತ್ರತ್ಯಾಗಮಾಡಿ ಯೋಗಸಮಾಧಿಯಲ್ಲಿರುತ್ತಾನೆ. ಅವನ ಪ್ರಾಣ

ನೆತ್ತಿಯನ್ನು ಭೇದಿಸಿ ಮೇಲಕ್ಕೆ ಹಾರಿಹೋಗುತ್ತದೆ. ಅನಂತರ ಧೃಷ್ಟದ್ಯುಮ್ನ ದ್ರೋಣನ ತಲೆಯನ್ನು ಕತ್ತರಿಸಿಹಾಕುತ್ತಾನೆ.

ಅಶ್ವತ್ಥಾಮನು ಸತ್ತನೆಂಬ ಸುಳ್ಳುಮಾತನ್ನು ಧರ್ಮರಾಯನಿಂದ ಹೇಳಿಸಬಾರದೆಂಬುದಕ್ಕೆ ಕುಮಾರವ್ಯಾಸ ಭಾಷಾಚಮತ್ಕಾರವನ್ನು ಉಪಯೋಗಿಸಿರುವುದನ್ನು ಮೇಲೆ ವಿವರಿಸಿದೆ. ಈ ಬಗ್ಗೆ ನಡೆದ ಒಂದು ಚರ್ಚೆಯಲ್ಲಿ ಕೆಲವು ಭಿನ್ನಾಭಿಪ್ರಾಯಗಳು ಮೂಡಿಬಂದ ಸ್ವಾರಸ್ಯವನ್ನು ಇಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಕೆಲವು ವಿದ್ವಾಂಸರು ಆ ವಾಕ್ಯಕ್ಕೆ ಎರಡು ರೀತಿಯ ಅರ್ಥದ ಅವಶ್ಯಕತೆ ಇಲ್ಲವೆಂದು ಹೇಳುತ್ತ ಸರಳ ಅರ್ಥವೊಂದೇ ಈ ಸಂದರ್ಭಕ್ಕೆ ಸಾಕಾಗುತ್ತದೆಂದು ಅಭಿಪ್ರಾಯಪಟ್ಟರು. ಈ ಬಗ್ಗೆ ನಾನು ನೀಡಿದ ವಿವರಣೆಗಳೆಲ್ಲವೂ ನಿರುಪಯುಕ್ತವೆಂಬುದು ಅವರ ಅಭಿಪ್ರಾಯ. ಅವರು "ಗಜಪರಾಕ್ರಮಿಯಾದ ಅಶ್ವತ್ಥಾಮ ಯುದ್ಧದಲ್ಲಿ ಎದಿರಾಗಿ ಸತ್ತನೆಂಬುದು ದಿಟ' ಎಂಬುದಷ್ಟೇ ಅದರ ಅರ್ಥವೆಂದು ಪ್ರತಿಪಾದಿಸಿದರು. ಆದರೆ ಈ ರೀತಿಯ ಅರ್ಥವು ಕುಮಾರವ್ಯಾಸನ ಈ ವಾಕ್ಯದಿಂದ ಹೊರಡುವುದಿಲ್ಲವೆಂಬುದು ನನ್ನ ಅಭಿಪ್ರಾಯ. ಏಕೆಂದರೆ "ಅಶ್ವತ್ಥಾಮಗಜ'ವೆಂಬ ಶಬ್ದಕ್ಕೆ ಆನೆಯಂತಹ ಅಶ್ವತ್ಥಾಮ, ಆನೆಯಬಲವುಳ್ಳ ಅಶ್ವತ್ಥಾಮ, ಪ್ರೀತಿಪಾತ್ರನಾದ ಅಶ್ವತ್ಥಾಮ ಮುಂತಾದ ಅರ್ಥವನ್ನು ಹಚ್ಚುವುದು ಸೂಕ್ತವಲ್ಲ. ಅದರ ಬದಲಿಗೆ ಅಶ್ವತ್ಥಾಮಗಜ ಎಂದರೆ ಅಶ್ವತ್ಥಾಮ ನಾಮ ಗಜ ಎಂಬುದೇ ಸರಿಯಾದ ಅರ್ಥ. ಅದೂ ಅಲ್ಲದೆ ಅಶ್ವತ್ಥಾಮ ಗಜವಿದಿರಾದುದು ಎಂಬಲ್ಲಿನ ಅದುದು ಎಂಬುದು ಪ್ರಾಣಿವಾಚಕವೇ ಹೊರತು ಮನುಷ್ಯವಾಚಕವಲ್ಲ. ಮನುಷ್ಯವಾಚಕವಾಗಬೇಕಾದರೆ ಅವನು ಎದಿರಾದನು ಎಂದೇ ಹೇಳಬೇಕಾಗುತ್ತದೆ. ಈ ಶಬ್ದವು ಅಶ್ವತ್ಥಾಮ ಗಜವಿದಿರಾದನು ಎಂದು ಇರಬೇಕಾಗಿತ್ತು. ಆಗ ಮಾತ್ರ ಅವರು ಹೇಳುವಂತೆ ಅರ್ಥಹಚ್ಚಬಹುದಾಗಿತ್ತು. ಇದೇ ವಿಶ್ಲೇಷಣೆಯನ್ನು ಮುಂದುವರಿಸಿದರೆ ಇದಿರಾದುದು ಯಾರು? ಅಥವಾ ಇದಿರಾದದು ಯಾವುದು? ಎಂಬ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಅವರ ವಿಶ್ಲೇಷಣೆಯಲ್ಲಿ ವಿವರಣೆ ಸಿಕ್ಕುವುದಿಲ್ಲ. ಆದ್ದರಿಂದ ಈ ವಾಕ್ಯಕ್ಕೆ ನಾನು ಮೊದಲೇ ತಿಳಿಸಿರುವಂತೆ ಅಶ್ವತ್ಥಾಮ ಗಜವು ಇದಿರಾಯಿತು. ಅಳಿಯಿತು ಹಾಗೂ ಅಶ್ವತ್ಥಾಮ(ನು) ಗಜವು ಇದಿರಾಗಲು ಅಳಿದ ಎಂಬ ಎರಡೂ ರೀತಿಯ ಅರ್ಥಗಳನ್ನು ಹೇಳುವುದರಿಂದ ಮಾತ್ರ ಸೂಕ್ತ ವಿವರಣೆಯನ್ನು ಪಡೆಯಬಹುದಷ್ಟೇ ಅಲ್ಲದೆ ಸಂದರ್ಭೋಚಿತ ಸ್ವಾರಸ್ಯವನ್ನು ಹಾಗೂ ಕವಿಯ ಕನ್ನಡ ಭಾಷೆ ಮತ್ತು ಶಬ್ದ ಚಾತುರ್ಯದ ಹಿರಿಮೆಯನ್ನು ಅರಿಯಬಹುದು.

## ೨. ಕರ್ಣಕುಂಡಲ

ಕರ್ಣನು ಹುಟ್ಟುವಾಗಲೇ ಕವಚ-ಕುಂಡಲಗಳೊಂದಿಗೆ ಹುಟ್ಟಿದನೆಂಬುದು ಸುಪ್ರಸಿದ್ಧವಾದ ಸಂಗತಿ. ದೇವೇಂದ್ರನು ಅವುಗಳನ್ನು ಕರ್ಣನಿಂದ, ದುರುದ್ದೇಶ ಪೂರ್ವಕವಾಗಿ ದಾನವಾಗಿ ಪಡೆದನೆಂಬ ವಿಚಾರವೂ ಅಷ್ಟೇ ಪ್ರಸಿದ್ಧವಾದ ವಿಚಾರ. ಆದರೆ ಕವಚದ ವಿಚಾರದಲ್ಲಿರುವ ಸ್ಪಷ್ಟತೆ ಕುಂಡಲಗಳಲ್ಲಿರದಿರುವುದು ಹಾಗೂ ಅಮೃತಕಲಶವೊಂದು ಇದರೊಂದಿಗೆ ಸೇರಿಕೊಂಡಿರುವುದು ಕುಮಾರವ್ಯಾಸಭಾರತಕ್ಕೆ ವಿಶೇಷವಾದ ವಿಷಯ. ಅದರ ಬಗ್ಗೆ ವಿಶ್ಲೇಷಿಸುವುದು ಈ ಲೇಖನದ ಉದ್ದೇಶ.

ದೂರ್ವಾಸರ ಮಂತ್ರಶಕ್ತಿಯನ್ನು ಪರೀಕ್ಷಿಸಲು ಸೂರ್ಯನನ್ನು ಆಹ್ವಾನಿಸಿದ ಕುಂತಿ, ಅವನು ಪ್ರತ್ಯಕ್ಷನಾದಾಗ ಗಾಬರಿಗೊಳ್ಳುತ್ತಾಳೆ. ಬಂದಹಾಗೆಯೇ ಹಿಂದಿರುಗ ಹೇಳುತ್ತಾಳೆ. ಋಷಿಗಳ ಮಂತ್ರದ ಮಹಿಮೆಗೆ ಹೆದರಿದ ಸೂರ್ಯ, ಸಾಧ್ಯವಿಲ್ಲವೆನ್ನುತ್ತಾನೆ. ಕಡೆಗೆ ಸೂರ್ಯನೊಂದಿಗೆ ಸಮಾಗಮಕ್ಕೆ ಒಪ್ಪಿದ ಕುಂತಿ, "ಒಂದುವೇಳೆ ನಿನ್ನಿಂದ ಮಗನನ್ನು ಪಡೆಯುವುದು ಅನಿವಾರ್ಯವೇ ಆದರೆ ಅವನನ್ನು ರಕ್ಷಿಸುವ ಕವಚ-ಕುಂಡಲಗಳನ್ನು ಅವನಿಗೆ ಅನುಗ್ರಹಿಸು" ಎಂದು ಬೇಡುತ್ತಾಳೆ. ಇದಕ್ಕೆ ಒಪ್ಪಿದ ಸೂರ್ಯ ತನ್ನ ತಾಯಿ ಆದಿತಿಯಿಂದ ತನಗೆ ಬಂದಿರುವ ಕರ್ಣಕುಂಡಲಗಳನ್ನು ಮತ್ತು ತಾನು ಧರಿಸಿರುವ ಕವಚವನ್ನೂ ಕರ್ಣನಿಗೆ ಅನುಗ್ರಹಿಸುತ್ತಾನೆ. ಅಂತೆಯೇ, ಸಹಜ ಕವಚ-ಕುಂಡಲಗಳೊಂದಿಗೆ ಕರ್ಣನ ಜನನವಾಗುತ್ತದೆ. ಇದು ಸಂಕ್ಷಿಪ್ತವಾಗಿ ವ್ಯಾಸಭಾರತದಲ್ಲಿ ಪ್ರಸ್ತಾಪವಾಗಿರುವ ಕಥೆ. ಈ ಕವಚ-ಕುಂಡಲಗಳು ಇರುವವರೆಗೂ ಕರ್ಣನಿಗೆ ಸಾವೆಂಬುದಿಲ್ಲ. ಏಕೆಂದರೆ ಇವುಗಳು ಅಮೃತೋಪಮವಾದುವು. ಮುಂದೆ ತನ್ನ ಅಂಶದಿಂದ ಹುಟ್ಟಲಿರುವ ಅರ್ಜುನನಿಗೂ ಕರ್ಣನಿಗೂ ಯುದ್ಧವಾಗುವಾಗ ಈ ಕವಚ-ಕುಂಡಲಗಳ ಕಾರಣದಿಂದ ಕರ್ಣನನ್ನು ಕೊಲ್ಲಲು ಅರ್ಜುನನಿಗೂ ಸಾಧ್ಯವಾಗದೆ ಹೋಗುತ್ತದೆಂಬುದನ್ನು ಅರಿತ ಇಂದ್ರ, ಕರ್ಣನಲ್ಲಿಗೆ ಬ್ರಾಹ್ಮಣವೇಷದಿಂದ ಬಂದು ಕವಚಕುಂಡಲಗಳನ್ನು ದಾನವಾಗಿ ಬೇಡುತ್ತಾನೆ. ಅದಕ್ಕೆ ಮೊದಲೇ ಸೂರ್ಯ ಬ್ರಾಹ್ಮಣನ ರೂಪದಲ್ಲಿ ಕರ್ಣನ ಕನಸಿನಲ್ಲಿ ಬಂದು, 'ಇಂದ್ರ ಕವಚ-ಕುಂದಲಗಳನ್ನು ಬೇಡಿದರೆ ನೀನು ಸರ್ವಥಾ ಕೊಡಬೇಡ. ಅವುಗಳಿರುವವರೆಗೂ ನೀನು ಅಜೇಯ-ಅಮರ; ಅವುಗಳನ್ನು ನಿನ್ನ ದೇಹದಿಂದ ಬೇರ್ಪಡಿಸಿಕೊಟ್ಟರೆ ನಿನ್ನ ಸಾವು ಖಚಿತ' ಎಂದು ಬಗೆಬಗೆಯಾಗಿ ತಿಳಿಯ ಹೇಳುತ್ತಾನೆ. ದಾನವೇ ತನ್ನ ಶೀಲವಾಗಿರುವಾಗ ಕೇವಲ ಪ್ರಾಣವನ್ನುಳಿಸಿಕೊಳ್ಳುವ ಕಾರಣದಿಂದ ಈ ದಾನವನ್ನು ತಾನು ನಿರಾಕರಿಸಲಾರೆ ಎಂದು ಸ್ಪಷ್ಟವಾಗಿ ಹೇಳುತ್ತಾನೆ ಕರ್ಣ. ದಾರಿಕಾಣದ ಸೂರ್ಯ, 'ಹಾಗಿದ್ದಲ್ಲಿ ಕವಚ-ಕುಂಡಲಗಳಿಗೆ ಬದಲಾಗಿ ಇಂದ್ರನಿಂದ ಶಕ್ತ್ಯಾಯುಧವನ್ನು ಬೇಡು' ಎಂದು ಹೇಳಲಾಗಿ ಕರ್ಣ ಅದಕ್ಕೆ ಒಪ್ಪಿರುತ್ತಾನೆ. ಅದರಂತೆಯೇ ಈಗ ಬ್ರಾಹ್ಮಣವೇಷದಲ್ಲಿ ಬಂದ ಇಂದ್ರನಿಗೆ ಅವನ ಬೇಡಿಕೆಯಂತೆ ಕವಚ-ಕುಂಡಲಗಳನ್ನು ಧಾರೆಯೆರೆದು, ಅವನಿಂದ ಶಕ್ತ್ಯಾಯುಧವನ್ನು ಪಡೆಯುತ್ತಾನೆ

(ಕಡೆಗೆ ಇದನ್ನು ಘಟೋತ್ಕಚನ ಮೇಲೆ ಪ್ರಯೋಗಿಸಿ ಅವನನ್ನು ಸಂಹರಿಸಿ, ಅರ್ಜುನನ ಮೇಲೆ ಪ್ರಯೋಗಿಸುವ ಅವಕಾಶದಿಂದ ವಂಚಿತನಾಗುತ್ತಾನೆ). ಈ ಎಲ್ಲ ವಿವರಗಳೂ ಸಹ ವ್ಯಾಸಭಾರತದ ಅರಣ್ಯಪರ್ವದ ಅಧ್ಯಾಯ ೩೦೮, ೩೦೯ ಮತ್ತು ೩೧೦ರಲ್ಲಿ ಸುದೀರ್ಘವಾಗಿ ಪ್ರಸ್ತಾಪವಾಗಿವೆ.

ಆದರೆ ಇಲ್ಲಿ ತಿಳಿಸಿರುವಂತೆ, ಕವಚ ಕುಂಡಲಗಳನ್ನು ಇಂದ್ರನಿಗೆ ದಾನ ಮಾಡಿದ್ದರಿಂದಲೇ, 'ವಸುಷೇಣ'ನೆಂಬ ಹೆಸರಿನ ಬದಲಾಗಿ ಅವನಿಗೆ 'ಕರ್ಣ'ನೆಂಬ ಹೆಸರು ಬಂದಿತು. ಈ ದಾನಪ್ರಸಂಗವು ನಡೆದುದು, ಪಾಂಡವರು ವನವಾಸದಲ್ಲಿದ್ದ ಅವಧಿಯ ೧೨ನೆಯ ವರ್ಷದಲ್ಲಿ (ವ್ಯಾಸಭಾರತ, ಅರಣ್ಯಪರ್ವ ಅಧ್ಯಾಯ ೩೧೦) ಈ ವಿವರಣೆಯಿಂದ ಒಂದು ಸಹಜ ಸಂದೇಹ ಹುಟ್ಟುತ್ತದೆ. ಪಾಂಡವರು ರಾಜ್ಯವನ್ನು ಕಳೆದುಕೊಂಡು ಅರಣ್ಯಕ್ಕೆ ಹೋಗಿ ಅಲ್ಲಿ ೧೨ ವರ್ಷಗಳನ್ನು ಕಳೆಯುವವರೆಗೂ ಕರ್ಣನಿಗೆ ಆ ಹೆಸರು ಇರಲಿಲ್ಲವೇ? ಹಾಗಿದ್ದರೆ ಅಲ್ಲಿನ ಸಂದರ್ಭದವರೆಗೂ ಅವನನ್ನು ಕರ್ಣ ಎಂಬ ಹೆಸರಿನಿಂದಲೇ ಕರೆಯುತ್ತಿರುವುದು ಅನೌಚಿತ್ಯವಾಗುವುದಿಲ್ಲವೇ- ಎಂಬುದೇ ಈ ಸಂದೇಹ. ಕರ್ಣಜನನದಿಂದ ಕವಚ-ಕುಂಡಲಗಳ ದಾನದವರೆಗಿನ ಕರ್ಣ ವೃತ್ತಾಂತದ ವಿವರಗಳು ವ್ಯಾಸಭಾರತದಲ್ಲಿ ಅರಣ್ಯ ಪರ್ವದ ಕಥಾನಿರೂಪಣೆಯ ಸಮಯದಲ್ಲಿ ಧರ್ಮರಾಯ ಕರ್ಣನ ಬಗ್ಗೆ ಭಯಗೊಂಡಿರುವ ವಿಚಾರದಲ್ಲಿ ಜನಮೇಜಯ ವೈಶಂಪಾಯನರನ್ನು ಕೇಳಿದಾಗ ಅವರು ಅವನಿಗೆ ಕರ್ಣನ ವೃತ್ತಾಂತವನ್ನು ವಿಸ್ತರಿಸುವಾಗ ಬಂದಿರುವುದರಿಂದ ಬಹುಶಃ ಕರ್ಣನು ಇಂದ್ರನಿಗೆ ಕವಚ-ಕುಂಡಲಗಳನ್ನು ದಾನ ಮಾಡಿದುದು ಸಹ ಅದೇ ಸಂದರ್ಭದಲ್ಲಿ ಎಂಬ ತಪ್ಪು ಅಭಿಪ್ರಾಯವು ಈ ಕಥಾಸಂದರ್ಭದಲ್ಲಿ ನುಸುಳಿಕೊಂಡಿರಬಹುದು.

ಕುಮಾರವ್ಯಾಸ ಭಾರತದಲ್ಲಿ ಈ ಸಂಗತಿಗಳು ಅತಿಹೆಚ್ಚಿನ ಬದಲಾವಣೆಗಳಿಗೊಳಗಾಗಿವೆ. ಅಲ್ಲಿ ಕರ್ಣ ಜನನದ ಸಂದರ್ಭದಲ್ಲಿ ಕವಚ-ಕುಂಡಲಗಳೊಂದಿಗೇ ಕರ್ಣ ಹುಟ್ಟಿದನೆಂಬ ಪ್ರಸ್ತಾಪವೇ ಇಲ್ಲ. ಅದಕ್ಕೂ ಮಿಗಿಲಾಗಿ ಇಂದ್ರ ಕರ್ಣನ ಕವಚ-ಕುಂಡಲಗಳನ್ನು ಬೇಡುವ ಪ್ರಸ್ತಾಪವೂ ಇಲ್ಲ. ಇದನ್ನು ಬಹಳ ಪ್ರಾಸಂಗಿಕವಾಗಿ ಬೇರೊಂದು ಸಂದರ್ಭದಲ್ಲಿ ಪ್ರಸ್ತಾಪಿಸಿದ್ದಾನೆ. ಉದ್ಯೋಗಪರ್ವದಲ್ಲಿ ಕುಂತೀ-ಕರ್ಣರ ಭೇಟಿಯಾಗುವಲ್ಲಿ, ಸೂರ್ಯ ಬಂದು ಕರ್ಣನಿಗೆ ಅವನ ಹುಟ್ಟನ್ನು ತಿಳಿಸಿ 'ಕುಂತಿಯು ಮುರಹರನ ಮತದಿಂದ ಸರಳ ಬೇಡಲು ಬಂದಿಹಳು, ಅಂದಿನ ಹರಿಗೆ ಕವಚವನಿತ್ತವೊಲು ಮರುಳಾಗಬೇಡ (ಕಭಾರ:ಉ.ಪ:೧೦-೨೯) ಎಂದು ಎಚ್ಚರಿಕೆ ಕೊಡುತ್ತಾನೆ. ಅದಕ್ಕೆ ಕರ್ಣ "ಬೆಸಸಿದುದಕೆ ಹಸಾದ"ವೆಂದು ಮಾತ್ರ ಹೇಳಿ ಸೂರ್ಯನನ್ನು ಕಳಿಸುತ್ತಾನೆ. ವ್ಯಾಸಭಾರತದ ಅರಣ್ಯಪರ್ವದಲ್ಲಿನ ಸೂರ್ಯ-ಕರ್ಣರ ಸುದೀರ್ಘ ಸಂವಾದವನ್ನು (ಕರ್ಣನ ಕನಸಿನಲ್ಲಿ) ಕುಮಾರವ್ಯಾಸ ಕೇವಲ ಒಂದು ವಾಕ್ಯದಲ್ಲಿ ಸಂಗ್ರಹಿಸಿರುವ ಪರಿ ಇದು. ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ "ಕವಚವನಿತ್ತವೊಲು" ಎಂದು ಹೇಳುತ್ತಾನೆಯೇ ಹೊರತು, ಕುಂಡಲಗಳ ಪ್ರಸ್ತಾಪವೇ ಇಲ್ಲದಿರುವುದು. ಇದನ್ನು ಕುಮಾರವ್ಯಾಸ ಉದ್ದೇಶ ಪೂರ್ವಕವಾಗಿಯೇ ಕೈಬಿಟ್ಟಿದ್ದಾನೆ. ಕರ್ಣನು ಕವಚವನ್ನು ಇಂದ್ರನಿಗೆ ದಾನಮಾಡಿದುದನ್ನು ಕುಮಾರವ್ಯಾಸ ಪ್ರಸ್ತಾಪಿಸಿ, ಕುಂಡಲಗಳನ್ನು ಕರ್ಣಮೋಕ್ಷದವರೆಗೂ ಅವನಲ್ಲಿಯೇ ಉಳಿಸಿಕೊಂಡಿರುವುದು ಕುಮಾರವ್ಯಾಸ ಕೃಷ್ಣಪಾರಮ್ಯವನ್ನು ಸಾರಿಹೇಳಲು ಬಳಸಿಕೊಳ್ಳುವ ಮತ್ತೊಂದು ಅವಕಾಶಕ್ಕೆ ಕಾರಣವಾಗಿಸುವ ಉದ್ದೇಶವನ್ನು ಹೊಂದಿದೆ. ಈ ವಿವರಗಳಿಗೆ ಕರ್ಣಪರ್ವದ ಅಂತ್ಯಭಾಗದವರೆಗೂ ಕಾಯಬೇಕಾಗುತ್ತದೆ.

ಕರ್ಣಾರ್ಜುನರ ಕಾಳಗದ ಅಂತ್ಯದಲ್ಲಿ ಅರ್ಜುನ ಅಂಜಲಿಕಾಸ್ತ್ರವನ್ನು ಪ್ರಯೋಗಿಸುತ್ತಾನೆ. ಆಗಲೂ ಕರ್ಣನ ಪ್ರಾಣ ಹೋಗದ ಮರ್ಮವನ್ನು ಅರಿತ ಕೃಷ್ಣ ರಥದ ಕುದುರೆಗಳ ಹಗ್ಗ ಚಾವಟಿಗಳನ್ನು ಬಿಸುಟು ಬ್ರಾಹ್ಮಣವೇಷದಲ್ಲಿ ಕರ್ಣನ ಮುಂದೆ ನಿಲ್ಲುತ್ತಾನೆ. 'ನಿನಗೆ ಉತ್ತಮಲೋಕಪ್ರಾಪ್ತಿ ಯಾಗಬೇಕಾದರೆ ನಾನು ಬೇಡುವುದನ್ನು ಕೊಡು'-ಎಂದು ಆ ಮಾಯಾವಿಪ್ರ ಕೇಳಲು 'ಈಗಳೀವುದ ಬೆಸಸಿ' ಎನ್ನುತ್ತಾನೆ ಕರ್ಣ. ಕೂಡಲೇ ಆ ಬ್ರಾಹ್ಮಣ 'ತೂಗುವೀ ಕುಂಡಲವನೀವುದು'- ಎಂದು ತನ್ನ ಕಣ್ಣಿಗೆ ಕಾಣುತ್ತಿರುವ ಶ್ರೇಷ್ಠವಾದ ಆಭರಣವನ್ನು ಕೇಳುವಂತೆ ಕೇಳುತ್ತಾನೆ. ಮರುಧ್ವನಿಯಲ್ಲಿಯೇ 'ಬೇಗ ಧಾರೆಯನೆರೆದುಕೊಡು' ಎಂದೂ ಕೇಳುತ್ತಾನೆ. ಕರ್ಣ ತನ್ನ ರಥದಲ್ಲಿದ್ದ ಗಿಂಡಿಯ ನೀರನ್ನು, ರಥಚಕ್ರಗಳನ್ನು ಎತ್ತುವಾಗ ಕೆಸರಾಗಿದ್ದ ಕೈಕಾಲುಗಳನ್ನು ತೊಳೆಯಲು ಉಪಯೋಗಿಸಿ ಖಾಲಿ ಮಾಡಿರುತ್ತಾನೆ. ಕುಮಾರವ್ಯಾಸನಲ್ಲಿ, ಕರ್ಣನ ರಥ ಹೂತುಹೋದುದರಿಂದಾದ ಏಕೈಕ ಪ್ರಯೋಜನವೆಂದರೆ ಗಿಂಡಿಯಲ್ಲಿದ್ದ ನೀರು ಖಾಲಿಯಾಗುವುದು ಮಾತ್ರ, ಹೀಗಾಗಿ ಕರ್ಣ ಉದಕವನು ಹೊರಗರಸುತಿರಲು, ಆ ಪದುಮನಾಭನು, ನಿನ್ನಯ ಹೃದಯದೊಳಗಿರ್ದ ಅಮಳ ಗಂಗಾಜಲವನ್ನು ತೆಗೆದು ಅದರಿಂದ ಧಾರೆಯೆರೆದುಕೊಡು ಎನ್ನಲು ಬತ್ತಳಿಕೆಯಿಂದ ಬಾಣವೊಂದನ್ನು ತೆಗೆದು ಗರಿಗರಿಲುಗರಿಲೆಂದು ತನ್ನ ಎದೆಯನ್ನು ಸೀಳಿ ಹೃದಯದಲ್ಲಿದ್ದ ಕಳಶವನ್ನು ತೆಗೆದು, ತನ್ನ ಕಿವಿಯಲ್ಲಿ ತೂಗುತ್ತಿದ್ದ ಕುಂಡಲಗಳನ್ನು ಕಿತ್ತು ತೆಗೆದು, ಕಳಶದ ಗಂಗಾಜಲದಿಂದ ಧಾರೆಯನ್ನೆರೆದುಕೊಡುತ್ತಾನೆ. ಅದನ್ನು ಸ್ವೀಕರಿಸಿದ ಕೃಷ್ಣ ಕರ್ಣನಿಗೆ ಮುಕ್ತಿಯ ಪಥವನ್ನು ತೋರಿಸುತ್ತಾನೆ. ರಥಕ್ಕೆ ಹಿಂದಿರುಗಿ ಬಾಣ ಪ್ರಯೋಗಿಸಲು ಅರ್ಜುನನಿಗೆ ನಿರ್ದೇಶನ ನೀಡುತ್ತಾನೆ. ಅರ್ಜುನನ ಬಾಣದಿಂದ ಕರ್ಣಶಿರ ಧರಿತ್ರಿಗೆ ಕೆಡೆದು ಬೀಳುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಕರ್ಣನ ಹೃದಯದೊಳಗೆ ಕಳಶದಲ್ಲಿ ಗಂಗಾಜಲವಿದ್ದ ವಿಚಾರವಾಗಲೀ, ಕೃಷ್ಣ ಬ್ರಾಹ್ಮಣವೇಷದಿಂದ ಬಂದು

ಕರ್ಣನ ಕುಂಡಲಗಳನ್ನು ಬೇಡುವುದಾಗಲೇ ಕರ್ಣ ತನ್ನ ಎದೆಯನ್ನು ಬಗೆದು ಗಂಗಾಜಲದಿಂದ ಕರ್ಣಕುಂಡಲಗಳನ್ನು ದಾನಮಾಡುವದಾಗಲೀ ಮೂಲಭಾರತದಲ್ಲಿಲ್ಲ. ಮೂಲಭಾರತದಲ್ಲಿ ಇಂದ್ರನೇ ಕರ್ಣನ ಕವಚ-ಕುಂಡಲಗಳನ್ನು ದಾನವಾಗಿ ಪಡೆದು ಕರ್ಣನ ಸಾವನ್ನು ಗಟ್ಟಿಗೊಳಿಸಿರುತ್ತಾನೆ. ಆದರೆ ಕುಮಾರವ್ಯಾಸ ಆ ಹೊಣೆಯನ್ನು ಕೃಷ್ಣನಿಗೆ ವರ್ಗಾಯಿಸಿ ಕರ್ಣನನ್ನು ಮರಣದ ಹೊತ್ತಿನಲ್ಲಿ ಕೃಷ್ಣಭಕ್ತನನ್ನಾಗಿ ಪರಿವರ್ತಿಸಿ, ಸಾವಿಗೂ ಮೊದಲೇ ಅವನಿಗೆ ಮುಕ್ತಿಯ ಪಥವನ್ನು ತೋರಿಸುವಂತೆ ಮಾಡಿದ್ದಾನೆ. ಮಹಾಭಾರತದಲ್ಲಿನ ಯಾವ ಪಾತ್ರಗಳಾದರೂ ಸರಿಯೇ- ದುರ್ಯೋಧನ ಕರ್ಣ ಸಹಿತವಾಗಿ- ಅವುಗಳು ಕೃಷ್ಣನ ಅಂಕೆಯಲ್ಲಿಯೇ ಇರಬೇಕು-ಸಾಯಬೇಕು ಎಂಬುದು ಕುಮಾರವ್ಯಾಸನ ಕಾವ್ಯತತ್ತ್ವ. ಹಾಗಾಗಿ ಅದಕ್ಕೆ ಅನುಗುಣವಾಗುವಂತೆ ಕರ್ಣಕುಂಡಲಗಳ ಪ್ರಕರಣವನ್ನು ಸೃಷ್ಟಿಸಿ ಬೆಳೆಸಿ ಉಪಯೋಗಿಸಿಕೊಂಡಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಈ ಪ್ರಸಂಗದಲ್ಲಿ ವ್ಯಾಸಭಾರತದಿಂದ ಕುಮಾರವ್ಯಾಸನು ಮಾಡಿಕೊಂಡಿರುವ ಬದಲಾವಣೆಗಳು ಅವನ ಉದ್ದೇಶಕ್ಕೆ ಅನುಗುಣವಾಗಿರುವುದಲ್ಲದೇ ಸ್ವಾರಸ್ಯವಾಗಿಯೂ ಇದೆ. ಅದಕ್ಕಾಗಿ ಕಥಾಸಂವಿಧಾನವನ್ನೇ ಔಚಿತ್ಯಪೂರ್ಣವಾಗಿ ಬದಲಾಯಿಸಿಕೊಂಡಿರುವುದನ್ನು ನೋಡಬಹುದು. ಇದರಿಂದ ಕರ್ಣನ ಪಾತ್ರಕ್ಕೆ ಕೊಟ್ಟಿರುವ ತಿರುವು ಉತ್ತಮವಾಗಿ ಮೂಡಿಬಂದಿದೆ. ಖಳನಾಯಕನೊಬ್ಬನನ್ನು ಕೃಷ್ಣಭಕ್ತನನ್ನಾಗಿ ಬದಲಾಯಿಸಿರುವುದು ಕುಮಾರವ್ಯಾಸನ ಭಾರತದರ್ಶನದ ಪ್ರತೀಕವಾಗಿದೆ.

ಪಂಪ ಈ ಪ್ರಸಂಗದಲ್ಲಿ ಸಂಕ್ಷಿಪ್ತವಾಗಿ ವಿವರಗಳನ್ನು ನೀಡಿದ್ದರೂ ವ್ಯಾಸರನ್ನು ಅನುಸರಿಸಿದ್ದಾನೆ. ದೇವೇಂದ್ರ ಕರ್ಣನ ಕವಚ-ಕುಂಡಲಗಳನ್ನು ಬೇಡಿದನೆಂದು ಹೇಳಿದರೂ ಸಹ ಕರ್ಣ ದಾನಕೊಟ್ಟಿದ್ದು ಕವಚವನ್ನು ಮಾತ್ರ. ಕುಂಡಲಗಳ ಕಥೆ ಏನಾಯಿತೆಂಬುದು ಪಂಪನಿಗೆ ಮುಖ್ಯವಾಗುವುದಿಲ್ಲ. ಕೃಷ್ಣನ ಬ್ರಾಹ್ಮಣವೇಷದ ಕಪಟವಾಗಲೀ ಅಮೃತಕಳಶ ಪ್ರಸಂಗವಾಗಲೀ ಪಂಪನಲ್ಲಿಲ್ಲ. ವ್ಯಾಸರ ಕರ್ಣ, ಭೂಮಿಯಲ್ಲಿ ಹೂತಿದ್ದ ರಥವನ್ನು ಮೇಲೆತ್ತುವ ಪ್ರಯತ್ನದಲ್ಲಿದ್ದಾಗಲೇ ಅರ್ಜುನನ ಬಾಣದಿಂದ ಹತನಾಗುತ್ತಾನೆ. ಆದರೆ ಕುಮಾರವ್ಯಾಸನಲ್ಲಿ ಮಾತ್ರ ಕರ್ಣನು ರಥವನ್ನು ಎತ್ತಿ, ಪುನಃ ರಥದೊಳಗೆ ಕುಳಿತು ಯುದ್ಧ ಮಾಡುತ್ತಾನೆಂಬ ವಿವರಗಳಿವೆ. ಈ ಬದಲಾವಣೆಗೆ ಸಹ ಕುಂಡಲದಾನ ಪ್ರಕರಣವೇ ಪ್ರಮುಖ ಕಾರಣವೆಂಬುದು ಸ್ಪಷ್ಟವಾಗುತ್ತದೆ.

❑❑

# ಕರ್ನಾಟಕದಲ್ಲಿ ಸೋಮನಾಥನ ಆರಾಧನೆ

– ಕೆ. ವಸಂತಲಕ್ಷ್ಮಿ

"ಸೌರಾಷ್ಟ್ರದೇಶೇ ವಸುಧಾವಕಾಶೇ ಜ್ಯೋತಿರ್ಮಯಂ ಚಂದ್ರಕಲಾವತಂಸಂ।
ಭಕ್ತಿ ಪ್ರದಾನಾಯ ಕೃತಾವತಾರಂ ತಂ ಸೋಮನಾಥಂ ಶರಣಂ ಪ್ರಪದ್ಯೇ ॥"
(ದ್ವಾದಶಜ್ಯೋತಿರ್ಲಿಂಗ ಸ್ತೋತ್ರಂ)

ಭಾರತದಲ್ಲಿ ಪ್ರಸಿದ್ಧವಾಗಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಸೌರಾಷ್ಟ್ರದ ಸೋಮನಾಥ ಲಿಂಗವೂ ಅನಾದಿಕಾಲದಿಂದಲೂ ಅರ್ಚನೆಗೊಳ್ಳುತ್ತಿದೆ. ಲಾಕುಲೀಶ ಪಂಥದ ಮೂಲವ್ಯಕ್ತಿ ಲಕುಲೀಶನಾಗಿ ಶಿವನು ಭೃಗುಕಚ್ಛದಲ್ಲಿ ಅವತಾರ ಮಾಡಿದ್ದು ಆ ಗ್ರಾಮವು 'ಕಾರ್‍ವಾಣ್' ಎಂಬ ಹಳ್ಳಿಯೆಂದು ತಿಳಿದುಬರುತ್ತದೆ. ಈ ಗ್ರಾಮದಲ್ಲಿ ನಕ್ಲೇಶ್ವರ (ಲಕುಲೀಶ್ವರ)ನ ದೇವಾಲಯವೂ ಇದೆ ಎಂದು ತಿಳಿಯುತ್ತದೆ. ಲಕುಲೀಶ ಶೈವ ಮತವು ಕರ್ನಾಟಕಕ್ಕೆ ಗುಜರಾತ್‌ನಿಂದ ಬಂದಿರಬೇಕು ಎಂದು ಚಿದಾನಂದ ಮೂರ್ತಿಗಳು ಅಭಿಪ್ರಾಯ ಪಡುತ್ತಾರೆ.[೧] ಈ ಪಂಥದ ಯತಿಗಳೊಂದಿಗೆ ಸೌರಾಷ್ಟ್ರದ ಸೋಮನಾಥನ ಆರಾಧನೆಯು ಬಂದಂತಿದೆ. ಕ್ರಿ.ಶ. ೯–೧೦ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಹಲವೆಡೆ ಸೋಮೇಶ್ವರ ದೇವಾಲಯಗಳು ನಿರ್ಮಾಣವಾಗಿವೆ. ವಿಶೇಷವಾಗಿ ೧೧–೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸೋಮನಾಥನ ಆರಾಧನೆ ಹೆಚ್ಚು ಪ್ರಚಲಿತಗೊಂಡಿದೆ.

ಕರ್ನಾಟಕದಲ್ಲಿನ ಸೋಮನಾಥಪುರ ದೇವಾಲಯದ ಅಧ್ಯಯನಡೆಸಿರುವ ದೇವರಾಜ್‌ರವರು ಹರಿಹರನ 'ಆದಯ್ಯನ ರಗಳೆ' 'ರಾಘವಂಕನ 'ಸೋಮನಾಥನ ಚಾರಿತ್ರ್ಯ'ನ್ನು ಆಧರಿಸಿ ಈ ಕಥೆಯ ಪ್ರಭಾವದಿಂದ, ಕರ್ನಾಟಕದಲ್ಲಿ ಸೋಮನಾಥನ ಆರಾಧನೆ ಬೆಳೆಯಿತೆಂದು ಅಭಿಪ್ರಾಯ ಪಡುತ್ತಾರೆ.[೨] ಆದರೆ ಇದಕ್ಕೆ ಮೊದಲೇ ೧೦ನೇ ಶ.ದಿಂದಲೇ ಕರ್ನಾಟಕದಲ್ಲಿ ಸೋಮನಾಥನ ಆರಾಧನೆ ಇದ್ದುದ್ದನ್ನು ಶಾಸನಗಳು, ದೇವಾಲಯ ವಾಸ್ತುಗಳು ದೃಢಪಡಿಸುತ್ತಿವೆ.

ಸೋಮನಾಥ ದೇವಾಯಲದ ಪ್ರಾಚೀನತೆಯ ಬಗೆಗೆ ಗಮನಿಸಿದರೇ ಗುಜರಾತಿನ ಸೌರಾಷ್ಟ್ರದ ಸೋಮನಾಥ ದೇವಾಲಯವು ಕ್ರಿ.ಶ. ೨ನೇ ಶ.ದಿಂದ ಇದ್ದು, ಎಲ್ಲಡೆ ಪಾಶುಪತ ಶೈವಮತವು ಪಸರಿಸಿತ್ತು. ಇಲ್ಲಿ ನೆಲೆಸಿದ್ದ ಶೈವಯತಿಗಳು, ಭಕ್ತರು ನೀಡಿದ ದಾನದಿಂದ ಪೂಜಾಕಾರ್ಯವನ್ನು, ಮಠಗಳನ್ನು ಘಟಿಕಾಸ್ಥಾನಗಳನ್ನು ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.[೩]

'ಸೋಮನಾಥ' ಎಂಬ ಶಿವನ ಹೆಸರಿನ ವಿಶೇಷತೆಯ ಬಗೆಗೆ ಚಿಂತಿಸಿದರೆ, ಕಾಶಿಯಲ್ಲಿ ಚಂದ್ರನು ಸ್ಥಾಪಿಸಿದ ಶಿವನನ್ನು 'ಸೋಮನಾಥ' ಎಂದು ಸಂಸ್ಕೃತ–ಸಂಸ್ಕೃತ–ಕನ್ನಡ ನಿಘಂಟು ತಿಳಿಸಿದೆ. ಇದರಿಂದ 'ಸೋಮನಾಥ'ನ ಮೂಲಸ್ಥಾನವು 'ಕಾಶಿ' ಇದ್ದಿರುವಂತಿದೆ. ಕಾಶಿಯಂತೆಯೇ ಪ್ರಾಚೀನವೂ, ಪ್ರಸಿದ್ಧವೂ ಆದ 'ಸೌರಾಷ್ಟ್ರವು 'ಸೋಮನಾಥನ ನೆಲೆ' ಎಂದು ವಿಖ್ಯಾತವಾಗಿದೆ. ಈ ದಿಸೆಯಲ್ಲಿ ನೋಡಿದರೆ, ಭಾರತದ ದ್ವಾದಶಜ್ಯೋತಿರ್ಲಿಂಗ ಸ್ತೋತ್ರವು ಪ್ರಪ್ರಥಮವಾಗಿ ಸೌರಾಷ್ಟ್ರ ದೇಶದಲ್ಲಿ ಜ್ಯೋತಿರೂಪನಾಗಿ ಚಂದ್ರಕಲೆಯನ್ನು ಧರಿಸಿ, ಭಕ್ತರ ಉದ್ಧಾರಕ್ಕಾಗಿ ಅವತರಿಸಿದ 'ಸೋಮನಾಥ' ಲಿಂಗವನ್ನು ಸ್ತುತಿಸಿದೆ.

ಸೌರಾಷ್ಟ್ರದ ಸ್ಥಳ ಪುರಾಣವು ಈ ಪ್ರದೇಶದಲ್ಲಿ ಪುರಾತನ ಕಾಲದಲ್ಲಿ ದಕ್ಷ ಪ್ರಜಾಪತಿಯು ನೆಲೆಸಿದ್ದು, ಅವನಿಗಿದ್ದ ಇಪ್ಪತ್ತೇಳು ಜನ ಹುಡುಗಿಯರನ್ನು ಚಂದ್ರನಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಆದರೆ ಚಂದ್ರನು ರೋಹಿಣಿಯನ್ನು ಮಾತ್ರ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದು, ಉಳಿದವರು ಅತೃಪ್ತರಾಗಿ ತಂದೆಯ ಬಳಿ ದೂರುತ್ತಾರೆ. ಮಕ್ಕಳ ದುಃಖವನ್ನು ತಿಳಿದ ದಕ್ಷನು ಕೋಪದಿಂದ ಚಂದ್ರನಿಗೆ 'ಕ್ಷಯವಾಗು' ಎಂದು ಶಪಿಸುತ್ತಾನೆ. ಚಂದ್ರನು ಶಾಪ ವಿಮೋಚನೆಗಾಗಿ ಬೇಡಿಕೊಂಡನು. ನಂತರ ಚಂದ್ರನು ಸರಸ್ವತಿ, ಕಪಿಲಾ ಮತ್ತು ಹಿರಣ್ಯ ನದಿಗಳ ಸಂಗಮದಲ್ಲಿ ಸ್ನಾನಮಾಡಿ ಹದಿನೈದು ದಿನ ಶಿವನನ್ನು ಪೂಜಿಸಿದ ಫಲವಾಗಿ ಹದಿನೈದು ದಿನಗಳಲ್ಲಿ ಮಾತ್ರ ವೃದ್ಧಿಯಾಗುವಂತೆ ಶಿವನಿಂದ ವರ ಪಡೆದನು. ಹೀಗೆ ಸೋಮನಿಂದ ಪೂಜಿಸಲ್ಪಟ್ಟ ಶಿವನು 'ಸೋಮನಾಥ' ಎನಿಸಿದನು. ಇದರಂತೆ ಈ ಕ್ಷೇತ್ರವನ್ನು ಪ್ರಭಾಸಕ್ಷೇತ್ರವೆನ್ನುವರು. ಪ್ರ ಎಂದರೆ ಮತ್ತೆ, ಭಾಸ ಎಂದರೆ ಪ್ರಕಾಶಗೊಂಡ ಸ್ಥಳ ಎಂದರ್ಥ. ಚಂದ್ರನನ್ನು ಮತ್ತೆ ಪ್ರಕಾಶಿಸುವಂತೆ, ಮಾಡಿದ ಸ್ಥಳವೇ ಪ್ರಭಾಸ ಕ್ಷೇತ್ರವೆನ್ನಿಸಿತು. ಈ ಪ್ರಭಾಸ ಕ್ಷೇತ್ರದ ಸೋಮನಾಥ ದೇವಾಲಯದಲ್ಲಿ ಸ್ವಯಂ ಭೂಲಿಂಗವಿದ್ದು, ಅನಾದಿ ಕಾಲದಿಂದಲೂ ಇದು ಪ್ರಖ್ಯಾತವಾದ, ವೈಭವೋಪೇತವಾದ ದೇವಾಲಯವಾಗಿದೆ. ಇಲ್ಲಿಯ ಅಪಾರ ಸಂಪತ್ತನ್ನು ಕೇಳಿ ತಿಳಿದ ಘಜನಿ ಮಹಮದ್ ಅನೇಕ ಸಲ

# ೩೫೬, ೧೧ ನೇ ಮುಖ್ಯರಸ್ತೆ, ಶ್ರೀನಿವಾಸನಗರ, ಬೆಂಗಳೂರು – ೫೬೦ ೦೫೦

ಲೂಟಿ ಮಾಡಿದ್ದನು. ಪರಕೀಯರ ಧಾಳಿಗೆ ತುತ್ತಾಗಿ ಹಲವು ಬಾರಿ ನಶಿಸಿದರೂ, ಮತ್ತೆ ಭವ್ಯವಾದ ದೇಗುಲವು ತಲೆ ಎತ್ತಿದ್ದು ಇಂದಿಗೂ ಚಿರಸ್ಥಾಯಿಯಾಗಿ ಉಳಿದು ಬಂದಿರುವುದು ಈ ದೇವಾಲಯದ ವಿಶೇಷವಾಗಿದೆ.

ಕ್ರಿ.ಶ. ೮–೯ನೇ ಶತಮಾನದಲ್ಲಿ ಕರ್ನಾಟಕದ ರಾಷ್ಟ್ರಕೂಟ ಅರಸರು, ಗೂರ್ಜರ ದೇಶವನ್ನು ಗೆದ್ದುದರ ಪರಿಣಾಮವಾಗಿ ಕರ್ನಾಟಕ ಗುಜರಾತಗಳ ಸಂಪರ್ಕವು ಹೆಚ್ಚಿತು. ಗುಜರಾತಿನಿಂದ ಲಾಕುಳ ಪಾಶುಪತ ಮತವು ಕರ್ನಾಟಕದೆಡೆಗೆ ಪಸರಿಸಿತು. ಅನೇಕ ಜನರು ಕರ್ನಾಟಕಕ್ಕೆ ವಲಸೆ ಬಂದರು. ಇದೆಲ್ಲದರ ಪರಿಣಾಮವಾಗಿ ಸು. ೯–೧೦ನೇ ಶತಮಾನದಿಂದ ಕರ್ನಾಟಕದಲ್ಲಿ ಸೋಮೇಶ್ವರ, ಸೋಮನಾಥ ದೇವಾಲಯಗಳು ರೂಪುಗೊಂಡವು. ಈ ಪ್ರಬಂಧದಲ್ಲಿ 'ಕರ್ನಾಟಕದಲ್ಲಿ ಸೋಮನಾಥನ ಆರಾಧನೆ' ವಿಕಾಸಗೊಂಡ ಬಗೆಯನ್ನು ಶಾಸನಗಳನ್ನು ಮತ್ತು ಸಾಹಿತ್ಯ ಕೃತಿಗಳ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಕರ್ನಾಟಕದಲ್ಲಿ ದೊರೆಯುವ ಪ್ರಾಚೀನವಾದ 'ಸೋಮನಾಥ'ನ ದೇವಾಲಯವೆಂದರೆ ಬೆಂಗಳೂರು ಜಿಲ್ಲೆಯ ಬೇಗೂರಿನಲ್ಲಿ ಕ್ರಿ.ಶ. ೮೯೦ರಲ್ಲಿ ನಿರ್ಮಿಸಿದ ಸೋಮನಾಥ ದೇವಾಲಯವಾಗಿದೆ. ಇದನ್ನು ಗಂಗರ ದೊರೆ ಎಜೆಯಪ್ಪರಸರ ಸಾಮಂತನಾಗಿದ್ದ ನಾಗತ್ತರನು ನಿರ್ಮಿಸಿ, ದಿವ್ಯಶಕ್ತಿ ಭಟಾರರಿಗೆ ದಾನಬಿಟ್ಟನೆಂದು ಶಾಸನವು ತಿಳಿಸಿದೆ.[೪] ಇದರಂತೆ ಧಾರವಾಡ ಜಿಲ್ಲೆಯ ಹರಳಹಳ್ಳಿಯ ಸ್ವಯಂಭೂ ಸೋಮನಾಥ ದೇವಾಲಯವು ಕ್ರಿ.ಶ. ೯೮೦ರ ಕಾಲದ ರಚನೆ ಎಂದು ತಿಳಿದುಬರುತ್ತದೆ.[೫] ನಂಜನಗೂಡು ತಾಲೂಕಿನ ಕಪ್ಪಸೋಗೆ, ದೇವನಹಳ್ಳಿ ತಾಲೂಕಿನ ಗಂಗಾವಾರ, ಬೆಂಗಳೂರು ಜಿಲ್ಲೆ ಆನೆಕಲ್ಲು ತಾಲೂಕಿನ ಮಡಿವಾಳ, ಬಂಗಾರುಪೇಟೆ ತಾಲುಕಿನ ಹುನ್ಕುಂದ, ಹೊಸಕೋಟೆ ತಾಲೂಕಿನ ಕಮ್ಮಸಂದ್ರ ಮುಂತಾದೆಡೆಗಳಲ್ಲೂ ೧೧ನೇ ಶ.ಕ್ಕೆ ಸೇರಿದ ಸೋಮೇಶ್ವರ ದೇವಾಲಯಗಳು ರಚನೆಯಾಗಿವೆ.

ಕರ್ನಾಟಕದಲ್ಲಿ ಸೌರಾಷ್ಟ್ರದ ಸೋಮನಾಥನ 'ಪ್ರತಿರೂಪ' ವೆಂಬಂತೆ ಪುಲಿಗೆರೆಯಲ್ಲಿ (ಲಕ್ಷ್ಮೇಶ್ವರದಲ್ಲಿ) ಸೋಮನಾಥನ ದೇವಾಲಯವು ಸು. ಕ್ರಿ.ಶ. ೧೦ನೇ ಶ.ದಲ್ಲಿ ನಿರ್ಮಿಸಿದ್ದಿರಬೇಕು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ (ಸು. ೧೨ನೇ ಶ.) ದೇವಾಲಯವು ವಿಸ್ತಾರಗೊಂಡಿದ್ದು, ಇದರ ಪ್ರಾಕಾರದಲ್ಲಿ ಅನೇಕ ಸಣ್ಣ ಗುಡಿಗಳು ರೂಪುಗೊಂಡಿವೆ. ಪುಲಿಗೆರೆಯ ಸೋಮನಾಥ ದೇವರ ಈ ದೇವಾಲಯದ ಶಾಸನಗಳಲ್ಲಿ 'ಶ್ರೀ ಸ್ವಯಂಭೂ ಸೋಮನಾಥ ದೇವರು, 'ಪುಲಿಗೆರೆಯ ದಕ್ಷಿಣ ಸೋಮನಾಥ' ಎಂದೂ ಪುಲಿಗೆರೆಯನ್ನು ಶಾಸನವೊಂದು 'ದಕ್ಷಿಣದ ವಾರಣಾಸಿ' ಎಂದೂ ಉಲ್ಲೇಖಿಸಿವೆ. ಸೌರಾಷ್ಟ್ರದ ಪದ್ಧತಿಯಂತೆ ಇಲ್ಲಿಯೂ ಲಾಕುಳಶೈವ ಯತಿಗಳು ನೆಲೆಸಿದ್ದು, ಹರಿಹರ ಕವಿಯ ಕಾಲಕ್ಕೆ ಈ ಕ್ಷೇತ್ರ ಬಹು ಪ್ರಖ್ಯಾತವಾಗಿದ್ದಿರಬೇಕು. ಅದರಂತೆ ಹರಿಹರನು ಆದಯ್ಯನ ರಗಳೆ ಮತ್ತು ಒಹಿಲಯ್ಯನ ರಗಳೆಗಳನ್ನು ರಚಿಸಿದ್ದು ಕರ್ನಾಟಕದಲ್ಲಿ ಸೋಮನಾಥ ದೇವರ ಪ್ರಭಾವ ಹೆಚ್ಚಾಯಿತೆನ್ನಬಹುದು. ಕರ್ನಾಟಕದ ಜನರು ಸೌರಾಷ್ಟ್ರದ ಸೋಮನಾಥನನ್ನು ಪೂಜಿಸುತ್ತಿದ್ದರು. ವೆಂಗಿ ಚಾಲುಕ್ಯರ ದೊರೆ ೬ನೇ ವಿಕ್ರಮಾದಿತ್ಯನ ಸಾಮಂತನಾಗಿದ್ದ ಕದಂಬದೊರೆ ಜಯಕೇಸಿ ದೇವನು ಕ್ರಿ.ಶ. ೧೧೦೪ ರಲ್ಲಿ ರಾಜನ ಅಪ್ಪಣೆ ಪಡೆದು ತನ್ನ ವಿವಾಹದ ಸಂದರ್ಭದಲ್ಲಿ ಸೌರಾಷ್ಟ್ರದ ಸೋಮನಾಥ ದೇವರಿಗೆ ಕನಕಪುರ ಗ್ರಾಮವನ್ನು ನೀಡಿದ್ದನ್ನು ಶಾಸನ ತಿಳಿಸಿದೆ.[೬]

ಪುಲಿಗೆರೆಯ ಸೋಮನಾಥ ದೇವಾಲಯದ ಶಾಸನಗಳನ್ನು ಗಮನಿಸಿದರೆ, ಕ್ರಿ.ಶ. ೧೧೦೨ರ ಶಾಸನವೊಂದು ವೆಂಗಿ ಚಾಲುಕ್ಯದೊರೆ ೬ನೇ ವಿಕ್ರಮಾದಿತ್ಯನ ಅಚ್ಚು ಪನ್ನಾಯದ ಅಧಿಷ್ಠಾಯಕನಾಗಿದ್ದ ಮಾಧವಭಟ್ಟರು ಪುಲಿಗೆರೆಯ ಸ್ವಯಂಭೂ ಸೋಮನಾಥ ದೇವಾಲಯದಲ್ಲಿನ ಮುದ್ದೇಶ್ವರ ದೇವರಿಗೆ ಬಿಟ್ಟ ದಾನವನ್ನು ಅಲ್ಲಿಯ ಸ್ಥಾನೀಕನಾಗಿದ್ದ ಮಹೇಂದ್ರ ಸೋಮಪಂಡಿತರಿಗೆ ನೀಡಲಾಗಿದೆ.[೭] ಇಲ್ಲಿಯ ಮತ್ತೊಂದು ಶಾಸನವು ಕ್ರಿ.ಶ. ೧೧೧೨ರಲ್ಲಿ ೬ನೇ ವಿಕ್ರಮಾದಿತ್ಯನದ ಅಧಿಕಾರಿ ಅನನ್ತ ದಂಡನಾಥನು ಸ್ವಯಂಭೂ ಸೋಮನಾಥ ದೇವಾಲಯದ ರಂಗಭೋಗಕ್ಕಾಗಿ ಸೂಳೆಗೇರಿಯನ್ನು ಮಾಡಿಸಿ ಅಲ್ಲಿಯ ಪಾತ್ರ ಪಾವುಳಕ್ಕೆ ಬಂದ ಸೂಳೆಯರಿಗೆ ಮತ್ತು ಫಳಿಗೆಯನ್ನು ನಡೆಸಲೆಂದು ಮಹಾಜನರ ಬಳಿಕೊಂಡು ೪೦ ಮತ್ತರು ಭೂಮಿಯನ್ನು ದಾನಬಿಟ್ಟಿದ್ದನ್ನು ತಿಳಿಸುತ್ತಿದೆ.[೮] ಕ್ರಿ.ಶ. ೧೧೨೮ರ ಶಾಸನವು, ಮಹಾಮಂಡಳೇಶ್ವರನಾಗಿದ್ದ ಸಗರ ಮಾರ್ತಾಂಡ ಶ್ರೀ ಜಯಕೇಸಿ ದೇವರು ಪುಲಿಗೆರೆಯ ಸ್ವಯಂಭೂ ದಕ್ಷಿಣ ಸೋಮನಾಥ ದೇವಾಲಯದಲ್ಲಿ ಫಳಿಗೆ ನಡೆಸಲೆಂದು ಆಶಿಸಿ, ಪೂಜಾರಿ ಪಾಪವಿನಾಶಿ ಮಾಹಣಂಗೆ ಗಳಿಗೆಗೆ ೧೦ ಮತ್ತರು, ಪಡಿಯಜಿಕೆಗೆ ೨ ಮತ್ತರು, ಮತ್ತು ಬಾಣಸಿಂಗೆ ೨ ಮತ್ತರು, ಒಟ್ಟು ೧೪ ಮತ್ತರು ಭೂಮಿಯನ್ನು ದಾನ ಬಿಡುತ್ತಾನೆ.[೯]

ಕ್ರಿ.ಶ. ೧೧೩೮ರಲ್ಲಿ ಜಯಕೇಸಿ ದೇವರು, ತಂತ್ರಪಾಳ ಚಟ್ಟಿಮಯ್ಯ ನಾಯಕ, ದಂಡನಾಯಕ ಚಿದ್ದರಸ ಮಹಾದೇವರಸರು, ನಗರದ ಮಹಾಜನರು, ಸೆಟ್ಟಿ ಪ್ರಮುಖರು ಸಮಸ್ತರು ಸೇರಿ ದೇವರಂಗಭೋಗಕ್ಕೆ ದೇವಭೋಗವಾಗಿ ನಿಟ್ಟೂರುವರೆಗಿನ ಮನ್ನೆಯ ಹೊನ್ನನ್ನು, ಕಿರುಕುಳ ಮುಂತಾದ ಎಲ್ಲ ಕರಗಳನ್ನು ಸ್ಥಾನಾಚಾರ್ಯರಾಗಿದ್ದ ಜ್ಞಾನ ಸೋಮ ಪಂಡಿದೇವರಿಗೆ ಬಿಟ್ಟರು. ಈ ಮುನಿಯ ಕಾಲದಲ್ಲಿ ಅನೇಕ ದಾನಗಳು ಸಂದಿದ್ದು ದೇವಾಲಯದಲ್ಲಿ ಸುವ್ಯವಸ್ಥೆ ಇತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೩ನೇ ಶ.ದ ಶಾಸನವೊಂದು ಸೌರಾಷ್ಟ್ರದಿಂದ ಬಂದ ನಾಗಪ್ಪಯ್ಯನೆಂಬ ಸಿದ್ಧನು ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ್ದನ್ನು ತಿಳಿಸುತ್ತಿದೆ.[೧೦]

ಕ್ರಿ.ಶ. ೧೪೩೨ ರ ಶಾಸನವೊಂದು ಕುಂತಳದ ಪುಲಿಕರ ನಗರವು 'ದಕ್ಷಿಣ ವಾರಣಾಸಿಯಂತಿತ್ತು, ಎಂದಿದೆ. ಹೀಗೆ ಪ್ರಸಿದ್ಧವಾದ ಸೋಮನಾಥನ ಪ್ರಭಾವದಿಂದ ಕರ್ನಾಟಕದ ಹಲವೆಡೆಗಳಲ್ಲಿ ಸೋಮನಾಥ ದೇವಾಲಯಗಳು ನಿರ್ಮಾಣವಾಗುತ್ತವೆ. ವಿಶೇಷವಾಗಿ ಕ್ರಿ.ಶ. ೧೨-೧೩ನೇ ಶ.ದಲ್ಲಿ ಸೋಮನಾಥನ ಆರಾಧನೆ ಪ್ರಭಾವಪೂರ್ಣವಾಗಿ ಬೆಳೆದಿದೆ.

ಕ್ರಿ.ಶ. ೧೨೦೦ರ ಅಬ್ಬಲೂರಿನ ಶಾಸನವು 'ಶಿವನ ಆದೇಶದಂತೆ, ಪರಸಮಯಿಗಳನ್ನು ದಂಡಿಸಲೆಂದೇ ಜನಿಸಿದ ಏಕಾಂತದ ರಾಮಯ್ಯನು ಪುಲಿಗೆರೆಯ ಸೋಮನಾಥನ ಆದೇಶದಂತೆ ಅಬ್ಬಲೂರಿಗೆ ಬರುವನು. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ಶಿವಧ್ಯಾನ ನಿರತನಾಗಿದ್ದ ರಾಮಯ್ಯನ ಮುಂದೆ ಅಲ್ಲಿಯ ಜೈನರು ಜಿನನೇ ಪರಮಶ್ರೇಷ್ಠನೆಂದು ವಾದಿಸಲು ವಿವಾದದಲ್ಲಿ ತೊಡಗಿದ ರಾಮಯ್ಯನಿಗೆ ಅವರು 'ನಿನ್ನ ತಲೆಯನ್ನು ಶಿವನಿಗೆ ತರಿದುಕೊಟ್ಟು ಆತನಿಂದ ಮರಳಿ ಪಡೆದರೆ ನೀನೇ ಭಕ್ತ ಆತನೇ ದೈವ' ಎಂದಾಗ ಅದರಂತೆ ಮಾಡಿದರೆ ನಮ್ಮ ಜಿನನನ್ನು ಕಿತ್ತು ಶಿವನನ್ನು ನಿಲ್ಲಿಸುವೆವು ಎಂದರು. ಅದರಂತೆ ರಾಮಯ್ಯನು ಅವರಿಂದ ಪತ್ರವನ್ನು ಬರೆಸಿಕೊಂಡು, ಅದರಂತೆ ತನ್ನ ತಲೆಯನ್ನು ತಂದಿಟ್ಟು ಏಳುದಿನಗಳ ಬಳಿಕ ಮರಳಿ ಪಡೆದು ಪವಾಡಮಾಡಿದನು. ನಂತರ ಆ ಪತ್ರದಂತೆ ಜಿನನನ್ನು ಕಿತ್ತೆಸೆದು ಅಲ್ಲಿ ವೀರಸೋಮೇಶ್ವರನನ್ನು ಪ್ರತಿಷ್ಠೆ ಮಾಡಿದನೆಂದು ಶಾಸನ ತಿಳಿಸುತ್ತಿದೆ.[೧೧] ಈ ಘಟನೆಯನ್ನು ಆ ದೇವಾಲಯದ ಭಿತ್ತಿಶಿಲ್ಪಗಳು ಸಾರುತ್ತಾ ಸ್ಪಷ್ಟಪಡಿಸಿವೆ. ಅಬ್ಬಲೂರಿನ ಸೋಮೇಶ್ವರ ದೇವಾಲಯವು ಪುಲಿಗೆರೆಯ ಸೋಮನಾಥನ ಪ್ರಭಾವದಿಂದ ಆದುದೆಂದು ಸ್ಪಷ್ಟವಿದೆ.

ಕ್ರಿ.ಶ. ೧೨೧೪ರ ಶಾಸನವೊಂದು ಬೇಲೂರು ತಾಲೂಕಿನ ಕಟ್ಟಿ ಸೋಮನ ಹಳ್ಳಿಯಲ್ಲಿದ್ದು ಹೊಯ್ಸಳ ದೊರೆ ೨ನೇ ನರಸಿಂಹದೇವನ ಅಧಿಕಾರಿಗಳಾದ ಕಸ್ತೂರಿಯ ವಾಕರಸ, ಪಾವಂತ ಮಹಾದೇವ, ಹಬ್ಬೆಯ ಸಾಹಣಿ ಮುಂತಾದವರು ಅಲ್ಲಿಯ ಚೆಂನ ಸೋಮನಾಥ ದೇವರಿಗೆ, ದಾನ ಬಿಟ್ಟಿದ್ದನ್ನು ತಿಳಿಸಿದೆ. ಈ ದಾನವನ್ನು ಕೇದಾರಗುರುಗಳನ್ನು ಕರೆಸಿ ದಾನ ಕೊಡಲಾಗಿದೆ.[೧೨]

ಅರಸಿಕೆರೆ ತಾಲೂಕಿನ ಬಾಗೇವಾಳು ಗ್ರಾಮದ ಶಾಸನವೊಂದು ಕ್ರಿ.ಶ. ೧೨೧೮ರಲ್ಲಿ ಬಾಗೇವಾಳಿನ ಚಿಕ್ಕೇಯ ನಾಯಕ, ತಂಬೆಯ ನಾಯಕ, ಮಲ್ಲೆನಾಯಕ, ಮತ್ತು ಸಮಸ್ತ ಪ್ರಜೆಗಾವುಂಡಗಳು ಸೇರಿ ಹಿರಿಯ ಬಾಗೇವಾಳದ ಸೋಮನಾಥ ದೇವರಿಗೆ ದಾನಬಿಟ್ಟಿದ್ದನ್ನು ತಿಳಿಸಿದೆ.[೧೩] ಕ್ರಿ.ಶ. ೧೨೩೩ರ ಗೋಣಿ ಸೋಮನಹಳ್ಳಿ ಶಾಸನವು ವೀರ ನರಸಿಂಹ ದೇವನ ಮಹಾಪಸಾಯಿತ ಕರಿತುರಕ ಪಟ್ಟ ಸಾಹಣಿಯಾಗಿದ್ದ ಕೋಮಾರ ಗೋವಿಯಣ್ಣನು, ಸೋಮಯ್ಯ, ನಾಗಯ್ಯಗಳು ಶ್ರೀ ಸೋಮನಾಥ ದೇವರನ್ನು ಪ್ರತಿಷ್ಠೆ ಮಾಡಿ, ದೇವರ ಶ್ರೀಕಾರ್ಯಕ್ಕೆಂದು ರುದ್ರಜೀಯನ ಕಾಲ್ತೊಳೆದು ದಾನ ನೀಡಿದ್ದನ್ನು ದಾಖಲಿಸಿದೆ.[೧೪] ಸೋಮಯ್ಯನ ಅಕ್ಕ ಮಹಾದೇವಿಯು ಕೆರೆಯೊಂದನ್ನು ಕಟ್ಟಿಸುತ್ತಾಳೆ.

ಕ್ರಿ.ಶ. ೧೨೯೯ರಲ್ಲಿ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕಿನ ತದಲಬಾಗೆಯಲ್ಲಿ ಸ್ವಯಂಭೂ ಸೋಮನಾಥ ದೇವರನ್ನು ಸ್ಥಾಪಿಸಿ, ಆಚಾರ್ಯ ಬೊಮ್ಮರಾಸಿ ದೇವರಿಗೆ ದಾನ ನೀಡಿದ್ದನ್ನು ಶಾಸನವೊಂದು ತಿಳಿಸಿದೆ.[೧೫] ಕ್ರಿ.ಶ. ೧೨೦೩ರಲ್ಲಿ ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೂಕಿನ ಕಲಕೇರಿಯಲ್ಲಿನ ಸ್ವಯಂಭೂ ಸೋಮನಾಥ ದೇವರಿಗೆ ಹರಿಯಮಸೆಟ್ಟಿ, ಕಾಚೆಯ ಸಾಹಣಿ ಅಮಿತೇಯ ಸಾಹಣಿ ಮುಂತಾದವರು ದೇವರಿಗೆ ಪುಷ್ಪ, ಧೂಪ, ದೀಪ, ನೈವೇದ್ಯ, ತಪೋಧನರ ಬ್ರಾಹ್ಮಣರ ಅನ್ನದಾನ ಮತ್ತು ಜೀರ್ಣೋದ್ಧಾರಕ್ಕೆಂದು ಬಿಟ್ಟಿ ದಾನವನ್ನು ಶ್ರೀಮದು ಬಿಕ್ಷೆಯ ಮೂರು ಜಾವಿದೇವರಿಗೆ ಬಿಡುತ್ತಾರೆ.[೧೬] ಕ್ರಿ.ಶ. ೧೨೩೦ರಲ್ಲಿ ಇದೇ ದೇವಾಲಯಕ್ಕೆ ಸವ್ವಾಧಿಕಾರಿ ವಿಟ್ಟರಸರ ನಿರೂಪದಂತೆ ಸುಂಕಾಧಿಕಾರಿ ಸೀತಾಲುಮಾಯಿದೇವನು ದಾನ ಬಿಟ್ಟಿದ್ದನ್ನು ಶಾಸನ ತಿಳಿಸಿದೆ.[೧೭] ಮೂರು ಜಾವೀದೇವರು ಪುಲಿಗೆರೆಯ ದೇವಾಲಯದ ಸ್ಥಾನೀಕರಾಗಿದ್ದು ಅಲ್ಲಿದ್ದ ತಮ್ಮ ಗುರುಗಳಾದ ಕೇದಾರ ದೇವರಶ್ರೀ ಕಾರ್ಯಕ್ಕೆಂದು ಐದು ಮತ್ತರು ಭೂಮಿಯನ್ನು ಕೊಂಡು ಜ್ಞಾನಸೋಮ ಪಂಡಿತರಿಗೆ ಬಿಟ್ಟಿದ್ದನ್ನು ಶಾಸನವೊಂದು ದಾಖಲಿಸಿದೆ.[೧೮] ಇದನ್ನು ಗಮನಿಸಿದರೆ ಕಲಕೆರೆಯ ಸೋಮನಾಥ ದೇವಾಲಯವು ಪುಲಿಗೆರೆ ದೇವಾಲಯದ ಶಾಖೆಯೆಂದು ತಿಳಿಯುತ್ತದೆ.

ಕಡೂರು ತಲೂಕಿನ ಕುಪ್ಪೇಹಾಳಿನ ಶಾನಸವು (ಕ್ರಿ.ಶ. ೧೧೭೩) ಪ್ರಭಾಸದ ಸೋಮನಾಥನ ಪ್ರಾರ್ಥನೆಯಿಂದ ಕೂಡಿದೆ. ೨ನೇ ವೀರಬಲ್ಲಾಳ ದೇವನು ಕುಪ್ಪೇಹಾಳ ಗ್ರಾಮವನ್ನು ಸೌರಾಷ್ಟ್ರದ ಸೋಮನಾಥ ದೇವರ ಪೂಜೆಗೆ ಬಿಟ್ಟಿದ್ದನ್ನು ತಿಳಿಸುವಲ್ಲಿ ಸೌರಾಷ್ಟ್ರದ ಸೋಮನಾಥನ ಪಾದಾರಾಧಕನಾಗಿದ್ದ ಮಾಳಜೀಯನನ್ನು ಉಲ್ಲೇಖಿಸಿದೆ.[೧೯]

### ಸೋಮನಾಥ ಪುರದ ನಿರ್ಮಾಣ

ಸೋಮನಾಥ ದೇವಾಲಯಗಳಿಗೆ ಬಿಟ್ಟ ದಾನವನ್ನು ಸ್ವೀಕರಿಸಿದ್ದ ಕಾಳಾಮುಖಯತಿಗಳು ಆ ದಾನಗಳಿಂದ ದೇವಾಲಯದ ಶ್ರೀಕಾರ್ಯಗಳಲ್ಲದೇ, ಮಠಗಳನ್ನು, ವಿದ್ಯಾಕೇಂದ್ರಗಳನ್ನು ನಡೆಸುತ್ತಿದ್ದರು. ಸೋಮನಾಥ ದೇವರಿಗೆ ಸೇರಿದ ಗ್ರಾಮದಾನಗಳನ್ನು 'ಸೋಮನಾಥಪುರ'ವೆಂದು ಶಾಸನಗಳಲ್ಲಿ ಕರೆಯಲಾಗಿದೆ. ಹಾಸನ ತಾಲೂಕಿನ ನಿಟ್ಟೂರು ಗ್ರಾಮದ ಶಾಸನವು ನಿಟ್ಟೂರನ್ನು ಸೌರಟ್ಟ ಸೋಮನಾಥಪುರವಾದ ನಿಟ್ಟೂರು' ಎಂದೇ ಉಲ್ಲೇಖಿಸಿದೆ.[೨೦] ಕ್ರಿ.ಶ. ೧೨೩೪ರ ಅರಸಿಕೆರೆ ತಾಲೂಕಿನ

ಹಾರನಹಳ್ಳಿಯ ಶಾಸನವು ಹೊಯ್ಸಳ ದೊರೆ ನಾರಸಿಂಹನ ಸೋದರಿಯಾದ ದೊರೆ ವೀರ ಸೋಮೇಶ್ವರನ ತಾಯಿಯಾದ ಸೋವಲಾದೇವಿಯ ಹಾರನಹಳ್ಳಿಯನ್ನು 'ಮಹಾ ಅಗ್ರಹಾರ ಸೋಮನಾಥಪುರ'ವನ್ನಾಗಿ ಮಾಡುತ್ತಾಳೆ. ಇಲ್ಲಿ ಶ್ರೇಷ್ಠ ವಿದ್ವಜ್ಜನರು, ನಾನಾ ಗೋತ್ರದ ಬ್ರಾಹ್ಮಣರು, ಕವೀಶ್ವರರು ನೆಲೆಸುವಂತೆ ಮಾಡಿದ್ದು ಹಾರನಹಳ್ಳಿಯು ವಲ್ಲಭಿ ಸೌರಾಷ್ಟ್ರಕ್ಕೆ ಸಮನಾದುದು ಎಂದು ಹೊಗಳಿದೆ.[೨೧]

ಮಂಡ್ಯ ತಾಲೂಕಿನ ರಾಯಸೆಟ್ಟಿಪುರದ ಶಾಸನವು ಕ್ರಿ.ಶ. ೧೨೫೧ರಲ್ಲಿ ವೀರಬಲ್ಲಾಳದೇವನ ಕಾಲದಲ್ಲಿ ಬಿದಿರುಕೋಟೆಯ ಮಲ್ಲೇಯ ನಾಯಕ ಮತ್ತು ಸೋಮೆಯನಾಯಕರು ಮಾದೇಯ ನಾಯಕನಿಗೆ ಬಲು ಹಿಂದೆ ಕೊಟ್ಟಿದ್ದ ಶಿವಪುರವನ್ನು ಕೊಂಡುಕೊಂಡು 'ಸೋಮನಾಥಪುರ'ವಾಗಿಸಿದ್ದನ್ನು ಶಾಸನ ತಿಳಿಸುತ್ತಿದೆ. ಈ ಅಗ್ರಹಾರದ ೩೪ ವೃತ್ತಿಗಳನ್ನು ನಾನಾಶಿವಭಕ್ತರಿಗೆ ಹಂಚಲಾಗಿದ್ದು, ಸ್ಥಾನಪತಿಗಳಾಗಿ ಮಾದಿರಾಜ ಗುರುಗಳಿದ್ದರು.[೨೨]

ಕ್ರಿ.ಶ. ೧೨೫೩ರಲ್ಲಿ ಚೆನ್ನಾರಾಯಪಟ್ಟಣ ತಾಲೂಕಿನ ನುಗ್ಗೆಹಳ್ಳಿಯನ್ನು ಬೊಮ್ಮನಾ ದಂಡನಾಯಕನು 'ವಿಜಯ ಸೋಮನಾಥಪುರ'ವನ್ನಾಗಿ ಮಾಡಿ ನಾನಾಗೋತ್ರದ ಬ್ರಾಹ್ಮಣರಿಗೆ ದಾನ ನೀಡಿದ್ದಾನೆ.[೨೩] ಕ್ರಿ.ಶ. ೧೨೬೩ರಲ್ಲಿ ವೀರಸೋಮೇಶ್ವರನ ಅಧಿಕಾರಿ ಸೋಮೇಯ ದಂಡ ನಾಯಕನು ತಿ. ನರಸಿಪುರದ ತಾಲೂಕಿನಲ್ಲಿ ಕಾವೇರಿ ನದಿ ತೀರದಲ್ಲಿ ತಮ್ಮ ಹೆಸರಿನಲ್ಲಿ ಮಹಾಅಗ್ರಹಾರವನ್ನು ಪ್ರತಿಷ್ಠೆ ಮಾಡಿಸಿ ಅಲ್ಲಿ ಪ್ರಸನ್ನ ಕೇಶವ ದೇವಾಲಯವನ್ನು, ಪಂಚಲಿಂಗೇಶ್ವರ ದೇವಾಲಯಯವನ್ನು ಎತ್ತಿಸುತ್ತಾರೆ. ಪಂಚಲಿಂಗೇಶ್ವರಗಳಲ್ಲಿ 'ಸೋಮನಾಥ ಲಿಂಗ'ವೂ ಇದ್ದು ಇದು ಸೋಮನಾಥಪುರವೆಂದು ಪ್ರಸಿದ್ಧವಾಗಿದೆ. ಮುಂದೆ ಇದು ವೈಷ್ಣವ ಸ್ಥಳವಾಗಿ ಪರಿಣಮಿಸಿದೆ.[೨೪]

ಹಲವು ಶಾಸನಗಳಲ್ಲಿ ಸೋಮನಾಥನ ಪಾದಾರಾಧಕರೆಂದು ಭಕ್ತರ ಉಲ್ಲೇಖಗಳಿವೆ. ಅವರೆಂದರೆ ಚಳುಕೆಯ ನಾಯಕ, ಕೂಸಘಂಟೆಯ ಸಿಂಗೆಯ ನಾಯಕ, ನಾಗಯ್ಯ, ಮಸಣೋಜ, ಕಂಡನಂಬಿ ಸೆಟ್ಟಿ ಮೊದಲಾದವರು. ಘಟ್ಟದಹಳ್ಳಿ ಶಾಸನವು (ಕ್ರಿ.ಶ. ೧೧೨೦) ಕೇಸರಿಸೆಟ್ಟಿಯ ಮಗ ಕೇತಮಲ್ಲ ನಾಯಕನನ್ನು 'ಸೋಮೇಶ್ವರ ದರ್ಶನದಿಂ, ರಾಮೇಶ್ವರ ಪಾದ ಪಂಕಜ ಸ್ಪರ್ಶದಿಂತಾನೆ ಪುಣ್ಯ' ಎಂದಿದೆ.[೨೫]

ಹಾಸನ ಜಿಲ್ಲೆಯಲ್ಲಿ ಗೀಜಿಹಳ್ಳಿ, ಆನೆಕೆರೆ, ಅಗ್ರಹಾರ, ಬೆಳಗುಲಿ, ಹೆರಗು, ಕುದುರೆಗುಂಡಿ ಗ್ರಾಮಗಳಲ್ಲಿ ಸೋಮನಾಥ ದೇವಲಾಯಗಳಿದ್ದವು. ಲಕ್ಕುಂಡಿ, ಗದಗ, ರೋಣ, ಕಡಲೆವಾಡ, ಕೋಟವುಮಚಗಿ, ಬಂದಳಿಕೆ, ಪುರ, ರೋಣ ಮುಂತಾದೆಡೆಗಳಲ್ಲೂ ೧೩-೧೨ನೇ ಶ.ದಲ್ಲಿ ಸೋಮನಾಥ ದೇವಾಲಯಗಳಿದ್ದವು. ಹೀಗೆ ಕರ್ನಾಟಕದಲ್ಲಿ ಹಲವೆಡೆ ಸೌರಾಷ್ಟ್ರದ ಸೋಮನಾಥ ದೇವಾಲಯಗಳು ನಿರ್ಮಾಣಗೊಂಡು, 'ಸೋಮನಾಥ ಆರಾಧನೆ ಬೆಳೆದು ಬಂದಿದ್ದನ್ನು ಕಾಣುತ್ತೇವೆ. ಕ್ರಿ.ಶ. ೧೪೨೮ರಲ್ಲಿ ಹಿರಿಯೂರಿನ ಬಳಿಯ ಸೋಮೇರಹಳ್ಳಿಯಲ್ಲಿ ಜಕ್ಕದೇವನು ಸೋಮೇಶ್ವರ ದೇವಾಲಯವನ್ನು ನಿರ್ಮಿಸಿದ್ದಾನೆ.[೨೬] ಕ್ರಿ.ಶ. ೧೪೯೦ರಲ್ಲಿದ್ದ ಉಮ್ಮತ್ತೂರಿನ ನಾಯಕರ ಕುಲದೈವವು ಸೌರಾಷ್ಟ್ರದ ಸೋಮನಾಥನಾಗಿದ್ದು ಶಿವನ ಸಮುದ್ರದ ಬಳಿ 'ಸೋಮನಾಥ ದೇವಾಲಯ'ವನ್ನು ನಿರ್ಮಿಸುತ್ತಾನೆ.[೨೭] ಪುಲಿಗೆರೆಯಲ್ಲಿ ಕ್ರಿ.ಶ. ೧೬ನೇ. ಶ. ದಲ್ಲಿ ದಾನಬಿಟ್ಟ ಶಾಸನವು ಲಭ್ಯವಿದೆ. ಹೀಗೆ ಸೋಮನಾಥನ ಆರಾಧನೆ ನಿರಂತರವಾಗಿ ಬೆಳೆದು ಬಂದಿದ್ದನ್ನು ಕಾಣುತ್ತೇವೆ. "ಸಾಹಿತ್ಯವು ಸಮಾಜದ ಪ್ರತಿಬಿಂಬ" ಶಾಸನಗಳು ಆಯಾಕಾಲದ ಸತ್ಯನಿಷ್ಠ ದಾಖಲೆಗಳಾದರೆ, ಸಾಹಿತ್ಯವು ಜನರ ಮನೋಭಾವವನ್ನು ಸಮಾಜದ ಸ್ಥಿತಿಗತಿಗಳನ್ನು ಸೆರೆ ಹಿಡಿದಿಟ್ಟಿರುವ ಕೈಗನ್ನಡಿ. ಕರ್ನಾಟಕದಲ್ಲಿ ಕ್ರಿ.ಶ. ೧೨-೧೩ನೇ ಶತಮಾನವು ಕ್ರಾಂತಿಕಾರಿಯುಗವೆಂದೇ ಪ್ರಸಿದ್ಧವಾಗಿದೆ. ಸಾಹಿತ್ಯದಲ್ಲೂ ದೇಸಿ ಛಂದಸ್ಸಿನ ರಗಳೆ, ಷಟ್ಪದಿ ಕಾವ್ಯಗಳು ರಚನೆಗೊಂಡು ಜನಸಾಮಾನ್ಯರಿಗೆ ಸಾಹಿತ್ಯದ ಸವಿಯನ್ನು ಉಣ್ಣಿಸಿದ ಕಾಲವದು. ಆ ಕಾಲದ ಭಕ್ತಿ ಗೌರವವನ್ನು ಕಾವ್ಯದ ಮೂಲಕ ಹರಿಸಿದ ಜನಸಾಮಾನ್ಯರನ್ನು ಧರ್ಮಮಾರ್ಗಕ್ಕೆ ಸೆಳೆದ ಪ್ರಮುಖ ಸಾಧನವಾಗಿ ಸಾಹಿತ್ಯವು ರೂಪುಗೊಂಡಿತ್ತು. ಈ ದಿಸೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ಸೌರಾಷ್ಟ್ರದ ಸೋಮನಾಥನ ಆರಾಧನೆ, ಸೋಮನಾಥನ ಮಹತ್ವದ ಬಗೆಗೆ ಇಲ್ಲಿ ಗಮನಿಸಲಾಗಿದೆ. ಸೋಮನಾಥನ ಆರಾಧನೆಯ ಬಗೆಗೆ, ಕನ್ನಡ ಸಾಹಿತ್ಯದಲ್ಲಿ ಮೊದಲು ಗಮನ ಸೆಳೆದ ಕಾವ್ಯವೆಂದರೆ ಹರಿಹರ ಕವಿಯ ಆದಯ್ಯನ ರಗಳೆ ಮತ್ತು ರಾಘವಾಂಕನ 'ಸೋಮನಾಥ ಚಾರಿತ್ರ" ಕೃತಿಗಳಾಗಿವೆ. ಹರಿಹರ ಕವಿಯು ಶರಣನಾಗಿದ್ದ ಆದಯ್ಯನ ಬಗ್ಗೆ ತಿಳಿಸುವಲ್ಲಿ ಶಿವನ ಆಜ್ಞೆಯಂತೆ, ಆದಯ್ಯನು ಸೌರಾಷ್ಟ್ರದಿಂದ ಪುಲಿಗೆರೆಗೆ ಬಂದು ನೆಲೆಸುತ್ತಾನೆ. ಜೈನರ ಬೀಡಾಗಿದ್ದ ಪುಲಿಗೆರೆಯಲ್ಲಿ ಆದಯ್ಯನು ಜೈನರ ಮನೆಯ ತರುಣಿ ಪದ್ಮಾವತಿಯನ್ನು ವಿವಾಹವಾಗುತ್ತಾನೆ. ಪದ್ಮಾವತಿಯು ಒಮ್ಮೆ ಶರಣರಿಗಾಗಿ ಮಾಡಿದ್ದ ಅಡಿಗೆಯನ್ನು ಅವಳ ತಂದೆ ಸವಣನಿಗೆ ಉಣಬಡಿಸುತ್ತಾಳೆ. ಇದನ್ನು ಕಂಡು ಆದಯ್ಯನು ಸಿಟ್ಟಿನಿಂದ ಆರ್ಭಟಿಸಿದಾಗ, ಪದ್ಮಾವತಿಯ ತಂದೆಯು – "ನಿನ್ನ ಶಿವನ ಮಹಿಮೆ ಅಷ್ಟು ಘನವಾಗಿದ್ದರೆ ಸೌರಾಷ್ಟ್ರದ ಶಿವನನ್ನು ಇಲ್ಲೇ ಕರೆಸು" ಎಂದು ಜರೆಯುತ್ತಾನೆ. ಆದಯ್ಯನು ಅದನ್ನು ಒಂದು ತಿಂಗಳ ಅವಧಿಯಲ್ಲಿ ಸಾಧಿಸಿ ಪುಲಿಗೆರೆಯ ಸುಹೊನ್ನೆ ಬಸದಿಯಲ್ಲಿ ಸೌರಾಷ್ಟ್ರದ ಸೋಮನಾಥನನ್ನು ಪ್ರತಿಷ್ಠೆ ಮಾಡಿ ಅಲ್ಲಿದ್ದ ಜೈನರನ್ನೆಲ್ಲ ಶಿವಭಕ್ತರನ್ನಾಗಿಸಿದ್ದನ್ನು ಕಾವ್ಯ ತಿಳಿಸುತ್ತದೆ. ಇದೇ ವಸ್ತುವನ್ನು ರಾಘವಾಂಕನು ಸೋಮನಾಥ ಚಾರಿತ್ರದಲ್ಲಿ ಬಣ್ಣಿಸಿದ್ದಾನೆ. ಆದಯ್ಯನು

೧೨ನೇ ಶತಮಾನದಲ್ಲಿದ್ದ ಐತಿಹಾಸಿಕ ವ್ಯಕ್ತಿ, ಈ ಕಥೆ ಉತ್ತರ ಕರ್ನಾಟಕದಲ್ಲಿ ಸೋಮನಾಥ ದೇವರ ಮಹತ್ವವು ಪಸರಿಸಲು ಕಾರಣವಾಗಿದೆ. ಈ ಕಥೆಗನುಗುಣವಾಗಿ ಸಭರಾಷ್ಟ್ರದ ನಿವಾಸಿ ಆಸಯ್ಯ ಮತ್ತು ಸೌರಾಷ್ಟ್ರದ ಸೋಮನಾಥನ ಆರಾಧನೆಯು ಹೆಚ್ಚು ಪ್ರಚಲಿತಗೊಂಡಿತು.

ಹರಿಹರ ಕವಿಯ ಮತ್ತೊಂದು ರಗಳೆ ಓಹಿಲಯ್ಯನ ರಗಳೆ'ಯ ನಾಯಕ, ಶಿವಶರಣ, ಓಹಿಲಿಯ್ಯನು 'ಸೌರಾಷ್ಟ್ರದ ಸೋಮನಾಥನಪರಮ ಭಕ್ತನಾಗಿದ್ದನು. ಹರಿಹರನ ರಚಿಸಿದ ಕಥೆಯಲ್ಲಿ 'ರಾಜಕುಮಾರನಾದ ಓಹಿಲನು ತಂದೆಯ ಸಾವಿನಿಂದ ತತ್ತರಿಸಿ ಅತಿನೊಂದು 'ಸಾವನ್ನು ಗೆಲ್ಲುವ ಬಗೆ'ಯನ್ನು ತಿಳಿಯಲು ಯತ್ನಿಸುತ್ತಾನೆ. ಆಗ ಗುರುಗಳು ಅದು ಸೋಮನಾಥನ ಕಾರುಣ್ಯದಿಂದ ಮಾತ್ರ ಸಾಧ್ಯ' ಎನಲು, ಮುಗ್ಧ ಓಹಿಲನು ಸರ್ವ ಸಂಪತ್ತನ್ನೂ, ರಾಜ್ಯವನ್ನು ತ್ಯಜಿಸಿ, ಸೋಮನಾಥನನ್ನು ಅರಸುತ್ತಾ ಸೌರಾಷ್ಟ್ರಕ್ಕೆ ಬರುತ್ತಾನೆ. ಸೋಮನಾಥನ ಭವ್ಯ ಆಲಿಯದ ಕಳಶವನ್ನು ಕಂಡು, ಪುಳಕಗೊಂಡು ಒಳಜೊಕ್ಕು ನಾನಾ ರೀತಿಯಿಂದ ಶಿವನನ್ನು ಮನಮುಟ್ಟಿ ಭಜಿಸುತ್ತಾ ಭಕ್ತಿರಸದಲ್ಲಿ ಮೈಮರೆಯುತ್ತಾನೆ. ರಾತ್ರಿಯಾಗಿ ದೇವಾಲಯದ ಕೈಂಕರ್ಯಗಳು ಮುಗಿದರೂ, ರಂಗಮಂಟಪದಲ್ಲಿ ಕುಳಿತು ಭಜಿಸುತ್ತಿದ್ದ ಓಹಿಲನನ್ನು ಬಲತ್ಕಾರದಿಂದ ಹೊರಬ್ಬಿ ಅಧಿಕರಿಗಳು ದೇವಾಲಯಕ್ಕೆ ಬೀಗ ಮುದ್ರೆ ಮಾಡಿ ಮನೆಗೆ ಹೋಗುತ್ತಾರೆ. ದ್ವಾರವಂದದ ಹೊರಗೆ ಕುಳಿತು ಓಹಿಲನು ಶಿವನಿಂದ ದೂರವಾದುದಕ್ಕೆ ದುಃಖಿಸುತ್ತಿರಲು, ಶಿವನು ಕನಸಿನಲ್ಲಿ ಹೋಗಿ ಅದಿಕಾರಿಗಳಿಗೆ ಬಾಗಿಲನ್ನು ತೆರೆದು ಒಳಗೆ ಬಿಡುವಂತೆ' ತ್ರೀಶೂಲದಿಂದ ಚುಚ್ಚಿ ಆದೇಶಿಸುತ್ತಾನೆ. ಇದರಂತೆ ಒಳಗೆ ಬಂದ ಓಹಿಲನು ಸೋಮನಾಥ ಲಿಂಗವನ್ನು ತಬ್ಬಿ ಭಿಸುತ್ತಾನೆ. ಮರುದಿನ ಸುಪ್ರಭಾತದ ಸೇವೆಯಾದ ಸಮಯದಲ್ಲಿ ಭಕ್ತಿಯಲ್ಲಿ ತಲ್ಲೀನನಾಗಿದ್ದ ಓಹಿಲನಿಗೆ ಶಿವನು ತನಗೆ ೧೨ ವರ್ಷಗಳ ಕಾಲ ಗುಗ್ಗಳ ಸೇವೆಯನ್ನು ಮಾಡಬೇಕೆಂದು ತಿಳಿಸುತ್ತಾನೆ. ಇದರಂತೆ ನಿತ್ಯವೂ ಸೇವೆ ಸಲ್ಲಿಸುತ್ತಿದ್ದಾಗ, ಅರ್ಚಕರು ನಾನಾರೀತಿಯಲ್ಲಿ ಅಡ್ಡಿಮಾಡಿ ಓಹಿಲನ ನಿಷ್ಠೆಯನ್ನು ಬರೆ ಹಚ್ಚುತ್ತಾರೆ. ಶಿವನೇ ನಿತ್ಯವೂ ತನಗೆ ಪೊಚ್ಚ ಪೊಸ ಶ್ರೀಗಂಧವನ್ನು ತಂದು ಗುಗ್ಗಳ ಸೇವೆಯನ್ನು ಮಾಡಬೇಕೆಂದು ತಿಳಿಸಲು, ಬಹುಶ್ರಮ ಪಟ್ಟು ಓಹಿಲನು ಸೇವೆಯನ್ನು ನಡೆಸುತ್ತಾನೆ. ಹೀಗಿರಲು ಒಮ್ಮೆ ಹೊತ್ತು ತಂದಿದ್ದ ಗಂಧದ ಕಟ್ಟಿಗೆಗಳು ಕಾಣೆಯಾಗಲು, ತನ್ನ ದೇಹವನ್ನೇ ಕಟ್ಟಿಗೆಯಾಗಿಸಿ 'ಗುಗ್ಗಳ ಸೇವೆ' ನಡೆಸಿದ ಓಹಿಲನ ಭಕ್ತಿಗೆ ಮೆಚ್ಚಿ ಶಿವನು 'ಕೈಲಾಸಕ್ಕೆ ಕೊಂಡೊಯ್ಯುತ್ತಾನೆ." ಈ ಓಹಿಲಯ್ಯನ ಜೀವನದ ಘಟನೆಗಳು ಸೌರಾಷ್ಟ್ರದ ಸೋಮನಾಥ ದೇವಾಲಯದಲ್ಲೇ ನಡೆದಿದ್ದು ಈ ಕಥೆಯು ರಗಳೆಯು ಕನ್ನಡದಲ್ಲಿ ರೂಪಿತಗೊಂಡು ಕನ್ನಡ ಸಾಹಿತ್ಯದ ಮೂಲಕ ಸೌರಾಷ್ಟ್ರದ ಸೋಮನಾಥನ ಮಹಿಮೆಯನ್ನು ಪಸರಿಸಿದೆ.

ಹರಿಹರ ಕವಿಯ 'ಓಹಿಲಯ್ಯನ ರಗಳೆ ಮತ್ತು ಉದ್ಭಟದೇವನರಗಳೆ' ಯನ್ನು ಆಧರಿಸಿ ಸೋಮರಾಜ ಕವಿಯು ಉದ್ಭಟ ಕಾವ್ಯವೆಂಬ ಕೃತಿಯನ್ನು ರಚಿಸಿದ್ದಾನೆ. ಇದಕ್ಕೆ ಶೃಂಗಾರಸಾರ ಎಂಬ ಹೆಸರಿದೆ. ಈ ಕಾವ್ಯದ ನಾಯಕನಾದ ಉದ್ಭಟದೇವನು 'ಸೌರಾಷ್ಟ್ರ ದೇಶದ ಶಿವಶರಣನಾಗಿದ್ದು ಸೋಮನಾಥನ ಭಕ್ತನಾಗಿದ್ದನು. ಕವಿಯು ನಾಯಕನಾದ ಉದ್ಭಟ ದೇವನನ್ನು ಹಲವೆಡೆ 'ಕುಮಾರಪಾಲ ಘೂರ್ಜರ'ನೆಂದು ಉಲ್ಲೇಖಿಸಿದ್ದು ಇದು 'ಸೌರಾಷ್ಟ್ರದ ರಾಜಕುಮಾರ ಪಾಲನ ಜೀವನಗಾಥೆಯಾಗಿದೆ. ಉದ್ಭಟಕಾವ್ಯದಲ್ಲಿ ಉದ್ಭಟದೇವನು ತನ್ನ ರಾಣಿಯೊಂದಿಗೆ ಆನಂದದಿಂದ ಪಗಡೆಯಾಡುತ್ತಿದ್ದಾಗ ಗಹಗಹಿಸಿ ನಗುತ್ತಾನೆ. ರಾಣಿಯು ನಗುವಿಗೆ ಕಾರಣ ಕೇಳಲು ಶಿವಶರಣ ಓಹಿಲನು ತಾನೊಬ್ಬನೇ ತಾರಾದ್ರಿಗೆ ಹೋಗುತ್ತಿರುವುದನ್ನು ಕಂಡು ನಗು ಬಂದಿತೆಂದು ಹೇಳುವನು ಮತ್ತು ರಾಣಿಗೆ ಸಜೀವವಾಗಿ ಕೈಲಾಸಕ್ಕೆ ಹೋದ ಓಹಿಲಯ್ಯನ ಸಾಧನೆಯನ್ನು ತಿಳಿಸಿದನು. ರಾಣಿಯು ಓಹಿಲಯ್ಯನ ಭಕ್ತಿಯನ್ನು ಪ್ರಶಂಸಿದಾಗ, ಅವಳು ಒಪ್ಪಿದರೆ ತಾನು ಪುರಸಹಿತ ಕೈಲಾಸಕ್ಕೆ ಒಯ್ಯುವೆನೆಂದು ಶಪಥ ಮಾಡುವನು. ಅತಿಭಕ್ತಿಯಿಂದ ಶಿವನನ್ನು ಆರಾಧಿಸುತ್ತ, ಶಿವಸ್ತುತಿ ಮಾಡಲು ಒಂದೊಂದು ಸ್ತುತಿ ಪದ್ಯಕ್ಕೆ ಒಂದು ಸಹಸ್ರಯೋಜನೆ ಭಲ್ಲೂಕಿ ನಗರವು ಮೇಲೇರುತ್ತಿತ್ತು. ಪುರಸಹಿತ ಕೈಲಾಸಕ್ಕೆ ಬಂದ ಉದ್ಭಟ ದೇವನಿಗೆ ಪ್ರಮಥಗಣಗಳು ಹೂಮಳೆ ಕರೆಯುತ್ತಾರೆ. ನಮಸ್ಕರಿಸಿದ ಉದ್ಭಟನನ್ನು ಶಿವನು ಆಶೀರ್ವದಿಸಿ ಗಣಪದವಿಯನ್ನು ನೀಡುತ್ತಾನೆ. ಹೀಗೆ ಉದ್ಭಟ ಕಾವ್ಯವು ಸೌರಾಷ್ಟ್ರದ ಇಬ್ಬರು ಶಿವಶರಣರ ಮಹತ್ವವನ್ನು ತಿಳಿಸುತ್ತ ಸೋಮನಾಥನ ಮಹಿಮೆಯನ್ನು ಬಿತ್ತರಿಸುವ ಕೃತಿಯಾಗಿದೆ. ಹೀಗೆ ಕನ್ನಡದ ಶಾಸನಗಳನ್ನು, ಸಾಹಿತ್ಯ ಕೃತಿಗಳನ್ನು ಅವಲೋಕಿಸಿದಾಗ, ಕರ್ನಾಟಕದಲ್ಲಿ ಬೆಳೆದು ಬಂದ ಸೌರಾಷ್ಟ್ರದ ಸೋಮನಾಥನ ಆರಾಧನೆಯ ಬಗೆಗೆ ತಿಳಿಯುತ್ತದೆ. ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಅಧ್ಯಯನವಾಗಬೇಕಾಗಿದೆ.

**ಅಡಿಟಿಪ್ಪಣಿಗಳು**

೧. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಪುಟ ೧೩೦; ಮೈಸೂರು ೧೯೭೯

೨. **History of Somanathapura Temple Complex** – ಪುಟ ೬

**3. The History of Gujrara Prathiharasa - By Byjanath Puri** ಪುಟ ೧೪೩

೪. ಇತಿಹಾಸ ದರ್ಶನ ಸಂ.೪ – ದೊಡ್ಡ ಬೇಗೂರಿನ ನಾಗತ್ತರದ ಶಾಸನ ಪುಟ. ೧೫೮–೫೯

೫. **ಹೊಯ್ಸಳ ಶಿಲ್ಪದಲ್ಲಿ ಶಿವ** –ಮೈಸೂರು ನಾಗರಾಜ ಶರ್ಮ

ಪುಟ– ೧೪೦ ಮೈ.ವಿ.ವಿ. ಪ್ರಸಾರಾಂಗ ೨೦೧೦

೬. **ಧಾರವಾಡ ತಾಲೂಕಿನ ಶಾಸನಗಳು** (ಎಂ.ಎಂ. ಕಲ್ಬುರ್ಗಿ) ಶಾ.ಸಂ. ೧೫ ಪುಟ ೨೬

೭. S.I.I.XX.No 66 ಲಕ್ಷ್ಮೇಶ್ವರದ ಶಾಸನ – ೧೧೦೨

೮. ಅದೇ – ನಂ ೭೪ ಅದೇ–೧೧೧೨

೯. ಅದೇ – ನಂ ೯೯– ಲಕ್ಷ್ಮೇಶ್ವರ ೧೧೨೮

೧೦. ಅದೇ – ನಂ ೩೩೧ ಲಕ್ಷ್ಮೇಶ್ವರ ೧೩ನೇಶ

೧೧. **ಎಪಿಗ್ರಾಫಿಯಾ ಇಂಡಿಕಾ** – V. ಪುಟ ೨೫೨

೧೨. ಎಪಿ–ಕರ್ನಾಟಕ ಸಂ. ೯ ಬೇಲೂರು ೪೨೫ ಕಟ್ಟೆಸೋಮನಹಳ್ಳಿ ಶಾಸನ

೧೩. ಎಪಿ–ಕರ್ನಾಟಕ ಸಂ. ೧೦ ಅ.ಕೆರೆ ೧೯೧–ಬಾಗೇವಾಳಿನ ಶಾಸನ

೧೪. **ಎಪಿ ಕರ್ನಾಟಕ ಸಂ.** ೯ ಬೇಲೂರು ೪೨೦ ಗೋಣಿ ಸೋಮನಹಳ್ಳಿ ಶಾಸನ

೧೫. S.I.I. XX. ನಂ ೨೧೯ ತದಲಬಾಗೆ ಶಾಸನ – ಕ್ರಿ.ಶ. ೧೨೬೯

೧೬. ಅದೇ ನಂ ೨೨೦ ೨೨೮ ಕಲಕೇರಿ ಶಾಸನ ಕ್ರಿ.ಶ ೧೨೦೭

೧೭. ಎಸ್.ಪಿ.ಪಿ. XX ನಂ ೨೨೦ ಕಲಕೇರಿ ಶಾಸನ ೧೨೭೦

೧೮. ಅದೇ ನಂ ೧೯೮ ಲಕ್ಷ್ಮೇಶ್ವರ ೧೨೨೭

೧೯. ಎಪಿ. ಕನಾಟಕ ಸಂ. ೧೨ ಕಡೂರು ೪೮ ಕುಪ್ಪೇಹಾಳಿನ ಶಾಸನ ೧೧೭೩

೨೦. ಎಪಿ ಕರ್ನಾಟಕ ಸಂ. ೮ ಹಾಸನ ೭೪ ನಿಟ್ಟೂರು ೧೨ನೇ ಶ

೨೧. ಅದೇ ಸಂ ೧೦(ಪ) ಅರಸಿಕೆರೆ ೨೩೨ ಹಾರನಹಳ್ಳಿ ೧೨೩೪

೨೨. ಅದೇ ಸಂ ೭(ಪ) ಮಂಡ್ಯ ೩೪ ರಾಯಸೆಟ್ಟಿಪುರ ೧೨೫೧

೨೩. ಅದೇ ಸಂ೧೦ (ಪ) ಚ.ರಾ. ಪುಟ್ಟಣ ೧೧೧–ನುಗ್ಗೇಹಳ್ಳಿ ೧೨೫೩

೨೪. ಅದೇ ಸಂ ೫(ಪ) ತಿ.ನ. ಪುರ ೮೮ ಸೋಮನಾಥಪುರ ೧೨೭೬

೨೫. ಅದೇ ಸಂ ೯ (ಪ) ಬೇಲೂರು ೨೬೧ ಘಟ್ಟದ ಹಳ್ಳಿ ೧೧೨೦

೨೬. ಅದೇ ಸಂ ೧೧ (ರೈಸ್) ಹಿರಿಯೂರು ೫೨ ಸೋಮೇರಹಳ್ಳಿ ೧೪೨೮

೨೭. ಅದೇ ಎಕ ಸಂ (ಪ) ಕರಕಲಮಾದಹಳ್ಳಿ ಶಾಸನ ಗುಂಡ್ಲುಪೇಟೆ ೧೬೮ – ಕಾಲ ೧೪೯೭

❑❑

# ಖಡ್ಗಶಾಸ್ತ್ರ ಮತ್ತು ಬಾಣಗಾರಿಕೆ ಹಸ್ತಪ್ರತಿಗಳು

– ವೈ.ಸಿ. ಭಾನುಮತಿ

ಲೌಕಿಕ ಶಾಸ್ತ್ರಗಳಲ್ಲಿ ಖಡ್ಗಶಾಸ್ತ್ರವೂ ಒಂದು. ಸಂಸ್ಕೃತದಲ್ಲಿ ಖಡ್ಗಶಾಸ್ತ್ರ ಕುರಿತು ಪ್ರಾಸಾಂಗಿಕವಾದ ಹಾಗೂ ಪ್ರತ್ಯೇಕವಾದಂಥ ಗ್ರಂಥಗಳಿವೆ. ಕೌಟಿಲ್ಯನ ಅರ್ಥಶಾಸ್ತ್ರ, ಮಾನಸೋಲ್ಲಾಸ, ಶಿವತತ್ತ್ವ ರತ್ನಾಕರ, ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾ ಇವೇ ಮುಂತಾದ ಗ್ರಂಥಗಳಲ್ಲಿ ಗಜಶಾಸ್ತ್ರ, ಅಶ್ವಶಾಸ್ತ್ರ ಮತ್ತು ಖಡ್ಗಶಾಸ್ತ್ರಗಳು ಪ್ರಾಸಂಗಿಕವಾಗಿ ಕಂಡುಬರುತ್ತವೆ. ಕನ್ನಡದಲ್ಲಿ ಸೌಗಂಧಿಕ ಪರಿಣಯದಲ್ಲಿ ಖಡ್ಗಶಾಸ್ತ್ರಕ್ಕೆ ಸಂಬಂಧಿಸಿದ ಕೆಲವು ವಿಚಾರಗಳಿವೆ. ಇದರ ಏಳನೇ ಅಧ್ಯಾಯದಲ್ಲಿ ಸುಗಂಧರಾಜನಿಗೆ ಅಸ್ತ್ರೋಪದೇಶ ಮತ್ತು ಖಡ್ಗ ಪ್ರಧಾನ ಮಾಡುವಾಗ ಪಾಶುಪತಾಸ್ತ್ರ, ನಾರಾಯಣಾಸ್ತ್ರ, ಬ್ರಹ್ಮಾಸ್ತ್ರ, ಐಂದ್ರಾಸ್ತ್ರ, ಅಗ್ನೇಯಾಸ್ತ್ರ, ವಾರುಣಾಸ್ತ್ರ, ಯಾಮ್ಯಾಸ್ತ್ರ, ವಾಯವ್ಯಾಸ್ತ್ರ, ಕೌಬೇರಾಸ್ತ್ರ, ರೌದ್ರಾಸ್ತ್ರ, ಗಂಧರ್ವಾಸ್ತ್ರ, ಮೋಹನಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರ, ಗಾರುಡಾಸ್ತ್ರ, ಸರ್ಪಾಸ್ತ್ರ, ತಿಮಿರಾಸ್ತ್ರ, ಸೌರಾಸ್ತ್ರ, ಮೇಘಾಸ್ತ್ರ, ಐಷಿಕಾಸ್ತ್ರ, ಅಂಜನಾಸ್ತ್ರ, ರಾಕ್ಷಶಾಸ್ತ್ರ, ಜೃಂಭಕಾಸ್ತ್ರ, ದಂಡಚಕ್ರ, ಕಾಲಚಕ್ರ, ವಿಷ್ಣುಚಕ್ರಗಳನ್ನು ಹೆಸರಿಸಲಾಗಿದೆ. ಈ ಅಸ್ತ್ರಗಳನ್ನು ಪ್ರಯೋಗಿಸುವಾಗ ಮತ್ತು ಹಿಂಪಡೆಯುವಾಗ ಮಂತ್ರಗಳನ್ನು ಹೇಳಲಾಗುತ್ತಿತ್ತು. ಹೀಗೆ ಖಡ್ಗಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳು ಸಾಂದರ್ಭಿಕವಾಗಿ ಅಲ್ಲಲ್ಲಿ ಕಂಡುಬಂದಿವೆ.

ಖಡ್ಗಶಾಸ್ತ್ರವನ್ನು ಕೇಂದ್ರವಾಗಿಟ್ಟುಕೊಂಡು ಕನ್ನಡದಲ್ಲಿ ಇದೇ ಶೀರ್ಷಿಕೆಯ ಏಕೈಕ ಕೃತಿ ರಚಿತವಾಗಿದೆ. ಇದು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕೆ. ೫೭೧ ಸಂಖ್ಯೆಯ ಹಸ್ತಪ್ರತಿಯಲ್ಲಿದೆ. ಕರ್ತೃ ಕಾಲ ಅವಿದಿತವಾಗಿರುವ ಈ ಕೃತಿಯ ಕಾಲವನ್ನು ಖಚಿತವಾಗಿ ಹೇಳಲಾಗದಿದ್ದರೂ ಹಸ್ತಪ್ರತಿಯ ಸ್ವರೂಪವನ್ನು ಆಧರಿಸಿ ಕ್ರಿ.ಶ. ಸು. ೧೭೦೦ರಲ್ಲಿ ಕೃತಿ ಮೂಡಿ ಬಂದಿರಬಹುದು. ಇದರಲ್ಲಿ ೧–೫೫ ಪತ್ರಗಳಿವೆ. ಇದರಿಂದ ಗ್ರಂಥಪ್ರಮಾಣವನ್ನು ಕಲ್ಪಿಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಇದು ಸಂಸ್ಕೃತ ಶ್ಲೋಕಕ್ಕೆ ಕನ್ನಡ ಟೀಕಿರುವ ಗ್ರಂಥವಾಗಿದೆ. ಕೃತಿಗೆ ಆಕರ ಗ್ರಂಥವೆಂದರೆ ಕರ್ತೃವೇ ಸೂಚಿಸಿರುವಂತೆ ಸಂಸ್ಕೃತ ಮಹಾಭಾರತದ ಆದಿಪರ್ವ. ಕನ್ನಡ ಖಡ್ಗಶಾಸ್ತ್ರದಲ್ಲಿ ಐದು ಅಧ್ಯಾಯಗಳಿವೆ. ಹಸ್ತಪ್ರತಿಯ ಅಕ್ಷರ ಸ್ಫುಟವಾಗಿದ್ದು ವಿಷಯ ಸೂಚಿಯನ್ನು ಕೊಡಲಾಗಿದೆ. ಇಲ್ಲಿ ಪತ್ರದ ಹಿಂಬದಿಯ ಭಾಗಕ್ಕೆ 'ಮರಿಪುಟ' ಎಂದು ಲಿಪಿಕಾರ ಬರೆದಿರುವುದನ್ನು ಗಮನಿಸಿದರೆ ಈ ಶಬ್ದದ ಬಳಕೆ ಹಿಂದೆ ಇದ್ದಿತೆಂದು ತಿಳಿಯಬಹುದು.

ಪ್ರಾಚೀನ ಸಾಹಿತ್ಯದಲ್ಲಿ ಕೃತಿಯ ವಸ್ತುವನ್ನಾಧರಿಸಿ ಅದಕ್ಕೊಂದು ಪೌರಾಣಿಕ ಪರಂಪರೆಯನ್ನು ಕಲ್ಪಿಸಿಕೊಡುವ ಸಂಪ್ರದಾಯವಿದೆ. ಹಾಗೆ ಇಲ್ಲಿಯೂ ದ್ರೋಣಾಚಾರ್ಯರು ಶ್ರೀಕೃಷ್ಣನಿಗೆ ಹೇಳಿದ ಖಡ್ಗಶಾಸ್ತ್ರವನ್ನು ವೈಶಂಪಾಯನ ಮುನಿ ಜನಮೇಜಯರಾಯನಿಗೆ ಹೇಳಿದನೆಂದು ಇದರ ಪ್ರಸರಣವನ್ನು ಸೂಚಿಸಲಾಗಿದೆ. ಗ್ರಂಥದ ಆರಂಭದಲ್ಲಿ ವೈಶಾಂಪಾಯನ ಮತ್ತು ಜನಮೇಜಯರ ಸಂಭಾಷಣೆ ತಂತ್ರದ ಮೂಲಕ ಖಡ್ಗಶಾಸ್ತ್ರಕ್ಕೊಂದು ಪೂರ್ವ ಪೀಠಿಕೆಯನ್ನು ಕೊಡಲಾಗಿದೆ. ಜನಮೇಜಯ ಮತ್ತು ಆತನ ಗೆಳೆಯರು ಇತಿಹಾಸ, ಪುರಾಣ, ಭಾಗವತ, ರಾಮಾಯಣಗಳನ್ನು ಕೇಳಿದ ಬಳಿಕ ರಾಜಯೋಗ್ಯವಾಗಿದ್ದಂತಹ ಶಸ್ತ್ರಾಸ್ತ್ರವನ್ನು ನಿರೂಪಿಸುವಂತೆ ಕೋರುತ್ತಾರೆ. ಇಲ್ಲಿ ಈ ಶಾಸ್ತ್ರಕ್ಕೆ 'ಶಸ್ತ್ರಶಾಸ್ತ್ರ' 'ಆಯುಧಶಾಸ್ತ್ರ' ಎಂಬ ಪರ್ಯಾಯ ಪದಗಳು ಗೋಚರಿಸುತ್ತವೆ. 'ಖಡ್ಗ' ಶಬ್ದಕ್ಕೆ ಕತ್ತಿ ಎಂಬ ಅರ್ಥ ಸಾಮಾನ್ಯ. ಆದರೆ ಇಲ್ಲಿ ಖಡ್ಗ ಎಂಬುದು ಎಲ್ಲ ಬಗೆಯ ಆಯುಧಗಳನ್ನು ಪ್ರತಿನಿಧಿಸುತ್ತ ವಿಶಾಲವಾದ ಅರ್ಥದಲ್ಲಿ ಬಳಕೆಯಾಗಿದೆ. 'ಕೇಳು ಜನಮೇಜಯ ರಾಯ' ಎಂಬುದು ಮಹಾಭಾರತಾದಿಗಳಲ್ಲಿ ಆಗಾಗ ಕಂಡುಬರುತ್ತದೆ. ಅದೇ ರೀತಿ ಇಲ್ಲೂ ವಕ್ತೃವಾಗಿ ವೈಶಂಪಾಯನ, ಕೇಳುಗನಾಗಿ ಜನಮೇಜಯರಾಯ ಅಲ್ಲಲ್ಲಿ ಕಾಣಿಸುತ್ತಾರೆ. ಕವಿ ಇಲ್ಲಿ ಓದುಗರನ್ನು ಆಕರ್ಷಿಸುವ ಸಲುವಾಗಿ ಕಾವ್ಯಗ್ರಂಥಗಳ ತಂತ್ರಗಾರಿಕೆಯನ್ನು ಬಳಸಿದ್ದಾನೆ. ಮಹಾಭಾರತ, ಭಾಗವತದ ಕೆಲವು ಪ್ರಸಂಗಗಳನ್ನು ನಿರೂಪಿಸುವ ಮೂಲಕ ಕೃತಿಗೆ ಶುಷ್ಕವಾದ ಆರಂಭವನ್ನು ನಿಯಂತ್ರಿಸಿದ್ದಾನೆ.

ಶ್ರೀಕೃಷ್ಣನಿಗೆ ದ್ರೋಣಾಚಾರ್ಯನು ಗರುಡಿಯ ಮಧ್ಯದಲ್ಲಿ ಶಸ್ತ್ರಾಶಾಸ್ತ್ರ ನಿರೂಪಿಸಿದನೆಂದು ಹೇಳುವಾಗ ಕೃಷ್ಣನ ಕಥೆ ಸಂಕ್ಷಿಪ್ತವಾಗಿ ಬಂದಿದೆ. ನಾರಾಯಣನು ಕೃಷ್ಣಾವತಾರದಿಂದ ಜನಿಸಿದ್ದು, ವಸುದೇವ ದೇವಕಿಗೆ ಬಾಲಲೀಲೆಗಳನ್ನು ತೋರಿಸಿ ನಂದಗೋಕುಲದಲ್ಲಿ ಬೆಳೆದು ಗೋಪಾಲಕರೊಂದಿಗೆ

# ೧೧೨೩. 'ಕೇಶವದೀಪ', ಲಲಿತಾದ್ರಿ ೧ ಕ್ರಾಸ್, ಕುವೆಂಪು ನಗರ, ಮೈಸೂರು – ೫೭೦೦೨೩

ಗೋರಕ್ಷಣೆ ಮಾಡಿದ್ದು, ಕಂಸವಧೆ, ಅಷ್ಟಮಹಿಷಿಯರೊಂದಿಗೆ ಕೃಷ್ಣನ ವಿವಾಹ, ಗೋಪಿಯರೊಂದಿಗೆ ಆಮೋದ, ದ್ವಾರಕೆಯ ರಕ್ಷಣೆ ಮುಂತಾದ ಸಂಗತಿಗಳು ಇಲ್ಲಿ ಎಡೆ ಪಡೆದಿದ್ದು ಕವಿ ವೈಷ್ಣವ ಸಂಪ್ರದಾಯಕ್ಕೆ ಸೇರಿದವನಾಗಿರಬೇಕೆಂಬುದನ್ನು ಸೂಚಿಸುತ್ತದೆ.

ಕುಂತಿಗೆ ಸಾಂತ್ವನ ಹೇಳುವ ಭಾಗವಂತೂ ತುಂಬ ಸಹಜವಾಗಿ ಬಂದಿದ್ದು ಜನಪದ ಶೈಲಿಗೆ ಹತ್ತಿರವಾಗಿದೆ. ನಿದರ್ಶನಕ್ಕೆ 'ಮಹಾದೊಡ್ಡವನಾಗಿ ಇದ್ದಂಥಾ ಪುತ್ರರನ್ನು ನೋಡಿ ಆ ದುಃಖವನ್ನು ಈಗ ಮರೆಯಲಿಕ್ಕು ತಾತನಾಗಿಯಿದ್ದಂತಾ ಸಮಸ್ತ ಧರ್ಮಆರ್ಥವನು ಬಲ್ಲಂಥಾ ಭೀಷ್ಮಾಚಾರ್ಯರಿದ್ದಾರು' ಎಂಬ ಭಾಗದಲ್ಲಿನ ಸಂತೈಸುವ ರೀತಿ, ಶ್ರೀ ಕೃಷ್ಣನ್ನು 'ನಿನಗೆ ಕ್ಷೇಮವೇ ಬಲರಾಮ ವಸುದೇವ ಮೊದಲಾದ ಹಿರಿಯರೂ ದೇವಕಿ ಕ್ಷೇಮವೆ" ಎಂದು ಕ್ಷೇಮ ಸಮಾಚಾರ ಕೇಳುವಲ್ಲಿ ಕಂಡುಬರುವ ನೈಜತೆ ನಮ್ಮ ಸಂಸ್ಕೃತಿಯಲ್ಲಿ ಸಂಬಂಧಗಳಿಗಿದ್ದ ಮಹತ್ವವನ್ನು ಅರುಹುತ್ತದೆ.

ದ್ರೋಣಾಚಾರ್ಯನು ಶ್ರೀಕೃಷ್ಣನನ್ನು ತನ್ನ ಮನೆಗೆ ಕರೆದೊಯ್ದು, ಪೂಜೆ ಸತ್ಕಾರಗಳನ್ನು ಮಾಡಿದ ಬಳಿಕ ಕೌರವರು ಪಾಂಡವರು ನನ್ನಿಂದ ಧನುರ್ವಿದ್ಯೆಯನ್ನು ಕಲಿತಿದ್ದಾರೆ ನೀನು ಅದನ್ನು ನೋಡಬೇಕು ಎಂದು ಗರುಡಿಗೆ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾನೆ. ಈ ಮೂಲಕ ಕೃತಿಯು ವಸ್ತು ವಿಷಯದ ಕಡೆಗೆ ಸಾಗುತ್ತದೆ. ಸಮಕಾಲೀನ ಸಂದರ್ಭದಲ್ಲಿ ಗರುಡಿ ಎಂದರೆ ಕುಸ್ತಿ ಕಲಿಸುವ ಶಾಲೆ ಎನ್ನಿಸಿಕೊಂಡಿದ್ದರೂ ಇಲ್ಲಿ ಗರುಡಿ ವ್ಯಾಪಕ ಚಟುವಟಿಕೆಯ ಕೇಂದ್ರವಾಗಿದೆ. ಸಮರತಂತ್ರಗಳನ್ನು ಕಲಿಸುವ ಕೇಂದ್ರವಾಗಿದೆ. ರಾಜಕುಮಾರರು ಕೃಷ್ಣ ಮುಂದೆ ತಾವು ಕಲಿತ ವಿದ್ಯೆಯನ್ನು ಪ್ರದರ್ಶಿಸಿದರೆಂದು ಕವಿ ವರ್ಣಿಸುತ್ತ ವಿವಿಧ ಅಸ್ತ್ರಗಳ ಕೌಶಲವನ್ನು ಪರಿಚಯಿಸುತ್ತಾನೆ. ದ್ರೋಣಾಚಾರ್ಯನು ತನ್ನ ಶಿಷ್ಯರನ್ನು ಒಬ್ಬೊಬ್ಬರನ್ನೇ ವೇದಿಕೆಗೆ ಆಹ್ವಾನಿಸಿದಾಗ ಧರ್ಮರಾಯ ಕೈಯಲ್ಲಿ ಮುಂಚಿ ಹಿಡಿದು ಬಂದು ಧನುಸ್ಸು ಠೇಂಕಾರ ಮಾಡಿ ಸಮರ್ಥವಾಗಿ ನೈಪುಣ್ಯತೆ ಮೆರೆದನು. ದುರ್ಯೋಧನ ಗದೆ ಹಿಡಿದು ಗದಾಯುದ್ಧದಲ್ಲಿ ಹೇಳಿರುವ ಕೌಶಲ್ಯಗಳೇನೆಂಬುದನ್ನು ತೋರಿಸಿದ. ಆನಂತರ ಭೀಮಸೇನನು ಗದಾಯುದ್ಧದ ಭೇದಗಳನ್ನು ಪ್ರದರ್ಶಿಸಿದ. ದುಶ್ಯಾಸನ ಮತ್ತಿತರರು ಧನುರ್ವಿದ್ಯಾ ಕೌಶಲವನ್ನು ತೋರಿದನು. ಆನಂತರ ಅರ್ಜುನನು ಧನುರ್ವಿದ್ಯೆಯನ್ನು ತೋರಿಸಿದನು. ಆತ ಆಗ್ನೇಯ ಬಾಣತೊಟ್ಟು ಭೂಮಿ ಆಕಾಶದ ನಡುವೆ ಅಗ್ನಿವ್ಯಾಪಿಸುವಂತೆ ಮಾಡಿದ. ಆನಂತರ ವಾರುಣಾಸ್ತ್ರದಿಂದ ಇದನ್ನು ಶಮನಗೊಳಿಸಿದ. ಅಂಧಕಾರ ಬಾಣದಿಂದ ಭೂಮಿಯಲ್ಲಿ ಕತ್ತಲೆ ಆವರಿಸುವಂತೆ ಮಾಡಿ ಸೂರ್ಯಬಾಣದಿಂದ ಪ್ರಜ್ವಲಿಸುವಂತೆ ಮಾಡಿದ. ಪರ್ವತ ಬಾಣಗಳಿಂದ ಬೆಟ್ಟಗಳನ್ನು, ಮೇಘಬಾಣದಿಂದ ಮೇಘಗಳನ್ನು, ಸರ್ಪಬಾಣಗಳಿಂದ ಸರ್ಪಗಳನ್ನು, ವಾಯುವ್ಯಾಸ್ತ್ರದಿಂದ ವಾಯುವನ್ನು ಕಲ್ಪಿಸಿದನು. ಹೀಗೆ ಕವಿ ಸನ್ನಿವೇಶವನ್ನು ನಿರ್ಮಿಸಿ ವಿವಿಧ ಆಯುಧಗಳ ವೈಶಿಷ್ಟ್ಯಗಳನ್ನು ನಿರೂಪಿಸಿದ್ದಾನೆ.

ಕೃತಿಯ ಎರಡನೇ ಅಧ್ಯಾಯದಲ್ಲಿ ಖಡ್ಗಶಾಸ್ತ್ರದ ವಿಧಾನವನ್ನು ಹೇಳಲಾಗಿದೆ. ಗರುಡಿ ಶಕ್ತಿಕೇಂದ್ರ, ಹಾಗಾಗಿ ಮೊದಲು ಗರುಡಿಯಲಕ್ಷಣ ಮತ್ತು ಶಾಸ್ತ್ರಪ್ರಕಾರ ಅದನ್ನು ನಿರ್ಮಿಸುವ ಬಗೆಯನ್ನು ಹೇಳಲಾಗಿದೆ. ಗರುಡಿ ಕಟ್ಟುವ ಭೂಮಿ ರಕ್ತವರ್ಣದ್ದಾಗಿರಬೇಕೆಂದು ಕೃತಿಯಲ್ಲಿ ತಿಳಿಸಲಾಗಿದೆ. ಇದರಲ್ಲಿ ವೈಜ್ಞಾನಿಕ ಸತ್ಯವಿದೆ. ಶಸ್ತ್ರವಿದ್ಯೆಯನ್ನು ಕಲಿಯುವಾಗ ಸಾಧಕ ಬಿದ್ದು ಗಾಯಗೊಂಡರೂ ಕೆಂಪು ಮಣ್ಣಿನಲ್ಲಿ ವೈದ್ಯಕೀಯ ಅಂಶವಿರುವುದರಿಂದ ಈ ಮಣ್ಣಿನಿಂದ ದುಷ್ಪರಿಣಾಮ ಉಂಟಾಗುವುದಿಲ್ಲ. ಐದು ಹಸ್ತ ಪ್ರಮಾಣ ಪಾಯ ತೆಗೆದು ಕಲ್ಲುಗಳಿಂದ ಕಟ್ಟಬೇಕು. ಇಲ್ಲಿ ಎಂಟು ಬಗೆಯ 'ಆಯ'ಗಳನ್ನು ಹೆಸರಿಸಿದೆ. –ಧ್ವಜಾಯ, ಧೂಮಾಯ, ಸಿಂಹಾಯ, ಶ್ವಾನಾಯ, ವೃಷಭಾಯ, ಖರಾಯ, ಗಜಾಯ, ವಾಯಸಾಯ. ಧ್ವಜಾಯದಿಂದ ಧನ್ಯತ್ವ ಉಂಟಾಗುವುದರಿಂದ ರಾಜಕುಮಾರರು ಧ್ವಜಾಯದಲ್ಲಿ ಗರುಡಿ ಕಟ್ಟಬೇಕು. ಆಚಾರ್ಯರಿಗೆ ಸಿಂಹಾಯದಿಂದ ಶುಭ, ಜಟ್ಟಿಗಳಿಗೆ ಗಜಾಯದಿಂದ ಸುಖಪ್ರದ. ರಾಜರು ಧೂಮಾಯ, ಶುನಕಾಯ, ಗರ್ದಭಾಯ, ವಾಯಸಾಯದಲ್ಲಿ ಗರುಡಿ ಕಟ್ಟಬಾರದು ಎಂದು ಇದರ ಫಲಾಫಲಗಳನ್ನು ವಿವರಿಸಿದ ಬಳಿಕ ಗರುಡಿ ಕಟ್ಟುವ ದಿಕ್ಕುಗಳನ್ನು ಪೂರ್ವದಲ್ಲಿ ಕಟ್ಟಿದರೆ ಉದಯಸ್ಥಾನ, ದಕ್ಷಿಣ ದಿಕ್ಕಿನಲ್ಲಿ ಮರಣಸ್ಥಳ, ಪಶ್ಚಿಮದಿಕ್ಕಿನಲ್ಲಿ ಗತಸ್ಥಾನ, ಉತ್ತರ ದಿಕ್ಕಿನಲ್ಲಿ ಉತ್ತರೋತ್ತರ ಎಂದು ಆಯಫಲ ಹೇಳಿ ಅರಮನೆಗೆ ನಾಲ್ಕು ದಿಕ್ಕುಗಳೂ ಫಲಪ್ರದ ಶಿಲ್ಪಶಾಸ್ತ್ರಬಲ್ಲಂಥ ವ್ಯಕ್ತಿ ಗರುಡಿಯನ್ನು ಕಟ್ಟಬೇಕೆಂದು ಶಾಸ್ತ್ರ ಹೇಳುತ್ತದೆ. ಇದರ ಪ್ರಕಾರ ಹುಲ್ಲಿನ ಹೊದಿಕೆ, ಸುಣ್ಣಗಾರೆ ಮತ್ತು ಮರದ ಗರುಡಿಗಳನ್ನು ನಿರ್ಮಿಸುತ್ತಿದ್ದರು. ಪೂರ್ವದಿಕ್ಕಿನಲ್ಲಿ ಬಾಗಿಲಿರುವ, ದಕ್ಷಿಣಕ್ಕೆ ಬಾಗಿಲಿಲ್ಲದಿರುವ, ಉತ್ತರದ ಮಧ್ಯದಲ್ಲಿ ಬಾಗಿಲಿಟ್ಟು ಹುಲ್ಲಿನ ಹೊದಿಕೆ ಇರುವ ಗರುಡಿಯನ್ನು ಕಟ್ಟಿದರೆ ಸರ್ವಕಾರ್ಯಫಲಪ್ರದ ಎಂದು ತಿಳಿಯುತ್ತಿದ್ದರು.

ಯಾವುದೇ ಕಾರ್ಯ ಆರಂಭಿಸುವ ಮುನ್ನ ದೇವರ ಆಶೀರ್ವಾದ ಪಡೆಯುವುದು ಸಂಪ್ರದಾಯ. ಭಗವಂತ ಸರ್ವಾಂತರ್ಯಾಮಿ ಎನ್ನುವ ನಮ್ಮ ಸಂಸ್ಕೃತಿಯಲ್ಲಿ, ಗರುಡಿಯ ಬಾಗಿಲಲ್ಲಿ ಭೈರವ, ಮೃತ್ತಿಕೆ (ಮಣ್ಣು) ಯಲ್ಲಿ ಬ್ರಹ್ಮ, ಪೂಜೆಯಲ್ಲಿ ವಿಷ್ಣು, ಮುಂದೆ ದುರ್ಗೆ ಇರುತ್ತಾರೆಂದೂ ಇವರು ಅಧಿದೇವತೆಗಳೆಂದೂ ಇಲ್ಲಿ ಪರಿಗಣಿಸಲಾಗಿದೆ. ಗರುಡಿಮನೆಯಲ್ಲಿ ಏನೇನು ಸಂಪ್ರದಾಯ ಇಂದಿಗೂ ಉಳಿದಿದೆಯೋ ಅವೆಲ್ಲವೂ ಈ ಗ್ರಂಥದಲ್ಲಿದ್ದು ಕೃತಿಯನ್ನು ಸಾಂಸ್ಕೃತಿಕವಾಗಿ ಅಭ್ಯಾಸ ಮಾಡುವುದಕ್ಕೂ ಪ್ರೇರೇಪಿಸುತ್ತದೆ. ಒಂದು ಮೊಳ ಉದ್ದ ಮಣ್ಣು ತೆಗೆದು ಭೂಶೋಧಿಸಿ

ಅರಸರಿಂದ ಗುರುವಾದವನು ಮೃತ್ತಿಕೆ ಸ್ವೀಕರಿಸಬೇಕು. ಇದನ್ನು ಒಂಬತ್ತು ಭಾಗವಾಗಿ ವಿಂಗಡಿಸಿ ಪ್ರತಿಷ್ಠಾಪಿಸುವರು, ಮೃತ್ತಿಕ ಹಾಕುವ ಸ್ಥಳದಲ್ಲಿ ನಿಕ್ಷೇಪಗಳನ್ನು ಇರಿಸುವರು ಎಂದು ಮೃತ್ತಿಕೆ ಪೂಜೆಯ ವಿವರಗಳಿವೆ. ಇಂದಿಗೂ ಈ ಸಂಪ್ರದಾಯ ಉಳಿದುಬಂದಿದ್ದು 'ಮಟ್ಟಿಪೂಜೆ' ಎಂದು ಕರೆಯುತ್ತಾರೆ. ಮುಂದೆ ಕೃತಿಕಾರ ಸಾಧನೆ ವಸ್ತುಗಳನ್ನು ಹೇಳುತ್ತಾನೆ. ಕಂಭ ತೂಗುತ್ತ ಇದ್ದ ಹಗ್ಗದಲ್ಲಿ ಇರುವ ಮರಕ್ಕೆ 'ಕೊಣತಿ', ಭುಜಗಳಿಂದ ಹಿಡಿಯುವ ಮರ 'ಕಂಗ', ಕೈಗಳಿಂದ ತಿರುಗಿಸುವ ಚಮರಕ್ಕೆ 'ಲೋಡು' ಮಧುರಂಧ್ರವಿರುವ ಕಲ್ಲನ್ನು ಹಸ್ತದಿಂದ ಎತ್ತುವುದಕ್ಕೆ 'ಸಂಗಡ' ಹಾಗೆಯೇ ಗೊಣೆತರ, ಬಾಲಸಂಗಡ, ಚಿತುಕಾಕಟ್ಟಿಗೆ, ಅಂತರಸ್ತಂಭ, ಕಾಮಸೊಣತಿ, ಕುರುಳಿಕಟ್ಟಿಗೆ ಮುಂತಾದ ಸಾಧನವಸ್ತುಗಳನ್ನು ತಿಳಿಸಲಾಗಿದೆ. ಇವೆಲ್ಲ ಕನ್ನಡ ನಿಘಂಟಿಗೆ ಸೇರಬೇಕು. ಅನಂತರ ಈ ಸಾಧನ ವಸ್ತುಗಳ ಪ್ರಮಾಣಕ್ಕೆ ಸಂಬಂಧಿಸಿದ ಪರಿಭಾಷೆಗಳಿವೆ. ಉದಾಹರಣೆಗೆ – 'ಅಂಗುಲಿ' 'ಗೇಣು' ಹಸ್ತ' 'ಮೊಳ' 'ವಜ್ರಮುಷ್ಟಿ' 'ಅಂತರಗಂಬ' ಎಂದು ಅಳತೆ ಪ್ರಮಾಣಗಳನ್ನು ವಿವರಿಸಿದೆ. ಆಯುಧಗಳು ಮೂವತ್ತೆರಡು ಎಂದು ಗುರುತಿಸಲಾಗಿದ್ದು ಅವುಗಳೆಂದರೆ ಅಸಿ, ಮುದ್ಗರ, ಬಿಂಡಿವಾಳ, ಕರವಾಳ, ಬಿಲ್ಲು, ಕರಗಸ, ಈಟಿ, ಗಂಡುಗೊಡಲಿ, ತೋಮರ, ಕೊಡಲಿ, ತ್ರಿಶೂಲ, ವಜ್ರಮುಷ್ಠಿ, ಗದೆ, ಗುಡಿಗೆ, ನೇಗಿಲು, ಚಕ್ರ, ಕಬ್ಬಿನಕೋಲು, ಭಲ್ಲೆಯ, ಪಚ್ಚೆವು, ಹಗ್ಗ, ಕ್ಷುರಪ್ರ, ನಾರಾಚ, ಚೂರಿ, ಅಂಕುಶ, ಶಕ್ತಿ, ಡಮರುಗ, ಒನಕೆ, ಪ್ರಾಸ, ಶತಘ್ನಿ, ಖಡ್ಗ, ಬಾಣ, ಪರಿಘ.

ಗರುಡಿಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳನ್ನು ಗ್ರಂಥದಲ್ಲಿ ದಾಖಲಾಗಿಸಲಾಗಿದೆ. ಭೂಮಿಯಲ್ಲಿ ಎಂಟು ದಿಕ್ಕುಗಳನ್ನು ಬರೆದು ಎಂಟು ನೂಲಿನ ತುಂಡು ಇಡುವ ಸಂಪ್ರದಾಯವು ಅಷ್ಟದಿಕ್ಪಾಲಕರನ್ನು ಸಂಕೇತಿಸುತ್ತದೆ. ಸಮಾಜದಲ್ಲಿದ್ದ ವರ್ಣವ್ಯವಸ್ಥೆ ಇಲ್ಲಿಯೂ ಪ್ರತಿಫಲಿಸಿದೆ. ಹಾಗಾಗಿ ಈ ಅಷ್ಟದಿಕ್ಪಾಲಕರು ಎಂಟು ಜಾತಿಗಳನ್ನು ಪ್ರತಿನಿಧಿಸುತ್ತಾರೆ. ವೈಶ್ಯ–ಅಗ್ನಿ, ಕುರುಬ–ಯಮ, ಶೂದ್ರ–ನಿಋುತಿ, ಕ್ಷೌರಿಕ –ವರುಣ, ರಾಜಪುತ್ರ–ವಾಯುವ್ಯ, ಬ್ರಾಹ್ಮಣ–ಕುಬೇರ, ಈಶಾನ್ಯ–ಮಾದಿಗ, ಎಂಟುದಿಕ್ಕಿಗೆ ಹೇಳುವ ಫಲಾಫಲಗಳಲ್ಲಿಯೂ ತರತಮಭಾಮವಿದೆ. ವೈಶ್ಯನಲ್ಲಿ ಧನ, ಕುರುಬನಲ್ಲಿ ದಾರಿದ್ರ, ಶೂದ್ರನಿಗೆ ಸುಖ, ಕ್ಷೌರಿಕನಲ್ಲಿ ಬಂಧನ, ರಾಜಪುತ್ರನಲ್ಲಿ ಐಶ್ವರ್ಯ, ಚಂಡಾಲನಲ್ಲಿ ಜಯ, ಮಾದಿಗನಲ್ಲಿ ಬಂಧನ ಎಂದು ಹೇಳುವ ಅಂಶಗಳು ಖಡ್ಗಶಾಸ್ತ್ರದಿಂದ ತೀರ ಹೊರತಾಗಿದ್ದು ಅನೌಚಿತ್ಯವಾಗಿ ತೋರುತ್ತವೆ. ಆದರೆ ವಸ್ತುವಿಗೆ ಸಂಬಂಧಿಸಿದ ವಿಚಾರಗಳ ಮೌಲ್ಯಯುತವಾಗಿವೆ.

ಗ್ರಂಥಕರ್ತನು ಆಯುಧಗಳು ಯಾವ ಪ್ರಮಾಣದಲ್ಲಿ ಇರಬೇಕೆಂಬುದನ್ನು ಖಡ್ಗ ಅರವತ್ತು ಅಂಗುಲ, ಸಾಣಾಕತ್ತಿ ಐವತ್ನಾಲ್ಕು ಅಂಗುಲ, ಬಂಡಿಕೋಲು ೪೮ ಅಂಗುಲ ಎಂದು ವಿವರಿಸಿದ್ದಾನೆ. ಅಣುರೇಣು ತೃಣಕಾಷ್ಟದಲ್ಲಿಯೂ ಭಗವಂತನನ್ನು ಕಾಣುವುದು ಪ್ರಾಚೀನರ ಪ್ರವೃತ್ತಿ. ಶಕ್ತಿಯ ಪ್ರತೀಕವಾದ ಈ ಆಯುಧಗಳಲ್ಲಿ ಕೂಡ ಪೂರ್ವಿಕರು ಭಗವಂತನನ್ನು ಕಂಡರೆ ಆಶ್ಚರ್ಯವಿಲ್ಲ. ಹಾಗಾಗಿ ಖಡ್ಗದ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ಈಶ್ವರ, ತುದಿಯಲ್ಲಿ ವಿಷ್ಣು ಇದ್ದಾನೆಂದು ಕಲ್ಪಿಸಲಾಗಿದೆ. ಸಾಣಾಕತ್ತಿಯ ಮೂಲದಲ್ಲಿ ವಿಷ್ಣು, ಮಧ್ಯದಲ್ಲಿ ಲಕ್ಷ್ಮಿ, ತುದಿಯಲ್ಲಿ ಬ್ರಹ್ಮನು ನೆಲೆಸಿರುವನು. ಬಂಡಿಕೋಲಿನ ಮೂಲದಲ್ಲಿ ಶಾರದೆ, ಮಧ್ಯಯದಲ್ಲಿ ಲಕ್ಷ್ಮಿ, ತುದಿಯಲ್ಲಿ ಪಾರ್ವತಿ ವಾಸವಾಗಿದ್ದಾರೆ ಎಂದು ಹೇಳಲಾಗಿದೆ. ಈ ಆಯುಧಗಳಲ್ಲಿ ಖಡ್ಗವೇ ಶ್ರೇಷ್ಠವೆಂಬ ಭಾವನೆ ಇದ್ದುದರಿಂದ 'ಖಡ್ಗರಾಜ' ಎಂಬ ಸಂಶೋಧನೆ ಕಂಡುಬರುತ್ತದೆ. 'ನಿಮ್ಮ ಕೈಯ ಖಡ್ಗವು ನಿಮಗೆ ಶತ್ರುನಿಮಿತ್ಯವಾದ ವಿಜಯವನ್ನು ಮಾಡಲಿ' ಎಂಬ ಹರಕೆಯಿದೆ. ಗರುಡಿಯಲ್ಲಿ ಎಲ್ಲ ಸಾಧನಗಳೂ ಇರಬೇಕು. ಹಾಗಿದ್ದಾಗ ಮಾತ್ರ ಅದಕ್ಕೊಂದು ಪರಿಪೂರ್ಣತೆ ಪ್ರಾಪ್ತವಾಗುತ್ತದೆ.

ತೃತೀಯಾಧ್ಯಾಯದಲ್ಲಿಯೂ ಗರುಡಿಯಲ್ಲಿ ನಡೆಯುವ ಆಚರಣೆಗಳಿಗೆ ಆದ್ಯತೆ ನೀಡಲಾಗಿದೆ. ಈ ಹೊತ್ತು 'ಮಟ್ಟಿ ಪೂಜೆ'ಯಲ್ಲಿ ಏನೇನು ಸಂಪ್ರದಾಯಗಳು ರೂಢಿಯಲ್ಲಿವೆಯೋ ಅವು ಖಡ್ಗಶಾಸ್ತ್ರದಲ್ಲಿ ಶತಮಾನಗಳಿಗೂ ಹಿಂದೆಯೇ ಕಂಡುಬಂದಿದ್ದು ಪೂರ್ವದ ಸಂಪ್ರದಾಯಗಳು ಇನ್ನೂ ಜೀವಂತವಾಗಿರುವುದಕ್ಕೆ ನಿದರ್ಶನವಾಗಿದೆ. ಗರುಡಿಯ ಪ್ರಕಾರ ಮತ್ತು ಗರುಡಿಯ ಪೂಜಾವಿಧಾನಗಳು ಈ ಅಧ್ಯಾಯದಲ್ಲಿ ವಿವರವಾಗಿ ಬಂದಿದೆ. ಶಿಲ್ಪಿ ಉಪ್ಪಾರ ಮೊದಲಾದ ಸಮಸ್ತರಿಗೆ ಗರುಡಿ ಪೂಜೆಯಲ್ಲಿ ಭೋಜನ ಏರ್ಪಡಿಸುವರು. ಗರುಡಿಗೆ ಮೃತ್ತಿಕೆಯನ್ನು ಅತ್ಯಂತ ಭಯಭಕ್ತಿಯಿಂದ ತರುತ್ತಾರೆ. ಅದನ್ನು ವಸ್ತ್ರದಲ್ಲಿ ಕಟ್ಟಿ ವಾದ್ಯ ಸಹಿತ ಬರಮಾಡಿಕೊಳ್ಳುತ್ತಾರೆ. ಆ ಮೃತ್ತಿಕೆಯನ್ನು ಐದು ಉಂಡೆ ಮಾಡಿ ನಾಲ್ಕು ಉಂಡೆಗಳನ್ನು ವೇದಗಳಿಗೆ ಮತ್ತೊಂದು ಉಂಡೆಯನ್ನು ವಿಷ್ಣುವಿಗೆ ಸಂಕೇತವಾಗಿಟ್ಟು ಪೂಜಿಸುವುದು ಬ್ರಾಹ್ಮಣ ಸಂಸ್ಕೃತಿಯ ನೆಲೆಯಿಂದ ಈ ಶಾಸ್ತ್ರ ರೂಪುಗೊಂಡಿರುವುದಕ್ಕೆ ದೃಷ್ಟಾಂತವಾಗಿದೆ. ಇಲ್ಲಿ ಶಿಷ್ಟ ಮತ್ತು ಜನಪದ ಸಂಪ್ರದಾಯಗಳೆರಡನ್ನೂ ಒಟ್ಟಿಗೆ ಕಾಣಬಹುದು. ಬ್ರಾಹ್ಮಣರಿಂದ ಜೋಗಿಗಳವರೆಗೆ ಹಲವು ಜಾತಿಗಳು ಇಲ್ಲಿ ಭಾಗಿಯಾಗಿರುವುದರಿಂದ ಬ್ರಾಹ್ಮಣರಿಗೆ ಸಸ್ಯಾಹಹಾರವನ್ನೂ, ಜೋಗಿಗಳಿಗೆ ಕುರಿಮಾಂಸ ಮದ್ಯಗಳನ್ನು ಶಾಸ್ತ್ರ ಪ್ರಕಾರವೇ ನೀಡುವುದಿದೆ. ವೈದಿಕ ಸಂಸ್ಕೃತಿಯಲ್ಲಿ ಬಲಿ ನೀಡುವ ಸಂಪ್ರದಾಯಕ್ಕೆ ವಿರೋಧವಿರಲಿಲ್ಲವೆಂಬುದಕ್ಕೆ ಗರುಡಿಬಲಿಪೂಜೆಯಲ್ಲಿಯೂ ಆಧಾರಗಳಿವೆ. ಎಂಟು ದಿಕ್ಕಿಗೆ ಎಂಟು ಕುರಿ, ಬಾಗಿಲಿಗೆ ಎರಡು, ಗರುಡಿ ಮಧ್ಯದಲ್ಲಿ ಎರಡು, ಆಯುಧಗಳಿಗೆ ಎರಡು ಹೀಗೆ ಕುರಿಬಲಿ ನೀಡಿ ಆಚಾರ್ಯರನ್ನು ಪೂಜಿಸಿದ ಬಳಿಕ ವಿದ್ಯಾರಂಭವಾಗುತ್ತದೆ. ಈ ಭಾಗದಲ್ಲಿ ಜಾನಪದೀಯ ನೆಲೆಯಿಂದ ಅಧ್ಯಯನ ಮಾಡಬಹುದಾದ ಅನೇಕ ಸಂಗತಿಗಳಿವೆ.

ಆಚಾರ್ಯ ಮತ್ತು ಶಿಷ್ಯರ ಲಕ್ಷಣವನ್ನು ನಿರೂಪಿಸುವಾಗ ಗ್ರಂಥಕರ್ತ ಹೇಳುವ ವಿಚಾರಗಳು ಸಮಾಜವಿರೋಧಿಯಾಗಿದೆ. ಈತ ಜಾತಿಶ್ರೇಣಿಯ ನೆಲಗಟ್ಟಿನಿಂದಲೇ ಇಲ್ಲಿಯೂ ಚಿಂತಿಸಿದ್ದಾನೆ. ಆಚಾರ್ಯನಾಗಬೇಕಾದವನು ಜಾತಿಶ್ರೇಣಿಯ ಮೊದಲೆರಡು ಸ್ಥಾನದಲ್ಲಿರುವ ಬ್ರಾಹ್ಮಣ ಮತ್ತು ಕ್ಷತ್ರಿಯನಾಗಿರಬೇಕು ಎನ್ನುವಾಗ ಉಳಿದ ಜಾತಿಗಳು ಆಚಾರ್ಯನಾಗಲು ಅನರ್ಹ ಎನ್ನಲಾಗಿದೆ. ಆದರೆ ಆಚಾರ್ಯನಿಗಿರಬೇಕಾದ ಲಕ್ಷಣವನ್ನು ವಿವರಿಸುವಾಗ ಈತನ ಕೆಲವು ಮಾತುಗಳು ಸ್ವಾಗತಾರ್ಹವಾಗಿವೆ. ಆಚಾರ್ಯನು ಸತ್ಪುರುಷರ ಹಾಗೂ ಹಿರಿಯರ ಸೇವೆಯಲ್ಲಿ ಇಚ್ಛೆ ಉಳ್ಳವನು, ಸಮಸ್ತ ವಿದ್ಯೆಯನ್ನು ಅರಿತವನು, ಸೂಕ್ಷ್ಮ ಬುದ್ಧಿ ಇರುವವನು, ಸಮಸ್ತ ವಿದ್ಯೆಗಳನ್ನು ಅರಿತವನು, ಶಾಂತ ಚಿತ್ತನು, ಕ್ಷಮಾಗುಣಿ, ದರಿದ್ರ ರಕ್ಷಕ, ವಿನಯಿ, ಧರ್ಮನಿರತ, ಕ್ರೋಧಮತ್ಸರ ವರ್ಜಿತ ಮುಂತಾದ ಗುಣಗಳಿಂದ ಕೂಡಿದನಾಗಿರಬೇಕು. ಇಂಥ ಆಚಾರ್ಯರಿಂದ ವಿದ್ಯೆ ಕಲಿತ ಶಿಷ್ಯ ಕೀರ್ತಿವಂತನಾಗುತ್ತಾನೆ ಎನ್ನುವಲ್ಲಿ ಶಿಕ್ಷಕನಾದವನು ಆದರ್ಶಪ್ರಿಯವಾಗಿರಬೇಕೆಂಬ ಆಶಯ ವ್ಯಕ್ತವಾಗಿದೆ.

ಖಡ್ಗಶಾಸ್ತ್ರಕಾರ ಬ್ರಾಹ್ಮಣ್ಯವನ್ನು ಎತ್ತಿಹಿಡಿದರೂ ಬ್ರಾಹ್ಮಣನಾದರೂ ಕ್ಷತ್ರಿಯನಾದರೂ ಖಡ್ಗಶಾಸ್ತ್ರಹೀನನಾಗಿ ಆಚಾರ್ಯನಾದರೆ ಆತನಿಂದ ಶಿಕ್ಷಣ ಪಡೆಯಬಾರದು ಎಂಬ ವಿವೇಕವನ್ನು ಮೆರೆದಿದ್ದಾನೆ. ಇಲ್ಲಿ ಅಮೃತಹಸ್ತಿ, ದಗ್ಧಹಸ್ತಿ ಎಂಬ ಎರಡು ಬಗೆಯ ಆಚಾರ್ಯರನ್ನು ವರ್ಣಿಸಿ ದಗ್ಧ ಹಸ್ತಿಯಿಂದ ಕಲಿಯುವ ಶಿಕ್ಷಣ ಹಾನಿಕಾರಕ ಎನ್ನಲಾಗಿದೆ.

ಗುರುವಿಗೆ ಕಲಿಸುವ ಅರ್ಹತೆ ಹೇಗೆ ಬೇಕಾಗುತ್ತದೋ ಹಾಗೇ ಶಿಷ್ಯನಿಗೂ ಕೆಲವೊಂದು ಅರ್ಹತೆಗಳಿರಬೇಕೆಂದು ಶಾಸ್ತ್ರಕಾರ ಹೇಳಿದ್ದಾನೆ. ಶಿಷ್ಯನಿಗೆ ತನ್ನ ಗುರು ಅಥವಾ ಆಚಾರ್ಯನ ಮೇಲೆ ವಿಶ್ವಾಸವಿರಬೇಕು. ಮನೋವಾಕ್ಕಾಯ ಕರ್ಮಗಳಿಂದ ವಿಶ್ವಾಸಘಾತಕನಾಗಿರಬಾರದು. ಇಂಥ ಶಿಷ್ಯ ಮಾತ್ರ ವಿದ್ಯೋಪದೇಶ ಪಡೆಯಲು ಯೋಗ್ಯನಾಗಿರುತ್ತಾನೆ. ಗ್ರಂಥಕರ್ತ ಇಲ್ಲಿ ಅನವಶ್ಯಕವಾಗಿ ಕುಲ ಹದಿನೆಂಟು ಜಾತಿಗಳನ್ನು ಪ್ರಸ್ತಾಪಿಸುತ್ತಾನೆ. ಇದರ ಪ್ರಕಾರ ಕುಲಹದಿನೆಂಟು ಜಾತಿಗಳೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ವ್ಯಾವಹಾರಿಕ, ಗೊಲ್ಲ, ಗಾಣಿಗ, ಪಾಂಚಾಳ, ಕುಂಬಾರ, ಚಿತ್ರಗಾರ, ಜಾಡ, ಚಿಪ್ಪಿಗ, ನಾಯಿಂದ, ಅಗಸ, ಮಚ್ಚಿಗ, ಹೊಲೆಯ, ಮಾದಿಗ ಈ ಜಾತಿಗಳನ್ನು ಉತ್ತಮ, ಮಧ್ಯಮ, ಅಧಮ ಎಂದು ವರ್ಗೀಕರಿಸಲಾಗಿದೆ. ಇಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು ಉತ್ತಮರ ಸಾಲಿಗೆ ಸೇರಿಸಿ, ಶೂದ್ರ ಗೊಲ್ಲ ಕಮ್ಮಾರ ಮೊದಲಾದವರನ್ನು ಮಧ್ಯಮರ ಸಾಲಿಗಿಟ್ಟು ಉಳಿದವರನ್ನು ಅಧಮರೆಂದು ಕರೆದಿರುವುದು ಸಮಾಜದಲ್ಲಿ ಬೇರೂರಿದ್ದ ಜಾತಿವ್ಯವಸ್ಥೆಗೆ ಕನ್ನಡಿ ಹಿಡಿಯುತ್ತದೆ.

ಸಾಂಪ್ರದಾಯಿಕ ಚಿಂತನೆಯ ನಡುವೆಯೂ ಶಿಕ್ಷಣದ ವಯೋಮಿತಿಯ ಬಗ್ಗೆ, ಶಿಕ್ಷಣದ ಅವಧಿಯ ಬಗ್ಗೆ ಖಡ್ಗಶಾಸ್ತ್ರದಲ್ಲಿ ವಿವೇಚಿಸಿದ್ದು ಇದು ಆ ಕಾಲದ ಶೈಕ್ಷಣಿಕ ವ್ಯವಸ್ಥೆಯ ಬಗ್ಗೆಯೂ ಬೆಳಕು ಬೀರುತ್ತದೆ. ಶಸ್ತ್ರ ವಿದ್ಯಾಭ್ಯಾಸ ಮಾಡಲು ಐದರಿಂದ ಒಂಬತ್ತು ವರ್ಷ ಉತ್ತಮ. ಹತ್ತರಿಂದ ಹನ್ನೆರಡು ವರ್ಷ - ಮಧ್ಯ, ಹನ್ನೆರಡರಿಂದ ಮುಂದೆ ಅಧಮ ಎನ್ನುತ್ತ ಸಾಧನೆ ಆರಂಭಿಸಲು ನಕ್ಷತ್ರ ಫಲಗಳನ್ನು ಹೇಳಲಾಗಿದೆ. ಸಾಧನೆಯ ಆರಂಭಕ್ಕೆ ಮಾಘ ಫಾಲ್ಗುಣ ವೈಶಾಖ, ಜೇಷ್ಠಮಾಸಗಳು ಶ್ರೇಷ್ಠ, ಕಾರ್ತಿಕ ಮಾರ್ಗಶಿರಗಳು ಮಧ್ಯಮ, ಮಿಕ್ಕವು ಅಧಮ ಎಂದು ಮಾಸಫಲವನ್ನು ನಿರೂಪಿಸಿದೆ. ಹಾಗೆಯೇ ಉತ್ತರಾಷಾಢ, ಉತ್ತರ ಭಾದ್ರಪದ, ಚಿತ್ತೆ, ಸ್ವಾತಿ, ಶ್ರವಣ, ಪುನರ್ವಸು, ಧನಿಷ್ಠೆ, ರೋಹಿಣಿ, ಅನುರಾಧ, ಮೃಗಶಿರೆ, ಅಶ್ವಿನಿ, ಪುಷ್ಯ ನಕ್ಷತ್ರಗಳು ವಿದ್ಯಾರಂಭಕ್ಕೆ ಪ್ರಶಸ್ತವೆನ್ನಲಾಗಿದೆ. ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ ಈ ಐದು ತಿಥಿಗಳು ವಿದ್ಯಾರಂಭಕ್ಕೆ ಯೋಗ್ಯ. ಸೋಮವಾರ ಬುಧವಾರ ಗುರುವಾರ ಶುಕ್ರವಾರ ಉತ್ತಮ ಎಂದಿದೆ. ನಿತ್ಯ ಜೀವನದಲ್ಲಿ ಜ್ಯೋತಿಷ್ಯಶಾಸ್ತ್ರದ ಪ್ರಭಾವ ಎಷ್ಟು ಗಾಢವಾಗಿತ್ತು, ಜನಸಾಮಾನ್ಯರು ಈ ಶಾಸ್ತ್ರದ ಮೇಲೆ ಎಷ್ಟು ಅವಲಂಬಿತರಾಗಿದ್ದರೆಂಬುದು ತಿಳಿಯುತ್ತದೆ.

ಆಚಾರ್ಯನು ವಿದ್ಯಾರಂಭಕ್ಕೆ ಮೊದಲು ಆಯುಧಗಳನ್ನು ಪೂಜಿಸುವ ವಿಧಿ ಇದ್ದು ಶಿಷ್ಯರೆಲ್ಲ ಸೇರಿ ಹೂವು ಗಂಧ ಚಿನ್ನ ಹೊಸ ವಸ್ತ್ರ ಪಾನಕ ಕಡಲೆ ತೆಂಗಿನಕಾಯಿ ಬಾಳೆಣ್ಣುಗಳಿಂದ ಪೂಜಿಸಿದ್ದರ ವಿವರಗಳಿವೆ. ಇಂಥ ಸಂಪ್ರದಾಯಗಳು ಇವತ್ತಿಗೂ ಚಾಲ್ತಿಯಲ್ಲಿವೆ. ನವರಾತ್ರಿ ಸಂದರ್ಭದಲ್ಲಿ ಆಯುಧಪೂಜೆ ಮಾಡುವ ಸಂಪ್ರದಾಯವಿದ್ದು ಅದು ಈ ತೆರನ ಖಡ್ಗಗಳ ಮಹತ್ವವನ್ನು ಸೂಚಿಸುತ್ತಿರಬೇಕು. ಬ್ರಾಹ್ಮೀಮುಹೂರ್ತದಲ್ಲಿ ಎದ್ದು ವಿದ್ಯಾರ್ಥಿ ಅಭ್ಯಾಸ ಮಾಡಿದರೆ ಓದಿದ್ದು ಚೆನ್ನಾಗಿ ಮನದಟ್ಟಾಗುತ್ತದೆ ಎಂಬ ನಂಬಿಕೆ ಇಂದಿಗೂ ಇದೆ. ಇಲ್ಲಿಯೂ ಈ ಮಾತಿಗೆ ಬೆಂಬಲವಿದೆ. ಬ್ರಾಹ್ಮೀ ಮೂಹೂರ್ತದಲ್ಲಿ ಅಭ್ಯಾಸ ಮಾಡಬೇಕೆಂದಿದೆ. ಶುಚಿರ್ಭೂತರಾಗಿ ಗರುಡಿ ಪ್ರವೇಶಿಸಬೇಕೆನ್ನಲಾಗಿದೆ. ಹಿಂದೆ ಶಾಸ್ತ್ರಬದ್ಧವಾಗಿ ಕಲಿಸಲು ಶಿಷ್ಯರ ಅಂಗಲಕ್ಷಣವನ್ನೂ ಪರಿಗಣನೆಗೆ ತೆಗೆದುಕೊಳ್ಳುತ್ತಿದ್ದರು. ಅತಿಯಾದ ಎತ್ತರ, ಅತಿಯಾದ ಕುಬ್ಜತೆ, ರೋಗಯುಕ್ತನಾದ ಶಿಷ್ಯನಿಗೆ ವಿದ್ಯೆ ನೀಡಬಾರದು ಎನ್ನುವ ಶಾಸ್ತ್ರಕಾರ ಅಲ್ಲಲ್ಲಿ ಮಾನವ ವಿರೋಧಿ ವಿಚಾರಗಳನ್ನು ಹೀಗೆ ತೂರಿಬಿಟ್ಟಿದ್ದಾನೆ.

ಈ ತೆರನ ಪೂರ್ವಪೀಠಿಕೆಗಳಾದ ಬಳಿಕ ನಾನಾ ಸಾಧನೆಗಳನ್ನು ಹೆಸರಿಸಿದೆ. ಸುಮಾರು ಮೂರು ಅಧ್ಯಾಯಗಳಲ್ಲಿ ವಿಸ್ತರಿಸಿದ ಖಡ್ಗಶಾಸ್ತ್ರಕ್ಕೆ ಪೂರಕವಾದ ವಿಚಾರಗಳನ್ನು ಬಾಲಾಭ್ಯಾಸ ವಿಧಿ ಎಂದು ಹೆಸರಿಸಿ ಬಳಿಕ ಹತ್ತು ಬಗೆಯ ಸಾಧನೆಯನ್ನು ಉಲ್ಲೇಖಿಸಿದೆ. ದಂಡೆ ಸಾಧನೆ, ದಂಡ ಭ್ರಮಣ ಸಾಧನೆ, ಚಾಚಿ ಸಾಧನೆ, ಲಾಗಿನ ಸಾಧನೆ, ಕರಸಾಧನೆ, ಖಂಡೇದ ಸಾಧನೆ, ಬಡಿಗೋಲ ಸಾಧನೆ, ಪ್ರಹಾರ ಸ್ತಂಭ ಸಾಧನೆ, ಸಾಣಾಕತ್ತಿಯ ಸಾಧನೆ, ಮಲ್ಲಸಾಧನೆ.

ಬಾಲಕರು ಪ್ರಾತಃಕಾಲದಲ್ಲಿ ಗರುಡಿಗೆ ಬಂದ ಕೂಡಲೇ ಆಚಾರ್ಯರಿಗೆ ನಮಿಸಬೇಕು. ಇದು ಗುರುವಿಗೆ ನಮ್ಮ ಸಂಸ್ಕೃತಿಯಲ್ಲಿ ಎಂತಹ ಸ್ಥಾನ ನೀಡಿದ್ದರೆಂಬುದು ವಿದಿತವಾಗುತ್ತದೆ. ಅನಂತರ ಬಾಲಕರು ಐದು ಮಡಿಕೆ ಮಾಡಿ ದಟ್ಟಿ ಸುತ್ತಿಕೊಳ್ಳಬೇಕು. ಈ ದಟ್ಟಿಗೂ ಒಬ್ಬ ದೇವತೆಯನ್ನು ಆಯೋಜಿಸಲಾಗಿದೆ. ಅದೇ ಆದಿಶೇಷ. ಮೊದಲು ದಂಡೆ ಸಾಧನೆಯನ್ನು ಕಲಿಸಲಾಗುವುದು. ಇದರಲ್ಲಿ ಮಣ್ಣನ್ನು ಎರಡು ಗುಡ್ಡೆ ಮಾಡಿ, ಎರಡಕ್ಕೂ ೧೨ ಅಂಗುಲ ಅಂತರವಿರುವಂತೆ ನೋಡಿಕೊಂಡು, ಎರಡು ಗುಪ್ಪೆಯ ಮೇಲೆ ಎರಡು ಕೈಗಳನ್ನಿರಿಸಿ ಸಾಷ್ಟಾಂಗ ನಮಸ್ಕಾರ ಮಾಡುವುದೇ ದಂಡೆ ಸಾಧನೆ. ಪ್ರತಿಯೊಂದರಲ್ಲಿಯೂ ದೈವವನ್ನೇ ಕಾಣುವ ಪೂರ್ವಿಕರು ಹೀಗೆ ಸಾಧನೆ ಮಾಡುವುದು ಕೂಡ ದೇವರಿಗೆ ಅರ್ಪಿತವೆಂದು ಭಾವಿಸುವರು. ದಿಕ್ಪಾಲಕರಿಗೆ ಮೂವತ್ತೆರಡು ನಮಸ್ಕಾರ, ಈಶ್ವರನಿಗೆ ಹನ್ನೊಂದು, ಭೈರವನಿಗೆ ಐದು, ದುರ್ಗಿಗೆ ಏಳು, ವಿಘ್ನೇಶ್ವರನಿಗೆ ಎಂಟು ನಮಸ್ಕಾರ ಮಾಡಬೇಕೆಂಬ ನಿಯಮ. ಹೀಗೆ ಸಾಧನೆಗೆ ಅಣಿಗೊಳಿಸುವರು.

ಮುಂದೆ ಕೆಲವು ಪಟ್ಟುಗಳನ್ನು ಪ್ರಸ್ತಾಪಿಸಿದ್ದಾನೆ. ಹನ್ನೆರಡು ಪೆಟ್ಟುಗಳಾದ ಚಮಕಿ, ಸಖತ, ಚಿತರಿ, ಡಹಣಿ, ಆಹುತಿ, ಚಕ್ರ, ಚಿತ್ರ ಚಮತ್ಕಾರ, ವಡ್ಡೆಯ, ರಜಕ, ತಳಭಿತ್ತರಿ, ಮುಖಡಿ ಇವುಗಳ ವಿವರಗಳಿವೆ. ಇವು ಮನುಷ್ಯನ ಯಾವ ಯಾವ ಅಂಗದಿಂದ ಉತ್ಪತ್ತಿಯಾದವೆಂಬುದನ್ನು ನಿರೂಪಿಸಲಾಗಿದೆ. ಚಮಕಿ ಉರದಲ್ಲಿ, ಸಖತ ಹಣೆಯಲ್ಲಿ, ಬಿತರಿ ತೊಡೆಯಲ್ಲಿ, ದಹಣಿವೇಟು ಸೊಂಟದಲ್ಲಿ, ದಾಹುತಿ ಮಣಿಬಂಧದಲ್ಲಿ, ಚಕ್ರವೇಟ್ಟು ಸರ್ವಾಂಗದಲ್ಲಿ, ಚಿತ್ರ ಚಮತ್ಕಾರ ಕಂಠದಲ್ಲಿ, ವಡ್ಡೆಯ ಎಡದ ಹೆಗಲಲ್ಲಿ, ರಜಕ ಪೃಷ್ಠಭಾಗದಲ್ಲಿ, ತಳಬಿತ್ತರಿ ಮೊಳಕಾಲಲ್ಲಿ, ಮುರುಡಿ ಎಂಬುದು ಬಲಭಾಗದ ಹಣೆಯಲ್ಲಿ, ಬಿರಿವೇಟ್ಟು ಮುಷ್ಠಿಯಲ್ಲಿ ಹುಟ್ಟಿತೆನ್ನಲಾಗಿದೆ. ಈ ಒಂದೊಂದು ವೇಟ್ಟಿಗೂ ಒಂದೊಂದು ರೂಪವಿರುವುದೆಂಬ ಭಾವನೆಯಿದೆ. ಚಮಕಿ ಪೆಟ್ಟಿಗೆ ಗರುಡರೂಪ, ಸರಿತ-ಮಿಂಚಿನ ರೂಪ, ಬಿತ್ತರಿ-ಬಾಣ, ಡಹಣಿ-ದಂಡಾಕಾರ, ದಾಹುತಿ-ಹಗ್ಗ, ಚಕ್ರ-ವಿಷ್ಣುಚಕ್ರ, ಚಿತ್ರಚಮತ್ಕಾರ-ಹುಲಿ, ವಡ್ಡೆಯ-ಸಿಂಹಾಕಾರ, ರಜಕ-ಕಪಿ, ತಳಬಿತ್ತರಿ-ಸರ್ಪಾಕಾರ, ಮುಖಡಿ-ಭೈರವ ಹೀಗೆ ಘಾತಗಳ ಸ್ವರೂಪವನ್ನು ತಿಳಿಸಲಾಗಿದೆ.

ಶಸ್ತ್ರವಿದ್ಯೆಯಲ್ಲಿ ಚಳಕ, ಕೌಶಲಗಳು ಬಹಳ ಮುಖ್ಯ. 'ಲಾಗು' ಸಾಧನೆಯ ಪ್ರಭೇದಗಳಲ್ಲಿ ಇಂಥ ಕೌಶಲಗಳನ್ನು ಕಾಣಬಹುದು. ಇದರಲ್ಲಿ ಅಡ್ಡಲಾಗು, ಮುಂದಣ ಲಾಗು, ಹಿಂದಣ ಲಾಗು ಎಂದು ಮೂರು ಬಗೆ. ನೆಲದ ಮೇಲೆ ಎಡಗಾಲು ಇಟ್ಟು, ಹಸ್ತಗಳನ್ನು ಚಾಚಿ, ಅಡ್ಡಲಾಗಿ ಸುತ್ತುವುದು ಅಡ್ಡಲಾಗು. ಬಲಗಾಲನ್ನು ನೆಲದ ಮೇಲೆ ಇಟ್ಟು ಸಾಧನೆ ಮಾಡುವುದು 'ಅಳಗು.' ಎಡಗಾಲು ಮುಂದೆ ಇಟ್ಟು ಎಡಗೈ ಕೆಳಗೆ ಇಳಿಬಿಟ್ಟು ಒಂದು ಪಾರ್ಶ್ವದಲ್ಲಿ ಸುತ್ತಿದರೆ 'ಅದಾಡ' ಎನ್ನುವರು. ಎಡಗಾಲನ್ನು ಚಾಚಿ ಬಲಗಾಲನ್ನು ಎಡಗಾಲ ಮೇಲೆ ಚಾಚಿ ಬಲಗಾಲನ್ನು ಮಾತ್ರ ನೆಲದ ಮೇಲೆ ಇಡುವುದಕ್ಕೆ ಕಾಲಾಗೆ ಕಾಲು ಎನ್ನುವರು. ಈ ಕಾಲಾಗೆ ಕಾಲು ಸಾಧನೆಯನ್ನು ಎರಡು ಬಾರಿ ಮಾಡಿದರೆ 'ಕಾಲಗಾಲು' ಎಂದು ಹೆಸರು. ಮೊಳಕಾಲುಗಳನ್ನು ವಕ್ಷಸ್ಥಳದಲ್ಲಿ ಇರಿಸಿ ಮೇಲಕ್ಕೆ ಭ್ರಮಣ ಮಾಡಿ ನಿಂತರೆ 'ದೊಟ್ಟಿ'. ಸಾಧಕನಾದವನಿಗೆ ಈ ಐದು ಪ್ರಶಸ್ತ ಎನ್ನಲಾಗಿದೆ. ಭ್ರಮಣ ಎಂದರೆ ಚಕ್ರದಂತೆ ಸುತ್ತುವುದು ಇದರಲ್ಲಿ ಸುತ್ತಾಟ, ಕಿರಿಸುತ್ತಾಟ, ಮೂರು ಹೆಜ್ಜೆಯ ಮಂಡಿ ಎಂಬಿವು ಸುತ್ತಾಟದ ವಿಶೇಷಗಳು. ಮೊಣಕಾಲಿನೊಡನೆ ಎದೆಯನ್ನು ಕೂಡಿಸುವುದು 'ಮಂಡಿ'. ಎಡಬಲದಲ್ಲಿ ತಿರುಗುವುದು 'ಕುದುರೆ ಗಾಲು.' ಮಧ್ಯೆ ಹಾರಿ ಎರಡು ಕಾಲುಗಳನ್ನು ಹೊಡೆಯುವುದು 'ಪಾದತಾಡನ.' ಸುತ್ತಾಟದಲ್ಲಿ ಹಿಮ್ಮಡಿಯಿಂದ ನಿತಂಬಗಳನ್ನು ಹೊಡೆಯುವುದು 'ಕಟಿತಾಡನ.' ಭ್ರಮಣದಲ್ಲಿ ಶರೀರ ಭ್ರಮಣ 'ಭವಳಿ' ಎನಿಸಿಕೊಳ್ಳುವುದು. ಸುತ್ತಾಟದಲ್ಲಿ ಕಾಲಿನ ಸಾಧನೆಗಳು ಹಲವಾರು. ಪಾದ ಮತ್ತು ತೊಡೆಗಳ ಬಡಿದಾಟವನ್ನು 'ಡಾಳಾ' ಎನ್ನುತ್ತಾರೆ. ಪಾದಗಳಿಂದ ಎದೆಯಲ್ಲಿ ಚಕ್ರಾಕಾರವಾಗಿ ಮಾಡುವ ಹೊಡೆದಾಟ 'ಚಕ್ರಗಾಲು.' ಕಾಲನ್ನು ಮುಂದೆ ಚಾಚಿ ಹಿಂದಕ್ಕೆ ಪುನಃ ತಿರುಗಿ, ನೆಲದ ಮೇಲೆ ಇಡುವುದಕ್ಕೆ 'ಹೊರಳಿ ಮಂಡಿ ಮುರಿಯುವುದು. 'ನಿಂತಲ್ಲಿ ಮೊಣಕಾಲುಗಳಿಂದ ಎದೆಗೆ ಬಡಿದರೆ 'ಮಂಡಿ' ಎಂದು ಕಾಲಸಾಧನೆಯಲ್ಲಿಯೂ ಬಳಸಲಾಗಿದೆ. ಪಾದಗಳನ್ನು ಮುಖದಲ್ಲಿ ಇಡುವುದು 'ಮೊಗದ ಮುಂದೆಗಾಲು.' ಎರಡೂ ಕಡೆ ಬೇಗ ಕಾಲು ತೆಗೆದು ಭೂಮಿಯಲ್ಲಿ ನಿಲ್ಲುವುದಕ್ಕೆ 'ತೊಲಗಿ ಹಾರುವುದು' ಎನ್ನುವರು. ಪಾದಗಳನ್ನು ಮುಂದಕ್ಕೆ ಚಾಚಿ ಶರೀರವನ್ನು ಬಗ್ಗಿಸಿ ಕೈಗಳನ್ನು ಬೀಸುವುದಕ್ಕೆ ಸಾಗಿ ಬೀಸುವುದು ಎಂದು ಹೇಳುವರು. 'ತೊಲಗು' 'ತಾಟಿ' ಮುಂಗತ್ತರಿಗಾಲು 'ಹಿಂಗತ್ತರಿಗಾಲು' ಇವು ಇನ್ನಷ್ಟು ಬಡಿದಾಟಗಳು. ಕೈ ಕಟ್ಟಿ, ಎರಡು ಕಾಲುಗಳನ್ನು ಹಿಂದಕ್ಕೆ ಚಾಚುವುದು 'ಗರ್ದಭ ಪದಹತಿ.' ಒಂದು ಕಾಲಲ್ಲಿ ನಿಂತು ಇನ್ನೊಂದು ಕಾಲನ್ನು ಮುದುಡಿಕೊಂಡು ತಲೆಯನ್ನು ಹಿಂದಕ್ಕೆ ಬಗ್ಗಿಸುವುದು 'ಧನುರ್ಬಂಧನ." ಪಾದದ ತುದಿಯಿಂದ ದೇಹದ ಎಡಬಲದಲ್ಲಿ ತಿರುಗಿಸುವುದು 'ಅಗ್ರಪಾದ ಮೊನೆಗಾಲು' 'ಚಾಟುಗಾಲು' ಮೊನೆಗಯಿ ಹೀಗೆ ಒಟ್ಟು ೨೦ ಬಗೆಯ ಸಾಧನೆಗಳಿವೆ.

ಖಡ್ಗಶಾಸ್ತ್ರದಲ್ಲಿ ಖಂಡೇದ ಸಾಧನೆಗೆ 'ಬೈಸಣಿಕೆ' 'ಕನ್ನಾತ' 'ತೊಲಗಿ ಕುಳ್ಳಿರುವುದು' 'ಸಾಗಿ ಕುಳ್ಳಿರುವುದು' 'ಚಕ್ರಗಾಲು' 'ಮೊನೆಗಾಲು' 'ಹೆಜ್ಜೆ ತೆಗೆದು ಕುಳ್ಳಿರುವುದು 'ಕಪ್ಪೆ ಬೈಸಣಿಗೆ' 'ಹನುಮಂತ ಡಾಳ' 'ಚಕ್ರಮಂಡಿಗಾಲು' 'ಹೊರಚಕ್ರಮಂಡಿಗಾಲು' 'ಅಡ್ಡ ಚಾಚುವ ಮಂಡಿ' 'ಕತ್ತರಿ ಮಂಡಿ' ಎಂದು ಇದರಲ್ಲಿ ಹದಿನೈದು ರೀತಿಯ ಸಾಧನೆಗಳನ್ನು ವಿವರಿಸಲಾಗಿದೆ. ಆದರೂ ಇನ್ನೂ ಕೆಲವು ನೂತನವಾದವು

ಇವೆಯೆಂದು ಕುಕ್ಕಟಾಸನದಿಂದ ಮಾಡಬಲ್ಲ 'ಉಪ್ಪರದ ಸಾನೆ' ಎದೆಗೆ ಹಾರುವುದು' 'ಭುಜಕ್ಕೆ ಹಾರುವುದು' ಮುಂತಾದ ಸಾಧನೆಗಳನ್ನು ವಿವರಿಸಿದೆ. ಉಪ್ಪರದ ಸಾಧನೆಯಲ್ಲಿ 'ಕರ್ತರಿಗಾಲು' 'ಚಕ್ರಗಾಲು' ಎಂಬ ಉಪಭೇದಗಳೂ ಇವೆ.

ಶಾಸ್ತ್ರಕಾರ ಬಡಿಗೋಲು ಸಾಧನೆಯನ್ನೂ ವಿಶದಪಡಿಸಿದ್ದಾನೆ. 'ಬಡಿಕೋಲು' ಎಂಬ ಶಬ್ದ ಹಸ್ತ ಪ್ರತಿಯಲ್ಲಿ ಕೆಲವೆಡೆ ಬಂಡಿಕೋಲು ಎಂದೂ ಮತ್ತು ಕೆಲವೆಡೆ ಬಂದಿಕೋಲು ಎಂದಿದೆ. ಬಲಗಾಲು ಮುಂದಿರಿಸಿ ಬಲ ಹಸ್ತ ಮುಂದಕ್ಕೆ ಚಾಚಿ ಎಡಗೈ ಕೆಳಗೆ ಇಳಿಬಿಟ್ಟು ನಡುವನ್ನು ಸಮಗತಿಯಲ್ಲಿ ಬಗ್ಗಿಸುವುದಕ್ಕೆ 'ಸಮಹೆಜ್ಜೆ' ಎನ್ನುತ್ತಾರೆ. ಸ್ಥಾನದಲ್ಲಿ ನಿಂತು ಬಲಪಾದವಿಡುವುದಕ್ಕೆ ಏಕಪಾದ ದೃಢಕ್ರಮ ಅಥವಾ 'ಒಂದು ಹೆಜ್ಜೆ ಬಲಿವುದು' ಎಂದು ಹೇಳುವರು. ಇದರಲ್ಲಿ 'ಮೂರು ಹೆಜ್ಜೆ ಬಲಿವದು' 'ಜೋಡುಗಾಲು ಬಲಿವದು' 'ಮುಂಗತ್ತರಿ ತೊಲಗುವದು' ಜೋಡುಗಾಲು ಬಲಿದು ಹಿಂದಕ್ಕೆ ಹೆಜ್ಜೆ ತೆಗೆವುದು' ಹೀಗೆ ಅನೇಕ ವಿಧ. ಬಲಗಾಲು ಮುಂದೆ ಚಾಚಿ ಹಿಂದಕ್ಕೆ ಬಲದ ಮೊಳಕಾಲು ಬಗ್ಗಿಸುವುದಕ್ಕೆ 'ಮಂಡಿ ಮುರಿಯುವುದು' ಎಂದು ಹೇಳುತ್ತಾರೆ. ಮತ್ತೂ ಮಡಿಸಿ ಬೇರೆ ಬೇರೆ ರೀತಿಯಲ್ಲಿ ಮಾಡುವುದಕ್ಕೆ 'ಮಣಿಗು' ಎನ್ನುವರು. ಇದರಲ್ಲಿ 'ರಾಯರ ಮೆಚ್ಚಿನ ತಾನಕ' 'ತುರಂಗ ತಾನಕ' 'ಕಂತುಗತಿ' 'ಸುತ್ತುತಾನಕ' 'ಸಾಗಿ ಹೂಡುವ ತಾನಕ' ಇತ್ಯಾದಿ ಹಲವು ಪಾದಗತಿಗಳನ್ನು ಪರಿಚಯಿಸಲಾಗಿದೆ.

ಕೋಲು ಬೀಸುವುದು ಮತ್ತು ಬೀಸಿನ ವಿವಿಧ ತಂತ್ರಗಳು ಸಾಕಷ್ಟು ದೀರ್ಘವಾಗಿಯೇ ಬಂದಿದೆ. ಒಂದೆಡೆ ನಿಂತು ವೇಗವಾಗಿ ಬಂದಿಕೋಲಿನಿಂದ ಬೀಸುವುದು ಒಂದು ಬೀಸು ಎನಿಸಿಕೊಳ್ಳುತ್ತದೆ. ಕೋಲನ್ನು ಚಾಚಿ ಎರಡೂ ಕಡೆ ಶೀಘ್ರವಾಗಿ ಬೀಸುವುದೇ 'ವಡ್ಡಿ ಬೀಸುವುದು.' ಬೀಸುವುದರಲ್ಲಿ 'ಸಾಗಿ ಕಾಲಿಗೆ ಕಡಿವುದು' 'ಮೊನೆಯಿಕ್ಕಿ ಬೀಸುವುದು' 'ಇಟ್ಟು ಬೀಸುವುದು' 'ಎದೆಗೆ ಹಾರಿ ಬೀಸುವುದು' 'ಹಂದಿದಾಟು' ' ಅಮ್ಮಾಲೆ ಬೀಸು' 'ದೊಂಬಿಬೀಸು' ಎಂದು ಹತ್ತು ಬೀಸುಗಳನ್ನು ಶಾಸ್ತ್ರ ಸಿದ್ಧವಾದವು ಎನ್ನಲಾಗಿದೆ. ಇಬ್ಬರ ನಡುವೆ ಪರಸ್ಪರ ಇದಿರಾಗಿ ನಿಂತು ಬಂದಿಕೋಲಿನಿಂದ ಒಮ್ಮೆ ಹೊಡೆಯಲು 'ಒಂದನೆ ಪದಿತಳ' ಎನ್ನುತ್ತಾರೆ. ಇದರಲ್ಲಿ 'ಎರಡನೇ ಪದಿತಳ' 'ಮೂರನೇ ಪದಿತಳ' 'ನಾಲ್ಕು ವೇಟ್ಟಿನ ಪದಿತಳ' 'ಐದು ವೆಚ್ಚಿನ ಪದಿತಳ' ಎಂದು ಹೊಡೆತಕ್ಕೆ ಅನುಗುಣವಾಗಿ ಭಿನ್ನವಾಗಿದೆ. ಈ ಪಟ್ಟಿನಲ್ಲಿಯೆ 'ಒಳಂತರಿ' 'ಹೊರಅಂತರಿ' 'ಬಲಗಾಲು' ಮೊದಲಾದ ತಂತ್ರಗಳಿವೆ. ಹೀಗೆ ಬಂದಿಕೋಲಿನ ಇಪ್ಪತ್ತೆರಡು ಭೇದಗಳನ್ನು ವಿವರಿಸಲಾಗಿದೆ. ಅನಂತರ ಪದಿತಳದ ವಿಭೇದಗಳಾದ ಏಕಸರ, ಸೂಳಾಯಿತ, ಸಮ್ಮೇಳ, ವೈರಾಂಗಗಳನ್ನು ಹೆಸರಿಸಲಾಗಿದೆ. ಈ ಸಂದರ್ಭದಲ್ಲಿ ಕವಿ ಸಾಧಕನಿಗೆ ಬಹಳ ಮುಖ್ಯವಾದ ಸಲಹೆ ನೀಡುತ್ತಾನೆ. "ಯಾವ ಸ್ಥಳದಲ್ಲಿ ಮನಸ್ಸು ಇರುವದೋ ಆ ಸ್ಥಳದಲ್ಲಿ ದೃಷ್ಟಿ ಇರಬೇಕು, ಯಾವ ಸ್ಥಳದಲ್ಲಿ ದೃಷ್ಟಿಯಿರುವುದೋ ಆ ಸ್ಥಳದಲ್ಲಿ ಪಾದವಿರಬೇಕು. ಯಾವ ಸ್ಥಳದಲ್ಲಿ ಪಾದ ಇರುವದೊ ಆ ಸ್ಥಳದಲ್ಲಿ ಹಸ್ತ ಇರಬೇಕು. ಯಾವ ಸ್ಥಳದಲ್ಲಿ ಹಸ್ತ ಇರುವುದೋ ಆ ಸ್ಥಳದಲ್ಲಿ ವೆಟ್ಟುವಿರಬೇಕು." ಇದರ ಅರಿವು ಸಾಧಕನಿಗೆ ಅವಶ್ಯಕ.

ಖಡ್ಗಶಾಸ್ತ್ರದ ಪ್ರಕಾರ ಪಂಚಾಂಗವೆಂದರೆ ದೃಷ್ಟಿ, ಮನಸ್ಸು, ಪಾದ, ಹಸ್ತ, ಗಮನ ಎಂಬಿವು. ಇವುಗಳನ್ನು ಯಾರು ದೃಢಮನಸ್ಸಿನಿಂದ ನಡೆಸುವರೋ ಅವರಿಗೆ ಜಯ ನಿಶ್ಚಯ. ಗಮನದಲ್ಲಿ ಸಿಂಹಗಮನ, ಸರ್ಪಗಮನ, ಅಜಗಮನ ಎಂದು ಮೂರು ವಿಧ. ಕೋಲುಗಳನ್ನು ಹಿಡಿದು ಚಮಕಿ, ಫಾಲಭೇದನ, ಊರು ಭೇದನ, ದಹಣು, ಕರ್ಪರ ಭೇದನ, ಚಿತ್ರ ಚಮತ್ಕಾರ, ವದೆಯಾ, ಅಗಸವೇಟು, ಅದಿರುಗಾಯ ಮೊದಲಾದ ಬಗೆಗಳನ್ನು ಹೇಗೆ ಮಾಡಬೇಕೆಂಬುದನ್ನು ವಿವರಿಸಲಾಗಿದೆ. ಹೀಗೆ ಖಡ್ಗಶಾಸ್ತ್ರದಲ್ಲಿ ನಾನಾಬಗೆಯ ಕೌಶಲಗಳನ್ನು ವರ್ಣಿಸಿ ವೈರಿಗಳನ್ನು ಜಯಿಸುವ ಸಮರ ಕಲೆಯನ್ನು ತಿಳಿಸಲಾಗಿದೆ.

ಹಿಂದಿನ ಅಧ್ಯಾಯಗಳಲ್ಲಿ ಸಾಧನೆಗೆ ಪ್ರಶಸ್ತ ಸಮಯವನ್ನು ಚರ್ಚಿಸಿದ್ದ ಶಾಸ್ತ್ರಾಕಾರ ಗ್ರಂಥಾಂತ್ಯದಲ್ಲಿ ಸಾಧನೆಗೆ ನಿಷಿದ್ಧವಾದ ದಿನಗಳಾವುವೆಂಬುದನ್ನು ಚರ್ಚಿಸುತ್ತಾನೆ. ನಿದರ್ಶನಕ್ಕೆ ಅಷ್ಟಮಿಯಲ್ಲಿ ಅರ್ಥಹಾನಿ, ಚತುರ್ದಶಿಯಲ್ಲಿ ಶಿಷ್ಯ ಹಾನಿ, ಅಮಾವಾಸ್ಯೆಯ ಪಾಡ್ಯದಲ್ಲಂತು ಗರುಡಿ ಆಚಾರ್ಯರಾಗಲಿ ಮತ್ತು ಶಿಷ್ಯರಿಂದಾಗಲಿ ಸಾಧನೆ ಮಾಡಲೇಬಾರದು. ಸಾಧನೆಗೆ ಉದಯಕಾಲ ಮತ್ತು ಸಾಯಂಕಾಲ ಸೂಕ್ತಕಾಲ ಎಂಬುದು ಶಾಸ್ತ್ರಕಾರನ ಮತ. ಗ್ರಾಮೀಣ ಭಾಗದಲ್ಲಿ ಯಾವುದೇ ಕಲಿಕೆಗೆ ಮತ್ತು ಅಭ್ಯಾಸ ಮಾಡುವುದಕ್ಕೆ ಈ ಕಾಲವನ್ನೇ ಆಯ್ದುಕೊಳ್ಳುವುದನ್ನು ನೋಡಿದಾಗ ಇಂಥ ಒಂದು ಅಭ್ಯಾಸ ಎಷ್ಟು ಪ್ರಾಚೀನ ಎನ್ನುವುದನ್ನು ಅರಿಯಬಹುದು.

ಗರುಡಿಯಲ್ಲಿ ನಡೆಸುವ ಸಾಧನೆಗೆ ಶತ್ರುಗಳ ಮೇಲೆ ವಿಜಯ ಸಾಧಿಸುವುದು ಮಾತ್ರ ಉದ್ದೇಶವಲ್ಲ. ಇದರಿಂದ ಆರೋಗ್ಯಲಾಭವೂ ಇದೆ ಎಂಬುದು ಶಾಸ್ತ್ರಕಾರನ ಆಶಯ. 'ಕಾಲಸಾಧನೆ'ಯಿಂದ ಪಿತ್ತನಾಶ, 'ಖಂಡೇದ ಸಾಧನೆ'ಯಿಂದ ಶ್ಲೇಷ್ಮಹರ, 'ಜಟ್ಟಿಸಾಧನೆ'ಯಿಂದ ವಾತನಾಶ ಎಂದು ಇದರ ಪ್ರಯೋಜವನ್ನು ಅರುಹಲಾಗಿದೆ. ಬೆವರನ್ನು ನಿಯಂತ್ರಿಸಲು ದೇಹಕ್ಕೆ ಕೆಮ್ಮಣ್ಣು ಹಾಕಿಕೊಳ್ಳಬೇಕು ಎಂದಿದ್ದು ಇದು ಗರುಡಿಯಲ್ಲಿ ಇಂದಿಗೂ ಅನುಸರಿಸುತ್ತಿರುವ ಪದ್ಧತಿಯಾಗಿದೆ. ಕೃತಿಯ ಕಡೆಯಲ್ಲಿ 'ಒಂದು ಕೈಯಲ್ಲಿ ಮಾಡುವ ಸಾಧನೆಯು ಆವುದು ಅದು ಪುರುಷಸಾಧನೆಯಾಗುವುದು ಎರಡು ಕೈಯಿಂದ ಸಾಣಾಕತ್ತಿ ಹಿಡಿದು ಸಾಧನೆ ಮಾಡುವ ಸಾಧನೆಯು ಸ್ತ್ರೀ ಸಾಧನೆಯೆನಿಸಿಕೊಂಬುದು' ಎಂಬ ನುಡಿಗಳಿಂದ ಕೃತಿಗೆ ಮಂಗಳ ಹಾಡಲಾಗಿದೆ.

ಒಟ್ಟಾರೆ ಖಡ್ಗಶಾಸ್ತ್ರದಲ್ಲಿ ಕವಿ ವ್ಯಾಸಮಹಾಭಾರತದ

ಆದಿಪರ್ವದಲ್ಲಿ ಬರುವ ಆಯುಧಶಾಸ್ತ್ರಗಳ ವಿಚಾರವನ್ನು ಇಟ್ಟುಕೊಂಡು ಸ್ವತಂತ್ರವಾದ ಶಾಸ್ತ್ರಗ್ರಂಥವಾಗಿ ರೂಪಿಸುವಲ್ಲಿ ಯಶಸ್ವಿಯಾಗಿದ್ದಾನೆ. ವ್ಯಾಸಭಾರತವನ್ನಾಧರಿಸಿ ರಚಿತವಾದ ಕುಮಾರವ್ಯಾಸ ಭಾರತದಲ್ಲಿ ಆದಿಪರ್ವದ ಆರು ಮತ್ತು ಏಳನೇ ಸಂಧಿಯಲ್ಲಿ ಕ್ವಚಿತ್ತಾಗಿ ಖಡ್ಗಶಾಸ್ತ್ರ ಕಾಣಿಸಿಕೊಂಡಿದೆ. 'ಗರುಡಿ ಪೂಜಾವಿಭವ' ಎಂದು ಕುಮಾರವ್ಯಾಸ ಹೇಳಿದ್ದರೂ ಅದರ ವಿವರಗಳಿಗೆ ಹೋಗುವುದಿಲ್ಲ. ಹಾಗೆಯೇ ೩೨ ಆಯುಧಗಳನ್ನು ಹೆಸರಿಸಿದ್ದರೂ ಯಾರ್‍ಯಾರು ಯಾವ ಶಸ್ತ್ರದಲ್ಲಿ ಪರಿಣಿತರೆಂಬುದನ್ನು ಮೊಟುಕಾಗಿ ತಿಳಿಸಿಬಿಡುತ್ತಾನೆ. ಆದರೆ ಪ್ರಸ್ತುತ ಖಡ್ಗಶಾಸ್ತ್ರವು ಮಲ್ಲವಿದ್ಯೆ, ಕತ್ತಿವರಸೆ, ಕುಸ್ತಿ ಮುಂತಾದವನ್ನು ಕಲಿತು ಸಾಧನೆ ಮಾಡುವ ವಿಧಾನವನ್ನು ನಿರೂಪಿಸುತ್ತದೆ. ಇದರಲ್ಲಿ ವೈದಿಕ ನೆಲೆಯ ಸಾಂಪ್ರದಾಯಿಕ ಆಲೋಚನೆಗಳಿದ್ದರೂ ಅದರ ಇತಿಮಿತಿಗಳಾಚೆ ನೋಡಿದಾಗ ಪ್ರಸ್ತುತ ಗ್ರಂಥ ಸಂಪೂರ್ಣ ಮಾನವವಿರೋಧಿಯಲ್ಲವೆಂಬುದು ಖಚಿತವಾಗುತ್ತದೆ. ಖಡ್ಗಶಾಸ್ತ್ರ ಜ್ಞಾನ ಮತ್ತು ಕೌಶಲಗಳು ಬೇರೆ ಎಂಬುದನ್ನು ಸೂಚಿಸುತ್ತದೆ ಮತ್ತು ಸಂಸ್ಕೃತಿ ತಿಳುವಳಿಕೆಯ ಸಶಕ್ತ ನೆಲೆಯನ್ನು ಕಟ್ಟಿಕೊಡುತ್ತದೆ. ಇಂಥ ಗ್ರಂಥಗಳ ಪರಿಷ್ಕರಣೆ ಮತ್ತು ಪ್ರಕಟಣೆಯಿಂದ ನಮ್ಮ ಪೂರ್ವಿಕರಲ್ಲಿದ್ದ ವಿವಿಧ ಜ್ಞಾನ ಶಿಸ್ತುಗಳ ದರ್ಶನವಾಗುತ್ತದೆ. ಇಲ್ಲಿನ ಸಂಗತಿಗಳನ್ನು ಸಮಕಾಲೀನ ಸಮರಕಲೆಗಳ ವಿವಿಧ ತಂತ್ರಗಳೊಡನೆ ತೌಲನಿಕವಾಗಿ ಅಭ್ಯಾಸ ಮಾಡಬಹುದು. ಇಂಥ ಕೃತಿಗಳು ವರ್ತಮಾನಕ್ಕೂ ಪ್ರಸುತವಾಗುವಂಥ ನೂತನದೃಷ್ಟಿ ಕೋನದಿಂದ ನೋಡಬೇಕಾದ ಅಗತ್ಯವಿದೆ.

ಖಡ್ಗಶಾಸ್ತ್ರದಲ್ಲಿ ಬರುವ ಟೀಕಿನ ಭಾಷೆ ಸರಳವಾಗಿದೆ. ಇದಕ್ಕೆ ನಿದರ್ಶನವಾಗಿ

'ಶ್ಲೋ॥ ಶ್ರೀ ಮಂತ್ರಂ ನತರಕ್ಷಾರ್ಥಂ ಕರುಣಾಯುತ ಮಾನಸಂ
ಲೀಲಾ ಮದನ ಗೋಪಾಲಂ ಜಗನ್ನಾಥ ಮಹಂಭಜೆ ॥

*ಟೀಕು-ಶ್ರೀಮಂತಂ / ಲಕ್ಷ್ಮೀವಂತನಾಗಿಯಿದ್ದಂಥಾ / ನತರಾಕ್ಷಾರ್ಥಂ/ ಭಕ್ತರ ದಕ್ಷಿಣ್ಯ ಕ್ಕೋಸ್ಕರ / ಕರುಣಾಯುತ ಮಾನಸಂ / ಎದೆಯುಳ್ಳ ಮನಸ್ಸು ಉಳ್ಳವನಾಗಿ / ಲೀಲಾಮಧನಗೋಪಾಲಂ / ವಿಲಾಸಾರ್ಥವಾಗಿ ಮದನಗೋಪಾಲ ಮೂರ್ತಿಯಾಗಿ ಯಿದ್ದಂಥಾ ಜಗನ್ನಾಥಂ / ಜಗನ್ನಾಥ ಸ್ವಾಮಿಯನು / ಮಹಂ / ನಾನು / ಭಜೇ/ ಸೇವಿಸೇನು/*

ಖಡ್ಗಶಾಸ್ತ್ರದಲ್ಲಿ ಪಾರಿಭಾಷಿಕ ಶಬ್ದಗಳು ಹೇರಳವಾಗಿವೆ. ಸಂಸ್ಕೃತ ಶಬ್ದಗಳಿಗೆ ಟೀಕುವಿನಿಲ್ಲಿ ಪರ್ಯಾಯವಾಗಿ ಕನ್ನಡ ಶಬ್ದಗಳನ್ನು ನೀಡಿದ್ದಾನೆ. ಇವು ಕನ್ನಡ ನಿಘಂಟಿಗೆ ಕೊಡುಗೆಯಾಗಬಲ್ಲವು.

**ಬಾಣಗಾರಿಕೆ**

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ 'ಬಾಣಗಾರಿಕೆ' ಮತ್ತು 'ಬಾಣತಯಾರಿಕೆ' ಎಂಬ ಕೃತಿಗಳಿವೆ. ಬಾಣಗಾರಿಕೆ ಕೃತಿಯು ಕೆ.ಎ. ೪೩೩ ಸಂಸ್ಥೆಯ ಕಾಗದದ ಪ್ರತಿಯಾಗಿದೆ. ಕೇವಲ ಒಂಭತ್ತು ಪುಟಗಳ ಕಿರುಕೃತಿ. ಹಸ್ತಪ್ರತಿ ಅಲ್ಲಲ್ಲಿ ಲುಪ್ತವಾಗಿರುವುದರಿಂದ ಗ್ರಂಥ ಅಪೂರ್ಣವಾಗಿದೆ. 'ಕೃತಿಯ ಆರಂಭದಲ್ಲಿ ಕೆಲವು ಪದ್ಯಗಳು ಅಪೂರ್ಣವಾಗಿದೆ. ಕೋಗಿಲೆ ದನಿ ಮಾಡಿತು ದುಂಬಿವಿಂಡು ಹಾಡಿತು' ಎಂಬಂಥ ಪದ್ಯವಿದೆ. ಅನಂತರದ ಗದ್ಯದಲ್ಲಿ ಬಾಣ ಬಿರುಸುಗಳನ್ನು ತಯಾರಿಸುವ ಕ್ರಮ, ಬೇಕಾಗುವ ಸಾಮಗ್ರಿ ಮತ್ತು ಅದರ ಪ್ರಮಾಣ ಹೇಳಲಾಗಿದೆ. ಮಿಸುಕು, ಕೈಬಿರುಸು, ಆಕಾಶಬಾಣ, ಮುತ್ತಿನ ಕೈ ಬತ್ತಿ, ಹುಯಿಲಬಾಣ, ಚಂದ್ರಜ್ಯೋತಿ, ಮರೆಬಿರಸು, ನೆಣಬಾಣ, ಆನೆವೈರಿ ಬೆರಸಿಗೆ, ಹೂರದ ಹೂವು, ಹಾವುಮಿಸುನಿ, ಮುತ್ತಿನಚೆಂಡು, ಸಂಪಗೆ ಹೂವು ಮೊದಲಾದ ಬಾಣಗಳನ್ನು ಸಿದ್ಧಪಡಿಸುವ ವಿಧಾನವಿದೆ. ಇವುಗಳಿಗೆ ಪ್ರಧಾನವಾಗಿ ಬಳಸುವ ಸಾಮಗ್ರಿಗಳೆಂದರೆ ಉಪ್ಪು ಗಂಧಕ, ಕರಿ ಮುಂತಾದವುಗಳನ್ನು ಪ್ರಸ್ತಾಪಿಸಿದೆ.

'ಬಾಣತಯಾರಿಕೆ' ಕೆ.೧೮೮೦೩ನೆಯ ಸಂಖ್ಯೆಯ ಹಸ್ತಪ್ರತಿಯು ತಾಡೋಲೆ ಹಸ್ತಪ್ರತಿಯಾಗಿದೆ. ಕೇವಲ ಒಂದೇ ಒಂದು ಪುಟವನ್ನೊಳಗೊಂಡಿದೆ. ಇದರಲ್ಲಿಯೂ ಅಗ್ನಿಬಾಣ ಮುಂತಾದವುಗಳಿಗೆ ಅಗತ್ಯವಾದ ಸಿಡಿಮದ್ದುಗಳ ತಯಾರಿಕೆಯನ್ನು ಹೇಳಲಾಗಿದೆ. ಇವೆರಡೂ ಕೃತಿಗಳು ತಮ್ಮ ಸ್ವರೂಪದಲ್ಲಿ ಬೇರೆ ಎಂಬಂತೆ ಭಾಸವಾಗುತ್ತದೆ. ಇವುಗಳ ವಸ್ತು ನಿರೂಪಣೆ ಹಿನ್ನಲೆಯಲ್ಲಿಯೇ ಹೇಳುವುದಾದರೆ ಈ ಕೃತಿಗಳು ಶಾಸ್ತ್ರ ಸ್ವರೂಪ ಪಡೆದಿಲ್ಲ.

❑❑

# ವ್ಯವಸ್ಥಾಪನೆಯಲ್ಲಿ ಅಧಿಕಾರ ಶ್ರೇಣಿ – ಶಾಸನಾಧಾರಿತ ಸಮೀಕ್ಷೆ

– ಸಿ.ಯು. ಮಂಜುನಾಥ್

**ಪ್ರಾ**ಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ವ್ಯವಸ್ಥಾಪನೆಯ ಅಧಿಕಾರ ಶ್ರೇಣಿಯ ಸ್ವರೂಪದ ಒಂದು ಚಿತ್ರವನ್ನು ಶಾಸನಗಳ ಉಲ್ಲೇಖಗಳ ಆಧಾರದಿಂದ ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಒಂದು ಸಾಮ್ರಾಜ್ಯದ ಅಥವಾ ರಾಜ್ಯದ ಆಡಳಿತ ನಿರ್ವಹಣೆ ಒಂದು ಬೃಹತ್ತಾದ ವ್ಯವಸ್ಥೆ. ಅದು ಸಾವಿರಾರು ವರ್ಷಗಳಲ್ಲಿ ಅಭಿವೃದ್ಧಿ ಹೊಂದಿ ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆದಿರುತ್ತದೆ. ಕಾಲದಿಂದ ಕಾಲಕ್ಕೆ ಆಡಳಿತ ವ್ಯವಸ್ಥಾಪನೆಯಲ್ಲಿ ಆಯಾ ಕಾಲದ ಅಗತ್ಯಾನುಸಾರ ಮಾರ್ಪಾಟುಗಳು ಹಾಗೂ ಸುಧಾರಣೆಗಳು ಆಗುತ್ತಿರುತ್ತವೆ.

ಒಂದು ರಾಜ್ಯದ ಆಡಳಿತವನ್ನು ಪ್ರಧಾನವಾಗಿ ರಾಜ್ಯಾಡಳಿತ ಅಥವಾ ಕೇಂದ್ರಾಡಳಿತ ಮತ್ತು ಊರುಗಳ ಆಡಳಿತ ಅಥವಾ ಸ್ಥಳೀಯ ಆಡಳಿತವೆಂದು ಸ್ಥೂಲವಾಗಿ ವಿಭಾಗಿಸಬಹುದು. ಈ ಆಡಳಿತಗಳೆರಡೂ ಪರಸ್ಪರ ಅವಲಂಬಿಗಳಾದುದರಿಂದ ಈ ವಿಭಾಗ ಅಭ್ಯಾಸದ ಸೌಕರ್ಯದ ದೃಷ್ಟಿಯಿಂದ ಮಾಡಿಕೊಂಡಿರುವುದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ರಾಜ್ಯಾಡಳಿತದ ಅಂಗಗಳನ್ನು 'ಸಪ್ತಾಂಗ' ಗಳೆಂದು ಪ್ರಾಚೀನ ಕಾಲದಿಂದಲೂ ಶಾಸ್ತ್ರಗ್ರಂಥಗಳು ಗುರುತಿಸಿವೆ. ಅರ್ಥಶಾಸ್ತ್ರದಲ್ಲಿ ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ದಂಡ ಮತ್ತು ಮಿತ್ರ – ಇವು ಸಪ್ತಾಂಗಗಳೆಂದು ಹೆಸರಿಸಲಾಗಿದೆ. ಕನ್ನಡ ಶಾಸನಗಳು ಅವನ್ನು ಸಪ್ತಾಂಗಗಳೆಂದು ಕರೆದಿವೆ. [(ರೈ) ಎಕ V ಬೇಲೂರು ೧೯೩ ಕ್ರಿ.ಶ. ೧೧೬೦] ಒಂದು ಶಾಸನ ಅವನ್ನು ಹೆಸರಿಸಿದೆ. 'ಸ್ವಾಮ್ಯಮಾತ್ಯ ಸುಹೃತ್ಕೋಶ ದೇಶದುರ್ಗ ಬಲಮೆಂಬ ಸಪ್ತಾಂಗ ಸಂಪತಿಯೊಳದ್ವಿತೀಯನೆನಿಸಿಯುಂ' (ಎಸ್‌ಐಐ XVIII ಹಾವೇರಿ ೨೪೨ ಕ್ರಿ.ಶ. ೧೩ನೇ ಶತಮಾನ) ಸೂಕ್ತಿಸುಧಾರ್ಣವದಲ್ಲಿ ಅರಸ, ಪೆಗಡೆ, ಜನಪದ, ಕೋಟೆ, ಕೋಶ, ಬಲ ಮತ್ತು ಮಿತ್ರನೆಂದು ಪಟ್ಟಿ ಮಾಡಲಾಗಿದೆ. (ಸೂಕ್ತಿ ಸುಧಾರ್ಣವ ೧೬–೪೭) ಬಿಡಿಬಿಡಿಯಾಗಿ ನೋಡಿದಾಗ ರಾಜ್ಯಾಂಗಗಳು ಗೌಣವಾಗಿ ಕಂಡುಬರಬಹುದಾದರೂ ಒಂದಕ್ಕೊಂದು ಪೂರಕವಾಗಿರುವುದರಿಂದ ಪರಸ್ಪರ ಬಲವನ್ನು ಪಡೆಯುತ್ತವೆ. ರಾಜ್ಯಾಂಗಗಳಲ್ಲಿ ರಾಜ, ಅಮಾತ್ಯ ಆಡಳಿತಾತ್ಮಕವಾಗಿ ಹೆಚ್ಚು ಪ್ರಮುಖವಾಗಿದ್ದುದನ್ನು ಎ.ಎಸ್. ಆಲ್ಟೇಕರ್ ಗುರುತಿಸಿದ್ದಾರೆ. (ಸ್ಟೇಟ್ ಅಂಡ್ ಗೌರ್ನಮೆಂಟ್ ಇನ್ ಏನ್ಸಿಯಂಟ್ ಇಂಡಿಯಾ ಪು. ೪೫) ಸಪ್ತಾಂಗಗಳ ಪಟ್ಟಿಯಲ್ಲಿ ಅಲ್ಪ ಸಲ್ಪ ವ್ಯತ್ಯಾಸಗಳು ಕಂಡುಬರುತ್ತವೆ.

## ರಾಜ

ಪ್ರಾಚೀನ ಭಾರತದಲ್ಲಿ ರಾಜರು ಮೂಲತಃ ದೈವಾಂಶ ಸಂಭೂತರೆಂದು ಅಭಿಪ್ರಾಯವಿದ್ದಿತು. ಬಹುಮಟ್ಟಿಗೆ ಎಲ್ಲ ರಾಜವಂಶಗಳೂ ದೈವೀಪುರುಷನೊಬ್ಬನಿಂದ ಇಳಿದು ಬಂದವೆಂದು ಹೇಳುವುದರಲ್ಲಿ ಹೆಮ್ಮೆ ಪಟ್ಟವೆ. ಹೊಯ್ಸಳ ವಿಷ್ಣುವರ್ಧನನನ್ನು ವಿಷ್ಣುವಿನ ಅವತಾರಗಳ ಹಿನ್ನೆಲೆಯಲ್ಲಿ ಒಂದು ಶಾಸನ ಹೀಗೆ ವರ್ಣಿಸಿದೆ:

**ಪದದೊಳ್ ಕೂರ್ಮಸ್ವರೂಪಂ ನಯನಯುಗದೊಳ್‌ಮತ್ಸ್ಯರೂಪಂಘನಗ್ರೀ**
**ಪದೊಳಾದಿ ಕ್ರೋಡರೂಪಂ ನಡುವಿನೊಳೆ ನೃಸಿಂಹಮಾತ್ಮ ಪ್ರಭಾವಾಸ್ಪ**
**ದದೊಳ್ ರಾಮ ತ್ರಯತ್ವಂ ಮತಿವಿಕಸನದೊಳ್ ಬುದ್ಧರೂಪಾಗಿಪ್ಪ ಗುಜ್ಜಾಗದ**
**ಕಲಿತ್ವಕ್ಕೆ ಮೆಯ್ದಾರದ ಹರಿಯೆನಿಪಂ ವಿಷ್ಣುಜಿಷ್ಣು ಕ್ಷಿತೀಶಂ॥**

[(ರೈ) ಎಕ V ಹಾಸನ ೫೩. ಕ್ರಿ.ಶ. ೧೧೭೦]

ರಾಜರು ದೈವಾಂಶ ಸಂಭೂತರೆಂಬ ಅಭಿಪ್ರಾಯ ರೂಢಿಗತವಾಗಿ ಬಂದದ್ದರಿಂದ ಇಡೀ ಜನ ಸಮುದಾಯ ರಾಜನಲ್ಲಿ ಉನ್ನತ ಆದರ್ಶಗಳನ್ನು ಹಾಗೂ ಅತಿಮಾನವ ಶಕ್ತಿಯನ್ನು ನಿರೀಕ್ಷಿಸುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ. ರಾಜಪದವಿಗೆ ಪರಿಪೂರ್ಣ ಅರ್ಹರನ್ನಾಗಿ ಮಾಡಲು ಬಾಲ್ಯದಿಂದಲೇ ಅತ್ಯುತ್ತಮವಾದ ಎಲ್ಲ ಶಿಕ್ಷಣವನ್ನು ರಾಜಕುಮಾರರಿಗೆ ನೀಡಲಾಗುತ್ತಿತ್ತು. ಅವರಿಗೆ ಶಸ್ತ್ರ ಶಾಸ್ತ್ರಗಳೆರಡರಲ್ಲೂ ಪ್ರಾವೀಣ್ಯವನ್ನು ಕೊಡಲು ಪ್ರಯತ್ನಿಸಲಾಗುತ್ತಿತ್ತು.

ಕಲ್ಯಾಣಿ ಚಾಲುಕ್ಯರ ಸಾಮಂತರಾಜನಾದ ವೀರ ಪಾಂಡ್ಯನು ಶಸ್ತ್ರ ಶಾಸ್ತ್ರಗಳಲ್ಲಿ ಪ್ರಾವೀಣ್ಯ ಪಡೆದಿದ್ದನೆಂದು ಶಾಸನವೊಂದು ನಿರೂಪಿಸುತ್ತದೆ. (ಎಸ್.ಐ.ಐ IX(i)

# ೧೪೪೮, ೭ನೇ 'ಸಿ' ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಕೆ.ಎಚ್. ಲೇಔಟ್, ವಿಜಯನಗರ ೨ನೇ ಹಂತ, ಬೆಂಗಳೂರು ೫೬೦ ೦೪೦

ಹರಪನಹಳ್ಳಿ ೨೬೭ ಕ್ರಿಶ. ೧೧೬೦) ಅನೇಕ ಶಾಸನ ಉಲ್ಲೇಖಗಳು ರಾಜರು ಅನೇಕ ಶಾಸ್ತ್ರ ಮತ್ತು ಶಸ್ತ್ರ ವಿದ್ಯೆಗಳಲ್ಲಿ ಪರಿಣತರಾಗಿದ್ದರೆಂಬುದನ್ನೂ ಖಚಿತಪಡಿಸುತ್ತವೆ. [(ರೈ) ಎಕ V ಚೆನ್ನರಾಯ ಪಟ್ಟಣ ೨೦೩ ಕ್ರಿಶ. ೧೨೨೩, ಕ ಇ IV ಹಿರೇಕೆರೂರು ೧ ಕ್ರಿಶ. ೧೨೦೪, (ರೈ), ಎಕ XII ತುಮಕೂರು ೩೮ ಕ್ರಿಶ. ೧೧೬೦]

ರಾಜಮನೆತನಗಳ ಆಡಳಿತ ಬಹುಮಟ್ಟಿಗೆ ಅನುವಂಶಿಕವಾಗಿ ನಡೆದು ಬಂದಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ರಾಜನ ಹಿರಿಯ ಮಗನಿಗೆ ಸಿಂಹಾಸನದ ಅಧಿಕಾರ ದೊರೆಯುತ್ತಿತ್ತು. ಮನುವಿನ ಅಭಿಪ್ರಾಯದಲ್ಲಿ 'ಮೊದಲ ಮಗನು ಜನಾಂಗದ ಮುಂದುವರಿಕೆಯ ಅಗತ್ಯವಾಗಿದ್ದಾನೆ. ಅವನೇ ಕರ್ತವ್ಯದ ಮಗ. ಆದ್ದರಿಂದ ಅವನಿಗೇ ಎಲ್ಲ ಆಸ್ತಿ ದೊರೆಯಬೇಕು ಆನಂತರದ ಮಕ್ಕಳೇನಿದ್ದರೂ ಬಯಕೆಯಿಂದ ಹುಟ್ಟಿದವರು.'

[ಕೇವಲ್ ಮೊಟ್ವಾನಿ : ಮನುಧರ್ಮ ಶಾಸ್ತ್ರ ಪು. ೧೨೦]

ಸಾಮಾನ್ಯವಾಗಿ ಮೊದಲನೆಯ ಮಗನಿಗೆ ಅಧಿಕಾರ ನೀಡುವುದು ಸಂಪ್ರದಾಯ. ಹೊಯ್ಸಳ ಎರೆಯಂಗನ ಹಿರಿಯ ಮಗ ಬಲ್ಲಾಳ ಸುಮಾರು ಎಂಟು ವರ್ಷ ರಾಜ್ಯಭಾರ ಮಾಡಿದ ನಂತರ ಅವನ ತಮ್ಮ ವಿಷ್ಣುವರ್ಧನ ರಾಜ್ಯಭಾರದ ಜವಾಬ್ದಾರಿ ಹೊತ್ತಿರುವುದು ಕಂಡು ಬರುತ್ತದೆ.

ರಾಜನಾಗಬೇಕಾದವನು ತುಂಬ ಚಿಕ್ಕ ವಯಸ್ಸಿನವಾಗಿದ್ದರೆ ಅಂಥ ಸಮಯದಲ್ಲಿ ಮಂತ್ರಿಗಳು ರಾಜ ಪ್ರತಿನಿಧಿಗಳಂತೆ ರಾಜ್ಯವನ್ನು ಆಳುತ್ತಿದ್ದರು. ವಿಷ್ಣುವರ್ಧನ ಮರಣ ಹೊಂದಿದಾಗ ಅವನ ಮಗ ನರಸಿಂಹನಿಗೆ ಕೇವಲ ಎಂಟು ವರ್ಷ. ಬಹುಶಃ ಈ ಕಾರಣದಿಂದ ಮಂತ್ರಿಗಳು ರಾಜ್ಯಭಾರದ ಹೊಣೆಯನ್ನು ಕೆಲವು ವರ್ಷಗಳವರೆಗೆ ನಿರ್ವಹಿಸಿರಬೇಕು. [ಜೆ.ಡಿ.ಎಂ. ಡೆರೆಟ್; ದ ಹೊಯ್ಸಳಾಸ್ ಪು ೬೮–೬೯] ಕೆಲವು ಸಾರಿ ಮಗನ ತಂದೆಯ ವಿರುದ್ಧ ದಂಗೆಯೆದ್ದು ಹೋರಾಡಿರುವುದೂ ಉಂಟು. ಎರಡನೆಯ ಬಲ್ಲಾಳ ತನ್ನ ತಂದೆ ನರಸಿಂಹನ ವಿರುದ್ಧ ತಿರುಗಿ ಬಿದ್ದಿರುವುದು ಶಾಸನೋಕ್ತವಾಗಿದೆ. 'ಕುಮಾರ ಬಲ್ಲಾಳ ದೇವನು ತಮ್ಮಯ್ಯಂಗೆ ತಪ್ಪಿ ಬಂದು ತಳಿಗೆ ನಾಡಂ..' [ಎಂ.ಎ.ಆರ್ ೧೯೩೨ ಚಿಕ್ಕಮಗಳೂರು ೩೪ ಕ್ರಿಶ. ೧೧೭೩].

ಸಾಮಾನ್ಯವಾಗಿ ಹಿರಿಯ ರಾಜಕುಮಾರ ಯುವರಾಜನೆಂದು ನೇಮಕ ಹೊಂದುತ್ತಿದ್ದ. ಅವನು ಭಾವಿರಾಜನೆಂದು ಪರಿಭಾವಿತನಾಗಿ ಅದರ ಸಂಕೇತವಾಗಿ ಒಂದು ಕಂಠಹಾರವನ್ನು ಧರಿಸುತ್ತಿದ್ದ; ಚಾಳುಕ್ಯ ಎರಡನೆಯ ಸೋಮೇಶ್ವರ ಸಿಂಹಾಸನಾರೋಹಣ ಸಂದರ್ಭದಲ್ಲಿ ಅದನ್ನು ತೆಗೆದ ಹಾಗೆ ತಿಳಿದು ಬರುತ್ತದೆ. [ಬಿ.ಆರ್. ಗೋಪಾಲ್; ದ ಚಾಲುಕ್ಯಾಸ್ ಆಫ್ ಕಲ್ಯಾಣ ಅಂಡ್ ದ ಕಲಚುರಿಸ್ ಪು ೩೮೯] ಯುವರಾಜನು ರಾಜನಾಗಿ ಸಿಂಹಾಸನವನ್ನು ಏರಲು ಸಾಮಾನ್ಯವಾಗಿ ಇಪ್ಪತ್ನಾಲ್ಕು ವರ್ಷಗಳಾಗಿರಬೇಕಿತ್ತು. ಸಿಂಹಾಸನಾರೋಹಣವನ್ನು ಪಟ್ಟಬಂಧ, ಪಟ್ಟಬಂಧನೋತ್ಸಾಹ, ಮುಂತಾದ ಹೆಸರುಗಳಿಂದ ಶಾಸನಗಳಲ್ಲಿ ಕರೆಯಲಾಗಿದೆ. ರಾಜ್ಯಾಭಿಷೇಕ ತುಂಬ ವೈಭವದ ಸಮಾರಂಭವಾಗಿದ್ದು ಇಡೀ ರಾಜ್ಯದ ಉತ್ಸವದಂತೆ ಆಚರಿಸಲ್ಪಡುತ್ತಿತ್ತು. [ಡೆರೆಟ್ : ಪೂರ್ವೋಕ್ತ ಪು. ೭೮–೭೯] ಅಲ್ಲದೆ ದೇವಾಲಯಗಳಲ್ಲಿ ವಿಶೇಷ ಪೂಜಾಕಾರ್ಯಗಳು ಮತ್ತು ದಾನ ಕಾರ್ಯಗಳು ಅಧಿಕವಾಗಿ ನಡೆಯುತ್ತಿದ್ದವು. [(ರೈ) ಎಕ V ಬೇಲೂರು ೧೧೮ ಪು. ೧೧೭೩].

ಯುವರಾಜನಾಗಿದ್ದಾಗಲೇ ರಾಜ್ಯಾಡಳಿತದ ಪ್ರತ್ಯಕ್ಷ ಅನುಭವ ದೊರಕಲೆಂದು ಕೆಲವು ಪ್ರದೇಶಗಳನ್ನು ಆಳಲು ನೇಮಿಸುತ್ತಿದ್ದುದುಂಟು. ಇಂಥ ಆಳ್ವಿಕೆಗಳನ್ನು ಕುಮಾರ ವೃತ್ತಿ ಎಂದು ಕರೆಯುತ್ತಿದ್ದರೆಂದು ಕಾಣುತ್ತದೆ. [ಎಸ್‌ಐಐ XVII ಹಾವೇರಿ ೨೩೧ ಕ್ರಿಶ. ೧೨೪೮. ಗುಪ್ತವಂಶದ ವಿಕ್ರಮಾದಿತ್ಯ ಹೆಬ್ಬಳ್ಳಿಯನ್ನು ಕುಮಾರ ವೃತ್ತಿಯಿಂದ ಆಳುತ್ತಿದ್ದಂತೆ ತಿಳಿದು ಬರುತ್ತದೆ.] ಎರಡನೆಯ ಬಲ್ಲಾಳನಿಗೆ ಕ್ರಿಶ. ೧೧೭೩ರಲ್ಲಿ ಪಟ್ಟಾಭಿಷೇಕ ಆದರೂ ಕ್ರಿಶ. ೧೧೬೫ರಲ್ಲೇ ಅವನು ಕೆಲವು ಪ್ರದೇಶಗಳನ್ನು ಆಳುತ್ತಿದ್ದ ವಿಷಯಶಾಸನೋಕ್ತವಾಗಿದೆ. [(ರೈ) ಎಕ. V ಚೆನ್ನರಾಯಪಟ್ಟಣ ೨೧೦ ಕ್ರಿಶ. ೧೧೬೫]

ರಾಜ್ಯದ ರಾಜಧಾನಿಗಳನ್ನು ಶಾಸನಗಳು 'ನೆಲೆವೀಡು' ಎಂದು ಸಾಮಾನ್ಯವಾಗಿ ಕರೆದಿವೆ. ಕೆಲವು ಶಾಸನಗಳಲ್ಲಿ 'ಸ್ಕಂಧವಾರ'ಗಳೆಂದು ಕರೆದಿರುವುದುಂಟು. 'ನೆಲೆವೀಡು' ಈ ವಿಷಯದಲ್ಲಿ ವಿದ್ವಾಂಸರು ಕೆಲವು ಚರ್ಚೆಗಳನ್ನು ಮಾಡಿರುವುದುಂಟು. ಇದು ಬಹುಮಟ್ಟಿಗೆ ರಾಜಧಾನಿಯನ್ನು ಸೂಚಿಸಿದರೂ ಹಲವು ಸಂದರ್ಭಗಳಲ್ಲಿ ಯಾವ ಊರಿನಲ್ಲಿ ರಾಜನು ಬೀಡುಬಿಟ್ಟಿದ್ದನೆಂಬುದನ್ನು ಸೂಚಿಸುತ್ತದೆ. ಎಂದು ಎಂ.ಎಂ. ಕಲಬುರ್ಗಿಯವರು ಸೂಚಿಸಿದ್ದಾರೆ. [**ರಾಜಧಾನಿ ಒಂದು ಸ್ಪಷ್ಟನೆ'** ಸಾಧನೆ ೧೦–೧ ಪು.೩೨–೩೫]

ಇಡೀ ರಾಜ್ಯದ ಜವಾಬ್ದಾರಿ ರಾಜನ ಮೇಲಿದ್ದುದರಿಂದ ಅವನ ಕರ್ತವ್ಯಗಳು ಬಹುಮುಖವಾಗಿರುತ್ತಿದ್ದವು. ಅವುಗಳಲ್ಲಿ ಪ್ರಮುಖವಾಗಿ ದುಷ್ಟಶಿಕ್ಷೆ, ಶಿಷ್ಟ ರಕ್ಷಣೆ, ಸ್ವರಕ್ಷಣೆ ಮತ್ತು ಧರ್ಮಕ್ಕೆ ಸಂಬಂಧ ಪಟ್ಟ ದಾನಗಳನ್ನು ನೀಡುವುದೇ ಚತುರ್ವಿಧ ರಾಜನೀತಿಗಳೆಂದು ಶಾಸನ ಒಂದರಲ್ಲಿ ನಿರೂಪಿತವಾಗಿದೆ. (ಎಂ. ಚಿದಾನಂದ ಮೂರ್ತಿ : ಕಶಾಸಾಂಅ ಪು. ೩೨೬)

ಇಡಿಯ ಆಡಳಿತವ್ಯವಸ್ಥೆಯ ಮುಖ್ಯಸ್ಥನಾದ್ದರಿಂದ, ರಾಜನು ಬಹಳವಾಗಿ ಪ್ರವಾಸ ಮಾಡುತ್ತ ಎಲ್ಲ ಪ್ರಜೆಗಳ ಕಷ್ಟಸುಖಗಳನ್ನು ನೇರವಾಗಿ ತಿಳಿಯುವುದು ಅಗತ್ಯವಾಗಿದ್ದಿತು. ಹೊಯ್ಸಳ ಬಲ್ಲಾಳನ ರಾಜಧಾನಿ ದೋರಸಮುದ್ರವಾದರೂ ಅವನು ೧೧೯೨ರಲ್ಲಿ ಹೊಸೂರು, ಕ್ರಿಶ. ೧೧೯೩ರಲ್ಲಿ ಬಾಳ್ಗುಳಿ, ೧೧೯೪ರಲ್ಲಿ ಬಡಗ ನೊಣಂಬವಾಡಿ, ಕ್ರಿಶ.

೧೧೯೬ರಲ್ಲಿ ಎರಂಬರಗೆಯಲ್ಲಿಯೂ ಕ್ರಿ.ಶ.೧೧೯೯ರಲ್ಲಿ ಹುಲಿಗೆರೆಯಲ್ಲಿಯೂ ಇದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಇಂಥ ಪ್ರವಾಸ ಕಾಲದಲ್ಲಿ ಎರಡನೆಯ ಬಲ್ಲಾಳನು ಸಿಲುಗೋಡಿನಲ್ಲಿ 'ಹೊಜಬೀಡು' ಬಿಟ್ಟಿದ್ದಾಗ ತನ್ನ ಪಂಚ ಪ್ರಧಾನರೊಂದಿಗೆ ಆ ಪ್ರದೇಶದ ಗಡಿವಿವಾದವನ್ನು ಪರಿಹರಿಸಿದ ವಿಷಯ ತಿಳಿದು ಬರುತ್ತದೆ. [(ರೈ) ಎಕ. VII ಚನ್ನಗಿರಿ ೭೨ ಕ್ರಿ.ಶ. ೧೨೨೦]

ರಾಜರು ರಾಜ್ಯಾಡಳಿತದ ಮೇಲೆ ಸಂಪೂರ್ಣ ಅಧಿಕಾರ ಹೊಂದಿರುತ್ತಿದ್ದರು. ಮಂತ್ರಿಗಳ ಅಭಿಪ್ರಾಯ ಕೇಳಿದರೂ ಅಂತಿಮ ನಿರ್ಧಾರ ಬಹುಶಃ ರಾಜನದೇ ಆಗಿರುತ್ತಿತ್ತು. ಚಕ್ರವರ್ತಿಗಳಿಗೆ ಹೇಗೆ ಅಧಿಕಾರ ಸ್ವಾತಂತ್ರ್ಯವಿದ್ದಿತೋ ಹಾಗೆಯೇ ಸಾಮಂತರಾಜರಿಗೂ ಆಡಳಿತ ವಿಷಯದಲ್ಲಿ ಸ್ವಾತಂತ್ರ್ಯವಿದ್ದಿತು. ಸಮಂತರಿಗೂ ತಮ್ಮದೇ ಆದ ಲಾಂಛನ, ಧ್ವಜ ಮತ್ತು ವಾದ್ಯಗಳು ಇರುತ್ತಿದ್ದವು.

ಸಾಮಾನ್ಯವಾಗಿ ಮಂತ್ರಿಗಳ ಆಯ್ಕೆಯನ್ನು ರಾಜನೇ ಮಾಡುತ್ತಿದ್ದನು. ಕೆಲವು ಸಾರಿ ತಂದೆಯ ಕಾಲದಿಂದಲೂ ಇದ್ದ ಮಂತ್ರಿಗಳು ಮುಂದುವರಿಯುತ್ತಿದ್ದರು. ರಾಜನಿಗೆ ತನ್ನ ಇಷ್ಟದಂತೆ ಮಂತ್ರಿಗಳನ್ನು ಆಯ್ಕೆ ಮಾಡುವ ಮತ್ತು ಮಂತ್ರಿ ಪದವಿಯಿಂದ ತೆಗೆಯುವ ಅಧಿಕಾರವಿತ್ತು [ಜೆ.ಡಿ.ಎಂ. ಡೆರೆಟ್ ಪೂರ್ವೋಕ್ತ ಪು. ೧೯೧]

## ರಾಣಿ

ಕರ್ನಾಟಕದ ರಾಣಿಯರಲ್ಲಿ ಅನೇಕರು ವಿಶಿಷ್ಟ ವ್ಯಕ್ತಿತ್ವವನ್ನು ಬೆಳೆಸಿಕೊಂಡವರಾಗಿದ್ದರು. ಕೇವಲ ರಾಜನ ನೆರಳಿನಂತೆ ಮಾತ್ರವಿರದೆ ರಾಜನಿಗೆ ಆಡಳಿತಾತ್ಮಕ ವಿಷಯಗಳಲ್ಲಿ ಸಲಹೆಯನ್ನು ಕೊಡಬಲ್ಲವರಾಗಿದ್ದರು. ಅಷ್ಟೇ ಅಲ್ಲದೆ ಅನೇಕ ಪ್ರದೇಶಗಳಲ್ಲಿ ನೇರವಾಗಿ ಆಡಳಿತವನ್ನು ಮಾಡಿದವರು, ನೇರ ಆಡಳಿತವನ್ನು ನಿರ್ವಹಿಸಲು ಸಮರ್ಥರಾದ ರಾಣಿಯರು ರಾಜನ ಆಡಳಿತ ಜವಾಬ್ದಾರಿಯನ್ನು ಕೆಲಮಟ್ಟಿಗೆ ಹಗುರಮಾಡುತ್ತಿದ್ದರು.

ರಾಜರಿಗೆ ಅನೇಕ ರಾಣಿಯರು ಇರುತ್ತಿದ್ದುದರು ಸಾಮಾನ್ಯ ವಿಷಯವಾಗಿತ್ತು. ಹೊಯ್ಸಳ ನರಸಿಂಹನಿಗೆ ೩೮೪ ರಾಣಿಯರು ಇದ್ದರೆಂದು ಒಂದು ಶಾಸನದಿಂದ ತಿಳಿದು ಬರುತ್ತದೆ. [ರೈ. ಎಕ V ಬೇಲೂರು ೧೯೩ ಕ್ರಿ.ಶ. ೧೧೬೧] ರಾಣಿಯರು ಒಂದೇ ಸ್ಥಳದಲ್ಲಿ ಇದ್ದರೆ ಅನಗತ್ಯವಾಗಿ ಸವತಿ ಮತ್ಸರ ಮತ್ತು ಸ್ಪರ್ಧೆ ಏರ್ಪಡುವುದೆಂಬ ಕಾರಣದಿಂದಲೋ ಅಥವಾ ತನ್ನ ನಂಬಿಕೆಯವರೇ ಕೆಲವು ಪ್ರದೇಶಗಳನ್ನು ಆಳಿದರೆ ಈ ಪ್ರದೇಶದ ಆಳ್ವಿಕೆಯ ಬಗ್ಗೆ ಸಂಶಯಕ್ಕೆ ಅವಕಾಶ ಇರುವುದಿಲ್ಲ ಎಂಬ ಕಾರಣದಿಂದಲೋ ಒಟ್ಟಿನಲ್ಲಿ ಅನೇಕ ರಾಣಿಯರನ್ನು ಬೇರೆ ಬೇರೆ ಪ್ರದೇಶಗಳಿಗೆ ಆಳ್ವಿಕೆಗೆ ನೇಮಿಸುತ್ತಿದ್ದುದು ಕಂಡುಬರುತ್ತದೆ. ಉದಾಹರಣೆಗೆ ಎರಡನೆಯ ಬಲ್ಲಾಳನ ರಾಣಿ ಚೋಳ ಮಹಾದೇವಿ ಕೆಂಬಾಳನ್ನು ಆಳುತ್ತಿದ್ದಳು. [(ರೈ) ಎಕ V ಚೆನ್ನರಾಯಪಟ್ಟಣ ೨೦೫ ಕ್ರಿ.ಶ. ೧೨೦೦] ಇನ್ನೊಬ್ಬ ರಾಣಿ ಪದ್ಮಲದೇವಿ ಪೊಸವಡಂಗಿಲೆಯನ್ನು ಸುಧರ್ಮದಿಂದ ರಕ್ಷಿಸುತ್ತಿದ್ದ ವಿಷಯವನ್ನು ಶಾಸನವೊಂದು ನಿರೂಪಿಸುತ್ತದೆ. [ಎಸ್. ಐಐ IX (i) ಹಡಗಲಿ ೩೩೦ ಕ್ರಿ.ಶ. ೧೨೧೨]. ಇನ್ನೊಬ್ಬ ರಾಣಿ ಉಮಾದೇವಿ ಮಗರೆ ಮೂನೂರರ ರಾಜ್ಯ ಭಾರವನ್ನು ನಿರ್ವಹಿಸುತ್ತಿದ್ದ ವಿಷಯ ತಿಳಿಸುತ್ತದೆ. [(ರೈ) ಎಕ V ಅರಸಿಕೆರೆ ೪೦ ಕ್ರಿ.ಶ. ೧೨೦೯]. ಬಲ್ಲಾಳನ ರಾಣಿ ಬಮ್ಮಲೆಯನ್ನು ಒಂದು ಶಾಸನ 'ಮಹಾಮಂಡಲೇಶ್ವರಿ' ಎಂದು ಕರೆದಿದೆ.

ತುಳುನಾಡಿನ ರಾಣಿಯರೂ ರಾಜ್ಯಾಡಳಿತದಲ್ಲಿ ನೇರವಾಗಿ ಭಾಗಿಗಳಾಗಿರುವುದುಂಟು. ಕ್ರಿ.ಶ. ೧೨೭೫ರಲ್ಲಿ ವೀರಪಾಂಡ್ಯನು ತೀರಿಕೊಂಡಾಗ ಅವನ ಮಗನಾದ ದೇವರಸನು ಪ್ರಾಪ್ತವಯಸ್ಸಿಗೆ ಬಾರದಿದ್ದ ಕಾರಣ ಅವನ ಪಟ್ಟದ ರಾಣಿ ಬಲ್ಲಮಹಾದೇವಿ ಸಿಂಹಾಸನವನ್ನು ಏರಿ ಕ್ರಿ.ಶ. ೧೨೭೫ರಿಂದ ೧೪೯೨ರವರೆಗೆ ಆಡಳಿತ ನಡೆಸಿದಳು. [ಕೆ.ವಿ.ರಮೇಶ್, ತುಳುನಾಡಿನ ಇತಿಹಾಸ ಪುಟ ೮] ಪಾಂಡ್ಯಮಹಾದೇವಿ ಪನ್ನಿರ್ಪಳ್ಳಿ (ಉಡುಪಿ ತಾಲ್ಲೂಕು) ಎಂಬ ಗ್ರಾಮದ ಆಡಳಿತ ಸೂತ್ರವನ್ನು ವಹಿಸಿದ್ದಳೆಂದು ಕ್ರಿ.ಶ. ೧೧೫೫ಕ್ಕೆ ಸೇರಿದ ಕೊಟಗೇರಿ ಮತ್ತು ಕದ್ರಿಯ ಶಾಸನಗಳಿಂದ ತಿಳಿದು ಬರುತ್ತದೆ. [ಕೆ.ವಿ. ರಮೇಶ್, ಎ ಹಿಸ್ಟರಿ ಆಫ್ ಸೌತ್ ಕೆನರಾ ಪು. ೪೯]

ಎರಡನೆಯ ಬಿಲ್ಲಮನ ರಾಣಿ ಲಚ್ಚೆಯವ್ವ ರಾಣಿ ತನ್ನ ಮೊಮ್ಮಗ ಚಿಕ್ಕವನಿರುವಾಗ ರಾಜ್ಯದ ಜವಾಬ್ದಾರಿಯನ್ನು ನಿರ್ವಹಿಸಿದಂತೆ ತಿಳಿದು ಬರುತ್ತದೆ. [ಶ್ರೀನಿವಾಸ ರಿತ್ತಿ ದ ಸೇವುಣಾಸ್ ಪು. ೨೫೨] ಕರ್ನಾಟಕದ ರಾಣಿಯರು ಆಡಳಿತಗಾರರಾಗಿ ದಾನಿಗಳಾಗಿ, ವಿದ್ಯಾ ಪ್ರೋತ್ಸಾಹಕರಾಗಿ, ಆಕ್ರಮಣದ ನೇತೃತ್ವ ವಹಿಸಿದ ಧೀರರಾಗಿ, ಸಾಹಿತ್ಯ ಕಲಾಪ್ರವೀಣರಾಗಿ ಬಹುಮುಖ ವ್ಯಕ್ತಿತ್ವ ಪಡೆದಿದ್ದರೆಂಬುದು ಹಲವಾರು ನಿದರ್ಶನಗಳಿಂದ ಖಚಿತವಾಗುತ್ತದೆ. [ವಿವರಗಳಿಗೆ ನೋಡಿ: ಚನ್ನಕ್ಕ ಎಲಿಗಾರ: ಪ್ರಾಚೀನ ಕರ್ನಾಟಕದ ರಾಣಿಯರು] ರಾಜರು ತಮಗೆ ವಹಿಸಿದ ಪ್ರದೇಶಗಳ ಆಡಳಿತ ಜವಾಬ್ದಾರಿಯನ್ನು ರಾನಿಯರು ಸಮರ್ಥವಾಗಿ ನಿರ್ವಹಿಸಿದ್ದಾರೆ. ಕೆಲವು ಶಾಸನಗಳು ಆಡಳಿತಕಾರ್ತಿಯರ ಬಗ್ಗೆ ಉತ್ಪ್ರೇಕ್ಷಿತ ಚಿತ್ರ ಕೊಡಬಹುದಾದರೂ ಉತ್ಪ್ರೇಕ್ಷೆಯ ಭಾಗಗಳನ್ನು ತೆಗೆದರೆ ವಾಸ್ತವ ಚಿತ್ರ ಮೂಡಿಬರುವುದೆಂದು ಎಂ.ಬಿ. ಪದ್ಮ ಅಭಿಪ್ರಾಯ ಪಡುತ್ತಾರೆ. [ದ ಪೊಸಿಶನ್ ಆಫ್ ವುಮೆನ್ ಇನ್ ಮಿಡೀವಲ್ ಕರ್ನಾಟಕ. ಕ್ಯುಜೆ ಎಂ.ಎಸ್. LXII ೧-೪ ಪುಟ. ೩೬]

## ಮಂತ್ರಿ

ರಾಜ್ಯಾಡಳಿತದ ಪ್ರಮುಖ ಅಂಗಗಳಲ್ಲಿ ಒಂದಾದ ಮಂತ್ರಿಸ್ಥಾನಕ್ಕೆ ಹಲವಾರು ದೃಷ್ಟಿಗಳಿಂದ ಪ್ರಮುಖ ಸ್ಥಾನವಿದೆ. ಅವರನ್ನು ಮಂತ್ರಿ, ಅಮಾತ್ಯ, ಸಚಿವ ಎಂಬ ಹೆಸರುಗಳಿಂದ ಕರೆಯಲಾಗಿದೆ. ಮಂತ್ರಿಗಳ ಸಂಖ್ಯೆ, ಅರ್ಹತೆ, ಅವರಿಗೊಡ್ಡುವ ಪರೀಕ್ಷೆ ಮುಂತಾದವುಗಳನ್ನು ಪ್ರಾಚೀನ ಗ್ರಂಥಗಳು ಚರ್ಚಿಸಿವೆ. ಮಾನಸೋಲ್ಲಾಸ ಮಂತ್ರಿಗಳ ಗುಣ ದೋಷಗಳನ್ನು ವಿವರವಾಗಿ ಚರ್ಚಿಸುತ್ತದೆ. ಎರಡನೆಯ ಬಲ್ಲಾಳನಿಗೆ ಚಂದ್ರಮೌಳಿ ಎಂಬ ಮಂತ್ರಿ 'ಬಲ್ಲಾಳ ನೃಪಾಳ ದಕ್ಷಿಣ ಭುಜಾದಂಡ'ವಾಗಿದ್ದನೆಂದು ಕೀರ್ತಿಸುತ್ತದೆ. ಹಾಗೆಯೇ ಹೊಯ್ಸಳ ನರಸಿಂಹನ ಮಂತ್ರಿ ಪೊಲಾಳ್ವ ದಂಡನಾಥ ವಿಶೇಷವಾಗಿ ಕೀರ್ತಿತನಾಗಿದ್ದಾನೆ. [(ರೈ) ಎಕ XI ದಾವಣಗೆರೆ ೨೫ ಕ್ರಿ.ಶ. ೧೨೨೪]

ಯಾದವ ಸಿಂಘಣನ ಮಂತ್ರಿಯಾದ ಬೀಚಣ ಆರಂಭದಲ್ಲಿ ವಡ್ಡವ್ಯವಹಾರಿಯಾಗಿ ರಾಜಶ್ರೇಷ್ಠಿಯಾಗಿದ್ದನು. ಆದರೆ ವ್ಯವಹಾರ ಕುಶಲಿ ಮಾತ್ರನಾಗಿರದೆ ತನ್ನ ಸಾಮರ್ಥ್ಯವನ್ನು ಪ್ರಕಟಿಸಿ ರಾಜನ ಗಮನ ಸೆಳೆದು ಮಂತ್ರಿ ಸ್ಥಾನವನ್ನು ಪಡೆದನು.

**ಜನನಾಥಂ ಸಿಂಘಣನು ಬೀಚನ ಸುಚರಿತಂ ಬೀಚನೈಶ್ವರ್ಯವಂಬೀ**
**ಚನ ಮಂತ್ರ ಪ್ರೌಢಿಯಂ ಬೀಚನ ಭುಜಬಲಮಂ ಬೀಚನದ್ಯೋಗಮಂಬೀ**
**ಚನ ತೇಜಸ್ಫೂರ್ತಿಯಂ ಕಡೆನಗೆ ಶಚಿವನಾಗಲ್ಕೆ ತಕ್ಕಾತನಿಯೋ**
**ಬ್ಬನೆಮುತಂ ಸೆಟ್ಟ ಬೀಚಂಗೊಸೆದಖಿಳ ನಿಯೋಗಂಗಳ ಮೆಚ್ಚಿಕೊಟ್ಟಂ॥**

**[ಎಸ್.ಐಐ XVIII ಹಾವೇರಿ ೨೨೭, ಕ್ರಿ.ಶ. ೧೩ನೇ ಶತ]**

ಸಿಂಘಣನು ಬೀಚಣನ ನಡವಳಿಕೆ, ಐಶ್ವರ್ಯ, ಮಂತ್ರ ಪ್ರೌಢಿಮೆ, ಭುಜಬಲ, ಉದ್ಯೋಗ ಮತ್ತು ತೇಜಸ್ಫೂರ್ತಿಗಳನ್ನು ನೋಡಿ ತನಗೆ ಸಚಿವನಾಗಲು ಸಮರ್ಥನೆಂದು ನಿರ್ಧರಿಸಿ ಆ ಸ್ಥಾನವನ್ನು ನೀಡಿದನಂತೆ. ಭಿನ್ನವೃತ್ತಿಯಲ್ಲಿದ್ದರೂ ಕೆಲವು ಸಾರಿ ಸಚಿವ ಪದವಿಗೆ ಅರ್ಹರೆನಿಸಿದರೆ ಅಂಥವರನ್ನು ರಾಜರು ನೇಮಕ ಮಾಡುತ್ತಿದ್ದರೆಂದು ಇದರಿಂದ ತಿಳಿದು ಬರುತ್ತದೆ.

ಮಂತ್ರಿಪದವಿ ವಂಶ ಪಾರಂಪರ್ಯವಾಗಿ ಮುಂದುವರಿಯುವ ಪದ್ಧತಿಯೂ ಇದ್ದಿತು. ಇದಕ್ಕೆ ಉತ್ತಮ ನಿದರ್ಶನ ಕೇಶಿರಾಜ ಚಮೂಪತಿಯದು. ಹೊಯ್ಸಳ ವಂಶದ ಜೊತೆ ಜೊತೆ ಬೆಳೆದು ಬಂದು ಕೇಶಿರಾಜನ ವಂಶಸ್ಥರು ಮಾಡಿದ ಸೇವೆ ಅನುಪಮವಾಗಿದೆ. ಅನೇಕ ಬಾರಿ ಮಂತ್ರಿಗಳ ಆಯ್ಕೆ ರಾಜರ ತುಂಬ ಆಪ್ತ ವಲಯದಿಂದ ಆಗುತ್ತಿತ್ತು. ಎರಡನೆಯ ಬಲ್ಲಾಳನಿಗೆ ಚಮೂಪನಾಗಿದ್ದ ಕುವರ ಲಕ್ಷ್ಮ ಅಂತಹ ಆಪ್ತ ವಲಯದಿಂದ ಬಂದವನು. [(ರೈ) ಎಕ. V ಬೇಲೂರು ೧೧೨ ಕ್ರಿ.ಶ. ೧೨೨೦]

ಕೆಲವು ಸಾರಿ ಮಂತ್ರಿಗಳು ತಮಗೆ ರಾಜನೊಂದಿಗೆ ಸಂಬಂಧ ಸರಿಹೊಂದದೇ ಇದ್ದಾಗ ಅಥವಾ ತಾವು ಸೇವೆ ಸಲ್ಲಿಸುತ್ತಿದ್ದ ರಾಜ ಮನೆತನ ಅವನತಿ ಹೊಂದಿದಾಗ ಅನ್ಯ ರಾಜಾಶ್ರಯವನ್ನು ಹುಡುಕಿಕೊಂಡು ಹೋಗುತ್ತಿದ್ದುದುಂಟು. ಕಳಚೂರ್ಯರಲ್ಲಿ ಮಂತ್ರಿಯಾಗಿದ್ದ ರಾಚಿಮಯ್ಯ ಹೊಯ್ಸಳ ಬಲ್ಲಾಳನಲ್ಲಿ ಪ್ರಸಿದ್ಧ ಸೇನಾಪತಿಯಾಗಿ ಹೆಸರು ಪಡೆದಿರುವುದನ್ನು ಕಾಣುತ್ತೇವೆ. ಬಿಜ್ಜಳನ ಸಂಪತ್ತು ಮತ್ತು ಅಭಿವೃದ್ಧಿಗೆ ಕಾರಣನಾಗಿದ್ದ ರಾಚಿಮಯ್ಯ ಮಹಾದಂಡನಾಯಕನಾಗಿ ಬಲ್ಲಾಳನಲ್ಲಿಯೂ ಸೇವೆ ಸಲ್ಲಿಸಿದ. ಅವನು ಅರಸಿಕೆರೆಯಲ್ಲಿ ಕಟ್ಟಿಸಿದ ಸಹಸ್ರಕೂಟ ಚೈತ್ಯಾಳಯ ಅವನ ಭಕ್ತಿ ಹಾಗೂ ಕಲಾಭಿರುಚಿಗಳಿಗೆ ಸಾಕ್ಷಿಯಾಗಿದೆ. [(ರೈ) V ಅರಸಿಕೆರೆ ೭೭ ಕ್ರಿ.ಶ. ೧೨೨೦]

ಮಂತ್ರಿಗಳನ್ನು ಆಯ್ಕೆ ಮಾಡುವಾಗ ಅವರನ್ನು ಚೆನ್ನಾಗಿಯೇ ಪರೀಕ್ಷಿಸಿ ನೇಮಕ ಮಾಡುತ್ತಿದ್ದರು. ಮಂತ್ರಿಪದವಿ ನೀಡಿದ ಮೇಲೆಯೂ ಅವರನ್ನು ಪರೀಕ್ಷೆಗೆ ಒಳಪಡಿಸುತ್ತಿದ್ದರು. ಅರ್ಥಶಾಸ್ತ್ರದಲ್ಲಿ ಈ ಪರೀಕ್ಷೆಗಳನ್ನು 'ಚತುರುಪಧಾ' ಎಂದು ಕರೆಯಲಾಗಿದೆ. ಕರ್ನಾಟಕದ ಅನೇಕ ಅಮಾತ್ಯರು ಈ ಪರೀಕ್ಷೆಗಳನ್ನು ಗೆದ್ದಿದ್ದರು. ಇಂಥ ಪರೀಕ್ಷೆಗಳನ್ನು ಗೆದ್ದವರನ್ನು 'ಚತುರುಪಧಾವಿಶುದ್ಧಮತಿ' ಎಂದು ಕರೆಯುತ್ತಿದ್ದರು. [ಧರ್ಮ, ಅರ್ಥ, ಕಾಮ ಮತ್ತು ಭಯಗಳೇ ಈ ನಾಲ್ಕು ಪರೀಕ್ಷೆಗಳು. ಬಿಜ್ಜಳನ ಮಂತ್ರಿ ಕಸಪಯ್ಯನನ್ನು ಚತುರುಪಧಾವಿಶುದ್ಧ ಮತಿಯೆಂದು ಒಂದು ಶಾಸನ ಕರೆದಿದೆ. (ರೈ) ಎಕ, ಎಕ XI ದಾವಣಗೆರೆ ४೨ ೧೧೬೨]

## ಮಂತ್ರಿಮಂಡಲ

ಮಂತ್ರಿಮಂಡಲದ ಸಂಖ್ಯೆ ಎಷ್ಟಿರಬೇಕು ಎಂಬ ವಿಷಯದಲ್ಲಿ ನೀತಿ ಗ್ರಂಥಗಳು ಸ್ಮೃತಿ ಗ್ರಂಥಗಳು ಎಂಟರಿಂದ ಇಪ್ಪತ್ತರವರೆಗೆ ಸಂಖ್ಯೆಯನ್ನು ಹೇಳಿವೆ. ಆದರೆ ಶಾಸನಗಳನ್ನು ಆಧರಿಸಿ ಮಂತ್ರಿಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳುವುದು ಕಠಿಣ. ಬಲ್ಲಾಳನು ಪ್ರವಾಸ ಕಾಲದಲ್ಲಿ ಹೊರಬೀಡು ಬಿಟ್ಟಿದ್ದಾಗ ಪಂಚ ಪ್ರಧಾನರೊಂದಿಗೆ ಒಂದು ಸೀಮಾವಿವಾದವನ್ನು ಪರಿಹರಿಸಿದಂತೆ ತಿಳಿದುಬರುತ್ತದೆ. [(ರೈ) ಎಕ VII ಚನ್ನಗಿರಿ ೭೨ ಕ್ರಿ.ಶ. ೧೨೨೦] ಡಾ.ಕೆ.ವಿ. ರಮೇಶ್ ಅವರು ಕ್ರಿ.ಶ. ೧೨೮೮ರ ಕಚ್ಚೂರಿನ ಶಾಸನವೊಂದರಲ್ಲಿ ಬರುವ ಪಂಚಪ್ರಧಾನರ ಉಲ್ಲೇಖದ ಕಡೆಗೆ ಗಮನ ಸೆಳೆದು ಅದು ಐದು ಪ್ರಧಾನರನ್ನು ಹೇಳುವುದೋ ಅಥವಾ ಸಾಂಪ್ರದಾಯಿಕ ಶಬ್ದ ಬಳಕೆಯೋ ಎಂಬುದನ್ನು ನಿರ್ಧರಿಸಲು ಆಧಾರಗಳು ಸಾಲುತ್ತಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. [**ತುಳುನಾಡಿನ ಇತಿಹಾಸ** ಪು. ೬೭] ಸೇವುಣರು ಸಾಮಂತರಾಗಿದ್ದಾಗ ಏಳು ಮಂತ್ರಿಗಳು ಇದ್ದರೆಂದೂ ಕಾಲಕ್ರಮದಲ್ಲಿ ರಾಜ್ಯವು ವಿಸ್ತಾರವಾದಂತೆ ಮಂತ್ರಿಗಳ ಸಂಖ್ಯೆಯೂ ಹೆಚ್ಚಿತೆಂದು ಡಾ. ಎ.ವಿ. ನರಸಿಂಹ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ.

[ಕರ್ನಾಟಕದ ಸೇವುಣರ ಇತಿಹಾಸ ಪು. ೭೯] ಡಾ. ಎಂ.ವಿ. ಕೃಷ್ಣರಾವ್ ಅವರು ಸಂಧಿವಿಗ್ರಹಿ, ಶ್ರೀಕರಣಾಧಿಕಾರಿ, ಹಿರಿಯ ಭಂಡಾರಿ, ಸೇನಾಪತಿ ಮತ್ತು ಮಹಾಪಸಾಯತರು ಪಂಚಪ್ರಧಾನರಲ್ಲಿ ಸೇರ್ಪಡೆಗೊಳ್ಳುತ್ತಾರೆ ಎಂದು ಹೇಳಿದ್ದಾರೆ. [**ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ಅಂಡರ್ ಹೊಯ್ಸಳಾಸ್**, ಕರ್ನಾಟಕ ದರ್ಶನ ಪು. ೫೫] ಡಾ. ಎಂ. ಚಿದಾನಂದ ಮೂರ್ತಿ ಅವರು ರಾಜರು, ಮೂವರು, ಐವರು ಅಥವಾ ಏಳು ಜನರಿರುವ ಮಂತ್ರಿಮಂಡಲವನ್ನು ರಚಿಸಿಕೊಳ್ಳುತ್ತಿದ್ದರೆಂದು ಭಾವಿಸಬಹುದು ಎಂದಿದ್ದಾರೆ. [ಕ.ಶಾ.ಸಂ.ಅ. ಪು.೩೩೦] ಮಂತ್ರಿಮಂಡಲದ ಮುಖ್ಯಸ್ಥನನ್ನು ಮಹಾಪ್ರಧಾನ ಎಂದು ಕರೆಯುತ್ತಿದ್ದರು ಎಂದು ಖಚಿತವಾಗಿ ಹೇಳಲು ಬರುವಂತಿಲ್ಲ. ಹಾಗೆಯೇ ಮಂತ್ರಿಮಂಡಲದ ಸದಸ್ಯರಿಗೆ ವಹಿಸುತ್ತಿದ್ದ ಖಾತೆಗಳ ವಿಷಯವನ್ನು ಶಾಸನಾಧಾರಗಳಿಂದ ನಿರ್ಧರಿಸುವುದು ಕಠಿಣ. ಏಕೆಂದರೆ ಒಬ್ಬ ಮಂತ್ರಿಯನ್ನು ಕೆಲವು ಸಾರಿ ನಾಲ್ಕೈದು ಅಧಿಕಾರ ವಿಶೇಷಣಗಳಿಂದ ಕರೆದಿರುವುದುಂಟು. ಉದಾಹರಣೆಗೆ ಬಲ್ಲಾಳನ ಮಂತ್ರಿ ಅಚ್ಯುತಮಯ್ಯನನ್ನು ಮಹಾಪ್ರಧಾನ, ಸರ್ವ್ವಾಧಿಕಾರಿ, ಸೇನಾಪತಿ, ಮಹಾಪಸಾಯ್ತಂ, ದಂಡನಾಯಕ ಎಂಬ ವಿಶೇಷಣಗಳಿಂದ ನಿರ್ದೇಶಿಸಲಾಗಿದೆ. [(ಮೈ) ಎಕ VI ಪಾಂಡವಪುರ ೭೪ ಕ್ರಿಶ. ೧೧೮೯]. ಕಳಚೂರ್ಯ ಅಹವಮಲ್ಲನ ಮಂತ್ರಿ ವಾಸುದೇವನಾಯಕನ ಅಧಿಕಾರ ವಿಶೇಷಣಗಳು ಹೀಗಿವೆ; ಮಹಾಪ್ರಧಾನಂ, ಸರ್ಬ್ಬಾಧಿಕಾರಿ, ಶ್ರೀಕರಣಂ, ಸೇನಾಧಿಪತಿ, ಬಾಹತ್ತರ ನಿಯೋಘಾಧಿಪತಿ, ಲಾಳ ಕಡೆಯಕಾರಜಿರಧಿಷ್ಠಾಯಕಂ (?), ಮಹಾ ಪ್ರಚಂಡ ದಂಡನಾಯಕಂ. [ಎಸ್ ಐಐ XVIII ರಾಣಿಬೆನ್ನೂರು ೧೯೨ ಕ್ರಿಶ. ೧೧೮೩]. ಇಂಥ ಕಡೆಗಳಲ್ಲಿ ಈ ಅಧಿಕಾರ ವಿಶೇಷಣಗಳನ್ನು ಹೇಗೆ ಅರ್ಥೈಸಬೇಕೆನ್ನುವುದು ಸಮಸ್ಯೆಯಾಗುತ್ತದೆ. ಈ ಅಧಿಕಾರ ವಿಶೇಷಣಗಳಲ್ಲಿ ಕೆಲವಾದರೂ ಆ ಅಧಿಕಾರಿಗಳು ಆ ಹಿಂದೆ ಹೊಂದಿದ್ದ ಅಧಿಕಾರ ಸೂಚಕಗಳಾಗಿರುವ ಸಾಧ್ಯತೆ ಇದೆ.

ಮಂತ್ರಿಮಂಡಲದ ಮುಖ್ಯಸ್ಥನನ್ನು ಪ್ರಧಾನನೆಂದು ಕರೆಯುತ್ತಿದ್ದರೆಂದು ಸ್ವೀಕರಿಸಬಹುದು. ಶುಕ್ರನೀತಿ ಅವನನ್ನು 'ಸಮದರ್ಶಿ'ಎಂದು ಕರೆದಿದೆ. ಶಾಸನಗಳಲ್ಲಿಯಲ್ಲೇಖವಾಗಿರುವ ಮಹಾಮಾತ್ಯ ಮತ್ತು ಮಹಾಪ್ರಧಾನ ಸಮಾನಾರ್ಥಕಗಳೆಂದು ಭಾವಿಸಬಹುದು. ಪ್ರಧಾನರನ್ನೂ ಶಾಸನಗಳಲ್ಲಿ ದಂಡನಾಯಕರೆಂದೂ ಮಹಾದಂಡನಾಯಕರೆಂದೂ ಕರೆದಿರುವುದುಂಟು. ಕೆಲವು ನಾಗರಿಕ ಅಧಿಕಾರಗಳನ್ನು ನೋಡಿಕೊಳ್ಳುತ್ತಿದ್ದವರನ್ನು ದಂಡನಾಯಕ ಎಂದು ಕರೆದಿರುವುದುಂಟು. ಆದ್ದರಿಂದ ದಂಡನಾಯಕ ಸೈನ್ಯದ ಉನ್ನತ ಅಧಿಕಾರವನ್ನು ಮಾತ್ರವನ್ನು ಹೇಳುವುದಿಲ್ಲ. ಡಾ. ಬಿ.ಆರ್. ಗೋಪಾಲ್ ಅವರು ಪ್ರತಿಯೊಬ್ಬ ಅಧಿಕಾರಿಯೂ ಸೈನ್ಯದ ಸೇವೆಯನ್ನು ಮಾಡಬೇಕಾಗಿದ್ದುದರಿಂದ ಹಾಗೆ ಅನೇಕ ಅಧಿಕಾರ ವಿಶೇಷಣಗಳಂತೆ ದಂಡನಾಯಕ ಪದ ಬಳಕೆಯಾಗಿದೆಯೆಂದು ಭಾವಿಸುತ್ತಾರೆ. [ಪೂರ್ವೋಕ್ತ ಗ್ರಂಥ ಪು.೩೯೫] ಡಾ. ಟಿ.ವಿ. ಮಹಾಲಿಂಗಂ ಅವರು ಪ್ರಾಚೀನ ಕಾಲದಲ್ಲಿ ಸೈನ್ಯದ ಅಧಿಕಾರಿಗಳಿಗೂ ನಾಗರಿಕ ಸೇವೆಯ ಅಧಿಕಾರಿಗಳಿಗೂ ಅಷ್ಟೇನೂ ವ್ಯತ್ಯಾಸ ಇರಲಿಲ್ಲವೆಂದು ಅಭಿಪ್ರಾಯ ಪಡುತ್ತಾತೆ. [ಸೌತ್ ಇಂಡಿಯನ್ ಪೊಲಿಟಿ ಪು. ೧೨೦]. ಡಾ. ಜಿ.ಎಸ್. ದೀಕ್ಷಿತ್ ಅವರು ದಂಡನಾಯಕ ಚಿಕ್ಕ ಅಥವಾ ದೊಡ್ಡ ಪ್ರಾದೇಶಿಕ ವಿಭಾಗಗಳನ್ನು ಆಳುವ ಅಧಿಕಾರಿಗಳನ್ನು ಹೊಂದುತ್ತಿದ್ದ ವಿಶೇಷಣಗಳನ್ನು ಸೂಚಿಸುವುದೆಂದು ಭಾವಿಸುತ್ತಾರೆ. [**ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ಮಿಡೀವಲ್ ಕರ್ನಾಟಕ** ಪು. ೩೮]

## ಸಂಧಿವಿಗ್ರಹಿ

ಮಂತ್ರಿಮಂಡಲದಲ್ಲಿ ಸಂಧಿವಿಗ್ರಹಿ ಪ್ರಮುಖ ವ್ಯಕ್ತಿಗಳಲ್ಲೊಬ್ಬ. ಶುಕ್ರನೀತಿಯಲ್ಲಿ ಇವನನ್ನು 'ಮಂತ್ರಿ' ಎಂದು ಕರೆಯಲಾಗಿದೆ. ಸಂಧಿವಿಗ್ರಹಗಳ ಮೇಲೆ ಮಹಾ ಸಂಧಿವಿಗ್ರಹಿಗಳಿರುತ್ತಿದ್ದರು. ಸಂಧಿವಿಗ್ರಹಿಗಳು ಬಹುಮಟ್ಟಿಗೆ ಆಧುನಿಕ ಕಾಲದ ವಿದೇಶಾಂಗ ಮಂತ್ರಿಗಳಿದ್ದಂತೆ ಎಂದು ಭಾವಿಸಬಹುದೆಂದು ಬಹುತೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಹೊಯ್ಸಳ ರಾಜರಿಗೆ ಸಂಧಿವಿಗ್ರಹಿಯಾದ ಕುಂಜನಂಬಿ ಮೂಲತಃ ರತ್ನಪಡಿ ವ್ಯಾಪಾರಿಗಳ ವಂಶಕ್ಕೆ ಸೇರಿದ್ದು ರತ್ನಪರೀಕ್ಷೆಯಲ್ಲಿ ಪರಿಣತನಾಗಿದ್ದಂತೆ ರಾಜರ ಮನಃಸ್ಥಿತಿ ಅರಿಯುವ ಸಾಮರ್ಥ್ಯ ಪಡೆದಿದ್ದನೆಂದು ಶಾಸನ ತಿಳಿಸುತ್ತದೆ. ದಕ್ಷಿಣದ ಹೊಯ್ಸಳ ಚಕ್ರವರ್ತಿ ಉತ್ತರದ ಬಲ್ಲಹ–ವಲ್ಲಭ (ಸೇವುಣ?) ರಾಜರನ್ನೂ ತಿಳಿದವನಾಗಿದ್ದನು. ಇಬ್ಬರಿಗೂ ಸಂಧಾನವನ್ನು ಸಮರ್ಥವಾಗಿ ನಿರ್ವಹಿಸಿದನೆಂದು 'ಸತ್ಯವಾಕ್ಯ'ನೆಂದೂ 'ದಯಾಳಂಕಾರ' ನೆಂದೂ ಖ್ಯಾತನಾದವನು. [(ರೈ) ಎಕ.V ಅರಸಿಕೆರೆ ೧೦೮. ಕ್ರಿಶ. ೧೨೫೫]

ಸಂಧಿವಿಗ್ರಹಿಯ ಇನ್ನೊಂದು ಮುಖ್ಯಕಾರ್ಯ ಶಾಸನಗಳ, ದಾನಪತ್ರಗಳ ಪಾಠವನ್ನು ಸಿದ್ಧಪಡಿಸುವುದೂ ಆಗಿತ್ತು. ಅನೇಕ ಶಾಸನಗಳ ಕೊನೆಯಲ್ಲಿ ಸಂಧಿವಿಗ್ರಹಿ ಬರೆದ ಶಾಸನ ಎಂಬ ಮಾತು ಬರುವುದುಂಟು. ಸಂಧಿವಿಗ್ರಹಿ ಕೇಶಿರಾಜನನ್ನು ಒಂದು ಶಾಸನ ಹೀಗೆ ಕೀರ್ತಿಸುತ್ತದೆ.

> ಬರೆದುದು ಕೀರ್ತಿ ದಿಗ್ವಳಯ ಭಿತ್ತಿಯನೋವದೆ ಬಾರಿಸಿತ್ತು ಭಾ
> ಸುರ ರುಚಿಯಿಂದೆ ಚಂದ್ರಮನ ಚಂದ್ರಿಕೆಯಂ ಸಲೆಮುದ್ರಿಸಿತ್ತು ಸಾ
> ಗರ ಪರಿವೇಷ್ಟಿತಾ ರವಿಯನೆಂದೊಡನದೇ ಪೊಗಟ್ಟಪ್ಪೆಸಂದ ಸಾ
> ಕ್ಷರ ನಿಧಿ ಸಂಧಿ ವಿಗ್ರಹಿ ಲಲಾಮ ಮನಗ್ಗದ ಕೇಶಿರಾಜ ನಂ॥

[(ರೈ) ಎಕ V. ಅರಸಿಕೆರೆ ೧೨೭ ಕ್ರಿಶ. ೧೧೮೫]

ಸಂಧಿವಿಗ್ರಹಿ ರಾಜ್ಯದ ಪ್ರತಿನಿಧಿಯಂತೆ ಅನೇಕ

ಸಾರಿ ವ್ಯವಹರಿಸುತ್ತಿದ್ದು ಅವನು ಪರರಾಷ್ಟ್ರಗಳಿಂದ ಬಂದ ದೂತರನ್ನು ಸ್ವಾಗತಿಸಿ ರಾಜನ ಬಳಿಗೆ ಕರೆದೊಯ್ಯುವ ಹಾಗೂ ಅನ್ಯರಾಷ್ಟ್ರಗಳಿಗೆ ಕಳುಹಿಸುವ ಪತ್ರಗಳನ್ನು ಸಿದ್ಧಪಡಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದ. [ಕೆ.ಕೆ. ಹಂದಿಕಿ: **ಯಶಸ್ತಿಲಕ ಅಂಡ್ ಇಂಡಿಯನ್ ಕಲ್ಚರ್** ಪು. ೧೦೭]

ಕೆಲವು ಶಾಸನಗಳಲ್ಲಿ ಬರುವ ಹೇರಿಲಾಳ ಕನ್ನಡ ಸಂಧಿವಿಗ್ರಹಿ ಎಂಬ ಮಾತು ಹಿರಿಯ – ಹೇರಿ ಎಂದು ರೂಪಾಂತರ ಹೊಂದಿರಬಹುದೆಂದೂ ಲಾಳ ಅಥವಾ ಲಾಟವು ಈಗಿನ ಗುಜರಾತನ್ನು ಸೂಚಿಸುತ್ತದೆಂದೂ ಈ ಹೆಸರಿನ ಸಂಧಿ ವಿಗ್ರಹಿಗಳು ಬಹುಶಃ ಲಾಟ ಮತ್ತು ಕರ್ನಾಟಕ ದೇಶಗಳ ವ್ಯವಹಾರವನ್ನು ನೋಡಿ ಕೊಳ್ಳುತ್ತಿದ್ದರೆಂದು ಡಾ.ಎಂ. ಚಿದಾನಂದ ಮೂರ್ತಿ ಅವರು ಭಾವಿಸುತ್ತಾರೆ. [**ಕ.ಶಾ.ಸಾಂ.ಅ.** ಪು. ೩೩೩]

**ಸಾಮಂತ**

ಚಕ್ರವರ್ತಿ ಅಥವಾ ಅಧಿರಾಜನ ಅಧೀನದಲ್ಲಿ ಸಣ್ಣಪುಟ್ಟ ರಾಜ್ಯಗಳನ್ನು ಆಳುತ್ತಿದ್ದ ರಾಜರೇ ಸಾಮಂತರು. ಅವರು ತಾವಾಳುವ ಪ್ರದೇಶ ಅಥವಾ ರಾಜ್ಯಕ್ಕೆ ಅಧಿಪತಿಗಳಾಗಿದ್ದರು. ಅಧಿರಾಜನಿಗಿದ್ದಂತೆ ಇವರಿಗೂ ಮಂತ್ರಿಮಂಡಲ, ಪರಿವಾರ ಮುಂತಾದ ಸಿಬ್ಬಂದಿ ಇರುತ್ತಿತ್ತು. ಇವರು ಅಧಿರಾಜನಿಗೆ ನಿಗದಿತ ಕಪ್ಪಕಾಣಿಕೆ ಸಲ್ಲಿಸಿದರೆ ಉಳಿದಂತೆ ಸಂಪೂರ್ಣ ಸ್ವತಂತ್ರರು. ಇವರು ಸಾಮಾನ್ಯವಾಗಿ ಮೊದಲಿನಿಂದಲೂ ವಂಶಪಾರಂಪರ್ಯವಾಗಿ ರಾಜ್ಯಡಳಿತ ಮಾಡಿಕೊಂಡು ಬರುತ್ತಿದ್ದರು. ಇವರ ಮೇಲೆ ಗಮನವಿಡಲು ಮಾಂಡಳಿಕದಿರುತ್ತಿದ್ದರು. ಇವರು ಯಾವುದೇ ಚಕ್ರವರ್ತಿಯ ವಿರುದ್ಧ ಸಾಮಂತರು ಪಿತೂರಿ ಮಾಡದಂತೆ ಎಚ್ಚರವಹಿಸುತಿದ್ದರೆಂದು ಕಾಣುತ್ತದೆ. ಇವರು ಯುದ್ಧ ಸಮಯದಲ್ಲಿ ಚಕ್ರವರ್ತಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು. ಇವರು ಯಾವಾಗಲೂ ಚಕ್ರವರ್ತಿಗೆ ನಿಷ್ಠರಾಗಿರುತ್ತಿರಲಿಲ್ಲ. ಸಮಯ ಕಾದು, ರಾಜಕೀಯ ಲಾಭ ಪಡೆದು ಸ್ವತಂತ್ರರಾಗಲು ಪ್ರಯತ್ನಿಸುತ್ತಿದ್ದರು. ಆದರೆ ಕೆಲವರು ಅತ್ಯಂತ ನಿಷ್ಠಾವಂತರೂ ಆಗಿರುತ್ತಿದ್ದರು. ಅಂಥವರನ್ನು ಚಕ್ರವರ್ತಿಗಳು ಕಟ್ಟಿಕೊಂಡ ನೆಚ್ಚಿನ ಅಲಗುಗಳೆಂದು ಶಾಸನಗಳು ಕರೆದಿವೆ. [(ರೈ) ಎಕ XI ದಾವಣಗೆರೆ ೪೧ ಕ್ರಿ.ಶ. ೧೧೪೮]

ಹೊಯ್ಸಳರಿಗೆ ಸಾಮಂತರಾಗಿದ್ದ ಚೆಂಗಾಳ್ವರು, ಕೊಂಗಾಳ್ವರು, ಹುಂಚದ ಸಾಂತರರು ಅನೇಕ ಬಾರಿ ಸ್ವತಂತ್ರರಾಗಲು ಪ್ರಯತ್ನಿಸಿರುವುದು ಕಂಡು ಬರುತ್ತದೆ. ಸೇವುಣರ ಸಾಮಂತರಾಗಿದ್ದ ಸೌಂದತ್ತಿಯ ರಟ್ಟರು, ಗುಪ್ತರು, ತರ್ದವಾಡಿಯ ಶಿಲಾಹಾರರು ಮುಂತಾದವರನ್ನು ಗಮನಿಸಬಹುದು.

**ಪುರೋಹಿತ**

ಪ್ರಾಚೀನ ಭಾರತದಲ್ಲಿ ರಾಜ್ಯಾಡಳಿತ ವಿಷಯದಲ್ಲಿ ಪುರೋಹಿತರಿಗೆ ಪ್ರಮುಖವಾದ ಸ್ಥಾನವಿದ್ದಿತು. ಅನ್ಯಪುರೋಹಿತರೊಂದಿಗೆ ಬೇರ್ಪಡಿಸಲು ರಾಜಪುರೋಹಿತ ಎಂಬ ಅಭಿಧಾನವಿದ್ದಿರಬೇಕು. ಉಪನಿಷತ್ತು, ಜೈನ, ಬೌದ್ಧ ಧರ್ಮಗಳ ಬೆಳವಣಿಗೆಯ ನಂತರ ಸ್ಥಾನ ಕಡಿಮೆಯಾಯಿತು. ಡಾ.ಟಿ.ವಿ. ಮಹಾಲಿಂಗಂ ಅವರು 'ಪ್ರಾಚೀನ ಭಾರತದಲ್ಲಿ ಮಂತ್ರಿಮಂಡಲದ ಸದಸ್ಯನಾಗಿ ಸ್ಥಾನ ಪಡೆದಿದ್ದು ಕ್ರಮೇಣ ಮಧ್ಯಕಾಲೀನ ಯುಗದಲ್ಲಿ ಕೇವಲ ಧಾರ್ಮಿಕ ಗುರುವಾಗಿ ರಾಜನ ಉಪದೇಶಕನಾಗಿ ಮಾತ್ರ ಸ್ಥಾನ ಪಡೆದಂತೆ ಕಂಡು ಬರುತ್ತದೆ.' ಎಂದಿದ್ದಾರೆ. [**ಪೂರ್ವೋಕ್ತ** ಪು. ೧೨೫-೨೬.] ರಾಜನ ಸಭೆಗಳಲ್ಲಿ ಪ್ರಧಾನರ ಮತ್ತು ಕೆಲವು ಅಧಿಕಾರಿಗಳ ಜೊತೆ ಪುರೋಹಿತನೂ ಇರುವುದು ಶಾಸನಗಳಲ್ಲಿ ಉಲ್ಲೇಖ ಹೊಂದಿದೆ. [**ತು.ನಾ.ಶಾ** I ಕುಂದಾಪುರ ೪೨ ಪು. ೧೨೬೧] ಚಾಳುಕ್ಯ ಶಾಸನಗಳಲ್ಲಿ ಕಂಡು ಬರುವ ಧರ್ಮಾಧ್ಯಕ್ಷ ಬಹುಶಃ ರಾಜ್ಯದ ನ್ಯಾಯ ನಿರ್ಣಯದ ಪ್ರಮುಖ ಸಂದರ್ಭಗಳಲ್ಲಿ ರಾಜನಿಗೆ ಸೂಕ್ತ ಮಾರ್ಗದರ್ಶನ ನೀಡುವ ವ್ಯಕ್ತಿ ಎಂದು ಕಾಣುತ್ತದೆ. [ಎಇ XV ರೋಣ ೬೩ ಕ್ರಿ.ಶ. ೧೦೫೪]

**ಮಂಡಲೇಶ್ವರ**

ಮಂಡಲ ಒಂದು ನಿರ್ದಿಷ್ಟ ವಿಸ್ತಾರ ಪ್ರಾಂತ್ಯವನ್ನು ಸೂಚಿಸುತ್ತದೆ. ಅದು ಸುಮಾರು ಒಂದು ಜಿಲ್ಲೆಯಷ್ಟು ವಿಸ್ತಾರ ಪ್ರದೇಶವಿರಬೇಕು. ರಾಜನು ಸಾಮಾನ್ಯವಾಗಿ ಈ ಹುದ್ದೆಗೆ ನೇಮಕ ಮಾಡುತ್ತಿದ್ದನು. ರಾಜನ ರಕ್ತ ಸಂಬಂಧಿಗಳಿಗೆ ಪ್ರಾಶಸ್ತ್ಯ ಕೊಡುತ್ತಿದ್ದಂತೆ ಕಾಣುತ್ತದೆ. ಇವರು ನಾಗರಿಕ ಮತ್ತು ಸೈನಿಕ ಎರಡೂ ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದಾರೆಂದು ಡಾ. ಜಿ.ಎಸ್. ದೀಕ್ಷಿತ್ ಭಾವಿಸುತ್ತಾರೆ. [ಪೂರ್ವೋಕ್ತ ಪು. ೧೭] ಮಂಡಲೇಶ್ವರರ ಮೇಲೆ ಮಹಾಮಂಡಲೇಶ್ವರರು ಇರುತ್ತಿದ್ದರು. ರನ್ನನು ತಾನು ಆರಂಭದಲ್ಲಿ ಸಾಮಂತರಿಂದ ಅನಂತರದ ಮಂಡಲೇಶ್ವರನಿಂದ ಮುಂದೆ ಚಕ್ರವರ್ತಿಯಿಂದ ಅಭ್ಯುದಯ ಪಡೆದುದ್ದನ್ನು ಸೂಚಿಸಿದ್ದಾನೆ. [ಗದಾಯುದ್ಧ ೧:೧೦]

ಹೊಯ್ಸಳರು ಮೊದಲನೆಯ ಬಲ್ಲಾಳನ ಕಾಲದಲ್ಲಿ ಕ್ರಿ.ಶ. ೧೧೦೩ರ ಶಾಸನದಂತೆ ಸಾಮಂತ, ಕ್ರಿ.ಶ. ೧೧೩೭ರ ಕಾಲದಲ್ಲಿ ವಿಷ್ಣುವರ್ಧನನ ಆಳ್ವಿಕೆಯಲ್ಲಿ ಮಹಾಮಂಡಲೇಶ್ವರ, ಮುಂದೆ ಎರಡನೆಯ ಬಲ್ಲಾಳನ ಕಾಲದಲ್ಲಿ ಚಕ್ರವರ್ತಿಯಾದರು. [ಎಸ್.ಸಿ. ನಂದಿಮಠ **'ಕಲ್ಯಾಣದ ಚಾಳುಕ್ಯರು'** ಕರ್ನಾಟಕದ ಪರಂಪರೆ ಪು. ೩೩೫-೩೩೮] ಕಳಚೂರ್ಯರ ಒಂದು ಶಾಸನ ಕಳಚೂರ್ಯರು ಮೊದಲಿನಿಂದಲೂ ಚಕ್ರವರ್ತಿಗಳಾಗಿದ್ದು ಕೆಲವರು ಬಾಹುಬಲವಿಲ್ಲದೆ ಮಂಡಳಿಕರಾಗಿದ್ದು ಚಲಯುತನಾದ ತಾನು ಮಂಡಳಿಕ ಹುದ್ದೆ ಅಯುಕ್ತವೆಂದು

ಪರಾಕ್ರಮ ಪ್ರಕಟಿಸಿ ಚಕ್ರವರ್ತಿಯಾದುದಾಗಿ ಬಿಜ್ಜಳನನ್ನು ಪ್ರಶಂಸಿಸುತ್ತದೆ. [ಎಸ್ಐ LXV ಬಾಗೇವಾಡಿ ೧೧೫ ಕ್ರಿ.ಶ. ೧೧೭೦] ಮಂಡಲೇಶ್ವರನನ್ನು ಚಕ್ರವರ್ತಿಗಳು ತಮಗೆ ಅಗತ್ಯ ಕಂಡ ಹಾಗೆ ವರ್ಗಾವಣೆಯನ್ನು ಮಾಡುತ್ತಿದ್ದರು.

### ಸರ್ವಾಧಿಕಾರಿ

ಅನೇಕ ಹಿರಿಯ ಅಧಿಕಾರಿಗಳಿಗೆ ವಿಶೇಷಣವಾಗಿರುವ ಈ ಅಧಿಕಾರಿಯ ನಿಶ್ಚಿತ ಕಾರ್ಯ ಸ್ವರೂಪ ಶಾಸನಗಳಿಂದ ತಿಳಿದುಬರುವುದಿಲ್ಲ. ಅದು ಪ್ರಧಾನಿಗೆ ಸಮವಾದ ಅಧಿಕಾರ ವ್ಯಾಪ್ತಿ ಇರುವಂತೆ ಕಂಡುಬರುತ್ತದೆ. ಕೆಲವು ಕಡೆ ಅನೇಕ ಅಧಿಕಾರ ಜೊತೆಯಲ್ಲಿ ಈ ವಿಶೇಷಣ ಕಂಡು ಬಂದರೆ ಕೆಲವು ಕಡೆ ಒಂದೇ ಒಂದು ವಿಶೇಷಣವೂ ಆಗಿ ಕಂಡುಬರುತ್ತದೆ. ಡಾ. ಎ.ಎಸ್. ಆಲ್ಟೇಕರ್ ಅವರು ಎಲ್ಲ ಶಾಖೆಗಳ ಮೇಲ್ವಿಚಾರಣೆಯ ಅಧಿಕಾರ ಸೂಚಕ ಇದಾಗಿರಬಹುದೆಂದು ಸೂಚಿಸುತ್ತಾರೆ. [ರಾಷ್ಟ್ರಕೂಟಾಸ್ ಅಂಡ್ ದೆರ್ ಟೈಂಸ್ ಪು. ೩೭೧]

### ಮಹಾಪಸಾಯತ

ಮಹಾಪಸಾಯತ ಎಂಬ ಅಧಿಕಾರಿಯ ಉಲ್ಲೇಖ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಮಹಾ + ಪಸಾಯತ = (ಸಂ=ಪ್ರಸಾದಿ?) ಈ ಪದ ಆಯ್ತ ಎಂಬ ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದರೂಪದ ಸಾಮ್ಯದಿಂದ ಬಂದಿರಬಹುದೆಂದು ಕನ್ನಡ ಕನ್ನಡ ನಿಘಂಟು ತಿಳಿಸುತ್ತದೆ. ಇವರು ದಾನಿಗಳಿಗೆ ಸಾಕ್ಷಿಗಳಾಗಿರುವುದು ಕಂಡುಬರುತ್ತದೆ. ರಾಜರ ಉಡುಪುಗಳ ಮೇಲ್ವಿಚಾರಣೆ ಮತ್ತು ವ್ಯವಸ್ಥೆ ನೋಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಶಾಸನಗಳನ್ನು ಗಮನಿಸಿದರೆ ಮಂತ್ರಿಗಳ ಸಮಾನ ಹುದ್ದೆಯಂತೆ ಕಂಡುಬರುತ್ತದೆ.

### ಬಾಹತ್ತರ ನಿಯೋಗಾಧಿಪತಿ

ಅನೇಕ ಶಾಸನಗಳಲ್ಲಿ ಬಾಹತ್ತರ ನಿಯೋಗಾಧಿಪತಿಗಳ ಉಲ್ಲೇಖ ಕಂಡುಬರುತ್ತದೆ. ಇದಕ್ಕೆ ೭೨ ಸಂಖ್ಯೆಯನ್ನು ಹೇಳುವ ಅರ್ಥವಿದೆ. ಪದಶಃ ಅರ್ಥ ಹೇಳಿದರೆ ೭೨ ನಿಯೋಗ ಅಥವಾ ಶಾಖೆಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಅಧಿಕಾರವನ್ನು ಸೂಚಿಸುತ್ತದೆ. ಹೆಚ್ಚಿನ ವಿದ್ವಾಂಸರು ಬಾಹತ್ತರಕ್ಕೆ ಎಪ್ಪತ್ತೆರಡು ಎಂಬ ವಾಚ್ಯರ್ಥವಿದ್ದರೂ ಅದು ಹೆಚ್ಚಿನ, ಬಹಳ ಎಂಬ ಅರ್ಥವನ್ನು ಸೂಚಿಸುವುದೆಂದು ಭಾವಿಸುತ್ತಾರೆ. ಹೊಯ್ಸಳ, ಸೇವುಣ, ಕಲ್ಯಾಣಿ ಚಾಳುಕ್ಯರ ಶಾಸನಗಳಲ್ಲಿ ಈ ಹುದ್ದೆ ಉಲ್ಲೇಖಗೊಂಡಿದೆ. ಬಾಹತ್ತರ ನಿಯೋಗವು ದೇವಾಲಯಗಳಲ್ಲೂ ಇದ್ದಂತೆ ಕಂಡುಬರುತ್ತದೆ. [ಕೆ.ಎ. ನೀಲಕಂಠಶಾಸ್ತ್ರಿ : ಎ ಹಿಸ್ಟರಿ ಆಫ್ ಸೌತ್ ಇಂಡಿಯಾ. ಪು. ೩೦೪]

### ಭಂಡಾರಿ

ಇದು ತುಂಬ ಜವಾಬ್ದಾರಿಯುತ ಹುದ್ದೆಗಳಲ್ಲಿ ಒಂದಾಗಿತ್ತು. ಬಸವಣ್ಣನವರು ಬಿಜ್ಜಳನ ಭಂಡಾರಿಗಳಾಗಿದ್ದುದು ಪ್ರಸಿದ್ಧವಾಗಿದೆ. ಕೆಲವು ಶಾಸನಗಳಲ್ಲಿ ಹಿರಿಯ ಮಾಣಿಕ್ಯ ಭಂಡಾರಿ ಎಂಬ ಅಧಿಕಾರದ ಉಲ್ಲೇಖವಿದೆ. [ಕೆ.ಇ.II ಅಕ್ಕಲುಕೋಟೆ ೩೩ ಕ್ರಿ.ಶ. ೧೨೧೧] ಕೆಲವು ಶಾಸನಗಳಲ್ಲಿ 'ಪರಮವಿಶ್ವಾಸಿ' ಎಂಬ ವಿಶೇಷಣ ಬರುವುದುಂಟು. ಇದು ಬಹುಶಃ ಯಾವುದಾದರೂ ಒಂದು ಸಂದರ್ಭದಲ್ಲಿ ರಾಜನ ನಂಬಿಕೆ ಮತ್ತು ವಿಶ್ವಾಸ ಪಡೆದ ಕಾರಣ ಬಂದ ವಿಶೇಷಣ ಅದು ಆಗಿರಬಹುದು.

### ಮನ್ನೆಯ

ರಾಜರು ನೀಡಿದ ಭೂ ಪ್ರದೇಶದ ಅಧಿಕಾರವನ್ನು ಅನುಭವಿಸುತ್ತ ರಾಜನ ಬಗ್ಗೆ ನಿಷ್ಠಾವಂತರಾಗಿದ್ದವರು ಮನ್ನೆಯರು.

### ರಾಯಭಾರಿ

ದೇಶವಿದೇಶಗಳಿಗೆ ರಾಯಭಾರಿಗಳನ್ನು ಕಳುಹಿಸುವ ಪದ್ಧತಿ ಬಹು ಪ್ರಾಚೀನ ಕಾಲದಿಂದಲೂ ಇದ್ದಿತು. ಎರಡನೆಯ ಬಲ್ಲಾಳನ ಕಾಲದ ಶಾಸನವೊಂದು ಸಿಂಹಳ, ಲಾಟ, ಗೌಳ ರಾಯಭಾರಿಗಳು ಹೊಯ್ಸಳ ನಾರಸಿಂಹನ ಆಸ್ಥಾನದಲ್ಲಿ ಇದ್ದರೆಂದು ತಿಳಿಸುತ್ತದೆ. [(ರೈ) ಎಕVII ಚೆನ್ನಗಿರಿ ೭೨ ಕ್ರಿ.ಶ. ೧೨೨೦] ರಾಯಭಾರಿ ಬಹುಶಃ ಎರಡೂ ರಾಜ್ಯಗಳ ಸೌಹಾರ್ದ ಸಂಬಂಧ ಮತ್ತು ಪರಸ್ಪರ ಸಹಕಾರಕ್ಕೆ ಸಹಾಯ ಮಾಡುತ್ತಿದ್ದರು. ಇವರು ಸಂಧಿವಿಗ್ರಹಿಗಳ ಸಂಪರ್ಕದಲ್ಲಿ ಹೆಚ್ಚು ಇರುತ್ತಿದ್ದರೆಂದು ಭಾವಿಸಬಹುದು.

### ಪಟ್ಟಸಾಹಾಣಿ, ಕರಿತುರಗಸಾಹಣಿ

ಸಾಹಣಿ ಉತ್ತರ ಪದವಾಗುಳ್ಳ ಅಧಿಕಾರ ಸೂಚಕ ಹುದ್ದೆಗಳು ಆ ಕಾಲದಲ್ಲಿ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಡಾ.ಕೆ.ವಿ. ರಮೇಶ್ ಅವರು ಸಾಹಣಿ ಪದವನ್ನು ಸಾಧನಿಕ (ಸಂ) ಪದದಿಂದ ವಿಷ್ಪತ್ತಿ ಮಾಡುತ್ತಾರೆ. ಅದು ಯುದ್ಧ ಕುದುರೆಗಳನ್ನು ಅಭಿವೃದ್ಧಿ ಪಡಿಸುವ ಅಧಿಕಾರ ಸೂಚಕವೆಂದು ಭಾವಿಸುತ್ತಾರೆ. ತೆಲುಗು ಶಾಸನಗಳಲ್ಲಿ 'ಸಾಹಣೆಗೆ' ಅಶ್ವದಳ ನಾಯಕ ಎಂಬ ಅರ್ಥಕೊಡಲಾಗಿದೆ. ಡಾ. ಕೆ.ವಿ. ರಮೇಶ್ ಅವರು ಹೊಯ್ಸಳ, ವಿಜಯನಗರ

ಕಾಲದ ಶಾಸನಗಳಲ್ಲಿ ಅದು ಕೇವಲ ಕುಲನಾಮವಾಗಿ ಬಳಕೆಯಾಗಿದೆ ಎಂದಿದ್ದಾರೆ. [**ತುಳುನಾಡಿನ ಇತಿಹಾಸ** ೬೮–೬೯]

**ಕಮ್ಮಟದ ಅಧಿಕಾರಿ**

ನಾಣ್ಯಗಳನ್ನು ಟಂಕಿಸುವ ಸ್ಥಳಗಳು ಕಮ್ಮಟಗಳು. ಕಮ್ಮಟದ ಅಧಿಕಾರಿಯನ್ನು 'ಕಮ್ಮಟದ ಒಡೆಯ' ಎಂದು ಕರೆಯುತ್ತಿದ್ದರು. ಕೆಲವು ಉನ್ನತ ಅಧಿಕಾರದ ಜೊತೆ ಕಮ್ಮಟದ ಅಧಿಕಾರವೂ ಇರುತ್ತಿತ್ತು. ಶಾಸನಗಳಲ್ಲಿ ಅಣಿಕಾರ (=ಚಿನ್ನದ ಪರೀಕ್ಷಕ) ಕಮ್ಮಾಟದಕ್ಕಸಾಲಿಗಳಂತಹ ಕಮ್ಮಟದ ಸಹಾಯಕರು ಇರುತ್ತಿದ್ದರು.

**ಜಲಗಿನ ಅಧಿಕಾರಿ**

ನದಿಮರಳು ಮೊದಲಾದವುಗಳಲ್ಲಿ ಬೆರೆತ ಚಿನ್ನದ ಕಣಗಳನ್ನು ಶೋಧಿಸಿ ತೆಗೆಯುವ ಜನರ ಮೇಲಿನ ಅಧಿಕಾರಿ ಇವನಾಗಿರಬೇಕು.

**ಹಡವಳ**

ಸೈನ್ಯದ ಒಂದು ತುಕಡಿಯ ಮುಖ್ಯನಾಗಿದ್ದನು. ಹಡವಳರು ದಂಡನಾಯಕ ಅಥವಾ ಸೇನಾಪತಿಯ ಅಧೀನದಲ್ಲಿರುತ್ತಿದ್ದರು.

**ರಾಜ್ಯಾಧ್ಯಕ್ಷ**

ರಾಜ್ಯಾಧ್ಯಕ್ಷದ ಹೆಗ್ಗಡೆಯ ಕರ್ತವ್ಯ ರಾಜನ ವೈಯಕ್ತಿಕ ದಾನ ದತ್ತಿ ದೇವಾಲಯಗಳ ವಿಶೇಷ ಪೂಜೆ ಮುಂತಾದುವುಗಳನ್ನು ನೋಡಿಕೊಳ್ಳುವುದಾಗಿತ್ತು. ರಾಜನು ನಡೆಸಬೇಕಾದ ಸಭೆ, ಸಂದರ್ಶಿಸಬೇಕಾದ ಸ್ಥಳ ಮುಂತಾದವುಗಳ ಬಗ್ಗೆ ಪೂರ್ವಭಾವಿ ಸೂಚನೆಕೊಡುವ ಕಾರ್ಯಭಾರ ಇರುತ್ತಿತ್ತು. ರಾಜನ ಆಪ್ತ ಕಾರ್ಯದರ್ಶಿ ಎಂದು ಭಾವಿಸಬಹುದು.

**ರಾಜಶ್ರೇಷ್ಠಿ**

ರಾಜನ ಮತ್ತು ಆಪ್ತ ಪರಿವಾರದವರ ಅಗತ್ಯ ಅಮೂಲ್ಯ ವಸ್ತು ಪೂರೈಸುವ ವ್ಯಾಪಾರಿಗಳಾಗಿದ್ದರೆಂದು ಕಾಣುತ್ತದೆ. ಕೆಲವು ರಾಜ ಶ್ರೇಷ್ಠಿಗಳು ರಾಜನಲ್ಲಿ ಉನ್ನತ ಉದ್ಯೋಗಿಗಳೂ ಆಗಿದ್ದರು.

**ಮನೆಯ ಪ್ರಧಾನ**

ರಾಜನ ಅಥವಾ ಪ್ರಧಾನದಂತಹ ಉನ್ನತ ಅಧಿಕಾರಿಗಳ ರಕ್ಷಣಾವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಅಧಿಕಾರಿ. ಇವನ ಸಹಾಯಕ್ಕೆ ಅನೇಕ ಭಟರು ಇರುತ್ತಿದ್ದರು. ಇವನನ್ನು ಮನೆ ಅಧಿಕಾರಿ ಎಂದೂ ಕೆಲವು ಶಾಸನಗಳು ಕರೆದಂತಿವೆ.

**ಮನೆವೆಗ್ಗಡೆ**

ರಾಜರ ಅಥವಾ ಉನ್ನತ ಅಧಿಕಾರಿಗಳ ಗೃಹಕೃತ್ಯ ನಿರ್ವಹಿಸುತ್ತಿದ್ದ ಕಿರಿಯ ಅಧಿಕಾರಿಗಳು. ಮನೆಯ ಅಗತ್ಯ ವಸ್ತುಗಳ ತರಿಸುವಿಕೆ, ಪೀಠೋಕರಣ, ವ್ಯವಸ್ಥೆ ಮುಂತಾದ ಕಾರ್ಯ ನಿರ್ವಹಣೆ ಇತರ ಕಾರ್ಯವಾಗಿರಬೇಕು.

ಇದು ಅಂತಃಪುರಾಧ್ಯಕ್ಷ ಅಥವಾ ಗೃಹಮಹತ್ತರ ಎಂಬ ಅರ್ಥದಲ್ಲಿ ಬರುವುದೆಂದು ಡಾ.ಎಂ. ಚಿದಾನಂದ ಮೂರ್ತಿಯವರು ಸೂಚಿಸಿದ್ದಾರೆ.

**ಅಂತಃಪುರಾಧ್ಯಕ್ಷ**

ರಾಜರಿಗೆ ಸುಮಾರು ಐದು ನೂರು ಜನ ರಾಣಿಯರಿದ್ದರೆಂದು ವಿದೇಶಿ ಪ್ರವಾಸಿಗರು ತಿಳಿಸುತ್ತಾರೆ. ಇಷ್ಟೊಂದು ದೊಡ್ಡ ಅಂತಃಪುರಕ್ಕೆ ಸಂಬಂಧಿಸಿದ ಆಡಳಿತವನ್ನು ನೋಡಿಕೊಳ್ಳುವ ಅಧಿಕಾರಿ ಅಂತಃಪುರಧ್ಯಕ್ಷ ಇರಬೇಕು. ಅಂತಃಪುರವೆಗ್ಗಡೆ ಬಹುಶಃ ಅಂತಃಪುರಾಧ್ಯಕ್ಷನ ಅಧೀನದಲ್ಲಿರುತ್ತಿದ್ದ ಒಳಾಡಳಿತಕ್ಕೆ ಸಂಬಂಧಿಸಿದ ವ್ಯಕ್ತಿ ಇರಬೇಕು.

**ತಂತ್ರಪಾಲ – ತಂತ್ರವೆಗ್ಗಡೆ**

ಸ್ವರಾಜ್ಯ, ಪರರಾಜ್ಯಗಳ ರಹಸ್ಯ ಚಟುವಟಿಕೆಗಳ ಮೇಲೆ ಕಣ್ಣಿಟ್ಟು ರಹಸ್ಯ ಮಾಹಿತಿಗಳನ್ನು ಚಾರರಂತಹ ಕೆಳಗಿನ ಅಧಿಕಾರಿಗಳಿಂದ ಸಂಗ್ರಹಿಸುತ್ತಿದ್ದ ಅಧಿಕಾರಿಗಳಿರಬೇಕು. ತಂತ್ರಪಾಳರ ಮೇಲೆ ತಂತ್ರದಾಳರಧಿಷ್ಠಾಯಕನಿರುತ್ತಿದ್ದನು. ಇವರ ಕಾರ್ಯವ್ಯಾಪ್ತಿ ಶಾಸನಗಳಿಂದ ತಿಳಿದು ಬರುವುದಿಲ್ಲ.

**ಸೆಜ್ಜೆವಳ**

ರಾಜನ ಮಲಗುವ ಕೋಣೆಯ ರಕ್ಷಣೆಯ ಜವಾಬ್ದಾರಿ ಹೊತ್ತ ಅಧಿಕಾರಿ ಸೆಜ್ಜೆ+ವಳ (ಸಂ.ಶಯ್ಯೆ) ಪದಕ್ಕೆ ವಳ ವ್ಯಕ್ತಿ, ಅಧಿಕಾರ ಸೂಚಕ ಪದ ಸೇರಿದೆ. ಅಂತಃಪುರಗಳಲ್ಲಿ ಸೆಜ್ಜೆವಳ್ತಿ'ಯರು ಇರುತ್ತಿದ್ದರು.

**ಚತ್ರಾಧಿಕಾರಿ**

ದೇವಾಲಯಗಳಿಗೆ ಹೊಂದಿಕೊಂಡ ಮಡಗಲು ಇರುತ್ತಿದ್ದಂತೆ ಚತ್ರಗಳೂ (ಸಂ.ಸತ್ರ) ಇರುತ್ತಿದ್ದವು. ಇದರ ವ್ಯವಸ್ಥೆ ನೋಡಿಕೊಳ್ಳುವ ಅಧಿಕಾರಿಗಳು ಇವರಾಗಿದ್ದರು.

**ಸುಂಕದ ಅಧಿಕಾರಿಗಳು**

ಸುಂಕಾಧಿಕಾರಿಗಳು, ಸುಂಕವೆಗ್ಗಡೆಗಳು, ಇವರ ಅಧೀನದಲ್ಲಿ ಕರಣಗಳು, ಸೇನಭೋವ, ಕುಳಕರಣಿ ಇರುತ್ತಿದ್ದರು.

**ಸೇನಬೋವ**

ಸೇನಬೋವ(=ಶ್ಯಾನುಭೋಗ) ಗ್ರಾಮದ ಲೆಕ್ಕವನ್ನು ಇಡುವವನಾಗಿದ್ದನು.

**ಕಡಿತವೆಗ್ಗಡೆ**

ಕಡಿತ – ಲೆಕ್ಕ ಪತ್ರವನ್ನು ಬರೆಯಲು ಬಟ್ಟೆಯಿಂದ ತಯಾರಿಸಿದ ಕಪ್ಪು ಬಣ್ಣದ ಪಟ್ಟೆ) ಅಧಿಕೃತ ಲೆಕ್ಕ ಪತ್ರವನ್ನು ಸಂರಕ್ಷಿಸಿ ಇಡುವ ಅಧಿಕಾರಿ.

**ಇತರ ಕೆಲವು ಸಿಬ್ಬಂದಿ**

ರಾಜರನ್ನು ಹಿರಿಯ ಅಧಿಕಾರಿಗಳನ್ನು ಹೊಗಳಲು 'ವಂದಿ'ಗಳು ಇರುತ್ತಿದ್ದರು.

**ಹಡಪದವರು**

ರಾಜರಿಗೆ ಅಗತ್ಯ ಸಮಯದಲ್ಲಿ ಎಲೆ ಅಡಿಕೆಗಳನ್ನು ಸಿದ್ಧಮಾಡಿ ಕೊಡುವವರು. ಹಡಪದ ಸಾಯಣ್ಣನ ಉಲ್ಲೇಖ ಒಂದು ಶಾಸನದಲ್ಲಿ ಬಂದಿದೆ.

**ಪಡಿಹಾರ**

ರಾಜರ ಹಿರಿಯ ಅಧಿಕಾರಿಗಳ ಮನೆಯ ಬಾಗಿಲನ್ನು ಕಾಯುವವರು ಪಡಿಹಾರರು.

**ಸೂಟಿಕಾಯ್ತ : ಸೂಳಾಯ್ತ**

ಸರದಿಯ ಪ್ರಕಾರ ಕೂಗುವ ಕಾವಲುಗಾರರು. ಸೂಳಾಯ್ತರ ಮೇಲೆ ಸೂಳಾಯ್ತರಧಿಷ್ಠಾಯರು ಇರುತ್ತಿದ್ದರು. ಅಂತಃಪುರದಲ್ಲಿ ಸೂಟಿಕಾಯ್ತೆಯರನ್ನು ನೇಮಿಸಿಕೊಳ್ಳುತ್ತಿದ್ದರೆಂದು ಭಾವಿಸಬಹುದು. ಅನೇಕ ಶಾಸನಗಳಲ್ಲಿ ಕೋಲುಕಾರರ ಉಲ್ಲೇಖ ಬರುತ್ತದೆ. ನಿಘಂಟುಗಳು ಅವರನ್ನು ಸೇವಕ, ಊಳಿಗದವ ಎಂಬ ಅರ್ಥಗಳನ್ನು ನೀಡಿವೆ. ಅವರು ಅಧಿಕಾರಿಗಳಿಂದ ಅಧಿಕಾರಿಗಳಿಗೆ ಹಾಗೂ ಇತರರಿಗೆ ಸುದ್ದಿಯನ್ನು ತಿಳಿಸುವ ಕಾರ್ಯವನ್ನು ಮಾಡುತ್ತಿದ್ದರು. ಈಗಲೂ ಕೋಲುಗಾರಿಕೆ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಕೆಲವು ಕಡೆ ಜೀವಂತವಾಗಿರುವುದನ್ನು ಕಾಣಬಹುದಾಗಿದೆ. [**'ಕಾಲದ ಜಾಡಲ್ಲಿ ಕೋಲುಕಾರ'**, ಎಂ.ಜಿ. ಮಹಾದೇವ್, ಪ್ರಜಾವಾಣಿ, ಕರ್ನಾಟಕ ದರ್ಶನ ವಿಭಾಗ. ೩೧.೩.೧೯೯೦ ಪು. ೮.]

**ಪಂಚಮಹಾಶಬ್ದ ಗೌರವ**

ಕೆಲವು ಉನ್ನತ ಅಧಿಕಾರದ ಸಂಕೇತವಾಗಿ ಪಂಚಮಹಾಶಬ್ದಗಳ ಗೌರವವನ್ನು ನೀಡುತ್ತಿದ್ದುದುಂಟು. ಸರ್‌ವಾಲ್ಟರ್ ಇಲಿಯಟ್, ಕೆ.ಬಿ. ಪಾಠಕ್, ಡಾ. ವಿ. ರಾಘವನ್ ಮುಂತಾದವರು ಈ ವಿಷಯವನ್ನು ಕುರಿತು ಚರ್ಚಿಸಿದ್ದಾರೆ. ನಾಲ್ಕು ವಾದ್ಯಗಳು ಒಂದು ಮಾನುಷ ಧ್ವನಿಯೂ ಆಗಬಹುದೆಂದು ಡಾ.ವಿ.ರಾಘವನ್ ತೋರಿಸಿದ್ದಾರೆ. ಈ ಪಂಚಮಹಾಶಬ್ದ ಮರ್ಯಾದೆಯನ್ನು ರಾಜರು ತಮ್ಮ ಸಾಮಂತರಿಗೆ, ಅಧಿಕಾರಿಗಳಿಗೆ, ದೇವಾಲಯಗಳಿಗೆ ನೀಡುತ್ತಿದ್ದುದುಂಟು. ಡಾ. ಎಂ. ಚಿದಾನಂದ ಮೂರ್ತಿಯವರು ಕರ್ನಾಟಕದ ಗೋಕರ್ಣ, ಮೂಡಬಿದಿರೆ, ಉಡುಪಿ ಮುಂತಾದೆಡೆಗಳಲ್ಲಿ ಹಾಗೂ ಕೇರಳದ ದೇವಾಲಯಗಳಲ್ಲಿ ಇಂದಿಗೂ ಪಂಚವಾದ್ಯ ಸೇವೆ ಉಳಿದು ಬಂದಿರುವುದನ್ನು ತೋರಿಸಿದ್ದಾರೆ. ಹೆಸರು ಪಂಚವಾದ್ಯವೆಂದು ಇದ್ದರೂ ವಾದ್ಯಗಳ ಸಂಖ್ಯೆ ಹೆಚ್ಚು ಇರುವುದು ಕಂಡು ಬರುತ್ತದೆ.

**ಮಂಡಲದ ಆಡಳಿತ**

ಮಂಡಲದ ಆಡಳಿತ ರಾಜನಿಂದ ನೇಮಕವಾಗುತ್ತಿದ್ದ ಮಂಡಲೇಶ್ವರರಿಂದ ನಡೆಯುತ್ತಿದ್ದಿತು. ಇಂಥ ಕೆಲವು ಮಂಡಲೇಶ್ವರರ ಮೇಲೆ ಮಹಾಮಂಡಲೇಶ್ವರರು ಇರುತ್ತಿದ್ದರು. ಮಂಡಲೇಶ್ವರರು ತಮ್ಮ ಅಧೀನಕ್ಕೆ ಒಳಪಟ್ಟ ಪ್ರದೇಶಕ್ಕೆ ಸ್ವತಂತ್ರ ರಾಜರಂತೆಯೇ ಇದ್ದು ಪ್ರವಾಸ ಮಾಡುತ್ತಾ, ಪ್ರಜೆಗಳ ಕಷ್ಟ ಸುಖ, ದಾನ, ಧರ್ಮ, ರಕ್ಷಣೆ, ನ್ಯಾಯಪಾಲನೆ, ಆಡಳಿತ ಎಲ್ಲವನ್ನು ನಿರ್ವಹಿಸುತ್ತಿದ್ದರು.

**ನಾಡಿನ ಆಡಳಿತ**

ನಾಡಿನ ಆಡಳಿತ ಒಂದು ನಿರ್ದಿಷ್ಟ ವಿಸ್ತೀರ್ಣದ ಪ್ರದೇಶದ ಆಡಳಿತ ಘಟಕವಾಗಿ ಕಂಡುಬರುತ್ತದೆ. ಈ ಕಾಲದಲ್ಲಿಯೂ ನಾಡು ಉತ್ತರ ಪದವಾಗಿ ಕೆಲವು ರಾಜ್ಯಗಳಿಗೆ ಹೆಸರಾಗಿದೆ. ಈ ಕಾಲದಲ್ಲಿರುವಷ್ಟು ವಿಸ್ತಾರ ಆ ಕಾಲದಲ್ಲಿ ನಾಡಿಗೆ ಇರಲಿಲ್ಲ. ಆಗಾಗ ಸಭೆ ಸೇರಿ ನಾಡುಗಳು ಆಡಳಿತ ನಿರ್ವಹಿಸುತ್ತಿದ್ದವು. ಡಾ.ಜಿ.ಎಸ್. ದೀಕ್ಷಿತ್ ಅವರು ನಾಡು ಕೇಂದ್ರ ಮತ್ತು ಸ್ಥಳೀಯ ಘಟಕಗಳ ನಡುವೆ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತಿದ್ದುದನ್ನು ತಿಳಿಸಿದ್ದಾರೆ. ನಾಡಿನ ಮುಖ್ಯಸ್ಥ 'ನಾಳ್ಪ್ರಭು' ಎಂದು ಕರೆಸಿಕೊಳ್ಳುತ್ತಿದ್ದ. ಮಹಾನಾಡು

ನಡೆಸುತ್ತಿದ್ದ ಸಭೆಗಳು ತುಂಬಾ ದೊಡ್ಡ ವ್ಯಾಪ್ತಿಯನ್ನು ಒಳಗೊಂಡಿರುತ್ತಿದ್ದವು. ನಾಡು ಪದಕ್ಕೆ ಸಮಾನಾರ್ಥಕವಾಗಿ ವಿಷಯ ಎಂಬ ಪದ ಪ್ರಯೋಗವಾಗಿರುವಂತೆ ಕಂಡುಬರುತ್ತದೆ.

### ಪಟ್ಟಣದ ಆಡಳಿತ : ಪಟ್ಟಣಸ್ವಾಮಿ

ಪ್ರಾಚೀನ ಕರ್ನಾಟಕದಲ್ಲಿ ರಾಜಧಾನಿಗಳನ್ನು ರಾಜಧಾನಿ ಪಟ್ಟಣ, ಸ್ಕಂಧಾವಾರ, ನೆಲೆಬೀಡು ಎಂದು ಕರೆದಿರುವುದುಂಟು. ಕೆಲವು ಸಾರಿ ನೆಲೆಬೀಡು ರಾಜರು ಪ್ರವಾಸ ಕಾಲದಲ್ಲಿ ಉಳಿದುಕೊಂಡು ಸ್ಥಳಗಳಿಗೂ ಅನ್ವಯಿಸುವುದುಂಟು. ರಾಜಧಾನಿಗಳು ರಾಜನ ನೇರವಾದ ಆಡಳಿತಕ್ಕೆ ಒಳಪಟ್ಟಿರುತ್ತಿದ್ದವು. ಉಳಿದಂತೆ ಅನೇಕ ಪಟ್ಟಣಗಳಿರುತ್ತಿದ್ದವು. ಪ್ರದೇಶಗಳ ಅಗತ್ಯವನ್ನು ಅನುಸರಿಸಿ ಪಟ್ಟಣಗಳ ನಿರ್ಮಾಣ ಆಗುತ್ತಿತ್ತು. ಸಾಮಾನ್ಯವಾಗಿ ಒಂದು ಗ್ರಾಮದಲ್ಲಿ ಸಂತೆ ಏರ್ಪಡುವುದರ ಮೂಲಕ ಅದು ಪಟ್ಟಣವಾಗಿ ಮಾರ್ಪಡುತ್ತಿತ್ತು. ಪಟ್ಟಣಗಳು ಬಹುಮಟ್ಟಿಗೆ ವ್ಯಾಪಾರ ಕೇಂದ್ರಗಳಾಗಿರುತ್ತಿದ್ದವು. ಪಟ್ಟಣಗಳಿಗೆ ಜನರನ್ನೂ, ವ್ಯಾಪಾರಿಗಳನ್ನು ಆಕರ್ಷಿಸಲು ತೆರಿಗೆಗಳಲ್ಲಿ ಕೆಲವು ರಿಯಾಯಿತಿಗಳನ್ನು ಕೊಡುತ್ತಿದ್ದುದುಂಟು. ಪಟ್ಟಣದ ಆಡಳಿತ ಪಟ್ಟಣ ಸ್ವಾಮಿಯ ಜವಾಬ್ದಾರಿಯಾಗಿದ್ದಿತು. ಪಟ್ಟಣ ಸ್ವಾಮಿ ಅನೇಕ ವೇಳೆ ಪಟ್ಟಣದ ಸ್ಥಾಪಕ ಆಗಿರುತ್ತಿದ್ದನೆಂದು ಡಾ.ಎ.ವಿ.ವೆಂಕಟರತ್ನಂ ಅಭಿಪ್ರಾಯ ಪಡುತ್ತಾರೆ. ಪಟ್ಟಣ ಸ್ವಾಮಿಯ ಹುದ್ದೆಗೆ ಸಂಭಾವನೆಯೂ ಇರುತ್ತಿತ್ತು. ಸಾಮಾನ್ಯವಾಗಿ ಪಟ್ಟಣಕ್ಕೆ ಒಬ್ಬ ಪಟ್ಟಣ ಸ್ವಾಮಿ ಇರುತ್ತಿದ್ದನು. ಪಟ್ಟಣ ವಿಶಾಲವಾಗಿದ್ದರೆ ಅಗತ್ಯಕ್ಕೆ ಅನುಗುಣವಾಗಿ ಇಬ್ಬರು, ಮೂವರು ಇರುತ್ತಿದ್ದುದುಂಟು. [ಡಾ. ಎ.ವಿ. ವೆಂಕಟರತ್ನಂ: ವಿಜಯನಗರ ಕಾಲದಲ್ಲಿ ಸ್ಥಳೀಯ ಸರ್ಕಾರ – ೧೨೯]

### ಅಗ್ರಹಾರಗಳು

ಅಗ್ರಹಾರಗಳು ಬ್ರಾಹ್ಮಣರಿಗೆ ದತ್ತಿಯಾಗಿ ನೀಡಲಾದ ಊರುಗಳು. ಇಂಥ ಊರುಗಳ ಆದಾಯ ಪೂರ್ಣವಾಗಿ ಅವರಿಗೇ ಸಲ್ಲುತ್ತಿತ್ತು. ಒಂದು ರೀತಿಯಲ್ಲಿ 'ಮಹಾಜನರು' ಅಗ್ರಹಾರದ ಪ್ರಭುಗಳಾಗಿದ್ದರು. ಮಹಾಜನರು ಆಡಳಿತಾತ್ಮಕವಾಗಿ ಎಲ್ಲ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಅವರು ಸಭೆ ಸೇರಿ "ತಮ್ಮೊಳೇಕಸ್ಥರಾಗಿ" ಒಮ್ಮತದಿಂದ ನಿರ್ಣಯ ತೆಗೆದುಕೊಂಡು ಆಡಳಿತ ಮಾಡುತ್ತಿದ್ದರು. ಸಾಮಾನ್ಯವಾಗಿ ಅಗ್ರಹಾರದ ಬ್ರಾಹ್ಮಣ ಕುಟುಂಬದ ಮುಖ್ಯಸ್ಥರು ಮಹಾಜನರಾಗಿರುತ್ತಿದ್ದರು. ಅವರು ಊರಿ ಸಮಸ್ತ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದರು.

### ಹಳ್ಳಿಗಳ ಆಡಳಿತ

ಹಳ್ಳಿಗಳ ಆಡಳಿತ ಪಟ್ಟಣಗಳಿಗೆ ಹೋಲಿಸಿದರೆ ತುಂಬಾ ವ್ಯಾಪಕವಾದುದು. ಹಳ್ಳಿಗಳ ಸಂಖ್ಯೆ ತುಂಬಾ ಹೆಚ್ಚಾಗಿದ್ದಿತು. ಪ್ರಾಚೀನ ಕರ್ನಾಟಕ ಅಷ್ಟೇಕೆ ಪ್ರಾಚೀನ ಭಾರತವೆಂದರೆ ಹಳ್ಳಿಗಳ ದೇಶವೇ ಆಗಿದೆ. ಸಾಮಾನ್ಯ ಸೂತ್ರ, ಸಾಂಪ್ರದಾಯಿಕ ರೂಢಿಗಳಿಂದ ಬದ್ಧವಾದ ಗ್ರಾಮೀಣ ಬದುಕು ಪ್ರಾಚೀನ ಕಾಲದಲ್ಲಿ ತನ್ನದೇ ರೀತಿಯಲ್ಲಿ ನಡೆದುಬಂದಿದೆ. ಹಳ್ಳಿಗಳ ಆಡಳಿತ ವ್ಯವಸ್ಥೆಯಲ್ಲಿ ಪ್ರತಿಯೊಂದು ಹಳ್ಳಿಗೂ ತನ್ನದೇ ಆದ ಗಡಿ ಇರುತ್ತಿತ್ತು. ಗ್ರಾಮಗಳ ಮುಖ್ಯಸ್ಥರನ್ನು ಗಾವುಂಡ, ಗೌಡ, ಗಾಮುಂಡ, ಊರೊಡೆಯ, ಊರುಪ್ರಭು, ಗ್ರಾಮಣಿ ಎಂಬ ಹೆಸರುಗಳಿಂದ ಕರೆದಿರುವುದುಂಟು. ಇಡೀ ಗ್ರಾಮದ ಸಭೆಯನ್ನು "ಊರು" ಎಂದು ಕರೆಯಲಾಗುತ್ತಿತ್ತು. ಗ್ರಾಮದ ಮುಖ್ಯಸ್ಥನ ಆಯ್ಕೆ ಯಾವ ರೀತಿಯಲ್ಲಿ ಆಗುತ್ತಿತ್ತು ಎಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಗ್ರಾಮಸಭೆಗಳಿಗೆ ಚುನಾವಣೆಗಳು ಇರಲಿಲ್ಲ; ಪ್ರತಿನಿಧಿ ತತ್ವವಿದ್ದಿತೆಂದು ವಿದ್ವಾಂಸರು ಭಾವಿಸುತ್ತಾರೆ. ಊರಿಗೆ ಸಂಬಂಧಪಟ್ಟ ದಾನ, ಧರ್ಮಕಾರ್ಯಗಳು, ವಿವಾದಗಳು, ನ್ಯಾಯತೀರ್ಮಾನ ಮುಂತಾದವುಗಳಲ್ಲಿ ಅವರೇ ನಿರ್ವಹಿಸುತ್ತಿದ್ದರು. ಕೆಲವು ವಿಷಯ ತಮ್ಮ ಕೈಮೀರಿದಾಗ ಮೇಲಧಿಕಾರಿಗಳಿಗೋ, ರಾಜನಿಗೋ ತಿಳಿಸಿ ಪರಿಹಾರ ಕಂಡುಕೊಳ್ಳುತ್ತಿದ್ದರು. ಗ್ರಾಮಗಳ ಆಡಳಿತದಲ್ಲಿ ಗಾವುಂಡರಿಗೆ ಸೇನಬೋವರು ಆಪ್ತ ಕಾರ್ಯದರ್ಶಿಯಂತೆ ಇರುತ್ತಿದ್ದರು. ಇವರು ಬರವಣಿಗೆಯಲ್ಲಿ ಚೆನ್ನಾಗಿ ಪಳಗಿರುತ್ತಿದ್ದರು. ಅನೇಕ ಶಾಸನಗಳನ್ನು ಸೇನಬೋವರು ಬರೆದರು ಎಂಬ ಮಾತು ಕಂಡು ಬರುತ್ತದೆ.

### ನ್ಯಾಯಪಾಲನೆ

ನ್ಯಾಯ ಪರಿಪಾಲನೆಯನ್ನು ಊರಿನ ಹಿರಿಯರು, ಗಾವುಂಡರು, ಮಹಾಜನಗಳು, ನಾಳ್ಪ್ರಭುಗಳು, ಅಧಿಕಾರಿಗಳು ನಿರ್ವಹಿಸುತ್ತಿದ್ದರು. ಅಪರಾಧಿಗಳಿಗೆ ಶಿಕ್ಷೆಯನ್ನೋ, ದಂಡವನ್ನೋ ವಿಧಿಸುತ್ತಿದ್ದರು. ಯಾವುದೇ ವಿವಾದಗಳು ಸ್ಥಳೀಯ ಮಟ್ಟದಲ್ಲಿ ತೀರ್ಮಾನ ಆಗಲಾರವು ಎನ್ನಿಸಿದಾಗ ಅವುಗಳನ್ನು ರಾಜನೇ ತೀರ್ಮಾನಿಸುತ್ತಿದ್ದನು. ರಾಜನು ಅಂಥ ಸಮಯದಲ್ಲಿ 'ಧರ್ಮಾಧಿಕರಣ' ದವರನ್ನೂ ಸಹಾಯಕ್ಕೆ ತೆಗೆದುಕೊಳ್ಳುತ್ತಿದ್ದನೆಂಬ ಸೂಚನೆ ಹರಿಶ್ಚಂದ್ರ ಕಾವ್ಯದಲ್ಲಿದೆ.

### ದಿವ್ಯ

ಅಪರಾಧಗಳನ್ನು ನಿರ್ಣಯಿಸುವ, ನ್ಯಾಯತೀರ್ಮಾನ ನೀಡುವ ಪ್ರಾಚೀನ ವಿಧಾನಗಳಲ್ಲಿ ದಿವ್ಯವೂ ಒಂದಾಗಿತ್ತು. ಅಪರಾಧ ನಿರ್ಣಯ ಮನುಷ್ಯ ಸಾಕ್ಷಿಯ ಅಭಾವದಲ್ಲಿ ದೈವವನ್ನು ಆಧರಿಸಿ ನಡೆಯುತ್ತಿತ್ತು. ಆದ್ದರಿಂದ ಅದನ್ನು

ದಿವ್ಯವೆಂದು ಕರೆಯುತ್ತಿದ್ದರು. ಡಾ.ಪಿ.ವಿ. ಕಾಣೆಯವರು ದಿವ್ಯವನ್ನು ನಡೆಸುವ ವಿಧಾನ, ಕ್ರಮ ಮುಂತಾದವುವನ್ನು ವಿವರವಾಗಿ ನಿರೂಪಿಸಿದ್ದಾರೆ. [**ಹಿಸ್ಟರಿ ಆಫ್ ಧರ್ಮಶಾಸ್ತ್ರ** II ಪು. ೩೬೧–೭೮.] ಸಪ್ತದಿವ್ಯಗಳು ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿ ನಡೆಯುತ್ತಿದ್ದುದು ತಿಳಿದುಬರುತ್ತದೆ. [(ರೈ) ಎಕ VII ಶಿಕಾರಿಪುರ ೧೮೫ ಕ್ರಿ.ಶ. ೧೧೫೮.] ಇಂಥ ದಿವ್ಯಗಳು ಮಹಾಜನರು, ನಾಡಪ್ರಭುಗಳು, ಗೌಡಗಳು, ನಖರ, ಮುಮ್ಮುರಿದಂಡ ಮುಂತಾದವರ ಸಮ್ಮುಖದಲ್ಲಿ ನಡೆಯುತ್ತಿದ್ದವು.

ಹೀಗೆ ಶಾಸನ ಅಧ್ಯಯನದಿಂದ ಪ್ರಾಚೀನ ಕಾಲದ ವ್ಯವಸ್ಥಾಪನೆಯಲ್ಲಿ ಅಧಿಕಾರ ಶ್ರೇಣಿ ಹೇಗೆ ಅಧಿಕಾರ, ಕರ್ತವ್ಯ ನಿರ್ವಹಣೆ ಮಾಡುತ್ತಿತ್ತು ಎಂಬ ಒಂದು ಚಿತ್ರ ದೊರೆಯುತ್ತದೆ. ಈ ವಿಷಯದಲ್ಲಿ ವ್ಯಾಪಕವಾದ ಅಧ್ಯಯನಕ್ಕೆ ಅವಕಾಶಗಳು ಇರುವುದು ಮಾಹಿತಿಯ ಬಾಹುಳ್ಯದಿಂದಲೇ ಎದ್ದು ಕಾಣುತ್ತದೆ. ಆಧುನಿಕ ವ್ಯವಸ್ಥಾಪನೆಯ ಚೌಕಟ್ಟಿನ ಬೆಳಕಿನಲ್ಲಿ, ಪ್ರಾಚೀನ ಪದ್ಧತಿಗಳ ಅಧ್ಯಯನ ಹೆಚ್ಚು ಫಲಕಾರಿಯಾಗಬಲ್ಲದು.

❑❑

# ನೇಮಿಚಂದ್ರನ ಕೆಲವು ಪ್ರಯೋಗಗಳು ಮತ್ತು ಕೆಲವು ವಚನಗಳು – ಒಂದು ಹೋಲಿಕೆ

– ಎಂ.ಎಸ್. ಸುಜಯ

'ಬಲ್ಲರ ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ' [ನೇಮಿನಾಥ ಪುರಾಣಂ ೧–೩೪) ಎಂದು ಘೋಷಿಸಿರುವ ನೇಮಿಚಂದ್ರ ಕವಿ ಅದನ್ನು ಅಕ್ಷರಶಃ ಪಾಲಿಸಿರುವುದನ್ನು 'ಲೀಲಾವತೀ ಪ್ರಬಂಧಂ ಮತ್ತು ನೇಮಿನಾಥ ಪುರಾಣಂ'ಗಳಲ್ಲಿ ಕಾಣಬಹುದು. ಕನ್ನಡ, ಸಂಸ್ಕೃತ, ಪ್ರಾಕೃತಗಳ ಅಗಾಧವಾದ ಅಧ್ಯಯನ ಈ ಕವಿಯ ಕಾವ್ಯನಿರ್ಮಿತಿಗೆ ಪ್ರೇರಣೆಯನ್ನೊದಗಿಸಿ ಅವುಗಳನ್ನು ಸಮೃದ್ಧಿಗೊಳಿಸಿವೆ. ಮಹಾಕಾವ್ಯಗಳಾಗಲೀ ಲಘುಕಾವ್ಯ, ನಾಟಕಗಳಾಗಲೀ ಸತ್ವಪೂರ್ಣವಾಗಿರುವುದೆಲ್ಲವನ್ನೂ ಕವಿ ಉಪಯೋಗಿಸಿಕೊಳ್ಳುವುದರಲ್ಲಿ ಸಫಲನಾಗಿದ್ದಾನೆ. ವಸ್ತು, ಆಲೋಚನಾವಿಧಾನ, ಅಭಿವ್ಯಕ್ತಿಯ ಭಾಷೆ, ಶೈಲಿ ಮುಂತಾದ ಕಾವ್ಯನಿರ್ಮಾಣದ ವಿವಿಧ ಹಂತಗಳಲ್ಲಿ ನಡೆದಿರುವ ಸ್ವೀಕೃತಿಯ ಅನೇಕ ಅಂಶಗಳನ್ನು ಗುರುತಿಸಿದ್ದಾರೆ[೧]. ಅದೇ ರೀತಿ ಕನ್ನಡದಲ್ಲಿ ಪೂರ್ವಕವಿಗಳ ಸಂದರ್ಭದಲ್ಲಿ ಕವಿರಾಜಮಾರ್ಗಕಾರನಿಂದ ಮೊದಲುಗೊಂಡು ಪಂಪ, ರನ್ನ, ನಾಗವರ್ಮ, ನಯಸೇನ, ಜನ್ನರಾದಿಯಾಗಿ ಕರ್ಣಪಾರ್ಯ, ರುದ್ರಭಟ್ಟನವರೆಗೆ ನೇಮಿಚಂದ್ರನು ಸ್ಫೂರ್ತಿ, ಪ್ರೇರಣೆಗಳನ್ನು ಪಡೆದಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ[೨]. ಈ ಬಗ್ಗೆ ಇನ್ನೂ ಹೇರಳವಾದ ಉದಾಹರಣೆಗಳನ್ನು ಗುರುತಿಸಬಹುದು. ಹೀಗೆ ಈ ಎಲ್ಲ ಬಗೆಯ ಪ್ರಭಾವದಿಂದ ಸ್ಫೂರ್ತಿಗೊಂಡ ರಚನೆಗಳಿಗೆ ಕವಿಯು ತನ್ನದೇ ಆದ ಛಾಪು ಒತ್ತಿ ವಿಭಿನ್ನವಾದ ರಸಸ್ಥಾನಗಳನ್ನು ನಿರ್ಮಾಣ ಮಾಡಿರುವುದು ಕಾವ್ಯಾಭ್ಯಾಸಿಗಳಿಗೆ ತಿಳಿದ ಸಂಗತಿ.

ಹೀಗೆ ಪೂರ್ವಕವಿಗಳಿಂದ ಧಾರಾಳವಾಗಿ ಸ್ವೀಕಾರ ಮಾಡಿ ಅವರಿಗೆ ಅಪಾರವಾಗಿ ಋಣಿಯಾಗಿರುವ ಕವಿ, ಅವರಿಗೆ ಕೃತಜ್ಞತೆಯನ್ನು ಸಲ್ಲಿಸುವ ಕೆಲಸದ ವಿಷಯದಲ್ಲಿ ಧಾರಾಳವಾಗಿಲ್ಲ. ಸಮಂತಭದ್ರ, ಅಕಳಂಕದೇವ ಮುಂತಾದವರನ್ನು ಸ್ಮರಿಸಿದ ಕವಿ–ಪಂಪ, ರನ್ನ ಮೊದಲಾದ ಕವಿ ಪರಂಪರೆಯ ಬಗ್ಗೆ ಮೌನವಹಿಸಿದ್ದಾನೆ. ತನ್ನ ಸ್ವಂತ ವಿಷಯಗಳ ಬಗ್ಗೆ ಒಂದು ಸ್ವಲ್ಪವೂ ಹೇಗೆ ಸುಳಿವು ಕೊಟ್ಟಿಲ್ಲವೋ ಹಾಗೆಯೇ ಪೂರ್ವಕವಿಗಳ ಬಗ್ಗೆಯೂ ಏನೂ ಹೇಳದೆ ಸುಮ್ಮನಾಗಿ ಬಿಟ್ಟಿದ್ದಾನೆ. ಈ ಬಗೆಯ ಒಂದು ರೀತಿಯ ನಿಗೂಢತೆ ಕವಿಯ ಗುಣಸ್ವಭಾವದ ಒಂದು ಮುಖವೋ ಏನೋ. ಇದು ಗುಣವೋ ದೋಷವೋ ನಿರ್ಧರಿಸುವುದು ಕಷ್ಟ "ನೇಮಿಚಂದ್ರ ವಾಚ್ಯವಾಗಿ ಪೂರ್ವ ಕವಿಸ್ಮರಣೆ ಮಾಡದಿದ್ದರೂ, ಅವರು ಹಾಕಿಕೊಟ್ಟ ಹೆದ್ದಾರಿಯಲ್ಲಿ ನಡೆದು, ನಡುನಡುವೆ ಅವರ ಭಾವಾಲೋಚನೆ ಶೈಲಿಯನ್ನನುಕರಿಸಿ, ಅವರಿಗೆ ಮೌನಗೌರವವನ್ನು ಸಲ್ಲಿಸಿದ್ದಾನೆಂದೇ ಹೇಳಬೇಕು"[೩] – ಎಂದು ಕವಿಯ ಪರವಾಗಿ ಸಮಜಾಯಿಷಿ ಹೇಳಬಹುದಾದರೂ ಉದ್ದೇಶಪೂರ್ವಕವೆಂದು ಭಾಸವಾಗುವ ಈ ಮೌನದ ಕಾರಣ ಅನೂಹ್ಯ.

ಈ ಹಿನ್ನೆಲೆಯಲ್ಲಿ ಕೆಲವು ಗಮನಾರ್ಹ ಅಂಶಗಳನ್ನು ನೋಡಬಹುದು.

ಕವಿ ನೇಮಿಚಂದ್ರ ಲೀಲಾವತೀ ಪ್ರಬಂಧವನ್ನು ಸೌಂದತ್ತಿಯ ರಟ್ಟರ ಒಂದನೆಯ ಲಕ್ಷ್ಮೀಧರನ ಆಶ್ರಯದಲ್ಲಿ ಕ್ರಿ.ಶ. ೧೧೮೮–೧೧೯೨ರ ಅವಧಿಯಲ್ಲಿ ರಚಿಸಿದನೆಂದು ವಿದ್ವಾಂಸರು ನಿರ್ಧರಿಸಿದ್ದಾರೆ.[೪] ಆ ಕಾಲಕ್ಕಾಗಲೇ ಕಲ್ಯಾಣದಲ್ಲಿ ಬಸವಣ್ಣನವರ ವಚನ ಆಂದೋಲನ ಯುಗ ಪ್ರಾರಂಭವಾಗಿದ್ದಿತು. ಕನ್ನಡ ನಾಡಿನ ಉದ್ದಗಲಗಳಲ್ಲೆಲ್ಲಾ ವಚನಗಳ, ವಚನಕಾರರ ಪ್ರಭಾವ ಹಬ್ಬುತ್ತಿತ್ತು. ನೇಮಿಚಂದ್ರನ ಮಟ್ಟಿಗೆ ಹೇಳುವುದಾದರೆ, ಸತ್ವಪೂರ್ಣವಾದ, ಕಾವ್ಯಗುಣಾಂಶಗಳು ಯಾವುದರಲ್ಲೇ ಇರಲಿ ಆತನನ್ನು ಅದು ಸೆಳೆದಿರುತ್ತದೆ. ಇದು ಅವನ ಕರ್ತೃತ್ವಶಕ್ತಿಗೆ ಪೂರಕವಾದ ಒಂದು ಮುಖ್ಯವಾದ ಆಯಾಮವೂ ಹೌದು. ಹೀಗಾಗಿ ವಚನಗಳ ಅದ್ಭುತವಾದ ಅಭಿವ್ಯಕ್ತಿಯ ರೀತಿ, ನಿರೂಪಣೆಯ ವಿಧಾನದ ಮಾಂತ್ರಿಕತೆಯಿಂದ (ವಚನಕಾರರು ಪ್ರತಿಪಾದಿಸಿದ ಮೌಲ್ಯಗಳನ್ನು ಇಲ್ಲಿ ಅನ್ವಯ ಮಾಡುತ್ತಿಲ್ಲ) ನೇಮಿಚಂದ್ರ ಆಕರ್ಷಿತನಾಗಿರುವ ಸಾಧ್ಯತೆ ಇದೆ ಎನ್ನಬಹುದು. ಈ ದೃಷ್ಟಿಯಿಂದ ಲೀಲಾವತೀ ಪ್ರಬಂಧದಲ್ಲಿ ಕೆಲವು ಕಡೆ ವಚನಗಳನ್ನು ಹೋಲುವ ಉಕ್ತಿಗಳನ್ನು ಗಮನಿಸಬಹುದು.

# ೧೪೮, ೭ನೇ ಸಿ. ಮುಖ್ಯರಸ್ತೆ, ೩ನೇ ಅಡ್ಡ ರಸ್ತೆ, ಕೆ.ಎಚ್. ಲೇಔಟ್, ವಿಜಯನಗರ ೨ನೇ ಹಂತ, ಬೆಂಗಳೂರು – ೫೬೦೦೪೦

* (ಕೋಷ್ಟಕ ೧)

| ಲೀಲಾವತೀ | ಬಸವಣ್ಣನವರ ವಚನ |
|---|---|
| ಕಟ್ಟಲೆ ಕವಿಯದ ಮುನ್ನಂ ಮಾರ್ತಂಡನುಮಸ್ತಗಿರಿಗೆ<br>ಸಾರದ ಮುನ್ನಂ (೫-೯೫) | ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ<br>ಗೂಡುವೋಗದ ಮುನ್ನ[೫] (ಬಸವ, ೪೩-೧೬೧) ಮತ್ತು<br>ಕಾಳಿಯ ಕಣ್ ಕಾಣ<br>ದಿಂದ ಮುನ್ನ ತ್ರಿಪುರಸಂಹಾರದಿಂದ<br>ಮುನ್ನ ಹರ ವಿರಂಚಿಗಳಿಂದ ಮುನ್ನ (ಬಸವ ೧-೨.) |
| ರತಮನೆ ಮಧ್ಯದೊಳ್ ಮುಳಿದು ತಾಂ ಮಗುವಂ ಮೊಲೆಯೂಡಲೀಶ<br>ಚುಂಬಿತ ವದನಾಬ್ಜಮಂ ತೆಗೆದು ತಾಂ ಶಿಶುವಂ ನುಡಿಸಲ್ಕೆ<br>ಬಲ್ಪಿನಿಂ ಪತಿಪರಿರಂಭಮಂ ಬಿಡಿಸಿ ಕೂಸಳೆ ನಂಬಿಸಲಿರ್ದ<br>ಸೂಳೆವಾಣತಿಯೆರಡರ್ಕೆ ಬಿಟ್ಟ ಕರುವೋಲೆಡೆಯಾಡಿದಳ್ (೨-೧೨೩) | ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ<br>ಕೊಂಡರೆ ಕೂಸಿಂಗಲ್ಲ ಬೊಜಗಂಗಲ್ಲ<br>ಕೂಸನೊಮ್ಮೆ ಸಂತಯ್ಸುವಳು ಬೊಜಗನ<br>ನೊಮ್ಮೆ ನೆರೆವಳು (ಬಸವ. ೨೭-೧೦೧) |
| ತಡಿ ಕಣಕಾಲುದ್ದಂ ಕಿರುದೊಡೆಯುದ್ದಂ ಪೋಗೆವೋಗೆ ಪೆರ್ದೊಡೆ<br>ಯುದ್ದಂ ನಡುನೀರೆನೆ ಪಾಯ್ದರ್.. ನದಿಯಂ (೫-೭೯) | ಸಂಸಾರಸಾಗರ ಉರದುದ್ದವೆ ಹೇಳಾ<br>ಸಂಸಾರ ಸಾಗರ ಕೊರಲುದ್ದವೆ ಹೇಳಾ<br>ಸಂಸಾರಸಾಗರ ಸಿರದುದ್ದವಾದ ಬಳಿಕ (ಬಸವ. ೪-೮) |
| "ದೈವಂ ಮಾಡಿ ತೀರ್ಥಾಂಬುವಂ ಸುರಿದೆಲ್ಲಂ ಪೊಡೆವಟ್ಟು<br>ಪೂಜಿಸಿದೊಡಂ ಕಲ್ ಮೆಲ್ಲಿತೇನಾದುದೇ (೧-೫೧) | ಎನಿಸು ಕಾಲ ಕಲ್ಲು ನೀರೊಳಗಿರ್ದರೇನು<br>ನೆನೆದು ಮೃದುವಾಗಬಲ್ಲುದೇ (ಬಸವ. ೨೬-೯೯) |
| ನಿಲ್ ನೀನಾರವಂ (೧೪-೮೭) | ಇವನಾರವ ಇವನಾರವ (ಬಸವ. ೧೭-೬೨) |
| ಬಯಲ ಬಯಲೊಳಡಗಲ್ ಬಗೆವೈ (೪-೬೩) | ಅಲ್ಲಮಪ್ರಭು ವಚನ<br>ಬಯಲು ಬಯಲನೆ ಬಿತ್ತಿ<br>ಬಯಲು ಬಯಲನೆ ಬೆಳೆದು<br>ಬಯಲು ಬಯಲಾಗಿ ಬಯಲಾಯಿತ್ತಯ್ಯಾ (ಅವಚಂ. ೧೫೫-೧೬೯) |
| ನಲ್ಲನಂ ಬರಿಸೆನ್ನಲ್ಲಿಗೆ ತೊರಮಲ್ಲಿಗೆಯೆಲೇ ಬೆಳ್ದಿಂಗಳೇ ನಿಮ್ಮನಾಂ ನೆರೆವೆಂ<br>ಕೋಗಿಲೆ ನಿನ್ನ ಕಾಲ್ವಿಡಿದಪೆಂ (೨-೫೫)[೬] | ಮಹಾದೇವಿಕ್ಕನ ವಚನ<br>ಅಳಿಸಂಕುಳವೇ ಮಾಮರನೇ ಬೆಳುದಿಂಗಳೇ<br>ಕೋಗಿಲೆಯೇ ನಿಮ್ಮೆಲ್ಲರನು ಒಂದು ಬೇಡುವೆನು<br>(ಮಹಾದೇ. ಬ. ೩೫-೭೪) |

ಸಾಮಾನ್ಯವಾಗಿ ವಚನಗಳ ಅಭ್ಯಾಸಿಗಳಿಗೆ ಅವುಗಳ ಪ್ರಭಾವ ಒಂದು ನಿರ್ದಿಷ್ಟವಾದ ರೀತಿಯಲ್ಲಿ ಕೆಲಸ ಮಾಡುತ್ತದೆ. ಹೀಗಾಗಿ ಒಂದು ಗೊತ್ತಾದ ಚೌಕಟ್ಟಿನಲ್ಲೇ ಅವುಗಳನ್ನು ನೋಡುವ ಪರಿಪಾಠವಿರುತ್ತದೆ. ಆದುದರಿಂದ 'ಅಳಿಸಂಕುಳವೇ' ಎನ್ನುವಂತಹ ವಚನದಿಂದ ಪ್ರೇರಣೆ ಹೊಂದಿದೆ ಎನ್ನಬಹುದಾದ 'ನಲ್ಲನಂ ಬರಿಸೆನ್ನಲ್ಲಿಗೆ' ಎನ್ನುವ ರಚನೆ ವೇಶ್ಯಾವಟಿಯ ಪ್ರಸಂಗದಲ್ಲಿ ಕಂಡುಬಂದಾಗ ಅದು ಒಂದು ವಿಧವಾದ ಸಾಂಸ್ಕೃತಿಕ ಆಘಾತ (Culture shock) ಆಗುತ್ತದೆ. ಆದರೆ ನೇಮಿಚಂದ್ರನ ರೀತಿಯೇ ಹೀಗೆ ವಿಶಿಷ್ಟವಾದುದು. ವಿಭಿನ್ನವಾದ ರಸಸ್ಥಾನಗಳು ವಿಭಿನ್ನವಾದ ಚಮತ್ಕಾರಗಳು ಅವನ ಕಾವ್ಯಾಭ್ಯಾಸಿಗಳ ಮನಸ್ಸನ್ನು ಯಾವಾಗಲೂ ಹಿಡಿದಿಡುತ್ತದೆ.

ಇಲ್ಲಿ ಒಂದು ಕುತೂಹಲಕಾರಿ ಅಂಶವೆಂದರೆ, ಕಲ್ಯಾಣದಿಂದ ಸೌಂದತ್ತಿಯವರೆಗಿನ ಭೌಗೋಳಿಕ ವ್ಯಾಪ್ತಿಯನ್ನು ಗಮನಿಸಿದರೆ, ಕೇವಲ ಇಪ್ಪತ್ತು –ಇಪ್ಪತ್ತೆರಡು ವರ್ಷಗಳ ಅವಧಿಯಲ್ಲಿ (ಮಾಧ್ಯಮಗಳ ಪರಿಮಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು) ವಚನಕಾರರ ಪ್ರಭಾವ ಹರಡಿರುವ ಬೇಗ ತೀವ್ರವೇ ಎನ್ನಬಹುದು.

ಮುಂದೆ ಈ ಬಗೆಯ ಸಾಮ್ಯಗಳು ನೇಮಿನಾಥ ಪುರಾಣದಲ್ಲೂ ಮುಂದುವರೆದಿರುವದನ್ನು ನೋಡಬಹುದು.

ನೇಮಿಚಂದ್ರ ಕವಿಯ ಎರಡನೆಯ ಆಶ್ರಯದಾತ, ಹೊಯ್ಸಳರ ಎರಡನೆಯ ವೀರಬಲ್ಲಾಳನ ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭ. ನೇಮಿನಾಥಪುರಾಣ ಕ್ರಿ.ಶ. ೧೧೯೨-೧೨೦೦ರ ಅವಧಿಯಲ್ಲಿ ರಚನೆಯಾಯಿತೆಂದು ವಿದ್ವಾಂಸರಿಂದ ದೃಢಪಟ್ಟಿದೆ.[೭] ಎರಡನೆಯ ವೀರಬಲ್ಲಾಳನ

ಆಳ್ವಿಕೆಯ ಸಮಯ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತುಂಬ ಕ್ರಿಯಾಶೀಲವಾದ ಚಟುವಟಿಕೆಯ ಕಾಲ. ಈ ದೊರೆಯ ದಿಗ್ವಿಜಯಗಳ ವ್ಯಾಪ್ತಿ ಬಹಳ ವಿಶಾಲವಾಗಿದೆ. "ಇಮ್ಮಡಿ ಬಲ್ಲಾಳನು ಸೊರಟೂರಿನಲ್ಲಿ ಕುರುಗೋಡು, ಅನಂತಪುರದ ಗೂಟೆ, ಲಕ್ಷ್ಮೀಶ್ವರದ ಬಳಿಯ ಬೆಳ್ಳತ್ತಗೆ, ಧಾರವಾಡ ಜಿಲ್ಲೆಯ ರಟ್ಟಹಳ್ಳಿ ಮತ್ತು ಅಜೇಯವಾದ ವಿರಾಟನ ಕೋಟೆ (ಎಂದರೆ ಹಾನಗಲ್ಲು) ಮೊದಲಾದ ಕಡೆಗಳಲ್ಲಿರುವ ದುರ್ಗಗಳನ್ನೆಲ್ಲ ನೆಲಸಮ ಮಾಡಿದನು. ಈ ದುರ್ಗನಾಶನ ಕಾರ್ಯವು ಕ್ರಿ.ಶ. ೧೧೯೩ರಿಂದ ೧೧೯೬ರವರೆಗಿನ ಅಂತರಕಾಲದಲ್ಲಿ ನಡೆದಿರಬೇಕು. ಸುಮಾರು ೧೧೯೩ರಲ್ಲಿ ಧಾರವಾಡ ಜಿಲ್ಲೆಯ ಲೊಕ್ಕಿಗುಂಡಿಯು ಅವನ ತಾತ್ಕಾಲಿಕ ರಾಜಧಾನಿಯಾಗಿತ್ತು. ೧೧೯೫ರಲ್ಲಿ ರಾಜಧಾನಿಯು ಎರಂಬರಗೆಗೆ ಸ್ಥಳಾಂತರ ಹೊಂದಿತು.... ವೀರಬಲ್ಲಾಳನು ಕುಂತಳ ರಾಜ್ಯಕ್ಕೆಲ್ಲ ಅಧಿಪತಿಯಾದನೆಂದೂ ಪಶ್ಚಿಮಚಾಲುಕ್ಯರ ಸಾರ್ವಭೌಮಾಧಿಕಾರವನ್ನು ಸೆಳೆದುಕೊಂಡನೆಂದೂ ಅವೇ ಶಾಸನಗಳು ಸಾರುತ್ತವೆ. ಕ್ರಿ.ಶ. ೧೧೯೧ರಲ್ಲಿ ಗದುಗಿನ ಸುತ್ತಮುತ್ತಣ ಪ್ರಾಂತಗಳು ಸೇವುಣ ಭಿಲ್ಲಮನ ವಶದಲ್ಲಿದ್ದುವೆಂದು.... ಆ ವಿಜಯವನ್ನು ಸುಮಾರು ಅದೇ ವರ್ಷದ ಮಧ್ಯಭಾಗದಲ್ಲಿ ಸಾಧಿಸಿದ್ದಿರಬೇಕು.... ಹೀಗೆ ವಿಸ್ತೃತವಾದ ಹೊಯ್ಸಳ ರಾಜ್ಯ ಸೀಮೆಗಳು ಉತ್ತರದ ಕಡೆ ಮಲಪ್ರಭಾ-ಕೃಷ್ಣಾನದಿಗಳ ಸಂಗಮದವರೆಗೂ ಹರಡಿದ್ದಿರಬೇಕು. ಕ್ರಿ.ಶ. ೧೧೯೬ರಲ್ಲಿ ಸೇವುಣರ ಮೇಲೆ ದಂಡೆತ್ತಿ ಹೋಗುವ ಕಾಲಕ್ಕೆ ಬಲ್ಲಾಳನು ಎರಂಬಾರಗೆ ರಾಜಧಾನಿಯಲ್ಲಿದ್ದನು; ಕ್ರಿ.ಶ. ೧೧೯೭ರಲ್ಲಿ ಕುಕ್ಕನೂರುಕೊಪ್ಪದಲ್ಲೂ ಮರುವರ್ಷ ಹುಲಿಗೆರೆಯಲ್ಲೂ ವಾಸವಾಗಿದ್ದನು; ಕ್ರಿ.ಶ. ೧೨೦೦ರಲ್ಲಿ ಬಲ್ಲಾಳರಸನು 'ವಿಜಯಸಮುದ್ರ'ದ ರಾಜಧಾನಿಯಲ್ಲಿ ತಂಗಿದ್ದನು. ವಿಜಯ ಸಮುದ್ರವು ತುಂಗಾತೀರದಲ್ಲಿದ್ದಿತೆಂದು ಹಾಸನ ಮತ್ತು ಚೆನ್ನರಾಯಪಟ್ಟಣ ಶಾಸನಗಳು ತಿಳಿಸುತ್ತವೆ."[೮]

ಇದು ನೇಮಿನಾಥ ಪುರಾಣದ ರಚನೆಯ ಕಾಲದಲ್ಲಿ ನಡೆದ ವೀರಬಲ್ಲಾಳನ ದಿಗ್ವಿಜಯದ ವ್ಯಾಪ್ತಿಯ ಕೆಲವು ಮುಖ್ಯಾಂಶಗಳು.[೯] ಆದುದರಿಂದ ಕವಿಯು ಸೌಂದತ್ತಿಯ ರಟ್ಟರ ಆಶ್ರಯದಿಂದ ಹೊಯ್ಸಳರ ಆಶ್ರಯಕ್ಕೆ ಬಂದಿರುವ ಕಾರಣದ ನಿಗೂಢತೆಯೊಂದಿಗೆ ಇಂಥ ಸಮಯದಲ್ಲಿ ವೀರಬಲ್ಲಾಳನ ದಿಗ್ವಿಜಯ ಸ್ಥಾನಗಳ ವ್ಯಾಪ್ತಿಯ ವಲಯದಲ್ಲಿದ್ದನೋ ಅಥವಾ ದೋರಸಮುದ್ರದಲ್ಲಿ ನೆಲೆನಿಂತಿದ್ದನೋ ಹೇಳುವುದು ಕಠಿಣ. ಕವಿಯು ಸೌಂದತ್ತಿಯ ಪ್ರದೇಶದಲ್ಲಿರುವಾಗಲೇ ರಚಿಸಿದ ಲೀಲಾವತೀ ಪ್ರಬಂಧದಲ್ಲಿ ವಚನಗಳ ಸಾಮ್ಯದ ಕುರುಹುಗಳು ಕಂಡುಬರುವುದರಿಂದ, ಆಮೇಲಿನ ೮-೧೦ ವರ್ಷಗಳ ಅವಧಿಯಲ್ಲಿ ವೀರಬಲ್ಲಾಳ ದೊರೆಯ ನೇರ ಆಳ್ವಿಕೆಯ ಪ್ರದೇಶದ ವಲಯಗಳಲ್ಲಿ ವಚನಕಾರರ ಪ್ರಭಾವ ಹಬ್ಬಿರುವುದು ಇನ್ನೂ ಹೆಚ್ಚು ಸಾಧ್ಯ. ಈ ಹಿನ್ನೆಲೆಯಲ್ಲಿ ನೇಮಿನಾಥ ಪುರಾಣದ ಕೆಲವು ಉದಾಹರಣೆಗಳನ್ನು ನೋಡಬಹುದು. * (ಕೋಷ್ಟಕ ೨)

ಇವುಗಳ ಜೊತೆಗೆ ವಚನಕಾರರು ಬಳಸಿರುವ, ವಚನಕಾರರಿಗೇ ವಿಶಿಷ್ಟವಾದುವು ಎನ್ನಬಹುದಾದ ಕೆಲವು ಮಾತುಗಳು ಅಥವಾ ನುಡಿಗಟ್ಟುಗಳನ್ನು ನೇಮಿಚಂದ್ರ ಕವಿಯು ಬಳಸಿರುವುದನ್ನು ಗಮನಿಸಬಹುದು.

ಸಾಮಾನ್ಯಾರ್ಥದಲ್ಲಿ ಬಳಕೆಯಾಗುತ್ತಿದ್ದ 'ಬಯಲು' ಶಬ್ದವು ವಚನಕಾರರ ಮೂಲಕ ಉನ್ನತವಾದ ಅರ್ಥವನ್ನು ಪಡೆದುಕೊಂಡಿರುವುದು ವಚನಾಭ್ಯಾಸಿಗಳು ಬಲ್ಲ ವಿಷಯ.[೧೦] ಅದನ್ನು ಲೀಲಾವತೀ ಪ್ರಬಂಧದಲ್ಲಿ (೪-೬೩) ಬಳಸಿರುವುದನ್ನು ಹೋಲಿಕೆಗಾಗಿ ಈಗಾಗಲೇ ಸೂಚಿಸಿದೆ. ಇಲ್ಲಿ ವಚನಗಳಲ್ಲಿ ಹೊರಹೊಮ್ಮುವ ಗಹನವಾದ ಅರ್ಥವನ್ನು ಹೇಳಿಲ್ಲ. ಬದಲಾಗಿ ವಚನಗಳ

---

* (ಕೋಷ್ಟಕ ೨)

| ನೇಮಿನಾಥ ಪುರಾಣಂ | ಮಹಾದೇವಿಯಕ್ಕನ ವಚನ |
|---|---|
| ತರುವಿಂದತ್ತತ್ತ ನೀಳ್ದಂ ಘನಪಟಲದಿನತ್ತತ್ತ ಮಿಕ್ಕಂ ಹಿಮೋರ್ವಿಧರದಿಂದತ್ತತ್ತ ಪೋದಂ ರವಿಯ ರಥದಿ ನತ್ತತ್ತ ಮೆಯ್ವೆರ್ಚಿದಂ (೬-೨೮) | ಅಯ್ಯ ಪಾತಾಳವಿತ್ತಿತ್ತ ಶ್ರೀ ಪಾದವತ್ತತ್ತ ಬ್ರಹ್ಮಾಂಡ ವಿತ್ತಿತ್ತ ಮಣಿಕಮಕುಟವತ್ತತ್ತ (ಮಹಾದೇ. ಬ. ೧೧-೭) |
| ಆನೆತ್ತರ್ಕಸುಧಾಪ್ರವಾಹಭರೆತ್ತಲಿರ್ದ ಮಂಜೂಷಮೆತ್ತಾ ನೀಚಾಶ್ರಯವೆತ್ತ ನಿಮ್ಮ ಬರವೆತ್ತ ( ೬-೭೯) | ಬಸವಣ್ಣನವರ ವಚನ<br>ನೀನೆತ್ತಲು ಶಿವನೆತ್ತಲು.. ಕೂಡಲ ಸಂಗಯ್ಯನೆತ್ತ ನೀನೆತ್ತ (ಬಸವ. ೩೬-೧೩೧) |
| ಕೊರ್ವಿದ ಕುಟಿ ಕೊಯ್ಸೆಯುಂ ಮಸಗಿ ಮೇವವೋಲ್ (೭-೭೮) | ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೩೫-೧೨೯) |

ಅಭಿವ್ಯಕ್ತಿಯ ವಿಧಾನದ ಹೋಲಿಕೆಯನ್ನು ಗಮನಿಸಲು ಈ ಉದಾಹರಣೆ ಮುಖ್ಯವಾಗುತ್ತದೆ. ಹಾಗೆಯೇ ಬಸವಣ್ಣನವರ ಒಂದು ವಚನದಲ್ಲಿ "ಪಾಪಿಯ ಕೂಸನೆತ್ತಿದಂತೆ ಕೂಡಲ ಸಂಗಮದೇವರ ಭಕ್ತಿ ಅಳಿಮನದವರಿಗೆ ಅಳವಡದಯ್ಯಾ" ಬಸವ. ೬೬೭) ಎನ್ನುವ ಮಾತುಗಳಿವೆ. "ಪಾಪಿಯ ಕೂಸು"[೧೧] ಎನ್ನುವುದು ಅಪರೂಪದ ನುಡಿಗಟ್ಟು, ಈ ಅಪರೂಪದ ನುಡಿಗಟ್ಟನ್ನು ನೇಮಿನಾಥ ಪುರಾಣದಲ್ಲಿ ನೋಡಬಹುದು. "ಬಾಬಾಯೆಂದು ಪಾಪಿಯ ಕೂಸನೆತ್ತಿಕೊಳ್ವಂತಟಿವ ಕೂಸನೆತ್ತಿಕೊಂಡು" (ಅಧನೇ. ೭-೭೦ವ.) ಇಲ್ಲಿ ಒಂದು ಅಪರೂಪದ ನುಡಿಗಟ್ಟನ್ನು ಅದರ ವಿಶಿಷ್ಟವಾದ ಅರ್ಥ ಮುಸುಕುಗೊಳ್ಳುವ ಹಾಗೆ, ಒಂದು ಸಾಮಾನ್ಯವಾದ ವರ್ಣನೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ.

ಅಂದರೆ, ಒಂದು ವಿಶಿಷ್ಟತೆಯನ್ನು ತುಂಬಿಕೊಂಡ ಈ ಪದಪುಂಜಗಳನ್ನು ಅದೇ ಅರ್ಥಗಳಲ್ಲಿ ಬಳಸಲು ಕಾವ್ಯಗಳಲ್ಲಿ ಅದಕ್ಕೆ ಬೇಕಾದ ಬೇರೆಯೇ ಭೂಮಿಕೆ ಇರಲಿಲ್ಲವಾದ ಕಾರಣ ಪರಿಚಿತವಾದ ಆವರಣದಲ್ಲಿಯೇ ಕವಿ ಅದನ್ನು ಉಪಯೋಗಿಸಿಕೊಂಡಿದ್ದಾನೆ. ಆದುದರಿಂದ ಇದನ್ನು ಅವುಗಳ ಬಗ್ಗೆ ತೋರಿಸಿರುವ ಒಂದು ಬಗೆಯ ಅವಜ್ಞೆ ಎಂದು ಭಾವಿಸುದಕ್ಕಿಂತ, ವಿಶಿಷ್ಟವಾದುದನ್ನು ಸಾಮಾನ್ಯಗೊಳಿಸಿಯಾದರೂ ಉಪಯೋಗಿಸಿಕೊಂಡಿರುವುದು, ಆ ಪದಪುಂಜಗಳ ಪ್ರಬಲವಾದ ಪ್ರಭಾವದ ಪ್ರೇರೇಪಣೆ ಎನ್ನಬಹುದು.

ಇದರ ಜೊತೆಗೆ ನೇಮಿಚಂದ್ರನಿಗಾಗಲೀ ವಚನಕಾರರಿಗಾಗಲೀ ಅನೇಕ ಬಾರಿ ಸ್ಫೂರ್ತಿಯನ್ನೊದಗಿಸಿರಬಹುದಾದ, ಇನ್ನೂ ಹಿಂದಿನ ಕೆಲವು ಆಕರಗಳನ್ನು ನೋಡಬಹುದು. ಅವೆಂದರೆ, ಜನಜೀವನದ ಅನುಭವದ ಅಭಿವ್ಯಕ್ತಿಗಳಾದ ನಾಣ್ಣುಡಿಗಳು, ಇವು ಸಾಹಿತ್ಯ ರಚನೆಯ ಕ್ರಿಯೆಯಲ್ಲಿ ಸಾಮರಸ್ಯಹೊಂದಿ ಸಾರ್ವಕಾಲಿಕವಾಗಿರುತ್ತದೆ.[೧೨]

ಈ ದೃಷ್ಟಿಯಿಂದ "ಎತ್ತಣ ಮಾಮರ ಎತ್ತಣ ಕೋಗಿಲೆ" ಎನ್ನುವುದು ಒಂದು ನುಡಿಗಟ್ಟಾಗಿ ಹಿಂದೆಯೇ ಬಳಕೆಯಲ್ಲಿದ್ದಿತೆಂದು ಕಲ್ಪಿಸಿಕೊಂಡರೆ, ಅದನ್ನು ನೇಮಿಚಂದ್ರ ಮತ್ತು ವಚನಕಾರರಿಬ್ಬರೂ ಬಳಸಿಕೊಂಡಿದ್ದಾರೆ. "ಎತ್ತಣ ಕೋಗಿಲೆ ಯೆತ್ತಣ ಮಾಮರಂ" (ಲೀಲಾವ. ೧೨-೫೦) ಮತ್ತು "ಎತ್ತಣ ಮಾಮ ಎತ್ತಣ ಕೋಗಿಲೆ" (ಅವಚಂ. ೧೫-೫೯). (ವಚನದಲ್ಲಿ ಇದು ಎಷ್ಟು ಅದ್ಭುತವಾಗಿ ಬಳಕೆಯಾಗಿದೆ ಎನ್ನುವುದು ಬೇರೆ ವಿಷಯ.)

ಇದರ ಜೊತೆಯಲ್ಲಿಯೇ ನೇಮಿಚಂದ್ರ ಮತ್ತು ವಚನಕಾರರು ಸಮಾನವಾಗಿಯೇ ಬಳಸಿರುವ ಇನ್ನೂ ಕೆಲವು ನಾಣ್ಣುಡಿಗಳ ಉದಾಹರಣೆಗಳನ್ನು ನೋಡಬಹುದು.
*** (ಕೋಷ್ಟಕ ೩)**

ನಾಣ್ಣುಡಿಗಳು ಸಾರುವ ಸಂದೇಶಗಳು ಒಂದೇ ಆಗಿರುತ್ತದೆ. ಆದರೆ ಆಯಾ ಪ್ರದೇಶ, ಜನಾಂಗ, ಜೀವನವಿಧಾನಗಳಿಗೆ ಅನುಗುಣವಾಗಿ ಭಾಷೆಯ ಶೈಲಿ, ಬೇರೆ ಬೇರೆ ವಾತಾವರಣ, ಬೇರೆ ಬೇರೆ ಕಾರಣಗಳಿಗಾಗಿ ಇವುಗಳನ್ನು ಬಳಸಿಕೊಂಡರೂ, ಅವೆಲ್ಲ ಹೆಚ್ಚು ಕಡಿಮೆ ಒಂದೇ ಬಗೆಯಲ್ಲಿರುವುದೂ ಕೂಡ ಒಂದು ವಿಶೇಷ ಸಂಗತಿಯಾಗಿದೆ.

ಈಗಾಗಲೇ ಹೇಳಿದಂತೆ, ಸತ್ವಪೂರ್ಣವಾದ ಕಾವ್ಯಗುಣ ಯಾವ ಸಾಹಿತ್ಯ ಪ್ರಕಾರದಲ್ಲಿದ್ದರೂ ನೇಮಿಚಂದ್ರ ಕವಿ ಅದನ್ನು ತನ್ನ ಕಾವ್ಯಗಳಿಗಾಗಿ ಸ್ವೀಕಾರ ಮಾಡಿದ್ದಾನೆಂಬ ವಿಷಯವನ್ನು ಮುಂದುವರಿಸುತ್ತ, ವಚನಗಳ ರಚನೆಯ ಬಂಧವನ್ನು ತನ್ನ ಚಂಪೂ ರಚನೆಯ ಬಂಧಗಳಿಗೆ ಹೊಂದಿಸಿಕೊಂಡಿದ್ದಾನೆನ್ನುವುದು ಅನೇಕ ಉದಾಹರಣೆಗಳಿಂದ ಸ್ಪಷ್ಟವಾಗಿದೆ ಎಂದು ಹೇಳಬಹುದು. ಈ ರೀತಿಯ ಸಂಯೋಜನೆಯ ಕೌಶಲ್ಯ ಒಂದು ರೀತಿಯಲ್ಲಿ ಕವಿಗೆ ಭಾಷೆಯ ಮೇಲಿರುವ ಹಿಡಿತದ ಉದಾಹರಣೆಗಳೂ ಆಗುತ್ತದೆ.

ವಚನಯುಗದ ಹೆಸರಾಂತ ವಚನಕಾರರ (ಹೆಚ್ಚಾಗಿ ಬಸವಣ್ಣನವರ) ವಚನಗಳ ಪ್ರಭಾವಕ್ಕೆ, ಈಗಾಗಲೇ ಹೇಳಿರುವ ನೇಮಿಚಂದ್ರ ಕವಿಯ ಅನೇಕ ಉಕ್ತಿಗಳು ಉದಾಹರಣೆಗಳಾಗಿವೆ. ತಾನು ಋಣಿಯಾಗಿರುವ (ಕನ್ನಡದ) ತನ್ನ ಪೂರ್ವಕವಿಗಳನ್ನು ಕುರಿತು ಕವಿ ಹೇಗೆ ಏನೂ ಹೇಳಿಲ್ಲವೋ ಹಾಗೆಯೇ ವಚನಕಾರರನ್ನು ಕುರಿತು ಕವಿ ಏನೂ ಹೇಳಲು ಹೋಗಿಲ್ಲ. ಹೇಳಬಹುದಾಗಿತ್ತು.

*** (ಕೋಷ್ಟಕ ೩)**

| | |
|---|---|
| ಏರ್ದ ಕತ್ತರಿ ನಾಲಗೆ ಬೆಲ್ಲಂ (ಅರ್ಧನೇ.೭-೨೧)) | ಹೃದಯ ಕತ್ತರಿ ತುದಿನಾಲಗೆ ಬೆಲ್ಲೇಂ ಭೋ[೧೩] (ಬಸವ ೭೫-೭೯) |
| ಬೇಡಿದ ಕಾಡೊಳೆ ಮರೇ ಕೊಂಡುದು (ಅರ್ಧನೇ. ೬-೭೧ವ). | ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ<br>ಬರಲಗೊಂಡ ಸಸಿಗೆ ಮಳೆ ಸುರಿದಂತಾಯ್ತು (ಮಹಾದೇ. ಬ. ೨೪-೪೫) |
| ಊರ ಸೀರೆಗಸಗಂ ತದೆವಡೆದಂ (ಅರ್ಧನೇ. ೮-೮೦) | ಊರ ಸೀರೆಗೆ ಅಸಗ ತಡೆಬಡಗೊಂಬಂತೆ<br>(ಬಸವ. ೮೧-೩೯೯) ಮತ್ತು (ಮಹಾದೇ. ಬ. ೧೯-೩೧) |

## ಅನುಬಂಧ

ನೇಮಿಚಂದ್ರನ ಕವಿಯ ಬಹುಮುಖವಾದ ವ್ಯಾಸಂಗದ ಮಗ್ಗುಲುಗಳನ್ನು ಗಮನಿಸುವಾಗ ಶಾಸನಗಳ ಕ್ಷೇತ್ರವನ್ನು ಪರಿಶೀಲಿಸುವುದೂ ಅಗತ್ಯ. ಏಕೆಂದರೆ ಉತ್ತಮ ಕಾವ್ಯಗಳಂತೆ, ಉತ್ತಮವಾದ ಕಾವ್ಯಗುಣದ ಸತ್ವವನ್ನು ಹೊಂದಿರುವ ಶಾಸನಗಳೂ ಕವಿಯ ಗಮನ ಸೆಳೆದಿದ್ದರೆ ಆಶ್ಚರ್ಯವಿಲ್ಲ.

ಉದಾಹರಣೆಗೆ 'ಸಾಮಾನ್ಯನಲ್ಲಂ ತ್ರಿಭುವನ ಜನತಾಮಾನ್ಯನೀತಂ ವಿನೀತಂ' (ಅರ್ಧನೇ. ೬-೧೭) ಎನ್ನುವುದನ್ನು ಕ್ರಿ.ಶ. ಸು. ೭೦೦ರ ಪ್ರಖ್ಯಾತವಾದ (ಕಪ್ಪೆ ಆರಭಟ್ಟನ) ಬಾದಾಮಿ ಶಾಸನ 'ಸಾಧುಗೆ ಸಾಧು ಮಾಧೂರ್ಯ್ಯನೇ ಮಾಧೂರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತ ನ್ಮಾಧವನೀತನ್ಪೆರೆವನಲ್ಲ'[೧೪] ಎನ್ನುವುದರ ಜೊತೆ ಹೋಲಿಸಬಹುದು. ಇಬ್ಬರು ಅರಸರ ಆಶ್ರಯದಲ್ಲಿದ್ದು ಎರಡು ಕಾವ್ಯಗಳನ್ನು ರಚಿಸಿರುವುದರ ವಿಷಯ ಹೊರತೂ ಉಳಿದದ್ದೇನೂ ಈ ಕವಿಯ ವಿಷಯ ಗೊತ್ತಿಲ್ಲವಾದುದರಿಂದ, ಈ ಶಾಸನವನ್ನು ಕವಿ ಗಮನಿಸಿರಬಹುದೆನ್ನಬಹುದಾದರೆ, ಆತ ವ್ಯಾಪಕವಾಗಿ ನಾಡಿನಲ್ಲೆಲ್ಲ ಸಂಚಾರ ಮಾಡಿರಬಹುದೆಂದು ಊಹಿಸಬೇಕಾಗುತ್ತದೆ.

ಹಾಗೆಯೇ, "ತನ್ನದೆನ್ನದೆಂದು ನಚ್ಚುವರಂ ನಗುವಂತು ಗಜಗಲಿಸುತ್ತುಮಿರ್ದ ಕಾಂಚನ ಪಂಚರತ್ನಸಂಚಯಮಂ" (ಅರ್ಧನೇ. ೪-೧೧ವ) ಎನ್ನುವುದು "ಇಲ್ಲದ ಸಲ್ಲದ ಭಾಷೆಗೆ ಕಲ್ಲಂ ನಿಜಿಸುವಜನುಜದೆ ನಗುವವೊಲಿರ್ಕುಂ ಪಲ್ಲವಿಸಿ ಕುವರಲಕ್ಷ್ಮನ ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್"[೧೫] – ಎನ್ನುವ ಪ್ರಖ್ಯಾತವಾದ ಶಾಸನದ ಛಾಯೆಯನ್ನು ತೋರಿಸುತ್ತದೆ. ಇದು ವೀರಬಲ್ಲಾಳನ ದಂಡನಾಯಕನನ್ನು ಕುರಿತ ಶಾಸನವಾದುದರಿಂದ ನೇಮಿಚಂದ್ರನಿಗೆ ಬಹಳ ಹತ್ತಿರದ ಪರಿಚಯದ್ದಾಗಿರಬಹುದು.

"ಶಾಸನಗಳಲ್ಲಿ ಸುಪ್ರಸಿದ್ಧ ಕವಿಗಳ ಪ್ರಭಾವವನ್ನು ಗುರುತಿಸಬಹುದು"[೧೬] – ಎನ್ನುವುದರ ಜೊತೆಗೆ ಕವಿಗಳು ಶಾಸನಗಳಿಂದ ಪ್ರಭಾವ ಹೊಂದಿರುವುದನ್ನು ಗಮನಿಸುವುದು ಕುತೂಹಲಕಾರಿಯಾಗಿರುತ್ತದೆ. (ಈ ಶಾಸನಗಳಿಗೂ ಮೂಲ ಮತ್ತೆ ಯಾವುದೋ ಕವಿಯ ಉಕ್ತಿಯಿರಬಹುದೆನ್ನುವ ಊಹೆಯನ್ನೂ ಮಾಡಬಹುದು!) ಪ್ರಸ್ತುತ, ನೇಮಿಚಂದ್ರ ಕವಿಯ ವ್ಯಾಪಕವಾದ ಅಧ್ಯಯನಶೀಲತೆಗೆ ಮತ್ತೊಮ್ಮೆ ಪೂರಕವಾಗಿ ಮೇಲಿನ ಈ ಎರಡು ಉದಾಹರಣೆಗಳನ್ನು ಗಮನಿಸಬಹುದು.

ಹೀಗೆ ಪೂರ್ವದ ಆಯಾ ಕವಿಗಳಿಗೆ ಅವರವರ ಪಾಲನ್ನು ಸಲ್ಲಿಸುತ್ತ ಹೋದರೆ, ಈ ಕವಿಯ ಸ್ವಂತದ ಪಾಲೆಷ್ಟು ಎನ್ನುವುದು ಕುತೂಹಲ ಹುಟ್ಟಿಸುವ ವಿಷಯ.

ಆದರೆ ಒಂದು ಸಂಗತಿ ಸ್ಪಷ್ಟ, ಈ ಕವಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಕವಿಯಿಂದ ಸ್ವೀಕಾರ ಮಾಡಿದ್ದರೂ ತನ್ನ ಪ್ರತಿಭಾಶಕ್ತಿಯಿಂದ ಅದನ್ನು ತನ್ನದಾಗಿ ಮಾಡಿಕೊಂಡು ಬಿಡುತ್ತಾನೆ.

ಈ ರೀತಿಯಾಗಿ ನೇಮಿಚಂದ್ರನು ಪ್ರೇರಣೆ, ಸ್ಫೂರ್ತಿಗಳನ್ನು ಪಡೆದಿರುವ ನೆಲೆಗಳನ್ನು ಸರಿಸುಮಾರಾಗಿ ಗುರುತಿಸುವ ಪ್ರಯತ್ನ ಮಾಡುವಂತೆಯೇ ಇಂತಹ ವಿಶಿಷ್ಟವಾದ ಪ್ರತಿಭಾಶಾಲಿ ಕವಿ ತನ್ನ ಪ್ರಭಾವವನ್ನು ಬೀರಿರಬಹುದಾದ ಮುಂದಿನ ಕವಿ ಕಾವ್ಯಗಳನ್ನು ಗಮನಿಸಬಹುದು. ಅವನ ಕೆಲವು ಸಮಕಾಲೀನ ಹಾಗೂ ಮುಂದಿ ಕವಿಪರಂಪರೆಯ ಅನೇಕ ಕವಿಗಳು ಅವನಿಂದ ಅಷ್ಟೇ ಹೇರಳವಾಗಿ ಪ್ರೇರಣೆ, ಪ್ರಯೋಜನ ಪಡೆದಿದ್ದಾರೆ. ಜನ್ನ, ಎರಡನೆಯ ಗುಣವರ್ಮ, ಕಮಲಭವ, ಭಾಸ್ಕರ, ನಂಜುಂಡ, ದೊಡ್ಡಯ್ಯ, ಬಾಹುಬಲಿ, ದೇವಚಂದ್ರ ಮಧುರ, ಷಡಕ್ಷರಿ ಹೀಗೆ ದೊಡ್ಡ ಪಟ್ಟಿಯನ್ನೇ ಕೊಡಬಹುದು[೧೭]. ಕವಿಗಳ ದೃಷ್ಟಿಯಲ್ಲಂತು ಇವನೂ ಪಂಪ ರನ್ನರಂತೆ ಅನುಸರಣೀಯನಾದ ಕವಿ."[೧೮]

ಹೀಗೆ ಇವುಗಳ ಜೊತೆಗೆ ಇನ್ನೂ ಕೆಲವು ಉದಾಹರಣೆಗಳನ್ನು ನೋಡಬಹುದು. "ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ"[೧೯] ಎನ್ನುವ ರಾಘವಾಂಕನ ಹೆಸರುವಾಸಿಯಾದ ಉಕ್ತಿಯ ಜೊತೆ "ಎಮ್ಮ ಪುಣ್ಯಂ ಬರ್ಪಂತೆ ಬಂದು" (ಅರ್ಧನೇ.೫-೧೧೬ವ) ಎನ್ನುವುದನ್ನು ಹೋಲಿಸಬಹುದು. "ತಾವರೆಯೆಸಳ ದೋಣಿಯ ಮೇಲೆ ಹಾಯ್ದವು ಕುಸುಮರಸದುಬ್ಬರದ ತೊರೆಯನು ಕೂಡೆ ತುಂಬಿಗಳು"[೨೦] ಎನ್ನುವ ಕುಮಾರವ್ಯಾಸನ ಮೋಹಕವಾದ ವರ್ಣನೆಗೆ ಪ್ರೇರಣೆ – "ನಡುನೀರೊಳ್ ತೆರೆವೊಯ್ಲಿಂ ತಡಿಗೆ ಸಾರ್ವ ತೊಂಡುದುಂಬಿಗಳೊಳಂ" (ಲೀಲಾವ. ೬-೭೪ವ) ಇರಬಹುದು. ಕುಮಾರವ್ಯಾಸನದೇ ಇನ್ನೊಂದು ಉಕ್ತಿ "ಸೂತಜಾತಿಯೊಳೀ ಧನುರ್ವೇದಾತಿಶಯವಂತಾಯ್ತು"[೨೧] ಎನ್ನುವುದು "ಪರದರ ಸುತೆಗಿನಿತು ಕಳಾಪರಿಣತೆಯುಂ ರೂಪುಮಾಗದು" (ಅರ್ಧನೆ. ೬-೧೮) ಎನ್ನುವುದನ್ನು ನೆನಪಿಸುತ್ತದೆ. (ಈ ಉದಾಹರಣೆ ಚಾತುರ್ವರ್ಣ ವ್ಯವಸ್ಥೆಯನ್ನು ಕುರಿತದ್ದಾದ್ದರಿಂದ ಇಲ್ಲಿ ಶೈಲಿಗಿಂತ ವಿಡಂಬನೆಯಲ್ಲಿ ಹೋಲಿಕೆಯಿದೆ.)

ಈ ರೀತಿಯ ಕೊಡು-ಕೊಳ್ಳುವಿಕೆಯೇ ನೇಮಿಚಂದ್ರನನ್ನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ವಿಶಿಷ್ಟ ಸ್ಥಾನವನ್ನು ಸಲ್ಲಿಸುತ್ತದೆ. ಮತ್ತು ಪೂರ್ವಕವಿಗಳ ಋಣದಿಂದ ಮುಕ್ತನನ್ನಾಗಿಸುತ್ತದೆ.

## ಆಕರ ಗ್ರಂಥಗಳು

**ಲೀಲಾವತೀ ಪ್ರಬಂಧ** (ಲೀಲಾವ) (ಸಂ) ಕೆ.ವೆಂಕಟರಾಮಪ್ಪ, ದೇ. ಜವರೇಗೌಡ (೧೯೬೬)

**ನೇಮಿಚಂದ್ರ ಪುರಾಣಂ** (ಅರ್ಧನೇ) (ಸಂ) ಮಂ.ಆ. ರಾಮಾನುಜಯ್ಯಂಗಾರ್ –೧೯೧೪; ಬಿ.ಎಸ್. ಸಣ್ಣಯ್ಯ (೧೯೬೧) ಡಾ. ಬಿ.ಎಸ್.ಕುಲಕರ್ಣಿ (೧೯೬೮)

**ಅಜಿತನಾಥ ಪುರಾಣಂ** (ಅಜಿಪು) (ಸಂ) ಮಂ.ಆ. ರಾಮಾನುಜಯ್ಯಂಗಾರ್ – ೧೯೧೦

**ನೇಮಿನಾಥ ಪುರಾಣಂ** ಮಹಾಬಲ ಕವಿ (ಮಹಾನೇ)

**ಬಸವಣ್ಣನವರ ವಚನಗಳು,** (ಬಸವ) (ಸಂ) ಫ.ಗು. ಹಳಕಟ್ಟಿ ಶಿವಾನುಭವ ಗ್ರಂಥಮಾಲೆ, ಬಿಜಾಪುರ

**ಅಕ್ಕನ ವಚನಗಳು** (ಮಹಾದೇ.ಬ.) (ಸಂ) ಡಾ. ಎಲ್. ಬಸವರಾಜು – ೧೯೬೩

**ಅಲ್ಲಮನ ವಚನ ಚಂದ್ರಿಕೆ** (ಅವಚಂ) (ಸಂ) ಡಾ. ಎಲ್. ಬಸವರಾಜು–೧೯೬೦

**ಎಪಿಗ್ರಾಫಿಯ ಕರ್ನಾಟಿಕ** ಸಂಪುಟ. ೯ (ಎಕ.(ಮೈ)) ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.೧೯೭೬

**ಹರಿಶ್ಚಂದ್ರ ಕಾವ್ಯಂ** (ಹಚಕಾ) (ಸಂ.ಎನ್. ಬಸವಾರಾಧ್ಯ, ಎಸ್. ಬಸಪ್ಪ) ಪ್ರಾಚ್ಯ ಕಾವ್ಯ ಪ್ರಕಾಶನ ಮಂದಿರ. ಮೈಸೂರು ೧೯೫೫.

**ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿ.** (ಕುವ್ಯಾ) (ಸಂ.ಕುವೆಂಪು. ಮಾಸ್ತಿ ವೆಂಕಟೇಶ್ ಅಯ್ಯಂಗಾರ್)

**ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ** ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ. ಪ್ರಸಾರಾಂಗ, ಮೈ.ವಿ.ವಿ.೧೯೭೩

**ನೇಮಿಚಂದ್ರ** (ಕವಿ ಕಾವ್ಯ ವಿಮರ್ಶೆ) ಡಾ. ಬಿ.ಎಸ್. ಕುಲಕರ್ಣಿ, ಕ.ವಿ.ವಿ. ಧಾರವಾಡ. ೧೯೬೮.

**ಸಾಹಿತ್ಯಲೋಕ** (ಲೇಖನ–ನೇಮಿಚಂದ್ರನ "ಲೀಲಾವತಿ") ಎಂ.ಆರ್. ಶ್ರೀನಿವಾಸಮೂರ್ತಿ. ಕನ್ನಡ ಅಧ್ಯಯನ ಸಂಸ್ಥೆ. ಮೈ.ವಿ.ವಿ. ೧೯೭೮.

**ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,** ಸಂಪುಟ. ೩ ಪ್ರಸಾರಾಂಗ. ಬೆಂ.ವಿ.ವಿ. ೧೯೭೬

**ಶಿವಾನುಭವಕೋಶ** (ಸಂ) ಫ.ಗು. ಹಳಕಟ್ಟಿ, ಸಮಾಜ ಪುಸ್ತಕಾಲಯ. ಧಾರವಾಡ – ೧೯೭೨ ಕರ್ನಾಟಕ ಇತಿಹಾಸ ದರ್ಶನ. ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ – ೧೯೭೦

**The Hoysala Vamsa.** William Coelho - 1950 (Indian Historical Research Institute, St.Xaviers College, Bomby)

**ಅಡಿ ಟಿಪ್ಪಣಿ :**

೧. ಲೀಲಾವ. ಕವಿ–ಕಾವ್ಯ ವಿಮರ್ಶೆ i-xciv

೨. a ಅದೇ; b ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ. c ನೇಮಿಚಂದ್ರ, d ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ–೩ನೆಯ ಸಂಪುಟದಲ್ಲಿರುವ ಲೇಖನ– ನೇಮಿಚಂದ್ರ–ರುದ್ರಭಟ್ಟ ಒಂದು ತೌಲನಿಕ ಅಧ್ಯಯನ.

೩. ಲೀಲಾವ. ಕವಿ–ಕಾವ್ಯ ವಿಮರ್ಶೆ. lXXXVII

೪. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ. ಪು. ೬೨.

೫. ಇದೇ ಸಂದರ್ಭದಲ್ಲಿ ಬಸವಣ್ಣನವರ ಈ ವಚನದ ಹೋಲಿಕೆಯು ಮಹಾಬಲಕವಿಯ ನೇಮಿನಾಥ ಪುರಾಣದಲ್ಲಿರುವುದನ್ನೂ ಗಮನಿಸಬಹುದು.

'ನರೆ ಕೆನ್ನೆಗೆ ತೆರೆ ಕದಂಪಿಂಗರೆವೊರಕನೆ ಸಾರೆ' (ಮಹಾನೇ. ೪–೧೧೪)

೬. ಮಹಾಕವಿ ರನ್ನನ ಪ್ರಭಾವ ನೇಮಿಚಂದ್ರನ ಮೇಲಾಗಿರುವುದು ತಿಳಿದ ಸಂಗತಿ. ಇಲ್ಲಿ ರನ್ನನ "ಲಲಿತ ಲತಾಲಯಂಗಳಿರ ಸುಂದರ ಕಾನನ ಚಂದನದ್ರುಮಂಗಳಿರ ತಳಿರ್ತಶೋಕೆಗಳಿರಾ" (ಅಜಿಪು. ೬–೧೧೧, ೧೧೨) ನೆನಪಿಗೆ ಬರುತ್ತದೆ. ಮೇಲೆ ಹೇಳಿರುವ ಎರಡು ರಚನೆಗಳಿಗೂ ಇದು ಸ್ಫೂರ್ತಿಯಾಗಿದ್ದಿರಬಹುದೆಂಬ ಅಂಶವನ್ನೂ ವಿವೇಚಿಸಬೇಕಾಗುತ್ತದೆ. ಅದಕ್ಕಾಗಿ ಈ ಉದಾಹರಣೆಯನ್ನು ಗಮನಿಸಿದೆ.

೭. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ, ಪು.೬೨.

೮. ಕರ್ನಾಟಕದ ಇತಿಹಾಸ ದರ್ಶನ. ಪುಟ.೨೪೯, ೨೬೦.

೯. ಇದರ ಜೊತೆಗೆ ಶಾಸನದ ಒಂದು ಉದಾಹರಣೆಯನ್ನು ಗಮನಿಸಬಹುದು. ಹೊಯ್ಸಳ ವೀರ ಬಲ್ಲಾಳದೇವರಸ(ರು) ... ಕಲ್ಯಾಣಪರ್ಯ್ಯನ್ತಮಾಗಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರೆ" (ಎಕ.೯.(ಮೈ) ಬೇಲೂರು. ೪೪೯–೩೧;೧೧೯೬).

೧೦. ಜಗತ್ತು ಪ್ರಕಟವಾಗದ ಸ್ಥಿತಿಯನ್ನು ವಚನಕಾರರು ಬಯಲೆಂತಲೂ ಶೂನ್ಯವೆಂತಲೂ ನಿರವಯವೆಂತಲೂ ಕರೆಯುತ್ತಾರೆ. (ಶಿವಾನುಭವ ಕೋಶ. ಪುಟ. ೧)

೧೧. ಶ್ರೀಶೈಲದಲ್ಲಿ ಕೆಲವರಿಗೆ ಕಣ್ಣಿಗೆ ಬೀಳುವ ಒಂದು ಕೂಸು (ಇದು ಎತ್ತಿಕೊಂಡವರನ್ನೇ ನಾಶಮಾಡುವುದಂತೆ) (ಬಸವ.ಶಬ್ದಕೋಶ.೨೦)

೧೨. ಇದೇ ಸಂದರ್ಭದಲ್ಲಿ, ಕ್ರಿ.ಶ. ೧೧೧೨ರಲ್ಲಿದ್ದ ಕವಿ ನಯಸೇನನನ್ನು ಕುರಿತು. ವಚನಗಳಿಗೆ ಸಂಬಂಧಿಸಿದಂತೆ ವಿದ್ವಾಂಸರು ವ್ಯಕ್ತಪಡಿಸಿರುವ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಗಮನಿಸುವುದು ಅಪ್ರಸ್ತುತವಾಗಲಾರದು. "ಧರ್ಮಾಮೃತದ ಉಕ್ತಿಗಳು ಬಸವಣ್ಣನವರ ಅನೇಕ ವಚನಗಳನ್ನು ನೆನಪಿಗೆ ತರುತ್ತವೆ. ಈ ಉಕ್ತಿಗಳು ಅಥವಾ ಭಾವಗಳು ಜನತೆಯ ಸ್ವತ್ತಾಗಿದ್ದು ಅವು ಆಯಾ ಕರ್ತೃವಿನ ಬರಹಗಳನ್ನು ಪ್ರವೇಶಿಸಿಬಹುದು. ಒಬ್ಬರ ಪ್ರಭಾವ ಇನ್ನೊಬ್ಬರ ಮೇಲಾಗಿದೆ ಎಂಬ ತೀರ್ಮಾನಕ್ಕೆ ಬರುವಷ್ಟು ಪ್ರಬಲವಾಗಿಲ್ಲ ಈ ಸಾದೃಶ್ಯಗಳು ಅಥವಾ ಪ್ರಭಾವ ಆಗಿದೆ ಎಂದು ಹೇಳಿಬಿಡಬಹುದೋ" (ಎಂ. ಚಿದಾನಂದಮೂರ್ತಿ, ಸಂಶೋಧನ ತರಂಗ–೨. ಪುಟ. ೯೫ರ ಅಡಿಟಿಪ್ಪಣಿ); ಕನ್ನಡ ಗದ್ಯ ಪ್ರಾಚೀನ ಕಾಲದಿಂದ ಗದ್ಯವಾಗಿ ಬೆಳೆದು ಬರಲಿಲ್ಲ. ಚಂಪೂಕಾವ್ಯಗಳಲ್ಲಿ ಅದು ವಚನವಾಗಿ ನಾಮಾಂತರ ಪಡೆದಂತೆ ಸ್ವರೂಪವೂ ಭಿನ್ನವಾಯಿತು. ಪದ್ಯಕ್ಕೆ ಸನ್ನಿಹಿತವಾಯಿತು.. ನಯಸೇನನ ಸಿದ್ಧಹಸ್ತದಲ್ಲಿ ಅಪೂರ್ವ ಶಕ್ತಿದೀಧಿತಿಯನ್ನು ಪಡೆಯಿತು... ಪ್ರಾಯಶಃ ಈ ವಚನವೇ ಮುಂದೆ ಶಿವಶರಣರ ಆಧ್ಯಾತ್ಮ ಪ್ರಭೆಯಲ್ಲಿ ಮಿಂದು.. ದೇದೀಪ್ಯಮಾನವಾದ ಪವಾಡಸದೃಶವಾದ ಮಂತ್ರಶಕ್ತಿಯಾಯಿತು" (ಲೀಲಾವ. ಕವಿ–ಕಾವ್ಯವಿಮರ್ಶೆ (XXV) ಇದು ವಚನಗಳ ಪ್ರಾರಂಭದ ಸ್ಥಿತಿ. ಆದರೆ ನೇಮಿಚಂದ್ರನ ಕಾಲಕ್ಕಾಗಲೇ ವಚನಗಳ ಸಿದ್ಧರೂಪ ತಯಾರಾಗಿದ್ದಿತು. ಆದುದರಿಂದ ಅದು ಸುಲಭಗ್ರಾಹ್ಯವೂ ಆಯಿತು.

೧೩. ಸಂಸ್ಕೃತದ ಸೂಕ್ತಿ – ಜಿಹ್ವಾಗ್ರೇ ಮಧು ತಿಕ್ಷ್ಮತಿ, ಹೃದಯೇ ತು ಹಾಲಾಹಲಂ.

೧೪. ಕನ್ನಡ ಶಾಸನ ಸಂಪದ. ಪು.೩

೧೫. ಎಕ. IX (ಮೈ), ಬೇಲೂರು.೩೦೦

೧೬. ಸಂಶೋಧನ ತರಂಗ – ೨ ಪುಟ. ೨೦೩ (ಲೇಖನ, ಶಾಸನಗಳು ಮತ್ತು ಕನ್ನಡ ಸಾಹಿತ್ಯ)

೧೭. ಲೀಲಾವ. ಕವಿ–ಕಾವ್ಯ ವಿಮರ್ಶೆ.XCi

೧೮. ಅದೇ.

೧೯. (ಹಚಕಾ. ೯–೧೦)

೨೦. (ಕುವಾಆ.೫–೯)

೨೧. (ಕುವ್ಯಾಕ. ೨೨–೨೨)

❑❑

# ಕನ್ನಡದಲ್ಲಿ ಕಿರಾತಾರ್ಜುನೀಯಗಳು

– ಶ್ರೀಕಾಂತಂ ನಾಗೇಂದ್ರಶಾಸ್ತ್ರೀ

ಕಿರಾತಾರ್ಜುನೀಯ ಪ್ರಸಂಗವು ಮಹಾಭಾರತದ ವನಪರ್ವದಲ್ಲಿಯ ಒಂದು ರಸಮಯ ಪ್ರಸಂಗ. ಅರ್ಜುನನ ತಪೋ ಮಹಿಮೆ, ಬಿಲ್ಲಾಳ್ತನ ಹಾಗೂ ಪಾಶುಪತಾಸ್ತ್ರದ ಗಳಿಕೆಯ ಹೆಗ್ಗಳಿಕೆಯನ್ನು ನಿರೂಪಿಸಲಿಕ್ಕಾಗಿಯೇ ಇರುವ ಕಥಾ ಭಾಗವೆಂದರೆ ತಪ್ಪಾಗಲಾರದು. ನ.ಸುಬ್ರಹ್ಮಣ್ಯರವರು 'ಮಹಾಭಾರತ ಸಮೀಕ್ಷೆ'ಯಲ್ಲಿ ಹೇಳುವಂತೆ "ಗಾಂಡೀವ ಧ್ವನಿಯಾದ ಅರ್ಜುನ, ಪಿನಾಣಿ ಪಾಣಿಯೊಡನೆ ಸೆಣೆಸಿ, ದಿವ್ಯಾಸ್ತ್ರಗಳನ್ನು ಪಡೆದು ಲೋಕ ವಿಖ್ಯಾತನಾದ ಪ್ರಸಂಗ ಅವನ ಪರಾಕ್ರಮಕ್ಕೇ ಕಳಸವಿಟ್ಟಂತೆ".

ಮಹಾಭಾರತದಲ್ಲಿ ಬರುವ ಕಥೆಯ ಮುಖ್ಯ ಸಾರಾಂಶವು ಹೀಗಿದೆ. ಕಟಪದ್ಯೂತದಲ್ಲಿ ಸೋತ ಪಾಂಡವರು ದ್ವೈತ ವನಕ್ಕೆ ಆಗಮಿಸಿ ತಮಗೊದಗಿದ ದುರವಸ್ಥೆಯನ್ನು ಕುರಿತು ದುಃಖ ಪಡುತ್ತಿರುವಾಗ ವ್ಯಾಸರು ಆಗಮಿಸಿ ಅವರನ್ನು ಸಂತೈಸುತ್ತಾರೆ. ಯುಧಿಷ್ಠಿರನಿಗೆ "ಪ್ರತಿಸ್ಮೃತಿ" ಎಂಬ ಯೋಗವಿದ್ಯೆಯನ್ನು ಉಪದೇಶಿಸಿ ಅದನ್ನು ಅರ್ಜುನನಿಗೆ ಉಪದೇಶಿಸಲು ಹೇಳಿ ಇಂದ್ರ, ವರುಣ, ರುದ್ರ ಕುಬೇರರನ್ನು ಅರ್ಚಿಸಬೇಕೆಂದು ತಿಳಿಸುತ್ತಾರೆ. ಅಂತೆಯೇ ಯುಧಿಷ್ಠಿರನು ಅರ್ಜುನನಿಗೆ ಈ ವಿದ್ಯೆಯನ್ನು ಉಪದೇಶಿಸಿ ಇಂದ್ರನನ್ನು ಅರ್ಚಿಸಲು ಹೇಳುತ್ತಾನೆ. ಆಗ ಅರ್ಜುನನು ಇಂದ್ರಕೀಲಕ್ಕೆ ಹೋಗಿ ತಪಸ್ಸಿಗೆ ತೊಡಗುವನು. ಇಂದ್ರನು ಅಲ್ಲಿಗೆ ವೃದ್ಧ ವಿಪ್ರನ ವೇಷವನ್ನು ಧರಿಸಿ ಬಂದು ಅರ್ಜುನನ ತಪಸ್ಸನ್ನು ಹೀಗಳೆಯುತ್ತಾನೆ. ಆದರೂ ಜಗ್ಗದ ಅರ್ಜುನನಿಗೆ ತನ್ನ ನಿಜರೂಪ ತೋರಿ ಶಿವನನ್ನು ಆರಾಧಿಸಲು ತಿಳಿಸುತ್ತಾನೆ. ಅರ್ಜುನನ ತಪಸ್ಸಿನಿಂದ ಭೀತರಾದ ತಪಸ್ವಿಗಳು ಶಿವನಿಗೆ ಮೊರೆಯಿಟ್ಟಾಗ ಶಿವನು ಗಿರಿಜೆ ಹಾಗೂ ಗಣಗಳೊಡನೆ ಕಿರಾತ ವೇಷದಿಂದ ಇಂದ್ರಕೀಲಕ್ಕೆ ಆಗಮಿಸುತ್ತಾನೆ. ಅದೇ ಸಮಯಕ್ಕೆ ಮೂಕದಾನವನು ವರಾಹರೂಪಿನಿಂದ ಅಲ್ಲಿಗೆ ಧಾವಿಸುತ್ತಾನೆ. ಅರ್ಜುನನೂ ಶಿವನೂ ಏಕಕಾಲದಲ್ಲಿ ಬಾಣಗಳನ್ನು ಬಿಡುವರು. ಹೀಗಾಗಿ ಯಾರು ಮೊದಲು ಬಾಣಬಿಟ್ಟವರೆಂಬ ವಾಗ್ಯುದ್ಧ ಯುದ್ಧವಾಗಿ ತಿರುಗುವುದು. ಅಸ್ತ್ರ ಶಸ್ತ್ರಗಳೆಲ್ಲಾ ವಿಫಲವಾದಾಗ ಅರ್ಜುನನು ಕಿರಾತನೊಡನೆ ಮಲ್ಲಯುದ್ಧಕ್ಕೆ ತೊಡಗಿ ಅವನ ಮುಷ್ಟಿ ಪ್ರಹಾರದಿಂದ ಮೂರ್ಛೆ ಹೊಂದಿ ನಂತರ ತಿಳಿದೆದ್ದು ಸೈಕತ ಲಿಂಗವನ್ನು ಪೂಜಿಸುವನು. ಆಗ ತಾನು ಪೂಜಿಸಿದ ಹೂಗಳು ಶಬರನ ತಲೆಯಲ್ಲಿರುವುದನ್ನು ಕಂಡು ಚಕಿತನಾಗಿ ಶಬರನ ಪಾದದ ಬಳಿ ಬಿದ್ದು ಕ್ಷಮೆ ಬೇಡುವನು. ಆಗ ಶಿವನು ಅವನ ಪರಾಕ್ರಮಕ್ಕೆ ಮೆಚ್ಚಿ ಪಾಶುಪತಾಸ್ತ್ರವನ್ನು ನೀಡುವನು.

### ಕನ್ನಡದಲ್ಲಿಯ ಕಿರಾತಾರ್ಜುನೀಯಗಳು

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಿರಾತಾರ್ಜುನೀಯವು ತನ್ನದೇ ಆದ ಸ್ಥಾನ ಪಡೆದಿದೆ. ಕನ್ನಡದ ಕವಿಗಳು ತಮ್ಮ 'ಮನೋಧರ್ಮ ಹಾಗೂ ಮತಧರ್ಮಕ್ಕೆ ಅನುಸಾರವಾಗಿ ತಮ್ಮದೇ ಆದ ಧಾಟಿಯಲ್ಲಿ ತಮ್ಮದೇ ಆದ ಛಂದದಲ್ಲಿ ನಿರೂಪಿಸಿದರು. ಕವಿರಾಜ ಮಾರ್ಗ ಪೂರ್ವದಲ್ಲೇ ಕಿರಾತಾರ್ಜುನೀಯದ ಅಲೆ ಕನ್ನಡದಲ್ಲಿತ್ತೆನ್ನಬಹುದು. ಕನ್ನಡದಲ್ಲಿಯ ಕಿರಾತಾರ್ಜುನೀಯಗಳು ಹೀಗಿವೆ.

**ದುರ್ವಿನೀತ :** ಕವಿರಾಜ ಮಾರ್ಗಕಾರನು ಗದ್ಯಾಶ್ರಮ ಪದ ಗುರುತಾ ಪ್ರತೀತೀ (ಕ.ರಾ. ಮಾ.ಪ್ರ ಪರಿಚ್ಛೇದ ೨೯) ಯನ್ನು ಕೈಗೊಂಡವರಲ್ಲಿ ದುರ್ವಿನೀತನ ಹೆಸರನ್ನು ಸಹಾ ಹೇಳಿದ್ದಾನೆ. ಇವನು ಕ್ರಿ.ಶ. ೫೫೫ ರಿಂದ ೬೦೫ರವರೆಗೆ ಆಳಿದ ಗಂಗರ ದೊರೆಯೇ ಆಗಿರಬೇಕೆಂಬ ಕವಿಚರಿತೆಕಾರರ ಅಭಿಪ್ರಾಯವನ್ನು ಬಹುತೇಕ ಎಲ್ಲ ವಿದ್ವಾಂಸರೂ ಒಪ್ಪಿದ್ದಾರೆ. ಅವನು ದೊಡ್ಡ ವಿದ್ವಾಂಸನೆಂದೂ ಹಾಗೂ ಭಾರವಿಯ ಕಿರಾತಾರ್ಜುನೀಯದ ೧೫ನೇ ಸರ್ಗಕ್ಕೆ ಟೀಕೆಯನ್ನು ಬರೆದಿರುವನೆಂದು ನಲ್ಲಾಲ ತಾಮ್ರ ಪಟ್ಟಗಳಲ್ಲಿ ಹೊಗಳಲಾಗಿದ್ದು "ಕಿರಾತಾರ್ಜುನೀಯ ಪಂಚದಶ ಸರ್ಗ ಟೀಕಾಕಾರೋ ದುರ್ವಿನೀತ ನಾಮಧೇಯಃ" ಎಂದು ಉಕ್ತವಾಗಿರುವುದೆಂದು ೧೯೨೪ರ ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ ಹಾಗೂ ಗುಮ್ಮರೆಡ್ಡಿ ಪುರದ ಶಾಸನದಲ್ಲಿ "ಕಿರಾತಾರ್ಜುನೀಯೇ ಪಂಚದಶ ಸರ್ಗ ಟೀಕಾಕಾರೇಣ ದುರ್ವಿನೀತ ನಾಮಧೇಯೇನ" ಎಂದು ಹೇಳಲಾಗಿದೆಯೆಂದು ೧೯೧೨ರ ಮೈಸೂರು

#. ೬೩/೧, ಲಲಿತಾನಿವಾಸ್, ೧೮ ಅಡಿರಸ್ತೆ, ೩ನೇ ಮುಖ್ಯರಸ್ತೆ, ಮತ್ತಿಕೆರೆ, ಬೆಂಗಳೂರು – ೫೬೦ ೦೫೪

ಆರ್ಕಿಯಾಲಜಿಕಲ್ ರಿಪೋರ್ಟ್ (ಪುಟ. ೩೧-೨) ಗಳಲ್ಲಿ ತಿಳಿಸಲಾಗಿದೆ. ಆದರೆ ಈ ಟೀಕೆ ಕನ್ನಡದಲ್ಲಿತ್ತೇ ಸಂಸ್ಕೃತದಲ್ಲಿತ್ತೇ ಎಂಬುದು ಚರ್ಚೆಗೆ ವಿಶಾಲ ವಿಷಯ. ಭಾರವಿ ಹಾಗೂ ದುರ್ವಿನೀತರು ಸಮಕಾಲೀನರಾಗಿದ್ದುದಲ್ಲದೇ ಭಾರವಿಯು ದುರ್ವಿನೀತನ ಆಸ್ಥಾನಕ್ಕೂ ಬಂದಿದ್ದನೆಂದು ದಂಡಿಯ 'ಅವಂತಿ ಸುಂದರೀ ಕಥಾ'ದಿಂದ ತಿಳಿದು ಬರುತ್ತದೆ. (ಎಸ್.ಶ್ರೀಕಂಠಶಾಸ್ತ್ರಿ Sources of Karnataka History, page 33). ಭಾರವಿಯ ಮೇಲಿನ ಗೌರವ ಸ್ನೇಹಗಳ ಕುರುಹಾಗಿ ಈ ಟೀಕೆಯನ್ನು ಈತ ಬರೆದಿರಬಹುದು. ಈ ಟೀಕೆ ಕನ್ನಡವೋ, ಸಂಸ್ಕೃತವೋ ಅರಿಯುವುದು ಸುಲಭವಲ್ಲ.

ಸಂಸ್ಕೃತದ ಪರವಾಗಿ ವಾದ ಮಾಡುವುದಾದರೆ ೧) ಭಾರವಿಯಂತಹ ಸಂಸ್ಕೃತ ಪಂಡಿತನ ಕೃತಿಗೆ ಟೀಕೆಯೂ ಬಹುಶಃ ಸಂಸ್ಕೃತದಲ್ಲೇ ಇರಬೇಕು. ೨) ಕನ್ನಡದಲ್ಲಿ ಕೃತಿಗಳ ಮೇಲೆ ವ್ಯಾಖ್ಯಾನ ಬರೆಯುವ ಪದ್ಧತಿ ಬೆಳೆದು ಬಂದಿರುವುದಿಲ್ಲ. ಹೀಗಾಗಿ ಈ ಟೀಕೆ ಸಂಸ್ಕೃತದಲ್ಲೇ ಇದ್ದಿರಬೇಕು. ಅದಲ್ಲದೇ ಸಂಸ್ಕೃತವೇ ಶ್ರೇಷ್ಠವೆನ್ನುತ್ತಿದ್ದ ಆ ಕಾಲದಲ್ಲಿ ಕನ್ನಡದಲ್ಲಿ ಟೀಕೆ ಬರೆಯುವುದಂತೂ ಸಾಹಸದ ಮಾತು. ಆದರೂ ಕೆಲವು ವಿದ್ವಾಂಸರು. ಕನ್ನಡದ ಪರವಾಗಿ ವಾದಿಸುತ್ತಾ ಕವಿರಾಜ ಮಾರ್ಗಕಾರನು ಇವನನ್ನು ಕನ್ನಡ ಗದ್ಯ ಕವಿಗಳ ಸಾಲಿಗೆ ಸೇರಿಸಿರುವುದರಿಂದಲೂ ಹಾಗೂ ಟೀಕೆ ಯಾವಾಗಲೂ ಗದ್ಯದಲ್ಲಿ ಇರುವುದರಿಂದಲೂ ಈ ಟೀಕೆ ಬಹುಶಃ ಕನ್ನಡದಲ್ಲಿತ್ತೆಂದು ಹೇಳುವವರುಂಟು.

ದುರ್ವಿನೀತನ ಟೀಕೆಯನ್ನು ಬಿಟ್ಟರೆ ಉಳಿದ ಕನ್ನಡ ಕಿರಾತಾರ್ಜುನೀಯಗಳೆಂದರೆ ಕ್ರಿ.ಶ. ೯೪೦ರಲ್ಲಿ ಬರುವ ಪಂಪನ ವಿಕ್ರಮಾರ್ಜುನ ವಿಜಯದ ಅಷ್ಟಮಾಶ್ವಾಸದಲ್ಲಿನ ಕಿರಾತಾರ್ಜುನೀಯ ಪ್ರಸಂಗ, ಕ್ರಿ.ಶ. ೧೪೦೦ರಲ್ಲಿ ಬರುವ ಕುಮಾರವ್ಯಾಸನ ಭಾರತದ ಅರಣ್ಯ ಪರ್ವದಲ್ಲಿನ ಕಿರಾತಾರ್ಜುನೀಯ, ೧೫೮೪ರಲ್ಲಿ ಬರುವ ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣದಲ್ಲಿನ 'ಶಿವನ ಕಿರಾತ ಲೀಲೆ', ೧೬೫೦ರಲ್ಲಿ ಬರುವ ಷಡಕ್ಷರ ದೇವನ ಶಬರ ಶಂಕರ ವಿಳಾಸ, ಕ್ರಿ.ಶ. ೧೭೫೦ರಲ್ಲಿ ಬರುವ ನಂಜಯ್ಯನೆಂಬುವವನ 'ಶಬರ ಧನಂಜಯ ವಿಲಾಸ ಮಂಜರಿ'ಯೆಂಬ ಯಕ್ಷಗಾನ ಹಾಗೆಯೇ ದೇವ ಶಿಖಾಮಣಿ ಶ್ರೀನಿವಾಯ್ಯಂಗಾರ್ಯನ 'ಕಿರಾತಾರ್ಜುನೀಯ ಕಥೆ', ೧೭೫೦ರಲ್ಲಿನ ರಾಮಸೂರಿಯ 'ಇಂದ್ರಕೀಲ ಚೌಪದ' ೧೮೭೫ರಲ್ಲಿನ ಅಳಿಯಲಿಂಗರಾಜನ 'ಇಂದ್ರಕೀಲ' ಹಾಗೂ ಇದೇ ಶತಮಾನದ ವಿಷ್ಣು ಕವಿಯ 'ಇಂದ್ರಕೀಲ' ಕಾವ್ಯಗಳು ಕನ್ನಡದ ಉಳಿದ ಕಿರಾತಾರ್ಜುನೀಯಗಳು.

## ಕನ್ನಡದಲ್ಲಿಯ ಮುಖ್ಯ ಕಿರಾತಾರ್ಜುನೀಯಗಳಿಗೆ ಆಕರ ಭಾರವಿಯೋ, ಭಾರತವೋ?

ಕನ್ನಡ ಸಾಹಿತ್ಯಕ್ಕೆ ಭಾರವಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಮಾಡಿದ್ದಾನೆ. ಮಹಾಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಗಳಿರಬೇಕೆಂಬ ಸಾಂಪ್ರದಾಯಿಕ ಕಾರಣದಿಂದಾಗಿ ಕನ್ನಡದಲ್ಲಿ ಈ ವರ್ಣನೆಗಳ ಪ್ರವಾಹವೇ ಹರಿಯಿತು. ಕಾವ್ಯದಲ್ಲಿ ಕಥಾಂಶಕ್ಕಿಂತ ವರ್ಣನಾಂಶಕ್ಕೆ ಪ್ರಾಧಾನ್ಯತೆ ಕೊಡುವುದು ಸಹಾ ಭಾರವಿಯ ಮತ್ತೊಂದು ಸಂಪ್ರದಾಯ. ಕಿರಾತಾರ್ಜುನೀಯ ಪ್ರಸಂಗದಲ್ಲಿ ವ್ಯಾಸ ಭಾರತಕ್ಕಿಂತ ಭಾರವಿಯ ಪ್ರಭಾವವೇ ಸುಸ್ಪಷ್ಟ. ಉದಾಹರಣೆ ನೋಡುವುದಾದರೆ, ಮೂಲ ಮಹಾಭಾರತದಲ್ಲಿ ವ್ಯಾಸರು ಉಪದೇಶಿಸಿದ ಪ್ರತಿಸ್ಮೃತಿಯನ್ನು ಯುಧಿಷ್ಠಿರ ಅರ್ಜುನನಿಗೆ ಉಪದೇಶಿಸಿ

"ಶಕ್ರಮೇವ ಪ್ರಪದಸ್ವ ಸತೇಽಸ್ತ್ರಾಣಿ ಪ್ರದಾಸ್ಯತಿ।
ದೀಕ್ಷಿತೋದ್ಯೈವ ಗಚ್ಛತ್ವಂ ದ್ರಷ್ಟುಂ ದೇವಂ ಪುರಂಧರಂ॥

ಎಂದು ಹೇಳಿ ಇಂದ್ರನನ್ನು ಆರಾಧಿಸಲು ತಿಳಿಸುತ್ತಾನೆ. ಆದರೆ ಭಾರವಿಯು ಇಂದ್ರನ ಮಾತನ್ನೇ ಎತ್ತದೇ ನೇರವಾಗಿ ಯುಧಿಷ್ಠಿರನ ಬಾಯಲ್ಲಿ ಶಂಕರನನ್ನು ಕುರಿತು ಆರಾಧಿಸಲು ಹೇಳಿಸುತ್ತಾನೆ. ಇದನ್ನೇ ಪಂಪ 'ಅಣ್ಣನೆಂದೊಂದು ಮಾತನಣಂ ಮೀರದೆ ನಿಂದು ಶಂಕರನಾರಾಧಿಸೆ'ಂದೂ (ಪಂ.ಭಾ.೮-೫) ಕುಮಾರವ್ಯಾಸನು "ಪಾರ್ಥನೈದುವುದಿಂದ್ರ ಕೀಲದೊಳರ್ತಿಸಲಿ ಶಂಕರನ" (ಕು.ಭಾ. ೨ನೇ ಪರ್ವ ೪ನೇ ಸಂಧಿ ೧೭ ಪದ್ಯ) ಎಂದು ಶಂಕರನ ಆರಾಧನೆಗೇ ಒತ್ತು ಕೊಟ್ಟಿರುವುದನ್ನು ನೋಡಿದರೆ ಭಾರವಿಯ ಪ್ರಭಾವವೇ ಸುಸ್ಪಷ್ಟ.

## ಪಂಪ-ಭಾರವಿ

ಕೆ.ಎಸ್. ಕೃಷ್ಣಮೂರ್ತಿಯವರು 'ಅಭಿವಂದನೆ'ಯಲ್ಲಿ ಹೇಳುವಂತೆ "ಭಾರವಿಯ ಕಾವ್ಯ ಮಾರ್ಗ"ವು ಪಂಪನ ಮೇಲೆ ಪ್ರಭಾವ ಬೀರಿರುವುದಷ್ಟೇ ಅಲ್ಲದೇ ಆತನ ಕಿರಾತಾರ್ಜುನೀಯವೂ ಅಚ್ಚಳಿಯದ ಪ್ರಭಾವ ಬೀರಿದೆ. ಭಾರವಿ ಪಂಪನಿಗಿಂತ ಹಿಂದೆ ಇದ್ದವನಾದರೂ ಕಿರಾತಾರ್ಜುನೀಯ ಭಾಗದಲ್ಲಿ ಇಬ್ಬರಿಗೂ ಬಿಡಿಸಲಾಗದ ನಂಟು. ಪಂಪನಿಗೆ 'ವಿಕ್ರಮಾರ್ಜುನ ವಿಜಯ'ವನ್ನು ಆರಿಸುವಲ್ಲಿ ಅವನಿಗಿಂತ ಹಿಂದೆ ಇದ್ದ ತ್ರಿಲೋಚನನ ಪಾರ್ಥವಿಜಯ (೯ನೇ ಶತ) ಬಾಣನ ಅರ್ಜುನ ವಿಜಯ, ಆನಂದ ವರ್ಧನನ ಅರ್ಜುನ ಚರಿತ ಮೊದಲಾದವುಗಳಲ್ಲದೇ ಭಾರವಿಯ ಕಿರಾತಾರ್ಜುನೀಯವೂ ಸಹಾಯ ಮಾಡಿದೆ.

ಭಾರವಿಯನ್ನು ಪಂಪ ಕೆಲವೊಮ್ಮೆ ಪದ್ಯಶಃ, ಕೆಲವೊಮ್ಮೆ ಭಾರವಿಯ ಅನೇಕ ಶ್ಲೋಕಗಳನ್ನು ಕೆಲವೇ ಪದ್ಯಗಳಲ್ಲಿ ಅಡಗಿಸಿ ಅದಲ್ಲದೆ ಭಾರವಿಯ ಪದಗಳಿಗೆ ತನ್ನ ಪದಗಳನ್ನಿಟ್ಟು ಭಾವನೆಯನ್ನು ಸ್ಪಷ್ಟವಾಗಿಸುತ್ತಾನೆ.

## ಕನ್ನಡ ಕವಿಗಳ ಮನೋಧರ್ಮ

ಮೊದಲೇ ತಿಳಿಸಿದಂತೆ, ಮಹಾಭಾರತವನ್ನು ಕವಿಗಳು ತಮ್ಮದೇ ಆದ ಭಾಷಾ ಶೈಲಿಯಲ್ಲಿ, ತಮ್ಮ ಕಾಲಧರ್ಮ, ಮನೋಧರ್ಮ ಹಾಗೂ ಮತಧರ್ಮಕ್ಕೆ ತಕ್ಕಂತೆ ನಿರೂಪಿಸಿದರು. ಕೆಲವರಿಗೆ ಅದು ಲೌಕಿಕವನ್ನು ಬೆಳಗುವ ತಾಣವಾದರೆ ಕೆಲವರಿಗೆ ಕಾವ್ಯಕ್ಕೆ ಗುರು, ಶ್ರೀಕೃಷ್ಣ ಚರಿತಾಮೃತ. ಹೀಗೆ ಮಹಾಭಾರತವೆಂಬ ಸಕ್ಕರೆ ಪಾಕವನ್ನು ತಮ್ಮ ದೃಷ್ಟಿ, ಶೈಲಿ, ಛಂದಸ್ಸುಗಳ ಅಚ್ಚಿಗೆ ಹಾಕಿ ಮಾದರಿಗಳನ್ನು ತಯಾರಿಸಿದರು. ಕಿರಾತಾರ್ಜುನೀಯವೂ ಮಹಾಭಾರತದ ಮುಖ್ಯ ಪ್ರಸಂಗವಾಗಿದ್ದು ಈ ದಾರಿಯಲ್ಲಿ ತನ್ನದೇ ಆದ ರೂಪ ಪಡೆಯಿತು.

**ಪಂಪನ ಮನೋಧರ್ಮ:** ಅರಿಕೇಸರಿ ಹಾಗೂ ಅವನ ಆಸ್ಥಾನಿಕರೆಲ್ಲ "ಭಾರತಮಂಪೇಳ್ವೊಡೆ ಪಂಪನೇ ಪೇಳ್ಗುಂ" ಎಂದು ಹೇಳಿದರು. ಹೀಗಾಗಿ ಅರಿಕೇಸರಿಯ ಆಶ್ರಯದಲ್ಲಿದ್ದು ಅವನನ್ನೇ ಹೊಗಳದೇ ಹೋದರೆ ಹೇಗೆ? ಸರಿ, ಅರಿಕೇಸರಿಯ ಇತಿಹಾಸವನ್ನಾಗಿ ಭಾರತವನ್ನು ತಿರುಗಿಸಿಕೊಂಡ. ಅರಿಕೇಸರಿಯ ಚರಿತ್ರೆಯಲ್ಲಿ ಕಂಡುಬರುವ ಕೆಲವು ಘಟನೆಗಳು ಅರ್ಜುನನ ಪಾತ್ರಕ್ಕೆ ಸರಿಹೊಂದುವುದರಿಂದ ಅವನ ಬಿರುದುಗಳನ್ನೆಲ್ಲಾ ಇವನಿಗೆ ತಗುಲಿಸಿ "ಈ ಕಥೆಯೊಳ್ ತಗುಳ್ಚೆ ಪೋಲಿಪೊಡೆ ಎನಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್" ಎಂದು ಆನಂದಪಟ್ಟ. ಕಿರಾತಾರ್ಜುನೀಯ ಪ್ರಸಂಗದಲ್ಲಂತೂ ತನ್ನ ನಾಯಕನ ಕೀರ್ತಿಗೆ ಪ್ರಾಶಸ್ತ್ಯವಿರುವ ಈ ಭಾಗದಲ್ಲಿ ಸಹಜವಾಗಿಯೇ ಅವನಿಗೆ ವಿಶೇಷ ಆಸಕ್ತಿ.

ಇವನ ಅರ್ಜುನನ ತಪಸ್ಸಿಗೆ ಇಂದ್ರನಿಗೇ ಆಸನ ಕಂಪನವಾಗುತ್ತದೆ. ರಂಭೆ ಊರ್ವಶಿಯರೇ ಮೊದಲಾದವರನ್ನು ಕಳುಹಿಸಿಯೂ ಈ ಸಹಜ ಮನೋಜನ ಮುಂದೆ ನಿಲ್ಲಲಾರದೇ ಹೋದರು. ಇವನ ತಪಸ್ಸಿಗೆ ಅನ್ಯ ತಪಸ್ವಿಗಳ ತಪವೆಲ್ಲ ಬೆಂದು ಅವರೆಲ್ಲ ಶಂಕರನನ್ನು ಬೇಡಲು ಶಂಕರನು ಇವನಿಗೆ ಪಾಶುಪತಾಸ್ತ್ರ ಕೊಡುವ ಉದ್ದೇಶಕ್ಕಾಗಿಯೇ ಕಿರಾತನಾಗುತ್ತಾನೆ. ಅಷ್ಟರಲ್ಲಿ ಮೂಕ ದಾನವನು ವರಾಹ ರೂಪಿನಿಂದ ಬಂದಾಗ ಮೊದಲು ಬಾಣ ಬಿಡುವುದೂ ಸಹಾ ಅರಿಕೇಸರಿ ಅರ್ಥಾತ್ ಅರ್ಜುನನೇ. ವಾದ ನಡೆದು ಯುದ್ಧವಾದಾಗ ಹರನ ಸೈನ್ಯವನ್ನೆಲ್ಲಾ ಸೋಲಿಸಿ ಹರನೊಡನೆ ದ್ವಂದ್ವ ಯುದ್ಧಕ್ಕೆ ನಿಂತು ಹರನನ್ನೇ ನೆಲಕ್ಕುರುಳಿಸಿ ಅವನ ಗಂಟಲನ್ನೇ ಮೆಟ್ಟುತ್ತಾನೆ. ಹೀಗೆ ಅರಿಗನ ಮೇಲಿನ ಪ್ರೇಮಕ್ಕೆ ತೃಣದಿಂದ ಹಿಡಿದು ಪರಮಾತ್ಮನವರೆಗೂ ಎಲ್ಲರೂ ಅರಿಕೇಸರಿಗೆ ಸಲಾಮು ಹೊಡೆಯುವಂತೆ ಮಾಡಿ ಬೀಗುತ್ತಾನೆ ಪಂಪ!

ಅರಿಕೇಸರಿಯಂತಹ ವೀರ ಶಿವನ ಕೈಯಲ್ಲಿ ಒದೆ ತಿನ್ನುವುದು ಪಂಪನಿಗೆ ರುಚಿಸುವುದಿಲ್ಲ. ಆದ್ದರಿಂದಲೇ ನೇಮಿಚಂದ್ರ 'ಹರನಂ ನರನಿಕ್ಕಿ ಗಂಟಲಂ ಮೆಟ್ಟುಗೆ, ಮೆಟ್ಟದಿರ್ಕೆ ಕವಿಗಳ ಕೃತಿಬಂಧದೊಳ್ ಮೆಟ್ಟಿದರ್' ಎಂದು ಪಂಪನನ್ನು ಮಾತಿನ ಸೂಜಿಯಿಂದ ಚುಚ್ಚುತ್ತಾನೆ. ಪಾರಮಾರ್ಥಿಕ ದೃಷ್ಟಿಯನ್ನುಳಿದ ಪಂಪನಿಗೆ ಇದು ಸಮಂಜಸವಾದರೂ ಕಾವ್ಯದ ದೃಷ್ಟಿಗೆ ಇದು ಚ್ಯುತಿಯೇ. ಹೀಗಾದರೂ ರಂಭೆ, ಊರ್ವಶಿ ಮೊದಲಾದವರನ್ನು ತಿರಸ್ಕರಿಸಿ ಕಾಮವನ್ನು ಗೆದ್ದ ಅಂಗ ನಂತರ ಕಾಮಾರಿಯನ್ನೇ ಗೆಲ್ಲುತ್ತಾನೆ ಪಂಪನಲ್ಲಿ.

## ಕುಮಾರ ವ್ಯಾಸನ ಮನೋಧರ್ಮ

ನಾರಣಪ್ಪ ಪಂಪನಂತಲ್ಲ. ಮಹಾಭಾರತದಲ್ಲಿ ಅವನಿಗೆ ಅಚಲವಾದ ಶ್ರದ್ಧೆ. ಇದರಲ್ಲಿ ಒಂದಕ್ಷರವನ್ನು ಕೇಳಿದರೂ ನಾನಾಫಲ ಪ್ರಾಪ್ತಿಯೆಂಬ ದೃಷ್ಟಿ ಇವನದು. ಸಮಯ ದೊರೆತ ಕಡೆಯಲ್ಲೆಲ್ಲಾ ಕೃಷ್ಣನನ್ನು ಹೊಗಳುವುದು ಇವನ ವಾಡಿಕೆ. ದುರ್ಯೋಧನನಿಂದ ಸಹ 'ಜಂಗಮ ಸ್ಥಾವರಕ್ಕೆ ಚೈತನ್ಯಾಂಗ ರಕ್ಷಕನು' ಎಂದು ಕೃಷ್ಣನನ್ನು ಹೊಗಳಿಸುವ ಹುಚ್ಚು. ಅಂತೆಯೇ ಕೃಷ್ಣನಿಗೆ ಪರಮ ಆತ್ಮೀಯನಾದ ಅರ್ಜುನನ ಬಗೆಗೂ ಕೊಂಚ ಅಕ್ಕರೆ ಹೆಚ್ಚು. ಕುಮಾರವ್ಯಾಸನ ಭಾರತ "ಅರಸುಗಳಿಗೆ ವೀರ". ಹೀಗಾಗಿ ಈ ಕ್ಷಾತ್ರದ ಪ್ರದರ್ಶನ ಕಿರಾತಾರ್ಜುನೀಯದಲ್ಲಿ ಹೆಚ್ಚಿಗೆ ಸಿಗುವುದರಿಂದ ಹರನರರಯುದ್ಧ ಕ್ಷಾತ್ರಮಯ. ಇದರಲ್ಲೂ ಕೃಷ್ಣ ಭಕ್ತಿ ಪಾರಮ್ಯ. ಪಾಶುಪತಾಸ್ತ್ರ ಪ್ರದಾನದ ನಂತರವೂ ಗಿರಿಜೆ ಅಂಜನಾಸ್ತ್ರ ಕೊಡುವಾಗಲೂ "ಕಂಜನಾಭನ ಮೈದುನನೆ ಬಾ" ಎನ್ನುತ್ತಾಳೆ. ಶಿವನು ಅರ್ಜುನನನ್ನು ಬೀಳ್ಕೊಡುವಾಗ "ನಿನ್ನುತ್ತರೋತ್ತರ ಕಾರ್ಯಗತಿಗಳಿಗೆ ಹರಿಸಹಾಯನು. ನಮ್ಮ ಸತ್ವದ ಪರಮ ರೂಪಾತನು ಕಣಾ ನೀನರಿದಿರು" ಎನ್ನುತ್ತಾನೆ.

ನಾರಣಪ್ಪ ಕೃಷ್ಣ ಭಕ್ತನಾದರೂ ಹರಿಹರರನ್ನು ಸಮಾನತೆಯಿಂದ ಕಾಣುವ ಭಾಗವತೋತ್ತಮ, ಹೀಗಾಗಿ ಅರ್ಜುನನ ಕೈಯಲ್ಲಿ ಹದಿನೈದು ಪದ್ಯಗಳಲ್ಲಿ ಶಿವಸ್ತುತಿಯನ್ನು ಮಾಡಿಸಿ ಮೈಮರೆಯುತ್ತಾನೆ.

## ವಿರೂಪಾಕ್ಷ ಪಂಡಿತ

ಚೆನ್ನಬಸವನ ಚರಿತೆಗಾಗಿಯೇ ಮೀಸಲಾದ ಮೊದಲನೆಯ ಗ್ರಂಥವಿದು. ಅವನಿಗೆ ತನ್ನ ಕೃತಿಯ ಕಥೆ "ಪರಮ ಶಿವತತ್ತ್ವಮಂ ತಿಳಿಪಿ ದೀಕ್ಷೆಯನಿತ್ತ ಪರಮಸತ್ಕಥೆ" ತನ್ನ ಕೃತಿಯ ಕಥೆಗಳ ಸೂಚನೆಯನ್ನು ಕೊಡುವಾಗ ಮಧ್ಯೆ "ಪರಮ ಸುಖವಹಮೂರ್ತಿಯರ್ಜುನನಿಗೆ ಪಾಶುಪತ ಶರವಿತ್ತ ಲೀಲೆ"ಯನ್ನು ಬಣ್ಣಿಸುವೆನೆನ್ನುತ್ತಾನೆ. ಪ್ರೌಢ ಪಾಂಡಿತ್ಯ ವರ್ಣನೆ, ಶ್ಲೇಷೆ, ಚಮತ್ಕೃತಿಗಳೇ ಇವನ ಆಸ್ತಿ. ಇವನಲ್ಲಿನ ಅರ್ಜುನ ಗೌಣ, ಶಿವನ ಲೀಲೆಯೇ ಮುಖ್ಯ. ಮುನಿಗಳು ಶಿವನಲ್ಲಿ ಮೊರೆಯಿಡುವುದಕ್ಕೆ ನಾರದನ ಪಾರುಪತ್ಯ

ತರುವುದು, ಅರ್ಜುನ ಶಿವರಲ್ಲಿ ಯುದ್ಧ ನಡೆದಾಗ ಷಣ್ಮುಖ ಗಣೇಶರು ಅರ್ಜುನನ್ನು ಕೊಲ್ಲುವೆವೆಂದು ಆರ್ಭಟಿಸುವುದು, ಶಿವನು ಅರ್ಜುನನ್ನು ಕೆಡವಿ ಗಂಟಲನ್ನು ಮೆಟ್ಟಿದಾಗ ರಕ್ತ ಪ್ರವಾಹ, ಇವೆಲ್ಲ ವಿರೂಪಾಕ್ಷನ ಕಥೆಯ ಹೊಸ ಸೇರ್ಪಡೆಗಳು. ಕಿರಾತಾರ್ಜುನೀಯವನ್ನು ಇವನು ಸಂಕ್ಷೇಪಿಸಿದಷ್ಟು ಯಾರೂ ಸಂಕ್ಷೇಪಿಸಿಲ್ಲ. ಎಲ್ಲ ವಿಷಯಗಳಿದ್ದೂ ಕಥೆಯ ಸಂಕ್ಷೇಪಣೆ ಚೆನ್ನಾಗಿ ಬಂದಿರುವುದು ಇವನ ಸಾಧನೆಯೆನ್ನಬಹುದು.

### ಷಡಕ್ಷರಿಯ ಕಾಲಧರ್ಮ ಹಾಗೂ ಅವನ ಕಾವ್ಯದ ಉತ್ಕೃಷ್ಟತೆ

ಚಿಕ್ಕ ದೇವರಾಜ ಒಡೆಯರ ಕಾಲದ ಚಂಪೂ ಕೃತಿಗಳಲ್ಲೆಲ್ಲಾ ಯಳಂದೂರಿನ ಷಡಕ್ಷರನ ಕೃತಿಗಳು ಸರ್ವಶ್ರೇಷ್ಠವೆನ್ನಲು ಅಡ್ಡಿ ಇಲ್ಲ. ಕಾವ್ಯ ವಿಷಯ, ಶಿವ ಕವಿತ್ವ ದೃಷ್ಟಿಯಲ್ಲಿ ಹರಿಹರನ ಮಾರ್ಗವನ್ನು ಅನುಸರಿಸಿದರೂ ಸಂಸ್ಕೃತ ಮಹಾಕಾವ್ಯದ ದಾರಿಯಲ್ಲಿ ಹೆಜ್ಜೆಯನ್ನಿಟ್ಟವನು.

ಷಡಕ್ಷರಿಯ ಕಾಲಕ್ಕಾಗಲೇ ಷಟ್ಪದಿ, ಸಾಂಗತ್ಯಗಳು ಕನ್ನಡ ಸಾಹಿತ್ಯಕ್ಕೆ ದಿನ ನಿತ್ಯದ ಸಂಗತಿಯಾಗಿತ್ತು. ಜೈನರಲ್ಲಿ ವ್ಯಾಸಂಗ ಪರಂಪರೆ ಕುಂಠಿತವಾಗಿದ್ದುದೇ ಅಲ್ಲದೇ ಆಗ ಹರಿಯುತ್ತಿದ್ದ ಷಟ್ಪದಿ ಸಾಂಗತ್ಯದ ನದಿಗಳಲ್ಲಿ ಬೆರೆತು ಹರಿಯ ತೊಡಗಿ ವಾತಾವರಣಕ್ಕೆ ತಕ್ಕಂತೆ ಹೊಂದಿಕೊಂಡರು. ಆದರೆ ವೀರಶೈವ ಪುನರ್ಸಂಘಟನೆಯ ಆಂದೋಲನದ ಪರಿಣಾಮವಾಗಿ ವೀರಶೈವ ಮಠಗಳಲ್ಲಿ ಪ್ರೌಢ ವ್ಯಾಸಂಗ ಹೆಚ್ಚುತ್ತಾ ಹೋಯಿತು. ದೇಸೀ ಛಂದಸ್ಸಿನಲ್ಲೇ ಮಾರ್ಗದ ಬಿಗುವನ್ನು ತರಲು ಹವಣಿಸಿದರು. ಇದರಿಂದ ಚಂಪೂ ಸಾಹಿತ್ಯ ಮತ್ತೆ ತಲೆದೋರಿತು. ಷಟ್ಪದಿಗಳಲ್ಲೂ ಮಾರ್ಗದ ಬಿಗುವು ಕಾಣಿಸಿಕೊಂಡಿತು. ಚಂದ್ರಕವಿ, ಸುರಂಗ, ವಿರುಪಾಕ್ಷ ಪಂಡಿತ, ಷಡಕ್ಷರರು ಈ ಯುಗದ ಪ್ರಮುಖ ವೀರಶೈವ ಸಾಹಿತಿಗಳಾದರು.

ಅವನ ಶಬರ ಶಂಕರ ವಿಳಾಸವು ಶಿವಲೀಲೆಯನ್ನು ವರ್ಣಿಸುವ ಐದು ಆಶ್ವಾಸಗಳ ಒಂದು ಚಿಕ್ಕ ಚಂಪೂ ಗ್ರಂಥ. ಇದನ್ನು ಖಂಡ ಕಾವ್ಯವೆನ್ನುವುದಕ್ಕಿಂತ ಮಧ್ಯಮ ಕಾವ್ಯ ಎನ್ನುವುದು ಲೇಸು. (ಕ.ಸಾ.ಚ; ಮುಗಳಿ) ಇದು ಶಿವನ ಪಂಚವಿಂಶತಿಲೀಲೆಗಳಲ್ಲೊಂದೆಂಬುದು ಷಡಕ್ಷರನ ಮತ. ಹೀಗಾಗಿ ಮಹಾಭಾರತ ಮೂಲಕ್ಕಿಂತ ಶೈವ ಮೂಲದ ಕಿರಾತಲೀಲೆಯೇ ಹೆಚ್ಚು ಪ್ರಿಯ. ಶಿವನಿಗೇ ಮನ್ನಣೆ, ಅರ್ಜುನ ಗೌಣ. ಶಿವನ ಮಹಿಮೆಯನ್ನೂ, ಕಾರುಣ್ಯವನ್ನೂ ಅವನ ಭಕ್ತಾನುಗ್ರಹ ತತ್ಪರತೆಯನ್ನು ನಿರೂಪಿಸುವುದೇ ಅವನ ಗುರಿ. ಆದ್ದರಿಂದ 'ಮೃಡಭಕ್ತಿ ಭಾವಿತರ್... ಕಬ್ಬಮನಾಲಿಸುಗೆ' ಎಂದಿದ್ದಾನೆ.

ಷಡಕ್ಷರಿಗೆ ಸಂಸ್ಕೃತ ಭಾರತಕ್ಕಿಂತ ನಾರಣಪ್ಪನ ಭಾರತವೇ ಪ್ರಿಯ. ಹೀಗಾಗಿಯೇ ಕುಮಾರವ್ಯಾಸನ ಷಡಕ್ಷರಿ ಈ ನಿಟ್ಟಿನಲ್ಲಿ ಸಂಪೂರ್ಣ ಋಣಿ. ಇದೇನು ಕನ್ನಡ ಸಾಹಿತ್ಯಕ್ಕೇನೂ ಹೊಸತಲ್ಲ. ಒಬ್ಬ ಕವಿ ಇನ್ನೊಬ್ಬನಿಂದ ಭಾಗವನ್ನೋ ಭಾವವನ್ನೋ ಎತ್ತಿಕೊಳ್ಳುವುದೇನೂ ಅಪಹರಣವಲ್ಲ, 'ಸ್ವೀಕರಣ' ಎನ್ನುತ್ತದೆ ಕಾವ್ಯ ಮೀಮಾಂಸೆ. ಜಗತ್ತಿನ ಕವಿಗಳನ್ನು ಸಾಲಾಗಿ ನಿಲ್ಲಿಸಿದರೆ ಒಬ್ಬನ ಕೈ ಮತ್ತೊಬ್ಬನ ಜೇಬಿನಲ್ಲಿ ಎಂಬ ಮಾತು ಹುಟ್ಟಿದ್ದೇ ಹೀಗೆ. ಷಡಕ್ಷರಿ ಕೇವಲ ಕುಮಾರವ್ಯಾಸನನ್ನೇ ಅಲ್ಲದೇ ತನಗಿಂತ ಪೂರ್ವದಲ್ಲಿದ್ದ ಕಿರಾತಾರ್ಜುನೀಯಗಳನ್ನು ಜಾಲಾಡಿ ಅಲ್ಲಿದ್ದ ಭಾವನೆ ಭಾಗಗಳನ್ನು 'ಸ್ವೀಕರಣ' ಮಾಡಿದ್ದಾನೆ.

ಉದಾ. ಗೆ ಪಂಪನ

ಪೊರಳೆ ವಾರ್ಧಿಗಳ್ ಕಲಂಕಿದ ಪುರ್ದೆ ಮೆಯ್ಯನ್ ಉದಗ್ರ ಮಾ
ದರಮಂದಲುಗಿತ್ತು ಬಾಯ್ಗಿಯೆದಿಗ್ಗಜಂ ಪೆಜಗಿಟ್ಟು ವಾಂ
ತರದೆ ತೊಟ್ಟನೆ ದಾಡೆಗುಟ್ಟೆ ಕವಿಲ್ದು ತಾರಗೆಗಳ್ ನಭಂ
ಬೆರಸು ಬಿಣ್ದುವು.

ಎಂಬ ವೃತ್ತದ ಸಾರಾಂಶವನ್ನೆಲ್ಲಾ ಒಂದು ಕಂದಕ್ಕೆ ತಿರುಗಿಸಿ

ನಡುಗಿದುದಿಳೆ ಗಿರಿಶಿಖರಂ
ಕೆಡೆದುದು, ಕದಡಿತ್ತಿಜಲಧಿ ತುಳ್ಕಿದುರ್ದು ಉಡುಗಳ್
ಬಿಡದೆ ಉಳ್ಕಿದವು ಅಹಿಪತಿಪೆಡೆ
ಯುಡುಗಿದನ್ ಇನಬಿಂಬಮದಿರ್ಯದುದು ಅಳ್ಕಿದರ್ ಅಹಿತರ್॥

ಎಂದಿದ್ದಾನೆ. ಈ ಸ್ವೀಕರಣ ಮೆಚ್ಚ ತಕ್ಕದ್ದೇ ಸರಿ.

ಹಾಗೆಯೇ ಶಿವನ ಭಟರು ಬೇಟೆಯಾಡುತ್ತಾ ಆರ್ಭಟಿಸುವ ಚಿತ್ರ ವಿರೂಪಾಕ್ಷನಲ್ಲಿ ಹೀಗೆ ವ್ಯಕ್ತವಾಗಿದೆ.

ಕೆಡಪು ಸಾರಂಗಮಂ, ಸಿಂಗಮಂ ಪೊಯ್, ತಲೆಯನ್
ಒಡೆಗಜದ, ಪುಲಿಯನ್ ಎಬ್ಬಿ ಅಟ್ಟು, ಪಂದಿಯನ್ ಇಟ್ಟು
ಮಡಿಪು ಖಡ್ಗಿಯ ಖಡ್ಗದಿಂದ ಮರ್ದಿಸು ಮಲೆಯ ಪೊರೆಯಂ ತುಡುಂಕು
ಕಡಿನರಿಯಂ, ಅರಿ ಹರಿಯನ್ ಇಡು ಮೊಲನಂ, ಉಡುಗಳಂ
ಬಡಿ, ಚಮರಿ ವಾಲಮಂಪಿಡಿ ತಡೆಯದಡಿಯಡೆಂ
ದೊಡನೊಡನೆ ಗುಡುಗುಡಿಸಿ ಝಡಿತೆಯಿಂದುರುಬಿದರ್ ಬಿಡದೆ ಮಾಯಾ
ಶಬರರು॥

(ಚಿ.ಬ.ಪು. ೫೩ನೇ ಸಂಧಿ ೨೭ನೇ ಪದ್ಯ)

ಎಂಬ ವಾರ್ಧಕ ಪದ್ಯವನ್ನು ಷಡಕ್ಷರಿ ವೃತ್ತವಾಗಿಸಿ ಧಸೋತಿದ್ದಾನೆ. ಷಡಕ್ಷರಿಯಲ್ಲಿ ಇದು

ಬಡಿಯುಡುಮ, ತೊಡಂಕದಿಡು ಪೆರ್ಮೊಲನಂ ಬಲೆವೀಸಿ ಪುಲ್ಲೆಯಂ
ಕೆಡಪು, ಲುಲಾಯಮಂ ತಜೆ, ಪೊದಮ್ದಿ ಇಸುದಂತಿಯನ್, ಆರ್ದುಖಡ್ಗದಿಂ
ಕಡಿ ಪುಲಿಯಂ, ಕರುತ್ತಿರಿ ವರಾಹನ ನಿಟ್ಟೆಯೊಳ್, ಉಗ್ರ ಸಿಂಹಮಂ
ಪೊಡೆ ಬಿಡದೆ ಕೂರಸಿಯಿನ್ ಎಂಬರವಂ ಪಿರಿದಾಯ್ತರಣ್ಯದೊಳ್॥

(ಶ.ಶಂ.ವಿ. ೩-೫೦)

ಎಂದಾಗಿದೆ.

ಇಲ್ಲಿ ಷಡಕ್ಷರಿ ತಾನೇ ವಾಚ್ಯವಾಗಿ ರವಂ ಪಿರಿದಾಯ್ತು ಎಂದು ಹೇಳಿದ್ದರೆ, ವಿರೂಪಾಕ್ಷ ಪಂಡಿತನಲ್ಲಿ "ತಡೆಯದಡಿಯಿ ಡೆಂದೊಡನೊಡನೆ ಗುಡಿಗುಡಿಸಿ ಝಡಿತೆಯಿಂ" ಎಂದು 'ಡ'

ಕಾರ ಪ್ರಾಸಗಳೇ ರವವನ್ನು ಎಸಗುತ್ತವೆ. ಷಡಕ್ಷರಿ ಇಂತಹ ಕಡೆ ಕೆಲವೊಮ್ಮೆ ಹೀಗೆ ಸೋಲುವುದುಂಟು.

ಕುಮಾರವ್ಯಾಸನಂತೂ ಷಡಕ್ಷರಿಗೆ ಪ್ರಾರಂಭದಿಂದಲೂ ದಾರಿದೀಪ. ಕಾವ್ಯದಲ್ಲಿ ಕೆಲವು ವರ್ಣನೆಗಳನ್ನು ಬಿಟ್ಟರೆ ಮಿಕ್ಕೆಡೆಗಳಲ್ಲೆಲ್ಲಾ ನಾರಣಪ್ಪನನ್ನು ಒಂದು ನಿಮಿಷವೂ ಬಿಟ್ಟಗಲಲಾರ. ಇವನು ಕಾವ್ಯದ ಆರಂಭದಲ್ಲಿ ಕಾವ್ಯ ದೂಷಕರ ನಿಂದೆಯನ್ನು ಮಾಡುವ ಪದ್ಯವೂ ನಾರಣಪ್ಪನ ಸ್ವತ್ತೇ.

ನಾರಣಪ್ಪನ "ಚೋರ ನಿಂದಿಸಿ ಶಶಿಯ ಬೈದೊಡೆ ಕ್ಷೀರವನು ಕ್ಷಯರೋಗಿ ಹಳಿದೊಡೆ" ಎಂಬ ಪದ್ಯ ಹಾಗೂ "ಏಕೆ ಕನ್ನಡಿ ಕುರುಡರಿಗೆ ತಾನೇಕೆ ಸಾಳಗ ಶುದ್ಧ ಬಧಿರರಿಗೇಕೆ ಮೂರ್ಖ ಸಮಾಜದಲಿ ಸಾಹಿತ್ಯ ಸನ್ನಾಹ" ಎಂಬ ಪದ್ಯಗಳನ್ನೇ ಷಡಕ್ಷರಿ ತನ್ನ ಕಾವ್ಯದಲ್ಲಿ

**"ಜ್ವರತಪ್ತಂ ಸುಧೆಯಂ, ಸುಧಾಂಬುನಿಧಿಯಂ ಭೇಕಂ, ಸುಧಾರೋಚಿಯಂ**
**ವಿರಹಾವಿಷ್ಟನ್, ಅನಂತ ರತ್ನರುಚಿಯಂ ಘೂಕಂ, ರಣದ್ವೀಣೆ ಇಂ**
**ಚರದ ಒಳ್ಪಂ ಬಧಿರಂ, ಲಸನ್ಮಕುರಮಂ ಜಾತ್ಯಂಧನ್, ಉದ್ಯತ್ ಗುಣಾ**
**ಕರ ಸತ್ಕಾವ್ಯ ಮನಜ್ಞನೇಂಪಳಿಯೆ ಕುಂದಾದಪ್ಪುದೇ ಧಾತ್ರಿಯೊಳ್ ॥**

ಎಂದು ಹೇಳುತ್ತಾನೆ.

ಇಷ್ಟಾದರೂ ತನ್ನ ಕಾವ್ಯದಲ್ಲಿ ನಾರಣಪ್ಪನ ಹೆಸರನ್ನೇ ಉಸಿರೆತ್ತುವುದಿಲ್ಲ. ಯಾವುದೇ ಕವಿಯಾಗಲೀ ಅನ್ಯ ಕವಿಯಿಂದ ಕಾವ್ಯ ಋಣವನ್ನು ತೆಗೆದುಕೊಂಡಾಗ ಆ ಕವಿಗೆ ಕೃತಜ್ಞತೆಯನ್ನು ಹೇಳುವುದರ ಮೂಲಕ ಋಣ ತೀರಿಸುವುದು ಶಿಷ್ಟ ಸಂಪ್ರದಾಯ. ಆದರೆ ಷಡಕ್ಷರಿ "ನಹಿಕೃತಮುಪಕಾರಂ ಸಾಧವೋ ವಿಸ್ಮರಂತಿ" ಎಂಬ ಸಂಪ್ರದಾಯಕ್ಕೆ ಸೇರಿದವನಲ್ಲ. ಹರಿಹರನ ಸರಳ ಕಾವ್ಯ ಶೈಲಿಯನ್ನು ಅನುಸರಣೆ ಮಾಡಲು ಸಾಧ್ಯವಾಗದಿದ್ದರೂ ಹರಿಹರನನ್ನು ಸ್ಮರಿಸಿದ್ದಾನೆಯೇ ಹೊರತು ನೆರವಿಗೆ ಬಂದ ಕುಮಾರವ್ಯಾಸನನ್ನಲ್ಲ. ಇದಕ್ಕೆ ಕಾರಣ ಬಹುಶಃ ಷಡಕ್ಷರಿ ವೀರಶೈವ ಪೀಠಾಧಿಕಾರಿಯಾಗಿದ್ದರಿಂದ ತಾನು ಅನ್ಯಮತದ ನಾರಣಪ್ಪನನ್ನು ಹೊಗಳುವುದು ಸರಿಯಲ್ಲವೆಂಬ ಮತಾಭಿಮಾನ ಅಥವಾ ಆಗಿನ ಕಾಲದ ಸಾಮಾಜಿಕ ಪರಿಸರವೋ ಅಥವಾ ಅವನು ಆರಿಸಿಕೊಂಡ ಚಂಪೂ ಕಾರಣವಾಗಿರಬಹುದು. ಯಾವುದೇ ಮಹಾಕವಿಗಾಗಲೀ ಈ ರೀತಿಯ ಸಂಕುಚಿತ ಮನಸ್ಸು ತಕ್ಕದ್ದಲ್ಲ. ಮಹಾಕವಿ ಪಟ್ಟಕ್ಕೆ ಏರಲಾಗದ್ದಕ್ಕೆ ಈ ದೋಷವೂ ಒಂದು. ಹೀಗಾಗಿಯೇ ಅವನು ನಾರಣಪ್ಪನ ಮಟ್ಟಕ್ಕೆ ಏರಲಾಗಲಿಲ್ಲವೆನ್ನಬಹುದು. ಆದ್ದರಿಂದಲೇ ಜಿ.ಎಸ್.ಎಸ್.ರವರು "ಕವಯಃ ಪಂಡಿತ ಕವಯಃ ಎಂಬಂತೆ ಷಡಕ್ಷರಿ ಕವಿಯೂ ಹೌದು, ಪಂಡಿತನೂ ಹೌದು. ಅವನು ಪ್ರತಿಭಾ ಸಂಪನ್ನನಾದ ಮಹಾಪಂಡಿತ. ಅವನು ಮಹಾಕವಿ ಎನ್ನುವುದಕ್ಕಿಂತ ಮಹಾಪಂಡಿತನಾದ ಶ್ರೇಷ್ಠ ಕವಿಯೆನ್ನುವುದು ಹೆಚ್ಚು ಸತ್ಯ" ಎಂದಿದ್ದಾರೆ. ಮುಗಳಿಯವರು ಹೇಳುವಂತೆ, "ನಮ್ಮ ನಮ್ರ ತಿಳಿವಳಿಕೆಗೆ ಅವನು ಮಹಾಕವಿಯ ತೇಜೋಂಶವುಳ್ಳವನೇ ಹೊರತು ಮಹಾಕವಿಯ ಸಿದ್ಧಿಪಡೆದವನಲ್ಲ".

### ಷಡಕ್ಷರಿಯ ಈ ಕಾವ್ಯದ ಉತ್ಕೃಷ್ಟತೆ

ಕನ್ನಡದ ನಾನಾ ಕಾವ್ಯಗಳಲ್ಲಿ ಕಿರಾತಾರ್ಜುನೀಯ ಪ್ರಸಂಗಗಳು ಬಂದರೂ ತನ್ನದೇ ಆದ ಪ್ರತ್ಯೇಕ ಕಾವ್ಯದ ರೂಪವನ್ನು ಪಡೆದದ್ದು ಷಡಕ್ಷರಿಯ ಹಸ್ತದಲ್ಲಿ. ಸೊಗಸಾದ ಶ್ಲೇಷೆ, ವಿರೋಧಾಭಾಸಾಲಂಕಾರಗಳು. ವರ್ಣನೆಗಳಲ್ಲಿ ಚಿಕ್ಕದಾದ ಕಿರಾತಾರ್ಜುನೀಯವನ್ನು ವಿಶಾಲ ಮಾಡಿದ್ದಾನೆ. ಇಲ್ಲಿ ಕಥಾ ಭಾಗಕ್ಕಿಂತ ವರ್ಣನಾ ಭಾಗವೇ ಹೆಚ್ಚು. ಈ ನಿಟ್ಟಿನಿಂದ ಇವನು ಭಾರವಿಯಿಂದ ಸಂಪೂರ್ಣವಾಗಿ ಪ್ರೇರೇಪಿತನೆಂಬುದು ಸ್ಪಷ್ಟ. ಇದು ಉತ್ಕೃಷ್ಟ ಚಂಪೂ. ಬಿಗಿಯಿಂದ ಹೇಗೇ ಇದ್ದರೂ ಪಾಂಡಿತ್ಯದಲ್ಲಿ ಭಾರವಿಯ ಪಾಂಡಿತ್ಯ ಪೂರ್ಣ ಕಿರಾತಾರ್ಜುನೀಯದಂತೆ ಕನ್ನಡದಲ್ಲೂ ಪಾಂಡಿತ್ಯ ಪೂರ್ಣವಾದ ಪ್ರತ್ಯೇಕ ಕಿರಾತಾರ್ಜುನೀಯವಿದೆಯೆಂಬುದು ಅತ್ಯಂತ ಸಂತೋಷದ ಸಂಗತಿ. ಷಡಕ್ಷರಿಯ ಈ ಕೃತಿ ಕಾವ್ಯೋನ್ನತಿಯ ದೃಷ್ಟಿಯಿಂದ ಭಾರವಿಯ ಕೃತಿಯನ್ನು ಹೆಚ್ಚು ಸರಿಗಟ್ಟದೇ ಹೋದರೂ ಪ್ರೌಢ ಭಾಷೆ, ಪಾಂಡಿತ್ಯ ಪೂರ್ಣ ಬರಹದ ಕ್ಷೇತ್ರದಲ್ಲಿ ಸರಿಗಟ್ಟಿದೆಯೆನ್ನಬಹುದು. ಇದು ಇವನ ಕಾವ್ಯದ ಉತ್ಕೃಷ್ಟತೆ.

### ಷಡಕ್ಷರಿ – ನಾರಣಪ್ಪ

ಷಡಕ್ಷರಿ ನಾರಣಪ್ಪನಿಂದ ಬೇರೆಯಾಗುವುದು ಚಂಪೂವಿನಲ್ಲಿ ಹಾಗೂ ವರ್ಣನೆಗಳಲ್ಲಿ ಮಾತ್ರ. ಅದರಲ್ಲೂ ಕೆಲವು ವರ್ಣನೆಗಳಲ್ಲಿ ಸ್ವಂತಿಕೆ ಮೆರೆದರೆ ಹೆಚ್ಚು ಕಡೆಗಳಲ್ಲಿ ನಾರಣಪ್ಪನ ದಟ್ಟ ನೆರಳು ಕಾಣಿಸುತ್ತದೆ.

ಷಡಕ್ಷರಿ ಪಂಡಿತ ಕವಿ. ತನ್ನ ಕಾವ್ಯಾರಂಭದಲ್ಲೇ ಶರಭ, ವನ, ಗಜೋತ್ತುಂಗ ನಾದ ಮೇರುಪರ್ವತವನ್ನೂ, ಶರಭವನೆ, ಅಗಜೋತ್ತುಂಗನಾದ ಶಿವನನ್ನೂ ಶ್ಲೇಷೆಯಿಂದ ಸ್ತುತಿಸಿ ಪ್ರಾರಂಭಿಸುತ್ತಾನೆ. ಗಿರಿಜೆ, ಷಣ್ಮುಖ, ಗಣಪ, ಚತುರಾಚಾರ್ಯ ಸ್ತುತಿಯನ್ನು ಸತ್ಕಾವ್ಯಲಕ್ಷಣ, ದುರ್ಜನ ನಿಂದೆಯ ನಂತರ ಸಮುದ್ರ ವರ್ಣನೆಗೆ ಬರುತ್ತಾನೆ. ಷಡಕ್ಷರನೂ ನಾಲಗೆಯನ್ನೇ ಹರನಿಗೇ ಮೀಸಲಪ್ಪಟ್ಟವನು. ಸಮುದ್ರವನ್ನು ಸಹ "ಅಭವಾಕಾರ ಮುದ್ರಂ ಸಮುದ್ರಂ" ಎನ್ನುತ್ತಾನೆ. ಪರ್ವತದ ಹಾಗೂ ಅದರ ತಪ್ಪಲಿನ ವಾಸಿಗಳಾದ ಖಚರರ, ನಿಸರ್ಗದ ವರ್ಣನೆಗಳು ಮನ ಸೆಳೆಯುತ್ತವೆ.

ಷಡಕ್ಷರಿಯ ವರ್ಣನೆಗಳಲ್ಲಿ ಮುಖ್ಯವಾದವು ಕೈಲಾಸವರ್ಣನೆ, ಇಂದ್ರಕೀಲ ವರ್ಣನೆಗಳು. ಇದರಲ್ಲಿ ಇಂದ್ರಕೀಲ ವರ್ಣನೆಯಲ್ಲಿ ಪೂರ್ಣವಾಗಿ ಭಾರವಿಯ ಪ್ರಭಾವವಿದ್ದು ಕೈಲಾಸವರ್ಣನೆಯಲ್ಲಿ ಅಭೂತಪೂರ್ವ ಸ್ವಂತಿಕೆಯಿದೆ. ಪ್ರಥಮಾಶ್ವಾಸದಲ್ಲಿಯೇ ತನ್ನ ತನವನ್ನು ಕೈಲಾಸವರ್ಣನೆಯಲ್ಲಿ ತೋರುತ್ತಾನೆ.

ಇವನ ಕೈಲಾಸದಲ್ಲೂ ನಮ್ಮ ಭೂಮಿಯಂತೆಯೇ

ಕೋಟೆ, ಕೊತ್ತಳ, ಕಂದಕಗಳು. ಆದರೆ ಹೆಚ್ಚೆಂದರೆ ಅವೆಲ್ಲಾ ಬಂಗಾರ, ಬೆಳ್ಳಿಯಿಂದ, ವಜ್ರದಿಂದ ಮಾಡಲ್ಪಟ್ಟವು ಅಷ್ಟೆ. ಆ ಶಿವನಗರದ ರಾಜಮಾರ್ಗಗಳು ಅಲ್ಲಿನ ದ್ವಾರಪಾಲಕರುಗಳ ವರ್ಣನೆಯ ನಂತರ ಅಲ್ಲಿರುವ ಭವನಗಳನ್ನು ವರ್ಣಿಸುತ್ತಾನೆ. ನಮ್ಮಲ್ಲಿ ರಾಷ್ಟ್ರಪತಿ ಭವನಗಳು, ರಾಜಭವನಗಳಿರುವಂತೆ ಅಲ್ಲಿ ಋಗ್ವೇದ ಭವನ, ಯಜುರ್ವೇದಾದಿ ಭವನಗಳು. ಮಾಣಿಕ್ಯದ ಮಂಟಪಗಳು, ಪಚ್ಚೆಯ ಜಗಲಿಗಳು, ಸ್ತಂಭಗಳು, ಚಿನ್ನದ ಗೋಪುರಗಳು ಹೀಗೆ ರವಿಕಾಣದ್ದು ಕವಿಕಂಡನೆಂಬಂತೆ ಶತಕೋಟಿ ಯೋಜನ ವಿಸ್ತೀರ್ಣದ ತನ್ನದೇ ಆದ ಕೈಲಾಸ ಸೃಷ್ಟಿಸುತ್ತಾನೆ. ಇಂತಹ ಕೈಲಾಸದಲ್ಲಿರುವ ಶಿವನ ವರ್ಣನೆಯಲ್ಲಿ ತಲ್ಲೀನನಾಗಿ ಸುಮಾರು ಹದಿನೈದಕ್ಕೂ ಹೆಚ್ಚು ಪದ್ಯಗಳಲ್ಲಿ, ನೂರಾರು ಗದ್ಯದ ಸಾಲುಗಳಲ್ಲಿ ನಾನಾ ರೀತಿ ಶ್ಲೇಷೆಗಳಿಂದ ಶಿವನನ್ನು ಕಣ್ಣು ಮನದಣಿವವರೆಗೆ ವರ್ಣಿಸುತ್ತಾನೆ.

ಈ ಕೈಲಾಸದಲ್ಲೂ ಶಿವನನ್ನು ಕಾಣಲು ಭೂಮಿಯಂತೆ ಸರದಿ ಪದ್ಧತಿ. ಶಿವನ ದರ್ಶನದ ಈ 'ಕ್ಯೂ'ನಲ್ಲಿ ನಿಂತಿರುವವರೋ ವಿರಿಂಚಿವಾಸವಾದಿಗಳು. ಅಲ್ಲಿ ಸರದಿಯನ್ನು ನಿಲ್ಲಿಸುತ್ತಿದ್ದ ಕಂಕಾಲನೆಂಬುವವನು ಕೋಲನ್ನು ಹಿಡಿದು ವಾಯುವೇ ನುಗ್ಗಬೇಡ, ಬ್ರಹ್ಮನೇ ಹರಟೆ ಹೊಡೆಯಬೇಡ, ಇಂದ್ರ ನೀನು ಹೋಗು, ಮಾಧವ ಕುಳಿತುಕೋ, ಮೊದಲು ಬಂದವನು ಸೂರ್ಯನಾದ್ದರಿಂದ ಚಂದ್ರನೇ ಸೂರ್ಯನಿಗೆ ಅವಕಾಶ ಮಾಡಿಕೊಡು ಎಂದು ಗದರಿಸುತ್ತಿದ್ದನಂತೆ. ಮೊದಲು ಬಂದವನಿಗೆ ಮೊದಲು ಅವಕಾಶ ಎಂಬಂತೆ ಇಲ್ಲಿ ಎಷ್ಟು ಚೆನ್ನಾಗಿ ಬಂದಿದೆ ಷಡಕ್ಷರನ ವಾಸ್ತವಿಕ ಪ್ರಜ್ಞೆ. ಹೀಗೆ ಪ್ರಥಮಾಶ್ವಾಸದಲ್ಲಿ ಷಡಕ್ಷರ ತನ್ನ ನೈಜ ಕಾವ್ಯಗುಣದ ಕಿರುಚಿತ್ರವನ್ನೇ ನೀಡುತ್ತಾನೆ.

ದ್ವಿತೀಯಾಶ್ವಾಸದಿಂದ ಪ್ರಾರಂಭವಾಗುತ್ತದೆ ಕಾವ್ಯದುದ್ದಕ್ಕೂ ನಾರಣಪ್ಪನ ನೆರಳು. ಅರ್ಜುನನ ತಪೋ ಬೇಗೆ ತಾಳಲಾರದೇ ಶಿವನಲ್ಲಿ ಮೊರೆಯಿಡಲು ಬಂದ ತಪಸ್ವಿಗಳ ರೂಪು ಸಹಾ ನಾರಣಪ್ಪನದೇ. ಷಡಕ್ಷರಿಯ 'ಕೆದರ್ದ ಜಟಾಳಿ, ಜಾರಿದ ಮೃಗಾಜಿನಂ' ಎಂಬ ಪದ್ಯ ನಾರಣಪ್ಪನ 'ಕೆದರಿದವು ಜಡೆಯಕ್ಷ ಮಾಲೆಗಳುದುರಿದವು' ಎಂಬ ಪದ್ಯದ ಯಥಾವತ್ ಅನುವಾದವೇ.

ಹೊಸ ತಪಸ್ವಿಯ ತಪಸ್ಸಿಗೆ ಭಯಬಿದ್ದು ಶಿವನಲ್ಲಿ ಹೇಳಿಕೊಳ್ಳಲು ಬಂದ ತಪಸ್ವಿಗಳು ಷಡಕ್ಷರನಲ್ಲಿ ೩೩ ಪದ್ಯಗಳಲ್ಲಿ ಶಿವಸ್ತುತಿಯನ್ನು ಮಾಡುತ್ತಾರೆ. ನಾರಣಪ್ಪನಲ್ಲಿ ನಮಃ ಶಿವಾಯ ಎಂದು ನಮಸ್ಕಾರ ಹಾಕಿದೊಡನೆ ಶಿವ 'ಏಳಿ ಸಾಕು. ಬಂದಕಾರ್ಯವನ್ನು ಹೇಳಿ' ಎನ್ನುತ್ತಾನೆ. ಷಡಕ್ಷರಿಯ ಶಿವ ಸ್ತುತಿಪ್ರಿಯ, ನಾರಣಪ್ಪನ ಶಿವ ಕಾರ್ಯ ತತ್ಪರ.

ಷಡಕ್ಷರಿಯಲ್ಲಿ ಶಿವ ತಾಪಸಿಗಳನ್ನು 'ನೀವು ಯಾರು? ಯಾವವನು, ಬಂದ ಕಾರ್ಯವೇನು' ಎಂದೊಡನೆ ತಪಸಿಗಳು ತಮ್ಮತನವನ್ನು ಕಾವ್ಯಮಯವಾಗಿ ವರ್ಣಿಸುತ್ತಾರೆ. ಸುಮಾರು ೫೦ ಕಂದ, ವೃತ್ತಗಳಲ್ಲಿ, ವಿರೋಧಾಭಾಸ, ಶ್ಲೇಷೆಯುಕ್ತ ವಿಸ್ತಾರವಾದ ಗದ್ಯಗಳಲ್ಲಿ ವರ್ಣಿಸುತ್ತಾರೆ. ಇಂದ್ರಕೀಲ ಪರ್ವತ, ಆ ಪರ್ವತದಲ್ಲಿ ಸೂರ್ಯೋದಯ, ಚಂದ್ರೋದಯ, ಯಜ್ಞ ಯಾಗಗಳು ಅಲ್ಲಿನ ಸರೋವರ, ಕ್ರೀಡಿಸುವ ಆನೆ, ಪಶು, ಪಕ್ಷಿಗಳು ಆ ಉದ್ಯಾನಕ್ಕೆ ವಸಂತ ಬಂದದ್ದು. ಆ ಉದ್ಯಾನಗಳಲ್ಲಿ ರತಿ ಕ್ರೀಡಿಸುವ ಕಿನ್ನರ ಕಿಂಪುರುಷ ಇತ್ಯಾದಿಗಳನ್ನು ಭೋಗಯುಕ್ತವಾಗಿ ಸರ್ವ ಸಂಗ ಪರಿತ್ಯಾಗಿಗಳಾದ ತಪಸಿಗಳು ಅದೂ ಸರ್ವ ಸಂಗಪರಿ ತ್ಯಾಗಿಯಾದ ಶಿವನಿಗೆ ವರ್ಣಿಸುವುದು ಪಾಪ! ತಾಪಸಿಗಳಿಗೆ ಷಡಕ್ಷರಿ ಕೊಟ್ಟ ಮುಜುಗರವೇ ಸರಿ. ಈ ಮಧ್ಯೆ ಷಡಕ್ಷರಿ ಸುಂದರ ನೈಜ ಚಿತ್ರಗಳನ್ನು ಕಣ್ಣಿಗೆ ಕಟ್ಟುವಂತೆ ಹೇಳಬಲ್ಲ. ಕಿನ್ನರಿಯೊಬ್ಬಳ ಗಾನವನ್ನು ಕೇಳುತ್ತಾ ಅವಳ ತೊಡೆಯ ಮೇಲೆ ಕುಳಿತ ಜಿಂಕೆಯ ಮರಿ ಅರೆಗಣ್ಣು ಮುಚ್ಚಿ, ಗರಿಕೆ ತಿನ್ನುತ್ತಾ ಗಾನ ಸವಿಯುತ್ತಿದ್ದ ಬಗೆ ಹೀಗೆ.

"ಕಿನ್ನರಿಯಿಂಚರಂ ಬಿಡಿದು, ನುಣ್ಚರದಿಂ ಸವಿಸೂಸೆ ಪಾಡುವ ಆ
ಕಿನ್ನರಿಯ ಅಂಕದೊಳ್, ನಸು ಮುಗುಳಚ್ಚಿದ ಕಣ್, ಕಡೆವಾಯದೂರ್ವೆ,
ಚೆಲ್ವಿಂನಿಮಿರ್ದ ಅಂಗಂ, ಎತ್ತಿದ ಕೊಡಂಕೆ, ಜವಂಗೆಡದೇಳ್ವ ರೋಮಹರ್ಷಂ
ನೆರೆಯೊಪ್ಪೆ ನಲ್ಗೊಣಸು ಪಟ್ಟೆಸೆದಿರ್ದುದುದದೊಂದು ತಾಣದೊಳ್"

ಎನ್ನುತ್ತಾರೆ.

ಆದರೆ ಕುಮಾರವ್ಯಾಸ ಕೇವಲ ಒಂದೇ ಒಂದು ಷಟ್ಪದಿಯಲ್ಲಿ ಇಡೀ ಇಂದ್ರಕೀಲ ಪರಿಸರವನ್ನು ಇದೆಲ್ಲಕ್ಕಿಂತ ಚೆನ್ನಾಗಿ ಕಟ್ಟಿಹೇಳಬಲ್ಲ

"ಸೊಂಪೆಸೆವ ಕೋಗಿಲೆಯಸರ, ದೆಸೆ
ತಂಪಡೆಸೆವ ತಂಬೆಲರ, ಹುವ್ವಿನ
ಜೊಂಪವನು, ಝೊಂಪಿಸುವ ಮರಿದುಂಬಿಗಳ ಮೇಳವದು
ಪೆಂಪೊಗುವ ತಾವರೆಗೊಳಂಗಳ
ತಂಪಿನೊದವಿನ ವನದ ಸೊಗಸಿನ
ಸೊಂಪು ಸೆಳೆದುದು ಮನವನೀತನನರಸ ಕೇಳೆಂದ ॥

ಎಂದು ಚಿಕ್ಕದಾಗಿ ಚೊಕ್ಕವಾಗಿ ಹೇಳಿ ಮುಗಿಸುತ್ತಾನೆ.

ಷಡಕ್ಷರಿ ಕುಮಾರವ್ಯಾಸನ ಭಾವವನ್ನೇ ತೆಗೆದುಕೊಂಡು ಅವನಿಗಿಂತ ಅಪರೂಪಕ್ಕೆ ಚೆನ್ನಾಗಿ ಹೇಳಬಲ್ಲ. ಪರಮೇಶ್ವರನ ಬೇಟೆಯ ವರ್ಣನೆ ಅಭೂತಪೂರ್ವವಾದುದು. ಶಿವನು ಬೇಟೆಯಾಡುವುದು ತಾನು ಪಾಲಿಸುವ ಪ್ರಾಣಿಗಳನ್ನಲ್ಲ. ದುಷ್ಟ ಶಿಕ್ಷಕನಾದ ಅವನು ತನ್ನ ಇಚ್ಛೆಯಂತೆ ದ್ವೇಷವನ್ನೇ ಸಿಂಹವನ್ನಾಗಿಸಿ ಗರ್ವವನ್ನೇ ಆನೆಯನ್ನಾಗಿಸಿ, ಮೋಹವನ್ನೇ ಖಡ್ಗ ಮೃಗವನ್ನಾಗಿಸಿ, ಕಾಮವನ್ನೇ ಜಿಂಕೆಯನ್ನಾಗಿಸಿ, ಅಸೂಯೆಯನ್ನೇ ಹಂದಿಯನ್ನಾಗಿಸಿ ದುರಾಸೆಯನ್ನೇ ನರಿಯನ್ನಾಗಿಸಿ ಬೇಟೆಯಾಡುತ್ತಾನೆ. ಎಷ್ಟು ರಮ್ಯವಾಗಿದೆ ಭಗವಂತನ ದುಷ್ಟ ಶಿಕ್ಷಣ, ಶಿಷ್ಟರಕ್ಷಣ ಕಲ್ಪನೆ! ಅದೂ ಅರಿಷಡ್ವರ್ಗಗಳನ್ನು ಆಯಾ ಪ್ರಾಣಿಗೆ ಸರಿಯಾಗಿ ಹೊಂದಿಸುತ್ತಾನೆ. ಉದಾಗೆ ಚಂಚಲತೆ ಕಾಮದ ನೇತ್ರದ ಜಿಂಕೆಯನ್ನೂ ಕಾಮಕ್ಕೂ ದುರಾಸೆಯನ್ನು ನರಿಯನ್ನಾಗಿಸಿರುವ ಅವನ ಕಲ್ಪನೆ ಚೆನ್ನಾಗಿ ಮೂಡಿ ಬಂದಿದೆ. ಮುಂದೆ ಶಿವನ

ಕಿರಾತರು ಹಿಡಿಯುವ ಬಲೆಗಳ ಪಟ್ಟಿಯ ವರ್ಣನೆಯಲ್ಲೂ ಷಡಕ್ಷರಿ. ನಾರಣಪ್ಪನ, ವಿರೂಪಾಕ್ಷ ಪಂಡಿತನ ಬಲೆಗೇ ಬಿದ್ದಿದ್ದಾನೆ. ಷಡಕ್ಷರಿಯು ಶಿವನ ಶಬರವೇಷಕ್ಕೆ ೩೦ಕ್ಕೂ ಹೆಚ್ಚು ಪದ್ಯಗಳಲ್ಲಿ ಅಲಂಕಾರ ಮಾಡುತ್ತಾನೆ. ಪಾರ್ವತಿಯ ಸುತ್ತಲೂ ಹೊರಡುವ ಶಾಕಿಣಿ ಡಾಕಿಣಿಯರ ಹೆಸರಿನ ಮಾಲೆಯೂ ನಾರಣಪ್ಪನದೇ. ಆದರೆ ಷಡಕ್ಷರಿ ಅದಕ್ಕೆ ಮುಕ್ತಕೇಶಿ, ಶವವಾಹಿನಿ ಮೊದಲಾದ ಇನ್ನೊಂದೆರಡು ಹೆಸರುಗಳನ್ನು ಪೋಣಿಸುತ್ತಾನಷ್ಟೆ.

ಮೂಕ ದಾನವನ ಸಂಹಾರವಾದ ಮೇಲೆ ಹರನರರಲ್ಲಿ ನಡೆಯುವ ವಾಗ್ಯುದ್ಧ ನಾರಣಪ್ಪನ ಸ್ವತ್ತೇ. ನಂತರದ ಯುದ್ಧವೂ ಹಾಗೆಯೇ. ಆದರೆ ಕುಮಾರವ್ಯಾಸ ಷಡಕ್ಷರಿಗೆ ಸುಲಭವಾಗಿ ಕೈಗೆ ಸಿಕ್ಕುವವನಲ್ಲ. ಕುವೆಂಪು ಗದುಗಿನ ಭಾರತದ ತೋರಣ ನಾಂದಿಯಲ್ಲಿ ಹೇಳಿರುವ ಈ ಪದ್ಯಗಳನ್ನು ಇದಕ್ಕೆ ಉದಾಹರಿಸಬಹುದು. ಅರ್ಜುನನ ಬಾಣಗಳು ಶಿವನನ್ನು ಏನು ತಾನೇ ಮಾಡಿಯಾವು? ಎಂಬುದಕ್ಕೆ ನಾರಣಪ್ಪ

ಮಂಜು ಮುಸುಕಿದೊಡೇನು ಪರ್ವತ
ವಂಜುವುದೇ ಹಾಲಾಹಲವ ನೊಣ
ನೆಂಜಲಿಸುವುದೆ? ವಡಬ ಶಿಖಿನೆನೆವುದೆ ತುಷಾರದಲಿ
ಕಂಜನಾಳದಿ ಕಟ್ಟುವಡೆವುದೆ
ಕುಂಜರನು? ನರಶರದ ಜೋಡಿನ
ಜುಂಜು ಪೊಳೆಯಲಿ ಜಾಹ್ನವೀಧರ ಜಾರುವನೆ? ಯೆಂದ"

ಎಂದು ಹೇಳುತ್ತಾನೆ. ಇದರ ಅನುವಾದ ಷಡಕ್ಷರನಲ್ಲಿ

ಮಂಜಿನ ಪುಂಜಮೊತ್ತರಿಸಿ ಮುತ್ತಿಮುಸುಂಕೆ ಭಯಾರ್ತಿಗೊಳ್ವನೆ
ಕಂಜಸಖಂ ಪತಂಗ ತತಿಪಾಯ್ದೊಡೆ ಬೆರ್ಚುಗುಮೆ ದವಾಗ್ನಿ ವಾ
ತಂ? ಜವದಿಂ ಪಳಂಚೆ ಗಿರಿ ಕಂಪನವಾಂಪುದೆ? ಪಾಂಡುಪುತ್ರನಾತಂ
ಜಡಿದೊತ್ತೆ ಜಾರಿ ಪೆಱಸಾರ್ವನೆ ಧೀರ ಧನಂಜಯಾಂಬಕಂ"

ಎಂದು ಬಂದಿದೆ. ಆದರೆ ಮೂಲದ ಅನುರಣನ ಇಲ್ಲಿ ಆಗಿದೆಯೆಂದು ಹೇಳುವುದು ಕಷ್ಟ. ಮಹಾಕವಿಯನ್ನು ಅನುಕರಣೆ ಮಾಡುವುದಕ್ಕೆ ಎಲ್ಲರೂ ಬಯಸುತ್ತಾರೆ. ಆದರೆ ಮಹಾಕವಿ ಅನುಕರಣೆಗೆ ಸಿಕ್ಕುವುದಿಲ್ಲ" ಎಂದು ಕುವೆಂಪು ಹೇಳಿರುವುದು ಹೀಗಾಗಿಯೇ. ಆದರೂ ಕುಮಾರ ವಾಲ್ಮೀಕಿ, ಚಾಟುವಿಠಲನಾಥ, ಕನಕ ಮುಂತಾದ ಷಟ್ಪದಿಕಾರರಿಗೇ ಸಿಗದ ನಾರಣಪ್ಪನನ್ನು ಸಾಧ್ಯವಾದಷ್ಟು ಮಟ್ಟಿಗೆ ಚಂಪೂವಿಗೆ ಎಳೆಯಲು ಯತ್ನಿಸಿರುವುದು ಷಡಕ್ಷರನ ಸಾಹಸವೇ ಸರಿ. ಈ ಅನುವಾದಕ್ಕೆ ಒದಗುವ ತೊಡಕೂ ಸಹ ಮುಖ್ಯವಾಗಿ ಮಾರ್ಗ ದೇಸಿಗಳದೇ ಆಗಿದೆ. ನಾರಣಪ್ಪನ ಶೈಲಿ ಸುಲಲಿತವಾಗಿ ಝುಳಝುಳನೆ ಹರಿಯುವ ನದಿ. ಈ ನದಿಗೆ ಸಂಸ್ಕೃತದ ಕಲ್ಲುಗಳನ್ನಿಟ್ಟಾಗ ಹರಿವ ನದಿಗೆ ಅಡ್ಡ ಹಿಡಿದಾಗ ಒದಗುವ ಶಬ್ದದಂತಿರುತ್ತದೆ ಷಡಕ್ಷರನ ಶೈಲಿ

### ಷಡಕ್ಷರಿಯ ಕಥಾ ನಿರೂಪಣೆಯ ರೀತಿ

ಷಡಕ್ಷರಿಯು ವರ್ಣನೆಯಲ್ಲಿ ಮೊದಲೇ ತಿಳಿಸಿದಂತೆ ಭಾರವಿಯಿಂದ ಪ್ರಭಾವಿತ. ಕಥಾಭಾಗಕ್ಕಿಂತ ವರ್ಣನಾಭಾಗವೇ ಹೆಚ್ಚು. ಕಥೆಯ ನಿರೂಪಣೆಯಲ್ಲೂ ನಾರಣಪ್ಪನ ಸುಭಗತೆಯಿಲ್ಲ. ಸ್ವಲ್ಪ ಗೋಜಲು ರೀತಿ. ನಾರಣಪ್ಪನು ಅರ್ಜುನನು ಇಂದ್ರ ಕೀಲಕ್ಕೆ ಬಂದು ತಪಸ್ಸು ಮಾಡುವುದನ್ನು ನೇರವಾಗಿ ಹೇಳದರೆ ಷಡಕ್ಷರಿಯಲ್ಲಿ ಅವೆಲ್ಲವೂ ಮೊರೆಯಿಡಲು ಬಂದ ತಪಸ್ವಿಗಳ ಬಾಯಲ್ಲಿ ಬರುತ್ತದೆ. ಅದೂ ಅವರು ಬಂದು ಸುಮಾರು ಪದ್ಯಗಳಲ್ಲಿ ಶಿವಸ್ತುತಿ, ಇಂದ್ರಕೀಲದ ಸುದೀರ್ಘ ವರ್ಣನೆಗಳ ನಂತರ ಅವರು ಅರ್ಜುನನ ತಪಸ್ಸನ್ನು ಕುರಿತು ಹೇಳುತ್ತಾರೆ. ಹೆದರುತ್ತಾ-ಬಂದ ಮುನಿಗಳು ತಮ್ಮ ಹೆದರಿಕೆಯ ಕಾರಣವನ್ನೇ ಹೇಳದೆ ಬರಿ ವರ್ಣನೆಯಲ್ಲಿ ತಲ್ಲೀನರಾಗುವುದು ಕಥೆಯ ಓಟಕ್ಕೆ ಆಣೆಕಟ್ಟಿನಂತಹ ಅಡ್ಡಿಯೇ ಸರಿ. ಅಷ್ಟೇ ಅಲ್ಲದೆ ಕಥೆಯಲ್ಲಿ ಗುಟ್ಟನ್ನು ಕಾಪಾಡುವುದಿಲ್ಲ. ನಾರಣಪ್ಪನಲ್ಲಿ ಶಿವ ಹೆದರಿ ಬಂದ ಮುನಿಗಳನ್ನು ಸಂತೈಸಿ "ಅರಿದೆ, ಅಂಜದಿರಿ, ಹುಯ್ಯಂ ಬರಿದೆಹುಯ್ಯಲತಂದಿರಿ, ನಾನ್ ಅವನನ್ ಎಬ್ಬಿಸಿ ತೆರಹು ಮಾಡಿಸಿಕೊಡುವೆ ಏಳಿ . ನಿಮ್ಮ ಆಶ್ರಮಕ್ಕೆ ಹೋಗಿ" ಎನ್ನುತ್ತಾನೆ. ಆ ತಪಸ್ವಿ ಯಾರೆಂದು ಗುಟ್ಟು ಬಿಡುವುದಿಲ್ಲ. ಮುಂದೆ ತಾನೇನು ಮಾಡುವೆನೆಂಬುದನ್ನೂ ಬಯಲು ಮಾಡುವುದಿಲ್ಲ. ಕಾರ್ಯರೂಪದಲ್ಲಿ ತೋರಿಸುತ್ತಾನೆ. ಆದರೆ ಷಡಕ್ಷರಿಯ ಶಿವ "ಭಯವೇಕೆ ಅವನು ಜಗತ್ರಯ ಖ್ಯಾತನ್ ಅರ್ಜುನನ್" ಎಂದು ಹೇಳಿ. ವ್ಯಾಸನು ಪಾಶುಪತಾಸ್ತ್ರವನ್ನು ಗಳಿಸು ಎಂದು ಹೇಳಿ ಕಳುಹಿಸಿದ್ದರಿಂದಾಗಿ ಬಂದಿದ್ದಾನೆ. "ಆತನಭೀಷ್ಟಮಂ ಸಲಿಸಿ ಪಾಶುಪತಾಸ್ತ್ರಮನಿತ್ತು... ರಕ್ಷಿಪೆಂ" ಎಂದು ಸಹಾ ಮುಂದಾಗುವುದನ್ನು ಊರಿಗೆ ಮುಂಚೆ ಹೇಳಿ ಕಾವ್ಯಸ್ವಾದನೋತ್ಸಾಹವನ್ನು ಕಡಿಮೆ ಮಾಡಿಬಿಡುತ್ತಾನೆ.

### ಷಡಕ್ಷರಿಯ ಈ ಕಾವ್ಯದಲ್ಲಿ ವರ್ಣನೆಗಳ ಔಚಿತ್ಯ

ಷಡಕ್ಷರಿಯ ವರ್ಣನೆಗಳಲ್ಲಿ ಮೊದಲೇ ತಿಳಿಸಿದಂತೆ ಕೈಲಾಸ, ಇಂದ್ರಕೀಲ, ಬೇಟೆಯ ವರ್ಣನೆಗಳು ಮುಖ್ಯ. ಇದರಲ್ಲಿ ಬೇಟೆಯ ಹಾಗೂ ಕೈಲಾಸ ವರ್ಣನೆಗಳು ಬಹಳ ಉಚಿತ ಸ್ಥಾನದಲ್ಲಿವೆ. ಆದರೆ ಇಂದ್ರಕೀಲದ ಕೈಲಾಸವರ್ಣನೆ ಹೆದರಿದ ಮುನಿಗಳ ಬಾಯಲ್ಲಿ ಹೇಳಿಸುವಿಕೆ ಉಚಿತವಾಗಿಲ್ಲ. ತಾವು ಬಂದ ಹದನನ್ನು ತಿಳಿಸದೇ ಸುಮ್ಮನೆ ಇಂದ್ರಕೀಲವನ್ನು ಶೃಂಗಾರಯುಕ್ತವಾಗಿ ವರ್ಣಿಸುತ್ತಾ ಹೋಗುವುದು ಮುನಿಗಳ ಬಂದ ಕಾರಣದಿಂದ ಉಂಟಾಗುವ ಕರುಣಾರಸಕ್ಕೆ ವಿರುದ್ಧವಾದ ಶೃಂಗಾರವನ್ನು ತರುವುದು ಉಚಿತವೆನಿಸುವುದಿಲ್ಲ.

ಅಷ್ಟೇ ಅಲ್ಲದೇ ಕೆಲವು ಮಾತುಗಳೂ ಅನುಚಿತವಾದದ್ದು. ನಾರಣಪ್ಪನಲ್ಲಿ ಅರ್ಜುನನು ತಪಸ್ಸಿನಲ್ಲಿದ್ದಾಗ ಇಂದ್ರ ಬಂದು ಸಂತೋಷಪಟ್ಟು "ಮಗನೇ ಮೆಚ್ಚಿದ್ದೇನೆ ಹರನ್ ಇಲ್ಲಿಗೆ ಬರಲಿ ಕರುಣಿಸಲಿ ನಿನ್ನ ಮನೋವಾಂಛಿತವ" ಎಂದು ಹರಸಿದರೆ ಷಡಕ್ಷರಿಯ ಇಂದ್ರ ಬಂದು ಒಡನೆಯೇ ಬಿಡದೆ ಅತ್ಯುಗ್ರ ತಪಂಗಳಂ ತಳೆದುಂ ಅತ್ಯಯಾಸದಿಂ ಯೋಗಿಗಳ್,

ಮೃಡ ಸಂದರ್ಶನಮಂ ವಲಂ ಪಡೆಯರು ಅಂತಾದ್ದು ನಿನಗಾಗುವುದೇ. "ಕುಂಟನ್ನೊಬ್ಬ ಮರದ ತುದಿಯಲ್ಲಿನ ದೊಡ್ಡ ಹಣ್ಣನ್ನು ಬಯಸುವಂತೆ ನಗೆಗೀಡು. ನಿನಗೇನು ತಪಸ್ಸಿನ ಅನುಭವವಿದೆ. ಸುಮ್ಮನೆ ವಾಪಸು ಹೋಗು" ಎಂದು ತಣ್ಣೀರೆರಚಿದಂತೆ ಮಾತುಗಳನ್ನಾಡಿ ಬಾವಿಗೆ ಬಿದ್ದವನನ್ನು ಎತ್ತದೆ ಕಲ್ಲು ಹೊಡೆಯುವಂತೆ ಮಾತನಾಡುತ್ತಾನೆ.

**ರಸ ಪ್ರತಿಪಾದನೆ:** ಷಡಕ್ಷರಿಯು ತನ್ನ ಕಾವ್ಯದಲ್ಲಿ ನವರಸಗಳನ್ನು ತರಲು ದಣಿದಿದ್ದರೂ ಮುಖ್ಯವಾಗಿ ಇಲ್ಲಿಯ ಪ್ರಧಾನ ರಸ ವೀರವೇ. ಹರನರರ ಯುದ್ಧವೇ ಇದಕ್ಕೆ ಸಾಕ್ಷಿ.

ಉದಾ:

**ಇನ್ನರಿಯಲ್ಕೆ ಬರ್ಪುದೆಲೆ ಧೂರ್ತ ಕಿರಾತ ಭವತ್ ಪರಾಕ್ರಮ**
**ಪ್ರೋನ್ನತಿಯೆಟ್ಟರಂ ಪೋಜಿಮಡೆನ್ನಧಿನಾಥ ಮಹೇಶ್ ಸೊಲ್ಮೆದಲ್**
**ಸನ್ನಿಧ ಮಾದುದಿಂದೆನಗೆ, ನಿನ್ನಸುವಂ ನೆಜಿಪೀರ್ವೆನ್ ಆವ**
**ದೇವನ್ ನಿನಗೋತು ಬರ್ಪನ್ ಅವನ ಸದೆದಿಕ್ಕುವೇನ್ ಈ ಕ್ಷಣಾರ್ಧದೊಳ್**

ಶೃಂಗಾರಸವು ಇಂದ್ರಕೀಲದ ವರ್ಣನೆಯಲ್ಲಿ ಬಂದಿದ್ದು ಅವಶ್ಯಕವಲ್ಲದಿದ್ದರೂ ತುರುಕಲಾಗಿದೆ. ವನಲಕ್ಷ್ಮಿಯ ಅಂಗಾಂಗಗಳು, ಕಿನ್ನರ ಕಿಂಪುರುಷರ ರತಿಕ್ರೀಡೆಗಳು ಇದಕ್ಕೆ ಸಾಕ್ಷಿ. ಇದಲ್ಲದೇ ಹಾಸ್ಯರಸವೂ ಇಂದ್ರಕೀಲದ ವರ್ಣನೆಯಲ್ಲಿ ಬಹಳ ಚೆನ್ನಾಗಿ ಮೂಡಿ ಬಂದಿದೆ.

ಹೊಂಗೆಯ ಮರವೊಂದನ್ನು ಆನೆ ಮುರಿದು ಬಿಟ್ಟಿತ್ತಂತೆ. ಆ ಮುರಿದ ಸಂದಿಯಿಂದ ಹಾಲು ಜಿನುಗಿ ಅಂಟಾಗಿತ್ತಂತೆ! ಆ ವನದಲ್ಲಿನ ಖೇಚರಿಯೊಬ್ಬಳು ವನದ ಮೇಲೆ ಹಾರುತ್ತಿದ್ದಾಗ ಅವಳ ಸೊಂಟವನ್ನೂ ದಾಟಿದ್ದ ಜಡೆ ಆ ಮರದ ಮೇಲೆ ಹಾರುವಾಗ ಆ ಅಂಟಿನಲ್ಲಿ ಸಿಕ್ಕಿ ಹಾಕಿಕೊಂಡು ಬಿಟ್ಟಿತಂತೆ! ಅದನ್ನು ಬಿಡಿಸಲು ಪ್ರಯತ್ನಿಸಿ ಪ್ರಯತ್ನಿಸಿ ಆಗದೇ, ವಿಧಿಯಿಲ್ಲದೇ ಆ ಹೊಂಗೆ ಮರದ ಮೇಲೆಯೇ ಪಾಪ! ತಣ್ಣಗೆ ಕುಳಿತು ಬಿಟ್ಟಿದ್ದಳಂತೆ.

**ಷಡಕ್ಷರಿಯಲ್ಲಿ ಅಲಂಕಾರಗಳು:** ಷಡಕ್ಷರಿಯಲ್ಲಿ ಕಾವ್ಯ ಪ್ರಾರಂಭದಿಂದಲೂ ಶ್ಲೇಷೆ ಹೆಚ್ಚು, ಅದೇ ಅಲ್ಲದೇ ಉಪಮೆ, ರೂಪ, ಉತ್ಪ್ರೇಕ್ಷೆಗಳನ್ನೂ ಹೇರಳವಾಗಿ ಬಳಸಿದಾನೆ. ನಾರಣಪ್ಪನ ರೂಪಕಗಳನ್ನು ತನ್ನ ಕಾವ್ಯದಲ್ಲಿ ಉಪಮೆಗಳಾಗಿಯೂ ತಿರುಗಿಸಿಕೊಂಡಿದ್ದಾನೆ. ಇಲ್ಲಿ ಇನ್ನೊಂದು ಮುಖ್ಯವಾಗಿ ಹೇಳಬೇಕಾದ ಅಲಂಕಾರವೆಂದರೆ ಒಂದು ರೀತಿಯಿಂದ ಓದಿದಾಗ ವಿರೋಧದಂತೆ ಭಾಸವಾಗಿ ಮತ್ತೊಂದು ರೀತಿ ಓದಿಕೊಂಡಾಗ ಆ ವಿರೋಧ ಪರಿಹಾರವಾಗುವಿಕೆಯ ರೀತಿಯ ಅಲಂಕಾರ.

ಉದಾ: "ನರಗರ್ವಸರ್ವಾಪಕನಾಗಿಯುಂ ಅರ್ಜುನರುಚಿಯುಂ" ಎಂಬ ಇದನ್ನು ಅರ್ಜುನನ ಗರ್ವಭಂಜಕನಾದರೂ ಅರ್ಜುನನಲ್ಲಿ ಪ್ರೀತಿಯುಳ್ಳವನೆಂದರೆ ವಿರೋಧ ಕಾಣಿಸಿತು. ಅದನ್ನು ಅರ್ಜುನನ ಗರ್ವವನ್ನು ಭಂಜಿಸಿದರೂ ಅರ್ಜುನ ಅಥವಾ ಬಿಳುಪಾದ ರುಚಿ ಅಥವಾ ಕಾಂತಿಯುಳ್ಳವನು ಎಂದಾಗ ವಿರೋಧ ಪರಿಹಾರ.

(ಹಾಗೆಯೇ ಇನ್ನೊಂದು ಉದಾ: "ಸಾಮಜ ಪ್ರಿಯನಾಗಿಯುಂ ಪಂಚಾನನ ಪ್ರಥಿತನುಂ" ಎಂದರೆ ಆನೆಗೆ ಪ್ರಿಯನಾಗಿಯೂ ಸಿಂಹನಿಂದ ಪ್ರಸಿದ್ಧವಾದುದೆಂದರೆ ವಿರೋಧ. ಅದನ್ನು ಸಾಮವೇದ ಪ್ರಿಯನಾಗಿಯೂ ಪಂಚಮುಖಗಳಿಂದ ಪ್ರಖ್ಯಾತನೆಂದರೆ ವಿರೋಧ ಪರಿಹಾರ).

ಹೀಗೆ ಷಡಕ್ಷರಿ ತನ್ನ ಹಿಂದಿನ ಕಿರಾತಾರ್ಜುನೀಯ ಪ್ರಸಂಗಗಳೆಲ್ಲವನ್ನೂ ಅಭ್ಯಸಿಸಿ ಜೊತೆಗೆ ತನ್ನದೇ ಆದ ಆಳವಾದ ವ್ಯಾಸಂಗದೊಡಗೂಡಿ, ಸಾಹಿತ್ಯಕ್ಕೆ ಪ್ರತ್ಯೇಕ ಕಿರಾತಾರ್ಜುನೀಯವನ್ನು ನೀಡಿದ್ದಾನೆ. ಈಗಿರುವ ಪ್ರತ್ಯೇಕ ಕಿರಾತಾರ್ಜುನೀಯ ಕಾವ್ಯಗಳಲ್ಲಿ ಷಡಕ್ಷರಿಯ ಈ ಕಾವ್ಯ ಉನ್ನತವಾದುದೆನ್ನಲು ಅಡ್ಡಿ ಇಲ್ಲ.

❑❑

# ಅರ್ಥ ಪದಕೋಶಗಳು

– ಕೆ.ಎಸ್. ಮಧುಸೂದನ

## ಅ) ಹೊಸ ಪರಿಕಲ್ಪನೆ

ತಿರುಗ ಮುರುಗ ನಿಘಂಟು (Reverse Dictionary) ಎನ್ನುವ ಈ ಪರಿಕಲ್ಪನೆಯು ಪಾಶ್ಚಾತ್ಯ ದೇಶಗಳಲ್ಲಿ ಸುಮಾರು ಕಾಲು ಶತಮಾನಗಳಷ್ಟು ಹಿಂದೆಯೇ ರೂಪುಗೊಂಡಿದೆ. ೧೯೮೯ರಿಂದ ಇಂಗ್ಲಿಷಿನಲ್ಲಿರುವ Reverse Dictionaryಗಳು ಮಾರುಕಟ್ಟೆಯಲ್ಲಿ ಲಭ್ಯವಿದೆ. ಕನ್ನಡದಲ್ಲಿ ಈ ಹೊಸ ಪರಿಕಲ್ಪನೆಯ ವ್ಯಾಖ್ಯಾನಾಧಾರಿತ ತಿರುಗ ಮುರುಗ ನಿಘಂಟು ಇದುವರೆಗೆ ಕಾಣಿಸಿಕೊಂಡಿಲ್ಲ. ಆಶ್ಚರ್ಯವೆಂದರೆ ಕ್ರಿ.ಶ.೧೨೬೫ರಲ್ಲಿದ್ದ ಕೇಶಿರಾಜನ 'ಶಬ್ದಮಣಿದರ್ಪಣ'ದ ಧಾತು ಪ್ರಕರಣದಲ್ಲಿ ಬರುವ ಧಾತು ನಿಘಂಟು ಒಂದು ಒಳ್ಳೆಯ ಶಬ್ದಾಧಾರಿತ ತಿರುಗ ಮುರುಗ ನಿಘಂಟೇ ಆಗಿದೆ.

## ಆ) ವಿವಿಧ ಹೆಸರುಗಳು

Reverse Dictionary ಎಂಬುದನ್ನು ಕನ್ನಡದಲ್ಲಿ **ತಿರುಗ ಮುರುಗ ನಿಘಂಟು** ಎಂದೂ **ಉಲ್ಟ ಪಲ್ಟ ನಿಘಂಟು** ಎಂದೂ ಆಕೃತಿಯ ದೃಷ್ಟಿಯಿಂದ ಕರೆಯಬಹುದು. ಅದರ ಆಶಯದ ದೃಷ್ಟಿಯಿಂದ ಹಿನ್ನಿಘಂಟು, ಹಿಂದಾಮುಂದಾ ನಿಘಂಟು ಎಂದು ಕರೆಯಬಹುದು. ಒಟ್ಟಾರೆಯಾಗಿ, Reverse Dictionaryಯ ಸ್ವರೂಪ ದೃಷ್ಟಿಯಿಂದ ಕನ್ನಡದಲ್ಲಿ ಇದನ್ನು **ಅರ್ಥ ಪದಕೋಶ** ಎಂದು ನಾಮ ನಿರ್ದೇಶನ ಮಾಡಬಹುದು.

## ಇ) ವಿವಿಧ ಬಗೆಗಳು

ಹಿನ್ನಿಘಂಟುಗಳಲ್ಲಿ ಸ್ಥೂಲವಾಗಿ ಎರಡು ಬಗೆಗಳಿವೆ.

೧. ವ್ಯಾಖ್ಯಾನಾಧಾರಿತ ಹಿನ್ನಿಘಂಟುಗಳು.

೨. ಶಬ್ದಾಧಾರಿತ ಹಿನ್ನಿಘಂಟುಗಳು.

## ಈ) ತಿರುಗ ಮುರುಗ ನಿಘಂಟನ್ನು ಕುರಿತ ವಿವರಣೆ

ಕೆಲವು ಚಿಂತನೆಗಳಿಗೆ ಇರುವ **ಏಕಶಬ್ದಘಟಕ** ನಮ್ಮ ನಾಲಗೆಯ ತುದಿಯಲ್ಲೇ ಇರುತ್ತದೆ. ಆದರೆ ತಕ್ಷಣಕ್ಕೆ ಆ ಶಬ್ದ ನೆನಪಿಗೆ ಬಾರದೆ ಇನ್ನೇನು ಬಾಯಿಗೆ ಬಂದುಬಿಟ್ಟಿತು ಎಂಬ ಹಾಗೆ ಅನ್ನಿಸಿ ಕೈಕೊಟ್ಟು ಬಿಡುತ್ತದೆ. ಆಗ ನಮಗೆ ಸೀನು ಬರುವ ಸೂಚನೆ ನೀಡಿ ಬಾರದೆ ಗೋಳಾಡಿಸುವಂತಹ ಮುಜಗರದ ಕಸಿವಿಸಿಯ ಅನುಭವ ಆಗುತ್ತದೆ. ಅರ್ಥಪದಕೋಶವು ಆಗ ನಮಗೆ ಕೀಲಿಕೈ ಆಗಿ ಒದಗಿ ಬರುತ್ತದೆ. ಆದ್ದರಿಂದ ಈ ಹಿನ್ನಿಘಂಟನ್ನು ಏಕಶಬ್ದಘಟಕವೆಂಬ ಸೀನು ಬರಿಸುವ ಭಾಷಾವೈಜ್ಞಾನಿಕ ನಶ್ಯದ ಡಬ್ಬಿ ಎಂದು ಕರೆಯಬಹುದು. ಇನ್ನು ಕೆಲವೊಮ್ಮೆ ನಮಗೆ ಕೆಲವು ಹೊಳಹುಗಳಿರುತ್ತವೆ. ಆದರೆ ಆ ಹೊಳಹುಗಳಿಗೆ ತಕ್ಕ ಪದ ಆ ಕೂಡಲೇ ನಮಗೆ ಒದಗಿ ಬರುವುದಿಲ್ಲ. ನಮ್ಮ ಮನಸ್ಸಿನಲ್ಲಿರುವ ಆ ಹೊಳಹಿಗೆ ಈ ತಿರುಗ ಮುರುಗ ನಿಘಂಟು ಸೂಕ್ತ ಪದವನ್ನು ಒದಗಿಸುತ್ತದೆ.

ಸರಳವಾಗಿ ಹೇಳುವುದಾದರೆ ತಿರುಗ ಮುರುಗ ನಿಘಂಟು ಎಂದರೆ ನಮ್ಮ 'ಆಲೋಚನೆ'ಗಳಿಗೆ ಒಂದು 'ಪದ'ವನ್ನು ನೀಡುವ ಉಪಕರಣ. ಹೆಚ್ಚು ವಾಕ್ಯಗಳಲ್ಲಿ ವಿವರಿಸಬಹುದಾದ ಒಂದು ಪರಿಕಲ್ಪನೆಯನ್ನು ಒಂದು ಪದ ಅಥವ ಪದಸಮುಚ್ಚಯದಲ್ಲಿ ತಿಳಿಸುವುದು ಉಲ್ಟ ಪಲ್ಟ ನಿಘಂಟಿನ ಉದ್ದೇಶ. ನಾವು ಒಂದು ಸಂವೇದನೆ, ಚಿಂತನೆ, ಪರಿಕಲ್ಪನೆಗಳನ್ನು ಹಿಂದಾ ಮುಂದಾ ನಿಘಂಟಿನಲ್ಲಿ ಹುಡುಕಿದರೆ ಅದು ಒಂದು ನಿರ್ದಿಷ್ಟ ಶಬ್ದ ಅಥವ ಆ ಅರ್ಥಛಾಯೆಗಳ ಹಲವು ಮುಖಗಳ ಹಲವಾರು ಶಬ್ದಗಳನ್ನು ನೀಡುತ್ತದೆ. ಆ ಪಟ್ಟಿಯಲ್ಲಿ ನಾವು ನಮ್ಮ ಪರಿಕಲ್ಪನೆಗಳಿಗೆ ಹೆಚ್ಚು ಸೂಕ್ತವಾಗಿ ಹೊಂದುವ ಅತ್ಯಂತ ಸಮೀಪ ಶಬ್ದವನ್ನು ಆಯ್ಕೆ ಮಾಡಿಕೊಳ್ಳಬಹುದು.

## ಉ) ತಿರುಗ ಮುರುಗ ನಿಘಂಟಿನ ವ್ಯಾಖ್ಯೆ

ನಿಖರವಾಗಿ ಹೇಳುವುದಾದರೆ ಉಲ್ಟ ಪಲ್ಟ ನಿಘಂಟಿನ ವ್ಯಾಖ್ಯೆಯನ್ನು ಹೀಗೆ ನಿರೂಪಿಸಬಹುದು.

೧. ಆಲೋಚನೆ, ಚಿಂತನೆ ಹಾಗೂ ಪರಿಕಲ್ಪನೆಗಳಿಗೆ ಸೂಕ್ತವಾಗಿ ಹೊಂದುವ ಏಕಶಬ್ದಘಟಕ ಅಥವ ಘಟಕಗಳನ್ನು ನೀಡುವ ಮುದ್ರಿತ ಅಥವ ವಿದ್ಯುನ್ಮಾನ ನಿಘಂಟು.

೨. ಕೊನೆಯ ಅಕ್ಷರದಿಂದ ಮೊದಲನೆಯ ಅಕ್ಷರದ

# ೧೫೫Y, ೩ನೇ ಮುಖ್ಯ ರಸ್ತೆ, ೭ನೆ ಬ್ಲಾಕ್, ೪ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

ಕಡೆಗೆ ಅಕ್ಷರಗಳು ತಿರುಗ ಮುರುಗ ಅನುಕ್ರಮಣಿಕೆಯ ವಿನ್ಯಾಸದಲ್ಲಿರುವಂತೆ ಜೋಡಿಸಲ್ಪಟ್ಟ ಉಲ್ಲೇಖ ಶಬ್ದಗಳ ಕೋಶ.

**ಊ) ನಿಘಂಟನ್ನು ಕುರಿತ ಕೆಲವು ವಿವರಗಳು**

ಸಾಮಾನ್ಯ ನಿಘಂಟಿನಲ್ಲಿ ಎಡಭಾಗದಲ್ಲಿ **ಆಕರ ಶಬ್ದವೂ** (Source word) ಬಲಭಾಗದಲ್ಲಿ **ಗುರಿಪದವೂ** (Target word), ಅದರ ಅರ್ಥ ಹಾಗೂ ಶಬ್ದದ ವಿವರಗಳೂ ನಿರೂಪಣೆಗೊಂಡಿರುತ್ತವೆ. ಆದರೆ ಹಿನ್ನಿಘಂಟಿನಲ್ಲಿ ಇದಕ್ಕೆ ತದ್ವಿರುದ್ಧವಾಗಿರುತ್ತದೆ. ಇದು ತಿರುಗ ಮುರುಗ ನಿಘಂಟಿನ ಸ್ಥೂಲ ವಿವರಣೆ.

**ಎ) ನಿಘಂಟಿನ ಎರಡು ಸ್ತರಗಳು**

ಒಂದು ಮಾಮೂಲಿ ನಿಘಂಟು ಸಾಮಾನ್ಯವಾಗಿ ಎರಡು ಪಾತಳಿಗಳನ್ನು (ಸ್ತರ, Level) ಒಳಗೊಂಡಿರುತ್ತದೆ. ಅವು ೧. ಅಡ್ಡಪಾತಳಿ (Horizontal level) ೨. ಉದ್ದಪಾತಳಿ / ಲಂಬಪಾತಳಿ (Vertical level). ಅಡ್ಡಪಾತಳಿಯು ಶಬ್ದವೊಂದರ ಪ್ರಾದೇಶಿಕ ಭೇದಗಳನ್ನು ತಿಳಿಸಿದರೆ ಉದ್ದಪಾತಳಿಯು ಅರ್ಥಭೇದಗಳನ್ನು ಸೂಚಿಸುತ್ತದೆ. ವಾಸ್ತವವಾಗಿ ಒಂದು ನಿಘಂಟಿನಲ್ಲಿ ಒಂದು ಶಬ್ದಕೋಶವೂ ಒಂದು ಅರ್ಥಕೋಶವೂ ಅಡಗಿರುತ್ತದೆ. ಎಡಗಡೆ ಬರುವ ಅಡ್ಡಪಾತಳಿಯ ಶಬ್ದಕೋಶ ಭಾಗದಲ್ಲಿ ಶಬ್ದಗಳ ಗ್ರಾಂಥಿಕ, ಆಡುಮಾತಿನ ಹಾಗೂ ಪ್ರಾದೇಶಿಕ ರೂಪದ ವಿವಿಧ ಆಯಾಮಗಳ ಮಾರ್ಗಾಂತರಗಳಿರುತ್ತವೆ (Dimentional deviations). ಬಲಗಡೆ ಬರುವ ಉದ್ದಪಾತಳಿಯ ಅರ್ಥಕೋಶದ ಭಾಗದಲ್ಲಿ ಹಲವು ಕಾಲಘಟ್ಟಗಳ ನಾನಾರ್ಥಗಳ ವಿವಿಧ ಮಾರ್ಗಾಂತರಗಳ ಆಯಾಮಗಳಿರುತ್ತವೆ. ನಿದರ್ಶನಕ್ಕಾಗಿ 'ಪುರಸೊತ್ತು' ಎಂಬ ಶಬ್ದ ನಿಘಂಟಿನ ಒಂದು ಪ್ರಮುಖ ಉಲ್ಲೇಖ (Lexeme, Entry, ನಿಘಂಟಿಮಾ) ವಾಗಿದೆ ಎಂದಿಟ್ಟುಕೊಳ್ಳೋಣ. ಆಗ ಅದರ ಇತರ ಶಬ್ದ ಮಾರ್ಗಾಂತರಗಳು–ಪುರ್ಸೊತ್ತು, ಪುರುಸೊತ್ತು, ಪುರ್ಸತ್–ಎಂದಿರುತ್ತದೆ.

ಹಾಗೆಯೇ 'ಹೌದು' ಎಂಬ ಶಬ್ದಕ್ಕೆ ಅಪ್ಪುದು, ಅಹುದು, ಔದು(ಆಡುಮಾತು)– ಮುಂತಾದುವು ಇತರ ಶಬ್ದ ಮಾರ್ಗಾಂತರಗಳು. 'ಇದೆ' ಎಂಬ ಶಬ್ದಕ್ಕೆ ಅದೆ, ಐತೆ ಶಬ್ದ ಮಾರ್ಗಾಂತರಗಳು. ಇದೇ ರೀತಿಯಲ್ಲಿ ಅರ್ಥದ ಆಯಾಮಗಳ ವಿವಿಧ ಮಾರ್ಗಾಂತರಗಳನ್ನು ಗಮನಿಸಬಹುದು. ವಿಪರೀತ ಎಂಬ ಅರ್ಥವು ಕಾಲಾನುಕ್ರಮದಲ್ಲಿ ವಿರುದ್ಧ, ಹೆಚ್ಚು, ಅತಿ, ಮಿತಿಮೀರು ಎಂಬ ಅರ್ಥದ ಮಾರ್ಗಾಂತರಗಳನ್ನು ಪಡೆದುಕೊಂಡಿದೆ.

**ಏ) Reverse Dictionaryಯ ಅರ್ಥ**

Oxford Reverse Dictionaryಯಲ್ಲಿ Dictionary ಎಂಬ ಮುಖ್ಯ ಉಲ್ಲೇಖದಲ್ಲಿ 'dictionary in which the definition precedes the headword (as here)' ಎಂಬ ಎಡಭಾಗದ ಪರಿಕಲ್ಪನೆಗೆ ಬಲಭಾಗದಲ್ಲಿ Reverse Dictionary ಎಂಬ ಶಬ್ದವನ್ನು ನೀಡಲಾಗಿದೆ.

**ಒ) ಕೆಲವು ಪದಗಳ ವಿವರಣೆ**

ತಿರುಗ ಮುರುಗ ನಿಘಂಟಿನಲ್ಲಿ ಒಂದು ಪ್ರಮುಖ ಉಲ್ಲೇಖ(Headword)ದಡಿ ಆ ಉಲ್ಲೇಖಿತ ವಿಷಯಕ್ಕೆ ಸಂಬಂಧಿಸಿದ ನಾನಾ ರೀತಿಯ ಪರಿಕಲ್ಪನೆಗಳನ್ನು ವಿವರವಾಗಿ ನೀಡಿ ಆಯಾ ಪರಿಕಲ್ಪನೆ/ವ್ಯಾಖ್ಯೆಗಳಿಗೆ ಸಂಬಂಧಿಸಿದ ಪದವನ್ನು ಕೊಡಲಾಗಿರುತ್ತದೆ. ಅಕಾರಾದಿಯಾಗಿ ಬರುವ ಒಂದು ಶಬ್ದವನ್ನು ಪ್ರಮುಖ ಉಲ್ಲೇಖವೆಂದೂ, ಆ ವಿಷಯಕ್ಕೆ ಸಂಬಂಧಿಸಿದ ಯಾವುದಾದರೂ ಒಂದು ಅಂಶದ ವಿವರಣೆಯನ್ನು ಪರಿಕಲ್ಪನೆ/ವ್ಯಾಖ್ಯೆ ಎಂದೂ, ಇದಕ್ಕೆ ಹೊಂದುವ ಏಕಶಬ್ದಘಟಕವನ್ನು ಗುರಿಪದ ಎಂದೂ ಕರೆಯಬಹುದು.

**ಓ) ತಿರುಗ ಮುರುಗ ನಿಘಂಟಿನ ಸ್ವರೂಪ**

**ಇಂಗ್ಲಿಷಿನ ನಿದರ್ಶನ**

ಈಗ ತಿರುಗ ಮುರುಗ ನಿಘಂಟಿನ ಸ್ವರೂಪದ ಪ್ರತ್ಯಕ್ಷ ಅರಿವನ್ನು ಪಡೆಯಲು ಒಂದೆರಡು ನಿದರ್ಶನಗಳನ್ನು ಗಮನಿಸೋಣ. Oxford Reverse Dictionaryಯಲ್ಲಿ ಪ್ರಮುಖ ಉಲ್ಲೇಖವಾಗಿ ಬಂದಿರುವ dictionary ಶಬ್ದವನ್ನೇ ಗಮನಿಸಿ:– dictionary *adjective: LEXICAL *small dictionary at the back of a book: GLOSSARY, VOCABULARY *dictionary of places: GAZETTEER *dictionary of synonyms and antonyms: THESAURUS *dictionary in which the definition precedes the headword (as here): REVERSE DICTIONARY *person who compiles dictionaries: LEXICOGRAPHER

**ಕ) ತಿರುಗ ಮುರುಗ ನಿಘಂಟಿನ ಸ್ವರೂಪ**

**ಕನ್ನಡದ ನಿದರ್ಶನ**

ಕನ್ನಡದ ತಿರುಗ ಮುರುಗ ನಿಘಂಟಿನ ಪ್ರಮುಖ ಉಲ್ಲೇಖ **'ಕಣ್ಣು'** ನಿದರ್ಶನ ಹೀಗಿರುತ್ತದೆ:– ಕಣ್ಣು *ಯಾವುದೇ ಕೃತಿಗಳಲ್ಲಿ ಇರುವ ವಿಶೇಶಾಂಷವನ್ನು ಗುರುತಿಸುವ ಶಕ್ತಿ: **ಒಳನೋಟ** *ಕಣ್ಣು ರೆಪ್ಪೆಯ ಮೇಲೆ ಕೂದಲಿರುವ ಹಾಗೂ

ಉಬ್ಬಿದ ಅಂಗ: **ಹುಬ್ಬು** *ವಾಸ್ತವವಾಗಿ ವಸ್ತುಗಳನ್ನು ನೋಡುವ ಕಣ್ಣಿನ ಸೂಕ್ಷ್ಮ ಮತ್ತು ಪಾರದರ್ಶಕವಾದ ಅಂಗ: ಪಾಪೆ *ಕಣ್ಣು ಪಾಪೆಯ ಮೇಲೆ ದೃಷ್ಟಿ ಮಂಜಾಗಿ ಕಾಣುವಂತೆ ಬೆಳೆದ ತೆಳು ಪರದೆ: **ಪೊರೆ** *ಒಂದು ಘಟನೆಯನ್ನು ಖುದ್ದಾಗಿ ಕಣ್ಣಿಂದ ನೋಡಿದ ವ್ಯಕ್ತಿ: **ಸಾಕ್ಷಿ** *ಸಾಮಾನ್ಯವಾಗಿ ಯಾರೂ ಕಾಣದ್ದನ್ನು ಕಾಣುವ ಅನುಭಾವಿಕ ಅನುಭವ: **ಕಾಣ್ಕೆ, ದರ್ಶನ** ಹಳದಿ ಬಣ್ಣಕ್ಕೆ ತಿರುಗಿ, ನಿರಾಸಕ್ತಿ ಹಾಗೂ ಆಯಾಸವನ್ನುಂಟು ಮಾಡುವ ಕಣ್ಣಿನ ಖಾಯಿಲೆ: **ಕಾಮಾಲೆ** *ಯಾವುದರಲ್ಲಿಯೂ ನಕಾರಾತ್ಮಕವಾದದ್ದನ್ನೇ ಹುಡುಕುವ ಒಂದು ಬಗೆಯ ದೃಷ್ಟಿಕೋನ: **ಕಾಮಾಲೆ ಕಣ್ಣು** *ಮೂರು ಕಣ್ಣುಗಳುಳ್ಳ ದೇವರು: **ಮುಕ್ಕಣ್ಣ, ಈಶ್ವರ** *ಕಾಲಿನಲ್ಲಿ ಕಣ್ಣಿರುವ ಋಷಿ: **ಭೃಗು** *ಈಶ್ವರನಿಗೆ ಕಣ್ಣನ್ನಿತ್ತ ಭಕ್ತ: **ಬೇಡರ ಕಣ್ಣಪ್ಪ.** ಹೀಗೆ 'ಕಣ್ಣು' ಉಲ್ಲೇಖದಡಿ ಸುಮಾರು ೧೦೦ಕ್ಕಿಂತ ಹೆಚ್ಚು ಪರಿಕಲ್ಪನೆಗಳಿಗೆ ಏಕಶಬ್ದಘಟಕದ ರೂಪಗಳನ್ನು ನೀಡಬಹುದು.

### ಗ) ಲಭ್ಯ ತಿರುಗ ಮುರುಗ ನಿಘಂಟುಗಳು

**ಇಂಗ್ಲಿಷ್ ಭಾಷೆಯಲ್ಲಿ**

೧. Reader's Digest Reverse Dictionary Ed: John Ellison Kahn 1989

2. Oxford Reverse Dictionary Compiler: David Edmonds 1999

ಈ ಎರಡು ಮುದ್ರಿತ ತಿರುಗ ಮುರುಗ ನಿಘಂಟುಗಳೂ

http://onelook.com/reversedictionary.shtml ಎಂಬ ವಿದ್ಯುನ್ಮಾನ ಉಲ್ಪ ಪಲ್ಪ ನಿಘಂಟೂ ಇವೆ. ಮೇಲೆ ಹೇಳಿರುವ ಎರಡೂ ಮುದ್ರಿತ ನಿಘಂಟುಗಳೂ ಹಲವಾರು ಮರುಮುದ್ರಣಗಳನ್ನು ಕಂಡಿವೆ.

ಗಣಕಯಂತ್ರದಲ್ಲಿ ಪ್ರತ್ಯಕ್ಷವಾಗುವ ಮಾಯಾಂಗನೆಯೇ ಅಂತರ್ಜಾಲೀಯ ಹಿನ್ನಿಘಂಟು. ಗಣಕಯಂತ್ರದ ಕಿಟಕಿಯ ಮೂಲಕ ಮೇಲ್ಕಂಡ ವಿದ್ಯುನ್ಮಾನ ಉಲ್ಪ ಪಲ್ಪ ನಿಘಂಟಿನ ವಿಶ್ವವ್ಯಾಪೀ ಜಾಲದಾಣದ ಸಂಕೇತಾಕ್ಷರಗಳ ನೆರವಿನಿಂದ ಈ ನಿಘಂಟನ್ನು ತೆರೆಯಬಹುದು. ನಂತರ ಈ ಜಾಲದಾಣದ 'ಹುಡುಕು' ತಾಣದಲ್ಲಿ ನಮ್ಮ 'ಆಲೋಚನೆ, ಚಿಂತನೆ, ಪರಿಕಲ್ಪನೆ' ಗಳನ್ನು ನಮೂದಿಸಿ ಹುಡುಕಿದರೆ ಆ ಅಂತರ್ಜಾಲೀಯ ಹಿನ್ನಿಘಂಟು ನಮೂದಿತ ಪರಿಕಲ್ಪನೆಗೆ ಹೊಂದುವ ಅತ್ಯಂತ ಸಮೀಪದ ಸೂಕ್ತ ನಿರ್ದಿಷ್ಟ ಏಕಶಬ್ದಘಟಕರೂಪವನ್ನು ನೀಡುತ್ತದೆ.

### ಚ) ಶಬ್ದಾಧಾರಿತ ಹಿನ್ನಿಘಂಟುಗಳು

ಮೇಲೆ ವಿವರಿಸಿರುವುದೆಲ್ಲ ವ್ಯಾಖ್ಯಾನಾಧಾರಿತ ಹಿನ್ನಿಘಂಟುಗಳನ್ನು ಕುರಿತದ್ದಾಗಿದೆ. ಇನ್ನು ಶಬ್ದಾಧಾರಿತ ತಿರುಗ ಮುರುಗ ನಿಘಂಟುಗಳತ್ತ ಗಮನಹರಿಸಬಹುದು. ಶಬ್ದಾಧಾರಿತ ಹಿಂದಾಮುಂದಾ ನಿಘಂಟಿನಲ್ಲಿ ಪ್ರತಿ ಪ್ರಮುಖ ಉಲ್ಲೇಖ ಶಬ್ದಗಳು ಆರಂಭಾಕ್ಷರ 'ಅ' ಯಿಂದ 'ಳ' ವರೆವಿಗಿನ ಕ್ರಮಾನುಕ್ರಮಣಿಕೆಯ ವಿನ್ಯಾಸದಲ್ಲಿರುವುದಿಲ್ಲ. ಅದಕ್ಕೆ ತದ್ವಿರುದ್ಧವಾಗಿ ಶಬ್ದಗಳು ಅಂತ್ಯಾಕ್ಷರಗಳಲ್ಲಿ 'ಳ'ಯಿಂದ 'ಕ'ವರೆಗೆ ವಿರುದ್ಧ ಕ್ರಮಾನುಕ್ರಮಣಿಕೆಯ ವಿನ್ಯಾಸದಲ್ಲಿರುತ್ತದೆ. ಹಳಗನ್ನಡದ ಕೆಲವು ನಿಘಂಟುಗಳು ಅಂತ್ಯಾಕ್ಷರದಿಂದ ಹಿಂದುಹಿಂದಾಗಿ ಬರುವ ಅನುಕ್ರಮಣಿಕೆಯ ವಿನ್ಯಾಸದಲ್ಲಿರುವ ಶಬ್ದಾಧಾರಿತ ಹಿನ್ನಿಘಂಟುಗಳಾಗಿವೆ. ಮೊದಲು 'ಕಾಂತ'ಗಳು, ನಂತರ 'ಗಾಂತ'ಗಳು, ಆಮೇಲೆ 'ಚಾಂತ'ಗಳು, ಹಾಗೆಯೇ ಕೊನೆಯಲ್ಲಿ 'ಳಾಂತ'ಗಳು– ಅರ್ಥತ್ ಕ್ರಮವಾಗಿ ಕ್,ಗ್,ಚ್,ಜ್– ಇತ್ಯಾದಿ ಅಕ್ಷರಗಳಿಂದ ಕೊನೆಗೊಳ್ಳುವ ಶಬ್ದಗಳ ಅನುಕ್ರಮಣಿಕೆಯ ವಿನ್ಯಾಸದಲ್ಲಿರುವ ನಿಘಂಟುಗಳು ಇವು. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಬರುವ ಧಾತುನಿಘಂಟು ಶಬ್ದಾಧಾರಿತ ಹಿನ್ನಿಘಂಟಿಗೆ ಸೊಗಸಾದ ನಿದರ್ಶನ. ಈ ನಿಘಂಟಿನ ವಿಶೇಷವೆಂದರೆ ಆಕರ ಶಬ್ದಗಳ/ಪ್ರಮುಖ ಉಲ್ಲೇಖಗಳ ಆರಂಭ ಮತ್ತು ಅಂತ್ಯಾಕ್ಷರಗಳೆರಡರಲ್ಲಿಯೂ ವರ್ಣಾನುಕ್ರಮಣಿಕೆಯ ವಿನ್ಯಾಸ ಇರುವುದು.

### ಜ) ತಿರುಗ ಮುರುಗ ನಿಘಂಟಿನ ಪ್ರಯೋಜನಗಳು

ಭಾಷಾವಿಜ್ಞಾನಿಗಳಿಗೆ, ಸಂಶೋಧಕರಿಗೆ, ಪತ್ರಕರ್ತರಿಗೆ, ಪದಬಂಧಗಳನ್ನು ಬಿಡಿಸುವವರಿಗೆ, ಲೇಖಕರಿಗೆ ಹಾಗೂ ಮುದ್ರಣಾಲಯದವರಿಗೆ ಈ ತಿರುಗ ಮುರುಗ ನಿಘಂಟುಗಳು ತುಂಬಾ ಉಪಯುಕ್ತ. ಯುಕ್ತಾಯುಕ್ತವಾಗಿ ವಿವೇಚನೆ ಮಾಡುವ, ನಿರ್ದಿಷ್ಟ ಶಬ್ದವನ್ನು ಹುಡುಕುವ ಯಾರಿಗೇ ಆಗಲಿ ಈ ನಿಘಂಟಿನ ಅಗತ್ಯ ಬೀಳುತ್ತದೆ. Reader's Digest Reverse Dictionaryಯು ಹಿನ್ನಿಘಂಟುಗಳ ಪ್ರಯೋಜನವನ್ನು ಹೀಗೆ ಪಟ್ಟಿ ಮಾಡುತ್ತದೆ : ೧. ಒಂದು ಶಬ್ದವನ್ನು ನಾನಾಕೋನಗಳಿಂದ 'ಮುತ್ತಿಗೆ' ಹಾಕುವುದು (Attack). ೨. 'ಗುರಿಪದ'ವನ್ನು ಮುಟ್ಟುವುದು. ೩. ನಮ್ಮ ಶಬ್ದಸಂಪತ್ತನ್ನು ಶ್ರೀಮಂತಗೊಳಿಸುವುದು. ೪. ಗೊತ್ತಿಲ್ಲದ ಅಪರಿಚಿತ ಶಬ್ದಗಳ ಪರಿಚಯ. ೫. ಮನೋರಂಜಕ ಪದಗಳ ತಿಳಿವಳಿಕೆ. ೬. ಶಬ್ದದಾರಿದ್ರ್ಯ ನಿವಾರಣೆ.

### ಟ) ತಿರುಗ ಮುರುಗ ನಿಘಂಟಿನ ಅಗತ್ಯ

ನಿಘಂಟು ಕ್ಷೇತ್ರದಲ್ಲಿ ಅತ್ಯಂತ ಶ್ರೀಮಂತ ಪರಂಪರೆಯನ್ನುಳ್ಳ ಕನ್ನಡ ಭಾಷೆಗೆ ಒಂದು ಒಳ್ಳೆಯ ವ್ಯಾಖ್ಯಾನಾಧಾರಿತ ತಿರುಗ ಮುರುಗ ನಿಘಂಟಿನ ಜರೂರು ಅಗತ್ಯವಿದೆ.

❑❑

# ಪ್ರಾಚೀನ ಕನ್ನಡ ಸಾಹಿತ್ಯ ಅನುವಾದವೇ ಅಥವಾ ರೂಪಾಂತರವೇ?

– ಮಾಧವ ಪೇರಾಜೆ

**ಪೀಠಿಕೆ**

ಈ ಲೇಖನವು ಪ್ರಾಚೀನ ಕನ್ನಡ ಸಾಹಿತ್ಯವು ಅನುವಾದ ಇಲ್ಲವೇ ರೂಪಾಂತರ ಅಥವಾ ತುಂಡುಭಾಷಾಂತರ ಎನ್ನುವ ಈಗ ಪ್ರಚಲಿತವಿರುವ ದೃಷ್ಟಿಕೋನವನ್ನು ಆಮೂಲಾಗ್ರವಾಗಿ ಪರಾಮರ್ಶಿಸುವ ಉದ್ದೇಶವನ್ನೊಳಗೊಂಡಿದೆ. ಮೊದಲಿಗೆ ಅಂತಹ ಚರ್ಚೆಯೊಂದರ ಮುಖ್ಯ ಪ್ರತಿಪಾದನೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಎರಡನೇ ಭಾಗದಲ್ಲಿ ಅದಕ್ಕೆ ಆಧಾರವಾದ ಚಿಂತನೆಗಳ ಜೊತೆಗೆ ಮೂಲದೊಂದಿಗೆ ಮುಖಾಮುಖಿಯಾಗಲಾಗಿದೆ. ಭಾಗ ಮೂರರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯವನ್ನು ಭಾಷಾಂತರ ಅಥವಾ ಅನುವಾದ ಎಂದು ಹೆಸರಿಸುವುದು ಎಷ್ಟರ ಮಟ್ಟಿಗೆ ಸರಿ ಎನ್ನುವ ಪ್ರಶ್ನೆಗೆ ಉತ್ತರಿಸಲಾಗಿದೆ. ಈಗ ನಮ್ಮ ಚರ್ಚೆಯನ್ನು ಭಾಗ-೧ರಿಂದ ಆರಂಭಿಸಬಹುದಾಗಿದೆ.

**ಭಾಗ-೧**

ಪ್ರಾಚೀನ ಕನ್ನಡ ಸಾಹಿತ್ಯವು ಅನುವಾದದಿಂದ ಆರಂಭಗೊಳ್ಳುತ್ತದೆ ಎನ್ನುವುದನ್ನು ಮೊದಲಿಗೆ ಪ್ರತಿಪಾದಿಸಿದ ದೇಸಿ ವಿದ್ವಾಂಸರೆಂದರೆ, ರಂ.ಶ್ರೀ.ಮುಗಳಿ ಅವರೇ ಆಗಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ(೧೯೫೬) ಪುಸ್ತಕದಲ್ಲಿ ಅವರು ಹೀಗೆ ಹೇಳಿದ್ದಾರೆ;

"ಕನ್ನಡ ಸಾಹಿತ್ಯದಲ್ಲಿ ಮೊದಲನೆಯ ಉಪಲಬ್ಧಗ್ರಂಥವಾದ 'ಕವಿರಾಜಮಾರ್ಗ'ದಿಂದಲೇ ಪ್ರಾರಂಭವನ್ನು ಮಾಡಬೇಕಾಗಿದೆ. ಅದಕ್ಕೆ ಮೊದಲು ಇದ್ದಿರಬಹುದಾದ ವಿಪುಲವಾದ ಗದ್ಯಪದ್ಯವಾಙ್ಮಯವು ಸರಸ್ವತಿಯ ವಿಷಯದಲ್ಲಿಯೂ ಸರಸ್ವತೀನದಿಯಂತೆ ಗುಪ್ತಗಾಮಿನಿಯಾಗಿದೆ. ಪ್ರಾಚೀನ ಕನ್ನಡ ಶಿಲಾಶಾಸನಗಳೇನೋ ೫ನೆಯ ಶತಕದಿಂದ ೯ನೆಯ ಶತಕದವರೆಗೆ ದೊರೆತಿವೆ. ಆದರೆ ಪ್ರಸಕ್ತ ವಿಷಯಕ್ಕೆ ಉಪಯುಕ್ತ ಸಾಮಗ್ರಿ ಅವುಗಳಲ್ಲಿ ಬಹುಶಃ ಇಲ್ಲ. 'ಕವಿರಾಜಮಾರ್ಗ'ವು ದಂಡಿಯ 'ಕಾವ್ಯಾದರ್ಶ'ದ ಅನುವಾದರೂಪ ಗ್ರಂಥ. ಮೂಲವನ್ನು ಅದು ಅನುಸರಿಸಿರುವಂತೆ ಕಂಗೊಳಿಸುತ್ತದೆ. ಅದರಲ್ಲಿ ಬಂದಿರುವ ಸರಸ್ವತೀ-ಪ್ರಾರ್ಥನೆಯ ಪದ್ಯವು ಮೂಲವ್ಯತ್ಯಾಸಕ್ಕೆ ಒಂದು ಉದಾಹರಣೆ. ದಂಡಿಯಲ್ಲಿ 'ಚತುರ್ಮುಖ ಮುಖಾಂಭೋಜವನಹಂಸವಧೂರ್ಮಮ। ಮಾನಸೇ ರಮತಾಂ ನಿತ್ಯಂ 'ಸರ್ವಶುಕ್ಲಾ ಸರಸ್ವತೀ' 'ಅಂದರೆ ಬ್ರಹ್ಮನ ಮುಖಕಮಲವನದಲ್ಲಿಯ ಹಂಸ-ವಧುವು ತನ್ನದೆಲ್ಲ ಶುಭ್ರವರ್ಣವೂ ಆಗಿರುವ ಸರಸ್ವತಿ ನನ್ನ ಮಾನಸದಲ್ಲಿ ನಿತ್ಯವೂ ನಲಿಯಲಿ' ಎಂದು ಪ್ರಾರ್ಥನೆ. 'ಕವಿರಾಜಮಾರ್ಗ'ದಲ್ಲಿ ಅದು ಹೀಗೆ ಬಂದಿದೆ:

> ಶ್ರೀವಿಶದವರ್ಣೆ ಮಧುರಾ-।
> ರಾವೋಚಿತೆ ಚತುರರುಚಿರಪದರಚನೆ ಚಿರಂ।
> ದೇವಿ ಸರಸ್ವತಿ ಹಂಸೀ-।
> ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೋಳ್॥

ಅಂದರೆ 'ಶುಭ್ರವರ್ಣೆಯೂ ಮಧುರವಾದ ಧ್ವನಿಯಿಂದ ಉಚಿತವಾಗಿ ಕೂಡಿದವಳೂ ಚತುರ ಮತ್ತು ಸುಂದರ ಪದರಚನೆಯುಳ್ಳವಳೂ ಆದ ಸರಸ್ವತಿದೇವಿ ಒಲಿದು ನನ್ನ ಮಾನಸದಲ್ಲಿ ಹಂಸಿಯ ಭಾವದಿಂದ ಯಾವಾಗಲೂ ನೆಲೆಗೊಳ್ಳಲಿ'. ಈ ಅನುವಾದದಲ್ಲಿ ಮುಖ್ಯವಾದ ವ್ಯತ್ಯಾಸವೆಂದರೆ 'ಬ್ರಹ್ಮನ ಮುಖಕಮಲವನದಲ್ಲಿಯ ಹಂಸವಧು' ಎಂಬುದರ ತ್ಯಾಗ, ವೈದಿಕಪುರಾಣಸಂಪ್ರದಾಯದಲ್ಲಿ ಸರಸ್ವತಿ ಸರ್ವದಾ ಬ್ರಹ್ಮನ ಮುಖದಲ್ಲಿರುವಳು ಎಂದಿದ್ದರೆ ಜೈನಸಂಪ್ರದಾಯದಲ್ಲಿ ಇರಲಿ". (ನೋಡಿ, ರಂ.ಶ್ರೀ.ಮುಗಳಿ, ಕನ್ನಡ ವಿಮರ್ಶೆಯ ತಾತ್ವಿಕ ವಿವೇಚನೆ)

ಈ ವಾದವನ್ನು ಮುಂದುವರೆಸುತ್ತಾ ಡಾ. ಕೀರ್ತಿನಾಥ ಕುರ್ತಕೋಟಿಯವರು ಅನುವಾದ ಮತ್ತು ಪುನರ್‌ಲೇಖನ ಎನ್ನುವ ಲೇಖನದಲ್ಲಿ ಹೀಗೆ ಹೇಳುತ್ತಾರೆ. "ಕನ್ನಡ ಕಾವ್ಯದ ಇತಿಹಾಸ ಪ್ರಾರಂಭವಾಗುವದು ಅನುವಾದ ಮತ್ತು ಪುನರ್ಲೇಖನಗಳಿಂದ. 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಸಮಸ್ತಭಾರತ ಮನಪೂರ್ವವಾಗಿ ಪೇಳ್ದ ಕಬ್ಬಿಗರಿಲ್ಲ' ಎಂದು ಪಂಪ ತನ್ನ ಕಾವ್ಯ ಪ್ರಯತ್ನದ ಬಗ್ಗೆ ಹೇಳುತ್ತಾನೆ. ಮೂಲಕಥೆಯ ಬಂಧ ಕೆಡದಂತೆ ಇನ್ನೊಂದು ಭಾಷೆಯಲ್ಲಿ ಅದನ್ನು ಮತ್ತೊಮ್ಮೆ ಬರೆಯುವದು ಕಷ್ಟಸಾಧ್ಯವಾದ ಕಲೆ ಎಂದು ಅವನ ಅಭಿಪ್ರಾಯವಿದ್ದಂತಿದೆ. ಕತೆ ದೊಡ್ಡದಾಗಿದ್ದರೆ ಅದನ್ನು ಚಿಕ್ಕದಾಗಿಸಿ ಹೇಳುವದು,

ಸಹ ಪ್ರಧ್ಯಾಪಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬

ಚಿಕ್ಕದಾಗಿದ್ದರೆ ಅದನ್ನು ವಿಸ್ತಾರಗೊಳಿಸುವದು– ಈ ಪ್ರಕ್ರಿಯೆ ಉದ್ದೇಶಪೂರ್ವಕವಾಗಿದೆಯಲ್ಲದೆ ಅದಕ್ಕೊಂದು ಅರ್ಥವೂ ಇದೆ. ಕಾವ್ಯಪರಂಪರೆ ಮುಂದುವರಿಯಬೇಕು ಮತ್ತು ಅದರಲ್ಲಿ ಹೊಸ ಹೊಸ ಅರ್ಥಗಳಿಗೆ ಇಂಬು ಇರಬೇಕು ಎಂದಾಗ ಹೀಗೆ ಕವಿತೆಯ ಗಾತ್ರದಲ್ಲಿ ಹೆಚ್ಚು ಕಡಿಮೆಯಾಗುತ್ತಿರಬೇಕು. ದೊಡ್ಡ ಕತೆ ಚಿಕ್ಕದಾದರೆ ಮೂಲವಸ್ತುವಿನ ಸುತ್ತ ಹೊಸ ಅರ್ಥಗಳನ್ನು ಕಟ್ಟಿಕೊಳ್ಳಬಹುದು. ಜಾನಪದ ಶ್ರುತ ಪರಂಪರೆಯಲ್ಲಿ ಕೂಡ ಕತೆಗಳು ಹೀಗೆ ಚಿಕ್ಕ ದೊಡ್ಡದಾಗುವ ಪ್ರಕ್ರಿಯೆ ಅಖಂಡವಾಗಿ ನಡೆದಿರುತ್ತದೆ. ಅಲ್ಲಿ ಈ ಪರಿವರ್ತನೆ ಸಂಪೂರ್ಣವಾಗಿ ಶ್ರೋತೃಗಳ ಮೇಲೆ ಅವಲಂಬಿಸಿರುತ್ತದೆ. ಅವರು ಕೂಡ ಕತೆ ಒಡಮೂಡಿ ಬರಲು ತಮ್ಮ ಪ್ರತಿಭೆಯನ್ನು ನೀಡುತ್ತಿರುತ್ತಾರೆ.

ಕನ್ನಡ ಕವಿಗಳ ಲಕ್ಷ್ಯವೆಲ್ಲ ಸಂಸ್ಕೃತದ ಅಭಿಜಾತದ ಕಾವ್ಯದ ಮೇಲೆ ಕೇಂದ್ರೀಕೃತವಾಗಿತ್ತು. ಪ್ರಾಚೀನ ಕಾಲದಲ್ಲಿ ಕಾವ್ಯ ಕೇವಲ ರಸಭಾವಗಳ ಆವಿಷ್ಕಾರವಾಗಿರಲಿಲ್ಲ, ಅದು ತಿಳುವಳಿಕೆಯ ಅಭಿವ್ಯಕ್ತಿಯೂ ಆಗಿತ್ತು. ಅಭಿಜಾತ ಯುಗದ ಜ್ಞಾನ ಪರಿಷ್ಕೃತವಾಗಿದ್ದ ಶಾಸ್ತ್ರಗ್ರಂಥಗಳಲ್ಲಿ ಅಷ್ಟೇ ಅಲ್ಲದೆ ಕಾವ್ಯಕೃತಿಗಳಲ್ಲಿ ಕೂಡ ದೊರೆಯುತ್ತದೆ. ವರಾಹಮಿಹಿರ ಕಾಳಿದಾಸನ ಕಾವ್ಯಶೈಲಿಯನ್ನು ತನ್ನ ಶಾಸ್ತ್ರಗ್ರಂಥಕ್ಕೆ ಉಪಯೋಗಿಸಿಕೊಂಡರೆ ಅವನ ಶಾಸ್ತ್ರದ ತಿಳುವಳಿಕೆಯನ್ನು ಕಾಳಿದಾಸ ತನ್ನ ಕಾವ್ಯದಲ್ಲಿ ಉಪಯೋಗಿಸುತ್ತಾನೆ. ಒಂದು ದೃಷ್ಟಿಯಿಂದ ಆಗಿನ ಕಾಲದ ಧರ್ಮ, ರಾಜಕೀಯ, ಶಾಸ್ತ್ರವಿದ್ಯೆ ಮತ್ತು ಕಲೆಗಳೆಲ್ಲ ರಾಜರಿಂದ ನಿರ್ಮಿತವಾದ ಮತ್ತು ಅವರಿಗೆ ಯೋಗ್ಯವಾದ ಶಿಕ್ಷೆಯಾಗಿತ್ತು. ಮನುಷ್ಯನ ಜೀವಕ್ಕೆ ಪುನರ್ಜನ್ಮದ ಸಂಭಾವ್ಯತೆ ಇರುವದನ್ನು ಕಂಡುಕೊಂಡು, ಅದಕ್ಕೆ ಅನುಸಾರವಾದ ಕರ್ಮ ಸಿದ್ಧಾಂತವನ್ನು, ಕರ್ಮಮೀಮಾಂಸೆಯನ್ನು ರೂಪಿಸಿಕೊಂಡು ವೇದಾಂತದರ್ಶನದ ಸತ್ಯದಿಂದ ಆಕರ್ಷಿತವಾಗಿದ್ದ ಬ್ರಾಹ್ಮಣವಿದ್ಯೆಗೂ, ಅಭಿಜಾತಯುಗದ ವಿದ್ಯೆಗೂ ಬಹಳ ಅಂತರವಿದೆ. ಅಭಿಜಾತಯುಗದ ಕಾವ್ಯಶಾಸ್ತ್ರ ಈ ದೃಷ್ಟಿಯಿಂದ ಧರ್ಮವಿರುದ್ಧವಲ್ಲದಿದ್ದರೂ ಲೌಕಿಕ. ಇದು ಕಲೆ ಕಾವ್ಯಗಳ ಮಾರ್ಗವಾಗಿತ್ತು. ಭಾಷೆ ಸಂಸ್ಕೃತವೆಂದು ಬೇರೆ ಹೇಳಬೇಕಾಗಿಲ್ಲ.

ಆದರೆ ಮುಂದೆ ಬೌದ್ಧ ಜೈನ ಪರಂಪರೆಯ ಆಲೋಚನೆ ಬೇರೆ ಕಾವ್ಯ ಸ್ವರೂಪಗಳಲ್ಲಿ ಒಡಮೂಡತೊಡಗಿದಾಗ ಅಭಿಜಾತ ಕಾವ್ಯದ ಮುಂದುವರಿಯುವಿಕೆ ಕಠಿಣವಾಗಿರಬೇಕು. ಚಂದ್ರಗುಪ್ತನ ಕಾಲಕ್ಕೆ ದಕ್ಷಿಣಭಾರತದ ಸಂಪರ್ಕ ಬಂದು ಸಂಸ್ಕೃತಿ ಬೇರೆ ಬೇರೆ ದಿಕ್ಕುಗಳಲ್ಲಿ ಕವಲೊಡೆಯಲು ಪ್ರಾರಂಭಿಸಿತು. ಪಂಪ ರನ್ನರು ಬರೆಯುವ ಕಾಲಕ್ಕೆ ಕಾಳಿದಾಸ ಬಾಣ ಮೊದಲಾದವರು ಧಾರ್ಮಿಕ ಆದರ್ಶದ ಹೊರತಾಗಿ ಬೇರೆ ಆದರ್ಶಗಳನ್ನು ತೋರಿಸಬೇಕು. ಕನ್ನಡದ ಚಂಪೂ ಕವಿಗಳ ಮಹತ್ವದ ಪ್ರಯತ್ನವೆಂದರೆ ವಾಗ್ದೇವಿಯ ಹಳೆಯ ಭಂಡಾರದ ಮುದ್ರೆಯನ್ನೊಡೆದು ಸೂರೆಗೈಯುವದಾಗಿತ್ತು. ತಾವು ನಂಬಿಕೊಂಡಿದ್ದ ಧರ್ಮಕ್ಕೆ ವಿರುದ್ಧವಾಗಿದ್ದ ಅಂಶಗಳು ಅಭಿಜಾತ ಕಾವ್ಯದ ಪ್ರಭಾವದಿಂದ ಬಂದರೂ ಅಡಿಯಿಲ್ಲ ಎಂಬ ಮನೋಭಾವ ಅವರದಾಗಿತ್ತು. ಅದೇನೇ ಇದ್ದರೂ ಕನ್ನಡ ಕವಿಗಳು ಪ್ರಾರಂಭಿಸಿದ ಪುನರ್ಲೇಖನ ಮತ್ತು ಅನುವಾದಗಳ ತಾಂತ್ರಿಕ ಮಹತ್ವವೇನೆಂಬುದನ್ನು ಪರಿಶೀಲಿಸಬೇಕಾಗಿದೆ.

ಪುನರ್ಲೇಖನದಲ್ಲಿ ಹಳೆಯ ತಿಳುವಳಿಕೆ ಪ್ರತಿಮಾನಗಳು ಹೊಸ ಪ್ರತಿಮಾನಗಳೊಂದಿಗೆ ಕೂಡಿಕೊಂಡು ಹೊಸದಾದ ಅರ್ಥನಿರ್ಮಾಣಕ್ಕೆ ಅನುವು ದೊರೆತಂತಾಗುತ್ತದೆ. ಇದಕ್ಕೊಂದು ಚಿಕ್ಕ ಉದಾಹರಣೆಯನ್ನು ನೋಡಬಹುದಾಗಿದೆ. ಭಾಸನ 'ದೂತವಾಕ್ಯ' ನಾಟಕದಲ್ಲಿ ಒಂದು ಪ್ರಸಂಗವಿದೆ. ಸಂಧಾನಕ್ಕೆ ಕೃಷ್ಣ ತನ್ನ ಸಭೆಗೆ ಬರಲಿರುವನೆಂದು ತಿಳಿದಾಗ ದುರ್ಯೋಧನ ಅವನನ್ನು ಹೊರಗೇ ನಿಲ್ಲಿಸಲು ಒಂದು ಉಪಾಯವನ್ನು ಹೂಡುತ್ತಾನೆ. ಕಂಚುಕಿಯನ್ನು ಕರೆದು ದ್ರೌಪದೀ ವಸ್ತ್ರಾಪಹರಣ ಚಿತ್ರಪಟವನ್ನು ತರಲು ಹೇಳುತ್ತಾನೆ. ಅವನು ತಂದ ಮೇಲೆ ಅದರಲ್ಲಿಯ ವಸ್ತುವನ್ನು ಕುರಿತು ವಿವರವಾಗಿ ವಿಮರ್ಶಿಸುತ್ತಾನೆ. ಕೊನೆಯಲ್ಲಿ ಚಿತ್ರದ ಬಗ್ಗೆ ಅವನ ಅಭಿಪ್ರಾಯ ಹೀಗಿದೆ; "ಅಹೋ ಅಸ್ಯ ವರ್ಣಾಢ್ಯತಾ। ಅಹೋ ಭಾವೋಪಪನ್ನತಾ। ಅಹೋ ಯುಕ್ತಲೇಖತಾ। ಸುವ್ಯಕ್ತಮಾಲಿಖಿತೋಽಯಂ ಚಿತ್ರಪಟಃ॥" ಚಿತ್ರಪಟದ ಪ್ರಸಂಗ ನಾಟಕದಲ್ಲಿ ಅನೇಕ ರೀತಿಗಳಲ್ಲಿ ಉಪಯುಕ್ತವಾಗಿದೆ. ಚಿತ್ರದಲ್ಲಿರುವ ಪಾಂಡವರನ್ನು ಕಂಡು ದುರ್ಯೋಧನನ ರೋಷ ಇನ್ನೂ ಹೆಚ್ಚಾಗುತ್ತದೆ. ನಾಟಕವನ್ನು ನೋಡುತ್ತಿರುವ ಪ್ರೇಕ್ಷಕರ ಮನಸ್ಸಿನಲ್ಲಿ ಮಹಾಭಾರತ ಹಳೆಯ ಪ್ರಸಂಗ ನೆನಪಾಗಿ ಭವಿಷ್ಯದ ಬಗ್ಗೆ ಕುತೂಹಲ ಹುಟ್ಟುತ್ತದೆ.

ಆದರೆ ದುರ್ಯೋಧನನ ಚಿತ್ರವಿಮರ್ಶೆಯ ಅರ್ಥವೇನು? ಅವನ ಮಾತಿನಲ್ಲಿ 'ವರ್ಣಾಢ್ಯತೆ' 'ಭಾವೋಪಪನ್ನತೆ', 'ಯುಕ್ತಲೇಖ' ಇವೆಲ್ಲ ತಾಂತ್ರಿಕ ಪದಗಳಾಗಿವೆ. ದುರ್ಯೋಧನ ಕಲಾಭಿಜ್ಞನಂತೆ ಮಾತಾಡುತ್ತಾನೆ. ಮಹಾಭಾರತದ ಕತೆಯಲ್ಲಿ ಇದರ ಅವಶ್ಯಕತೆಯೇ ಇಲ್ಲ. ಆದರೆ ಭಾಸನ ದುರ್ಯೋಧನ ಕಲಾಭಿಜ್ಞನಾಗಿ, ಕಲೆಯನ್ನು ಒಂದು ರಾಜಕೀಯ ಅಸ್ತ್ರವನ್ನಾಗಿ ಮಾಡಿಕೊಳ್ಳುವ ಧೂರ್ತನಾಗಿದ್ದಾನೆಂದಾಗ ಅವನ ವ್ಯಕ್ತಿತ್ವಕ್ಕೆ ಹೊಸದೊಂದು ಆಯಾಮ ಮೂಡುತ್ತದೆ... ಪಂಪಭಾರತ ೧೩ನೆಯ ಆಶ್ವಾಸದಲ್ಲಿರುವ ಈ ಪದ್ಯವನ್ನು ನೋಡಬೇಕು.

**ಸಂಗತ ನೀತಿಶಾಸ್ತ್ರವಿದರಪ್ಪರವಂದಿರ ತಮ್ಮ ತಮ್ಮ ಕ**
**ಜ್ಞಂಗಳ ಮೆಯ್ಗಳೊಳ್ ಪುಸಿದದಂ ಕಡುನನ್ನಿಯೆ ಮಾಡಿ ತೋರ್ಪರು**
**ತ್ತುಂಗ ಸುಸೂಕ್ಷ್ಮ ಪಾರ್ಶ್ವಕೃಶಕೋಮಲ ನಿಮ್ನ ಘನೋನ್ನತ ಪ್ರದೇ**
**ಶಂಗಳಮಾ ಸಮಾನತಳದಲ್ಲಿಯೆ ತೋರ್ಪವೋಲ್ ಚಿತ್ರಕಂ**

ಪಂಪ ಹೇಳುವ ಚಿತ್ರ ವಿಮರ್ಶೆ ಭಾಸನ ಚಿತ್ರವಿಮರ್ಶೆಗಿಂತ ಹೆಚ್ಚು ತಾಂತ್ರಿಕವಾಗಿ ಹೆಚ್ಚು ಆಳವಾಗಿದೆ. ಆದರೆ ಉದ್ದೇಶ ಮಾತ್ರ ಅದೇ ಎನ್ನುವುದನ್ನು ಮರೆಯುವಂತಿಲ್ಲ. (ನೋಡಿ, ಕೀರ್ತಿನಾಥ ಕುರ್ತಕೋಟಿ, ಕನ್ನಡ ಸಾಹಿತ್ಯ ಸಂಗಾತಿ ಪು–೨೯)

ಕನ್ನಡದ ಪ್ರಸಿದ್ಧ ಚಿಂತಕರೆಲ್ಲ ಹೀಗೆ ಪ್ರಾಚೀನ ಕನ್ನಡ ಸಾಹಿತ್ಯವೆಲ್ಲವೂ ಅನುವಾದ ಎಂದು ಘಂಟಾಘೋಷವಾಗಿ ಹೇಳಿದ ಮೇಲೆ ಅವರ ಹಾದಿಯಲ್ಲಿ ನಡೆಯುವ ಇತರ ಲೇಖಕರು ಸುಮ್ಮನಿರುತ್ತಾರೆಯೇ? ಈ ಹಳೆಯ ರಾಗವನ್ನು ಮತ್ತೆ ಮತ್ತೆ ಹಾಡುತ್ತಲೇ ಇದ್ದಾರೆ. ಇದಕ್ಕೆ ಉದಾಹರಣೆಯಾಗಿ ಭಾಷಾಂತರದ ಸಾಂಸ್ಕೃತಿ ನೆಲೆಗಳು (ಸಂ. ಡಾ. ಕರೀಗೌಡ ಬೀಚನಹಳ್ಳಿ) ಎನ್ನುವ ಪುಸ್ತಕದಿಂದ ಇನ್ನೆರಡು ನಿದರ್ಶನಗಳನ್ನು ನೀಡಿ ಮುಂದುವರೆಯುತ್ತೇನೆ. ಭಾಷಾಂತರದ ಭಾಷೆಯಾಗಿ ಕನ್ನಡ ಎನ್ನುವ ಲೇಖನದಲ್ಲಿ ಡಾ. ಕೆ.ವಿ ನಾರಾಯಣ ಅವರು ಹೀಗೆ ಹೇಳಿದ್ದಾರೆ:

"... ವಾಸ್ತವವಾಗಿ ನಾನು ಭಾಷಾಂತರದ ಭಾಷೆಯಾಗಿ ಕನ್ನಡ ಯಾವ ನಿಲುವನ್ನು ಈವರೆಗೆ ತಳೆದಿದೆ ಎಂಬುದನ್ನು ವಿವರಿಸಲು ಈ ಪೀಠಿಕೆಯನ್ನು ಹಾಕಬೇಕಾಯಿತು. ಲಾಗಾಯ್ತಿನಿಂದ ಕನ್ನಡ ಕವಿಗಳು ಅನುವಾದದ ಪ್ರಕ್ರಿಯೆಯಲ್ಲಿ ಇರುವವರೇ ಆಗಿದ್ದಾರೆ. ಆದರೆ ಈ ಅನುವಾದ ನಾವು ಈಗ ತಿಳಿದಿರುವ ಅನುವಾದದ ಮಾದರಿಯದಲ್ಲ. ಅವರ ಎದುರು ಇದ್ದುದು ಅಧಿಕಾರದ ಭಾಷೆ; ಸಂಸ್ಕೃತ. ಆ ಭಾಷೆಯ ಸಾಹಿತ್ಯಕೃತಿಗಳನ್ನು ತಮ್ಮ ಭಾಷೆಗೆ ತರುವಾಗ ಕನ್ನಡ ಮತ್ತು ಸಂಸ್ಕೃತಗಳ ನಡುವೆ ಇರುವ ಅಸಮ ಸಂಬಂಧದ ಗೊಡವೆ ಅವರಿಗೆ ಇದ್ದಂತಿಲ್ಲ. ಸುಮ್ಮನೆ ಎರಡು ಮಾದರಿಗಳನ್ನು ನಿಮ್ಮ ಮುಂದೆ ಇಡುತ್ತೇನೆ. ಪಂಪ ಮಹಾಭಾರತದ ಕತೆಯನ್ನು ಹೇಳಲು ಹೊರಟಾಗ ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆನೆಂಬ ಹಮ್ಮು ತನಗೆ ಇಲ್ಲವೆಂದು ಹೇಳುತ್ತಾನೆ. ಇದು ವಿನಯದ ಮಾತೆಂದು ಎಲ್ಲರೂ ಗುರುತಿಸುತ್ತಾರೆ, ಇದ್ದೀತು. ಆದರೆ ಪಂಪನ ಕೃತಿ ಅವನ ಮೀರುವಿಕೆಯನ್ನು ಹೆಜ್ಜೆ ಹೆಜ್ಜೆಗಳಲ್ಲಿ ತೋರಿಸಿಕೊಡುತ್ತದೆ. ಪಂಪನ ವಿಧಾನವೇ ಮೂಲವನ್ನು ತನ್ನ ಕಾಲ ದೇಶಗಳಿಗೆ ಒಗ್ಗಿಸುವುದು. ಇನ್ನೊಬ್ಬ ಕವಿ ಪೊನ್ನ ತನ್ನನ್ನು ಕಾಳಿದಾಸನಿಗಿಂತ ನೂರು ಮಡಿ ಮಹತ್ವದ ಕೃತಿರಚಕನೆಂದು ಹೇಳುತ್ತಾನೆ. ಅವನ ಕೃತಿ ಹಾಗೆ ನೂರುಪಟ್ಟು ಮಹತ್ವದ ಕೃತಿಯಾಗಿದೆಯೋ ಎನ್ನುವುದು ನಮಗೆ ಮುಖ್ಯವಲ್ಲ. ಪಂಪ ತಾನು ಮೂಲಕ್ಕೆ ವಿನೀತನಾಗಿದ್ದೇನೆ ಎನ್ನುತ್ತಲೇ ಅದನ್ನು ತನ್ನ ಚೌಕಟ್ಟಿಗೆ ಬಾಗಿಸುತ್ತಾನೆ. ಪೊನ್ನ ತನ್ನ ಪ್ರತಿಭೆ ಮೂಲಕೃತಿಕಾರನ, (ಅಥವಾ ಅಧಿಕಾರದ ಭಾಷೆಯಾದ ಸಂಸ್ಕೃತದ ಕವಿಯ) ಪ್ರತಿಭೆಗಿಂತ ಕಡಿಮೆಯದಲ್ಲವೆನ್ನುತ್ತಾನೆ. ಇವೆರಡು ಭಾವನೆಗಳು ನಮಗೆ ಒಂದೇ ಸೂಚನೆಯನ್ನು ನೀಡುತ್ತಿವೆ ಎಂದು ನಾನು ಭಾವಿಸುತ್ತೇನೆ. ಕನ್ನಡದ ಕವಿಗಳು ಅಧಿಕಾರದ ಭಾಷೆ ಎದುರು ತಮ್ಮ ಸಾಮರ್ಥ್ಯವನ್ನು ಒತ್ತೆ ಇಟ್ಟಂತೆ ವರ್ತಿಸುವುದಿಲ್ಲ. ಅವರು ಮೂಲ ಪಠ್ಯದಲ್ಲಿ ತಮಗೆ ಬೇಕಾದ ಅರ್ಥಗಳನ್ನು ಪಡೆಯಲು ಹಿಂಜರಿಯಲಿಲ್ಲ. ಅಂದರೆ ಯಾವುದು ಅಧಿಕಾರದ ಭಾಷೆಗೆ ಸಹಜವಾಗಿ ಲಭಿಸಿತ್ತೋ ಆ ಬಿಡುಗಡೆಯನ್ನು ಅಧೀನ ಭಾಷೆಯಲ್ಲಿ ಬರೆಯುತ್ತಿದ್ದೂ ಪಡೆದುಕೊಂಡರು. ಇದೊಂದು ಬಗೆಯ ಸಾಂಸ್ಕೃತಿಕ ರಾಜಕಾರಣ. ಪಡೆಯುವ ಭಾಷೆ ಈ ಬಗೆಯ ಬಿಡುಗಡೆಯನ್ನು ಕಂಡುಕೊಳ್ಳದಿದ್ದರೆ ಆ ಭಾಷೆಗೆ ಉಳಿಗಾಲವೇ ಇರುವುದಿಲ್ಲ..." (ಪು.೧೮)

ಇದೇ ಪುಸ್ತಕದಲ್ಲಿ ಪ್ರೊ. ಓ.ಎಲ್. ನಾಗಭೂಷಣ ಸ್ವಾಮಿಯವರು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಭಾಷಾಂತರ ಎನ್ನುವ ಲೇಖನವನ್ನು ಬರೆದಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅವರ ಕೆಲವು ಅಭಿಪ್ರಾಯಗಳು ಹೀಗಿವೆ:

"ಪಂಪ, ರನ್ನ, ಕುಮಾರವ್ಯಾಸರ ಭಾರತ ಕಥೆಗಳನ್ನು, ಅಥವಾ ನಾಗಚಂದ್ರನ ರಾಮಾಯಣವನ್ನು ಮೂಲ ಮಹಾಭಾರತದ, ರಾಮಾಣದ ಅನುವಾದಗಳೆಂದು ಕರೆಯುವುದು ಸರಿಯೇ? ಎನ್ನುವ ಪ್ರಶ್ನೆಯೂ ಇದೆ. ಸ್ವಲ್ಪ ಯೋಚಿಸಿದರೆ ಮೂಲವೆಂದು ಕರೆಯಬಹುದಾದ ಒಂದು ಮಹಾಭಾರತ, ಒಂದು ರಾಮಾಯಣ ಇಲ್ಲವೇ ಇಲ್ಲ ಎಂಬುದು ಹೊಳೆಯುತ್ತದೆ. ಕೆ.ವಿ. ಸುಬ್ಬಣ್ಣ ಅವರು ಒಂದೆಡೆಯಲ್ಲಿ ಹೇಳಿರುವಂತೆ ರಾಮಾಯಣ ಮತ್ತು ಮಹಾಭಾರತಗಳು ನಮ್ಮ ದೇಶದಲ್ಲಿ ಭಾಷೆಗಳಂತೆ ಕಾರ್ಯನಿರ್ವಹಿಸಿವೆ. ರಾಮಾಯಣದ ಭಾಷೆಯಲ್ಲಿ ಮಹಾಭಾರತದ ಭಾಷೆಯಲ್ಲಿ ಅಸಂಖ್ಯಾತ ಪ್ರಾದೇಶಿಕ ನುಡಿಗಳು ತಮ್ಮ ತಮ್ಮ ಕೃತಿಗಳನ್ನು ರಚಿಸಿಕೊಂಡಿವೆ. ನಮ್ಮ ಹಳೆಯ ಕವಿಗಳು ಯಾರು ರಾಮಾಯಣ ಮತ್ತು ಮಹಾಭಾರತಗಳನ್ನು ಮೂಲವೆಂದು ತಮ್ಮ ಕೃತಿಗಳನ್ನು ಅನುವಾದವೆಂದು ಕರೆದುಕೊಂಡಿಲ್ಲ.....

ರಾಮಾಯಣ ಮತ್ತು ಮಹಾಭಾರತಗಳನ್ನು ಕನ್ನಡ ಕವಿಗಳು ಬಳಸಿಕೊಂಡ ಕ್ರಮವಿದೆಯಲ್ಲ ಅದು ನಮ್ಮ ಇಂದಿನ ಅನುವಾದಗಳಿಗೆ ಒಂದು ಮಾದರಿಯಾಗಬಹುದೆಂದು ತೋರುತ್ತದೆ. ನಾವು ಇಂದು ಮೂಲವೆಂದು ಭಾವಿಸುವ ಆಕರಗಳಿಂದ ನೇರವಾಗಿ ಎತ್ತಿಕೊಂಡ ಭಾಗಗಳು, ಪದ್ಯಗಳು, ವಾಕ್ಯಖಂಡಗಳನ್ನು ಹಳಗನ್ನಡದ ಕೃತಿಗಳಲ್ಲಿ ಕಾಣಬಹುದು. ಆದರೂ ಆಕರಗಳನ್ನು ಕನ್ನಡ ಕೃತಿಗಳನ್ನಾಗಿಸುವಾಗ ಅಪಾರ ಸ್ವಾತಂತ್ರ್ಯವನ್ನೂ, ಧೈರ್ಯವನ್ನು ತೋರಿಸಿದರು..." (ಪು.೪೩-೪೪)

ಹೀಗೆ ಕನ್ನಡದ ಅನೇಕ ಚಿಂತಕರು ಸುತ್ತಿಬಳಸಿ ರಂ.ಶ್ರೀ ಮುಗಳಿಯವರ ಚಿಂತನೆಯನ್ನು ಮುಂದುವರೆಸಿದ್ದಾರೆ. ರಂ.ಶ್ರೀ. ಮುಗಳಿಯವರು ಪ್ರಾಚೀನ ಕನ್ನಡ ಸಾಹಿತ್ಯದ ಬಗೆಗೆ ವಿಶೇಷವಾದ ಅಧ್ಯಯನ ಮಾಡಿದವರು. ಕೀರ್ತಿನಾಥ ಕುರ್ತಕೋಟಿಯವರು ಈ ದಾರಿಯಲ್ಲಿ ಮುಂದುವರಿದರು. ಮೇಲೆ ಉಲ್ಲೇಖಿಸಿದ ಉಳಿದ ಇಬ್ಬರು ವಿದ್ವಾಂಸರು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಂಭೀರವಾದ ಅಧ್ಯಯನ ಮಾಡಿದವರಲ್ಲ. ಅವರೂ ಸೇರಿದಂತೆ ಇತರರು ಈ ಚರ್ಚೆಯನ್ನು ಇದೇ ದಾರಿಯಲ್ಲಿ ಮತ್ತೆ ಮತ್ತೆ ಕೊಂಡೊಯ್ದಿದ್ದಾರೆ. ಅಂದರೆ ಅಧ್ಯಯನ ಮಾಡದೆಯೂ ಏನು ಬೇಕಾದರೂ ಹೇಳಬಹುದು

ಎಂದಂತಾಯಿತಲ್ಲ? ನಿಂತ ನೆಲದ ಗುಣ ಎಂದರೆ ಇದುವೇ, ಕಾಲಾಯ ತಸ್ಮೈ ನಮಃ!

ಭಾಗ–೨

ಭಾಗ ಒಂದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯವನ್ನು ಅನುವಾದದ ಪ್ರಕಾರವೆಂದು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿದ್ವಾಂಸರಾದವರೂ ಸೇರಿದಂತೆ, ವಿದ್ವಾಂಸರಲ್ಲದವರೂ ಹೇಗೆ ವ್ಯವಸ್ಥಿತವಾಗಿ ಸಾರಿದ್ದಾರೆ ಎನ್ನುವುದನ್ನು ಈಗಾಗಲೇ ಚರ್ಚಿಸಲಾಯಿತು. ಇದರ ಪರಿಣಾಮ ಇಂದು ಗಂಭೀರವಾಗಿಯೇ ಆಗಿದೆ. ಭಾಷಾಂತರ ಎನ್ನುವ ಅಧ್ಯಯನ ಕ್ಷೇತ್ರವೊಂದು ಹೊಸದಾಗಿ ಇಂದು ತಲೆಎತ್ತಿದೆ. ವಿಶ್ವವಿದ್ಯಾಲಯಗಳಲ್ಲಿ ಭಾಷಾಂತರ ವಿಭಾಗಗಳು, ರಾಜ್ಯದಲ್ಲಿ ಬೇರೆ ಬೇರೆ ಸಂಸ್ಥೆಗಳು ಅನುವಾದ ಇಲ್ಲವೇ ಭಾಷಾಂತರದ ಹೆಸರಿನಲ್ಲಿ ಇಂದು ಕೆಲಸಮಾಡುತ್ತಿವೆ. ಈ ಅಧ್ಯಯನ ಕ್ಷೇತ್ರವು ಉಳಿದು ಬೆಳೆಯ ಬೇಕಾದರೆ ಜಗತ್ತಿನಲ್ಲಿ ಇರುವುದೆಲ್ಲವೂ ತಮ್ಮದು ಎಂದು ಅವರೆಲ್ಲ ಹೇಳಲೇ ಬೇಕಾಗುತ್ತದೆ. ಹಾಗಿರುವಾಗ ಈಗಾಗಲೇ ಅಂತಹ ಸುಳಿವು ದೊರೆಯಿತೆಂದರೆ ಮತ್ತೆ ಕೇಳಬೇಕೇ? ಕನ್ನಡದಲ್ಲಿ ಇರುವುದೆಲ್ಲವೂ ಅನುವಾದವೆನ್ನುವ ಹೊಸಸಿದ್ಧಾಂತವೊಂದು ಈಗ ನಿದಾನಕ್ಕೆ ಕಣ್ಬಿಡುತ್ತಿದೆ.

ಹಾಗೆ ನೋಡಿದರೆ ಪ್ರಾಚೀನ ಕನ್ನಡ ಸಾಹಿತ್ಯ ಅನುವಾದ, ಭಾಷಾಂತರ ಎನ್ನುವವರು ಅನುವಾದವೆಂದರೆ ಏನು, ಅನುವಾದ ಎನ್ನುವ ಪರಿಕಲ್ಪನೆಯ ಮೂಲ ಎಲ್ಲಿದೆ ಎನ್ನುವ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿಯೇ ಇಲ್ಲ. ರೋಗದ ಮೂಲವನ್ನು ಪರೀಕ್ಷೆ ಮಾಡದೆ ಸಮಸ್ಯೆಯನ್ನು ಪರಿಹರಿಸಿದರೆ ಏನಾಗುವುದೋ ಇಲ್ಲಿಯೂ ಹಾಗೆಯೇ ಆಗಿದೆ. ಮೂಲತಃ ಅನುವಾದ, ಭಾಷಾಂತರ ಎನ್ನುವ ಪರಿಕಲ್ಪನೆಯೇ ಬೈಬಲ್ ಪ್ರಣೀತವಾದುದು. ಇದಕ್ಕೆ ಆಧಾರಗಳು ಬೈಬಲ್‌ನಲ್ಲಿವೆ. ಹಳೆ ಒಡಂಬಡಿಕೆಯಲ್ಲಿ (Old Testament) ಬರುವ ೧೧ನೆಯ ಅಧ್ಯಾಯವನ್ನು ಗಮನಿಸಿ:

"ಭಾಷಾಭೇದ ಉಟಾಗುವುಂಟಾದದ್ದು

ಲೋಕದವರೆಲ್ಲರಿಗೂ ಒಂದೇ ಭಾಷೆ ಇತ್ತು. ಭಾಷಾಭೇದವೇನೊ ಇರಲಿಲ್ಲ. ಅವರು ಪೂರ್ವದಿಕ್ಕಿಗೆ ಮುಂದೆ ಮುಂದೆ ಪ್ರಯಾಣ ಮಾಡುತ್ತಿರುವಾಗ ಶಿನಾರ್ ದೇಶದಲ್ಲಿ ಬೈಲುಸೀಮೆ ಸಿಕ್ಕಲು ಅಲ್ಲೇ ವಾಸಮಾಡಿಕೊಂಡು ತಮ್ಮ ತಮ್ಮೊಳಗೆ ಬನ್ನಿ, ಒಳ್ಳೊಳ್ಳೇ ಸುಟ್ಟ ಇಟ್ಟಿಗೆಗಳನ್ನು ಮಾಡೋಣ; ಒಂದು ಪಟ್ಟಣವನ್ನೂ ಆಕಾಶವನ್ನು ಮುಟ್ಟುವ ಗೋಪುರವನ್ನೂ ಕಟ್ಟಿ ದೊಡ್ಡ ಹೆಸರನ್ನು ಪಡೆಯೋಣ; ಹೀಗೆ ಮಾಡಿದರೆ ಭೂಮಿಯ ಮೇಲೆಲ್ಲಾ ಚದುರುವುದಕ್ಕೆ ಆಸ್ಪದವಾಗುವುದಿಲ್ಲ ಅಂದುಕೊಂಡರು. ಕಟ್ಟುವಾಗ ಕಲ್ಲಿಗೆ ಬದಲಾಗಿ ಇಟ್ಟಿಗೆಯನ್ನೂ ಸುಣ್ಣಕ್ಕೆ ಬದಲಾಗಿ ಕಲ್ಲುಗಳನ್ನೂ ಉಪಯೋಗಿಸಿದರು.

ನರಪುತ್ರರು ಕಟ್ಟುತ್ತಿದ್ದ ಆ ಪಟ್ಟಣವನ್ನೂ ಗೋಪುರವನ್ನೂ ನೋಡುವದಕ್ಕೆ ಯೆಹೋವನು ಇಳಿದು ಬಂದನು. ನೋಡಿದ ಮೇಲೆ ಆತನು ಇವರು ಒಂದೇ ಜನಾಂಗ; ಇವರೆಲ್ಲರಿಗೂ ಒಂದೇ ಭಾಷೆ. ಪ್ರಾರಂಭದಲ್ಲೇ ಇಷ್ಟು ದೊಡ್ಡ ಕೆಲಸ ಮಾಡುವವರಾಗಿರಲು ಮುಂದೆ ಏನು ಆಲೋಚಿಸಿದರೂ ಇವರಿಗೆ ಅಸಾಧುವಲ್ಲ. ನಾವು ಇಳಿದು ಇವರಲ್ಲಿ ಒಬ್ಬರ ಮಾತು ಒಬ್ಬರಿಗೆ ತಿಳಿಯದಂತೆ ಇವರ ಭಾಷೆಯನ್ನು ತಾರುಮಾರು ಮಾಡೋಣ ಬನ್ನಿ ಅಂದನು. ಹಾಗೆಯೇ ಮಾಡಿ ಯೆಹೋವನು ಅವರನ್ನು ಅಲ್ಲಿಂದ ಭೂಲೋಕದಲ್ಲೆಲ್ಲಾ ಚದರಿಸಿದನು. ಅವರು ಆ ಪಟ್ಟಣ ಕಟ್ಟುವದನ್ನು ನಿಲ್ಲಿಸಿಬಿಟ್ಟರು. ಸಮಸ್ತಲೋಕದ ಭಾಷೆಯನ್ನು ಯೆಹೋವನು ಅಲ್ಲಿ ತಾರುಮಾರುಮಾಡಿ ಅವರನ್ನು ಅಲ್ಲಿಂದ ಭೂಲೋಕದಲ್ಲೆಲ್ಲಾ ಚದರಿಸಿದ್ದರಿಂದ ಆ ಪಟ್ಟಣಕ್ಕೆ ಬಾಬೆಲ್ ಎಂಬ ಹೆಸರಾಯಿತು." (ನೋಡಿ, ಸತ್ಯ ವೇದವು ಪು.೧೦–೧೧)

ಈ ಚಿಂತನೆ ಮತ್ತೆ ಹೊಸ ಒಡಂಬಡಿಕೆಯಲ್ಲಿ (New Testament) ಮುಂದುವರಿಯುತ್ತವೆ. ಇದರಲ್ಲಿ ಪೌಲನು ಕೊರಿಯಂಥರಿಗೆ ಬರೆದ ಮೊದಲನೆಯ ಪತ್ರದ ೧೪ನೆಯ ಭಾಗ ಹೀಗಿದೆ;

"ಪ್ರೀತಿಯನ್ನು ಅರಸಿರಿ. ಪವಿತ್ರಾತ್ಮರ ವರಗಳನ್ನು ಬಯಸಿರಿ ದೇವರ ಸಂದೇಶವನ್ನು ಸಾರಲು ಹಂಬಲಿಸಿ. ಪರಭಾಷೆಯನ್ನು ಆಡುವವನು ಮಾನವನೊಡನಲ್ಲ, ದೇವರೊಡನೆ ಮಾತನಾಡುತ್ತಾನೆ. ಪವಿತ್ರಾತ್ಮರ ಪ್ರೇರಣೆಯಿಂದ ನಿಗೂಢ ವಿಷಯಗಳ ಬಗ್ಗೆ ಮಾತನಾಡುವುದರಿಂದ ಯಾರು ಆತನ ಮಾತನ್ನು ಅರ್ಥಮಾಡಿಕೊಳ್ಳಲಾರರು. ಅವನ ಮಾತು ಭಕ್ತಿಯನ್ನು ವೃದ್ಧಿಸುತ್ತದೆ. ಉತ್ಸಾಹವನ್ನುಂಟು ಮಾಡುತ್ತದೆ. ಉಪಶಮನವನ್ನು ತರುತ್ತದೆ. ಪರವಶಾಭಾಷೆಗಳನ್ನು ಆಡುವವನು ತನ್ನನ್ನೇ ಅಭಿವೃದ್ಧಿಗೊಳಿಸುತ್ತಾನೆ. ಆದರೆ ದೇವರು ವಾಕ್ಯವನ್ನು ಸಾರುವವನು ಇಡೀ ಧರ್ಮಸಭೆಯನ್ನೇ ಅಭಿವೃದ್ಧಿಗೊಳಿಸುತ್ತಾನೆ. ನೀವೆಲ್ಲರೂ ಪರವಶಾಭಾಷೆಗಳನ್ನು ಆಡಬಹುದಾದರೂ ದೇವರ ವಾಕ್ಯವನ್ನು ಸಾರಬೇಕೆಂಬುದೇ ನನ್ನ ಅಭಿಲಾಷೆ. ಪರವಶಾಭಾಷೆಗಳನ್ನು ಆಡುವಾತನು ಧರ್ಮಸಭೆಯ ಅಭಿವೃದ್ಧಿಗಾಗಿ ತನ್ನ ಮಾತಿನ ಅರ್ಥವನ್ನು ಹೇಳಲಾರನಾದರೆ ಅವನಿಗಿಂತಲೂ ದೇವರ ವಾಕ್ಯವನ್ನು ಸಾರುವವನೇ ಶ್ರೇಷ್ಠನು.

"ಸಹೋದರರೇ, ನಾನು ನಿಮ್ಮ ಬಳಿಗೆ ಬಂದು ದೇವರ ಶ್ರುತಿಯನ್ನು, ನೈಜ ಜ್ಞಾನವನ್ನು, ದೇವರ ವಾಕ್ಯವನ್ನು, ದಿವ್ಯ ಬೋಧೆಯನ್ನು ನೀಡದೆ ಪರವಶಭಾಷೆಗಳಲ್ಲಿಯೇ ಮಾತನಾಡಿದರೆ ನಿಮಗೆ ಸಿಗುವ ಲಾಭವಾದರೂ ಏನು? ಕೊಳಲು, ವೀಣೆ ಮೊದಲಾದ ನಿರ್ಜೀವ ವಾದ್ಯಗಳು ನಾದವನ್ನು ಹೊಮ್ಮಿಸುತ್ತವೆ. ಅವುಗಳ ಸ್ವರದಲ್ಲಿ ಯಾವ ವ್ಯತ್ಯಾಸವೂ ಕಂಡುಬರದಿದ್ದರೆ ನುಡಿಸಿದ್ದು ಬಾಜಿಸಿದ್ದು

ಇಂತಹುದ್ದೇ ರಾಗವೆಂದು ತಿಳಿಯುವುದು ಹೇಗೆ? ರಣಕಹಳೆಯು ನಿರ್ದಿಷ್ಟವಾದ ಧ್ವನಿಯನ್ನು ಮೊಳಗಿಸದಿದ್ದರೆ ಯಾರುತಾನೆ ಯುದ್ಧಕ್ಕೆ ಸನ್ನದ್ಧರಾಗುತ್ತಾರೆ? ಅಂತೆಯೇ ನೀವೂ ಸಹ ಪರವಶಾಭಾಷೆಯನ್ನು ಆಡುವಾಗ ಇತರರಿಗೆ ಅದು ಅರ್ಥವಾಗದಿದ್ದರೆ ಅವರು ನಿಮ್ಮ ಮಾತನ್ನು ತಿಳಿದುಕೊಳ್ಳುವುದಾದರೂ ಹೇಗೆ? ನಿಮ್ಮ ಮಾತು ಗಾಳಿ ಪಾಲಾಗುತ್ತದೆಯಷ್ಟೇ. ಜಗತ್ತಿನಲ್ಲಿ ಭಾಷೆಯ ಅರ್ಥವು ನನಗಾಗದಿದ್ದರೆ, ಮಾತನಾಡುವವನಿಗೆ ನಾನು ಪರಕೀಯನಾಗುತ್ತೇನೆ; ನನಗೆ ಅವನು ಪರಕೀಯನಾಗುತ್ತಾನೆ. ಆದ್ದರಿಂದ ಪವಿತ್ರಾತ್ಮ ಪದಗಳ ಮೇಲೆ ಆಸಕ್ತಿಯುಳ್ಳ ನೀವು, ಧರ್ಮಸಭೆಯನ್ನು ಅಭಿವೃದ್ಧಿಗೊಳಿಸಬಲ್ಲ ಪದಗಳಮೇಲೆ ಆಸಕ್ತರಾಗಿರಿ.

"ಪರವಶಭಾಷೆಯಲ್ಲಿ ಮಾತನಾಡುವವನು ತಾನಾಡುವ ಮಾತಿಗೆ ಅರ್ಥವನ್ನು ಹೇಳುವ ಸಾಮರ್ಥ್ಯಕ್ಕಾಗಿ ದೇವರನ್ನು ಪ್ರಾರ್ಥಿಸಲಿ ಏಕೆಂದರೆ ನಾನು ಪರವಶಾಭಾಷೆಯಲ್ಲಿ ಪ್ರಾರ್ಥಿಸಿದರೆ ನನ್ನ ಆತ್ಮವೇನೋ ಪ್ರಾರ್ಥಿಸಿದಂತೆ ಆಗುತ್ತದೆ. ಆದರೆ ಮನಸ್ಸು ಅದನ್ನು ಗ್ರಹಿಸುವುದಿಲ್ಲ. ಹಾಗಾದರೆ ಈಗ ನಾನೇನು ಮಾಡಬೇಕು? ಆತ್ಮದಿಂದಲೂ ಪ್ರಾರ್ಥಿಸಬೇಕು. ಸಭೆಯಲ್ಲಿ ನೀನು ಆತ್ಮದಿಂದ ಮಾತ್ರ ದೇವರ ಸ್ತುತಿ ಮಾಡಿದರೆ ನಿನ್ನ ಹಾಗೆ ಪರವಶನಲ್ಲದವನು ನಿನ್ನ ಕೃತಜ್ಞತಾ ಸ್ತುತಿಗೆ 'ಆಮೆನ್' ಎಂದು ಹೇಗೆ ತಾನೇ ಹೇಳಬಲ್ಲನು? ನೀನು ಹೇಳುವುದೇ ಅವನಿಗೆ ತಿಳಿಯುವುದಿಲ್ಲವಲ್ಲ? ನೀನು ಮಾಡುವ ಕೃತಜ್ಞತಾಸ್ತುತಿ ಎಷ್ಟು ಚೆನ್ನಾಗಿದ್ದರೂ ಅವನಮಟ್ಟಿಗೆ ಅದು ನಿಷ್ಪ್ರಯೋಜಕವೇ.

"ನಾನಾದರೋ ದೇವರ ದಯೆಯಿಂದ ನಿಮಗಿಂತಲೂ ಮಿಗಿಲಾಗಿ ಪರವಶಾಭಾಷೆಗಳನ್ನು ಆಡಬಲ್ಲೆ. ಆದರೂ ಸಭೆಯಲ್ಲಿ ಪರವಶನಾಗಿ ಹತ್ತು ಸಾವಿರ ನುಡಿಗಳನ್ನಾಡುವ ಬದಲು ಮನಸ್ಸಾರೆ ಇದೇ ಮಾತುಗಳನ್ನಾಡಿ ಉಪದೇಶಿಸುವುದು ಉತ್ತಮವೆಂದು ನನಗೆ ತೋರುತ್ತದೆ.

"ಸಹೋದರರೇ, ಬುದ್ಧಿಯ ವಿಷಯದಲ್ಲಿ ಬಾಲಕರಾಗಬೇಡಿರಿ ದುಷ್ಟ ವಿಷಯಗಳಲ್ಲಿ ಶಿಶುಗಳಂತೆ ಮುಗ್ಧರಾಗಿರಿ; ಬುದ್ಧಿಯ ವಿಷಯದಲ್ಲಿ ಪ್ರಾಯಸ್ಥರಂತೆ ಪ್ರೌಢರಾಗಿರಿ. ಪವಿತ್ರಗ್ರಂಥದಲ್ಲಿ ಇಂತಿದೆ;

**"ಅನ್ಯಭಾಷೆಯವರ ಮುಖಾಂತರ**
**ಅನ್ಯ ದೇಶೀಯರ ಬಾಯ ಮುಖಾಂತರ**
**ನಾನೆನ್ನ ಜನರೊಡನೆ ಮಾತಾಡಿದಾಗಲೂ**
**ಎನ್ನ ಮಾತಿಗೆ ಕಿವಿಗೊಡರವರು, ಎಂದರು ಪ್ರಭು**

ಪರವಶಭಾಷೆಗಳನ್ನು ಆಡುವುದರ ಸಾಕ್ಷ್ಯ ವಿಶ್ವಾಸಿಗಳಿಗಲ್ಲಾ, ಅವಿಶ್ವಾಸಿಗಳಿಗೆ. ದೇವರ ವಾಕ್ಯವನ್ನು ಪ್ರತಿಬೋಧಿಸುವುದರ ಮೂಲಕ ಸಾಕ್ಷ್ಯವು ಅವಿಶ್ವಾಸಿಗಳಿಗಲ್ಲ, ವಿಶ್ವಾಸಿಗಳಿಗೆ. ಒಂದು ಕಡೆ ಎಲ್ಲರೂ ಸಭೆ ಸೇರಿದಾಗ ಪ್ರತಿಯೊಬ್ಬನೂ ಪರವಶಭಾಷೆಗಳನ್ನು ಆಡಲು ಆರಂಭಿಸಿದರೆ ಅಲ್ಲಿಗೆ ಬರುವ ಅಪರಿಚಿತರು ಅವಿಶ್ವಾಸಿಗಳು ನಿಮ್ಮನ್ನು ಹುಚ್ಚನೆಂದು ಕರೆಯಲಾರರೇ? ಬದಲಾಗಿ ಬರುವ ಅಪರಿಚಿತರ ಹಾಗೂ ಅವಿಶ್ವಾಸಿಗಳ ಮುಂದೆ ಎಲ್ಲರೂ ದೇವರ ವಾಕ್ಯವನ್ನು ಪ್ರಬೋಧಿಸಿದರೆ ಅವರಲ್ಲಿ ಒಬ್ಬನಾದರೂ ತಾನು ಕೇಳಿದ ಮಾತಿನಿಂದ ತನ್ನನ್ನು ತಾನೇ ಪರೀಕ್ಷಿಸಿಕೊಳ್ಳುತ್ತಾನೆ. ಅವನ ಅಂತರಾಳದ ವಿಚಾರಗಳು ಬಯಲಾಗುತ್ತವೆ. ಅವನು ಅಡ್ಡಬಿದ್ದು ದೇವರನ್ನು ಆರಾಧಿಸುತ್ತಾನೆ. 'ದೇವರು ನಿಜವಾಗಿಯೂ ನಿಮ್ಮ ಮಧ್ಯೆ ಇದ್ದಾನೆ' ಎಂದು ಪ್ರಚುರಪಡಿಸುತ್ತಾನೆ." (ನೋಡಿ. ಶುಭ ಸಂದೇಶ ಹೊಸ ಒಡಂಬಡಿಕೆ, ಬೈಬಲ್ ಸೊಸೈಟಿ ಆಫ್ ಇಂಡಿಯಾ.)

ಹೀಗೆ ಹಳೆಒಡಂಬಡಿಕೆ ಮತ್ತು ಹೊಸ ಒಡಂಬಡಿಕೆಗಳಲ್ಲಿ ಸಾರಿರುವಂತೆ ದೇವ ಭಾಷೆ ಎನ್ನುವ ಒಂದು ಭಾಷೆ ಇದೆ. ಅದು ಗಾಡ್ (God) ಬೈಬಲ್ ಅನ್ನು ಹೇಳಿರುವ ಭಾಷೆಯಾಗಿದೆ. ಉಳಿದ ಎಲ್ಲಾ ಭಾಷೆಗಳು ಅದಕ್ಕಿಂತ ಕನಿಷ್ಠವಾದವು. ಹಾಗಾದುದರಿಂದ ಮೂಲ ಭಾಷೆ ಎಂದರೆ ಬೈಬಲ್‌ನ ಭಾಷೆ (ಹೀಬ್ರೂ) ಆಗಿವೆ. ಉಳಿದವು ಉದ್ದೇಶಿತ ಭಾಷೆಗಳಾಗಿವೆ.

ಬೈಬಲ್ಲಿನ ಈ ಚಿಂತನೆಯನ್ನು ಅನುಸರಿಸಿಯೇ ಪಾಶ್ಚಿಮಾತ್ಯರಲ್ಲಿ ಅನುವಾದಕ್ಕೆ ಸಂಬಂಧಿಸಿದ ಎಲ್ಲಾ ಚರ್ಚೆಗಳು ಬೆಳೆದಿರುವುದು. ಇಂತಹ ಎಲ್ಲಾ ಚಿಂತನೆಗಳನ್ನು ಇಲ್ಲಿ ಚರ್ಚಿಸಲು ಸಮಯವಿಲ್ಲ. ಪ್ರಾತಿನಿಧಿಕವಾಗಿ ವಾಲ್ಟರ್ ಬೆಂಜಮೀನ್ ಎನ್ನುವ ಜರ್ಮನ್ ವಿದ್ವಾಂಸನ ಚಿಂತನೆಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಏಕೆಂದರೆ ಪಾಶ್ಚಾತ್ಯ ಚಿಂತನೆಗಳಲ್ಲಿ–ಅದರಲ್ಲಿಯೂ ಅನುವಾದಕ್ಕೆ ಸಂಬಂಧಿಸಿದಂತೆ– ಆತನ ಚಿಂತನೆಗಳು ಬಹಳ ಪ್ರಭಾವಶಾಲಿಯಾದವು. ಪಾಶ್ಚಿಮಾತ್ಯ ಚಿಂತನೆಗಳಲ್ಲೆಲ್ಲಾ ಆತನ ಚಿಂತನೆಯ ಪ್ರಭಾವಗಳಿವೆ. ಆತನ 'The task of the translation' ಎನ್ನುವ ಪ್ರಬಂಧವು ಭಾಷಾಂತರಕ್ಕೆ ಸಂಬಂಧಿಸಿದಂತೆ ಪಾಶ್ಚಾತ್ಯರಲ್ಲಿ ಒಂದು ಪ್ರಮುಖ ಚಿಂತನೆಯಾಗಿದೆ. ೧೯೬೮ರಲ್ಲಿ ಇದು ಇಂಗ್ಲಿಷ್‌ಗೆ ಅನುವಾದವಾದಲ್ಲಿಂದ ಅದರ ಸುತ್ತ ಮತ್ತಷ್ಟು ವಾಗ್ವಾದಗಳು ಆರಂಭವಾಗಿವೆ. ಅದರ ಮುಖ್ಯ ಪ್ರತಿಪಾದನೆಗಳನ್ನು ನಮ್ಮ ಚರ್ಚೆಗೆ ಪೂರಕವಾಗಿ ಈಗ ಗಮನಿಸಬಹುದಾಗಿದೆ;

ಭಾಷಾಂತರವು ದ್ವಿತೀಯ ದರ್ಜೆಯದಾಗಿದೆ; (a secondary phenomenon) ಸೃಜನಶೀಲ ಬರವಣಿಗೆಗೆ ಹೋಲಿಸಿಕೊಂಡಾಗ ಭಾಷಾಂತರವನ್ನು ಎರಡನೆಯ ದರ್ಜೆಯದೆಂದು ಪರಿಗಣಿಸಲಾಗುತ್ತದೆ. ಅನುವಾದಕನು ಯಾವಾಗಲೂ ಸೃಜನಶೀಲ ಬರಹಗಾರನ ಹಿಂಬದಿಯಲ್ಲಿಯೇ ಇರುತ್ತಾನೆ.

ಭಾಷಾಂತರವು 'ಶುದ್ಧ ಭಾಷೆಯ' (pure language) ಆಕಾಂಕ್ಷೆಯ ಒಂದು ಸಾಧನವಾಗಿದೆ; ಭಾಷಾಂತರದ

ಮೂಲಕ ಪೂರಕವಾದ ಪ್ರಕ್ರಿಯೆಯೊಂದು (a process of supplement of languages) ಆರಂಭವಾಗುತ್ತದೆ. ಇದಕ್ಕೆ ಕಾರಣ ಆಧಾರ ಭಾಷೆ (source language) ಮತ್ತು ಉದ್ದೇಶಿತ ಭಾಷೆಗಳ (target language) ನಡುವಿನ ವ್ಯತ್ಯಾಸವಾಗಿದೆ. ಉದ್ದೇಶಿತ ಭಾಷೆಯಲ್ಲಿರುವ ಈ ಅಸಾಮರ್ಥ್ಯದಿಂದಾಗಿಯೇ, ಅವುಗಳನ್ನೆಲ್ಲ ಒಂದು ಕಡೆ ತರುವುದರ ಮೂಲಕ ಭಾಷೆಯಲ್ಲಿ ಒಂದು ನಿರಂತರ ಪ್ರಕ್ರಿಯೆ ಯುಂಟಾಗುತ್ತದೆಯಲ್ಲದೆ, ಅದರ ಮೂಲಕ ಶುದ್ಧ ಭಾಷೆಯು ಆತ್ಯಂತಿಕವಾಗಿ ರೂಪುಗೊಳ್ಳುತ್ತದೆ.

ಜಗತ್ತೆಲ್ಲವೂ ಭಾಷೆಗಳಿಂದಲೇ ರೂಪಿತವಾಗಿವೆ: ನಮ್ಮ ಅಂತಿಮ ಉದ್ದೇಶವು ಜಗತ್ತಿನಲ್ಲಿರುವ ಈ ನೇಯ್ಗೆಯನ್ನು ಅರ್ಥಮಾಡಿಕೊಳ್ಳುವುದೇ ಆಗಿದೆ. ಅದರ ಮೂಲಕ ಅಸಾಧ್ಯವಾದ ಮನುಷ್ಯ ಭಾಷೆಗಳು ಮತ್ತು ದೇವರಭಾಷೆಯ (language of God) ನಡುವಿನ ಬೆಸುಗೆ ಸಾಧ್ಯವಾಗುತ್ತದೆ. (ನೋಡಿ, www.scribd.com/.../Walter Benjamins-The-Task-of-the-Translator-Theory-after-the-End-of-Theory;www.jstor.org/stable/4338653 )

ಈ ಚಿಂತನೆಯನ್ನು ಮುಂದುವರಿಸುತ್ತ ಏಳು ವರ್ಷಗಳ ಬಳಿಕ ಬೆಂಜನೀನ್ 'On Language as such and the Language of man' ಎನ್ನುವ ಮತ್ತೊಂದು ಲೇಖನವನ್ನು ಬರೆದನು. ಈ ಲೇಖನದಲ್ಲಿ ಆತನು ಬೌದ್ಧಿಕ ಮತ್ತು ಭಾಷಿಕ ಘಟಕಗಳನ್ನು ಬೇರೆ ಬೇರೆ ಎಂಬ ವಿಚಾರವನ್ನು ಮಂಡಿಸುತ್ತಾನೆ;

ವಿಶ್ವಾತ್ಮಕವಾದ ಪರಿಕಲ್ಪನೆಗಳ (Universalconcepts) ವಲಯವನ್ನು ಆತ ಸ್ವಯಂಪೂರ್ಣವಾದವುಗಳೆಂದು ಪರಿಗಣಿಸುತ್ತ ಅವು ಭಾಷಿಕ ಘಟಕಗಳಿಗಿಂತ ಭಿನ್ನವಾದವು ಎನ್ನುತ್ತಾನೆ. ಇವೆರಡೂ ಒಂದು ಹಂತದವರೆಗೆ ಪರಸ್ಪರ ಪೂರಕವಾಗಿರಬಹುದು. ಆದರೆ ಭಾಷಿಕ ವಲಯವು ಎಲ್ಲ ಪರಿಕಲ್ಪನೆಗಳನ್ನು ಒಳಗೊಳ್ಳುವುದಿಲ್ಲ. ಹಾಗಾದುದರಿಂದ ಇರುವ ಎಲ್ಲವನ್ನೂ ಒಳಗೊಳ್ಳುವುದಕ್ಕೆ (ಅಥವ ವಿವರಿಸುವುದಕ್ಕೆ) ನಮಗೆ ಸಾಧ್ಯವಾಗುವುದಿಲ್ಲ.

ಪ್ರಪಂಚದಲ್ಲಿರುವ ಎಲ್ಲ ಭಾಷೆಗಳೂ ಈ ಹಂತದಲ್ಲಿ ಅಸಾಮರ್ಥ್ಯವನ್ನು (inadequate) ಹೊಂದಿದವುಗಳಾಗಿದ್ದು ಅವು ಪರಿಕಲ್ಪನೆಗಳ ವಲಯವನ್ನು ಭಾಗಶಃ ಪ್ರವೇಶಿಸುತ್ತವೆ. ಪ್ರತಿಯೊಂದು ನಿರ್ದಿಷ್ಟ ಭಾಷೆಯೂ ಪ್ರತ್ಯೇಕವಾದ ಬೌದ್ಧಿಕ ಸಾರವನ್ನು ರೂಪಿಸುವುದಕ್ಕಷ್ಟೇ ಸಾಧ್ಯವಾಗುತ್ತದೆ.

ಒಂದು ಕಾಲದಲ್ಲಿ ಬೈಬಲ್‌ನಲ್ಲಿ ಹೇಳಿರುವಂತೆ ಪರಿಪೂರ್ಣವಾದ ಭಾಷೆಯು ಸ್ವರ್ಗದಲ್ಲಿ ನೆಲೆಸಿತ್ತು. ದೇವರಿಂದ ಅದು ಪ್ರತ್ಯೇಕವಾದಮೇಲೆ ಬೇರೆ ಬೇರೆ ಭಾಷೆಗಳು ಉಂಟಾದವು. ಹಾಗಾದುದರಿಂದ ನಿರ್ದಿಷ್ಟವಾದ ಭಾಷೆಗಳು ಯಾವಾಗಲೂ ಶುದ್ಧಭಾಷೆಯ (pure language) ಅಸಮಗ್ರ ರೂಪಗಳೇ ಆಗಿವೆ.

ಹಾಗಾದುದರಿಂದ ಭಾಷೆಗಳು ಕೇವಲ ಮನುಷ್ಯರ ನಡುವೆ ಸಂಪರ್ಕ ಸಾಧನಗಳಷ್ಟೇ ಆಗಿರುವುದಲ್ಲ, ಬದಲಾಗಿ ಅವು ಅರ್ಥ ಮತ್ತು ಅನುಕರಣೆಯ (meaning and resonating)ಯನ್ನುಹೊರತು ಪಡಿಸಿದ ಗಾಢವಾದ ದೈವಿಕ ಸತ್ಯವನ್ನು (hidden devin truth) ಹೊರಗೆಡಹುತ್ತವೆ.

ಭಾಷೆಗಳ ಅಂತಿಮ ಉದ್ದೇಶವು (ಹಾಗೆಯೇ ಅನುವಾದದ ಅಂತಿಮ ಉದ್ದೇಶವೂ) ದೈವಿಕವಾದ ಭಾಷೆಯ ಕಡೆಗೆ ಹೋಗುವುದಾಗಿದೆ. ಅಂತಹ ಭಾಷೆಯಲ್ಲಿ ಎಲ್ಲ ಅರ್ಥಗಳು ಇರುತ್ತವೆ. ಆದರೆ ಅದು ಸಂವಹನಕ್ಕಾಗಿ ಇರುವುದಲ್ಲ ಅದು ಅರ್ಥಗಳಿಂದ ಹೊರತಾದದ್ದೂ ಹೌದು. ಅನುವಾದವು ಅಂತಿಮ ಗುರಿಯನ್ನು ತಲುಪಲಿರುವ ನಿರ್ಣಯಕವಾದ (decisive) ಸಾಧನವಾಗಿದೆ. ಅದು ಅಪರಿಪೂರ್ಣವಾದ ಭಾಷೆಗಳನ್ನು ಪೂರ್ಣಗೊಳಿಸುವುದರ ಮೂಲಕ ಮೂಲ ಭಾಷೆಯನ್ನು ಹೆಚ್ಚು ಸ್ಪಷ್ಟವಾದ

ಭಾಷಿಕ ಆಯಾಮಕ್ಕೆ ಪಲ್ಲಟಿಸುತ್ತದೆ. (ನೋಡಿ, foliedujour.wordpress.com/.../reading-on-language-as-such-by-walter-benjamin)

ವಾಲ್ಟರ್ ಬೆಂಜಮೀನ್‌ನ ಈ ಚಿಂತನೆಗಳು ಯುರೋಪಿನ ಚಿಂತನವಲಯವನ್ನು ಸಾಕಷ್ಟು ಪ್ರಭಾವಿಸಿವೆ. ಪೀಟರ್‌ಝೋಂಡಿ (peter szondi) ಪೌಲ್ ಡಿ ಮ್ಯಾನ್ (Poul de Man) ಜಾಕ್ಯೂಸ್ ಡೆರಿಡಾ (jacques derrida) ಮೊದಲಾದ ಪ್ರಸಿದ್ಧ ಚಿಂತಕರು ಆತನ ವಾದಗಳಿಗೆ ಪ್ರತಿಕ್ರಿಯೆ ನೀಡಿದ್ದಾರೆ. ಈ ಕಾರಣಕ್ಕಾಗಿಯೇ ಬೆಂಜಮೀನನ ಚಿಂತನೆಗಳು ಪ್ರಸಿದ್ಧವಾಗಿವೆ ಎಂದು ನಾನು ಹೇಳುವುದು. ಅದಲ್ಲದೆ ಬೆಂಜಮೀನನ ಚಿಂತನೆಗಳು ಅನುವಾದ ಮತ್ತು ಅಂತಹ ಚಿಂತನೆಯ ಮೂಲಧಾತುವಿನ ಬಗೆಗೂ ಬೆರಳುಮಾಡುತ್ತವೆ. ಹಾಗಾದುದರಿಂದ ಅನುವಾದಕ್ಕೆ ಸಂಬಂಧಿಸಿದ ಚರ್ಚೆಗಳಲ್ಲಿ ಇವುಗಳನ್ನು ಪರಿಗಣಿಸದೆ ನಾವು ಮುಂದುವರಿಯುವಂತಿಲ್ಲ.

ಬೆಂಜಮೀನನ ಚಿಂತನೆಗಳನ್ನು ಇನ್ನೂ ಸಂಕ್ಷಿಪ್ತಗೊಳಿಸಿ ಹೇಳುವುದಾದರೆ ಅದು ಬೈಬಲ ಪ್ರಣೀತ ಚಿಂತನೆಗಳನ್ನು, ಬೈಬಲಿನ ಗಾಡ್‌ನ ಚಿಂತನೆಗಳನ್ನು (Bibilical God) ಹೇಳುತ್ತದೆ. ಮೂಲ ಭಾಷೆಯು ಅಥವಾ ಶುದ್ಧ ಭಾಷೆಯು ಬೈಬಲ್ ಪ್ರಣೀತವಾದುದಾಗಿ ಅದು ಬೈಬಲಿನಲ್ಲಿ ಹೇಳಿರುವ ಗಾಡ್‌ಗೆ ಸಂಬಂಧಿಸಿದುದಾಗಿದೆಯಲ್ಲದೇ ಅನುವಾದವೆನ್ನುವುದು ಆ ಬೈಬಲಿನ ಸಮೀಪಕ್ಕೆ ಹೋಗುವುದೇ ಆಗಿರುತ್ತದೆ ಎಂದು ಅದು ನಂಬುತ್ತದೆ. ಅಂದರೆ ಅನುವಾದವು ಎಷ್ಟೆಷ್ಟು ಸಮರ್ಪಕವಾಗಿರುತ್ತದೋ ಅಷ್ಟಷ್ಟು ಬೈಬಲಿಗೆ ಸಮೀಪವಾಗುತ್ತದೆ. ಅಷ್ಟು ಮಾತ್ರವಲ್ಲ ಅಕ್ಷರಮಟ್ಟಿಗೆ ಅದು ಕ್ರೈಸ್ತ ಥಿಯಾಲಜಿಗೂ ಸಮೀಪವಾಗುತ್ತದೆ.

ಒಟ್ಟಿನಲ್ಲಿ ಬೈಬಲ್‌ಗೂ ಬೆಂಜಮೀನನ ಪ್ರತಿಪಾದನೆಗಳಿಗೂ ಸಂಬಂಧವಿದೆ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಹಾಗೆಯೇ ಇದರ ಜತೆಗೆ ಅನುವಾದಕ್ಕೆ ಸಂಬಂಧಿಸಿದ ಪಶ್ಚಿಮದ ಚಿಂತನೆಗಳು ನೇರವಾಗಿ ಕ್ರಿಶ್ಚಿನ್‌ಥಿಯಾಲಜಿಗೆ ಸಂಬಂಧಿಸಿದ ವಿಷಯಗಳು ಎಂದಾಯಿತು. ಬೇರೆ ಮಾತಿನಲ್ಲಿ ಹೇಳುವುದಾದರೆ ಅನುವಾದ ಎನ್ನುವ ವಾಗ್ವಾದವೇ ಬೈಬಲ್, 'ಗಾಡ್' ಮೊದಲಾದುವುಗಳಿಗೆ ಸಂಬಂಧಿಸಿದುವುಗಳಾಗಿವೆ. ಆ ಕಾರಣಕ್ಕಾಗಿಯೇ ಜಗತ್ತಿನಲ್ಲಿ ಅತ್ಯಂತ ಹೆಚ್ಚು ಅನುವಾದಗಳಾಗಿರುವುದು ಬೈಬಲ್ ಎನ್ನುವ ಗ್ರಂಥವೇ ಆಗಿದೆ!

ಈ ಚರ್ಚೆಯನ್ನು ಇನ್ನಷ್ಟು ಮುಂದುವರಿಸಲು ಈಗ ಅವಕಾಶ ಬಂದಿದೆ. 'The Heathen in his Blindness-Asia and the West and Dynamics of Religion' ಎನ್ನುವ ಬಾಲಗಂಗಾಧರ ಎಸ್.ಎನ್. ಅವರ "ಪುಸ್ತಕವು ಸ್ಮೃತಿ–ವಿಸ್ಮೃತಿ ಭಾರತೀಯ ಸಂಸ್ಕೃತಿ (ಅನು: ರಾಜಾರಾಮ ಹೆಗಡೆ, ೨೦೧೦) ಎಂದು ಈಗ ಕನ್ನಡಕ್ಕೆ ಅನುವಾದವಾಗಿದೆ. ಸುಮಾರು ೫೦೦ ಪುಟಕ್ಕಿಂತಲೂ ಹೆಚ್ಚಿರುವ ಆ ಗ್ರಂಥದ ಕೆಲವು ಪ್ರತಿಪಾದನೆಗಳನ್ನು ಸಂಕ್ಷಿಪ್ತವಾಗಿಯಾದರೂ ಇಲ್ಲಿ ಪ್ರಸ್ತಾಪ ಮಾಡುವುದಕ್ಕೆ ಸಮಯಾವಕಾಶವಿಲ್ಲ. ಆದರೆ ಈಗ ನಾನು ಗುರುತಿಸಿರುವ ಸಮಸ್ಯೆಯನ್ನು ಇನ್ನಷ್ಟು ಖಚಿತ ಪಡಿಸಿಕೊಳ್ಳಬೇಕಾದರೆ ಆ ಪುಸ್ತಕದ ಮುಖ್ಯ ಪ್ರತಿಪಾದನೆಯನ್ನಾದರೂ ಹೇಳಲೇಬೇಕಾಗುತ್ತದೆ. ಈ ಗ್ರಂಥಕ್ಕೆ ಅನುವಾದಕರ ನೆಲೆಯಲ್ಲಿ ಪ್ರವೇಶಿಕೆಯನ್ನು ಬರೆದಿರುವ ರಾಜಾರಾಮ ಹೆಗಡೆಯವರ ಮಾತುಗಳನ್ನೇ ಇಲ್ಲಿ ಉಲ್ಲೇಖಿಸುತ್ತೇನೆ;

"ತೀರಾ ಚುಟುಕಾಗಿ ಈ ಗ್ರಂಥದ ವಾದದ ತಿರುಳನ್ನು ತಿಳಿಸಬಹುದಾದರೆ, ಹೀಗೆ ಹೇಳಬಹುದು; ರಿಲಿಜನ್ನು ಮಾನವ ಸಂಸ್ಕೃತಿಗಳಿಗೆ ಸಾಮಾನ್ಯವಾದ ಲಕ್ಷಣವಲ್ಲ, ಅಂದರೆ ಎಲ್ಲಾ ಸಂಸ್ಕೃತಿಗಳಲ್ಲಿಯೂ ಒಂದಿಲ್ಲೊಂದು ರಿಲಿಜನ್ನು ಇರಲೇಬೇಕೆಂದೇನೂ ಇಲ್ಲ. ಎಲ್ಲ ಸಂಸ್ಕೃತಿಗಳಲ್ಲೂ ರಿಲಿಜನ್ನು ಇರುತ್ತದೆಯೆಂಬುದು ಐರೋಪ್ಯ ಸಂಸ್ಕೃತಿಯ ಒಂದು ಅಸೈದ್ಧಾಂತಿಕ ಹೇಳಿಕೆ. ಈ ಗ್ರಂಥವು ಅಷ್ಟನ್ನೇ ಹೇಳಿ ಮುಗಿಸುವುದಿಲ್ಲ. ಇದರ ಜತೆಗೇ ಐರೋಪ್ಯರಿಗೆ ರಿಲಿಜನ್ನು ಎಲ್ಲೆಡೆಯಲ್ಲೂ ಇರುವಂತೆ ಕಾಣಲು ಕಾರಣವೇನು? ಈ ರಿಲಿಜನ್ನನ್ನು ಕಾಣುವ ಪ್ರಕ್ರಿಯೆಯು ಹೇಗೆ ನಡೆಯುತ್ತದೆ? ಹಾಗೂ ಈ ಸಮಸ್ಯೆಗೂ ನಮ್ಮ ಸಂಸ್ಕೃತಿ ಅಧ್ಯಯನಕ್ಕೂ ಏನು ಸಂಬಂಧ ಎನ್ನುವ ವಿಷಯವನ್ನು ಚರ್ಚಿಸುತ್ತದೆ." (ನೋಡಿ, ರಾಜಾರಾಮ ಹೆಗಡೆ, ಸ್ಮೃತಿ–ವಿಸ್ಮೃತಿ: ಭಾರತೀಯ ಸಂಸ್ಕೃತಿ ಪು.೧೧)

ರಿಲಿಜನ್‌ಗೆ ಸಂಬಂಧಿಸಿದ ಈ ಚರ್ಚೆಯನ್ನು ಇನ್ನೂ ಒಂದು ಹೆಜ್ಜೆ ಮುಂದಕ್ಕೊಯ್ದು ಬಾಲಗಂಗಾಧರ ಅವರು ಭಾರತದಲ್ಲಿ ಸಮಾಜವಿಜ್ಞಾನಗಳು ಪಶ್ಚಿಮ ಮುಖಿಯಾಗಿವೆ ಎಂದು ಹೇಳುತ್ತಾರೆ. ಅಂದರೆ ಈಗ ನಮ್ಮಲ್ಲಿರುವ ಸಮಾಜವಿಜ್ಞಾನಗಳು ಎಲ್ಲಾ ಸಂಸ್ಕೃತಿಯಲ್ಲಿಯೂ ರಿಲಿಜನ್ ಇದೆ ಎನ್ನುವ ಪ್ರಮೇಯವನ್ನು ಆಧಾರವಾಗಿಟ್ಟುಕೊಂಡೇ ಮುಂದುವರಿಯುತ್ತವೆ. ಅಂದರೆ ವಾಸ್ತವವಾಗಿ ಭಾರತದಲ್ಲಿ ಸಮಾಜ ವಿಜ್ಞಾನ ಎನ್ನುವ ಜ್ಞಾನಶಾಖೆಯೇ ಆರಂಭವಾಗಿಲ್ಲ ಎಂದೂ ಅವರು ಹೇಳುತ್ತಾರೆ. ಈ ಹಿನ್ನಲೆಯಲ್ಲಿಯೇ ಸಾಂದರ್ಭಿಕವಾಗಿ ಅನುವಾದಕ್ಕೆ ಸಂಬಂಧಿಸಿದ ಚಿಂತನೆಗಳೂ ಆಳದಲ್ಲಿ ಮತೀಯವಾಗಿವೆ, ಅವು ಆಳದಲ್ಲಿ ಯುರೋಪಿಯನ್ನರ ಚಿಂತನೆಗಳಾಗಿವೆ; ಅಂದರೆ ಕ್ರಿಶ್ಚನ್‌ಥಿಯಾಲಜಿಯ ಭಾಗವಾಗಿವೆ ಎಂದೂ ಹೇಳಬಹುದು. ಇನ್ನೂ ಸರಳವಾಗಿ ಹೇಳುವುದಾದರೆ ಅವು ರಿಲಿಜಿಯಸ್ ಆಗಿವೆ. ರಿಲಿಜನ್‌ಗೆ ಸಂಬಂಧಿಸಿದ ಬಾಲಗಂಗಾಧರ ಅವರ ಚಿಂತನೆಯನ್ನು ಒಪ್ಪಿಕೊಳ್ಳುವುದಾದರೆ ರಿಲಿಜನ್ ಇಲ್ಲದ ಭಾರತದಂತಹ ದೇಶಗಳಲ್ಲಿ ಅವುಗಳನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವಾಗಿದೆ. ಇದು ಹೌದಾದರೆ ಈಗ ನಡೆಯುತ್ತಿರುವ ಭಾಷಾಂತರಕ್ಕೆ ಚರ್ಚೆಗಳು ಭಾರತದಲ್ಲಿ ಅನುವಾದ ಎಂಬ ಪರಿಕಲ್ಪನೆ ಇದೆ ಎನ್ನುವ ಪೂರ್ವ ಪಕ್ಷವನ್ನು ಒಪ್ಪಿಕೊಂಡೇ ಮುಂದುವರಿಯುತ್ತವೆ. ಇವುಗಳ ಬಗೆಗೆ ಮೂಲಭೂತ ಪ್ರಶ್ನೆಯನ್ನು ಎತ್ತದ ಹೊರತು ಅನುವಾದ, ಭಾಷಾಂತರಕ್ಕೆ ಸಂಬಂಧಪಟ್ಟಂತೆ ನಾವು ನಮ್ಮದೇ ಆದ ದೃಷ್ಟಿಕೋನವನ್ನು ತಾಳುವುದಕ್ಕೆ ಸಾಧ್ಯವೇ ಇಲ್ಲ.

### ಭಾಗ–೩

ಕ್ರಿಶ್ಚನ್‌ಥಿಯಾಲಜಿಗೆ ಸಂಬಂಧಿಸಿದ ಭಾಷಾಂತರದ ವಾಗ್ವಾದಗಳು ನಮ್ಮಲ್ಲಿ ಮೂಲಭೂತವಾದ ಸಿದ್ಧಾಂತವನ್ನು ರೂಪಿಸುವುದರ ಬದಲು ಗೊಂದಲಗಳನ್ನೇ ಸೃಷ್ಟಿಸಿವೆ. ಮುಖ್ಯವಾಗಿ ಕನ್ನಡದಂತಹ ಭಾಷೆಗಳಲ್ಲಿ translationಗೆ ಪರ್ಯಾಯವಾದ ಒಂದು ಪದವೇ ಸಿಗುವುದಿಲ್ಲ. ಉದಾಹರಣೆಗೆ ಈಗಿರುವ 'ಅನುವಾದ' ಎನ್ನುವ ಪದವನ್ನೇ ಗಮನಿಸೋಣ. ಈ ಪದದ ಅತ್ಯಂತ ಪ್ರಾಚೀನ ರೂಪ ಪಂಪನಲ್ಲಿ ಸಿಗುತ್ತದೆ. ಆದಿಪುರಾಣಂ ಕಾವ್ಯದಲ್ಲಿ ಅದರ ಪ್ರಯೋಗ ಹೀಗಿದೆ;

ಮುನಿಜನದೋದಿಸಿದೋಜೆಯೊ
ಳನುವದಿಪುದಿದೊಂದೆ ಕೊಂಡಕುಂದಾನ್ವಯನಂ
ದನವನಶುಕಮೆಂದೆನಗಿನಿ
ಸನುಗ್ರಹಂಗೆಯ್ಗೆಕರುಣದಿಂ ಮುನಿನಿವಹಂ

(ಆದಿಪುರಾಣಂ, ಪ್ರಥಮಾಶ್ವಾಸಂ ಪು.೩)

ಇದು 'ಅನುವಾದ'ಪದದ ಪ್ರಾಚೀನ ರೂಪ. ಈಗ ಅನುವಾದ ಎಂದು ನಾವು ಪ್ರಯೋಗಿಸುವ ಪದದ ಪ್ರಾಚೀನ ಪ್ರಯೋಗ ಅನುವದ ಎಂದು ಇಲ್ಲಿದೆ. ಅನುವದದ ಅರ್ಥ ಉಚ್ಚರಿಸುವುದು ಎಂದಾಗುತ್ತದೆ. ಗಿಣಿ ಹೇಳಿದ ಹಾಗೆ ಎಂಬರ್ಥ. ಹತ್ತನೇ ಶತಮಾನದಲ್ಲಿ ಅನುವದ ಎನ್ನುವ

ಪದ ಕಂಡುಬಂದರೆ ಹನ್ನೊಂದನೇ ಶತಮಾನದಲ್ಲಿ (ಅಂದರೆ ಕಾವ್ಯಾವಲೋಕನದಲ್ಲಿ) 'ಅನುವಾದ' ಎನ್ನುವ ಪದ ಕಂಡುಬರುತ್ತದೆ. ಉದಾ: ಅನುಕರಣದೊಳೊಂದಿದ ಮಾತಿನಲ್ಲಿ ನಿರ್ದೋಶಮಾಗೆ ಸಲ್ಗುಂ ಪೇಳ್ದಿದಿನಿತುಂ ಸ್ವರೂಪ ಕಥನದೊಳನುವಾದಂ ಭಿನ್ನಮಪ್ಪುದರಿಂದಂ... ಎಂದು ಪ್ರಯೋಗವಿದೆ. ಅಷ್ಟಾದರೂ ಅನುವದ, ಅನುವಾದ ಎನ್ನುವ ಪದಗಳ ನಡುವೆ ೧೦ನೇ ಶತಮಾನದಿಂದ ೧೧ನೇ ಶತಮಾನದವರೆಗೆ ವ್ಯತ್ಯಾಸವೇ ಕಂಡುಬರುವುದಿಲ್ಲ. ಇನ್ನು ಭಾಷಾಂತರ ಎನ್ನುವ ಪದ ಕನ್ನಡದಲ್ಲಿ ಬಳಕೆಗೊಂಡಿರುವುದೇ ೧೯ನೇ ಶತಮಾನದಲ್ಲಿ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ– ಕನ್ನಡ ನಿಘಂಟಿನಲ್ಲಿ 'ಅನುವದಿಸು' ಎನ್ನುವುದಕ್ಕೆ 'ಉಚ್ಚರಿಸು' ಎನ್ನುವ ಅರ್ಥಕೊಡಲಾಗಿದೆ. ಇದು ಸರಿಯಾದ ಅರ್ಥ ಎಂದೆನಿಸುವುದಿಲ್ಲ. ಏಕೆಂದರೆ ಈ ಪದ ಪ್ರಯೋಗವಾಗಿರುವ ಆದಿಪುರಾಣಂ ಕಾವ್ಯದ ಪದ್ಯದಲ್ಲಿ 'ನಂದನವನಶುಕ' ಎನ್ನುವ ಪದಪುಂಜ ಅದಕ್ಕೆ ಪೂರಕವಾಗಿ ಬರುತ್ತದೆ. ನಿಘಂಟಿನಲ್ಲಿ ಕೊಟ್ಟಿರುವ ಅರ್ಥ ಈ ಹಿನ್ನಲೆಯಲ್ಲಿ ಸಂಬಂಧಪಡುವುದಿಲ್ಲ. ಇದು ಕಾರಣವಾಗಿ, 'ಅನುವದಿಸು' ಪದಕ್ಕೆ 'ಅನುಕರಿಸು' ಎನ್ನುವ ಅರ್ಥವೇ ಸರಿಯಾದುದು ಎಂದೆನಿಸುತ್ತದೆ. ಆದುದರಿಂದ ಭಾಷಾಂತರ, ಅನುವಾದ ಎನ್ನುವ ಪದ ನನಗೆ ಗೊತ್ತಿರುವ ಹಾಗೆ ಈಗಿನ ಅರ್ಥದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲ. ತರ್ಜುಮೆ ಇತ್ಯಾದಿ ಪದಗಳು ಕನ್ನಡ ಪದಗಳಲ್ಲ. ಹಾಗೆಯೇ ಈ ಪ್ರಕ್ರಿಯೆಯನ್ನು ಪ್ರಾಚೀನ ಕನ್ನಡ ಕವಿಗಳು ನಿರ್ವಚಿಸಿದ ರೀತಿಯೂ ಈಗ ಪಾಶ್ಚಾತ್ಯರು ಹೇಳುವ ಹಾಗಿಲ್ಲ. ಉದಾಹರಣೆಗೆ ಮಹಾಭಾರತವನ್ನು ಅರಿಕೇಸರಿಯ ಕಥೆಯನ್ನಾಗಿ ಪರಿವರ್ತಿಸಿದ ಪಂಪ ತನ್ನ ಕಾವ್ಯವನ್ನು ಅನುವಾದ ಎನ್ನುವುದಿಲ್ಲ; ಪಂಪಭಾರತದ ಈ ಪದ್ಯ ಪ್ರಸಿದ್ಧವಾದುದೇ–

ವ್ಯಾಸಮುನೀಂದ್ರ ರುಂದ್ರವಚನಾಮೃತ ವಾರ್ಧಿಯನೀಸುವೆಂ ಕವಿ।
ವ್ಯಾಸನನೆಂಬ ಗರ್ವಮೆನಗಿಲ್ಲ ಗುಣಾರ್ಣವ ನೊಳ್ಪು ಮನ್ನನೋ।
ವಾಸಮನೆಯ್ದೆ ಪೇಳ್ದಪೆನಲ್ಲದೆ ಗರ್ವವಮೆ ದೋಷಮಳ್ತಿಗಂ।
ದೋಷಮ ಕಾಣೆನೆನ್ನರಿವ ಮಾಳ್ಕೆಯೆ ಪೇಳ್ವೆ ನಿದಾವದೋಷಮೋ॥

(ನೋಡಿ, ಬೆಳ್ಳಾವೆ ವೆಂಕಟ ನಾರಣಪ್ಪ(ಸಂ) ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ ಪ್ರಥಮಾಶ್ವಾಸಂ ಪದ್ಯ ೧೩)

ಇದೇ ರೀತಿಯಾಗಿ ಆದಿಪುರಾಣದ ಪರಂಪರೆಯ ಕುರಿತು ತನ್ನ ಇನ್ನೊಂದು ಕಾವ್ಯದಲ್ಲಿ ಪಂಪ ಹೀಗೆ ಹೇಳುತ್ತಾನೆ;

ಪುರುದೇವಾದಿ ಜಿನೇಂದ್ರಮಾಳೆ ಗಣಭೃತ್ಸಂತಾನ ಮೆಂದೀ ಪರಂ।
ಪರೆಯಿಂ ವಿಶ್ರುತ ವೀರಸೇನ ಜಿನಸೇನಾಚಾರ್ಯ ಪರ್ಯಂತ ಮಾ।
ಗಿರೆ ಬಂದೀ ಕಥೆ ಗುಣ್ಪುವೆತ್ತುದವರುಂ ಜ್ಞಾನಾರ್ಥಿಸಂಪನ್ನರೆಂ।
ದಿರದಾಂ ದೃಷ್ಟನೆನೀಕಥಾಬ್ದಿಯುಮನೇನೀಸಲನ್ನನದಂದೆನೋ॥

(ಪಂಪಕವಿ ವಿರಚಿತಂ ಆದಿಪುರಾಣಂ ಸಂ. ಎಸ್.ಜಿ. ನರಸಿಂಹಾಚಾರ್, ಪ್ರಥಮಾಶ್ವಾಸಂ ಪದ್ಯ ೩೫ )

ಈ ಪದ್ಯಗಳಲ್ಲಿ 'source language' ಹಾಗೆಯೇ 'target language' ಎನ್ನುವ ಪರಿಕಲ್ಪನೆಯೇ ಇಲ್ಲ. ಈಗಿರುವ ಪಾಶ್ಚಾತ್ಯ ಸಿದ್ಧಾಂತಗಳಿಂದ 'ಈಸುವೆನ್' ಎನ್ನುವ ಪರಿಕಲ್ಪನೆಯನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂಬುದು ನಮಗೆ ಸಮಸ್ಯೆಯಾಗುತ್ತದೆ. ಕನ್ನಡದ ಸಂದರ್ಭದಲ್ಲಿ ಅದಕ್ಕೆ ಮೀರು, ವಿರಹಿಸು, ಸಾಧಿಸು ಎನ್ನುವ ಅರ್ಥ ಬರುತ್ತದೆ. ಬೆಂಜಮೀನ್ ಹೇಳುವ ಹಾಗೆ 'translater' ಎನ್ನುವ ವ್ಯಕ್ತಿಯು ಮರೆಮಾಚಿದ ಹಾಗೆ ಇಲ್ಲಿ ಕಂಡುಬರುವುದಿಲ್ಲ. ಹಾಗೆಯೇ ಕುಮಾರವ್ಯಾಸ ತನ್ನ ಭಾರತವನ್ನು 'ಕರ್ಣಾಟ ಭಾರತ ಕಥಾಮಂಜರಿ' ಎನ್ನುತ್ತಾನೆ. ಆತನ ಮಾತುಗಳನ್ನು ಗಮನಿಸಿ;

ದುರಿತ ಕುಲಗಿರಿ ವಜ್ರದಂಡನು
ಧರೆಯ ಜಂಗಮ ಮೂರ್ತಿ ಕವಿವಾ
ರಿರುಹ ದಿನಮಣಿ ನಿಖಿಳಯತಿಪತಿ ದಿವಿಜವಂದಿತನು॥
ತರಳನನು ತನ್ನವನೆನುತ ಪತಿ
ಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸ ಮುನಿರಾಯ॥

ಪಂಪನಾದರೋ ಮಹಾಭಾರತ ಎನ್ನುವ ಸಂಸ್ಕೃತ ಕಾವ್ಯದ ನೆನಪನ್ನಾದರೂ ಮಾಡಿಕೊಳ್ಳುತ್ತಾನೆ. ಕುಮಾರವ್ಯಾಸ ಹಾಗೊಂದು ನೆನಪನ್ನು ಕೂಡ ಮಾಡಿಕೊಳ್ಳುವುದಿಲ್ಲ. ತಾನು ವ್ಯಾಸನ ಮಗನೆಂಬ ಒಂದೇ ಮಾತಿನಲ್ಲಿ ಈ ಪ್ರಕ್ರಿಯೆಯನ್ನು ನಿರ್ದೇಶಿಸುತ್ತಾನೆ. ಇದನ್ನೇ ಹೋಲುವ ಪರಿಕಲ್ಪನೆ ತೊರೆವೆಯ ನರಹರಿಯೆ ತೊರವೆ ರಾಮಾಯಣದಲ್ಲಿಯೂ ಕಂಡುಬರುತ್ತದೆ;

ಚಾರುತರ ಕರ್ಣಾಟಕದ ವಿ
ಸ್ತಾರ ರಾಮಾಯಣಕೆ ಕರ್ತೃ ಕು
ಮಾರ ವಾಲ್ಮೀಕಿಯೆ ಕಥಾಪತಿ ತೊರೆವೆಯಧಿನಾಥ

ಕನ್ನಡ ಕವಿಗಳು ತಮ್ಮ ಕಾವ್ಯಕ್ಕೆ ಆಕರ ಇರುವುದನ್ನು ನಿರಾಕರಿಸಿಲ್ಲ. ಆದರೆ ಪಂಪನಂತಹವರು ಅದನ್ನು ಸಮುದ್ರ ಅಂತಲೂ ತಾನು ಈಜುಗಾರನೆಂತಲೂ ವಿವರಿಸಿಕೊಳ್ಳುತ್ತಾರೆ. ಕುಮಾರವ್ಯಾಸ, ಕುಮಾರವಾಲ್ಮೀಕಿಯಂತವರು ಅದನ್ನು ನಿರ್ವಚಿಸುವುದು ಇನ್ನೊಂದು ರೀತಿಯಲ್ಲಿ; ಅವರಿಗದು ತಂದೆ–ಮಕ್ಕಳ ಸಂಬಂಧ, ವ್ಯಾಸ–ಕುಮಾರವ್ಯಾಸ; ವಾಲ್ಮೀಕಿ– ಕುಮಾರವಾಲ್ಮೀಕಿ. ವಿಕ್ರಮಾರ್ಜುನ ವಿಜಯಂ, ಕರ್ಣಾಟಭಾರತ ಕಥಾಮಂಜರಿ, ತೊರವೆರಾಮಾಯಣ ಮೊದಲಾದ ಕಾವ್ಯಗಳನ್ನು ಪಾಶ್ಚಾತ್ಯ ದೃಷ್ಟಿಕೋನದಿಂದ ಅನುವಾದವೆಂದೋ, ಭಾಷಾಂತರವೆಂದೋ ರೂಪಾಂತರ ವೆಂದೋ ಪರಿಗಣಿಸುವ ಮನಸ್ಸುಗಳಿಗೆ ಈ ತಂದೆ– ಮಕ್ಕಳು ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. ಏಕೆಂದರೆ ಬೈಬಲ್‌ನಲ್ಲಿ ಅಂತಹ ಪರಿಕಲ್ಪನೆಯೇ ಇಲ್ಲವಲ್ಲ!

ಭಾಗ–೧ರಲ್ಲಿ ಈಗಾಗಲೇ ಹೇಳಿರುವಂತೆ ಕವಿರಾಜ ಮಾರ್ಗ ಕೃತಿಯು ಅನುವಾದವೆಂದು ರಂ.ಶ್ರೀ. ಮುಗಳಿ ಮತ್ತು

ಕೀರ್ತಿನಾಥ ಕುರ್ತಕೋಟಿಯವರು ಹೇಳುತ್ತಾರೆ ಎನ್ನುವುದನ್ನು ಪ್ರಸ್ತಾಪಿಸಲಾಗಿದೆ. ಮುಗಳಿಯವರಾದರೋ ಹಾಗೆ ಹೇಳಲು ಕಾರಣಗಳನ್ನು ಕೊಡುತ್ತಾರೆ. ಆದರೆ ಪ್ರಾಚೀನ ಕನ್ನಡ ಸಾಹಿತ್ಯವು ಪುನರ್ಲೇಖನ ಎನ್ನುವ ಕುರ್ತಕೋಟಿಯವರು ಅದಕ್ಕೆ ಆಧಾರಗಳನ್ನೇ ಕೊಡುವುದಿಲ್ಲ. ಅಷ್ಟೇಕೆ, ಕನ್ನಡ ಸಾಹಿತ್ಯ ಸಂಗಾತಿ ಎನ್ನುವ ಗ್ರಂಥದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಎಲ್ಲಾ ಚರ್ಚೆಗಳೂ ಏಕಮುಖಿಯಾಗಿವೆ. ಅವು ಕುರ್ತಕೋಟಿಯವರು ಹೇಳಿರುವುದರಿಂದ ಒಪ್ಪತಕ್ಕವುಗಳಾಗಿವೆ. ಏಕೆಂದರೆ ಕುರ್ತಕೋಟಿಯವರು ಹೇಳಿದ ಮೇಲೆ ಒಪ್ಪಲೇ ಬೇಕಲ್ಲ ಎಂಬ ರೀತಿಯಲ್ಲಿವೆ. ಅದು ಬಿಟ್ಟರೆ ತಮ್ಮ ಯಾವ ಹೇಳಿಕೆಗಳಿಗೂ ಅವರು ಆಧಾರವನ್ನೇ ನೀಡುವುದಿಲ್ಲ. ಆಧಾರಸಹಿತ ವಿವರಿಸಿದರೆ ಕನ್ನಡದಲ್ಲಿ ಯಾರಾದರೂ ವಿದ್ವಾಂಸರಾಗುತ್ತಾರೆಯೇ?

ಹೀಗೆ ಆಧಾರವಿಲ್ಲದೆಯೇ ಕವಿರಾಜಮಾರ್ಗ–ಅಷ್ಟೇಕೆ ಇಡಿಯ ಕನ್ನಡ ಸಾಹಿತ್ಯ–ಅನುವಾದ ಎನ್ನುವ ದೊಡ್ಡ ಪಡೆಯೊಂದಿದೆ. ಆಶ್ಚರ್ಯವೆಂದರೆ ಕನ್ನಡದ ಪ್ರಾತಃಸ್ಮರಣೀಯರಲ್ಲೊಬ್ಬರಾದ ಆರ್. ನರಸಿಂಹಾಚಾರ್ಯರು ಕವಿರಾಜ ಮಾರ್ಗದ ಕುರಿತು ಹಾಗೆ ಹೇಳುವುದಿಲ್ಲ. (ನೋಡಿ, ಕರ್ನಾಟಕ ಕವಿಚರಿತೆ ಪ್ರಥಮ ಸಂಪುಟ. ೨೦೦೫, ಪು.೯–೨೩). ಕರ್ನಾಟಕ ಕವಿಚರಿತೆಯನ್ನು ಬರೆದ ಅವರು ಪ್ರತಿಯೊಂದು ಗ್ರಂಥದ ಬಗೆಗೆ ಸಂಕ್ಷಿಪ್ತವಾಗಿಯಾದರೂ ಅದರ ಬಗೆಗೆ ಹೇಳಬೇಕಾದುದನ್ನೆಲ್ಲ ಹೇಳಿದ್ದಾರೆ. ನರಸಿಂಹಾಚಾರ್ ಅಂತಹ ವಿದ್ವಾಂಸರು ಈ ಬಗೆಗೆ ಏನೂ ಹೇಳಿಲ್ಲ ಎಂದರೆ ಏನರ್ಥ? ಬೇರೇನೂ ಅಲ್ಲದಿದ್ದರೂ ಅವರ ಕಾಲಕ್ಕೆ ಅನುವಾದಕ್ಕೆ ಸಂಬಂಧಿಸಿದ ಚಿಂತನೆಗಳು ಜನಪ್ರಿಯವಾಗಿರಲಿಲ್ಲ ಎಂದೇ ಅರ್ಥ. ಇದರ ಹೊರತು ಆಚಾರ್ಯರ ಮೌನವನ್ನು ಬೇರೇನಾಗಿಯೂ ಅರ್ಥ ಮಾಡಬೇಕಿಲ್ಲ. ಹಾಗೆಯೇ ಈ ಮಾತನ್ನು ಮುಂದುವರಿಸುವುದಾದರೆ ಅನುವಾದಕ್ಕೆ ಸಂಬಂಧಿಸಿದ ಚಿಂತನೆಗಳು ಮೊದಲಿಗೆ ಬೈಬಲ್‌ನಿಂದ ಜರ್ಮನ್ ಭಾಷೆಗೆ, ಆಮೇಲೆ ಇಂಗ್ಲೀಷ್‌ಗೆ ಬಳಿಕ ಕನ್ನಡಕ್ಕೆ ವಲಸೆ ಬರುತ್ತದೆ. ಅವು ರಂ.ಶ್ರೀ.ಮುಗಳಿಯವರ ಮೂಲಕ ಕನ್ನಡ ಚಿಂತನೆಯನ್ನು ಪ್ರವೇಶಿಸಿವೆ. ಮುಂದೆ ಪ್ರಾಚೀನ ಕನ್ನಡ ಸಾಹಿತ್ಯವೆಲ್ಲವೂ ಅನುವಾದ ಎನ್ನುವ ಹಾಗೆ ಬೆಳೆಯುತ್ತಿವೆ.

ಈಗಾಗಲೇ ನಾನು ಹೇಳಿರುವಂತೆ ಕನ್ನಡದಂತಹ ಭಾರತೀಯ ಭಾಷೆಗಳಲ್ಲಿ 'translation'ಗೆ ಸಮಾನವಾದ ಪದಗಳೇ ಸಿಗುವುದಿಲ್ಲ. ಅಷ್ಟೇಕೆ ಅಂತಹ ಪ್ರಕ್ರಿಯೆಯನ್ನು ಖಚಿತವಾಗಿ ಗುರುತಿಸಿದಂತೆಯೂ ಕಂಡುಬರುವುದಿಲ್ಲ. ಕಾಳಿದಾಸನಿಂದ ಬೇಕಾದಷ್ಟು ನೆರವನ್ನು ಪಡೆದ ಪೊನ್ನನು 'ಮುನ್ನುಳ್ಳ ಕಾಳಿದಾಸಗಂ ನೂರ್ಮಡಿ' ಎನ್ನುತ್ತಾನೆ. ಪೊನ್ನ ಹೇಳುವುದು ಸರಿಯೇ ತಪ್ಪೇ ಎನ್ನುವುದು ಬೇರೆ ಮಾತು. ಆದರೆ ಪೊನ್ನನಿಗೆ ಈಗ ಇಪ್ಪನೇ ಶತಮಾನದಲ್ಲಿ ನಾವು ಅನುವಾದ ಎನ್ನುವುದನ್ನು ಯಾವ ಅರ್ಥದಲ್ಲಿ ಬಳಸುತ್ತಿದ್ದೇವೋ ಅದು ಮಾತ್ರ ಗೊತ್ತಿರಲಿಲ್ಲ ಎಂದು ಇದರಿಂದ ಖಚಿತವಾಗುತ್ತದೆ. ಇಲ್ಲದಿದ್ದರೆ ಪೊನ್ನನಿಗೆ ಆ ಮಾತನ್ನು ಹೇಳಲು ಸಾಧ್ಯವೇ ಇರುತ್ತಿರಲಿಲ್ಲ. ಅಂದರೆ ಭಾರತೀಯರಿಗೆ 'translation' ಎನ್ನುವ ಪರಿಕಲ್ಪನೆಯೇ ಹೊಸದು, ಅಪರಿಚಿತವಾದುದು. ಒಂದು ಸಂಸ್ಕೃತಿಯಲ್ಲಿ ಬೇರೆಯವರಲ್ಲಿರುವ ಎಲ್ಲ ಅಂಶಗಳು ಇರಬೇಕೆಂದಾಗಲೀ ಅದು ಇಲ್ಲದಿದ್ದರೆ ಆ ಸಂಸ್ಕೃತಿಯೂ ಕೀಳೆಂದಾಗಲೀ ಭಾವಿಸಬೇಕಾಗಿಲ್ಲ. ಮೊದಲು 'translation' ಎನ್ನುವ ಪರಿಕಲ್ಪನೆ ನಮ್ಮಲ್ಲಿಲ್ಲ ಎನ್ನುವುದನ್ನು ನಾವು ಒಪ್ಪಿಕೊಳ್ಳುವುದೇ ಸರಿಯಾದುದು. ಈಗಿನ ಸಮಸ್ಯೆ ಉಂಟಾಗಿರುವುದೇ 'translation' ನಮ್ಮಲ್ಲಿದೆ ಎಂದು ನಾವು ಒಪ್ಪಿಕೊಂಡು ಮುಂದುವರಿದಲ್ಲಿಂದ ಹೀಗಾದಾಗ ಭಾಷಾಂತರದ ಐತಿಹಾಸಿಕ ನಿರ್ವಚನ ಮತ್ತು ವಿಭಾಗ ಕ್ರಮ, ವಿಭಜನೆ ಮೊದಲಾದ ತೊಡಕಿನಿಂದ ಬಿಡಿಸಿ ಕೊಂಡಂತಾಗುತ್ತದೆ! ಹಾಗಾದರೆ ಈ ಪ್ರಕ್ರಿಯೆಯನ್ನು ಏನೆಂದು ಕರೆಯುವುದು ಎನ್ನುವ ಪ್ರಶ್ನೆಯುಂಟಾಗುತ್ತದೆ. ನನಗನಿಸುವಂತೆ ಈ ಪ್ರಶ್ನೆಯೇ ಅವೈಜ್ಞಾನಿಕವಾದುದು. ಇದು ಇಂಗ್ಲೆಂಡ್‌ನಲ್ಲಿ ಕನ್ನಡ ಏಕಿಲ್ಲ ಎಂದು ಕೇಳಿದಷ್ಟೇ ಅತಾರ್ಕಿಕವಾದುದು. ನಿಜ ಹೇಳಬೇಕೆಂದರೆ ಪ್ರಾಚೀನ ಕನ್ನಡ ಸಾಹಿತ್ಯ ಅನುವಾದವೇ ಎನ್ನುವ ಪ್ರಶ್ನೆಯೇ ಒಂದು ತಪ್ಪಾದ ಪ್ರಶ್ನೆಯಾಗಿದೆ. ತಪ್ಪಾದ ಪ್ರಶ್ನೆಗೆ ತಪ್ಪು ಉತ್ತರ ಮಾತ್ರ ಸಿಗಲು ಸಾಧ್ಯ! ಸದ್ಯಕ್ಕೆ ನಾವು ಪ್ರಾಚೀನ ಕನ್ನಡ ಸಾಹಿತ್ಯವು ಅನುವಾದವಲ್ಲ ಅನುವಾದ ಎನ್ನುವ ಪರಿಕಲ್ಪನೆ ನಮ್ಮಲ್ಲಿಲ್ಲ ಎನ್ನುವುದನ್ನು ಖಚಿತ ಮಾಡಿಕೊಳ್ಳೋಣ. ಹಾಗಾದರೆ ಇದಕ್ಕೆ ಏನೆಂದು ಕರೆಯಬೇಕು ಎನ್ನುವುದು ಆಮೇಲಿನ ಮಾತು. ಈ ಲೇಖನದಲ್ಲಿ ಈ ವರೆಗೆ ಅಂತಹ ಪ್ರಯತ್ನವನ್ನು ಸಾಧಾರ ಪೂರ್ವಕವಾಗಿ ಮಾಡಲಾಗಿದೆ.

ಅನುವಾದಕ್ಕೆ ಸಂಬಂಧಿಸಿದ ಚರ್ಚೆಗಳಲ್ಲಿ ಮೂಲಕ್ಕೆ ನಿಷ್ಠವಾಗಿರಬೇಕೋ ಬೇಡವೋ ಎನ್ನುವ ಚರ್ಚೆ ಅಲ್ಲಲ್ಲಿ ಕಂಡುಬರುತ್ತದೆ. ಇಲ್ಲಿ 'ಮೂಲ' ಎನ್ನುವ ಮಾತನ್ನು ಯಾವಾಗಲೂ ನಾವು ತೇಲಿಸಿ ಹೇಳುತ್ತಿರುತ್ತೇವೆ. ಅದಕ್ಕೆ 'ಧರ್ಮಗ್ರಂಥ' ಇಂದೇ ಅರ್ಥ. ಇಸ್ಲಾಂನಲ್ಲಿಯೂ ಕೂಡ ಈ ಮನೋಭಾವವೇ ಕಂಡುಬರುತ್ತದೆ. ಇಸ್ಲಾಂನಲ್ಲಿ ಕುರ್‌ಆನ್ ಅವತೀರ್ಣಗೊಂಡ ಅರೇಬಿಕ್ ಭಾಷೆಯೇ ಪವಿತ್ರವಾದುದು, ಆದರೆ ಪ್ರಾಚೀನ ಭಾರತೀಯ ಸಂದರ್ಭದಲ್ಲಿ ಈ ಕಲ್ಪನೆಯೇ ತದ್ವಿರುದ್ಧವಾದುದು. ನಾಗವರ್ಮನ ಭಾಷಾಭೂಷಣದ ಈ ಪದ್ಯ ಪ್ರಸಿದ್ಧವಾಗಿಯೇ ಇದೆ–

**ಸರ್ವಜ್ಞಂ ತದಹಂ ವಂದೇ ಪರಂಜ್ಯೋತಿ ಸ್ತಮೋಪಹಂ**
**ಪ್ರವೃತ್ತಾ ಯನ್ಮುಖಾದ್ದೇವೀ ಸರ್ವಭಾಷಾ ಸರಸ್ವತೀ॥**

(ಯಾವನ ಮುಖದಿಂದ ದೇವಿ ಸರ್ವಭಾಷಾಸರಸ್ವತಿ ಸ್ವರೂಪವಿದ್ದಿತೋ ಕತ್ತಲೆಯನ್ನು ಕಳೆಯುವ ಆ ಜ್ಯೋತಿಯಾದ ಸರ್ವಜ್ಞನನ್ನು ವಂದಿಸುತ್ತೇನೆ)

ಹಾಗೆಯೇ ಭಟ್ಟಾಕಳಂಕನ ಶಬ್ದಾನುಶಾಸನದ ಪ್ರಾರಂಭದ ಪದ್ಯವೂ ಹೀಗಿದೆ–

**ನಮಃ ಶ್ರೀ ವರ್ಧಮಾನಾಯ ವಿಶ್ವವಿದ್ಯಾವ ಭಾಸಿನೇ**
**ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್॥**

(ಸರ್ವಭಾಷಾ ಮಯೀಭಾಷಾ ಯಾರ ಮುಖಕಮಲದಿಂದ ಹೊರಟಿತೋ ಆ ವಿಶ್ವವಿದ್ಯೆಯಿಂದ ಹೊಳೆಯುವ ಶ್ರೀ ವರ್ಧಮಾನನಿಗೆ ನಮಸ್ಕಾರ)

ಹೀಗಿರುವಾಗ 'ಸರ್ವಭಾಷಾ ಸರಸ್ವತಿ' ಎನ್ನುವ ಕಲ್ಪನೆ ಇರುವ ಸಂಸ್ಕೃತಿಗಳಲ್ಲಿ 'ಮೂಲ' ಎನ್ನುವ ಕಲ್ಪನೆಯೇ ಸೈದ್ಧಾಂತಿಕವಾಗಿ ಅತಾರ್ಕಿಕವಾದುದು. ಅದಲ್ಲದೇ ಕವಿಯು ಪ್ರಜಾಪತಿಗೆ ಸಮಾನವಾದವನು ಎಂದು ಭಾರತೀಯ ಕಾವ್ಯಮೀಮಾಂಸೆ ಖಚಿತವಾಗಿ ಘೋಷಿಸುತ್ತದೆ. ಈ ಕಲ್ಪನೆಯೇ ಪಾಶ್ಚಾತ್ಯರಲ್ಲಿ ಇಲ್ಲ. ತೊಡಕು ಆರಂಭವಾಗಿರುವುದೇ ಇಲ್ಲಿ. ಕವಿಯು ಪ್ರಜಾಪತಿಗೆ ಸಮಾನನಾದವನು ತನಗೆ ತೋಚಿದ ಹಾಗೆ ಚಿತ್ರಿಸುವುದಕ್ಕೆ ಸಮರ್ಥನಾದವನು ಎಂದು ಹಳಗನ್ನಡ ಕವಿಗಳು ನಂಬಿದವರು. ಹಾಗಾದುದರಿಂದ ಯಾರು ಯಾರನ್ನು ಅನುವಾದ ಮಾಡಿದರು ಅನುಸರಿಸಿದರು ಎನ್ನುವ ಪ್ರಶ್ನೆಯೇ ಬರುವುದಿಲ್ಲ. ಅವು ಅನುವಾದಗಳಲ್ಲ, ರೂಪಾಂತರಗಳಲ್ಲ. ವಿಮರ್ಶಕರು ಹೇಳಿದ ಮಾತ್ರಕ್ಕೆ ಅವುಗಳನ್ನು ಹಾಗೆ ನೋಡಬೇಕೆಂದು ಶಾಸನವೂ ಇಲ್ಲ. ಕುರ್ತಕೋಟಿಯಾದಿಯಾಗಿ ಈ ರೀತಿಯ ಚಿಂತಕರು ಕ್ರಿಶ್ಚಿನ್‌ಥಿಯಾಲಜಿಯನ್ನು ಪ್ರಶ್ನಿಸುವುದೇ ಇಲ್ಲ. ಏಕೆಂದರೆ ಬ್ರಿಟೀಷರು ಇನ್ನೂರು ವರ್ಷಗಳವರೆಗೆ ತಾನೇ ನಮ್ಮನ್ನಾಳಿರುವುದು. ಹಾಗೆಯೇ ಈಗಲೂ ಅವರು ನಮ್ಮನ್ನು ಆಳುತ್ತಿದ್ದಾರೆ. ಗುಲಾಮರಿಗೆ ಯಾವಾಗಲೂ ಒಡೆಯನನ್ನು ಪ್ರಶ್ನಿಸಬೇಕು ಎಂಬ ಯೋಚನೆಯೇ ಬರುವುದಿಲ್ಲ. ಏಕೆಂದರೆ ಒಡೆಯರು ಮೆದುಳನ್ನೇ ಕಿತ್ತಿರುತ್ತಾರೆ. ಇನ್ನು ಕೆಲವರಿಗೆ ಅನುವಾದ ಇಲ್ಲವೇ ಭಾಷಾಂತರ ಸಿದ್ಧಾಂತಗಳ ಹಿನ್ನಲೆಯಲ್ಲಿ ಕ್ರಿಶ್ಚನ್ ಥಿಯಾಲಜಿ ಇದೆ ಎಂದರೆ ತಮ್ಮ ಸೆಕ್ಯೂಲರ್ ಮನೋಭಾವನೆಗೆ ಧಕ್ಕೆಯಾಗಿ ಜನಪ್ರಿಯತೆ ಎಲ್ಲಿ ಕುಗ್ಗಿಹೋಗುತ್ತದೋ ಎನ್ನುವ ಭಯ. ಆದುದರಿಂದ ಅದು ಗಮನಕ್ಕೆ ಬಂದರೂ ಬಾರದ ಹಾಗೆ ನಟಿಸುತ್ತಾರೆ!

ಹಾಗಾದುದರಿಂದ 'ಅನುವಾದ' (translation) ಎನ್ನುವ ಪರಿಕಲ್ಪನೆ ನಮಗೆ ಪರಿಚಿತವಾದ ಕಾಲಘಟ್ಟದಿಂದ ಮಾತ್ರವೇ–ಅಲ್ಲಿಂದ ಮುಂದಿನ–ಸಾಹಿತ್ಯವನ್ನು ಅನುವಾದ ಎಂದು ಗುರುತಿಸುವುದಕ್ಕೆ ಸಾಧ್ಯ. ಅಂತಹ ಪರಿಕಲ್ಪನೆ ಪರಿಚಯವಾಗದ ಕಾಲಘಟ್ಟವನ್ನು ಹಾಗೆ ಗುರುತಿಸಿದರೆ ಒಂದು ತಪ್ಪನ್ನು ಮಾಡಿದ ಹಾಗೆ ಆಗುತ್ತದೆ. ಯಾವ ತಪ್ಪು ಗೊತ್ತೇ– ದೇವರು ಆ ಹಣ್ಣನ್ನು ತಿನ್ನಬೇಡ ಎಂದಾಗಲೂ ಆಡಮ್ ಮತ್ತು ಈವ್ ಆ ಹಣ್ಣನ್ನು ಕಿತ್ತು ತಿಂದರು. ಹಾಗೆ ತಿಂದಮೇಲೆಯೇ ಅವರಿಗೆ ತಾವು ಗಂಡು–ಹೆಣ್ಣು ಎಂದು ತಿಳಿಯಿತು. ಆ ತಪ್ಪಿನ ಫಲವಾಗಿಯೇ ಮುಂದೆ ಆಗಬಾರದೆಲ್ಲವೂ ಆಯಿತು. ಇದು ನಾನು ಹೇಳಿರುವ ತಪ್ಪಲ್ಲ. ಬೈಬಲ್ಲೇ ಇದನ್ನು ತಪ್ಪೆಂದು ಸಾರಿ ಸಾರಿ ಹೇಳುತ್ತಿರುವುದು. ಅನುವಾದ ಎನ್ನುವ ಕ್ರಿಶ್ಚನ್‌ಥಿಯಾಲಜಿಯನ್ನು ಸಾರಿಸಾರಿ ಹೇಳುವವರು ಆ ಪ್ರಕಾರವೇ ಇದನ್ನು ತಪ್ಪು ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಆಮೆನ್!

**ಗ್ರಂಥಋಣ**

ಕರೀಗೌಡ ಬೀಚನಹಳ್ಳಿ (ಸಂ) **ಭಾಷಾಂತರ ಸಾಂಸ್ಕೃತಿಕ ನೆಲೆಗಳು** (೨೦೦೯) ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೀರ್ತಿನಾಥ ಕುರ್ತಕೋಟಿ, (೧೯೯೫), **ಕನ್ನಡ ಸಾಹಿತ್ಯ ಸಂಗಾತಿ** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಕೈಲಾಶ್ ಸಿ. ಬರಾಲ್ ಮತ್ತು ಆರ್. ರಾಧಾಕೃಷ್ಣನ್ (೨೦೦೯), **ಥಿಯರಿ ಆಫ್ಟರ್ ಡೆರಿಡಾ ರೌಟ್‌ಲೆಡ್ಜ್**, ಟೈಲರ್ ಮತ್ತು ಪಾನ್ಸಿಸ್ ಗ್ರೂಪ್, ಲಂಡನ್.

ನರಸಿಂಹಾಚಾರ್ ಡಿ.ಎಲ್ (ಸಂ), **ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಕನ್ನಡ ನಿಘಂಟು** (ಸಂ.೧), (೧೯೯೦), ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು.

ನರಸಿಂಹಾಚಾರ್ ಎಸ್.ಜಿ, **ಪಂಪ ಕವಿ ವಿರಚಿತ ಆದಿಪುರಾಣಂ** (೧೯೯೦) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಬೆಳ್ಳಾವೆ ವೆಂಕಟ ನಾರಾಣಪ್ಪ (ಸಂ) **ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ** (೧೯೯೦), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಬೈಬಲ್ ಸೊಸೈಟಿ ಆಫ್ ಇಂಡಿಯಾ, **ಸತ್ಯ ವೇದವು** ೨೦೬, ಮಹಾತ್ಮಾ ಗಾಂಧಿ ರಸ್ತೆ, ಬೆಂಗಳೂರು.

ಬೈಬಲ್ ಸೊಸೈಟಿ ಆಫ್ ಇಂಡಿಯಾ, **ಶುಭ ಸಂದೇಶ** ೨೦೬, ಮಹಾತ್ಮಾ ಗಾಂಧಿ ರಸ್ತೆ, ಬೆಂಗಳೂರು.

ಮುಗಳಿ ರಂ.ಶ್ರೀ. **ಕನ್ನಡ ವಿಮರ್ಶೆಯ ತಾತ್ವಿಕ ವಿವೇಚನೆ** (೨೦೦೯) ಪೂರ್ಣಿಮಾ ಪ್ರಿಂಟರ್ಸ್, ಚಾಮರಾಜಪೇಟೆ, ಬೆಂಗಳೂರು.

ರಾಜಾರಾಮ ಹೆಗಡೆ (ಅನು), **ಸ್ಮೃತಿ ವಿಸ್ಮೃತಿ ಭಾರತೀಯ ವಿಸ್ಮೃತಿ** (೨೦೧೦), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

❑❑

# ತೀನಂಶ್ರೀಯವರ ಲೇಖನಗಳ ಪ್ರಸಾದ ಗುಣ

– ಶಶಿಧರ ವಿಶ್ವಾಮಿತ್ರ

ದೊಡ್ಡ, ಹಳೆಯ ಗ್ರಂಥಾಲಯಗಳು ಸಮುದ್ರದ ಹಾಗೆ ಅನನ್ಯವಾದ ಮುತ್ತು ರತ್ನಗಳು, ಅಪರೂಪದ ಹವಳ, ಶಂಖ, ಕವಡೆಗಳನ್ನು ಉಡಿಯಲ್ಲಿರಿಸಿಕೊಂಡಿರುತ್ತದೆ. ಬಸವನಗುಡಿಯ ವಾಡಿಯಾ ರಸ್ತೆಯಲ್ಲಿರುವ ಭಾರತೀಯ ವಿಶ್ವಸಂಸ್ಕೃತಿ ಗ್ರಂಥಾಲಯ ಅಂತಹವುದರಲ್ಲೊಂದು ಎಂದು ನನ್ನ ತಿಳುವಳಿಕೆ. ಅಲ್ಲಿಗೆ ಆಗೀಗ ಹೋಗುವ ಅಭ್ಯಾಸವಿರುವ ನನಗೆ ಕೆಲವು ವರ್ಷಗಳ ಹಿಂದೆ ಅಕಸ್ಮಾತ್ ತೀನಂಶ್ರೀಯವರ ಭಾರತೀಯ ಕಾವ್ಯ ಮೀಮಾಂಸೆ ಎನ್ನುವ ಪುಸ್ತಕ ಕೈಗೆ ಸಿಕ್ಕಿತು. ತೀ.ನಂ. ಶ್ರೀಕಂಠಯ್ಯನವರ (೧೯೦೬–೧೯೬೬) ಹೆಸರು ನನಗೆ ಕೇಳಿ, ಓದಿ ಪರಿಚಯ. ಎ ಎನ್ ಮೂರ್ತಿರಾಯರ (ಚಿತ್ರಗಳು ಪತ್ರಗಳು), ಜಿ ಹನುಮಂತರಾಯರ (ಸಮಗ್ರ ಗದ್ಯ), ಎಸ್ ಆರ್ ರಾಮಸ್ವಾಮಿಗಳ (ದೀವಟಿಗೆಗಳು) ಮುಂತಾದ ಪುಸ್ತಕಗಳನ್ನು ಓದಿದವರಿಗೆ, ಡಿವಿಜಿ, ಮಾಸ್ತಿ, ಬೇಂದ್ರೆ, ಪುತಿನ ಅವರ ಕೃತಿಗಳ ಕಿರು ಪರಿಚಯವನ್ನಾದರೂ ಮಾಡಿಕೊಂಡಿದ್ದವರಿಗೆ ತೀನಂಶ್ರೀ ಅವರ ವ್ಯಕ್ತಿತ್ವದ ಪರಿಚಯ ತಂತಾನೆ ಆಗಿರುತ್ತದೆ. ಅವರ ಸುಂದರ ಸೌಮ್ಯ ಸ್ನೇಹಪರ ನಿಲುವಿನ ಗಾಂಭೀರ್ಯ, ಕೆನೆಮೊಸರು ಕಡೆದ ಬೆಣ್ಣೆಯಂತೆ ಹೊರಹೊಮ್ಮಿ ತೇಲುವ ವಿದ್ಯಾಸಂಪನ್ನತೆಯ ಮುಖಗಳ ಕಲ್ಪನೆಯನ್ನೂ ಮಾಡಿಕೊಳ್ಳಬಲ್ಲ ಶಕ್ತಿ ಬೆಳೆದಿರುತ್ತದೆ. ಪುಣ್ಯವಶಾತ್ ನಾನು ತನ್ನ ಪರಿಣಿತಿಯ ವಿಷಯವನ್ನಷ್ಟೇ ಕುರಿತೋದುವ, ಮಿಕ್ಕದ್ದರ ಕಡೆಗೆ ಕಣ್ಣೆಡದ ಹಲ ಕೆಲವರಂತೆ ಹಟಮಾರಿತನವಿಲ್ಲದ ಪುಸ್ತಕಮೋಹಿ. ಕಾಡು ಮೇಡು ಅಲೆಯುತ್ತ ತಾನು ಮುಟ್ಟದ ಸೊಪ್ಪೊಂದು ಬಿಟ್ಟು ಮಿಕ್ಕಕ್ಕೆಲ್ಲ ಬಾಯಿ ಹಾಕುವ ಆಡಿನ ಹಾಗೆ ನನ್ನ ಮನಸ್ಸು. ವಿಷಯ ಯಾವುದೇ ಆಗಿರಲಿ, ಆಳವಾಗಿ ವ್ಯಾಸಂಗ ಮಾಡಿದ ಮೇಲೆ ಗ್ರಹಿಸಿದ್ದೇನು, ಗ್ರಹಿಸಿದ್ದೆಷ್ಟು, ಲೋಪವೆಲ್ಲಿ, ತೊಡಕೆಲ್ಲಿ, ಹೆಚ್ಚಿನದೇನು ಎಂದು ಮನಗಾಣಲು ಸಾಂದರ್ಭಿಕ ವಿಷಯವೊಂದನ್ನು ಎತ್ತಿಕೊಂಡು ವಿಭಿನ್ನ ದೃಷ್ಟಿಕೋನಗಳಿಂದ ಪ್ರಸ್ತುತ ವಿಷಯದೊಡನೆ ವಿವೇಚಿಸಿದ ಮೇಲೆ ಹೊಮ್ಮುವ ಹೊಸ ಸಂಗತಿಯನ್ನು ಪರಾಮರ್ಶಿಸುವ ಸಾವಧಾನ ಲೇಖಕನಿಗಿದ್ದಿರಬೇಕು. ನಂತರ ಹೊಮ್ಮುವ ಹೊಸ ತಿಳುವನ್ನು ಪರಿಚಯಿಸುವ ಇಚ್ಛೆಯಿಂದ ಅಧ್ಯಯನ–ಸ್ವಚಿಂತನ–ವಿಚಾರಮಥನ–ಅಧ್ಯಾಪನದ ದ್ವಾರಾ ವಿಷಯಸಾರಕ್ಕೆ ಊರಿಸಿ, ಸರಳ ಭಾಷೆಯಲ್ಲಿ ಇನ್ನೊಬ್ಬರಿಗೆ ತಿಳಿಯುವಂತೆ ಹೇಳುವ ಉದಾರಮನಸ್ಸಿರಬೇಕು. ಹೀಗೆ ಪರಿಚಯಿಸಿರುವ ಯಾವುದೇ ವಿಷಯವನ್ನೂ ಓದುವ ಉತ್ಸಾಹವಿರುವವನು ನಾನು.

ಅನುದಿನ ನಾವು ಓದುವ ದಿನಪತ್ರಿಕೆಯಲ್ಲಿ ನಮಗಿಚ್ಛೆ ಬಂದದ್ದನ್ನೇ ಓದುತ್ತೇವೆಯೇ? ಏನೇನೋ ಕಾರಣಕ್ಕೆ ಸಂಪಾದಕರು ಕಲಮ್ಮುಗಳಲ್ಲಿ ತುರುಕುವ ಅಂಕಣಗಳನ್ನು ಓದುವುದಿಲ್ಲವೆ? ಹೆಚ್ಚಿನವು ಜಾಹೀರಾತುಗಳು, ಚರ್ವಿತಚರ್ವಣ, ಕಾಡಹರಟೆಯೆನ್ನಬಹುದು. ಆದರೆ, ಕೆಲವಾದರೂ ತಟ್ಟನೆ ಎಲ, ಎಷ್ಟು ಒಳ್ಳೆಯ ಲೇಖನ ಎಂದುಕೊಳ್ಳುವದಿಲ್ಲವೆ? ಹಾಗೆ, ಕಾವ್ಯಾಭ್ಯಾಸಿಯಾಗಿರದ ನನಗೆ, ಭಾಷೆಗೆ ವ್ಯಾಕರಣದಂತೆ ಕಾವ್ಯವನ್ನು ಕುರಿತಾಡುವ ತೀನಂಶ್ರೀಯವರ ಭಾರತೀಯ ಕಾವ್ಯ ಮೀಮಾಂಸೆ ಎನ್ನುವ ಪುಸ್ತಕವನ್ನು ತೆಗೆದುಕೊಳ್ಳುವುದೋ ಬಿಡುವುದೋ ಎನ್ನುವ ಶಂಕೆ ಮೂಡಲೇ ಇಲ್ಲ. ಒಡನೆ ಮನೆಗೆ ತಂದು ಓದಿದೆ, ಮತ್ತೂ ಓದಿದೆ. ಒಂದಷ್ಟು ಟಿಪ್ಪಣಿಯನ್ನೂ ಮಾಡಿಕೊಂಡೆ. ಕೃತಿಯ ಪ್ರತಿ ಪದ, ಸಾಲು ಮತ್ತು ಪುಟದಲ್ಲೂ ಪುರಾಭಾರತೀಯರ ಕಾವ್ಯಕೃಷಿಯ ಪರಂಪರೆಯ ಅನೇಕ ಮುಖಗಳ ಪರಿಚಯವನ್ನು ತೀನಂಶ್ರೀ ಮಾಡಿದ್ದರು. ಕಾಲೇಜಿನ ಪಠ್ಯಗಳನ್ನು ಬಿಟ್ಟರೆ ಕಾವ್ಯಾಭ್ಯಾಸವನ್ನೇ ಮಾಡದ ನನ್ನನ್ನೂ ತೀನಂಶ್ರೀಯವರ ಸ್ವತಃ ತಾವು ಅಸ್ಥೆಯಿಂದ ಪ್ರೀತಿಯಿಂದ ಅಭ್ಯಸಿಸಿದ್ದನ್ನು ಎಲ್ಲರಿಗೂ ಅಷ್ಟೇ ಪ್ರೀತಿಯಿಂದ ತಿಳಿಸಿಕೊಡುವ ಉದಾರ ಶೈಲಿ ಹಿಡಿದಿಟ್ಟಿತು. ಓದಿದಷ್ಟೂ ಮತ್ತೂ ಓದುವ ಆಸೆ ಹುಟ್ಟಿ ಟಿಪ್ಪಣಿ ಮಾಡಿಕೊಳ್ಳುವಾಗ ಪ್ರತಿ ಸಾಲನ್ನೂ ನನಗೇ ಬರೆದಿದ್ದಾರೋ, ಸ್ವತಃ ತೀನಂಶ್ರೀಯವರೆ ಬೆನ್ನ ಹಿಂದೆ ನಿಂತು ತಿಳಿಯಿತೆ ಎಂದು ಪಿಸುಗುಡುತ್ತಿದ್ದಾರೋ ಎನ್ನುವ ಅನ್ಯೋನ್ಯತಾ ಭಾವ ಮೂಡಿಕೊಂಡಿತು.

ವಿಷಯದ ಹಿಡಿತ ಅವರದ್ದೆಷ್ಟೆಂದರೆ ಯಾವುದೇ ಪುಟದ ಯಾವುದೇ ಸಾಲನ್ನೂ ಹಗುರವಾಗಿ ತೆಗೆದುಕೊಳ್ಳುವ

# ೩೬೮, ೪ನೇ ಮುಖ್ಯರಸ್ತೆ, ಬಿಎಸ್‌ಕೆ ೩ನೇ ಹಂತ, ೩ನೇ ಫೇಸ್, ೨ನೇ ಬ್ಲಾಕ್, ಬೆಂಗಳೂರು ೫೬೦ ೦೮೫

ಹಾಗಿರಲಿಲ್ಲ. ಶಬ್ದದ ನಾದಮಯತೆ ಮತ್ತು ಅರ್ಥವಂತಿಕೆಗೆ ಮನಸೋತ 'ಸುಸಂಸ್ಕೃತರ' ಹೃದಯದಿಂದ ಕೋಡಿ ಹರಿಯುವ ರಸಗಳನ್ನು ಮಾತಿಗಿಡುವ ಕಾವ್ಯಕೃಷಿಯ ಮಂಥನ ಕೃತಿಯುದ್ದಕ್ಕೂ ನಡೆದಿತ್ತು. ನುಡಿ ಎಂದರೆ ಶಬ್ದದ ಅತಿ ಘನಸಾರ ರೂಪವಾದ, ವ್ಯಕ್ತದಿಂದ ಅವ್ಯಕ್ತಕ್ಕೆ ಕೈಚಾಚುವ ಕಾವ್ಯ ಎನ್ನುವ ಲಯಬದ್ಧ ನುಡಿ ಮಣಿಗಳ ಹರಿವಿನ ಆಳ–ಅಗಲ ತೆರ–ವಿಸ್ತರಗಳನ್ನು, ಆ ಹರಿವಿನ ಒಳಗೆ ಒಸರುವ ಛಂದಸ್ಸುಗಳ ಹಂದರಗಳನ್ನು, ಒಡಮೂಡಿಸುವ ಸೌಂದರ್ಯಗಳ ವಿವಿಧ ಪರಿಗಳನ್ನು, ಹರಳುಗಟ್ಟಿಸುವ ರಸಪಾಕ ವಿಶೇಷಗಳನ್ನು ನಮ್ಮ ಪುರಾತನರು ಎಂತಹ ಗೌರವಾದರಗಳಿಂದ ಅನ್ವೇಷಿಸಿದ್ದಾರೆ, ತಂತಾನೆ ಜನಿಸುವ ಲಯವನ್ನು ಎಷ್ಟು ಪ್ರೀತಿಯಿಂದ ಶುಶ್ರೂಷೆ ಮಾಡಿದ್ದಾರೆ, ತಮಗೆ ಆಗಾಗ ಆಗುತ್ತಿರುವ ಅನುಭವಗಳ ಸಾರಸರ್ವವನ್ನು ಎಷ್ಟು ಸಂಯಮ ಮತ್ತು ಸತತಾಭ್ಯಾಸದಿಂದ ಆತ್ಮ ತನ್ಮತೆಯ ತಮ್ಮೊಳಗಾಗಿಸಿಕೊಂಡು ಪ್ರಿಯವಾದ ಪದ ವಿವರಗಳಿಂದ ಸಿಂಗರಿಸಿ ಉತ್ಸರ್ಗಗಳೆಡೆಗೆ ಸಂಚರಿಸಿದ್ದಾರೆ ಎನ್ನುವುದರ ಪರಿಚಯವಾಗಿ ನನ್ನೆದೆ ಉಬ್ಬಿತು. ಇವೆಲ್ಲವನ್ನೂ ನನಗಿಂತ ಸಾವಿರಾರು ಪಟ್ಟು ಹೆಚ್ಚಿನ ಸಾವಧಾನದಿಂದ ತಾವು ಅನುಭವಿಸುವಷ್ಟರಿಂದ ತೃಪ್ತರಾಗದೆ, ನಮ್ಮಂಥ ಪಾಮರರಿಗೆ ಪರಿಚಯಿಸುವ ಉದ್ದೇಶದಿಂದ ತೀನಂಶ್ರೀಯವರು ಎಂತಹ ಮೃಷ್ಟಾನ್ನ ವನಭೋಜನವನ್ನು ನಮಗೆ ಉಣಬಡಿಸಿದ್ದಾರೆ ಎನ್ನುವ ಋಣೀಭಾವ ನನ್ನಲ್ಲಿ ಹುಟ್ಟಿತು. ಇಂತಹ ಪುಸ್ತಕವನ್ನು ಇದುವರೆಗೂ ಓದಲಿಲ್ಲವಲ್ಲ, ಆಗಾಗ ತೆಗೆದು ಓದಬೇಕೆನ್ನಿಸುತ್ತದಲ್ಲ, ಕೊಂಡುಕೊಂಡು ಮನೆಯಲ್ಲಿಟ್ಟುಕೊಳ್ಳಲೆ ಎನ್ನುವಂತೆ ಮನಸ್ಸು. ಇಂತಹ ಅಧ್ಯಾಪಕರ ಅಡಿ ವಿದ್ಯಾರ್ಥಿಯ ಕಲಿಕೆ ಹೇಗೆ ಹದಗೊಳ್ಳುತ್ತದೆ, ವಿದ್ಯೆಯ ವಾಂಛೆ ಬಲಿತು ಹದವಾಗಿ, ಅವನ ಅಭಿವ್ಯಕ್ತಿ ಹಲವು ಕವಲುಗಳಲ್ಲಿ ಹರಿಯುತ್ತ ಪರಿಷ್ಕಾರಗೊಳ್ಳುತ್ತದೆ; ಫಲವಾಗಿ ಮುಂದಿನ ಪೀಳಿಗೆಯ ನುಡಿಯ ಒಟ್ಟಾರೆ ಬಳಕೆಯ ಶ್ರುತಿಫಲ ಮಾಗಿ ಸಂಸ್ಕಾರಗೊಳ್ಳುತ್ತದೆ, ಅನಾಯಾಸವಾಗಿ ಅನುವರ್ಧಿಸುತ್ತದೆ ಎಂದುಕೊಳ್ಳುತ್ತಿದ್ದೆ.

ನನ್ನ ಮನೆಗೆ ಆಗಾಗ ಬರುವ ಎಸ್ ವಿ ಶಾಮರಾವ್ ಎನ್ನುವವರು ಹವ್ಯಾಸಿ ಲೇಖಕರು ಮತ್ತು ಉತ್ತಮವೆನ್ನಿಸಿದ ಉಪನ್ಯಾಸ ಮತ್ತು ಪ್ರವಚನಗಳಿಗೆ ಹೋಗಿಬರುವ ಅಭ್ಯಾಸವುಳ್ಳವರು. ಅವರ ವಾಸ ಮೈಸೂರಿನಲ್ಲಿ. ಯಾವುದೋ ಸಂದರ್ಭದಲ್ಲಿ ತೀನಂಶ್ರೀಗಳ ಮಾತು ಬಂದಾಗ ಅವರು ಹೀಗೆಂದರು. 'ನನಗೆ ಒಳ್ಳೆಯ ವಾಗ್ಮಿಗಳ ಉಪನ್ಯಾಸ, ತಿಳಿದಿರುವ ಹಿರಿಯರ ಪ್ರವಚನ ಎಂದರೆ ತುಂಬಾ ಇಷ್ಟ. ಮೈಸೂರಿನಲ್ಲಿ ಇಂತಹವು ಆಗಾಗ ಜರುಗುತ್ತಲೇ ಇರುತ್ತಿರುತ್ತದೆ. ಟಿವಿಗಳು ಅಬ್ಬರದ ಮೈಕುಗಳು, ಆಡಂಬರದ ಸ್ಟೇಜುಗಳು ಇಲ್ಲದ ಕಾಲದಲ್ಲಿ ನಾನು ಅದ್ಭುತ ವಾಗ್ಮಿಗಳ, ಚೇತೋಹಾರಿ ಪ್ರವಚನಕಾರರ ನೂರಾರು ಉಪನ್ಯಾಸ, ಪ್ರವಚನಗಳನ್ನು ಕೇಳಿದ್ದೇನೆ. ಎಷ್ಟೋ ಪ್ರವಚನ ಮಂದಿರಗಳಲ್ಲಿ ಮೈಕು ಸಹ ಇರುತ್ತಿರಲಿಲ್ಲ. ವೇದಿಕೆಯ ಮೇಲೆ ಒಂದು ಮೇಜು ಒಂದೆರಡು ಕುರ್ಚಿ, ಅಥವ ಒಂದು ಜಗಲಿಯ ಮೇಲೆ ಕಾಲುಮಣೆ ಮತ್ತು ವ್ಯಾಸಪೀಠ, ಇಷ್ಟೇ ಸಜ್ಜು. ಪ್ರಚಾರದ ಅಬ್ಬರಗಳಿಲ್ಲದ ಆ ಕಾಲದ ಮಹಿಮೆಯೇ ಹಾಗಿತ್ತೋ ಏನೋ, ಘನವಾದ ವಿದ್ವಾಂಸರು ಮಾಡುತಿದ್ದ ಉಪನ್ಯಾಸ ಅಥವ ಪ್ರವಚನಗಳು ಯಾವುದೋ ಗಾಂಭೀರ್ಯದಲ್ಲಿ ನಡೆಯುತ್ತಿದ್ದವು. ಅಪರೂಪಕ್ಕೆ ಹೊರತು ಹೆಚ್ಚಿನ ಉಪನ್ಯಾಸಕಾರರಲ್ಲಿ ಸ್ವಯಾರ್ಜಿತ ವಿದ್ವತ್ತು ಇರುತ್ತಿತ್ತು. ಒಗಟೊಗಟಾಗಿ ಮಾತನಾಡುತ್ತ ವಿಷಯವನ್ನು ಗಹನ ಮಾಡದೆ ತಿಳಿಯಾಗಿ ಹೇಳುವ ಸಾಮರ್ಥ್ಯ ಮತ್ತು ತಿಳಿಸಿಕೊಡುವ ಉದಾರತೆ ಮೇಳವಿಸಿರುತ್ತಿತ್ತು. ತಿಳಿಸುವ ಉತ್ಸಾಹದಲ್ಲಿ ಚೆನ್ನಾಗಿ ವ್ಯಾಸಂಗ ಮಾಡಿಕೊಂಡು ಬರುವ ವಿನಯ ಪ್ರಸಿದ್ಧ ವಿದ್ವಾಂಸರಲ್ಲೂ ಇರುತ್ತಿತ್ತು. ಹೆಚ್ಚಿನ ಕೇಳುಗರಲ್ಲಿಯೂ ಅಷ್ಟೆ, ಹೊಸ ವಿಷಯವನ್ನು ತಿಳಿಯುವ ಹಸಿವು ಇರುತ್ತಿತ್ತು. ಇದರಿಂದ ಅನ್ಯ ಕಾಲಕ್ಷೇಪ ಮಾಡದೆ ಕೇಳಿಗರು ಕಿವಿಗೊಟ್ಟು ಕೇಳುತ್ತಿದ್ದರು. ಪರಿಶ್ರಮಿಗಳಾದ ದೊಡ್ಡವರು ಮಾತನಾಡುವಾಗ ನಮ್ಮ ಮೈ ಮರೆಯಾಗಿ ಮನಸ್ಸು ತಂತಾನೆ ಅರಳಿಬಿಡುತ್ತಿತ್ತು. ನೀರಸ ಎಂದುಕೊಂಡ ವಿಷಯದಲ್ಲೇ ಇವರು ಎಷ್ಟು ರಸಗಳನ್ನು ಹಿಂಡಿ ತೆಗೆಯುತ್ತಿದ್ದಾರೆ, ನಮಗೆ ತಿಳಿಯದ ಎಷ್ಟೊಂದು ಮುಖಗಳ ಪರಿಚಯಗಳನ್ನು ಮಾಡಿಸುತ್ತಿದ್ದಾರೆ, ಈ ಒಂದು ಸಣ್ಣ ವಿಷಯಕ್ಕೆ ಇಷ್ಟೊಂದು ಮಗ್ಗುಲುಗಳಿವೆಯೆ? ಎಷ್ಟೆಲ್ಲ ಚಿಂತನದ ಸಾಧ್ಯತೆಗಳಿವೆ ಎನ್ನುವ ವಿಸ್ಮಯ ಮೂಡಿಕೊಳ್ಳುತ್ತಿತ್ತು. ವಿಷಯಸ್ವಾದನದಲ್ಲಿ ಮನಸ್ಸು ಅರಳಿಕೊಂಡು ನಿಜವಾದ ಅರಿವು ನಮಗಾಗಿದೆ ಎನ್ನುವ ಸಂತೋಷದಿಂದ ನಮ್ಮ ಮನಸ್ಸು ಹಿಗ್ಗಿಬಿಡುತ್ತಿತ್ತು. ಇಂಥ ಅನೇಕ ಉಪನ್ಯಾಸಗಳನ್ನು ಕೇಳಿ ಸಂತೋಷಪಟ್ಟಿದ್ದೇನೆ. ಇಂತಹ ಘನವಾದ ಉಪನ್ಯಾಸಕರಲ್ಲಿ ತೀನಂಶ್ರೀಗಳು ಮೇಲೆದ್ದು ನಿಲ್ಲುತಾರೆ. ಮೊದಲಿಗೆ ಅವರ ಆಕಾರ ಮತ್ತು ನಿಲುವೇ ನೋಡಲಿಕ್ಕೆ ಚೆನ್ನ. ಒಳ್ಳೆಯ ಮೈಬಣ್ಣ. ಸುಂದರವಾದ ಮೈಕಟ್ಟು ಅವರದ್ದು. ಶುಭ್ರವಾದ ಉಡುಗೆಯುಟ್ಟು ಹೊತ್ತಿಗೆ ಸರಿಯಾಗಿ ಬರುತ್ತಿದ್ದರು. ವೇದಿಕೆಯ ಮೇಲೆ ನಿಂತ ಕ್ಷಣದಿಂದ ಪ್ರಸನ್ನವಾದ ಅವರ ವದನ ತಿಳಿಸಿಕೊಡುವ ಚೈತನ್ಯದಲ್ಲಿ ಅದ್ದಿಕೊಂಡ ಹಾಗೆ ಅರಳಿಬಿಡುತ್ತಿತ್ತು. ಸುತ್ತು ಬಳಸದೆ ನೇರವಾಗಿ ವಿಷಯ ಪ್ರಸ್ತಾವನೆಗೇ ಬಂದುಬಿಡುವ ಭಾವನಾಪುಷ್ಟಿ ಅವರ ಧ್ವನಿಯಲ್ಲಿರುತ್ತಿತ್ತು. ಅವರದ್ದು ಶುರುವಿನಿಂದ ಕೊನೆಯವರೆಗೂ ಏಕಸ್ವರವೋ ಎನ್ನುವ ಭಾವೋದ್ವೇಗರಹಿತ, ಆದರೆ ಹದಶೃತಿಯಲ್ಲಿದ್ದ ಧ್ವನಿ. ವಿಷಯ ಯಾವುದೇ ಆಗಲಿ, ಅದರ ಆಳ ನಿರಾಳ ಸರ್ವವನ್ನೂ ಅಂಗೈಯ ನಲ್ಲಿಕಾಯನ್ನು ನೋಡುತ್ತಿರುವ ನಿಶ್ಚಯಜ್ಞಾನದಿಂದ ಅದಕ್ಕೆ ನುಡಿಯ ಲಕ್ಷಣಗಳನ್ನು ಕಟ್ಟುತ್ತಿದ್ದರು. ಎಂದೂ ಯಾವ ಪದಕ್ಕೂ ಅವರು ತಡವರಿಸಿದ್ದನ್ನು ನಾನು ನೋಡಲಿಲ್ಲ. ಅವರಲ್ಲಿದ್ದ ಶಬ್ದಸಂಪತ್ತು ಅದೆಷ್ಟು ದೊಡ್ಡದೆಂದರೆ ವಿಷಯ

ಯಾವುದೇ ಆಗಿರಲಿ, ಒಂದು ಪದ ಹೆಚ್ಚು ಕಡಿಮೆ ಆಗದ ಹಾಗೆ, ಅನಿಚ್ಚಿತ ನುಸುಳದ ಹಾಗೆ, ಸಂಧರ್ಭಕ್ಕೆ ಅತ್ಯುಚಿತವಾದ ಪದವನ್ನು ಮಾತ್ರ ಸ್ಫುರಿಸಿ ಶಬ್ದರೂಪದ ಗೊಂಬೆಯಾಗಿ ಮಾರ್ಪಟ್ಟು ಹೊರಹೊಮ್ಮುತ್ತಿತ್ತು. ಉದ್ದುದ್ದ ವಾಕ್ಯಗಳನ್ನಾಡುತ್ತಾ ಕೇಳಿಗರನ್ನು ಮೋಡಿ ಮಾಡುವ ವಾಗ್ಮಿತೆಯಿಲ್ಲದೆ ಅವರ ಉಪನ್ಯಾಸ ವಿಷಯಸ್ವಾರಸ್ಯ ಮತ್ತು ಅರ್ಥವಂತಿಕೆಯಿಂದ ಸಂಭ್ರಮಿಸುತ್ತಿತ್ತು. ಅವರು ಹೇಳುತ್ತಿರುವುದು ತನ್ನೊಬ್ಬನಿಗೆ ಮಾತ್ರ ಎನ್ನುವ ಆತ್ಮೀಯತೆ ಪ್ರತಿ ಕೇಳಿಗರಲ್ಲಿ ತಂತಾನೆ ಅರಳಿಕೊಳ್ಳುತ್ತಿತ್ತು. ಅವರ ಉಪನ್ಯಾಸ ಕೇಳಿ ಅದೆಷ್ಟೋ ವರ್ಷಗಳಾಗಿವೆ. ಉಪನ್ಯಾಸಕಾರರೆಂದರೆ ಅವರು, ಉಪನ್ಯಾಸವೆಂದರೆ ಅವರದ್ದು ಎಂದು ಈಗಲೂ ಅನ್ನಿಸುತ್ತದೆ..'

ನಹಿ ಜ್ಞಾನೇನ ಸದೃಷಂ, ಜ್ಞಾನಕ್ಕೆ ಸಮನಾದದ್ದು ಇಲ್ಲ; ವಿಶ್ವವಿದ್ಯಾನಿಲಯಗಳು ಜ್ಞಾನದ, ಜ್ಞಾನಿಗಳ, ಜ್ಞಾನಪ್ರಸರಣದ ಕೇಂದ್ರ; ನುಡಿಯ, ನಾಡಿನ ಘನತೆಯನ್ನೆತ್ತಿ ಹಿಡಿಯುವ ವಿದ್ಯಾತವನಿಧಿಗಳ ನೆಲೆ ಎನ್ನುವುದನ್ನು ಅತ್ಯುಚ್ಚ ಮಟ್ಟದಲ್ಲಿ ಮೆರೆಯುತ್ತಿದ್ದ ಕಳೆದ ಶತಮಾನದ ಪೂರ್ವಾರ್ಧ ಭಾಗದಲ್ಲಿದ್ದವರು ತೀ.ನಂ.ಶ್ರೀ. ಜೀವನದುದ್ದಕ್ಕೂ ಅಧ್ಯಯನ–ಅಧ್ಯಾಪನಕ್ಕೆ ಮುಡಿಪಿಟ್ಟ ಅವರು ಎಷ್ಟು ಉಪನ್ಯಾಸಗಳನ್ನು ಮಾಡಿದ್ದರೋ! ಉಪನ್ಯಾಸಕಾರರಷ್ಟೇ ಅಲ್ಲದೆ ಅವರು ನೂರಾರು ಲೇಖನಗಳನ್ನು ಬರೆದಿದ್ದಾರೆ. ವಿವಿಧ ಕಾಲಗಳಲ್ಲಿ ವಿವಿಧೋದ್ದೇಶದಿಂದ ಅವರು ರಚಿಸಿದ ಲೇಖನಗಳನ್ನು ತೀ.ನಂ.ಶ್ರೀ. ಸಮಗ್ರ ಗದ್ಯ (ಕನ್ನಡ ಪ್ರಾಧಿಕಾರ, ೨೦೦೬) ಎನ್ನುವ ೭೬೪ ಪುಟಗಳ ಬೃಹತ್ಸಂಪುಟದಲ್ಲಿ ನಾಡಿನ ಸರ್ಕಾರ ಹೊರತಂದಿದೆ. ಕೃತಿಯ ಆರಂಭದಲ್ಲಿ ರಾಷ್ಟ್ರಕವಿ ಜಿ ಎಸ್ ಶಿವರುದ್ರಪ್ಪನವರು 'ಎರಡು ಮಾತು' ಎನ್ನುವ ಶೀರ್ಷಿಕೆಯಡಿ ಹೀಗೆಂದಿದ್ದಾರೆ: 'ಪ್ರೊ. ತೀ.ನಂ. ಶ್ರೀಕಂಠಯ್ಯನವರು ನವೋದಯ ಸಾಹಿತ್ಯ ಸಂದರ್ಭದಲ್ಲಿ ಕನ್ನಡದ ವಿದ್ವತ್ತು ಮತ್ತು ವಿಮರ್ಶೆಗೆ ಭದ್ರವಾದ ಬುನಾದಿಯನ್ನು ಹಾಕಿದ ಮೊದಲಿಗರಲ್ಲಿ ಒಬ್ಬರು. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಈ ಮೂರೂ ಭಾಷಾಸಾಹಿತ್ಯದ ಪರಿಣಾತಿಯಿಂದ ಬರೆಯಬಲ್ಲ ಅವರ ಸಾಮರ್ಥ್ಯವು ತುಂಬಾ ಗಟ್ಟಿಮುಟ್ಟಾದ ಮತ್ತು ಎಲ್ಲ ಕಾಲಕ್ಕೂ ನಿಲ್ಲಬಲ್ಲಂಥ ಕೆಲವು ಕೃತಿಗಳನ್ನು ನೀಡಿದೆ. ಯಾವುದೇ ವಿಷಯವನ್ನು ಕುರಿತು ಬರೆಯುವ ಅಥವ ಮಾತನಾಡುವ ಮುನ್ನ ಅದು ನಿಷ್ಕೃಷ್ಟವಾಗಿ ಖಚಿತವಾಗುವವರೆಗೂ ತಡೆ ಹಿಡಿಯುವ ತಾಳ್ಮೆ, ಬರೆದುದನ್ನು ಮತ್ತೆ ಮತ್ತೆ ಪರಿಷ್ಕರಿಸುವ ಎಚ್ಚರ, ಬರೆದುದನ್ನು ಪ್ರಕಟಿಸುವ ಬಗ್ಗೆ ಅವರಿಗಿದ್ದ ಸಂಯಮ– ಇತ್ಯಾದಿಗಳಿಂದಾಗಿ, ನವೋದಯದ ಉತ್ಸಾಹ, ಆವೇಶ, ಪ್ರಕಟನೆಯ ಕಾತುರ, ಹೆಸರಿನ ಹಂಬಲ, ಈ ಎಲ್ಲವುಗಳಿಂದ ವಿಮುಖವಾದ ಒಂದು ಚಿಂತನಶೀಲ ಸ್ತಿಮಿತ ಮನಸ್ಸಿನ ಹದವನ್ನು ಕಾಯ್ದುಕೊಂಡವರು ಸಾಹಿತ್ಯ, ವಿಮರ್ಶೆ, ಛಂದಸ್ಸು, ವ್ಯಾಕರಣ, ಭಾಷಾಶಸ್ತ್ರ, ಸಂಶೋಧನೆ, ನಿಘಂಟು– ಮೊದಲಾದ ಕ್ಷೇತ್ರಗಳಲ್ಲಿ ಕೃಷಿ ಮಾಡಿದ ಬಹು ದೊಡ್ಡ ವಿದ್ವಾಂಸರೆಂದು ಹೆಸರು ಮಾಡಿದ್ದರೂ, ಅವರು ತಮ್ಮೊಳಗಿನ ಕವಿಯನ್ನು ಯಾವತ್ತೂ ಕಳೆದುಕೊಳ್ಳಲಿಲ್ಲ... ಗಮನಿಸಬೇಕಾದ ಮಾತೆಂದರೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಭಾಷಾವಿಜ್ಞಾನವನ್ನು ಒಂದು ಅಧ್ಯಯನ ವಿಷಯವನ್ನಾಗಿ ಪ್ರವೇಶಗೊಳಿಸಿ ಅದಕ್ಕೊಂದು ಭದ್ರವಾದ ನೆಲೆಗಟ್ಟನ್ನು ಕಲ್ಪಿಸಿದವರು ತೀ. ನಂ. ಶ್ರೀಕಂಠಯ್ಯನವರು.. ಹಾಗಯೇ ಕನ್ನಡ ನಿಘಂಟುವಿನ ಶಾಸ್ತ್ರೀಯ ತಳಹದಿಯನ್ನು ಹಾಕಿದವರೂ ಅವರೇ..

'... ಪಾಂಡಿತ್ಯ ಎಂದರೆ ವಿಷಯ ರಾಶಿಯ ಸಂಗ್ರಹವಲ್ಲ, ಆ ರಾಶಿ ಬೇಕೇ ಬೇಕು. ಆದರೆ ಅಷ್ಟೇ ಸಾಲದು. ಆ ವಿವಿಧ ವಿಷಯಗಳಲ್ಲಿ ಮರೆಯಾಗಿರುವ ಸಂಬಂಧಗಳನ್ನು ಊಹಿಸಿ ಗ್ರಹಿಸಿ ಎಳೆಗಳ ತೊಡಕುಗಳನ್ನು ಬಿಡಿಸಿ ಕೂಡಿಸಿ ತತ್ತ್ವವನ್ನು ಬೆಳಕಿಗೆ ತರುವ ಸಂಯೋಜಕ ಪ್ರತಿಭೆಯೂ ಅವಶ್ಯವಾಗಿ ಬೇಕು' – ಇದು ತೀ. ನಂ. ಶ್ರೀಯವರು ತಮ್ಮ ಮಿತ್ರರಾದ ಪ್ರೊ ಡಿ. ಎಲ್. ನರಸಿಂಹಾಚಾರ್ಯರ ಗೌರವ ಗ್ರಂಥಕ್ಕೆ ಬರೆದ ಲೇಖನದಲ್ಲಿ ನಿಜವಾದ ವಿದ್ವತ್ತನ್ನು ನಿರ್ವಚಿಸಿದ ಬಗೆ..'

ಸ್ವಾರಸ್ಯವೆಂದರೆ ರಾಷ್ಟ್ರಕವಿ ಜಿ ಎಸ್ ಎಸ್ ತೀನಂಶ್ರೀಯವರ ನೇರ ಶಿಷ್ಯರಾಗಿರಲಿಲ್ಲವಂತೆ. ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾದ ಮೇಲೆ ಎರಡು ವರ್ಷ ಕಾಲ ಎಂ.ಎ. ತರಗತಿಯ ವಿದ್ಯಾರ್ಥಿಗಳೊಡನೆ 'ಭಾರತೀಯ ಕಾವ್ಯ ಮೀಮಾಂಸೆ'ಯ ತರಗತಿಯಲ್ಲಿ ಕುಳಿತು ಶಿಷ್ಯತ್ವವನ್ನು 'ಗಿಟ್ಟಿಸಿ'ಕೊಂಡವರಂತೆ! ತಮ್ಮ 'ಗುರು'ಗಳ ಬಗ್ಗೆ ಈ ಅವರೊಂದು ಕವಿತೆಯನ್ನೂ ಬರೆದಿದ್ದಾರೆ. ಒಂದೆರೆಡು ಸಾಲುಗಳು:

**ನೋಡಿದರೆ ನೋಡಿದಷ್ಟೂ ಇಷ್ಟ**
**ಮಾತೂ ಮಿತ, ಖಚಿತ, ನಿಷ್ಕೃಷ್ಟ**

**ಅಚ್ಚುಕಟ್ಟಿನ, ಸ್ವಚ್ಛತೆಯ ಸಂಕೇತ**
**ಮೂಡಿದೊಂದೊದು ಕೃತಿಯ ಕೃತಾರ್ಥ**

**ಪರಿಪೂರ್ಣತೆಯ ಅತೃಪ್ತ ಅನ್ವೇಷಕ**
**ಪ್ರತಿಭೆ ಪಾಂಡಿತ್ಯಗಳ ಹದವಾದ ಪಾಕ**

**ಸಂಶಯದ ಕಡಲಲಿ ಗೋಪುರದ ದೀಪ**
**ಸದ್ದಿರದ ಸಾಧನೆಗೆ ಜೀವಂತ ರೂಪ...**

ಕನ್ನಡದ ಹಿರಿಯ ಸಾಹಿತಿ ಎಲ್ ಎಸ್ ಶೇಷಗಿರಿರಾಯರು ಹೀಗೆ ಬರೆದಿದ್ದಾರೆ: ...Not buildings of libraries or laboratories make a University what it is. Professor T. N. Sirikntiah was a teacher of whom Oxford of Harvard would have been proud... He was a genius uncommon..

೮೪ ಲೇಖನಗಳಿರುವ ಈ ಸುದೀರ್ಘ ಸಂಪುಟದಲ್ಲಿ ತೀನಂಶ್ರೀಯವರ ಅನೇಕ ಮುಖೀ ವಿವೇಚನೆಗಳಿವೆ. ಒಂದೊಂದು ಲೇಖನವೂ ಅನೇಕ ಸಲ ಓದಬಹುದು ಎನ್ನುವ ದಾರ್ಢ್ಯದಿಂದ ಬೆಳಗುತ್ತಿದೆ. ಅಚ್ಚರಿ ಎನ್ನಿಸುವುದು ಭಾಷೆಯ ಅಂತರಂಗ, ಬೆಳವಣಿಗೆ, ಅಳಿವು, ಉಳಿವುಗಳ ಬಗೆಗೂ ಅವರು ನಮಗೆ ಮನಗಾಣಿಸುವ ವಿವೇಚನೆ. ೧೯೫೬ರ ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯಲ್ಲಿ ನಡೆದ ಸಂಸ್ಕೃತ ವಿದ್ವತ್ ಪ್ರಶಸ್ತಿ ವಿತರಣ ಮಹೋತ್ಸವ ಸಂದರ್ಭದಲ್ಲಿ ತೀ.ನಂ.ಶ್ರೀಯವರು ಮಾಡಿದ ಭಾಷಣದ ಲಿಖಿತ ಸ್ವರೂಪ 'ಅಮರವಾಣಿ' ಎನ್ನುವ ಲೇಖನದಲ್ಲಿದೆ. ಅದರಿಂದಾಯ್ದ ಒಂದೆರಡು ತುಣುಕುಗಳು: '...ಮಾನವ ವ್ಯವಹಾರವು ಲೋಕದಲ್ಲಿ ತೊಡಗಿದಂದಿನಿಂದ ಎಷ್ಟೋ ಭಾಷೆಗಳು ಮೈದೋರಿವೆ, ಜನರ ನಾಲಗೆಗಳಲ್ಲಿ ನರ್ತಿಸಿವೆ, ಕಿವಿಗಳಲ್ಲಿ ಝೇಂಕರಿಸಿವೆ, ಸಾಹಿತ್ಯದಲ್ಲಿ ಉಲ್ಲೇಖಗೊಂಡಿವೆ, ಕಡೆಗೆ ಹೆಸರನ್ನು ಮಾತ್ರ ಉಳಿಸಿ ಒಮ್ಮೊಮ್ಮೆ ಅವಶೇಷವೂ ಇಲ್ಲದೆ, ಗತಿಸಿವೆ. ಈ ಸಾವಿರಾರು ಭಾಷೆಗಳಲ್ಲಿ ಸಂಸ್ಕೃತದ ಸ್ಥಾನ ಬಲು ಮಟ್ಟಿಗೆ ಅಪೂರ್ವದ್ದೆಂಬುದನ್ನು ಅದರ ವಿಷಯವಾಗಿ ಹೆಚ್ಚು ಶ್ರದ್ಧೆಯಿಲ್ಲದವರು ಕೂಡ ಒಪ್ಪಬೇಕೆಂದು ನನಗೆ ತೋರುತ್ತದೆ. ಸಂಸ್ಕೃತವು ಭರತಭೂಮಿಯಲ್ಲಿ ಜನರು ಆಡುವ ಮಾತಾಗಿ, ಸಮಾಜದ ಕೆಲವು ವರ್ಗದ ಮಕ್ಕಳಾದರೂ ಮಕ್ಕಳು ಎಳೆತನದಿಂದ ತಾಯಮಡಿಲಿನಲ್ಲಿ ಕಲಿತ ನುಡಿಯಾಗಿ, ವಿಜೃಂಭಿಸಿದ ಕಾಲವೊಂದಿತ್ತು. .. ಕಾಲದ ಪರಿವರ್ತನೆಯಲ್ಲಿ ಯಾವುದೊಂದು ಸ್ಥಿತಿಗೂ ಸ್ಥಿರತೆಯಿಲ್ಲ. ಮಹರ್ಷಿ ಪಾಣಿನಿಯ ಶಬ್ದಾನುಶಸನದ ರಕ್ಷಾಬಂಧನವಿದ್ದರೂ ಭಾಷಾಗತಿ ನಿಲ್ಲಲಿಲ್ಲ. ಪ್ರಾಕೃತಗಳು ಬೆಳೆದವು; ಅಪಭ್ರಂಶಗಳು ಅವಿರ್ಭವಿಸಿದವು; ಇಂದಿನ ಹಿಂದಿ, ಬಂಗಾಳಿ, ಮರಾಠಿ ಮೊದಲಾದ ಹತ್ತಾರು ಶಾಖೆಗಳಾಗಿ ಭಾರತೀಯ ಆರ್ಯ ಮೂಲಭಾಷೆ ಹರಡಿಕೊಂಡಿತು. ಇತ್ತ ತಮಿಳು, ತೆಲುಗು, ಕನ್ನಡ ಮೊದಲಾದ ದ್ರಾವಿಡ ಭಾಷೆಗಳಂತೂ ತಮ್ಮ ದಾರಿಯಲ್ಲಿ ಹರಿದವು. ಹೀಗಾಗಿ ಇಂದಿನ ಭಾರತದಲ್ಲಿ ಯಾವ ವರ್ಗದಲ್ಲಿ ಕೂಡ ಸಂಸ್ಕೃತವು ಪರಂಪರಾಗತವಾಗ ಮನೆ ಮಾತಾಗಿ ಉಳಿದಿಲ್ಲ..

'ಹೀಗೆಂದ ಮಾತ್ರಕ್ಕೆ ಸಂಸ್ಕೃತವು ಅಳಿಯಿತೆಂದು ಸರ್ವಾತ್ಮನಾ ಅಭಿಪ್ರಾಯವಲ್ಲ. "ಸಂಸ್ಕೃತವು ಮೃತಭಾಷೆ" ಎಂಬ ಹೇಳಿಕೆ ಕೆಲವರ ಬಾಯಿಂದ ಒಮ್ಮೊಮ್ಮೆ ಹೊರಬೀಳುವುದುಂಟು.. ಇದೊಂದು ಲಾಕ್ಷಣೋಕ್ತಿ.. ಇನ್ನೊಂದು ರೀತಿಯಿಂದ ಸಂಸ್ಕೃತವು ಪ್ರಪಂಚದ ಅನೇಕ ಜೀವಂತ ಭಾಷೆಗಳಿಗಿಂತ ಹೆಚ್ಚು ಜೀವಂತವಾಗಿ, ಅಮೃತವಾಣಿಯಾಗಿ ಕಂಗೊಳಿಸುತ್ತಿದೆಯೆಂಬುದನ್ನು ಅಷ್ಟೇನೂ ಕಷ್ಟವಿಲ್ಲದೆ ಮನಗಾಣಿಸಬಹುದು..

'ಸಂಸ್ಕೃತವು ಈಗ ಎಷ್ಟೋ ಮಟ್ಟಿಗೆ ದೇಶಭಾಷೆಗಳಲ್ಲೂ, ದೇಶ್ಯವಾಙ್ಮಯದಲ್ಲೂ ಧೃಢಮೂಲವಾಗಿ ಉಜ್ಜೀವಿಸಿದೆಯೆಂಬುದನ್ನು ಆಗಲೇ ಗಮನಿಸಿದೆವು. ಸಂಸ್ಕೃತವು ದೃಢವಾಗಿ ಉಳಿಯಬೇಕಾದರೆ ಇವು ಬೆಳೆಯಬೇಕು. ಯಾವ ಕಾಲದಲ್ಲೇ ಆಗಲಿ, ಸಂಸ್ಕೃತದ ಪ್ರೌಢವಿದ್ವಾಂಸರ ಸಂಖ್ಯೆ ವಿಪುಲವಾಗಿರಲಿಲ್ಲ. ಇನ್ನು ಮುಂದಾದರೂ ಅದು ಹೆಚ್ಚೀತೆಂಬ ನಿರೀಕ್ಷೆಗೆ ಆಧಾರವಿಲ್ಲ. ಈ ಮಿತಸಂಖ್ಯೆಯ ವಿಶಾರದರು ಶಾಸ್ತ್ರ ಸಾಹಿತ್ಯಗಳನ್ನು ಸಂಸ್ಕೃತದಲ್ಲಿ ತಮ್ಮ ಮಟ್ಟಿಗೆ ಓದಿಕೊಳ್ಳುತ್ತಾ ತೆಪ್ಪಗೆ ಕುಳಿತರೆ ಸಾಲದು. ಆನತೆ ಇವರಿಂದ ಹೆಚ್ಚಿನ ಸೇವೆಯನ್ನು ನಿರೀಕ್ಷಿಸುತ್ತದೆ. ಸಂಸ್ಕೃತದ ಜ್ಞಾನರಾಶಿಯನ್ನು ಕೃಷ್ಣರಾಜ ಸಾಗರದ ಜಲರಾಶಿಗೆ ಹೋಲಿಸಬಹುದು. ಅದು ನಿಂತಲ್ಲೇ ನಿಂತುಬಿಟ್ಟರೆ ಏನು ಸಾರ್ಥಕ. ಕಟ್ಟೆಯ ಮುಂದಿನ ಬೃಂದಾವನದಲ್ಲಿ ಬಣ್ಣಬಣ್ಣದ ಬುಗ್ಗೆಗಳನ್ನು ಚಿಮ್ಮಿಸುವುದರಿಂದಲೂ ಅದಕ್ಕೆ ಹೆಚ್ಚಿನ ಗುಣ ಬರುವುದಿಲ್ಲ. ಇಲ್ಲಿ ಅಪರಿಮಿತವಾಗಿ ಕೂಡಿಟ್ಟ ಕಾವೇರಿಯ ನೀರು ಕಾಲುವೆಗಳ ಮೂಲಕ ನಾಡಿನಲ್ಲೆಲ್ಲ ಹರಿದು, "ಪಯಿರುಗಳು ಬದುಕಾಗಿ ಹಳಲುಗಳು ಬೆಳಕಾಗಿ ಕಣ್ಣುಗಳ ಬೆಳಗಾಗಿ" ಎಲ್ಲ ಕಡೆಯಲ್ಲೂ ವ್ಯಾಪಿಸಿದಾಗಲೆ ಅದರ ಪೂರ್ಣಫಲ. ಹೀಗೆಯೇ ಸಂಸ್ಕೃತದ ಜ್ಞಾನತೀರ್ಥವನ್ನು ದೇಶಭಾಷೆಗಳಿಗೆ ಹರಿಸಿ ಜನಸಾಮಾನ್ಯಕ್ಕೆ ಮುಷ್ಟಿತುಷ್ಟಿಗಳನ್ನು ನೀಡುವ ಕಾಲುವೆಗಳಾಗಬೇಕು ತಮ್ಮಂಥ ವಿದ್ವಾಂಸರು..'

ತೀ.ನಂ.ಶ್ರೀಯವರು ಹೇಳಿ ಕೇಳಿ ಕನ್ನಡ ವಿದ್ವಾಂಸರು. ವೃತ್ತಿಯಲ್ಲಿ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಚಾರ್ಯರಾದವರು. ಪ್ರವೃತ್ತಿಯಲ್ಲಿ ಭಾಷೆಯ ಧ್ವನಿಯ ಶಬ್ದದ ಅಂತರಂಗದ ಶೃತಿಯನ್ನು ಸತತವಾಗಿ ಮೀಟುತ್ತಿರುವಂತೆ ಮನೋಹೃದಯಗಳನ್ನು ಶೃತಿ ಮಾಡಿಕೊಂಡವರು. ಆದ್ದರಿಂದ ವಿದ್ವತ್ ಸಭೆಯನ್ನು ಉದ್ದೇಶಿಸಿ ಉಪನ್ಯಾಸ ಮಾಡಲು ಸಂಸ್ಕೃತ ಮಹಾ ಪಾಠಶಾಲೆ ಇಂಥವರನ್ನು ಆಹ್ವಾನಿಸಿತಲ್ಲ ಎಂದು ಆಶ್ಚರ್ಯವಾಗುವುದಿಲ್ಲ. ಕುರಿತೋದುವ ಧೃತಿಯುಳ್ಳ, ಕಲಿಯದೆ ಕಲಿಸಹೋಗದ ಅಧ್ಯಯನಶೀಲ ಕನ್ನಡ ವಿದ್ವಾಂಸರಿಗೆಲ್ಲ ಸಂಸ್ಕೃತದ ಆಳವಾದ ಜ್ಞಾನ ಎಷ್ಟು ಅವಶ್ಯಕ; ಸ್ವಂತ ತಾನು ಕ್ಷಯಿಸಿ ಇತರರನ್ನು ಬೆಳೆಯಿಸುವ ಆ ಭಾಷೆಯ ಮಾತೃತ್ವದ ಹಿರಿತನ ತಿಳಿದಿರುತ್ತಿತ್ತು. ನುಡಿಜಗತ್ತಿನ ಲಕ್ಷಣಗಳನ್ನು ಪರಿಚಯಿಸುವ ಭಾಷಾಜ್ಞಾನ ಸಂಸ್ಕೃತಾಭ್ಯಾಸಿಗಳಿಗೆ ತಂತಾನೆ ಅಗಿಯೇ ಇರುತ್ತಿತ್ತು, ಹಾಗೆ ಆ ಪುರಾ ಭಾಷೆಯ ಬಿಕ್ಕಟ್ಟು, ತೀ. ನಂ. ಶ್ರೀಯವರು ಕನ್ನಡವೊಂದನ್ನೇ ಅಲ್ಲ, ಸಂಸ್ಕೃತ ಮತ್ತು ಇಂಗ್ಲಿಷನ್ನು ಸಹ ಸತತವಾಗಿ ಅಭ್ಯಾಸಮಾಡುತ್ತಲೇ ಇರುತ್ತಿದ್ದವರು. ಈ ಮೂರೂ ಭಾಷೆಗಳಲ್ಲಿ ಪಂಡಿತರೆನ್ನಿಸಿಕೊಳ್ಳುವ ಸಂಯಮ ಮತ್ತು ಅವಧಾನಗಳು ಅವರಲ್ಲಿ ಸ್ವಭಾವಸಹಜವಾಗಿ ಹೃದಯಸ್ಥವಾಗಿದ್ದವು ಎಂದು ಮಹಾಪಾಠಶಾಲೆಗೆ ಅರಿವಿತ್ತು. ಇಂದು ಅವರ ಉಪನ್ಯಾಸದ ಲಿಖಿತ ಪಾಠವನ್ನೋದಿದ ನಮಗೂ ತೀನಂಶ್ರೀಯವರನ್ನು ಕರೆಸಿಕೊಂಡು ಪಾಠಶಾಲೆ ಶ್ರೀಮಂತಗೊಂಡಿತು ಎಂದು ಎನ್ನಿಸದಿರದು.

ಗುರು ಎನ್ನುವ ಸತ್ವವೇನು, ಗುರುಗಳು ಹೇಗಿರಬೇಕು. ಸ್ವತಃ ಅವರೇ ಎಂಥ ಗುರುಗಳಾಗಿದ್ದರು ಎನ್ನುವುದನ್ನು ತಿಳಿಯಲು ಹೆಚ್ಚು ದೂರ ಹೋಗಬೇಕಾದ್ದಿಲ್ಲ. ಮೇಲೆ ಉದಹರಿಸಿದ ಗ್ರಂಥದಲ್ಲಿ 'ಗುರುಸ್ಮರಣೆ' ಎನ್ನುವ ಇನ್ನೊಂದು ಲೇಖನವಿದೆ. ಅದರ ಒಂದೆರಡು ತುಣುಕುಗಳು: ... ಸಂಸ್ಕೃತವನ್ನು ಐಚ್ಛಿಕ ವಿಷಯಗಳಲ್ಲಿ ಒಂದಾಗಿ ತೆಗೆದುಕೊಂಡರೆ ಹೆಚ್ಚು ಗ್ರಂಥಗಳನ್ನು ಅವಲೋಕಿಸಬಹುದು. ಕನ್ನಡವನ್ನು ದ್ವಿತೀಯ ಭಾಷೆಯಾಗಿ ಓದಬಹುದು ಎಂದು... ಮಹಾರಾಜರವರ ಕಾಲೇಜಿನ ಶಾಂತವಾದ ಮಡಿಲನ್ನು ಸೇರಿದೆನು; ಕಣ್ಣನ್ನು ತೆರೆದು ಬುದ್ಧಿಯನ್ನು ತಿದ್ದಿ ಹೃದಯವನ್ನು ಮಿಡಿದು ಬಾಳಿನ ದಾರಿಗೆ ಬೆಳಕನ್ನು ನೀಡಿದ ಗುರುವರೇಣ್ಯರನ್ನು ಕಂಡೆನು.

'ಸಂಸ್ಕೃತದ ಪ್ರಾಧ್ಯಾಪಕರಾಗಿದ್ದ ಎಂ. ಹಿರಿಯಣ್ಣನವರು ನಿರಾಡಂಬರದ ಮೂರ್ತಿ. ಇಂಗ್ಲಿಷರ ನಡೆನುಡಿಗಳು ಗಣ್ಯರನೇಕರ ಮನಸ್ಸನ್ನು ಇಂದಿಗಿಂತ ಎಷ್ಟೋ ಅತಿಶಯವಾಗಿ ಸೂರೆಗೊಂಡಿದ್ದ ಆ ಕಾಲದಲ್ಲಿ ಪಂಚೆಯನ್ನುಟ್ಟುಕೊಂಡು ಕಾಲೇಜಿಗೆ ಬರುತ್ತಿದ್ದ ಪ್ರೊಫೆಸರುಗಳು ಅತಿ ವಿರಳವಾಗಿದ್ದರು. ಆ ಅಪೂರ್ವರಲ್ಲಿ ಈ ಗುರುಗಳು ಒಬ್ಬರು. .. ಶಿಷ್ಯನ ಹೃದಯದಲ್ಲಿ ಭಕ್ತಿಯನ್ನು ಅಪ್ರಯತ್ನಿತವಾಗಿ ಉಕ್ಕಿಸುವ ಶಾಂತ ಗಂಭೀರ ಮುಖಮುದ್ರೆ, ಧೀರೋನ್ನತ ಮನೋವೃತ್ತಿ.

'ಹಿರಿಯಣ್ಣನವರ ಪಾಠ ಬಲು ಹಿತ: ವ್ಯಾಸಂಗವನ್ನು ತಪಸ್ಸಿನಂತೆ ವರ್ಷಾನುಗಟ್ಟಲೆ ಸಾಧಿಸಿಕೊಂಡು ಬಂದು ಅನೇಕ ಜ್ಞಾನಶಾಖೆಗಳಲ್ಲಿ ಪೂರ್ಣ ವಿದ್ವತ್ತನ್ನು ಅವರು ಗಳಿಸಿದ್ದರೂ ಅದನ್ನು ಕೊಂಚವಾದರೂ ಮೆರೆಸಲೊಲ್ಲರು. ಅವರ ವಿದ್ಯೆಯಷ್ಟೇ ಹಿರಿದು ಅವರ ವಿನಯ. ಅಷ್ಟು ದೊಡ್ಡ ಪಂಡಿತರು ಹೊಸದಾಗಿ ಕೆಲಸಕ್ಕೆ ಸೇರಿದ ಉಪಾಧ್ಯಾಯರಂತೆ ಪ್ರತಿ ದಿನ ಪಾಠಕ್ಕೆ ಪೂರ್ವಸಿದ್ಧತೆ ಮಾಡಿಕೊಂಡು ಬರುವುದನ್ನು ನೋಡಿ ನಮ್ಮ ಸೋಮಾರಿತನ ನಾಚಿಕೊಳ್ಳುತ್ತಿತ್ತು.. ತತ್ತ್ವಶಾಸ್ತ್ರದಲ್ಲಿ ಅವರದ್ದು ಲೋಕವಿಶ್ರುತವಾದ ಪಾಂಡಿತ್ಯ. ಈ ವಿಷಯವಾಗಿ ಅವರು ಈಚೆಗೆ ಪ್ರಕಟಿಸಿದ ಗ್ರಂಥಗಳೂ ಲೇಖನಗಳೂ ವಿದ್ವಾಂಸರಿಗೇ ಪ್ರಮಾಣಭೂತವಾದವು. .. ಭಾಷೆ, ಸಾಹಿತ್ಯ, ಇವುಗಳ ಮೀಮಾಂಸೆ – ಇದು ನನ್ನ ವ್ಯಾಸಮಗದ ಮುಖ್ಯ ವಿಷಯ. ಇದನ್ನು ಎಷ್ಟು ಚೆನ್ನಾಗಿ ವಿಷಯ ಪರಿಷ್ಕಾರವಾಗುವಂತೆ, ಸಂಶಯ ಪರಿಹಾರವಾಗುವಂತೆ, ಆಸಕ್ತಿ ಬೆಳೆಯುವಂತೆ, ಒಳನೋಟ ಬಲಿಯುವಂತೆ ಹಿರಿಯಣ್ಣನವರು ಬೋಧಿಸುತ್ತಿದ್ದರೆಂದರೆ ಘಂಟೆ ಹೊಡೆದ ಮೇಲೆ ಕೂಡ ಅವರ ಕೊಠಡಿಯನ್ನು ಬಿಟ್ಟು ಎದ್ದು ಹೋಗಲು ಕಾಲೇ ಬರುತ್ತಿರಲಿಲ್ಲ..

'ಗುರುಗಳ ಉಕ್ತಿ ಖಚಿತ, ಆದರೆ ಮೃದು. ಅವರು ಗಟ್ಟಿಯಾಗಿ ದನಿಯೇರಿಸಿದ್ದನ್ನೇ ವಿದ್ಯಾರ್ಥಿಗಳು ಅರಿಯೆವು. ಮತಿನಲ್ಲಾಗಲಿ ಬರಹದಲ್ಲಾಗಲಿ ಅವರು ವಾಗವಿಜೃಂಭಣೆಗೆ ಎಂದೂ ಮನಸೋತವರಲ್ಲ. ಮೇಲಕ್ಕೆ ಚಿಮ್ಮಿ ಬಣ್ಣಗಳನ್ನು ಕೆದರಿ ಕಣ್ಣನ್ನು ಕೋರೈಸಿ ಮತ್ತೆ ಕತ್ತಲನ್ನೇ ಬೆಳೆಸುವ ತಾರಾಮಂಡಲದಂತೆ ಅಲ್ಲ ಅವರ ಶೈಲಿ, ದೃಷ್ಟಿಗೆ ಹದವಾಗಿ ಕೋಣೆಯ ಮೂಲೆಮೂಲೆಗಳನ್ನೂ ಗಲಭೆಯಿಲ್ಲದೆ ಬೆಳಗುವ ಸ್ತಿಮಿತ ತೇಜಸ್ಸು ಅದು. ನಿಶಿತವಾದ ಒಂದೊಂದು ವಾಕ್ಯದಲ್ಲೇ ಅವರು ವಿಷಯದ- ತಿರುಳನ್ನು ಮನಮುಟ್ಟಿಸಬಲ್ಲರು; ಟೀಕೆಯನ್ನೂ ಮಾಡಬಲ್ಲರು. "Not what the Poet says, but leaves unsaid- that is the essence of Poetry". ("ಕವಿ ಕೆಲಿರುವುದಲ್ಲ, ಹೇಳದೆ ಬಿಟ್ಟರುವುದು– ಅದು ಕಾವ್ಯದ ಸಾರ"). "Dhvani is failure that succeeds". ("ಧ್ವನಿ ಸೋತು ಗೆಲ್ಲುತ್ತದೆ") "Art should not have a moral aim, but should have a moral view".' ("ಕಲೆಗೆ ನೀತಿಯ ಗುರಿ ಇರಬಾರದು, ಆದರೆ ನೀತಿಯ ದೃಷ್ಟಿಯಿರಬೇಕು")...'

ಎಂತಹ ಮಾತುಗಳು! ಯಾವುದೇ ಭಾಷೆಯ ಅಂತಃಶಕ್ತಿಯನ್ನೇ ಅನುವರ್ಧಿಸುವಂತಿರುವ ಎಂತಹ ಬರಹ! ತಿಳಿವೇ ಸ್ವತಃ ಎದ್ದು ನಿಂತು ತನ್ನ ಅಂತರಂಗವನ್ನು ಪರಿಚಯಿಸಿಕೊಡುತ್ತಿರುವಂತಿರುವ ಇಂತಹ ಉಕ್ತಿಗಳನ್ನು ತಾನೆ ಸೃಷ್ಟಿಶೀಲ ಪಾಂಡಿತ್ಯ ಎನ್ನುವುದು? ಅಧ್ಯಯನ– ಅಧ್ಯಾಪನ, ಗುರು–ಶಿಷ್ಯ ಮತ್ತವರ ನಡುವೆ ಪ್ರವೇಶಿಸುವ ವಿದ್ಯೆಯ, ಅದನ್ನು ಪ್ರಕಟಿಸಿಕೊಡುವ ಭಾಷೆಯ ಮತ್ತು ಆ ಕ್ಷಣ ಬಂದು ನೆರೆಯುವ ಕಲೆಯ ವಿವಿಧ ಸ್ತರಗಳ ಒಳತಿರುಳನ್ನು ಇಷ್ಟು ಸರಳವಾಗಿ ಇಂತಹ ಸಂಪನ್ನ ವಿದ್ವಾಂಸರಲ್ಲದೆ, ಸ್ವಯಂ ಗುರುಗಳಲ್ಲದೆ ಇನ್ಯಾರು ಹೇಳಿಯಾರು! ಅದೇ ಪ್ರಬಂಧದಲ್ಲಿ ಮುಂದುವರೆದು ಬಿ ಎಂ ಶ್ರೀಯವರನ್ನು ಕುರಿತು ಹೀಗೆನ್ನುತ್ತಾರೆ: ..'ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರಾಧ್ಯಾಪಕರು... ಶ್ರೀಕಂಠಯ್ಯನವರು ರಿಜಿಸ್ಟ್ರಾರ್ ಪದವಿಯ ಸೂತ್ರಗಳನ್ನು ಕೈಯಲ್ಲಿ ಹಿಡಿದ ಒಂದು ವರ್ಷದೊಳಗಾಗಿ ಕನ್ನಡ ಎಂ.ಎ. ತರಗತಿ ಮಹಾರಾಜ ಕಾಲೇಜಿನಲ್ಲಿ ತೆರೆಯಿತು.. ಅವರ ಕನ್ನಡ ಪಾಂಡಿತ್ಯ ಆಳವಾಗಿತ್ತು.. ಈ ಇಂಗ್ಲಿಷ್ ಸಾಹಿತ್ಯ ಪಾರಂಗತರು ಸ್ವಂತ ವ್ಯವಸಾಯದಿಂದ ಕನ್ನಡದಲ್ಲಿ ಪೂರ್ಣ ವಿದ್ವತ್ತನ್ನು ಗಳಿಸಿಕೊಂಡಿದ್ದರು. ಹಳೆಗನ್ನಡದ ಕಾವ್ಯಗಳನ್ನು – ಅಚ್ಚಾಗಿದ್ದುದು ಮಾತ್ರವಲ್ಲದೆ ಓಲೆಗರಿಯ ಪ್ರತಿಗಳಲ್ಲಿ ಅಡಗಿದ್ದುದನ್ನು ಕೂಡ– ಶ್ರದ್ಧೆಯಿಂದ ಅಧ್ಯಯನ ಮಾಡಿದ್ದರು. ಕನ್ನಡ ಸಾಹಿತ್ಯ ಬೆಳೆದ ಬಗೆಯನ್ನೂ ಅದರ ಗುಣದೋಷಗಳನ್ನೂ ದುರಭಿಮಾನಕ್ಕೆ ಎಡೆಗೊಡದಂತೆ, ಶುದ್ಧ ರುಚಿ ಬೆಳಗುವಂತೆ, ಹೊಸ ನೋಟ ತೆರೆಯುವಂತೆ ಬೋಧಿಸುತ್ತಿದ್ದರು. ಭಾಷಾಶಾಸ್ತ್ರದಲ್ಲಂತೂ ಅವರದು ಮೊನೆಯಾದ ಪ್ರಜ್ಞೆ, ಒಂದು ಕನ್ನಡ ಮಾತಿನ ಬೆನ್ನು ಹತ್ತಿ ಹೊರಟು, ಹಳಗನ್ನಡ, ಪೂರ್ವದ ಹಳಗನ್ನಡ, ಹಳೆಯ ತಮಿಳು, ಮೂಲ ದ್ರಾವಿಡ, ಸಾಧ್ಯವಾದರೆ ಇನ್ನೂ ಆಚೆಗೆ ಅದನ್ನು ಹಿಂಬಾಲಿಸಿ ನಡೆದು, ಅದರ ಚರಿತ್ರೆ ಹೃದ್ಗೋಚರವಾಗುವಂತೆ ಅವರು ನಿರೂಪಿಸುತ್ತಿದ್ದ

ವೈಖರಿಯನ್ನು ಹೇಗೆ ಮರೆಯಬಹುದು! ...ತಮ್ಮ ಎಲ್ಲ ವ್ಯಾಸಂಗದ, ವಿಚಾರದ ಫಲವನ್ನೂ ಅವರು ಶಿಷ್ಯವೃಂದಕ್ಕೆ ನಿರ್ವಂಚನೆಯಗಿ ಧಾರೆ ಎರೆದರು. ತಮ್ಮ ಉತ್ಸಾಹದ ನಂದಾದೀವಿಗೆಯಿಂದ ಶಿಷ್ಯರ – ಅಷ್ಟೇ ಏಕೆ, ತಮ್ಮ ಹತ್ತಿರ ಬಂದವರೆಲ್ಲರ – ಹೃದಯಗಳಲ್ಲಿ ಸ್ವಭಾಷಾಪ್ರೇಮದ ಹಣತೆಯನ್ನು ಹೊತ್ತಿಸಿದರು.. ಕಾಲೇಜಿನ ಮರೆಯಲ್ಲಿ ಏಕಾಂತಪ್ರಿಯರಾಗಿ ಇರುತ್ತಿದ್ದ ಈ ವಿದ್ವಾಂಸರು ಕನ್ನಡದ ಬಾವುಟವನ್ನು ಹಿಡಿದುಕೊಂಡು ಜನನಾಯಕರಾಗಿ ನಾಡನ್ನೆಲ್ಲಾ ಸುತ್ತಿದರು; ಉದ್ರೇಕಕ್ಕೆ ಅವಕಾಶವಿಲ್ಲದ ಪಾಠಪ್ರವಚನಗಳನ್ನು ನಡೆಸುತ್ತಿದ್ದವರು ತುಂಬು ಸಭೆಗಳನ್ನು ಹುರಿದುಂಬಿಸುವ ಭಾಷಣಗಳನ್ನು ಮಾಡುತ್ತಾ 'ಸಿಗನ್ನಡಂ ಗೆಲ್ಗೆ" ಎಂಬ ಮಂತ್ರವನ್ನು ಘೋಷಿಸುವ ಆಚಾರ್ಯರಾದರು.. ಇಹಲೋಕದ ವ್ಯಾಪಾರವನ್ನು ಮುಗಿಸುವುದಕ್ಕೆ ಕೆಲವೇ ನಿಮಿಷಗಳ ಹಿಂದೆ ಅವರು ಮಾತನಾಡುತ್ತಿದ್ದ ವಿಷಯ ಕೂಡ ತಮ್ಮ ಜೀವನದ ಉಸಿರಾದ ಕನ್ನಡದ ಹಿತಚಿಂತನೆಯೇ!..'

ಗುರುವಿನ ಶಕ್ತಿಯ ಅಂತರಂಗವಿರುವುದೇ ಇಲ್ಲಿ, ಘನಗೊಂಡ ಜ್ಞಾನರಾಶಿ ತನ್ನೊಬ್ಬನಲ್ಲೇ ಮಡುಗೊಳ್ಳದೆ ಎಲ್ಲರಿಗೂ ಹರಿದಿಳಿಯುವಂತೆ ಮಾಡುವ ತಪನ ಮತ್ತು ಕಾಯಕಗಳಲ್ಲಿ. ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಕನ್ನಡದ ವಿದ್ಯಾಪರಂಪರೆಯ ಕಟ್ಟಡವನ್ನು ಕಟ್ಟಿದ ಅಧ್ಯಯನಶೀಲರಲ್ಲಿ ತಳುಕಿನ ವೆಂಕಣ್ಣಯ್ಯನವರೂ ಸೇರುತ್ತಾರೆ. ಇವರು ತ ಸು ಶಾಮರಾಯರ ಹಿರಿಯಣ್ಣನೂ ಹೌದು. ವೆಂಕಣ್ಣಯ್ಯನವರ ಬಗೆಗೆ ತೀ.ನಂ.ಶ್ರೀ. ಹೀಗೆ ಬರೆದಿದ್ದಾರೆ: .. ಕನ್ನಡ ಎಂ,ಎ. ತರಗತಿಯನ್ನು ತೆರೆದ ಹಲವು ತಿಂಗಳಿಗೆ ಟಿ.ಎಸ್. ವೆಂಕಣ್ಣಯ್ಯನವರು ಕನ್ನಡ ಪರಾಧ್ಯಾಪಕರಾಗಿ ಮೈಸೂರಿಗೆ ಬಂದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡಕ್ಕೆ 'ಪ್ರೊಫೆಸರ್'ನ್ನು ನೇಮಿಸುವುದಕ್ಕೆ ಅದೇ ಮೊದಲು. ಆ ಪದವಿಗೆ ಮಾನ್ಯತೆಯನ್ನು ಸಂಪಾದಿಸಿ, ಜೊತೆಯ ಉಪಾಧ್ಯಾಯರ ಜೊತೆ ಪ್ರೀತಿ ಗೌರವಗಳನ್ನು ಆತ್ಮಗುಣದಿಂದ ಗಳಿಸಿ.. ತೆರೆಯ ಹಿಂದೆ ನಿಂತು ಸದ್ದಿಲ್ಲದೆ ದುಡಿಯುತ್ತಿದ್ದ ಸೂತ್ರಧಾರರು ವೆಂಕಣ್ಣಯ್ಯನವರು.. ಈ ಪ್ರಿಯ ಗುರುಗಳು ಹಿರಿಯ ಅಣ್ಣನಂತೆ ನಮ್ಮನ್ನು ನೋಡಿಕೊಂಡರು. ತಾವು ಹಿಂದೆ ನಿಂತು ನಮ್ಮ ಬೆನ್ನು ತಟ್ಟಿ ಕೆಲಸ ಮಾಡಿಸಿದರು. ತಮ್ಮ ಶಾಖೆಯಲ್ಲಿ ಯಾರೊಬ್ಬರಿಗೆ ಒಳ್ಳೆಯ ಹೆಸರು ಬಂದರೂ ತಮಗೇ ಬಂದಷ್ಟು ಅವರಿಗೆ ಸಂತೋಷ... ನಮ್ಮಲ್ಲಿ ಎಷ್ಟು ಪ್ರೀತಿ, ಎಷ್ಟು ಸಲುಗೆ ಅವರಿಗೆ! ಅವರ ಕೈಕೆಳಗಿನವರೆಂದು ನಾವು ತಿಳಿದುಕೊಳ್ಳುವುದಕ್ಕೇ ಅವಕಾಶ ಕೊಡುತ್ತಿರಲಿಲ್ಲ.. ಉದ್ಯೋಗದಿಂದ ವಿಶ್ರಾಂತಿಯನ್ನು ಪಡೆಯುವ ಮೊದಲೇ, ಕನ್ನಡಕ್ಕಾಗಿ ದುಡಿಯುತ್ತಿರುವಾಗಲೇ, ವೆಂಕಣ್ಣಯ್ಯನವರು ನಮ್ಮನ್ನು ಅಗಲಿಬಿಟ್ಟರು.. ಬದುಕಿನಲ್ಲಿ ಎಂತೋ ಸಾವಿನಲ್ಲೂ ಉಪಶಾಂತವಾಗಿದ್ದ ಅವರ ಮುಖವನ್ನು ಕೊನೆಯ ಬಾರಿ ಹಣಿತುಂಬಿದ ಕಣ್ಣಿನಿಂದ ನೋಡದಾಗ, ಅನುಭವಿಸಿದ ಕರುಳಿನ ವೇದನೆಯನ್ನು ಹೇಗೆ ವರ್ಣಿಸುವುದು!.. ಈ ಅವ್ಯಾಜಹಿತೈಶಿಗಳನ್ನು, ಉದಾರಹೃದಯರನ್ನು ಉದಾರಸತ್ತ್ವರನ್ನು ಕಣ್ಣಾರ ಕಾಣುವುದು ಇನ್ನೆಲ್ಲಿ ಬಂತು! ದಿಟ್ಟಿಸಿ ನೋಡಿದರೆ ಬರೀ ಬಯಲು!

ತಮ್ಮ ಗುರುಗಳ ಬಗ್ಗೆ ಆಡಿದ ಮಾತುಗಳಲ್ಲಿರುವ ಕಾಯಕಗಳನ್ನು ಸ್ವತಃ ತೀನಂಶ್ರೀಯವರೂ ಜೀವನದುದ್ದಕ್ಕೂ ಮಾಡಿದ್ದಾರೆ. ವಿಷಯ ಕರತಲಾಮಲಕವಾಗಿದ್ದರೂ ಪ್ರತಿ ಸಲ ಪಾಠ ಮಾಡುವಾಗ ತೀನಂಶ್ರೀಯವರು 'ತಯಾರಾಗದೆ, ತಕ್ಕ ಸಿದ್ಧತೆಮಾಡಿಕೊಳ್ಳದೆ' ಪಾಠ ಮಾಡಲು ಹೋಗುವವರಲ್ಲ. ಉದಾಹರಣೆಗೆ, ಕಾಳಿದಾಸ ಮಹಾಕವಿಯ ಬಗ್ಗೆ ಅದೆಷ್ಟೋ ಉಪನ್ಯಾಸಗಳನ್ನು ಈಗಾಗಲೇ ಮಾಡಿದ್ದರು. ಇನ್ನೊಮ್ಮೆ ಆಹ್ವಾನ ಬಂದಾಗ ಸಭೆಯನ್ನು ಉದ್ದೇಶಿಸಿ ಅವರಂದು ಮಾಡಿದ ಉಪನ್ಯಾಸದ ಒಂದು ತುಣುಕು ಹೀಗಿದೆ '...ನಿನ್ನೆ ರಾತ್ರೆ ಕುತೂಹಲಕ್ಕಾಗಿ ಕಾಳಿದಾಸನ ಕೆಲವು ಕೃತಿಗಳನ್ನು ಮತ್ತೆ ತಿರುವಿ ಹಾಕಿದೆ. ನನ್ನ ಇದುವರೆಗಿನ ಕಾಲು ಶತಮಾನಕ್ಕೂ ಮೀರಿದ ಅಧ್ಯಾಪಕ ಅವಧಿಯಲ್ಲಿ ಕಾಳಿದಾಸ ಕವಿಯ ಒಂದಲ್ಲ ಒಂದು ಕಾವ್ಯವನ್ನು ವಿಶ್ವವಿದ್ಯಾಲಯದ ಒಂದಲ್ಲ ಒಂದು ತರಗತಿಗೆ ಪಾಠ ಹೇಳಿದ್ದೇನೆ. ಇಂತಹ ಸಾರ್ವಜನಿಕ ಸಮಾರಂಭದಲ್ಲಿ ಕಾಳಿದಾಸನ ಕೃತಿಗಳ ಶ್ರೇಷ್ಠತೆ ಮತ್ತು ಕವಿ ಪ್ರತಿಭೆ ಕುರಿತು ಮಾತನಾಡಿದ್ದೇನೆ. ವಿಚಾರಗೋಷ್ಠಿಗಳಲ್ಲಿ ಅವನನ್ನು ಕುರಿತು ಪ್ರಬಂಧಗಳನ್ನು ಮಂಡಿಸಿದ್ದೇನೆ. ಪಂಡಿತ ಮಂಡಲಿಗಳಲ್ಲಿ ಚರ್ಚಿಸಿದ್ದೇನೆ. ಆಕಾಶವಾಣಿಯಲ್ಲಿ ಭಾಷಣೆ ಮಾಡಿದ್ದೇನೆ. ಈ ಎಲ್ಲ ಸಮಾರಂಭದಲ್ಲೂ ಹೊಳೆಯದಿದ್ದ ಒಂದೆರಡು ವಿಷಯಗಳು, ನೆನ್ನೆ ಕವಿಯ ಕೃತಿಯನ್ನು ತಿರುವಿ ಹಾಕಿದಾಗ ಗೋಚರವಾದವು! ಏಕೆ ಈ ಮಾತನ್ನು ಹೇಳುತ್ತಿದ್ದೇನೆ ಎಂದರೆ ಯಾವ ಕೃತಿ ಕಾಲ ಕಳೆದಂತೆ, ವಯಸ್ಸು ಇಳಿದಂತೆ, ಮನಸ್ಸು ತೂಗಿದಂತೆ, ಅರಿವು ತಿಳಿಗೊಂಡಂತೆ, ವಿಮರ್ಶೆ ಮೊನಚಾದಂತೆ, ವಿವೇಕ ಪ್ರಜ್ವಲಿಸಿದಂತೆ, ಲೋಕಾನುಭವ ವಿಸ್ತಾರವಾದಂತೆ ಹೊಸ ವಿಚಾರಗಳನ್ನು ತೆರೆಯುತ್ತಾ ಹೋಗುತ್ತದೆಯೋ ಅದು ಶ್ರೇಷ್ಠ ಕೃತಿ; ಅದನ್ನು ರಚಿಸಿದವನು ಶ್ರೇಷ್ಠ ಕವಿ. ಈ ದೃಷ್ಟಿಯಿಂದ ಕಾಳಿದಾಸ ವಿಶ್ವಮನ್ನಣೆಗೆ ಪಾತ್ರನಾದ ಮಹಾಕವಿ...'

ಹೀಗೆ ತೀನಂಶ್ರೀಯವರ ವಾಗ್ವಿಲಾಸ ಸಂಪತ್ತು! ಎಲ್ಲ ದಿಕ್ಕಿಗೂ ಹಬ್ಬಿಹರಡುವಂತೆ ಮುಕ್ತವಾಗಿ ತೆರೆದಿಟ್ಟ ಅವರ ವಿದ್ವತ್ತಿಗೆ ಇನ್ನೊಂದೆರಡು ಉದಾಹರಣೆಗಳನ್ನು ನೋಡೋಣ. "ಕಾಳಿದಾಸನ ನಾಟಕಗಳಲ್ಲಿ ದುರಂತ ಮತ್ತು ವಿನ್ಯಾಸ" ಎನ್ನುವ ಪ್ರಬಂಧದಲ್ಲಿ ಅದನ್ನು ಹೀಗೆ ಪಟ್ಟಿ ಮಾಡುತ್ತಾರೆ:

'...ಅವನು ಬದುಕಿ ಬಾಳಿ ಮರಣಿಸಿ ಅನೇಕ ಶತಮಾನಗಳೇ ಕಳೆದುಹೋಗಿದ್ದರೂ, ಅವನ ಬರೆದದ್ದು ಈಗಿನವರ್ಯಾರೂ ಆಡದ ಸಂಸ್ಕೃತವಾದರೂ, ಕಾಳಿದಾಸ ಕವಿಶ್ರೇಷ್ಠನೆಂದು ಇಂದಿನವರೂ ಒಪ್ಪಿಕೊಳ್ಳುತ್ತಾರೆ. ಅದಕ್ಕೆ ಹಲವಾರು ಕಾರಣಗಳಿವೆ.

'ಸುಮಾರು ಇಪ್ಪತ್ತೈದು ಶತಮಾನಗಳ ಹಿಂದೆ

ಗ್ರೀಸ್ ದೇಶದಲ್ಲಿ ದುರಂತ ನಾಟಕವು ಜನಿಸಿದಂದಿನಿಂದ ಇಂದಿನವರೆಗೂ ಪಾಶ್ಚಾತ್ಯ ಸಾಹಿತ್ಯದಲ್ಲಿ ಅದು ಅಗ್ರಪೀಠವನ್ನು ವಹಿಸಿದೆ. ಈಸ್ಕಿಲಸ್, ಸೊಫೊಕ್ಲಿಸ್, ಯೂರಿಪಿಡಿಸ್, ಷೇಕ್ಸ್‌ಪಿಯರ್, ಗಯಟೆ, ಇಬ್ಸೆನ್ – ಲೋಕವಿಶ್ರುತವಾದ ಈ ಕೆಲವು ಹೆಸರುಗಳನ್ನು ಉಚ್ಚರಿಸಿದರೆ ಸಾಕು; ದುರಂತ ನಟಕದ ಉನ್ನತಿಯನ್ನೂ ವೈವಿಧ್ಯ ವಿಸ್ತಾರಗಳನ್ನೂ ಬೇರೆ ವರ್ಣಿಸಬೇಕಾಗಿಲ್ಲ.. ಪಾಶ್ಚಾತ್ಯರಿಗೆ ದುರಂತ ನಾಟಕವು ಕೇವಲ ಕಲೆಯ ಬೆಡಗಲ್ಲ. ಅದು ಆತ್ಮ ಸಂಸ್ಕಾರದ ಸಾಧನ, ಜೀವನ ಸಾರದ ಸಾಕ್ಷಾತ್ಕರಣ.

'ಜೀವನವು ಹಲವು ವ್ಯಕ್ತಿಗಳ, ಹಲವು ಶಕ್ತಿಗಳ ಕದನಕ್ಷೇತ್ರ. ಒಂದು ಕಡೆ ಮಾನವನು ತನ್ನ ಹವಣಿಗೆ ಮೀರಿದ್ದನ್ನು, ಕೈಗೆ ನಿಲುಕದ್ದನ್ನು ಪಡೆಯಲು ಬಯಸಿ ದೈವದ ಕಾಟಕ್ಕೆ ಸಿಕ್ಕುತ್ತಾನೆ. ಇನ್ನೊಂದು ಕಡೆ ತನ್ನ ಸುಖಸಾಧನೆಯಲ್ಲಿ ಮಗ್ನನಾಗಿ ಸಮಾಜದ ಕಟ್ಟಳೆಗೆ ಎದುರು ಬೀಳುತ್ತಾನೆ... ಅಂತೂ ಘೋರಘರ್ಷಣದ ಫಲವಾಗಿ ಜೀವನರಂಗವು ಮುರಿದ ಬಯಕೆಗಳಿಂದಲೂ ಬಿದ್ದ ದೇಹಗಳಿಂದಲೂ ತುಂಬುತ್ತದೆ. ಇಲ್ಲಿ, ತಪ್ಪಿಗೆ ತಕ್ಕಷ್ಟೇ ಶಿಕ್ಷೆ, ತಪ್ಪಿಗೆ ಮಾತ್ರ ಶಿಕ್ಷೆ ಎಂದು ಯಾರೂ ಹೇಳುವ ಹಾಗಿಲ್ಲ.. ದುರಂತದ ಪರಿಣಾಮವನ್ನು ಕಂಡು ಅಪಾರವಾದ ವಿಷಾದವು ಮೂಡುತ್ತದೆ.. ಬಾಳಿನಲ್ಲಿ ಇದೊಂದು ಅಭೇದ್ಯ ಸಮಸ್ಯೆ. ಇದನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸುವುದೇ ದುರಂತ ನಾಟಕ..

'...ನಮ್ಮ ಸಂಸ್ಕೃತ ನಾಟಕಗಳ ಕಡೆ ತಿರುಗಿದರೆ ಅಲ್ಲಿ ಕಾಣುವುದೇನು? ಇಲ್ಲಿ ಚಿತ್ರಿತವಾಗುವ ಜೀವನದಲ್ಲೂ ಕ್ಲೇಷ ಸಂಕಟಗಳಿಲ್ಲದೆ ಇಲ್ಲ. ವ್ಯಕ್ತಿ ಶಕ್ತಿಗಳ ಮಸೆದಾಟವಿಲ್ಲದೆ ಇಲ್ಲ. ಆದರೆ ಇವು ಕೊನೆಯ ತನಕ ನಿಲ್ಲತಕ್ಕವಲ್ಲ. ಈ ಲೋಕದಲ್ಲೇ ನಮ್ಮ ಕಣ್ಣೆದುರಿಗೇ ಎಲ್ಲಕ್ಕೂ ಪೂರ್ಣಸಮನ್ವಯ ಒದಗುತ್ತದೆ. ಬಾಳಿನ ಭಿನ್ನ ತಂತುಗಳಿಗೆಲ್ಲ ತೊಡಕು ತಪ್ಪಿ, ಒಂದರೊಡನೊಂದು ಹೊಂದಿಕೊಂಡು ಮಂಗಳಸೂತ್ರವಾಗಿ ಮುಗಿಯುತ್ತವೆ.. 'ದುರಂತ'ವೆಂಬ ಹೆಸರು ಈ ಚಿತ್ರಕ್ಕೆ ಒಪ್ಪಲಾರದು..

'...ನಮ್ಮ ದೇಶದಲ್ಲಿ ದರುಂತನಾಟಕದ ಈ ಅತಯಂತಾಭಾವಕ್ಕೆ ಏನು ಕಾರಣ? ಕರ್ಮವಾದವನ್ನು ನಂಬಿದ್ದರಿಂದ.. ಅಥವಾ ಆರಂಭಕಾಲದಿಂದಲೂ ಸಂಸ್ಕೃತನಾಟಕವು ಮಂಗಳಾಂತದ ನಿಯಮಕ್ಕೆ ಸಿಕ್ಕಿದ್ದರಿಂದ ಈ ಬಗೆಯ ಬೆಳವಣಿಗೆಯನ್ನು ಕಳೆದುಕೊಂಡಿರಹುದೆ?..

'...ನಾಟಕವು ಮಂಗಳಾಂತವಾದ ಮಾತ್ರಕ್ಕೇ ಕೆಟ್ಟುಹೋಗುವುದೆಂದು ಮೇಲಿನ ಮಾತಿಗೆ ಅರ್ಥವಲ್ಲ. ಎಲ್ಲ ಸಂದರ್ಭಗಳಲ್ಲೂ ದುರಂತ ದೃಷ್ಟಿ ಸರಿಹೋಗತಕ್ಕದ್ದೂ ಅಲ್ಲ. ಜೀವನವು ಬಹುಮುಖವಾದದ್ದು..

'...ಕಾಳಿದಾಸನ 'ವಿಕ್ರಮೋರ್ವಶೀಯ'ವೂ 'ಅಭಿಜ್ಞಾನ ಶಾಕುಂತಲ'ವೂ ನಾಟಕದ ಪ್ರಸಿದ್ಧ ಸಂಪ್ರದಾಯಕ್ಕೆ ತಕ್ಕಂತೆ ಮಂಗಳದಲ್ಲಿ ಮುಗಿದಿರತಕ್ಕವು..

'..ಬರಸಿಡಿಲಿನಂತೆ ಎರಗಿ ಮಾನವನ ಸುಖವನ್ನು ಭಸ್ಮಮಾಡುವ ಒಂದು ಮಹಾವಿಯೋಗದ ಸಂಘಟನೆಯನ್ನು ತೆಗೆದುಹಾಕಿ, ಅದರ ಸ್ಥಾನದಲ್ಲಿ ಕಾಳಿದಾಸನು ಹೀಗೆ ಲಕ್ಷಣಪ್ರಸಿದ್ಧವಾದ ಆಯೋಗಮಾನ–ಶಾಪ ವಿಪ್ಲಂಭಗಳೆಂಬ ಹಲವು ವಿರಹಗಳನ್ನೊಡ್ಡುತ್ತಾನೆ; ಅವುಗಳನ್ನು ಮತ್ತೆ ಮತ್ತೆ ಪರಿಹರಿಸುತ್ತಾನೆ. ಒಂದೇ ನಿಟ್ಟಿನಲ್ಲಿ ಒಂದೇ ಪ್ರವಾಹದಲ್ಲಿ ಧುಮುಕುವ ಜಲಪಾತಕ್ಕೆ ಹಲವು ತಡೆಗಳನ್ನು ಅಲ್ಲಲ್ಲಿ ಕಟ್ಟಿ ಸಣ್ಣ ಸೀಳುಗಳಾಗಿ ಒಡೆದು ಮೆಲ್ಲನೆ ಕೆಳಗಿಳಿದಂತಾಯಿತು. ಮೊದಲಿನ ಶಕ್ತಿಯೆಲ್ಲಿ, ಘೋಷವೆಲ್ಲಿ, ಭೀಷಣವಿಸ್ಮಯವೆಲ್ಲಿ!..

'..ವಿಕ್ರಮೋರ್ವಶೀಯದ ಕವಿತಾಸೌಂದರ್ಯಕ್ಕೆ ನಾವು ಎದೆಯೊಪ್ಪಿಸುತ್ತೇವೆ, ಉಪಮಾವೈಖರಿಗೆ ಬೆರಗಾಗುತ್ತೇವೆ, ಸಂವಾದಚಾತುರ್ಯಕ್ಕೆ ತಲೆದೂಗುತ್ತೇವೆ, ಆದರೆ ಅದರ ವಸ್ತುವಿಘಟನೆಗೆ ವಿಷಾದಪಡುತ್ತೇವೆ..

'..ದುಷ್ಯಂತ – ಶಕುಂತಳೆಯರಿಗೆ ಮೊಟ್ಟಮೊದಲು ಜನಿಸಿದ ಅನುರಾಗವು ಸಹಜವಾಗಿಯೇ ವಿಷಯೋನ್ಮುಖವಾದದ್ದು. ಸ್ವಸುಖಾಪೇಕ್ಷಿಯಾದದ್ದು.ಈ ಪ್ರಣಯಕ್ಕೆ ಕಣ್ವರ ಆಶ್ರಮ– ಸಾಕುಮಗಳನ್ನು ಗಂಡನ ಮನೆಗೆ ಕಳಿಸಿಕೊಡುವಾಗ ಸಂಸಾರಿಯಂತೆ ಕಂಬನಿದುಂಬುವ ಕಣ್ವರ ಆಶ್ರಮ. ಮುಂದೆ ಅಗಲಿಕೆಯೊದಗುತ್ತದೆ, ಅಪಾರ ಯಾತನೆಯಾಗುತ್ತದೆ, ಅಗಾಧ ಪರಿತಾಪವೊದಗುತ್ತದೆ. ಈ ಘರ್ಷಣೆಯಲ್ಲಿ ಆಸೆಯೂ ಕಾಮಪಿಪಾಸೆಯೂ ಕಳಚಿಬಿದ್ದು, ಇಬ್ಬರ ಹೃದಯದಲ್ಲೂ ನೋವಿನ ಕಾವಿನಿಂದ ಹೊಸ ಸತ್ವವೊಂದು ಅರಳಿ, ಪುನಸ್ಸಮಾಗಮದ ವೇಳೆಗೆ ಇಬ್ಬರೂ ಪರಿಶುದ್ಧರಾಗುತ್ತಾರೆ... ಈ ಕೊನೆಯ ಗುರಿಯನ್ನಿಟ್ಟುಕೊಂಡೇ ಕಾಳಿದಾಸ ತನ್ನ ನಾಟಕವನ್ನು ರಚಿಸಿದ್ದಾನೆ.. ಈ ಉದಾತ್ತ ಭಾವವನ್ನೇ ಅದರಲ್ಲಿ ದಳದಳವಾಗಿ ವಿಕಾಸಗೊಳಿಸಿದ್ದಾನೆ. ಇದರ ಸನ್ನಿಧಿಯಿಂದಲೇ ನಾಟಕದ ಕಟ್ಟಡ ಇಷ್ಟು ಏಕಮುಖವೂ ಅಚಲವೂ ಆಗಿರುವುದು. ಇಲ್ಲಿ ಬಂದಿರುವ ದುರಂತ ಸನ್ನಿವೇಶಗಳೆಲ್ಲವೂ ಕವಿಯ ಆಶ್ರಯಸಾಧನೆಗೆ ಅಮುಚಿತವಾದ ಅಸಂಗಗಳೇ ಹೊರತು, ತಾನೇ ಸ್ವತಂತ್ರವಾಗಿ ನಿಂತು ಪಟ್ಟಕಟ್ಟಿಸಿಕೊಳ್ಳುವುದಿಲ್ಲ. ..

'...ಶಾಕುಂತಲವನ್ನು ರಚಿಸುವ ವೇಳೆಗೆ ಅವನ ಕಲೆ ಪರಿಣತವಾಗಿತ್ತು. ಅನುಭವವು ಗಾಢವಿಶಾಲವಾಗಿತ್ತು. ಜೀವನದ ತಿರುಳು ಅವನಿಗೆ ಕರಗತವಾಗಿತ್ತು. ಆದ್ದರಿಂದ ಅವನ ಕುಲುಮೆಗೆ ಬಿದ್ದ ಶಾಕುಂತಲೋಪಾಖ್ಯಾನಕ್ಕೆ ಅಭೂತಪೂರ್ಣವಾದ ಹೊಸ ಕಳೇ ಬಂದಿತು. ಅದು ದುರಂತನಾಟಕವಾಗಿದ್ದರೆ ಎಷ್ಟು ಅರ್ಥವತ್ತಾಗಬಹುದೋ ಅದಕ್ಕೆ ಹತ್ತು ಪಟ್ಟು ಫಲವು ಮಂಗಳಾಂತದಿಂದ ಲಭಿಸಿತು. ಕಾಳಿದಾಸನು ವಿಚಾರಪೂರ್ವಕವಾಗಿ ದುರಂತತೆಯನ್ನು

ನಿರಾಕರಿಸಿದನೆಂದು ಈ ಮಾತಿನ ಆಭಿಪ್ರಾಯವಲ್ಲ. ಅವನ ಕೃತಿಗಳನ್ನು ಪಕ್ಷಪಾತವಿಲ್ಲದೆ ವಿಮರ್ಶಿಸಿದರೆ, ಅವನಿಗೆ ದುರಂತದೃಷ್ಟಿ ಇರಲಿಲ್ಲವೆಂಬ ನಿರ್ಣಯಕ್ಕೆ ಸಿದ್ಧಿಸತಕ್ಕ ಸಂಭವವೇ ಹೆಚ್ಚು. ಇದಕ್ಕೆ ಸಂಸ್ಕೃತ ಸಂಪ್ರದಾಯವು ಕಾರಣವೆಂದಾದರೂ, ಅವನಲ್ಲೂ ಇದೊಂದು ಕೊರತೆಯೇ!.. ಆದರೆ ಕವಿಗೆ ಇರುವುದು ಒಂದೇ ಕಣ್ಣಲ್ಲ ಎಂಬುದನ್ನೂ ನಾವು ಮರೆಯಬಾರದು..'

ತೀ.ನಂ.ಶ್ರೀ.ಯವರ ಗದ್ಯಕ್ಕೆ ವಿಷಯ ಎಂತಹ ಕಷ್ಟದ್ದೇ ಆಗಲಿ, ಲಕ್ಷ್ಯವಿಡುವಂತೆ ಓದುಗರ ಮನಸೆಳೆಯುವ ಆಕರ್ಷಕ ಶೈಲಿಯಿದೆ. ಇನ್ನಿತರರಲ್ಲಿ ಸುಲಭದಲ್ಲಿ ಕಾಣಿಸದ ಪ್ರಸಾದ ಗುಣ, ಎಂದರೆ ಸಂಶಯವಿಲ್ಲದೆ ಸುಲಭವಾಗಿ ಹೃದ್ಗತವಾಗಿಸುವ ಮಾಂತ್ರಿಕತೆಯಿದೆ. ಸಣ್ಣ ವಿಷಯವೆಂದು ಕೈಬಿಡದೆ ಹತ್ತಾರು ಕಡೆ ಅವಲೋಕಿಸಿ, ಎಲ್ಲವನ್ನೂ ಒಳಗೊಳ್ಳುವ ಅವಧಾನ ಸಂಯಮವಿದೆ. ಈ ಸಂಕಲನದಲ್ಲಿ ಪಂಪನನ್ನು ಕುರಿತ ಸುದೀರ್ಘ ಪ್ರಬಂಧವಿದೆ. ಅದನ್ನು ೧೯೫೫ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿತ್ತು. ಅದರಿಂದ ಆಯ್ದ ಒಂದೆರಡು ತುಣುಕುಗಳು: 'ಸುಮಾರು ಸಾವಿರ ವರ್ಷಗಳ ಹಿಂದೆ ಹೆಸರುಗೊಂಡ ಕವಿಯೊಬ್ಬನು ಕನ್ನಡದ 'ಕವಿಕುಲಗುರು'ವಾಗಿ ನಿಂತಿದ್ದಾನೆ. ಅಂದಿನಿಂದ ಇಂದಿನವರೆಗೆ ಅವನ ಕವಿತೆಯನ್ನು ಓದಿ ಮೆಚ್ಚಿದ ರಸಿಕರ ಸಂಖ್ಯೆ ಹಾಗಿರಲಿ, ಆ ಅರಕೆಯಿಲ್ಲದೆ ಭಂಡಾರದಿಂದ ಕಂಡಂತೆ ಕಾಣದಂತೆ ಭಾವಗಳನ್ನೂ ಉಕ್ತಿಗಳನ್ನೂ ಸಂಗ್ರಹಿಸಿ ತಮ್ಮ ಕಾವ್ಯಗಳನ್ನು ತುಂಬಿಸಿಕೊಂಡ ದೊಡ್ಡ ಪುಟ್ಟ ಕವಿಗಳೇ ಎಷ್ಟೋ ಮಂದಿ ಆಗಿಹೋದರು. ವಿಮರ್ಶೆಯ ತಕ್ಕಡಿಯಲ್ಲಿಟ್ಟು ತೂಗಿ ಹಿಂದಿನದಕ್ಕೆಲ್ಲ ಹೊಸ ಬೆಲೆಯನ್ನು ಕಟ್ಟುತ್ತಿರುವ ಈಗಿನ ಕಾಲದಲ್ಲಿ ಕೂಡ ಈತನ ಸ್ಥಾನಮಹತ್ವಗಳಿಗೆ ಕುಂದುಕ ಬಂದಿಲ್ಲ..

'...ಮಾನವನ ಸಹಜಪ್ರವೃತ್ತಿ ಭೋಗದ ಕಡೆಗೆ. ಇತ್ತ, ವಿಷಯಸುಖದಲ್ಲಿ ವ್ಯಾಮೋಹಗೊಂಡು ಅದನ್ನು ಪಡೆಯುವುದಕ್ಕಾಗಿ ಸಮಸಾರದಲ್ಲಿ ತೊಳಲುತ್ತಾನೆ; ಅತ್ತ ಕೀರ್ತಿ ವೈಭವಗಳಿಗೆ ಬೆರಗಾಗಿ ಅವನ್ನು ಸಾಧಿಸಲು ಮುನ್ನುಗ್ಗುತ್ತಾನೆ. ಇದಲ್ಲವನ್ನೂ ಒಡೆದರೂ ಅವನಿಗೆ ಉಳಿಯುವುದು– ಅತೃಪ್ತಿ. ದೊರೆತ ರಸ ಅವನ ಬಾಯಾರಿಕೆಯನ್ನು ಇಂಗಿಸುವುದಿಲ್ಲ, ಇನ್ನಷ್ಟು ಹೆಚ್ಚಿಸುತ್ತದೆ. ಇದರ ಮೇಲೆ ಪಡೆದ ಭೋಗಗಳಾದರೂ ನೆಲೆಗೊಂಡು ನಿಲ್ಲುತ್ತವೆಯೇ? ನೋಡನೋಡುತ್ತಿದ್ದ ಹಾಗೆಯೇ ಕೈಯಲ್ಲೇ ಕರಿಗಿಬಿಡುತ್ತದೆ. ಭೋಗದ ಕೊನೆಗೆ ತ್ಯಾಗವೆಂದು ಮನವರಿಕೆಯಾಗುವವರೆಗೆ ಜೀವನಿಗೆ ಮುಕ್ತಿಯಿಲ್ಲ..

'...ಪಂಪನು.. ಭೋಗಗಳು ಕ್ಷಣಿಕವೆನ್ನುತ್ತಾನೆ; ಅವುಗಳ ಪರಿಣಾಮ ವಿಷಾದವೆನ್ನುತ್ತಾನೆ, ಆದರೆ, ಮಿಕ್ಕ ಕವಿಗಳೂ ದಾರ್ಶನಿಕರೂ ಮಾಡುವಂತೆ– ಮಾನವದೇಹವೇ ನಿಂದ್ಯವೆಂದು, ಸಂಸಾರದಲ್ಲಿ ಸುಖ ಲೇಶವೂ ಇಲ್ಲವೆಂದು ಅವನು ಎಲ್ಲೂ ದೂಷಿಸಿಲ್ಲ. ಪಂಪನಿಗೆ ದೇಹಸೌಂದರ್ಯದಲ್ಲಿ ಅಭಿಮಾನವಿತ್ತು; ಸಂಸಾರಸುಖದಲ್ಲಿ ಆಸಕ್ತಿಯಿತ್ತು. ಕ್ಷಣಿಕವಾದರೂ ಧರ್ಮವಿರುದ್ಧವಲ್ಲದ ಸವಿ ಇದರಲ್ಲುಂಟೆಂದು ಅವನು ಅನುಭವಿಸಿ ತಿಳಿದಿದ್ದನು..

'..ಮಹಾಕವಿಪಟ್ಟವು ಒಬ್ಬನಿಗೆ ಬರುವುದು ಅವನ ಪ್ರತಿಭೆಯ ಮಹಿಮೆಯಿಂದ. ಈ ಪ್ರತಿಭೆ ಯಾರಲ್ಲಿ ಯಾವಗ ಬೆಳಗುವುದೆಂಬುದನ್ನು ಒಂದು ಸಾಹಿತ್ಯದ ಜಾತಕದಲ್ಲಿ ಗುಣಿಸಿ ಹೇಳುವವನು ಇನ್ನೂ ಹುಟ್ಟಿಲ್ಲ. ಪ್ರತಿಭಾಶಾಲಿಯಾಗುವುದಕ್ಕೆ ಕವಿಗೆ ಪುಣ್ಯ ಬೇಕು; ಅಂಥ ಕವಿಯನ್ನು ಪಡೆಯುವುದಕ್ಕೆ ಅವನ ಜನತೆಗೂ ಪುಣ್ಯ ಬೇಕು..

'...ಪ್ರತಿಭಾಶಾಲಿ ಅವತರಿಸಿದಾಗ ಸನ್ನಿವೇಶ ಸಲಕರಣೆಗಳು ಹದವಾಗಿದ್ದರೆ ಅವನ ಶಕ್ತಿ ಬೇಗ ಪಾಕಹೊಂದುತ್ತದೆ; ಉತ್ತಮಫಲವನ್ನು ಕೊಡುತ್ತದೆ. ಪಂಪನು ಹುಟ್ಟುವುದಕ್ಕೆ ನೂರಾರು ವರ್ಷಗಳ ಹಿಂದೆಯೇ ಕನ್ನಡ ಕಾವ್ಯರಚನೆ ಮೊದಲಾಗಿತ್ತು. ಗದ್ಯದಲ್ಲಿ ಬರೆದಿದ್ದರು, ಪದ್ಯದಲ್ಲಿ ಬರೆದಿದ್ದರು, ಶಾಸನಗಳನ್ನು ಕೊರೆದಿದ್ದರು. ಕವಿಗಳಿಗೆ ಮಾರ್ಗ ತೋರಿಸಲು ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಹೆಸರಿನಲ್ಲಿ ಒಂದು ಅಲಂಕಾರ ಗ್ರಂಥ ಬಂದಿತ್ತು.. ಛಂದಶ್ಶಾಸ್ತ್ರದ ಮೇಲೂ ಒಂದು ಗ್ರಂಥ ಹುಟ್ಟಿತ್ತು..

'...ಮಹಾಕವಿಯಾಗುವುದಕ್ಕೆ ಪಂಪನೂ ಸಿದ್ಧತೆಯನ್ನು ಪಡೆದನು. ಸಂಸ್ಕೃತದ ವಿಸ್ತಾರವಾದ ಸಾಹಿತ್ಯವನ್ನು ಶ್ರದ್ಧೆಯಿಂದ ಓದಿ ಮನಸ್ಸಂಸ್ಕಾರವನ್ನೂ ಮೇಲ್ಪಂಕ್ತಿಯನ್ನೂ ಗಳಿಸಿಕೊಂಡನು. ಇದಕ್ಕಿಂತ ಹೆಚ್ಚಾಗಿ, ದೇಶದ ಮೇಲೆಲ್ಲಾ ಸಂಚರಿಸಿ, ರಾಜಾಸ್ಥಾನದಲ್ಲಿ ನೆಲಸಿ, ಅನೇಕ ಮುಖವಾದ ಬದುಕನ್ನು ಬಾಳಿ, ಅನುಭವವನ್ನು ವಿಶಾಲಪಡಿಸಿಕೊಂಡನು...

'...ಪಂಪನನ್ನು ನೆನದಾಗಲೆಲ್ಲ ಸಂಸ್ಕೃತ ಕವಿಯೊಬ್ಬನ ನೆನಪು ತಪ್ಪದೆ ಆಗುತ್ತದೆ– ಆತನು ಕಾಳದಾಸ. ಕಾಳಿದಾಸನು ಸಂಸ್ಕೃತದಲ್ಲಿ ಅಗ್ರಕವಿ, ಕವಿಗಳ ಕವಿ– ಎಂದಿಷ್ಟು ಮಾತ್ರವೇ ಈ ಹೋಲಿಕೆ ಹೊಳೆಯುವುದಕ್ಕೆ ಕಾರಣವಲ್ಲ. ಮಹತ್ವದಷ್ಟೇ ಮನೋಧರ್ಮದಲ್ಲಿಯೂ ಇಬ್ಬರಿಗೂ ಸಾದೃಶ್ಯವಿದೆ.. ಇಬ್ಬರೂ ರಸಿಕರು–ಭೋಗವನ್ನು ನಿರಾಕರಿಸದೆ, ಅಲ್ಪಮಾರ್ಗಕ್ಕೆ ಇಳಿಯದೆ ತುಂಬು ಜೀವನವನ್ನು ಬಾಳಿದವರು; ಸುಖದಲ್ಲಿ ಮುಳುಗಿದಾಗಲೂ ಬದುಕಿನ ಕೊನೆಯ ಗುರಿಯನ್ನು ಮರೆಯದವರು...'

ಈ ಸಂಕಲನದ ಕೊನೆಯಲ್ಲಿ 'ನಂದಾದೀವಿಗೆ' ಎನ್ನುವ ಮಹಾತ್ಮ ಗಾಂಧಿಯವರನ್ನು ಕುರಿತ ಪ್ರಬಂಧವಿದೆ. ಅವರಿದ್ದ ಕಾಲದಲ್ಲಿ ಎಷ್ಟೋ ಅಳಿದ ಮೇಲೆ ಕೂಡ ಕುಂದದ, ಪ್ರಾಯಶಃ ಹೆಚ್ಚುತ್ತಲೇ ಹೋಗುವ ಪ್ರಸಿದ್ಧಿ ಮಹಾತ್ಮ ಗಾಂಧಿಯವರದ್ದು. ಈ ಪ್ರಬಂಧ ಅವರ ಹತ್ಯೆಯಾದಾಗ ಶ್ರದ್ಧಾಂಜಲಿಯಾಗಿ ಬರೆದದ್ದು. ಅದಕ್ಕೆರಡು ವರ್ಷ ಮುಂಚೆ,

೧೯೪೬ರಲ್ಲಿ ತೀ.ನಂ.ಶ್ರೀಯವರು ಗಾಂಧಿಯವರನ್ನು ಮದರಾಸಿನಲ್ಲಿ ಭೆಟ್ಟಿಯಾಗಿದ್ದರು: 'ಗಾಂಧಿಜಿಯನ್ನು ಕುರಿತು ಮಾತನಾಡುವವರೆಲ್ಲ ಅವರಿಗೆ ಜ್ಯೋತಿಯ ಹೋಲಿಕೆಯನ್ನು ತಪ್ಪದೆ ಕೊಟ್ಟಿದಾರೆ. ಇದು ಬರಿಯ ಸಂಪ್ರದಾಯದ ಉಪಮೆಯಲ್ಲ. ಎರಡು ವರ್ಷದ ಕೆಳಗೆ (೧೯೪೬ರಲ್ಲಿ), ಮದರಾಸಿನಲ್ಲಿ ಅವರ ದರ್ಶನವನ್ನು ಮಾಡುವ ಭಾಗ್ಯವನ್ನು ಪಡೆದಗ ಈ ಹೋಲಿಕೆಯ ಔಚಿತ್ಯ ಚೆನ್ನಾಗಿ ಮನವರಿಕೆಯಾಯಿತು. ಅಂದಿನ ಅಪರಾಹ್ಣ ನಾಲ್ಕು ಘಂಟೆಗೆ ಗಾಂಧಿಯವರು ದಕ್ಷಿಣ ಭಾರತದ ಸಾಹಿತಿಗಳು ಮತ್ತು ಕಲಾವಿದರ ಗೋಷ್ಠಿಗೆ ಭೇಟಿಕೊಡುವರೆಂದು ಗೊತ್ತಾಗಿತ್ತು. ಸಮಯ ಒದಗಿತು. ಬಿಳುಬಿಳುಪಿನ ಖಾದಿಯ ಪಂಚೆಯನ್ನು ಬಿಗಿದುಟ್ಟು ಅದೇ ಬಗೆಯ ಉತ್ತರೀಯವನ್ನು ಭುಜದ ಮೇಲೆ ಅಳವಡಿಸಿಕೊಂಡು ಗಾಂಧೀಜೀ ದೃಷ್ಟಿಪಥದಲ್ಲಿ ಹೊಳೆದರು. ಬೆಳಗಿದ ತಾಮ್ರದ ತಗಡಿನಂತೆ ಅವರ ದೇಹ. ಚಿತ್ರಗಳಲ್ಲಿ ಅವರು ಹಾಗೆಯೇ ಇರಬಹುದೆಂದು ಭಾವಿಸಿಕೊಂಡಿದ್ದ ನಮಗೆ ಮನಸ್ಸಿನಲ್ಲಿ ಮೊದಲು ಉದಿಸಿದ ಭಾವನೆ ಬೆರಗು: ಈ ತೇಜಶ್ಶಲಾಕೆಯ ಸಂದರ್ಶನಕ್ಕೆ ನಾವು ಸಿದ್ಧರಾಗಿರಲಿಲ್ಲ! ಉಡುಪಿನ ಧವಳತೆ, ದೇಹದ ದೀಪ್ತಾರುಣ ಕಾಂತಿ, ಮುಖದ ಅಕಳಂಕ ಮಂದಹಾಸ – ಎಂಥ ಸಾಮರಸ್ಯ ಅದು!

> "ತಾಪಸವೃತ್ತಿಯಲಿ
> ಘನಿಸಿರಲು ತೇಜ
> ದೀಪವೋ ದೇಹವೋ
> ಎನಿಸುತಿಹ ಒಡಲು"

ಎಂದು ಈ ಮಹಾನುಭಾವನನ್ನು ಕುರಿತು 'ಶ್ರೀನಿವಾಸ'ರು ಹಾಡಿರುವುದು ಅತಿಶಯೋಕ್ತಿಯಲ್ಲವೆಂದು ಸ್ಪಷ್ಟವಾಯಿತು. ನಡೆದು ಬರುತ್ತಿರುವ ದೀವಿಗೆಯಂತೆ ಗಾಂಧೀಜೀ ಕಾಣಿಸಿದರು..

... ದೀಪ ತಾನಾಗಿ ನಂದಲಿಲ್ಲ. .. ನಂದಾದೀವಿಗೆಯನ್ನು ನಮ್ಮ ಜನರೇ ನಂದಿಸಿಬಿಟ್ಟರು.. ಅಹಿಂಸೆಯ ಅವತಾರಮೂರ್ತಿ ಹಿಂಸೆಗೆ ಬಲಿಯಾಗಿ ದೇಹವೊಪ್ಪಿಸಬೇಕಾಯಿತು..

... ಗಾಂಧಿಯವರನ್ನು ನಿಜವಾಗಿ ಯಾರು ಕೊಂದವರು? ಅವರ ಮೇಲೆ ಗುಂಡು ಹಾರಿಸಿ ಕೆಡಹಿದವನು ಒಂದು ನಿಮಿತ್ತ ಮಾತ್ರ... ಒಂದಿಗೆ ಹುಟ್ಟಿ ಒಟ್ಟಿಗೆ ಬೆಳೆದು ಒಡಗೂಡಿ ಬಾಳತಕ್ಕವರ ಮನಸ್ಸುಗಳನ್ನು ದ್ವಾಷದ ಉದ್ಗಾರವನ್ನು ಚೀರಿ ಚೀರಿ ಕೆಡಿಸಿ, ನಾಡನ್ನು ಒಡೆದು, ಲೈಶಾಚಿಕ ಭಾವಗಳು ಇತ್ತಂಡದ ಕೋಟ್ಯಂತರ ಹೃದಯಗಳಲ್ಲಿ ಉನ್ಮತ್ತನರ್ತನ ಮಾಡುವಂತೆಯಾರು ಯಾರು ಕೆರಳಿಸಿದರೋ ಅವರಿಗೆಲ್ಲ ಈ ಕೊಲೆಯ ಹೊಣೆಗಾರಿಕೆಯಲ್ಲಿ ಪಾಲು ಇದ್ದೇ ಇದೆ..

... ದ್ವೇಷ- ಪ್ರೇಮ: ಈ ಉತ್ಕಟಭಾವಗಳಲ್ಲಿ ಯಾವುದು ಮೇಲುಗೈ? ಮಾನವ ಹೃದಯಾಂಗಣದಲ್ಲಿ ಇವೆರಡಕ್ಕೂ ಅನಾದಿಯಾದ ಹೋರಾಟ ನಡೆಯುತ್ತಿದೆ. ನಾಗರಿಕತೆ ಪ್ರಬಲಿಸಿ, ಜೀವನದಲ್ಲಿ ಸಂಯಮ ಅವಶ್ಯಕತೆಯೆಂದು ದಾರ್ಮಾಚಾರ್ಯರ ಮಾರ್ಗದರ್ಶನದಿಂದ ಅರಿವು ಹುಟ್ಟಿದ ಬಳಿಕ, ದ್ವೇಷ ತಗ್ಗಿತೇನೋ ಹತೋಟಿಗೆ ಬಂದಿತೇನೋ ಎಂಬಂತೆ ಕೆಲ ಕಾಲ ತೋರುತ್ತಿತ್ತು... ಸಾಂಕ್ರಾಮಿಕ ರೋಗದ ವಿಷಕ್ರಿಮಿಗಳು ಎಲ್ಲೆಲ್ಲೂ ಇರುತ್ತವೆ. ಸಾಮಾನ್ಯವಾಗಿ ಅನುಲ್ಬಣಾವಸ್ಥೆಯಲ್ಲಿದ್ದು ಹದವಾದ ಸನ್ನಿವೇಶವನ್ನು ಎದುರು ನೋಡುತ್ತಿರುತ್ತವೆ. ಅವಕಾಶ ತೆರೆದಾಗ ಬಲುಬೇಗ ಉಬ್ಬಿ ಸ್ಥಳದಿಂದ ಸ್ಥಳಕ್ಕೆ ವಾಯುವೇಗದಿಂದ ಹಬ್ಬಿ ಪ್ರಬಲ ಕ್ಷೋಭೆಗೆ ಮೊದಲುಮಾಡುತ್ತವೆ

... ಗಾಂಧೀಜೀ ವಿಶ್ವಪ್ರೇಮದ ದೃಶ್ಯಮೂರ್ತಿ. ಇಂಥವರನ್ನೇ ಹಿಂಸೆ ಆಹುತಿಯಾಗಿ ತೆಗೆದುಕೊಂಡುಬಿಟ್ಟಿತು. ಇದನ್ನು ನೆನೆದರೆ, ದ್ವೇಷ-ಪ್ರೇಮಗಳ ಸಂತತವಾದ ಹೋರಾಟದಲ್ಲಿ ಸದ್ಯಕ್ಕೆ ದ್ವೇಷವೇ ಮೇಲುಗೈಯಾಯಿತೇನೋ, ದ್ವೇಷದ ಬೇರನ್ನು ಮಾನವ ಹೃದಯದಿಂದ ಕಿತ್ತೊಗೆಯುವುದು ಅಸಂಭವವೇನೋ, ದ್ವೇಷವನ್ನು ಪ್ರೇಮದಿಂದ ಗೆಲ್ಲುವುದು ಅಶಕ್ಯವೇನೋ ಎನಿಸುತ್ತದೆ. ಆದರೆ ಇದು ಎಂದಿಗೂ ಕೊನೆಮಾತಾಗಲಾರದು..

... ಗಾಂಧೀಜೀ ಭಗವಂತನನ್ನು ಅರಿತಿದ್ದಂತೆ, ದೇವವಾಣಿಯನ್ನು ಕೇಳಿದ್ದಂತೆ, ನಾವು ಅರಿತಿಲ್ಲ, ಕೇಳಿಲ್ಲ. ದೇವರಲ್ಲಿ ಅವರಿಗಿದ್ದ ಶ್ರದ್ಧೆಯೂ ಸಮರ್ಪಣಭಾವವೂ ನಮ್ಮಲ್ಲಿ ಮೂಡುವುದು ಅಶಕ್ಯ. ಸರ್ವಶಕ್ತನೂ ಪರಿಪೂರ್ಣನೂ ಆದ ದೇವರು ಉಂಟೆ ಎಂಬ ವಿಚಾರದಲ್ಲೇ ನಮಗೆ ಸಂದೇಹ ತೋರಬಹುದು.. "ಸತ್ಯವೇ ಗುರಿ, ಅಹಿಂಸೆಯೇ ದಾರಿ" ಎಂಬುದನ್ನು ಸಮಸ್ತ ಬೀಜಮಂತ್ರವಾಗಿ ಸ್ಥಾಪಿಸಿ, ಹೊಸದೊಂದು ಯುಗವನ್ನೇ ಪ್ರಾರಂಭಿಸಿದರು.. ಗಾಂಧೀಜೀಯನ್ನು ಕಳೆದುಕೊಂಡು, ಅವಿಧೇಯರಾದ ಮಕ್ಕಳಂತೆ ಈಗ ಭಾರತೀಯರೆಲ್ಲರೂ ಅಳಲುತ್ತಿದ್ದೇವೆ..

... ಗಾಂಧೀಜೀ ನಮ್ಮೆಲ್ಲರ ನಿಕ್ಷೇಪವಾಗಿ ಬಿಟ್ಟುಹೋಗಿರುವ ವಿಶ್ವಪ್ರೇಮದ ಕಿಡಿಯನ್ನು ಮಾತ್ರ ನಾವು ಸನ್ಮತಿಯ ಹಣತೆಯಲ್ಲಿ ಕೈಯಲ್ಲಾದಮಟ್ಟಿಗೂ ಜೋಪಾನವಾಗಿ ಕಾಪಾಡಿಕೊಂಡು ಬಂದರೆ ಸಾಕು; ಯಾವ ವಿಷದ ಗಾಳಿ ಬೀಸಿದರೂ ಆರಿಹೋಗದ ನಂದಾದೀವಿಗೆಯಾಗಿ ಮುಂದೆ ಬೆಳಗಬಲ್ಲುದು...'

ಸಾಧಾರಣರಂತೆ ತೋರುವ, ಆದರೆ ಸತತಾಭ್ಯಾಸಿಯಾದ ಅನಿತರಸಾಧಾರಣ ಉದಾರಚರಿತರಿಂದ ಮಾತ್ರ ಇಂತಹ ಗದ್ಯರಚನೆ ಸಾಧ್ಯವೇನೋ. ಯಾವ ಕ್ಲಿಷ್ಟ ಪದವನ್ನೂ ಬಳಸದೆ, ಓದುಗರ ಶ್ರಮ ಪರಿಶ್ರಮಗಳೆರಡನ್ನೂ ಕೆಣಕುವಂತೆ ಉದ್ದುದ್ದ ವಾಕ್ಯಗಳಿಗೆ ಮೊರೆ ಹೋಗದೆ, ಸರಳ ಸ್ಫುಟವಾಕ್ಯಗಳಲ್ಲಿ ಅರ್ಥಸಂಪತ್ತಿನ ಘನವಾದ ಮುತ್ತು ರತ್ನಗಳನ್ನು ಹುದುಗಿಸಿ ಮನದಟ್ಟು ಮಾಡುವ ಕಲೆ ಅವರಿಗೆ ಕರಗತವಾಗಿತ್ತು. ಕನ್ನಡದ ಸಾಹಿತ್ಯಕ್ಕೆ ತೀ. ನಂ.ಶ್ರೀಯವರ ಕೊಡುಗೆ ಮಾರ್ಗದರ್ಶನಪ್ರಾಯವಾದದ್ದು, ಅಗ್ರಪಂಜ್ತಿಯಲ್ಲಿ

ನಿಲ್ಲತಕ್ಕದ್ದು. ಪಾಮರನಾದ ನನ್ನಂತಹವನನ್ನೂ ಮತ್ತೆ ಮತ್ತೆ ಕರೆಯುವಂಥಾದ್ದು.

ಇತ್ತೀಚೆಗೆ ನನಗೆ ಗ್ರೀಕ್ ಸಾಹಿತ್ಯದ ಅಭ್ಯಾಸಿಗಳೂ ಹಿರಿಯ ಸಾಹಿತಿಗಳೂ ಆದ ಕೆ ಎಂ ಸೀತಾರಾಮಯ್ಯನವರ ಪರಿಚಯವಾಯಿತು. ಅವರಿಗೆ ತೀನಂಶ್ರೀಯವರ ಪರಿಚಯವಿತ್ತು. ನಾನು ಅವರ ಬಗ್ಗೆ ಪ್ರಸ್ತಾಪ ಮಾಡಿದಾಗ ಅವರೆಂದರು, 'ಮುಖ್ಯವಾಗಿ ಮಾತು ಮತ್ತು ಅವರ ಭಾಷಣಗಳಲ್ಲಿ ಪ್ರಸಾದಗುಣ, ಎಂದರೆ ತಮ್ಮಲ್ಲಿದ್ದುದೆಲ್ಲವನ್ನೂ ಇತರರಿಗಾಗಲಿ ಎಂದು ಸರಳ ಸುಲಭದಲ್ಲಿರುವಂತೆ ಲಕ್ಷ್ಯವಿಟ್ಟು ಕೊಟ್ಟುಬಿಡುವ ಔದಾರ್ಯ ಎದ್ದು ಕಾಣುತ್ತಿತ್ತು. ಎಲ್ಲ ವಿದ್ವಾಂಸರಲ್ಲೂ ಈ ಗುಣವಿರುವುದಿಲ್ಲ' ಎಂದರು. ಪ್ರಸಾದ ಎನ್ನುವ ಪದಕ್ಕೆ ನಮ್ಮಲ್ಲಿ ಮೊದಲು ಶ್ರದ್ಧೆಯಿಂದ ದೇವರಿಗೆ ಅರ್ಪಿಸಿ, ಇತರರಿಗೆ ಹಂಚಿದ ನಂತರ ಉಳಿದದ್ದನ್ನು ತಾನು ಪಡೆಯುವ ಇನ್ನೊಂದು ಅರ್ಥವಿದೆ. ಇಲ್ಲಿರುವ ಶ್ರದ್ಧೆ ಮತ್ತು ಅರ್ಪಣ ಎನ್ನುವ ಎರಡು ಪದಗಳೂ ಬಹಳ ಮುಖ್ಯವಾದವು. ಕಾಯಾ ವಾಚಾ ಮನಸಾ ಎನ್ನುವ ತ್ರಿಕರಣ ಶುದ್ಧಿಯಾಗದೆ ಶ್ರದ್ಧೆ ಹುಟ್ಟುವುದಿಲ್ಲ, ಅರ್ಪಣಭಾವವು ಉದಯಿಸುವುದಿಲ್ಲ. ಇವೆರಡೂ ಉದಯಿಸಿತೆಂದರೆ ಮನುಷ್ಯ ಸ್ವಾರ್ಥ ನಶಿಸುತ್ತಾ ಪರಾರ್ಥ ಹೆಚ್ಚುತ್ತಾ ತಾನಿರುವುದು ಪರರಿಗೆ ಎನ್ನುವ ಭಾವವೂ ಬಿಗಿಯಾಗುತ್ತಾ ಹೋಗುತ್ತದೆ. ಇದು ಉದಾರಚರಿತೆಯ ಬಹು ಮುಖ್ಯ ಲಕ್ಷಣವೂ ಹೌದು. ಅಧ್ಯಯನ ಮತ್ತು ಅಧ್ಯಾಪನ, ಎಂದರೆ ಕುರಿತೋದಿ ಹಂಚುವುದರಿಂದಲ್ಲವೆ ವಿದ್ಯೆ ಎನ್ನುವ ನಿಧಿ ಅಸದೃಷ ಎನ್ನಿಸಿಕೊಳ್ಳುವುದು!

ನಾನು ತಿಳಿದಿರುವವ, ಇದೋ ತಿಳಿದುಕೋ ಎನ್ನುವ ಮೇಲರಿಮೆ ಇಲ್ಲದ ಮೇರೆತುಂಬಿದ ವಿದ್ವತ್ತಿರುವ ತೀನಂಶ್ರೀಯವರ ಪ್ರಸಾದಗುಣವನ್ನು 'ಪೌರವಾಣಿ' ಅಷ್ಟೇನೂ ವಿಖ್ಯಾತವಲ್ಲದ ಪತ್ರಿಕೆಗೆ ೧೯೪೪ರಲ್ಲಿ ಬರೆದ 'ಕೆರೆಗೆ ಹಾರ' ಎನ್ನುವ ಸಣ್ಣ ಲೇಖನದಲ್ಲೂ ಕಾಣಬಹುದು. ಲೇಖನದ ಆರಂಭದಿಂದ ಕೊನೆಯವರೆಗೆ ಒಂದೇ ಧಾಟಿ: 'ಯಾವ ಗಣಿಯಲ್ಲಿ ಎಂಥ ಮಣಿ ಅಡಗಿರುವುದೋ! ಹಳ್ಳಿಯ ಹಾಡುಗಳನ್ನು ಕುರಿತು ಸುಶಿಕ್ಷಿತರಲ್ಲಿ ಮೊದಲಿಗೆ ಅನಾದರವೂ ತಿರಸ್ಕಾರವೂ ಇದ್ದುವು. ಅಕ್ಷರ ಕಲಿಯದವರು, ನಾಗರಿಕ ಜೀವನವನ್ನು ತಿಳಯದವರು, ವ್ಯಾಕರಣಬದ್ಧವಾಗಿ ಮಾತಾಡಲು ಅರಿಯದವರು– ಇಂಥವರು ತಮ್ಮ ಹೃದಯವನ್ನು ಹಗುರಮಾಡಿಕೊಳ್ಳುವುದಕ್ಕಾಗಿ ಆಗಾಗ ಹಾಡಿಕೊಂಡ ಹಾಡುಗಳಲ್ಲಿ ಏನು ಹುರುಳಿದ್ದೀತೆಂದು ವಿದ್ವಾಂಸರು ಅಸಡ್ಡೆ ಮಾಡುತ್ತಿದ್ದ ಕಾಲವೊಂದಿತ್ತು. ಆದರೆ ಆ ಭಾವ ಈಗ ಬಲು ಮಟ್ಟಿಗೆ ತೊಲಗಿದೆ. ಪ್ರೌಢಿಮೆಯುಳ್ಳವರು ಕೂಡ ಈ ಹಾಡುಗಳ ರುಚಿಯನ್ನು ಮನಗಾಣುತ್ತಿದ್ದಾರೆ. ಸಹೃದಯರಾದ ವಿಮರ್ಶಕರ ನಿರೀಕ್ಷೆಗೂ ಮೀರಿ ಬಗೆಯನ್ನು ಸೂರೆಗೊಳ್ಳುವ ಕೃತಿಗಳು ಈ ಕ್ಷೇತ್ರದಲ್ಲಿ ಹಲವು ಬಾರಿ ದೊರೆಯುತ್ತವೆ ಅಂಥವನ್ನು ಸಂಧಿಸಿದಾಗ, "ಇದು ಹಳ್ಳಿಯ ಹಾಡು, ಗುಣವನ್ನು ಗ್ರಹಿಸಬೇಕು' ಎಂಬ ಕೃಪಾದೃಷ್ಟಿ ತೊಲಗಿ, 'ಇದು ಒಳ್ಳೆಯ ಕಾವ್ಯ; ಇದರ ರಸವನ್ನು ಸವಿದು, ಹೃದಯವನ್ನು ಸಂಸ್ಕರಿಸಿಕೊಳ್ಳಬೇಕು' ಎಂಬ ನಮ್ರ ಬುದ್ಧಿ ಮೊಳೆಯುತ್ತದೆ..

..ಇಂಥ ಒಂದು ಹಾಡನ್ನು ಹದಿನೈದು ವರ್ಷಗಳ ಕೆಳಗೆ "ಜಯಕರ್ನಾಟಕ"ದಲ್ಲಿ ಓದಿದೆನು. ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರು ಹಳ್ಳಿಯ ಕಡೆ ಕೇಳಿ ಸಂಗ್ರಹಿಸಿದ 'ಕೆರೆಗೆ ಹಾರ' ಎಂಬ ಕೋಲಾಟದ ಪದವೇ ಅದು.. ಈ ಹಾಡನ್ನು ಓದುತ್ತಾ ಓದುತ್ತಾ, ನಮ್ಮ ಕಾವ್ಯಾಕಾಶದಲ್ಲಿ ಹೊಳಪಿನ ನಕ್ಷತ್ರವೊಂದನ್ನು ಹೊಸದಾಗಿ ಕಂಡಂತೆ ನನಗೆ ಅನುಭವವಾಯಿತು. ನಾನೊಬ್ಬನೇ ಅದನ್ನು ಸವಿದು ತೃಪ್ತಿಪಡದೆ, ಮಿಕ್ಕ ಕನ್ನಡಿಗರಿಗೂ ಅದರ ಸೊಗಸನ್ನು ಸಾರಿ ಹೇಳಬೇಕೆಂಬ ಆಸೆಯುಂಟಾಯಿತು. ಉತ್ತರ ಕರ್ನಾಟಕದ ಹಳ್ಳಿಯ ಜನ ಇದನ್ನು ಹೇಗೆ ಹಾಡುತ್ತಾರೋ ಕೇಳಿ ಅರಿತುಕೊಳ್ಳುವ ಭಾಗ್ಯ ನನಗಿನ್ನೂ ಒದಗಿಲ್ಲ.. ರಾಗವಿಲ್ಲದೆ ಪದ್ಯವನ್ನು ಓದುವ ಧಾಟಿಯೊಂದುಂಟಷ್ಟೆ. ಆ ಬಗೆಯಲ್ಲಿ ಈ ಕವನವನ್ನು ಮೈಸೂರು ದೇಶದ ಸಭೆಗಳಲ್ಲಿ ಆಗಾಗ ಓದಿ ವಿವರಿಸಿದ್ದೇನೆ... ಎಲ್ಲರ ಮೇಲೂ ಇದು ಉಂಟುಮಾಡುವ ಗಾಢಪರಿಣಾಮವನ್ನು ಕಂಡು ಈ ಕೃತಿರತ್ನದ ಮಹಿಮೆ ದಿನದಿನಕ್ಕೆ ಹೆಚ್ಚಾಗಿ ನನಗೆ ಮನದಟ್ಟಾಗಿದೆ..

.. ಊರೊಟ್ಟಿನ ಹಿತಕ್ಕಾಗಿ ಆಗಿನ ಬಲ್ಲವರು ಹೇಳಿದ ತ್ಯಾಗಕಾರ್ಯವನ್ನು – ಅದು ಎಷ್ಟೇ ಕಠಿನವಾಗಿದ್ದರೂ– ಕೈಕೊಳ್ಳಲು ಅವರು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅಂಥ ಒಂದು ಸನ್ನಿವೇಶವೇ 'ಕೆರೆಗೆ ಹಾರ'ದ ಕಥೆಯ ಹಿನ್ನೆಲೆ..

... 'ಕೆರೆಗೆ ಹಾರ'ದ ಉದ್ದಕ್ಕೂ.. ಪದ್ಯದ ಒಂದೊಂದು ಸಾಲಿನಲ್ಲೂ ಕ್ರಿಯೆಯ ಒಂದೊಂದು ಹೆಜ್ಜೆಯಲ್ಲೂ ಮಹಾಕೃತಿಯಲ್ಲಿ ಮಾತ್ರ ಕಾಣಬರುವ ಅನಿವಾರ್ಯತೆ ಇದೆ. ಆಗಿನ ಸಾಮಾಜಕ ಸಂಪ್ರದಾಯದಲ್ಲಿ, ಆ ಸಂಸ್ಕಾರವಂತರ ಬಾಳಿನಲ್ಲಿ ಕಥೆ ಹೀಗೆಯೆ ಸಾಗಿರಬೇಕಲ್ಲವೆ? ಇವರೆಲ್ಲರ ನುಡಿ ಎಷ್ಟು ಮಿತ, ನಡೆ ಎಷ್ಟು ನಯ! ...

... ಈ ಕೃತಿಯ ಸೊಗಸುಗಳಲ್ಲಿ ಯಾವುದನ್ನು ವರ್ಣಿಸುವುದು, ಯಾವುದನ್ನು ಬಿಡುವುದು! ಜೀವರತ್ನಕ್ಕೆ ಇಷ್ಟೆಲ್ಲ ಪ್ರಶಂಸೆಯ ಹಂಗು ಯಾಕೆ? ಅದು ಸ್ವಯಂ ಪ್ರಕಾಶದಿಂದ ಬೆಳಗಬಲ್ಲುದು. ಈ ಕೃತಿಯನ್ನು ಕಟ್ಟಿದ ಹಳ್ಳಿಯ ಅಜ್ಞಾತ ವ್ಯಕ್ತಿ ಒಬ್ಬ ಶ್ರೇಷ್ಠ ಕವಿ. 'ಕೆರೆಗೆ ಹಾರ' ಕನ್ನಡ ಕಾವ್ಯಶ್ರೀಯ ಕಂಠದ ಹಾರ!'

'ಕೆರೆಗೆ ಹಾರ' ಕಾವ್ಯವನ್ನು ಕುರಿತು ಹೆಗ್ಗೋಡಿನ ಕೆ.ವಿ. ಸುಬ್ಬಣ್ಣನವರೂ 'ಅರೆ ಶತಮಾನದ ಅಲೆಮಾರಿ ಬರಹಗಳು' ಎನ್ನುವ ಕೃತಿಯಲ್ಲಿ ಚೇತೋಹಾರಿ ವಿಮರ್ಶೆಯನ್ನು ರಚಿಸಿದ್ದಾರೆ. ಉದಾರಚರಿತರಾದ ಜ್ಞಾನಘನರಿಂದಷ್ಟೆ ಇಂತಹ ಪ್ರಸಾಧನ ಸಾಧ್ಯ. ಇವೆರಡನ್ನೂ ಹಲವು ಬಾರಿ ಓದಿದ ಮೇಲೆ, 'ಕೆರೆಗೆ ಹಾರ' ಕಾವ್ಯವನ್ನು ಅಭ್ಯಾಸ ಮಾಡಿ

ಕಾವ್ಯರಚನೆಯಲ್ಲಿ ತೊಡಗುವುದು ಇಂದಿನ ಕಾವ್ಯಪ್ರತಿಭೆಗಳಿಗೆ ಅವಶ್ಯವೆನ್ನಿಸುತ್ತದೆ. ಹಾಗೆ ಮಾಡಿದರೆ ಕನ್ನಡದ ಕಾವ್ಯಪರಂಪರೆ ಹೆಚ್ಚು ಸಂಪನ್ನವಾಗುತ್ತದೆ. ಬಗೆ ಬಗೆಯ ನವವಿಕಸನದಿಂದ ಚೇತೋಹಾರಿಯಾಗುತ್ತದೆ.

ಯಾವುದೇ ಸಣ್ಣ ವಿಷಯವನ್ನೂ ಸಣ್ಣ ಅಥವ ದೊಡ್ಡ ಎನ್ನದೆ ಅದರ ಹಲವು ಮುಖಗಳನ್ನು ಪರಿಚಯಿಸಿಕೊಳ್ಳುವ ದಾರ್ಢ್ಯ ಲೇಖಕರಿಗೆ ಎಷ್ಟು ಮುಖ್ಯ ಎನ್ನುವುದನ್ನು 'ಮಕ್ಕಳಿಗೆ ಹೇಳುವ ಕಥೆಗಳು', 'ಸಣ್ಣ ಕಥೆಯಲ್ಲಿ ವಾಸ್ತವಿಕತೆಯ ಸ್ಥಾನ' ಮುಂತಾದ ಲೇಖನಗಳಲ್ಲಿ ಉದಹರಿಸಿದ್ದಾರೆ. ಇವೆರಡು ಪ್ರಬಂಧಗಳಿಂದ ಆಯ್ದ ಕೆಲವು ತುಣುಕುಗಳು: '.. ಕಥೆಯ ಮೇಲಿನ ಪ್ರೀತಿ ಮಾನವಜಾತಿಯ ಹುಟ್ಟುಗುಣ. ಮನುಷ್ಯನಿಗೆ ಮಾತಾಡುವ ಶಕ್ತಿ ಬಂದಂದಿನಿಂದಲೂ ಕಥೆಗಳು ಹುಟ್ಟುತ್ತಲೇ ಇವೆ. ಅವುಗಳನ್ನು ಕೇಳುವವರು ದೊರೆಯುತ್ತಲೇ ಇದ್ದಾರೆ. ಈ ಹುಟ್ಟುಗುಣವನ್ನು ಚಾತುರ್ಯದಿಂದ ಉಪಯೋಗಿಸಿಕೊಂಡರೆ ಮಕ್ಕಳ ಶಿಕ್ಷಣವು ಎಷ್ಟೋ ಸುಲಭವಾಗುತ್ತದೆ.. ಕಥೆಗಳು ಮಕ್ಕಳಲ್ಲಿ ಕುತೂಹಲವನ್ನು ಎಬ್ಬಿಸುತ್ತದೆ.. ಈ ಕುತೂಹಲವು ಗಮನವನ್ನೆಲ್ಲಾ ಒಮ್ಮುಖವಾಗಿ ಸೆಳೆಯುತ್ತದೆ. ಕಥೆ ಕೇಳಿ ಕೇಳಿ ಮಕ್ಕಳಿಗೆ ಚಿತ್ತೈಕಾಗ್ರತೆ ಶ್ರಮವಿಲ್ಲದೆ ಅಭ್ಯಾಸವಾಗುತ್ತದೆ..ಕಥೇ ಮಕ್ಕಳ ಜ್ಞಾಪಕಶಕ್ತಿಯನ್ನೂ ಚೆನ್ನಾಗಿ ವಿಕಾಸಗೊಳಿಸಬಲ್ಲುದು.. ಮಾತುಗಳನ್ನೂ ಸಂದರ್ಭಗಳನ್ನೂ ಅವರು ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಬಲ್ಲರು.. ಕೇಳಿದ ಕಥೆಯನ್ನು ತಿರುಗಿಸಿ ಹೇಳುವಾಗ ಜ್ಞಾಪಕಶಕ್ತಿಯ ಜೊತೆಯಲ್ಲಿ ಕಲ್ಪನಾಶಕ್ತಿಯೂ ಕೊಂಚ ಕುದುರುತ್ತದೆ.. ಎಷ್ಟೋ ಮಕ್ಕಳು ಕಥೆಯ ಸಂಗತಿಯನ್ನು ಕಣ್ಣಾರ ನೋಡಿದಂತೆ, ಅದರಲ್ಲಿ ತಾವೇ ಭಾಗಿಗಳಾದಂತೆ ಹೇಳುತ್ತಾರೆ.. ಮಕ್ಕಳ ಕಥೆಯಲ್ಲಿ .. ಪುನರುಕ್ತಿಗೆ ಹಿತವುಂಟು. ... ಒಂದೇ ಮಾತಾಗಲೀ ಸಂದರ್ಭವಾಗಲೀ ಎರಡು ಮೂರು ಸಲ ಬರುವುದರಲ್ಲಿ ಮತ್ತೊಂದು ಪ್ರಯೋಜನವುಂಟು. ಅವು ಮಕ್ಕಳಿಗೆ ಕಥೆಯನ್ನು ಜ್ಞಾಪಕದಲ್ಲಿ ನಿಲ್ಲಿಸುವ ಹೆಗ್ಗುರುತುಗಳಾಗಿರುತ್ತವೆ..

'... ಸಣ್ಣ ಕಥೆಯಲ್ಲಿ.. ವಾಸ್ತವಿಕತೆ ಎಂದರೇನು?– ತನ್ನ ಎದುರಿಗಿರುವ ಜಗತ್ತಿನಲ್ಲಿ ಲೇಖಕನು ಏನೇನನ್ನು ಕಾಣುವನೋ ಅದೆಲ್ಲವನ್ನೂ ತನಗೆ ಗೋಚರವಾದಂತೆಯೇ ನಿರೂಪಿಸುವುದು; ಅದರಲ್ಲಿ ಕಾಣಬರುವ ಅಂಶಗಳನ್ನು ವಿಕೃತವಾಗಲಿ ವಿರೂಪವೆಂದಾಗಲಿ ಜುಗುಪ್ಸಿತವೆಂದಾಗಲಿ ಜಘನ್ಯವೆಂದಾಗಲಿ ಕೈಬಿಡದೆ, ತನ್ನ ಕಾಣ್ಕೆಗೆ ಕಲ್ಪಿತಾಂಶಗಳನ್ನು ಸೇರಿಸಿ ಒಪ್ಪವಿಡದೆ, ಇದ್ದಂತೆಯೇ ಚಿತ್ರಿಸುವುದು.. ವಾಸ್ತವಿಕತೆಯ ಗುರಿ ಮೇಲುನೋಟಕ್ಕೆ ಗ್ರಾಹ್ಯವೆಂದೇ ತೋರುತ್ತದೆ. ಅತ್ಯುಕ್ತಿ ಉತ್ಪ್ರೇಕ್ಷೆಗಳ ಹುಚ್ಚು ಕುಣಿತದಿಂದ ತುಂಬಿರುವ ಕಾವ್ಯಗಳನ್ನು ಓದಿ ಬೇಸರಪಟ್ಟವರಿಗೆ, ಕವಿಕಲ್ಪನೆಯ ರೆಕ್ಕೆಗುದುರೆಯನ್ನೇರಿ ಹೊರಟು ಮೋಡಗಳ ನಡುವೆಯೇ ತೊಳಲಾಡಿ ನಲೆದ ಮುಖವನ್ನು ಕಂಡೇನೆಯೇ ಎನ್ನಿಸಿದವರಿಗೆ, ವಾಸ್ತವಿಕತೆಯೇ ಕಲೆಯ ಜೀವಾಳವೆಂದು ತೋರುವುದು ಅಸಹಜವಲ್ಲ..

'..ಪ್ರಕೃತಿಯ ಅಥವಾ ಜೀವನದ ಪ್ರತಿಬಿಂಬವೋ ಪಡಿಯಚ್ಚೋ ಅಲ್ಲ ಕಲೆ. ಅವನ್ನು ಆಧಾರ ಸಾಮಗ್ರಿಯಾಗಿ ಬಳಸಿಕೊಂಡು ಹೊಸದೊಂದು ಜಗತ್ತನ್ನೇ ಕಲಾಕಾರನು ನಿರ್ಮಾಣ ಮಾಡುತ್ತಾನೆ.. ಕವಿಯ ಪ್ರತಿಭೆ ಒಂದು ಸಾದಾ ಕನ್ನಡಿಯಲ್ಲ. ಅದೊಂದು ಸೂಕ್ಷ್ಮ ದರ್ಶಿನಿ; ಜೀವನದಲ್ಲಿ ಅಣುರೂಪದಲ್ಲಿ ಅಡಗಿರುವ ಅಂಶಗಳನ್ನು ಬೃಹದಾಕಾರವಾಗಿ ಪ್ರಕಾಶಪಡಿಸುತ್ತದೆ. ಅದೊಂದು ದೂರದರ್ಶಿನಿ; ಕಾಲಾಂತರದ, ದೇಶಾಂತರದ, ಲೋಕಾಂತರದ ಸಂಗತಿಗಳನ್ನು ಹತ್ತಿರಕ್ಕೆ ತಂದು ಕಣ್ಣಿಗೆ ಕಟ್ಟಿ ನಿಲ್ಲಿಸುತ್ತದೆ. ಅದೊಂದು ವರ್ಣ ವಿಶ್ಲೇಷಿಣಿ: ಲೋಕದಲ್ಲಿ ಸಾಮಾನ್ಯವೆಂದೋ ರಸವೆಂದೋ ತೋರುವ ವಿಷಯಗಳನ್ನು ಬಿಡಿಸಿ ತೋರಿಸಿ ಬಣ್ಣಬಣ್ಣದ ಸೊಗಸನ್ನು ಅಲ್ಲಿ ಕಾಣಿಸುತ್ತದೆ. ಇಷ್ಟೇ ಅಲ್ಲ, ಅದೊಂದು ದೀಪಶಿಖೆ: ತಾನು ಕಂಡ ಸಂಗತಿಗಳ ಮೇಲೆ, ನೆಲದಲ್ಲಿ ಜಲದಲ್ಲಿ ಮುಗಿಲಲ್ಲಿ– ಎಲ್ಲಿಯೂ ಗೋಚರಿಸದ ನವೀನ ಕಾಂತಿಯನ್ನು ಬೀರುತ್ತದೆ..

'.. ಹೀಗೆ ಬ್ರಹ್ಮಸೃಷ್ಟಿಯ ರೂಪಪರಿವರ್ತನೆ ಕಲೆಗಾರರ ಅನಿವಾರ್ಯ ಕಾರ್ಯ, ಅತಿಶಯ ಮಹಿಮೆ. ತನ್ನ ಮುಂದಿರುವ ಅನಂತಸಾಮಗ್ರಿಯಲ್ಲಿ ಅವನು ಯಾವುದನ್ನು ಆರಿಸಿಕೊಳ್ಳುತ್ತಾನೆ, ಹೇಗೆ ನಿರೂಪಿಸುತ್ತಾನೆ, ಯಾವ ಭಾವಕ್ಕೆ ಪ್ರಾಮುಖ್ಯ ಕೊಡುತ್ತಾನೆ, ಯಾವ ಉದ್ದೇಶ ಸಾಧನೆಗೆ ಇದನ್ನೆಲ್ಲಾ ಒಳಪಡಿಸುತ್ತಾನೆ– ಎಂಬುದು ಮುಖ್ಯವಾಗಿ ಅವನ ದೃಷ್ಟಿಯನ್ನು ಅವಲಂಬಿಸುತ್ತದೆ. ಅಂತಃಶ್ಶಕ್ತಿಯನ್ನು, ಪ್ರತಿಭಾತಾರತಮ್ಯವನ್ನು ಇಲ್ಲಿ ಗಣಿಸದೆ ಬಿಟ್ಟರೆ, ಒಬ್ಬ ಕಲೆಗಾರನನ್ನು ಮತ್ತೊಬ್ಬನಿಂದ ಬೇರ್ಪಡಿಸಿ ಬೇರೆ ಬೇರೆ ವರ್ಗಗಳಾಗಿ ವಿಂಗಡಿಸುವುದು ಈ ದೃಷ್ಟಿಯಲ್ಲದೆ ಮತ್ತೊಂದಲ್ಲ..

'.. ಕಲೆಗೆ ಇಂಥ ವಸ್ತುವೇ ಬೇಕು, ಇಂಥದು ಕೂಡದು ಎಂದು ಅನುಶಾಸನ ಮಾಡುವ ಅಧಿಕಾರ ಯಾರಿಗೂ ಇಲ್ಲ.. ಹೆಚ್ಚು ಹೆಚ್ಚಾಗಿ ವಿವರಗಳನ್ನು ರಾಶಿಹಾಕುವ ಹೆಚ್ಚು ಪರಿಣಾಮಕಾರಿಯಾಗುವುದೆಂದು ಭಾವಿಸಬಾರದು. ಶಬ್ದಕ್ಕಿರುವುದು ವಾಚ್ಯಾರ್ಥವೊಂದೇ ಅಲ್ಲ; ಅದಕ್ಕಿಂತ ಮಿಗಿಲಾದ ಸೂಚ್ಯಾರ್ಥಕ್ಕೇ "ಧ್ವನಿ"ಗೇ, ಕಲೆಯಲ್ಲಿ ಪರಮಪ್ರಾಶಸ್ತ್ಯ..

'.. ಕವಿ ಪ್ರತಿಭೆ ನೆಲದ ಮೇಲೆ ನಡೆಯುವಂತೆ ಗಗನಕ್ಕೂ ಏರಬಲ್ಲುದು, ಅಲ್ಲಿ ಹಾರಾಡಲೂ ಬಲ್ಲುದು. ವಸ್ತು ಸ್ಥಿತಿಯನ್ನು ಮರೆಯದೆ ಅದರ ತಳಹದಿಯ ಮೇಲೆಯೇ ಕಲ್ಪನೆಯ ಕೊತ್ತಳಗಳನ್ನು ಕಟ್ಟಬಲ್ಲುದು, ಸೌಂದರ್ಯ ಸೌಧಗಳನ್ನು ನಿರ್ಮಿಸಬಲ್ಲುದು.. ದಿನಬಳಕೆಯ ಸಂಕುಚಿತ ಜೀವನದ ಸೆರೆಮನೆಯಲ್ಲಿ ಯಾವಾಗಲೂ ಕುಳಿತುಬಿಡಬಾರದು. ಕಲೆಯಲ್ಲಿ ರಮ್ಯವಾದ ಸ್ವಭಾವೋಕ್ತಿಗೆ ಸ್ಥಾನವಿರುವಂತೆಯೇ ಅತಿಶಯೋಕ್ತಿಗೂ ಹಿತವಾದ ಉತ್ಪ್ರೇಕ್ಷೆಗೂ ಉಂಟು.. ಪೌರಾಣಿಕ ಕಥೆಗಳನ್ನೂ ಹೀಗೆ ಹೊಸ ರೀತಿಯಲ್ಲಿ ನೋಡಿ ಉತ್ತಮ ಕಥೆಗಳನ್ನು ಬರೆಯಲು ಶಕ್ಯವಿಲ್ಲವೆ?..

'...ಇದಕ್ಕೆಲ್ಲಾ ಹದವಾದ ದೃಷ್ಟಿ- ಕಲೆಗಾರ ದೃಷ್ಟಿ ಬೇಕು..'

ಈ ಪರಿಯ ಸೊಬಗು ತೀನಂಶ್ರೀ ಎನ್ನುವ ಅಸಾಮಾನ್ಯ ಆಚಾರ್ಯರದ್ದು ಮತ್ತು ಅವರ ಯಾವುದೇ ಕೃತಿಯ ಯಾವುದೇ ಬರಹದ್ದು. ಕನ್ನಡಕ್ಕಾಗಿ ಸಂಸ್ಕೃತಕ್ಕಾಗಿ ದುಡಿಯುತ್ತಿದ್ದಾಗಲೇ, 'ಕನ್ನಡ ಭಾಷಾ ಚರಿತ್ರೆ'ಯನ್ನು ಬರೆಯುವ ಉತ್ಸಾಹವಿದ್ದಾಗಲೇ, ೧೯೬೬ರರಲ್ಲಿ ಕಲ್ಕತ್ತಾದಲ್ಲಿದ್ದಾಗ ಹಠಾತ್ತಾಗಿ ಹೃದಯಘಾತದಿಂದ ತೀನಂಶ್ರೀಯವರ ಮರಣಿಸಿದರು. ಇನ್ನಷ್ಟು ಆಯಸ್ಸು ಇದ್ದಿದ್ದರೆ ಈ ಭಾಷಾವಿಜ್ಞಾನಿ ಮತ್ತು ಉದಾರ ಚೇತನ ಕನ್ನಡ ನುಡಿಗೆ, ವಿವಿಧ ಭಾಷೆಗಳ ಬೆಳೆವಣಿಗೆಗಳನ್ನು ಕುರಿತ ಭಾಷಾ ವಿಜ್ಞಾನ ಕ್ಷೇತ್ರಕ್ಕೆ ಅದೆಷ್ಟು ಕಾಯಕವನ್ನು ಮಾಡಿರುತ್ತಿದ್ದರೋ. ನುಡಿಯೊಡಲ ಸಂಪತ್ತು ಮತ್ತು ಸೊಗಸಿನ ನೆಲೆವೀಡಾದ ಇಂತಹ ಕಲಾಕುಸುರಿಗಾರಿಕೆಯನ್ನು ಇನ್ನಾರಲ್ಲಿ ಕಂಡೇನು; ಇಂತಹ ಔನ್ನತ್ಯವೇರಿದ ಹಲವರು ಅಚಾರ್ಯರು ಇಳೆಗಿಳಿದು ಬಂದು ಕನ್ನಡ ಭಾಷೆ ಇನ್ನಷ್ಟು ಆಳ ಅಗಲ ಹೆಚ್ಚಳದಿಂದ ಕೂಡಿ ಕಂಪು ಪೆಂಪುಗಳನ್ನು ಹರಡಲಿ ಎನ್ನುವ ತವಕದಿಂದ ಹೊಸದಾಗಿ ಅಚ್ಚಾಗುತ್ತಿರುವ ಪುಸ್ತಕಗಳನ್ನು ಓದುತ್ತಿರುತ್ತೇನೆ.

ಇಷ್ಟು ಹೇಳಿಯಾದ ಮೇಲೂ ತೀನಂಶ್ರೀಯವರ 'ಉದಾರಚರಿತ' ವನ್ನು ಮನಗಂಡಿದ್ದೇನೆಯೋ ಇಲ್ಲವೋ ಎನ್ನುವ ಸಂಶಯ ನನ್ನದು! ತೀನಂಶ್ರೀ ಯವರ ಮೊದಲ ಕೆಲಸ ಅಧ್ಯಾಪನವಲ್ಲ, ಅಮಲ್ದಾರಿಕೆ. ಎಂ ಎ ಪ್ರಥಮರಲ್ಲಿ ಪ್ರಥಮರಾಗಿ ಮಾಡಿ, ೧೯೨೮ರಲ್ಲಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆ ಮಾಡಿದ್ದ ಕಾರಣ ಶ್ರೀರಂಗಪಟ್ಟಣದ ಅಮಲ್ದಾರರಾದರು. ಆದರೆ ಈ ಕೆಲಸ ಎರಡೇ ತಿಂಗಳಲ್ಲಿ ಅವರಿಗೆ ಬೇಸರ ತಂದಿತಂತೆ. ಬತ್ತದ ಜ್ಞಾನಮೋಹಿ ಅವರಾದ್ದರಿಂದ ಬಿ ಎಂ ಶ್ರೀ ಮತ್ತು ಟಿ ಎಸ್ ವಿ ಅವರ ಸಲಹೆಯಂತೆ 'ಕಡಿಮೆ ಸಂಬಳ'ದ ಕನ್ನಡ ಕಲಿಸುವ ಮೇಷ್ಟರಿಕೆ ಕೆಲಸಕ್ಕೆ ಮೈಸೂರಿನ ಇಂಟರ್‌ಮೀಡಿಯಟ್ ಕಾಲೇಜು ಸೇರಿದರು. ಸ್ವಕೃಷಿಯಿಂದ ೧೯೨೯ರಲ್ಲಿ ಇಂಗ್ಲಿಷ್, ಮತ್ತು ೧೯೩೧ರಲ್ಲಿ ಕನ್ನಡ ಎಂ. ಎ. ಪರೀಕ್ಷೆಗಳನ್ನು ಪ್ರಥಮರಲ್ಲಿ ಪ್ರಥಮರಾಗಿ ಸುವರ್ಣ ಪದಕಗಳನ್ನು ಪಡೆದರು. ೧೯೨೯ರಲ್ಲಿ ಮಹಾರಾಜ ಕಾಲೇಜಿಗೆ ವರ್ಗವಾಯಿತು. ೧೯೪೩ರರವರೆಗೆ ಅಲ್ಲೇ ಕೆಲಸ ಮಾಡಿದರು. ಹೀಗೆ ಅವರಿಗೆ ಅಲ್ಲಿ ಆಗಿನ ಕಾಲದಲ್ಲೇ ಸರ್ವಶ್ರೇಷ್ಠರೆನ್ನಸಿಕೊಂಡ ಎ ಆರ್ ಕೃಷ್ಣಶಾಸ್ತ್ರಿಗಳು, ಟಿ ಎಸ್ ವೆಂಕಣ್ಣಯನವರು, ಜೆ ಸಿ ರಾಲೋ, ಎ ಹಿರಿಯಣ್ಣನವರು, ಮಾಸ್ತಿ, ಡಿವಿಜಿ ಇವರಷ್ಟೇ ಅಲ್ಲ, ಎ. ಎನ್ ಮೂರ್ತಿರಾವ್, ಜಿ ಹನುಮಂತರಾವ್, ಡಿ ಎಲ್ ನರಸಿಂಹಾಚಾರ್, ಬಿ ಎಸ್ ಕೇಶವನ್. ಮು ತಿ ನರಸಿಂಹಾಚಾರ್, ಜಿ ಪಿ ರಾಜರತ್ನಂ, ವಿ ಸೀತಾರಾಮಯ್ಯ ಮುಂತಾದ ದೊಡ್ಡ ಚೇತನಗಳೊಡನೆ ಒಡನಾಡುವ ಅವಕಾಶವಾಯಿತು. ಒಬ್ಬರನ್ನು ಮೀರಿಸುವ ಧೀಮಂತಿಕೆ ಇನ್ನೊಬ್ಬರದ್ದು! ಮನೆಯನ್ನೇ ಮರೆಯುವಷ್ಟು ಚರ್ಚೆಗಳು, ವಿಚಾರಮಂಥನಗಳು ಮತ್ತು ಮಾತುಕತೆಗಳು ದಿನದಿನವೂ ನಡೆಯತೊಡಗಿದವು. ಪರಿಣಾಮವಾಗಿ ಸದಾ ತನಗಿಂತ ಹಿರಿತನವನ್ನು ಅರ್ಜಿಸುವ ಹಾತುವರಿಕೆಗೆ ಅವರ ಚೇತನ ಒಲಿಯಿತು. ಯಾರೋ ಒಮ್ಮೆ 'ನೀವು ಸಿವಿಲ್ ಸರ್ವೀಸಿನಲ್ಲೇ ಇದ್ದಿದ್ದರೆ ಸರ್ಕಾರದ ಉನ್ನತ ಹುದ್ದೆಗೇರುತ್ತಿದ್ದರಿ ಅಲ್ಲವೆ' ಎಂದು ವಿಚಾರಿಸಿದ್ದಕ್ಕೆ ತೀನಂಶ್ರೀ, 'ಇಷ್ಟು ಸಂತೋಷಪಡುತ್ತಿದ್ದನೆ?' ಎಂದರಂತೆ.

ತಮ್ಮ ಬರಹಗಳಲ್ಲಿ ತೀ.ನಂ.ಶ್ರೀ.ಯವರು ತಮ್ಮ ಬಗೆಗೆ ಹೇಳಿಕೊಂಡದ್ದು ಕಡಿಮೆ. ಅಪರೂಕ್ಕೊಮ್ಮೆ ಹೇಳಿಕೊಳ್ಳುವಾಗ ಸಹ ಅವರ ಜೀವನದೃಷ್ಟಿಯ ಸಭ್ಯತನ ಯಾವ ಮಟ್ಟದ್ದು ಎನ್ನುವುದು ಮಿಂಚುತ್ತದೆ! ಇದಕ್ಕೊಂದು ಉದಾಹರಣೆಯನ್ನು ನೋಡೋಣ. ಜಗತ್ತಿನ ಹೆಚ್ಚಿನ ಸ್ತ್ರೀ ಪುರುಷರು ಹಿರಿಯರು ಹೇಳಿದ್ದು, ಪ್ರೇಮ, ಕಾಮ, ಮೋಹ, ವಿಧಿಲಿಖಿತ ಇತ್ಯಾದಿ ಕಾರಣಕ್ಕೆ ವಿವಾಹವಾಗಿರುತ್ತಾರೆ. ವಿವಾಹವಾದ ನಂತರ ಸಖ-ಸಖಿಯಂತೆ ಬಾಳುವುದು ಅಂತರಂಗ ಧರ್ಮವಾದರೆ ಇಬ್ಬರಿಗೂ, ಕುಟುಂಬಕ್ಕೂ, ಜಗತ್ತಿಗೂ ಒಳಿತು. 'ಒಲುಮೆ' ಎನ್ನುವ ಪ್ರೇಮಗೀತೆಯ ಕವನ ಸಂಕಲದಲ್ಲಿ ಇದೆಲ್ಲವನ್ನೂ 'ಸ್ವಗತ' ಎನ್ನಿಸುವ ರೀತಿಯಲ್ಲಿ ಒಳಗೊಳ್ಳುವಂತೆ ಹೀಗೆ ಹಾಡಿದ್ದಾರೆ:

**ಅಂದು ತನಕ ಬಂಧಿಸಿದ್ದ**
**ನನ್ನ ಮನದ ಬಾಗಿಲು**
**ಒಂದೇ ಸಲಕೆ ತೆರೆದುಹೋಯ್ತು**
**ಅವಳು ಒಳಗೆ ಹೊಕ್ಕಳು**

**ಎಷ್ಟು ಮಂದಿ ಕನ್ಯೆಯರನು**
**ಹಿಂದೆ ನೋಡಿರಲಿಲ್ಲವು!**
**ಇಷ್ಟು ಬೇಗನಿಲ್ಲಿ ಮನಸು**
**ಹಿತವನೆಂತು ಪಡೆಯಿತು?**

**ಚೆಲುವೆಯೆಂದು ನುಡಿಯಲಾರೆ;**
**ಚದುರೆಯೆನೋ ತಿಳಿಯದು.**
**ಒಲಿದು ನನ್ನ ಹೃದಯವೆಂತು**
**'ಇವಳೆ ಸಾಕು' ಎಂದಿತು!.**

ಜೀವನಸಾರ್ಥ್ಯಕ್ಯ ಪಡೆಯಲು ಅಥವ ಸಭ್ಯತೆಯನ್ನು ಸಾಧಿಸಲು ಯಾರೂ 'ಕಷ್ಟ'ಪಡಬೇಕಾಗಿಲ್ಲ. ಅದು ಜೀವದಲ್ಲೇ ಅಡಗಿದೆ. ನುಡಿದಂತೆ ನಡೆಯಬೇಕು, ಕೊಡುತ್ತಾ ಬಾಳಬೇಕು ಎನ್ನುವಂತೆ ಬಾಳುವವರ ಪಥ ಹೀಗಿರುತ್ತದೆ, 'ಸರಾಗ'ವಾಗಿ, ಇತರರಿಗೆ ಮಾದರಿಯಾಗಿ.

❑❑

# ಜೈನ ಸಿದ್ಧಾಂತದಲ್ಲಿ ಶ್ರಾವಕ ಮತ್ತು ಶ್ರಮಣ ವ್ರತ ಚಿತ್ರಣ

– ಗುಡಿಬಂಡೆ ಪೂರ್ಣಿಮಾ

ಜೈನ ಧಾರ್ಮಿಕ ಸಾಹಿತ್ಯದಲ್ಲಿ ಎರಡು ವಿಭಾಗಗಳಿವೆ. ಒಂದು ತತ್ವಜ್ಞಾನಕ್ಕೆ ಸಂಬಂಧಿಸಿದ್ದು; ಇನ್ನೊಂದು ಆಚಾರಕ್ಕೆ ಸಂಬಂಧಿಸಿದ್ದು. ಜೀವನದ ವ್ಯವಹಾರ ದೃಷ್ಟಿಯಲ್ಲಿ ಆಚಾರಶಾಸ್ತ್ರ ಮಹತ್ವದ ಸ್ಥಾನ ಪಡೆದಿದೆ. ಇದರ ಮುಖಾಂತರವೇ ಮನುಷ್ಯನ ಬದುಕಿನ ಏರಿಳಿತಗಳು ಸಂಭವಿಸುತ್ತವೆ.

ಜಹಿ ಭಾವಇ ತಹಿ ಜಾಹಿಂ ಜಿಯ ಜಂ ಭಾವಇ ಕರಿ ತಂಜ
ಕೆಂವ ಇ ಮೊಕ್ಖು ಣ ಅತ್ಥಿ ಪರ ಚಿತ್ತ ಇ ಸುದ್ದಿಣ ಜಂಜಿ॥

– ಯೋಗೀಂದು

(ಓ ಜೀವನೇ ನೀನು ಬೇಕಾದಲ್ಲಿ ಹೋಗು; ಬೇಕಾದುದನ್ನು ಮಾಡು; ಆದರೆ ನಿನ್ನ ಚಿತ್ತ ಪರಿಶುದ್ಧವಾಗುವ ತನಕ ನಿನಗೆ ಮೋಕ್ಷ ಲಭಿಸಲಾರದು)

ಆಚಾರ ಶಾಸ್ತ್ರದಲ್ಲಿ ಎರಡು ಮಜಲುಗಳಿವೆ.

(೧) ಮುನಿಯ (ಶ್ರಮಣ) ಆಚಾರ

(೨) ಗೃಹಸ್ಥ (ಶ್ರಾವಕ) ಆಚಾರ

ದ್ವಾದಶಾಂಗ ಶ್ರುತ ಆಚಾರಾಂಗದಲ್ಲಿ ಸವಿಸ್ತಾರವಾಗಿ ವರ್ಣಿತವಾಗಿರುವ ಈ ಎರಡು ಆಚಾರಗಳಲ್ಲಿ ಪ್ರಥಮ ಶ್ರುತಾಂಗದಲ್ಲಿ ಮುನಿಧರ್ಮದ ವಿವರ. ಏಳನೆಯ ಶ್ರುತಾಂಗ ಉಪಾಸಕಾಧ್ಯಯನದಲ್ಲಿ ಗೃಹಸ್ಥಧರ್ಮದ ನಿರೂಪಣೆ ಇದೆ. ಆಚಾರ್ಯ ಪಟ್ಟಕೇರರು, ಮುನಿಧರ್ಮದ ಆಚಾರ ಸಂಹಿತೆಯನ್ನು ತಮ್ಮ ಗ್ರಂಥ 'ಮೂಲಾಚಾರ'ದಲ್ಲಿ ಸವಿಸ್ತಾರವಾಗಿ ಚರ್ಚಿಸಿದ್ದಾರೆ. "ಗೃಹಸ್ಥಧರ್ಮ" ಅಥವಾ "ಶ್ರಾವಕಾಚಾರ" ಧರ್ಮವನ್ನು ನಿರೂಪಿಸುವ ವಿಶಿಷ್ಟ ಗ್ರಂಥವೆಂದು, ಸ್ವಾಮಿ ಸಮಂತಭದ್ರರಿಂದ ವಿರಚಿತ 'ರತ್ನಕರಂಡಕ ಶ್ರಾವಕಾಚಾರ'ವು ಜೈನಗ್ರಂಥ ಅಪರಂಪರೆಯಲ್ಲಿ ಪ್ರಸಿದ್ಧವಾಗಿದೆ.

೧. ಜೋ ಲೋಗ ಸ್ಸೇಸಣಂ ಚರೇ – ಆಚಾರಾಂಗ

[ಲೋಕೈಷಣೆಯನ್ನು ಅನುಸರಿಸಬಾರದು. ಅಂದರೆ – ಜನರ ಕಣ್ಣು ಮುಂದೆ ತಪ್ಪು ಹೆಜ್ಜೆ ನಡೆಯಬಾರದು]

೨. ಸವ್ವೇ ಪಾಣಾ ಪಿಯಾಉಆ. ಸುಹಸಾಯಾ ದುಕ್ಖ ಪಡಿಕೂಲಾ ಅಪ್ಪಿಯವಹಾ॥
ಪಿಯ ಜೀವಿಣೋ ಜೀವಿ ಉಕಾಮಾ, ಸವ್ವೇಸಿಂ ಜೀವಿಯಂ ಪಿಯಂ

ಆಚಾರಾಂಗ॥

(ಎಲ್ಲ ಜೀವಿಗಳಿಗೂ ತಮ್ಮ ತಮ್ಮ ಪ್ರಾಣ ಪ್ರಿಯವಾಗಿದೆ. ಸುಖ ಪ್ರಿಯವಾಗಿದೆ. ಅವು ದುಃಖ ಬಯಸುವುದಿಲ್ಲ. ವಧೆ ಬಯಸುವುದಿಲ್ಲ. ಎಲ್ಲರೂ ಬದುಕಬಯಸುತ್ತಾರೆ. ಆದ್ದರಿಂದ ಎಲ್ಲರನ್ನೂ ರಕ್ಷಿಸಬೇಕು)

ಸ್ವಾಮಿ ಸಮಂತ ಭದ್ರಾಚಾರ್ಯರಿಂದ ನಿರೂಪಿಸಲ್ಪಟ್ಟ ರತ್ನಕರಂಡಕ ಶ್ರಾವಕಾಚಾರದಲ್ಲಿ ಜೈನ ಶ್ರಾವಕರ (ಗೃಹಸ್ಥ) ಆಚಾರಗಳನ್ನು ವಿವರಿಸಲಾಗಿದೆ. ಇಂಥ ಮತ್ತೊಂದು ಪರಿಪೂರ್ಣ ಗ್ರಂಥ (ಸಂಸ್ಕೃತ) ಈವರೆಗೆ ದೊರೆತಿಲ್ಲ. ಆಚಾರ್ಯ ಕುಂದಕುಂದರ 'ಚಾರಿತ್ರ ಪಾಹುಡ' ಆಚಾರ್ಯ ಉಮಾಸ್ವಾಮಿ ಅವರ 'ತತ್ವಾರ್ಥ ಸೂತ್ರ' ಗ್ರಂಥಗಳು ಕೆಲವು ಆಚಾರಗಳನ್ನು ಉಲ್ಲೇಖಿಸಿದರೂ ವಿವರವಾಗಿಲ್ಲ. ಇನ್ನು ಉಳಿದ ಕೃತಿಗಳು ಉದಾ: ಪುರುಷಾರ್ಥ ಸಿದ್ಧುಪಾಧ್ಯಾಯ, ಚಾರಿತ್ರಸಾರ, ಸೋಮದೇವ ಉಪಾಸಕಾಧ್ಯಯನ, ಸಾಗಾರ ಧರ್ಮಾಮೃತ..... ಕೃತಿಗಳು ಸ್ವಾಮಿ ಸಮಂತಭದ್ರರ ಕಾಲದ ನಂತರ ರಚಿತವಾಗಿವೆ. ಉಪಲಬ್ಧ ಜೈನ ಸಾಹಿತ್ಯದಲ್ಲಿ ಇದು ಮೊಟ್ಟ ಮೊದಲ 'ಶ್ರಾವಕಾಚಾರ' ಗ್ರಂಥವಾಗಿದ್ದು, ಇದು ರತ್ನ ಕರಂಡವೇ ಆಗಿದೆ.

ಜೈನಧರ್ಮದಲ್ಲಿ ಮುನಿ, ಅರ್ಜಿಕೆ, ಶ್ರಾವಕ ಶ್ರಾವಿಕೆಯರೆಂಬ ನಾಲ್ಕು ಅಂಗಗಳಿವೆ. 'ಶ್ರಾವಕ' ನೆಂದರೆ ಗೃಹಸ್ಥನಾದ ಪುರುಷ, ಶ್ರಾವಿಕೆಯೆಂದರೆ ಗೃಹಸ್ಥಳಾದ ಮಹಿಳೆ. 'ಶ್ರಾವಕ' ಪದದ ಅಪಭ್ರಂಶ ರೂಪವಾದ 'ಸರಾವಗಿ' ಎಂಬ ಉಪನಾಮವು ಕೆಲವೆಡೆಗಳಲ್ಲಿ ಈಗಲೂ ಪ್ರಚಾರದಲ್ಲಿದೆ. ಶ್ರಾವಕ ಮತ್ತು ಶ್ರಾವಿಕೆಯರಿಗೆ ಮಹತ್ವದ ಸ್ಥಾನವಿದೆ ಅವರಿಲ್ಲದೆ ಮುನಿಧರ್ಮ ಎಂದೂ ನಡೆಯದು. ಈ ಶ್ರಾವಕರಲ್ಲಿ ಕೆಲವರು ಮುನಿಗಳಾಗುವವರು. ಆದ್ದರಿಂದ ಶ್ರಾವಕರ ಆಚಾರ ಒಂದು ರೀತಿಯಿಂದ 'ಮುನಿ ನಿಯಮ'ಕ್ಕೆ ಬುನಾದಿ ಆಗಿದೆ. ಈ ಅಡಿಗಲ್ಲ ಮೇಲೆ ಮುನಿ ಚಾರಿತ್ರದ ನಿರ್ಮಾಣ. ಆದ್ದರಿಂದ ಜೈನ ಗೃಹಸ್ಥ ಒಬ್ಬ ಆದರ್ಶ ಶ್ರಾವಕ.

ಗೃಹಸ್ಥೋ ಮೋಕ್ಷ ಮಾರ್ಗಸ್ಥೋ ನಿರ್ಮೋಹೋ ನೈವ ಮೋಹವಾನ್
ಅನಗಾರೋ ಗೃಹೀ ಶ್ರೇಯಾನ್ ನಿರ್ಮೋಹೋ ಮೋಹಿನೋ ಮುನೇ

– ರ.ಶ್ರಾ

# ೬೦, ೩೧ ಕ್ರಾಸ್, ೭ನೇ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೭೦

(ಮೋಹವನ್ನು ತೊರೆದ ಗೃಹಸ್ಥ ಮೋಕ್ಷ ಮಾರ್ಗದಲ್ಲಿ ಮುನ್ನಡೆಯುತ್ತಾನೆ. ಆದರೆ ಮೋಹಿಯಾದ ಮುನಿ ಆ ಮಾರ್ಗವನ್ನು ಹಿಡಿಯಲಾರ. ಆದುದರಿಂದ ಮೋಹಿಯಾದ ಮುನಿಗಿಂತ ನಿರ್ಮೋಹಿಯಾದ ಶ್ರಾವಕನೇ ಶ್ರೇಷ್ಠ.) ಜೈನ ಸಿದ್ಧಾಂತ ತಿಳಿಸುವಂತೆ – ನ್ಯಾಯ ಮಾರ್ಗದಿಂದ ಹಣ ಸಂಪಾದಿಸುವವನೂ, ಗುಣವಂತರನ್ನು ಗೌರವಿಸುವವನೂ, ಹಿತಮಿತವಾದ ಮಾತುಗಳನ್ನಾಡುವವನೂ, ಒಂದು ಇನ್ನೊಂದಕ್ಕೆ ಬಾಧೆಯಾಗದ ಹಾಗೆ ಧರ್ಮಾರ್ಥ ಕಾಮಗಳಲ್ಲಿ ನಡೆಯುವವನೂ, ವಿನಯ ಸಂಪನ್ನನೂ ಆಹಾರ ವಿಹಾರಗಳಲ್ಲಿ ಉಚಿತಮಾರ್ಗಾವಲಂಬಿಯೂ, ಸಜ್ಜನರ ಸಹ ವಾಸಿಯೂ, ಶಾಸ್ತ್ರಜ್ಞ, ಕೃತಜ್ಞ, ದಯಾಳು, ಪಾಪಭೀರು.... ಇಷ್ಟು ಗುಣಗಳು ಇರುವವನೇ "ಶ್ರಾವಕ" ಎಂದು ಸಿದ್ಧಾಂತ ಹೇಳುತ್ತದೆ. ಇವನಿಗೆ ಎಂಟು ಮೂಲಗುಣಗಳಿರಬೇಕು. ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಮಿತ ಪರಿಗ್ರಹ, ಮದ್ಯ, ಮಾಂಸ, ಮಧುವರ್ಜನೆ ಇವುಗಳ ಸರ್ವಥಾ ತ್ಯಾಗ 'ಶ್ರಾವಕನ ಲಕ್ಷಣ'. 'ಮೂಲ' ಅಂದರೆ ಬೇರು. ಬೇರು ಚೆನ್ನಾಗಿ ಊರಿದಾಗ ಮುಂದೆ ಮರ ಹೆಮ್ಮರವಾಗಿ ಬೆಳೆಯುವಂತೆ ಈ ಮೂಲ ಗುಣಗಳು ಮುಂದಿನ ಮುನಿಧರ್ಮದ ಬೇರು. ಇವಿಲ್ಲದ ಯಾವ ಜೈನನೂ ಶ್ರಾವಕನಲ್ಲ.

ಎರಡು ವಿಧವಾದ ಜೀವಗಳು ಜೈನ ಸಿದ್ಧಾಂತದಲ್ಲಿದೆ. ಸ್ಥಾವರ ಮತ್ತು ತ್ರಸ. ಚಲಿಸುವ ಜೀವರಾಶಿ 'ತ್ರಸ' ಎನಿಸಿದರೆ ವನಸ್ಪತಿ ರೂಪದ ಜೀವ ಸಂಕುಲ 'ಸ್ಥಾವರ ಜೀವ' ಎನಿಸಿಕೊಳ್ಳುತ್ತದೆ. ತ್ರಸ ಜೀವಗಳ ಹಿಂಸೆ ನಾಲ್ಕು ವಿಧವಾಗಿದೆ. ಸಂಕಲ್ಪ ಹಿಂಸೆ, ಆರಂಭ ಹಿಂಸೆ, ಉದ್ಯೋಗ ಹಿಂಸೆ, ವಿರೋಧಿ ಹಿಂಸೆ. ಸಂಕಲ್ಪ ಹಿಂಸೆ ಬಿಡಲೇಬೇಕಾದ ಹಿಂಸೆ.

**ಜೀವವ ಹೋ ಅಪ್ಪವ ಹೋ ಜೀವದಯಾ ಹೋಇ ಅಪ್ಪಣೋ ಹ್ರದಯಾ ।**
**ವಿಸಕಂಟಕೋವ್ವ ಹಿಂಸಾ ಪರಿಹರಿದವ್ವಾ ತದೋ ಹೋದಿ ।**

**– ಶಿವಾರ್ಯ**

(ವಾಸ್ತವಿಕವಾಗಿ ಪ್ರಾಣಿಗಳ ವಧೆ ಎಂದರೆ ತನ್ನ ವಧೆಯೇ; ಪ್ರಾಣಿಗಳ ಮೇಲೆ ದಯೆದೋರಿದರೆ ನಿನ್ನ ಮೇಲೆ ದಯೆ ತೋರಿದಂತೆಯೇ ಸೈ. ಇದರಿಂದ ನಂಜಿನ ಮುಳ್ಳಿನಂತಿರುವ ಹಿಂಸೆಯನ್ನು ದೂರದಿಂದಲೇ ಬಿಟ್ಟು ಬಿಡಬೇಕು)

**ಕೊಲಲುಂ ಪುಸಿಯಲುಮಾಗದು ಸಲಲಾಗದು ಪೆರರ ಪೆಂಡಿರೊಳಾ**
**ಕಳಲಾಗದು ತೀರದುದಕ್ಕಲವರಲಾಗದು ಪರತ್ರಯಂ ಬಯಸುವವಂ**
**ಇವು ಮೊತ್ತ ಮೊದಲಣುವ್ರತಮಿವುಮಸುಳದೆ ನಡೆದೊಡೈಹಿಕಾಮುತ್ರಿಕಮೆಂ**
**ಬಿವರೊಳ್ ಸಮಸುಖಿಯಪ್ಪಂ ಭವಭವದೊಳ್ ದುಃಖಿಯಪ್ಪ ನಿವುಮಸುಳ್ದಾಂತಂ**

**– ಜನ್ನ-ಯಶೋಧರ ಚರಿತೆ – ನಾಲ್ಕನೆ ಅವತಾರ "೨೨, ೨೩"**

ಹೀಗೆ, ಅಣುವ್ರತಗಳು ಶ್ರಾವಕಧರ್ಮದ ಮೂಲವ್ರತವಾದರೆ ಇದೇ ಮಹಾವ್ರತಗಳಾಗಿ ಜೈನ ಮುನಿಧರ್ಮದ ವ್ರತಾಚರಣೆಯ ಆದಿ ಸ್ವರೂಪವಾಗಿದೆ. ಚಾರಿತ್ರ ಅಥವಾ ವ್ರತಾಚರಣೆ ಸಕಲ ಮತ್ತು ವಿಕಲ ರೂಪಗಳಲ್ಲಿವೆ.

**ಸಕಲಂ ವಿಕಲಂ ಚರಣಂ ತತ್ಸಕಲಂ ಸರ್ವಸಂಗ ವಿರತಾನಾಮ್**
**ಅನಗಾರಾಣಾಂ ವಿಕಲಂ ಸಾಗಾರಾಣಾಂ ಸಸಂಗಾನಾಮ್ ॥ ೨೧೦॥**

ಎಲ್ಲ ಪರಿಗ್ರಹಗಳಿಂದ ವಿರಕ್ತನಾಗಿರುವ ಮುನಿಯ ನಡತೆಯು 'ಸಕಲ ಚಾರಿತ್ರ' ಎನಿಸುತ್ತದೆ. ಪರಿಗ್ರಹ ಸಹಿತ ಇರುವಂಥ ಶ್ರಾವಕರ ನಡತೆಯು 'ವಿಕಲ ಚಾರಿತ್ರ' ಎನಿಸುತ್ತದೆ. ಇನ್ನೊಂದು ಅರ್ಥದಲ್ಲಿ ಇವು 'ವಿರಕ್ತಿ' 'ಅವಿರಕ್ತಿ'ಗಳೇ ಆಗಿವೆ. ಇವು ಮುಖ್ಯವಲ್ಲ. ಮನೆಯನ್ನು ಬಿಟ್ಟ ಮಾತ್ರಕ್ಕೆ ಮಹಾವ್ರತಿಯೂ ಸಕಲ ಸಂಯಮಿ ಆಗುವುದಿಲ್ಲ. ಸಕಲ ಸಂಗ ವಿರಕ್ತನಾಗಿದ್ದೂ, ಮನೆಯಲ್ಲಿ ವಾಸಿಸುವನೂ ಸಹ ಒಮ್ಮೊಮ್ಮೆ ಸಂಪೂರ್ಣ ವಿಕಲ ಚಾರಿತ್ರಿ – ಅಣುವ್ರತಿ – ಎನಿಸುವುದಿಲ್ಲ. ಆ ಸ್ಥಿತಿಯಲ್ಲಿಯೂ ಮಹಾವ್ರತಿಯಾಗುವ ಸಂಭವ ಇದೆ. ಹೀಗಾಗಿ, ಸಮಂತಭದ್ರರ ನುಡಿಯಲ್ಲಿ ಸಾಮಾಯಕದಲ್ಲಿರುವ ಶ್ರಾವಕನನ್ನು 'ಯತಿ ಭಾವ ಹೊಂದಿದ ಮುನಿ' ಎಂದಿದ್ದಾರೆ ಅಲ್ಲದೆ, ಮೋಹವುಳ್ಳ ಮುನಿಗಿಂತ ನಿರ್ಮೋಹಿಯಾದ ಶ್ರಾವಕ ಶ್ರೇಷ್ಠನೆಂದೂ ಭಾವಿಸಲಾಗುತ್ತದೆ.

**ಸಮಸತ್ತು – ಬಂಧುವಗ್ಗೋ ಸಮಸುಹ – ದುಖ್ಖೋ ಪಸಂಸ – ಚಿಂದ ಸಮೋ**
**ಸಮಲೊಟ್ಠ – ಕಂಚಣೋ ಪುಣ ಜೀವಿದ – ಮರಣೇ ಸಮೋ ಸಮಗೋ**

**– ಕುಂದ ಕುಂದ**

[ಶತ್ರು – ಮಿತ್ರರಲ್ಲಿ, ಸುಖ ದುಃಖದಲ್ಲಿ ಹೊಗಳಿಕೆ – ತೆಗಳಿಕೆಗಳಲ್ಲಿ ಮಣ್ಣು – ಹೊನ್ನಿನಲ್ಲಿ, ಜೀವನ –ಮರಣದಲ್ಲಿ ಸಮಭಾವವುಳ್ಳವನೇ ಶ್ರವಣನು ಅಂದರೆ ಜೈನ ಮುನಿಯು]

ಒಟ್ಟು ಶ್ರಾವಕನಾಗಲಿ, ಶ್ರಮಣನಾಗಲಿ, ಜೈನ ಸಿದ್ಧಾಂತದ ಅನುಸಾರ ವ್ರತಪಾಲನೆ, ನಿತ್ಯಧರ್ಮಾಚರಣೆ ಒಂದೇ ಸ್ವರೂಪದ್ದಾಗಿದ್ದು, ಶ್ರಾವಕರಲ್ಲಿ ಅಣುರೂಪ [ಸಾಧ್ಯವಿದ್ದಷ್ಟು – ಸಂಸಾರ ನಿರ್ವಹಣೆಗೆ ತೊಂದರೆ ಆಗದಂತೆ] ದಲ್ಲಿದ್ದು ಮುನಿಗಳಿಗೆ ಅದು ಮಹಾವ್ರತಗಳಾಗಿ ಪರಿಗಣಿಸಲ್ಪಡುತ್ತವೆ. ಅದೆಲ್ಲಕ್ಕೂ ಮುಖ್ಯವಾದದ್ದು.

**॥ ವತ್ಥು ಸಹಾವೋ ಧಮ್ಮೋ ಖಮಾದಿಭಾವೋ ದಸವಿಹ ಧಮ್ಮೋ**
**ರಯಣತ್ತಯಂ ಧಮ್ಮೋ, (ಅಹಿಂಸಾಣಾಂ ಧಮ್ಮೋ) ॥**
**'ಜೀವಾಣಂ ರಕ್ಖಣಿ ಧಮ್ಮೋ**

ಎಂಬ ಮೂಲ ಸ್ಥಾಯಿ. ಇದರ ಮತ್ತೊಂದು ರೂಪ,

**ತತ್ವ ಪ್ರೀತಿ ಮನಕ್ಕೆ ಪುಟ್ಟಲ್ಲದು ಸಮ್ಯಗ್ದರ್ಶನಂ ಮತ್ತಮಾ**
**ತತ್ವಾರ್ಥಂಗಳನೊಲ್ದು ಭೇದಿಪುದು ಸಮ್ಯಜ್ಞಾನಂ ಮಾ**
**ಬೋಧಂಗಳನ್ ತತ್ವಂಗಳ್ ಕಿಡದಂತುಟೋವಿ ಸಮ್ಯಕ್ಚರಿತ್ರಂ**
**ಸುರತ್ನತ್ವಂ ಮೂರಿವು ಮುಕ್ತಿಗೆಂದರಪಿದೈ ರತ್ನಾಕರಾಧೀಶ್ವರಾ ॥**

**– ರತ್ನಾಕರ ಕವಿ – ಶತಕತ್ರಯ**

ಆದರೆ,

**ತತ್ವಜ್ಞಾನ ವಿಹೀನಾನಾಂ ನೈರ್ಗಂಥ್ಯಮಪಿ ನಿಷ್ಫಲಂ**
**ನಹಿ ಸ್ಥಾಲ್ಯಾದಿಭಿಃ ಸಾಧ್ಯಮನ್ನ ಮನ್ಯೈರ ತಂಡುಲೈಃ**

**– ಕ್ಷತ್ರ ಚೂಡಾಮಣಿ**

[ತತ್ವಗಳನ್ನು ತಿಳಿಯದೆ ನಿರ್ಗ್ರಂಥ ಮುನಿಯಾದರೂ ಪ್ರಯೋಜನವಿಲ್ಲ. ಅನ್ನ ಮಾಡಲು ಅಕ್ಕಿಯೇ ಇಲ್ಲದ ಮೇಲೆ ಹಂಡೆ, ಚರಿಗೆ, ಸೌಟುಗಳಿಂದ ಅಡುಗೆಯಾದೀತೇ?]

**ಗೃಹಸ್ಥೋ ಮೋಕ್ಷಮಾರ್ಗಸ್ಥೋ ನಿರ್ಮೋಹೋ ನೈವ ಮೋಹವಾನ್**
**ಅನಗಾರೋ ಗೃಹೀ ಶ್ರೇಯಾನ್ ನಿರ್ಮೋಹೋ ಮೋಹಿನೋ ಮುನೇ ॥**

**– ರತ್ನಕರಂಡಕ ಶ್ರಾವಣ**

[ಮೋಹವನ್ನು ತೊರೆದ ಗೃಹಸ್ಥ ಮೋಕ್ಷಮಾರ್ಗದಲ್ಲಿ ಮುನ್ನಡೆಯುತ್ತಾನೆ. ಆದರೆ... ಮೋಹಿಯಾದ ಮುನಿ ಆ ಮಾರ್ಗವನ್ನು ಹಿಡಿಯಲಾರ. ಆದುದರಿಂದ ಮೋಹಿಯಾದ ಮುನಿಗಿಂತ ನಿರ್ಮೋಹಿಯಾದ ಶ್ರಾವಕನೇ ಶ್ರೇಷ್ಠ]

ಆರಂಭಗಳಲ್ಲಾಗುವ ಹಿಂಸೆಯ ಹೊರತು ವಿನೋದಕ್ಕಾಗಿ, ನಾಲಿಗೆಯ ರುಚಿಗಾಗಿ ಚರ್ಮವನ್ನು ಪಡೆಯುವುದಕ್ಕಾಗಿ ಹಾಗೂ ಧರ್ಮಕ್ಕಾಗಿ ಅದರ ಹೆಸರಿನಲ್ಲಿ, ಮಾಡಲಾಗುವ ಪಶುಹತ್ಯೆ ಮಾಡುವುದಷ್ಟೇ ಅಲ್ಲ. ಮೃತ ಶರೀರದಿಂದ ತಯಾರಾಗುವ ವಸ್ತುಗಳನ್ನು ಸಹ ಬಳಸಬಾರದು ಕಾರಣ ಇದು ಹಿಂಸೆಗೆ ಒಪ್ಪಿಗೆ ಕೊಟ್ಟಂತೆ, ಅನುಮೋದನಾ ಹಿಂಸೆಯ ವ್ಯಾಪ್ತಿಗೆ ಬರುತ್ತದೆ. ಗೃಹಸ್ಥನಿಗೆ ಉದ್ಯೋಗ, ವ್ಯವಸಾಯಗಳಿಲ್ಲದೆ ಜೀವನ ನಿರ್ವಹಣೆ ಅಸಾಧ್ಯವಾದುದರಿಂದ ಆರಂಭ ಹಿಂಸೆ ಅಪರಿಹಾರ್ಯವಾಗಿದೆ. ಆದಷ್ಟೂ ಕಡಿಮೆ ಹಿಂಸೆಯಾಗುವ ಉದ್ಯೋಗವನ್ನು ಕೈಗೊಳ್ಳುವುದಷ್ಟೇ ಅಲ್ಲ ಸುಗಮ ಜೀವನಕ್ಕೆ ಬೇಕಾಗುವಷ್ಟೆ ಉದ್ಯೋಗ ಮಾಡಬೇಕು, ಏಕೆಂದರೆ ಮಿತ ಆರಂಭ. ಮಿತ ಪರಿಗ್ರಹ ಉಳ್ಳ ಗೃಹಸ್ಥ / ಶ್ರಾವಕ ಮಾತ್ರವೇ ಅಹಿಂಸಾಣು ವ್ರತವನ್ನು ಪಾಲಿಸಬಲ್ಲ ಎನ್ನುತ್ತದೆ ಸಿದ್ಧಾಂತ. ಇದಕ್ಕೂ ಕೂಡ ತನ್ನ ನಿತ್ಯ ಸಾಮಾಯಿಕ ಧ್ಯಾನದಲ್ಲಿ ಪ್ರಾಯಶ್ಚಿತ್ತ ಕೈಗೊಳ್ಳಬೇಕು ಎನ್ನುತ್ತದೆ.

**ಏಕೇಂದ್ರಿಯಾದ್ಯಾ ಯದಿ ದೇವ ದೇಹಿನಃ**
**ಪ್ರಮಾದತಃ ಸಂಚರಣ ಇತಸ್ತತಃ**
**ಕ್ಷತಾ ವಿಭಿನ್ನಾ ಮಿಲಿತಾ ನಿಪೀಡಿತಾಃ**
**ತದಸ್ತು ಮಿಥ್ಯಾ ದುರನುಷ್ಠಿ ತಂತದಾ ॥೬॥**

**– ಸಾಮಾಯಿಕ ಸ್ತೋತ್ರ**

ಅಹಿಂಸಾಣುವ್ರತಧಾರಿಯಾದ ಶ್ರಾವಕನು ಅದಕ್ಕೆ ಐದು ದೋಷಗಳು ಒದಗದ ಹಾಗೆ ಎಚ್ಚರ ವಹಿಸಬೇಕೆಂದು ಸಿದ್ಧಾಂತ ಹೇಳುತ್ತದೆ.

೧) ಕೆಟ್ಟ ಇರಾದೆಯಿಂದ, ಮನುಷ್ಯ, ಪ್ರಾಣಿ, ಪಕ್ಷಿಗಳನ್ನು ಕಟ್ಟಿ ಹಾಕುವುದು, ಕೂಡಿ ಹಾಕುವುದು.

೨) ಆಯುಧ ಅಥವಾ ಕೈಗಳಿಂದ ಹೊಡೆಯುವುದು.

೩) ವಿನಾಕಾರಣ ಅವಯವಗಳನ್ನು ಕತ್ತರಿಸುವುದು. ವೈದ್ಯಕೀಯ ಅನಿವಾರ್ಯತೆ ಇದಕ್ಕೆ ಅನ್ವಯಿಸುವುದಿಲ್ಲ. ಜೀವ ರಕ್ಷಣೆಯೇ ಪರಮ ಗುರಿ.

೪) ಕೋಪ / ಲೋಭದಿಂದ ಮಿತಿ ಮೀರಿ ದುಡಿಸುವುದೂ ಕೂಡ ಅಹಿಂಸಾವ್ರತಕ್ಕೆ ದೋಷವೇ.

೫) ಆಹಾರ, ನೀರುಗಳನ್ನು ತಡೆಯುವುದು ಅಂದರೆ ಉಪವಾಸ ಹಾಕುವುದು. ನೀರನ್ನು ನೀಡದಿರುವುದೂ ಕೂಡ ಈ ಪಟ್ಟಿಯಲ್ಲಿ ಸೇರುತ್ತದೆ.

ಅಹಿಂಸಾ ಮೂಲಕವಾದ ಯಾವುದೇ ವ್ಯವಹಾರ ಶ್ರಾವಕನ ಆತ್ಮ ವಿಶ್ವಾಸ, ಶುದ್ಧಿ, ಲೋಕಪ್ರೇಮ, ಸಮಾಜ ಹಿತ ಎಲ್ಲವನ್ನೂ ಹೆಚ್ಚಿಸುತ್ತದೆ. ಬಂಧು, ಮಿತ್ರ, ಎಲ್ಲವೂ ವಿಪುಲವಾಗುತ್ತವೆ. ಈ ಬಗೆಗೆ ಜೋಡಣೆಯಂತೆ ಮತ್ತೊಂದು ಅತ್ಯಂತ ಅವಶ್ಯಕ ನಿಯಮ ಅಹಿಂಸಾವ್ರತದಲ್ಲಿದೆ. ಅದೆಂದರೆ ತ್ರಸಜೀವಗಳು ಹೇರಳವಾಗಿ ಉತ್ಪತ್ತಿಯಾಗುವ ರಾತ್ರಿ ಸಮಯದಲ್ಲಿ ಆಹಾರ ಸ್ವೀಕರಿಸದಿರುವುದು. ರಾತ್ರಿ ಹೊತ್ತಿನ ಕೃತ್ರಿಮವಾದ ಪ್ರಕಾಶ ಈ ತ್ರಸಜೀವಗಳ ಉತ್ಪತ್ತಿ ತಡೆಯಲು ಆಗುವುದಿಲ್ಲ. ವೈದ್ಯಕೀಯವಾದ ಸಮರ್ಥನೆಯೂ ಇದಕ್ಕಿದೆ. ಊಟದ ನಂತರ ಕನಿಷ್ಠ ಮೂರು ಘಂಟೆಗಳ ನಂತರವೇ ಆಹಾರ ಪರಿಪಾಕವಾಗುವುದರಿಂದ ಅದರ ನಂತರದ ನಿದ್ರಾಕಾಲ ಹಿತವಾಗಿರುತ್ತದೆ. ಅಲ್ಲದೆ, ನೀರನ್ನು ಶೋಧಿಸದೆ ಕುಡಿಯಬಾರದು ಎಂಬುದೂ ಅಹಿಂಸಾವ್ರತದ ನಿಯಮದಲ್ಲಿದೆ. ಇತ್ತೀಚೆಗೆ ವೈದ್ಯಲೋಕವೇ ಇದನ್ನು ನಿಯಮವಾಗಿ ಕಡ್ಡಾಯಗೊಳಿಸಿದ್ದು ಪ್ರತಿ ಮನೆಯಲ್ಲೂ ಅಕ್ವಾಗಾರ್ಡ್, ಫಿಲ್ಟರ್‌ಗಳು ಇರುವುದು ಗೊತ್ತಿರುವ ವಿಷಯವಾಗಿದೆ.

ಜೈನ ಮುನಿಗಳು ಇದಕ್ಕೆ ಇನ್ನೂ ಒಂದು ಹೆಜ್ಜೆ ಮುಂದಿದ್ದು, ಅವರು ಕುಡಿಯಲು ಹಾಗೂ ಶೌಚಕ್ರಿಯೆಗಾಗಿ ಬಳಸುವ ಒಟ್ಟು ಜಲ ಕುದಿಸಿದ್ದೇ ಆಗಿರುತ್ತದೆ. ಹೀಗಾಗಿ ಅಹಿಂಸಾಣುವ್ರತ ಕೇವಲ ಧಾರ್ಮಿಕ ವ್ರತಾಚರಣೆ ಅಲ್ಲ. ಸಮಷ್ಟಿಹಿತ, ಜೀವಹಿತ, ಸ್ವಾತ್ಮ ಹಿತವೂ ಕೂಡಿದ ಪ್ರಾಥಮಿಕ ನಿಯಮವಾಗಿದೆ.

**ಸತ್ಯಾಣುವ್ರತ:** ಜೈನ ಸಿದ್ಧಾಂತದಲ್ಲಿ, ಸತ್ಯಾಣುವ್ರತ ಎನ್ನುವುದು ಸ್ವತಂತ್ರ ವ್ರತವಲ್ಲ. ಅಹಿಂಸಾವ್ರತವನ್ನು ರಕ್ಷಿಸುವುದು ಈ ವ್ರತದ ಉದ್ದೇಶ, ಹಾಗಾಗಿ, ಬೇರೆಯವರಿಗೆ ದುಃಖ ಉಂಟು ಮಾಡಬೇಕು ಎನ್ನುವ ಕಾರಣದಿಂದ ಆಡುವ ಮಾತು ಸತ್ಯವೇ ಆದರೂ ಅದನ್ನು ಅಸತ್ಯವೆಂದೇ ಹೇಳಲಾಗುತ್ತದೆ. ಅಸತ್ಯವನ್ನಾಡುವುದರಲ್ಲೂ ಅನೇಕ ವಿಧಗಳಿವೆ. ೧. ಮನುಷ್ಯರ ವಿಚಾರದಲ್ಲಿ, ಅಪವಾದ, ನಿಂದನೆ ಇತ್ಯಾದಿ. ೨. ಪ್ರಾಣಿಗಳ ವಿಚಾರದಲ್ಲಿ, ದೋಷಾರೋಪಣೆ. ೩. ನಿರ್ಜೀವ ವಸ್ತುಗಳ ಬಗೆಗೆ ತೆರಿಗೆ ತಪ್ಪಿಸಿಕೊಳ್ಳುವಲ್ಲಿ, ತನ್ನದಲ್ಲದ್ದನ್ನು ತನ್ನದೆಂದು ತೋರಿಸಿ ಕೊಳ್ಳುವ ಬಗೆ, ೪. ಲಂಚ/ದಾಕ್ಷಿಣ್ಯದಿಂದ ಸತ್ಯಕ್ಕೆ ವಿರುದ್ಧವಾದ ಸಾಕ್ಷಿ ಹೇಳುವಿಕೆ. ೫. ಪರರ ವಸ್ತು ಪರಿಹರಿಸುವಲ್ಲಿ ಅಸತ್ಯ ಹೇಳುವಿಕೆ.... ಈ ಬಗೆಯ ಕೃತ್ಯಗಳನ್ನು ಅನೃತ ರೂಪದಲ್ಲಿ ಶ್ರಾವಕ ನಡೆಸುವಂತಿಲ್ಲ, ವೈರತ್ವ, ಅಪನಂಬಿಕೆ, ಅನಾಚಾರಕ್ಕೆ ಪ್ರೋತ್ಸಾಹ, ನಿಂದನೆ,

ವ್ಯವಹಾರ ನಷ್ಟ ಇವು ಪರಿಣಾಮ ರೂಪದಲ್ಲಿ ದೊರೆಯುತ್ತದೆ. ಸಿಟ್ಟಿಗೆ, ಲೋಭಕ್ಕೆ, ಬೆದರಿಕೆಗೆ, ಭಯಕ್ಕೆ, ತಮಾಷೆಗೆ ಹೀಗೆ... ಈ ಬಗೆಯಲ್ಲೂ ಸುಳ್ಳಾಡುವಂತಿಲ್ಲ.

೧. ಸ್ಥೂಲಮಲೀಕಂ ನವದತಿ ನ ಪರಾನ್ ವಾದಯತಿ ಸತ್ಯಮಪಿ ವಿಪದೇ
ಯತ್ತದ್ವದಂತಿ ಸಂತಃ ಸ್ಥೂಲವ ಮೃಷಾವಾದ ವೈರ ಮಣಮ್ ॥ ೫೫॥

೨. ಉಳ್ಳುದನಿಲ್ಲೆಂದೀತಂ ಕಳ್ಳಂ ನುಡಿದಂತೆ ಮುಸಿದ ಪಾಪದ ಫಲದಿಂ
ದೆಲ್ಲಿಯು ನಿಲ್ಲದೆ ತಾಂ ತಳುವಿಲ್ಲದೆ ಕಣ್ಗೊಡೆದು ದುಃಖ ಭಾಜನನಾದಂ
ವಸುಮತಿಯೊಳ್ ವಿಬುಧರ್ ಭಾವಿಸುವೊಡೆ ನರಕಕ್ಕೆ ಪೋಪ ಪೆರ್ದಾರಿ ಮಹಾ
ವ್ಯಸನಕ್ಕೆ ಮೂಮಳಿವೊಡೆ ಮುಸಿಯಿಂದಂ ಬಿಟ್ಟು ಪಾತಕಂ ಪೆಳತೋಳವೇ

– ನಯಸೇನ – ಧರ್ಮಾಮೃತಂ

ಸತ್ಯಾಣುವ್ರತಕ್ಕೆ ಭಂಗ ತರುವ ಐದು ಅತಿಚಾರಗಳ ಬಗೆಗೂ ಸಿದ್ಧಾಂತ ಎಚ್ಚರಿಸುತ್ತದೆ.

ಪರಿವಾದ ಹೋ ಭ್ಯಾಖ್ಯಾ ಪೈಶೂನ್ಯಂ ಕೂಟಲೇಖ ಕರಣಂ ಚ
ನ್ಯಾಸಾಪಹಾರ ತಾಪಿ ಚ ವ್ಯತಿಕ್ರಮಾಃ ಪಂಚ ಸತ್ಯಸ್ಯ ॥ ೫೬॥

[ಬೈಯುವುದು, ಮುಚ್ಚಿಡಬೇಕಾದ್ದನ್ನು ಪ್ರಕಟಿಸುವುದು, ಚಾಡಿ ಹೇಳುವುದು, ಸುಳ್ಳು ಕಾಗದ ಪತ್ರಗಳನ್ನು ನಿರ್ಮಿಸುವುದು, ಅಡವು ಇಟ್ಟ ವಸ್ತುಗಳನ್ನು ಲಪಟಾಯಿಸುವುದು... ಇವು ಸತ್ಯಾಣುವ್ರತದ ಅತಿಚಾರಗಳು]

ಸತ್ಯಾಣುವ್ರತದ ಆಚರಣೆಯಿಂದ, ಜನ್ಮ ಸಾಫಲ್ಯತೆ ಉಂಟಾಗುತ್ತದೆ. ದಯೆ, ವಾತ್ಸಲ್ಯ, ಮಮತೆ, ಕಾಳಜಿ ಸಹಿತ ಸಮ್ಯಕ್ತ್ವದ ಪ್ರಭಾವನೆ ಆಗುತ್ತದೆ.

**ಅಚೌರ್ಯಾಣುವ್ರತ** : ಪರರ ವಸ್ತುಗಳನ್ನು ಅನುಮತಿ ಇಲ್ಲದೇ ತೆಗೆದಿಟ್ಟುಕೊಳ್ಳುವುದು, ಮತ್ತೊಬ್ಬರಿಗೆ ಕೊಟ್ಟು ಬಿಡುವುದೂ ಸಹ 'ಚೌರ್ಯ' ಎನಿಸುತ್ತದೆ. ಅಚೌರ್ಯಾಣುವ್ರತಧಾರಿಯಾದ ಶ್ರಾವಕ

ನಿ ಹಿತಂ ವಾ ಪತಿತಾಂ ವಾ ಸುವಿಸ್ಮೃತಂ ವಾ ಪರಸ್ವಮ ವಿಸೃಷ್ಟಮ್
ನ ಹರತಿ ಯನ್ನ ಚ ದತ್ತೇ ತದಕೃಶ ಚೌರ್ಯಾದು ಪಾರಮಣಮ್ ॥ ೫೭॥

ಕಳ್ಳನಿಗೆ, ಕಳವಿಗೆ, ಪ್ರೋತ್ಸಾಹ ಕೊಡುವುದು, ಕೊಡಿಸುವುದು, ಹೊಗಳುವುದು, ಕಳವಿಗೆ ಸಹಕಾರಿ ಆಗುವ ವಸ್ತುಗಳನ್ನು ಮಾರುವುದು ಅಥವಾ ಎರವಲು ಕೊಡುವುದು, ಕಳವಿನ ವಸ್ತು ಪಡೆಯುವುದು, ಕೊಳ್ಳುವುದು ರಹಸ್ಯ ಕಾಪಾಡುವುದು, ಕಡಿಮೆ ಅಳತೆಯಲ್ಲಿ ಮರುವುದು, ಬೆಲೆಯುಳ್ಳ ವಸ್ತುವಿಗೆ ಕಡಿಮೆ ಬೆಲೆಯ ವಸ್ತು ಬೆರಸಿ ಮಾರುವುದು, [ಧಾನ್ಯಕ್ಕೆ ಕಲ್ಲು, ಮಣ್ಣು, ತುಪ್ಪಕ್ಕೆ ಎಣ್ಣೆ... ಹೀಗೆ] ಅಗತ್ಯ ವಸ್ತುಗಳ ಮುಗ್ಗಟ್ಟಿನಲ್ಲಿ ಬೆಲೆ ಏರಿಸಿ ಮಾರುವುದು, ನಿರ್ಬಂಧಿತ ಪ್ರದೇಶಗಳಿಗೆ ಸಾಗಾಣಿಕೆ ಮಾಡುವುದು, ಮಾಡಿಸುವುದು, ಆದಾಯ ತೆರಿಗೆ, ಟಿಕೆಟಿಲ್ಲದೆ ಪ್ರಯಾಣ. ಹೀಗೆ ಈ ಬಗೆಯ ಎಲ್ಲ ಕೆಲಸಗಳೂ ಚೌರ್ಯವೇ.

ಈ ಯಾವುದನ್ನೂ ಅಚೌರ್ಯಾಣುವ್ರತಧಾರಿಯಾದ ಶ್ರಾವಕ ಮಾಡುವಂತಿಲ್ಲ. ಇದು ಸಮಾಜ ದ್ರೋಹ, ದೇಶದ್ರೋಹ, ಸತ್ಯದ್ರೋಹ, ಆತ್ಮದ್ರೋಹ.

**ಬ್ರಹ್ಮಚರ್ಯಾಣುವ್ರತ** : ಇದು ಎರಡು ಬಗೆಯಲ್ಲಿ ಪಾಲಿಸುವಂಥ ವ್ರತವಾಗಿದೆ.

ನ ಚ ಪರದಾರಾನ್ ಗಚ್ಛತಿ, ನಪರಾನ್ ಗಮಯತಿ ಚ ಪಾಪ ಭೀತೇರ್ಯತ್ ।
ಸಾ ಪರದಾರ ನಿವೃತ್ತಿ: ಸ್ವದಾರ ಸಂತೋಷ ನಾಮಪಿ ॥ ೫೯॥

೧. ಪರದಾರ ನಿವೃತ್ತಿ; ೨. ಸ್ವದಾರ ಸಂತೋಷ

ಒಂದು ನಿಷೇಧ ಇನ್ನೊಂದು ನಿರ್ಬಂಧ. ಬ್ರಹ್ಮಚರ್ಯಾಣುವ್ರತದ ದೃಷ್ಟಿಯಿಂದ ಈ ಎರಡೂ ಒಂದೇ ಭಾವದ ಎರಡು ಮುಖಗಳು. ಇದಕ್ಕೆ ಭಂಗವಾಗುವ ಐದು ಅತಿಚಾರಗಳನ್ನು ಅದರಿಂದ ಎಚ್ಚರ ಇರುವುದೇ ವ್ರತಾನುಸರಣೆಯೆಂದೂ ಸಿದ್ಧಾಂತ ಹೇಳುತ್ತದೆ.

೧. ಕೋಣ ವಸೋ ಇತ್ಥಿ ಜಣೇ ಕಸ್ಸಣ ಮಯಣೇಣ ಖಂಡಿಯಂ ಮಾಣಂ
ಕೋ ಇಂದಿ ಏಹಿಂ ಣ ಜಿಓ ಕೋಣ ಕಸಾ ಏಹಿಂ ಸಂತತ್ತೋ ೧೨೮॥

೨. ಸೋಣ ವಸೋ ಇತ್ಥಿ ಜಣೇ ಸೋಣ ಜಓ ಇಂದಿಯೇಹಿಂ ಮೋಹೇಣ
ಜೋಣಯ ಗಿಣ್ಹದಿ ಗಂಥಂ ಅಬ್ಬಂತರ ಬಾಹಿರಂ ಸವ್ವಂ ॥ ೨೮೨॥

೩. ಜೋ ಲೋಹಂ ಣಿ ಹಣಿತ್ತಾ ಸಂತೋಸ ರಸಾಯಣೇಣ ಸಂತುಷ್ಟೀ
ಣಿ ಹಣದಿ ತಿಣ್ಹಾ ದುಟ್ಠಾ ಮಣ್ಣಂತೋ ವಿಣಸ್ಸರಂ ಸವ್ವಂ ॥ ೨೨೮

೪. ಜೋ ಪರಿಮಾಣಂ ಕುವ್ವದಿ ಧಣಧಣ್ಣ ಸುವಣ್ಣ ಖಿತ್ತಮಾ ಈಣಂ
ಉವ ಓಗಂ ಜಾಣಿತ್ತಾ ಅಣುವ್ವಯಂ ಪಂಚಮಂ ತಸ್ಸ ॥ ೩೪೦॥

[ಜಗತ್ತಿನಲ್ಲಿ ಸ್ತ್ರೀಯರ ವಶ ಯಾರು ಆಗಿಲ್ಲ? ಕಾಮವಿಕಾರವು ಯಾರ ಗರ್ವವನ್ನು ಖಂಡಿಸಿಲ್ಲ? ಇಂದ್ರಿಯಗಳು ಯಾರನ್ನು ಗೆದ್ದಿಲ್ಲ? ಕಷಾಯಗಳಿಂದ ಯಾರು ಸಂತ್ರಸರಾಗಿಲ್ಲ? ಎಲ್ಲ ಸಂಸಾರೀ ಜೀವಗಳೂ ಮೋಹದ ಅಧೀನವೇ ಇದೆ. ಕಾಮ ವಿಕಾರ ಎಲ್ಲರ ಅಭಿಮಾನವನ್ನೂ ಇಲ್ಲದಂತೆ ಮಾಡಿವೆ. ಎಲ್ಲರೂ ಇಂದ್ರಿಯಗಳ ವಶರಾಗಿದ್ದಾರೆ. ನಾಲ್ಕು ಪ್ರಕಾರದ [ಲೋಭ, ಮೋಹ, ಮದ, ಮಾತ್ಸರ್ಯ] ಕಷಾಯಗಳಿಂದ ಜೀವ ಸುಟ್ಟು ಒದ್ದಾಡುತ್ತಿದೆ. ಈ ಅಭ್ಯಂತರಗಳನ್ನು ತಡೆ ಹಿಡಿಯುವುದೇ ಬ್ರಹ್ಮಚಾರ್ಯಾಣುವ್ರತವಾಗಿದೆ.

ಜೇಸಿಂ ವಿಸಯೇಸು ರದೀ ತೇಸಿಂ ದುಕ್ಖಂ ವಿಯಾಣ ಸಬ್ಭಾವಂ ।
ಜದಿ ತಂ ಣ ಹಿ ಸಬ್ಭಾವಂ ವಾವಾರೋ ಣತ್ಥಿ ವಿಸಯ ತ್ಥಂ ॥

॥ ಕುಂದ ಕುಂದ॥

**೫. ಪರಿಗ್ರಹ ಪರಿಮಾಣ ವ್ರತ** : ತನ್ನದು ಎಂಬ ಮಮಕಾರ ಭಾವವನ್ನು ಎಲ್ಲದರಲ್ಲಿ ಇಡುವುದೇ ಪರಿಗ್ರಹ. ಅಗತ್ಯಕ್ಕಿಂತ ಹೆಚ್ಚಿನ ಸಂಪಾದನೆ, ಹೆಚ್ಚಿನ ಸಂಗ್ರಹಣೆ, ಹೆಚ್ಚಿನ ಬಳಕೆಗಳು ಪರಿಗ್ರಹ ಎನಿಸುತ್ತದೆ. ಇದನ್ನು ತ್ಯಜಿಸುವುದು ಪರಿಗ್ರಹ ಪರಿಮಾಣ ವ್ರತವಾಗಿದೆ. ಸಾಲವಿಲ್ಲದೆ ಗಳಿಕೆಗಿಂತ ಖರ್ಚಿನ ಪಟ್ಟಿ ದೊಡ್ಡದು ಮಾಡದೆ, ಅನೀತಿಯಿಂದ ನಡೆಯದೆ, ಕಷ್ಟದ ಸಮಯದಲ್ಲಿ ಸಮತೆ ಕಾಪಾಡಿಕೊಂಡು

ಕರ್ಮಶಕ್ತಿ, ಪರಿಣಾಮಗಳ ಚಿಂತನೆ ಮಾಡುತ್ತ ಪಾಪಾರ್ಜನೆಗೆ ಅವಕಾಶವಿಟ್ಟುಕೊಳ್ಳದೆ ಬದುಕುವ ಕಲೆ ರೂಢಿಸಿಕೊಳ್ಳುವುದೇ ಶ್ರಾವಕ ಆಚರಿಸುವ ಪರಿಗ್ರಹ ಪರಿಮಾಣ ವ್ರತವಾಗಿದೆ.

**ಎನಿತು ಪರಿಗ್ರಹದ ತೊಡರ್ಪನಿತೆ ಮನೋದುಃಖಮೆಂಬುದಂ ತಾಂ ತನ್ನೊಳ್**
**ನೆನೆದು ಪರಿಗ್ರಹಮಂ ತೆರೆವನೆ ದೇವಂ ಮುಕ್ತಿವನಿತೆಗಾತನೆ ಕಾಂತಂ**
**ಬಿಡು ರಾಜ್ಯದ ಮೋಹಮನೆಡೆಯುಡುಗಡೆ ನೆನೆ ಜೈನಧರ್ಮಮಂ ಕಿಡುವಪರಿ**
**ಗ್ರಹಯುಗಮಂ ಪಿಡಿಯದೆ ಬಿಡು, ಪಡಿಮಾತೇಂ ಬಿಟ್ಟೊಡೆಯ್ದುವೈ ಶುಭಗತಿಯಂ**

**–ನಯಸೇನ – ಧರ್ಮಾಮೃತಂ – ೧೪– ೫– ೨೪**

ಅತಿವಾಹನ, ಅತಿಸಂಗ್ರಹ, ವಿಸ್ಮಯ, ಲೋಭ, ನ್ಯಾಯ ನೀತಿಗಳ ಉಲ್ಲಂಘನೆ, ಅತಿಭಾರವಹನ ಇವು ಪರಿಗ್ರಹ ಪರಿಮಾಣ ವ್ರತದ ಅತಿಚಾರಗಳಾಗಿವೆ.

ಈ ಪಂಚಾಣು ವ್ರತಗಳು ಶ್ರಾವಕರ ವ್ರತಾಚರಣೆಯ ಎಂಟು ಮೂಲ ಗುಣಗಳಲ್ಲಿ ಅನ್ವಿತವಾಗಿದ್ದು ಇದರಿಂದ ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ, ಗರಿಮಾ ಎಂಬ ಗುಣಲಬ್ಧಿ ಮಾಡಿಕೊಳ್ಳುತ್ತಾರೆಂದು ಸಿದ್ಧಾಂತ ಹೇಳುತ್ತದೆ. ಇದರೊಂದಿಗೆ ಮದ್ಯ, ಮಾಂಸ, ಜೇನುತುಪ್ಪ ವರ್ಜನೆ (೫ + ೩) ಸೇರಿ ಎಂಟು ಗುಣಗಳು ಎಂದು ಭಾವಿಸಲಾಗಿದೆ. ಇಷ್ಟಲ್ಲದೆ ನೈಷ್ಠಿಕ ಶ್ರಾವಕರಲ್ಲಿ ಹನ್ನೊಂದು ಪ್ರತಿಮೆಗಳ ಧಾರಣೆಯೂ ಅಗತ್ಯವಿದೆ.

ಎಂಟು ಮೂಲಗಳ ರಕ್ಷಣೆಗಾಗಿ ದಾರ್ಶನಿಕ, ವ್ರತಿಕ, ದಿಗ್ವ್ರತ, ದೇಶವ್ರತ, ಅನರ್ಥ ದಂಡವಿರತಿ, ಪಾಪೋಪದೇಶ, ದುಃಶ್ರುತಿ, ಪ್ರಮಾದಾಚಾರ್ಯ, ಸಾಮಾಯಿಕ, ಪ್ರೋಷದೋಪವಾಸ, ಭೋಗೋಪಭೋಗ ಪರಿಮಾಣ, ಅತಿಥಿ ಸವಿಭಾಗ, ಆರಂಭ ವಿರತ, ಪರಿಗ್ರಹ ವಿರತ. ದಿವಾಮೈಥುನ ವಿರತ, ಅನುಮತಿ ವಿರತ, ಉದ್ದಿಷ್ಟ ವಿರತಗಳನ್ನು ಗ್ರಹಣ ಮಾಡಿ, ಅದನ್ನು ಅನುಸರಣೆ ಮಾಡುವ ಶ್ರಾವಕ 'ನೈಷ್ಠಿಕ ಶ್ರಾವಕ' ಎನಿಸಿಕೊಳ್ಳುತ್ತಾನೆ. ಮುನಿಸಾಂಗತ್ಯ ಮಾಡುತ್ತ, ಸೇವೆಯಿಂದ, ವೈಯಾವ್ರತ ಧಾರಿಗಳಾಗುವರು. ವೈಯಾವ್ರತ, ಸ್ವಾಧ್ಯಾಯ, ಸಂಯಮ, ತಪ, ದಾನಗಳೂ ಕೂಡ ಶ್ರಾವಕರ ದೈನಂದಿನ ವ್ರತಾಚರಣೆಯಲ್ಲಿ ಮಿಳಿತವಾಗಿದೆ.

ಬದುಕಿನ ಇತಿ ಮಿತಿ, ವಾಸ್ತವದ ಅರಿವುಗಳು ಈ ಮೂಲಕ ಅವನಿಗೆ ಪ್ರಾಪ್ತವಾಗಿ ಬದುಕು, ಮರಣ ಎರಡನ್ನೂ ಸಹಜ ಸ್ವಾಭಾವಿಕ ರೀತಿಯಲ್ಲಿ ಸ್ವೀಕರಿಸುವುದಕ್ಕೆ ಸಹಕಾರಿ ಆಗುತ್ತದೆ.

ಈ ವ್ರತಗಳ ನಡುವೆ ಶ್ರಾವಕ ತನ್ನ ನಿತ್ಯ ಬದುಕಿನಲ್ಲಿ ದ್ವಾದಶಾನುಪ್ರೇಕ್ಷೆ, ಷೋಡಶ ಕಾರಣ ಭಾವನೆ, ವಾಸ್ತವದ ದಶಲಕ್ಷಣ ಭಾವ ನಿರ್ಮಿತಿಯಲ್ಲಿ ಭಾಗಿಯಾಗುತ್ತರ ಮನಸ್ಸನ್ನು

**ಹಿಡಿದರೆ ವ್ರತವ ಹಿಡಿಯಬೇಕು ಸರ್ಪನ ಹಿಡಿವಂತೆ ಕಡು ದೃಢವಾಗಿ**
**ಹಿಡಿ ಮೇಲಳಿಮನಸಾದರೆ, ವ್ರತ ತಾನೆ ಕಡಿವುದು ತನ್ನಂತೆ ತಾ ॥ರತ್ನಾಕರ॥**

**ದ್ವಾದಶಾನುಪ್ರೇಕ್ಷೆ:** ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರ, ಲೋಕ, ಬೋಧಿ ದುರ್ಲಭ, ಧರ್ಮ, ಇವುಗಳನ್ನು ಭಾವಿಸುತ್ತ ನಿತ್ಯ ಚಾರಿತ್ರದಲ್ಲಿ ಅಡಕ ಮಾಡಿಕೊಳ್ಳುವುದು ದ್ವಾದಶಾನುಪ್ರೇಕ್ಷೆಯ ಗ್ರಹಣವೆನಿಸುತ್ತದೆ.

**ದಶಲಕ್ಷಣ:** ಉತ್ತಮ ಕ್ಷಮಾ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಶೌಚ, ಉತ್ತಮ ಸತ್ಯ, ಉತ್ತಮ ಸಂಯಮ, ಉತ್ತಮ ತಪ, ಉತ್ತಮ ತ್ಯಾಗ, ಉತ್ತಮ ಆಕಿಂಚಿನ್ಯ, ಉತ್ತಮ ಬ್ರಹ್ಮಚರ್ಯ, ಇವು ದಶಧರ್ಮಗಳಾಗಿದ್ದು, ಶ್ರಾವಕ ನೆಲೆ ಅಗತ್ಯ ವ್ರತಗಳಾಗಿವೆ.

**ಶೋಡಷಕಾರಣ:** ದರ್ಶನ ವಿಶುದ್ಧಿ, ವಿನಯ ಸಂಪನ್ನತೆ, ಅತಿಚಾರವಿಲ್ಲದ ಶೀಲ, ಸಂವೇಗ, ತ್ಯಾಗ, ತಪ, ಸಾಧು ಸಮಾಧಿ ಸ್ವೀಕಾರ, ವೈಯಾವೃತ್ತ ಅರ್ಹಂತ ಭಕ್ತಿ, ಜ್ಞಾನ ಪ್ರವೃತ್ತಿ, ಆಗಮ ಭಕ್ತಿ, ಅವಶ್ಯಕಾ ಪರಿಹಾರಿಣೀ, ಮಾರ್ಗ ಪ್ರಭಾವನೆ, ವಾತ್ಸಲ್ಯ – ಇವು ಹದಿನಾರು ಭಾವನೆಗಳು ಶ್ರಾವಕರ ಮನೋಕರಣವಾಗಿರಬೇಕು. ಅಂದರೆ ಮನಃಶುದ್ಧಿ ಪೂರ್ವಕವಾಗಿ ಲಬ್ಧಿಮಾಡಿಕೊಳ್ಳಬೇಕು ಎಂದು ಸಿದ್ಧಾಂತ ಹೇಳುತ್ತದೆ.

ಜೈನ ಸಿದ್ಧಾಂತದಲ್ಲಿ ಶ್ರಮಣ ಎಂದರೆ ಜೈನ ಸನ್ಯಾಸಿ, ವಿರಾಗಿ, ವಿರಕ್ತ ಎಂದು ಅರ್ಥ. ಜೈನ ಮುನಿಗಳಿಗೆ ಇಪ್ಪತ್ತೆಂಟು ಮೂಲಗಳು. ಶ್ರಾವಕರಿಗೆ ಎಂಟು ಮೂಲಗುಣಗಳಾದರೆ, ವಿರಕ್ತರಿಗೆ ಅವಶ್ಯಕವಾಗಿ ಇರಬೇಕಾದ ಗುಣಗಳೇ ಇಪ್ಪತ್ತೆಂಟು.

ಐದು ಮಹಾವ್ರತಗಳು, ಐದು ಸಮಿತಿಗಳು, ಪಂಚೇಂದ್ರಿಯ ನಿಗ್ರಹ, ಆರು ಅವಶ್ಯಕ ಕ್ರಿಯಾಚರಣೆ, ಸ್ನಾನ ಮಾಡದಿರುವುದು, ಹಲ್ಲುಜ್ಜದೆ ಇರುವುದು, ನೆಲದ ಮೇಲೆ ಮಲಗುವುದು, ನಿಂತು ಆಹಾರ ಸ್ವೀಕರಿಸುವುದು (ದಿನಕ್ಕೆ ಒಂದೇ ಬಾರಿ) ನಗ್ನತೆ, ಕೇಶಲೋಚನ – ಇವಿಷ್ಟೂ ಸಮಾವೇಶವಾಗುತ್ತದೆ.

**ಮೋಹ ತಿಮಿರಾಪಹರಣೇ ದರ್ಶನಲಾಭಾದವಾಪ್ತ ಸಂಜ್ಞಾನಃ**
**ರಾಗ ದ್ವೇಷ ನಿವೃತ್ತ್ಯೆ ಚರಣಂ ಪ್ರತಿ ಪದ್ಯತೇ ಸಾಧುಃ**
**ರಾಗ ದ್ವೇಷ ನಿವೃತ್ತೇಃ ಹಿಂಸಾದಿ ನಿವರ್ತನಾ ಕೃತಾ ಭವತಿ**
**ಅನಪೇಕ್ಷಿತಾರ್ಥ ವೃತ್ತಿಃ ಕಃ ಪುರುಷಃ ಸೇವತೇ ನೃಪತೀನ್**

**– ಶ್ರಾವಕಾಚಾರ**

ಇದರೊಂದಿಗೆ ಜೈನ ಸಾಧು (ಮುನಿ ನಿರ್ಗ್ರಂಥ) ಎಂಟು ಶುದ್ಧಿಗಳ ಅವಶ್ಯಕತೆ ಪ್ರಾರಂಭದ ದೆಸೆಯಿಂದಲೇ ಇದೆ. ಭಾವಶುದ್ಧಿ, ಕಾಯಶುದ್ಧಿ, ವಿನಯಶುದ್ಧಿ, ಈರ್ಯಾಪಥ ಶುದ್ಧಿ, ಭಿಕ್ಷಾ ಶುದ್ಧಿ, ಪ್ರತಿಷ್ಠಾಪನಾ ಶುದ್ಧಿ, ಶಯನಾಸನಾ ಶುದ್ಧಿ, ವಾಕ್ಯ ಶುದ್ಧಿ.

ಇದರ ಪರಿಚಯ, ಮಾತು, ಸಾಧನೆ ಶ್ರಾವಕರಲ್ಲೂ, ಅಗತ್ಯ ಇದೆ. ಶ್ರಾವಕ ತನ್ನ ಸಾಧನೆಯ ಗಮ್ಯದಲ್ಲಿ,

ದುಕ್ಖಖಓ ಕಮ್ಮಖಓ ಸಮಾಹಿ ಮರಣಂ ಚ ಬೋಹಿಲಾಹೋಯವ
ಏಮ ಪತ್ಥೇ ದವ್ವಂ ಣ ಪತ್ಥಣೇಯಂ ತದೋ ಅಣ್ಣಂ ॥

[ಜನ್ಮ, ಮರಣ, ಕ್ಷುಧಾ, ತೃಷಾದಿ ದುಃಖಗಳ ಕ್ಷಯವಾಗಲಿ; ಆತ್ಮ ಸುಖವನ್ನು ನಷ್ಟ ಮಾಡುವಂಥ ಮೋಹನೀಯ, ಜ್ಞಾನವರಣ, ದರ್ಶನಾವರಣ ಮತ್ತು ಅಂತರಾಯ ಕರ್ಮಗಳ ಕ್ಷಯವಾಗಲಿ. ಈ ಪರ್ಯಾಯದಲ್ಲಿ ನಾಲ್ಕು ಆರಾಧನೆಗಳಿಂದ ಕೂಡಿದ ಸಮಾಧಿ ಮರಣ [ಸಲ್ಲೇಖನ ಪೂರ್ವಕ] ಪ್ರಾಪ್ತವಾಗಲಿ, ರತ್ನತ್ರಯಗಳ ಲಾಭವಾಗಲಿ] ಈ ಬಗೆಯ ನಿಃಶಲ್ಯ ಭಾವದಿಂದ ವ್ರತಿಕನಾಗಿ ಬದುಕು ಹಸನಗೊಳಿಸಿಕೊಳ್ಳಬೇಕು ಎಂದರೆ ಮುನಿ/ಸಾಧಕರಲ್ಲಿ ಇದು ಮೊದಲ ಹೆಜ್ಜೆಯೇ ಆಗಿರುತ್ತದೆ.

ಪಂಚವ್ರತಗಳನ್ನು ಅಣುರೂಪದಲ್ಲಿ ಶ್ರಾವಕ ಪಾಲಿಸಿದರೆ ಅದನ್ನು ಮಹಾವ್ರತಗಳನ್ನಾಗಿ ಪರಿಪೂರ್ಣ ರೀತಿಯಿಂದ ಪಾಲಿಸುವವನು ಶ್ರಮಣ. ಅಂದರೆ – ಆರು ತರದ ಕಾಯಿಕ ಜೀವಗಳನ್ನು ಹಿಂಸಿಸದೆ ಮನದಲ್ಲಿ ರಾಗ, ದ್ವೇಷ, ಕಾಮ, ಕ್ರೋಧ, ಭಾವಗಳಿಗೆ ಎಡೆಗೊಡದೆ, ತನ್ನ ಪ್ರಾಣಕ್ಕೇ ಅಪಾಯ ಒದಗಿದರೂ ಎಂದೂ ಸುಳ್ಳಾಡದೆ, ಕೈ ಎತ್ತಿ ನೀಡದ ವಸ್ತುಗಳನ್ನು ಮುಟ್ಟದೆ, ಸಂಪೂರ್ಣ ರೀತಿಯಿಂದ ಬ್ರಹ್ಮಚರ್ಯ ಪಾಲಿಸುತ್ತ ಅಂತರಂಗ–ಬಹಿರಂಗ ಪರಿಗ್ರಹ ತ್ಯಾಗ ಮಾಡುವುದು ಮುನಿವ್ರತ. ಮಲಮೂತ್ರ ವಿಸರ್ಜನೆಯ ಬಳಕೆಗಾಗಿ ಒಂದು ನೀರುಳ್ಳ ಕಮಂಡಲ, ಜೀವಗಳ ಘಾತವಾಗದ ಹಾಗೆ ಭೂಶುದ್ಧಿ ಮಾಡಿ ಕುಳಿತುಕೊಳ್ಳಲು ಅಥವಾ ಮಲಗಲು ಉಪಯೋಗಿಸುವ ತಾವಾಗಿಯೇ ಬಿದ್ದ ನವಿಲು ಗರಿಯ ಒಂದು ಪಿಂಛ ಹೊರತಾಗಿ ಮತ್ತಾವ ವಸ್ತುವೂ ಅವರ ಬಳಿ ಇರುವುದಿಲ್ಲ.

ಮುನಿಯ ಒಂದು ವರ್ಣನೆ ಹೀಗಿದೆ.

ಒಡಲಂ ದಂಡಿಸುತಿಂದ್ರಿಯಂಗಳ ಪೊಡರ್ಪಂ ಕುಂದಿಸುತ್ತಂ ಗುಣಂ
ಬಿಡಿಯುತ್ತಾಂ ಮನದೇಳ್ಗೆಯಂ ತಡೆಯುತಂ ತನ್ನಾತ್ಮನೊಳ್ತಾನೆ ಮಾ
ರ್ನುಡಿಯುತ್ತಾಂ ಭಜಕರ್ಗೆ ಮುಕ್ತಿ ಪಥಮಂ ತೋರುತ್ತೆ ನೋವಳ್ತಿಯಿಂ
ಪಡೆಗೆಯ್ದಾಚಂಪಾತನೆ ಶಿವನಲಾ ರತ್ನಾಕರಾಧೀಶ್ವರಾ

॥ಮಹಾಕವಿ ರತ್ನಾಕರವರ್ಣಿ॥

ಇಷ್ಟೇ ಅಲ್ಲ, ಜೈನ ಮುನಿಗಳನ್ನು ಆಚಾರ್ಯ, ಗುರು, ಸಾಧು, ಎಂದು ಸಂಬೋಧಿಸುವುದಷ್ಟಕ್ಕೆ ಸೀಮಿತವಾಗದೆ ಅವರ ಜ್ಞಾನಾರ್ಜನೆ ಬೋಧನಾ ಕ್ರಮ, ಆಚಾರ ಪೂರಿತ ಬದುಕಿನ ಬಗೆಗೆ ಇನ್ನೊಂದು ವರ್ಣನೆ:

ಶ್ರುತಮಂ ನೋಳ್ಪ ತದರ್ಥಮಂ ತಿಳಿದ ತನ್ಮರ್ಯಾದೆಯೊಳ್ತೋಪ ಸು
ವ್ರತಮಂ ಪಾಲಿಪ ಕಾಮಮಂ ತುಳಿವ ವಯಾಜಾಡ್ಯಮಂ ಝಾಡಿಪು
ನ್ನತ ಕಾರುಣ್ಯದೊಳಾಳ್ವ ಜೀವಹಿತಮಂ ಪೇಳ್ವಾತನೆ ಮದ್ಗುರು
ಶ್ರುತಯೋಗೀಶ್ವರನಿಂದು ನಾಳಿನ ಶಿವಂ ರತ್ನಕರಾಧೀಶ್ವರಾ ॥ ಶತಕತ್ರಯ ॥

ಮಹಾವ್ರತಗಳೊಂದಿಗೆ ಪಂಚಸಮಿತಿ ಎಂದು ಸಿದ್ಧಾಂತ ವರ್ಣಿಸುತ್ತದೆ: ಹಗಲಲ್ಲಿ ಸೂರ್ಯನ ಬೆಳಕು ಬಿದ್ದ ಮೇಲೆ ಭೂಮಿಯನ್ನು ಚೆನ್ನಾಗಿ ನೋಡುತ್ತ ನಡೆಯುವುದು, ಹಿತಮಿತವಾದ ಮಾತು, ದಿನಕ್ಕೊಂದು ಬಾರಿ ಆಹಾರ ಸ್ವೀಕಾರ (೪೬ ದೋಷಗಳಿಲ್ಲದ್ದ ಆಹಾರ) ಜೀವಜಂತುಗಳಿಲ್ಲದ ನಿರ್ಜನ ಪ್ರದೇಶದಲ್ಲಿ ಅಹಿಂಸಾಪೂರ್ವಕ ತನ್ನ ವಿಸರ್ಜನಾ ಕಾರ್ಯಗಳನ್ನು ಮುಗಿಸುವುದು. ಪಂಚೇಂದ್ರಿಯ ನಿಗ್ರಹ – ಇಂದ್ರಿಯಗಳ ವಿಷಯದಲ್ಲಿ ಪ್ರೀತಿಯನ್ನು, ಅಪ್ರಿಯ ವಿಷಯದಲ್ಲಿ ದ್ವೇಷವನ್ನೂ ಮಾಡದಿರುವುದು, ಸಾಮಾಯಿಕ ತೀರ್ಥಂಕರ ಸ್ತುತಿ, ದೋಷ, ಶೋಧನೆ, ಭವಿಷ್ಯ ದೋಷದ ಬಗೆಗಿನ ಎಚ್ಚರಿಕೆ, ಅಯೋಗ್ಯ ವಸ್ತುಗಳನ್ನು ತ್ಯಾಗ ಮಾಡುವುದು, ಕರ್ಮ ಕ್ಷಯಕ್ಕಾಗಿ, ತಪೋವೃದ್ಧಿಗಾಗಿ, ಕಾಯೋತ್ಸರ್ಗ ಮಾಡುವುದು [ನಿಂತು ಎರಡೂ ಕೈಗಳನ್ನು ಇಳಿಬಿಟ್ಟು, ಪಾದಗಳನ್ನು ನಾಲ್ಕು ಅಂಗುಲ ಸಮಾನಾಂತರದಲ್ಲಿರಿಸಿ, ನಿಶ್ಚಲ ಮನದಿಂದ ತನ್ನ ಧ್ಯಾನದಲ್ಲಿ (ಆತ್ಮ) ತಾನು ಲೀನವಾಗುವುದಕ್ಕೆ ಕಾಯೋತ್ಸರ್ಗ ಎನ್ನುತ್ತಾರೆ]

ಈ ಇಪ್ಪತ್ತೆಂಟು ಗುಣಗಳನ್ನು ಹೊಂದಿದವನು ಜೈನ ಮುನಿ ಅಥವಾ ಶ್ರಮಣ ಎನಿಸುತ್ತಾನೆ.

ಣಿ ಸ್ಸಂಗೋ ಚೇವ ಸದಾ ಕಸಾಯ ಸಲ್ಲೇಹಣಂ ಕುಣದಿ ಬಿಕ್ಖೂ।
ಸಂಗಾಹ ಉದೀರಂತಿ ಕಸಾವ ಅಗ್ಗೀವ ಕಟ್ಠಾಣಿ

– ಶಿವಾರ್ಯ –

[ಪರಿಗ್ರಹವನ್ನು ತೊರೆದ ಮುನಿ ಸದಾ ಕಷಾಯಗಳನ್ನು ಕ್ಷೀಣಿಸಿಕೊಳ್ಳುತ್ತಾನೆ. ಏಕೆಂದರೆ ಒಣಗಿದ ಕಟ್ಟಿಗೆ ಬೆಂಕಿಯನ್ನುಂಟು ಮಾಡುವಂತೆ ಪರಿಗ್ರಹಗಳು ಕಷಾಯವನ್ನು ಉಂಟು ಮಾಡುತ್ತವೆ]

ಅಲ್ಲದೆ, ತನ್ನ ಆಚಾರದ ವಿಚಾರದಲ್ಲಿ ಇನ್ನೂ ಹಲವು ನಿಯಮಗಳನ್ನು ಜೈನ ಮುನಿ / ಶ್ರಮಣ ಪಾಲಿಸಬೇಕಾಗುತ್ತದೆ. ಯಾವಾಗ ನೆರಳಿನಿಂದ ಬಿಸಿಲಿಗೆ, ಬಿಸಿಲಿನಿಂದ ನೆರಳಿಗೆ ಪ್ರವೇಶಿಸುವರೋ ಆಗ ತಮ್ಮ ಮೈಯನ್ನು ಪಿಂಛದಿಂದ ಸ್ವಚ್ಛ ಮಾಡಿಕೊಳ್ಳಬೇಕು. ಕೂಡುವಾಗಲೂ, ಮಲಗುವಾಗಲೂ ಈ ಸ್ಥಳವನ್ನು ಪಿಂಛಿಯಿಂದ ಸ್ವಚ್ಛ ಮಾಡಬೇಕು. ಪಶುವನ್ನು ಕಟ್ಟಿರುವ ಮನೆಯಲ್ಲಿ ಆಹಾರ ಸ್ವೀಕರಿಸುವಂತಿಲ್ಲ. ಕೆಟ್ಟ ಕೆಲಸಗಳನ್ನು ಮಾಡುವವರ ಮನೆಯಿಂದಲೂ ಆಹಾರ ಸ್ವೀಕರಿಸುವಂತಿಲ್ಲ. ಸಂಘದಲ್ಲಿರುವ ಖಾಯಿಲೆ ಸಾಧುವನ್ನು ಹೀನದೃಷ್ಟಿಯಿಂದ ನೋಡುವಂತಿಲ್ಲ. ಒಬ್ಬನೇ ಎಲ್ಲೂ ಸಂಚರಿಸಬಾರದು. ತನ್ನ ಗುರುವನ್ನು ಕಂಡಾಗ ಗೌರವ ತೋರಬೇಕು. ಗುರುವು ಕೊಡುವ ಶ್ರುತವನ್ನು ನಮ್ರತೆಯಿಂದ ಸ್ವೀಕರಿಸಿ ಜ್ಞಾನಾರ್ಜನೆ ಮಾಡಿಕೊಳ್ಳಬೇಕು. ದೀಕ್ಷಾ ಗುರುವೂ, ಸ್ವಾಧ್ಯಾಯ ಮಾಡಿಸುವ, ಪ್ರಾಯಶ್ಚಿತ್ತ ನೀಡುವ, ಸಮಾಧಿ ಮರಣಕ್ಕೆ ಸಹಕರಿಸುವವನು ಗುರು ಎನಿಸುತ್ತಾರೆ. ದೈನ್ಯತೆ ಮುನಿಯಲ್ಲಿ ಇರಬಾರದು. ಚಿತ್ರದಲ್ಲಿಯೂ ಸಹ ಸ್ತ್ರೀಯನ್ನು ಮುಟ್ಟುವಂತಿಲ್ಲ. ಸ್ತ್ರೀಯರು ಇರುವೆಡೆ ರಾತ್ರಿ ತಂಗುವುದಾಗಲೀ, ಜೊತೆಯಲ್ಲಿ ನಡೆಯುವುದಾಗಲೀ,

ಏಕಾಂತದಲ್ಲಿ ಮಾತನಾಡುವುದಾಗಲೀ, ಊಟ ಮಾಡುವುದಾಗಲಿ, ಕೂಡುವುದಾಗಲೀ ಮಾಡುವಂತಿಲ್ಲ. ಮನಸ್ಸು ಚಂಚಲವಾಗುವಂಥ ಸ್ಥಳದಲ್ಲಿ ವಾಸ ಮಾಡುವಂತಿಲ್ಲ. ಎಲ್ಲ ಪ್ರಕಾರದ ವಸ್ತ್ರವನ್ನು ತ್ಯಜಿಸಿದವನು ನಿರ್ಗ್ರಂಥನೆನಿಸುತ್ತಾನೆ. ಬ್ರಹ್ಮಚಾರಿ, ಐಲಕ, ಕ್ಷುಲ್ಲಕ ನಿರ್ಗ್ರಂಥ, ಆಚಾರ್ಯ ಹೀಗೆ ಸಾಧುವಿನ ಹಂತಗಳು ಅನೇಕ.

**ಭಾವರಹಿ ಓ ನ ಸಿಜ್ಝ ಇ ಜ ಇ ವಿ ತವಂ ಚರಇ ಕೋಡೀ ಕೋಡೀ ಓ ।**
**ಜಮ್ಮಂತರಾಇಂ ಬಹುಸೋ ಲಂಬಿಯ ಹತ್ಥೋ ಗಲಿಯವತ್ಥೋ**

**॥ ಕುಂದ ಕುಂದ॥**

ಪರಿಣಾಮ ಶುದ್ಧಿ ಇಲ್ಲದವನು ಸಿದ್ಧಿಯನ್ನು ಪಡೆಯಲಾರ. ಅವನು ನಗ್ನನಾಗಿರಲಿ, ಕೈ ಉದ್ದವಾಗಿ ಇಳಿಬಿಟ್ಟು, ಕೋಟ್ಯಂತರ ಜನ್ಮ ತನಕ ತಪವನ್ನಾಚರಿಸಿದರೂ ಅವನು ಮುಕ್ತನಾಗಲಾರ.

ಆದ್ದರಿಂದ ಮುನಿಯು ಹೊರಗಿನ ಎಲ್ಲ ವಿಚಾರಗಳಲ್ಲಿ ಅಲಿಪ್ತನಾಗಿರುವನಲ್ಲದೆ ಯಾರಿಂದಲೂ, ಯಾವುದರಿಂದಲೂ ಏನನ್ನು ಅಪೇಕ್ಷಿಸುವುದಿಲ್ಲ. ಅಂತರಂಗ, ಬಹಿರಂಗ, ಜೈನ ಸಾಧುವಿನ ಚಿಹ್ನೆ ಕುರಿತು 'ಪ್ರವಚನಸಾರ' ಹೀಗೆ ಹೇಳುತ್ತದೆ.

**ಜದ ಜಾವರೂವಜಾದಂ ಉಪ್ಪಾಡಿದ ಕೇಸಮಂ ಸುಗಂ ಸುದ್ಧಂ**
**ರಹಿದಂ ಹಿಂಸಾದೀದೋ ಅಪ್ಪಡಿ ಕಮ್ಮಂ ಹವದಿ ಲಿಂಗಂ ॥೫॥**

**ಮುಚ್ಛಾರಂಭವಿಮುಕ್ಕಂ ಜುತ್ತಂ ಉವಜೋಗ ಜೋಗ ಸುದ್ಧೀಹಿಂ**
**ಲಿಂಗಂ ಣ ಪರಾವೆಕ್ಖಂ ಅಪುಣಬ್ಭವ ಕಾರಣಂ ಜೆಣ್ಹಂ ॥೬॥**

[ಮನುಷ್ಯ ಹುಟ್ಟುವಾಗ ಹೇಗಿದ್ದನೋ ಹಾಗೆಯೇ ಇರುವುದು ಅಂದರೆ ನಗ್ನನಾಗಿರುವುದು; ತಲೆ ಗಡ್ಡ ಮೀಸೆಗಳ ಕೂದಲುಗಳನ್ನು ಕೈಯಿಂದ ಕೀಳುವುದು (ಕೇಶಲೋಚನ) ಎಲ್ಲ ತರದ ಪರಿಗ್ರಹ, ಪಾಪಗಳಿಂದ ಮುಕ್ತನಾಗಿದ್ದು ಶಾರೀರಕ ಉಪಚಾರ ಮಾಡದಿರುವುದು ಜೈನಮುನಿಯ ಬಾಹ್ಯ ಚಿನ್ಹೆ.

ಮಮತೆ ಹಾಗೂ ಆರಂಭ ತೊರೆದು ಉಪಯೋಗ, ತ್ರಿಕರಣಪೂರ್ವಕ ಪರಿಶುದ್ಧನಾಗಿರುವುದು, ಅವಲಂಬಿತನಾಗದೆ ನಿರ್ಭಾವುಕನಾಗಿ, ದಯಪೂರಿತನಾಗಿ ಸರ್ವಸಮಾನ ದೃಷ್ಟಿಯಿಂದ ಇರುತ್ತ ಬಾಹ್ಯಾಭ್ಯಂತರ ತಪದಲ್ಲಿ ಮಗ್ನನಾಗಿರುವುದು ಅಂತರಂಗದ ಚಿಹ್ನೆ. ಸ್ವಾಧ್ಯಾಯ. ಪ್ರಮಾದ ರಹಿತ ಆಚಾರ, ಗುಣಚಿಂತನ, ಪಂಚ ನಮಸ್ಕಾರಗಳ ಮುಖಾಂತರ ಧ್ಯಾನ ಮಾಡುತ್ತ, ಗುರುಭಕ್ತಿ ಸಹಿತ ಚರಿಗೆಯ ಮುಖಾಂತರ ಆಹಾರ ಸ್ವೀಕರಿಸಿ, ಆತ್ಮ ಶೋಧನೆ ಮಾಡಿಕೊಳ್ಳುತ್ತ, ಸ್ವಾಧ್ಯಾಯ, ಧ್ಯಾನ, ತಪಗಳಲ್ಲಿ ಸಮಯವನ್ನು ವಿನಿಯೋಗಿಸುವವರೇ ಶ್ರಮಣರು.

**ನ ದುಃಖಂ ನಸುಖಂ ಯದ್ವದ್ ಹೇತುರ್ದೃಷ್ಟಶ್ಚಿಕಿತ್ಸಿತೇ**
**ಚಿಕಿತ್ಸಾಯಾಂ ತು ಯುಕ್ತಸ್ಯ ಸ್ಯಾದ್ದುಃಖಮಥವಾ ಸುಖಂ ॥**
**ನ ದುಃಖಂ ನ ಸುಖಂ ತದ್ವದ್ ಹೇತುರ್ಮೋಕ್ಷಸ್ಯ ಸಾಧನೇ**
**ಮೋಕ್ಷೋಪಾಯೇ ತು ಯುಕ್ತಸ್ಯ ಸ್ಯಾದ್ದುಃಖಮಥವಾ ಸುಖಂ ॥**

**॥ ಸರ್ವಾರ್ಥ ಸಿದ್ಧಿ॥**

೧೪ಗುಣಸ್ಥಾನಗಳ ವರ್ಣನೆ ಜೈನ ಸಿದ್ಧಾಂತದಲ್ಲಿ ಅಡಗಿದೆ. ಗುಣ ಅಥವಾ ಸ್ವಭಾವ ಐದು ವಿಧವಾಗಿದ್ದು ಔದಯಿಕ, ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ ಮತ್ತು ಪರಿಣಾಮಿಕ. ಇವು ಅಧ್ಯಾತ್ಮದ ಉತ್ಥಾನ ಮತ್ತು ಪತನದ ಪಟದಂತೆ ನಿಶ್ಚಿತವಾಗಿದೆ. ಇದರ ಅನುಸಂಧಾನದಿಂದಲೇ ಜೀವಿಯ ಹಂತವನ್ನು ಗುರುತಿಸಬಹುದು.

ಮಿಥ್ಯಾದೃಷ್ಟಿ, ಸಾಸಾದನ ಸಮ್ಯಗ್ದೃಷ್ಟಿ, ಸಮ್ಯಗ್ ಮಿಥ್ಯಾದೃಷ್ಟಿ, ಅಸಂಯತ ಸಮ್ಯಗ್ದೃಷ್ಟಿ, ಸಂಯತಾ ಸಂಯತ, ಪ್ರಮತ್ತ ಸಂಯತ, ಅಪ್ರಮತ್ತ ಸಂಯತ, ಅಪೂರ್ವಕರಣ, ಅನಿವೃತ್ತಿ ಬಾದರ ಸಾಂಪರಾಯ, ಸೂಕ್ಷ್ಮಸಾಂಪರಾಯ, ಉಪಶಾಂತ ಕಷಾಯ ವೀತರಾಗ ಛದ್ಮಸ್ಥ ಕ್ಷೀಣಕಷಾಯ ವೀತರಾಗ ಛದ್ಮಸ್ಥ, ಸಂಯೋಗಿ ಕೇವಲಿ ಅಯೋಗಿ ಕೇವಲಿ....

ಹೀಗೆ ಸಕಲ ಜೀವರಾಶಿಗಳೂ ಈ ಗುಣಸ್ಥಾನಗಳಲ್ಲಿ ಹಂಚಿ ಹೋಗಿ ಐದರಿಂದ ಮೇಲ್ಪಟ್ಟ ಎಲ್ಲ ಗುಣಸ್ಥಾನಗಳೂ ಸಾಧಕ ಅಥವಾ ಮುನಿಗೆ ಮಾತ್ರ ಲಭ್ಯ ಎಂದು ಸಿದ್ಧಾಂತ ಸಾರುತ್ತದೆ.

'ಚಾರಿತ್ರ' ಕ್ರಮಬದ್ಧವಾದ ಮೆಟ್ಟಿಲುಗಳನ್ನು ಸುಗಮವಾದ ಬದುಕಿಗೂ ಬಿಡುಗಡೆಗೂ ಹಾಕಿಕೊಟ್ಟಿದೆ. ಈ ಸಾಧನಾ ಪಥದಲ್ಲಿ ಪ್ರಾಪಂಚಿಕ ಮತ್ತು ಆಧ್ಯಾತ್ಮಿಕ ಜೀವನಗಳ ಸುಂದರ ಸಮನ್ವಯತೆ ಇದೆ. ಒಂದಕ್ಕಾಗಿ ಇನ್ನೊಂದನ್ನು ಕೆಡಿಸಿಕೊಳ್ಳುವ ಉಪದೇಶ ಇಲ್ಲಿ ಇಲ್ಲ. ಒಳ್ಳೆಯ ಶ್ರಾವಕನಾಗಿದ್ದವನೇ ಒಳ್ಳೆಯ ಶ್ರಮಣನಾಗಬಹುದು. ಶ್ರಾವಕ ಧರ್ಮವನ್ನೇ ಆಚರಿಸಲು ಬಾರದವನು ಸಾಧುವಾಗಲಾರ. ಆಗುವುದೂ ವ್ಯರ್ಥ. ಇನ್ನು ಶ್ರಾವಕನಾಗಿಯೇ ಮರಣ ಹೊಂದುವ ಸಂದರ್ಭ ಒದಗಿದರೂ ಸಲ್ಲೇಖನ ವ್ರತ ಸ್ವೀಕರಿಸಲು ಸಿದ್ಧಾಂತದ ಒಪ್ಪಿಗೆ ಇದೆ.

ಅಲ್ಲದೆ, ಈ ಕ್ರಮದಲ್ಲಿ ತನ್ನ ಜೀವನಾವಶ್ಯಕ ವಸ್ತುಗಳನ್ನು ತಾನೇ ದುಡಿದು ಸಂಪಾದಿಸಬೇಕೆಂದು ನಿಯಮ ಶ್ರಾವಕರಿಗೆ ಇದೆ. ಅದರಂತೆ ಪರಿಮಿತಿಯ ದೃಷ್ಟಿಯನ್ನೂ ಸೂಚಿಸಿದೆ. ವ್ಯಕ್ತಿ, ಸಮಾಜ, ರಾಷ್ಟ್ರಗಳಲ್ಲಿ ಭಿನ್ನಮತ, ಅಸೂಯೆ, ದ್ವೇಷಗಳ ವರ್ಧನೆಗೆ ಕಾರಣವಾಗದ ರೀತಿಯಲ್ಲಿ ಬದುಕುವ ಮಾರ್ಗವನ್ನು ಜೈನ ಸಿದ್ಧಾಂತ ಬೋಧಿಸಿದೆ.

ಸಲ್ಲೇಖನಪೂರ್ವಕ ಮರಣ ಶ್ರಾವಕ, ಶ್ರಮಣ ಇಬ್ಬರಿಗೂ ಸಮಾನವಾದುದೇ ಆದರೂ ಆಚರಣೆಯಲ್ಲಿ ಸ್ವಲ್ಪ ವ್ಯತ್ಯಾಸ ಇದೆ.

**ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃ ಪ್ರತೀಕಾರೇ**
**ಧರ್ಮಾಯಾ ತನು ವಿಮೋಚನ ಮಾಹುಃ ಸಲ್ಲೇಖನಾಮಾರ್ಯಾಃ ॥**

[ಅನಿವಾರ್ಯವಾದಂಥ ಉಪಸರ್ಗ, ಬರಗಾಲ, ಮುಪ್ಪು ಮತ್ತು ಖಾಯಿಲೆ ಪ್ರಾಪ್ತವಾದಾಗ, ಧರ್ಮವನ್ನು ಪಾಲಿಸುವುದಕ್ಕಾಗಿ, ಶರೀರವನ್ನು ತ್ಯಾಗ ಮಾಡುವುದು ಸಲ್ಲೇಖನವಾಗುತ್ತದೆ]

'ಸತ್' ಮತ್ತು 'ಲೇಖನಾ' ಗಳಿಂದ 'ಸಲ್ಲೇಖನಾ' ಪದ ನಿರ್ಮಾಣ ಆಗಿದೆ. 'ಸತ್' ಪ್ರಶಂಸನೀಯ ಎಂಬರ್ಥದಲ್ಲಿದ್ದರೆ 'ಲೇಖನಾ', 'ಕೃಶೀಕರಣ' ಕ್ರಿಯೆಯ ಹೆಸರಾಗಿದೆ.

ಇದು ಅಪರಾಧ, ಅಪಘಾತ ಎರಡೂ ಅಲ್ಲ. ಅಂತಿಮ ಕಾಲದಲ್ಲಿ ಆಚರಿಸುವ ಸಮಾಚೀನ ಕ್ರಿಯೆ ಆದ್ದರಿಂದ 'ಅಂತಕ್ರಿಯಾ' ಎಂದೂ ಇದಕ್ಕೆ ಹೇಳುತ್ತಾರೆ. ಕೊನೆಯ ಧಾರ್ಮಿಕ ಅನುಷ್ಠಾನವೆಂದೂ ಹೇಳಬಹುದು.

'ಕಾಯ ಸಲ್ಲೇಖನ', 'ಕಷಾಯ ಸಲ್ಲೇಖನ' ಎಂದು ಎರಡು ಬಗೆ. ಅಂತಃಶುದ್ಧಿಯನ್ನು ಕಷಾಯ ಸಲ್ಲೇಖನವು ಸೂಚಿಸಿದರೆ, ಆಹಾರವನ್ನು ಕ್ರಮದಿಂದ ತೊರೆದು ದೇಹತ್ಯಾಗ ಮಾಡುವುದನ್ನು 'ಕಾಯ ಸಲ್ಲೇಖನ' ವಿಧಿಸುತ್ತದೆ. ಇದರ ಅಪೇಕ್ಷೆ ಇರುವ ಮುನಿ,

**ಆಲೋಚ್ಯ ಸರ್ವಮೇನಃ ಕೃತಕಾರಿತ ಮನುಮತಂ ಚ ನಿರ್ವ್ಯಾಜಮ್**
**ಆರೋಪಯೇನ್ಮಹಾ ವ್ರತಮಾಮರಣ ಸ್ಥಾಯಿ ನಿಃಶೇಷಮ್ ॥ ೧೨೪॥**

[ತನ್ನ ಆವರೆಗಿನ ಚರ್ಯೆ, ಮತ್ತೊಬ್ಬರಿಂದ ಮಾಡಿಸಿದ ಕಾರ್ಯ, ಸಮ್ಮತಿಸಿದ ಕೆಲಸಗಳು (ಕೃತ, ಕಾರಿತ, ಅನುಮೋದನೀಯ) ಎಲ್ಲವನ್ನೂ ಆಚಾರ್ಯರ ಹತ್ತಿರ ನಿವೇದಿಸಿ, ಭಾವದಿಂದ ಕೂಡ ಅದನ್ನೆಲ್ಲ ವರ್ಜಿಸಿ ಮಹಾವ್ರತಗಳನ್ನು ಧಾರಣೆ ಮಾಡಬೇಕು)

**ಮಹಾವ್ರತಗಳನ್ನು ಧಾರಣ ಮಾಡುವಾಗ ಮನೋವೃತ್ತಿ ಇರಬೇಕಾದ ಸ್ಥಿತಿ:**

**ಶೋಕಂ ಭಯಮವಸಾದಂ ಕ್ಲೇದಂ ಕಾಲುಷ್ಯ ಮರತಿ ಮಪಿ ಹಿತ್ವಾ**
**ಸತ್ತ್ವೋತ್ಸಾಹಮುದೀರ್ಯ ಚ ಮನಃ ಪ್ರಸಾಧ್ಯಂ ಶ್ರುತೈರಮೃತೈಃ ॥ ೧೨೬॥**

ಮೃತ್ಯುಮಾರ್ಗದಲ್ಲಿ ತನ್ನ ಸ್ವರೂಪದ ವಿಷಯದಲ್ಲಿ ಸಾವಧಾನತೆ, ರತ್ನತ್ರಯಗಳ ಲಾಭ, ಬೋಧ ಎಂಬ ದಾರಿಬುತ್ತಿಯು ಒದಗಿ ಬಂದು ಜ್ಞಾನ ಶರೀರಿಯಾದ ಆತ್ಮನಿಗೆ ದೇಹ ಪಂಜರದ ನಾಶದ ಭೀತಿ ಕಳೆಯಲಿ. ಮೃತ್ಯುವೆಂಬುದು ಒಂದು ದೊಡ್ಡ ಉತ್ಸವ. ಇದರಿಂದ ತನ್ನ ಸ್ವಸ್ವರೂಪ ಮರಳುತ್ತದೆ. ಸಮ್ಯಜ್ಞಾನಿಗೆ ಅದು ಅಮೃತದ ಹಾಗೆ. ವ್ರತ ಉಪವಾಸಾದಿ ಭಯಂಕರ ಕ್ಲೇಷ ಸಹಿಸಿ ಫಲ ಸಂಪಾದಿಸುವಂತೆ ಮೃತ್ಯುಕಾಲದ ಸ್ವಲ್ಪ ಹೊತ್ತಿನ ಶುಭ ಧ್ಯಾನರೂಪ ಸಮಾಧಿ ಮರಣವನ್ನು ಸಾಧಿಸುತ್ತದೆ.

ಶ್ರಾವಕ ವ್ರತ ವಿಂಗಡಣೆಯಲ್ಲಿ ಹನ್ನೊಂದು ಪ್ರತಿಮೆಗಳ ಸ್ವರೂಪ ಇರಬೇಕು. ದರ್ಶನ, ವ್ರತ, ಸಾಮಯಿಕ, ಪ್ರೋಷದೋಪವಾಸ, ಸಚಿತ್ತ ತ್ಯಾಗ, ರಾತ್ರಿಭೋಜನ, ಬ್ರಹ್ಮಚರ್ಯ, ಆರಂಭ, ಪರಿಗ್ರಹ ತ್ಯಾಗ, ಅನುಮತಿ. ಉದ್ದಿಷ್ಟಾಹಾರ ತ್ಯಾಗಗಳು... ಶ್ರಾವಕರ ವಿಕಾಸಶ್ರೇಣಿ ಯನ್ನು ಇದು ಸೂಚಿಸುತ್ತದೆ. ಶ್ರಾವಕೀಯ ಗುಣಸ್ಥಾನಗಳೆಂದೂ ಹೇಳುತ್ತಾರೆ.

ಹೀಗೆ ಜೈನ ಸಿದ್ಧಾಂತ ಶ್ರಾವಕ / ಶ್ರಮಣ ಎರಡು ಸ್ಥಿತಿಯ ಗುಣ, ವ್ರತ ವಿಧಿಗಳನ್ನು ವಿಶದಪಡಿಸಿದೆ. ಈ ಎಲ್ಲ ಈ ಲೇಖನದಲ್ಲಿ ಸೂಚ್ಯ ರೂಪದಲ್ಲಿದೆಯೇ ಹೊರತು, ವಿವರಣಾತ್ಮಕವಾಗಲಿ, ಸೋದಾಹರಣ, ಪೂರ್ವಕವಾಗಲಿ, ಪುರಾಣ, ಕಾವ್ಯಗಳ ಉಲ್ಲೇಖದಿಂದಾಗಲಿ, (ಪುಟ ಮಿತಿಯ ಕಾರಣದಿಂದ), ಪೂರ್ಣವಾಗಿಲ್ಲ, ಆದರೂ ಸಾಧ್ಯವಾದಷ್ಟೂ ಸ್ವರೂಪದ ದಾರಿಯನ್ನಂತೂ ಕಾಣಿಸಿರಬಹುದು ಎಂಬ ನಂಬಿಕೆ ನನಗಿದೆ.

❑❑

# ಜಾನಪದ: ಪರಂಪರೆ ಮತ್ತು ಮುಂದುವರಿಕೆ

– ಗಾಯತ್ರೀ ನಾವಡ

ಜಾನಪದ ಎಂದರೆ 'ಪೋಪುಲರ್ ಆಂಟಿಕ್ವಿಟಿ' ಎಂಬ ಗತಕೇಂದ್ರಿತ ವ್ಯಾಖ್ಯೆಯಿಂದ ಇಂದು ಬಹುದೂರ ಜಾನಪದದ ನಿರ್ವಚನ ಬಂದು ನಿಂತಿದೆ. ಜಾನಪದವನ್ನು ಕುರಿತ ಆರಾಧನಾಭಾವ ತಪ್ಪಿ ಅಧ್ಯಯನ ವಾಸ್ತವ ದಿಕ್ಕಿನೆಡೆಗೆ ಸಾಗಿದೆ. ನೆಲೆತಪ್ಪುವ ಮುನ್ನ ಜಾನಪದವನ್ನು ಹಿಡಿದಿಡಬೇಕೆನ್ನುವ ತವಕ, ಆತಂಕ ಕರಗಿದೆ. ಈ ಎಲ್ಲ ಹಂತಗಳನ್ನು ದಾಟಿ ಇವತ್ತು ಜಾನಪದ ಒಂದು ಜೀವನವಿಧಾನ ಎಂಬ ಅರ್ಥಗ್ರಹಿಕೆ ಪಡೆದುಕೊಂಡಿದೆ. ಜಾನಪದ ಗತದ ನಿಂತನೀರಲ್ಲ, ಅದು ನಮ್ಮ ಬದುಕಿನೊಂದಿಗೆ ಬದಲಾಗುತ್ತಲೇ ಹೋಗುವ ಪ್ರಕ್ರಿಯೆ. ಅಂದರೆ "ಜಾನಪದ ಪರಂಪರೆಯೊಂದು ತನ್ನೊಳಗಿನ ನಿನ್ನೆಯನ್ನು ಮೀರಿ ಇಂದಿನ ವಾಸ್ತವವನ್ನು ಒಪ್ಪಿಕೊಂಡು, ಸಮಷ್ಟಿಪ್ರಜ್ಞೆಯನ್ನು ಹೀರಿಕೊಂಡು ವ್ಯಕ್ತಿಯೊಬ್ಬನಲ್ಲಿ ಆಕೃತಿಗೊಳ್ಳುವ ಸೃಜನಶೀಲ ಪ್ರಕ್ರಿಯೆ" (ನಾವಡ: ೨೦೧೧) ಜಾನಪದ ಜೀವಂತ ಪಳೆಯುಳಿಕೆ ಅಲ್ಲ, ಅದೊಂದು ಜೀವನವಿನ್ಯಾಸ ಎನ್ನುವ ತಿಳುವಳಿಕೆ ಜಾನಪದಕ್ಕೆ ಹೊಸ ವಿಸ್ತಾರ ಒದಗಿಸಿತು. ಜಾನಪದದ ಸೃಷ್ಟಿ, ಪುನರ್‌ಸೃಷ್ಟಿಯ ಪರಿಚಲನೆಯಲ್ಲಿ ನಿರಂತರತೆಯನ್ನು ಪಡೆದುಕೊಳ್ಳುತ್ತದೆ. ಅದು ಭೂತದ ಸೃಷ್ಟಿ ಅಷ್ಟೇ ಅಲ್ಲ, ವರ್ತಮಾನದ ಸೃಷ್ಟಿ ಕೂಡಾ. ಹಾಗಾಗಿಯೇ ಅದಕ್ಕೆ ಭವಿಷ್ಯತ್ ಕೂಡಾ ಇದೆ. ಈ ನೆಲೆಯಲ್ಲಿಯೇ ಜಾನಪದ ಅವಿನಾಶಿಯಾಗುವುದು.

ಜಾನಪದ ಮೌಖಿಕ ಪರಂಪರೆಯದು, ಅಕ್ಷರಸಂಸ್ಕೃತಿಯಲ್ಲಿ ಅದು ಸಾಯುತ್ತದೆ ಹಾಗೂ ಹುಟ್ಟುವುದಿಲ್ಲ ಎನ್ನುವ ಪರಿಕಲ್ಪನೆ ಸಂದಿಗ್ಧತೆಯನ್ನು ಅನುಭವಿಸುತ್ತದೆ. ಇದರ ಅಪಾಯವೆಂದರೆ ಜಾನಪದ ಮತ್ತು ಆಧುನಿಕತೆಯನ್ನು, ಮೌಖಿಕ ಮತ್ತು ಅಕ್ಷರಗಳನ್ನು ಎರಡು ವೈರುಧ್ಯಗಳೆಂದು ಗ್ರಹಿಸುತ್ತದೆ. ಆಧುನೀಕರಣ ಪ್ರಕ್ರಿಯೆಯೇ ಜಾನಪದದ ನಾಶದ ಮೇಲೆ ನಿಂತಿರುವುದು ಎಂದು ನಂಬುತ್ತದೆ. ಹೀಗಾಗಿ ವರ್ತಮಾನದ ಜಾನಪದವನ್ನು ನಿರ್ವಚಿಸಲು ಅದು ಸೋಲುತ್ತದೆ. ಎರಡನೆಯದು ಜಾನಪದ ಮೌಖಿಕ ಪರಂಪರೆಯದು ಎಂಬ ನಿಲುವು ತಾಳುವುದರಿಂದ ಜಾನಪದದ ಸಮಗ್ರತೆಯನ್ನು ಗ್ರಹಿಸಲು ಅದಕ್ಕೆ ಸಾಧ್ಯವಾಗಿಲ್ಲ. ಯಾಕೆಂದರೆ ಮೌಖಿಕ ಪರಂಪರೆಯ ಆಚೆಗಿನ ಆಂಗಿಕ, ಭೌತಿಕ, ಕೌಶಲ್ಯ ಸ್ವರೂಪಗಳನ್ನು ಈ ನೋಟ ಹಿಡಿದಿಡುವುದಿಲ್ಲ. ಈ ಹಿನ್ನೆಲೆಯಲ್ಲಿ ಡಂಡಸ್ ಅವರ ಜಾನಪದ ಕುರಿತ ನಿಲುವನ್ನು ಗಮನಿಸಬಹುದು. "ಯಾವುದೇ ಒಂದು ಸಮಾನ ಅಂಶವನ್ನು ತಮ್ಮೊಳಗೆ ಹಂಚಿಕೊಂಡಿರುವ ಗುಂಪೊಂದನ್ನು 'ಫೋಕ್' ಎನ್ನಬಹುದು. ಆ ಸಮಾನ ಅಂಶ ಅದು ವೃತ್ತಿ ಭಾಷೆ, ಧರ್ಮ, ಜನವರ್ಗ, ಸಂಸ್ಕೃತಿ, ಲಿಂಗ ಯಾವುದೂ ಇರಬಹುದು. ಈ ಗುಂಪು ಯಾವುದೇ ನೆಲೆಯಲ್ಲಿ ರಚನೆಗೊಂಡಿರಲಿ ಅದು ಸಮಾನ ಪರಂಪರೆಯೊಂದನ್ನು ಹೊಂದಿರುವುದು ಮುಖ್ಯ."

ಜಾನಪದ ಸಂಸ್ಕೃತಿಯ ಪುನರ್ ಶೋಧದಲ್ಲಿ ನಿರಂತರ ತೊಡಗುತ್ತದೆ. ನಮ್ಮ ಜೀವನವಿಧಾನ ಬದಲಾದಂತೆ ಜಾನಪದದ ಸ್ವರೂಪವೂ ಬದಲಾಗುತ್ತದೆ. ಮೊಸರು ಕಡೆಯುವುದು, ಬತ್ತಕುಟ್ಟುವುದು, ರಾಗಿ ಬೀಸುವುದು – ಇವತ್ತು ನಮ್ಮ ಜೀವನವಿಧಾನದಿಂದ ಕಳಚಿಕೊಂಡಿರುವುದರಿಂದ ಕಡೆವ, ಕುಟ್ಟುವ, ಬೀಸುವ ಹಾಡುಗಳು ಇವತ್ತು ಕಾಣೆಯಾಗಿರುವುದು ಸತ್ಯ. ಒಂದು ಪ್ರಕಾರ, ಹೀಗೆ ಕಾಣೆಯಾಗಿದೆ ಎಂದರೆ ಜಾನಪದದಲ್ಲಿ – 'ಖಾಲಿ' ಅಥವಾ 'ನಿರ್ವಾತ' ಇದೆ ಎಂದರ್ಥವಲ್ಲ, ಮರೆಯಾದ ಜಾಗದಲ್ಲಿ ಅದು ಇನ್ನಾವುದೋ ಮರುರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಅಜ್ಜಿ ಕತೆ ಕುಟುಂಬದೊಳಗೆ ಸೃಷ್ಟಿಯಾಗುತ್ತಿದ್ದ ಸಂದರ್ಭ ಇವತ್ತು ಅಜ್ಜಿ – ಮೊಮ್ಮಕ್ಕಳ ಕೌಟುಂಬಿಕ ಸ್ಥಿತಿ ಬದಲಾ ಹೊತ್ತಿನಲ್ಲಿ ಆಧುನಿಕ ವಲಯದೊಳಗೆ ಅಜ್ಜಿ ಕತೆ ಗಾಸಿಪ್ ರೂಪದಲ್ಲಿ ಅಥವಾ ಸಹೋದ್ಯೋಗಿಗಳ ಕುರಿತ ಕಟ್ಟುಕತೆ ರೂಪದಲ್ಲಿ ಬಿತ್ತರಗೊಳ್ಳುತ್ತಿದೆ. ಅಥವಾ ಕಾರ್ಮಿಕ ಸಮುದಾಯದೊಳಗೆ ಗಾದೆ, ಒಗಟುಗಳು ಹೊಸಮಾದರಿಯಲ್ಲಿ ಪ್ರಸರಣಗೊಳ್ಳುವುದು, ಅಥವಾ ಮೊಬೈಲ್ ಜೋಕುಗಳು, ಸಂದೇಶಗಳ ರೂಪದಲ್ಲಿ ಮರುಸೃಷ್ಟಿಗೊಳ್ಳುವುದು. ಜಾನಪದ ಇತಿಹಾಸದ ಒಂದು ಘಟ್ಟದಲ್ಲಿ ಅತ್ಯಂತ ಕ್ರಿಯಾಶೀಲವಾಗಿದ್ದ ಜಾನಪದ ಪ್ರಕಾರ ಇನ್ನೊಂದು ಘಟ್ಟದಲ್ಲಿ ಮಸುಕಾಗಬಹುದು, ಅಥವಾ ಮರೆಯಾಗಬಹುದು, ಅಥವಾ ಹೊಸರೂಪ ಪಡೆಯಬಹುದು. ಅದು ಆಯಾ ಜಾನಪದ ಸಮುದಾಯದ ಬದುಕಿನ ಲೋಕದೃಷ್ಟಿಯೊಂದಿಗೆ

# ೩೦೧, ಎಬೋಡ್ ಅಪಾರ್ಟ್‌ಮೆಂಟ್ಸ್, ಕಲ್ಪನಾ ರಸ್ತೆ, ವಾಸ್‌ಲೇನ್, ಮಂಗಳೂರು – ೫೭೫೦೦೨

ಅಂತರ್‌ಸಂಬಂಧವನ್ನು ಹೊಂದಿರುವುದು. ಸಾಂಪ್ರದಾಯಿಕ ಪ್ರಕಾರಗಳಿಂದ ಬೇರೆಯಾದ ಅಥವಾ ಅದಕ್ಕೆ ಪರ್ಯಾಯವಾದ ಪ್ರಕಾರಗಳು ಇಂದು ಅಲ್ಲಿ ಕಾಣಿಸಬಹುದು. ಕಾಲೇಜು ಜಾನಪದ, ಕಂಪ್ಯೂಟರ್ ಜಾನಪದ, ಕೈಗಾರಿಕಾ ಜಾನಪದ, ನಗರಜಾನಪದ ಮುಂತಾದ ಪ್ರಕಾರಗಳನ್ನು ಸಮಕಾಲೀನ ಜಾನಪದದಲ್ಲಿ ಗುರುತಿಸಬಹುದು.

ಪರಂಪರೆಯ ಮಾತಿಗೆ ಬಂದರೆ ಪರಂಪರೆ ಎನ್ನುವುದು ಯಾವುದೋ ಓಬೀರಾಯನ ಕಾಲದ್ದು ಎಂದರ್ಥವಲ್ಲ. ಅದು ನಿತ್ಯ ನೂತನ, ನಿರಂತರ. ಅದರ ಘಟಕಗಳು ಸ್ಥಳ, ಕಾಲ, ವ್ಯಕ್ತಿ, ಸಮುದಾಯಕ್ಕೆ ಅನುಸರಿಸಿ ಬದಲಾಗುತ್ತವೆ. ನನ್ನ ಹಿಂದಿನ ತಲೆಮಾರು ಬದುಕಿನ ರೀತಿ – ನೀತಿ, ವಿನ್ಯಾಸಗಳು ನನಗೆ ಮತ್ತು ನನ್ನ ಮುಂದಿನ ತಲೆಮಾರಿಗೆ ಪರಂಪರೆಯಾಗುತ್ತದೆ. ಆದರೆ ನನ್ನ ಹಿಂದಿನ ತಲೆಮಾರಿಗಲ್ಲ. ಅದು ಅವರಿಗೆ ಸಮಕಾಲೀನವೇ ಹೊರತು ಪರಂಪರೆಯಾಗದು. ಒಂದು ಕಾಲಕ್ಕೆ ಪರಂಪರೆ ಎಂದು ಅನ್ನಿಸಿದ್ದು ಮತ್ತೊಂದು ಕಾಲಕ್ಕೆ ಪರಂಪರೆಯಾಗಬೇಕಾದುದೇನೂ ಇಲ್ಲ, ಅಥವಾ ಅದನ್ನು ಹೀಗೂ ಹೇಳಬಹುದು. ಒಂದು ಕಾಲಕ್ಕೆ ಪರಂಪರೆ ಅಲ್ಲದ್ದು ಇಂದು ಪರಂಪರೆಯಾಗಿದೆ. ಹಾಗೇನೇ ಒಂದು ಸಮುದಾಯಕ್ಕೆ ಪರಂಪರೆಯಾಗಿರುವುದು ಮತ್ತೊಂದು ಸಮುದಾಯಕ್ಕೆ ಪರಂಪರೆಯಾಗಬೇಕಿಲ್ಲ. ಮಲೆಮಾದೇಶ್ವರ ಮೌಖಿಕ ಕಥನ ಮತ್ತು ಆರಾಧನೆ ಗುಡ್ಡರಿಗೆ ಪರಂಪರೆ ಎಂದು ಅನ್ನಿಸಿದರೆ ನೀಲಗಾರರಿಗೆ ಅಲ್ಲ. ಸಿರಿಕಾವ್ಯ ಮತ್ತು ಆರಾಧನೆ ಸಿರಿಬಳಗಕ್ಕೆ ಪರಂಪರೆ ಎಂದು ಅನ್ನಿಸುತ್ತದೆ. ಆದರೆ ಗೊರವರಿಗಲ್ಲ. ಅಂದರೆ ಯಾವ ಒಂದು ಸಮುದಾಯ ತನ್ನ ಸಾಂಸ್ಕೃತಿಕ ಅಸ್ಮಿತೆಯಾಗಿ ಅದರೊಂದಿಗೆ ತನ್ನ ಅನನ್ಯತೆಯನ್ನು ಕಟ್ಟಿಕೊಡುವಲ್ಲಿ ಅದು ಅವರಿಗೆ ಪರಂಪರೆಯಾಗುತ್ತದೆ. ಹಾಗಾಗಿಯೇ ಪರಂಪರೆ ಎನ್ನುವುದು ಕಾಲದ ಎಳೆಕಡಿದ ಸಂಗತಿಯಲ್ಲ. ಕಟ್ಟಿ ಹಿಡಿದಿಡುವ ಸಂದರ್ಭವೂ ಅಲ್ಲ. ಅದು ನಮ್ಮ ಪರಿಪ್ರೇಕ್ಷ್ಯವನ್ನು ಅವಲಂಬಿಸಿದ ಸಾಪೇಕ್ಷರಚನೆಗಳು. ಹೀಗಾಗಿ ಪರಂಪರೆ ಎನ್ನುವುದು ಚಲನಶೀಲವಾದುದು ಮತ್ತು ನಿರಂತರತೆಯನ್ನು ಕಾಯ್ದಿಟ್ಟುಕೊಳ್ಳುವುದು.

ನಮ್ಮ ಜಾತಿಬದ್ಧ ಸಾಂಸ್ಕೃತಿಕ ಸಂದರ್ಭದಲ್ಲಿ ಪ್ರತಿಯೊಂದು ಜಾತಿ ಸಮುದಾಯ ತನ್ನೊಳಗೆ ಜಾತಿಯ ಸ್ಮೃತಿಕೋಶದೊಂದಿಗೆ ಸಂಬಂಧ ಕಟ್ಟಿಕೊಂಡಿರುತ್ತದೆ. ಇದು ಅಪ್ರಜ್ಞಾಪೂರ್ವಕ ನಡೆಯುವಂತಹ ಪ್ರಕ್ರಿಯೆ. ಹೀಗಾಗಿ ಒಂದು ಕಥನ ಅಥವಾ ಗೀತ ಪ್ರದರ್ಶನಗೊಳ್ಳುವಾಗ ಮತ್ತು ಆ ಪ್ರದರ್ಶನವನ್ನು ಅರ್ಥಮಾಡಿಕೊಳ್ಳುವಾಗ ಪ್ರೇಕ್ಷಕರಿಗೆ ತಮ್ಮ ಜಾತಿಯ ಸ್ಮೃತಿಕೋಶ ಅವನ ನೆರವಿಗೆ ಬರುತ್ತದೆ. ಆ ನೆಲೆಯಲ್ಲಿಯೇ ಪ್ರೇಕ್ಷಕ ಪಠ್ಯವನ್ನು ಅರ್ಥಮಾಡಿಕೊಳ್ಳುತ್ತಾನೆ. ತನ್ನ ಪಠ್ಯವನ್ನು ಕಟ್ಟಿ ಹಾಡುವಾತಗ ಆ ಸ್ಮೃತಿಕೋಶದಿಂದ ಪ್ರೇರಣೆ ಪಡೆದುಕೊಳ್ಳುತ್ತಾನೆ. ಹೀಗಾಗಿಯೇ ರಾಮಕ್ಕ ಮುಗ್ಗೇರ್ತಿ ಕಟ್ಟಿದ ಸಿರಿಪಾಡ್ದನಕ್ಕೂ ಕರ್ಗಿಶೆಟ್ಟಿ ಕಟ್ಟಿದ ಸಿರಿಪಾಡ್ದನ ಪಠ್ಯಕ್ಕೂ ಭಿನ್ನತೆ ಏರ್ಪಡುತ್ತವೆ. ಹೀಗೆ ಎರಡು ಮಹಿಳಾ ಪಠ್ಯಗಳು ಸಿರಿಪಾಡ್ದನದ ಬಹುಪಠ್ಯಕ್ಕೆ ಸಾಕ್ಷಿಯಾಗುವುದು. ಆ ಇಬ್ಬರ ಸೃಜನಶೀಲತೆಗೆ ಸಂಬಂಧಿಸಿದ್ದು ಹೌದಾದರೂ ಜಾತಿಪರಂಪರೆಯ ನೆಲೆ ಮಹತ್ವದ ಕಾರಣವಾಗುವುದು ನಿಜ. ಹಾಗೆಂದರೆ ಜಾನಪದದ ಸೃಜನಶೀಲತೆ ತಿದ್ದಿ ಬರೆವ ಬಗೆಯದಲ್ಲ ಅಥವಾ ಕಟ್ಟಿ ಮುಗಿವ ರೀತಿಯದೂ ಅಲ್ಲ. ಅದು ಹಾಡುತ್ತ ಕಟ್ಟುವ ಪರಿಯದು. ಕಾಲ, ಸ್ಥಳ, ವ್ಯಕ್ತಿ, ಬಂಧುತ್ವ, ಸಂದರ್ಭಗಳು ಪಠ್ಯ ಒಂದರ ಪ್ರೇರಕ ಅಂಶಗಳಾಗಿರುವುದರಿಂದಲೇ ಒಂದು ಪಠ್ಯದ ಇನ್ನೊಂದು 'ತದ್ರೂಪಿ ಪಠ್ಯ' ಸೃಷ್ಟಿಯಾಗುವುದಿಲ್ಲ. ಒಂದು ಪಠ್ಯ ಒಬ್ಬನಿಂದ ಇನ್ನೊಬ್ಬನಿಗೆ ಚಲಿಸುವಾಗ ಅಥವಾ ಒಬ್ಬನೇ ಮತ್ತೊಮ್ಮೆ ಹೇಳಿದಾಗ ಹೊಸಪಠ್ಯ ಹುಟ್ಟುತ್ತದೆ, ಪ್ರಸರಣಗೊಳ್ಳುತ್ತದೆ. ಅದು ಒಂದು ಸಬಲ್ಲು, ನೂರು ಸೊಲ್ಲು ನೂರು ಸೊರವಾಗಿ ಕೇಳಿಸುವಂತಹದು. ಇಲ್ಲಿ ನಮಗೆ ಬೇಕಾಗಿರುವುದು ಆ ನೂರು ಸೊರವನ್ನು ಆಲಿಸುವ ಕಿವಿಗಳು ಮತ್ತು ಒಂದು ನೂರಾಗುವ ಪರಿಯನ್ನು ಕಾಣುವ ಮನಸ್ಸು.

ಜಾನಪದದ ದೊಡ್ಡ ಶಕ್ತಿ ಎಂದರೆ ಕಾಲ ಮತ್ತು ಲೋಕದ ಕಟ್ಟನ್ನು ಹರಿಯುವುದು. ಅದಕ್ಕೆ ಗತಕಾಲ ಎಂಬುದೇ ಇಲ್ಲ. ಎಷ್ಟೋ ಜನಪದ ಕತೆಗಳು 'ನಾಳೆ ಹೋಗಿ ಇಂದು ಬಂದೆ' ಎಂದು ಕೊನೆಗೊಳ್ಳುತ್ತವೆ. ನಮ್ಮ ತ್ರಿಕಾಲ ಕಲ್ಪನೆಯನ್ನು ತಿರುವು ಮುರುವು ಮಾಡುತ್ತಲೇ ಭೂತ, ವರ್ತಮಾನ, ಭವಿಷ್ಯದೊಂದಿಗೆ ಅನುಸಂಧಾನಗೊಳ್ಳುತ್ತ ಪ್ರಕಟವಾಗುತ್ತವೆ. ಜಾನಪದದ ಕಾಲಾತೀತಗೊಳ್ಳುವ ಮಾಂತ್ರಿಕ ಶಕ್ತಿಯೇ ಅಲೌಕಿಕವನ್ನು ಲೌಕಿಕಗೊಳಿಸುವುದು ಮತ್ತು ಲೌಕಿಕವನ್ನು ಅಲೌಕಿಕಗೊಳಿಸುವುದು. ಸಿರಿ ಜಾತ್ರೆಯಲ್ಲಿ ವಿಭಿನ್ನ ಜಾತಿವರ್ಗದ ಸ್ತ್ರೀಪುರುಷರು ಸಿರಿ ಕುಟುಂಬವಾಗಿ ಪರಿವರ್ತಿತರಾಗುವಲ್ಲಿ ಏರ್ಪಡುವ ಲೋಕಪಲ್ಲಟ ಪ್ರಕ್ರಿಯೆ ಜಾನಪದ ಪರಂಪರೆಯ ವಿಶಿಷ್ಟತೆ. ಈ ಚರ್ಚೆಯನ್ನು ಮೊಗಳ್ಳಿಯನ್ನು ಇನ್ನೊಂದು ಮಗ್ಗುಲಲ್ಲಿ ಬೆಳೆಸುತ್ತಾರೆ. "ಜಾನಪದ ನಿರಂತರವಾಗಿ ಹಳೆಯದನ್ನು ನವೀಕರಿಸುವ ಹಾಗೆಯೇ ಹೊಸದನ್ನು ಪರಂಪರೆಗೆ ಅನ್ವಯಾಂತರಗೊಳಿಸಿಕೊಳ್ಳುವ ಅಸ್ತಿತ್ವಶಕ್ತಿಯನ್ನು ಹೊಂದಿದೆ. ಆರಾಧನಾರಂಗದ ಎಲ್ಲ ಆಚರಣೆಗಳು ತಮ್ಮ ಸಮುದಾಯದ ಅಸಾಮಾನ್ಯತೆಯನ್ನು ಸ್ಥಾಪಿಸುವಲ್ಲಿ ಗತಕಾಲವನ್ನು ವರ್ತಮಾನದ ಬದುಕಿನ ಅನುಭವಗಳಿಂದ ಪುನರ್‌ಸೃಷ್ಟಿಸುವ ಕಾವ್ಯಕಾಯಕವು ಸಾಂಸ್ಕೃತಿಕ ಅನುಸಂಧಾನದ ಮೂಲಕ ಏರ್ಪಡುತ್ತಿರುತ್ತದೆ. ಸಿರಿ, ಜುಂಜಪ್ಪ, ಮೊಂಟೆಸ್ವಾಮಿ, ಮಲೆಮಾದೇಶ್ವರ ಕಾವ್ಯಗಳನ್ನು ಹಾಡುವವರು ತಮ್ಮ ಸಮುದಾಯದ ಗತಕಾವ್ಯವನ್ನು ಹಾಡುವುದಿಲ್ಲ. ಪರಂಪರೆಯನ್ನು ನಿರೂಪಿಸುತ್ತ ಗತಕಾಲವನ್ನು ವರ್ತಮಾನದ ಜತೆ ಅನುಸಂಧಾನ ಮಾಡುತ್ತಿರುತ್ತಾರೆ" (ಮೊಗಳ್ಳಿ ೨೦೦೬: ಪು ೨೩ – ೨೫) ಈ ಪ್ರಕ್ರಿಯೆಯನ್ನು ಜಾನಪದ ಪರಂಪರೆಯ ಪರಿಚಲನೆಯಾಗಿ ಗ್ರಹಿಸಬೇಕು.

## ಪ್ರಯೋಗ ಪ್ರಕ್ರಿಯೆ

"ಜಾನಪದಕ್ಕೆ ಮಾನವೀಯ ಸ್ಮರಣೆಯನ್ನು ಕಾಯ್ದಿಡುವ, ಬದಲಾವಣೆಯ ಸಂದರ್ಭದಲ್ಲಿ ಅದಕ್ಕೆ ನಿರಂತರತೆಯನ್ನು ಒದಗಿಸುವ ಮತ್ತು ಭವಿಷ್ಯದಲ್ಲಿ ಪರಂಪರೆಯು ಮರಳಿಬರುವುದನ್ನು ಸ್ವಾಗತಿಸುವ ಶಕ್ತಿಯಿರುತ್ತದೆ". (ಅಂಬಳಿಕೆ ಪು ೨೨) ಎನ್ನುವ ಅಂಬಳಿಕೆಯವರ ಮಾತನ್ನು ಜಾನಪದ ಪ್ರಯೋಗ ಪ್ರಕ್ರಿಯೆಯ ನೆಲೆಗೂ ವಿಸ್ತರಿಸಬಹುದು. ಸೃಜನಶೀಲ ಮನಸ್ಸೊಂದು ತನ್ನ ಪರಂಪರೆಯ ಸತ್ವದಿಂದ ವರ್ತಮಾನವನ್ನು ಕಟ್ಟುತ್ತದೆ. ಇಂತಹ ಪ್ರಯೋಗಗಳನ್ನು ಪರಂಪರತೆಯ ಮುಂದುವರಿಕೆಯ ಭಾಗವಾಗಿಯೇ ನಾನು ಗ್ರಹಿಸುತ್ತೇನೆ. ಡಾ. ಶಿವರಾಮ ಕಾರಂತರು ಮಾಡಿದ ಯಕ್ಷರಂಗದ ಪ್ರಯೋಗಗಳು, ಆಧುನಿಕ ರಂಗಭೂಮಿಗೆ ಸಂಗೀತ ಉಪಕರಣಗಳನ್ನು ಸಂಯೋಜಿಸಿದ ಬಿ.ವಿ. ಕಾರಂತರ ಪ್ರಯೋಗಗಳು, ಕೊರಗೆ ಅಭಿವೃದ್ಧಿ ಸಂಘಗಳ ಒಕ್ಕೂಟವು (ಕರ್ನಾಟಕ, ಕೇರಳ) ಆದಿಮ ಸಮುದಾಯದ ನ್ಯಾಯವ್ಯವಸ್ಥೆಯನ್ನು 'ನಮ್ಮ ನ್ಯಾಯಾಲದ'ದ ಮೂಲಕ ಮತ್ತೆ ಜಾರಿಗೆ ತಂದಿರುವುದು ಈ ಬಗೆಯದು. ಗಂಡುಕಲೆ ಎಂದಿದ್ದ ಯಕ್ಷಗಾನ, ಡೊಳ್ಳುಕುಣಿತಗಳು ಮಹಿಳಾತಂಡ, ಮಕ್ಕಳ ತಂಡಗಳ ಮೂಲಕ ಪ್ರದರ್ಶನಗೊಳ್ಳುತ್ತಿರುವುದು, ಹಾಗೇನೇ ನಾಡಿನ ಅನೇಕ ಕಲಾಪ್ರಕಾರಗಳು – ಲಂಬಾಣಿ ಕುಣಿತವಿರಬಹುದು, ಕಂಸಾಳೆ ಕುಣಿತವಿರಬಹುದು, ಕುಡುಬಿಯರ ಗುಂಪ್ಪೆ ಪಾಂಗ್ ಇರಬಹುದು, ಜಾತಿಯ ಬಲೆಯಿಂದ ಬಿಡಿಸಿಕೊಂಡು ಸಂಸ್ಕೃತಿ ಉತ್ಸವಗಳಲ್ಲಿ, ಯುವಜನ ಮೇಳಗಳಲ್ಲಿ, ದೃಶ್ಯಮಾಧ್ಯಮಗಳಲ್ಲಿ ಹೊಸತಲೆಮಾರು ಪ್ರದರ್ಶಿಸುತ್ತಿರುವುದು ಎಲ್ಲವೂ ಜಾನಪದದ ಮುಂದುವರಿಕೆಯ ಬಹುಬಗೆಯ ದಾರಿಗಳು, ಕೈಗಾರಿಕಾ ಕ್ರಾಂತಿಗೆ ಪ್ರತಿಕ್ರಿಯೆಯಾಗಿ ಜಾನಪದ ಅಧ್ಯಯನ ಯುರೋಪಿನಲ್ಲಿ ಬೆಳೆದಿದ್ದು, ಜಾಗತೀಕರಣಕ್ಕೆ ಮುಖಾಮುಖಿಯಾದ ಸಂದರ್ಭದಲ್ಲಿ ಕರ್ನಾಟಕದಲ್ಲಿ ಜಾನಪದ ವಿಶ್ವವಿದ್ಯಾನಿಲಯ ವಿಶ್ವದಲ್ಲೇ ಮೊದಲಾಗಿ ಆರಂಭಗೊಳ್ಳುತ್ತಿರುವುದು ಜಾನಪದದ ಮುಂದುವರಿಕೆಯನ್ನು ಸಾಕ್ಷೀಕರಿಸುತ್ತದೆ.

## ಕೊನೆ ಮಾತು

ಜಾನಪದ ಪರಂಪರೆ ಮತ್ತು ಮುಂದುವರಿಕೆಯ ಈ ಎಲ್ಲ ಸಾತ್ವಿಕ ಅಭಿಪ್ರಾಯಗಳನ್ನು ನಾನು ಸಮರ್ಥಿಸುತ್ತೇನೆ. ಆದರೆ ಹೀಗೆ ಮಂಡಿಸಿದ ಮೇಲೂ ನನಗೆ ಕೆಲವು ಪ್ರಶ್ನೆಗಳಿವೆ. ಜಾಗತೀಕರಣ ವೈಯಕ್ತಿಕತೆಗಳು ಜಗಲಿ ದಾಟಿ, ಕುಟುಂಬದ ಚಾವಡಿ ಏರಿ ಕುಳಿತಿರುವ ಈ ಹೊತ್ತಿನಲ್ಲಿ ಜಾನಪದ ಜೀವಸತ್ವ ಕಳೆದುಕೊಳ್ಳದೆ? ಅಜ್ಜಿ, ತಾಯಿ, ಮಕ್ಕಳಿಗೆ ಮನೆಮಾತು ಸಂವಹನ ಸಾಧ್ಯವಾಗದ ಸಂದರ್ಭದಲ್ಲಿ ಪರಂಪರೆಯ ನೆಲೆತಪ್ಪುತ್ತಿದೆಯೇ? ಎನ್ನುವ ಆತಂಕ ಎಲ್ಲ ಸಂವೇದನಶೀಲ ಮನಸ್ಸುಗಳನ್ನು ಎಲ್ಲೋ ಒಂದು ಕಡೆಗೆ ಕಾಡುತ್ತಿದೆ. ಇದು ಹಳಹಳಿಕೆಯ ಮಾತಲ್ಲ. ಹೊರಗಿನ ಯಾವ ಒತ್ತಡಗಳಿಗೂ ಜಾನಪದದ ಒಳಚೈತನ್ಯವನ್ನು ನಾಶಮಾಡುವ ಸಾಮರ್ಥ್ಯ ಇಲ್ಲ ಎನ್ನುವುದನ್ನು ಸಿದ್ಧಾಂತವಾಗಿ ಮಂಡಿಸುತ್ತೇವೆ. ಆದರೆ ನಮ್ಮ ಮುಂದಿರುವ ವಾಸ್ತವ ಏನು ಹೇಳುತ್ತಿದೆ?

ಒಂದು ಹಂತದಲ್ಲಿ ನಮ್ಮ ನಗರ ಈ ಹಳ್ಳಿಯ ವಿಸ್ತರಣೆಯಾಗಿತ್ತು ಆ ಜನ ಪರಂಪರೆಯ ಸ್ಮೃತಿಯೊಂದಿಗೆ ಬದುಕನ್ನು ಕಟ್ಟಿಕೊಂಡಿದ್ದರು. ಆದರೆ ಇವತ್ತು ನಮ್ಮ ಮಕ್ಕಳು, ಮೊಮ್ಮಕ್ಕಳು ನಮ್ಮ ಸಂಸ್ಕೃತಿಗೆ ಕುರುಡರಾಗುತ್ತಿರುವ ಸತ್ಯದಲ್ಲಿ ಪರಂಪರೆಯ ಜತೆ ಯಾವುದೇ ಸಂವಹನ ಸಾಧ್ಯವಾಗದೆ ಜೀವನಸಂದರ್ಭದಲ್ಲಿ ಇವೆ. ಪಡುವಣಕ್ಕೆ ಒತ್ತೆಯಿಟ್ಟ ಸ್ಥಿತಿಯಲ್ಲಿ ಅಲ್ಲಿ ಸೃಷ್ಟಿಯಾಗುತ್ತಿರುವ ಜೋಕ್ಸ್, ಒಗಟು, ಗಾಸಿಪ್ಸ್, ಸಂದೇಶಗಳು ನಮ್ಮ ಅಂತಃಸತ್ವದ ಅಭಿವ್ಯಕ್ತಿ ಎನಿಸುವುದೆ? ಇವಿಷ್ಟೇ ನಮ್ಮ ಜಾನಪದ ಎಂದಾದರೆ ಕಳೆದುಕೊಳ್ಳುತ್ತಿರುವ ಕಥನಕಾವ್ಯ, ಮಹಾಕಾವ್ಯ, ಪಾಡ್ದನಗಳ ಸೃಷ್ಟಿ, ಚಹರೆಯನ್ನು ಹೇಗೆ ನಿರ್ವಚಿಸಿಕೊಳ್ಳಬೇಕು? ಮಾಧ್ಯಮಗಳು ಬಿತ್ತರಿಸುತ್ತಿರುವ ಪವರ್ ರೇಂಜರ್ಸ್, ಕಾಮನ್ ರೈಡರ್ಸ್, ಡ್ರಾಗನ್‌ನೈಟ್ಸ್‌ನಂತಹ ಮಕ್ಕಳ ಕತೆಗಳು ನಮ್ಮ ಜನಪದ ಕತೆಗಳಿಗೆ ಪರ್ಯಾಯವೇ? ಇದು ಹೌದಾದರೆ ಜಾಗತಿಕ ಮಾರುಕಟ್ಟೆಯಲ್ಲಿ ಬಿಕರಿಯಾಗುತ್ತಿರುವ ಜಾನಪದ ಸಂಗತಿಗಳನ್ನು ಜಾನಪದದ ಮುಂದುವರಿಕೆಯಾಗಿ ಒಪ್ಪಿಕೊಳ್ಳಬೇಕಾದ ಆತಂಕ ನನ್ನನ್ನು ಕಾಡುತ್ತಿದೆ.

**ಗ್ರಂಥಸೂಚಿ:**


೧. ಅಂಬಳಿಕೆ ಹಿರಿಯಣ್ಣ ೨೦೦೬ **ಸೈದ್ಧಾಂತಿಕ ಜಾನಪದ**

೨. ನಾವಡ. ಎ.ವಿ. ೨೦೧೦ **ಜಾನಪದ : ಮುಂದಿನ ದಶಕದ ಅಂತಃಚೈತ್ರದ ರೂಪಕ** (ವಿಜಯ ಕರ್ನಾಟಕ, ೫.೨.೨೦೧೧)

೩. ಮೊಗಳ್ಳಿ ಗಣೇಶ್ ೨೦೦೬ **ಮೌಖಿಕ ಸಂಕಥನ** ಕನ್ನಡ ವಿವಿ. ಹಂಪಿ.

# ಗಂಗಾದೇವಿಯ 'ಮಧುರಾವಿಜಯಂ' – ಒಂದು ವಿಶ್ಲೇಷಣೆ

– ಕೂ.ಸ. ಅಪರ್ಣ

ಸಂಗಮ ವಂಶದ ಅರಸನಾದ ಒಂದನೇ ಬುಕ್ಕನ ಮಗ – ಎರಡನೇ ಕಂಪಣ ಅಥವಾ ವೀರಕಂಪರಾಯ. ಈ ಕಂಪಣನ ರಾಣಿ –ಗಂಗಾದೇವಿ. ಅವಳು ರಚಿಸಿದ 'ಮಧುರಾ ವಿಜಯಂ' ಎಂಬುದು ಒಂದು ಚಾರಿತ್ರಿಕ ಕಾವ್ಯ. ತನ್ನ ಪತಿ ಕಂಪಣನು ಮಧುರೆಯನ್ನು ಗೆದ್ದು, ಅಲ್ಲಿ ಪರಕೀಯರ ಆಡಳಿತವನ್ನು ಕೊನೆಗಾಣಿಸಿ, ಶಾಂತಿಸುವ್ಯವಸ್ಥೆಯನ್ನು ನೆಲೆಗೊಳಿಸಿದ ಕಥೆಯೇ – ವೀರಕಂಪರಾಯ ಚರಿತಂ ಅಥವಾ ಮಧುರಾವಿಜಯಂ – ಎಂಬ ಈ ಸಂಸ್ಕೃತ ಕಾವ್ಯ. ಈ ಕಂಪಣನು ಮಧುರೆಯನ್ನು ಮಾತ್ರವಲ್ಲದೆ, ಅದಕ್ಕೆ ಮುನ್ನ ರಾಜಗಂಭೀರ ರಾಜ್ಯ / ತೊಂಡೈಮಂಡಲವನ್ನೂ ಜಯಿಸಿ ಅಲ್ಲಿದ್ದ ಚಂಪರಾಯನನ್ನು 'ದೇವೇಂದ್ರನ ಅತಿಥಿ'ಯಾಗುವಂತೆ ಮಾಡಿದನು. ಸಂಸ್ಕೃತ ಕವಿಗಳ (ಚಾರಿತ್ರಿಕ) ಬಗ್ಗೆ ಒಂದೆಡೆ ಹೇಳಿರುವುದರ[೧] ಹಿನ್ನೆಲೆಯಲ್ಲಿ ಗಮನಿಸಿದರೆ, 'ಮಧುರಾ ವಿಜಯ'ದಲ್ಲಿ ಕವಯಿತ್ರಿಯು ದೊರೆಸಮಾನನಾದ ತನ್ನ ಪತಿಯ ವೀರಗಾಥೆಯನ್ನು ಹಾಡಿದ್ದಾಳೆ; ಅವನ ಜೀವನದಲ್ಲಿ ಘಟನೆಗಳಿಗಿಂತಲೂ ಹೆಚ್ಚಾಗಿ ಅವನ ಸಾಹಸವನ್ನು ಬಣ್ಣಿಸಿ ವಿಶೇಷತೆಯನ್ನು ತೋರಿದ್ದಾಳೆ. ಉಪಲಬ್ಧವಿರುವ ಕಾವ್ಯಗಳನ್ನು ಗಮನಿಸಿದರೆ, ಸಂಸ್ಕೃತದಲ್ಲಿ ಕಾವ್ಯವನ್ನು ಬರೆದ ಮೊದಲ ಕವಯಿತ್ರಿಯಾಗಿದ್ದಾಳೆ[೨] ಹಾಗೂ ಚಾರಿತ್ರಿಕ ವಿಷಯವನ್ನು ಆಧರಿಸಿ ಕಾವ್ಯ ಬರೆದುದು ಅವಳ ವಿಶೇಷತೆಯಾಗಿದೆ. ಇದರೊಂದಿಗೆ, ತನ್ನ ಪತಿ ಕಂಪಣನ ಸಾಹಸದ ಬಗೆಗಿದ್ದ ಆದರ – ಹಾಗೂ ಅವಳ ಸ್ವದೇಶಾಭಿಮಾನ ಎದ್ದು ಕಾಣುತ್ತದೆ.

ಕಾವ್ಯದ ನಾಂದಿ ಭಾಗದಲ್ಲಿ ಅವಳು ಪೂರ್ವಕವಿಗಳ ಸ್ಮರಣೆ ಮಾಡಿ, ಕಾವ್ಯ ಸ್ವರೂಪದ ಬಗ್ಗೆ ಹೇಳಿದ್ದಾಳೆ. ಅಂತೇ ತನ್ನ ಕಾವ್ಯವನ್ನು ಕುರಿತು 'ಮೃದುಲ ಸರಸೋದಾರ ಪದ ಸರಸ್ವತಿ ಮುಖ' ಎಂದು ಹೇಳಿ (೭–೪೧), ತನ್ನ ಕಾವ್ಯವು ಸಹೃದಯರನ್ನು ರಂಜಿಸುವುದೆಂಬ ಆತ್ಮವಿಶ್ವಾಸವನ್ನೂ ತೋರಿದ್ದಾಳೆ (೧–೨೪). ಆದರೆ ತನ್ನ ಬಗ್ಗೆ ಮಾತ್ರ ಒಂದೆರಡು ಪದ್ಯದಲ್ಲಿ ಹೇಳಿದ್ದಾಳೆ (೭–೩೦, ೪೧).

ಕಾವ್ಯದಲ್ಲಿ ಮೊದಲಿಗೆ, ಬುಕ್ಕನ ರಾಣಿ ದೇವಾಯಿಯ ವಿವರವಿದ್ದು, ನಂತರ ಕಂಪನ ಜನನ, ಅದಕ್ಕೆ ತಂದೆ-ತಾಯಿ, ಪ್ರಕೃತಿ, ಜನತೆ, ಪ್ರಾಣಿಗಳು – ಎಲ್ಲರ ಪ್ರತಿಸ್ಪಂದನ, ಶಿಶುವಿನ ಮುಗ್ಧ ಚೆಲುವು, ಅವನ ಬಾಲ್ಯ – ಇತ್ಯಾದಿ ವಿವರಗಳಿವೆ. (ಸರ್ಗ – ೨) ಬೆಳೆದು ನಿಂತು ವಿದ್ಯಾರ್ಜನೆ ಮಾಡಿದ ಮಗನಿಗೆ ಬುಕ್ಕನು ವಿವಾಹ ಮಾಡುತ್ತಾನೆ. ಆ ನಂತರ ಬುಕ್ಕನು ಮಗನನ್ನು ವೈರಿಗುಣ ಸಂಹಾರದ ಮುಖ್ಯ ಕಾರ್ಯದೆಡೆಗೆ ಸೆಳೆಯುತ್ತಾನೆ. ಈ ಸಂದರ್ಭದಲ್ಲಿ ಬುಕ್ಕನು ಮಗನಿಗೆ, ತೊಂಡೈ ಮಂಡಲದ ಚಂಪನನ್ನೂ, ಮಧುರೆಯ ಸುಲ್ತಾನನನ್ನೂ ಸದೆಬಡಿಯಲು ಕಾರ್ಯೋದ್ಯುಕ್ತನಾಗುವಂತೆ ಪ್ರೇರೇಪಿಸುತ್ತಾನೆ; ಹಾಗೂ ಮಗನಿಗೆ ಗುರುವಿನ ಉಪದೇಶ, ತಾರುಣ್ಯದ ತಪ್ಪುಗಳು, ಧರ್ಮಸಂವರ್ಧನೆ, ಪ್ರಜೆಗಳ ಪ್ರೀತಿ ಗಳಿಸುವುದು – ಮುಂತಾದ ಅನೇಕ ವಿಷಯಗಳ ಬಗ್ಗೆ ಎಚ್ಚರಿಕೆ ಉಪದೇಶಗಳನ್ನು ನೀಡುತ್ತಾನೆ (ಸರ್ಗ – ೩). ಮುಂದೆ, ತಂದೆಯ ಆದೇಶದಂತೆ ಕಂಪಣನು ಚಂಪನನ್ನು ಸದೆಬಡಿಯಲು ಹೊರಡುತ್ತಾನೆ. ಇವನೊಂದಿಗೆ ವೀರಾವೇಶದಿಂದ ಹೋರಾಡಿದರೂ, ಕೊನೆಗೆ ಕಂಪಣನ ಶಸ್ತ್ರಕ್ಕೆ ಬಲಿಯಾಗುತ್ತಾನೆ; ದೇವೇಂದ್ರನ ಅತಿಥಿಯಾಗುತ್ತಾನೆ (ಸರ್ಗ – ೪)[೩] ಐದರಿಂದ ಏಳನೇ ಸರ್ಗಗಳಲ್ಲಿ ಶೃಂಗಾರರಸ ನಿರೂಪಣೆ, ಪ್ರಕೃತಿಯ ವರ್ಣನೆಯನ್ನು ಕಾಣಬಹುದು. ಐದನೇ ಸರ್ಗದಲ್ಲಿ ಬೇರೆ ಬೇರೆ ಋತು/ಕಾಲಗಳ ವರ್ಣನೆ ಇದ್ದು, ಅದು ಕಂಪನ ಸರಸ ಜೀವನದ ಹಿನ್ನೆಲೆಯಲ್ಲಿ ಬಂದಿದೆ. ಆರನೇ ಸರ್ಗದಲ್ಲಿ ಕೂಡಾ, ಕಂಪಣನು ರಮಣೀಯರೊಡಗೂಡಿ ಹೂವು ಕೊಯ್ಯಲು ಉದ್ಯಾನಕ್ಕೆ ಹೋಗುವ ವರ್ಣನೆ ಇದ್ದು ಇದೂ ಕೂಡಾ ಸುಂದರವಾಗಿದೆ. ಏಳನೇ ಸರ್ಗವೂ ಪ್ರಕೃತಿ ವರ್ಣನೆಯಿಂದ ಕೂಡಿದ್ದು, ಬಿರುಗಾಳಿಯ ಮೊದಲು ಬೀಸುವ ತಂಗಾಳಿಯಂತೆ ಈ ಸರ್ಗವನ್ನು ಬೆಳೆಸಿದ್ದಾಳೆ. ಕಂಪನ ಅಪೇಕ್ಷೆಯಂತೆ ರಸಭರಿತವಾದ ಸಂಜೆಯ ವರ್ಣನೆಯನ್ನು ತನ್ನ ಭಾವನೆಗೆ ತಕ್ಕಂತೆ ಮಾಡಿದ್ದಾಳೆ (೭–೪೨,೫೧). ಎಂಟನೇ ಸರ್ಗದಲ್ಲಿ ಮಧುರಾಯಾತ್ರೆಯ ಚಿತ್ರ ಆರಂಭವಾಗುತ್ತದೆ. ಮಧುರೆಯ ಅಸಹಾಯಕ ಜನರ ಕರುಣಾಜನಕ ಸ್ಥಿತಿ ಇಲ್ಲಿ ಪರೋಕ್ಷವಾಗಿ ವ್ಯಕ್ತವಾಗಿದೆ. ದಿವ್ಯ ಕನ್ಯೆಯೊಬ್ಬಳು

# ೧೬೭೬, ೫ನೇ 'ಎ' ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ಬೆಂಗಳೂರು – ೫೦

ಬಂದು ಕಂಪಣನಿಗೆ ಆ ಎಲ್ಲ ವಿವರ ನೀಡುತ್ತಾಳೆ, ಅಲ್ಲದೆ, ಅಲ್ಲಿನ ದೇವಾಲಯಗಳ ಸ್ಥಿತಿಗತಿಯನ್ನೂ ವರ್ಣಿಸುತ್ತಾಳೆ. (೮–೨,೧೬) ಅಲ್ಲದೆ, ಖಡ್ಗವೊಂದನ್ನು ಅವನಿಗೆ ನೀಡಿ ಜಯಶಾಲಿಯಾಗುವಂತೆಯೂ, ಮಧುರೈಯಲ್ಲಿ ಶಾಂತಿ ನೆಲೆಸುವಂತೆಯೂ ಹರಸುತ್ತಾಳೆ (೮–೧೭,೩೬). ಒಂಭತ್ತನೇ ಸರ್ಗದಲ್ಲಿ ಮಧುರಾವಿಜಯದ ಕಥೆಯಿದೆ. ಸಮವೀರರಾದ ಕಂಪ ಮತ್ತು ಯವನರು ಪರಸ್ಪರ ಕಾದಾಡಿದ, ಯುದ್ಧದ ಸುದೀರ್ಘ ವಿವರವಿದೆ. ಕೊನೆಗೆ ಕರ್ನಾಟಕುಲದೀಪ ಕಂಪಣನು ಯವನನನ್ನು ಯಮನ ಸದನಕ್ಕಟ್ಟಿದನು. ಯವನರ ಅಟ್ಟಹಾಸದ ಆಡಳಿತದಿಂದ ಮಧುರೆಗೆ ಮುಕ್ತಿ ದೊರೆಯಿತು. ಕಂಪನಿಗೆ ಮಧುರೆಯ ವಿಜಯಹಾರ ಪ್ರಾಪ್ತವಾಯಿತು. ಆ ನಾಡ ಸಾಗರದಲ್ಲಿನ ಅಧರ್ಮದ ಹಡಗು ಒಡೆದು ಧರ್ಮದ ಹಡಗು ತೇಲುವಂತಾಯಿತು. ಕಾವ್ಯವು ಇಲ್ಲಿಗೆ ಮುಗಿಯುತ್ತದೆ.

ವಿಜಯನಗರ ಆರಂಭಕಾಲದ ತಮಿಳುನಾಡಿನ ಪ್ರಕ್ಷುಬ್ಧ ಸ್ಥಿತಿಯನ್ನೂ, ಅಧರ್ಮದ ಸ್ಥಿತಿಯನ್ನೂ ಈ ಕಾವ್ಯ ಸಮರ್ಥವಾಗಿ ಪ್ರಚುರಪಡಿಸುತ್ತದೆ. ಅಂದಿನ ಜನಜೀವನದ ಪರಿಸ್ಥಿತಿಗೆ ಈ ಕಾವ್ಯ ಕನ್ನಡಿಯಾಗಿದೆ. ಅಂತಹ ಸ್ಥಿತಿಯಲ್ಲಿ ಧರ್ಮಸಂಸ್ಥಾಪನೆಗಾಗಿ ವೀರಭಾವದಿಂದ ಹೋರಾಡಿದ ಕಂಪಣನ ಧರ್ಮ ಬೀರುತನವನ್ನು ಎತ್ತಿಹಿಡಿದಿದೆ. ಬುಕ್ಕನ ಬಗ್ಗೆ ನ್ಯಾಯಯುತ, ವಿವೇಕಯುತ, ಧರ್ಮಯುತ – ಎಂಬ ಅಭಿಪ್ರಾಯವನ್ನು ಕವಿಯು ವ್ಯಕ್ತಪಡಿಸಿದ್ದು, ಬುಕ್ಕನಿಗೆ ಪುರುಷಾರ್ಥಗಳಲ್ಲಿ ಸಮದೃಷ್ಟಿಯಿದ್ದರೂ ಧರ್ಮದಲ್ಲೇ ಹೆಚ್ಚು ಆಸಕ್ತಿ ಎಂದಿದ್ದಾಳೆ (೧–೬೯). ಸಂಗಮ ದೊರೆಗಳ ಮುಖ್ಯ ಉದ್ದೇಶವೇ ಇದು ಎಂಬುದನ್ನೂ ಕೂಡಾ ಈ ಕಾವ್ಯ ಮತ್ತೆ ಸ್ಪಷ್ಟಪಡಿಸಿದೆ.

ಇನ್ನು, ಈ ಕಾವ್ಯದಲ್ಲಿರುವ ಇನ್ನಿತರ ಅಂಶಗಳಿಗೆ ಗಮನಹರಿಸಬಹುದು. 'ವರ್ಣನಾ ನಿಪುಣ: ಕವಿ:' ಎಂಬ ಮಾತಿದೆ. ಮಧುರಾ ವಿಜಯದಲ್ಲೂ ವರ್ಣನೆಗೆ ಪ್ರಮುಖ ಸ್ಥಾನವಿದೆ. ಪೂರ್ಣ ಸರ್ಗಗಳೇ ವರ್ಣನೆಗೆ ಮೀಸಲಾಗಿದೆ. ಈ ವರ್ಣನಾ ವಸ್ತುಗಳೂ ವೈವಿಧ್ಯಮಯವಾಗಿರುವುದು ಇಲ್ಲಿನ ವಿಶೇಷ. ಎರಡನೇ ಸರ್ಗದಲ್ಲಿ ಕಂಪನ ಜನನದ ವಿಷಯವಿದೆ. ಆ ಸಂಬಂಧದ ವರ್ಣನೆಗಳಲ್ಲಿ ಮುಂದೆ ಆಗಲಿರುವ ಯುದ್ಧ, ದೊರೆಯಲಿರುವ ಗೆಲುವು – ಇವುಗಳ ಸೂಚನೆಯನ್ನು ಈ ಸರ್ಗ ನೀಡುತ್ತದೆ. ತಾಯಿಯ ಬಯಕೆಗಳನ್ನು ಸೂಚಿಸುವಾಗ, ಪ್ರಕೃತಿಯ ನಿಲುವನ್ನು ವರ್ಣಿಸುವಾಗ, ಕಂಪನ ಚೆಲುವನ್ನು ಚಿತ್ರಿಸುವಾಗ ಈ ಎಲ್ಲ ಸಂದರ್ಭಗಳಲ್ಲಿ ಕವಯಿತ್ರಿಯು ಅದೇ ಹಿನ್ನೆಲೆಯನ್ನೇ ತಂದಿದ್ದಾಳೆ. ದೇವಾಯಿಯು ಮಣ್ಣನ್ನು ತಿನ್ನುವುದರ ಮೂಲಕ, ರಾಜ್ಯಭಾರ ಮಾಡುವುದನ್ನು ಪುತ್ರನಿಗೆ ಕಲಿಸುತ್ತಿದ್ದಳೆಂದೂ (೨–೩), ಸುಖವಾಗಿ ಹರಿಯುತ್ತಿಹ ತುಂಗಭದ್ರೆಯನ್ನು ಬಿಟ್ಟು ಸೇನಾಸಾಗರದ ತರಂಗಗಳಿಂದ ತುಂಬಿದ ತಾಮ್ರಪರ್ಣಿ ನದಿಯಲ್ಲಿ ಸ್ನಾನಮಾಡಲು ಇಚ್ಛಿಸಿದಳೆಂದೂ (೨–೫) ಹೇಳುವುದು ಇದನ್ನೇ ಸೂಚಿಸುತ್ತದೆ. ವೀರಮಾತೆಯಾದ ಅವಳು ಸಿಂಹಗಳಿರುವ ಮಲಯಾದ್ರಿ ಶಿಖರವನ್ನು ಏರಲು ಆಶಿಸಿದಳಂತೆ (೨–೬). ಅವನ ಜನನವನ್ನೂ ಕೂಡಾ ಪಾರ್ವತಿಯು ಸ್ಕಂದನನ್ನು ಪಡೆದಂತೆ (೨–೧೪) ಎಂದು ಹೇಳಿ, ಕಂಪನು ಯವನ ಸಂಹಾರಕ್ಕಾಗೇ ಜನಿಸಿದವನೆಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾಳೆ. ನಿರ್ಗುಣರೂಪವಾದ ಪ್ರಕೃತಿಗೂ ಕೂಡಾ ಮುಸ್ಲಿಮರು ವೈರಿಗಳಾಗಿದ್ದರೆಂದು ಹೇಳುವಲ್ಲಿ ಗಂಗಾದೇವಿಗೆ ಅವರ ಬಗ್ಗೆ ಇದ್ದ ದ್ವೇಷವನ್ನು ಗಮನಿಸಬಹುದು. ಕಂಪನನ್ನು ವರ್ಣಿಸುವಾಗ, 'ವೈರಿಗಳ ಜಯಶ್ರೀಯ ಕೂದಲನ್ನು ಸೆರೆಹಿಡಿಯುವುದನ್ನು ಅಭಿನಯಿಸುವಂತೆ ಅವನು ಮುಷ್ಟಿ ಹಿಡಿದಿದ್ದನಂತೆ (೨–೨೭). ಅವನಿಗೆ ಬುಕ್ಕನು 'ಕಂಪ' ಎಂದು ಹೆಸರಿಟ್ಟುದೂ ಇದೇ ಭಾವದಲ್ಲಿ. ಸಂಗ್ರಾಮರಂಗದಲ್ಲಿ ವೈರಿಗಳನ್ನು ಕಂಪಿಸುವ ಏಕೈಕ ವೀರನಾಗುವನೆಂದು ಈ ವೀರಕುವರನಿಗೆ ದೂರದರ್ಶಿಯಾದ ರಾಜನು ಕಂಪನೆಂದು ಹೆಸರಿಟ್ಟನು (೨–೩೪) ಎಂದು ಹೇಳಿ, ಕಂಪ / ಕಂಪಣ ಎಂಬ ಪದದ ಅರ್ಥವನ್ನು ಅನ್ವರ್ಥಕವಾಗಿ ತನಗೆ ಸೂಕ್ತವೆನಿಸಿದ ಹಿನ್ನೆಲೆಯಲ್ಲಿ ಬಳಸಿಕೊಂಡಿದ್ದಾಳೆ. ಕಂಪಣನ ಮುಂದಿನ ಸಾಧನೆಗಳಿಗೆ ತಕ್ಕ ಹಿನ್ನೆಲೆ ಒದಗಿಸಿದ್ದಾಳೆ.

ಮಲ್ಲಿಕಾರ್ಜುನ ಪರಡ್ಡಿಯವರು, 'ಕೌಟುಂಬಿಕ ಆನಂದ, ಗರ್ಭಧಾರಣ, ಪುತ್ರ ಜನನ – ಇವುಗಳನ್ನು ಒಬ್ಬ ಕವಿಗಿಂತಲೂ ಕವಿಯಿತ್ರಿಯರು ಚೆನ್ನಾಗಿ ನಿರೂಪಿಸಬಲ್ಲರು' ಎಂದು ಹೇಳಿರುವುದು[೪] ಸರಿಯಾಗಿಯೇ ಇದೆ ಎಂಬುದು ಕೆಲವು ವರ್ಣನೆಗಳಿಂದ ತಿಳಿದುಬರುತ್ತದೆ. ಕೆಲವು ಸ್ತ್ರೀ ಸಹಜ ವರ್ಣನೆಗಳು, ತಾಯ್ತನದ ಭಾವಗಳು ಇದರಲ್ಲಿ ವಿಶೇಷವಾಗಿದೆ. ಇರುಳನ್ನು ಇವಳು ತಾಯಿಯಂತೆ ಭಾವಿಸಿ, ಆಗ ಬೆಳಗುವ ಮನೆಮನೆಯ ದೀಪಗಳನ್ನು ಅವಳ ಕಿರುಮಕ್ಕಳಂತೆ ಎಂದೂ, ಅವಳ ಪ್ರೀತಿಯ ಲಾಲನೆಯಲ್ಲಿ ಆ ಮಕ್ಕಳು ಸಂತಸಪಟ್ಟವು ಎಂದೂ ವರ್ಣಿಸಿದ್ದಾಳೆ (೭–೩೨). ಚಂಪನೊಂದಿಗಿನ ಯುದ್ಧದ ಸಂದರ್ಭದಲ್ಲೂ ಅವಳ ಸ್ತ್ರೀ ಭಾವ ಎದ್ದು ಕಾಣುತ್ತದೆ. ಕಂಪನ ಖಡ್ಗದಲ್ಲಿ ಚಂಪನ ರೂಪ ಪ್ರತಿಬಿಂಬಿಸಿರಲು, ಕವಿಗೆ, ಗರ್ಭವತಿಯಾದ ಸುರತರುಣಿಗೆ ಹೊಸ ಗಂಡು ಹುಟ್ಟುವುದೆನಿಸಿತು (ಅಂದರೆ, ವೀರಮರಣವನ್ನಪ್ಪಿ ಸುರಲೋಕದ ಅಪ್ಸರೆಯರ ಕೈಸೇರುವನೆಂಬ ಭಾವ) (೪.೮೧). ಬೆಳದಿಂಗಳನ್ನು ಕಂಡಾಗ, ಮೂಡಣ ದಿಶಾಂಗನೆಗೆ ಪ್ರಸವಕಾಲ ಸಮೀಪಿಸಿದೆ; ಅವಳ ಮುಖ ಪ್ರಸವ ವೇದನೆಯಿಂದ ಬಿಳುಪೇರಿದೆ; ಅವಳು ಪ್ರಸವ ಸಮಯದಲ್ಲಿ ಉಟ್ಟಿದ್ದ ಕಪ್ಪು ಬಟ್ಟೆಯನ್ನು ಬಿಚ್ಚಿ, ಬಿಸುಟಳು' ಎಂದು ಸ್ತ್ರೀ ಭಾವದಲ್ಲಿ ವಿಶೇಷ ರೂಪವನ್ನು ಕಂಡಿದ್ದಾಳೆ (೭–೩೫). ಸೂತಿಕಾ ಗೃಹದ ವಿವರವೂ ಇಲ್ಲಿದೆ. ಶಿಶುವನ್ನು ಬಳಸಿದ್ದ ಕರ್ಪೂರದ ಪುಡಿಯಂತಹ ಶುಭ್ರ ಕಿರಣಗಳು

ಅಲ್ಲಿದ್ದ ದೀಪಮಾಲೆಗಳ ಕಾಂತಿಯನ್ನು ಮಂಕಾಗಿಸಿದ್ದವು (೨-೨೬) ಎಂಬ ವಿವರಣೆ ಇದೆ (೨-೨೬).

ಚಂಪ ಮತ್ತು ಯವನರೊಂದಿಗೆ ಕಂಪನು ನಡೆಸಿದ ಯುದ್ಧದ ವರ್ಣನೆಯಲ್ಲೂ ಆಕೆ ತನ್ನ ಪ್ರತಿಭೆಯನ್ನು ತೋರಿದ್ದಾಳೆ. ಕಂಪನ ಸೈನ್ಯ ಯುದ್ಧಕ್ಕೆ ಹೊರಡಲು ಸಿದ್ಧವಾಗಿದ್ದಾಗ ಸೈನ್ಯವು ಹಿಡಿದ ಧ್ವಜಗಳು ಎಷ್ಟು ಎತ್ತರವಾಗಿತ್ತೆಂದರೆ ಅವು ಬಾನಿಗೇ ಅಡ್ಡಲಾಗಿದ್ದವು; ಆಗ ಸೂರ್ಯನು ತನ್ನ ರಥವನ್ನು ಮೇಲಮೇಲಕ್ಕೆ ಕೊಂಡೊಯ್ಯುತ್ತಿದ್ದನು (೪-೧೫). ಯುದ್ಧದಲ್ಲಿ ತನ್ನನ್ನು ಕೊಂದು ಅಮರ ಪದವಿಗೆ ಅರ್ಹನನ್ನಾಗಿ ಮಾಡಿದ ವೈರಿಗೆ ಕೃತಜ್ಞತೆ ಸಲ್ಲಿಸುವುದಾಗಲೀ (೯-೧೧), ರುಂಡ ಹೋದರೂ ಎಡದ ಕೈಯಲ್ಲಿ ಕಡಿವಾಣ ಹಿಡಿದು ಕುದುರೆಯನ್ನು ನಿಯಂತ್ರಿಸುತ್ತಾ ಬಲಗೈಯಲ್ಲಿ ಇದಿರಾಳಿಗೆ ಕತ್ತಿಯನ್ನೆತ್ತಿ ಹೊಡೆಯುವಂತಿದ್ದ ಯವನನ ಪೌರುಷವನ್ನು ಕಲ್ಪಿಸಿರುವುದಾಗಲೀ (೯-೩೯) ವಿಶೇಷವಾಗಿದೆ. ಅಂತೆಯೇ ಯುದ್ಧದಿಂದ ಕಂಪಣನ ಮೈಯ್ಯಲ್ಲಾದ ಗೀರು ಗಾಯಗಳು, ವಿಜಯಶ್ರೀಯಿಂದ ಮೂಡಿದ ಗೀರು ಗಾಯಗಳೆಂಬ ವರ್ಣನೆಯು ಪಂಪನ ಕಾವ್ಯದ ಒಂದು ವರ್ಣನೆಯನ್ನು ನೆನಪಿಸುತ್ತದೆ. ಯುದ್ಧರಂಗದಲ್ಲಿ ಮಡಿದ ವೀರರು, ಆನೆಗಳ ರಕ್ತ ಹರಿದು ಅದರಿಂದಾದ ಮಡುವನ್ನು ನೋಡಿದಾಗ 'ಒಂದಲ್ಲ ಹರಿಯುತಿವೆ ನೂರಾರು ತಾಮ್ರಪರ್ಣಿಗಳು' (೯-೧೬) ಎನಿಸಿತಂತೆ.

ಕಾವ್ಯದಲ್ಲಿ ಕಾವೇರಿ ಮತ್ತು ತಾಮ್ರ ಪರ್ಣಿ ನದಿಗಳನ್ನು ಕವಿಯಿತ್ರಿಯು ಸಮರ್ಥವಾಗಿ ಬಳಸಿಕೊಂಡಿದ್ದಾಳೆ. ಯುದ್ಧಕ್ಕೆ ಮೊದಲು, ಸಹ್ಯಕನ್ಯೆಯಾದ ಕಾವೇರಿಯೂ, ತುರುಕರನ್ನು ಅನುಸರಿಸಿ ಇಷ್ಟ ಬಂದಂತೆ ಹರಿಯುತ್ತಿದ್ದಾಳೆ' (೮-೬) ಎಂದೂ, ಮಧುರೆಯಲ್ಲಿ ಯವನರನ್ನು ಸಂಹರಿಸುವುದರಿಂದ ಕಾವೇರಿಯು ಗತಿಮೀರದೆ ಮೊದಲಿನಂತೆ ಹರಿಯುವಳು ಎಂದೂ ಹೇಳಿ (೮-೩೬) ನದಿಯನ್ನು ವ್ಯಕ್ತೀಕರಣಗೊಳಿಸಿದ್ದಾಳೆ. ತಾಮ್ರಪರ್ಣಿ ನದಿಯ ವಿಷಯವೂ ಇಲ್ಲಿ ವಿಶೇಷವಾಗಿದೆ. ಕಂಪನತಾಯಿ ಗರ್ಭಿಣಿಯಾದಾಗ, ತಾಮ್ರಪರ್ಣಿ ನದಿಯಲ್ಲಿ ಸ್ನಾನಮಾಡಲು ಇಚ್ಛೈಸಿದಳಂತೆ (೨-೫). ಯುದ್ಧವು ಮಧುರೆಯಲ್ಲಿ ನಡೆದುದರಿಂದ ಅಲ್ಲಿರುವ ವೈಗೈ ನದಿಯ ಉಲ್ಲೇಖ ಬರಬೇಕಾಗಿತ್ತು. ಆದರೆ ಈ ಕಾವ್ಯದಲ್ಲಿ ತಾಮ್ರಪರ್ಣಿ ನದಿಯ ಉಲ್ಲೇಖವಿದೆ. ಈ ನದಿಯನ್ನು ಆರಿಸಿಕೊಂಡಿರುವುದಕ್ಕೂ ಕಾರಣವಿದೆ: ಅದು ಪುರಾಣಪ್ರಸಿದ್ಧವಾದುದು ಮತ್ತು ಸಂಸ್ಕೃತದಲ್ಲಿ ಪ್ರಚುರವಾಗಿರುವುದು.[೫] ಅಲ್ಲದೆ, ಈ ನದಿಯ ಹೆಸರೇ (ಕೆಂಪು ಬಣ್ಣ) ವೀರಭಾವಗಳ ವರ್ಣನೆಗೆ ಅನ್ವರ್ಥಕವಾಗಿದೆ. ಮೊದಲಿಗೆ ಬೆಳ್ದೊರೆಯಂತಿದ್ದ ತಾಮ್ರಪರ್ಣಿಯು, ಕ್ರೂರಿಗಳು ಕಡಿದ ಗೋವಿನ ರಕ್ತದ ಹೊಳೆಯಿಂದ ರಕ್ತವರ್ಣಿಯಾಯಿತೆನ್ನುತ್ತಾಳೆ (೮-೧೩). ಇದರೊಂದಿಗೆ, ತಾಮ್ರಪರ್ಣಿ ನದಿಯಿರುವ ತಿರುನೆಲ್ವೇಲಿ ಇನ್ನೂ ದೂರದ ಪ್ರದೇಶವಾದುದರಿಂದ ಅಲ್ಲಿಯವರೆಗೂ ರಾಜ್ಯ ವಿಸ್ತರಿಸುವ ವಿಸ್ತರಿಸಿದ ಧ್ವನಿ ಇಲ್ಲಿ ಪ್ರಕಟವಾಗಿದೆ. ಹೀಗಾಗಿ, ಒಂದು ನದಿಯನ್ನು ಆಯ್ಕೆ ಮಾಡುವಾಗ ಅದಕ್ಕೆ ಎಷ್ಟೊಂದು ಧ್ವನಿ ತುಂಬಿದ್ದಾಳೆ ಎಂಬುದು ಸ್ಪಷ್ಟವಾಗುತ್ತದೆ.

ಪ್ರಕೃತಿಯ ವರ್ಣನೆಯಲ್ಲೂ ಇವಳು ಹಿಂದೆ ಬಿದ್ದಿಲ್ಲ. ಏಳನೇ ಸರ್ಗಪೂರ್ತಿ ಪ್ರಕೃತಿಯ ವರ್ಣನೆಗೇ ಮೀಸಲಾಗಿದೆ. ರಾತ್ರಿಯ ಕತ್ತಲ ಮುಗಿಲನ್ನು ಕರಿಯ ಭೂಮಿಗೆ ಹೋಲಿಸಿ, ಕಾಲನೆಂಬ ರೈತನು ತಿಂಗಳ ಬೆಳಕಿನ ಬೆಳೆ ಬೆಳೆದುಕೊಳ್ಳಲೆಂದು ತಾರೆಗಳನ್ನು ಬಿತ್ತಿದ್ದಾನೆಂದು ಹೇಳುವ ಕಲ್ಪನೆ ವಿಶೇಷವಾಗಿದೆ. ಸೂರ್ಯಾಸ್ತವಾದಾಗ, ತನ್ನ ತಾಪವನ್ನು ಸೂರ್ಯನು ವಿರಹಿಣಿಯರೆದೆಗೆ ಮತ್ತು ತೇಜವನ್ನು ಔಷಧೀಯ ಗಿಡಗಳಿಗೆ (೭-೧೫) ನೀಡಿದನು ಎಂದು ಹೇಳುವುದರ ಮೂಲಕ ಸೂರ್ಯನ ಗುಣವನ್ನು/ಶಕ್ತಿಯನ್ನು ಸ್ಪಷ್ಟಪಡಿಸಿದ್ದಾಳೆ. ಅಂತೆಯೇ, ತಾರೆಗಳು ಅವಳಿಗೆ, ಹಗಲೆಲ್ಲ ಬಿಸಿಲ ತಾಪದಲ್ಲಿ ಬೆಂದುದರಿಂದ ಉಂಟಾದ ಬೆವರಸಾಲಿನಂತೆ ಕಂಡಿವೆ (೭-೨೮).

ಎಂಟನೇ ಸರ್ಗದಲ್ಲಿ ಮಧುರೆಯ ದೇವಾಲಯಗಳ ಸ್ಥಿತಿಗತಿಯನ್ನೂ ಅಷ್ಟೇ ಸವಿವರವಾಗಿ ವರ್ಣಿಸಿದ್ದಾಳೆ; ಮಧುರಾಯಾತ್ರೆಯ ಮೂಲ ಉದ್ದೇಶ ಇಲ್ಲಿ ಸ್ಪಷ್ಟವಾಗುತ್ತದೆ. ಹೋಮದ ಹೊಗೆಯೂ ವೇದಘೋಷವೂ ತುಂಬಿದ್ದ ಎಡೆಗಳಲ್ಲಿ ಈಗ ಮಾಂಸದ ದುರ್ಗಂಧವೂ, ತುರುಕರ ಸಿಂಹನಾದವೂ ತುಂಬುವಂತಾಗಿದೆ (೮-೭); ಬ್ರಾಹ್ಮಣರೂ ಸೆರೆಯಾಳುಗಳಾಗಿದ್ದಾರೆ. (೮-೧೧) ಕೃತಿ, ಧರ್ಮ ನೇಮನಿಷ್ಠೆಗಳು ಹಾಳಾಗಿ ಕಲಿಯ ಕೈಬಲವಾಗಿದೆ (೮-೧೬) ಎಂದು ಹೇಳುವಲ್ಲಿ, ಒಂದು ಪವಿತ್ರವಾದ ಸ್ಥಾನವು ಹೇಗೆ ಯವನರಿಂದ ಅಪವಿತ್ರವಾಯಿತು ಎಂಬುದನ್ನು ಸೂಚಿಸಿದ್ದಾಳೆ. ಯವನರ ಬಗ್ಗೆ ಅವಳ ದ್ವೇಷ ಎಷ್ಟಿದೆ ಎಂದರೆ, 'ಹೂಬನದಲ್ಲಿ ಗೂಗೆಯು ಕೂಗುವುದಕ್ಕಿಂತ ಅಸಹ್ಯವೆನಿಸುತ್ತದೆ - ಅವರ ಪಾರಸಿಕ ಭಾಷೆ (೮-೧೨); ಯವನಾಗ್ನಿಯಿಂದ ಭೂಮಿಯೇ ಬೆಂದು ಹೋಗಿದೆ (೮-೩೩) - ಈ ವಿವರಗಳು ಯವನರಿಂದಾದ ಬಾಧೆಗಳ ತೀವ್ರತೆಯನ್ನು ಸೂಕ್ಷ್ಮವಾಗಿ ಹೇಳಿವೆ.

ಇನ್ನೊಂದೆಡೆ, ಚಂಪನನ್ನು ಹಿಡಿಯಲು ಕಂಪನಸೇನೆ ಕೋಟೆಯೊಳಗೆ ಹೋಗಲು ಹೊರಟಾಗ ಯಂತ್ರ ಬೀರುವ ಕಲ್ಲು ಗುಂಡುಗಳು ಉರುಳುತ್ತಾ ಅವನ ಕಾಲ ಬಳಿ ಬರಲು, ಆ ಕಲ್ಲು ಗುಂಡುಗಳು ಅವಳಿಗೆ, ಸುಂಕ ಕೇಳುವ ದುರ್ಗದೂತನಂತೆ ಕಂಡಿತು (೪-೭೨). ಉಪಮೆಗಳಿಗೂ ಉದಾಹರಣೆಗಳು ಕಾವ್ಯದಲ್ಲಿವೆ. ಕಂಪನ ಸೇನೆ ನಡೆದ ಧೂಳಿನಿಂದ ಪಾಲಾರಿನ ತಿಳಿನೀರು ಮತ್ತು ಚಂಪನನೃಪನಕೀರ್ತಿ ಎರಡೂ ಕದಡಿತೆಂದು ಸೂಚ್ಯವಾಗಿ ತಿಳಿಸಿದ್ದಾಳೆ (೪-೪೯). ಒಂದು ಸರೋವರದ

ಮಾಣಿಕ್ಯಮಯವಾದ ಸೋಪಾನ ಪಂಕ್ತಿಗಳು ಬೆಳದಿಂಗಳಂತೆ ತೋರುತ್ತಿದ್ದುದನ್ನು 'ಜಕ್ಕವಕ್ಕಿಗಳಿಗೆ ಇರುಳಲ್ಲೂ ವಿರಹವಿಲ್ಲ' (೧.೬೦) ಎಂಬ ಕವಿಸಮಯದ ಮೂಲಕ ಸೂಚಿಸಿದ್ದಾಳೆ. ಶಬ್ದಾರ್ಥಗಳ ಬಳಕೆಯಲ್ಲೂ ಇವಳ ಶಬ್ದಜ್ಞಾನವನ್ನು ಗುರುತಿಸಬಹುದು. ತಾಮ್ರಪರ್ಣಿ, ಕಂಪ ಎಂಬ ಶಬ್ದಗಳನ್ನು ಅರ್ಥೈಸಿರುವುದನ್ನು ಈ ಹಿಂದೆಯೇ ನೋಡಿದ್ದೇವೆ. ಕಂಪನು ವಿಜಯಯಾತ್ರೆಗೆ ಹೊರಟಾಗ ವೈರಿಗಳ ಹೃದಯ ಕಂಪಿಸಿತು (೪–೩೪); ಯವನನ ಕಾಕಪತಾಕೆಯನ್ನು ಕಂಪ ಕಡಿಯಲು ಜಯದಾಸೆ ಅವನಿಗಿಳಿದು ಎದೆಯೊಳಗೆ ಕಂಪನವುಂಟಾಯ್ತು (೯–೩೨) ಎಂದು ಹೇಳಿ ಅವನ ಹೆಸರಿನ ಅರ್ಥವನ್ನು ಮತ್ತೆ ಎತ್ತಿ ಹಿಡಿದಿದ್ದಾಳೆ.

ನವರಸಗಳಿಂದ ಕೂಡಿರಬೇಕಾದ ಕಾವ್ಯದಲ್ಲಿ ಪ್ರಧಾನವಾಗಿ ಪ್ರತಿಪಾದಿತವಾಗುವ ಶೃಂಗಾರ – ವೀರರಸಗಳನ್ನು ನಾಯಕನ ಪಾತ್ರದ ಮೂಲಕ ತಂದು ಕೊಟ್ಟಿದ್ದಾಳೆ. ಇವೂ ಕೂಡಾ ಧರ್ಮದ ಹಿನ್ನೆಲೆಯಲ್ಲೇ ಪ್ರತಿಪಾದಿತವಾಗಿದೆ. ನಾಲ್ಕು ಮತ್ತು ಒಂಭತ್ತನೇ ಸರ್ಗಗಳು ವೀರರಸ ಪ್ರಧಾನವಾಗಿದ್ದರೆ, ಐದು ಮತ್ತು ಏಳನೇ ಸರ್ಗಗಳು ಶೃಂಗಾರರಸ ಪ್ರಧಾನವಾಗಿವೆ. ಇವುಗಳೂ ಕೂಡಾ ಧರ್ಮದ ಹಿನ್ನೆಲೆಯಲ್ಲೇ ಪ್ರತಿಪಾದಿತವಾಗಿದೆ. ನಾಯಕ / ವೀರರ ನಡವಳಿಕೆಗಳಲ್ಲಿ ಯುಗಧರ್ಮ ಪ್ರಕಟವಾಗುತ್ತದೆ ಎಂದು ಹೇಳುವುದಾದರೆ, ಈ ಕಾವ್ಯದಲ್ಲಿ ಪ್ರಕಟವಾಗಿರುವ ಯುಗಧರ್ಮವನ್ನು 'ಧರ್ಮವೀರ' ಎಂದು ಹೇಳಬಹುದೇನೋ. ಶೌರ್ಯ ಸಾಹಸಗಳು ನಮ್ಮ ಸಾಹಿತ್ಯದಲ್ಲಿ ಅನೇಕ ಸಂದರ್ಭಗಳಲ್ಲಿ ಎಲ್ಲ ಕಾಲಗಳಲ್ಲೂ ಪ್ರಕಟವಾಗಿವೆ. ರಾಜ್ಯ ವಿಸ್ತರಣೆ, ವೈರಿಸಂಹಾರ, ಅನ್ನದ ಋಣ, ಸ್ವಾಭಿಮಾನ ಇತ್ಯಾದಿಗಳ ಹಿನ್ನೆಲೆಯಲ್ಲಿ 'ಜಿತೇನ ಲಭ್ಯತೇ ಲಕ್ಷ್ಮಿ ಮೃತೇನಾಪಿ ಸುರಾಂಗನಾ' ಎಂದು ಜೀವದ ಹಂಗು ತೊರೆದು ಹೋರಾಡಿದ ಘಟನೆಗಳು ಅನೇಕಾನೇಕ. ಆದರೆ, ಇದರೊಂದಿಗೆ ಧರ್ಮವನ್ನು, ನ್ಯಾಯವನ್ನು ಉಳಿಸಲೋಸುಗ ಸಮಷ್ಟಿಯಾಗಿ ಹೋರಾಡಿ ಮಡಿದದ್ದನ್ನು ಇಲ್ಲಿ ಕಾಣುತ್ತೇವೆ. ಧಾರ್ಮಿಕ ತಳಹದಿಯ ಮೇಲೆ ಶೌರ್ಯವನ್ನು ತೋರಿದ ಈ ಜನರ ಮನೋಧರ್ಮವನ್ನು ಎತ್ತಿಹಿಡಿದ ಈ ಕಾವ್ಯದಲ್ಲಿ ಧರ್ಮ ಮತ್ತು ಶೌರ್ಯ ಎರಡೂ ಪ್ರಕಟವಾದಂತಾಗಿದೆ.

ಗಂಗಾದೇವಿಯು ತನ್ನ ಪೂರ್ವಸೂರಿಗಳಾದ ಬಾಣ, ಭಾರವಿ, ಕಾಳಿದಾಸ – ಇವರುಗಳನ್ನು ಅನುಸರಿಸಿದ್ದಾಳೆಂದು ಮಲ್ಲಿಕಾರ್ಜುನ ಪರಡ್ಡಿಯವರು ಹೇಳಿದ್ದಾರೆ; ಉದಾಹರಣೆಯಾಗಿ ಕಾಳಿದಾಸನ ಅಯೋಧ್ಯೆಯ ವರ್ಣನೆ ಮತ್ತು ಗಂಗಾದೇವಿಯ ಮಧುರೆಯ ವರ್ಣನೆ, ಕಾಳಿದಾಸನ ರಘು ವರ್ಣನೆ ಮತ್ತು ಗಂಗಾದೇವಿಯ ಬುಕ್ಕನ ವರ್ಣನೆ ಇತ್ಯಾದಿಗಳನ್ನು ಹೇಳಿದ್ದಾರೆ.[೬] ಈ ಕಾವ್ಯದಲ್ಲಿ ಮಧುರಾಧಿದೇವತೆ ಬಂದು ಹೇಳಿದಂತೆ ಕಾಳಿದಾಸನಲ್ಲೂ ಅಯೋಧ್ಯಾ ನಗರದ ಅಧಿದೇವತೆ ಬರುತ್ತಾಳೆ ಎಂದೂ ಗುರುತಿಸಲಾಗಿದೆ.[೭] ಯುದ್ಧದ ಸಂದರ್ಭದಲ್ಲೂ ಈ ರೀತಿ ಹೋಲಿಕೆ ಇರಬಹುದು. ಇದರಿಂದ, ಒಂದು ಉತ್ತಮ ಕಾವ್ಯದ ಮಾದರಿಯನ್ನು ಅವಳು ಅವನ ಕಾವ್ಯದಲ್ಲಿ ಕಂಡಿರಬೇಕು ಎಂದು ಹೇಳಬಹುದು. ನಂತರ ಕಾಲದವನಾದ ರತ್ನಾಕರವರ್ಣಿಯ ಭರತೇಶ ವೈಭವದ ಕೆಲವು ಚಿತ್ರಣಗಳು ಈ ಕಾವ್ಯದ ಐದು ಮತ್ತು ಆರನೇ ಸರ್ಗಗಳಲ್ಲಿವೆ ಎಂಬ ಕುಶಾಲಪ್ಪಗೌಡರ ಮಾತನ್ನೂ[೮] ಇಲ್ಲಿ ಗಮನಿಸಬಹುದು.

ಜಿ.ಎಸ್. ಶಿವರುದ್ರಪ್ಪನವರು ತಮ್ಮ 'ಮಹಾಕಾವ್ಯಸ್ವರೂಪ' ಕೃತಿಯಲ್ಲಿ ಮಹಾಕಾವ್ಯದ ಅನೇಕ ಲಕ್ಷಣಗಳನ್ನು ವಿವರಿಸಿದ್ದಾರೆ. ಅಲ್ಲಿ ವಿವರಿಸಿರುವಂತೆ, ಐತಿಹಾಸಿಕ ವಿಷಯವನ್ನು, ವೀರವ್ಯಕ್ತಿ ಪ್ರಧಾನವಾದ ಕಥನವನ್ನು ತನ್ನ ಕಾವ್ಯದ ವಸ್ತುವಾಗಿ ಆರಿಸಿಕೊಂಡಿದ್ದಾಳೆ[೯]; ಕಾವ್ಯಗಳಲ್ಲಿರುವ ಅಷ್ಟಾದಶ ವರ್ಣನೆಗಳಲ್ಲಿ ಮುಖ್ಯವಾದ ಪಂಚಸಂಧಿಗಳನ್ನು (ಮಂತ್ರ, ದೂತ, ಪ್ರಯಾಣ, ಆಜಿ ಮತ್ತು ನಾಯಕನ ವಿಜಯ) ತಂದಿದ್ದಾಳೆ. ಚತುರ್ವರ್ಗಫಲ ಪ್ರಾಪ್ತಿಗೆ (ಚತುರ್ವಿಧ ಪುರುಷಾರ್ಥ ಸಾಧನೆಗೆ) ಸಾಧಕವಾಗುವಂತೆ, ಅದರಲ್ಲಿ ಮುಖ್ಯವಾದ ಧರ್ಮವನ್ನೇ ಎತ್ತಿಹಿಡಿದಿದ್ದಾಳೆ. ಇನ್ನೊಂದೆಡೆ ಹೇಳಿರುವ ಲಕ್ಷಣಗಳಲ್ಲಿ ಕೆಲವಾದರೂ ಅಂದರೆ ಸೂರ್ಯ–ಚಂದ್ರರ ಉದಯಾಸ್ತಗಳು, ನಗರ, ಉದ್ಯಾನ, ಕ್ರೀಡೆ, ಋತುಗಳು, ಕುಮಾರೋದಯ–ವರ್ಣನೆಗಳು ಇದರಲ್ಲಿವೆ. ಎಂಟನೇ ಸರ್ಗದಲ್ಲಿ ಬರುವ ದಿವ್ಯಸ್ತ್ರೀಯ ಚಿತ್ರವು ಕನಸುಗಳ ಬದಲಾಗಿಯೇ ಬಂದಿರಬೇಕು. ಕನಸು, ಅಶರೀರವಾಣಿಗಳಿಗಿಂತ ದೇವರೇ ಪ್ರತ್ಯಕ್ಷವಾಗಿ ಕಂಪಣನಿಗೆ ಆ ನಾಡಿನ ಜನಮನದ ಅಳಲನ್ನು ನಿವೇದಿಸಿ, ಅವನು ಮಾಡಬೇಕಾದ ಕಾರ್ಯವನ್ನು ಆದೇಶಿಸಿ, ಅದರಲ್ಲಿ ಯಶಸ್ವಿಯಾಗುವಂತೆ ಖಡ್ಗಮುಖೇನ ಹರಸುವುದೇ ಹೆಚ್ಚು ಸಹಜ ಎನಿಸಿರಬೇಕು ಕವಿಗೆ. ಇಷ್ಟೇ ಅಲ್ಲದೆ, ಕಾವ್ಯದಲ್ಲಿ ಆರಂಭದಲ್ಲಿರುವ ಪೂರ್ವಕವಿ ಸ್ಮರಣೆ, ಪ್ರಾರ್ಥನೆ, ಕಂಪನನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸುತ್ತಾ ಚಂದ್ರ (೩–೫, ೩–೧೨), ಮನ್ಮಥನಿಗೆ (೩–೭) ಹೋಲಿಸಿರುವುದು, ಕಂಪನ ವೈರಿಗಳನ್ನು ಪ್ರತಿಸ್ಪರ್ಧಿಯಂತೆ ನಿಲ್ಲಿಸಿರುವುದು, ದೇವತೆಗಳು ಯುದ್ಧದ ಪ್ರೇಕ್ಷಕರಾಗಿರುವುದು, ಒಂಭತ್ತು ಸರ್ಗದವರೆಗೆ ಕಾವ್ಯವನ್ನು ಬೆಳೆಸಿರುವುದು[೧೧] – ಇವೂ ಕೂಡಾ ಈ ಕಾವ್ಯದಲ್ಲಿ ಕಂಡು ಬರುವ ಕೆಲವು ಮಹಾಕಾವ್ಯ ಲಕ್ಷಣಗಳು.

ಈ ಕಾವ್ಯದ ಛಂದಸ್ಸು ಕೂಡಾ ಮಹಾಕಾವ್ಯ ಲಕ್ಷಣಕ್ಕನುಸಾರವಾಗಿದೆ ಎಂದು ಹೇಳಲಾಗಿದೆ.[೧೨] ಅಲ್ಲದೆ, ಮುಖ್ಯವಾದ ಎಲ್ಲ ಅಲಂಕಾರಗಳನ್ನೂ ಬಳಸಿದ್ದು[೧೩] ಕಾವ್ಯವು ವೈದರ್ಭೀ ಶೈಲಿಯಲ್ಲಿದೆ ಎಂದೂ ತಿಳಿದುಬರುತ್ತದೆ.[೧೪]

ಇದು ಮಹಾಕಾವ್ಯ ಹೌದೋ ಅಲ್ಲವೋ ಎಂದು ಇಲ್ಲಿ ತೀರ್ಮಾನಿಸಲು ಹೋಗಿಲ್ಲ. ಆದರೆ ಮಹಾಕಾವ್ಯದ ಕೆಲವು ಲಕ್ಷಣಗಳನ್ನು ಈ ಕೃತಿ ಒಳಗೊಂಡಿರುವುದು ಮೇಲಿನ ವಿವರಣೆಗಳಿಂದ ತಿಳಿದುಬರುತ್ತದೆ. ಡಾ. ಕೆ.

ಕೃಷ್ಣಮೂರ್ತಿ ಅವರು, 'Poetic Merits of the work are of a high order' ಎಂದು ಮೆಚ್ಚಿಕೊಂಡಿರುವುದು ತಿಳಿದುಬರುತ್ತದೆ[೧೫] ಅಲ್ಲದೆ, ಗಂಗಾದೇವಿಯೇ ಹೇಳಿರುವಂತೆ, ಓದುಗರಿಗೆ ಅದು ಸಂತಸವನ್ನುಂಟು ಮಾಡುತ್ತದೆ ಅವರು ಹೇಳಿದ್ದಾರೆ[೧೬] 'ಕಾವ್ಯಂ ರಸಾತ್ಮಕಂ' ಓದುಗರ ಮನಸ್ಸಿಗೆ ಆನಂದವನ್ನುಂಟು ಮಾಡುವುದೇ ಕಾವ್ಯದ ಮುಖ್ಯೋದ್ದೇಶ ಎಂದೂ ಹೇಳಲಾಗಿದೆ[೧೭] 'ಮಧುರಾವಿಜಯ'ದ ಮೂಲಕ ಕಾವ್ಯದ ಈ ಮೂಲೋದ್ದೇಶ ಸಾರ್ಥವಾಗುವುದಂತೂ ಸತ್ಯ. ಕಾವ್ಯಾರಂಭದಲ್ಲಿ ಅವಳೇ ಹೇಳಿರುವ ಕಾವ್ಯಾದರ್ಶಗಳೂ ಸುಸಂಪನ್ನವಾಗಿವೆ.

**ಅಡಿಟಿಪ್ಪಣಿಗಳು**

೧. ಶಿವಗಣೇಶಮೂರ್ತಿ, ಆರ್.ಎಸ್. – **ಸಂಸ್ಕೃತ ಸಾಹಿತ್ಯ,** ಪು. ೨೭.

೨. ಗೀತಾದೇಸಾಯಿ – ಲೇಖನ – ಗಂಗಾಂಬಿಕೆ – ನಿರುಪಮಾ (ಸಂ) **ಕರ್ನಾಟಕದ ಕವಯಿತ್ರಿಯರು,** ಪು. ೧೯.

೩. ಅಪರ್ಣ, ಕೂ.ಸ. – ಲೇಖನ – ಗಂಗಾದೇವಿಯ ಮಧುರಾವಿಜಯಂ – ಒಂದು ಚಾರಿತ್ರಿಕ ಅವಲೋಕನ, – ವಿಜಯಲಕ್ಷ್ಮಿ ಬಾಳೇಕುಂದ್ರಿ (ಸಂ) – **ವಿಜಯನಗರ ವೈಭವ,** (೨೦೦೯).

೪. Mallikarjun Paraddi – Article – 'Poetry of Gangadevi' – **Journal of Karnataka University** – Vol XXI. P. 39 – 40.

೫. ಕುಶಾಲಪ್ಪಗೌಡ, ಕೆ. – **ಮಧುರಾವಿಜಯಂ,** ಪ್ರಸ್ತಾವನೆ, ಪು. ೯.

೬. Mallikarjun Paraddi – Op.Cit, P. 22, 23.

೭. ಗೀತಾ ದೇಸಾಯಿ – ಪೂರ್ವೋಕ್ತ – ಪು. ೧೭.

೮. ಕುಶಾಲಪ್ಪಗೌಡ, ಕೆ – ಪೂರ್ವೋಕ್ತ – ಪು. ೨೨, ೨೩.

೯. ಶಿವಗಣೇಶಮೂರ್ತಿ, ಆರ್.ಆರ್ – ಪೂರ್ವೋಕ್ತ – ಪು. ೨೭, ೨೮. ಇಲ್ಲಿ ಐತಿಹಾಸಿಕ ಕಾವ್ಯಗಳೂ ಮಹಾಕಾವ್ಯಗಳೇ ಎಂದು ಹೇಳಿದ್ದಾರೆ.

೧೦. ಅದೇ. ಪು. ೧೩.

೧೧. ಇನ್ನೂ ಒಂದು ಸರ್ಗವಿದ್ದು, ಅದು ಸಿಕ್ಕಿಲ್ಲವೆಂದು ತಿಳಿದುಬರುತ್ತದೆ. (ಉದ್ಧೃತ) – ಕುಶಾಲಪ್ಪಗೌಡ. ಕೆ – ಪೂರ್ವೋಕ್ತ, ಪು. ೨೫.

೧೨. ಅದೇ. ಪು. ೧೮.

೧೩. Mallikarjun Paraddi – Op. cit P. 45.

೧೪. ಶ್ರೀನಿವಾಸ ಅಯ್ಯಂಗಾರ್, ಲೇಖನ ಎಸ್.ಕೆ. ರಾಮಚಂದ್ರರಾವ್ (ಸಂ) **ಸಂಸ್ಕೃತ ಕವಿ ಚರಿತ್ರೆ,** ಸಂ.೩, ಪು. ೧೧೦.

೧೫. (ಉದ್ಧೃತ) – ಮಲ್ಲಿಕಾರ್ಜುನ ಪರಡ್ಡಿ – ಪೂರ್ವೋಕ್ತ. ಪು. ೪೨.

೧೬. ಅದೇ.

೧೭. ರಾಮಚಂದ್ರರಾವ್, ಎಸ್ – **ಕಾಳಿದಾಸನ ಕಾವ್ಯಗಳು** – ಪು. ೩೨.


**ಗ್ರಂಥಋಣ**

ಕುಶಾಲಪ್ಪಗೌಡ. ಕೆ. – (ಅನು) **ಗಂಗಾದೇವಿ ವಿರಚಿತ ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ** (ಕನ್ನಡಾನುವಾದ) – ಜಯಗೌರೀ ಪ್ರಕಾಶನ, ಪೆರಾಜೆ, ೧೯೮೯.

ಅಪರ್ಣ ಕೂ.ಸ. – **ಸಂಗಮರ ದೇವಾಲಯಗಳು,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ – ೨೦೦೭–೦೮.

ಅಪರ್ಣ. ಕೂ.ಸ. – ಲೇಖನ – ಗಂಗಾದೇವಿಯ ಮಧುರಾವಿಜಯಂ ಒಂದು ಚಾರಿತ್ರಿಕ ಅವಲೋಕನ – ವಿಜಯಲಕ್ಷ್ಮಿ ಬಾಳೇಕುಂದ್ರಿ (ಸಂ) ವಿಜಯನಗರ ವೈಭವ ಸ್ಮರಣ ಸಂಚಿಕೆ –ವಿಜಯನಗರ ತೆರಿಗೆದಾರರ ಸಂಘ, ೨೦೦೯.

ಗೀತಾದೇಸಾಯಿ – ಲೇಖನ – ಗಂಗಾಬಿಕೆ, ನಿರುಪಮಾ (ಸಂ) **ಕರ್ನಾಟಕ ಕವಯಿತ್ರಿಯರು** – ಶ್ರೀ ಪ್ರಕಾಶನ, ಬೆಂಗಳೂರು, ೧೯೮೦.

ರಾಮಚಂದ್ರರಾವ್ ಎಸ್. – **ಕಾಳಿದಾಸನ ಕಾವ್ಯಗಳು** –ಮೈಸೂರು ವಿಶ್ವವಿದ್ಯಾಲಯ ೧೯೪೨.

ಶಿವಗಣೇಶಮೂರ್ತಿ, ಆರ್.ಎಸ್. – **ಸಂಸ್ಕೃತ ಸಾಹಿತ್ಯ** ಮೈಸೂರು ವಿಶ್ವವಿದ್ಯಾಲಯ, ೧೯೭೨.

ಶ್ರೀನಿವಾಸ ಅಯ್ಯಂಗಾರ್ – ಲೇಖನ – ಎಸ್.ಕೆ. ರಾಮಚಂದ್ರ ರಾವ್ (ಸಂ) – **ಸಂಸ್ಕೃತ ಕವಿ ಚರಿತ್ರೆ** – ಸಂಸ್ಕೃತ ಕವಿ ಚರಿತೆ ಪ್ರಕಾಶನ, ೧೯೭೮, ಪು. ೧೦೯–೧೨೬.

ಶಿವರುದ್ರಪ್ಪ, ಜಿ.ಎಸ್ – **ಮಹಾಕಾವ್ಯ ಸ್ವರೂಪ** – ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

Mallikarjun Paraddi – Article – Poetry of Gangadevi – **Journal of Karnataka University** (Humanities) Dharwar, Vol. XXI, 1977.


❑❑

# ಹಳಗನ್ನಡ ಮತ್ತು ನಡುಗನ್ನಡ ಗದ್ಯ

– ಜಿ. ಅಬ್ದುಲ್ ಬಷೀರ್

ಕನ್ನಡ ಸಾಹಿತ್ಯಕ್ಕೆ ಸುಮಾರು ಒಂದು ಸಾವಿರದ ಐದುನೂರು ವರ್ಷಗಳ ಇತಿಹಾಸವಿದೆ. ವಿಪುಲವಾದ ವೈವಿಧ್ಯಮಯವಾದ ಕನ್ನಡ ಸಾಹಿತ್ಯದಲ್ಲಿ ಗದ್ಯ ಕೃತಿಗಳಿಗಿಂತ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗಿವೆ. 'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ; ಎಂದು ಹತ್ತೊಂಬತ್ತನೆಯ ಶತಮಾನದ ಮುದ್ದಣ ಹೇಳಿರುವುದು ಗಮನಿಸಬೇಕಾದ ವಿಚಾರವಾಗಿದೆ. ಕವಿಗಳು ಹಳಗನ್ನಡ–ನಡುಗನ್ನಡ ಕಾಲಗಳಲ್ಲಿ ಚಂಪೂ, ಕಂದಪದ್ಯ, ಷಟ್ಪದಿ, ತ್ರಿಪದಿ, ಸಾಂಗತ್ಯ, ರಗಳೆ ಮುಂತಾದ ಛಂದೋಬಂಧಗಳಲ್ಲಿ ಕೃತಿಗಳನ್ನು ರಚಿಸಿದರೇ ಹೊರತು, ಪೂರ್ಣವಾಗಿ, ಗದ್ಯವನ್ನೇ ಕೃತಿಗಳ ಮಾಧ್ಯಮವನ್ನಾಗಿ ಬಳಸಿಕೊಂಡದ್ದು ತೀರಾ ಕಡಿಮೆ ಎಂಬುದು, ಸಾಹಿತ್ಯ ಪ್ರಿಯರಿಗೆ ವೇದ್ಯವಾಗಿರುವ ಸಂಗತಿಯೇ ಆಗಿದೆ. ಆದರೆ ಗದ್ಯರೂಪಗಳು ಮಾತ್ರ, ಅನೇಕ ರೀತಿಗಳಲ್ಲಿ ಬಳಕೆಯಾಗಿವೆ. ಗದ್ಯ ಶಾಸನಗಳಲ್ಲಿ, ಶಾಸ್ತ್ರಗ್ರಂಥಗಳಲ್ಲಿ, ಗದ್ಯ ಕಥೆಗಳಲ್ಲಿ, ಚಂಪೂಕೃತಿಗಳಲ್ಲಿ ಅನೇಕ ರೂಪಗಳಲ್ಲಿ ಬೆಳೆದು ಬಂದಿದೆ. ಕನ್ನಡ ವಚನರೂಪದೊಡನೆ ಸೇರಿಕೊಂಡು ಪಡೆದ ವೈವಿಧ್ಯ ಹಾಗೂ ಪರಿಪಕ್ವತೆ ಶ್ಲಾಘನೀಯವಾದದ್ದು. ಪದ್ಯಗಳಂತೆ ಹುಟ್ಟಿನಿಂದಲೇ ಸಂಸ್ಕೃತಕ್ಕೆ ಹೊಂದಿಕೊಂಡು ಬಂದ ಕಾರಣದಿಂದ ಗದ್ಯ ಅಚ್ಚಕನ್ನಡತನ ಮೆರೆದದ್ದು ಕಡಿಮೆ ಎಂದೇ ಹೇಳಬೇಕು. ಆದರೂ ಹತ್ತನೆಯ ಶತಮಾನದ ಪಂಪ, ಹನ್ನೆರಡನೆಯ ಶತಮಾನದ ಹರಿಹರ ನಯಸೇನರಂಥವರ ಕೃತಿಗಳಲ್ಲಿ ದೇಸೀ ಸೊಬಗಿನ ಗದ್ಯವನ್ನು ನೋಡುತ್ತೇವೆ.

ಹಳಗನ್ನಡ–ನಡುಗನ್ನಡ ಕಾಲಗಳಲ್ಲಿ ಗದ್ಯ ಕೃತಿಗಳು ಹೆಚ್ಚು ರಚನೆಯಾಗದಿರುವುದಕ್ಕೆ ಅನೇಕ ಕಾರಣಗಳಿರಬಹುದು. ಮುಖ್ಯವಾಗಿ, ಆ ಕಾಲದಲ್ಲಿ ಗದ್ಯ ಕೃತಿಗಳಿಗೆ ರಾಜಾಸ್ಥಾನದಲ್ಲಾಗಲೀ, ಪಂಡಿತಮಂಡಲಿಯಲ್ಲಾಗಲೀ, ಜನಸಾಮಾನ್ಯರಲ್ಲಾಗಲೀ ಅಷ್ಟಾಗಿ ಘನತೆ–ಗೌರವಗಳು ದೊರಕುತ್ತಿರಲಿಲ್ಲ ಎಂದು ನಾವು ಊಹಿಸಬಹುದಾಗಿದೆ. ಪದ್ಯ ಮಾಧ್ಯಮದಲ್ಲಿ ಕೃತಿ ರಚನೆ ಮಾಡಿದರೆ ನೆನಪಿಟ್ಟುಕೊಳ್ಳುವುದು ಸುಲಭ; ಬರವಣಿಗೆಯ ಸಾಮಗ್ರಿಗಳ ಅನುಕೂಲ ಹಾಗೂ ಮುದ್ರಣ ಸೌಕರ್ಯ ಇಲ್ಲದಿದ್ದ ಆ ಕಾಲದಲ್ಲಿ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗುತ್ತಿದ್ದುದು ಸಹಜ. ಗದ್ಯದಲ್ಲಿ ಗ್ರಂಥರಚನೆ ಮಾಡಿದರೆ ಮಹಾಕವಿ ಪಟ್ಟ ಸಿಗದಿರಬಹುದು ಎಂಬ ಶಂಕೆಯೂ ಕಾರಣವಿರಬಹುದು. ನಾಟಕ ರಚನೆಗೂ ಈ ಮಾತುಗಳು ಅನ್ವಯಿಸುತ್ತವೆ. ಆದ್ದರಿಂದಲೇ ವ್ಯಾಕರಣ, ಅಲಂಕಾರ, ನಿಘಂಟು, ಛಂದಸ್ಸು ಮುಂತಾದ ಶಾಸ್ತ್ರ ಗ್ರಂಥಗಳೂ ಛಂದೋಬದ್ಧವಾದ ಪದ್ಯದಲ್ಲಿಯೇ ರಚನೆಯಾಗುತ್ತಿದ್ದವು.

ಕ್ರಿ.ಶ. ೮೫೦ರ ಶ್ರೀವಿಜಯ ತನ್ನ ಅಲಂಕಾರಶಾಸ್ತ್ರ ಗ್ರಂಥವಾದ 'ಕವಿರಾಜಮಾರ್ಗ'ದಲ್ಲಿ ಗದ್ಯದ ಲಕ್ಷಣವನ್ನು ಹೀಗೆ ಹೇಳಿದ್ದಾನೆ; "ಕಾವ್ಯ ಪುರುಷನ ಶರೀರವು 'ಗದ್ಯ', 'ಪದ್ಯ' ಎಂದು ಎರಡು ವಿಧ (೧–೨೪). ಪದಪಾದ ನಿಯಮವಿಲ್ಲದಿದ್ದರೂ, ಪದ್ಯ ಕಾವ್ಯದಂತೆಯೇ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿದ್ದು, ಕ್ರಿಯಾಕಾರಕದಲ್ಲಿ ಸರಿಯಾಗಿ ಸೇರ್ಪಡೆಯಾಗಿ ಅರ್ಥವ್ಯಕ್ತಿಯನ್ನು ಕೊಡುವುದು ಗದ್ಯ" (೧–೨೫). ಗದ್ಯದ ಗುಣಗಳು ಸ್ಪಷ್ಟತೆ, ಖಚಿತತೆ, ನಿರಾಡಂಬರತೆ, ಸಹಜವಾದ ಓಟ, ಕಿವಿಗೆ ಹಿತವಾದ ಶಬ್ದದ ಹೆಣಿಗೆ ಮತ್ತು ಲಯ ಲಭಿಸಿರುವ ಹಳಗನ್ನಡ–ನಡುಗನ್ನಡ ಗ್ರಂಥಗಳಲ್ಲಿ 'ಮಾರ್ಗ–ದೇಸಿ'ಗಳ ಸಮನ್ವಯ ಇದೆ. ಹೊಸಗನ್ನಡ ಕಥನ ಶೈಲಿಯನ್ನು, ಅನೇಕ ಗ್ರಂಥಗಳಲ್ಲಿ ಕಾಣಬಹುದು. ಒಟ್ಟಾರೆ, ಪದ್ಯ ಕಾವ್ಯವ್ಯಕ್ಕಿರುವ ನಿರ್ಬಂಧಗಳು, ಗದ್ಯಕಾವ್ಯಕ್ಕೆ ಇಲ್ಲ.

ಕವಿರಾಜಮಾರ್ಗಕಾರ ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮುಂತಾದವರು ಗದ್ಯಕಾರರು ಎಂದು ಹೇಳಿದ್ದಾನೆ (೧–೨೬). ಇವರೆಲ್ಲರೂ ಪೂರ್ವದ ಹಳಗನ್ನಡ ಕಾಲದಲ್ಲಿ ಇದ್ದರೆಂದು ತೋರುತ್ತದೆ. ಆದರೆ ಇವರ ಗದ್ಯಗ್ರಂಥಗಳಾವುವೂ ನಮಗೆ ಸಿಕ್ಕಿಲ್ಲ.

ಪೂರ್ವದ ಹಳಗನ್ನಡ ಕಾಲದಲ್ಲಿ ಗದ್ಯ ವಿಶೇಷವಾಗಿ ಶಾಸನಗಳಲ್ಲಿ ಬಳಕೆಯಾಗಿದೆ; ಪ್ರಧಾನವಾಗಿ, ವರ್ಣನೆ ಇರುವ ಕಡೆ ಗದ್ಯ ಅನುಕೂಲಕರ ಮಾಧ್ಯವಾಗಿರುವುದನ್ನು ಗುರುತಿಸಬಹುದು. ಕ್ರಿ.ಶ. ಒಂಬತ್ತನೆಯ ಶತಮಾನದಿಂದ ಹದಿನೆಂಟನೆ ಶತಮಾನದವರೆಗೆ ಅಂದರೆ, ಹಳಗನ್ನಡ–ನಡುಗನ್ನಡ ಕಾಲಗಳಲ್ಲಿ ಕೆಲವು ಸ್ವತಂತ್ರ ಗದ್ಯ ಕೃತಿಗಳು ಹಾಗೂ ಅನುವಾದ ಕೃತಿಗಳು ರಚನೆಯಾಗಿವೆ. ಹದಿನೇಳು

ನಂ.೫, ೮ನೆಯ ಅಡ್ಡರಸ್ತೆ, ಬೈರಸಂದ್ರ, ಜಯನಗರ ೧ನೆಯ ವಿಭಾಗ, ಬೆಂಗಳೂರು : ೫೬೦ ೦೧೧

ಮತ್ತು ಹದಿನೆಂಟನೆಯ ಶತಮಾನಗಳನ್ನು 'ಕನ್ನಡ ಗದ್ಯ ಸಾಹಿತ್ಯದ ಸುವರ್ಣಯುಗ' ಎಂದು ಕರೆಯುಬಹುದು.

ಹಳಗನ್ನ ಗದ್ಯ, ಸಂಸ್ಕೃತ ಭೂಯಿಷ್ಠವೂ, ಪಾಂಡಿತ್ಯ ಪೂರ್ಣವೂ ಆಗಿರುವುದನ್ನು ನೋಡಬಹುದು. ನಡುಗನ್ನಡ ಗದ್ಯ ದೇಸೀನಿಷ್ಠವೂ ಜನಸಮ್ಮುಖವೂ ಆಗಿರುವುದನ್ನು ಗುರುತಿಸಬಹುದು. ಕೆಲವು ಕಡೆ ಗದ್ಯದಲ್ಲಿ ಪದ್ಯ ರಚನೆಯಂತೆಯೇ ಶಬ್ದಗಳ ಜೋಡಣೆ, ಪ್ರಾಸಾನುಪ್ರಾಸ, ಅಲಂಕಾರಗಳ ಬಳಕೆ ಇರುವುದು ಗಮನಾರ್ಹ ವಿಚಾರವಾಗಿದೆ.

### ಶಾಸನ ಗದ್ಯ

ಪೂರ್ಣ ಪ್ರಮಾಣದ ಗದ್ಯ ಗ್ರಂಥಗಳು ರಚನೆಯಾಗುವ ಮುನ್ನ, ಶಾಸನಗಳಲ್ಲಿ ಗದ್ಯ ಬಳಕೆಯಾಗಿದೆ. ಶಾಸನಗಳಲ್ಲಿ ಚಾರಿತ್ರಿಕ, ಸಾಮಾಜಿಕ ಘಟನೆಗಳ ಅಪೂರ್ವ ಚಿತ್ರಣ ಇರುತ್ತದೆ. ಗ್ರಂಥಸ್ಥ ಭಾಷೆಯ ಅನುಸರಣೆ ಇದ್ದರೂ, ಪ್ರಚಲಿತ ದೇಸೀ ಶಬ್ದಗಳ ಬಳಕೆಯೂ ಇದೆ. ಪ್ರೌಢಭಾಷೆಗಿಂತ ಬೇರೆಯೇ ಆದ ಒಂದು ಮಾರ್ಗವನ್ನು ಅದು ತುಳಿಯಲು ಯತ್ನಿಸಿದಂತೆ ಇದೆ. ಅಲ್ಲಲ್ಲಿ ಅಶುದ್ಧ-ಗ್ರಾಮ್ಯರೂಪಗಳೂ ಕಂಡುಬರುತ್ತವೆ. ಕೆತ್ತನೆಕಾರರಿಂದ ಹಾಗೆ ಆಗಿರಬಹುದು; ಅಥವಾ ಶಾಸನದ ವಿಚಾರ ಜನರಿಗೆ ತಿಳಿಯಲಿ ಎಂಬುದಕ್ಕೆ ಇರಬಹುದು, ಗ್ರಾಂಥಿಕ ಭಾಷೆ ಮಾರ್ಗ ಕಾವ್ಯಗಳಲ್ಲಿ ಕಾಲದಿಂದ ಕಾಲಕ್ಕೆ ಆಡುನುಡಿಯಲ್ಲಿ ಆಗಬಹುದಾದ ಬದಲಾವಣೆಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳದೆ ಇದ್ದಾಗ, ಶಾಸನಗಳು ಅದನ್ನು ಕೆಲಮಟ್ಟಿಗೆ ಮೂಡಿಸಿರುತ್ತವೆ. ಹೀಗೆ ಶಾಸನ ಗದ್ಯ ಪ್ರಗತಿಪರವಾದ ಒಂದು ಗದ್ಯರೂಪವಾಗಿದೆ. (ರಂ.ಶ್ರೀ. ಮುಗಳಿ).

ಕನ್ನಡ ಭಾಷೆ ಮತ್ತು ಸಾಹಿತ್ಯದ ಅಸ್ತಿತ್ವದ ಬಗೆಗೆ ನಮಗೆ ಕನ್ನಡದಲ್ಲಿಯೇ ಲಭಿಸುವ ಮೊತ್ತಮೊದಲ ಬರಹ ಎಂದರೆ, ಕ್ರಿ.ಶ. ೪೫೦ರ ಹಲ್ಮಿಡಿ ಶಾಸನ, ಸಂಸ್ಕೃತ ಭೂಯಿಷ್ಠವಾದ ಈ ಶಾಸನದಲ್ಲಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಪ್ರಯೋಗಗಳು ಇವೆ. ಇದರಲ್ಲಿ ಕನ್ನಡಿಗರ ಪರಾಕ್ರಮ ಮತ್ತು ದಾನಗುಣಗಳನ್ನು ಚಿತ್ರಿಸಲಾಗಿದೆ. "ಕೇಕಯ ಪಲ್ಲವರಂ ಕಾದೆಱೆದು, ಪೆತ್ತಜಯನಾ ವಿಜಯ ಅರಸನ್ಗೆ ಬಾಳ್ಗಳ್ಚು, ಪಲ್ಮಿಡಿಯುಂ ಮೂರೆವಳ್ಳಿಯುಂ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು.

ಕ್ರಿ.ಶ. ೮ನೇ ಯ ಶತಮಾನದ 'ವೀರಗಲ್ಲು', ೧೧೩೮ರ ಬೇಲೂರಿನ ೨೦೨ನೆಯ ಶಾಸನ' ಮತ್ತು ೧೩೬೮ರ ಶ್ರವಣಬೆಳಗೊಳದ ೩೪೪ನೆಯ ಶಾಸನಗಳಲ್ಲಿ ಕ್ರಮವಾಗಿ 'ದಾನ', 'ಲೆಂಕರಾಯನ ಪರಾಕ್ರಮ' ಮತ್ತು 'ಬುಕ್ಕರಾಯನ ಸರ್ವಧರ್ಮ ಸಮನ್ವಯದೃಷ್ಟಿ'ಗಳು ಚಿತ್ರಣಗೊಂಡಿವೆ. ಮೂರನೆಯ ಶಾಸನ ನಡುಗನ್ನಡದಲ್ಲಿದೆ.

### ಶಾಸ್ತ್ರಗದ್ಯ

೧೦ನೆಯ ಶತಮಾನದ ಪಂಪನ ಆದಿಪುರಾಣದ ತಾತ್ತ್ವಿಕ ಭಾಗದಲ್ಲಿ ಶಾಸ್ತ್ರಗದ್ಯ ಮೊದಲು ಕಾಣಿಸುತ್ತದೆ. ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವ ದುರ್ವಿನೀತ ಮುಂತಾದವರು, ಜೈನಧರ್ಮದ ಪ್ರಚಾರಕ್ಕಾಗಿ ಈ ಬಗೆಯ ಗದ್ಯವನ್ನು ಬಳಸಿಕೊಂಡಿರಬೇಕು. ಅವು ಸಂಸ್ಕೃತ ಭೂಯಿಷ್ಠ ಹಾಗೂ ತರ್ಕನಿಷ್ಠವಾಗಿದ್ದಿರಬಹುದು ಎಂಬುದಕ್ಕೆ ಪಂಪನ ಆದಿಪುರಾಣವೇ ಉದಾಹರಣೆಯಾಗಿದೆ. ಬಹುತೇಕ ಜೈನ ಚಂಪೂಗ್ರಂಥಗಳಲ್ಲಿ ಈ ಶಾಸ್ತ್ರಗದ್ಯ ಬಳಕೆಯಾಗಿದೆ. ಕೇಶಿರಾಜನ ಶಬ್ದಮಣಿ ದರ್ಪಣದ 'ವೃತ್ತಿ' ಭಾಗ ಹಳಗನ್ನಡ ಗದ್ಯದ ಖಚಿತತೆಗೆ ಸ್ಪಷ್ಟತೆಗೆ ಒಳ್ಳೆಯ ನಿದರ್ಶನವಾಗಿದೆ. 'ವ್ಯಾಕರಣದಿಂ ದದಸಿದ್ಧಿಯಕ್ಕುಂ, ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ, ಅರ್ಥ ಜ್ಞಾನದಿಂ ತತ್ತ್ವವಿಚಾರಮಕ್ಕುಂ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು. ಈತನ ಅಲಭ್ಯ ಕೃತಿ ಪ್ರಬೋಧಚಂದ್ರಂ ಗದ್ಯದಲ್ಲಿದ್ದು ತಾತ್ತ್ವಿಕ ವಿಚಾರಗಳನ್ನು ಒಳಗೊಂಡಿದ್ದಿರಬೇಕೆಂದು ಊಹಿಸಬಹುದಾಗಿದೆ.

### ಗದ್ಯಕಥೆ

ಶಾಸ್ತ್ರ ಗದ್ಯಕ್ಕಿಂತ ಸರಳವೂ ದೇಸೀನಿಷ್ಠವೂ ಆದದ್ದು, 'ಗದ್ಯ ಕಥೆ'. ಕವಿರಾಜಮಾರ್ಗದಲ್ಲಿ ಇದರ ಉಲ್ಲೇಖ ಇದೆ. 'ವಡ್ಡಾರಾಧನೆ' ಗದ್ಯ ಕಥೆಗೆ ಒಂದು ಒಳ್ಳೇಯ ನಿದರ್ಶನವಾಗಿದೆ. ದುರ್ಗಸಿಂಹನ 'ಪಂಚತಂತ್ರ', ನಯಸೇನನ 'ಧರ್ಮಾಮೃತ' ಹರಿಹರ 'ಬಸವರಾಜದೇವರ ರಗಳೆ' 'ನಂಬಿಯಣ್ಣನ ರಗಳೆ' ಮುಂತಾದ ಕೃತಿಗಳ ಸಹಾಯದಿಂದ ಕಥಾ ಗದ್ಯದ ಪ್ರಾಚೀನ ಸ್ವರೂಪವನ್ನು ಅರಿಯಬಹುದು.

### ಚಂಪೂಗದ್ಯ

೧೦-೧೨ನೆಯ ಶತಮಾನದ ವಿಕ್ರಮಾರ್ಜುನವಿಜಯ, ಗದಾಯುದ್ಧ, ಶಾಂತಿಪುರಾಣ, ಅನಂತನಾಥ ಪುರಾಣ ಮುಂತಾದ ಚಂಪೂ ಕೃತಿಗಳಲ್ಲಿ ಬಳಕೆಯಾಗಿರುವ ಗದ್ಯವನ್ನು ಚಂಪೂಗದ್ಯ ಎಂದು ಹೆಸರಿಸಬಹುದು. ಈ ಗದ್ಯದಲ್ಲಿ ಕಥನ, ಸಂಭಾಷಣೆ, ಶಾಸ್ತ್ರ ವಿಚಾರಗಳು ಸೇರಿರುತ್ತವೆ. ೧೩ನೆಯ ಶತಮಾನದ ಹರಿಹರನ 'ಬಸವರಾಜ ದೇವರ ರಗಳೆ' ಮತ್ತು ನಂಬಿಯಣ್ಣನ ರಗಳೆ'ಗಳೂ ಒಂದು ಬಗೆಯ ಚಂಪೂ ಗ್ರಂಥಗಳೇ! ರಗಳೆ ಛಂದಸ್ಸಿನ ಏಕತಾನತೆಯನ್ನು ತಪ್ಪಿಸಲು ಮತ್ತು ವೈವಿಧ್ಯತೆಯನ್ನುಂಟುಮಾಡಲು ಆತ ಒಂದು ಸ್ಥಲ ಪದ್ಯ, ಒಂದು ಸ್ಥಲ ಗದ್ಯ ತಂದಿದ್ದಾನೆ. ಇದು ಗದ್ಯ ಬಳಕೆಯ ಒಂದು ಹೊಸಮುಖವಾಗಿದೆ. ಈ ಗದ್ಯ ಚಂಪೂ ಗದ್ಯಕ್ಕೆ ಹತ್ತಿರವಾದರೂ ಅದರ ವಿಷಯ, ರಸ, ಶೈಲಿಗಳಲ್ಲಿ ಹರಿಹರನ ವ್ಯಕ್ತಿ ವೈಶಿಷ್ಟ್ಯ ಕಂಡು ಬರುತ್ತದೆ. ಭಕ್ತನ ವರ್ಣನೆಗೆ

ತಕ್ಕ ಆವೇಶಭರಿತ ಭಾಷೆಯನ್ನು ಕಾವ್ಯದಂತೆ ಬಳಸಿರುವುದು ಒಂದು ವಿಶೇಷವಾಗಿದೆ.

"ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂ ಪೊಱಮಟ್ಟು ಸೌಂದರ ಪೆರುಮಾಳೆಯಿರ್ದ ವನಕ್ಕೆ ಬಂದು ಅಲ್ಲಿ ಮುಂದೆ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು. ಪಂಚತಂತ್ರದ ಚಂಪೂಗದ್ಯ ನಿರಾಭರಣವಾದದ್ದು. ಅಲ್ಲಿ ನೇರ ನಿರೂಪಣೆ, ಅಚ್ಚಗನ್ನಡದ ಸೊಗಸಿದೆ. ನಯಸೇನನ ಧರ್ಮಾಮೃತದಲ್ಲಿ ತನ್ನ ತೀವ್ರವಾದ ಲೋಕಾನುಭವ, ಸಮಕಾಲೀನ ಭಾಷಾ ಪ್ರಜ್ಞೆ, ಅದರ ಬಳಕೆಯಲ್ಲಿ ತೋರುವ ಉತ್ಸಾಹ ಮೆಚ್ಚುವಂತಹದು.

ಈಗ ಪೂರ್ಣಪ್ರಮಾಣದ ಗದ್ಯಗ್ರಂಥಗಳ ವಿಚಾರಕ್ಕೆ ಬರಬಹುದು. ಕ್ರಿ.ಶ. ಸುಮಾರು ೯ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಭ್ರಾಜಿಷ್ಣುವಿನ 'ವಡ್ಡಾರಾಧನೆ' ನಮಗೆ ದೊರೆತ ಮೊತ್ತ ಮೊದಲ, ಸೊಗಸಾದ ಗದ್ಯ ಗ್ರಂಥ. ಇದರಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ೧೯ ಕಥೆಗಳಿವೆ. ಎಲ್ಲಾ ಕಥೆಗಳೂ ನೀತಿ ಪರವಾಗಿವೆ, ವೈರಾಗ್ಯ ಬೋಧಕವಾಗಿವೆ. ಜ್ಞಾನ, ದರ್ಶನ, ಚಾರಿತ್ರ್ಯ, ತಪಸ್ಸುಗಳ ಆದರ್ಶ ಆಚರಣೆ, ಹಿರಿಯ ಜೈನಯತಿಗಳ ಧರ್ಮ; ಇದನ್ನು ಬೋಧಿಸುವ ಗ್ರಂಥ 'ಆರಾಧನೆ.' ಇಲ್ಲಿನ ಕಥನ ಕಲೆ ಮತ್ತು ದೇಸೀ ನಿಷ್ಠೆ ಅಪೂರ್ವವಾದವು. ಇಲ್ಲಿ ಕನ್ನಡ ಸಂಸ್ಕೃತಗಳ ಸರಿಬೆರಕೆಯಿದೆ. ಗಾದೆಮಾತುಗಳು, ಒಳ್ನುಡಿಗಳು ಹೇರಳವಾಗಿವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಚಿರಂತನವಾಗಿ ನೆನೆಯಬಹುದಾದ, ವೈಶಿಷ್ಟ್ಯ ಪೂರ್ಣವಾದ ಕೃತಿಯಾಗಿದೆ. ಧರ್ಮ ಪ್ರಚಾರ ಮಾಡಲು, ಪದ್ಯ ರಚನೆಗಿಂತ ಗದ್ಯ ರಚನೆ ಹೆಚ್ಚು ಅನುಕೂಲಕರ ಎಂದು ಕವಿ ಭಾವಿಸಿದಂತೆ ಇದೆ.

"ನಿಸ್ಸಾರಮಪ್ಪ ಭೋಗದೊಳ್ ಸಿಲ್ಕಿ, ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್, ಕಾಲಮಂ ಬಱಿದೆ ಕಳೆದೆಂ" ಎಂಬ ಸಾಲನ್ನು ಗದ್ಯದ ಸೊಗಸಿಗಾಗಿ ನೋಡಬಹುದು.

'ತ್ರಿಷಷ್ಠಿ ಲಕ್ಷಣ ಮಹಾಪುರಾಣ' ಇಲ್ಲವೆ 'ಚಾವುಂಡರಾಯ ಪುರಾಣ' ದ ಕರ್ತೃ ಚಾವುಂಡರಾಯ. ಈತನ ಕಾಲ ೯೭೮. ಜೈನಧರ್ಮ ನಿರೂಪಣೆ ಇದರ ಮುಖ್ಯ ಗುರಿ ನಡುನಡುವೆ ತೀರ ಕಡಿಮೆ ಪದ್ಯಗಳನ್ನು ಒಳಗೊಂಡ ಗದ್ಯ ಭೂಯಿಷ್ಠ ಕೃತಿ ಇದು. ಪದ್ಯ ರೂಪದಲ್ಲಿದ್ದ ಸಂಸ್ಕೃತ ಕೃತಿ, ಗದ್ಯ ರೂಪ ತಾಳಿದೆ. ಕಥಾ ಗದ್ಯದ ಸಹಜ ನಡೆ, ಬಳಕೆ ಮಾತಿನ ಸೊಗಸು, ಶಾಸ್ತ್ರಗದ್ಯದ ಅಚ್ಚುಕಟ್ಟು, ಜನಸಾಮಾನ್ಯರನ್ನೂ ಆಕರ್ಷಿಸುತ್ತದೆ. ಜೈನ ಧರ್ಮ, ತತ್ತ್ವ, ಸಂಪ್ರದಾಯಗಳ ಬಗ್ಗೆ ಆಸಕ್ತಿ, ಶ್ರದ್ಧೆಗಳನ್ನು ಸಾಮಾನ್ಯ ಜನರಲ್ಲಿ ಹುಟ್ಟಿಸುವ ಅಪೇಕ್ಷೆ, ಗಾಂಭೀರ್ಯ-ಸರಳತೆಗಳ ಮಿಶ್ರಣ, 'ವಡ್ಡಾರಾಧನೆ' ಮತ್ತು 'ಚಾವುಂಡರಾಯ ಪುರಾಣ'ಗಳಲ್ಲಿ ಸಮಾನವಾಗಿ ಬಂದಿವೆ. ಮಾರ್ಗಕಾವ್ಯದ ಪ್ರೌಢಕೃತಿಗಳು ಸೃಷ್ಟಿಯಾಗುತ್ತಿದ್ದ ಕಾಲದಲ್ಲಿ ಈ ಕೃತಿಗಳು ರಚಿತವಾದದ್ದು, ವಿಶೇಷವಾದ ಸಂಗತಿಯಾಗಿದೆ.

"ಅನ್ನೆಗಂ ಶೋಕಮಂ ಪತ್ತುವಿಟ್ಟು ಸೈರಿಸುವುದೆಂದು ಸೀತೆಯಲ್ಲಿಗೆ ದೂತರನಟ್ಟುವುದೆಂದು ಲೇಖವಾರ್ತೆಯಂ ಕೇಳ್ದುರಾಮಸ್ವಾಮಿ ಕೋಪರಸಾಕ್ರಾಂತನಾಗೆ" ಎಂಬ ಸಾಲನ್ನು ಉದಾಹರಣೆಯಾಗಿ ನೋಡಬಹುದು.

೧೩೦೦ರಲ್ಲಿ ಹಸ್ತಿಮಲ್ಲ ಕವಿ 'ಪೂರ್ವಪುರಾಣ'ವನ್ನು ರಚಿಸಿದ್ದಾನೆ. ಚಾವುಂಡರಾಯ ಪುರಾಣದ ಆದಿಪುರಾಣ ಇಲ್ಲಿ 'ಪೂರ್ವಪುರಾಣ'ವಾಗಿ ಪರಿಣಮಿಸಿದೆ. ಅಚ್ಚಗನ್ನಡ ಶಬ್ದ ಬಳಕೆ ಇಲ್ಲಿನ ಸೊಗಸು. ಹಳಗನ್ನಡ ಹೊಸಗನ್ನಡ ಮಿಶ್ರಣ ಭಾಷೆ ಇಲ್ಲಿದೆ.

ನಡುಗನ್ನಡ ಕಾಲದಲ್ಲಿ ಅಂದರೆ ೧೩ ರಿಂದ ೧೮ನೆಯ ಶತಮಾನಗಳಲ್ಲಿ ಮತಧರ್ಮಶಾಸ್ತ್ರಗಳನ್ನು ನಿರೂಪಿಸುವ ಗದ್ಯ ಗ್ರಂಥಗಳು, ತೀರಾ ಕಡಿಮೆ ಲಭಿಸುತ್ತವೆ. ೧೫೦೦ರ ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ' ಒಂದು ಜ್ಞಾನಕೋಶ. ಸಾಹಿತ್ಯದ ಲಕ್ಷಣವುಳ್ಳ ಕೆಲವು ಕೃತಿಗಳು ೧೭ನೆಯ ಶತಮಾನದಲ್ಲಿ ರಚಿತವಾದವು. ಚಿಕ್ಕದೇವರಾಜ ಬಿನ್ನಪದಲ್ಲಿ ಶ್ರೀ ವೈಷ್ಣವ ಮತದ ತತ್ತ್ವಗಳನ್ನು, ಒಂದೊಂದು ಬಿನ್ನಪದಲ್ಲಿ ನಿರೂಪಿಸಿದೆ. ಶಾಸ್ತ್ರವನ್ನು ಸಾಹಿತ್ಯ ರೂಪಕ್ಕೆ ಇಳಿಸಿದ, ಭಕ್ತಿ ಜ್ಞಾನ ಮಿಶ್ರಣವುಳ್ಳ ಗ್ರಂಥ ಇದು. ಶೈಲಿಯ ಸರಳತೆ, ಇಲ್ಲಿನ ಸೊಬಗು.

ತಿರುಮಲಾರ್ಯನ 'ಚಿಕ್ಕದೇವರಾಯ ವಂಶಾವಳಿ', ಕಾವ್ಯ ಪ್ರೌಢಿಮೆಯ ಸುಂದರ ಗದ್ಯ ಕೃತಿಯಾಗಿದೆ. ಚರಿತ್ರೆ, ಮತೀಯತೆ, ಭಕ್ತಿಗಳ ವಿಶಿಷ್ಟಪಾಕ ಈ ಕೃತಿಯಲ್ಲಿದೆ. ಸಂಸ್ಕೃತ ಸಂಸರ್ಗವನ್ನು ತ್ಯಜಿಸದೆ, ಅಚ್ಚಗನ್ನಡದ ಶೈಲಿಯನ್ನು ಈ ಕವಿ ಮೈಗೂಡಿಸಿಕೊಂಡಿದ್ದಾನೆ.

೧೮ನೆಯ ಶತಮಾನದ ದೇವಚಂದ್ರನ 'ರಾಜಾವಳೀ ಕಥೆ' ಚಾರಿತ್ರಿಕ ಕಥನ ಸಾಮಗ್ರಿಯನ್ನೊಳಗೊಂಡ ಮೌಲಿಕ ಗದ್ಯ ಕೃತಿಯಾಗಿವೆ. ಮೈಸೂರು ರಾಜರ ಪರಂಪರೆಯನ್ನು ಸಂಗ್ರಹಿಸಿರುವುದಲ್ಲದೆ, ಜೈನಧರ್ಮಕ್ಕೆ ಸಂಬಂಧಿಸಿದ ಕೆಲವು ವಿವರಗಳೂ, ರಾಜರ ಚರಿತ್ರೆ ಹಾಗೂ ಕೆಲವು ಕವಿಗಳ ವಿಷಯಗಳೂ ಇದರಲ್ಲಿರುವುದು ಸ್ವಾರಸ್ಯವಾದ ಸಂಘತಿಯಾಗಿದೆ.

೧೮೭೩ರಲ್ಲಿ ರಚಿತವಾದ ಕೆಂಪು ನಾರಾಯಣನ 'ಮುದ್ರಾಮಂಜೂಷ' ಹಳಗನ್ನಡ - ನಡುಗನ್ನಡ ಹೊಸಗನ್ನಡಗಳ ಮಿಶ್ರಣವನ್ನು ಒಳಗೊಂಡಿರುವಂಥ ಗದ್ಯ ಕೃತಿಯಾಗಿದೆ.

೧೮೬೯-೧೯೦೧ರ ನಡುವಿನ ಅವಧಿಯಲ್ಲಿ ಬದುಕಿದ್ದ ಮುದ್ದಣ 'ಶ್ರೀರಾಮಾಶ್ವಮೇಧ' ಮತ್ತು 'ಅದ್ಭುತ ರಾಮಾಯಣ' ಎಂಬ ಎರಡು ಹಳಗನ್ನಡ ಗದ್ಯ ಗ್ರಂಥಗಳನ್ನು ಬರೆದಿದ್ದಾನೆ. ಇದೊಂದು ವಿಚಿತ್ರ ಎನಿಸಿದರೂ, ವೈಶಿಷ್ಟ್ಯ ಪೂರ್ಣ ಗದ್ಯದ ಬಳಕೆಯಿಂದಾಗಿ, ಈ ಕೃತಿಗಳು ಜನಮನ್ನಣೆ ಪಡೆದಿವೆ.

ಹೇರಳವಾದ ತದ್ಭವ ಶಬ್ದಗಳ ಬಳಕೆ ಇಲ್ಲಿದೆ. ಅದ್ಭುತ ರಾಮಾಯಣದ ಶಿಲ್ಪ ಆಧುನಿಕ ಸಣ್ಣ ಕತೆಗಳಂತೆ ಇದೆ ಎಂದರೆ ತಪ್ಪಾಗಲಾರದು.

ಎಲ್ಲಾ ಗದ್ಯ ಗ್ರಂಥಗಳೂ ಮೂಲವನ್ನು ಅನುಸರಿಸಿದ್ದರೂ ಅವು ಪಡೆದಿರುವ ಕಲಾತ್ಮಕತೆ ಹಾಗೂ ಸಂಸ್ಕೃತವನ್ನು ಬಿಡದೆ, ಅಚ್ಚಗನ್ನಡದತ್ತ ಒಲಿದಿರುವ ತನ್ನತನವನ್ನು ಒಳಗೊಂಡ ಗದ್ಯ ಶೈಲಿಯನ್ನು ಪಡೆದಿವೆ.

**ಗ್ರಂಥ ಋಣ**

**೧. ಕನ್ನಡ ಸಾಹಿತ್ಯ ಚರಿತ್ರೆ**– ಡಾ.ರಂ.ಶ್ರೀ ಮುಗಳಿ

**೨. ಕನ್ನಡ ಸಾಹಿತ್ಯದ ಪ್ರಾಚೀನ ರೂಪಗಳು** – ಡಾ.ರಂ. ಶ್ರೀ ಮುಗಳಿ

**೩. ಹಳಗನ್ನಡ ಗದ್ಯ ವಿಕಾಸ** – ಪ್ರೊ. ಎನ್. ಬಸವಾರಾಧ್ಯ

**೪. ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು –ಮರುನೋಟ**– ಪ್ರೊ. ಟಿ. ಕೇಶವಭಟ್ಟ

❑❑

# ಅಕ್ಕೆಕ್ಕಿ ಭೋರಂಗ

– ಜಿ. ಕೃಷ್ಣಪ್ಪ

ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ಪ್ರಯೋಗಿಸಿರುವ ದೇಸಿ ಪದಗಳು ಅರ್ಥವಾದರೆ ಅವರ ಕಾವ್ಯರಚನಾಗಾರುಡಿ ಗೊತ್ತಾದಂತೆ. ನನ್ನಲ್ಲಿರುವ ಸಮಾಜ ಪುಸ್ತಕಾಲಯ ಧಾರವಾಡ ಅವರು ೧೯೭೫ರಲ್ಲಿ ಪ್ರಕಟಿಸಿರುವ ಷಷ್ಠಮಾವೃತ್ತಿಯ 'ಸಖೀಗೀತ' ಕಾವ್ಯದ ೫೪ನೇ ಸಾಲಿನಲ್ಲಿ 'ಅಕ್ಕೆಕ್ಕಿ ಭೋರಂಗಿ ಆಡಿಸಲು ಬೇಕೆಷ್ಟು? ನೂಲಿನ ಎಳೆಯೊಂದು ಸಾಕಿಲ್ಲವೇ?' ಎಂಬಲ್ಲಿಯ 'ಭೋರಂಗಿ' ಪದದ ಅರ್ಥ ತಿಳಿಯಲು ಪ್ರಯತ್ನಪಟ್ಟೆ, ಭೋರಂಗಿ ಎಂದರೆ ಜೀರುಂಡೆ. ಅದನ್ನು ಆಡಿಸಿ ಹಿಂಸೆಪಡಿಸುವ ಭಾವ ಅಲ್ಲಿ ಕಾಣಲಿಲ್ಲ. ಅನಂತರದ ಸಾಲು 'ಕಣ್ಣನರಳಿಗೆ ಒಂದು ಕಿರಣವು ಸಾಕಿದೆ' ಎಂಬುದು ಜೀವನದ ಸಂತಸ ಕ್ಷಣ ಸೂಚಿಸುತ್ತದೆ. ಈ ಆಭಾಸ ವ್ಯಕ್ತವಾದುದರಿಂದ ಇದು ಸರಿಯೇ ಎಂದು ಪರಿಶೀಲಿಸಲು ವರಕವಿ ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ ೨೦೦೨ರಲ್ಲಿ ಪ್ರಕಟಿಸಿರುವ ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಂಪುಟ–೩– ಅನ್ನು ನೋಡಿದೆ. ಅದರ ಪುಟ ಸಂಖ್ಯೆ ೧೦೮ರಲ್ಲಿ 'ಸಖೀಗೀತ'ದ ಭಾಗ 'ಇಪ್ಪತ್ತಮೂರು'ವಿನಲ್ಲಿ 'ಅಕ್ಕೆಕ್ಕಿ ಭೋರಂಗಿ ಆಡಿಸಲು ಬೇಕೆಷ್ಟು?' ಎಂದು ಮುದ್ರಿತವಾಗಿರುವುದನ್ನು ಕಂಡೆ.

ಈ ನನ್ನ ಸಮಸ್ಯೆಯನ್ನು ನನ್ನ ಗುರುಗಳಾದ ಕೆ. ಅನಂತರಾಮು ಅವರಿಗೆ ತಿಳಿಸಿದೆ. ಅವರು 'ಇತ್ತೀಚಿನ ಬೇಂದ್ರೆ ಕಾವ್ಯದ ಮುದ್ರಣಗಳಲ್ಲಿ ಮುದ್ರರಾಕ್ಷಸನ ಹಾವಳಿ ಜಾಸ್ತಿಯಾಗಿದೆ. ನೀವು ಮೊದಲ ಅಥವಾ ಎರಡನೆ ಮುದ್ರಣ ನೋಡಿ. ಅನಂತರ ಈ ಪದ ಕುರಿತು ವಿಚಾರ ಮಾಡೋಣ' ಎಂದು ಹೇಳಿದರು. ಆ ಪ್ರತಿಗಳಿಗಾಗಿ ಹುಡುಕುತ್ತ ಪಿ.ವಿ. ನಾರಾಯಣ ಅವರನ್ನು ಕಂಡೆ. ಅವರು ತುಂಬಾ ಆಸಕ್ತಿವಹಿಸಿ ಮಾಧವನ್ ಸನ್ಸ್, ಬೆಂಗಳೂರು ಪ್ರಕಾಶಿಸಿರುವ ೧೯೪೬ರ ಎರಡನೆ ಮುದ್ರಣದ ಪ್ರತಿ ಒದಗಿಸಿದರು. ಅದರ ಪುಟ ಸಂಖ್ಯೆ ೮೭ರಲ್ಲಿ 'ಅಕ್ಕೆಕ್ಕಿ ಭೋರಂಗ ಆಡಿಸಲು ಬೇಕೆಷ್ಟು?' ಎಂದು ಮುದ್ರಿತವಾಗಿದೆ. 'ಭೋರಂಗಿ' ಅಲ್ಲ ಎಂದು ನನ್ನ ಸಂಶಯ ದೃಢಪಟ್ಟಿದ್ದಕ್ಕೆ ಸಂತೋಷವಾಯಿತು. 'ಭೋರಂಗ' ಅರ್ಥ ಹುಡುಕಲು ಹೊರಟೆ.

ಬೇಂದ್ರೆಯವರು 'ಭೋರಂಗ'ದ ಮೊದಲು 'ಅಕ್ಕೆಕ್ಕಿ' ಎಂಬ ಪದ ಬಳಸಿದ್ದಾರೆ. 'ಅಕ್ಕೆಕ್ಕಿ'ಯಲ್ಲಿಯ 'ಅಕ್ಕೆ'ಯ ಮೂಲರೂಪ ಅಣ್ಕೆ (ಅಣ್+ಕೆ). ಅಣ್ ಎಂದರೆ ಅಂಟು. ಅದು ಅಂಟನ್ನು ಸವರಿ ಮಾಡಿದ 'ಭೋರಂಗ'. ಹಾರುವಾಗ ಶಬ್ದ ಮಾಡುವ ಒಂದು ಬಗೆಯ ಗಾಳಿಪಟ.

ಈಗ ಬೇಂದ್ರೆ ಕಾವ್ಯ ಅರ್ಥವಾಯಿತು.

**'ಅಕ್ಕೆಕ್ಕಿ ಭೋರಂಗ ಆಡಿಸಲು ಬೇಕೆಷ್ಟು?<br>ನೂಲಿನ ಎಳೆಯೊಂದು ಸಾಕಿಲ್ಲವೇ?'**

ಸಶಬ್ದ ಗಾಳಿಪಟ ಆಡಿಸುವುದಕ್ಕೆ ಒಂದು ನೂಲಿನ ಎಳೆ ಸಾಕು. ಕಣ್ಣನ್ನು ಅರಳಿಸಲು ಕಣ್ಣಿನ ಮೇಲೆ ಪ್ರತಿಫಲಿಸುವ ಒಂದು ಕಿರಣ ಸಾಕು. ಹಾಗೆ ಜೀವದ ಆಳದಿಂದ ಬಂದ ಒಂದು ನುಡಿ ಜೀವನವನ್ನು ಸಾಕಿದೆ ಎನ್ನುತ್ತಾರೆ ಬೇಂದ್ರೆ.

❑❑

ನಂ. ೨೨, ಶ್ರೀ ಗುರುದತ್ತ ನಿಲಯ, ೧ನೇ ಕ್ರಾಸ್, ನೇತಾಜಿನಗರ, ಮತ್ತಿಕೆರೆ, ಬೆಂಗಳೂರು – ೫೬೦೦೫೪

# ಪು.ತಿ.ನ. ಅವರ 'ಮಲೆದೇಗುಲ' – ಒಂದು ಹೊಸ ಓದು

– ಗಂಗಾಂಬಿಕೆ ಎಸ್.

ಪು.ತಿ.ನ. ಅವರ 'ಮಲೆದೇಗುಲ'ದ ಬಗೆಗೆ ಇದುವರೆಗೂ ನಡೆದಿರುವ ಚಿಂತನೆಗಳ ಪ್ರಕಾರ ಇದೊಂದು ಮುಕ್ತಕಗಳ ಸಂಕಲನ. ಬಿಡಿಬಿಡಿಯಾದ ಭಾವಗಳನ್ನು ಸ್ಫುರಿಸುವ ಪದ್ಯಗಳ ಗುಚ್ಛ ಎಂದೇ ಪರಿಭಾವಿಸಲಾಗಿದೆ. ಆದರೆ ನನ್ನ ಓದಿಗೆ ನಿಲುಕಿದ ಹಾಗ ಮಲೆದೇಗುಲ ಇಡಿಯಾಗಿ ಒಂದು ಪದ್ಯ. ಬಹುತೇಕ ಪು.ತಿ.ನ. ಅವರ ಗೋಕುಲ ನಿರ್ಗಮನ, ಮಾಂದಳಿರು, ಹಣತೆ ಇತ್ಯಾದಿ ಹಲವು ಕವನಸಂಕಲನಗಳಲ್ಲಿನ ಭಾವನೆ, ಕಲ್ಪನೆ, ಕಾವ್ಯಚಿತ್ರಗಳು, ಕಾವ್ಯ ಪ್ರತಿಮೆಗಳು, ಕಾವ್ಯ ಭಾಷೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಗಮನಿಸಿದ ಅಂಶವೆಂದರೆ ಪು.ತಿ.ನ.ರವರು ಸದಾ ಆನಂದರಸ ಸಂಗಿಯಾದ ಕವಿಯೆಂದು. ಈ ಮೂಲ ಭಾವವೇ 'ಮಲೆದೇಗುಲ'ದಲ್ಲಿಯೂ ಸುಪ್ತವಾಗಿ, ನವಿರಾಗಿ ಹರಿದಿದೆ. ಇದರಲ್ಲಿ ಮೇಲುನೋಟಕ್ಕೆ ಮೋಕ್ಷಗಾಮಿಯಂತೆ ಆಧ್ಯಾತ್ಮಿಕ ಭಾವಪ್ರಾಚುರ್ಯ ಕಂಡುಬಂದರೂ, ಇದರ ಆಳವಿಸ್ತಾರಗಳಲ್ಲಿ ಬಾಳಿನ ಸಾರ್ಥಕತೆಯನ್ನು, ಸ್ವೀಕಾರಾರ್ಹತೆಯನ್ನು ಮಲೆದೇಗುಲ ಪ್ರಸ್ಫುರಿಸುತ್ತದೆ. ಹಾಗಾಗಿಯೇ ಇಲ್ಲಿಯ ಪ್ರತಿಪದ್ಯವು ಒಂದೊಂದು ಮೆಟ್ಟಿಲು. ಪ್ರತಿ ಮೆಟ್ಟಿಲ ಮೇಲೆಯೂ ದೃಢವಾಗಿ ನಿಂತು ನೋಡಿದಾಗ ಬದುಕಿನ ಆನಂದ ಅನುಭವವೇದ್ಯವಾಗುತ್ತದೆ. ಆದ್ದರಿಂದ ಇಡೀ ಮಲೆದೇಗುಲ ಕೃತಿ ಒಂದು ಆನಂದದ ಪಯಣ. ಮಲೆದೇಗುಲವೇ ಆನಂದದ ನೆಲೆವೀಡು.

ಈ 'ಮಲೆದೇಗುಲ'ವು ಪಡೆದಿರುವ ಸ್ವರೂಪ ಎಂತಹದು? ಈ ಪ್ರಶ್ನೆಗೆ ಉತ್ತರವೇ ಒಂದನೆಯ ಪದ್ಯ –

**ಸಕಲಸಂದೇಹಗಳು ಬಳಲಿ ಬಳಿಗೈತಂದು**
**ಬಿಡುವ ಬಯಸುವ ತವರೆ, ಮಲೆಯ ದೇಗುಲವೇ**

ಮಲೆದೇಗುಲವು ಮುನಿಹೃದಯಫಲ, ಭವದ ನಿಶ್ಚಲಕೇಂದ್ರ, ಪು.ತಿ.ನ. ಸೊಗಸಾಗಿ ಕಾವ್ಯ ಪ್ರತಿಮೆಗಳನ್ನು ಬಳಸುವುದರಲ್ಲಿ ನಿಷ್ಣಾತರು. ಹಾಗಾಗಿ ಮಲೆದೇಗುಲ ಎಂಬುದು ಸಹ ಒಂದು ಕಾವ್ಯ ಪ್ರತಿಮೆ. ಮಲೆದೇಗುಲ ಎಂದರೆ ಮೇಲುಕೋಟೆಯ ದೇವಾಲಯ ಎಂದು ವಿದ್ವಾಂಸರು ಹೇಳಿರುವರಾದರೂ ದೇವಾಲಯವೆನ್ನುವುದು ಸತ್ಯಸ್ಥಾನ, ಸದ್ಭಾವಕೇಂದ್ರ, ಪ್ರಶಾಂತಿಯನ್ನೀಯುವ ಶಾಂತಿಸ್ಥಾನ. ಶಾಂತಿ, ಸಮಾಧಾನ, ನೆಮ್ಮದಿ, ತೃಪ್ತಿಗಳು ಎಲ್ಲೋ ದೇವಾಲಯಗಳಿಲ್ಲ, ತೀರ್ಥಸ್ನಾನಾದಿಗಳಿಲ್ಲ. ಬದಲಿಗೆ ಅವುಗಳೆಲ್ಲ ನಮ್ಮ ಅಂತರಂಗ(ಮಲೆ)ದ ಗರ್ಭಗುಡಿಯಲ್ಲಿ (ದೇಗುಲ)ಯೇ ಇವೆ.

ಹಾಗಾಗಿ ಮಲೆದೇಗುಲವೆಂದರೆ ನಮ್ಮ ನಮ್ಮ ಮನೋವಲಯವೇ ವಿನಃ ಅನ್ಯವಲ್ಲ. ನಮ್ಮೆಲ್ಲ ಸಂದೇಹಗಳು, ಸಮಸ್ಯೆಗಳು, ಋತ–ಅನೃತಗಳು, ಋಜು–ಅನೃಜುಗಳು ಇಲ್ಲಿ ಸಾಂದ್ರವಾಗಿ ಕಡೆದುನಿಂತಿರುತ್ತವೆ. ನುಡಿತುಯ್ದು (ಮೌನವಾಗಿ) ಆತ್ಮಾವಲೋಕನ ಪ್ರಜ್ಞೆಯುಳ್ಳವನಾಗಿ ನಮ್ರನಾಗಿ ನಿಂತಾತನಿಗೆ ಮಾತು ದುರ್ಭಾವಗಳನ್ನು ಮೆಟ್ಟಿ ಸದ್ಭಾವಕೇಂದ್ರವು ದರ್ಶನವಾಗುತ್ತದೆ. ಅದನ್ನು ಕಾಣುವ ಬಗೆ ಹೇಗೆ ಎಂಬುದಕ್ಕೆ ೨ನೇ ಪದ್ಯ ಉತ್ತರ ನೀಡುತ್ತದೆ.

**ಅಲ್ಲಿರಲಿ ಇಲ್ಲಿರಲಿ ಎಲ್ಲಿರಲಿ ತಲೆಬಾಗಿ**
**ನಾ ತೆರೆದ ಮಲೆದೇಗುಲದ ಬಾಗಿಲದಿರು ನಿಂತ ತೆರವಾಗುತಿದೆ.**

ಬಾಳಿನ ಸಾರ್ಥಕತೆಯ ಹಾದಿಯಲ್ಲಿ ಹೊರಟಾತನಿಗೆ ವಿನಯ ಬೇಕು, ಕಾಣುವ ಜ್ಞಾನಚಕ್ಷು ಬೇಕು. ಅಂತಹವನನ್ನು ಅಂತರಂಗದ ದೈವವು ಅಲ್ಲೇ ಎಲ್ಲೋ ಒಂದೆಡೆ ಅವಿತು ಕುಳಿತಿದ್ದು ಮೆಲ್ಲನೆ ಸನ್ನೆಗೈದು ತಾನೇ 'ಇತ್ತ ಬಾ' ದಾರಿ ತೋರುತ್ತದೆ. ಈ ಸನ್ನೆಯ ಬೆನ್ನತ್ತಿ ಹೊರಟಾಗ ಎಷ್ಟು ಹುಡುಕಿದರೂ ಮೊದಮೊದಲು ಆ ಆನಂದಭಾವ ಕೈಗೆಟುಕದೆ ಸತಾಯಿಸಿಬಿಡುತ್ತದೆ ಎಂಬುದನ್ನು ೩ನೆಯ ಪದ್ಯ ವಿವರಿಸುತ್ತದೆ.

**"ಅರಸಿ ತೀರದೊಲಾಸೆ ಕೆರಳೆ ನಾ ನಿಂತಿರುವೆ**
**ಮಲೆದೇಗುಲದ ಹೊರಗೆ ತುಂಬನೇ ಬಯಸಿ.."**

"ಅಣು ಬೃಹತ್ತುಗಳಲ್ಲಿ ಕುಗ್ಗಿ ಹಿಗ್ಗದ ತುಂಬೆ ಸೃಷ್ಟಿಯೆಷ್ಟುಂಡರೂ ತೀರದಿಹ ಸೊದೆ"ಯನ್ನು ಹಿಂದಿನ ಅನೇಕ ಮುನಿಸಂತರು ತಮ್ಮದಾಗಿಸಿಕೊಂಡು ಆತ್ಮಾನಂದ ಪಡೆದುದನ್ನು ಪು.ತಿ.ನ. ನೆನೆದುಕೊಳ್ಳುತ್ತಾರೆ. ತಕ್ಷಣವೇ ಅವರು ಈ ಸತಾಯಿಸುವಿಕೆಯಿಂದ ಹೊರಬಂದು ತುಂಬು ನಂಬಿಕೆಯಿಂದ ಪೂರ್ಣ ಆನಂದದೆಡೆಗೆ ತುಡಿಯಲು

# ಕೆ. ೨೭೨, ಆರ್ಯಾಬಿಕ್ ಕಾಲೇಜ್ ಪೋಸ್ಟ್, ವಿನೋಬನಗರ, ಕಾಡುಗೊಂಡನಹಳ್ಳಿ, ಬೆಂಗಳೂರು – ೪೫

ಅನುವಾಗುತ್ತಾರೆ. ಈ ಆನಂದರ ರಸಸ್ಥಿತಿ ಹೇಗಿದೆ ಎಂಬುದನ್ನು ೪ನೆಯ ಪದ್ಯ ತಿಳಿಸುತ್ತದೆ.

"ಮನೆಯಲ್ಲ ಮಠವಲ್ಲ ರಾಜನರಮನೆಯಲ್ಲ
ಇದು ನಾಟ್ಯ ಮಂದಿರ ಛಾತ್ರ ಸತ್ರವಲ್ಲ.."

ಈ ಆನಂದದ ಹುಡುಕಾಟದಲ್ಲಿರುವಾತನಿಗೆ ಆನಂದದ ಸ್ಥಿತಿಯು ಕಲ್ಲಿನಂತಹ ಗಟ್ಟಿಭಾವವಲ್ಲ; ಮೃದುಸುಂದರ ಸವಿ ಭಾವ. ಇದು ಹುಡುಕಿಗೆ ಕಾಣುವುದಿಲ್ಲ; ದರ್ಶನ ಪ್ರಜ್ಞೆಯಿಂದ ಈ ಅಮೃತ ತತ್ತ್ವವನ್ನು ಅರಿಯಬಹುದು. ಹಾಗಾದರೆ ಇದಕ್ಕೆ ಏನು ಬೇಕು? ಎಂಬ ಪ್ರಶ್ನೆಗೆ ೫ನೆಯ ಪದ್ಯ ಉತ್ತರ ಕೊಡುತ್ತದೆ.

"ಕರಣವಲಯದಿ ನಿಂತು ವಿಷಯವೈವಾಹಿಕದಿ
ಪಡೆವ ಸೊಗಗಳನೊಲ್ಲದೆಯೆ ಮುಂದೆ ಸರಿದು.."

ಕರಣಗಳ ಮೊನೆ (ಇಂದ್ರಿಯ ನಿಗ್ರಹ) ಮನದ ಮೊನೆ (ಮನೋ ನಿಗ್ರಹ)ಗಳಿಂದ ಆನಂದ ಸಿದ್ಧಿಯಾಗುತ್ತದೆ. ತಿರುಕರ ಕಣಸಾದ (ಸತ್ಯಾನ್ವೇಷಕರ ದರ್ಶನ) ಆತ್ಮಾನಂದವು ಜಡದಿಂದ ಜೀವಕ್ಕೆ ಜೀವದಿಂದ ಆತ್ಮಕ್ಕೆ ಸತ್ವಪೂರ್ಣವಾಗಿರುತ್ತದೆ. ಇದನ್ನು ಪಡೆಯುವುದು ಸುಲಭ ಸಾಧ್ಯವಲ್ಲ. ಇದು ಕಷ್ಟಸಾಧ್ಯವಾದುದರಿಂದಲೇ ಒಂದು ಬಗೆಯ ಕಾಡುವಿಕೆ ಮೊದಲಾಗುತ್ತದೆಂಬುದನ್ನು ೬ನೆಯ ಪದ್ಯ ಸೂಚಿಸುತ್ತದೆ.

"ಹೋಗುವಾಸೆಯಿಲ್ಲ, ಕಾಲ್ತೆಗೆವಾಸೆಯಿಲ್ಲ ಸುಮ್ಮನೆ
ಮೇಲನಿಟ್ಟಿಸಿ ನಿಲ್ಲುವಾಸೆಯೆನಗೆ."

ಈ ಆನಂದದ ಪಯಣದಲ್ಲಿರುವ ವ್ಯಕ್ತಿಗೆ ಈಗಾಗಲೇ ತಿಳಿಸಿರುವಂತೆ ವಿನಯವಿದೆ, ಹುಡುಕಾಟವಿದೆ, ನಂಬಿಕೆಯಿದೆ ಆದರೆ ಏಕಾಗ್ರತೆಯೇ ಇಲ್ಲ. ಕೇವಲ ಮೇಲುನೋಟದ ಪ್ರಯತ್ನಕ್ಕೆ ಬೆಲೆಯಿಲ್ಲ. ವಿಶ್ವಾಸಪೂರ್ಣವಾದ ದೃಢನಿರ್ಧಾರ, ನಿಶ್ಚಲಮಯ ಏಕಾಗ್ರತೆ ಬೇಕೆಂಬುದನ್ನು "ಬೊಂಬೆಗೂಡಿದತೆನೆಯ ಗೋಪುರದ ಬಾಗಿಲಿನ ಕತ್ತಲೆಯೊಳಿಣಿಕಿಣಿಕಿ ಏರಲೆನ್ನ ಬಗೆ" (ಬಗೆ=ಮನಸ್ಸು) ಎಂಬ ಸಾಲು ಧ್ವನಿಸುತ್ತದೆ. ಅಷ್ಟೇ ಅಲ್ಲ, ಆತನಿಗೆ ಅಜ್ಞಾನವು ಆವರಿಸಿದೆ. ಆ ಅಜ್ಞಾನ ಹೇಗಿದೆ ಎಂಬುದನ್ನು ೭ನೆಯ ಪದ್ಯ ಬಿಂಬಿಸುತ್ತದೆ.

"ಕತ್ತಲದು ಕಗ್ಗತ್ತಲರಿವಾಳವರಿಯದೆಯೆ
ಮತಮತಗಳಟ್ಟಣೆಯ ಕಟ್ಟ ನಿಲುವಿರುಳು."

ಹಾಗಾದರೆ ಇಂತಹ ಗಾಢಾಜ್ಞಾನದಿಂದ ಪಾರಾಗಲು ಸಾಧ್ಯವಿಲ್ಲವೇ? ಇದೆ. ಬುದ್ಧಿವಂತಿಕೆಯಿಂದ ಸತ್ತ್ವ ಪೂರ್ಣತೆಯನ್ನು ಅರಿತಾಗ ತಾನಾಗಿಯೇ ಅಜ್ಞಾನ ಮರೆಯಾಗುತ್ತದೆ. ಅಜ್ಞಾನ ತೊಲಗುವಾಗ ಅನೇಕ ತೊಳಲುವಿಕೆ ಬಳಲುವಿಕೆಗಳು, ನಾನತ್ವಗಳು, ಸಂದೇಹಗಳು ಮನುಷ್ಯನನ್ನು ಇಕ್ಕಟ್ಟಿಗೆ ಸಿಲುಕಿಸುತ್ತವೆ. ಇವುಗಳ ಕೃತ್ರಿಮತೆಗಳು ಮನವನ್ನು ತೊಳಲಾಡಿಸುವ ಪರಿಯನ್ನು ೮ನೆಯ ಪದ್ಯ ವ್ಯಕ್ತಪಡಿಸುತ್ತದೆ.

"ಸಂದೆಗದ ಹರವಿನೊಳು ತತ್ವಗಳೆ ಹಿಮಫಲಕ
ಹಾಯುವಾಯಾಸದೊಳು ಮನಗಳಿಗೆ ನಿಲ್ಲೆ.."

ಈ ತೊಳಲಾಟಗಳಿಂದ, ಹಲವು ಸಂದೇಹಗಳಿಂದ ಹೊರಬರುವ ಆತ್ಮಶಕ್ತಿ ನಮ್ಮಲ್ಲಿಯೇ ಇದೆ. ನಮ್ಮನ್ನಾವರಿಸಿರುವ ಇರುಳನ್ನು ಬೆಳಗುವ ಶಕ್ತಿಯದು. ಆ ಶಕ್ತಿ ಹೇಗಿದೆ ಎಂಬುದನ್ನು ೯ನೆಯ ಪದ್ಯ ತಿಳಿಸುತ್ತದೆ.

"ಬೆರೆದರೂ ಬೇರೆಂದೆ ಸಮುದೂರದೊಳು ಸರಿವ
ವಿಷಯಾತ್ಮ ಸಂಗಮಿಸುವಾನಂತ್ಯವೇ.."

ಈ ಆತ್ಮಶಕ್ತಿಯ ಜೊತೆಗೆ ಬೇಕಿರುವುದು ಜೀವನ ಪ್ರೀತಿ. ಅದು ಮಡುಗೊಳ್ಳುವ ಸಮೃದ್ಧ ಪ್ರೀತಿ. ಪಂಚಭೂತಗಳಲ್ಲೂ ವ್ಯಾಪಿಸಿರುವ ನಲವು ಪಂಚಭೂತಗಳಿಂದಾದ ನಮ್ಮಲ್ಲಿಯೂ ಘನವಾಗಿರಬೇಕು. ಆಗ ಮಾತ್ರ ಸಂಭ್ರಮವು ಪ್ರಸರಣಗೊಂಡಿರುತ್ತದೆಂಬುದನ್ನು ೧೧ನೆಯ ಪದ್ಯ ಸೂಚಿಸುತ್ತದೆ.

"...ಬೆಳಕಿಲರು ಹಸಿರುಗಳ ಪಾತ್ರ ನಾನೀ ನಲವ
ನನ್ನ ಕರಣದಿ ಕೊಂಡು ನಲಿವ ನಲವು.."

ಇಂತಹ ಸುಖಸಂತೋಷಗಳನ್ನೀಯುವಂತೆ ಜನ ಗುಡಿಗಳಲ್ಲಿ ದೇವರಿಗೆ ಮಣಿಯುತ್ತಾರೆ. ಅವರ ದೇಹ ಬಾಗಿ ನಮಸ್ಕರಿಸುತ್ತಿರುತ್ತದೆಯಷ್ಟೆ; ಮನಸ್ಸಲ್ಲ. ಮೈ ಜೊತೆಗೆ ಮನವೂ ಬಾಗಿದರೆ ಏಳಿಗೆಯುಂಟು. ಮನುಷ್ಯ ಬೆಳೆದಂತೆಲ್ಲ ವಿನಯವೂ ಬೆಳೆಯಬೇಕು. ಈ ಉದಾತ್ತ ತತ್ತ್ವ ಮುಂದಿನ ಪದ್ಯದಲ್ಲಿ ಸೊಗಸಾಗಿ ವ್ಯಕ್ತವಾಗಿದೆ.

"ಹಣ್ಣಿನಿಂ ತರು ನಮ್ರ ಮೋಡ ಹನಿಯಿಂ ನಮ್ರ
ನೆರೆದ ಸಿರಿಯೊಳು ಪುಣ್ಯ ಪುರುಷ ನಮ್ರ.."

ಹೀಗೆ ಪ್ರತಿಯೊಂದು ಪದ್ಯದಲ್ಲಿ ಬಾಳಸಾರ್ಥಕತೆ, ಆನಂದಗ್ರಾಹ್ಯತೆಗೆ ಬೇಕಾದ ಒಂದೊಂದು ಚಿಂತನೆಯನ್ನು, ಒಂದೊಂದು ಅರ್ಹತೆಯನ್ನು, ಪು.ತಿ.ನ. ವಿವರಿಸಿದ್ದಾರೆ. ಇಲ್ಲಿ ಪ್ರಾತಿನಿಧಿಕವಾಗಿ ೧೧ ಪದ್ಯಗಳನ್ನಷ್ಟೇ ವಿವರಿಸಿದ್ದೇನೆ. ಮುಂದಿನ ೪೦ ಪದ್ಯಗಳಲ್ಲಿ ಕ್ರಮವಾಗಿ ಆತ್ಮಾರ್ಪಣಾ ಭಾವ, ವಾತ್ಸಲ್ಯ, ಮೈತ್ರಿ, ಹಿರಿತನಗಳಿಗೆ ಶರಣುಹೋಗುವ ಚಿತ್ತಸ್ಥಿತಿ, ಆತ್ಮರತಿಸ್ಥಿತಿ, ಶ್ರಮಪೂರ್ಣ ಅರಿವಿನ ಸಾಧನೆ, ಅರಿವಿನ ಸ್ವರೂಪ, ತರತಮಗಳಿಲ್ಲದಿಹ ಸೋಹಂಭಾವ, ಯೌಗಿಕ ನಿಲುವಿನ ರೀತಿ, ವಿಗ್ರಹಾರಾಧನೆಯ ಆಚೆಗಿರುವ ವಿಚಾರವಂತಿಕೆ, ದಿವ್ಯಾನುಭೂತಿ, ಪರಿಪೂರ್ಣ ಬದುಕಿನ ದೃಷ್ಟಿಕೋನ, ಸತ್ಯ-ಶಿವ-ಸುಂದರತೆಗಳ ಸ್ವರೂಪ, ಸಾತ್ತ್ವಿಕ ಭಾವ, ಕಷ್ಟವಾದುದನ್ನು ಇಷ್ಟಪಟ್ಟು ಸಾಧಿಸುವ ಛಲವಂತಿಕೆ, ನೈತಿಕ ಧೋರಣೆ, ನಿರ್ಮಲ ಮನಸ್ಸಿನ ಆಳಅಗಲಗಳು, ವ್ಯಾವಹಾರಿಕ ಬುದ್ಧಿಯ ಉಪೇಕ್ಷೆ, ಭ್ರಮಾಲೋಕದಿಂದ ಬಿಡುಗಡೆ ಹೊಂದುವ ಬಗೆ, ಆತ್ಮದ ಚೈತನ್ಯಮಯ ಸ್ವರೂಪ, ಅಂತಿಮವಾಗಿ ಆನಂದದ ನಿಲುಗಡೆಯೊಂದಿಗೆ ಪಡೆಯುವ ಜೀವನಸಾಕ್ಷಾತ್ಕಾರ ಈ ಅಂಶಗಳೂ ನವಿರಾಗಿ ಹೊರಹೊಮ್ಮಿವೆ.

ಬದುಕಿನಲ್ಲಿ ನಾವು ನಮ್ರತೆ, ಏಕಾಗ್ರತೆ, ವಿನಯ, ನಂಬಿಕೆ, ಛಲಗಾರಿಕೆ, ಆತ್ಮವಿಶ್ವಾಸ, ನಿರಹಂಕಾರ ಮೊದಲಾದ ಗುಣಗಳನ್ನು ಆವಾಹಿಸಿಕೊಂಡು ರೂಢಿಸಿಕೊಂಡು ಮುಂದೆ ಸಾಗಿದಾಗಲೇ ನಮ್ಮಲ್ಲೇ ಇರುವ ಆನಂದಸ್ವರೂಪಿಯಾದ ಭಗವತ್ ದರ್ಶನ ಸಿದ್ಧಿಸುತ್ತದೆ; ಜೀವನ ಸಾರ್ಥಕವಾಗುತ್ತದೆ ಎಂಬುದನ್ನು 'ಮಲೆದೇಗುಲ' ಪ್ರತಿಮೆಯ ಮೂಲಕ ಕವಿ ನಿಚ್ಚಳಗೊಳಿಸಿದ್ದಾರೆ. 'ಮಲೆದೇಗುಲ'ವೆಂಬುದು ಲೌಕಿಕ ಗುಡಿಯಲ್ಲ. ಮಾನವನ ಅಂತರಂಗದ ಚೈತನ್ಯ ಸ್ವರೂಪ. ಅದಕ್ಕೆ ಕವಿ ಹೇಳಿರುವುದು

"ಋತುಸತ್ಯ ಸಂಜನ್ಯ ರೂಪಸಂಕೇತಗಳ
ಸೂಕ್ತಿ ಸಂಗೀತದೀ ದೇಗುಲದ ರೀತಿ."

## 'ಮಲೆದೇಗುಲ'ದ ಛಂದೋವಿಚಾರ

ಈ ಕೃತಿಯಲ್ಲಿನ ಛಂದೋಶಿಲ್ಪದ ಬಗ್ಗೆ ಚರ್ಚಿಸಿರುವವರಲ್ಲಿ ಪ್ರೊ. ಅ.ರಾ. ಮಿತ್ರ ಮತ್ತು ಡಾ॥ ಕೆ.ಜಿ. ನಾರಾಯಣ ಪ್ರಸಾದ್ ಮುಖ್ಯರು. ಅವರು "ಐವತ್ತೊಂದು ಪದ್ಯಗಳು ದಶಪದಿಗಳು" ಎಂದು ಅಭಿಪ್ರಾಯಪಟ್ಟಿದ್ದಾರೆ. ೧೦ ಸಾಲುಗಳನ್ನು ಈ ಪದ್ಯಗಳು ಹೊಂದಿರುವುದರಿಂದ ಅವರು ಈ ಅಭಿಪ್ರಾಯಕ್ಕೆ ಬಂದಿರಬಹುದು.

'ಮಲೆದೇಗುಲ'ದ ಪ್ರತೀ ಪದ್ಯಗಳಲ್ಲೂ ೧೦ ಸಾಲುಗಳು ಮೇಲುನೋಟಕ್ಕೆ ಕಂಡುಬರುತ್ತವೆ ಅಷ್ಟೆ. ಮೊದಲ ನಾಲ್ಕು ಸಾಲುಗಳು ದೀರ್ಘವಾಗಿರುವುದರಿಂದ ಪು.ತಿ.ನ. ಅವರು ಮೊದಲನೆಯ ಸಾಲಿನ ಮುಂದುವರಿದ ಭಾಗವನ್ನು ನಂತರದ ಸಾಲಿನ ತುಸುಮಧ್ಯಭಾಗದಿಂದ ಮುಂದುವರಿಸಿದ್ದಾರೆ. ಕಾವ್ಯಲಯವು ೨ನೆಯ ಸಾಲುಗಳಲ್ಲಿಯೇ ಸರಿಯಾಗಿ ವಿರಮಿಸುವುದನ್ನು ಕಾವ್ಯಾಸಕ್ತರು ಬಹು ಜಾಗ್ರತೆಯಿಂದ ಲಕ್ಷಿಸಬಹುದು. ಆದ್ದರಿಂದ ಪ್ರತೀ ಪದ್ಯದಲ್ಲಿಯೂ ಇರುವುದು ೨ ಚೌಪದಿ + ೧ ದ್ವಿಪದಿ. ನಾನು ದ್ವಿಪದಿ ಎಂದು ಹೇಳಿರುವ ಕೊನೆಯ, ಸಾಲುಗಳು ಮೆಲೀನ ಚೌಪದಿಗೆ ಭಿನ್ನವಾದ ಕಾವ್ಯಲಯಗಾರಿಕೆಯನ್ನು, ಭಾವಗತಿಯನ್ನು ಒಳಗೊಂಡಿರುವುದು ವಿಶಷ.

## 'ಮಲೆದೇಗುಲ' ದ ಕಾವ್ಯಭಾಷೆ

ಬಹುತೇಕ 'ಮಲೆದೇಗುಲ'ವಾಗಲೀ ಪು.ತಿ.ನ. ಅವರ ಇನ್ನಿತರ ಕೃತಿಗಳಲ್ಲಾಗಲೀ ಕವಿ ಬಳಸಿರುವ ಕಾವ್ಯ ಭಾಷೆಯು ಅರ್ಥವಾಗದೆಂಬುದು ಕಾವ್ಯ ರಸಿಕರ ದಿವ್ಯ ಆರೋಪ. ಈ ಆರೋಪಗಳಲ್ಲಿ ಹುರುಳು ಇನಿತೂ ಇಲ್ಲ. ಪು.ತಿ.ನ. ಅವರ ಪ್ರತಿಯೊಂದು ಕಾವ್ಯದಲ್ಲಿಯೂ ಬಳಕೆಯಾಗಿರುವ ಪದಗಳನ್ನು ಸ್ವಲ್ಪ ಒಡೆದು ನೋಡಿದ ಕೂಡಲೇ ಸರಳವಾಗಿ ಅರ್ಥಸ್ಫುರಿಸುತ್ತದೆ.

ಉದಾ: ನಿಶ್ಚಲಕೇಂದ್ರ (=ಶಾಶ್ವತ ತಾಣ), ಬೆಲೆಗಳವಡದ (=ಜಂಜಾಟಗಳಿಗೆ ಸಿಲುಕದ), ನುಡಿತುಯ್ಯು (=ಮೌನ), ಮೈಗರೆ (=ಅಡಗಿದ), ತುಂಬು (=ಪೂರ್ಣತೆ), ಉಬ್ಬು (=ಸಂತಸ), ನಿಲುವ (=ಜಡ), ಮಣಿಗೆ (=ನಮಸ್ಕಾರ), ಕನಸಿಗ(=ಕನಸು ಕಾಣುವಾತ), ಸ್ವಾಂತ (=ಅಂತರಂಗ), ಮಾಗುಟ್ಟು (=ಮಹಾ ರಹಸ್ಯ), ಜನಪದ ಹೃಚ್ಛಕ್ತಿ (=ಸಮಷ್ಟಿಯ ಶಕ್ತಿ), ಜನ್ಯಲಯ (=ಹುಟ್ಟುಸಾವು) ಹೀಗೆ ಅನೇಕ ಪದಗಳನ್ನು ಶಬ್ದಶಃ ಅರ್ಥದಲ್ಲಿ ಗ್ರಹಿಸುವುದರ ಜೊತೆಗೆ ವಿಶಾಲಾರ್ಥದಲ್ಲಿ ಯೋಚಿಸಿದಾಗ ಅವುಗಳ ಅರ್ಥಸ್ವಾರಸ್ಯವೂ ವೇದ್ಯವಾಗುತ್ತದೆ.

ಕನ್ನಡ ಕಾವ್ಯ ಪ್ರಪಂಚಕ್ಕೆ ಅನೇಕ ಪದಗಳು ಪು.ತಿ.ನ. ಅವರಿಂದ ಕೊಡುಗೆಯಾಗಿ ಬಂದಿವೆ. 'ಇರುಳ ಮೆರುಗು' 'ಶಿಶಿರ ಸ್ವಾಪ', 'ಶರ್ವರೀ ಸುಷಮೆ', 'ಚಿತ್ತಮಧು' – ಇಂತಹ ಅನೇಕ ಪದಪುಂಜಗಳು ಪು.ತಿ.ನ.ರವರಿಂದ ಸೃಷ್ಟಿಯಾಗಿದೆ. ಅಂತೆಯೇ ಮಲೆದೇಗುಲದಲ್ಲಿಯೂ 'ಸೊಗವಳಲು', 'ನೆನವೊಸಗೆ', 'ವಿಷಯವೈವಾಹಿಕ', 'ಹಿಮಫಲಕ', ಆವರ್ತತೇಜ', 'ಜಲಹಾಸ', ತರ್ಕಧೀಥರಗರಳಶಮನ', 'ಮಲಿನಶೋಣಿತ'. 'ಮೈನಳಿಗೆ', 'ನೆಲೆಬಿಡುಗಡೆ', 'ಲಘಿಮೆಯೊಳು ಚಿತ್ತ', 'ಕುತುಕಿ,' 'ಭೂತಾತ್ಮಸಾಂಗತ್ಯ', 'ನಿರ್ವಾಹಕುಶಲ', 'ಚೆಂಗೆಂಡ', 'ಕಪ್ಪಿಡದ', 'ಸುಮನಸ್ಕರಾಲಯ', 'ಸನ್ನಿಪಾತ', 'ಸಂಸೃಷ್ಟದೇವಾಲಯ', 'ಸ್ಫೂರ್ಜದೂರ್ಜಸ್ವಿತೆ', 'ವಾಸ್ತವವ್ಯಾಘಾತ', 'ಸ್ವಾತ್ಮಾನುಕಂಪೆ', 'ರಕ್ತಿಯೊಸಗೆ', 'ಹೃತ್ಕುಹರ', 'ಸಂತಾತ್ಮವೈಭವ', 'ತಾರ್ಕ್ಯಪಕ್ಷ', 'ಆಸುರಕಾಸುರ' – ಎಂಬೀ ಪದಗಳು ವಿನೂತನ ಪ್ರಯೋಗಗಳಾಗಿವೆ. ಇವುಗಳಲ್ಲಿಯೇ ಮನಸ್ಸು ನೆಟ್ಟು ಅಂಗಸಾಧನೆ ಮಾಡದ ಹೊರತು ಶಬ್ದಸೌಂದರ್ಯವಾಗಲೀ, ಅರ್ಥಸ್ವಾರಸ್ಯವಾಗಲೀ ತಿಳಿಯುವುದಿಲ್ಲ.

ಪು.ತಿ.ನ. ಅವರಿಗೆ ಕೆಲವು ಪದಗಳ ಮೇಲೆ ತುಂಬೊಲುಮೆ. ಅಂತಹ ಪದಗಳಲ್ಲಿ ನಲವು, ಬಿಡುವು, ಇರವು, ತುಂಬು, ತಡಕು, ಹದ, ಮಣಿಗೆ, ಮಾನಸ, ತಡಕು, ಅಲೆ, ಬಾಗು– ಇವು ಸೇರಿವೆ. ಮಲೆದೇಗುಲದಲ್ಲಿ ಈ ಪದಗಳನ್ನು ಎಷ್ಟೋ ಬಾರಿ ಕವಿ ಬಳಸಿದ್ದರೂ ಕಾವ್ಯ ಸೌಂದರ್ಯಕ್ಕೆ, ಕಾವ್ಯಾಸ್ವಾದನಕ್ಕೆ ಧಕ್ಕೆಯಾಗಿಲ್ಲ. ಎಷ್ಟು ನಾಜೂಕಾಗಿ, ನವೀನವಾಗಿ ಪದಪ್ರಯೋಗ ಮಾಡಬಹುದು ಎಂಬುದಕ್ಕೆ ಪು.ತಿ.ನ. ಅತ್ಯುತ್ತಮ ಮಾದರಿಗಳನ್ನು ಒದಗಿಸಿದ್ದಾರೆ.

'ಬಗೆಬಗೆ', 'ಇಣುಕಿಣುಕಿ', 'ಕೆರೆಕೆರೆ', 'ಮತಮತ', 'ಜಡಜಡ' ಇತ್ಯಾದಿ ದ್ವಿರುಕ್ತಿಪ್ರಯೋಗಗಳು ಭಾವಪ್ರವಾಹ ಭೋರ್ಗರೆತವನ್ನು ಹೆಚ್ಚಿಸುತ್ತವೇ ವಿನಃ ಎಲ್ಲಿಯೂ ಹದ್ದು ಮೀರಿಲ್ಲ. ಕಾವ್ಯಚಿತ್ರಗಳನ್ನು ಸೊಗಸಾಗಿ ಕಟ್ಟಿ ನಿಲ್ಲಿಸುವಲ್ಲಿಯೂ ಈ ದ್ವಿರುಕ್ತಿಗಳು ನೆರವಾಗಿವೆ.

## ಮಲೆದೇಗುಲ'ದ ಕಾವ್ಯಚಿತ್ರಗಳು

ಆನಂದಾನುಭೂತಿಯುಳ್ಳ ಈ ಕೃತಿಯಲ್ಲಿ ಅದೆಂತಹ ರಮ್ಯಮಯ ಕಾವ್ಯಚಿತ್ರಗಳಿವೆಯೆಂದರೆ ಒಂದು ಕ್ಷಣ ನಾವು ಜಗಮರೆಯುವುದಂತು ನಿಜ!!

"ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು
ಇರುಳಿನೊಳು ಮಿರುತಾರಗೆಯ ಮಾಲೆಗೊಳುತ
ಮೋಡ ಮುತ್ತುವ ಜಡೆಗೆ ಜಾಹ್ನವಿಯೆ ಜಾರಿಬರೆ
ಪಕ್ಕೆಳವರೆಸಕ್ಕ ಕಣ್ ಸವಿಯ ಕೊಳುತ"

"ತುದಿಗಾಲಿನೊಳು ನಿಂತು ನೋಡುತಿದೆ ಚೆಲುವಿಲ್ಲಿ
ಹುರುಳದೇನಿಹುದೆಂದು ಬೇಲಿಯಾಚೆ
ತುದಿಗಾಲಿನೊಳೆ ತಿಳಿವು ನೆಗೆದು ಕುಸಿದೇಳುತಿದೆ
ಕೌತುಕವದೇನೆಂದು ತಡಿಕೆಯೀಚೆ"

ಗೋಪುರವು ನಿಂತಿರುವ ಪರಿ ಹೇಗಿದೆಯೆಂದರೆ, ಅದು ಇಡೀ ಬಾನನ್ನೇ ಎತ್ತಿ (ಬಾನಿಗೆ ಆಧಾರವಾಗಿರುವಂತೆ) ನಿಂತಂತಿದೆ. ಅದಕ್ಕೆ ಹೊಳೆಯುವ ತಾರೆಗಳೇ ಮಾಲೆಯಾಗಿದೆ. ಮೋಡಗಳೆಲ್ಲ ಮುತ್ತುವ ಸಂದರ್ಭದಲ್ಲಿ (ಘನೀಕರಣವಾಗುವಾಗ) ಮಳೆಯ ಹನಿಯೋಪಾದಿಯಲ್ಲಿ ದೇವಗಂಗೆಯೇ ಗೋಪುರದೆಡೆಗೆ ಜಾರಿಬರುತ್ತಿದ್ದಾಳೆ. ಕವಿದ ಮೋಡದ ಸನಿಹದಲ್ಲಿಯೇ ಎಳವೆರೆ (=ಬಾಲಚಂದ್ರ) ಹೊರಬಂದು ಸವಿನೋಟವನ್ನು ಹೆಚ್ಚಿಸಿದ್ದಾನೆ. ಎಂತಹ ಅದ್ಭುತ ಚಿತ್ರಣ!

ಮಧ್ಯದಲ್ಲಿ ಒಂದು ತೆರೆಯಿದೆ. ಈ ಕಡೆಗೆ ಇರುವ ಸೌಂದರ್ಯವು ಆ ಬದಿಗೆ ಏನಿದೆ ಎಂದು ಕೊರಳೇರಿಸಿ ನಿಂತು ನೋಡುತಿದೆಯಂತೆ. ಆ ಬದಿಗೆ ಇರುವ ಸತ್ಯವು ತುದಿಗಾಲ ಮೇಲೆ ನಿಂತು ನೆಗೆಯುತ್ತ ಕುಸಿಯುತ್ತ ಈ ಬದಿಗೆ ಏನಿದೆ ಎಂದು ನೋಡುತ್ತಿದೆಯಂತೆ. ಸತ್ಯ-ಸೌಂದರ್ಯ ತತ್ತ್ವಗಳ ವಿವೇಚನೆ ಮಾಡುವಾಗ ಕವಿ ನೀಡಿದ ಈ ಕಾವ್ಯಚಿತ್ರಕ್ಕೆ ಮತ್ತೊಂದು ಸರಿಸಾಟಿಯಿಲ್ಲವೆನಿಸುತ್ತದೆ.

ಈ ಬಗೆಯ ಹಲವು ಕಾವ್ಯಚಿತ್ರಗಳಿಂದ ಮಲೆದೇಗುಲ ಕೃತಿಯು ತನ್ನ ಅನನ್ಯತೆಯನ್ನು ಉಳಿಸಿಕೊಂಡಿದೆ; ಸಹೃದಯರಿಗೆ ಆಹ್ಲಾದವೊದಗಿಸುತ್ತದೆ.

## 'ಮಲೆದೇಗುಲ'ದ ಕಾವ್ಯಲಯ

ಈಗಾಗಲೇ ಡಾ॥ ಡಿ.ಆರ್. ನಾಗರಾಜ್‌ರವರು ತಮ್ಮ 'ಶಕ್ತಿಶಾರದೆಯ ಮೇಳ' ಕೃತಿಯಲ್ಲಿ 'ಮಲೆದೇಗುಲ'ದ ಕಾವ್ಯಲಯದ ಬಗ್ಗೆ, ವಿಚಾರಪೂರ್ಣವಾದ ಮಾತನ್ನು ಹೇಳಿದ್ದಾರೆ: "ಲಯವೆಂಬುದು ಲೋಕಗ್ರಹಿಕೆ ಎಂದು ನನಗನ್ನಿಸಿದೆ. ಈ ದೃಷ್ಟಿಯಿಂದ 'ಮಲೆದೇಗುಲ'ದ ಲಯಗಳಲ್ಲಿ ಒಳವೈವಿಧ್ಯವಿಲ್ಲ. ಈಗಿರುವ ಸ್ಥಿತಿಯಲ್ಲಿ ಆ ಕೃತಿಯ ಏಕರೂಪೀ ಲಯದ ಸೊಬಗನ್ನು ಅಪಾರವಾಗಿ ಮೆಚ್ಚಿಕೊಂಡೂ ಈ ಮಾತು ಹೇಳುತ್ತಿದ್ದೇನೆ. ಇಲ್ಲಿಯ ಲಯಗಳ ಮಿತಿ ಅವುಗಳ ಹಿಂದಿನ 'ಲೋಕಗ್ರಹಿಕೆ'ಯ ಮಿತಿಗಳನ್ನು ಅಥವಾ ಅವು ಒಳಗೊಳ್ಳುವಷ್ಟು ಮಾತ್ರವನ್ನು ಸೂಚಿಸುತ್ತವೆ." ಹೌದು. ಇಲ್ಲಿರುವ ಲಯ ಕೃತಿಯ ತುಂಬ ಏಕರೂಪಿಯಾಗಿದೆಯೆಂಬುದೇನೋ ನಿಜ. ಈ ಏಕರೂಪತೆಯು ಕಾವ್ಯದ ಸೊಬಗನ್ನು ಹೆಚ್ಚಿಸಿ, ಕೃತಿಯು ಕಾವ್ಯಾಸ್ವಾದಕರ ಜ್ಞಾಪಕಶಾಲೆಯಲ್ಲಿ ನೆಲೆಯೂರಲು ಸಹಾಯಕವಾಗಿದೆ ಎಂದು ನನಗೆ ತೋರುತ್ತದೆ.

ಪು.ತಿ.ನ. ಅವರ 'ಮಲೆದೇಗುಲ' ಕಾವ್ಯವೂ ವಿಸ್ತರಿಸಿದಂತೆಲ್ಲ ತೆರೆದುಕೊಳ್ಳುವ ಸುಂದರ ಕಾವ್ಯಲೋಕ. ಇದರಲ್ಲಿ ಅರ್ಥವಂತಿಕೆ, ಪೂರ್ಣತೆಯ ಬದುಕಿನ ರೀತಿ, ಅಪೂರ್ವ ಕಾವ್ಯಚಿತ್ರಗಳು ಸೊಗಸಾಗಿ ನಿರೂಪಗೊಂಡಿವೆ. ದಿವ್ಯಾನುಭೂತಿಯ ಭವ್ಯಕೃತಿಯೆಂಬುದರಲ್ಲಿ ಸಂದೇಹವಿಲ್ಲ. ರಸಾಸ್ವಾದನೆಯನ್ನೇ ಮುಖ್ಯ ಗುರಿಯಾಗಿರಿಸಿಕೊಂಡ ಪ್ರತಿಯೊಬ್ಬ ಸಹೃದಯನಿಗೂ ಆಹ್ಲಾದವೊದಗಿಸಬಲ್ಲ ಕೃತಿಯಿದು. ಶಬ್ದ ಪ್ರಪಂಚದ ಕೀಲಿಯನ್ನು ನಿಧಾನವಾಗಿ ತೆಗೆದರೆ ಈ ಕೃತಿಯ ಅದ್ಭುತ ಕಾವ್ಯ ಪ್ರಪಂಚ ಬಗೆಗಣ್ಣಿಗೆ ಗೋಚರಿಸುವುದು.

* ಈ ಕೃತಿಯನ್ನು ಓದುವ ಸಂದರ್ಭದಲ್ಲಿ ನೆರವಾದ ಶ್ರೀಸುಂಕಂ ಗೋವರ್ಧನ್‌ರವರಿಗೆ ನಾನು ಕೃತಜ್ಞಳು.

❑❑

# ಭಾಷೆ, ಸಾಹಿತ್ಯ ಮತ್ತು ಪಾಂಡಿತ್ಯ

– ಎಮ್. ರಾಮಚಂದ್ರ

ಬ್ರಹ್ಮಾಂಡದಲ್ಲಿ ಮೊದಲು ಭೂಲೋಕದ ಸೃಷಿ. ಆಮೇಲೆ ಅದರಲ್ಲಿ ಕೋಟ್ಯಂತರ ಜೀವಸೃಷಿ; ಹಾಗೆ ಆದ ಸೃಷ್ಟಿಯಲ್ಲಿ ಮಾನವ ಜೀವಿ ಕಾಣಿಸಿಕೊಂಡದ್ದೂ ಅದರ ವಿಕಾಸವಾದದ್ದೂ ಎಷ್ಟೋ ವರ್ಷಗಳ ಅನಂತರ ಎಂಬುದು ವೈಜ್ಞಾನಿಕ ಶೋಧನೆ ಮತ್ತು ಬಹುಜನಸಮ್ಮತವಾದ ಅಭಿಪ್ರಾಯ. ಅಂತಹ ಮನುಷ್ಯಲೋಕದಲ್ಲಿ ಕಾಲಾಂತರದಲ್ಲಿ ಅಭಿಪ್ರಾಯ ಪ್ರಕಟನೆಯ ಮಾಧ್ಯಮವೆನಿಸಿರುವ ಭಾಷೆಯ ಉಗಮವಾಯಿತು. ಪ್ರಾರಂಭದಲ್ಲಿ ಭಾಷೆ ಸಂಜ್ಞಾಮಾತ್ರವಾಗಿತ್ತು, ಕ್ರಮೇಣ ಅದಕ್ಕೆ ಮತ್ತು ಚಾಕ್ಷುಷರೂಪ ಸಿದ್ಧಿಯಿಂದ ಅದು ವಿಕಾಸವಾಯಿತು ಎಂಬುದೂ ಸರ್ವಜನಸಮ್ಮತವಾದ ವಿಚಾರ. ಭಾಷೆಗೆ ಶ್ರಾವಣ ಎಂದರೆ ಧ್ವನಿರೂಪ ಸಿದ್ಧಿಸಿದಾಗ ಮನುಷ್ಯ ಭಾಷೆಯ ಮುಖೇನ ನಿತ್ಯ ವ್ಯವಹಾರ ಮಾಡುವುದರೊಂದಿಗೆ ತನ್ನ ಸುಖಸಂತೋಷಗಳನ್ನೋ ದುಃಖದುರಿತಗಳನ್ನೋ ಜೀವನದ ಅನುಭವಗಳನ್ನೋ ವಸ್ತುವಿಷಯಗಳನ್ನೋ ಇತರರೊಂದಿಗೆ ಹಂಚಿಕೊಳ್ಳುವ ಒಂದು ಸಾಧನವನ್ನು ಕಂಡುಕೊಂಡ – ಅದೇ ಕಾವ್ಯ, ಸಾಹಿತ್ಯ ಅಥವಾ ವಾಙ್ಮಯ. ಮೊದಲು ಅದು ಮೌಖಿಕವಾಗಿತ್ತು, ಲಿಪಿಯ ಆವಿಷ್ಕಾರದಿಂದ ಭಾಷೆ ಅಕ್ಷರರೂಪವನ್ನು ಹೊಂದಿತು. ಅದರಿಂದಾಗಿ ವಾಙ್ಮಯಕ್ಕೆ ಲಿಖಿತರೂಪ ಪ್ರಾಪ್ತಿಯಾಯಿತು; ಲಿಖಿತ ವಾಙ್ಮಯವು ಸಾರ್ವತ್ರಿಕವೂ ಸಾರ್ವಕಾಲಿಕವೂ ಎನಿಸಿತು. ಭಾಷೆ ಮೌಖಿಕವಾಗಿರಲಿ ಇಲ್ಲವೆ ಲಿಖಿತವಾಗಿರಲಿ ಅದರಲ್ಲಿ ಒಂದು ನಿರ್ದುಷ್ಟತೆ, ಖಚಿತತೆ ಮತ್ತು ಏಕರೂಪತೆ ಇರಬೇಕು – ಅದರಿಂದಾಗಿ ಭಾಷೆ ಸಾರ್ವತ್ರಿಕವೆನಿಸುತ್ತದೆ. ಹಾಗೆಯೇ ಭಾಷಾಮುಖೇನ ಪ್ರಕಟವಾಗುವ ಕಾವ್ಯ ಅಥವಾ ಸಾಹಿತ್ಯವು ಸರ್ವಜನ ಸ್ವೀಕರಣೀಯವೂ ಸ್ಮರಣೀಯವೂ ಎನಿಸಬೇಕಾದರೆ ಭಾಷೆ ಶುದ್ಧವಾಗಿರಬೇಕು; ಆ ಶುದ್ಧತೆ ಪದ್ಯ ಮತ್ತು ಗದ್ಯ ಎರಡರಲ್ಲೂ ಅಪೇಕ್ಷಣೀಯ; ಭಾಷೆಯ ಸೌಂದರ್ಯವನ್ನು ಅಥವಾ ಪರಿಣಾಮಕಾರಿತೆಯನ್ನು ಅತಿಶಯಗೊಳಿಸುವುದಕ್ಕೆ ತಕ್ಕುದಾದ ಬಣ್ಣನೆ–ಹೋಲಿಕೆಗಳಿರಬೇಕು; ಸಾಹಿತ್ಯವು ಪದ್ಯರೂಪದಲ್ಲಿದ್ದರೆ ಅದಕ್ಕೆ ನಿಯತವಾದ ಪಾದನಿರ್ಬಂಧ, ಪದಪುಂಜಗಳಿರುವುದೂ ಉಚಿತವೆಂಬುದು ನಮ್ಮ ಪೂರ್ವಜರ ಅಭಿಮತವಾಗಿತ್ತು. ಅದರಂತೆ ಅವರು ವಿಶಿಷ್ಟ ಪರಿಭಾಷೆಗಳ ಕೆಲವು ನಿಯಮಗಳನ್ನು ನಿರೂಪಿಸಿದರು. ಅದನ್ನೇ ನಾವು ಭಾಷಾಶಾಸ್ತ್ರ, ಛಂದಶ್ಶಾಸ್ತ್ರ, ಅಲಂಕಾರಶಾಸ್ತ್ರ ಎಂದು ಕರೆಯುತ್ತೇವೆ. ಆ ಶಾಸ್ತ್ರಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿ, ಅವುಗಳಲ್ಲಿ ಪರಿಣತರಾಗುವವರನ್ನು ರೂಢಿಯಲ್ಲಿ 'ಪಂಡಿತ' ಎಂಬ ಪದವಿಶೇಷದಿಂದ ನಿರ್ದೇಶಿಸುತ್ತೇವೆ. ನಮ್ಮ ಕನ್ನಡ ವಾಙ್ಮಯಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಇಂತಹ ಅನೇಕ 'ಪಂಡಿತ'ರು ಇದ್ದುದರಿಂದಲೂ ಇರುವುದರಿಂದಲೂ 'ಪಂಡಿತಪರಂಪರೆ'ಯೆಂಬ ಪದಪ್ರಯೋಗವೂ ಪ್ರಚುರವಾಯಿತು. ಒಂದು ಕಡೆಯಲ್ಲಿ ಪ್ರತಿಭಾಸಂಪನ್ನರೂ ಸರ್ಜನ(ಸೃಜನ)ಗಳನ್ನು ಒಳಗೊಂಡ ಸಮರ್ಥರೂ ಆಗಿರುವ ಕವಿ–ಸಾಹಿತಿಗಳು, ಮತ್ತೊಂದು ಕಡೆ ಕಾವ್ಯಸಾಹಿತ್ಯಗಳ ವ್ಯಾಕರಣದೋಷ, ಛಂದೋಭಂಗಗಳನ್ನೂ, ರಸನಿರ್ಭರ–ರಸೇತರ ಭಾಗಗಳನ್ನೂ ಗುರುತಿಸಿ ಎತ್ತಿ ತೋರುವ, ಮೆಚ್ಚಿ ಕೊಂಡಾಡುವ, ವ್ಯಾಖ್ಯಾತೃಗಳು ಅಥವಾ ಟೀಕಾಕಾರರು. ವರ್ತಮಾನದಲ್ಲಿ ಇಂತಹವರಿಗೆ ಸಾಮಾನ್ಯವಾಗಿ ವಿಮರ್ಶಕರೊಂದಿಗೆ ಸಹಪಂಕ್ತಿ. ಭಾಷ್ಯಕಾರರಾಗಲೀ, ಟೀಕಾಕಾರರೇ ಇರಲಿ, ಅವರೆಲ್ಲ 'ಪಂಡಿತ'ರೇ ಆಗಿರುತ್ತಿದ್ದರು. 'ಪಂಡಿತ' ಪದದ ನಿಜಾರ್ಥ ಮತ್ತು ಪಾಂಡಿತ್ಯದ ಆವಶ್ಯಕತೆಗಳನ್ನು ಕುರಿತು ಕೆಲವು ಮಾತುಗಳನ್ನು ಆಡುವುದು ಈ ಲೇಖನದ ಉದ್ದೇಶ.

'ಪಂಡಿತ' ಎಂಬುದು ಸದರ್ಥವನ್ನು ಒಳಗೊಂಡ ಗಂಭಿರವಾದ ಶಬ್ದ. ಪಂಡಿತ ಎಂಬುದು ನಿಷ್ಪನ್ನ ಪದ. 'ಪಡಿ' ಎಂಬ ಗತ್ಯರ್ಥ ಧಾತುವಿನಿಂದ ಸಾಧಿತವಾದ ಪದ 'ಪಂಡಿತ'. ಇಲ್ಲಿ 'ಗತಿ' ಎಂಬುದಕ್ಕೆ ಜ್ಞಾನವೆಂಬ ಅರ್ಥ. ವಿ.ಎಸ್ ಆಪ್ಟೆಯವರ ಸಂಸ್ಕೃತ–ಇಂಗ್ಲಿಷ್ ನಿಘಂಟುವಿನಲ್ಲಿ 'ಪಂಡಿತ' ಪದಕ್ಕೆ learned, wise, shrewd, clever, skilled in, proficient, skillful; a scholar ... ಇವೇ ಮೊದಲಾದ ಅರ್ಥಗಳನ್ನು ಕೊಟ್ಟಿದೆ. ಇವುಗಳನ್ನು ಸುಜ್ಞಾನಿ, ಬುದ್ಧಿವಂತ, ಚತುರ, ನಿಪುಣ, ಪರಿಣತ, ವಿದ್ವಾಂಸ ಎಂದು ಮೊದಲಾಗಿ ಅನುವಾದಿಸಬಹುದು. ಹಾಗೆಯೇ 'ಪಂಡಿತ' ಪದಕ್ಕೆ ಕವಿ, ಜ್ಞಾನಿ, ಚಿಂತಕ ಮೊದಲಾದ ಅರ್ಥಗಳೂ ಇವೆಯೆಂಬುದಕ್ಕೆ ಭಗವದ್ಗೀತೆಯ ಈ ಉಕ್ತಿಗಳನ್ನು ಉದಾಹರಿಸಬಹುದು:

೧೨ ನೇ ಕ್ರಾಸ್, ತೆಳ್ಳಾರ್ ರಸ್ತೆ, ಕಾರ್ಕಳ – ೫೭೪೧೦೪, ಉಡುಪಿ ಜಿಲ್ಲೆ

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾ।**

**(ಅಧ್ಯಾಯ ೪, ಶ್ಲೋಕ ೧೬)**

ಇದರ ತಾತ್ಪರ್ಯ – 'ಕರ್ಮವು ಯಾವುದು, ಅಕರ್ಮವು ಯಾವುದು ಎಂಬುದನ್ನು ನಿರ್ಣಯಿಸುವುದರಲ್ಲಿ ಕವಿಗಳು (ಎಂದರೆ ಬುದ್ಧಿವಂತರು ಅರ್ಥಾತ್ ಪಂಡಿತರು) ಸಹ ಸಂಶಯಪೀಡಿತ(ಮೋಹಿತ)ರಾಗುತ್ತಾರೆ.'

**ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ।**
**ಶುನಿಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ॥**

**(ಅಧ್ಯಾಯ ೫, ಶ್ಲೋಕ ೧೮)**

(ಜ್ಞಾನಿಗಳಾದವರು ವಿದ್ಯಾವಿನಯಯುಕ್ತನಾದ ಬ್ರಾಹ್ಮಣನನ್ನು ಹೇಗೋ ಹಾಗೆಯೇ ಅಶಿಕ್ಷಿತನಾದ ಒಬ್ಬ ಚಂಡಾಲನನ್ನು, ಮೂಢಪಶುಗಳಾದ ಹಸು, ಆನೆ, ನಾಯಿಗಳನ್ನು ಸಹ ಸಮದೃಷ್ಟಿಯಿಂದ ನೋಡುತ್ತಾರೆ.) ಮೇಲಿನ ಶ್ಲೋಕದಲ್ಲಿ 'ಪಂಡಿತಾಃ' ಎಂಬುದಕ್ಕೆ ಜ್ಞಾನಿಯೆಂದೇ ಅರ್ಥ. 'ಪಂಡಿತ' ಎಂಬ ಪದವನ್ನು ಕವಿ, ಜ್ಞಾನಿ ಮುಂತಾದ ಅರ್ಥಗಳಲ್ಲಿ ಪ್ರಯೋಗಿಸಿರುವ ಇನ್ನೂ ಎಷ್ಟೋ ಸಂದರ್ಭಗಳನ್ನು ನಮ್ಮ ವಾಙ್ಮಯದಲ್ಲಿ ಕಾಣಬಹುದು. 'ಪಂಡಿತಸಭೆ' ಅಥವಾ 'ಪಂಡಿತಮಂಡಲಿ'ಯೆಂದರೆ ವಿದ್ವದ್ಗೋಷ್ಠಿ, ವಿದ್ವತ್‌ಸಮೂಹವೆಂದು ಅರ್ಥ. ಪೂರ್ವಕಾಲದಲ್ಲಿ ಒಬ್ಬ ಕವಿ ತನ್ನ ನವಕೃತಿಯನ್ನು ಪಂಡಿತರ ಸಭೆಯಲ್ಲಿ ಓದಿ ಅವರ ಶ್ಲಾಘನೆ, ಸಮ್ಮತಿಗಳನ್ನು ಪಡೆದಾಗಲೇ ತನ್ನ ಶ್ರಮ ಸಾರ್ಥಕ ಎಂದು ಭಾವಿಸುತ್ತಿದ್ದ. ಮಹಾಕವಿ ಕಾಳಿದಾಸ ತನ್ನ 'ಶಾಕುಂತಲ' ಆರಂಭದಲ್ಲಿ ಎತ್ತಿರುವ ಉದ್ಗಾರ ಲೋಕಪ್ರಸಿದ್ಧ:

**ಆ ಪರಿತೋಷಾಂ ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಮ್।**

'ವಿದ್ವಾಂಸರು ಸಂತೋಷದಿಂದ ಸ್ವೀಕರಿಸುವವರೆಗೆ ಈ ಕೃತಿ ಪ್ರಯೋಗಯೋಗ್ಯ ಎನ್ನಲಾರೆ' ಎಂಬುದು ಕಾಳಿದಾಸೋಕ್ತಿಯ ಸಾರ. ಆ ಕಾಲದ ಕಾಳಿದಾಸ ಹೇಳಿರುವ 'ವಿದುಷ' ರೆಂದರೆ ಈ ಕಾಲದ ವಿಮರ್ಶಕ ಸಹೃದಯರು ಎಂಬುದಾಗಿ ಅರ್ಥಮಾಡಿಕೊಳ್ಳಬಹುದು. ಸಂಸ್ಕೃತದ ಇನ್ನೊಂದು ಶ್ಲೋಕ ಹೀಗಿದೆ:

**ಬೋದ್ಧಾರೋ ಮತ್ಸರಗ್ರಸ್ತಾಃ ಪ್ರಭವಸ್ಮಯದೂಷಿತಾಃ॥**

**ಅಬೋಧಾಪಹತಾನ್ಯೇಶ್ಚನೇ ಜೀರ್ಣಮಂಗೇ ಸುಭಾಷಿತಮ್॥**

ಇದು ಶ್ಲೋಕ ಮಾತ್ರವಲ್ಲ, ಕವಿಯೊಬ್ಬನ ಶೋಕವೂ ಹೌದು; ಶ್ಲೋಕದಲ್ಲಿರುವ 'ಬೋದ್ಧಾರೋ' ಎಂದರೆ ಬುಧರು ಅರ್ಥಾತ್ ಪಂಡಿತರು ಎಂಬುದು ಅರ್ಥ; ರಸಿಕಜನ ಎಂಬುದು ತಾತ್ಪರ್ಯ. 'ವಿದ್ವಜ್ಜನರಿಗೆ ಮತ್ಸರ, ಪ್ರಭುಗಳಿಗೆ ವಿಸ್ಮೃತಿ, ಮಿಕ್ಕುಳಿದ ಜನಸಮುದಾಯಕ್ಕೆ (ಕಾವ್ಯರಸಗ್ರಹಣಕ್ಕೆ) ಬುದ್ಧಿ ಸಾಲದು; ಹೀಗಾಗಿ (ನಾನು ಬರೆಯಬೇಕೆಂದಿದ್ದ) ಕಾವ್ಯರಸವೆಲ್ಲ ನನ್ನೊಳಗೇ ಇಂಗಿಹೋಯಿತು!' 'ಪಂಡಿತ' ಸಂಸ್ಕೃತ ಪದ; ಸಂಸ್ಕೃತದಲ್ಲಿ ಅದಕ್ಕಿರುವ ಅರ್ಥ ವೈವಿಧ್ಯ–ವಿಸ್ತಾರಗಳನ್ನು ತಿಳಿಸುವುದೇ ಈ ಮೇಲಿನ ಉದ್ಧರಣಗಳ ಉದ್ದೇಶ.

ಆದರೆ ಕಾಲಾಂತರದಲ್ಲಿ ದುರ್ದೈವದಿಂದಲೋ ಅವಿವೇಚನೆಯಿಂದಲೋ 'ಪಂಡಿತ' ಎಂದರೆ ಕೆಲವರಿಗೆ ಅನಾದರ, ಮತ್ತೆ ಕೆಲವರಿಗೆ ಅಲಕ್ಷ್ಯ, ಇನ್ನೂ ಕೆಲವರಿಗೆ ಅಪಹಾಸ್ಯ. ಅಂತಹವರ ಕಣ್ಣ ಮುಂದಿರುವ ಪಂಡಿತನ ಚಿತ್ರ ಇದು: ತಲೆಯ ಮೇಲೆ ದೊಡ್ಡ ಮುಂಡಾಸು, ಮೂಗಿನ ತುದಿಯಲ್ಲಿ ಸಪುರಕಟ್ಟಿನ ಕನ್ನಡಕ; ತಲೆ–ಮೂಗುಗಳ ನಡುವಣ ಹಣೆಯಲ್ಲಿ ಗಂಧ, ಕುಂಕುಮ, ಇಲ್ಲ ವಿಭೂತಿ. ಉಟ್ಟದ್ದು ಕಚ್ಚೆಪಂಚೆ; ತೊಟ್ಟದ್ದು ದೊಗಲೆ ಕೋಟು, ಹೆಗಲಲ್ಲಿ ಶಾಲು, ಬಗಲಲ್ಲಿ ಚೀಲ, ಕೈಯಲ್ಲಿ ಛತ್ರಿ! (ವರ್ತಮಾನದಲ್ಲಿ 'ಬುದ್ಧಿಜೀವಿ'ಗಳು ಅಥವಾ 'ವಿಚಾರವಾದಿ' ಎಂದು ಕರೆಯಿಸಿಕೊಳ್ಳುವ ಮಹನೀಯರು ಖಾದಿ ಜುಬ್ಬ, ಪೈಜಾಮ, ಬಗಲ ಚೀಲ, ಕೆದರುಗೂದಲುಗಳಿಂದ ಕಂಗೊಳಿಸುವುದಿಲ್ಲವೇ – ಹಾಗೆ!). ನಮ್ಮ ಸಿನೆಮಾಗಳಲ್ಲಿ ಅರ್ಚಕ–ಪುರೋಹಿತ, ಪೋಲೀಸ್ ಕಾನ್ಸ್‌ಟೇಬಲ್‌ಗಳೆಲ್ಲ ಹೇಗೆ ಹಾಸ್ಯದ ವಸ್ತುಗಳಾಗುತ್ತಾರೋ ಹಾಗೆಯೇ ಕಥೆ, ಕಾದಂಬರಿ ನಾಟಕಾದಿಗಳಲ್ಲಿ ಪಂಡಿತರೂ ಕುಚೇಷ್ಟೆಯ ತುತ್ತುಗಳಾಗುತ್ತಾರೆ. 'ಗಜಪಂಡಿತ', 'ಪಂಡಿತಪುತ್ರ' ಎಂಬ ಪದಪ್ರಯೋಗಗಳೇ ಇದಕ್ಕೆ ನಿದರ್ಶನ. ಅಷ್ಟೇ ಅಲ್ಲ, ನಮ್ಮಲ್ಲಿ ಪಂಡಿತ ಎಂಬ ಪದಪ್ರಯೋಗ ಹೆಚ್ಚಾಗಿ ಸಲ್ಲುವುದು ಹಳಗನ್ನಡ ಭಾಷೆ, ಕಾವ್ಯ, ವ್ಯಾಕರಣ, ಛಂದಸ್ಸು, ಕಾವ್ಯಮೀಮಾಂಸೆ ಇತ್ಯಾದಿಗಳಲ್ಲಿ ಪರಿಣತರಾದ ಭಾಷಾಬೋಧಕರಿಗೆ ಎಂಬುದೊಂದು ವೈಚಿತ್ರ್ಯ! ದೇಶೀಯ ವೈದ್ಯರಿಗೂ ಈ ಪ್ರಯೋಗ ಸಲ್ಲುವುದುಂಟು – ಅವರನ್ನು 'ಅಳಲೆಕಾಯಿ ಪಂಡಿತ'ರೆಂದು ಅಣಕವಾಡುವುದೂ ಇದೆ. ಸ್ವತಃ ಕನ್ನಡದ ಪಂಡಿತಶ್ರೇಷ್ಠರಲ್ಲಿ ಒಬ್ಬರೂ ಪ್ರಾಸಾದಿಕ ಕವಿಗಳೂ ಆಗಿದ್ದ ಕಡೆಂಗೋಡ್ಲು ಶಂಕರಭಟ್ಟರು ಎಂಬತ್ತು ವರ್ಷಗಳಷ್ಟು ಹಿಂದೆಯೇ 'ಪಂಡಿತನ ಪಯಣ'ವೆಂಬ ವಿಡಂಬನಕವಿತೆಯನ್ನು ಬರೆದಿದ್ದರು; ಪಂಜೆ ಮಂಗೇಶರಾಯರು ಅಧ್ಯಕ್ಷತೆ ವಹಿಸಿದ್ದ ಒಂದು ಸಭೆಯಲ್ಲಿ ಅದನ್ನು ಓದಿಯೂ ಇದ್ದರು. ಅದರ ಆರಂಭ ಹೀಗಿದೆ:

**ಈ ಪರಿಯೋಡುವೆ ಎಲ್ಲಿಗೆ ಪಂಡಿತ?**
**ನಿನ್ನಯ ಗುರಿಯಾವುದು? ನುಡಿ ಖಂಡಿತ!**

ಹೀಗೆ ಮೊದಲಾಗುವ ಕವಿತೆಯ ಮುಂದಿನ ಕೆಲವು ಪಂಕ್ತಿಗಳು ಹೀಗಿವೆ:

**ತಲೆಯೇರಿದ ಕಟ್ಟುಗಳೊಳಗೇನಿದೆ?**
**ಹೆಗಲಲಿ ತೂಗುವ ಬುಟ್ಟಿಯೊಳೇನಿದೆ?**

******* **** ***** ********

**ಸಂಧಿ ಸಮಾಸದ ಭಾರವ ಹೊತ್ತು**
**ಬಂದುದೆ ನಿನಗೀ ತರದ ವಿಪತ್ತು!**

ಆ ಕವಿತೆಯನ್ನು ಕೇಳಿದ ಕೆಲವರಿಗೆ ಸಿಟ್ಟು ಬಂತು, ಇನ್ನೂ ಕೆಲವರಿಗೆ ನೋವಾಯಿತು ಎಂಬುದನ್ನು ಕಡೆಂಗೋಡ್ಲು ಅವರೇ ಒಪ್ಪಿಕೊಂಡು ತಮ್ಮ ಕವಿತೆಯ ಉದ್ದೇಶವೇನು ಎಂಬುದನ್ನು ವಿವರಿಸಿ, ಇಂತಹ ಕವಿತ್ವ ಜಾಗತಿಕ ವಾಙ್ಮಯದಲ್ಲಿ ಎಲ್ಲೆಲ್ಲಿದೆ ಎಂಬುದನ್ನು ತಿಳಿಸಿ ಅವನ್ನು 'ಕ್ರೀಡಾಮನೋಧರ್ಮ'ದಿಂದ (ಇದು ಲೇಖಕನ ಮಾತು, ಕವಿಯದ್ದಲ್ಲ) ಸ್ವೀಕರಿಸಬೇಕೆಂದು ಹೇಳಿದ್ದಾರೆ.

ಕಡೆಂಗೋಡ್ಲು ಒಬ್ಬರೇ ಅಲ್ಲ, ಕನ್ನಡದ ಇನ್ನಿತರ ಕವಿಪ್ರಮುಖರೂ 'ಪಂಡಿತ'ನನ್ನು ಬೇರೆ ಬೇರೆ ಬಗೆಗಳಲ್ಲಿ ಬಣ್ಣಿಸಿದ್ದೂ ನಗೆಯಾಡಿದ್ದೂ ಇದೆ. ಕುವೆಂಪು ಅವರು ವೈಯಾಕರಣ ಕೇಶಿರಾಜನನ್ನು ಕುರಿತು ಸರಳರಗಳೆಯಲ್ಲಿ ಕವಿತೆಯೊಂದನ್ನು ಬರೆದಿದ್ದಾರೆ ('ನವಿಲು'):

**ಶಬ್ದಮಣಿದರ್ಪಣವನೋದಿ ನಾ ಮಲಗಿದೆನು,**
**ಕೇಶಿರಾಜನ ಗರಡಿಯಲಿ ಕಾಳೆಗವ ಮಾಡಿ!**

– ಹೀಗೆ ಆರಂಭವಾಗುವ ಆ ಕವಿತೆಯಲ್ಲಿ ಕವಿ ಕಾಣುವ ದುಃಸ್ವಪ್ನದ ವರ್ಣನೆಯಿದೆ. ಆ ಕನಸಲ್ಲಿ ಪರಮ ವೈಯಾಕರಣ ಶಾಬ್ದಿಕಜನಮನೋಜ ಕೇಶಿರಾಜನ ದರ್ಶನವಾಗುತ್ತದೆ. ಆತನ ಮುಂದೆ ಸಾಕ್ಷಾತ್ ವಾಗ್ದೇವಿಯೇ 'ಪಂಡಿತನ ಕರುಣೆಯನು ಬೇಡುತಿಹಳೆಂಬಂತೆ' ಕೈಕಟ್ಟಿ ನಿಂತಿದ್ದಾಳೆ! – ಇನ್ನು ಪಂಪರನ್ನಾದಿ ಕವಿವರ್ಯರ ಪಾಡೇನು! 'ಗುಡುಗಿದಾ ಪಂಪನಿಗೆ ಕೊರಳಿಲ್ಲ! ಸಿಡಿಲಿನೊಲು ಗರ್ಜಿಸಿದ ರನ್ನನಿಗೆ ದನಿಯಿಲ್ಲ!' ಕಾಣಬಾರದ್ದನ್ನು ಕವಿ ಕಾಣುತ್ತಾನೆ, ಕೇಳಬಾರದ್ದನ್ನು ಕೇಳುತ್ತಾನೆ. ಕೊನೆಗೆ 'ಕಣ್ದೆರೆದೆ, ಕನಸೊಡೆದು ಪುಡಿಯಾಯ್ತು' ಎನ್ನುವ ಕವಿ,

**ಶಬ್ದಮಣಿದರ್ಪಣವ ನಿದ್ದೆ ಹೋಗುವ ಮುನ್ನ**
**ನಾನಿನ್ನು ಮುಂದೆಂದು ನೋಡುವುದೆ ಇಲ್ಲೆಂದು**

'ಪೂಣ್ದು ಒದರು'ತ್ತಾನೆ! ಕವಿ ಕುವೆಂಪು ಅವರ ಒಂದು ಸುಪ್ರಸಿದ್ಧ ಉದ್ಘೋಷವಿದೆ:

**ಕಾವ್ಯಕ್ಕೆ ಕರ್ಣಂ ಪ್ರಮಾಣಂ – ವ್ಯಾಕರಣಮಲ್ತು!**
**ವ್ಯಾಕರಣಮೇಕೆಂಬೆಯ? ಮರೆವುದಕೆ ಕಲ್ತು!**

ಕುವೆಂಪು ಅವರ ಉದ್ಗಾರ–ಉದ್ಘೋಷಗಳೇನೇ ಇರಲಿ ವಾಸ್ತವದಲ್ಲಿ ಅವರದು ಬಂಧುರವಾದ ಸುಂದರವಾದ ಗದ್ಯಪದ್ಯ ವಾಙ್ಮಯ! ಕಾವ್ಯ ಮತ್ತು ಶಾಸ್ತ್ರ ಎರಡರಲ್ಲೂ ಪರಿಣತರಾಗಿದ್ದವರು ಅವರು! – 'ಪಾಂಡಿತ್ಯ' ಎಂದರೆ ಅದೇ ತಾನೇ?

ಪಾಂಡಿತ್ಯವನ್ನು ಕುರಿತಂತೆ ಕೆ.ಎಸ್. ನರಸಿಂಹ ಸ್ವಾಮಿಯವರ 'ದೀಪದ ಮಲ್ಲಿ'ಯಲ್ಲಿ 'ಪಂಡಿತರ ಮಂಚ' ಎಂಬ ಒಂದು ಕವಿತೆಯಿದೆ :

**ಅರ್ಥವಾಯಿತು ನನಗೆ ಪಂಡಿತರೆ ಈ ಮಂಚ**
**ಆಗಬಹುದಾಗಿತ್ತು ಪ್ರೇಮದ ಪ್ರಪಂಚ; –**
**ಈಗ ಮಾತ್ರ ಬರಿ ಕರಿಮರದ ಮಂಚ**

ಎಂದು ಪ್ರಾರಂಭವಾಗುತ್ತದೆ ಆ ಕವಿತೆ. ಆ ಕರಿಮರದ ಮಂಚದಲ್ಲಿ ಪಂಡಿತರು ಕೂತು ವ್ಯಾಕರಣದ ಪಾಠ ಮಾಡುತ್ತಾರೆ, ಪಾಣಿನಿಯ ಸೂತ್ರಗಳಿಂದ (ಮಂಚದ) ಕಾಲುಕೀಲುಗಳೆಲ್ಲ ಸಡಿಲವಾಗುತ್ತವೆ! ಮಂಚದ ಹೃದಯ 'ವ್ಯಾಕರಣ ಸಾಕು; ಅಂತಃಕರಣ ಕೋರುವುದು ಭೂಮಿಯ ಅನಂತ ಅನುರಾಗವನು' ಎಂದು ಗೊಣಗುತ್ತದೆ! ಅದೇ ಮಂಚದ ಮೇಲೆ ಬಾಣಂತಿ–ಮಗು ಮಲಗಿದರೆ, ಮನೆ ಮಕ್ಕಳೆಲ್ಲ ಬೊಂಬೆಗಳನ್ನಿಟ್ಟು ಆಡಿದರೆ ಅದರ ಜೀವ ಹಿಗ್ಗುತ್ತದೆ. 'ಇಂತಹ ಮನೆಗೆ ಬಂದದ್ದು ಪೂರ್ವ ಪುಣ್ಯವೆಂದು' ಕೈಮುಗಿಯುತ್ತದೆ!

ಕನ್ನಡದ ಮತ್ತೊಬ್ಬ ಕವಿಶ್ರೇಷ್ಠ ಜಿ.ಎಸ್. ಶಿವರುದ್ರಪ್ಪನವರ 'ಪ್ರೀತಿ ಇಲ್ಲದ ಮೇಲೆ' ಎಂಬ ಸಂಕಲನದಲ್ಲಿ 'ಪ್ರತಿಭೆ–ಪಾಂಡಿತ್ಯ' ಎಂಬ ಕವಿತೆಯಿದೆ, ಅದರಲ್ಲಿ ನಳಚರಿತ್ರೆಯ ಪ್ರಸಂಗವೊಂದನ್ನು ಕವಿ ಅವರು ಸಂಕೇತವಾಗಿ ಬಳಸಿ ಪ್ರತಿಭೆ ಮತ್ತು ಪಾಂಡಿತ್ಯಗಳ ಮಧ್ಯದ ಅಂತರವನ್ನು ಸೂಚಿಸುತ್ತಾರೆ. ಸರ್ಪದಂಶನದಿಂದ ವಿಕೃತಾಂಗನಾಗಿದ್ದರೂ ಬಡಕಲು ಕುದುರೆಗಳನ್ನು ಹೂಡಿದ ರಥವನ್ನು ಮನೋವೇಗದಿಂದ ಓಡಿಸುವ ನಳ ಪ್ರತಿಭೆಯನ್ನು ಸಂಕೇತಿಸಿದರೆ, ಹೆಮ್ಮರವೊಂದರ ಎಲೆಗಳನ್ನೆಲ್ಲ ನಿಮಿಷಾರ್ಧದಲ್ಲಿ ಎಣಿಸಿ ಹೇಳುವ ಋತುಪರ್ಣ ಪಾಂಡಿತ್ಯದ ಪ್ರತಿಮೆಯಾಗುತ್ತಾನೆ. ಪ್ರತಿಭೆಯಲ್ಲಿ ಭಾವದ ಉತ್ಕಟತೆಯಾದರೆ, ಪಾಂಡಿತ್ಯದಲ್ಲಿ ಬುದ್ಧಿಯ ಪ್ರಖರತೆಯೆಂಬುದು ಕವಿಯ ತಾತ್ಪರ್ಯ.

ಪಂಡಿತರನ್ನು ಕುರಿತಂತೆ ಈ ಮೇಲೆ ಉಲ್ಲೇಖಿಸಿದ ಕವಿವಿಭೂತಿಗಳ ದೃಷ್ಟಿಕೋಣ ಯಾವುದು ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಅದನ್ನು ಅನಾದರ–ತಿರಸ್ಕಾರ ಎನ್ನುವಂತಿಲ್ಲ; ಆದರೆ ಅದನ್ನು ಉದಾಸೀನ ಎನ್ನಬಹುದು. ಯಥಾರ್ಥದಲ್ಲಿ ಪ್ರತಿಭೆ–ಪಾಂಡಿತ್ಯಗಳಲ್ಲಿ ವಿಭಿನ್ನತೆಯಾಗಲೀ ವೈರುಧ್ಯವಾಗಲೀ ಇಲ್ಲ. 'ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ' ಎಂಬುದು ಪ್ರಸಿದ್ಧವಾದ ಒಂದು ಸೂಕ್ತಿ ಮತ್ತು ಸೂತ್ರ. ಹೊಸಹೊಸತನ್ನು ಕಾಣಬಲ್ಲ, ಮಾಡಬಲ್ಲ, ಅವುಗಳನ್ನು ಲೋಕಕ್ಕೆ ನೀಡಬಲ್ಲ ಗುಣವಿಶೇಷತೆಯೇ ಪ್ರತಿಭೆ. ನಮ್ಮ ವಾಲ್ಮೀಕಿ, ಕಾಳಿದಾಸರಂತೆಯೇ ಪ್ರಾಚೀನ ಪಾಣಿನಿ, ಅಭಿನವಗುಪ್ತ, ಮಲ್ಲಿನಾಥ ಅಂತಹ ಪ್ರಜ್ಞಾಯುಕ್ತ ಪ್ರತಿಭಾವಂತರು ಎಂದರೆ ಪಂಡಿತರು. ಅವರಲ್ಲಿ ಪ್ರಜ್ಞೆ, ಪ್ರತಿಭೆ ಮತ್ತು ಪಾಂಡಿತ್ಯ(emotion, intellect, genius)ಗಳು ಸಮಪ್ರಮಾಣದಲ್ಲಿದ್ದುವು. ಸ್ನಾನದ ತೊಟ್ಟಿಯಿಂದ ಎದ್ದು 'ಯೂರೇಕಾ' ಎಂದು ಓಡಿದ ಆರ್ಕಿಮಿಡೀಸ್, ಸೇಬುಮರದ ಕೆಳಗೆ ಕೂತ ನ್ಯೂಟನ್, 'ಇದು ಬರಿ ಬೆಳಗಲ್ಲೋ ಅಣ್ಣಾ' ಎಂದು ಬೆರಗಾದ ಬೇಂದ್ರೆ, 'ಸೂರ್ಯೋದಯ ಚಂದ್ರೋದಯಗಳಲ್ಲಿ ದೇವರ ದಯ' ಕಂಡ ಕುವೆಂಪು ಇವರೆಲ್ಲ ಪ್ರಜ್ಞಾವಂತ ಪ್ರತಿಭಾಶಾಲಿಗಳು. ಆದುದರಿಂದ ಪಂಡಿತರೆಂದರೆ ವ್ಯಾಕರಣಕಾನನದ ಹುಲಿ, ಕರಡಿಗಳೆಂದೋ

ಛಂದೋಬುಧಿಯ ತಿಮಿಂಗಿಲ, ಹುಲಿಮೀನುಗಳೆಂದೋ ಭಾವಿಸಬಾರದು. ಕನ್ನಡದ 'ಕುಲರಸಿಕ'ರೆನಿಸಿದ ಗೋವಿಂದ ಪೈ, ಡಿ.ವಿ. ಗುಂಡಪ್ಪ, ಎ.ಆರ್. ಕೃಷ್ಣಶಾಸ್ತ್ರಿ, ಮುಳಿಯ ತಿಮ್ಮಪ್ಪಯ್ಯ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್, ಸೇಡಿಯಾಪು ಕೃಷ್ಣಭಟ್ಟರೇ ಮೊದಲಾದವರು ಶಾಸ್ತ್ರಪ್ರಕಾರ, ಸರ್ಜನಸಾಹಿತ್ಯ ಎರಡರಲ್ಲೂ ಸವ್ಯಸಾಚಿಗಳೆನಿಸಿ ವಿಶೇಷ ಸಿದ್ಧಿಯನ್ನು ಪಡೆದವರು ಎಂಬುದನ್ನು ಅವರ ವಾಙ್ಮಯಗಳೇ ಪುಷ್ಟೀಕರಿಸುತ್ತವೆ. ಈ ಮೇಲೆ ಹೆಸರಿಸಿದವರಂತೆಯೇ ಮಾಸ್ತಿ, ಬೇಂದ್ರೆ, ವಿಸೀ, ಕುವೆಂಪು, ಪು.ತಿ.ನ, ಗೋಕಾಕ, ಮುಗಳಿ, ಅಡಿಗ, ಕಣವಿ, ಜಿ.ಎಸ್.ಎಸ್. ಮೊದಲಾದವರೂ ಕಥೆ, ಕಾದಂಬರಿ. ಕಾವ್ಯಗಳೊಂದಿಗೆ ಶಾಸ್ತ್ರವಿಚಾರಗಳಲ್ಲೂ ಆಸಕ್ತರು ಮತ್ತು ಶಕ್ತರು. ಸರ್ಜನೇತರ ಎನ್ನಲಾಗುವ ವಿಷಯಗಳನ್ನು ಕುರಿತಂತೆಯೂ ಮೌಲಿಕ ಗ್ರಂಥಗಳನ್ನು ಬರೆದವರು. ಆದರೆ ಅವರನ್ನು ಯಾರೂ ಪಂಡಿತರೆಂದು ಕರೆದದ್ದಿಲ್ಲ. ಎಂ.ಎ., ಎಂ.ಎಸ್ಸಿಯೇ ಮೊದಲಾದ ಪದವೀಧರರಲ್ಲಿ ಅವರು ಸದರ್ಥದಲ್ಲಿ 'ಪಂಡಿತ'ರೇ ಆಗಿದ್ದರೂ ಹಾಗೆ ಕರೆಯುವುದು ಕಡಿಮೆ. ತಮ್ಮ ಆಯುಷ್ಯವನ್ನೆಲ್ಲ ಕವಿಕಾಲದೇಶ, ಸ್ಥಳನಾಮ, ಛಂದಃಪ್ರಕಾರ, ಶಬ್ದಾರ್ಥ, ವ್ಯಾಕರಣ ಸಮಸ್ಯೆಯೇ ಮೊದಲಾದ ವಿಷಯಗಳ ತಲಸ್ಪರ್ಶಿ ಅಧ್ಯಯನದಲ್ಲೇ ಕಳೆದು ಗಂಭೀರ ಗ್ರಂಥ ರಚಿಸುವವರ ಲಲಾಟಫಲಕಗಳಲ್ಲಿ ಮಾತ್ರ 'ಪಂಡಿತ' ಎಂಬ ಕಿರೀಟ ಪದಲಾಂಛನ! ಅದೊಂದು ವೈಶಿಷ್ಟ್ಯ!

'ಪಂಡಿತ' ಎಂಬ ಪದಕ್ಕೆ ರೂಢಿಯಲ್ಲಿರುವ ಅರ್ಥವನ್ನೇ ಮಾಡಿಕೊಂಡರೂ ವಾಙ್ಮಯದಲ್ಲಿ ಅದು ಅತ್ಯಂತ ಅಪೇಕ್ಷಣೀಯ. ಬೀಜ ಬಿತ್ತುವ ಕೃಷಿಕನಂತೆಯೇ ಅದು ಮೊಳಕೆಯೊಡೆದಾಗ ಪಾತಿ ಮಾಡಿ ನೀರು ಎರೆದು ಬುಡಕ್ಕೆ ಗೊಬ್ಬರ ಹಾಕುವ ಮತ್ತು ಗಿಡ ಬಾಗದಂತೆ ಊರೆ ಕೊಟ್ಟು, ಬಳ್ಳಿ ಜೋಲಾಡದಂತೆ ಹಂದರ ಹಾಕಿ ಉಪಚರಿಸುವವನೂ ಕೃಷಿಕನೇ ಆಗಿರುತ್ತಾನೆ. ಸಾಹಿತ್ಯಕೃಷಿಗಳಲ್ಲಿ ಭಾಷಾಶುದ್ಧಿ, ಯುಕ್ತ ಛಂದಸ್ಸು, ಅಲಂಕಾರ-ಶೈಲಿ ಹೇಗಿರಬೇಕೆಂಬ ನೀತಿನಿಯಮಗಳನ್ನು ನಿರೂಪಿಸಿ ಅವುಗಳನ್ನು ಸಂಸ್ಕರಿಸುವವರೂ ಬೇಕು. ಸರ್ಜನತೆಯೇ ಸಹಜತೆ, ಸೌಂದರ್ಯ, ಆದುದರಿಂದ ಅತಿಶಯ ಎನ್ನುವುದಾದರೆ, ತಾಯ ಬಸಿರಿಂದ ಹುಟ್ಟಿ ಬರುವ ಮಗು, ಆ ಅವಸ್ಥೆಯಲ್ಲಿ ಹೇಗಿರುತ್ತದೋ ಹಾಗೆಯೇ ಕೊನೆತನಕ ಇರಬೇಕು – ಎಂದರೆ ನಗ್ನತೆಯೇ ಸಹಜ, ಅದೇ ಸೌಂದರ್ಯ – ಎಂದು ವಾದಿಸುವಂತೆಯೇ ಆಗುತ್ತದೆ. ಅಂಗವಿಕಲವಾದಾಗ ಶಸ್ತ್ರಕ್ರಿಯೆ, ರೋಗಲಕ್ಷಣಗಳಿದ್ದಲ್ಲಿ ಔಷಧೋಪಚಾರ ಮಾಡಿದಾಗ ಶರೀರ ಸೌಂದರ್ಯ ವರ್ಧಿಸುತ್ತದೆ, ಅದು ದೃಢವಾಗುತ್ತದೆ. ವಾಙ್ಮಯ ಪ್ರಕಾರಕ್ಕೂ ಇದು ಸಲ್ಲುತ್ತದೆ; ಕವಿಯೇ ತಾಯಿ, ಪಂಡಿತನೇ ವೈದ್ಯ. ಮಾತು-ಬರೆಹಗಳೆಲ್ಲ ಕೇಳುಗ ಓದುಗರಿಗೆ ಯಥಾವತ್ತಾಗಿ, ಪರಿಣಾಮಕಾರಿಯಾಗಿ ಅರ್ಥ ಆಗಬೇಕಾದರೆ ವ್ಯಾಕರಣ-ಛಂದಸ್ಸು-ಅಲಂಕಾರಾದಿಗಳೆಲ್ಲ ಯುಕ್ತ ಪರಿಮಾಣದಲ್ಲಿ ಇರಬೇಕು. ಪಂಡಿತನ ಮಾತೇ ತಕ್ಕಡಿ, ಸೇರು, ಅಳೆಗೋಲು, ಒರೆಗಲ್ಲು.

ಪಂಡಿತ ಪದಕ್ಕೆ ಸೀಮಿತವಾದ ಅರ್ಥವನ್ನೇ ಇರಿಸಿಕೊಂಡರೂ ಪಾಂಡಿತ್ಯವೆಂಬುದು ಅಪೇಕ್ಷಣೀಯವಾದ ಒಂದು ಗುಣವಿಶೇಷ. 'ಪಂಡಿತ' ಎಂದರೆ ಸಮ್ಮಾನ್ಯನೂ ಅನುಸರಣಯೋಗ್ಯನೂ ಆಗಿರುವ ವ್ಯಕ್ತಿವಿಶೇಷ. ಇದು ಈವೊತ್ತು ಲೇಖಕಸಾಮಾನ್ಯನಾದ ನಾನು ಆಡುವ ಮಾತಲ್ಲ, ಏಳೆಂಟು ದಶಕಗಳ ಹಿಂದೆಯೇ (೧೯೩೭) ಪಂಡಿತನ ಗುಣಲಕ್ಷಣ, ಆತನ ಕಾರ್ಯಸ್ವರೂಪಗಳನ್ನೆಲ್ಲ ಮಹಾ ಮೇಧಾವಿ ಗುಂಡಪ್ಪನವರು ತಮ್ಮದೊಂದು ಉಪನ್ಯಾಸದಲ್ಲಿ ಹೀಗೆ ವಿವರಿಸಿದ್ದಾರೆ: "ಆಹಾರವು ಹೇಗೆಯೋ ಔಷಧವೂ ಹಾಗೆಯೇ ಬೆಳವಣಿಗೆಗೆ ಆವಶ್ಯಕವಾದುದು ನಿಜ, ಪಂಡಿತರು ಭಾಷೆಯ ಆರೋಗ್ಯವನ್ನು ಕಾಪಾಡುವ ವೈದ್ಯರಾಗಿರಬೇಕು .... ಅದೇ ರೀತಿ ಯಾವ ಪಂಡಿತರು ಸಾಮಾನ್ಯಜನರ ಜೀವನಕಾರ್ಯಗಳಿಗೆ ಬೇಕಾಗುವ ಶಬ್ದಸಂಕೇತಗಳ ರೀತಿಯನ್ನು, ಕವಿಗಳ ಮನೋಗತಿಗೆ ಬೇಕಾಗುವ ವಚನಸಂಪತ್ತನ್ನು, ತತ್ತದ್ಭಾವಾನುಸಂಧಾನದಿಂದ ತಿಳಿಕೊಳ್ಳುವರೋ .... ಅಂತಹ ಪಂಡಿತರು ಭಾಷೆಗೆ ಸರ್ವದಾ ಉಪಕಾರಿಗಳೇ ಆಗುವರು. ಪಂಡಿತರು ಜನಸಾಮಾನ್ಯರಲ್ಲಿಯೂ ನೂತನಕವಿಗಳಲ್ಲಿಯೂ ಸಹಾನುಭೂತಿ ಉಳ್ಳವರಾಗಬೇಕು. ಅವರಿಂದ ನಾವು ಇದನ್ನು ಅಪೇಕ್ಷಿಸತಕ್ಕವರೇ ಹೊರತು ಪಂಡಿತರಿಂದ ಪ್ರಯೋಜನವೇ ಇಲ್ಲವೆಂದು ಹೇಳತಕ್ಕವನಲ್ಲ. ಮನುಷ್ಯನ ನಡೆವಳಿಕೆಯಲ್ಲಿ ಸ್ವಾತಂತ್ರ್ಯವೂ ಇರಬೇಕು, ಮರ್ಯಾದೆಯೂ ಇರಬೇಕು .. .. ಭಾಷೆಗೂ ಹಾಗೆಯೇ ಸ್ವಾತಂತ್ರ್ಯ ಮರ್ಯಾದೆಗಳೆರಡೂ ಬೇಕು." ('ಭಾಷೆಯ ಸ್ವರೂಪ ಮತ್ತು ಸ್ವಭಾವ' – "ಜೀವನ ಸೌಂದರ್ಯ ಮತ್ತು ಸಾಹಿತ್ಯ") ಮಾನ್ಯ ಡಿ.ವಿ.ಜಿಯವರು 'ಸಾಹಿತ್ಯಶಕ್ತಿ' ಎಂಬ ತಮ್ಮ ಇನ್ನೊಂದು ಗ್ರಂಥದಲ್ಲಿರುವ 'ಉಪಾಧ್ಯಾಯ ಪಂಡಿತರು' ಹಾಗೂ 'ಉಪಾಧ್ಯಾಯರು ಮತ್ತು ಸಾಹಿತ್ಯಪಾಠ' ಎಂಬ ಉಪನ್ಯಾಸಗಳಲ್ಲೂ ಪಂಡಿತ ಪದ ವಿಶ್ಲೇಷಣೆ ಮಾಡಿ ಪಾಂಡಿತ್ಯದ ಗುಣಲಕ್ಷಣಗನ್ನು ವಿಶೇಷತಃ ಉಪಾಧ್ಯಾಯರು ಪಂಡಿತರೂ ಆಗಿರಬೇಕೆಂಬುದನ್ನು ಉಪಾದೇಯವಾಗುವಂತೆ ವಿವರಿಸಿದ್ದಾರೆ. ಪಾಂಡಿತ್ಯ ಪ್ರಾಪ್ತಿಗೆ ಅಡ್ಡದಾರಿ-ಗಿಡ್ಡದಾರಿಗಳಿಲ್ಲ: ಅಖಂಡ ಶ್ರದ್ಧೆ, ನಿರಂತರ ಪ್ರಯತ್ನ, ತಲಸ್ಪರ್ಶೀ ಅಧ್ಯಯನನಿಷ್ಠೆ ಮತ್ತು ಅವಕ್ಕೆ ತಕ್ಕುದಾದ ಸಹಜ ಮನೋಧರ್ಮ – ಇವುಗಳ ಆತ್ಯಂತಿಕ ಫಲವೇ ಪಾಂಡಿತ್ಯ. ನಿಜವಾದ ಪಂಡಿತ ಹೇಗಿರುತ್ತಾನೆ ಎಂಬುದನ್ನು ಸ್ವತಃ ಉದ್ದಾಮ ಪಂಡಿತರಾಗಿದ್ದ ಸೇಡಿಯಾಪು ಕೃಷ್ಣಭಟ್ಟರು ಬರೆದ ಒಂದು ಪತ್ರ ನಿಖರವಾಗಿ ನಿರೂಪಿಸುತ್ತದೆ. ಧಾರವಾಡದ ಮಹಾದೇವ ಪ್ರಭಾಕರ ಪೂಜಾರರ ನಿಧನವಾರ್ತೆ(೧೯೬೨)ಯನ್ನು ಕೇಳಿದಾಗ ಅವರು ಲೇಖಕನಿಗೆ ಆಗ ಬರೆದ ಪತ್ರ ಹೀಗಿದೆ:

"ಪೂಜ್ಯ ಪೂಜಾರರ ನಿಧನವರ್ತಮಾನವನ್ನು ತಿಳಿದು ದುಃಖವಾಯಿತು. ಧಾರವಾಡದಲ್ಲೇ ಅವರು ದೊಡ್ಡ ವಿದ್ವಾಂಸರಾಗಿದ್ದರು. ಆದರೆ ವಿದ್ವತ್ತೆಗೆ ಗೌರವವನ್ನು ಈ ಕಾಲದಲ್ಲಿ ಕೊಡುವವರು ಕಡಿಮೆ. ಇಂದಿನ ಸಂತೆಯಲ್ಲಿ ಅದಕ್ಕೆ ಗಿರಾಕಿಯಿಲ್ಲ. ಆ ಸ್ಥಿತಿ ತಪ್ಪೆಂದೂ ನಾನು ಹೇಳುವುದಿಲ್ಲ; ಏಕೆಂದರೆ ವಿದ್ವತ್ತೆಯ ಬೆನ್ನು ಹಿಡಿದು ಹೋದರೆ – ಹೊಟ್ಟೆ ತುಂಬುವುದಿಲ್ಲ; ಜನಪ್ರಿಯತೆ ದೊರೆಯುವುದಿಲ್ಲ; ವಿಲಾಸ ಭೋಗಗಳಲ್ಲಿ ವಿನೋದಿಸಲು ಸಮಯವಾಗಲಿ ಸಂದರ್ಭವಾಗಲಿ ಒದಗುವುದಿಲ್ಲ. ಮಾನವತೆ(?)ಯ ಜೀವಿತ(?)ವೇ ಆಗಿರುವ ಮೇಲೆ ಹೇಳಿದ ವಿಷಯಗಳು ವಿದ್ವತ್ತೆಯಿಂದ ಲಭಿಸುವುದಿಲ್ಲ. ಇದರಿಂದಾಗಿ ಜನಕ್ಕೆ ವಿದ್ವತ್ತೆ ಬೇಡವಾಗಿದೆ. ಆದ್ದರಿಂದ ಜನರನ್ನು ನಾವು ದೂರುವುದು ತಪ್ಪು. ವಿದ್ವಾಂಸರಿಗೆ ಒಂದು ವೇಳೆ ದೊರಕಿದರೂ ದೊರಕಬಹುದಾದ್ದು ಎಂಥಾದ್ದು? – ಬಹು ದೊಡ್ಡ ಗೌರವ – ಗೊಮ್ಮಟನಿಗೆ ದೊರಕಿದಂತಹ ಗೌರವ! – ದೂರದ ಬೆಟ್ಟದಲ್ಲಿ, ಎತ್ತರದಲ್ಲಿ, ಒಂಟಿಯಾಗಿ ಬಾಳುವ ಘನಸೌಭಾಗ್ಯ. ಅವನನ್ನು ಆರಾಧಿಸುವವರೂ ಕೊನೆಗೆ ಅವನಂತೆ ಬತ್ತಲೆಯಾಗಬೇಕಾಗುವುದು! ಅವನೇನೋ ತನ್ನಲ್ಲೇ ತೃಪ್ತನಾಗಿ ಮುಗುಳುನಗುತ್ತಿರಬಹುದು. ಆದರೆ ಅದಕ್ಕೆ ಮೋಹಿತರಾಗಿ ಅವನನ್ನು ಅನುಸರಿಸುವ ಹೆಣ್ಣುಗಂಡುಗಳು ಬಹಳ ಕಡಿಮೆ."

ಡಿ.ವಿ.ಜಿ.ಯವರ ಉಪನ್ಯಾಸ ಅಥವಾ ಸೇಡಿಯಾಪು ಅವರ ಪತ್ರಪಂಕ್ತಿಗಳ ತಾತ್ಪರ್ಯ ಇದು: ಪಂಡಿತರೆಂದರೆ ಗದ್ಯದಲ್ಲಿ ವ್ಯಾಕರಣದೋಷವನ್ನೋ ಪದ್ಯದಲ್ಲಿ ಛಂದೋಭಂಗವನ್ನೋ ಹುಡುಕಿ ಹೇಳುವ ವಿಘ್ನಸಂತೋಷಿಗಳಲ್ಲ. ಅಥವಾ 'ಶತಶ್ಲೋಕೇನ ಪಂಡಿತಃ' 'ಶಾಲೂ ಮಾತ್ರೇಣ ಪಂಡಿತಃ' ಎಂಬಂಥವರೂ ಅಲ್ಲ. ವಾಗ್ದೇವತೆಯ ಒಂದು ಕಣ್ಣು ಕವಿ(ಸಾಹಿತಿ)ಯಾದರೆ ಮತ್ತೊಂದು ಕಣ್ಣು ಪಂಡಿತ – ನಿಜಾರ್ಥದ ಪಂಡಿತ. ಶೋಚನೀಯ ವಿಚಾರವೆಂದರೆ ವರ್ತಮಾನದಲ್ಲಿ ಅಂತಹ ಪಂಡಿತಪರಮೇಷ್ಠಿಗಳ ಸಂಖ್ಯೆ ತೀರ ಸಣ್ಣದು. ಒಂದು ಕಾಲವಿತ್ತು ತುಂಗೆಯ ಉತ್ತರದಲ್ಲಿ, ಮೈಸೂರು ಸೀಮೆಯಲ್ಲಿ, ಘಟ್ಟದ ಕೆಳಗಿನ ಕರೆನಾಡಲ್ಲಿ, ಹಿಂದಿನ ಮುಂಬಯಿ – ಮದರಾಸು – ಹೈದರಾಬಾದ್ – ಕರ್ನಾಟಕಗಳಲ್ಲಿ ಅಂತಹವರು ಹಲವರಿದ್ದರು. ಅವರಿಗೆ ಅಧ್ಯಯನ, ಸಂಶೋಧನೆ ಗಂಭೀರಚಿಂತನಗಳಲ್ಲಿದ್ದ ಆಸಕ್ತಿ ಪ್ರಸಿದ್ಧಿ ಪ್ರಚಾರ ಪ್ರಶಸ್ತಿಗಳಲ್ಲಿ ಇರಲಿಲ್ಲ; ಆದರೆ ಪಡೆಯುವ ಪದವಿಗಳೆಲ್ಲ ಉದ್ಯೋಗಪ್ರಾಪ್ತಿಗೆ, ಆಮೇಲೆ ಪದೋನ್ನತಿಗೆ, ಮತ್ತೆ ಆಧಿಕಾರಿಕ ಸಂಪಾದನೆಗೆ ಮೆಟ್ಟಿಲುಗಳು ಎಂದು ಭಾವಿಸಿದಾಗ ಪದವಿಪಾಂಡಿತ್ಯಗಳ ಅರ್ಥನಷ್ಟವಾಗುತ್ತದೆ. ಕೆಲಕಾಲದ ಹಿಂದೆ ಕನ್ನಡದ ಒಂದು ದಿನಪತ್ರಿಕೆ ನಮ್ಮಲ್ಲಿ ಎಂತೆಂತಹ 'ಸಂಶೋಧನ ಮಹಾಪ್ರಬಂಧ'ಗಳಿವೆ ಅವುಗಳನ್ನೆಲ್ಲ ಹೇಗೆ 'ಪಿಎಚ್‌ಡಿ'ಗೆ ಸತ್ಪಾತ್ರವಾಗಿವೆ ಎಂಬುದನ್ನು ಶೋಧಿಸಿ ಸ್ಫೋಟಕ ವರದಿಯನ್ನು ಪ್ರಕಟಿಸಿತ್ತು. ಅದನ್ನು ಓದಿದ ಹಲವರು 'ಅಯ್ಯೋ! ಹೀಗೂ ಉಂಟೆ!' ಎಂದು ಉದ್ಗರಿಸಿದ್ದರು. ಕಾರಣ ಇಷ್ಟೇ – ಆ ಮಹಾಪ್ರಬಂಧಗಳೆಲ್ಲ ಕೇವಲ ದಾಖಲಾತಿಗಳೋ ಮಾಹಿತಿಗಳೋ ಆಷ್ಟೇ ಆಗಿದ್ದುವು. ಅಧ್ಯಯನ ಶ್ರದ್ಧೆ, ನವವಿಚಾರ ಅಥವಾ ಸ್ವೋಪಜ್ಞತೆಯ ಯಾವುದೇ ಲಕ್ಷಣಗಳು ಅವುಗಳಲ್ಲಿ ದಟ್ಟೈಸಿದ್ದಿಲ್ಲ. ಆದರೆ ಎಲ್ಲವನ್ನೂ ಒಂದೇ ತಕ್ಕಡಿಯಲ್ಲಿರಿಸಿ ತೂಗುವುದಾಗಲೀ, ಒಂದೇ ಕೋಲಿಂದಲೇ ಅಳೆಯುವುದಾಗಲೀ ಸಲ್ಲದು. ಅಪವಾದ ಇದ್ದೇ ಇದೆ. ಶ್ರದ್ಧಾಸಕ್ತಿಗಳಿಂದ ಪಂಡಿತಕಾರ್ಯದಲ್ಲಿ ನಿರತರಾದವರು ಈಗಲೂ ಅಲ್ಲಲ್ಲಿ ಇದ್ದಾರೆ. ಆದರೆ ಅಂತಹವರ ಸಂಖ್ಯೆ ಸಣ್ಣದು ಎಂಬುದಷ್ಟೇ ಶೋಚನೀಯ ವಿಚಾರ "ಪಂಡಿತಕಾರ್ಯವೆಂಬುದು ಭಾಷೆ, ಸಾಹಿತ್ಯ, ಸಂಶೋಧನೆಗಳಿಗೆ ಮಾತ್ರ ಸೀಮಿತವಲ್ಲ, ಅನ್ಯ ಕ್ಷೇತ್ರಗಳಲ್ಲಿಯೂ ಅವು ನಡೆಯಬಹುದು, ನಡೆಯುತ್ತಲೂ ಇವೆ. ಪಂಡಿತಸಂಖ್ಯೆ ಕ್ಷೀಣಿಸುವ ಬದಲು ಕ್ಷೇತ್ರಪಲ್ಲಟವಾಗಿದೆ ಅಷ್ಟೆ" ಎಂದು ಕೆಲವರು ಹೇಳುವುದುಂಟು. ಆ ಮಾತನ್ನು ಒಪ್ಪಿಕೊಳ್ಳೋಣ; ಅದರೊಂದಿಗೆ ಒಂದು ಮಾತನ್ನು ಮರೆಯದೇ ಇರೋಣ: ಯಾವುದೇ ವಾಙ್ಮಯದ ಮೂಲಧಾತು ಭಾಷೆ. ಭಾಷೆ ಭಾವಪ್ರಕಟನೆಯ ಮಾಧ್ಯಮ. ಭಾವ ಮಾತಿನಲ್ಲಿರಬಹುದು ಅಥವಾ ಬರೆಹದಲ್ಲಿರಬಹುದು. ಭಾವಪ್ರಕಟನೆ ಯಥಾರ್ಥವಾಗಿ, ಸಮರ್ಥವಾಗಿ ಆಗಬೇಕಾದರೆ ಮಾಧ್ಯಮವಾಗಿರುವ ಭಾಷೆಯಲ್ಲಿ ನಿರ್ದುಷ್ಟತೆ ಇರಬೇಕು. ಅಲಂಕಾರಶೈಲಿಗಳಿಂದ – ಪದ್ಯವಾಗಿದ್ದರೆ – ಯುಕ್ತಛಂದಸ್ಸಿನಿಂದ ಭಾಷೆ ಸುಂದರವೆನಿಸುತ್ತದೆ, ರಸನಿರ್ಭರವಾಗುತ್ತದೆ, ಎಂದರೆ ಭಾಷೆಯ ನಿರ್ದುಷ್ಟತೆ, ನಿಷ್ಕೃಷ್ಟತೆ ಮತ್ತು ಸೌಂದರ್ಯವನ್ನು ತಿಳಿಸುವ ವ್ಯಾಕರಣ, ಛಂದಸ್ಸು, ರಸ (ಅಲಂಕಾರ) ಸಿದ್ಧಾಂತಗಳನ್ನು ಹೇಳಬಲ್ಲ ಭಾಷಾವಿದಗ್ಧರು ಇರಬೇಕಾಗುತ್ತದೆ. ಶಾಲೆ–ಕಾಲೇಜುಗಳ ಭಾಷಾಪಾಠ ಸಂದರ್ಭದಲ್ಲಿ ಕಾಗುಣಿತ, ಅದರಲ್ಲಿರುವ ಹ್ರಸ್ವ–ದೀರ್ಘಾಕ್ಷರ, ಅಲ್ಪಪ್ರಾಣ–ಮಹಾಪ್ರಾಣ, ಅವುಗಳ ಉಚ್ಚಾರಕ್ರಮ ಮೊದಲಾದುವನ್ನು ವಿದ್ಯಾರ್ಥಿಗಳಿಗೆ ತಿಳಿಸಿ ತಿದ್ದಬೇಕಾಗುತ್ತದೆ – ಅದೇ ವ್ಯಾಕರಣ. ಪದ್ಯವನ್ನು ಬರೆಯುವುದು ಹೇಗೆ ಎಂಬುದನ್ನು ತಿಳಿಯುವುದಕ್ಕಾಗಿ ಛಂದಸ್ಸು. ಗದ್ಯಪದ್ಯಗಳನ್ನು ಓದಿ ಮೆಚ್ಚುವುದಕ್ಕೆ ಅಲಂಕಾರಶಾಸ್ತ್ರ ಅಥವಾ ರಸಸಿದ್ಧಾಂತ; ಇವುಗಳನ್ನೆಲ್ಲ ತಿಳಿಸುವುದಕ್ಕೆ ತಕ್ಕುದಾದ, ಗಟ್ಟಿಯಾದ ಪಠ್ಯಭಾಗಗಳು ತರಗತಿಗಳಲ್ಲಿ ಇರಬೇಕು. ಇಂತಹ ಪಠ್ಯಗಳನ್ನೆಲ್ಲ ಮನಮುಟ್ಟುವಂತೆ ತಿಳಿಸಬಲ್ಲ ಬೋಧಕ, ತಾಳ್ಮೆಯಿಂದ ಕೇಳಿ ತಿಳಿಯುವ ವಿದ್ಯಾರ್ಥಿ ಇದ್ದಾಗ ಸಾಹಿತ್ಯಪಾಠ ಸಫಲವೆನಿಸುತ್ತದೆ. ತರಗತಿಗಳಲ್ಲಿ ಪಾಠ ಹೇಳುವವನಲ್ಲಿ ಕ್ಷಮತೆ, ಕೇಳುವವರಲ್ಲಿ ಶ್ರದ್ಧೆ ಕಡಿಮೆಯಾದಾಗ ಏನಾಗಬಹುದು ಎಂಬುದನ್ನು ಹಲವರು ಆಡುವ ಮಾತುಗಳನ್ನು ಕೇಳಿದಾಗ, ಅವರ ಬರೆಹಗಳನ್ನು ಓದಿದಾಗ ಮನವರಿಕೆ ಆಗುತ್ತದೆ; ಕೈಲಾಸಂ

ನಗೆಯಾಡಿದಂತೆ ಅರಸೀಕೆರೆ ಹರಸೀಕೆರೆಯಾಗುತ್ತದೆ, ಹಾಸನ ಅಸನವಾಗುತ್ತದೆ!

'ಭಾಷಾಶುದ್ಧಿ' ಎಂದಾಗ ಕೆಲವರಿಗೆ ಅಪಥ್ಯವಾಗುತ್ತದೆ. ಭಾಷೆಯಲ್ಲಿ ಶುದ್ಧ-ಅಶುದ್ಧ ಎಂಬುದಿಲ್ಲ ಎಂದು ಅವರು ವಾದಿಸುತ್ತಾರೆ. 'ಶುದ್ಧಿ'ಯೆಂದರೆ ಮಡಿ-ಮಡಿವಂತಿಕೆ ಎಂಬ ಅರ್ಥವಲ್ಲ. ಒಂದು ಅಕ್ಷರ ಅಥವಾ ಪದದ ಪ್ರಾಚೀನತಮ ರೂಪವು ಯಾವುದು, ಬಹು ಕಾಲದಿಂದ ಅದು ಹೇಗೆ ಉಕ್ತವೂ ಲಿಖಿತವೂ ಆಗುತ್ತದೆ ಎಂಬುದನ್ನು ತಿಳಿದು ಆ ರೂಪದಲ್ಲಿ ಪ್ರಯೋಗಿಸುವುದೇ ಭಾಷಾಶುದ್ಧಿ. ಭಾಷೆ ವೈಯಕ್ತಿಕವಾಗಿರುವಂತೆಯ ಸಾಮಾಜಿಕವೂ ಹೌದು – ಒಬ್ಬಾತನ ಮಾತು ಅಥವಾ ಬರೆಹ ಇನ್ನೊಬ್ಬನಿಗೆ ಯಥಾವತ್ತಾಗಿ ಅರ್ಥ ಆಗಬೇಕಾದರೆ ಭಾಷೆಗೆ ಒಂದು ಸಾಮಾನ್ಯರೂಪ ಇರುವುದು ಅಪೇಕ್ಷಣೀಯ ಮತ್ತು ಅನಿವಾರ್ಯ. ಹಾಗೆ ಇಲ್ಲವಾದರೆ ನಾನು 'ತೊಂಡೆ' ಎಂದು ಹೇಳಿದ್ದು ಇನ್ನೊಬ್ಬನಿಗೆ 'ಬೆಂಡೆ'ಯಂತೆ ಕೇಳೀತು, ಅರ್ಥವಾದೀತು! ಇನ್ನೂ ಕೆಲವರು ಭಾಷೆಯಲ್ಲಿ 'ಪ್ರಾದೇಶಿಕತೆ'ಯ ಬಗೆಗೆ ವಾದಿಸುವುದಿದೆ. ಪ್ರಾದೇಶಿಕತೆ ಇದೆ, ನಿಜ. ಆದರೆ ಅದನ್ನು ಸಾರ್ವತ್ರಿಕವೆಂದು ಭಾವಿಸಿದಾಗ, ಅನ್ಯಪ್ರದೇಶದ ಜನ ಅದನ್ನು ಅರ್ಥಮಾಡಿಕೊಳ್ಳಲು ಕಷ್ಟ ಆಗುತ್ತದೆ. ಬಾಯ್ಮಾತಿನಲ್ಲಿ ಹೇಗಿದ್ದರೂ ನಡೆಯುತ್ತದೆ. ಆದರೆ ಬರೆಹದಲ್ಲಿ ಸಾರ್ವತ್ರಿಕತೆಯೇ ಲಕ್ಷ್ಯವಾಗಿರಬೇಕು. ಯಾರೋ ಒಬ್ಬ ಅಭಿಮಾನಿ ಶಿವರಾಮ ಕಾರಂತರನ್ನು ಒಮ್ಮೆ ಪ್ರಶ್ನಿಸಿದನಂತೆ – "ನೀವು ಕೋಟದವರು; ಹಾಗಿರುತ್ತ ನೀವೇಕೆ ಕೋಟ ಕನ್ನಡದಲ್ಲಿ ಬರೆಯುವುದಿಲ್ಲ?" ಅದಕ್ಕೆ ಕಾರಂತರ ಉತ್ತರ ಹೀಗಿತ್ತು: "ನನ್ನ ಬರವಣಿಗೆಯನ್ನು ಕೋಟ-ಕುಂದಾಪುರದವರು ಮಾತ್ರ ಓದುವುದಲ್ಲ. ಕಾರವಾರ-ಧಾರವಾಡದ ಜನ ಮೈಸೂರು-ಬೆಂಗಳೂರು ಮಂದಿ ಸಹ ಓದುತ್ತಾರೆ – ಅವರಿಗಾಗಿಯೂ ನಾನು ಬರೆಯುತ್ತೇನೆ!"

ಭಾಷಾಪಂಡಿತರನ್ನು ಪುಷ್ಪೋದ್ಯಾನಪಾಲಕರಿಗೆ ಹೋಲಿಸಬಹುದು. ಉದ್ಯಾನದ ಹೂಗಿಡಬಳ್ಳಿಗಳ ಬೆಳವಣಿಗೆ ಸಹಜವಾಗಿರಬೇಕು, ಅದು ಪ್ರಾಕೃತಿಕ ಪ್ರಕ್ರಿಯೆ. ಆದರೆ ಅವು ಅಡ್ಡಾದಿಡ್ಡಿಯಾಗಿ ಬೆಳೆಯದಂತೆ ಆರೈಕೆ ಮಾಡುವ ಕೆಲಸ ತೋಟಿಗನದು. ಹಾಗೆ ಚೆನ್ನಾಗಿ ಆರೈಕೆಗೊಂಡ ಗಿಡಬಳ್ಳಿಗಳಲ್ಲಿ ಬಗೆಬಗೆಯ, ಬಣ್ಣಬಣ್ಣಗಳ, ಕಂಪುಸೊಂಪುಗಳ ಹೂಗಳು ಅರಳಿ ತುರುಗಿದಾಗ ಪಾಲಕನಿಗೆ ಸಾರ್ಥಕ್ಯಭಾವ; ವಿಹಾರಿಗಳಿಗೆ ಸಂತೋಷದ ಪರಮಾನುಭವ. ಭಾಷಾಕ್ಷೇತ್ರ ಒಂದು ಗೊಂಡಾರಣ್ಯವಾಗದಂತೆ, ಹಿಂಸ್ರಪಶುಗಳ ತಂಗುದಾಣವಾಗದಂತೆ ಅದನ್ನು ಎಚ್ಚರದಿಂದ ಕಾಯುವ, ಕಾಪಿಡುವ, ಕಂಗೊಳಿಸುವಂತೆ ಮಾಡುವ ದೊಡ್ಡ ಹೊರೆಯನ್ನು ಭಾಷಾಪಂಡಿತ ತನ್ನ ಹೆಗಲಮೇಲೆ ಸ್ವಸಂತೋಷದಿಂದ ಹೇರಿಕೊಳ್ಳುತ್ತಾನೆ. ಅಂತಹವರನ್ನು ನಾವು ಅನುಸರಿಸಬೇಕೇ ವಿನಾ ಅನಾದರಿಸುವುದಲ್ಲ. ಪಂಡಿತೋತ್ತಮರ ಸಂಖ್ಯಾವೃದ್ಧಿಯಾದರೆ ನಮ್ಮ ವಾಙ್ಮಯ ಎಂದರೆ ಮಾತು ಮತ್ತು ಬರೆಹ ಅಸ್ಖಲಿತವೂ ಸಮೃದ್ಧವೂ ಸದೃಢವೂ ಸುಂದರವೂ ಆಗುವುದರಲ್ಲಿ ಸಂದೇಹವೇ ಇಲ್ಲ!

ಡ ಡ

'ಶತನಮನ' ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ನೂರಕ್ಕೆ ಕಾಲಿಟ್ಟ ಸಂದರ್ಭದಲ್ಲಿ
ಹೊರತುತ್ತಿರುವ ಅಭಿನಂದನ ಗ್ರಂಥ. ನಾಡಿನ ಸುಮಾರು ಎಪ್ಪತ್ತು ಮಂದಿ ವಿದ್ವಾಂಸರು
ಹೊಚ್ಚ ಹೊಸತಾಗಿ ಈ ಗ್ರಂಥಕ್ಕೆಂದೇ ಸಿದ್ಧಪಡಿಸಿದ ಲೇಖನಗಳನ್ನು ಪವಣಿಸಿರುವ
ಹೂಮಾಲೆ ಇದು. ನಾಡಿನ ಉದ್ದಗಲದಲ್ಲಿರುವ ಈ ವಿದ್ವಾಂಸರು ವಿದ್ವತ್ ವಲಯದ
ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದವರು, ತಮ್ಮ ಕಾರ್ಯಕ್ಕಾಗಿ ನಾಡಿನ ಮನ್ನಣೆಯನ್ನು
ಸಂಪಾದಿಸಿದ ಖ್ಯಾತನಾಮರು. ಹೀಗಾಗಿ ಜಿವಿ ಅವರಿಗೆ ನಾಡಿನ ವಿದ್ವತ್‌ಸಮುದಾಯವು
ಒಟ್ಟಾಗಿ ಸಮರ್ಪಿಸುತ್ತಿರುವ ಲೇಖನ ಬಾಗಿನ ಈ ಗ್ರಂಥ. ಜಿವಿ ಅವರ ಮೇಲಿನ ಗೌರವ
ಹಾಗೂ ವಿದ್ವತ್ತಿನ ಬಗೆಗಿನ ಕಾಳಜಿಯಿಂದ, ಇವರನ್ನೆಲ್ಲ ಲೇಖನ ಕೋರಿ ಸಂಪಾದಕ
ಮಂಡಳಿಯು ಮಾಡಿದ ಮನವಿಯನ್ನು ಪುರಸ್ಕರಿಸಿ, ಈ ಕಾರ್ಯವು ಯಶಸ್ವಿಯಾಗಲು
ಕಾರಣಕರ್ತರಾಗಿದ್ದಾರೆ. ಇದರಲ್ಲಿನ ವಸ್ತುವೈವಿಧ್ಯ, ವಿಶ್ಲೇಷಣೆಯ ಸೂಕ್ಷ್ಮತೆ
ವಿಚಾರಪ್ರಿಯರಿಗೆ ರಸದೂಟ, ವಿದ್ವಾಂಸರಿಗೊಂದು ಆಕರಗ್ರಂಥ,
ಪುಸ್ತಕಭಂಡಾರಗಳಲ್ಲಿ ಕಂಗೊಳಿಸಬಹುದಾದ ಒಂದು ಅಮೂಲ್ಯ ರತ್ನ.